# ಮಹಾಭಾರತದ ಉಪಾಖ್ಯಾನಗಳು

(ಒಂದು ಕಿರು ಅಧ್ಯಯನ)

## Short Stories in Mahabharata



ಭಾಗ-1

ಲೇಖಕರು - ಸಂಪಾದಕರು

**ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯ**

B.Sc(Agri). M.A., Ph.D.

[illegible] ವಿಶ್ವಮಧ್ವ ಮಹಾ ಪರಿಷತ್, ಬೆಂಗಳೂರು

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 211

# ಮಹಾಭಾರತದ ಉಪಾಖ್ಯಾನಗಳು

## (ಭಾಗ-1)

# Short Stories in Mahābhārata

(ಒಂದು ಕಿರು ಅಧ್ಯಯನ)


ಲೇಖಕರು - ಸಂಪಾದಕರು

**ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯ**

**B.Sc(Agri), M.A., Ph.D.**



ಪ್ರಕಾಶನ :

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠ

ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೫೬೦೦೦೪

# ಮಹಾಭಾರತದ ಉಪಾಖ್ಯಾನಗಳು (ಭಾಗ-1)
# Short Stories in Mahābharāta

ಲೇಖಕರು : ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯ (ಜಿ ಶೇಷಗಿರಿರಾವ್)
B.Sc(Agri), M.A., Ph.D.
080-26721028, 9986973919

**Published by** Vishva Madhwa Maha Parishat Research Center,

| Edition | Year | Copies | Total |
|---|---|---|---|
| First | 2021 | 1,000 | 1,000 |

**No.of Pages** 48+800

© **Publisher**

**Price.** [Vol 01 & 2 SET] Rs. 900/-

**Used Paper** 80 Gsm Maplitho

**Book Size** 1/8 Demmy

**Cover Design by** Gopalakrishna Davanageri

**Copies can be had from**

**Vishva Madhwa Maha Parishat**
Research Center, #11, 2nd Floor,
Uttaradi Math Building. Uttaradi Math Road,
Shankarpuram, Basavanagudi
BENGALURU - 4 Phone : 080 42103176

Printed by : **VAGARTHA,**
Hanumantha Nagar, Bengaluru- 19 Ph.22427677

॥ ಶ್ರೀಗುರುಭ್ಯೋನಮಃ ॥

॥ ಹರಿಃ ಓಂ ॥

ಶ್ರೀಮತ್ಕುಲದೇವತಾಯೈ ಶ್ರೀತುಲಜಾಭವಾನ್ಯೈ ನಮಃ ॥

॥ ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಮ್ ॥

ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ
ಸಂಜೀವಯತ್ಯಖಿಲಶಕ್ತಿಧರಣಃ ಸ್ವಧಾಮ್ನಾ ।
ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್ ।
ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ॥ - ಭಾಗವತ(೪/೧೦/೬)

ನಾರಾಯಣಂ ಸುರುಗುರಂ ಜಗದೇಕ ನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧ ವಂಧ್ಯಮ್ ॥ - ಮಹಾಭಾರ(೧/೧/೧)

ಕೃಷ್ಣೋ ಯಜ್ಞೈರಿಜ್ಯತೇ ಸೋಮಪೂತೈಃ
ಕೃಷ್ಣೋ ವೀರೈರಿಜ್ಯತೇ ವಿಕ್ರಮದ್ಭಿಃ ।
ಕೃಷ್ಣೋ ವನ್ಯೈರಿಜ್ಯತೇ ಸಮ್ಮೃಶಾನ್ಯೈಃ
ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ॥ - ಮಹಾಭಾರತ (೧/೧/೨)

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ - (೧/೧/೩)

ನಮೋ ಭಗವತೇ ತಸ್ಮೈ ವ್ಯಾಸಾಯಾಮಿತತೇಜಸೇ ।
ಯಸ್ಯ ಪ್ರಸಾದಾದ್ವಕ್ಷ್ಯಾಮಿ ನಾರಾಯಣಕಥಾಮಿಮ್ ॥ - (೧/೧/೩೦)

ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ । - (೧/೧/೩೨)

ನಾರಾಯಣಾಯ ಪರಿಪೂರ್ಣ ಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥ - ಮ.ತಾ.ನಿ.(೧/೧)

ಜಯತ್ಯಜೋऽಖಂಡಗುಣೋರುಮಂಡಲಃ
ಸದೋದಿತೋ ಜ್ಞಾನಮರೀಚಿಮಾಲೀ ।
ಸ್ವಭಕ್ತಹಾರ್ದೋಕ್ತ ತಮೋನಿಯಂತಾ
ವ್ಯಾಸಾವತಾರೋ ಹರಿರಾತ್ಮ ಭಾಸ್ಕರಃ ॥ - ಮ.ತಾ.ನಿ.(೩/೧)

ಜಯತ್ಯಜೋऽಕ್ಷೀಣಸುಖಾತ್ಮಬಿಂಬಃ
ಸ್ವೈಶ್ವರ್ಯ ಕಾಂತಿಪ್ರತತಃ ಸದೋದಿತಃ ।
ಸ್ವಭಕ್ತಸಂತಾಪ ದುರಿಷ್ಟಹಂತಾ
ರಾಮಾವತಾರೋ ಹರಿರೀಶಚಂದ್ರಮಾಃ ॥ - ಮ.ತಾ.ನಿ.(೩/೨)

ಜಯತ್ಯಸಂಕ್ಷ್ಯೋರುಗುಣಾಂಬುಪೂರೋ
ಗುಣೋಚ್ಚರತ್ನಾಕರ ಆತ್ಮವೈಭವಃ ।
ಸದಾ ಸದಾತ್ಮಜ್ಞ ನದೀಭಿರಾಪ್ಯಃ
ಕೃಷ್ಣಾವತಾರೋ ಹರಿರೇಕ ಸಾಗರಃ ॥ - ಮ.ತಾ.ನಿ.(೩/೩)

ಶ್ರೀಶಂ ಗುರೂಣಾಂ ಗುರುಮಾದ್ಯಯೋನಿಂ
ವೈದ್ಯೈಕವೇದ್ಯಂ ನಿಖಿಲೇಶ್ವರೇಶ್ವರಮ್ ।
ನಮಾಮಿ ವಿಷ್ಣುಂ ಜಗದೇಕನಾಥ
ಕೇಶಾದಿಭಿಃ ಪ್ರಾಪ್ಯತಮಂ ಸುನಿತ್ಯಮ್ ॥

ಯೋ ಭಾರತೀಮಪಹೃತಾಮಸುರೈಃ ಸಹಾನ್ಯ
ಗೋಭಿಃ ಶುಭಾಂ ಭಗವತೀಮಸುರಾನ್ನಿಹತ್ಯ ।
ಉತ್ಸಾದ್ಯ ಚಾಥ(ತ್ರ)ಕುಪಥಾಮಥ ವೈಷ್ಣವೀಂ ತಾಂ
ಚಕ್ರೇ ಕರೋತು ಸದಶಪ್ರಮತಿರ್ಹಿ ಗಾಂ ನಃ ॥
- ಶ್ರೀನರಹರಿತೀರ್ಥರ ಯಮಕಭಾರತಟೀಕೆಯಿಂದ

ಯಾಂಚಾ ಮಂದರಲೋಲಿತಾದ್ಯತ ಉದ್ಯೈದ್ವಿದ್ಯೇಂದಿರಾ ನಿರ್ಜರೈಃ
ಜಾತೋ ಭಾರತಪಾರಿಜಾತಸುತರುಃ ಸದ್ಬ್ರಹ್ಮಸೂತ್ರಾಮೃತಮ್ ।
ಆಸ್ತೇತ್ತಂತ್ರಪುರಾಣಸನ್ಮಣಿಗಣೋ ಜಾತಃ ಶುಕೇಂದುಃ ಸದಾ
ಸೋऽಯಂ ವ್ಯಾಸಸುಧಾನಿಧಿರ್ಭವತು ಮೇ ಭೂತ್ಯೈ ಸದಾ ಭೂತಿದಃ ॥
- ಶ್ರೀಜಯತೀರ್ಥರ ತತ್ತ್ವಪ್ರಕಾಶಿಕಾ (೧/೧/೧)

ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥

ವೇದವ್ಯಾಸ ಗುಣಾವಾಸ ವಿದ್ಯಾಧೀಶ ಸತಾಂ ವಶ ।
ಮಾಂ ನಿರಾಶಂ ಗತಕ್ಲೇಶಂ ಕುರ್ವನಾಶಂ ಹರೇಽನಿಶಮ್ ॥ - ಶ್ರೀವಾದಿರಾಜರು

ವ್ಯಾಸಾಯಾಪ್ರತಿಮೇತಿಹಾಸರಚನೋಲ್ಲಾಸಾಯ ದುರ್ವಾದಿನಾಂ
ತ್ರಾಸಾಯಾಸಕರಾಯ ಸತ್ಸು ಕೃತವಿಶ್ವಾಸಾಯ ದೋಷದ್ವಿಷೇ ।
ಭಾಸಾಯಾಮುನರಮ್ಯತೋಯಸದೃಶಾಯಾಸಾಯ ಮಾಸೇವಿನೇ
ದಾಸಾಯಾಭಯದಾಯ ಮಧ್ವಗುರು(ಮುನಿ)ಹೃದ್ವಾಸಾಯ ತುಭ್ಯಂ ನಮಃ ॥
- ಶ್ರೀವಾದಿರಾಜಶ್ರೀಪಾದರ ಲಕ್ಷಾಲಂಕಾರ)

ವ್ಯಾಸಂ ಭಾರತಕರ್ತಾರಂ ಮಧ್ವಂ ಮೂಲಕೃತಂ ತಥಾ ।
ಚೇತೋ ವಾಗ್ದೇವತಾಂ ವಾಣೀಂ ಗುರೂಂಶ್ಚ ಪ್ರಣಮಾಮ್ಯಹಮ್ ॥
- ಶ್ರೀಯಾದವಾರ್ಯರ ಯಮಕಭಾರತಟೀಕೆಯಿಂದ

ಬ್ರಹ್ಮಾದಿಸರ್ವಜಗತಃ ಸುವಿಶೇಷತೋ ವೀ
ಸರ್ವತ್ರ ಸಂಸ್ಥಿತಿನಿಮಿತ್ತತ ಏವ ಚಾಸಃ (ಸ) ।
ವ್ಯಾಸಃ ಸ ವೇತಿ ಹಿ ಶ್ರುತೇರಿತಿ ವ್ಯಾಸನಾಮನ್
ವಾಸಿಷ್ಠಕೃಷ್ಣ ಮಮ ದೇಹಿ ಕರಾವಲಂಬಮ್ ॥
- ಶ್ರೀಯಾದವಾರ್ಯರಚಿತ ಕರಾವಲಂಬನ ಸ್ತೋತ್ರ

ಬ್ರಹ್ಮಾಂತಾ ಗುರವಃ ಸಾಕ್ಷಾತ್ ಇಷ್ಟಂ ದೈವಂ ಶ್ರಿಯಃ ಪತಿಃ ।
ಆಚಾರ್ಯಾಃ ಶ್ರೀಮದಾಚಾರ್ಯಃ ಸಂತು ಮೇ ಜನ್ಮಜನ್ಮನಿ (ಜನ್ಮನಿಜನ್ಮನಿ) ॥

ಸತ್ಸಂಘಮಾನಸಸರೋವರಮಧ್ಯವರ್ತೀ
ಕೃಷ್ಣಾಂಘ್ರಿಚಾರುಕಮಾರ್ಪಿತಚಿತ್ತವೃತ್ತಿಃ ।
ಶಾಸ್ತ್ರಾತ್ರಿಮಂಜುಪದರಂಜಿತರಮ್ಯ ಸಂಸತ್
ಅಸ್ಮಾಕಹೃತ್ಸರಸಿಜೇಽಸ್ತು ಸ ಮಧ್ವಹಂಸಃ ॥
- ಶ್ರೀವಾದಿರಾಜಶ್ರೀಪಾದರ ಶ್ರೀರುಗ್ಮಿಣೇಶವಿಜಯ

ದುಷ್ಟಾನಾಂ ವಿಘ್ನಕರ್ತಾ ಸುಚರಿತಸುಜನಸ್ತೋಮವಿಘ್ನಾಪಹರ್ತಾ
ತಸ್ಮಾದ್ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।
ಪೌಲಸ್ತ್ಯೇಟ್ಟಾಂತರಾಯಃ ಸುರಮುನಿನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸುದೃಶಂ ಭೂರಿ ಗೌರೀತನೂಜಃ ॥
- ಶ್ರೀವಾದಿರಾಜರ (ತೀರ್ಥಪ್ರಬಂಧ-ಪಶ್ಚಿಮಪ್ರಬಂಧ-೮೩)

ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ
ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಮ್ ।
ದೇವೀಂ ವಂದೇ ಸುಪರ್ಣೀಮಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಂ
ಇಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾನ್ ತದ್ಗುರೂನ್ ಮದ್ಗುರೂಂಶ್ಚ ॥

ರಮಾನಿವಾಸೋಚಿತವಾಸಭೂಮಿಃ ಸನ್ನ್ಯಾಯರತ್ನಾವಲಿಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭತೀರ್ಥಾಮೃತಾಬ್ಧಿಃ ಭವತಾದ್ವಿಭೂತ್ಯೈ ॥

ವಂದೇ ಹೃಷೀಕೇಶಮಥೋ ನೃಸಿಂಹಂ ಜನಾರ್ದನಂ ಚಿಂತಯ ಧೀರುಪೇಂದ್ರಮ್ ।
ಶ್ರೀವಾಮನಂ ಸಂಸ್ಮರ ವಿಷ್ಣುಮೇಮಿ ಶ್ರೀರಾಮಮಂಚೇಽಹಮಧೋಕ್ಷಜಂ ಚ ॥

ಶ್ರೀಮಧ್ವಃ ಕಲ್ಪವೃಕ್ಷಸ್ತು ಜಯಾರ್ಯಃ ಕಾಮಧುಕ್ ಸ್ಮೃತಃ ।
ಚಿಂತಾಮಣಿಸ್ತು ವ್ಯಾಸಾರ್ಯಃ ಮುನಿತ್ರಯಮುದಾಹೃತಮ್ ॥

ವಾದಿರಾಜಮುಖಾಂಭೋಜನಿಃಸೃತಾ ವಾಕ್ ಸರಸ್ವತೀ ।
ಅಶ್ವಗ್ರೀವಯಶೋಗಂಗಾ ಸಂಗಾಽಸ್ಮಾನ್ ಪಾವಯತ್ವಲಮ್ ॥

ಪ್ರಣಮತ್ಕಾಮಧೇನುಂ ಚ ಭಜತ್ಸುರತರೂಪಮಮ್ ।
ಶ್ರೀಭಾವಬೋಧಕೃತ್ಪಾದ ಚಿಂತಾಮಣಿಮುಪಾಸ್ಮಹೇ ॥

ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ ।
ಶ್ರೀರಾಘವೇಂದ್ರಗುರವೇ ನಮೋಽತ್ಯಂತದಯಾಲವೇ ॥

ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ ।
ಗೋಪಾಲದಾಸವರ್ಯಾಯ ಜಗನ್ನಾಥಾಯ ತೇ ನಮಃ ॥

ಪೃಥ್ವೀ ಮಂಡಲಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ ।
ವೈಷ್ಣವಾ ವಿಷ್ಣುಹೃದಯಾಸ್ತಾನ್ನಮಸ್ಯೇ ಗುರೂನ್ಮಮ ॥

ಆಪಾದಮೌಲಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

।। श्रीदिग्विजयरामो विजयते ।।

श्रीमत्परमहंसपारिव्राजकाचार्यत्वायनेकगुणगणालङ्कृत श्रीमन्मूलसीतासमेतश्रीमन्मूलरामदिग्विजयरामवेदव्यासाविपादपद्माराधक

श्रीमद्वैष्णवसिद्धान्तप्रतिष्ठापनाचार्यजगद्गुरुश्रीमन्मध्वाचार्यमूलमहासंस्थान

श्रीमदुत्तरादिमठाधीश

श्री श्री १००८ श्रीसत्याभिज्ञतीर्थकरकमलसञ्जात श्री श्री १००८ श्रीसत्यप्रमोदतीर्थवरकुमार

## श्री श्री १००८ श्रीसत्यात्मतीर्थश्रीपादानां

No. :
Camp : सुवर्णपुरि

शुभदिनम् : शा.श.१९४३ प्लव आषाढ शु. दशमी
Date : १९-०७-२०२१

अनुग्रहसन्देशः

ಮಹಾಭಾರತ. ಹೆಸರಿನಲ್ಲಿಯೇ ಮಹತ್ತ್ವ ತುಂಬಿಕೊಂಡ ಗ್ರಂಥ. ಗ್ರಂಥದ ಗಾಂಭೀರ್ಯ ಮಹತ್ತ್ವಗಳನ್ನು ತಿಳಿಯಲು, ಅಳೆಯಲು ಸಾಧ್ಯವೇ ಇಲ್ಲ. ಇದು ಆದರ್ಶ ಕಥೆಗಳ ಆಗರ. ತತ್ತ್ವಜ್ಞಾನದ ಸಾಗರ. ಕಥೆಗಳ ಮೂಲಕ ತತ್ತ್ವಗಳನ್ನು ತಿಳಿಸುವ ಅಪರೂಪದ ಆಕರ. ಇಲ್ಲಿ ದೇವರ ಆದೇಶವೂ ಇದೆ. ಗುರುವಿನ ಉಪದೇಶವೂ ಇದೆ. ಮಿತ್ರನ ಹಿತ ಸಂದೇಶವೂ ಇದೆ. ಕಥೆಗಳ ಮೂಲಕವೇ ಮನಃಪರಿವರ್ತನೆಗೊಳಿಸುವ ಅದ್ಭುತವಾದ ಕಥಾರತ್ನಾಕರ ಈ ಮಹಾಭಾರತ. ಸಾಕ್ಷಾತ್ ಭಗವಂತನೇ ನುಡಿದ ಕಥೆಗಳಿವು. ಎಲ್ಲ ತರಹದ, ಎಲ್ಲ ಸ್ತರದ ಜನರಿಗೂ ಬೋಧಿಸುವ ಕಥೆಗಳು ಇದರಲ್ಲಿ ಇವೆ. ಕಥೆಗಳಲ್ಲಿ ಬರುವ ಪಾತ್ರಗಳ ಮಾರ್ಮಿಕವಾದ ಸಂಭಾಷಣೆಗಳು ಅದ್ಭುತ ಸಂದೇಶಗಳನ್ನು ಹೊರಹೊಮ್ಮಿಸುತ್ತವೆ. ಜೀವನದಲ್ಲಿ ಮಾರ್ಗದರ್ಶಕವಾಗುತ್ತವೆ. ಮನಸ್ಸಿಗೆ ಉತ್ಸಾಹವನ್ನು ನೀಡುತ್ತವೆ. ಕಿಂಕರ್ತವ್ಯ ಮೂಢನಿಗೆ ಗುರಿ ತೋರಿಸುತ್ತವೆ. ಗುರಿ ಬೆನ್ನಟ್ಟುವ ಛಲ ಮೂಡಿಸುತ್ತವೆ. ಗುರಿ ತಲುಪುವ ದಾರಿ ತೋರಿಸುತ್ತವೆ. ಹೀಗೆ ಒಂದಲ್ಲಾ ಎರಡಲ್ಲ ನೂರಾರು ಕಥೆಗಳು ಈ ಗ್ರಂಥರತ್ನಾಕರದಲ್ಲಿ ಅಡಕವಾಗಿವೆ.

ನಮ್ಮ ಪ್ರಿಯಶಿಷ್ಯರಾದ ಶ್ರೀಯುತ ವೇದಗರ್ಭ ಶೇಷಗಿರಿ ಇವರು ಮಹಾಭಾರತದಲ್ಲಿ ಬರುವ ಸುಮಾರು 200 ಕ್ಕೂ ಹೆಚ್ಚು ಕಥೆಗಳನ್ನು ಸಂಗ್ರಹಸಿ ಒಂದು ಬೃಹತ್ ಹೊತ್ತಿಗೆಯನ್ನೇ ನಿರ್ಮಾಣ ಮಾಡಿದ್ದಾರೆ. ಕಥೆಗಳು ಮಾತ್ರವಲ್ಲದೇ ಅದರ ಸಂದೇಶ ಅಲ್ಲಿರುವ ಸಂಭಾಷಣೆ ಇವುಗಳನ್ನೆಲ್ಲಾ ಬಹಳ ಪರಿಶ್ರಮದಿಂದ ಸುಂದರವಾಗಿ ಸಂಗ್ರಹಿಸಿದ್ದಾರೆ. ಇದೊಂದು ಅಪರೂಪವಾದ ಕೃತಿ. ಅವರ ಈ ಕಾರ್ಯ ಅಭಿನಂದನೀಯವಾದದ್ದು. ಸದಾ ಅಧ್ಯಯನಶೀಲರಾದ ಇವರು ಈಗಾಗಲೇ ಅನೇಕ ಉಪಯುಕ್ತವಾದ ಸಂಶೋಧನಾತ್ಮಕವಾದ ಕೃತಿಗಳನ್ನು ರಚಿಸಿ ಪ್ರಕಾಶಿಸಿದ್ದಾರೆ. ವಯಸ್ಸು ಇಳಿದಾದರೂ ಉತ್ಸಾಹ ಅಳಿದಿಲ್ಲ.

ಭಗವಂತ ಶ್ರೀಯುತ ಶೇಷಗಿರಿರಾಯರಿಗೆ ದೀರ್ಘವಾದ ಆರೋಗ್ಯ ಉತ್ಸಾಹಗಳನ್ನು ಕರುಣಿಸಿಲಿ. ನಿರಂತರ ವೇದವ್ಯಾಸದೇವರ ಸೇವೆ ಅವರಿಂದ ನೇರವೇರಲಿ. ಎಂಬುದಾಗಿ ಅಸ್ಮುದುಪಾಸ್ಯ ಶ್ರೀಮೂಲರಾಮದಿಗ್ವಿಜಯರಾಮ-ವೇದವ್ಯಾಸದೇವರು ಹಾಗೂ ವಂಶರಾಮ, ಪ್ರಸನ್ನವಿಠ್ಠಲ ದೇವರಲ್ಲಿ ಪ್ರಾರ್ಥಿಸುತ್ತೇವೆ. ಈ ಕೃತಿಯ ಲಾಭವನ್ನು ಸಕಲ ಸಜ್ಜನರೂ ಪಡೆಯುವಂತಾಗಲಿ ಎಂದು ಆಶಿಸುತ್ತೇವೆ.

ಇತ್ಯನೇಕ ನಾರಾಯಣ ಸ್ಮರಣೆಗಳೊಂದಿಗೆ

श्रीसत्यात्मतीर्थः
उत्तरादि मठः

ಶ್ರೀ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು ಶ್ರೀಉತ್ತರಾದಿಮಠ

ವಿ.ಸೂ. ಪರಮಪೂಜ್ಯ ಶ್ರೀ ಶ್ರೀಪಾದಂಗಳವರು ನೀಡುವ ಅನುಗ್ರಹಸಂದೇಶಗಳು ಕೃತಿಕಾರರ/ಸಂಪಾದಕರ/ಲೇಖಕರ/ಪ್ರಕಾಶಕರ/ಸಂಗ್ರಾಹಕರ/ಅನುವಾದಕರ/ಸಂಘ-ಸಂಸ್ಥೆಗಳ (ಇತ್ಯಾದಿ.) ವಿಶೇಷವಾದ ಪ್ರಯತ್ನ, ಸತ್ಕಾರ್ಯದಲ್ಲಿ ಅವರಿಗಿರುವ ಶ್ರದ್ಧೆ-ಪ್ರವೃತ್ತಿ, ಅವರ ಪರಿಶ್ರಮ ಮೊದಲಾದವುಗಳ ಬಗ್ಗೆ ಮೆಚ್ಚುಗೆಯನ್ನು ಸೂಚಿಸಿ, ಅವರ ಶ್ರೇಯಸ್ಸಿಗಾಗಿ/ಅಭಿವೃದ್ಧಿಗಾಗಿ ಭಗವದನುಗ್ರಹವನ್ನು ಪ್ರಾರ್ಥಿಸುವುದಕ್ಕಾಗಿ ಮಾತ್ರ ನೀಡಲ್ಪಟ್ಟಿರುತ್ತವೆ. ಪ್ರಕಾಶಿತವಾಗುತ್ತಿರುವ ಕೃತಿಯಲ್ಲಿರುವ ಎಲ್ಲ ವಿಚಾರಗಳನ್ನು, ಎಲ್ಲಾ ಅಂಶಗಳನ್ನು ಮತ್ತು ಸಂಘ-ಸಂಸ್ಥೆಗಳ ಎಲ್ಲಾ ಆಚಾರ-ವಿಚಾರಗಳನ್ನು ಶ್ರೀಪಾದಂಗಳವರು ತಮ್ಮ ಅನುಗ್ರಹಸಂದೇಶದ ಮೂಲಕ ಅನುಮೋದಿಸಿರುತ್ತಾರೆ ಎಂಬ ನಿಯಮವಿಲ್ಲ.

# ಅನುಗ್ರಹಸಂದೇಶ

## ಶ್ರೀವಿದ್ಯೇಶತೀರ್ಥಶ್ರೀಪಾದರು

### ಶ್ರೀಸತ್ಯತೀರ್ಥಭಂಡಾರಕೇರಿ ಮಠ, ಉಡುಪಿ

### 'ಹೃದಯವಾಣಿ'

ಮಹಾಭಾರತದ ಉಪಾಖ್ಯಾನಗಳು ಸುಮಾರು ೨೫೦೦೦ ಶ್ಲೋಕಗಳನ್ನು ವ್ಯಾಪಿಸಿಕೊಂಡಿವೆಎಂದುಪ್ರಸ್ತುತಗ್ರಂಥಕಾರರಾದವೇದಗರ್ಭಜಿ.ಶೇಷಗಿರಿಆಚಾರ್ಯರು ಅಭಿಪ್ರಾಯಪಟ್ಟಿದ್ದಾರೆ.ಸನ್ಮಾರ್ಗಪ್ರಚೋದಕಗಳಾದಈಉಪಯುಕ್ತಉಪಾಖ್ಯಾನಗಳನ್ನು ಪರಿಚಯಿಸುವ ಮಹಾಕಾರ್ಯವನ್ನು ಶೇಷಗಿರಿ ಆಚಾರ್ಯರು ಉಪನ್ಯಾಸ, ಬರವಣಿಗೆ, ಮಾಧ್ಯಮಗಳಿಂದ ಮಾಡಿದ್ದಾರೆ. ಮಕ್ಕಳಿಗೆ ಹಿಂದಿನ ಹಿರಿಯರು ಇಂತಹ ಕಥೆಗಳನ್ನು ಹೇಳಿ ಉತ್ತಮಸಂಸ್ಕಾರವನ್ನು ನೀಡುತ್ತಿದ್ದರು. ಆದರೆ ಇಂದು ಈ ಪದ್ಧತಿ ಲುಪ್ತವಾಗಿದೆ. ಕಾರಣ ಇಂದು ಸಂಪ್ರದಾಯಬದ್ಧಸಂಸ್ಕಾರಮಯ ಅವಿಭಕ್ತಕುಟುಂಬದ ಜೀವನಪದ್ಧತಿ ಕನಸಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಶೇಷಗಿರಿ ಆಚಾರ್ಯರ ಉಪಾಖ್ಯಾನಸಂಗ್ರಹಪುಸ್ತಕ ಪ್ರಕಾಶಿತವಾಗಿ, ಜನರ ಕೈಗೆ ಸೇರಿದರೆ ಇದರ ಉಪಯೋಗವನ್ನು ಪಡೆದು ಅವರು ತಮ್ಮ ಮಕ್ಕಳಿಗೆ ಉಪಾಖ್ಯಾನಗಳನ್ನು ಹೇಳಿ, ಶ್ರದ್ಧಾವಂತರಾದ ಉತ್ತಮಸಂಸ್ಕಾರವನ್ನು ನೀಡವಲ್ಲಿ ಸಫಲರಾಗಬಲ್ಲರು.

ಮಹಾಭಾರತದಲ್ಲಿ ಉಲ್ಲೇಖಗೊಂಡಿರುವ ಉಪಾಖ್ಯಾನಗಳನ್ನು ವರ್ಗೀಕರಿಸಿರುವ ಶೇಷಗಿರಿಆಚಾರ್ಯರುಪ್ರತಿಯೊಂದುಪರ್ವದಲ್ಲಿಬರುವಉಪಾಖ್ಯಾನಗಳಸಂಖ್ಯೆಯನ್ನು ಉಲ್ಲೇಖಿಸಿದ್ದಾರೆ.ಯಾರುಯಾರಿಗೆಹೇಳಿದರು? ಯಾವುದಕ್ಕೆಸಂಬಂಧಿಸಿದಉಪಾಖ್ಯಾನ? ಎಂಬ ಪ್ರಶ್ನೆಗಳಿಗೂ ಉತ್ತರವನ್ನು ನೀಡಿದ್ದಾರೆ.

ಸಾಮಾನ್ಯ ೧೦ ಪರ್ವಗಳಲ್ಲಿ ೧೪೧ ಸಾಮಾನ್ಯ ಉಪಾಖ್ಯಾನಗಳನ್ನು ಗುರುತಿಸಿದ್ದಾರೆ. ಶಾಂತಿಪರ್ವ, ಅನುಶಾಸನಪರ್ವಗಳಲ್ಲಿ ಬರುವ ೪೮ ಉಪಾಖ್ಯಾನಗಳನ್ನು ಉಪದೇಶಪರ ಉಪಾಖ್ಯಾನಗಳೆಂದು ವರ್ಗೀಕರಿಸಿದ್ದಾರೆ. ರಾಜರಿಗೆ ಸಂಬಂಧಿಸಿದ ಉಪಾಖ್ಯಾನಗಳು ೧೬ ಎಂದು ವರ್ಗೀಕರಿಸಿದ್ದಾರೆ. ಒಟ್ಟು ೨೦೫ ಉಪಾಖ್ಯಾನಗಳ ಪರಿಚಯವನ್ನು ಪದವಿ ಪಡೆಯಲು ಅರ್ಹ ಪ್ರಬಂಧಸದೃಶ ಗ್ರಂಥರಚನೆಯ ಮೂಲಕ ಮಾಡಿದ್ದಾರೆ. ಉಪಾಖ್ಯಾನಗಳನ್ನು ನಾನಾ ಸಂಸ್ಥೆಗಳಿಂದ ಪ್ರಕಾಶಿತಗಳಾದ ಗ್ರಂಥಗಳ ಅವಲೋಕನದಿಂದ ಅಧ್ಯಯನ ಮಾಡಿ ೧೯೬೦-೧೯೯೫ರವರೆಗೆ ನಾನಾಸ್ಥಳಗಳಲ್ಲಿ ಉಪನ್ಯಾಸ ಮಾಡಿದ್ದಾರೆ.

ಮತ್ತಿಕೆರೆ ಮಾಧ್ವಸಂಘ, ಶ್ರೀನಿವಾಸನಗರ ಮಾಧ್ವಸಂಘದಲ್ಲಿ ಎಲ್ಲಾ ಉಪಾಖ್ಯಾನಗಳ ಉಪನ್ಯಾಸವನ್ನು ನೀಡಿದ್ದಾರೆ. ಎನ್.ಆರ್. ಕಾಲೋನಿ ರಾಘವೇಂದ್ರಮಠದಲ್ಲಿ ಆದಿ, ಸಭಾ, ವನ ಪರ್ವಗಳಲ್ಲಿ ಬರುವ ಉಪಾಖ್ಯಾನಗಳ ಉಪನ್ಯಾಸವನ್ನು ನೀಡಿದ್ದಾರೆ. ಒಟ್ಟು ೪೦೦ ಉಪನ್ಯಾಸಗಳು, ಅವುಗಳಿಗೆ ವಿನಿಯೋಗಿಸಿದ ಸಮಯ, ಸುಮಾರು ೧೬೦೦ ಘಂಟೆಗಳು. ಉಪಾಖ್ಯಾನಗಳ ಬರವಣಿಗೆಗೆ (೧೬೦೦ ಪುಟಗಳ ಬರವಣಿಗೆ) ವಿನಿಯೋಗಿಸಿದ ಸಮಯ ೪೮೦೦ ಘಂಟೆಗಳು ಎಂದು ಅವರ ಹೇಳಿಕೆಯಿಂದ ತಿಳಿಯುತ್ತದೆ.

ಇಂತಹ ದೀರ್ಘಕಾಲೀನ ಮಹಾಭಾರತದ ಉಪಾಖ್ಯಾನಗಳ ಬಗೆಗಿನ ವಾಙ್ಮಯ ತಪಸ್ಸನ್ನು ಆಚರಿಸಿದ ಶೇಷಗಿರಿ ಆಚಾರ್ಯರನ್ನು ನಾವು ಮನಸಾ ಅಭಿನಂದಿಸುತ್ತೇವೆ.

ಶ್ರೀಮದಾಚಾರ್ಯರ ಸರ್ವಮೂಲದ ಬಗೆಗೂ ಇದೇ ಮಾದರಿಯ ವಾಙ್ಮಯ ತಪಸ್ಸನ್ನು ಆಚರಿಸಿದ ಅವರು ಅಭಿನಂದನಾರ್ಹರಾಗಿದ್ದಾರೆ. ಈ ವಾರ್ಧಕ್ಯದಲ್ಲೂ ಅವರ ಚಿಂತನ, ಮಂಥನ, ಲೇಖನ ಯಜ್ಞದ ಉತ್ಸಾಹವನ್ನು ಕಂಡು ನಾವು ಸಂತುಷ್ಟರಾಗಿದ್ದೇವೆ. ನಮ್ಮಲ್ಲಿ ಸುಧಾಧ್ಯಯನ ಮಾಡಿದ ವೇದಗರ್ಭ ಶೇಷಗಿರಿ ಆಚಾರ್ಯರ ಈ ಬರವಣಿಗೆಯ ಪರಿಶ್ರಮ, ತಪಸ್ಸನ್ನು ಮಧ್ವಾಂತರ್ಗತ ವೇದವ್ಯಾಸರು ಸ್ವೀಕರಿಸಿ ಅನುಗ್ರಹಿಸಲಿ. ಅವರ ಈ ಬರವಣಿಗೆಯು ಸಮಾಜಕ್ಕೆ ದಾರಿದೀಪವಾಗಿ ಸಾರ್ಥಕವಾಗಲಿ ಎಂದು ಹಾರೈಸಿ ನಮ್ಮ ಉಪಾಸ್ಯಮೂರ್ತಿಯಾದ ಕೋದಂಡರಾಮಚಂದ್ರನನ್ನು ಪ್ರಾರ್ಥಿಸುತ್ತೇವೆ.

– ಇತಿ ಶ್ರೀಮನ್ನಾರಾಯಣ ಸ್ಮರಣೆಗಳು

ಸ್ಥಳ : ಬೆಂಗಳೂರು
ದಿನಾಂಕ: ೨೪.೦೭.೨೦೨೧

**ಶ್ರೀವಿದ್ಯೇಶತೀರ್ಥಶ್ರೀಪಾದರು**
**ಭಂಡಾರಕೆರೆ ಮಠ, ಉಡುಪಿ**

# ಅನುಗ್ರಹಸಂದೇಶ

## ಶ್ರೀವಿಶ್ವಪ್ರಸನ್ನತೀರ್ಥಶ್ರೀಪಾದರು

### ಶ್ರೀಪೇಜಾವರಅಧೋಕ್ಷಜಮಠ, ಉಡುಪಿ

ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್ ಎಂಬ ಬಿರುದಿಗೆ ಪಾತ್ರವಾದದ್ದು ಶ್ರೀಮನ್ಮಹಾಭಾರತ. ಆಖ್ಯಾನ, ಉಪಾಖ್ಯಾನಗಳಿಂದ ದೃಷ್ಟಾಂತ, ಪ್ರತಿದೃಷ್ಟಾಂತಗಳಿಂದಮಾನವಬದುಕನ್ನುರೂಪಿಸುವ,ಹರಿತತ್ತ್ವವನ್ನುಬೋಧಿಸುವ ಮಹಾಗ್ರಂಥ ಶ್ರೀಮನ್ಮಹಾಭಾರತ.

ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯರು ಇಲ್ಲಿನ ಉಪಾಖ್ಯಾನಗಳನ್ನೆಲ್ಲ ಸಂಗ್ರಹಿಸಿ, ಸಮಾಜಕ್ಕೆ ನೀಡುತ್ತಿದ್ದಾರೆ. ಅವು ನಮಗೆ ನೀಡುವ ಸಂದೇಶವನ್ನು ಎತ್ತಿ ತೋರಿಸುತ್ತಿದ್ದಾರೆ. ಸಂಸ್ಕೃತಸಾಹಿತ್ಯದಲ್ಲಿರುವ ಈ ವಿಚಾರಗಳನ್ನು ಸರಳ ಕನ್ನಡ ಭಾಷೆಯಲ್ಲಿ ನೀಡುತ್ತಿದಾರೆ. ಆಸಕ್ತರಿಗಿದು ಅನುಕೂಲಗ್ರಂಥ. ಇಂತಹ ಒಂದು ಉತ್ತಮ ಕೃತಿಯನ್ನು ನೀಡುತ್ತಿರುವ ಶ್ರೀಯುತರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತಾ ಶ್ರೀಕೃಷ್ಣಮುಖ್ಯಪ್ರಾಣರ ಅನುಗ್ರಹವನ್ನು ಪ್ರಾರ್ಥಿಸುತ್ತಿದ್ದೇವೆ.

– ಇತಿ ಶ್ರೀಮನ್ನಾರಾಯಣ ಸ್ಮರಣೆಗಳು

ಸ್ಥಳ: ಬೆಂಗಳೂರು **ಶ್ರೀವಿಶ್ವಪ್ರಸನ್ನತೀರ್ಥಶ್ರೀಪಾದರು**

ದಿನಾಂಕ : ೨೧.೦೬.೨೦೨೧ **ಶ್ರೀಪೇಜಾವರಅಧೋಕ್ಷಜಮಠ, ಉಡುಪಿ**

# ಸಂದೇಶ

## ಶ್ರೀನಿವಾಸ ವರಖೇಡಿ

**ಕುಲಪತಿಗಳು-ಕುಲಗುರುಗಳು**
**ಕಾಳಿದಾಸ ಸಂಸ್ಕೃತ ವಿಶ್ವವಿದ್ಯಾಲಯ**
**ನಾಗಪುರ**

ಮಹಾಭಾರತಕಥೆ, ಉಪಕಥೆಗಳ ಆಗರ. ಈ ಉಪಕಥೆಗಳು ಮಹಾಭಾರತಕ್ಕೆ ಸಮಗ್ರತೆಯನ್ನು ನೀಡುತ್ತವೆ. ಅವುಗಳು ಸ್ವತಂತ್ರವಾಗಿದ್ದರೂ, ಮಹಾಭಾರತದ ಮೂಲಕಥೆಗೆ ಪೂರಕವಾಗಿರುತ್ತವೆ. ಅವುಗಳ ಮಾರ್ಮಿಕ ಸಂದೇಶ ಹಾಗೂ ಕೌತುಕತೆ ಓದುಗರಿಗೆ ಮುದ ನೀಡುತ್ತವೆ. ಈ ಕಥೆಗಳು ಮಹಾಭಾರತದಲ್ಲಿ ಅಲ್ಲಲ್ಲಿ ಸೇರಿಕೊಂಡಿರುವುದರಿಂದ ಸುಲಭವಾಗಿ ದೊರಕುವುದಿಲ್ಲ. ಅವುಗಳನ್ನು ಸಾಗರದಿಂದ ರತ್ನಗಳನ್ನು ಹೊರತೆಗೆಯುವಂತೆ ಹೊರತಂದು ಕನ್ನಡಕ್ಕೆ ತಂದು ಓದುಗರಿಗೆ ನೀಡಿರುವ ಡಾ. ವೇದಗರ್ಭ ಶೇಷಗಿರಿರಾಯರ ಈ ಕಥಾಸಂಗ್ರಹ ಒಂದು ಅಪೂರ್ವ ಕೊಡುಗೆಯಾಗಿದೆ.

ಮಹಾಭಾರತದಲ್ಲಿ ಬರುವ ನಳೋಪಾಖ್ಯಾನವೇ ಮೊದಲಾದ ಉಪಾಖ್ಯಾನಗಳಲ್ಲದೆ, ಇತರ ಸಾಂದರ್ಭಿಕ ಕಥೆಗಳು ಮತ್ತು ಅವುಗಳ ಸಾರ್ವಕಾಲಿಕ ಸಂದೇಶಗಳನ್ನು ತುಂಬ ಅಚ್ಚುಕಟ್ಟಾಗಿ ಸಂಗ್ರಹಿಸಲಾಗಿದೆ. ಇಂತಹ ಅನೇಕ ಕೃತಿಗಳು ಬಂದಿದ್ದರೂ, ಸಮಗ್ರತೆಯ ದೃಷ್ಟಿಯಿಂದ ಈ ಕಾರ್ಯ ಸ್ತುತ್ಯಾರ್ಹವಾಗಿದೆ.

ಶ್ರೀ ಡಾ. ಶೇಷಗಿರಿರಾಯರು ಸಾಹಸಿಗರು. ಶೋಧಕಾರ್ಯದಲ್ಲಿ ಮತ್ತು ಶ್ರಮಸಾಧ್ಯವಾದ ಕಾರ್ಯಗಳಲ್ಲಿ ಅವರು ಹಿಂಜರಿಯದೇ ಆಸ್ಥೆಯಿಂದ ತೊಡಗುತ್ತಾರೆ ಮತ್ತು ಯಶಸ್ವಿಯಾಗಿ ಪೂರೈಸುತ್ತಾರೆ.

ಹಾಗೆಯೇ ತಾತ್ಪರ್ಯನಿರ್ಣಯದ ಅಧ್ಯಯನದ ಹಿನ್ನೆಲೆಯಲ್ಲಿ ಅವರ ಅನುವಾದವೂ ಶಾಸ್ತ್ರಶುದ್ಧವಾಗಿರುತ್ತದೆ. ಇಂತಹ ಕೃತಿ ಅವರಿಂದ ಮತ್ತೆ ಮತ್ತೆ ಮೂಡಿಬರಲಿ ಎಂದು ಹಾರೈಸುತ್ತೇವೆ.

**ಶ್ರೀನಿವಾಸ ವರಖೇಡಿ**

# ವಿಷಯಾನುಕ್ರಮಣಿಕೆ

ವೈವಾಹಿಕಪರ್ವ



ಸಭಾಪರ್ವ



ವನಪರ್ವ - ಅರಣ್ಯಪರ್ವ



ಅರ್ಜುನಾಭಿಗಮನಪರ್ವ



ನಲೋಪಾಖ್ಯಾನಪರ್ವ



ತೀರ್ಥಯಾತ್ರಾಪರ್ವ



ಮಾರ್ಕಂಡೇಯಸಮಾಸ್ಯಾಪರ್ವ

ಶಾಂತಿಪರ್ವ - ರಾಜಧರ್ಮಪರ್ವ



ಶಾಂತಿಪರ್ವ - ಆಪದ್ಧರ್ಮಪರ್ವ



# ಅರ್ಪಣೆ

ಶ್ರೀಯುತ ಅನಿಲಕುಮಾರ್ ಎನ್ ಆರ್ ಇವರು ತಮ್ಮ ತಂದೆತಾಯಿ (ದಿ. ಶ್ರೀರಾಮಚಂದ್ರರಾವ್ ಹಾಗೂ ಶ್ರೀಮತಿ ಶೋಭಾ) ಹಾಗೂ ತಾತ ಅಜ್ಜಿ (ದಿ. ಶ್ರೀತಿರುಮಲರಾವ್ ಹಾಗೂ ಶ್ರೀಮತಿ ರಮಾಬಾಯಿ) ಸ್ಮರಣಾರ್ಥ, ಶ್ರೀಯುತ ಬಿಂದುಮಾಧವಾಚಾರ್ಯ ಹಾಗೂ ಕುಟುಂಬ, ಶ್ರೀಯುತ ಚಿ.ಅದಿತಿ ಕೋಟೆ, ಶ್ರೀಮತಿ ಗೌರೀ ಕೋಟೆ, ಶ್ರೀಯುತ ಬಿ.ಆಶಿಶ್, ಶ್ರೀಯುತ ಸಮೀರ ಮಂಡಿ, ಶ್ರೀಯುತ ಹರ್ಷ ದೇವಳೆ, ಶ್ರೀಯುತ ಅರವಿಂದ, ಶ್ರೀಯುತ ಕಾಂತೇಶ ಹೊಂಬಳ, ಶ್ರೀಯುತ ಜಯತೀರ್ಥ ಎಸ್, ಶ್ರೀಯುತ ಶ್ರೀಶ್ ಕೆ, ಶ್ರೀಯುತ ರಶ್ಮಿರಾಜ್ ಸುವರ್ಣ, ಶ್ರೀಯುತ ಭರತ್ ಕೆ, ಶ್ರೀಯುತ ನಾರಾಯಣರಾವ್ ಬಿ, ಶ್ರೀಯುತ ಮುರಳಿಧರ ಮೋಖಾಶಿ ಹಾವೇರಿ ಇವರೇ ಮೊದಲಾದವರು ಈ ಕೃತಿಯ ಪ್ರಕಾಶನದ ವೆಚ್ಚವನ್ನು ಭಾಗಶಃ ಭರಿಸಿ, ವೇದವ್ಯಾಸದೇವರ ಸೇವೆ ಮಾಡಿದ್ದಾರೆ.

ಇವರೆಲ್ಲರಿಗೂ ಇತೋಽಪ್ಯತಿಶಯವಾಗಿ ಶ್ರೀಮದಾಚಾರ್ಯರ ಸೇವೆ ಮಾಡುವ ಸೌಭಾಗ್ಯ ಕೊಟ್ಟು, ಸಾಧನೆ ಮಾಡಿಸಲಿ ಎಂಬುದಾಗಿ ಅಸ್ಮದುಪಾಸ್ಯ ಶ್ರೀಮೂಲ-ಸೀತಾಸಮೇತ-ಮೂಲರಾಮ, ದಿಗ್ವಿಜಯರಾಮ, ವೇದವ್ಯಾಸ-ದೇವರಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತೇವೆ.

**ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು**
ಉತ್ತರಾದಿಮಠ

# ಮುನ್ನುಡಿ

ವಿಶ್ವದ ಅದ್ಭುತಗ್ರಂಥಗಳಲ್ಲಿಯೇ ಅದ್ಭುತವಾದದ್ದು ಮಹಾಭಾರತ. ಸಾಹಿತ್ಯ, ಕಲೆ, ಯುದ್ಧ, ತತ್ತ್ವಜ್ಞಾನ, ಧರ್ಮ, ಅರ್ಥಶಾಸ್ತ್ರ, ಕಾಮ(ಶಾಸ್ತ್ರ), ಮೋಕ್ಷಶಾಸ್ತ್ರ, ವೇದ, ವೇದಾಂಗಗಳ ಪ್ರಯೋಗ, ಯಜ್ಞ, ಯಾಗ, ಶಬ್ದಶಾಸ್ತ್ರ, ವ್ಯಾಕರಣಶಾಸ್ತ್ರ ಹೀಗೆ ವಿದ್ಯೆಯ ಪ್ರಾಯಃಎಲ್ಲವಿಭಾಗಗಳಸಮ್ಮಿಲಿತಗ್ರಂಥಮಹಾಭಾರತವೆಂದರೆತಪ್ಪಾಗದು. ಇದೆಲ್ಲವನ್ನೂ ವಿದ್ವಾಂಸರೂ ಹೇಳಿದ್ದಾರೆ. ಸ್ವಯಂ ಭಾರತಕರ್ತೃಗಳು, ಅದರ ಪ್ರವಚನ ಮಾಡಿದ ಸೂತರು ಹೇಳಿರುವುದು ಭಾರತದಲ್ಲಿ ನೋಡಬಹುದು.

## ೧. ಮಹಾಭಾರತದ ಇತಿಹಾಸ

ಮಹಾಭಾರತವು ಮೂಲತಃ ಐತಿಹಾಸಿಕ ಕೃತಿ. ಬರೆದುದೆಲ್ಲ ಕಾವ್ಯಮಾಧ್ಯಮದಲ್ಲಿ. ಇದನ್ನು ಲೇಖಕರೂ ಕಾವ್ಯವೆಂದೂ, ಇತಿಹಾಸವೆಂದೂ ಕರೆದಿದ್ದಾರೆ. ಮಹಾಭಾರತದ ಕಾಲಕ್ಕೂ ಮೊದಲಿನ ಸಾವಿರಾರು ಲಕ್ಷಾವಧಿ ವರ್ಷಗಳ ಹಿಂದಿನ ರಾಜರ್ಷಿಗಳ, ಮಹರ್ಷಿ, ಬ್ರಹ್ಮರ್ಷಿಗಳ ಚರಿತ್ರೆಯ ಶ್ರೇಷ್ಠದಾಖಲೆ ಇದು. ಮಹಾಭಾರತದ ಬಹುತೇಕ ಶ್ಲೋಕಗಳು ಅನುಷ್ಟುಪ್‌ಛಂದಸ್ಸಿನಲ್ಲಿವೆ. ಅಲ್ಲಲ್ಲಿಇತರೆಛಂದಸ್ಸಿನಶ್ಲೋಕಗಳೂ, ಕ್ವಚಿತ್ತಾಗಿಗದ್ಯಭಾಗಗಳೂ ಉಂಟು (ಉದಾ: ಆದಿಪರ್ವಂ ಅ-೩, ಪೌಷ್ಯಪರ್ವ ೧-೬೦ ವಾಕ್ಯಗಳು ಗದ್ಯ).

ಮಹಾಕಾವ್ಯದಲ್ಲಿರಬೇಕೆಂದು ಬಯಸುವ ಗುಣಗಳು ಓತಪ್ರೋತವಾಗಿ ಇಲ್ಲಿವೆ. ಹೀಗಾಗಿ ಸಂಸ್ಕೃತಸಾಹಿತ್ಯ, ಅಲಂಕಾರಪ್ರಿಯರಿಗೆ ಇಲ್ಲಿ ಭರ್ಜರಿ ರಸದೌತಣ ಸಿಗುತ್ತದೆ. ಮುಖ್ಯಕಥೆ ಚಂದ್ರವಂಶದ ಶಂತನು ಚಕ್ರವರ್ತಿಯಿಂದ ಜನಮೇಜಯನವರೆಗೆ. ಅದರಲ್ಲೂ ವಿಚಿತ್ರವೀರ್ಯನ ಮಡದಿಯರಲ್ಲಿ ನಿಯೋಗ ಪದ್ಧತಿಯಲ್ಲಿ ವೇದವ್ಯಾಸರು ಜನ್ಮ ಕೊಟ್ಟ ಧೃತರಾಷ್ಟ್ರ, ಪಾಂಡು. ಅವರ ಸಂತಾನದಲ್ಲಿ ಮೇಲ್ನೋಟಕ್ಕೆ ರಾಜ್ಯದ ಹಂಚಿಕೆಯ ವಿಷಯದಲ್ಲಿಸೋದರರನಡುವೆನಡೆದಕೋಲಾಹಲಕಾರಿಯಾದ, ತಾತ್ತ್ವಿಕವಾಗ್ಯುದ್ಧದಿಂದ ಆರಂಭವಾದ ವಿವಾದ, ಕೊನೆಗೆ ಕುರುಕ್ಷೇತ್ರ ಯುದ್ಧದಲ್ಲಿ ಪರ್ಯವಸಾನವಾದ ಆಗಿನ ಕಾಲದ ವಿಶ್ವಯುದ್ಧವೇ ಸರಿ. ಇದರ ಧಾರ್ಮಿಕ, ಅಧ್ಯಾತ್ಮಿಕ ನೇತೃತ್ವ ಚಂದ್ರವಂಶದಲ್ಲಿಯೇ ಅವತರಿಸಿದ ಶ್ರೀಕೃಷ್ಣನದು. ಆತ ನಾರಾಯಣನ ಅವತಾರರೂಪ. ಇದಕ್ಕೆ ಸಂಬಂಧಿಸಿದಂತೆ ಚಂದ್ರವಂಶದ ವಿಶೇಷ ಚರಿತ್ರೆಯು ಇಲ್ಲಿ ಅನಾವರಣಗೊಂಡಿದೆ. ಭಾಗವತದಲ್ಲಿ ಹೆಚ್ಚಾಗಿ ಶ್ರೀಕೃಷ್ಣನಚರಿತ್ರೆ ಬಂದಿದೆ. ಭಾರತದಖಿಲಭಾಗವೆನಿಸಿದಹರಿವಂಶದಲ್ಲೂವಿಶೇಷವಾಗಿಯೇ ಬಂದಿದೆ.

## ೨. ಮಹಾಭಾರತದ ರಚನೆ

ಮಹಾಭಾರತದ ರಚನೆ ಮಾಡಿದವರು ಸತ್ಯವತೀ-ಪರಾಶರ ದಂಪತಿಗಳಲ್ಲಿ ಕೃಷ್ಣದ್ವೈಪಾಯನರೆಂದು ಪ್ರಸಿದ್ಧರಾದ ವೇದವ್ಯಾಸರು. ಇವರೂ ನಾರಾಯಣನ ಸಾಕ್ಷಾತ್ ಅವತಾರವೇ ಆಗಿದೆ.

**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।**
**ಕೋ ಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತಕೃದ್ಭವೇತ್ ॥** - ಸೂತರ ನುಡಿ
-ಮ.ಭಾ.(ಆದಿ-೧/೬೩)

(ಮ.ತಾ.ನಿ. ೨/೫೮ರ ಶ್ಲೋಕವೂ ಮೇಲಿನ ಶ್ಲೋಕವೂ ಒಂದೇ ಆಗಿದೆ)

ಮಹಾಭಾರತದ ರಚನೆಯಾದುದು ಕುರುಪಾಂಡವರು ಜನಿಸುವ ಮೊದಲೇ. ಆಗ ಮಹಾಭಾರತನಡೆದಿರಲಿಲ್ಲ. ಆಗಲೇ ಕೃತಿ ರಚಿತವಾಗಿತ್ತು. ಇದರಿಂದಲೇ ವ್ಯಾಸರ ಸರ್ವಜ್ಞತ್ವ ಸಿದ್ಧಿಯಾಗುತ್ತದೆ. ವೇದವ್ಯಾಸರೂಪಿಯಾದ ಕೃಷ್ಣನೇ ಅದನ್ನು ಹೇಳುತ್ತಾನೆ (ಇದರಿಂದ ಇಬ್ಬರೂ ಸರ್ವಜ್ಞರೆಂದು ತಿಳಿಯುತ್ತದೆ).

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥** - ಗೀತಾ(೭/೨೬)

ಶ್ರೀವಾದಿರಾಜಗುರುರಾಜರುತಮ್ಮಮ.ತಾ.ನಿ.ವ್ಯಾಖ್ಯಾನದಲ್ಲಿಮಹಾಭಾರತದರಚನೆ ಮಾಡಿದವ್ಯಾಸರಹಿರಿಮೆ,ಗರಿಮೆಗಳನ್ನುಹೀಗೆವರ್ಣಿಸಿದ್ದಾರೆ.ವ್ಯಾಸರುನಡೆಯದಿದ್ದುದನ್ನು ಊಹಿಸಿ ಬರೆಯಲಿಲ್ಲ. ಸರ್ವಜ್ಞರಾದ್ದರಿಂದ ಹಿಂದಿನ, ಮುಂದಿನ ಎಲ್ಲ ಘಟನೆಗಳು ಅವರ ಅಂಗೈಯಲ್ಲಿಯನೆಲ್ಲಿಕಾಯಿಯಂತೆಬರೆಯಬಲ್ಲರು.ಆದ್ದರಿಂದಬರೆದಿದ್ದಾರೆ.ವಿವರಗಳನ್ನು ಪರಿಶಿಷ್ಟದಲ್ಲಿ ನೋಡಬಹುದು.

ಹೀಗೆ ಮಹಾಭಾರತದ ಬಗ್ಗೆ ಸಾಮಾನ್ಯ ಪರಿಚಯ ಮಾಡಿಸಲು ಬರೆಯುವುದು ಒಂದು ದೃಷ್ಟಿಯಲ್ಲಿ ಭಾರತೀಯರಿಗೆ ಮಾಡುವ ಅವಮಾನ. ಕಾರಣ ನಿಜವಾದ ಭಾರತೀಯರಲ್ಲಿ ಭಾರತಕಥೆ, ವ್ಯಾಸರಕಥೆ ಹಾಸುಹೊಕ್ಕಾಗಿಯೇ ಇದೆ. ಆದರೆ ಸತ್ಪ್ರಚಾರದೊಡನೆ ಇತ್ತೀಚಿಗೆ ಅಪಪ್ರಚಾರವನ್ನೂ ಚೆನ್ನಾಗಿ ಮಾಡುವ ಕೆಲವ ಮಾಧ್ಯಮಗಳು, ಸ್ವಯಂ ಘೋಷಿತ ವಿದ್ವಾಂಸರು ಇರುವುದರಿಂದ ಕೆಲವು ಮೂಲಭೂತ ವಿಷಯಗಳನ್ನು ಮಾತ್ರ ಭಾರತದ ನೆರಳಿನಲ್ಲಿಯೇ ಇಲ್ಲಿ ಮಂಡಿಸಲಾಗಿದೆ.

## ೩. ಗ್ರಂಥವ್ಯಾಪ್ತಿ

ಮಹಾಭಾರತದಲ್ಲಿ ಹದಿನೆಂಟು ಪರ್ವಗಳು, ಒಂದು ನೂರು ಉಪಪರ್ವಗಳೂ, ಒಂದು ಲಕ್ಷ ಶ್ಲೋಕಗಳೂ ಇವೆ ಎನ್ನುವುದು ಸಂಪ್ರದಾಯ. ಉಪಪರ್ವ ಹಾಗೂ

ಶ್ಲೋಕಸಂಖ್ಯೆ ಬಗ್ಗೆ ಯಾವುದೇ ಪ್ರಕಾಶನವನ್ನು ನೋಡಲಿ, ಹಸ್ತಪ್ರತಿಗಳನ್ನು ನೋಡಿದವರ ಅಭಿಪ್ರಾಯಗಳನ್ನು ಗಮನಿಸಲಿ, ನಮಗೆ ನೂರು ಉಪಪರ್ವಗಳಾಗಲೀ, ಸರಿಯಾಗಿ ಲಕ್ಷಶ್ಲೋಕಗಳು ಸಿಗುವುದಿಲ್ಲ. ಇದಕ್ಕೆ ಕಾರಣ ಮಹಾಭಾರತ ಹಿಡಿದುಕೊಂಡು ವೇದವ್ಯಾಸರ ಪುರಾಣಗಳು ಕುಲಗೆಟ್ಟಿವೆ. ಹತ್ತಾರು ಪಾಠಾಂತರಗಳು, ಇಲ್ಲದ ಶ್ಲೋಕಗಳೇ ಸಿಗದಷ್ಟು ಮೂಲಗ್ರಂಥಗಳೆಲ್ಲ ನಷ್ಟವಾಗಿವೆ. ಇದನ್ನು ಶ್ರೀಮಧ್ವಾಚಾರ್ಯರು ತಮ್ಮ ಮ.ತಾ.ನಿ. ಅಧ್ಯಾಯ ೨ರಲ್ಲಿ ನಿರೂಪಿಸಿದ್ದಾರೆ. ಇದರಲ್ಲಿ ಯಾವುದೇ ವಿವಾದವಿಲ್ಲ. ಆದ್ದರಿಂದ ನಾನು ನೋಡಿದ ನಾಲ್ಕು ಪ್ರಕಾಶನಗಳು ಕೂಡಾ ಇದಕ್ಕೆ ಅಪವಾದವಾಗಿಯೇನಿಲ್ಲ. ಆದಾಗ್ಯೂ ನಮಗೆ ಹಲವಾರು ಪ್ರಕಾಶನಗಳನ್ನು ನೋಡಿದಾಗ ಆಚಾರ್ಯರು ನಿರೂಪಿಸಿದ ಮ. ತಾ.ನಿದ ಒಟ್ಟಾರೆ ಕಥೆಯ ಸುಳಿವು ಸಿಕ್ಕೇ ಸಿಗುತ್ತದೆ. ಅದಕ್ಕೆ ಆಚಾರ್ಯರು ತಿಳಿಸಿದ ಯುಕ್ತಿ, ಬುದ್ಧಿ, ಬಲಗಳ ಪ್ರಯೋಗವನ್ನು ನಾವು ಚಾಣಾಕ್ಷತನದಿಂದ ಉಪಯೋಗಿಸಬೇಕು.

ನಾನು ನೋಡಿದ ನಾಲ್ಕು ಪ್ರಕಾಶನಗಳ ಪ್ರಕಾರ ಪರ್ವ, ಉಪಪರ್ವ, ಅಧ್ಯಾಯಗಳ ಸಂಖ್ಯೆಗಳಲ್ಲೂ ಹೊಂದಾಣಿಕೆ ಇಲ್ಲ. ಮಹಾಭಾರತದ ಬಗ್ಗೆ ಅನೇಕ ಅಂಕಿಅಂಶಗಳ ಸಾಮಾನ್ಯ ಮಾಹಿತಿಯನ್ನು ನಮ್ಮ ಪ್ರಕಾಶನದ **'ಸರ್ವಮೂಲಸಾರಸಂಗ್ರಹ'** (೨೦೧೯) ಕೃತಿಯ ಮಹಾಭಾರತತಾತ್ಪರ್ಯನಿರ್ಣಯದ ಆರಂಭದಲ್ಲೂ ನೋಡಬಹುದು (ಪು. ೧೩೭-೧೩೮). ಅವೂ ನಿಖರ ಅಂಕಿಗಳಲ್ಲ.

ಮಹಾಭಾರತದ ಗ್ರಂಥವ್ಯಾಪ್ತಿ, ಪ್ರಕಾಶಿತ ಸಂಶೋಧನೆ ಬಗ್ಗೆ ೨೦೧೯ರಲ್ಲಿ ಪ್ರಕಟವಾದ ತತ್ತ್ವಸಂಶೋಧನ ಸಂಸತ್‌ನ ಮಹಾಭಾರತ ಕನ್ನಡ ಆವೃತ್ತಿ, ೨೦೧೯ ಮುನ್ನುಡಿಯಲ್ಲಿ ನೋಡಬಹುದು.

## ೪. ಮಹಾಭಾರತ ಬೆಳೆದು ಬಂದ ರೀತಿ

ಆಧುನಿಕರು ಮೂರು ಹಂತದಲ್ಲಿ ಭಾರತ ಬೆಳೆದು ಬಂದಿದೆ ಎಂದು ಅಭಿಪ್ರಾಯ ಪಡುತ್ತಾರೆ. ಮೊದಲು ವ್ಯಾಸರನ್ನು ಸಂಸ್ಕೃತ ಮಹಾಕವಿಗಳಲ್ಲಿ ಸ್ತೋತ್ರ ಮಾಡಿದವರು ಮಹಾಕವಿ ಬಾಣಭಟ್ಟ ಮಾತ್ರ ಎಂದು [೧]ತೋರುತ್ತದೆ. ಕಾಳಿದಾಸ, ಮಾಘ, ಭಾರವಿ, ಶ್ರೀಹರ್ಷ ಇವರ್ಯಾರೂ ಸ್ತೋತ್ರ ಮಾಡಿದಂತಿಲ್ಲ. ವ್ಯಾಸರು ಬರೆದುದು ಕೇವಲ ೮೮೦೦, ನಂತರ ಅದು ಜಯ ಎಂದು ರೂಪತಾಳಿ ಬಂದಾಗ ೨೪೦೦೦ ಶ್ಲೋಕಗಳು ಇದ್ದುವೆಂದೂ, ನಂತರ ಬೃಹತ್ ಭಾರತ ಒಂದುಲಕ್ಷ ಶ್ಲೋಕವೆಂದು ಹೇಳುತ್ತಾರೆ. ಇವೆಲ್ಲ ಪಾಶ್ಚಿಮಾತ್ಯರ ಹಾಗೂ ಅವರ ಬಾಲಬಡುಕರ ವಾದಗಳೇ ಸರಿ. ಸಂಪ್ರದಾಯದ ತಿಲಾಂಶವೂ ಗೊತ್ತಿಲ್ಲದ

---

೧ ನಮಃ ಸರ್ವವಿದೇ ತಸ್ಮೈ ವ್ಯಾಸಾಯ ಕವಿವೇಧಸೇ ।
ಚಕ್ರೇ ಪುಣ್ಯಂ ಸರಸ್ವತ್ಯಾ ಯೋ ವರ್ಷಮಿವ ಭಾರತಮ್ ॥
- ಬಾಣಭಟ್ಟನ ಹರ್ಷಚರಿತಮ್ (ಉಲ್ಲಾಸ ೧ -೪)

ಪಾಶ್ಚಿಮಾತ್ಯರ ವಾದ ತೀರ ಬಾಲಿಶವೆಂದು ಹೇಳಬೇಕಾಗುತ್ತದೆ. ವಾಸ್ತವವಾಗಿ ೮೮೦೦ ಶ್ಲೋಕಗಳ ಭಾರತವು ಗುಹ್ಯಭಾಷೋಪೇತಗಳು. ೨೪೦೦೦ ಶ್ಲೋಕಗಳು ಹರಿವಂಶದ ಶ್ಲೋಕ ಸಂಖ್ಯೆ. ಅಲ್ಲೂ ಇನ್ನೊಂದು ಸಾವಿರ ಶ್ಲೋಕಗಳ ಉಪಾಖ್ಯಾನಗಳಿವೆ. ಹೀಗಾಗಿ ಹರಿವಂಶದಲ್ಲಿ ೨೫೦೦೦ ಶ್ಲೋಕಗಳೆ ಇವೆ. ಈಗ ಸಿಗುವ ಹರಿವಂಶವೆಂದು ಹೇಳಲಾಗುವ ಪ್ರಕಾಶನಗಳಲ್ಲಿಯೂ(ಗೀತಾಪ್ರೆಸ್, ಬಿ.ಓ.ಆರ್.ಐ., ಪುಣೆ) ಇಷ್ಟು ಶ್ಲೋಕಗಳು ಸಿಗುವುದಿಲ್ಲ. ವ್ಯತ್ಯಾಸಗಳೆಲ್ಲಾ ಕಾಲಗರ್ಭದಲ್ಲಿ ತುಳಿಯಲ್ಪಟ್ಟಿವೆ. ಒಂದು ಲಕ್ಷ ಶ್ಲೋಕವೆಂಬುದೇ ಭಾರತ ಶ್ಲೋಕಸಂಖ್ಯೆ.

ವಾಸ್ತವವಾಗಿ ಭಾರತವು ಭೂಲೋಕದಲ್ಲಿ ಪ್ರಚಾರಕ್ಕೆ ಬಂದುದು ಒಂದು ಲಕ್ಷಶ್ಲೋಕಗಳ ವ್ಯಾಪ್ತಿಯಲ್ಲಿ. ಸ್ವರ್ಗಾದಿ ಲೋಕಗಳಲ್ಲಿ ಇದಕ್ಕಿಂತಲೂ ದೊಡ್ಡ ಪ್ರಮಾಣದಲ್ಲಿತ್ತು ಎಂಬುದು ಸಂಪ್ರದಾಯ. ವ್ಯಾಸರಿಗೆ ಲಕ್ಷಶ್ಲೋಕಗಳನ್ನು ಬರೆಯಲು ಹೇಗೆ ಸಾಧ್ಯ? ಎಂದು ಅವರನ್ನು ಮನುಷ್ಯರೆಂದು ಭ್ರಮಿಸಿದವರಿಗೆ ಬರುವ ಸಂಶಯವೇ ಹೊರತು, ಅವರನ್ನು ದೇವರೆಂದು ಸರಿಯಾಗಿ ತಿಳಿದವರಿಗೆ ಅಲ್ಲ. ಒಬ್ಬ ಪ್ರತಿಭಾವಂತನೇ ತನ್ನ ಹಲವು ದಶಕಗಳ ಸಾರಸ್ವತ ಸೇವಾವಧಿಯಲ್ಲಿ ಮಾತನಾಡಿದುದೆಲ್ಲವನ್ನು ಲೆಕ್ಕ ಹಾಕಿದರೆ ಲಕ್ಷಾವಧಿ ಶ್ಲೋಕಗಳಾಗುವುದು ಆಶ್ಚರ್ಯವಲ್ಲ. ಮಾತನಾಡಿದುದೆಲ್ಲ ಶ್ಲೋಕವಾಗುವ ನಿಸ್ಸೀಮ ಸರ್ವಜ್ಞನಾದ ಭಗವಂತನಿಂದ ರಚಿಸಲಾದ ಕೃತಿಗಳು ಭಾರತ, ಪುರಾಣಾದಿಗಳು. ಇವು ಹೇಗೆ ತಾನೆ ಲಕ್ಷಾಧಿಕ ಶ್ಲೋಕಗಳಾಗವು?

ಶ್ರೀಮದ್ವಾದಿರಾಜತೀರ್ಥರು ಮಹಾಭಾರತ ಶ್ಲೋಕಸಂಖ್ಯೆ ನಿರೂಪಿಸುವ ಈ ಕೆಳಗಿನ ಶ್ಲೋಕಕ್ಕೆ ಲಕ್ಷಾಲಂಕಾರದಲ್ಲಿ ಬರೆದ ವ್ಯಾಖ್ಯಾನವು ಭಾರತದ ಶ್ಲೋಕಸಂಖ್ಯೆಯನ್ನು ೧೦೩೦೩೪ ಎಂದು ತಿಳಿಸುತ್ತದೆ. ಮಹಾಭಾರತದ ಶ್ಲೋಕ ಹೀಗಿದೆ:

**ಇದಂ ಶತಸಹಸ್ರಾಣಾಂ ಶ್ಲೋಕಾನಾಂ ಪುಣ್ಯಕರ್ಮಣಾಮ್ ।**
**ಉಪಾಖ್ಯಾನೈಃ ಸಹಜ್ಞೇಯಂ ಶ್ರಾವ್ಯಂ ಭಾರತಮುತ್ತಮಮ್ ॥**

- ಆದಿಪರ್ವ(೧/೭೨)

ಭಾರತದಲ್ಲಿ ಬರುವ ಇನ್ನೂರಕ್ಕೂ ಹೆಚ್ಚು ಉಪಾಖ್ಯಾನ (ಚರಿತೆ)ಗಳೆಲ್ಲ ಸೇರಿದಾಗ ಭಾರತದ ಶ್ಲೋಕಸಂಖ್ಯೆ ೧೦೩೦೩೪ ಆಗುತ್ತದೆಂದು ಶ್ರೀವಾದಿರಾಜರು ಲಕ್ಷಾಲಂಕಾರದಲ್ಲಿ ಹೀಗೆ ಹೇಳುತ್ತಾರೆ.

**ಇದಂ ಶತಸಹಸ್ರಾಣಾಂ ಇತ್ಯತ್ರ..... ಕೇಷಾಂಚಿತ್ ಶ್ಲೋಕಾನಾಂ ವಕ್ಷ್ಯಮಾಣ ಭಾರತಶ್ಲೋಕಗಣನಾಪರ್ಯಾಲೋಚನಯಾಂ ಲಕ್ಷಾದಪಿ ಅಧಿಕತ್ವಾತ್ ಉಪಾಖ್ಯಾನೈಃ ಸಹ ಇತ್ಯುಕ್ತಮ್ । ಲಕ್ಷಸಂಖ್ಯಾಕಂ ಭಾರತಶ್ಲೋಕಾಃ ತ್ರಿಸಹಸ್ರಾದುಪರಿ**

**ಶತಂ ಚತುಸ್ತ್ರಿಶಚ್ಚ । ವ್ಯಾಸೋಕ್ತರೀತ್ಯಾ ಪರ್ವಪರ್ವ ಶ್ಲೋಕಗಣನಾಯಾಂ ಲಕ್ಷಾದಪ್ಯಧಿಕಾ ಭವಂತಿ ॥**

**- ತತ್ತ್ವಸಂಶೋಧನ ಸಂಸತ್ ಪ್ರಕಾಶನ (೨೦೧೯), ಉಡುಪಿ.**

## ೫. ಮಹಾಭಾರತ ಪ್ರವಚನ ಪರಂಪರೆ

ಪಾಂಡವರಲ್ಲಿ ಅರ್ಜುನ ಮಧ್ಯಮಪಾಂಡವ. ಆತನ ಮಗ ಅಭಿಮನ್ಯು, ಸೊಸೆ ಉತ್ತರಾದೇವಿ. ಇವರ ಮಗನೇ ಪರೀಕ್ಷಿತ. ಈತನೇ ಪಾಂಡವರು ಸ್ವರ್ಗಾರೋಹಣ ಮಾಡಿದ ಮೇಲೆ ಕುರುವಂಶದ ಚಕ್ರವರ್ತಿಯಾದ. ಈತನಿಗೆ ಬಂದ ಬ್ರಾಹ್ಮಣಶಾಪದಿಂದಾಗಿ ತಕ್ಷಕ ಸರ್ಪನಿಂದ ಸಾಯುವಂತಾಯಿತು. ಸಾಯುವ ಮುನ್ನ ಏಳು ದಿನ ಭಾಗವತವನ್ನು ಶುಕಾಚಾರ್ಯರಿಂದ ಕೇಳಿ ಪ್ರಾಣ ಬಿಟ್ಟನು. ಪರೀಕ್ಷಿತನ ಮಗ ಜನಮೇಜಯ ಮುಂದಿನ ರಾಜನಾದ. ಆತನಿಗೆ ತಕ್ಷಕ ಸರ್ಪದಿಂದ ತಂದೆ ಮರಣ ಹೊಂದಿದ್ದು ನೋಡಿ, ಸರ್ಪವಂಶವನ್ನೇ ನಿರ್ವಂಶ ಮಾಡಲು ಪಣತೊಟ್ಟ. ಅದಕ್ಕಾಗಿಯೇ ಸರ್ಪಯಾಗ ಮಾಡಿ ಸರ್ಪಗಳ ಹನನ ಮಾಡಿದ. ಈ ಯಾಗಕ್ಕೆ ಉದಂಕನೆಂಬ ಬ್ರಾಹ್ಮಣ ಋಷಿಯ ಪ್ರಚೋದನೆಯೂ ಇತ್ತು. ಜನಮೇಜಯನ ಯಾಗಕ್ಕೆ ವ್ಯಾಸರೂ ಬಂದಿದ್ದರು. ಆಗ ವ್ಯಾಸರು ತಾವು ರಚಿಸಿದ ಪುಣ್ಯಕರವಾದ ವಿವಿಧ ಕಥೆಗಳನ್ನು ಹೇಳಿದುದನ್ನು ಸೂತರು ಕೇಳಿದರು. ಆಗಲೇ ಜನಮೇಜಯನ ಹಾಗೂ ವ್ಯಾಸರ ಆದೇಶದ ಮೇರೆಗೆ ವೈಶಂಪಾಯನರು ಹೇಳಿದ ಮಹಾಭಾರತ ಆಧರಿಸಿದ ಕಥೆಗಳನ್ನು ಸೂತರು ಕೇಳಿದರು. ವ್ಯಾಸರು ಭೂಲೋಕದಲ್ಲಿ ವೈಶಂಪಾಯನರನ್ನು ಭಾರತದ ಪ್ರವರ್ತಕರನ್ನಾಗಿ ನೇಮಿಸಿದರು. ಹೀಗೆ ಒಂದು ಮಾರ್ಗದಲ್ಲಿ ಭಾರತ ಹರಿದು ಬಂತು.

ಸೂತರು ಅಲ್ಲಿ ಕೇಳಿ ನೈಮಿಷಾರಣ್ಯಕ್ಕೆ ಬಂದು ಅಲ್ಲಿ ನೆರೆದ ಸಹಸ್ರಾರು ಶೌನಕರೇ ಮೊದಲಾದ ಬ್ರಹ್ಮರ್ಷಿಗಳಿಗೆ ಅವರ ಮಹಾಭಾರತವನ್ನು ಹೇಳಿದರು. ಇದು ಎರಡನೇ ಮಾರ್ಗ.

## ೬. ಋಷಿಗಳು ಕಂಡ-ಕೇಳಬಯಸಿದ ಮಹಾಭಾರತ

ಮಹಾಭಾರತವು ೧. ಶ್ರೇಷ್ಠವಾದ ಆಖ್ಯಾನ; ೨. ವಿಚಿತ್ರ ಪದಗಳಿಂದ ಕೂಡಿದೆ; ೩. ಸೂಕ್ಷ್ಮವಾದ ಅರ್ಥಗಳಿವೆ, ವಾಕ್ಯಗಳು ಯುಕ್ತಿಯುಕ್ತವಾಗಿವೆ; ೪. ಗುಹ್ಯಭಾಷೆಯಿಂದ ಕೂಡಿದೆ; ೫. ಅನೇಕ ಶಾಸ್ತ್ರಗಳ ಸಾರವಾಗಿದೆ; ೬. ವೇದಸಮಾನ (ನಾಲ್ಕು); ೭. ಇತಿಹಾಸರೂಪವಾದುದು ಭಾರತ; ೮. ಪಾಪ, ಭಯ ನಿವಾರಕ.

## ೭ ಸೂತರು ಕಂಡ ಭಾರತ

೧. ಮೊದಲು ಸೂತರು ೭ ಶ್ಲೋಕಗಳಿಂದ ಮಂಗಳಾಚರಣೆ ಮಾಡುತ್ತಾರೆ. ಅವುಗಳಲ್ಲಿ

**ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।**
**ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥**
**-ಆ.ಪ.(೧/೩೩)**

- ಇಲ್ಲಿ ನಾರಾಯಣನ ಸರ್ವೋತ್ತಮತ್ವ ಹಾಗೂ ಚತುರ್ವಿಧ ಪುರುಷಾರ್ಥಗಳ ಪ್ರಾಪ್ತಿಯ ಪ್ರತಿಪಾದನೆಯನ್ನು ಸೂತರು ಮಾಡಿದ್ದಾರೆ.

೨. ಈ ಭಾರತವನ್ನು ಹಿಂದೆ, ಈಗ, ಮುಂದೂ ವ್ಯಾಖ್ಯಾನ ಮಾಡುತ್ತಾರೆ (ಇದೊಂದು ವ್ಯಾಖ್ಯೇಯ ಗ್ರಂಥ).

೩. ಇದೊಂದು ಇತಿಹಾಸ (ನಡೆದ ಘಟನೆ).

೪. ಪವಿತ್ರ ಶಬ್ದಗಳಿಂದ, ಮಾನವರ ಶಬ್ದನಿಯಮಗಳಿಂದಲೂ, ಅನೇಕ ಛಂದೋಬದ್ಧ ವೃತ್ತಗಳಿಂದಲೂ ಕೂಡಿದೆ. ಜ್ಞಾನಿಗಳಿಗೆ (ವಿದ್ವಾಂಸರಿಗೆ) ಪ್ರಿಯವಾದುದು (ಸಾಹಿತ್ಯ-ಅಲಂಕಾರ ಕೃತಿ).

೫. ವ್ಯಾಸರೇ ನಾರಾಯಣ, ಅವನಿಂದಲೇ ಇದೆಲ್ಲ ಜಗತ್ತಿನ ಸೃಷ್ಟ್ಯಾದಿಗಳು (ಬ್ರಹ್ಮರುದ್ರೇಂದ್ರಾದಿ ಜಗತ್ತಿನ). - ಶ್ಲೋಕ.೩೭-೫೮ರವರೆಗೆ

೬. ಭಾರತವು ಸಂಕ್ಷೇಪವಾಗಿಯೂ, ವಿಸ್ತಾರವಾಗಿಯೂ ಇದ್ದು ಎಲ್ಲ ಶಾಸ್ತ್ರಗಳವನ್ನು ಸಂಕ್ಷೇಪವಾಗಿ, ವಿಸ್ತಾರವಾಗಿ ವ್ಯಾಸರು ಹೇಳಿದ್ದಾರೆ. ಅದುವೇ ಜ್ಞಾನಿಗಳಿಗೆ ಇಷ್ಟವಾದುದು.

**ವಿಸ್ತೀರ್ಯೈತಂ ಮಹಾತ್ಮಾಽಯಂ ಋಷಿಃ ಸಂಕ್ಷೇಪಮಬ್ರವೀತ್ ।**
**ಇಷ್ಟಂ ಹಿ ವಿದುಷಾಂ ಲೋಕೇ ಸಮಾಸವ್ಯಾಸಧಾರಣಮ್ ॥ - ಆ.ಪ.(೧/೬೩)**

೭. ಇಲ್ಲಿಯ ವಿಷಯಗಳು ಮೂರು ವಿಧವಾದ ರಹಸ್ಯಗಳು, ಎಲ್ಲ ವೇದಗಳು, ವಿದ್ಯಾಹೇತುವಾದ ಯೋಗ, ಧರ್ಮ, ಅರ್ಥ, ಕಾಮ, ಉಳಿದ ಶಾಸ್ತ್ರಗಳು, ಲೋಕಯಾತ್ರಾ ನೀತಿಗಳು, ರಾಜನೀತಿ, ಭರತವಂಶದ ವಿಸ್ತಾರ, ವ್ಯಾಖ್ಯಾನಸಹಿತವಾದ ಇತಿಹಾಸಗಳು.

೮. ಶಂತನು ಆರಂಭಿಸಿ ಪರೀಕ್ಷಿತನವರೆಗೆ ಕುರುವಂಶದ ರಾಜರು ಜನಿಸಿ, ಪರಗತಿಗೆ ಹೋದ ಮೇಲೆ ವ್ಯಾಸರು ಮನುಷ್ಯಲೋಕಕ್ಕೆ ಭಾರತವನ್ನು ವೈಶಂಪಾಯನರಿಂದ ಪ್ರವರ್ತನಗೊಳಿಸಿದರು. ಅದಕ್ಕೂ ಮೊದಲು ಶುಕರಿಗೆ ಅನುಕ್ರಮಣಿಕಾಧ್ಯಾಯವನ್ನು ಉಪದೇಶಿಸಿದರು.

**ತಪಸಾ ಬ್ರಹ್ಮಚರ್ಯೇಣ ವ್ಯಸ್ಯ ವೇದಂ ಸನಾತನಮ್ ।**
**ಇತಿಹಾಸಮಿದಂ ಚಕ್ರೇ ಪುಣ್ಯಂ ಸತ್ಯವತೀಸುತಃ ॥ - ಆ.ಪ.(೧/೬೬)**
**ತೇಷು ಜಾತೇಷು ವೃದ್ಧೇಷು ಗತೇಷು ಚ ಪರಾಂ ಗತಿಮ್ ।**
**ಅಬ್ರವೀದ್ ಭಾರತಂ ಲೋಕೇ ಮಾನುಷೇಽಸ್ಮಿನ್ ಮಹಾನೃಷಿಃ ॥ - (೧/೭೧)**

ಜನಮೇಜಯೇನ ಪೃಷ್ಟಃ ಸನ್ ಬ್ರಾಹ್ಮಣೈಶ್ಚ ಸಹಸ್ರಶಃ ।
ಶಶಾಸ ಶಿಷ್ಯಮಾಸೀನಂ ವೈಶಂಪಾಯನಮಂತಿಕೇ ॥ - (೧/೭೨)
ಸ ಸದಸ್ಯೈಃ ಸಮಾಸೀನಂ ಶ್ರಾವಯಾಮಾಸ ಭಾರತಮ್ ।
ಕರ್ಮಾಂತರೇಷು ಯಜ್ಞಸ್ಯ ಚೋದ್ಯಮಾನಃ ಪುನಃ ಪುನಃ ॥ - (೧/೭೩)
- ಆದಿಪರ್ವ(೧/೬೬,೭೧-೭೩)

## ೮. ಮಹಾಭಾರತದ ವಸ್ತು

೧. ಕುರುವಂಶದ ವಿಸ್ತಾರಕಥೆ; ೨. ಗಾಂಧಾರಿಯ ಧರ್ಮಶೀಲತೆ; ೩. ವಿದುರನ ಪ್ರಜ್ಞೆ (ಮೇಧಾವಿತ್ವ);೪.ವಾಸುದೇವನಮಾಹಾತ್ಮ್ಯ;೬.ಪಾಂಡವರಸತ್ಯತ್ತ್ವ(ಚರಿತ್ರೆ-ಚಾರಿತ್ರ್ಯ); ೭. ದುರ್ಯೋಧನಾದಿಗಳ ದುಷ್ಟವೃತ್ತಿ.

ವಿಸ್ತಾರಂ ಕುರುವಂಶಸ್ಯ ಗಾಂಧಾರ್ಯಾಃ ಧರ್ಮಶೀಲತಾಮ್ ।
ಕ್ಷತ್ತುಃ ಪ್ರಜ್ಞಾಂ ಧೃತಿಂ ಕುಂತ್ಯಾಃ ಸಾಹ್ಯಂ ದ್ವೈಪಾಯನೋಽಬ್ರವೀತ್ ॥
ವಾಸುದೇವಸ್ಯ ಮಾಹಾತ್ಮ್ಯಂ ಪಾಂಡವಾನಾಂ ಚ ಸತ್ಯತಾಮ್ ।
ದುರ್ವೃತ್ತಂ ಧಾರ್ತರಾಷ್ಟ್ರಾಣಾಂ ಉಕ್ತವಾನ್ ಭಗವಾನ್ ಋಷಿಃ ॥
ಆದಿಪರ್ವ(೧/೭೦,೭೧)

## ೯. ಲೇಖಕರು(ವ್ಯಾಸರು) ನಿರೂಪಿಸಿದ ಭಾರತ

೧. ನನ್ನ ಕಾವ್ಯ ವೇದ-ವೇದಾಂಗ-ಉಪನಿಷತ್ ಇತಿಹಾಸ ಪುರಾಣಗಳ ವಿಷಯಗಳ ಅರ್ಥಗಳೇ ಮೊದಲಾದ ವಿಷಯಗಳನ್ನು ಒಳಗೊಂಡಿದೆ.

೨. ತ್ರಿಕಾಲದ ವಿಷಯಗಳು (ನಡೆದು ಹೋದ, ನಡೆಯುತ್ತಿರುವ, ನಡೆಯಲಿರುವ ಘಟನೆಗಳು), ಮುಪ್ಪು, ಮರಣ, ಭಯ, ರೋಗಗಳಿಗೆ ಇರುವ ಕಾರಣಗಳು, ಅವುಗಳ ಪರಿಹಾರೋಪಾಯಗಳು ಇಲ್ಲಿವೆ.

೩. ತಪಸ್ಸು, ಬ್ರಹ್ಮಚರ್ಯ, ಪೃಥಿವೀ, ಚಂದ್ರ, ಸೂರ್ಯ, ಗ್ರಹನಕ್ಷತ್ರ ತಾರೆಗಳ, ಯುಗಗಳ, ಪರಿಮಾಣ, ಪ್ರಮಾಣಗಳಿವೆ.

೪.ಈಕಾವ್ಯದಲ್ಲಿಋಗಾದಿಮೂರುವೇದಗಳ,ಆಧ್ಯಾತ್ಮಿಕವಿಷಯಗಳು(ಮಾನಸಶಾಸ್ತ್ರ ಆತ್ಮಜೀವ, ಪರಮಾತ್ಮ ಸಂಬಂಧಿ ಜ್ಞಾನಗಳು), ನ್ಯಾಯಶಾಸ್ತ್ರ ಶಿಕ್ಷಾಶಾಸ್ತ್ರ ವೈದ್ಯಶಾಸ್ತ್ರ ಪಾಶುಪತಶಾಸ್ತ್ರ ವಿಷಯಗಳಿವೆ.

೫. ಹೀಗೆ ಇದು ಒಂದೇ ವಿಷಯಕ್ಕೆ ಆಶ್ರಯವಾಗಿರದೆ, ದೇವ, ಮಾನವರಿಗೆ ಸಂಬಂಧಿಸಿದ ಅನೇಕ ಜನರ(ಹುಟ್ಟುಗಳ), ಪುಣ್ಯತೀರ್ಥಗಳಕ್ಷೇತ್ರಗಳು, ನದೀನದಗಳ, ಪರ್ವತಗಳ, ವನಗಳ, ಸಾಗರಗಳ, ಪುರಾಣಗಳ, ದಿವ್ಯವಾದ ನಗರ, ಪಟ್ಟಣಗಳ, ಯುದ್ಧಕೌಶಲ್ಯಗಳು

(ಯುದ್ಧಶಾಸ್ತ್ರ), ಇಲ್ಲಿವೆ. ಅಲ್ಲದೆ, ವಾಕ್ಯಜಾತಿ ವಿಶೇಷಗಳು (ಮೀಮಾಂಸಾಶಾಸ್ತ್ರ) **ಲೋಕಯಾತ್ರಾಪ್ರಕಾರಗಳುಮತ್ತುಎಲ್ಲಕ್ಕಿಂತಹೆಚ್ಚಾಗಿಸರ್ವತ್ರವ್ಯಾಪ್ತನಾದಅಂತರ್ಯಾಮಿ ಭಗವಂತನು ಇಲ್ಲಿ ಹೇಳಲ್ಪಟ್ಟಿದ್ದಾನೆ.**

ಮೇಲಿನ ಮಾತುಗಳು ವ್ಯಾಸರು ತಮ್ಮ ಆಶ್ರಮಕ್ಕೆ ಆಗಮಿಸಿದ ಬ್ರಹ್ಮನಿಗೆ ಸತ್ಕರಿಸಿ, ತಾವು ರಚಿಸಿದ ಭಾರತದ ಬಗ್ಗೆ ಹೇಳಿ, ಇದನ್ನು ಅನುಮೋದನೆ ಮಾಡಲು ಕೋರುತ್ತಾರೆ. ಸ್ವಯಂ ನಾರಾಯಣನೇ ಆದರೂ ಭೂಮಿಯಲ್ಲಿ ಅವತರಿಸಿದಾಗ, ತಮ್ಮ ಆಶ್ರಮಕ್ಕೆ ಬಂದ ಅತಿಥಿಯನ್ನು ಹೇಗೆ ಒಲಿಸಿಕೊಳ್ಳಬೇಕೆಂಬ ಉದಾತ್ತನೀತಿ ಇಲ್ಲಿದೆ. ಬ್ರಹ್ಮತನ್ನ ಮಗನೇ. ಆದರೆ ಭೂಲೋಕಕ್ಕೆ ತಮ್ಮ ಆಶ್ರಮಕ್ಕೆ ಬಂದ ಅತಿಥಿ. ತಾವು ಮನುಷ್ಯರಾಗಿ ಅವತರಿಸಿದ್ದರಿಂದ ಲೋಕದಲ್ಲಿ ಅತಿಥಿ ಉಪಚಾರವನ್ನು ಎಷ್ಟು ವಿನಯದಿಂದ ಮಾಡಬೇಕೆಂದು ವ್ಯಾಸರು ತೋರಿಸಿದ್ದಾರೆ: '**ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ**' ಎಂಬ ಭಾಗವತದ ಮಾತು ಇಲ್ಲಿ ಸ್ಮರಣಾರ್ಹ ಮತ್ತು -

**ಧರ್ಮೋಽಹಿ ಸರ್ವವಿದುಷಾಮಪಿ ದೈವತಾನಾಂ ।**
**ಪ್ರಾಪ್ತೇ ನರೇಷು ಜನನೇ ನರವತ್ ಪ್ರವೃತ್ತಿಃ ।।**

- ಎಂಬ ಮ.ತಾ.ನಿ. (೮-೧೪/೪) ಆಚಾರ್ಯರ ಮಾತಿಗೆ ಇದೊಂದು ಅಪೂರ್ವ ನಿದರ್ಶನ.

## ೧೦. ಬ್ರಹ್ಮದೇವರು ಕಂಡ ಭಾರತ

ವ್ಯಾಸರ ಮಾತುಗಳನ್ನು ಪ್ರಾಂಜಲರಾಗಿಯೇ ಬ್ರಹ್ಮದೇವರು ಒಪ್ಪುತ್ತಾರೆ. ಸಂತಸ ವ್ಯಕ್ತಪಡಿಸುತ್ತಾರೆ. ಅವರ ಅನಿಸಿಕೆಗಳು ಹೀಗಿವೆ.

೧. ನೀವು ನಿಮ್ಮ ಪೂರ್ವಜರಾದ ವಸಿಷ್ಠರನ್ನೂ ಮೀರಿಸಿದ ತಪಸ್ವಿಗಳೆಂದು ನಾನು ಭಾವಿಸಿದ್ದೇನೆ.

೨. ನೀವು ಅವತರಿಸಿದಾಗಿನಿಂದಲೂ ನೀವಾಡಿದ ಮಾತುಗಳು ಸತ್ಯವೇ. ಅವೆಲ್ಲವೂ ಬ್ರಹ್ಮಗಾಮಿನಿಗಳು, ಪರಬ್ರಹ್ಮನನ್ನು ಸ್ಪರ್ಶಿಸುವಂತಹವುಗಳಾಗಿವೆ. ಆದ್ದರಿಂದ ನೀವು ಬರೆದುದು ಕಾವ್ಯವೇ ಸರಿ (ಹಾಗೇ ಆಗುತ್ತದೆ).

೩. ನಿಮ್ಮ ಕಾವ್ಯವನ್ನು ಯಾರೂ ಮೀರಿಸಲಾರರು. ನೀವು ಇಂತಹ ಕಾವ್ಯ ಬರೆದಿದರದಿದ್ದರೆ ಜಗತ್ತೆಲ್ಲ ಅಜ್ಞಾನದಿಂದ ತುಂಬಿರುತ್ತಿತ್ತು. ನಿಮ್ಮ ಕೃತಿ ಜ್ಞಾನಾಂಜನ, ಬುದ್ಧಿಗೂ ಕಣ್ಣಿಗಳಿಗೂ ಉತ್ಸವಪ್ರದವಾಗಿದೆ.

೪. ನಿಮ್ಮ ಭಾರತವೆಂಬ ಸೂರ್ಯನಿಂದ ಜೀವರ ಅಜ್ಞಾನವೆಂಬ ಕತ್ತಲನ್ನು ನಾಶ ಮಾಡಿ ನಾಲ್ಕು ಪುರುಷಾರ್ಥಗಳನ್ನು ಕೊಡುತ್ತವೆ. ನಿಮ್ಮದು ಇತಿಹಾಸ ಪ್ರದೀಪಕೃತಿ.

೫. ಭಾರತವೆಂಬ ಮಹಾವೃಕ್ಷ ನಿಮ್ಮಿಂದ ಬೆಳೆದಿದೆ. ಸಂಗ್ರಹಾಧ್ಯಾಯವೇ ಬೀಜವಾದರೆ, ಪೌಲೋಮ, ಆಸ್ತೀಕಪರ್ವಗಳು ಅಡಿಪಾಯ, ಸಂಭವಪರ್ವವು ಬುಡದಿಂದ ಮೇಲೆ ಬರುವ ವಿಸ್ತಾರಪ್ರದೇಶವಾಗಿದೆ. ವಿರಾಟೋದ್ಯೋಗಪರ್ವಗಳು ವೃಕ್ಷದ ಸಾರವಾಗಿವೆ (ಭಾರತದ ಸಾರ). ಶಾಂತಿಪರ್ವವು ಮರದ ಶ್ರೇಷ್ಠಫಲ.

೬. ಮಳೆಯನ್ನು ಎಲ್ಲ ಜೀವಿಗಳು ಅವಲಂಬಿಸುವಂತೆ, ಎಲ್ಲ ಕವಿಗಳಿಗೂ ನಿಮ್ಮ ಭಾರತವೃಕ್ಷವು ಉಪಜೀವ್ಯ ಕೃತಿಯಾಗಲಿದೆ.

ಜನ್ಮಪ್ರಭೃತಿ ಸತ್ಯಾಂ ತೇ ವಿದ್ಮ ಗಾಂ ಬ್ರಹ್ಮಗಾಮಿನೀಮ್ ।
ತ್ವಯಾ ಚ ಕಾವ್ಯಮಿತ್ಯುಕ್ತಂ ತಸ್ಮಾತ್ ಕಾವ್ಯಂ ಭವಿಷ್ಯತಿ ॥
ಅಸ್ಯ ಕಾವ್ಯಸ್ಯ ಕವಯೋ ನ ಸಮರ್ಥಾ ವಿಶೇಷಣೇ
ವಿಶೇಷಣೇ ಗೃಹಸ್ಥಸ್ಯ ಶೇಷಾಸ್ತ್ರಯ ಇವಾಶ್ರಮಾಃ ।
ಜಡಾಂಧಬಧಿರೋನ್ಮತ್ತಂ ತಮೋಭೂತಂ ಜಗದ್ ಭವೇತ್
ಯದಿ ಜ್ಞಾನಹುತಾಶೇನ ತ್ವಯಾ ನೋಜ್ಜ್ವಲಿತಂ ಭವೇತ್ ॥
ಧರ್ಮಾರ್ಥಕಾಮಮೋಕ್ಷಾರ್ಥೈಃ ಸಮಾಸವ್ಯಾಸಕೀರ್ತನೈಃ ।
ತ್ವಯಾ ಭಾರತಸೂರ್ಯೇಣ ನೃಣಾಂ ವಿನಿಹತಂ ತಮಃ ॥
ಪುರಾಣಪೂರ್ಣಚಂದ್ರೇಣ ಶ್ರುತಿಜ್ಯೋತ್ಸ್ನಾ ಪ್ರಕಾಶಿನಾ ।
ನೃಣಾಂ ಕುಮುದಸಾಮ್ಯಾನಾಂ ಕೃತಂ ಬುದ್ಧಿಪ್ರಬೋಧನಮ್ ॥
ಇತಿಹಾಸಪ್ರದೀಪೇನ ಮೋಹಾವರಣಘಾತಿನಾ ।
ಲೋಕಗರ್ಭಗೃಹಂ ಕೃತ್ಸ್ನಂ ಯಥಾವತ್ ಸಂಪ್ರಕಾಶಿತಮ್ ॥
ಸಂಗ್ರಹಾಧ್ಯಾಯಬೀಜೋ ವೈ ಪೌಲೋಮಾಸ್ತಿಕಮೂಲವಾನ್ ।
ಸಂಭವಸ್ಕಂಧವಿಸ್ತಾರಃ ಸಭಾರಣ್ಯವಿಂಟಕವಾನ್ ॥
ಆರಣ್ಯಪರ್ವರೂಪಾಢ್ಯೋ ವಿರಾಟೋದ್ಯೋಗಸಾರವಾನ್ ।
ಭೀಷ್ಮಪರ್ವಮಹಾಶಾಖೋ ದ್ರೋಣಪರ್ವಪಲಾಶವಾನ್ ॥
ಕರ್ಣಪರ್ವಚಿತ್ರೈಃ ಪುಷ್ಪೈಃ ಶಲ್ಯಪರ್ವಸುಗಂಧಿಭಿಃ ।
ಸ್ತ್ರೀಪರ್ವೈಷೀಕವಿಶ್ರಾಮಃ ಶಾಂತಿಪರ್ವಮಹಾಫಲಃ ॥
ಆಶ್ವಮೇಧಾಮೃತರಸಃ ಸ್ವಾಶ್ರಮಸ್ಥಾನಸಂಶ್ರಯಃ ।
ಮೌಸಲಶ್ರುತಿಸಂಕ್ಷೇಪಃ ಶಿಷ್ಟದ್ವಿಜನಿಷೇವಿತಃ ॥
ಸರ್ವೇಷಾಂ ಕವಿಮುಖ್ಯಾನಾಂ ಉಪಜೀವ್ಯೋ ಭವಿಷ್ಯತಿ ।
ಪರ್ಜನ್ಯ ಇವ ಭೂತಾನಾಮಾಶ್ರಯೋ ಭಾರತದ್ರುಮಃ ॥

- ಆದಿಪರ್ವ(೧/೬೧,೬೨,೬೪-೧೦೧)

## ೧೨. ಭಾರತದ ವಸ್ತು - ಸೂತರು ಕಂಡಂತೆ

೧. ಆದಿಪರ್ವದ ಅನುಕ್ರಮಣಿಕಾ ಅಧ್ಯಾಯವೇ ಪರಮರಹಸ್ಯವಾದುದು. ಶ್ಲೋಕದ ಒಂದು ಪಾದ ಅಧ್ಯಾಯನ ಮಾಡಿದರೆ ಸಾಕು, ಎಲ್ಲ ಪಾಪಗಳು ನಾಶವಾಗುತ್ತವೆ.

೨. ಭಾರತದಲ್ಲಿ ದೇವರ್ಷಿಗಳು, ರಾಜರ್ಷಿಗಳು, ಅವರ ಪುಣ್ಯವ್ಯಾಪಾರಗಳು, ಯಕ್ಷ, ಮಹಾಸರ್ಪಗಳ ಕೀರ್ತಿಗಳು (ಚರಿತ್ರೆಗಳು) ಹೇಳಲ್ಪಟ್ಟಿವೆ.

೩. ಭಗವಾನ್ ವಾಸುದೇವನು ಭಾರತದಲ್ಲಿ ಕೀರ್ತಿತನಾಗಿದ್ದಾನೆ. ಅವನೇ ಸತ್ಯ, ಋತ, ಪವಿತ್ರ, ಪುಣ್ಯಪ್ರದ, ಪರಂಜ್ಯೋತಿ, ಪರಂಬ್ರಹ್ಮ, ಸನಾತನ.

೪. ಅವನಿಂದಲೇ ಲೋಕದ ಸೃಷ್ಟಿ, ಸ್ಥಿತಿ, ಸಂಹಾರಗಳಾಗುತ್ತವೆ. ಅವನಿಂದಲೇ ಸತ್, ಅಸತ್, ಸದಸತ್ (ಸಜ್ಜನರು, ದುರ್ಜನರು, ಮಿಶ್ರಸ್ವಭಾವದ) ಜೀವರು, ನಿತ್ಯಾನಿತ್ಯಾತ್ಮಕವಾದ ಪ್ರಪಂಚವು ಹುಟ್ಟಿದೆ.

೫. ಸರೋವರಗಳಲ್ಲಿ ಸಮುದ್ರ ಶ್ರೇಷ್ಠ, ಚತುಷ್ಪಾದಗಳಲ್ಲಿ ಗೋವು ಶ್ರೇಷ್ಠ, ಅದರಂತೆ (ಪ್ರಮೇಯ ನಿರೂಪಿಸುವ) ಎಲ್ಲ ಗ್ರಂಥಗಳಲ್ಲಿ ಭಾರತವೇ ವಿಶಿಷ್ಟವಾದುದು.

೬. ಇತಿಹಾಸ, ಪುರಾಣಗಳಿಂದಲೇ ವೇದದ ಅರ್ಥವಿಸ್ತಾರ ತಿಳಿಯಬೇಕು. ಆದರೆ ಅಲ್ಪವಿದ್ಯೆಯವನು ವೇದವ್ಯಾಖ್ಯಾನ ಮಾಡಿದರೆ, ನನ್ನನ್ನು ಇವನು ಅಪಾರ್ಥಮಾಡುತ್ತಾನೆ (ನಿಜವಾದ ಅರ್ಥದಿಂದ ನನ್ನನ್ನು ದೂರತಳ್ಳುತ್ತಿದ್ದಾನೆ) ಎಂದು ವೇದವು ಹೆದರುತ್ತದೆಯಂತೆ (ವೇದಾಭಿಮಾನಿ).

೭. ಮಹಾಭಾರತವು ಕಾರ್ಷ್ಣವೇದ(ವ್ಯಾಸರ ವೇದ), ಪಂಚಮವೇದ. ಇದರ ವ್ಯಾಖ್ಯಾನದಿಂದ ಸಕಲ ಪುರುಷಾರ್ಥ ಪ್ರಾಪ್ತಿಯುಂಟು.

೮. ದೇವತೆಗಳು, ಋಷಿಗಳು, ಒಮ್ಮೆ ತಕ್ಕಡಿಯ ಒಂದು ಕಡೆ ನಾಲ್ಕೂ ವೇದಗಳನ್ನೂ, ಇನ್ನೊಂದೆಡೆ ಭಾರತವನ್ನೂ ಇಟ್ಟು ತೂಗಿದಾಗ ಭಾರತವು ಅದರ ಮಹತ್ತ್ವ ಹಾಗೂ ಗುರುತ್ವದಿಂದಾಗಿ ಕೆಳಗೆ ಹೋಯಿತು. ಆದ್ದರಿಂದ ಮಹಾಭಾರತವೆಂಬ ಹೆಸರು ಇದಕ್ಕೆ ಬಂದಿತು. ಈ ನಿರುಕ್ತವನ್ನು ತಿಳಿದವನೇ ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಹೀಗಿರುವಾಗ ಭಾರತವನ್ನು ಓದಿದವನು ಅರ್ಥ ತಿಳಿದವನು ಸಕಲ ಪಾಪಗಲಿಂದ ಮುಕ್ತನಾಗುತ್ತಾನೆ ಎಂದು ಹೇಳಬೇಕೇ?

(ಮಹಾಭಾರತದ ಬಗ್ಗೆ ಸೂತರು ಅನಿಸಿಕೆಗಳು ಈಗಾಗಲೇ (ಮುನ್ನುಡಿಯ ಪು.೧೧,೧೨ ರಲ್ಲಿ) ಬಂದಿವೆ. ಇವನ್ನು ಅವುಗಳೊಡನೆ ಸೇರಿಸಿಕೊಳ್ಳಬೇಕು)

**ಅತ್ರೋಪನಿಷದಂ ಪುಣ್ಯಾಂ ಕೃಷ್ಣದ್ವೈಪಾಯನೋಽಬ್ರವೀತ್ ।**
**ಭಾರತಾಧ್ಯಯನಾತ್ ಪುಣ್ಯಾದಪಿ ಪಾದಮಧೀಯತಃ ॥**

ಶ್ರದ್ಧಧಾನಸ್ಯ ಪೂಯಂತೇ ಸರ್ವಪಾಪಾನ್ಯ ಶೇಷತಃ ||
ದೇವರ್ಷಯೋ ಹ್ಯತ್ರ ಪುಣ್ಯಾ ಬ್ರಹ್ಮರಾಜರ್ಷಯಸ್ತಥಾ |
ಕೀರ್ತ್ಯಂತೇ ಶುಭಕರ್ಮಾಣಸ್ತಥಾ ಯಕ್ಷಮಹೋರಗಾಃ ||
ಭಗವಾನ್ ವಾಸುದೇವಶ್ಚ ಕೀರ್ತ್ಯತೇಽತ್ರ ಸನಾತನಃ |
ಸಹಿ ಸತ್ಯಮೃತಂ ಚೈವ ಪವಿತ್ರಂ ಪುಣ್ಯಮೇವ ಚ ||
ಶಾಶ್ವತಂ ಪರಮಂ ಬ್ರಹ್ಮ ಪರಂ ಜ್ಯೋತಿಃ ಸನಾತನಮ್ ||
ಯಸ್ಯ ದಿವ್ಯಾನಿ ಕರ್ಮಾಣಿ ಕಥಯಂತಿ ಮನೀಷಿಣಃ |
ಅಸತ್ ಸತ್ ಸದಸಚ್ಚೈವ ಯಸ್ಮಾದೇವ ಪ್ರವರ್ತತೇ ||
ಶ್ರದ್ಧಧಾನಃ ಸತ್ಯಯುಕ್ತಃ ಸತ್ಯಧರ್ಮಪರಾಯಣಃ |
ಕಥಯನ್ನಿಮಮಧ್ಯಾಯಂ ನರಃ ಪಾಪಾತ್ ಪ್ರಮುಚ್ಯತೇ ||
ಹ್ರದಾನಾಮುದಧಿಃ ಶ್ರೇಷ್ಠೋ ಗೌರ್ವರಿಷ್ಠಾ ಚತುಷ್ಪದಾಮ್ |
ಯಥೈತಾನಿ ವಿಶಿಷ್ಟಾನಿ ತಥಾ ಭಾರತಮುಚ್ಯತೇ ||
ಯಶ್ಚೇದಂ ಶ್ರಾವಯೇಚ್ಛ್ರಾದ್ಧೇ ಬ್ರಾಹ್ಮಣಾನ್ ಪಾದಮಂತತಃ |
ಅಕ್ಷಯ್ಯಮನ್ನದಾನಂ ತತ್ ಪಿತೄಂಸ್ತಸ್ಯೋಪತಿಷ್ಠತಿ ||
ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ |
ಬಿಭೇತ್ಯಲ್ಪಶ್ರುತಾದ್ ವೇದೋ ಮಾಮಯಂ ಪ್ರಚಲಿಷ್ಯತಿ ||
ಕಾರ್ಷ್ಣಂ ವೇದಮಿಮಂ ವಿದ್ವಾನ್ ಶ್ರಾವಯಿತ್ವಾಽರ್ಥಮಶ್ನುತೇ |
ಭ್ರೂಣಹತ್ಯಾಕೃತಂ ಚಾಪಿ ಪಾಪಂ ದಹ್ಯಾನ್ನ ಸಂಶಯಃ ||
ಚತ್ವಾರಿ ಏಕತೋ ವೇದಾ ಭಾರತಂ ಚೈಕಮೇಕತಃ |
ಸಮಾಗತೈಃ ಸುರರ್ಷಿಭಿಸ್ತುಲಾಮಾರೋಪಿತಂ ಪುರಾ ||
ಮಹತ್ತ್ವೇ ಚ ಗುರುತ್ವೇ ಚ ಧ್ರಿಯಮಾಣಂ ತತೋಽಧಿಕಮ್ |
ಮಹತ್ತ್ವಾದ್ ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ||
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃಪ್ರಮುಚ್ಯತೇ ||

- ಆದಿಪರ್ವ(೧/೨೩೪-೨೩೭,೨೪೪-೨೪೬,೨೫೦,೨೫೧)

## ೧೩. ಮಹಾಭಾರತದ ವಿಷಯ ಹಂಚಿಕೆ

ಮಹಾಭಾರತದಲ್ಲಿಒಟ್ಟಾರೆವಿಷಯಗಳನ್ನುಕೆಳಗಿನಂತೆನೋಡಬಹುದು.೧.ಶ್ರೀಕೃಷ್ಣನ ಕಥೆ; ೨. ವೇದವ್ಯಾಸರ ಕಥೆ, ಮಾಹಾತ್ಮ್ಯಗಳು; ೩. ಮೂಲಕಥೆ, ಕುರುಪಾಂಡವರ ವಂಶದ ಕಥೆ,ಇದರಲ್ಲಿಮೂಲಕಥೆಗೆಆಶ್ರಯವಾಗಿರುವಭಾಗಗಳಲ್ಲಿಬರುತ್ತದೆ;೪.ಕುರುಪಾಂಡವರ ಕಥೆಗೂ ಮೊದಲು ಬಂದ ಚಂದ್ರವಂಶದ ರಾಜಾದಿಗಳ ಕಥೆಗಳು; ೫. ತೀರ್ಥಯಾತ್ರೆಗೆ ಸಂಬಂಧಿಸಿದ ವಿಷಯಗಳು; ೬. ಉಪಾಖ್ಯಾನಗಳು; ೭. ವರ್ಣನೆಗಳು, ನಿಸರ್ಗ, ಅರಣ್ಯ, ನಗರ, ನದೀ, ಪರ್ವತಗಳು, ಋತುಗಳು, ಸಮುದ್ರ, ಇತ್ಯಾದಿ.

ಇವೆಲ್ಲ ಸಾಮಾನ್ಯವಾಗಿ ಭಾರತದಲ್ಲಿ ಎಲ್ಲೆಡೆ ಪಸರಿಸಿವೆ. ಆದರೆ ಪ್ರಸಕ್ತ ಉಪಾಖ್ಯಾನಗಳ ಬಗ್ಗೆ ಮಾತ್ರ ಈ ಕೃತಿಯ ವ್ಯಾಪ್ತಿ ಇರುವುದರಿಂದ ಆಕಡೆ ನಮ್ಮ ದೃಷ್ಟಿಯನ್ನು ಚೆಲ್ಲೋಣ.

## ೧೪. ಮಹಾಭಾರತದ ಉಪಾಖ್ಯಾನಗಳು

ಇವೆಲ್ಲ ಮೂಲಕಥೆ, ಕುರುಪಾಂಡವರ ಕಥೆಗೆ ದೃಷ್ಟಾಂತಗಳಾಗಿ(ಳಂತೆ) ಬಂದಿರುವ ಭಾಗಗಳು. ವಾಸುದೇವರೂಪಿ ಭಗವಂತನ ಮಾಹಾತ್ಮ್ಯ ಎಂದರೆ ಅವನ ಸರ್ವೋತ್ತಮತ್ವವೇ ಉಪಾಖ್ಯಾನಗಳಲ್ಲಿ ಭಗವದ್ಭಕ್ತರ ಚರಿತ್ರೆಗಳು ಬಂದಿವೆ. ಅವು ಕೂಡಾ ಅಂತಿಮವಾಗಿ ವಿಷ್ಣುಸರ್ವೋತ್ತಮತ್ವದಲ್ಲಿಯೇ ಪರ್ಯವಸಾನವಾಗುತ್ತವೆ.

**ಚರಿತಂ ವೈಷ್ಣವಾನಾಂ ತು ವಿಷ್ಣುದ್ರೇಕಾಯ ಕಥ್ಯತೇ । ಭವಿಷ್ಯತ್ಪರ್ವಪುರಾಣ**
**- ಮ.ತಾ.ನಿ.(೨/೧೨೯)**

ಅಲ್ಲದೆ ಸಮಸ್ತ ಶಾಸ್ತ್ರಾರ್ಥನಿರ್ಣಯವನ್ನು ಆಚಾರ್ಯರು ಮ.ತಾ.ನಿಯಲ್ಲಿನ ಪ್ರಥಮಾಧ್ಯಾಯದಲ್ಲಿ ನಿರೂಪಿಸಿದ್ದಾರೆ. ಆ ನಿರ್ಣಯಗಳೆಲ್ಲ ತತ್ತ್ವಗಳಾದರೆ, ಅವುಗಳಿಗೆ ಉದಾಹರಣೆಗಳಾಗಿ ಈ ಉಪಾಖ್ಯಾನಗಳಿರುತ್ತವೆ. ಆದ್ದರಿಂದಲೇ ಆಚಾರ್ಯರು -

**ನಿರ್ಣಯಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತೋ ಹಿ ಭಾರತೇ ।**

- ಎಂದಿದ್ದಾರೆ.

**ಕೃತೋ ವಿಷ್ಣುವಶತ್ವಂ ಹಿ ಬ್ರಹ್ಮಾದೀನಾಂ ಪ್ರಕಾಶಿತಮ್ ।**
**ಯತಃ ಕೃಷ್ಣವಶೇ ಸರ್ವೇ ಭೀಮಾದ್ಯಾಃ ಸಮ್ಯಗೀರಿತಾಃ ॥**
**- ಬ್ರಹ್ಮಾಂಡಪುರಾಣ - ಮ.ಭಾ.ತಾ.ನಿ.(೨/೧೩)**

ಆಚಾರ್ಯರು ಮ.ತಾ.ನಿ ೨ನೇ ಅಧ್ಯಾಯದಲ್ಲಿ ಮಹಾಭಾರತದಲ್ಲಿ ವಾಸುದೇನ ಮಹಿಮೆಯೇ ನಿರ್ಣಯಪೂರ್ವಕವಾಗಿ ಹೇಳಲ್ಪಟ್ಟಿದೆ. ಇತರ ಕಥೆಗಳೆಲ್ಲ ಕೂಡಾ (ಪಾಂಡವರು ಮೊದಲಾದ) ವಾಸುದೇವನ ಮಹಿಮೆ ನಿರೂಪಣೆಗಾಗಿಯೇ ಎಂದು ಭವಿಷ್ಯತ್ಪರಾಣವನ್ನು ಉದಾಹರಿಸಿದ್ದಾರೆ.

**ಭವಿಷ್ಯತ್ಪರ್ವಗಂ ಚಾಪಿ ವಚೋ ವ್ಯಾಸಸ್ಯ ಸಾದರಮ್ ।**
**ವಾಸುದೇವಸ್ಯ ಮಹಿಮಾ ಭಾರತೇ ನಿರ್ಣಯೋದಿತಃ ।**
**ತದರ್ಥಾಸ್ತು ಕಥಾಃ ಸರ್ವಾ ನಾನ್ಯಾರ್ಥಂ ವೈಷ್ಣವಂ ಯಶಃ ॥**
**ತತ್ಪ್ರತೀಪಂ ತು ಯದ್ದೃಶ್ಯೇನ್ನ ತನ್ಮಮ ಮನೀಷಿತಮ್ ॥** - ೨/೧೧೮,೧೧೯

ಇತರ ಕಥೆಗಳಲ್ಲಿ ಕೂಡಾ ವಾಸುದೇವನ ಹಿರಿಮೆಯನ್ನು ತಿಳಿಸಲು ಬಂದಿವೆ. ಬೇರೆ ಕಾರಣಕ್ಕಾಗಿ ಬಂದಿಲ್ಲ. ವಿಷ್ಣುಸರ್ವೋತ್ತಮತ್ವಕ್ಕೆ ವಿರುದ್ಧವಾಗಿ ಎಲ್ಲೋ ಕಂಡರೂ, ಅದು ನನ್ನ ಅಭಿಪ್ರಾಯವಲ್ಲ (ಉದಾ: ದಕ್ಷಯಜ್ಞಧ್ವಂಸ ಹಾಗೂ ಕೆಲವು ಕಡೆ ಕ್ವಚಿತ್ತಾಗಿ

ಶಿವಸರ್ವೋತ್ತಮಪರವಾಗಿಕಾಣುವುದು(ಶಿವಸಹಸ್ರನಾಮಸ್ತೋತ್ರ ಮುಂತಾದವುಗಳಲ್ಲಿ). ಆದರ್ಶನಪರಮಾತುಗಳೇ, ದರ್ಶನಭಾಷೆಯದೃಷ್ಟಿಯಿಂದಬಂದುದು. ಈವಿಷಯವನ್ನು ಆಯಾ ಉಪಾಖ್ಯಾನದ ನಿರೂಪಣೆ ಬಂದಾಗ ಮುಂದೆ ತಿಳಿಸಲಾಗಿದೆ).

ಮಹಾಭಾರತದಲ್ಲಿ ಉಪಾಖ್ಯಾನಗಳು ಸುಮಾರು ೨೦೦ಕ್ಕೂ ಮೇಲ್ಪಟ್ಟು ಇವೆ. ಅವುಗಳಲ್ಲಿ ಕೆಲವನ್ನು ಭಾರತದ ಆರಂಭದಲ್ಲಿ ಸೂಚಿಸಲಾಗಿದೆ.

| | | |
|---|---|---|
| ೧. ವ್ರೀಹಿದ್ರೌಣಕಮಾಖ್ಯಾನಂ | ಆ.ಪ. | ೨-೪೫ (ತ.ಸಂ.ಸಂ.) |
| ೨. ಕೀರ್ತ್ಯತೇ ಚಾಪತ್ರೋಪಾಖ್ಯಾನಂ | ಆ.ಪ. | ೨-೫೩ |
| ೩. ಅಂಬೋಪಾಖ್ಯಾನಮಥ ಚ | | ೨-೫೭ |
| ೪. ಪಂಚೇಂದ್ರಾಣಾಮುಪಾಖ್ಯಾನಂ | | ೨-೮೯ |
| ೫. ತಾಪತ್ಯಮಥ ವಾಸಿಷ್ಠಂ ಮೌರ್ವೋಪಾಖ್ಯಾನ | | ೨-೮೮ |
| ೬. ಸುಂದೋಪಸುಂದಯೋಸ್ತತ್ರ ಹ್ಯುಪಾಖ್ಯಾನಂ | | ೨-೯೨ |
| ೭. ಕಿರ್ಮೀರವಧಾಖ್ಯಾನಮ್.... ಸೌಭಾಖ್ಯಾನಂ | | ೨-೧೧೦ |
| ೮. ನಲೋಪಾಖ್ಯಾನಮತ್ರೈವ | | ೨-೧೧೪ |

ಅಲ್ಲದೆ ೨-೧೧೭, ೧೧೯, ೧೨೪, ೧೩೧

೯. ಮಾರ್ಕಂಡೇಯಸಮಾಸ್ಯಾಯಾಮುಪಾಖ್ಯಾನಾನಿ ಸರ್ವಶಃ೭-೧೨೯

೧೦. ರಾಮಾಯಣಮುಪಾಖ್ಯಾನಮತ್ರೈವ ಬಹುವಿಸ್ತರಂ ೨-೧೩೦

ಹೀಗೆ ಕೆಲವು ಉಪಾಖ್ಯಾನಗಳನ್ನು ವ್ಯಾಸರು ಮೊದಲೇ ತಿಳಿಸಿ, ಅವು ಎಲ್ಲಿ ಬರುತ್ತವೆ ಎಂದೂ ಅರುಹಿದ್ದಾರೆ. ಮುಂದೆ ೧೮ ಪರ್ವಗಳ ಪೈಕಿ ೧. ವಿರಾಟಪರ್ವ; ೨. ಭೀಷ್ಮಪರ್ವ; ೩. ಸೌಪ್ತಿಕಪರ್ವ; ೪. ಸ್ತ್ರೀಪರ್ವ; ೫. ಆಶ್ರಮವಾಸಿಕಪರ್ವ; ೬. ಮೌಸಲಪರ್ವ; ೭. ಮಹಾಪ್ರಸ್ಥಾನಿಕಪರ್ವಹಾಗೂ೮.ಸ್ವರ್ಗಾರೋಹಣಪರ್ವಗಳಲ್ಲಿನಾವುಉಪಾಖ್ಯಾನಗಳನ್ನು ಪ್ರಾಯಃ ನೋಡುವುದಿಲ್ಲ (ಉಳಿದ ಹತ್ತು ಪರ್ವಗಳಲ್ಲಿ ಇವೆ). ಅಲ್ಲದೆ ಭಾರತಖಿಲವೆಂದು ಪ್ರಸಿದ್ಧವಾದ ಹರಿವಂಶಪುರಾಣದಲ್ಲೂ ಉಪಾಖ್ಯಾನಗಳಿವೆ. ಅವುಗಳನ್ನು ಇಲ್ಲಿ ಸೇರಿಸಿಲ್ಲ.

ಯಾವ ಯಾವ ಪರ್ವ ಹಾಗೂ ಉಪಪರ್ವಗಳಲ್ಲಿ ಉಪಾಖ್ಯಾನಗಳು ಬರುತ್ತವೆ ಎಂಬುದನ್ನು ವಿಷಯಾನುಕ್ರಮಣಿಕೆಹಾಗೂಆಯಾಉಪಾಖ್ಯಾನಗಳಸಂದರ್ಭದಲ್ಲಿಯೂ ಕೊಡಲಾಗಿದೆ.

ಅಂತೂ ಉಪಾಖ್ಯಾನಗಳನ್ನು ಭಾರತದಲ್ಲಿ ಕಾಣುವ ಉದ್ದೇಶವು ಭಗವದ್ಭಕ್ತರ ಮಹಿಮೆ, ಅವರ ಬಾಳಿಕ ರೀತಿ, ಅವರ ತಪಸ್ಸು, ವಿವಿಧ ಸಾಧನೆಗಳನ್ನು ತಿಳಿಸುವ ಮೂಲಕ, ಅವರ ಸಾಧನೆಯಹಿನ್ನೆಲೆಯಲ್ಲಿಇರುವಮೂಲಸ್ರೋತಸ್ಸುಭಗವಂತನೇಎಂಬುದುಮುಖ್ಯತತ್ತ್ವ.

ಹೀಗೆ ಮಹಾಭಾರತವು ತತ್ತ್ವಶಾಸ್ತ್ರವೂ ಹೌದು, ಅದನ್ನು ಅನುಷ್ಠಾನಗೊಳಿಸಿದ ಸಾಧಕರ ಚರಿತ್ರೆಯೂ ಹೌದು. ಇವನ್ನು ದೃಷ್ಟಾಂತವನ್ನು ನೋಡುವ ಮೂಲಕ Theory - Practical ಗಳನ್ನು ಒಂದೇ ಕಡೆ ನೋಡಬಹುದಾಗಿದೆ.

## ಮಹಾಭಾರತದಲ್ಲಿ ಉಪಾಖ್ಯಾನಗಳನ್ನು ಗುರುತಿಸುವುದು

ಮಹಾಭಾರತದಲ್ಲಿ ಉಪಾಖ್ಯಾನಗಳನ್ನು ಭಾರತವೇ ಹೀಗೆ ಗುರುತಿಸಿದೆ:

**ಅತ್ರಾಪ್ಯುದಾಹರಂತೀಮಂ ಇತಿಹಾಸಪುರಾತನಂ**

- ಎಂಬುದಾಗಿ. ಯಾವುದಾದರೂ ಸಮಸ್ಯೆಗೆ ಪರಿಹಾರ ಸೂಚಿಸುವ ಸಲುವಾಗಿ ವ್ಯಾಸರೇ ಹಿಂದೆ ಇದಕ್ಕೆ ಪರಿಹಾರಾತ್ಮಕವಾದ ಈಗಿನ ವಿಷಯದಂತಿರುವ ಘಟನಾವಳಿಗಳು ನಡೆದಿವೆ. ಅವೇ ಇತಿಹಾಸ. ಇದನ್ನು ಕೆಲವು ಕಡೆ ಚರಿತ್ರೆ, ಆಖ್ಯಾನ, ಉಪಾಖ್ಯಾನಗಳೆಂದೂ ಕರೆಯಲಾಗಿದೆ.

ಹೀಗೆ ಮೇಲೆ ಉದಾಹರಿಸಿರುವಂತಹ ವಾಕ್ಯಗಳು ಪ್ರಾಯಃ ಎಲ್ಲ ಉಪಾಖ್ಯಾನಗಳ ಮೊದಲು ಸಿಕ್ಕು ಅವುಗಳನ್ನು ಉಪಾಖ್ಯಾನಗಳೆಂದು ಕರೆಯಬಹುದಾಗಿದೆ.

## ೧೫. ಉಪಾಖ್ಯಾನಗಳ ವರ್ಗೀಕರಣ

ಉಪಾಖ್ಯಾನಗಳು ಪ್ರಾಯಃ ಎರಡು ವಿಧವಾಗಿದೆ. ೧ ಸಾಮಾಜಿಕ ನೆಲೆಗಟ್ಟಿನಲ್ಲಿರುವ ಕಥಾಹಂದರಗಳಂತಿರುವ ಇತಿಹಾಸ ಪ್ರಸಂಗಗಳು (Social Network-Stories ಅವು ಸಾಂಸಾರಿಕ, ಸಾಮಾಜಿಕ, ವಿವಿಧ ಪಾತ್ರಗಳ ಕಥಾನಕಗಳು). ಉದಾ: ಗುರುಶಿಷ್ಯರ ಕಥೆಗಳು (ಆದಿಪರ್ವ), ಶಕುಂತಲೋಪಾಖ್ಯಾನ, ನಲೋಪಾಖ್ಯಾನ, ಸಾವಿತ್ರೀ ಉಪಾಖ್ಯಾನ ಮುಂತಾದ ನೂರಾರು ದೃಷ್ಟಾಂತಗಳು.

೨. ಉಪದೇಶಾತ್ಮಕ ಉಪಾಖ್ಯಾನಗಳು Advisory Stories ಉದಾ : ಅನುಗೀತಾ.

ಇವೆರಡೂ ತರಹದ ಉಪಾಖ್ಯಾನಗಳನ್ನು ಪ್ರತ್ಯೇಕವಾಗಿ ಪರ್ವಕ್ರಮದಲ್ಲಿ ಮುಂದೆ ನೀಡಲಾಗಿದೆ.

## ೧೬. ಉಪಾಖ್ಯಾನಗಳಲ್ಲಿ ಪಾತ್ರ ಹಂಚಿಕೆ

ಉಪಾಖ್ಯಾನಗಳಲ್ಲಿ ಒಂದೇ ತರಹದ ಪಾತ್ರಗಳೇನೂ ಇಲ್ಲ. ಉಪಾಖ್ಯಾನಗಳಲ್ಲಿ ಹಲವು ತರಹದ ಪಾತ್ರಗಳನ್ನು ನೋಡಬಹುದು. ಆ ಪಾತ್ರಗಳ ಪರಿಸರವನ್ನೂ ನೋಡಬಹುದು.

ಈ ಹೊತ್ತಿಗೆಯನ್ನು (ಮಹಾಭಾರತದ ಉಪಾಖ್ಯಾನಗಳು) ವರ್ಗೀಕೃತ ಪಾತ್ರಗಳು, ಪರಿಸರ ಪದ್ಧತಿಗಳನ್ನು ಎಲ್ಲವನ್ನು ಹೀಗೆ ಗುರುತಿಸಲಾಗಿದೆ.

i. ಭಗವಂತನ ಅವತಾರ ವರ್ಣಿಸುವ ಉಪಾಖ್ಯಾನಗಳು (ಅವು ಎಲ್ಲಿ ಬರುತ್ತವೆ ಎಂದು ಇಲ್ಲಿ ಕೆಲವನ್ನು ಗುರುತಿಸಿದೆ). ೧. ಮತ್ಸ್ಯ (ವನಪರ್ವ); ೨. ವರಾಹ (ಶಾಂತಿಪರ್ವ); ೩. ಪರಶುರಾಮ (ಆದಿ, ವನ, ದ್ರೋಣ, ಶಾಂತಿಪರ್ವಗಳಲ್ಲಿ); ೪. ರಾಮ(ವನಪರ್ವ, ದ್ರೋಣಪರ್ವ); ೫. ಕೃಷ್ಣ (ಅನುಶಾಸನ, ಅಶ್ವಮೇಧಿಕ); ೬. ಹಯಗ್ರೀವ (ಶಾಂತಿಪರ್ವ); ೭. ವೇದವ್ಯಾಸ (ಆದಿ, ದ್ರೋಣ, ಶಾಂತಿ, ಅನುಶಾಸನ); ೮. ಕಪಿಲ (ವನ); ೯. ವಿಷ್ಣು (ಶಾಂತಿ, ಕರ್ಣ, ಉದ್ಯೋಗ); ಮತ್ತು ಲಕ್ಷ್ಮೀದೇವಿಯ ರೂಪಗಳು ೧೦. ಸೀತಾ (ವನ); ೧೨. ರುಗ್ಮಿಣೀ (ಅನುಶಾಸನ). ಇತ್ಯಾದಿ..

ii. ದೇವತೆಗಳು ಬ್ರಹ್ಮ, ವಾಯು, ಹನುಮ, ಭೀಮ, ಗಾಯತ್ರೀ, ದ್ರೌಪದೀ, ಗರುಡ, ಶೇಷ, ಶಿವ, ಇಂದ್ರ, ಶಚೀ, ಸ್ಕಂದ, ಬೃಹಸ್ಪತಿ, ಶುಕ್ರ, ಇಂದ್ರಾಗ್ನಿಯರು, ವರುಣ, ಮೊದಲಾದವರು (ಸುಮಾರು ೨೫).

iii. ರಾಜರು, ಚಕ್ರವರ್ತಿಗಳು ಸುಮಾರು ೧೪೦ ಪಾತ್ರಗಳಿವೆ. ಅವುಗಳ ಪಟ್ಟಿಯನ್ನು ಪ್ರತ್ಯೇಕ ಕೊಡಲಾಗಿದೆ.

iv. ಬ್ರಾಹ್ಮಣ, ಋಷಿ, ಬ್ರಹ್ಮರ್ಷಿ ಇವರದೂ ಸುಮಾರು ನೂರು ಪಾತ್ರಗಳಿವೆ.

v. ಪ್ರಾಣಿವರ್ಗ, ಸರ್ಪವರ್ಗದ ಪಾತ್ರಗಳು ಸುಮಾರು ಹನ್ನೆರಡು ಇವೆ.

vi. ರಾಕ್ಷಸರು, ದೈತ್ಯರು, ಇವರದು ಸುಮಾರು ೩೦ ಪಾತ್ರಗಳಿವೆ

vii. ಅಪ್ಸರೆ, ಯಕ್ಷರು- ಕೆಲವೇ ಇವೆ.

viii. ಶೂದ್ರ, ಚಂಡಾಲ ಭಕ್ತರೂ ಕೆಲವರು ಇದ್ದಾರೆ.

ix. ಪರಿಸರ ಪ್ರಪಂಚದಲ್ಲಿ ಸುಮಾರು ೪೦ ಪರ್ವತ, ನದೀ, ಸಮುದ್ರ, ತೀರ್ಥಗಳ ಉಲ್ಲೇಖಗಳಿವೆ. ಇತ್ಯಾದಿ..

ಮೇಲಿನ ಪಾತ್ರಪ್ರಪಂಚದ ಪಟ್ಟಿಯನ್ನು ಪ್ರತ್ಯೇಕವಾಗಿ ಕೊಡಲಾಗಿದೆ (ಪರಿಶಿಷ್ಟ-೫).

## ೧೭. ಉಪಾಖ್ಯಾನಗಳಲ್ಲಿನ ಕೆಲವು ವಿಶೇಷಗಳು

೧. ಭಗವಂತನ ಕಥೆಗಳು ನೂರಾರು. ಉಪಾಖ್ಯಾನಗಳಲ್ಲಿ ಒಂಭತ್ತು ರೂಪಗಳ ಬಗ್ಗೆ ಪ್ರಸ್ತಾವನೆಗಳಿವೆ. ಅವಂತೂ ಪರಿಪೂರ್ಣ ವ್ಯಕ್ತಿತ್ವಗಳು. ಅವು ಎಲ್ಲ ದೃಷ್ಟಿಯಿಂದಲೂ ಎಲ್ಲರಿಗೂ ಮಾನ್ಯ.

ತತ್ರಾಪಿ ಪರಶುರಾಮದೇವರು ಬ್ರಾಹ್ಮಣರಾದರೂ, ದುಷ್ಟಕ್ಷತ್ರಿಯರೆಲ್ಲರನ್ನು ಅನೇಕ ಬಾರಿ ಸಂಹರಿಸಿ, ಹಿಂಸೆಯನ್ನು ಸೂಕ್ತ ಕಾಲದಲ್ಲಿ ಬಳಕೆಗೆ ತಂದವರು. ನೋಡಲು ಬ್ರಾಹ್ಮಣಧರ್ಮವಿರೋಧಿ. ಆದರೆ ಆತ್ಯಂತಿಕ ಧರ್ಮ ಪ್ರತಿಪಾದಕರು. ವಿಷ್ಣುವಿನ

ದತ್ತಾತ್ರೇಯ ರೂಪಾನುಗ್ರಹ ಪಡೆದ ಕಾರ್ತವೀರ್ಯ, ಅದೇ ವಿಷ್ಣುವಿನ ಮತ್ತೊಂದು ರೂಪ ಪರಶುರಾಮನ ಆಗ್ರಹಕ್ಕೆ ಗುರಿಯಾದುದು, ಸಂಹಾರವಾದುದು ಭಾರೀ ವಿಪರ್ಯಾಸ.

೨. ಭಾರತದಲ್ಲಿ ವೇದವ್ಯಾಸರ ಅವತಾರವರ್ಣನೆ ಹಾಗೂ ಮುಂದೆ ಶುಕರನ್ನು ಮಗನನ್ನಾಗಿ ಪಡೆದು ವಿದ್ಯಾದಾನ ಮಾಡಿದ್ದು, ಶುಕರ ಗುರುಭಕ್ತಿ, ಪಿತೃಭಕ್ತಿ, ಮೊದಲಾದ ಅನೇಕ ವಿಷಯಗಳು ಬಂದಿವೆ. ವ್ಯಾಸರ, ಶುಕರ ಬಗ್ಗೆ ಎಲ್ಲ ಕಥೆಗಳ ಸಂಗ್ರಹ ಇಲ್ಲಿ ಮಾಡಲಾಗಿದೆ.

೩. ಆದಿಪರ್ವದ ಆರಂಭವಾಗುವುದೇ ಗುರುಭಕ್ತಿಯನ್ನು ಸಾರಲು. ಗುರುಭಕ್ತಿಯಿಂದಲೇ ಜ್ಞಾನ ಭಕ್ತಿ ವೈರಾಗ್ಯ ಕೊನೆಗೆ ಮೋಕ್ಷ. ಗುರುವಿನ ಸೇವೆಯು ಸಾಧನೆಯ ಅತಿಮುಖ್ಯ ಮಜಲು. ಗುರುಸೇವೆಯನ್ನು ಅತ್ಯಂತ ಶ್ರದ್ಧೆಯಿಂದ, ಆಸಕ್ತಿಯಿಂದ ಬೇಸರವಿಲ್ಲದೆ ಮಾಡಬೇಕು. ಇದನ್ನು ಹಿಂದಿನ ಸಾಧಕರು ಸಾಧಿಸುತ್ತಿದ್ದರು. ಅದು ಇಂದಿನವರೆಗೂ ಅನುಚಾನವಾಗಿ ನಡೆದು ಬಂದಿದೆ. ಸದ್ಗುರುವನ್ನು ಪಡೆಯಲು ತಪಸ್ಸನ್ನು ಮಾಡಬೇಕು. ಸಿಕ್ಕ ಗುರುವನ್ನು ಅಷ್ಟೇ ಭಕ್ತಿಯಿಂದ ಸೇವಿಸಬೇಕು. ಅದೇ ಜ್ಞಾನ ಸಂಪಾದನೆಯ ಏಕೈಕ ಮಾರ್ಗ. ಇವುಗಳನ್ನು ತಿಳಿಸುವ ಉಪಮನ್ಯು, ವೇದ, ಉದಂಕ ಮೊದಲಾದವರ ಕಥೆಗಳು ಇವೆ. ಪರಿಶಿಷ್ಟದಲ್ಲಿ ಗುರುಮಹಿಮಾಪರವಾದ ಸ್ತೋತ್ರವೊಂದನ್ನು ಕೊಡಲಾಗಿದೆ. ಆದ್ದರಿಂದ ಇಂದಿಗೂ ಸಹ ನಮಗೆ ಲಭ್ಯವಾಗುವ ಗುರುಗಳ ಸೇವೆಯನ್ನು ಶ್ರದ್ಧಾಭಕ್ತಿಗಳಿಂದ ನಿರ್ವಂಚನೆಯಿಂದ ಮಾಡಬೇಕು. ಗೀತೆಯ ಆದೇಶವೂ ಹೀಗೆಯೇ ಇದೆ.

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥** **- ಗೀತೆ (೪/೩೪)**

೪. ಬ್ರಾಹ್ಮಣ ಜನ್ಮ ಬಂದ ಮೇಲೆ ಅದನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡಬೇಕು. ಅದಕ್ಕಾಗಿ ನಿತ್ಯವೂ ಸ್ನಾನಸಂಧ್ಯಾಗಳನ್ನು ಸಕಾಲದಲ್ಲಿ ಮಾಡುತ್ತಿದ್ದಲ್ಲಿ, ಬ್ರಾಹ್ಮಣ ಜನ್ಮ ಮತ್ತೆ ಬಂದೇ ಬರುತ್ತದೆ. ಅದಕ್ಕೋಸ್ಕರ ಹೆಚ್ಚುವರಿಯಾಗಿ ಸ್ವಾಧ್ಯಾಯ (ವೇದಾಧ್ಯಯನ), ಪ್ರವಚನ, ಜಪ (ವಿವಿಧ ಮಂತ್ರಜಪ), ಶರೀರ ದಂಡನಾರೂಪ ತಪಸ್ಸು, ತಾನು ಕಲಿತ ವಿದ್ಯೆಯನ್ನು ಆಸಕ್ತರಿಗೆ ಹಂಚುವುದು ಮೊದಲಾದ ಹವ್ಯಾಸ ಸ್ವಾಭಾವಿಕವಾಗಿರಬೇಕು. ಇದು ಬ್ರಹ್ಮಚಾರಿ, ಮೊದಲಾಗಿ ಎಲ್ಲ ಆಶ್ರಮವಾಸಿಗಳಿಗೆ ಕಡ್ಡಾಯ. ತಪಸ್ವೀ ಜರತ್ಕಾರುವಿನ ತಪಸ್ಸು ಯಾವ ಮಟ್ಟದಲ್ಲಿತ್ತೆಂದರೆ, '**ನಾನು ಸಂಧ್ಯಾ ಮಾಡದಿದ್ದರೆ ಸೂರ್ಯನು ಹೇಗೆ ತಾನೇ ಅಸ್ತಂಗತನಾಗುತ್ತಾನೆ?**' ಎಂದು ಪತ್ನಿಗೆ ಹೇಳುವ ಆತನ ತಪಸ್ಸಿನ ಛಾತಿಯೇ ಬ್ರಾಹ್ಮಣ್ಯದ ಮಟ್ಟ ತಿಳಿಸುತ್ತದೆ. ಈ ಜರತ್ಕಾರು ಕಥೆ ಆದಿಪರ್ವದಲ್ಲಿಯೇ, ಆಸ್ತಿಕಪರ್ವದಲ್ಲಿ ಬರುತ್ತದೆ.

೫. ಉಪಾಖ್ಯಾನಗಳಲ್ಲಿ ಮಹಿಳಾಪ್ರಧಾನ ಪಾತ್ರಗಳಿಗೇನೂ ಕಡಿಮೆ ಇಲ್ಲ. ಜರತ್ಕಾರು ಪತ್ನಿ ಜರತ್ಕಾರು, ಭೃಗುಪತ್ನಿ ಪುಲೋಮಾ, ಸಾವಿತ್ರೀ, ಸೀತೆ, ಬ್ರಾಹ್ಮಣನೋರ್ವನ ಪತ್ನಿ – ಇವರೆಲ್ಲ ಶ್ರೇಷ್ಠ ಪತಿವ್ರತೆಯರಾಗಿದ್ದರು. ಆದ್ದರಿಂದ ಅವರನ್ನು ಹಿಂಸಿಸಲು ರಾಕ್ಷಸರಿಗೆ ಸಾಧ್ಯವಾಗಲಿಲ್ಲ.

ಅವರೆಲ್ಲ ಜಗನ್ಮಾನ್ಯ ಪತಿವ್ರತೆಯರಾದರು. ಉಪಾಖ್ಯಾನಗಳಲ್ಲಿ ಬಂದ ಕೆಲ ಮಹಿಳಾ ಪಾತ್ರಗಳು:

| | | |
|---|---|---|
| ೧ | ಜರತ್ಕಾರು (ಆದಿಪರ್ವ) | ಜರತ್ಕಾರುಪತ್ನಿ (ಆಸ್ತೀಕನ ತಾಯಿ |
| ೨ | ಪುಲೋಮಾ (ಆದಿಪರ್ವ) | ಕೆಣಕಲು ಬಂದ ಪುಲೋಮ ರಾಕ್ಷಸನನ್ನು ಗರ್ಭದಲ್ಲಿದ್ದ ಮಗುವಿನ ಕೋಪದಿಂದಲೇ ಸುಟ್ಟಳು |
| ೩ | ಸಾವಿತ್ರೀ | ಯಮನನ್ನು ತನ್ನ ಶಾಸ್ತ್ರೀಯ ಮಾತುಗಳಿಂದ ಒಲಿಸಿಕೊಂಡು ಪತಿಯನ್ನು ಪಡೆದು ದೀರ್ಘಾಯುಷ್ಯ, ನೂರು ನೂರು ಮಕ್ಕಳನ್ನು ತನಗೆ, ತಂದೆಗೆ, ಮಾವಗೆ ಪಡೆದ ಪತಿವ್ರತೆ |
| ೪ | ದಮಯಂತಿ (ವನಪರ್ವ) | ಕಾಡಿನಲ್ಲಿ ಕೆಣಕಲು ಬಂದ ವ್ಯಾಧನನ್ನು ಕೋಪಾಗ್ನಿಯಿಂದ ಸುಟ್ಟ ಪತಿವ್ರತೆ |
| ೫ | ಸೀತೆ (ವನಪರ್ವ) | ರಾವಣನಿಂದ ಅಪಹೃತಳಾದಂತೆ ಕಂಡು ಅವನಿಂದ ಯಾವ ತೊಂದರೆಯಾಗದಂತೆ ಪಾತಿವ್ರತ್ಯದಿಂದ ಜಗನ್ಮಾನ್ಯಳಾದ ಪಂಚಕನ್ಯೆಯರಲ್ಲಿ ಒಬ್ಬಳು. ಅಗ್ನಿ ದಿವ್ಯದಲ್ಲಿ ಪರೀಕ್ಷಿತಳಾದ ಮಹಾತ್ಮಳು |
| ೬ | ಬ್ರಾಹ್ಮಣಪತ್ನಿ (ವನಪರ್ವ) | ಕೌಶಿಕನೆಂಬ ಬ್ರಾಹ್ಮಣನು ತನ್ನ ಮೇಲೆ ಕುಳಿತ ಪಕ್ಷಿಯನ್ನು ಕೊಂದದನ್ನು ಊಹಿಸಿ ಹೇಳಿ, ಬ್ರಾಹ್ಮಣನಿಗೆ ಧರ್ಮೋಪದೇಶ ಮಾಡಿದ ಪತಿವ್ರತೆ |
| ೭ | ಸುಲಭಾ | ಜನಕರಾಜನಶರೀರವನ್ನುಪ್ರವೇಶಿಸಿಬ್ರಹ್ಮಚರ್ಯವನ್ನು ಉಳಿಸಿಕೊಂಡು ಅತನಿಗೆ ಉಪದೇಶಿಸಿ ಸನ್ನ್ಯಾಸಿಯಂತೆ ಇದ್ದ ಯೋಗಿನಿ |
| ೮ | ವೃದ್ಧಕನ್ಯಾ | ವೈರಾಗ್ಯಕ್ಕೆ ಹೆಸರಾದವಳು |

ಇವೇ ಮೊದಲಾದ ಮಹಿಳಾಪ್ರಧಾನ ಪಾತ್ರಗಳು ಮಹಿಳೆಯರು ತಮ್ಮ ಸದಾಚಾರ, ಸದ್ವಿಚಾರ, ಯೋಗಶಕ್ತಿ, ಪಾತಿವ್ರತ್ಯಗಳಿಂದ ಮಾನ್ಯರಾಗಬಹುದೆಂದು ತಿಳಿಸುತ್ತಾ, ಇಂದಿನ ಮಹಿಳಾ ಲೋಕಕ್ಕೂ ಆದರ್ಶರಾಗಿ ಮಹಿಳೆಯು ಪುರುಷರನ್ನು ಸಾತ್ತ್ವಿಕವಾಗಿ ಎದುರಿಸಿ ಮಾನ್ಯರಾಗಬೇಕು ಎಂದು ತಿಳಿಸುವ ಪಾತ್ರಗಳು.

೬. ಆದರ್ಶರಾಜರು, ಪರೀಕ್ಷಿತ, ದುಷ್ಯಂತ, ಶಂತನು, ಯಯಾತಿ, ನಳಮಹಾರಾಜ, ಮಾಂಧಾತ, ಶಿಬಿ, ಇಂದ್ರದ್ಯುಮ್ನ, ಅಂಬರೀಷ, ಷೋಡಶರಾಜರು, ಜನಕಮಹಾರಾಜ ಮೊದಲಾದವರು. ಕ್ಷತ್ರಿಯಧರ್ಮಪಾಲಕರಾಗಿ ಮೋಕ್ಷಮಾರ್ಗದಲ್ಲಿ ನಡೆದು ಜಗತ್ತನ್ನು ಆಳಿ ಮುನ್ನಡೆಸಿದರು. ಕೊನೆಗೆ ಯೋಗಶಕ್ತಿಯಿಂದ ಶರೀರತ್ಯಾಗ ಮಾಡಿದವರು. ಇವರ ಪ್ರತಿಯೊಂದು ಚರಿತ್ರೆಯೂ ಅನೇಕಾನೇಕ ನೀತಿಗಳನ್ನು ಒಳಗೊಂಡಿದೆ.

೭. ಆಪದ್ಧರ್ಮ ಅನುಷ್ಠಾನ ಮಾಡಿ, ನಿಷಿದ್ಧವನ್ನು ತಿಂದರೂ, ಮುಂದೆ ತಪಸ್ಸನ್ನು ಮಾಡಿ ದೇಹಶುದ್ಧಿ ಮಾಡಿಕೊಂಡು ಭಾರಿ ತಪಸ್ಸನ್ನು ಮಾಡಿ ಸಿದ್ಧಿ ಪಡೆದ ವಿಶ್ವಾಮಿತ್ರರು ಜಗನ್ಮಾನ್ಯರು. ಯಾಂತ್ರಿಕವಾಗಿ ಧರ್ಮಾಚರಣೆಗೆಂದು, ವ್ಯಾವಹಾರಿಕವಾಗಿ ಶಾಸ್ತ್ರೀಯರ ಸಂಪ್ರದಾಯ ಬಿಡದೆ ಧರ್ಮ ಉಳಿಸಿಕೊಂಡವರು. ಚಂಡಾಲನ ಮನೆಗೆ ಹೋಗಿ ಅಲ್ಲಿದ್ದ ನಾಯಿ ಮಾಂಸವನ್ನು ಅವನು ಬೇಡ ಎಂದರೂ, ಆಹಾರಕ್ಕಾಗಿ ಆಪತ್ಕಾಲದಲ್ಲಿ ತಿಂದರೂ(?) ಮಾನ್ಯರೇ ಆಗಿದ್ದಾರೆ.

೮. ಸಾಧನೆಯು ಆರಂಭವಾಗುವುದು ನೈತಿಕಮೌಲ್ಯಗಳಿಂದ. ಅದನ್ನೇ ಶಾಸ್ತ್ರಕಾರರು '**ಅಥ**' ಎಂದರು. ಅಥ ಎಂದರೆ ಶಮದಮಾದಿ ಗುಣಗಳನ್ನು ಪಡೆದ ಮೇಲೆ ಅದುವೇ ನೈತಿಕಮೌಲ್ಯಗಳನ್ನು ತಿಳಿಸುವ ಶಾಸ್ತ್ರೀಯ ಶಬ್ದ ಪರಿಭಾಷೆ. ಅಂತಹ ಕಥೆಗಳು ಶಾಂತಿಪರ್ವ, ಅನುಶಾಸನ ಪರ್ವಗಳಲ್ಲಿ ಸಾಕಷ್ಟಿವೆ. ನೋಡಲು ಕಾಗೆ, ಗುಬ್ಬಿ, ಇಲಿ, ನರಿ, ಸರ್ಪ ಮೊದಲಾದ ಪ್ರಾಣಿಗಳು. ಅವುಗಳ ನಡೆ, ನುಡಿ, ಸಂವಾದಗಳು ನೀತಿಗಳನ್ನು ಕಲಿಸುತ್ತವೆ. ಆ ಪಾತ್ರಗಳಲ್ಲಿ ಒಳ್ಳೆಯ ಹಾಗೂ ದುಷ್ಟಚಾರಿತ್ರ್ಯದ ಉದಾಹರಣೆಗಳು ಮಾರ್ಮಿಕವಾಗಿ ಬಂದಿವೆ.

೯. ಉಪದೇಶಪರ ಉಪಾಖ್ಯಾನಗಳಲ್ಲಿ ಮೂರ್ಧನ್ಯವಾದುದು '**ಅನುಗೀತಾ**', ಭಗವದ್ಗೀತೆಯಸಾರ. ಆದರೆ ಈ ಸಾರವನ್ನು ಗ್ರಹಿಸುವುದು ತುಂಬಾ ಕಠಿಣ. ಭಗವದ್ಗೀತೆಯಂತೆ ಒಂದೊಂದು ಅಧ್ಯಾಯದಲ್ಲಿ ಒಂದೊಂದು ವಿಷಯದಂತೆ ಹೆಣೆಯಲಾಗಿಲ್ಲ. ಇಲ್ಲಿ ಎಲ್ಲವೂ ಕೃಷ್ಣನೇ ಬ್ರಾಹ್ಮಣರೂಪದಿಂದ ಉಪದೇಶ ಮಾಡಿದನೆಂದು ಕೊನೆಗೆ ಗೊತ್ತಾಗುತ್ತದೆ. ಆದರೂ ವಿಷಯಗಳ ಹಂಚಿಕೆ ಮೊದಲಾದವು ಕ್ಲಿಷ್ಟ. ಇಲ್ಲಿ ಪ್ರಕೃತಿ, ಸತ್ವಾದಿಗುಣಗಳ ಬಗ್ಗೆ ವಿಶೇಷವಾಗಿ ಬಂದಿದೆ. ಅಂತೂ ಅರ್ಥಮಾಡಿಕೊಳ್ಳುವುದು ಕಷ್ಟವೇ ಆಗಿದೆ. ಸೂಕ್ಷ್ಮವಾಗಿ ವಿಚಾರಿಸಿದರೆ ಅರ್ಜುನನಿಗೆ ಬಂದ ವಿಷಾದ ಇಲ್ಲೂ ಹೋಗುತ್ತದೆ (ಹೋಗಿದೆ).

ಇನ್ನೂ ಅನೇಕ ಉಪದೇಶಾತ್ಮಕ ಉಪಾಖ್ಯಾನಗಳನ್ನು ಪ್ರತ್ಯೇಕವಾಗಿ ಸಂಗ್ರಹಿಸಿ ಕೊಡಲಾಗಿದೆ.

೧೦. ರುದ್ರ, ದಕ್ಷ, ಇಂದ್ರ ಮೊದಲಾದ ದೇವತೆಗಳು ವಿವಿಧ ಪ್ರಸಂಗಗಳಲ್ಲಿ ಹೇಗೆ ವರ್ತಿಸಿದರು ಎಂಬುದು ದೇವತೆಗಳ ಗುಣಗಳ ಚಿಂತನೆಗೆ ಗ್ರಾಸವಾಗುವ ಅನೇಕ ಉಪಾಖ್ಯಾನಗಳಿವೆ. ವೃತ್ರಾಸುರಸಂಹಾರ, ದಕ್ಷಯಜ್ಞಧ್ವಂಸ, ತ್ರಿಪುರಾಸುರಸಂಹಾರ ಮೊದಲಾದವುಗಳು ಉಲ್ಲೇಖನಾರ್ಹ. ತ್ರಿಪುರಾಸುರಸಂಹಾರದಲ್ಲಿ ರುದ್ರದೇವರಿಗೆ ಕೀರ್ತಿ ಕೊಡಲು ಬ್ರಹ್ಮವಿಷ್ಣು ಮೊದಲು ಮಾಡಿ ಎಲ್ಲ ದೇವತೆಗಳು ಬ್ರಹ್ಮದೇವರ ವರದಿಂದ ಅವಧ್ಯನಾದ ತಾರಕಾಸುರ ಸಂಹಾರಕ್ಕಾಗಿ ತಮ್ಮ ಶಕ್ತಿಯನ್ನೆಲ್ಲ ರುದ್ರನಿಗೆ ಧಾರೆ ಎರೆದುದು ತುಂಬಾ ಅಪರೂಪ ಪ್ರಸಂಗ. ಅಲ್ಲದೆ ಸ್ಕಂದನ ಅವತಾರವಾದಾಗಲೂ ಎಲ್ಲ ದೇವತೆಗಳು ಆತನನ್ನು ನೋಡಲು ಬಂದುದು ವಿಶೇಷ ಪ್ರಸಂಗ.

೧೧. ಕೊನೆಯದಾಗಿ ತಪಸ್ಸು, ಸಾಧನೆಯ ಜೀವಾಳ. ತಪಸ್ಸಿನಿಂದ ಸಿಗದ ಫಲವೇ ಇಲ್ಲವೆಂದು ಅನೇಕ ಕಡೆ ಬಂದಿದೆ. ಬರೀ ಪಾಂಡಿತ್ಯ ಬಂದರೆ ಸಾಲದು. ಅದು ಜ್ಞಾನರೂಪ ತಾಳಿದಾಗ ತಪಸ್ಸಾಗುತ್ತದೆ. ಅದೇ ಸಾಧನಕ್ಕೆ ಸೋಪಾನ. ಅಂತಹ ತಪಸ್ಸನ್ನು ಮಾಡುವ ಮನಸ್ಸು ಶಕ್ತಿಗಳನ್ನು ಶ್ರೀಹರಿವಾಯುಗುರುಗಳು ನಮಗೆಲ್ಲರಿಗೂ ಅನುಗ್ರಹಿಸಲಿ.

ಹೀಗೆ ಇಲ್ಲಿ ಸುಮಾರು ಎರಡುನೂರಕ್ಕೂ ಹೆಚ್ಚು ಉಪಾಖ್ಯಾನಗಳಲ್ಲಿ ನೂರಾರು, ಸಾವಿರಾರು ಸಂದೇಶಗಳಿವೆ. ಅವನ್ನು ಯಥಾಶಕ್ತಿ ಸಂಗ್ರಹಿಸಲಾಗಿದೆ. ಅವುಗಳು ಅನುಷ್ಠಾನಕ್ಕೆ ಬಂದಾಗಲೇ ನಮ್ಮ ಜೀವನ ಸಾರ್ಥಕ. ಹರಿವಾಯುಗುರುಗಳು ಓದುಗರನ್ನು, ಲೇಖಕನನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

## ೧೮. ಉಪಾಖ್ಯಾನಗಳನ್ನು ಯಾರು-ಯಾರಿಗೆ ಹೇಳಿದರು

ಈ ಪ್ರಶ್ನೆಯೂ ಅಷ್ಟೇ ಮುಖ್ಯ. ಯದ್ಯಪಿ ಭಾರತ ಹೇಳಿದವರೇ ಇದನ್ನು ಹೇಳಿದವರು ಎಂಬುವುದು ಸಾಮಾನ್ಯ ಉತ್ತರ. ಆದರೆ ಒಳಗೆ ಹೋದಂತೆ ಪ್ರಾಸಂಗಿಕವಾಗಿ ಭಾರತದ ವಿವಿಧ ಪಾತ್ರಗಳ ಪಾತ್ರ, ಇಲ್ಲಿ ಕಾಣಬರುವುದು. ಆದ್ದರಿಂದ ಮೂಲಭೂತವಾಗಿ ವ್ಯಾಸರೇ ಎಲ್ಲವನ್ನು ಹೇಳಿದುದು ಎಂಬುದು ಆತ್ಯಂತಿಕ ಉತ್ತರವಾದರೂ, ಅಲ್ಲಲ್ಲಿ ವ್ಯಾಸರು ಬೇರೆಯವರ ಮೂಲಕ ಹೇಳಿಸಿರುವುದನ್ನು ಅನುವಾದ ಮಾಡಿದ್ದಾರೆ. ಪ್ರಥಮತಃ ವೈಶಂಪಾಯನರ ಮೂಲಕ ಜನಮೇಜಯನಿಗೆ ಹೇಳಿದರು. ಅದನ್ನು ಶ್ರವಣ ಮಾಡಿದ್ದ ಸೂತರು ಶೌನಕಾದಿಗಳಿಗೆ ನಂತರ ಹೇಳಿದರು. ಅಲ್ಲದೆ –

| ಸಂ. | ಪರ್ವ | ಉಪಾಖ್ಯಾನ | ಯಾರು | ಯಾರಿಗೆ |
|---|---|---|---|---|
| ೧ | ಸಭಾಪರ್ವ | ಸುಧನ್ವೋಪಾಖ್ಯಾನ | ವಿದುರ | ಕೌರವರ ಸಭೆಗೆ ಹೇಳಿದನು (ದುರ್ಯೋಧನ) |
| ೨ | ವನಪರ್ವ | ಸೌಭವಧೋಪಾಖ್ಯಾನ | ಕೃಷ್ಣ | ಪಾಂಡವರಿಗೆ |
| ೩ | | ನಳೋಪಾಖ್ಯಾನ | ಬೃಹದಶ್ವರು | ಧರ್ಮರಾಜ |
| | | ತೀರ್ಥಯಾತ್ರಾ ಪರ್ವದಲ್ಲಿ ಹನುಮ ದ್ರಾಮಾಯಣ ಇತ್ಯಾದ್ಯನೇಕ ಕಥೆಗಳು | ಲೋಮಶ | ಧರ್ಮರಾಜ |
| | | ಮಾರ್ಕಂಡೇಯ ಸಮಾಸ್ಯಾಪರ್ವದ ಅನೇಕ ಉಪಾಖ್ಯಾನಗಳು | ಮಾರ್ಕಂಡೇಯ | ಧರ್ಮರಾಜ |

| | | | | |
|---|---|---|---|---|
| ೪ | ಉದ್ಯೋಗ ಪರ್ವ | ೧.ಇಂದ್ರವಿಜಯ<br>೨.ವಿರೋಚನ-ಸುಧನ್ವ ಸಂವಾದ<br>೩.ದಂಭೋದ್ಭವ ಉಪಾಖ್ಯಾನ<br>೪. ಮಾತಲಿ ಉಪಾಖ್ಯಾನ | ಶಲ್ಯ<br>ವಿದುರ<br><br>ಪರಶುರಾಮ<br><br>ಕಣ್ವಋಷಿ | ಧರ್ಮರಾಜ<br>ಧೃತರಾಷ್ಟ್ರ<br><br>ದುರ್ಯೋಧನ<br><br>ದುರ್ಯೋಧನ |
| ೫ | ಉದ್ಯೋಗ ಪರ್ವ | ೧.ಗಾಲವಚರಿತೆ<br>೨.ವಿದುಲೋ-ಪಾಖ್ಯಾನ<br>೩.ಅಂಬೋಪಾಖ್ಯಾನ | ನಾರದರು<br>ಕುಂತೀ<br><br>ಭೀಷ್ಮ | ದುರ್ಯೋಧನ<br>ಪಾಂಡವರಿಗೆ<br>(ಕೃಷ್ಣನ ಮೂಲಕ)<br>ದುರ್ಯೋಧನ |
| ೬ | ದ್ರೋಣ ಪರ್ವ | ಅಕಂಪನೋಪಾಖ್ಯಾನ (ಮೃತ್ಯು ಉತ್ಪತ್ತಿ ಬಗ್ಗೆ) | ನಾರದ | ಅಕಂಪನರಾಜ |
| ೭ | ಕರ್ಣಪರ್ವ | ೧.ತ್ರಿಪುರಾಸುರ ವಧೋಪಾಖ್ಯಾನ<br>೨.ಹಂಸಕಾಕೀಯ ಉಪಾಖ್ಯಾನ | ದುರ್ಯೋಧನ<br><br>ಶಲ್ಯ | ಶಲ್ಯ<br><br>ಕರ್ಣ |
| ೮ | ಶಾಂತಿಪರ್ವ | ಅನೇಕಾನೇಕ ಉಪಾಖ್ಯಾನಗಳು | ಭೀಷ್ಮ | ಧರ್ಮರಾಜ |
| ೯ | ಅನುಶಾಸನ ಪರ್ವ | ಅನೇಕಾನೇಕ ಉಪಾಖ್ಯಾನಗಳು | ಭೀಷ್ಮ | ಧರ್ಮರಾಜ |
| ೧೦ | ಅಶ್ವಮೇಧಿಕ ಪರ್ವ | ಮರುತ್ತನ ಕಥೆ<br>ಇಂದ್ರ-ವೃತ್ರಾಸುರ ಯುದ್ಧ ವೃತ್ತಾಂತ | ವ್ಯಾಸರು<br>ಕೃಷ್ಣ | ಧರ್ಮರಾಜ<br>ಧರ್ಮರಾಜ |

## ೧೯. ಶ್ರೀಮನ್ಮಧ್ವಾಚಾರ್ಯರು ಕಂಡ ಭಾರತ

೧. ಆಚಾರ್ಯರು ಭಾರತದ ಹಿರಿಮೆ ಹಾಗೂ ಗರಿಮೆಗಳನ್ನು ಭಾರತವಲ್ಲದೆ, ಬ್ರಹ್ಮಾಂಡ, ಮಾರ್ಕಂಡೇಯ, ವಾಯು, ಭವಿಷ್ಯತ್ಪರ್ವ ಮೊದಲಾದ ಭಾರತೇತರ ಗ್ರಂಥಗಳ ಮೂಲಕ ಸಾರಿದ್ದಾರೆ. ನಾವು ಈಗಾಗಲೇ ಭಾರತದಲ್ಲಿಯೇ ಬಂದಿರುವ ಅದರ ಹಿರಿಮೆಗಳನ್ನು ಗಮನಿಸಿದ್ದೇವೆ. ಈ ಎಲ್ಲ ಗ್ರಂಥಗಳಲ್ಲಿ ಬಂದಿರುವ ವಿಷಯಗಳನ್ನು ಸಂಕ್ಷಿಪ್ತವಾಗಿ ನೋಡೋಣ. ಮೊದಲು ಭಾರತಾದಿ ಗ್ರಂಥಗಳು ಪ್ರಕ್ಷಿಪ್ತಾದಿ ವ್ಯತ್ಯಾಸಗಳಿಗೆ ತುತ್ತಾಗಿವೆ ಎಂದು ಆಚಾರ್ಯರು ಜಗತ್ತಿಗೆ ತಿಳಿಸುತ್ತಾರೆ. ಅದಕ್ಕೆ ಭಾರತವು ಹೊರತಾಗಿಲ್ಲ. ಪರಿಣಾಮವಾಗಿ

ಭಾರತದಲ್ಲಿ ತಮ್ಮ ಮತಕ್ಕೆ ಅನುವಾಗಲೆಂದು ತಮ್ಮ ಕಲ್ಪನಾ ವಿಲಾಸಕ್ಕೆ ತಕ್ಕಂತೆ ವಿಷಯಗಳನ್ನು ಸೇರಿಸಿದ್ದಾರೆ (ಪ್ರಕ್ಷೇಪ).

೨. ತಮಗೆ ಬೇಡವಾದುದನ್ನು ತೆಗೆದು ಹಾಕಿದ್ದಾರೆ (ಅಂತರಿತ).

೩. ಮೂಲದಲ್ಲಿ ಇದ್ದ ವಾಕ್ಯಗಳನ್ನು ತೆಗೆದು ಎಲ್ಲೋ ಹಾಕಲಾಗಿದೆ. ಹೀಗೆ ಅನೇಕಾನೇಕ ವ್ಯತ್ಯಾಸಗಳನ್ನು ನೋಡಬಹುದು. ಹಾಗೆ ಒಂದು ವೇಳೆ ಸರಿಯಾದ ಪಾಠವಾಗಿದ್ದಲ್ಲಿ ನಮಗೆ ಎಲ್ಲೆಡೆ ಒಂದೇ ತರಹದಲ್ಲಿ ಶ್ಲೋಕಗಳಿರಬೇಕಾಗಿತ್ತು. ವಸ್ತುತಃ ಹಾಗೆ ಇಲ್ಲಿ ಯಾವುದೇ ಶ್ಲೋಕ ತೆಗೆದುಕೊಂಡರೂ ಅದಕ್ಕೆ ಪಾಠಾಂತರಗಳನ್ನು ನೋಡಬಹುದು (ಉದಾ: ಬಿ.ಓ.ಆರ್.ಐ. ಪೂನಾ ಪ್ರಕಾಶನವನ್ನು ನೋಡಬಹುದು).

ಇಷ್ಟಾದರೂ ಮುಖ್ಯ ಪ್ರಮೇಯಗಳಿಗೆ ತೊಂದರೆ ಇಲ್ಲವೆಂಬಂತೆ ಸಾಕಷ್ಟು ಪ್ರಾಮಾಣಿಕ ಪಾಠಗಳೂ ಎಲ್ಲ ಪ್ರಕಾಶನಗಳಲ್ಲಿಯೂ (ಅಥವಾ ಒಂದಲ್ಲಾ ಒಂದು ಪ್ರಕಾಶನದಲ್ಲಿ) ಸಿಗುತ್ತವೆ.

೪. ಭಾರತಕ್ಕೆ ಮಹಾಭಾರತವೆಂಬ ಹೆಸರು ಬರಲು ಅದರ ಹಿರಿಮೆಯನ್ನು ಸಾರುವ **'ಮಹತ್ವಾತ್ ಭಾರವತ್ವಾಚ್ಚ ಮಹಾಭಾರತಮುಚ್ಯತೇ'** ಎಂಬ ಭಾರತದ ಮಾತೇ ಸಾಕ್ಷಿ.

೫. ಎಲ್ಲ ಶಾಸ್ತ್ರಗಳ ಸಾರವೇ ಭಾರತ : **ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತಂ ಪರಿಕೀರ್ತಿತಮ್ ।** (ಮ.ತಾ.ನಿ. ೨/೯)

೬. ಭಾರತದಲ್ಲಿ ಸಕಲಶಾಸ್ತ್ರಗಳ ನಿರ್ಣಯವು ಉದಾಹರಣಪೂರ್ವಕವಾಗಿ ಬಂದಿದೆ. **'ನಿರ್ಣಯಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತೋ ಹಿ ಭಾರತೇ'**. ದೃಷ್ಟಾಂತ ಎಂದು ಹೇಳಿದ್ದ-ರಿಂದ ಉಪಾಖ್ಯಾನಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. (ಮ.ತಾ.ನಿ. ೨/೧೨)

೭. ಭಾರತದಲ್ಲಿ ವಾಯುದೇವರಿಗೆ ಭಗವತ್ಸೇವಾ ದುರಂಧರತ್ವವು ಅಗ್ರಶ್ರೇಣಿಯಲ್ಲಿದೆ. ಇತರ ದೇವತೆಗಳ ಸೇವೆ ನಂತರದು. ಹಾಗೆಯೇ ಅನೇಕ ಉಪಾಖ್ಯಾನಗಳ ವ್ಯಕ್ತಿಗಳೂ ಸಹ ನಂತರ ಬರಬಹುದಾದ ಹರಿಭಕ್ತರು. ಹರಿಸೇವೆಯಲ್ಲಿ ಎಲ್ಲರ ಪಾತ್ರವೂ ಇದೆ.

೮. ರಾಮಾಯಣವು ಭಾರತದಲ್ಲಿ ಬಂದಿದ್ದು (ವನಪರ್ವ), ಅಲ್ಲಿ ಅವತರಿಸಿದ ದೇವತೆಗಳು ರಾಮಸೇವೆ ಮಾಡಿದವರು. ಆಗ ಪೂರ್ಣಸೇವೆಯನ್ನು ಮಾಡದವರು ಕೃಷ್ಣಾವತಾರದಲ್ಲಿ ಮಾಡಿರುತ್ತಾರೆ (ರಾಮೋಪಾಖ್ಯಾನ ಈ ದೃಷ್ಟಿಯಿಂದ ಅಧ್ಯಯನ ಯೋಗ್ಯ). ಉದಾ: ವಾಲಿ ಮೊದಲಾದವರು (ಮಾರ್ಕಂಡೇಯ ಸಮಾಸ್ಯಾದಲ್ಲಿ) ಮೇಲಿನ ವಿಷಯಗಳು ಬ್ರಹ್ಮಾಂಡಪುರಾಣದಲ್ಲಿ ಬಂದಿವೆ (ಮ.ತಾ.ನಿ ಅಧ್ಯಾಯ- ೨/೯ ರಿಂದ ೫೧ ಶ್ಲೋಕಗಳಲ್ಲಿ).

೯. ಭಾರತದ ಆದಿಪರ್ವದಲ್ಲಿ ವ್ಯಾಸರೇ ನಾರಾಯಣ ಎಂದಿದೆ. ಆ ವಿಷಯವು ವಾಯುಪ್ರೋಕ್ತದಲ್ಲಿಯೂ ಬಂದು ಭಾರತದ ಪ್ರಶಂಸೆ ಬಂದಂತಾಗಿದೆ (೨/೫೪.೫೫).

೧೦. 'ನಾರಾಯಣಂ ಸುರಗುರುಂ' ಇದು ಭಾರತದ ಆದಿಮ ಶ್ಲೋಕ. ಇದು ಈಗಿನ ಗೀತಾಪ್ರೆಸ್, ಬಿ.ಓ.ಆರ್.ಐ., ಪ್ರಕಾಶನಗಳಲ್ಲಿಲ್ಲ. ಆಚಾರ್ಯರು ಇದನ್ನು ಆದಿಮಶ್ಲೋಕವೆಂದುಪ್ರತಿಪಾದಿಸುತ್ತಾರೆ(ಪೂರ್ವಾಪರವಾಕ್ಯಗಳಿಂದ). ಅದುಬಿ.ಓ.ಆರ್ .ಐ., ಪ್ರಕಾಶನದ ಒಂದು ಹಸ್ತಪ್ರತಿಯಲ್ಲಿಯೂ ಇದೆ. ಇಂತಹ ಅನೇಕ ಶ್ಲೋಕಗಳು ಅನುಕ್ರಮಣಿಕಾಧ್ಯಾಯದಲ್ಲಿರುವ ಶ್ಲೋಕಗಳು ಪ್ರಚಲಿತ ಪ್ರಕಾಶನದ ಬೇರೆ ಕಡೆ ಬಂದ ಉದಾಹರಣೆಗಳೂ ಇವೆ. ಹೀಗೆ ವಿಷ್ಣುಸರ್ವೋತ್ತಮತ್ವ ಪ್ರತಿಪಾದಕವಾದ ಕೆಲ ವಾಕ್ಯಗಳು ಈಗಲೂ ಅಲ್ಲಲ್ಲಿ ಸಿಗುತ್ತವೆ.

**೧. ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।**
**ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥**
**- ಮ.ತಾ.ನಿಯಲ್ಲಿ ಉಲ್ಲೇಖಿತ (೨/೬೧)**

**೨. ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್।**
**ಸರ್ವೇ ವಿಧಿನಿಷೇಧಾಃ ಸ್ಯುಃ ಏತಯೋರೇವ ಕಿಂಕರಾಃ ॥ - ೨/೬೨**

೧೧. ಭಾರತದಲ್ಲಿ ಸಮಾಧಿ, ದರ್ಶನ, ಗುಹ್ಯ ಎಂದು ಮೂರು ವಿಧವಾದ ಭಾಷೆಗಳಿವೆ. ಅವುಗಳನ್ನು ನಾವುಅನೇಕಉಪಾಖ್ಯಾನಗಳಲ್ಲೂಕಾಣಬಹುದು(ಆದರೆಉಪಾಖ್ಯಾನಗಳಲ್ಲಿ ಈ ಬಗ್ಗೆ ಹೆಚ್ಚಾಗಿ ನಾನು ವಿಚಾರಿಸಿಲ್ಲ).

೧೨. ವಾಯುದೇವರ ಮೂರೂ ರೂಪಗಳೂ (ಹನುಮ, ಭೀಮ, ಮಧ್ವ), ಶೇಷರುದ್ರಾದಿಗಳಲ್ಲದೆ ಇತರ ವೈಷ್ಣವ ಚರಿತೆಗಳೂ ವಿಷ್ಣುಸರ್ವೋತ್ತಮದಲ್ಲಿಯೇ ಪರ್ಯವಸಾನವಾಗುತ್ತವೆ ಎನ್ನುವ ಮೂಲಕ ಭಾರತ ಹಾಗೂ ಇತರ ಕಡೆ ಬಂದಿರುವ ಭಕ್ತರ ಕಥೆಗಳೂ ವಿಷ್ಣುಸರ್ವೋತ್ತಮತ್ವದಲ್ಲಿಯೇ ತಾತ್ಪರ್ಯವೆಂದು ಉಪಾಖ್ಯಾನಗಳಿಗೆ 'ಗತಿಕಲ್ಪನೆ'ಯನ್ನು ತೋರಿಸಲಾಗಿದೆ.

**ತಸ್ಯಾಂಗಂ ಪ್ರಥಮೋ ವಾಯುಃ ಪ್ರಾದುರ್ಭಾವತ್ರಯಾನ್ವಿತಃ ।**
**ಪ್ರದ್ಯುಮ್ನಾದ್ಯಾಸ್ತತೋ ವಿಷ್ಣೋರಂಗಭೂತಾಃ ಕ್ರಮೇಣ ತು ॥**
**ಚರಿತಂ ವೈಷ್ಣವಾನಾಂ ತು ವಿಷ್ಣೋದ್ರೇಕಾಯ ಕಥ್ಯತೇ ॥**
**- ಮ.ತಾ.ನಿ. (೨/೧೨೪-೧೨೫)**

೧೩. ಭಗವಂತನನ್ನು ಹಿಡಿದು ಎಲ್ಲ ದೇವತೆಗಳು ಭೂಮಿಯಲ್ಲಿ ಅವತರಿಸಿದಾಗ ಮನುಷ್ಯರಂತೆ ವರ್ತಿಸಬೇಕು ಎಂಬ ನಿಯಮವು ಭಾಗವತದಲ್ಲಿ ಹೇಳಲಾಗಿದೆ. ಅದನ್ನು ಆಚಾರ್ಯರು ನಿರ್ಣಯದಲ್ಲೂ ಪ್ರತಿಪಾದಿಸಿದ್ದಾರೆ. ಆ ತರಹದ ವರ್ತನೆಗಳನ್ನು ವ್ಯಾಸ, ಕೃಷ್ಣ, ರಾಮಾದಿ ಅವತಾರಗಳಲ್ಲೂ, ಹನುಮ, ಭೀಮಾದಿಗಳ ವರ್ತನೆಗಳಲ್ಲೂ ಇತರ ದೇವತಾ ಭಕ್ತರಲ್ಲಿ, ಎಲ್ಲ ಉಪಾಖ್ಯಾನಗಳಲ್ಲಿ ನೋಡಬಹುದು. ಏನೂ ತಿಳಿಯದವನಂತೆ

ಧರ್ಮರಾಜನು ಭೀಷ್ಮರನ್ನು ಧಾರ್ಮಿಕ, ತಾತ್ತ್ವಿಕ ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆಯುತ್ತಾನೆ. ಅದರಿಂದಾಗಿ ನೂರಾರು ಉಪಾಖ್ಯಾನಗಳ ಪ್ರಸಕ್ತಿ ಬಂದಿದೆ.

**ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಮ್ ।** - ಭಾಗವತ

ಉದಾ: ೧. ವನಪರ್ವದಲ್ಲಿ ರಾಮನು ಸೀತಾಪಹರಾಕ್ಕಾಗಿ ದುಃಖಿಸಿದಂತೆ ವರ್ಣಿಸಿದ್ದು.

೨. ರಾಮೇಶ್ವರದಲ್ಲಿ ಈಶ್ವರ ಪ್ರತಿಷ್ಠಾಪನೆ

೩. ರಾಮ, ಕೃಷ್ಣ, ವ್ಯಾಸರು ತಮ್ಮ ಬಳಿಗೆ ಬಂದ ದೇವತೆಗಳನ್ನು ನಾರದಾದಿ ಋಷಿಗಳನ್ನು, ರಾಜರನ್ನು, ಬ್ರಾಹ್ಮಣರನ್ನು ಸಾಮಾನ್ಯರಂತೆ ಸತ್ಕರಿಸುವುದು

೪. ಕೃಷ್ಣನ ಕೈಲಾಸಯಾತ್ರೆ, ತಪಸ್ಸು ಇತ್ಯಾದಿ.

೧೪. ಮಹಾಭಾರತಕ್ಕೆ ಮೂರು ಅರ್ಥಗಳಿವೆ – ಆಸ್ತಿಕಾದಿ, ಮನ್ವಾದಿ, ಉಪರಿಚರಾದಿ – ಇವುಗಳಿಗೆ ಆಚಾರ್ಯರ ವ್ಯಾಖ್ಯಾನ ಹೊಸ ಬೆಳಕನ್ನು ಚೆಲ್ಲಿದೆ.

**೧೫. ಮಹಾಭಾರತದ ಪ್ರತಿಶ್ಲೋಕಕ್ಕೂ ಹತ್ತು ಕನಿಷ್ಠ ಅರ್ಥಗಳು ಇವೆ. ಆದ್ದರಿಂದ ಉಪಾಖ್ಯಾನಗಳ ಶ್ಲೋಕಗಳೂ ಇವುಗಳಿಗೆ ಹೊರತಾಗಿಲ್ಲ. ಅವಕ್ಕೂ ಹತ್ತು ಅರ್ಥಗಳುಂಟು.**

೧೬. ಸಮಗ್ರ ಭಾರತ ಅಧ್ಯಾತ್ಮ ಅರ್ಥಗಳಿಂದ ಕೂಡಿದೆ. ಎಲ್ಲರಿಗೂ ತಿಳಿಯಲಾಗದು. ಅದನ್ನು ವ್ಯಾಸರೇ ಬಲ್ಲರು. ಅವರ ಅನುಗ್ರಹದಿಂದ ಬ್ರಹ್ಮ ಬಲ್ಲ. ದೇವತೆಗಳೂ ಪೂರ್ಣ ತಿಳಿಯಲಾರರು. ಉಳಿದವರೆಲ್ಲ ಅದರ ಬಗ್ಗೆ ವಿಷ್ಣುಪರತ್ವ ಎಂದು ತಿಳಿಯಬಹುದು.

**ಏವಂ ಅಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ ।**
**ದುರ್ವಿಜ್ಞೇಯಮತಃ ಸರ್ವೈರ್ಭಾರತಂ ತು ಸುರೈರಪಿ ॥**
**ಸ್ವಯಂ ವ್ಯಾಸೋ ಹಿ ತದ್ವೇದ ಬ್ರಹ್ಮಾ ವಾ ತತ್ಪ್ರಸಾದತಃ ।**
**ತಥಾಪಿ ವಿಷ್ಣುಪರತಾ ಭಾರತೇ ಸಾರಸಂಗ್ರಹಃ ॥** - ಮ.ತಾ.ನಿ.(೨/೧೪೫,೧೪೬)

ಈ ಎಲ್ಲ ಮಾತುಗಳೂ ಉಪಾಖ್ಯಾನಗಳಿಗೆ ಪೂರ್ಣ ಅನ್ವಯಿಸುತ್ತವೆ. ಉಪಾಖ್ಯಾನಗಳು ಹೇಗೆ ಭಗವತ್ಪರವೆಂದು ಎಲ್ಲ ಕಡೆ ತಿಳಿಯುವುದು ಕಷ್ಟ. ಅದರ ಅಧ್ಯಾತ್ಮಮೌಲ್ಯಗಳನ್ನು ತಿಳಿಯಬಹುದು. ಕೆಲವು ಕಡೆ ಸ್ಪಷ್ಟವಾಗಿಯೇ ಬಂದಿವೆ (ವಿಷ್ಣುಪರತ್ವ).

೧೭. ಮ.ತಾ.ನಿ.ದ ಅಧ್ಯಾಯ೯ರಲ್ಲಿ ಹೇಳಲಾದ ಮೂರು ಭಾಷೆಗಳು, ನೂರು ರೀತಿ-ಗಳು, ಸಪ್ತವ್ಯತ್ಯಾಸ (ವ್ಯತ್ಯಾಸ, ಪ್ರಾತಿಲೋಮ್ಯ, ಗೋಮೂತ್ರಿ, ಪ್ರಘಸ, ಉಕ್ಷಣ, ಸುಧರ, ಸಾಧು ಎಂಬ) ಅರ್ಥಗಳನ್ನು ಮೂಲ ಕಥೆ ಹಾಗೂ ಉಪಾಖ್ಯಾನಗಳಲ್ಲೂ ತಿಳಿಯುವುದು ಅತ್ಯಂತ ಸಾಹಸದ ಕೆಲಸ. ನಮಗೆ ಉದಾಹರಣೆಗಾಗಿ ಅಲ್ಲೊಂದು, ಇಲ್ಲೊಂದು ಸಿಗುತ್ತವೆ. ಉಳಿದಂತೆ ಈ ಕಾರ್ಯವನ್ನು ಜಿಜ್ಞಾಸುಗಳು ಅಧ್ಯಯನ ಮಾಡಬೇಕಿದೆ.

೧೭. ಮಾರ್ಕಂಡೇಯಸಮಾಸ್ಯಾದಲ್ಲಿ ಮಾರ್ಕಂಡೇಯ ಋಷಿಗಳು ಧರ್ಮರಾಜನಿಗೆ ಹೇಳಿದ ಕಥೆಗಳಲ್ಲೂ ಬಹಳ, ಭಾಷಾತ್ರಯದೃಷ್ಟಾಂತಗಳುಳ್ಳ, ವಿಚಿತ್ರ ಕಥೆಗಳಿವೆ. ಅಲ್ಲಿ ಅನೇಕ ಕಡೆ '**ಶಿಕ್ಷಾ**' ಜನರಿಗೆ ಮಾರ್ಗದರ್ಶನಕ್ಕಾಗಿ ಹೇಳಿದ ವಿಷಯಗ್ರಾಹ್ಯವೆ ಹೊರತು, ಅದರ ಅರ್ಥಗಳಲ್ಲ ಎಂದು ತಿಳಿಸಲಾಗಿದೆ. ಶ್ರೀವಾದಿರಾಜರೂ ಇದನ್ನು ವಿಶದಪಡಿಸಿದ್ದಾರೆ. ವಿವರವಾದ ಅಧ್ಯಯನ ಅವಶ್ಯಕತೆ ಇಲ್ಲೂ ಅವಶ್ಯವಾಗಿದೆ.

ಈ ನಿಯಮಗಳಡಿ ಉಪಾಖ್ಯಾನಗಳನ್ನು ಅರ್ಥಮಾಡಿಕೊಳ್ಳಬೇಕು. ಇದರ ಬಗ್ಗೆ ವಿವರಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

## ೨೦. ಗೀತಾಪ್ರಸ್ಥಾನದಲ್ಲಿ ಭಾರತದ ಬಗ್ಗೆ ಉಲ್ಲೇಖಗಳು

೧. 'ನಾರಾಯಣಾಷ್ಟಾಕ್ಷರಕಲ್ಪ' ಗ್ರಂಥದಲ್ಲಿ ಹೇಳಿದಂತೆ ಭಾರತರಚನೆಯಾದುದು ವೇದಾದ್ಯರ್ಥಜ್ಞಾನವಿಲ್ಲದ ಸ್ತ್ರೀಶೂದ್ರಾದಿಗಳಿಗೆ ಧರ್ಮಜ್ಞಾನದ್ವಾರಾ ಮೋಕ್ಷವಾಗಲೆಂದು.

೨. ಭಾರತವು ವೇದಕ್ಕಿಂತ ಉತ್ತಮ. ಪಂಚಮವೇದವಾಗಿದೆ. ವೇದಗಳಲ್ಲಿ ಹೇಳದಿರುವ ಅರ್ಥಗಳೂ ಇವೆ. ಭಗವಂತನಿಗೆ ಮಾತ್ರ ತಿಳಿಯಲು ಯೋಗ್ಯವಾದ ಅರ್ಥವುಳ್ಳದ್ದು ಭಾರತ. ಬ್ರಹ್ಮನೂ ಪೂರ್ಣ ತಿಳಿದಿಲ್ಲ. ಸ್ವಲ್ಪಸ್ವಲ್ಪ ಎಲ್ಲರಿಗೂ ಗೊತ್ತು. ಭಾರತಕ್ಕೆ ಇರುವ ಹತ್ತು ಅರ್ಥಗಳೆಲ್ಲ ಭಗವದ್ಬೋಧಕವಾಗಿವೆ.

**ವೇದಾರ್ಥಾಜ್ಞಮಧೀಕಾರವರ್ಜಿತಂ ಚ ಸ್ತ್ರಿಯಾದಿಕಮ್ ।**
**.................. ವೇದಾನುಕ್ತಾರ್ಥ ಭೂಷಿತಮ್ ॥**
**ಕೇವಲೇನಾತ್ಮಬೋಧೇನ ದೃಷ್ಟಂ ವೇದಾರ್ಥಸಂಯುತಂ ।**
**ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಮ್ ॥**

**-ನಾರಾಯಣಾಷ್ಟಾಕ್ಷರಕಲ್ಪ**

**ಬ್ರಹ್ಮಾऽಪಿ ತನ್ನ ಜಾನಾತಿ ಈಷತ್ ಸರ್ವೋऽಪಿ ಜಾನತೇ ।** **- ಉಪನಾರದೀಯ**

**ದಶಾವತಾರಾರ್ಥಂ ಸರ್ವತ್ರ ಕೇವಲ ವಿಷ್ಣುಬೋಧಕಮ್ ॥** **- ಸ್ಕಾಂದೇ**

೩. ಗೀತಾಭಾಷ್ಯದಲ್ಲಿ ಅಶ್ವಮೇಧಿಕಪರ್ವದಲ್ಲಿ ಬರುವ ಅನುಗೀತಾಪರ್ವದಲ್ಲಿ ಬ್ರಾಹ್ಮಣನು ಅರ್ಜುನನಿಗೆ ಉಪದೇಶ ಮಾಡುತ್ತಾನೆ. ಅದು ಗೀತಾಸಾರ. ಉಪದೇಶ ಮಾಡಿದ್ದು ಕೂಡಾ ಬ್ರಾಹ್ಮಣರೂಪಿ ಕೃಷ್ಣ ಎಂದು ಆಮೇಲೆ ಗೊತ್ತಾಗುತ್ತದೆ. ಭಗವದ್ಗೀತೆ ಬಗ್ಗೆ ಕೃಷ್ಣನು ಗೀತೆಯು ಬ್ರಹ್ಮಸ್ವರೂಪ ತಿಳಿಯಲು – '**ಸಹಿಧರ್ಮಃಸುಪರ್ಯಾಪ್ತಃಬ್ರಹ್ಮಣಃಪದವೇದನೇ**' ಎನ್ನುತ್ತಾನೆ ಶ್ರೀಕೃಷ್ಣ. ಆದರೂ ಅನುಗೀತೆ ಮೂಲಕ ಮತ್ತೆ ಉಪದೇಶ ನೀಡುತ್ತಾನೆ.

ಹೀಗೆ ಆಚಾರ್ಯರು ಭಾರತ ಹಾಗೂ ಗೀತೆಗಳ ಮೂಲಕ ಅದರ ಮಹತ್ತ್ವ ಸಾರುತ್ತಾರೆ. ಅದು ಉಪಾಖ್ಯಾನಗಳಿಗೂ ನೇರವಾಗಿ ಅನ್ವಯಿಸುತ್ತದೆ.

## ೨೧. ಆಚಾರ್ಯರು ಉಲ್ಲೇಖಿಸಿರುವ ಕೆಲವು ಉಪಾಖ್ಯಾನಗಳು (ಮ.ತಾ.ನಿ.ಯಲ್ಲಿ)

| ಸಂ. | ಉಪಾಖ್ಯಾನ | ಅಧ್ಯಾಯ |
|---|---|---|
| ೧ | ರಾಮೋಪಾಖ್ಯಾನ | ೩-೯ |
| ೨ | ವೇದವ್ಯಾಸರ-ಶುಕಾಚಾರ್ಯರ ಕಥೆಗಳು (ಶಾಂತಿಪರ್ವ) | ೧೦ |
| ೩ | ಚಂದ್ರ-ಬುಧ-ಯಯಾತಿ-ನಹುಷ -ಶಂತನು-ಚಿತ್ರಾಂಗದ ಇತ್ಯಾದಿ | ೧೦,೧೧ |
| ೪ | ದ್ರೌಪದೀ ಪಂಚಪತಿತ್ವ - ಪಂಚೇಂದ್ರೋಪಾಖ್ಯಾನ | ೧೮/೧೦೮-೧೫೨<br>೧೧/೧೩೪,೧೩೫ |
| ೫ | ಸಾಲ್ವವಧೋಪಾಖ್ಯಾನ | ೨೨/೪೧-೫೨ |
| ೬ | ಮಾರ್ಕಂಡೇಯ ಸಮಾಸ್ಯಾ ಪರ್ವ ರಾಮೋಪಾಖ್ಯಾನ ಇತ್ಯಾದಿ | ೨೨/೩೬೪-೩೬೭ |
| ೭ | ತ್ರಿಪುರಾಸುರ ವಧೋಪಾಖ್ಯಾನ ಇತ್ಯಾದಿ | ೨೭/೨೪-೩೨ |
| ೮ | ಅನುಗೀತಾ-ಉಪದೇಶ- ಅನುಗೀತಾಪರ್ವ | ೩೦/೫೮-೭೦ |
| ೯ | ಉತ್ತಂಕ ಕಥೆ | ೩೦/೮೬-೮೭ |
| ೧೦ | ನಕುಲೋಪಾಖ್ಯಾನ | ೩೦/೧೫೭-೧೭೭ |
| ೧೧ | ಮರುತ್ತನ ಚರಿತೆ | ೩೦/೭೫-೮೫ |
| ೧೨ | ಕೌಶಿಕ-ವ್ಯಾಧರ ಕಥೆಗಳು (ಕರ್ಣಪರ್ವ) | ೨೭/೧೧೩-೧೩೩ |

ಇವೇ ಮೊದಲಾದ ನಿರ್ಣಯದ ಭಾಗಗಳಲ್ಲಿ ಆಚಾರ್ಯರು ಭಾರತದಲ್ಲಿ ಬಂದಿರುವ ಉಪಾಖ್ಯಾನಗಳನ್ನು ಸೂಕ್ಷ್ಮವಾಗಿ, ನಿರ್ಣಯಾತ್ಮಕವಾಗಿ ಉಲ್ಲೇಖಿಸಿದ್ದಾರೆ.

## ೨೨. ಮಹಾಭಾರತ ಮತ್ತು ಲಕ್ಷಾಲಂಕಾರ

ಮಹಾಭಾರತವನ್ನು ಅರ್ಥಮಾಡಕೊಳ್ಳುವುದು ಸುಲಭದ ಮಾತಲ್ಲ. ಅದಕ್ಕೆ ನಿಜವಾದ ಅಧಿಕಾರ, ಸಕಲ ಶಾಸ್ತ್ರ ಅಧ್ಯಯನ ಮಾಡಿದವರೇ ಎಂದರೆ ವೇದ, ವೇದಾಂಗ, ಪುರಾಣೇತಿಹಾಸಗಳನ್ನು ಬಲ್ಲವರಾಗಿರಬೇಕು. ನನ್ನಂತಹವರು ಇಲ್ಲಿ ಸುತರಾಂ ಅಧಿ ಕಾರಿಯಾಗಲಾರರು. ಅದರೆ ಹರಿಗುರುಭಕ್ತಿ, ಮಹಾಭಾರತಾದಿ ಸರ್ವಮೂಲಗಳನ್ನು ಕೈಯಲ್ಲಿ ಹಿಡಿದುಕೊಂಡ ಮಗುವಿಗೆ ವ್ಯಾಸರು ಒಳಗೆ ನಿಂತು ನಮ್ಮ ಯೋಗ್ಯತೆಗೆ ತಕ್ಕಂತೆ ಸೇವೆ ತೆಗೆದುಕೊಳ್ಳುತ್ತಾರೆಂಬ ವಿಶ್ವಾಸದಿಂದ ಇದಕ್ಕೆ ಪ್ರವೃತ್ತನಾಗಿದ್ದೇನೆ. ಇದಕ್ಕೆ ನೇರವಾಗಿ ಶ್ರೀವಾದಿರಾಜ ಗುರುರಾಜರ ಲಕ್ಷಾಲಂಕಾರವಿದೆ. ನಾನು ಹಿಂದೆ ಆದಿಪರ್ವದ ಉಪಾಖ್ಯಾನಗಳನ್ನು ಪ್ರಕಟಿಸಿದಾಗಲೂ, ಅಲ್ಲಲ್ಲಿ ಲಕ್ಷಾಲಂಕಾರ ನೋಡಿ ಉಲ್ಲೇಖಿಸಿದ್ದೆ. ಈಗ ಎಲ್ಲ ಮುಗಿಯುವ ಹೊತ್ತಿಗೆ ಕೂಡಾ ಲಕ್ಷಾಲಂಕಾರವನ್ನು ನೋಡುವುದನ್ನು ಬಿಟ್ಟಿಲ್ಲ.

ಎಲ್ಲ ಉಪಾಖ್ಯಾನಗಳಿಗೆ ಇರುವ ಲಕ್ಷಾಲಂಕಾರದ ಭಾಗವನ್ನು ನೋಡುವುದು ನನ್ನದೇ ಇತಿಮಿತಿಗಳಿಂದಾಗಿ ಸಾಧ್ಯವಾಗಿಲ್ಲ. ಆದರೂ ಅಲ್ಲೊಂದು, ಇಲ್ಲೊಂದು ನೋಡಿ ದಾಖಲಿಸಿ, ಸಮುದ್ರಸ್ನಾನಮಾಡಿದಂತೆಸಂಭ್ರಮಿಸಿದ್ದೇನೆ(ಶ್ರೀವಾದೀಂದ್ರತೀರ್ಥರಗುರುಗುಣಸ್ತವನ-ದಲ್ಲಿ 'ಉದಧಿಸ್ನಾನ ಸಂಕಲ್ಪವತ್ ಸಾ' ಎಂದು ಹೇಳಿದಂತೆ). ಲಕ್ಷಾಲಂಕಾರವಾದರೂ ಪೂರ್ಣ ಅರ್ಥವಾಗದು. ಅದು ತುಂಬಾ ಪ್ರೌಢ ಭಾಷೆಯಲ್ಲಿದೆ. ವಿಮರ್ಶೆಯ ಮಾನದಂಡಗಳಿವೆ. ಆದ್ದರಿಂದ ಲಕ್ಷಾಲಂಕಾರದಲ್ಲಿನ ಕೆಲ ಶಬ್ದಗಳನ್ನಾದರೂ ದಾಖಲಿಸಿ, ನಾನೂ ಆ ಪವಿತ್ರಕಾರ್ಯದಲ್ಲಿ ಕೈಹಾಕಿರುವ ಅಭಿಮಾನಿಯಾಗಲು ಇಚ್ಛಿಸುತ್ತೇನೆ. ಕೇವಲ ಉಪಾಖ್ಯಾನಗಳಲ್ಲಿ ಬಂದಿರುವ ಲಕ್ಷಾಲಂಕಾರದ ಶಬ್ದಾರ್ಥಗಳನ್ನು ಗಮನಿಸಿದರೂ ಒಂದು ಮಹಾಪ್ರಬಂಧ (Ph.D Thesis) ಬರೆಯಬಹುದೆಂಬ ವಿಸ್ತೃತಕಲ್ಪನೆ ನನಗಿದೆ. ಆದರೆ ಅದು ಕಾರ್ಯಸಾಧ್ಯವಲ್ಲವೆಂಬ ನನ್ನದೇ ಇತಿಮಿತಿಗಳಿಂದಾಗಿ ಅಲ್ಲೊಂದು, ಇಲ್ಲೊಂದು ಉದಾಹರಿಸಿ, ಲಕ್ಷಾಲಂಕಾರಕಾರರ ಅನುಗ್ರಹವನ್ನು ಬಯಸುತ್ತೇನೆ, ಪ್ರಾರ್ಥಿಸುತ್ತೇನೆ. ಕೆಲವು ಪ್ರಮುಖ ಉಪಾಖ್ಯಾನಗಳಲ್ಲಿ ಎಷ್ಟು ಶಬ್ದಗಳಿಗೆ ಅರ್ಥ ಬರೆದಿದ್ದಾರೆ ಎಂಬುದನ್ನು ನೋಡಬಹುದು. ಪರಿಶಿಷ್ಟದಲ್ಲಿ ೫೦ ಪ್ರಸಂಗಗಳನ್ನು ಉಲ್ಲೇಖಿಸಿದ ವಿವರಗಳಿವೆ.

## ೨೩. ಸಂದೇಶಗಳು

ಬರೀಉಪಾಖ್ಯಾನಗಳನ್ನುತಿಳಿದರೆಮಾತ್ರಸಾಲದು. ಅವುಗಳಪರಿಣಾಮಗಳುಏನೆಂದು ತಿಳಿಯಲು ಪ್ರಯತ್ನಿಸಬೇಕು. ಇವೇ ಸಂದೇಶಗಳು.

ನನ್ನ ೫೦ನೇ ವರ್ಷದ ಸಂದರ್ಭದಲ್ಲಿ ವೇದಗರ್ಭಪ್ರಕಾಶನದಿಂದ ಕೇವಲ ಆದಿಪರ್ವದ ಕಥೆಗಳನ್ನು, ಉಪಾಖ್ಯಾನಗಳನ್ನು ಪ್ರಕಾಶನಗೊಳಿಸಲಾಗಿತ್ತು (೧೯೯೬). ಅದಕ್ಕೆ ಕೀರ್ತಿಶೇಷರಾದ ಪರಮಪೂಜ್ಯ ಶ್ರೀ ಶ್ರೀ ೧೦೦೮ ಶ್ರೀವಿದ್ಯಾಮಾನ್ಯತೀರ್ಥರು ಅನುಗ್ರಹ-ಸಂದೇಶ ದಯಪಾಲಿಸಿದ್ದರು. ಎನ್. ಆರ್. ಕಾಲೋನಿಯ ಶ್ರೀರಾಘವೇಂದ್ರಸ್ವಾಮಿಗಳ ಮಠದಲ್ಲಿ ಆಗ ಪ್ರವಚನ ನೀಡುತ್ತಿದ್ದ ಪರಮಪೂಜ್ಯ ಕೀರ್ತಿಶೇಷರಾದ ಶ್ರೀ ಶ್ರೀ ೧೦೦೮ ಶ್ರೀ ವಿಶ್ವೇಶತೀರ್ಥರು ಆ ಪುಸ್ತಕವನ್ನು ಬಿಡುಗಡೆಗೊಳಿಸಿದ್ದರು. ಆದಿಪರ್ವದ ಕಥೆಗಳಿಗೆ ಸಂದೇಶಗಳನ್ನು ಬರೆಯಲು ಪ್ರೇರಣೆ ಮಾಡಿದವರು ಪೂಜ್ಯ ವಿದ್ವಾನ್ ಶ್ರೀಹರಿದಾಸಭಟ್ಟರು.

ಈಗಲೂಕೂಡಾಆಪ್ರೇರಣೆಯಮುಂದಿನಭಾಗವಾಗಿಯೇಸಮಗ್ರಭಾರತದಪ್ರಾಯಃ ಎಲ್ಲಉಪಾಖ್ಯಾನಗಳನ್ನುಸಂಗ್ರಹಿಸಿ, ಅನುವಾದಿಸಿ, ಸಂದೇಶಗಳನ್ನೂಬರೆಯಲಾಗಿದೆ. ಎಲ್ಲ ಸಂದೇಶಗಳುಸೇರಿದರೆಸಾವಿರಾರುಆಗುತ್ತವೆ. ಅವುಗಳಲ್ಲಿಅನೇಕಸಂದೇಶಗಳುಬಂದುದವೇ ಆಗಿರುತ್ತವೆ (Repeat ಆಗುತ್ತವೆ). ಎಲ್ಲವನ್ನೂ ಸೇರಿಸಿ ವಿಶ್ಲೇಷಿಸಿ, ಭಟ್ಟಿ ಇಳಿಸಿದರೆ ಜೀವನದ ಮಾರ್ಗದರ್ಶಕ ಸೂತ್ರಗಳೇ ಬರುತ್ತವೆ. ಇವು ನಮಗೆ ದಾರಿದೀಪವಾಗಬೇಕು. ಆದ್ದರಿಂದ

ಈ ಉಪಾಖ್ಯಾನದ ಜ್ಞಾನಕಾರ್ಯದ ಹಿಂದೆ ಪರಮಪೂಜ್ಯ ಕೀರ್ತಿಶೇಷರಾದ ಉಭಯ ಶ್ರೀಪಾದರ ರಕ್ಷೆ ಇದೆ. ಈ ವಿಷಯವನ್ನು ಅನೇಕಕಡೆ ತಿಳಿಸಿ ಅವರ ಆಶೀರ್ವಾದಗಳನ್ನು ಹೊಂದಿರುವುದರಿಂದ ಮುಗಿದಿದೆ.

ಈ ಭಾರತವನ್ನು ಓದಿದಂತೆಲ್ಲ ಭಾವುಕರಾಗುತ್ತೇವೆ. ಅಲ್ಲಿನ ಸಂದೇಶಗಳು ನಮ್ಮನ್ನು ಆತ್ಮನಿರೀಕ್ಷಣೆಗೆ ಗುರಿ ಮಾಡುತ್ತವೆ. ಆಗ ನಮ್ಮ ಸಾಧನೆ ಏನೆಂದು ಪ್ರಶ್ನಿಸಿಕೊಂಡಾಗ ನಮ್ಮ ಅರಿವು ನಮಗಾಗುತ್ತದೆ. ಭಾರತಾದಿಶಾಸ್ತ್ರಗಳು ನಿರೀಕ್ಷಿಸುವ ಆದರ್ಶ ಜೀವನವನ್ನು ಜನ್ಮಜನ್ಮದಲ್ಲಿ ಹೊಂದಲು ಶ್ರೀವೇದವ್ಯಾಸರು ಮಧ್ವಮುನಿಗಳು ನಂತರ ಬಂದ ಮಹಾತ್ಮರು ಅನುಗ್ರಹಿಸಲಿ, ಕರುಣಿಸಲಿ ಎಂದು ಪ್ರಾರ್ಥಿಸೋಣ.

ಈ ಹೊತ್ತಿಗೆಯನ್ನು ಖುದ್ದಾಗಿ ನೋಡಿ, ತಮ್ಮ ಅಮೃತಾಕ್ಷರ, ಅನುಗ್ರಹವನ್ನು ನೀಡಿರುವ ಪರಮಪೂಜ್ಯ ಶ್ರೀ ೧೦೮ ಶ್ರೀಸತ್ಯಾತ್ಮತೀರ್ಥಶ್ರೀಪಾದರು, ಪರಮಪೂಜ್ಯ ಶ್ರೀ ೧೦೮ ಶ್ರೀ ವಿದ್ಯೇಶತೀರ್ಥಶ್ರೀಪಾದರು, ಪರಮಪೂಜ್ಯ ಶ್ರೀ ೧೦೮ ಶ್ರೀವಿಶ್ವಪ್ರಸನ್ನತೀರ್ಥಶ್ರೀಪಾದರ ಪಾದಕಮಲಗಳಲ್ಲಿ ನನ್ನ ಅನಂತ ಸಾಷ್ಟಾಂಗ ನಮಸ್ಕಾರಗಳು. ಅಲ್ಲದೆ ಪರಮಪೂಜ್ಯ ಶ್ರೀಶ್ರೀ ಸುವಿದ್ಯೇಂದ್ರತೀರ್ಥರೂ ತುಂಬಾ ಸಂತೃಪ್ತಿಯಿಂದ ನೋಡಿ ಅನುಗ್ರಹಿಸಿದ್ದಾರೆ. ಡಾ. ಶ್ರೀನಿವಾಸವರಖೇಡಿ ಮತ್ತು ಪೂಜ್ಯ ಸತ್ಯನಾರಾಯಣಾಚಾರ್ಯರೂ ಇದನ್ನು ನೋಡಿ ತಮ್ಮ ಸಂತೋಷ ವ್ಯಕ್ತಪಡಿಸಿ ಆಶೀರ್ವದಿಸಿದ್ದಾರೆ.

ನನ್ನ ವೈಯಕ್ತಿಕ ಸಾಧನೆಯನ್ನು ಪರಾಮರ್ಶಿಸಲಾಗಿ ನನ್ನ ಸಾಧನೆ ಶೂನ್ಯವೆನಿಸುತ್ತದೆ. ಅದು ಮುಂದಿನ ಜನ್ಮದಿಂದಾದರೂ ಪ್ರಗತಿ ಕಾಣಲು ಹರಿಗುರುಗಳು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ. ಓದುಗರೂ ನನ್ನನ್ನು ಆಶೀರ್ವದಿಸಲು ಕೋರುತ್ತೇನೆ.

## ೨೪. ಪ್ರಕೃತ ಕೃತಿಯ ಬಗ್ಗೆ

ನಾನು ಬೆಂಗಳೂರಿಗೆ ಬಂದಾಗ (೧೯೮೭ರಿಂದ) ಅನೇಕ ಮಾಧ್ವಸಂಘ ಹಾಗೂ ರಾಯರಮಠಗಳಲ್ಲಿ ಉಪನ್ಯಾಸ ಮಾಡುವ ಯೋಗ ಸಿಕ್ಕಿತ್ತು. ನಾನು ಆಗ ಆರಿಸಿಕೊಂಡ ವಿಷಯಗಳಲ್ಲಿ ಉಪಾಖ್ಯಾನಗಳು ಪ್ರಧಾನವಾಗಿತ್ತು. ಕಾರಣ ಈ ವಿಷಯಗಳಿಗೆ ಹೆಚ್ಚಾಗಿ ಪ್ರಾಶಸ್ತ್ಯವಿರಲಿಲ್ಲ. ಆದ್ದರಿಂದ ನನಗೆ ಉಪಾನ್ಯಾಸದ ವಿಷಯ ಸ್ವಾತಂತ್ರ್ಯ ಇದ್ದಾಗ ಈ ವಿಷಯವನ್ನು ಆರಿಸಿಕೊಂಡ ಫಲವಾಗಿ ಬೆಂಗಳೂರಿನ ಮತ್ತಿಕೆರೆ ಮಾಧ್ವಸಂಘ, ಶ್ರೀನಿವಾಸನಗರ ಮಾಧ್ವಸಂಘಗಳಲ್ಲಿ ಈ ವಿಷಯಗಳನ್ನು ಪ್ರಾಯೋಗಿಕವಾಗಿ ಉಪನ್ಯಾಸ ನೀಡಿದೆ. ಪ್ರಾಯಃ ಮಹಾಭಾರತದ ಎಲ್ಲ ಉಪಾಖ್ಯಾನಗಳನ್ನು ಉಪನ್ಯಾಸರೂಪದಲ್ಲಿ ನಿರೂಪಿಸಿದೆ. ಎನ್.ಆರ್. ಕಾಲೋನಿ ರಾಯರಮಠದಲ್ಲಿ ಆರಣ್ಯಪರ್ವದವರೆಗೆ ಮಾತ್ರ ಸಾಧ್ಯವಾಯಿತು.

ಮುಂದೆ ಈ ಉಪಾಖ್ಯಾನಗಳನ್ನು ಕಪ್ಪು-ಬಿಳುಪಾಗಿ ಮಾಡುವ ಪ್ರಯತ್ನ ಮಾಡಿದಾಗ ಮುಖ್ಯಪ್ರಾಣಪತ್ರಿಕೆ ಇವನ್ನು ಪ್ರಕಟಿಸಲು ಮುಂದೆ ಬಂದಿತು. ೧೯೯೫-೧೯೯೬ ರಲ್ಲಿ

ಆದಿಪರ್ವ ಪ್ರಕಟವಾಗಿತ್ತು. ಆದ್ದರಿಂದ ಸಭಾಪರ್ವದಿಂದ ಉದ್ಯೋಗಪರ್ವದವರೆಗೆ ಮುಖ್ಯಪ್ರಾಣ ಪತ್ರಿಕೆಯಲ್ಲಿ ೨೦೧೧ರಿಂದ ೨೦೧೮ರವರೆಗೆ ಪ್ರಕಟವಾಯಿತು. ನಂತರ ಉಳಿದ ದ್ರೋಣ ಪರ್ವದಿಂದ ಸ್ವರ್ಗಾರೋಹಣ ಪರ್ವದವರೆಗೆ ನಮ್ಮ ಪ್ರಕಾಶನವು ಹಿಂದಿನದೆಲ್ಲವನ್ನೂ ಸೇರಿಸಿ, ಈಗ ಪ್ರಕಾಶನವಾಗುತ್ತಿದೆ. ಆದರೂ ಎಲ್ಲ ಉಪಾಖ್ಯಾನಗಳೂ ಪೂರ್ತಿಯಾಗಿ ಬಂದಿಲ್ಲ. ಅಲ್ಲೊಂದು, ಇಲ್ಲೊಂದು ಬಿಟ್ಟು ಹೋಗಿದೆ. ಅವುಗಳನ್ನು ಮುಂದೆ ಪ್ರಕಟಿಸಲಾಗುವುದು.

ಪ್ರತಿಯೊಂದು ಪರ್ವದಲ್ಲಿ ಬಂದಿರುವ ಪ್ರಾಯಃ ಎಲ್ಲ ಉಪಾಖ್ಯಾನಗಳನ್ನು ಸರಳವಾಗಿ ನಿರೂಪಿಸಲು ಪ್ರಯತ್ನಿಸಲಾಗಿದೆ. ನಂತರ ಕಥಾಹಂದರಕ್ಕೆ ಬೇಕಾಗುವ ಮೂಲ ಭಾರತವಾಕ್ಯ ಹಾಗೂ ಬೇಕಾದೆಡೆ ಮಹಾಭಾತತಾತ್ಪರ್ಯನಿರ್ಣಯಗಳನ್ನೂ ಉದಾಹರಿಸಿದ್ದೇನೆ. ನಂತರ ಪ್ರತಿ ಉಪಾಖ್ಯಾನದ ಸಂದೇಶಗಳನ್ನು ಕೊಡಲಾಗಿದೆ. ಇದರಿಂದ ಎಲ್ಲ ಪ್ರಕಾರದ ಓದುಗರು, ಮಹಿಳೆಯರು, ವಿದ್ಯಾರ್ಥಿಗಳು, ವಿದ್ವಾಂಸರು – ಎಲ್ಲರ ಅವಶ್ಯಕತೆಗಳನ್ನು ಸಂಕ್ಷಿಪ್ತವಾಗಿ ಪೂರೈಸಲು ಪ್ರಯತ್ನಿಸಿದ್ದೇನೆ ಎಂಬ ನಂಬಿಕೆ ನನಗಿದೆ.

ಈಗಾಗಲೇ ಮೇಲೆ ತಿಳಿಸಿದಂತೆ ವಿಷಯ ತಿಳಿದ, ಬರೆದ, ಉಪನ್ಯಾಸ ಮಾಡಿದ ಮಾತ್ರದಿಂದ ನಾವು ಮೇಲೇರಲಾರೆವು. ಅವುಗಳ ಸಂದೇಶಗಳಲ್ಲಿ ಹಲವಾರು ಸಂದೇಶಗಳಾದರೂ ನಮ್ಮಲ್ಲಿ ರಕ್ತಗತವಾಗಬೇಕು. ನಿತ್ಯ ಜೀವನದಲ್ಲಿ ಆಚರಿಸುವ ಬುದ್ಧಿ ಬರಬೇಕು. ಹಾಗೆ ನಮ್ಮ ಪ್ರಯತ್ನ ಮಾಡಲು ಶ್ರೀಹರಿವಾಯುಗುರುಗಳ ಅನುಗ್ರಹ, ಆಶೀರ್ವಾದ ಅವಶ್ಯಕ. ಅದನ್ನು ನಾನು ಬೇಡುತ್ತೇನೆ, ಪ್ರಾರ್ಥಿಸುತ್ತೇನೆ. ಓದುಗರಾದರೂ ಕೂಡಾ ಎಂದಿನಂತೆ ಈ ಹೊತ್ತಿಗೆಯನ್ನು ನೋಡಿ, ಓದಿ, ಗುಣಗಳನ್ನು ಮಾತ್ರ ತಮ್ಮ ವಿಶಾಲಬುದ್ಧಿಯಿಂದ ಪುರಸ್ಕರಿಸಲು ಕೋರುತ್ತೇನೆ. ಇದರಲ್ಲಿನ ಗುಣಗಳೆಲ್ಲ ಹರಿವಾಯುಗುರುಗಳ ಅನುಗ್ರಹ ಹಾಗೂ ಆಶೀರ್ವಾದದ ಫಲ ಎಂದೂ, ದೋಷಗಳೆಲ್ಲ ನನ್ನ ಅಲ್ಪಬುದ್ಧಿಯಿಂದ ಘಟಿಸಿವೆ ಎಂದು ಭಾವಿಸಿದ್ದೇನೆ.

ಯದ್ಯಪಿ ಇದನ್ನು ಅನೇಕ ಶ್ರೀಪಾದಂಗಳವರಿಗೆ, ಹಿರಿಯ ವಿದ್ವಾಂಸರಿಗೆ ತೋರಿಸಿ ಆಶೀರ್ವಾದ ಪಡೆಯಬೇಕೆಂಬ ಹಂಬಲ ಜಗತ್ತನ್ನೇ ತಿನ್ನುತ್ತಿರುವ ಹೆಮ್ಮಾರಿ ಕೋವಿಡ್ ನಿಂದಾಗಿ ಸಾಧ್ಯವಾಗಿಲ್ಲ. ಆದರೂ ನಾನು ಮಾಡಿದ ಕಾರ್ಯವನ್ನು ಕೆಲವರಿಗೆ ತಿಳಿಸಿದ್ದೇನೆ. ನನ್ನ ಎಲ್ಲ ಸ್ವೋತ್ತಮರಿಗೆಲ್ಲಾ ಮನಸಾ ವಂದಿಸಿ, ಗೌರವಿಸಿ, ವಿರಮಿಸುತ್ತೇನೆ.

ದಿನಾಂಕ : ೨೫-೦೮-೨೦೨೧ ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯ
ಬೆಂಗಳೂರು (ಜಿ. ಶೇಷಗಿರಿರಾವ್)

# ಕೃತಜ್ಞತಾ ಸಮರ್ಪಣೆ

೧. ಈ ಪುಸ್ತಕಕ್ಕೆ ಅನುಗ್ರಹಸಂದೇಶವನ್ನು ಪ್ರಾರ್ಥಿಸಿದ್ದೆ; ಅನುಗ್ರಹಸಂದೇಶದೊಂದಿಗೆ ಶ್ರೀಮಠದ ವಿಶ್ವಮಧ್ವಮಹಾಪರಿಷತ್‌ನಿಂದ ಈ ಮಹಾಭಾರತ ಉಪಾಖ್ಯಾನಗ್ರಂಥವನ್ನು ಪ್ರಕಾಶನಗೊಳಿಸುವ ಅನುಗ್ರಹಾಮೃತಸಂದೇಶವನ್ನೂ ಅನುಗ್ರಹಿಸಿದ ಶ್ರೀಮತ್ಪರಮಪೂಜ್ಯ ಗುರುಗಳಾದ **ಶ್ರೀಶ್ರೀ ೧೦೦೦೮ ಶ್ರೀಸತ್ಯಾತ್ಮತೀರ್ಥಶ್ರೀಪಾದರು**, ಉತ್ತರಾದಿಮಠಾಧೀಶರಿಗೆ ನನ್ನ ಅನಂತಸಾಷ್ಟಾಂಗ ಪ್ರಣಾಮಗಳು.

೨. ಮೇಲಿನವಿಷಯನನ್ನಿಂದಕೇಳಿತಿಳಿದಕೂಡಲೇತುಂಬಾಸಂತೋಷ, ಸಂಭ್ರಮಗಳನ್ನು ಪ್ರಕಟಪಡಿಸಿ, ತಾವುನನ್ನಪ್ರಾರ್ಥನೆಯನ್ನುಮನ್ನಿಸಿ, ಅನುಗ್ರಹಸಂದೇಶವನ್ನುದಯಪಾಲಿಸಿದ ಶ್ರೀಮನ್ನ್ಯಾಯಸುಧಾ(ವಿದ್ಯಾಗುರುಗಳಾದ)ಮೃತವನ್ನು ಆರು ವರ್ಷಗಳವರೆಗೆ ಉಣಬಡಿಸಿದ ಶ್ರೀಮತ್ಪರಮಪೂಜ್ಯ **ಶ್ರೀಶ್ರೀ೧೦೦೦೮ ಶ್ರೀವಿದ್ಯೇಶತೀರ್ಥಶ್ರೀಪಾದರು**, ಭಂಡಾರಕೆರೆ ಮಠ ಇವರಿಗೆ ಅನಂತ ಸಾಷ್ಟಾಂಗ ಪ್ರಣಾಮಗಳು.

೩. ಪ್ರಾರ್ಥಿಸಿದ ಕೂಡಲೇ ಅನುಗ್ರಹಸಂದೇಶ ನೀಡಿದ ನಾಲ್ಕು ವೇದಗಳ ಆದ್ಯಂತ ಸೂಕ್ತಗಳನ್ನು (ಈ ಹಿಂದೆ ಉಪದೇಶಿಸಿದ್ದ) ಶ್ರೀಮತ್ಪರಮಪೂಜ್ಯ ಗುರುಗಳಾದ ಶ್ರೀಪೇಜಾವರಮಠಾಧೀಶರಾದ **ಶ್ರೀ ೧೦೦೦೮ ಶ್ರೀವಿಶ್ವಪ್ರಸನ್ನತೀರ್ಥಶ್ರೀಪಾದರಿಗೆ** ಅನಂತಸಾಷ್ಟಾಂಗ ಪ್ರಣಾಮಗಳು.

೪. ಗ್ರಂಥವನ್ನು ಪರಿಶೀಲಿಸಿ ಪ್ರೋತ್ಸಾಹ ನೀಡಿದ, ವಿಶ್ವಮಧ್ವಮಹಾಪರಿಷತ್, ಸಂಶೋಧನವಿಭಾಗದಮುಖ್ಯಸ್ಥರಾದಮತ್ತುಶ್ರೀಸುಧಾಪತ್ರಿಕೆಯಪ್ರಧಾನಸಂಪಾದಕರಾದ ಪೂಜ್ಯ **ವಿದ್ವಾನ್ ಶ್ರೀವಿದ್ಯಾಧೀಶಾಚಾರ್ಯರಿಗೆ** ಅನೇಕ ಸಾಷ್ಟಾಂಗ ಪ್ರಣಾಮಗಳು.

೫. ಗ್ರಂಥವನ್ನು ಪರಿಶೀಲಿಸಿ ಪ್ರೋತ್ಸಾಹದಾಯಕವಾದ ಆಶೀರ್ವಚನವನ್ನು ನೀಡಿದ ಪೂಜ್ಯ **ಡಾ. ಶ್ರೀನಿವಾಸ ವರಖೇಡಿ**, ಕುಲಪತಿ, ಕವಿಕುಲಗುರು ಕಾಳಿದಾಸ ಸಂಸ್ಕೃತ ವಿಶ್ವವಿದ್ಯಾಲಯ, ನಾಗಪುರ ಇವರಿಗೆ ಅನೇಕ ಸಾಷ್ಟಾಂಗ ಪ್ರಣಾಮಗಳು.

೬. ಗ್ರಂಥವನ್ನು ಆಗಾಗ್ಗೆ ಪರಿಶೀಲಿಸಿ ಮಾರ್ಗದರ್ಶನ ನೀಡಿದ ಡಾ. **ಸತ್ಯನಾರಾಯಣಾಚಾರ್ಯರು**, ಪ್ರಾಂಶುಪಾಲರು, ಪೂರ್ಣಪ್ರಜ್ಞವಿದ್ಯಾಪೀಠ ಇವರಿಗೆ ಅನೇಕ ಸಾಷ್ಟಾಂಗ ಪ್ರಣಾಮಗಳು.

೭. ತಮ್ಮ ಮಾಸಪತ್ರಿಕೆಯಲ್ಲಿ ಸಭಾಪರ್ವದಿಂದ ಉದ್ಯೋಗಪರ್ವದವರೆಗೆ ಲೇಖನಗಳ ಮೂಲಕ ಪ್ರಕಟಿಸಿದ ೧. **ಶ್ರೀವಿಶ್ವನಾಥ**, ಸಂಪಾದಕರು, ಮುಖ್ಯಪ್ರಾಣ ಪತ್ರಿಕೆ ಇವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತಾಪೂರ್ವಕ ನಮನಗಳು.

೮. ನನ್ನಲ್ಲಿ ಮಧ್ವವಿಜಯದಿಂದ ಸರ್ವಮೂಲದ ಬಹುತೇಕ ಗ್ರಂಥಗಳ ಪಾಠ, ಶ್ರವಣ ಮಾಡಿದ ನಮ್ಮ ಪ್ರಕಾಶನದ ಆದರದ ಅಭಿಮಾನಿಗಳಾದ **ದಿ. ಆನಂದರಾವ್** ಇವರಿಗೆ ನನ್ನ ಕೃತಜ್ಞತೆಗಳು. ಇವರ ಪತ್ನಿ ಹಾಗೂ ಕತ್ರಿಗುಪ್ಪೆಯಲ್ಲಿರುವ ಮ.ಶಾ.ಸಂ. ಸನ್ಮಾನ್ಯ **ಶ್ರೀ ಎಚ್. ಪಿ. ನರಸಿಂಹಮೂರ್ತಿ**ಯವರ ಧರ್ಮಪತ್ನಿ **ದಿ. ಶ್ರೀಮತಿ ಹೇಮಲತಾ** ಈ ಮೂವರು ಇತ್ತೀಚಿಗೆ ನಿಧನರಾಗಿದ್ದು, ನಮ್ಮ ಪ್ರಕಾಶನದ ಅಭಿಮಾನಿಗಳೂ ಆಗಿದ್ದಾರೆ. ಶ್ರೀಮತಿ ಹೇಮಲತಾ ಇವರ ಪತಿಯಾದ **ಶ್ರೀ ಎಚ್. ಪಿ. ನರಸಿಂಹಮೂರ್ತಿ**ಯವರೂ ನನ್ನ ಬಳಿ ದಿ. ಆನಂದರಾಯರಂತೆ ಸರ್ವಮೂಲಗ್ರಂಥಗಳನ್ನು ಶ್ರವಣ ಮಾಡಿದ್ದು, ಇಂದಿಗೂ ಸರ್ವಮೂಲಗ್ರಂಥಗಳ ಪಾರಾಯಣ ನಿರತರಾಗಿದ್ದಾರೆ. ಇವರಿಗೆ ತಮ್ಮ ಪತ್ನಿಯ ದುಃಖ ಭರಿಸಲು ಶಕ್ತಿಯನ್ನು ಶ್ರೀಹರಿವಾಯುಗುರುಗಳು ಅನುಗ್ರಹಿಸಲಿ.

೯. ಶ್ರೀವೇದವ್ಯಾಸದೇವರ ಅಂತರಂಗಭಕ್ತರೊಬ್ಬರ (ಹೆಸರು ಬಯಸದವರು) ಅವಿರತ ಪರಿಶ್ರಮದಿಂದ ಈ ಗ್ರಂಥದ ಡಿ.ಟಿ.ಪಿ. ಕಾರ್ಯವಾಗಿದೆ. ಅವರಿಗೆ ನನ್ನ ಅನೇಕ ನಮನಗಳು.

೧೦. ಇಂತಹ ಬೃಹತ್ ಜ್ಞಾನಕಾರ್ಯದ ಯಶಸ್ಸಿನ ಹಿಂದೆ ಮನೆಯ ಎಲ್ಲ ಸದಸ್ಯರ ಸಹಕಾರವಿಲ್ಲದೆ ಸಾಧ್ಯವೇ ಇಲ್ಲ. ವಿಶೇಷವಾಗಿ ಧರ್ಮಕಾರ್ಯಗಳನ್ನು ಅತ್ಯಂತ ಶ್ರದ್ಧಾಭಕ್ತಿಗಳಿಂದ ಜೀವನದುದ್ದಕ್ಕೂ ಮಾಡುತ್ತಾ, ಮನೆಯವರಿಂದ ಮಾಡಿಸುತ್ತಾ ಇರುವ ಧರ್ಮಪತ್ನಿ **ಕು.ಸೌ. ಸುಧಾ**ಳ ಸಹಕಾರ, ಪ್ರೋತ್ಸಾಹ ಅವಿಸ್ಮರಣೀಯ. ಅವರಿಗೆ ಹಾಗೂ ಇತರ ಎಲ್ಲ ಕುಟುಂಬದ ಸದಸ್ಯರಿಗೆ ಅನೇಕ ಆಶೀರ್ವಾದಗಳು.

೧೧. ನನ್ನ ಜ್ಞಾನಕಾರ್ಯಕ್ಕೆ ಸಹಕಾರ ನೀಡಿದ, ನೀಡುತ್ತಿರುವ ಎಲ್ಲ ಜಿಜ್ಞಾಸು ಓದುಗ ವರ್ಗಕ್ಕೆ ಪರೋಕ್ಷ ಹಾಗೂ ಅಪರೋಕ್ಷವಾಗಿ ನೆರವಾದ ಎಲ್ಲರಿಗೂ ಅನೇಕ ಅಭಿನಂದನೆಗಳು, ಅಭಿವಂದನೆಗಳು.

೧೨. ಅಂದವಾಗಿ ಮುದ್ರಣ ಮಾಡಿದ ವಾಗರ್ಥ ಮುದ್ರಣಾಲಯದವರಿಗೆ ಅಭಿನಂದನೆಗಳು.

೧೩. ಎಲ್ಲೋ ಇದ್ದು ನನ್ನ ಪಾಡಿಗೆ ನಾನು ಓದಿ, ಬರೆದು ಪ್ರಕಾಶನ ಮಾಡುತ್ತಿದ್ದ ಅಲ್ಪನಾದ ನನ್ನನ್ನು ಗುರುತಿಸಿ ತಮ್ಮ ಸಂಸ್ಥೆಯಿಂದ ಈ ಗ್ರಂಥವನ್ನು ಪ್ರಕಾಶನ ಮಾಡುತ್ತಿರುವ ಶ್ರೀಶ್ರೀ ೧೦೦೮ **ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ** ಪಾದಕಮಲಗಳಿಗೆ ಮತ್ತೆ ಮತ್ತೆ ಸಾಷ್ಟಾಂಗ ಪ್ರಣಾಮಗಳು. ಗುರುಗಳ ಈ ಅನುಗ್ರಹರೂಪ ಫಲವು ನನ್ನ ಜ್ಞಾನಯಜ್ಞಕ್ಕೆ ದೊರೆತ -ಅವಭೃಥ ಸ್ನಾನ ಎಂದು ಭಾವಿಸುತ್ತೇನೆ.

**ಡಾ. ವೇದಗರ್ಭ ಜಿ. ಶೇಷಗಿರಿಆಚಾರ್ಯ**

# ನಿವೇದನೆ

೧. ಕರ್ನಾಟಕದಲ್ಲಿ ಇದುವರೆಗೆ (ಸುಮಾರು ೨೦೧೪ರವರೆಗೆ) ಕನ್ನಡದಲ್ಲಿ ಮಹಾಭಾರತದ ಅನುವಾದ ಪೂರ್ತಿಯಾಗಿರಲೇ ಇಲ್ಲ. ಇದ್ದರೂ (ಭಾರತದರ್ಶನಕೇಂದ್ರ, ತ್ಯಾಗರಾಜನಗರ, ಬೆಂಗಳೂರು) ಎಲ್ಲ ಶ್ಲೋಕಗಳಿಗೆ ಇರಲಿಲ್ಲ. ಆ ಕೊರತೆಯನ್ನು ನೀಗಿಸಿ ಸಮಗ್ರ ಭಾರತದ ವೈಷ್ಣವ ಪಾಠವನ್ನು ಕನ್ನಡದ ಜನತೆಗೆ ಕನ್ನಡ ಭಾಷೆಯಲ್ಲಿ ಅನುವಾದ ಮಾಡಿಸಿರುವ ಪರಮಪೂಜ್ಯ ಗುರುಗಳಾದ ಪಲಿಮಾರುಮಠದ ಶ್ರೀಪಾದರಾದ **ಶ್ರೀ ೧೦೦೮ ಶ್ರೀವಿದ್ಯಾಧೀಶತೀರ್ಥರಿಗೆ** ಅನಂತ ಸಾಷ್ಟಾಂಗ ಪ್ರಣಾಮಗಳು.

ಈ ಪಾಠ ಹಾಗೂ ಅನುವಾದವನ್ನು ನಾನು ಕೆಲವೆಡೆ ನನ್ನ ಉಪಾಖ್ಯಾನಗಳಿಗೆ ಕಠಿಣ ಸಂದರ್ಭಗಳಲ್ಲಿ ಅಳವಡಿಸಿಕೊಂಡಿದ್ದೇನೆ (ಕರ್ಣಪರ್ವದಿಂದ ಮುಂದಿನ ಪರ್ವಗಳಲ್ಲಿ). ಈ ಸಂದರ್ಭದಲ್ಲಿ ತತ್ತ್ವಸಂಶೋಧನ ಸಂಸತ್ ಪಲಿಮಾರುಮಠದ ಈ ಪ್ರಕಾಶನದಲ್ಲಿ ಬೆನ್ನೆಲುಬಾಗಿ **ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರ** ನೇತೃತ್ವದ ಎಲ್ಲ ಸಂಪಾದನ ಮಂಡಳಿಗೆ ನನ್ನ ಕೃತಜ್ಞತಾಪೂರ್ವಕ ಸಾಷ್ಟಾಂಗ ಪ್ರಣಾಮಗಳು.

೨. ಈ ಉಪಾಖ್ಯಾನಗಳನ್ನು ಮೊದಲು ನನ್ನಲ್ಲಿದ್ದ ಗೀತಾಪ್ರೆಸ್ ಪ್ರಕಾಶನವನ್ನೇ ಅನುಸರಿಸಿದ್ದೇನೆ. ಆದರೆ ದಿ. ವಿದ್ವಾನ್ ಟಿ.ಆರ್. ಕೃಷ್ಣಾಚಾರ್ಯರ ಭಂಡಾರಕರ್ ಪ್ರಾಚ್ಯ ಸಂಶೋಧನಾ ಸಂಸ್ಥೆ, ಪುಣೆ ಇವುಗಳನ್ನು ಕೂಡಾ ಗಮನಿಸಿದ್ದೇನೆ. ಅಲ್ಲಲ್ಲಿ ಅವನ್ನು ಉಲ್ಲೇಖಿಸಿದ್ದೇನೆ ಕೂಡಾ.

೩. ಒಟ್ಟಾರೆ ಯಾವುದೇ ಪ್ರಕಾಶನವಾಗಲೀ ಪೂರ್ಣತೃಪ್ತಿ ನೀಡುವ ಪಾಠವಲ್ಲವೆಂಬ ಎಲ್ಲ ಸಂಶೋಧಕ ವಿದ್ವಾಂಸರ ಅಭಿಪ್ರಾಯವು ಸತ್ಯ. ಆದ್ದರಿಂದಲೇ ಆಚಾರ್ಯರು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಇದನ್ನು ಅಂದೇ ಹೇಳಿದ್ದರು (ಪ್ರಕ್ಷಿಪ್ತಂ ಇತ್ಯಾದಿಯಾಗಿ). ಈ ಗ್ರಂಥಕ್ಕೆ ಬೇಕಾಗುವ ಅನೇಕ ಪೂರಕ ಮಾಹಿತಿಯನ್ನು ಕೊಡಬಹುದಿತ್ತು. ಅನಿವಾರ್ಯ ಕಾರಣಗಳಿಂದಾಗಿ ಕೊಡಲು ಆಗಲಿಲ್ಲ ಎಂದು ನಿವೇದಿಸಬಯಸುತ್ತೇನೆ.

೪. ನನ್ನ ನಿರೂಪಣೆಯಲ್ಲಿನ ಗುಣಾಂಶಗಳನ್ನು ಜಿಜ್ಞಾಸುಗಳು ಸ್ವೀಕರಿಸಿ, ದೋಷಗಳನ್ನು ತಿಳಿಸಬಹುದು. ತಿಳಿಸಿ ನನ್ನ ಸಾಧನೆಗೆ ನೆರವಾಗಲು ಕೋರುತ್ತೇನೆ. ಕಾರಣ 'ಗಚ್ಛತಃ ಸ್ಖಲನಂ ಭವತಿ' ಅಲ್ಲವೆ?

೫. ಉಪಾಖ್ಯಾನಗಳ ಸಂದೇಶಗಳನ್ನು ಅಳವಡಿಸಲು ಪೂಜ್ಯ **ವಿದ್ವಾನ್ ಹರಿದಾಸಭಟ್ಟರು** ಸೂಚಿಸಿದ್ದುದನ್ನು ತಪ್ಪದೆ ಅಳವಡಿಸಿದ್ದೇನೆ. ಸಂದೇಶಗಳನ್ನು ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಇತರೆ ಸರ್ವಮೂಲಗ್ರಂಥಗಳ ಆಧಾರದಲ್ಲಿ ರೂಪಿಸಲಾಗಿದೆ. ಈ ಕಾರ್ಯದ ಹಿಂದೆ ಪೂಜ್ಯ **ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರಲ್ಲಿ** ನಾನು ಮಾಡಿದ ತಾತ್ಪರ್ಯನಿರ್ಣಯ ಮೊದಲಾದ ಸರ್ವಮೂಲಗ್ರಂಥಗಳ ಶ್ರವಣದ ಹಿನ್ನೆಲೆಯು ಇದೆ. ಈ ಈರ್ವರು ವಿದ್ವಾಂಸರನ್ನು ಕೃತಜ್ಞತೆಯಿಂದ ಸ್ಮರಿಸುತ್ತಾ ಅನೇಕ ಸಾಷ್ಟಾಂಗ ಪ್ರಣಾಮಗಳನ್ನು ಅವರಿಗೆ ಸಲ್ಲಿಸುತ್ತೇನೆ.

೬. ಈ ಸಮಗ್ರ ಜ್ಞಾನಕಾರ್ಯವೆಲ್ಲವನ್ನು ಮತ್ತೊಮ್ಮೆ ಅಸ್ಮದ್ಗುರ್ವಂತರ್ಗತ ಸಕಲ ಸ್ವೋತ್ತಮಗುರ್ವಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀರಾಮಕೃಷ್ಣವೇದ-ವ್ಯಾಸನರಹಯಾತ್ಮಕ ಶ್ರೀಲಕ್ಷ್ಮೀಹಯಗ್ರೀವ ದೇವರಿಗೆ ಸಮರ್ಪಿಸುತ್ತೇನೆ.

– ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯ

## ಪ್ರಕಾಶಕರ ನುಡಿ

ಶ್ರೀಮದುತ್ತರಾದಿಮಠಾಧೀಶರಾದ ಶ್ರೀ1008ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಮಹದಪೇಕ್ಷೆಯಂತೆ, ಪ್ರಾಚೀನ ಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ1008ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ **ವಿಶ್ವ ಮಧ್ವ ಮಹಾಪರಿಷತ್**

ಸಂಸ್ಥೆಯ ಉದ್ದೇಶದಂತೆಯೇ ವಿಸ್ತೃತ ಗ್ರಂಥಾಲಯದ ಯೋಜನೆ ನಡೆಯುತ್ತಿದ್ದು, ಪ್ರಾಚೀನ ತಾಳೆಗರಿ ಗ್ರಂಥಗಳ, ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣಾ ಕಾರ್ಯಗಳು ಪ್ರಗತಿಯಲ್ಲಿವೆ. ಮತ್ತು ಗ್ರಂಥಗಳ ಪ್ರಕಾಶನ ಕಾರ್ಯವೂ ಹೆಚ್ಚು ಕ್ರಿಯಾಶೀಲವಾಗಿದ್ದು, ಈಗಾಗಲೇ ಸಂಸ್ಕೃತ-ಕನ್ನಡ-ತೆಲುಗು-ಹಿಂದಿ-ಮರಾಠಿ-ತಮಿಳು-ಆಂಗ್ಲ ಭಾಷೆಗಳಲ್ಲಿ ಅನೇಕ ಪುಸ್ತಕಗಳು ಪ್ರಕಾಶನಗೊಂಡಿವೆ.

ಪ್ರಕೃತ ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯ ಇವರು ಬರೆದು ಸಂಪಾದಿಸಿದ ''**ಮಹಾಭಾರತದ ಉಪಾಖ್ಯಾನಗಳು**'' (2 ಸಂಪುಟಗಳಲ್ಲಿ) ಎಂಬ ಇತಿಹಾಸ ಗ್ರಂಥವು ವಿಶ್ವಮಧ್ವಮಹಾಪರಿಷತ್ತಿನಿಂದ ಪ್ರಕಟವಾಗುತ್ತಿದೆ.

ಈ ಹೊತ್ತಿಗೆಯು ಎಲ್ಲರ ಮೆಚ್ಚುಗೆಗೆ ಪಾತ್ರವಾಗಲೆಂದು ಹಾರೈಸುತ್ತೇವೆ.

**ಪ್ರಧಾನ ಕಾರ್ಯದರ್ಶಿಗಳು**

**ವಿಶ್ವಮಧ್ವಮಹಾಪರಿಷತ್ ಬೆಂಗಳೂರು 4**

ಈಪುಸ್ತಕದಲ್ಲಿನಉಪಾಖ್ಯಾನಗಳೆಲ್ಲವನ್ನುಮುದ್ರಿತನಾಲ್ಕುಮಹಾಭಾರತದ ಮೂಲವನ್ನು ಅನುಸರಿಸಿ ವಿರೋಧವಿಲ್ಲದಂತೆ ಬರೆಯಲಾಗಿದೆ. ಈ ಎಲ್ಲ ಉಪಾಖ್ಯಾನಗಳ ಮೂಲಭೂತತತ್ತ್ವಗಳನ್ನು ಶ್ರೀಮದಾಚಾರ್ಯರ ಮಹಾ-ಭಾರತತಾತ್ಪರ್ಯನಿರ್ಣಯ, ಭಾಗವತತಾತ್ಪರ್ಯ ಮೊದಲಾದ ಗ್ರಂಥಗಳ ಮಾರ್ಗದರ್ಶನದಲ್ಲಿಯೇ ಅರ್ಥೈಸಿಕೊಳ್ಳಬೇಕು.

# ಆದಿಪರ್ವ

## ಗುರುಗಳ ಸೇವೆ ಮತ್ತು ಅದರ ಫಲ

### ೧. ಆರುಣಿ ಚರಿತ್ರೆ

ಅರ್ಜುನನ ಮರಿಮೊಮ್ಮಗ ಜನಮೇಜಯನ ರಾಜ್ಯಭಾರ ಕಾಲ. **ಧೌಮ್ಯ** ಋಷಿಗಳು ಪಾಂಡವರ ಪುರೋಹಿತರಾಗಿದ್ದರಷ್ಟೇ. ಅವರಿಗೆ ಮೂವರು ಶಿಷ್ಯರು (ಧೌಮ್ಯರ ಮತ್ತೊಂದು ಹೆಸರು ಆಯೋದ). ಅವರು **ಉಪಮನ್ಯು**, **ಆರುಣಿ** ಮತ್ತು **ವೇದ** (ಬೈದ) ಎಂದು.

ಧೌಮ್ಯರು ಒಮ್ಮೆ ಆರುಣಿಯನ್ನು ಕರೆದು 'ನೀನು ಕಬ್ಬಿನ ಗದ್ದೆಯಲ್ಲಿ [1]ನೀರನ್ನು ಹರಿದು ಹೋಗದಂತೆ ತಡೆ' ಎಂದು ಹೇಳಿದರು. ಪಾಂಚಾಲ ರಾಜ್ಯದ ಈ ಆರುಣಿ ಕೂಡಲೇ ಗದ್ದೆಗೆ ತೆರಳಿ ನೀರನ್ನು ತಡೆಯಲು ಪ್ರಯತ್ನಿಸಿ ವಿಫಲನಾಗಿ ಮತ್ತೆ ಯೋಚಿಸಿ ನೀರು ಹರಿದು ಹೋಗುತ್ತಿದ್ದ ಸ್ಥಳದಲ್ಲಿ ತಾನೆ ಅಡ್ಡ ಮಲಗಿದ[2]. ನೀರು ತಡೆಯಲ್ಪಟ್ಟಿತು.

ಒಮ್ಮೆ ಗುರುಗಳು ಶಿಷ್ಯರನ್ನು ಆರುಣಿಯು ಎಲ್ಲಿ ಎಂದು ಕೇಳಿದಾಗ, ಶಿಷ್ಯರು ಗದ್ದೆಗೆ ನೀರು ತಡೆಯಲು ಹೋದುದನ್ನು ಹೇಳಿದರು. ಶಿಷ್ಯರೊಡನೆ ಗುರುಗಳು ಗದ್ದೆಗೆ ತೆರಳಿ 'ಆರುಣಿ ಮಗು! ಎಲ್ಲಿದ್ದಿಯಾ? ಬಾ' ಎಂದು ಕೂಗಿದರು. ಕೂಗನ್ನು ಕೇಳಿದ ಕೂಡಲೇ ಕಬ್ಬಿನ ಗದ್ದೆಯಿಂದ ಎದ್ದು ಬಂದು ಗುರುಗಳಿಗೆ ನಮಿಸಿ ನಿಂತ. ಮತ್ತೇನು ಮಾಡಲಿ ಎಂದು ವಿಜ್ಞಾಪಿಸಿದ. ಉಪಾಧ್ಯಾಯರು 'ನೀನು ಕಬ್ಬಿನ ಗದ್ದೆಯನ್ನು ಸೀಳಿ ಎದ್ದು ಬಂದಿದ್ದೀಯಾ. ಆದ್ದರಿಂದ ನೀನು **ಉದ್ದಾಲಕ**ನೆಂಬ ಹೆಸರಿನಿಂದ ಪ್ರಸಿದ್ಧನಾಗು' ಎಂದು ಅನುಗ್ರಹಿಸಿದರು.

'[3]ನನ್ನ ಮಾತನ್ನು ನಡೆಸಿದುದರಿಂದ ಶ್ರೇಯಸ್ಸನ್ನು (ಮೋಕ್ಷ) ಹೊಂದುವೆ. ಎಲ್ಲ ವೇದಗಳು ಧರ್ಮಶಾಸ್ತ್ರಗಳು ನಿನಗೆ ಪ್ರತಿಭಾತವಾಗುತ್ತವೆ.' ಹೀಗೆ ಗುರುಗಳ ಅನುಗ್ರಹ ಪಡೆದ ಆರುಣಿಯು ತನಗೆ ಬೇಕಾದ ದೇಶಕ್ಕೆ ಹೋಗಿ ಸುಖವಾಗಿದ್ದನು.

---

೧ ಸ ಏಕಂ ಶಿಷ್ಯಮಾರುಣಿಂ.... ಗಚ್ಛ ಕೇದಾರಖಂಡಂ ಬಧಾನೇತಿ ॥

೨ ಸ ತತ್ರ ಸಂವಿವೇಶ ಕೇದಾರಖಂಡೇ ಶಯಾನೇ ಚ ತಥಾ ತಸ್ಮಿಂಸ್ತದುದಕಂ ತಸ್ಥೌ।
- ಆದಿಪರ್ವ(೩/೨೨)

೩ ಯಸ್ಮಾಚ್ಚ ತ್ವಯಾ ಮದ್ವಚನಮನುಷ್ಠಿತಂ ತಸ್ಮಾತ್ ಶ್ರೇಯೋಽವಾಪ್ಸ್ಯಸಿ।
ಸರ್ವೇ ಚ ತೇ ವೇದಾಃ ಪ್ರತಿಭಾಸ್ಯಂತಿ ಸರ್ವಾಣಿ ಚ ಧರ್ಮಶಾಸ್ತ್ರಾಣೀತಿ ॥ - ಆದಿಪರ್ವ(೩/೩೨)

## ೨. ಉಪಮನ್ಯು ಚರಿತ್ರೆ

ಧೌಮ್ಯರು ಉಪಮನ್ಯು ಶಿಷ್ಯನಿಗೆ 'ವತ್ಸ ಗೋವುಗಳನ್ನು ರಕ್ಷಿಸು ಎಂದು ಕೆಲಸ ಹೇಳಿದರು. ಗುರುಗಳ ಮಾತಿನ ಮೇರೆಗೆ ಪ್ರತಿನಿತ್ಯ ಉಪಮನ್ಯು ಹಗಲೆಲ್ಲ ಗೋವುಗಳನ್ನು ಮೇಯಿಸಿಕೊಂಡು ರಾತ್ರಿ ಮನೆಗೆ ಬಂದು ಗುರುಗಳಿಗೆ ನಮಿಸಿ ನಿಂತನು. ಶಿಷ್ಯನನ್ನು ನೋಡಿದ ಗುರುಗಳು 'ಮಗು! ಉಪಮನ್ಯು ನೀನು ಹೇಗೆ ಜೀವಿಸುತ್ತಿದ್ದೀ? ನೋಡಲು-ದಷ್ಟಪುಷ್ಟನಾಗಿದ್ದೀಯಲ್ಲ?' ಎಂದರು.

'ಗುರುಗಳೇ! ನಾನು ಭಿಕ್ಷಾವೃತ್ತಿಯಿಂದ ಇದ್ದೇನೆ' ಎಂದ ಉಪಮನ್ಯು. ಉಪಾಧ್ಯಾಯರು ಹೇಳಿದರು 'ನನಗೆ ಭಿಕ್ಷೆಯನ್ನು ಕೊಡದೇ ಹೇಗೆ ತಿನ್ನುತ್ತೀ?' ಹೀಗೆನ್ನಲು ಉಪಮನ್ಯುವು ಪ್ರತಿದಿನವೂ ಭಿಕ್ಷೆಯೆಲ್ಲವನ್ನು ಗುರುಗಳಿಗೆ ಒಪ್ಪಿಸುತ್ತಿದ್ದ. ಗೋವುಗಳನ್ನು ದಿನವೂ ಕಾಯುತ್ತಿದ್ದ. ರಾತ್ರಿ ಬಂದು ಗುರುಗಳಿಗೆ ನಮಿಸಿ ಮುಂದೆ ನಿಲ್ಲುತ್ತಿದ್ದ. ಮತ್ತೆ ಅದೇ ಪ್ರಶ್ನೆಯನ್ನು ಗುರುಗಳು ಕೇಳಿದಾಗ ಉಪಮನ್ಯುವು 'ನಾನು ತಮಗೆ ಭಿಕ್ಷೆ ನೀಡಿದ ಬಳಿಕ ಮತ್ತೇ ಭಿಕ್ಷೆ ಬೇಡಿ ಉಣ್ಣುವೆ' ಎಂದನು. ಇದನ್ನು ಕೇಳಿ ಗುರುಗಳು 'ನೀನು ಮತ್ತೊಮ್ಮೆ ಭಿಕ್ಷೆ ಬೇಡಿ ಭಿಕ್ಷಾವೃತ್ತಿಯಲ್ಲಿರುವವರಿಗೆ ನೀನು ಅಡ್ಡಿ ಪಡಿಸುತ್ತಿದ್ದೀ.' ಎಂದರು.

ಹೀಗೆನ್ನಲು, ಉಪಮನ್ಯು ಅಂದಿನಿಂದ ಭಿಕ್ಷಾಟನೆಯನ್ನೇ ಬಿಟ್ಟು ಗೋರಕ್ಷಣೆ ಮಾಡುತ್ತಾ ಗುರುಗಳಿಗೆ ನಮಿಸಿ ಅವರ ಮುಂದೆ ನಿಂತನು. ಗುರುಗಳು ದಷ್ಟಪುಷ್ಟವಾಗಿಯೇ ಇದ್ದ ಉಪಮನ್ಯುವನ್ನು ನೋಡಿ, 'ಭಿಕ್ಷಾಟನೆ ಮಾಡದಿದ್ದರೂ ನೀನು ಹೇಗೆ ಜೀವನ ನಡೆಸುತ್ತಿದ್ದೀ' ಎಂದರು. ಆಗ ಉಪಮನ್ಯು 'ಈ ಗೋವುಗಳ ಹಾಲಿನಿಂದ ನಾನು ಜೀವಿಸುತ್ತೇನೆ' ಎಂದ (ಹಾಲನ್ನೇ ಕುಡಿದು ಬದುಕುತ್ತಿದ್ದೇನೆ). ಅದಕ್ಕೆ ಗುರುಗಳು 'ನಾನು ನಿನಗೆ ಹಾಲನ್ನು ಕುಡಿಯಲು ಅಪ್ಪಣೆ ನೀಡಿಲ್ಲ' ಎಂದರು. ಉಪಮನ್ಯುವು ಹಾಗೆಯೇ ಆಗಲಿ ಎಂದು ಗೋವುಗಳನ್ನು ರಕ್ಷಿಸಿ ಗುರುಗಳ ಮನೆಗೆ ಬಂದು ಅವರ ಮುಂದೆ ನಿಂತು ನಮಿಸಿದ. ದಷ್ಟಪುಷ್ಟನಾಗಿಯೇ ಉಪಮನ್ಯುವನ್ನು ನೋಡಿದ ಗುರುಗಳು 'ವತ್ಸ! ಉಪಮನ್ಯು! ಭಿಕ್ಷೆಯನ್ನು (ಬೇಡಿ) ಉಣ್ಣುವುದಿಲ್ಲ, ಹಾಲನ್ನೂ ಕುಡಿಯುವುದಿಲ್ಲ, ಹಾಗಿದ್ದರೂ ಇನ್ನೂ ದಪ್ಪವಾಗಿಯೇ ಇದ್ದೀಯಲ್ಲ? ಹೇಗೆ ಜೀವಿಸುತ್ತಿದ್ದೀ?' ಎಂದರು.

ಹೀಗೆನ್ನಲು ಉಪಮನ್ಯುವು 'ಗುರುಗಳೇ ಕರುಗಳು ತಮ್ಮ ತಾಯಿಯ ಸ್ತನಗಳಿಂದ ಹಾಲನ್ನು ಕುಡಿದು ನೊರೆಯನ್ನು ಬೀಳಿಸುತ್ತವೆಯಷ್ಟೇ? ಅದೇ ನನ್ನ ಆಹಾರ' ಎಂದನು. ಅದಕ್ಕೆ ಗುರುಗಳು 'ಕರುಗಳು ನಿನ್ನ ಮೇಲಿನ ಅನುಕಂಪದಿಂದ ಬಹಳ ನೊರೆಯನ್ನು ಹನಿಸುತ್ತವೆ. ಹೀಗೆ ನೀನು ಅವುಗಳ ಆಹಾರದಲ್ಲಿ ಪಾಲು ಪಡೆದು ಜೀವಿಸುತ್ತಿದ್ದೀ. ಇದು ಸರಿಯಲ್ಲ, ಆದ್ದರಿಂದ ಇನ್ನು ಮೇಲೆ ಹಾಲಿನ ನೊರೆಯನ್ನೂ ಕುಡಿಯಬೇಡ' ಎಂದರು. ಉಪಮನ್ಯುವು ಹಾಗೆ ಆಗಲಿ ಎಂದು ಹೇಳುತ್ತಾ ಗೋರಕ್ಷಣೆಯಲ್ಲಿ ತೊಡಗಿದನು.

[೧]ಹೀಗೆ ಗುರುಗಳಿಂದ ಭಿಕ್ಷೆ, ಹಾಲು, ನೊರೆ ಯಾವುದನ್ನೂ ಸ್ವೀಕರಿಸಲೂ ಅನುಮತಿ ಇಲ್ಲದೇ ಉಪಮನ್ಯುವು ಅರಣ್ಯದಲ್ಲಿ ಒಮ್ಮೆ ಹಸಿವೆಯನ್ನು ತಡೆಯಲಾರದೆ ಎಕ್ಕಿ ಎಲೆಗಳನ್ನೇ ತಿಂದು ಕುರುಡನಾದನು. ಕುರುಡನಾದುದಲ್ಲದೇ ತಲೆ ಸುತ್ತಿ ಬಾವಿಯೊಂದರಲ್ಲಿ ಬಿದ್ದನು.

ಉಪಮನ್ಯು ಸಂಜೆಯಾದರೂ ಬಾರದಿರಲು ಉಪಾಧ್ಯಾಯರು ಶಿಷ್ಯರನ್ನು ಕೇಳಿದರು. ಅವರು ಗೋರಕ್ಷಣೆಗೆ ಉಪಮನ್ಯುವು ಹೋಗಿರುವುದನ್ನು ತಿಳಿಸಿದರು. ಶಿಷ್ಯರನ್ನು ಉದ್ದೇಶಿಸಿ ಗುರುಗಳು 'ಪಾಪ! ಉಪಮನ್ಯುವನ್ನು ನಾನು ಎಲ್ಲ ದೃಷ್ಟಿಯಿಂದ ನಿಷೇಧಿಸಿದೆ. ಪ್ರಾಯಃ ಅವನು ಕೋಪಗೊಂಡು ಬರಲಾರ. ಆದ್ದರಿಂದ ಅವನನ್ನು ಹುಡುಕುವ' ಎಂದು ಶಿಷ್ಯರೊಂದಿಗೆ ಕಾಡಿನಲ್ಲಿ ಹುಡುಕುತ್ತಾ 'ಉಪಮನ್ಯು ! ಮಗು! ಎಲ್ಲಿದ್ದೀ ಬಾ' ಎಂದು ಕೂಗುತ್ತಾ ನಡೆದರು.

ಉಪಾಧ್ಯಾಯರ ಮಾತನ್ನು ಕೇಳಿದ ಉಪಮನ್ಯುವು ಜೋರಾಗಿ ಉತ್ತರಿಸಿದ 'ನಾನು ಇಲ್ಲಿ ಬಾವಿಯಲ್ಲಿ ಬಿದ್ದಿದ್ದೇನೆ' ಎಂದನು.? ಆಶ್ಚರ್ಯಗೊಂಡ ಗುರುಗಳು ಏಕೆ? ಹೇಗೆ? ಎಂದು ಕೇಳಲು, ನಡೆದುದನ್ನು ವಿವರಿಸಿದ ಉಪಮನ್ಯು.

ಉಪಾಧ್ಯಾಯರ ಮನ ಕರಗಿತು. ಶಿಷ್ಯನ ಸ್ಥಿತಿಗೆ ಮರುಗಿ '[೨]ಅಶ್ವಿನೀದೇವತೆಗಳನ್ನು ಸ್ತೋತ್ರ ಮಾಡು, ಅವರು ದೇವವೈದ್ಯರು. ನಿನಗೆ ಕಣ್ಣು ಬರುವಂತೆ ಮಾಡುವರು' ಎಂದು ಉಪಮನ್ಯುವಿಗೆ ನುಡಿದರು. ಗುರುಗಳ ಮಾತಿನಂತೆ ಉಪಮನ್ಯುವು ೧೨ ಋಗ್ವೇದ ಮಂತ್ರಗಳಿಂದ ಅಶ್ವಿನೀದೇವತೆಗಳನ್ನು ಸ್ತೋತ್ರ ಮಾಡಿದನು. ಅವುಗಳಲ್ಲಿ ಎರಡು ಉದಾಹರಣೆ–

[೩]ಪ್ರಪೂರ್ವಗೌ ಪೂರ್ವಜೌ ಚಿತ್ರಭಾನೂ
ಗಿರಾ ವಾऽऽಶಂಸಾಮಿ ತಾಪಸೌ ಹ್ಯನಂತೌ।
ದಿವ್ಯೌ ಸುಪರ್ಣೌ ವಿರಜೌ ವಿಮಾನೌ
ಅಧಿಕ್ಷಿಪಂತೌ ಭುವನಾನಿ ವಿಶ್ವಾ॥ - ಆದಿಪರ್ವ(೩/೫೭)

---

೧ ತಥಾ ಪ್ರತಿಷಿದ್ಧೋ ಭೈಕ್ಷ್ಯಂ ನಾಶ್ನಾತಿ ನ ಚಾನ್ಯಚ್ಚರತಿ ಪಯೋ ನ ಪಿಬತಿ ಫೇನಂ ನೋಪಯುಂಕ್ತೇ। ಸ ಕದಾಚಿದರಣ್ಯೇ ಕ್ಷುಧಾರ್ತೋऽರ್ಕಪತ್ರಾಣ್ಯಭಕ್ಷಯತ್। - ಆದಿಪರ್ವ(೩/೫೦)
ಸ ತೈರರ್ಕಪತ್ರೈರ್ಭಕ್ಷಿತೈಃ ಕ್ಷಾರತಿಕ್ತಕಟುರೂಕ್ಷೈಸ್ತೀಕ್ಷ್ಣವಿಪಾಕೈಃ ಚಕ್ಷುಷ್ಯುಪಹತೋऽಂಧೋ ಬಭೂವ। ತತಃ ಸೋऽಂಧೋऽಪಿ ಚಂಕ್ರಮ್ಯಮಾಣಃ। ಕೂಪೇ ಪಪಾತ॥- ಆದಿಪರ್ವ(೩/೫೧)

೨ ತಮುಪಾಧ್ಯಾಯಃ ಪ್ರತ್ಯುವಾಚ – ಅಶ್ವಿನೌ ಸ್ತುಹಿ। ತೌ ದೇವಭಿಷಜೌ ತ್ವಾಂ ಚಕ್ಷುಷ್ಮಂತಂ ಕರ್ತಾರೌ ಇತಿ। ಸ ಏವಮುಕ್ತಃ ಉಪಮನ್ಯುಃ ಅಶ್ವಿನೌ ಸ್ತೋತುಮುಪಚಕ್ರಮೇ ದೇವೌ ಅಶ್ವಿನೌ ವಾಗ್ಭಿಃ ಋಗ್ಭಿಃ ।

೩ ಉಪಮನ್ಯು ಕೃತ ಈ ಸ್ತೋತ್ರವು ದೇವವೈದ್ಯರಾದ ಅಶ್ವಿನೀ ದೇವತೆಗಳ ಸ್ತೋತ್ರಗಳ ಸಾಲಿಗೆ ಸೇರುವ ಒಂದು ಉತ್ತಮ ಸ್ತೋತ್ರವಾಗಿದೆ. ಇಲ್ಲಿ ಕೇವಲ ೨ ಋಕ್ಕುಗಳ ಅನುವಾದ ಮಾತ್ರ ಕೊಡಲಾಗಿದೆ.

ಎಲ್ಲರಿಗೂ ಶ್ರೇಷ್ಠರಾದ (ಸ್ವಾಧಮರಿಗಿಂತ) ಜಗತ್ತಿನಲ್ಲಿ ಮೊದಲೇ ಹುಟ್ಟಿದ. ವಿಚಿತ್ರ ತೇಜಸ್ಸುಳ್ಳವರಾದ, ದ್ವೇಷಿಸುವವರಿಗೆ ತಾಪ ಕೊಡುವ, ಅಮೃತ ಪಾನ ಮಾಡಿದ್ದರಿಂದ ನಾಶರಹಿತರಾದ, ದೇವತೆಗಳ ವರ್ಗದಲ್ಲಿ ಸೇರಿರುವ (ಸೋಮಪಾನಾರ್ಹರಾದ) ಶೋಭಿಸುವ ರಥವುಳ್ಳ ರಜೋಗುಣ ರಹಿತರಾದ, ದೇಹಾದ್ಯಭಿಮಾನರಹಿತರಾದ, ನಿಮ್ಮ ಮಹಿಮೆಯಿಂದ ಲೋಕಗಳನ್ನೇ ಧಿಕ್ಕರಿಸುವ ಸಾಮರ್ಥ್ಯವುಳ್ಳ ಹೇ ಅಶ್ವಿನೀದೇವತೆಗಳೇ! ನಿಮ್ಮನ್ನು ಈ ಸ್ತುತಿಯಿಂದ ಪ್ರಶಂಸಿಸುತ್ತೇನೆ.

[೧]**ಸ್ತೋತುಂ ನ ಶಕ್ನೋಮಿ ಗುಣೈರ್ಭವಂತೌ**
**ಚಕ್ಷುರ್ವಿಹೀನಃ ಪಥಿ ಸಂಪ್ರಮೋಹಃ ।**
**ದುರ್ಗೇಽಹಮಸ್ಮಿನ್ ಪತಿತೋಽಸ್ಮಿ ಕೂಪೇ**
**ಯುವಾಂ ಶರಣ್ಯೌ ಶರಣಂ ಪ್ರಪದ್ಯೇ ॥** - **ಆದಿಪರ್ವ(೩/೬೮)**

ನಿಮ್ಮ ಗುಣಗಳನ್ನು ಸ್ತೋತ್ರ ಮಾಡಲು ನಾನು ಸಮರ್ಥನಾಗಿಲ್ಲ. ಕಣ್ಣುಗಳಿಲ್ಲದ ನಾನು ದಾರಿತಪ್ಪಿ ಆಳವಾದ ಬಾವಿಯಲ್ಲಿ ಬಿದ್ದಿದ್ದೇನೆ. ಶರಣಾಗತವತ್ಸಲರಾದ ನಿಮ್ಮನ್ನು ಶರಣು ಹೊಕ್ಕಿದ್ದೇನೆ. ದಯವಿಟ್ಟು ನನ್ನನ್ನು ಕಾಪಾಡಿರಿ.

ಉಪಮನ್ಯುವಿನ ಈ ಸ್ತೋತ್ರದಿಂದ ಸಂತುಷ್ಟರಾದ ಅಶ್ವಿನೀದೇವತೆಗಳು ಅವನಿಗೆ ದರ್ಶನ ಕೊಟ್ಟರಲ್ಲದೇ ಅಪೂಪಪ್ರಸಾದವನ್ನು ಅನುಗ್ರಹಿಸಿ ತಿನ್ನಲು ಹೇಳಿದರು. ಆದರೆ ಗುರುವಿಗೆ ಅಪೂಪ ನಿವೇದಿಸದೇ ಹೇಗೆ ತಿನ್ನಲಿ? ಎಂದು ಉಪಮನ್ಯು ನುಡಿಯಲು ಅಶ್ವಿನೀದೇವತೆಗಳು ಪುನಃ ಉಪಮನ್ಯುವನ್ನು ಪರೀಕ್ಷಿಸಲು 'ಹಿಂದೆ ನಾವು ಹೀಗೆಯೇ ನಿಮ್ಮ ಗುರುಗಳಿಗೆ ಅವರ ಪ್ರಾರ್ಥನೆಯ ಮೇರೆಗೆ ಅಪೂಪ ಕೊಟ್ಟಾಗ, ಅವರು ತಮ್ಮ ಗುರುಗಳಿಗೆ ಕೊಡದೇ ತಿಂದರು. ಆದ್ದರಿಂದ ನೀನೂ ಹಾಗೆಯೇ ಅವರಿಗೆ ಸಮರ್ಪಿಸದೇ ತಿನ್ನು' ಎಂದರು. ಆದರೆ ಉಪಮನ್ಯು ಗುರುಗಳಿಗೆ ಸಮರ್ಪಿಸದೇ ತಿನ್ನಲು ಒಪ್ಪಲಿಲ್ಲ.

[೨]ಉಪಮನ್ಯುವಿನ ಗುರುಭಕ್ತಿಯಿಂದ ಪ್ರಸನ್ನರಾದ ಅಶ್ವಿನೀದೇವತೆಗಳು 'ನಿನ್ನ ಗುರುಗಳ ಕಪ್ಪು ಹಲ್ಲುಗಳು ಹಾಗೂ ನಿನ್ನ ಹಲ್ಲುಗಳು ಸುವರ್ಣದಂತೆ ಕಾಂತಿಯಿಂದ ಕಂಗೊಳಿಸುತ್ತವೆ, ಶ್ರೇಯಸ್ಸನ್ನು ಹೊಂದುವೆ.'

ಕೂಡಲೇ ಉಪಮನ್ಯುವಿಗೆ ಕಣ್ಣುಗಳು ಬಂದವು. ಅಲ್ಲಿಯೇ ಇದ್ದ ಗುರುಗಳ ಬಳಿಗೆ

---

೧ ಶ್ರೀವಾದಿರಾಜರು ಉಪಮನ್ಯುಕೃತ ಈ ಸ್ತೋತ್ರದ ೧೨ ಋಕ್ಕುಗಳಲ್ಲಿ ೧೧ ಋಕ್ಕುಗಳಿಗೆ ವಿಸ್ತೃತವಾದ ವ್ಯಾಖ್ಯಾನವನ್ನು ತಮ್ಮ 'ಲಕ್ಷಾಲಂಕಾರ'ದಲ್ಲಿ ಬರೆದು ಅನುಗ್ರಹಿಸಿದ್ದಾರೆ.
- ಶ್ರೀಸೋದೆಮಠದ 'ಲಕ್ಷಾಲಂಕಾರ' ಪ್ರಕಟಿತ (೧೯೫೯) ಪು. ೨೭-೩೩

೨ ತಮಶ್ವಿನಾವಾಹತುಃ ಪ್ರೀತೌ ಸ್ವಸ್ತವಾನಯಾ ಗುರುಭಕ್ತ್ಯಾ...
..... ಚಕ್ಷುಷ್ಮಾಂಶ್ಚ ಭವಿಷ್ಯಸೀತಿ ಶ್ರೇಯಶ್ಚಾವಾಪ್ಸ್ಯಸೀತಿ ।

ಬಂದು ನಮಿಸಿದ. ಗುರುಗಳು ಆನಂದತುಂದಿಲರಾದರು. 'ಅಶ್ವಿನೀದೇವತೆಗಳು ಹರಸಿದಂತೆ ಶ್ರೇಯೋಭಾಗಿಯಾಗುವೆ' ಎಂದು ನುಡಿದರು.

[೧]'ಎಲ್ಲ ವೇದಗಳೂ ಧರ್ಮಶಾಸ್ತ್ರಗಳು ನಿನಗೆ ಪ್ರತಿಭಾತವಾಗುತ್ತವೆ' ಎಂದು ಗುರುಗಳು ಅನುಗ್ರಹಿಸಿದರು.

ಗುರುಗಳಿಂದ ಪರೀಕ್ಷಿತನಾಗಿ ಅನುಗ್ರಹೀತನಾದ ಉಪಮನ್ಯು ಲೋಕದಲ್ಲಿ ಅಮರನಾದ.

## ೩. ವೇದನ(ಬೈದನ) ಚರಿತ್ರೆ

ಧೌಮ್ಯರ ಮೂರನೇ ಶಿಷ್ಯ **ವೇದ** ಎಂಬುವವನು. ಅವನಿಗೆ ಗುರುಗಳು 'ನೀನು ಕೆಲಕಾಲ ನಮ್ಮ ಮನೆಯಲ್ಲಿ ಸೇವೆಯನ್ನು ಮಾಡುತ್ತಾ ಇರು. ನಿನಗೆ ಶ್ರೇಯಸ್ಸು ಆಗುತ್ತದೆ' ಎಂದು ಆದೇಶ ನೀಡಿದರು. ಹೀಗೆ ಅಜ್ಞಪ್ತನಾದ ವೇದನು ಬಹುಕಾಲದವರೆಗೆ ಗುರುಗಳ ಸೇವೆ ಮಾಡುತ್ತಾ ಅವರ ಮನೆಯಲ್ಲಿದ್ದನು. [೨]ಗುರುಗಳು ವೇದನನ್ನು ಎತ್ತುಗಳ ಬದಲಾಗಿ ನೇಗಿಲಿಗೆ ಹೂಡಿದ ಉಳುತ್ತಿದ್ದರು. ಮಳೆ, ಚಳಿ, ಬಿಸಿಲು, ಹಸಿವು, ಬಾಯಾರಿಕೆಗಳ ದುಃಖವನ್ನೆಲ್ಲವನ್ನು ಸಹಿಸುತ್ತ ಇದ್ದ ವೇದನ ಸೇವೆಗೆ ಬಹಳ ಕಾಲದ ನಂತರ ಗುರುಗಳು ಪ್ರಸನ್ನರಾದರು. ಗುರುಗಳ ಪ್ರಸನ್ನತೆಯಿಂದ ವೇದನು ಶ್ರೇಯಸ್ಸನ್ನು ಮತ್ತು ಸರ್ವಜ್ಞತ್ವವನ್ನೂ ಹೊಂದಿದನು.

ಹೀಗೆ ವೇದನು ಧೌಮ್ಯರ ಪರೀಕ್ಷೆಯಲ್ಲಿ ಉತ್ತೀರ್ಣನಾದ ಮತ್ತೊಬ್ಬ ಆದರ್ಶ ಶಿಷ್ಯನಾಗಿದ್ದಾನೆ.

ಉಪಾಧ್ಯಾಯರಿಂದ ಅಪ್ಪಣೆ ಪಡೆದ ವೇದನು ಗುರುಕುಲವಾಸ ಮುಗಿಸಿ ಗೃಹಸ್ಥಾಶ್ರಮವನ್ನು ಸ್ವಿಕರಿಸಿದನು. ಆತನಿಗೂ ಮೂವರು ಶಿಷ್ಯರಿದ್ದರು. ಅವರಿಗೆ ಎಂದೂ ಯಾವ ಕೆಲಸವನ್ನಾಗಲೀ, ಗುರು ಶುಶ್ರೂಷೆ ಮಾಡು ಎಂದಾಗಲೀ ಹೇಳುತ್ತಿರಲಿಲ್ಲ. ಕಾರಣ ಗುರುಕುಲವಾಸದ ದುಃಖವನ್ನು ತಿಳಿದ ವೇದನು ಶಿಷ್ಯರನ್ನು ಕ್ಲೇಶಪಡಿಸಲು ಇಷ್ಟ ಪಡುತ್ತಿರಲಿಲ್ಲ.

ಒಮ್ಮೆ ಜನಮೇಜಯ ಮತ್ತು ಪೌಷ್ಯರು ವೇದನ ಬಳಿಗೆ ಬಂದು ಪೌರೋಹಿತ್ಯಕ್ಕಾಗಿ ಬೇಡಿದರು. ವೇದನು ಒಪ್ಪಿದನು. ಒಂದು ಸಾರಿ ಯಜ್ಞಕಾರ್ಯಕ್ಕಾಗಿ ಆಶ್ರಮದಿಂದ ಹೊರಟು

---

೧ ..... ಸರ್ವೇ ಚ ತೇ ವೇದಾಃ ಪ್ರತಿಭಾಸ್ಯಂತಿ ಸರ್ವಾಣಿ ಚ ಧರ್ಮಶಾಸ್ತ್ರಾಣೀತಿ।

೨ ... ಗೌರಿವ ನಿತ್ಯಂ ಗುರುಣಾ ಧೂರ್ಷು ನಿಯೋಜ್ಯಮಾನಃ ಶೀತೋಷ್ಣಕ್ಷುತ್ತೃಷ್ಣಾದುಃಖಸಹಃ ಸರ್ವತ್ರಾಪ್ರತಿಕೂಲಸ್ತಸ್ಯ ಮಹತಾ ಕಾಲೇನ ಗುರುಃ ಪರಿತೋಷಂ ಜಗಾಮ । ತತ್ಪರೀತೋಷಾಚ್ಚ ಶ್ರೇಯಃ ಸರ್ವಜ್ಞತಾಂ ಚಾವಾಪ॥ – ಆದಿಪರ್ವ(೩/೭೯)

**ಉದಂಕ(ಉತ್ತಂಕ)**ನೆಂಬ ಶಿಷ್ಯನಿಗೆ ಯಾವ ಕೆಲಸವನ್ನು ಹೇಳಲು ಇಚ್ಛೆ ಇಲ್ಲದಿದ್ದರೂ ಅನ್ಯ ಮಾರ್ಗವಿಲ್ಲದೇ[1], ಮನೆಯಲ್ಲಿ ಯಾವ ಕೆಲಸವನ್ನು ಮಾಡಬೇಕಿದ್ದರೂ ಉದಾಸೀನವಿಲ್ಲದೇ ಮಾಡು ಎಂದು ಆದೇಶಿಸಿ, ವೇದನು ಪ್ರವಾಸಕ್ಕೆ ಹೋದನು. ಉತ್ತಂಕನಿಗೆ ಹೀಗೆ ಗೃಹಕೃತ್ಯದ ವಿಶೇಷ ಜವಾಬ್ದಾರಿ ಬಿತ್ತು. ಆದರೆ ಆತನಿಗೆ ಎದುರಾಗಲಿರುವ ಪರೀಕ್ಷೆಯ ಪರಿಜ್ಞಾನ ಮಾತ್ರ ಇರಲಿಲ್ಲ.

ಹೀಗಿರಲು ಒಂದು ದಿನ ಆಶ್ರಮದ ಸ್ತ್ರೀಯರು ಉತ್ತಂಕನನ್ನು ಕರೆದು ಹೇಳಿದರು. 'ನಿನ್ನ ಗುರುಪತ್ನಿ ಇಂದು ಋತುಸ್ನಾತಳಾಗಿದ್ದಾಳೆ. ಗುರುಗಳು ಊರಲ್ಲಿಲ್ಲ. ಆಕೆಯ ಋತುಕಾಲ ವ್ಯರ್ಥವಾಗದಂತೆ ಗುರುಪತ್ನಿಯನ್ನು ನೋಡಿಕೊ. ಗುರುಗಳು ನಿನಗೆ ಆಶ್ರಮದಲ್ಲಿ ನಡೆಯಬೇಕಾದ ಕೆಲಸಗಳ ಬಗ್ಗೆ ಜವಾಬ್ದಾರಿ ಹೊರಿಸಿದ್ದಾರೆ. ಗುರುಪತ್ನಿಯು ದುಃಖಿತ-ಳಾಗಿದ್ದಾಳೆ'.

ಇದನ್ನು ಕೇಳಿದ ಉತ್ತಂಕನು '[2]ನಾನು ನಿಮ್ಮ ಮಾತನ್ನು ಕೇಳಿ ಅಕಾರ್ಯವನ್ನು ಮಾಡಲಾರೆ. ಅಕಾರ್ಯವನ್ನು ಮಾಡಲು ಗುರುಗಳು ನನಗೆ ಅಣತಿ ನೀಡಿಲ್ಲ' ಎಂದನು.

ಕೆಲ ಸಮಯದ ನಂತರ ಪ್ರವಾಸದಿಂದ ಹಿಂದಿರುಗಿದ ಗುರುಗಳಿಗೆ ಉತ್ತಂಕನ ಸಚ್ಚಾರಿತ್ರ್ಯದ ಬಗ್ಗೆ ಎಲ್ಲ ತಿಳಿದು ತುಂಬಾ ಪ್ರಸನ್ನರಾದರು.

ಉತ್ತಂಕನ ಸೇವೆಯಿಂದ ಪ್ರಸನ್ನರಾದ ವೇದರು ಮಗು! ಉತ್ತಂಕ! ನಿನಗೆ ಪ್ರಿಯವಾದುದನ್ನು ಎನು ಮಾಡಲಿ? [3]ಧರ್ಮದ ಪ್ರಕಾರ ನನ್ನ ಸೇವೆ ಮಾಡಿದ್ದೀ. ನಿನ್ನ ಇಚ್ಛೆಗಳೆಲ್ಲ ಈಡೇರುವುವು. ನೀನಿನ್ನು ಹೋಗು' ಎಂದು ಹೇಳಿದರು.

ಹೀಗೆ ಗುರುಗಳೆನ್ನಲು ಉತ್ತಂಕನು 'ತಮ್ಮಿಂದ ಅನುಮತಿ ಪಡೆದ ನಾನು ಗುರುದಕ್ಷಿಣಾ ರೂಪವಾಗಿ ಏನನ್ನು ತಂದು ಕೊಡಲಿ' ಎಂದು ಕೇಳಿದನು. ಗುರುಗಳು 'ಹಾಗಿದ್ದರೆ ಇನ್ನು ಕೆಲಕಾಲ ಇಲ್ಲಿಯೇ ಇರು' ಎಂದರು.

---

೧ ಭೋ ಯತ್ಕಿಂಚಿತ್ ಅಸ್ಮದ್ಗೃಹೇ ಪರಿಹೀಯತೇ ತದಿಚ್ಛಾಮ್ಯಹಂ ಅಪರಿಹೀಯಮಾನಂ ಭವತಾ ಕ್ರಿಯಮಾಣಮಿತಿ ಸ ಏವಂ ಪ್ರತಿಸಂದಿಶ್ಯ ಉತ್ತಂಕಂ ವೇದಃ ಪ್ರವಾಸಂ ಜಗಾಮ।

೨ .....ನ ಮಯಾ ಸ್ತ್ರೀಣಾಂ ವಚನಾತ್ ಅಕಾರ್ಯಂ ಕರಣೀಯಂ। ನಹ್ಯಹಂ ಉಪಾಧ್ಯಾಯೇನ ಸಂದಿಷ್ಟೋ ಅಕಾರ್ಯಮಪಿ ತ್ವಯಾಕಾರ್ಯಮಿತಿ।
ಗುರು ಪತ್ನೀ ಗಮನವು ಪಂಚಮಹಾ ಪಾತಕಗಳಲ್ಲಿ ಒಂದು. ಆದ್ದರಿಂದ ಇದು ಅಕಾರ್ಯವೆಂದು ಭಾವ. ಚಂದ್ರನು ಗುರುಪತ್ನೀ ಗಮನ ಮಾಡಿ ಮೋಕ್ಷದಲ್ಲಿ ಆನಂದಹ್ರಾಸ ಹೊಂದಿರುವುದು ಪ್ರಸಿದ್ಧವಾದುದು.

೩. ಧರ್ಮತೋ ಹಿ ಶುಶ್ರೂಷಿತೋಽಸ್ಮಿ ಭವತಾ... ಸರ್ವಾನೇವ ಕಾಮಾನ್ ಅವಾಪ್ಸ್ಯಸಿ।

ಕೆಲಕಾಲದ ನಂತರ ಮತ್ತೇ ಉತ್ತಂಕನು ಗುರುಗಳನ್ನು 'ನಿಮಗೆ ಪ್ರಿಯಕರವಾದ ಯಾವ ವಸ್ತುವನ್ನು ಕೊಡಲಿ' ಎಂದು ಕೇಳಿದನು. [೧]ಅದಕ್ಕೆ ಗುರುಗಳು 'ವತ್ಸ! ನೀನು ಮತ್ತೇ ಮತ್ತೇ ಕೇಳುತ್ತಿದ್ದೀಯಾ' (ತನಗೇನು ಬೇಡವೆಂದು ಭಾವ). ಗುರುಪತ್ನಿಯನ್ನು ಕಂಡು ಉತ್ತಂಕ ಕೇಳಲು ಆಕೆಯು 'ಪೌಷ್ಯರಾಜನ ಬಳಿಗೆ ಹೋಗು, ಆತನ ರಾಣಿಯು ತೊಟ್ಟಿರುವ ಕರ್ಣಾಭರಣ (ಕುಂಡಲ)ಗಳನ್ನು ಇಂದಿನಿಂದ ೪ ದಿನಗಳೊಳಗಾಗಿ ತರಬೇಕು. ೪ನೇ ದಿನ ನಾನು ಅದನ್ನು ತೊಟ್ಟು ಆಶ್ರಮದಲ್ಲಿ ಬ್ರಾಹ್ಮಣರನ್ನು ಸತ್ಕರಿಸಬೇಕು. ಇದೇ ಗುರುದಕ್ಷಿಣೆ. ಇದನ್ನು ತಂದುಕೊಟ್ಟಲ್ಲಿ ನಿನಗೆ ಖಂಡಿತವಾಗಿಯೂ ಶ್ರೇಯಸ್ಸು ಇಲ್ಲದಿದ್ದರೆ ಇಲ್ಲ' ಎಂದು ನುಡಿದಳು.

ಕೂಡಲೇ ಗುರುದಕ್ಷಿಣೆ ತಂದುಕೊಡಲು ಉತ್ತಂಕನು ಪೌಷ್ಯರಾಜನ ಬಳಿಗೆ ಹೊರಟನು. ದಾರಿಯಲ್ಲಿ ಎತ್ತರವಾದ ಎತ್ತಿನ ಮೇಲೆ ಕುಳಿತಿದ್ದ ಪುರುಷನನ್ನು ನೋಡಿದನು. ಆ ಪುರುಷನು 'ಎಲೈ ಉತ್ತಂಕ! ಈ ಎತ್ತಿನ ಸಗಣೆಯನ್ನು ತಿನ್ನು' ಎಂದನು. ಆದರೆ ಉತ್ತಂಕ ಇಷ್ಟಪಡಲಿಲ್ಲ. ಆಗ ಆ ಪುರುಷನು 'ಉತ್ತಂಕ ನಿನ್ನ ಗುರುವೇ ಹಿಂದೆ ಈ ಸಗಣೆಯನ್ನು ತಿಂದಿದ್ದಾರೆ' ಎನ್ನಲು ಕೂಡಲೇ ಉತ್ತಂಕನು ಮೂತ್ರ ಹಾಗೂ ಸಗಣೆಗಳನ್ನು ತಿಂದು ಆಚಮನ ಮಾಡಿ ಹೊರಟನು. ಪೌಷ್ಯರಾಜನ ಮನೆಗೆ ಹೋಗಿ ಆತನನ್ನು ಆಶೀರ್ವದಿಸಿ 'ರಾಜನ್! ನಾನು ಯಾಚಕನಾಗಿ ಬಂದಿದ್ದೇನೆ. ನಿನ್ನ ಪತ್ನಿಯು ಧರಿಸಿರುವ ಕರ್ಣಕುಂಡಲವನ್ನು ಗುರುದಕ್ಷಿಣೆಯಾಗಿ ನಾನು ನನ್ನ ಗುರುಪತ್ನಿಗೆ ಕೊಡಬೇಕಾಗಿದೆ. ದಯವಿಟ್ಟು ಅವನ್ನು ಕೊಡಿಸು' ಎಂದು ಕೇಳಿದನು. ರಾಜನು ಉತ್ತಂಕನಿಗೆ ರಾಣಿಯನ್ನು ಕೇಳಲು ತಿಳಿಸಿದಾಗ, ಉತ್ತಂಕನು ಕೂಡಲೇ ರಾಣಿಯ ಅಂತಃಪುರಕ್ಕೆ ಹೋದರೂ ರಾಣಿಯನ್ನು ಕಾಣದೆ ಪುನಃ ರಾಜನನ್ನು ಪ್ರಶ್ನಿಸಿದನು. ರಾಜನು ಯೋಚಿಸಿ[೨] 'ಉತ್ತಂಕ, ನನ್ನ ರಾಣಿ ಪತಿವ್ರತೆ. ಅಶುಚಿಯಾದ-ಅಪವಿತ್ರರಾದವರಿಗೆ ಆಕೆಯ ದರ್ಶನವಾಗದೆಂದು ಹೇಳಿದನು. ಕೂಡಲೆ ಉತ್ತಂಕನು 'ಹೌದು ನಿನ್ನೆ ನಾನು ನಿಂತೇ ಆಚಮನ ಮಾಡಿದ್ದೆ' ಎಂದು ಒಪ್ಪಿ[೩], ಪೂರ್ವಾಭಿಮುಖನಾಗಿ ಕೈಕಾಲು ಹಾಗೂ ಮುಖಗಳನ್ನು

---

೧ ಹೀಗೆಯೇ ಕೃಷ್ಣನ ಗುರುಗಳಾದ ಸಾಂದೀಪನಿಗಳು ಏನೂ ಬಯಸಲಿಲ್ಲ. ಗುರುಪತ್ನಿಯ ಅಭಿಲಾಷೆಯಾದ ಮೃತ ಗುರುಪುತ್ರನನ್ನು ತಂದುಕೊಟ್ಟು ಗುರುದಕ್ಷಿಣೆ ನೀಡಿದ ಉದಾಹರಣೆ ಶ್ರೀಕೃಷ್ಣನ ಚರಿತ್ರೆಯಲ್ಲಿ ನೋಡಬಹುದಾಗಿದೆ. ಇಲ್ಲಿಯೂ ವೇದರು ಏನೂ ಬಯಸಲಿಲ್ಲ. ಅವರ ಪತ್ನಿಯ ಆಸೆಯನ್ನು ಉತ್ತಂಕನು ಈಡೇರಿಸಿದುದು ಇಲ್ಲಿಯ ವೈಶಿಷ್ಟ್ಯ.

೨ .... ನ ಹಿ ಸಾ ಕ್ಷತ್ರಿಯಾ ಉಚ್ಛಿಷ್ಟೇನ ಅಶುಚಿನಾ ಶಕ್ಯಾ ದ್ರಷ್ಟುಂ ಪತಿವ್ರತಾತ್ವಾತ್ ಸೈಷಾ ನಾಶುಚೇರ್ದರ್ಶನಮುಪೈತೀತಿ। – ಆದಿಪರ್ವ(೩/೧೦೭)

೩ ಅಥೋತ್ತಂಕಸ್ತಂ ತಥೇತ್ಯುಕ್ತ್ವಾ ಪ್ರಾಙ್ಮುಖ ಉಪವಿಶ್ಯ ಸುಪ್ರಕ್ಷಾಲಿತಪಾಣಿಪಾದವದನೋ ನಿಃಶಬ್ದಾಭಿರಫೇನಾಭಿರನುಷ್ಣಾಭಿರ್ಹೃದ್ಗತಾಭಿರದ್ಭಿಸ್ತ್ರಿಃ ಪೀತ್ವಾ ದ್ವಿಃ ಪರಿಮೃಜ್ಯ ಖಾನ್ಯದ್ಭಿರುಪಸ್ಪೃಶ್ಯ ಚಾಂತಃಪುರಂಜಗಾಮ॥ – ಅ. (೩/೧೦೯)

ತೊಳೆದುಕೊಂಡು ಕುಳಿತು ನೊರೆಯಿಲ್ಲದ, ಶಬ್ದರಹಿತವಾದ ಶೀತಲ ನೀರಿನಿಂದ ಹೃದಯಕ್ಕೆ ನೇರವಾಗಿ ಸೇರುವಂತೆ ಮೂರು ಬಾರಿ ಆಚಮನ ಮಾಡಿ, ಎರಡು ಬಾರಿ ಅಂಗುಷ್ಠದ ಮೂಲಭಾಗದಿಂದ ಮುಖ, ತುಟಿ, ಕಣ್ಣು ಮೂಗು ಮೊದಲಾದ ಅಂಗಗಳನ್ನು ಪರಿಮಾರ್ಜನ ಮಾಡಿಕೊಂಡು, ಆಚಮನ ಮಾಡಿ ದೇಹ ಪಾವಿತ್ರ್ಯವನ್ನೂ ಹೊಂದಿ ಅಂತಃಪುರಕ್ಕೆ ಹೋದನು. ರಾಣಿಯನ್ನು ನೋಡಿದನು. ಆಕೆ ಉತ್ತಂಕನನ್ನು ಕಂಡಕೂಡಲೇ ಎದ್ದುನಿಂತು ಅಭಿನಂದಿಸಿ, ಸ್ವಾಗತಿಸಿ, 'ತನ್ನಿಂದ ಏನು ಆಗಬೇಕೆಂದು' ಕೇಳಿದಳು.

'ಮಹಾರಾಣಿ ತಾವು ಧರಿಸಿದ ಕರ್ಣಕುಂಡಲಗಳನ್ನು ಗುರುದಕ್ಷಿಣೆಯಾಗಿ ನಾನು ಕೊಡಬೇಕಾಗಿದೆ. ಅದೇ ನನ್ನ ಭಿಕ್ಷೆ.' ರಾಣಿಗೆ ಉತ್ತಂಕನ ಗುರುಭಕ್ತಿ ಸತ್ಪಾತ್ರತೆ ನೋಡಿ ಸಂತೋಷಗೊಂಡು ಕುಂಡಲಗಳನ್ನು ಕೊಟ್ಟು 'ಇವನ್ನು ಅಪಹರಿಸಲು ತಕ್ಷಕನು ಸತತ ಪ್ರಯತ್ನಿಸುತ್ತಿದ್ದಾನೆ, ಎಚ್ಚರಿಕೆ' ಎಂದು ನುಡಿದಳು. ಉತ್ತಂಕನು ರಾಣಿಗೆ 'ಅಮ್ಮ! ತಕ್ಷಕ ನಾಗರಾಜನು ನನ್ನನ್ನು ಬಲಾತ್ಕರಿಸಲು ಸಾಧ್ಯವಿಲ್ಲ. ಚಿಂತಿಸದಿರು' ಎಂದು ಹೇಳಿ ಪೌಷ್ಯರಾಜನಿಗೆ ಕೃತಜ್ಞತೆ ಸಲ್ಲಿಸಿ ಹೊರಡಲು ಸಿದ್ಧನಾದನು. ಪೌಷ್ಯರಾಜನು 'ತಮ್ಮಂತಹ ಅತಿಥಿಗಳು ಬಂದಾಗಲೇ ಶ್ರಾದ್ಧ ಮಾಡಬೇಕು. ಆದ್ದರಿಂದ ಇಂದು ತಾವು ಭೋಜನ ಮಾಡಿಕೊಂಡು ಹೋಗಲು ಕೋರುತ್ತೇನೆ' ಎಂದನು. ಇದಕ್ಕೆ ಒಪ್ಪಿದ ಉತ್ತಂಕನು ಪರಿಶುದ್ಧವಾದ ಅನ್ನವನ್ನು ಈ ಕೂಡಲೇ ಬಡಿಸಿ ಎನ್ನಲು, ರಾಜನು ಸಿದ್ಧವಾದ ಸುಸಂಸ್ಕೃತ ಅನ್ನವನ್ನು ಬಡಿಸಿದನು. ರಾಜನ ದುರದೃಷ್ಟ ಅದರಲ್ಲಿ ಕೂದಲು ಕಾಣಿಸಿತು ಉತ್ತಂಕನಿಗೆ. ಸಿಡಿದೆದ್ದ ಉತ್ತಂಕನು ರಾಜನಿಗೆ 'ನಿನ್ನ ಉದಾಸೀನತೆಯಿಂದ ಅನ್ನ ಅಪರಿಶುದ್ಧವಾಗಿದೆ. ಕಾರಣ ನಿನ್ನ ಕಣ್ಣುಗಳು ಇಂಗಿಹೋಗಲಿ ಎಂದು ಶಪಿಸಿದನು. ರಾಜನಿಗೂ ಕೋಪ ಬಂತು, ಅದುಷ್ಟವಾದ ಅನ್ನವನ್ನು ದುಷ್ಟವೆಂದು ಭಾವಿಸಿದ್ದರಿಂದ ರಾಜನು ಉತ್ತಂಕನಿಗೆ 'ನಿನಗೆ ಮುಂದೆ ಮಕ್ಕಳಾಗದಿರಲಿ' ಎಂದು ಶಪಿಸಿದನು. ಆದರೆ ಉತ್ತಂಕ ರಾಜನಿಗೆ ಅನ್ನದಲ್ಲಿದ್ದ ಕೇಶವನ್ನು ತೋರಿಸಲಾಗಿ, ರಾಜನಿಗೆ ಪಶ್ಚಾತ್ತಾಪ ಉಂಟಾಯಿತು. ಅಡುಗೆಯ ಹೆಂಗಸಿನ ದೋಷದಿಂದ ಹೀಗಾಯಿತೆಂದೂ, ಅಪರಾಧ ಕ್ಷಮಿಸಲು ರಾಜನು ಬೇಡಲು, ಉತ್ತಂಕನು ಕ್ಷಮಿಸಿ ಬೇಗನೇ ಅಂಧತೆ ಹೋಗುವುದಾಗಿ ನುಡಿದನು. ತನಗೆ ರಾಜನಿತ್ತ ಶಾಪವನ್ನು ಹಿಂತೆಗೆದುಕೊಳ್ಳಲು ಬ್ರಾಹ್ಮಣನು ರಾಜನನ್ನು ಕೇಳಿದಾಗ, ಆ ಪೌಷ್ಯನು 'ಬ್ರಾಹ್ಮಣನ ಹೃದಯ ಬೆಣ್ಣೆಯಂತೆ, ಮಾತು ತೀಕ್ಷ್ಣ ಆದರೆ ಕ್ಷತ್ರಿಯನ ಮಾತು ಮತ್ತು ಹೃದಯ ಎರಡೂ ತೀಕ್ಷ್ಣ. ನನ್ನ ಕೋಪ ಉಪಶಮನವಾಗಿಲ್ಲ, ಆದ್ದರಿಂದ ಶಾಪ ಕೊಟ್ಟದ್ದು ತಪ್ಪೇ ಆದರೂ ಅದನ್ನು ಹಿಂತೆಗೆದುಕೊಳ್ಳಲಾರೆ' ಎಂದನು. 'ರಾಜನ್! ನೀನೇ ಹೇಳಿದಂತೆ ಶಾಪ ನನ್ನ ಮೇಲೆ ಯಾವ ಪರಿಣಾಮ ಬೀರದು' ಎಂದು ನುಡಿದ ಉತ್ತಂಕ ಓಲೆಗಳೊಡನೆ ಹೊರಟನು.

---

ಸದಾಚಾರವು ಜೀವನದಲ್ಲಿ ಅತಿ ಮುಖ್ಯವೆಂದು ಇದರ ಭಾವ. ಯಾಂತ್ರಿಕವಾದ ಸದಾಚಾರವಿಲ್ಲದ ಅಧ್ಯಯನವಾಗಲೀ, ಕ್ವಚಿತ್ತಾಗಿ ತಪ್ಪಿದರೂ ಅಪವಿತ್ರವನ್ನಾಗಿಸುತ್ತದೆ. ಕೇವಲ ಜ್ಞಾನ ಸಂಪಾದನೆ ಸಾಕೆನ್ನುವವರ ವಾದ ಅಪ್ರಬುದ್ಧವೆಂದು ತಿಳಿಸುತ್ತದೆ ಉತ್ತಂಕನಂತಹವರ ಜೀವನ.

ರಾಣಿಯು ತಿಳಿಸಿದಂತೆ ಉತ್ತಂಕನನ್ನು ಕ್ಷಪಣಕ ವೇಷಧಾರಿ ತಕ್ಷಕ ಬೆನ್ನು ಹತ್ತಿದ. ಉತ್ತಂಕನಿಗೆ ದಾರಿಯಲ್ಲಿ ಶೌಚಕ್ಕೆ ಹೋಗಬೇಕಾಯಿತು. ಅದಕ್ಕಾಗಿ ನೀರಿನ ಸಲುವಾಗಿ ಭೂಮಿಯ ಮೇಲೆ ಕುಂಡಲಗಳನ್ನಿಟ್ಟು ನಡೆದ. ಕ್ಷಪಣಕ ಕೂಡಲೇ ಕರ್ಣಕುಂಡಲಗಳನ್ನು ತೆಗೆದುಕೊಂಡು ಓಡಿದ. ಶೌಚಕಾರ್ಯ ಮುಗಿಸಿ ಬಂದ ಉತ್ತಂಕನು ಕುಂಡಲಗಳನ್ನು ಕಾಣದೇ ಇದು ತಕ್ಷಕನ ಕೆಲಸವೆಂದೇ ತಿಳಿದು ಅವನನ್ನು ಬೆನ್ನುಹತ್ತಿ ಹಿಡಿದ. ಕೂಡಲೇ ಕ್ಷಪಣಕ ವೇಷಧಾರಿ ತಕ್ಷಕನು ಹಾವಾಗಿ ಬಿಲವೊಂದನ್ನು ಸೇರಿ ನಾಗಲೋಕಕ್ಕೆ ನಾಗಾಲೋಟದಿಂದ ಧಾವಿಸಿದ. ಉತ್ತಂಕ ಹೆಸರದೆ ಆ ಬಿಲವನ್ನು ತನ್ನ ಪಲಾಶಕಾಂಡದಿಂದಲೇ ಅಗೆಯಲು ಆರಂಭಿಸಿದ. ಇದಕ್ಕೂ ಮೊದಲು ಉತ್ತಂಕನು ದೇವತೆಗಳನ್ನು ನಮಸ್ಕರಿಸಿದನು. ಉತ್ತಂಕನ ಗುರುದೇವತಾ ಭಕ್ತಿಗಳು ಇಂದ್ರನ ಮನಸ್ಸನ್ನು ಕರಗಿಸಿ ಇಂದ್ರನು ಉತ್ತಂಕನಿಗೆ ಅನುಗ್ರಹಿಸಿದ ಪರಿಣಾಮವಾಗಿ ಪಲಾಶಕಾಂಡ ವಜ್ರಾಯುಧ ಸನ್ನಿಧಾನಯುಕ್ತದಂಡವಾಯಿತು. ಉತ್ತಂಕನು ಆ ದಂಡದಿಂದ ಬಿಲವನ್ನು ಅಗೆದು ನಾಗಲೋಕವನ್ನೇ ಪ್ರವೇಶಿಸಿದ. ಅನೇಕ ವಿಧವಾದ ಅರಮನೆಗಳಿಂದ ಕೂಡಿದ ನಾಗಲೋಕವನ್ನು ನೋಡಿದ ಉತ್ತಂಕನು ನಾಗಗಳನ್ನು ಸ್ತೋತ್ರ ಮಾಡಿದನು[೧]. ತಕ್ಷಕನನ್ನೂ ಸ್ತೋತ್ರ ಮಾಡಿದನು. ಆದರೆ ಯಾವ ನಾಗನೂ, ನಾಗರಾಜನೂ ಅನುಗ್ರಹಿಸಲಿಲ್ಲ.

ಆಗ ಅಲ್ಲಿ ಇಬ್ಬರು ಸ್ತ್ರೀಯರು ಬಟ್ಟೆನೇಯುವುದನ್ನೂ, ಬಟ್ಟೆಗಳು ಬಿಳಿ, ಕಪ್ಪಾಗಿರುವುದನ್ನೂ, ಆರು ಮಕ್ಕಳು, ೧೨ ಗೂಟಗಳುಳ್ಳ ಒಂದು ಚಕ್ರವನ್ನು ತಿರುಗಿಸುತ್ತಿರುವುದನ್ನೂ, ಸಮೀಪದಲ್ಲಿ ಒಬ್ಬ ಸುಂದರ ಪುರುಷ ಹಾಗೂ ಒಂದು ಕುದುರೆಯನ್ನು ನೋಡಿದನು. ಇವರೆಲ್ಲರನ್ನೂ ಉತ್ತಂಕನು ಸ್ತೋತ್ರ ಮಾಡಿ ಇಂದ್ರನನ್ನೂ ಸ್ತೋತ್ರ ಮಾಡಿದನು. ಸ್ತೋತ್ರದಿಂದ ಮೆಚ್ಚಿದ ಪುರುಷನು 'ನಿನಗೇನು ಬೇಕು' ಎಂದನು. 'ನಾಗಗಳು ನನ್ನ ವಶವಾಗಬೇಕು' ಎಂದು ಉತ್ತಂಕನು ಬೇಡಿದನು. ಹಾಗಾದರೆ ' ಈ ಅಶ್ವದ ಗುದದಲ್ಲಿ ಊದಿ ಪ್ರಜ್ವಲಿಸುವಂತೆ ಮಾಡು' ಎಂದನು. ಹಾಗೆಯೇ ಉತ್ತಂಕ ಮಾಡಲು ಅಶ್ವದ ಎಲ್ಲ ದ್ವಾರಗಳಿಂದ ಹೊಗೆಯಿಂದ ಕೂಡಿದ ಅಗ್ನಿಜ್ವಾಲೆಗಳು ಹೊರಸೂಸಿ ನಾಗಲೋಕವೆಲ್ಲ ದಹಿಸುವಂತಾಯಿತು. ಭ್ರಾಂತಿಗೊಂಡ ತಕ್ಷಕ ಅಗ್ನಿಭಯದಿಂದ ದುಃಖಿಸುತ್ತಾ ಕುಂಡಲಗಳನ್ನು ಉತ್ತಂಕನಿಗೆ ಹಿಂತಿರುಗಿಸಿದನು.

ಅಂತೂ ಕುಂಡಲಗಳನ್ನು ಪಡೆದರೂ ಗುರುಗಳ ಮನೆಗೆ ಹೋಗುವುದೆಂತು? ಅವರನ್ನು ಸಂಭಾವಿಸುವುದು ಹೇಗೆಂದು ಚಿಂತಿಸತೊಡಗಿದನು. ಆಗ ಅಲ್ಲಿಯೇ ಇದ್ದ ಪುರುಷನು ಈ ಅಶ್ವವನ್ನು ಏರು. ಒಂದೇ ಕ್ಷಣದಲ್ಲಿ ಗುರುಕುಲಕ್ಕೆ ಕರೆದುಕೊಂಡು ಹೋಗುತ್ತದೆ ಎಂದನು.

---

೧ ಯ ಐರಾವತರಾಜಾನಃ ಸರ್ಪಾಃ ಸಮಿತಿ ಶೋಭನಾ।
ತತ್ರಸ್ಥಾನಪಿ ಸಂಸ್ತೌಮಿ ಮಹತಃ ಪನ್ನಗಾನಪಿ॥ - ಆದಿಪರ್ವ(೩/೧೩೪,೧೩೬)
ತಕ್ಷಕಶ್ಚಾಶ್ವ ಸೇನಶ್ಚ ನಿತ್ಯಂ ಸಹಚರಾವುಭೌ।
ಕರವಾಣಿ ಸದಾಚಾಹಂ ನಮಸ್ತಸ್ಮೈ ಮಹಾತ್ಮನೇ॥ - ಆದಿಪರ್ವ(೩/೧೪೦,೧೪೨)

ಕೂಡಲೇ ಅಶ್ವವನ್ನೇರಿ ಸಕಾಲಕ್ಕೆ ಗುರುಕುಲ ಸೇರಿದನು. ಉಪಾಧ್ಯಾಯಿನಿಯು ಸ್ನಾನ ಮಾಡಿ ತಲೆ ಬಾಚಿಕೊಳ್ಳುತ್ತಾ ಉತ್ತಂಕನ ಆಗಮನವನ್ನೇ ನಿರೀಕ್ಷಿಸುತ್ತಿದ್ದಳು. ಉತ್ತಂಕನು ತಡವಾಗಿ ಬರುತ್ತಿದ್ದುದನ್ನು ಕಂಡು ಶಾಪ ಕೊಡಬೇಕೆನ್ನುವ ವೇಳೆಗೆ ಬಂದು ನಮಸ್ಕರಿಸಿ ಕರ್ಣಾಭರಣವನ್ನು ಕೊಟ್ಟನು. ಗುರುಪತ್ನಿ ಉತ್ತಂಕನನ್ನು ಸ್ವಾಗತಿಸಿ, 'ನಿನಗೆ ಅಭ್ಯುದಯ ಕಾದಿದೆ. ಸಿದ್ಧಿಯನ್ನು ಹೊಂದುವೆ' ಎಂದಳು. ಉತ್ತಂಕನು ಗುರುಗಳಿಗೂ ಅಭಿನಂದಿಸಿದನು. ತಾನು ಹೇಗೆ ಕುಂಡಲಗಳನ್ನು ರಾಜಪತ್ನಿಯಿಂದ ಪಡೆದ, ತಕ್ಷಕನು ಹೇಗೆ ವಿಘ್ನಗಳನ್ನುಂಟು ಮಾಡಿದನೆಂದು ವಿವರಿಸಿದ ಉತ್ತಂಕನು ಗುರುಗಳನ್ನು 'ನಾನು ನೋಡಿದ ಬಟ್ಟೆ ನೇಯುತ್ತಿದ್ದ ಇಬ್ಬರು ಸ್ತ್ರೀಯರು, ಬಿಳಿ, ಕರಿ ಬಟ್ಟೆಗಳು, ದಾರಗಳು ಏನು? ನಾನು ನೋಡಿದ ಹನ್ನೆರಡು ಕಾಲುಗಳಿಂದ ಕೂಡಿದ ಚಕ್ರ, ಅದನ್ನು ನಡೆಸುತ್ತಿದ್ದ ಬಾಲಕರು ಯಾರು? ಅಲ್ಲಿದ್ದ ಪುರುಷ ಹಾಗೂ ಅಶ್ವ ಯಾರು? ಇದಕ್ಕೂ ಮೊದಲು ನಾನು ದಾರಿಯಲ್ಲಿ ಕಂಡ ಎತ್ತು, ಪುರುಷರು ಯಾರು? ಎತ್ತಿನ ಸಗಣಿ ನಾನು ತಿಂದೆ. ಅದೇನು? ಇವುಗಳ ರಹಸ್ಯವೇನು?' ಎಂದು ಕೇಳಿದನು. ಅದಕ್ಕೆ ಗುರುಗಳು –

ಉತ್ತಂಕ! ವತ್ಸ! ನೀನು ನೋಡಿದ ಇಬ್ಬರು ಸ್ತ್ರೀಯರು ಧಾತ್ರೀ, ವಿಧಾತ್ರೀಯರು. ಕಪ್ಪು ಬಿಳಿ ದಾರಗಳೇ ರಾತ್ರಿ ಹಗಲುಗಳು. ಹನ್ನೆರಡು ಕಾಲುಗಳ ಚಕ್ರವೇ ೧೨ ಮಾಸಗಳುಳ್ಳ ಸಂವತ್ಸರ. ಆರು ಬಾಲಕರು ಆರು ಋತುಗಳು. ನೀನು ನೋಡಿದ ಅಶ್ವಾರೋಹಿ ಪುರುಷ ಪರ್ಜನ್ಯದೇವ, ಅಶ್ವವೇ ಅಗ್ನಿ ವೃಷಭವೇ ಐರಾವತ. ನಾಗರಾಜ ವೃಷಭಾರೂಹಿಯೇ ಇಂದ್ರ, ನನ್ನ ಸ್ನೇಹಿತ. ನೀನು ತಿಂದ ಸಗಣಿಯೇ ಅಮೃತ. ಆದ್ದರಿಂದ ನೀನು ನಾಗಲೋಕಕ್ಕೆ ಹೋಗಲು ಸಮರ್ಥನಾದೆ. ಆತನ ಅನುಗ್ರಹದಿಂದಲೇ ಕುಂಡಲಗಳು ದೊರಕಿವೆ. ವತ್ಸ ಉತ್ತಂಕ ನೀನಿನ್ನು ಹೋಗು. ನಿನಗೆ ಅಭ್ಯುದಯ ಆಗಲಿದೆ ಎಂದರು.

## ಸಂದೇಶಗಳು

ಹೀಗೆ ಗುರುಗಳ ಸೇವೆ ಮಾಡಿ ಗುರುಪತ್ನಿಗೆ ಕುಂಡಲಗಳನ್ನು ತುಂಬಾ ಕ್ಲೇಶಪಟ್ಟಾದರೂ ತಂದುಕೊಡುವ ಮೂಲಕ ಗುರುದಕ್ಷಿಣೆ ನೀಡಿ ಗುರುಗಳಿಂದ ಭಲೇ ಎಂದು ಅನ್ನಿಸಿಕೊಂಡ ಧನ್ಯ ಶಿಷ್ಯ ಉತ್ತಂಕನು ಒಬ್ಬ ಆದರ್ಶ ಶಿಷ್ಯ. ಶಿಷ್ಯನ ಸೇವೆಯನ್ನು ಗುರುತಿಸಿ ಅನುಗ್ರಹಿಸಿದ ವೇದರು ಆದರ್ಶ ಗುರುಗಳು[೧].

---

೧ ಉತ್ತಂಕನು ನಾಗಲೋಕದಲ್ಲಿ ಮಾಡಿದ ಸರ್ಪಸ್ತುತಿ 'ನಾಗಪಂಚಮೀ'ಯಂದು ವಿಶೇಷವಾಗಿ ಪಠಿಸಬಹುದಾದ ನಾಗಸ್ತೋತ್ರವಾಗಿದೆ. ಹಾಗೆಯೇ ಇಂದ್ರಸ್ತುತಿಯೂ ಇಲ್ಲಿನ ಒಂದು ಸುಂದರ ಪಠಣೀಯ ಸ್ತೋತ್ರ.

ಗುರು ಹಾಗೂ ಗುರುಪತ್ನಿಯರು ಶಿಷ್ಯರನ್ನು ಪರೀಕ್ಷಿಸಿದ ಅಪೂರ್ವ ಪ್ರಸಂಗಗಳೇ ಇದರ ವಸ್ತು. ಪರೀಕ್ಷೆಯ ಪ್ರತಿ ಹಂತದಲ್ಲಿ ಅವರಲ್ಲಿ ಶಿಷ್ಯವಾತ್ಸಲ್ಯ ಎದ್ದು ತೋರುವುದು.

ತಕ್ಷಕನು ಉತ್ತಂಕನನ್ನು ಕಾಡಿಸಿದ ಪರಿಣಾಮವು ಜನಮೇಜಯ ರಾಜನ ಬಳಿಗೆ ಉತ್ತಂಕನು

ಮಹಾಭಾರತದ ಆದಿಭಾಗವು ಹೀಗೆ ಗುರುಶಿಷ್ಯರ ಅಪೂರ್ವ ಕಥೆಗಳಿಂದ ಆರಂಭವಾಗುತ್ತದೆ. ಆರುಣಿ, ಉಪಮನ್ಯು, ವೇದ ಮತ್ತು ಉತ್ತಂಕರು ಉದಾತ್ತ ಶಿಷ್ಯರು. ಗುರುಸೇವೆಯ ಅನಿವಾರ್ಯತೆ, ಗುರುವೃತ್ತಿ, ಗುರುವಿನ ಬಗ್ಗೆ ವಿಧೇಯತೆ ಮುಂತಾದ ಗುಣಗಳು ಶಿಷ್ಯನಲ್ಲಿರಲೇಬೇಕಾದ ಗುಣಗಳಾದರೆ, [೧]ಗುರುವು ಶಿಷ್ಯನ ಬಗೆಗೆ ವಾತ್ಸಲ್ಯ, ಆತನ ಕಷ್ಟಕಾರ್ಪಣ್ಯಗಳ ಬಗೆಗಿನ ಅರಿವು, ಸಕಾಲಿಕ ಅನುಕಂಪ, ಕೃಪೆ, ದಯಾದಾಕ್ಷಿಣ್ಯಗಳನ್ನು ಹೊಂದಿರಲೇಬೇಕೆಂದು ಈ ಕಥೆಗಳು ತಿಳಿಸುತ್ತವೆ. [೨]ಅಶಾಸ್ತ್ರೀಯ ವರ್ತನೆಯ ಗುರುವು ಅನುಸರಣೀಯನಲ್ಲ, ಪ್ರತ್ಯುತ ತ್ಯಾಜ್ಯ. ಗುರು ಎಂದೂ ಶಿಷ್ಯನಿಗೆ ಬಂಧಕವಾಗಿರಬಾರದೆಂದೇ ಆಚಾರ್ಯ ಮಧ್ವರು ಭಾಗವತತಾತ್ಪರ್ಯದಲ್ಲಿ ನಿರೂಪಿಸಿದ್ದಾರೆ. ಪಾಠದಿಂದ ಬರುವ ಜ್ಞಾನಕ್ಕಿಂತ ಹೆಚ್ಚಾಗಿ ಗುರು ಸೇವೆಯಿಂದಲೇ ಜ್ಞಾನ ಬರುತ್ತದೆ ಎಂದು ಉಪಾಖ್ಯಾನ ತಿಳಿಸುತ್ತದೆ.

'ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ' ಎಂಬ ಗೀತೆಯ ವಾಕ್ಯವು (೪/೩೪) ಇದೆಲ್ಲವನ್ನು ಸಮರ್ಥಿಸುತ್ತದೆ. ಬ್ರಹ್ಮಜ್ಞಾನವನ್ನು ಪ್ರಣಾಮ, ಪರಿಪ್ರಶ್ನೆ ಹಾಗೂ ಸೇವೆಗಳಿಂದ ಪಡೆಯಲು ಸಾಧ್ಯವೆಂಬುದೇ ಇದರ ಆಂತರ್ಯ. ಗುರುಸೇವೆ ಮಾಡುವಾಗ ಬರುವ ವಿಘ್ನಗಳೆಲ್ಲವನ್ನೂ ದೇವತೆಗಳು ಪರಿಹರಿಸುತ್ತಾರೆ. ಸೂಕ್ತವಾದ ಸಕಾಲಿಕ ನೆರವನ್ನೂ ನೀಡುತ್ತಾರೆ ಎಂದು ಆರುಣಿ ಮೊದಲಾದವರ ಚರಿತ್ರೆಗಳು ತಿಳಿಸುತ್ತವೆ. ಅಲ್ಲದೇ ಬ್ರಹ್ಮಜ್ಞಾನವನ್ನು, ಸಕಲ ಐಶ್ವರ್ಯವನ್ನು ದಯಪಾಲಿಸುವರೆಂದೂ ಈ ಕಥೆಗಳು

---

ಹೋಗಿ ಪರೀಕ್ಷಿತ್ ರಾಜನನ್ನು ಕೊಂದ ತಕ್ಷಕನ ಮೇಲೆ ಸೇಡು ತೀರಿಸುವ ಪ್ರಚೋದನೆಯಲ್ಲಿ ಪರ್ಯವಸಾನವಾಗುತ್ತದೆ. ಅಲ್ಲದೇ ಸ್ವಯಂ ಉತ್ತಂಕನು ಸರ್ಪಸತ್ರದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾನೆ.

'ಸ ಉಪಧ್ಯಾಯೇನ ಅನುಜ್ಞಾತೋ ಭಗವಾನುತ್ತಂಕಃ ಕೃದ್ಧಸ್ತಕ್ಷಕಂ ಪ್ರತಿ ಚಿಕೀರ್ಷಮಾಣೋ ಹಸ್ತಿನಾಪುರಂ ಪ್ರತಸ್ಥೇ ॥ - ಆದಿಪರ್ವ(೩/೧೭೦)

ತಕ್ಷಕೇಣ ಮಹೇಂದ್ರೇಂದ್ರ ಯೇ ನ ತೇ ಹಿಂಸಿತಃ ಪಿತಾ ।
ತಸ್ಮೈ ಪ್ರತಿಕುರುಷ್ವ ತ್ವಂ ಪನ್ನಾಗಾಯ ದುರಾತ್ಮನೇ ॥ - ಆದಿಪರ್ವ(೩/೧೭೮)

ಶಾಸ್ತ್ರಾಧ್ಯಯನದ ಅಂತಿಮಘಟ್ಟವು ಹೇಗೆ ಕೋಪಕಾರ್ಯದಲ್ಲಿ ಪರ್ಯವಸಾನವಾಯಿತೆಂಬುದು ನಿಜಕ್ಕೂ ಒಂದು ವಿಧಿಯ ವಿಪರ್ಯಾಸವೇ ಸರಿ. ಕಾಮ ಕ್ರೋಧವನ್ನು ಗೆಲ್ಲುವ ಸಾಧನವಾಗದೇ ಶಾಸ್ತ್ರವು ಕೆಲವೊಮ್ಮೆ ಛಿನ್ನ ಭಾಗವತಧರ್ಮರಿಗೆ ಅನೇಕ ವೇಳೆ ಕ್ರೋಧಕಾರ್ಯಗಳಲ್ಲಿ ಮುಕ್ತಾಯವಾಗುತ್ತದೆ ಎಂದು ಇದರ ಭಾವ.

೧ 'ಶ್ರೀರಾಘವೇಂದ್ರಗುರವೇ ನಮೋಽತ್ಯಂತ ದಯಾಲವೇ' 'ಕೃಪಾಲುತ್ವಾದಿ ವಿಶಿಷ್ಟೋ ಗುರುಃ' ಇತ್ಯಾದಿ ಸಾಂಪ್ರದಾಯಿಕ ಮಾತುಗಳು ಇದನ್ನು ಸಮರ್ಥಿಸುತ್ತವೆ.

೨ ಗುರೂಕ್ತಮಪಿ ನ ಗ್ರಾಹ್ಯಂ ಯದನರ್ಥೇಽರ್ಥ ಕಲ್ಪನಂ । - ಭಾಗವತ

೩. ನ ದೇವಾ ಯಷ್ಟಿಮಾದಾಯ ರಕ್ಷಂತಿ ಪಶುಪಾಲವತ್ ।
ಯಂ ತು ರಕ್ಷಿತುಮಿಚ್ಛಂತಿ ಬುಧ್ಯಾ ಸಂಯೋಜಯಂತಿ ತಮ್ ॥ - ಮನುಸ್ಮೃತಿ.

ತಿಳಿಸುತ್ತವೆ. ಆದ್ದರಿಂದ ಗುರುಸೇವೆ, ಅವರ ಪ್ರಸನ್ನತೆ, ಅನುಗ್ರಹಕ್ಕೋಸ್ಕರ ಸರ್ವದಾ ಪ್ರಯತ್ನಿಸಬೇಕೆಂಬುದೇ ಶಾಸ್ತ್ರದ ಹೃದಯವಾಗಿದೆ[೧]. ಗುರುಶಿಷ್ಯರ ಸಂಬಂಧ ಮಹತ್ತ್ವ ಮುಂತಾದವುಗಳ ಬಗೆಗಿನ ಮೂಲಗ್ರಂಥಗಳ ಇತರ ಕೆಲ ವಾಕ್ಯಗಳನ್ನು ಪರಿಷ್ಟದಲ್ಲಿ ಕೊಡಲಾಗಿದೆ.

ಮಹಾಭಾರತ ಮೂಲ ಕಥೆಯಾದ ಪಾಂಡವ-ಕೌರವರಲ್ಲಿಯೂ ಮೇಲಿನವು ಪ್ರತಿಫಲಿತವಾಗಿವೆ. ಶ್ರೀಕೃಷ್ಣ ಹಾಗೂ ವೇದವ್ಯಾಸರಲ್ಲಿ ಶಸ್ತ್ರಶಾಸ್ತ್ರಗಳ ಅಧ್ಯಯನ ಮಾಡಿದ ಪಾಂಡವರು ಸಾಮಾನ್ಯ ಶಸ್ತ್ರಶಾಸ್ತ್ರ ಜ್ಞಾನಕ್ಕಾಗಿ ದ್ರೋಣಾಚಾರ್ಯರನ್ನು ಗುರುವನ್ನಾಗಿಸಿಕೊಂಡರಲ್ಲದೆ, ಅವರ ಅನುಗ್ರಹಕ್ಕಾಗಿ ಸದಾ ಸೇವಾಶೀಲರಾಗಿದ್ದರು. ದ್ರೋಣರ ಆಣತಿಯಂತೆ ಭೀಮನ ನೇತೃತ್ವದಲ್ಲಿ ದ್ರುಪದನನ್ನು ಸೆರೆಹಿಡಿದರಲ್ಲದೆ, ಅವರಿಗೆ ಅನ್ನ, ವಸತಿ ಕಲ್ಪಿಸಿದ್ದರು. ಕುರುಕ್ಷೇತ್ರದಲ್ಲಿ ದ್ರೋಣರು ಪ್ರತಿಪಕ್ಷದಲ್ಲಿದ್ದರೂ ಪಾಂಡವರ ಪಕ್ಷಪಾತಿಗಳಾದ ಗುರುಗಳಾಗಿದ್ದರು. ಇದಕ್ಕೆ ವಿರುದ್ಧವಾಗಿ ದ್ರೋಣರನ್ನು ಗುರುಗಳನ್ನಾಗಿ ಮಾಡಿಕೊಂಡಿದ್ದರೂ, ದುರ್ಯೋಧನನು ಅವರಿಗೆ ಕೋಪ ಬರಿಸುತ್ತಿದ್ದನಲ್ಲದೆ, ಅವರ ಆಗ್ರಹಕ್ಕೆ ಗುರಿಯಾಗಿ ಕೊನೆಗೆ ಹತನಾಗುತ್ತಾನೆ. ಗುರುದ್ರೋಣರಷ್ಟೇ ಅಲ್ಲದೇ ಗುರುಸ್ಥಾನದಲ್ಲಿದ್ದಎಲ್ಲಹಿರಿಯರಆಗ್ರಹಕ್ಕೆಗುರಿಯಾಗಿದುರ್ಯೋಧನಾದಿಗಳುಸರ್ವನಾಶ ಹೊಂದಿದರು ಎಂಬುದು ಸರ್ವವಿದಿತವಾದುದು. ಆದ್ದರಿಂದ ಗುರುಜನರ ಸೇವೆ, ಅವರ ಅನುಗ್ರಹಪ್ರಾಪ್ತಿಗಾಗಿ ಶ್ರೇಯಸ್ಸನ್ನು ಬಯಸುವವರೆಲ್ಲರೂ ಮಾಡಬೇಕೆಂಬುದೇ ಶಾಸ್ತ್ರದ ಸಾರ. ಅದನ್ನೇ ಶ್ರೀಪುರಂದರದಾಸರು 'ಗುರುವಿನ ಗುಲಾಮನಾಗದ ತನಕ ದೊರೆಯದಣ್ಣ ಮುಕುತಿ' ಎಂದಿದ್ದಾರೆ.

*****

---

೧ ನಾತಿ ಪ್ರಸನ್ನ ಹೃದಯಃ ಯದ್ ದದ್ಯಾತ್ ಗುರುರಪ್ಯಸೌ।
ನ ತತ್ಸತ್ತ್ವಂ ಭವೇತ್ತಸ್ಮಾತ್ ಅರ್ಚನೀಯೋ ಗುರುಃ ಸದಾ॥ - ಮ.ತಾ.ನಿ. ೧/೧೨೬

## ೨. ಭೃಗುವಂಶಚರಿತ್ರೆ

ಭೃಗು ಋಷಿಗಳ ವಂಶವು ಇಂದ್ರಾದಿ ದೇವತೆಗಳಿಂದ, ಋಷಿಗಳಿಂದ, ಮರುದ್ಗಣಗಳಿಂದ ಪೂಜಿತವಾದುದು. ಇಲ್ಲಿಯೇ ಪರಶುರಾಮದೇವರು ಅವತರಿಸಿದ್ದುದು. ಬ್ರಹ್ಮಕೃತ ವಾರುಣ ಯಜ್ಞಕುಂಡದಿಂದ ಭೃಗುಋಷಿಗಳು ಹುಟ್ಟಿದ ಅಯೋನಿಜರು[೧]. ಇವರು ವರುಣಯಜ್ಞದಿಂದ ಉದ್ಭವವಾದ್ದರಿಂದ ವಾರುಣಿ ಎಂದೂ ಕರೆಯಲ್ಪಡುತ್ತಾರೆ. ಇವರ ಹೆಂಡತಿ ಪುಲೋಮಾ (ಪುಲೋಮೆ). ಈಕೆಯಲ್ಲಿ ಜನಿಸಿದವರೇ ಚ್ಯವನರು. ಚ್ಯವನರಿಗೆ ಯಯಾತಿ ಪುತ್ರಿಯಾದ ಸುಕನ್ಯೆಯಲ್ಲಿ ಜನಿಸಿದನೇ ಪ್ರಮತಿ ಎಂಬ ಮಗ. ಈ ಪ್ರಮತಿಗೆ ಘೃತಾಚೀ ಎಂಬ ಅಪ್ಸರೆಯಲ್ಲಿ ಜನಿಸಿದವನೇ ರುರು. ರುರುವಿನ ಪತ್ನಿ ಮಹಾಸುಂದರಿಯಾದ ಪ್ರಮದ್ವರಾ. ಈಕೆ ವಿಶ್ವಾವಸು ಎಂಬ ಗಂಧರ್ವನಿಂದ ಮೇನಕೆ ಎಂಬ ಅಪ್ಸರೆಯಲ್ಲಿ ಜನಿಸಿದ ಮಹಾನುಭಾವಳು. ರುರುಪ್ರಮದ್ವರೆಯಲ್ಲಿ ಜನಿಸಿದವರೇ ಶುನಕರು. ಇವರ ಮಗನೇ ಶೌನಕರು. ಇವರಿಗೆ ಸೂತ ಜಾತಿಯ ರೋಮಹರ್ಷಣರ ಪುತ್ರನಾದ ಉಗ್ರಶ್ರವಸ್, ಈತನೇ ಸೌತಿ (ಸೂತಪುತ್ರನಾದ್ದರಿಂದ). ಶೌನಕಾದಿ ಬ್ರಾಹ್ಮಣರಿಗೆ ಭಾರತ-ಪುರಾಣಾದಿಗಳನ್ನು ಶ್ರವಣ ಮಾಡಿಸಿದ ವ್ಯಾಸರ ಅನುಗ್ರಹಸಂಪನ್ನ ಶಿಷ್ಯ.

ಈ ಭೃಗುವಂಶದಲ್ಲಿ ಮುಖ್ಯವಾಗಿ ಚ್ಯವನರ ಜನ್ಮವೃತ್ತಾಂತ, ನಂತರ ರುರುಪ್ರಮದ್ವರೆಯರ ಆದರ್ಶಪ್ರೇಮದ ದಾಂಪತ್ಯಚರಿತ್ರೆಗಳು ವಿಶೇಷವಾಗಿ ಗಮನ ಸೆಳೆಯುವಂತಹುವಾಗಿವೆ.

### ಚ್ಯವನರ ಜನ್ಮವೃತ್ತಾಂತ

**ಭೃಗು** ಋಷಿಗಳ ಪತ್ನಿ **ಪುಲೋಮಾ**, ಇವರ ಅನುಪಮ ಪವಿತ್ರ ದಾಂಪತ್ಯ ಸಾಗಿತ್ತು. ಪುಲೋಮೆಯು ಗರ್ಭವತಿಯೂ ಆದಳು. ಭೃಗುಗಳು ಒಮ್ಮೆ ಸಮೀಪದ ನದಿಗೆ ಸ್ನಾನಕ್ಕೆ ಹೋದಾಗ ಆಶ್ರಮವನ್ನು ಪುಲೋಮನೆಂಬ ರಾಕ್ಷಸನು ಪ್ರವೇಶಿಸಿದನು. ಸುಂದರಿಯಾದ ಪುಲೋಮೆ ಬಂದ ಅಭ್ಯಾಗತನನ್ನು ಕಂದಮೂಲಫಲಗಳಿಂದ ಸತ್ಕರಿಸಿದಳು. ಆದರೆ ರಾಕ್ಷಸನ ಉದ್ದೇಶವು ಆಕೆಯನ್ನು ಅಪಹರಿಸಿಕೊಂಡು ಹೋಗುವುದಾಗಿತ್ತು. ಆಕೆಯ ರೂಪಕ್ಕೆ ಬಹು ಹಿಂದೆಯೇ ಮರುಳಾಗಿದ್ದ ಪುಲೋಮನು ಈಕೆಯನ್ನು ವರಿಸಿದ್ದ. ಆದರೆ ವಿಧಿಯ ಸಂಕಲ್ಪ-

---

೧ ದ್ರೌಪದೀ, ದೃಷ್ಟದ್ಯುಮ್ನರೂ ಸಹ ಯಜ್ಞದಿಂದ ಉತ್ಪನ್ನರಾದ ಅಯೋನಿಜರು.

ದಂತೆ ಈಕೆಯು ಭೃಗು ಋಷಿಗಳಿಗೆ ವಿಧ್ಯುಕ್ತವಾಗಿ, ಅಗ್ನಿಸಾಕ್ಷಿಯಾಗಿ ಮದುವೆಯಾಗಿದ್ದಳು. ಆದರೆ ಪುಲೋಮನ ಕಾಮದಕಣ್ಣು ಪುಲೋಮೆಯನ್ನು ಅಪಹರಿಸಲು ಬಯಸಿತ್ತು. ಆದರೆ ಭಯ. ಅಲ್ಲಿಯೇ ಇದ್ದ ಪ್ರಜ್ವಲಿಸುತ್ತಿದ್ದ ಅಗ್ನಿಯನ್ನು ಸ್ತೋತ್ರ ಮಾಡಿದಂತೆ ಮಾಡಿ ಕೇಳಿದ 'ಅಗ್ನಿದೇವ ನಾನು ಇವಳನ್ನು ವರಿಸಿದ್ದೇನಷ್ಟೇ? ಆದರೆ ಮಿಥ್ಯಾವಾದಿಯಾದ ಇವಳ ತಂದೆ ಆಮೇಲೆ ಭೃಗುವಿಗೆ ಕೊಟ್ಟನಷ್ಟೇ ? ನನಗಿಂದು ರಹಸ್ಯದಲ್ಲಿ ಸಿಕ್ಕಿರುವ ಇವಳು ಭೃಗು ಪತ್ನಿಯೇ ? ಹೇಳು. ಸತ್ಯವನ್ನೇ ನುಡಿ, ಇವಳನ್ನು ನಾನು ಆಶ್ರಮದಿಂದ ಅಪಹರಿಸಿಕೊಂಡು ಹೋಗುವೆ. ನನ್ನ ಕೋಪಾಗ್ನಿಯು ಹೃದಯವನ್ನೇ ಸುಡುವಂತಿದೆ. ಅನ್ಯಾಯವಾಗಿ ಭೃಗುವು ನನ್ನ ಭಾರ್ಯೆಯನ್ನು ಪಡೆದಿದ್ದಾನೆ. ಇದಕ್ಕೆ ಅಗ್ನಿದೇವ ದುಃಖಿತನಾದನು. ಭೃಗುಗಳ ಶಾಪಕ್ಕೆ ಗುರಿಯಾದೇನೆಂಬ ಭಯ ಬೇರೆ (ತಾನು ಸುಳ್ಳು ಹೇಳಿದರೆ). ಪುಲೋಮಗೆ ಹೇಳಿದ [1]'ನೀನು ವರಿಸಿದ ಈ ಪುಲೋಮೆಯನ್ನು ವಿದ್ಯುಕ್ತವಾಗಿ ನನ್ನ ಸಾಕ್ಷಿಯಾಗಿಯೇ ಭೃಗುಗಳಿಗೆ ಕೊಟ್ಟಿರುವುದರಿಂದ ಈಕೆ ಭೃಗುಪತ್ನಿಯೇ ಸರಿ. ಸುಳ್ಳು ಹೇಳಲಾರೆ, ಲೋಕದಲ್ಲಿ ಎಂದೂ ಅಸತ್ಯವಚನವು ಮನ್ನಿಸಲ್ಪಡದು.'

ಅಗ್ನಿಯ ಮಾತು ಕೇಳಿ, ಅದು ರುಚಿಸದೆ ಪುಲೋಮೆಯನ್ನು ವರಾಹರೂಪ ಸ್ವೀಕರಿಸಿ ಅಪಹರಿಸಿಕೊಂಡು ಪುಲೋಮನು ವಾಯುವೇಗದಿಂದ ಹೋದನು. ಇದನ್ನು ಗಮನಿಸಿದ ಈಕೆಯ ಗರ್ಭವು ರೋಷದಿಂದ ಹೊಟ್ಟೆಯಿಂದ ಹೊರಬಿದ್ದಿತು. ಆದ್ದರಿಂದ ಚ್ಯವನನೆಂಬ ನಾಮಧೇಯವೂ ಆ ಮಗುವಿಗೆ ಬಂದಿತು. ಮಗು ಚ್ಯವನನ ಕೋಪಾಗ್ನಿಯಿಂದ ಕೂಡಿದ ತೇಜಸ್ಸಿನ ದೃಷ್ಟಿಯಿಂದಲೇ ಪುಲೋಮ ರಾಕ್ಷಸನು ಭಸ್ಮೀಭೂತನಾದನು. ಬ್ರಹ್ಮತೇಜಸ್ಸು ಮಗು ಹುಟ್ಟಿದ ಕೂಡಲೇ ಹೀಗೆ ಪ್ರಕಟವಾಯಿತು. ಮಗುವನ್ನು ಎತ್ತಿಕೊಂಡು ಬಹಳ ಕಷ್ಟದಿಂದ ಪುಲೋಮೆಯು ಕಣ್ಣೀರು ಸುರಿಸುತ್ತಾ ಆಶ್ರಮದ್ದೆಡೆ ಹೋದಳು. ಇದನ್ನು ನೋಡಿದ ಬ್ರಹ್ಮದೇವರು ಪುಲೋಮೆಯನ್ನು ಸಂತೈಸಿ ಧಾರಾಕಾರವಾಗಿ ಬಂದ ಆಕೆಯ ಕಣ್ಣೀರು ನದಿಯಾಗಿ ಹರಿಯುತ್ತಿದ್ದುದನ್ನು ಕಂಡು **ವಧೂಸರಾ** ಎಂದು ಕರೆದು ಅಂತರ್ಧಾನರಾದರು. ಆಶ್ರಮಕ್ಕೆ ಬಂದ ಹೆಂಡತಿ ಮಗುವನ್ನು ಗಮನಿಸಿದರೂ ಭೃಗು ಋಷಿಗಳು 'ನೀನು ನನ್ನ ಹೆಂಡತಿ ಎಂದು ಯಾರು ರಾಕ್ಷಸನಿಗೆ ತಿಳಿಸಿದರು' ಎಂದು ಕುಪಿತರಾಗಿ ಕೇಳಲು, ನಡೆದುದನ್ನು ವಿವರಿಸಲು ಅಗ್ನಿಗೆ ಹೇಳಿದಳು ಪುಲೋಮೆ. ಇದರಿಂದ ಖತಿಗೊಂಡ ಭೃಗು ಋಷಿಗಳು ಅಗ್ನಿಗೆ 'ನೀನು ಎಲ್ಲವನ್ನೂ ತಿನ್ನುವವನಾಗು' (ಸರ್ವಭಕ್ಷಕ) ಎಂದು ಶಪಿಸಿದರು. ಶಪ್ತನಾದ ಅಗ್ನಿಯು ತನ್ನ ನಿರಪರಾಧಿತ್ವವನ್ನು ಮತ್ತೆ ವಿವರಿಸಿ 'ನಾನು ನಿಮ್ಮನ್ನು ಶಪಿಸಬಲ್ಲೆ, ಆದರೆ ಬ್ರಾಹ್ಮಣರು

---

೧ ಪಿತ್ರಾ ತು ಭೃಗವೇ ದತ್ತಾ ಪುಲೋಮೆಯಂ ಯಶಸ್ವಿನೀ।
ಅಥೇಮಾಂ ವೇದ ದೃಷ್ಟೇನ ಕರ್ಮಣಾ ವಿಧಿಪೂರ್ವಕಮ್ ।
..... ಸೇಯಮಿತ್ಯವಗಚ್ಛಾಮಿ ನಾನೃತಂ ವಕ್ತುಮುತ್ಸಹೇ।
ನಾನೃತಂ ಹಿ ಸದಾ ಲೋಕೇ ಪೂಜ್ಯತೇ ದಾನವೋತ್ತಮ ॥ - ಆದಿಪರ್ವ(೫/೩೨-೩೪)

ನನಗೆ ಮಾನ್ಯರು. ನಾನು ವಿವಿಧ ಅಗ್ನಿಹೋತ್ರ, ಸತ್ರ, ಕ್ರಿಯೆ, ಯಜ್ಞಯಾಗಗಳಲ್ಲಿ ಇದ್ದು ದೇವತೆಗಳಿಗೆ ನೀಡಲ್ಪಡುವ ಹವಿಸ್ಸನ್ನು ಸ್ವೀಕರಿಸಿ, ಅವರಿಗೆ ಮುಟ್ಟಿಸುತ್ತೇನೆ. ಹೀಗಿರುವಾಗ ನಾನು ಸರ್ವಭಕ್ಷಕನಾಗಿ ಹೇಗೆ ಆಗುವೆ?' ಹೀಗೆ ಯೋಚಿಸಿ ಅಗ್ನಿದೇವನು ಎಲ್ಲ ಕ್ರಿಯೆಗಳಿಂದ ಅಂತರ್ಧಾನನಾದನು. ಇದರಿಂದ ಲೋಕದಲ್ಲಿ ಅಗ್ನಿಹೋತ್ರ, ಯಜ್ಞಯಾಗಗಳು ನಿಂತವು. ಪ್ರಜೆಗಳು ದುಃಖಿತರಾದರು. ಋಷಿಗಳು ಉದ್ವಿಗ್ನರಾಗಿ ದೇವತೆಗಳೊಡನೆ ಬ್ರಹ್ಮನನ್ನೇ ಅಗ್ನಿಯ ಪುನರಪಿ ಪ್ರಾದುರ್ಭಾವಕ್ಕೆ ಬೇಡಿಕೊಂಡರು. ದೇವ ಋಷಿಗಳ ಬೇಡಿಕೆಗೆ ಒಲಿದ ಬ್ರಹ್ಮನು ಅಗ್ನಿಯನ್ನು ಕರೆದು ಆತನ ಮಹತ್ತ್ವವನ್ನು ತಿಳಿಸಿ, ಸಂತೈಸಿ, 'ನಿನ್ನ ತೇಜಸ್ಸಿನಿಂದಲೇ ಭೃಗು ಶಾಪವನ್ನು ಸತ್ಯಮಾಡಿ ದೇವತೆಗಳ ಹವಿಸ್ಸನ್ನು ಸ್ವೀಕರಿಸು' ಎಂದು ಹೇಳಿದರು.

ಬ್ರಹ್ಮದೇವರ ಮಾತನ್ನು ಗೌರವಿಸಿ ಅಗ್ನಿದೇವನು ಮೊದಲಿನಂತೆ ಹವಿರ್ಭಾಗ ಸ್ವೀಕರಿಸಲು ಆರಂಭಿಸಿ ಜಗತ್ತಿನಚಕ್ರ ನಡೆಯಲು ಮೊದಲಿನಂತೆ ಎಡೆಮಾಡಿ ಕೊಟ್ಟನು.

ಹೀಗೆ ಭೃಗುಋಷಿಗಳ ಶಾಪದ ಸತ್ಯತೆ, ಹುಟ್ಟಿದ ಮಗುವೇ ರಾಕ್ಷಸನನ್ನು ಸಂಹಾರ ಮಾಡಿದ ಬ್ರಾಹ್ಮಣ್ಯದ ಮಹತ್ತ್ವ, ಪುಲೋಮೆಯ ಪಾತಿವ್ರತ್ಯ, ಪರಸ್ತ್ರೀಕಾಮುಕನಿಗಾಗುವ ಶಿಕ್ಷೆಗಳು ಈ ಉಪಾಖ್ಯಾನದ ನೀತಿಗಳಾಗಿವೆ. ಮಾಯಾಸೀತೆಯನ್ನು ಅಪಹರಿಸಿದ ರಾವಣನಂತೆ, ಇಲ್ಲಿ ಪುಲೋಮನೂ ಅಪಹರಿಸಿ ಹತನಾಗುತ್ತಾನೆ. '**ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ**' ಎಂಬ ಆರ್ಷವಾಕ್ಯದಂತೆ ಕ್ಷತ್ರಿಯರನ್ನೇ ನಾಶಮಾಡುವ ಸಾಮರ್ಥ್ಯವಿರುವ ಬ್ರಾಹ್ಮಣರಿಗೆ ಪುಲೋಮರಾಕ್ಷಸನನ್ನು ದೃಷ್ಟಿಮಾತ್ರದಿಂದ ಚ್ಯವನಶಿಶು ಕೊಂದದ್ದು ಆಶ್ಚರ್ಯವಲ್ಲ. ದ್ರೌಪದಿಯನ್ನು ಕಾಮಿಸಿದ ಕೀಚಕ ಹಾಗು ಜಟಾಸುರರು ಅಲ್ಲದೇ ದುರ್ಯೋಧನನು ಭೀಮನಿಂದ ಹತನಾದ ಪ್ರಸಂಗಗಳನ್ನು ಇಲ್ಲಿ ಸ್ಮರಿಸಬಹುದು.

*****

## ೩. ರುರು ಋಷಿಯ ಆದರ್ಶ ಪತ್ನಿಪ್ರೇಮ

ಚ್ಯವನರ ಮಹಾತೇಜಸ್ವೀ ಮಗನಾದ **ಪ್ರಮತಿಯು ಘೃತಾಚೀ** ಎಂಬ ಅಪ್ಸರೆಯಲ್ಲಿ **ರುರು** ಎಂಬ ಪುತ್ರನನ್ನು ಪಡೆದನಷ್ಟೇ? ಸ್ಥೂಲಕೇಶನೆಂಬ ತಪೋವಿದ್ಯಾನಿಷ್ಠನಾದ ಮುನಿಯು ಸರ್ವಭೂತಹಿತೈಷಿಯಾಗಿದ್ದನು. ಒಮ್ಮೆ **ವಿಶ್ವಾವಸು** ಎಂಬ ಗಂಧರ್ವನಿಂದ ಮೇನಕೆಯು ಗರ್ಭಧರಿಸಿ ಆ ಗರ್ಭವನ್ನು ಸ್ಥೂಲಕೇಶ ಮುನಿಯ ಆಶ್ರಮದ ಬಳಿಯ ನದೀ ತೀರದಲ್ಲಿ ಪ್ರಸವಿಸಿ ಹೊರಟು ಹೋದಳು[೧]. ಆಕೆಯ ಈ ವರ್ತನೆ ನಿಜಕ್ಕೂ ಆಶ್ಚರ್ಯಕರವೇ ಸರಿ. ನದೀ ತೀರದ ಬಳಿ ಬಿದ್ದಿದ್ದ ಆ ಮಗುವನ್ನು ಸ್ಥೂಲಕೇಶರು ನೋಡಿ ಕೃಪಾವಿಷ್ಟರಾಗಿ ತಮ್ಮ ಆಶ್ರಮಕ್ಕೆ ಕರೆತಂದು ಜಾತಕರ್ಮಾದಿಗಳನ್ನು ಮಾಡಿ ಸಾಕುತ್ತಿದ್ದರು. ಮಗುವಿನ ಸುಂದರ ಅಪ್ರತಿಮ ರೂಪದಿಂದಾಗಿ ಪ್ರಮದ್ವರಾ ಎಂದೇ ನಾಮಕರಣ ಮಾಡಿದ್ದರು ಸ್ಥೂಲಕೇಶ ಮುನಿಗಳು. ಒಮ್ಮೆ ರುರುವಿನ ದೃಷ್ಟಿಗೆ ಬಿದ್ದಳು ಪ್ರಮದ್ವರೆ. ಆಕೆಯನ್ನೇ ಮದುವೆಯಾಗಲು ಮನಸೋತ ರುರು ತನ್ನ ಸ್ನೇಹಿತರ ಮೂಲಕ ತಂದೆಗೆ ಈ ವಿಷಯ ತಿಳಿಸಿದನು. ತಂದೆ ಪ್ರಮತಿ ಸ್ಥೂಲಕೇಶರ ಬಳಿ ತನ್ನ ಮಗನಿಗೆ ಪ್ರಮದ್ವರೆಯನ್ನು ಕೊಡಲು ಯಾಚಿಸಿಯೂ ಬಿಟ್ಟ. ಬರಲಿರುವ ಭಗನಕ್ಷತ್ರದಂದು (ಉತ್ತರಾಫಾಲ್ಗುಣೀ) ವಿವಾಹ ನಿಶ್ಚಯವು ಆಯಿತು.

ಆದರೆ ಮುಂದೊಂದು ದಿನ ವಿಧಿಯು ಆಕೆಯನ್ನುಮಲಗಿದ ಸರ್ಪವನ್ನು ಪ್ರಮಾದದಿಂದ ತುಳಿಯುವಂತೆ ಮಾಡಿತು. ಸರ್ಪವು ಸ್ವಾಭಾವಿಕವಾಗಿಯೇ ಅವಳನ್ನು ಕಚ್ಚಿತು. ಆಕೆ ಮರಣವನ್ನು ಅಪ್ಪಿದಳು. ಆ ನಿರಾಭರಣ ಸುಂದರಿಯ ಕಾಂತಿಯು ಇನ್ನೂ ಹಾಗೆಯೇ ಇತ್ತು. ಆಕೆಯ ಶವವೂ ಪ್ರೇಕ್ಷಣೀಯವಾಗಿತ್ತು. ಆಕೆಯ ಮರಣದ ವಾರ್ತೆ ಆಶ್ರಮವಾಸಿಗಳನ್ನು, ತಂದೆಯಾದ ಸ್ಥೂಲಕೇಶರನ್ನು ದುಃಖಸಾಗರದಲ್ಲಿ ಮುಳುಗಿಸಿತು. ಉದ್ದಾಲಕ, ಭರದ್ವಾಜ, ಗೌತಮ, ಆರ್ಷ್ಟಿಷೇಣ ಮೊದಲಾದ ಮುನಿಗಳು ನೆರೆದರು. ಕೃಪೆಯಿಂದ ರೋದಿಸಿದರು. ಅಲ್ಲಿಗೆ ಬಂದ ರುರು ಆರ್ತನಾಗಿ ಅತ್ತು ದುಃಖ ತಡೆಯದೆ ದೂರ ಹೋದನು. ವನದಲ್ಲಿ ಓಡಾಡುತ್ತಾ, ದುಃಖಿಸುತ್ತಾ ಪ್ರಮದ್ವರೆಯನ್ನು ಜ್ಞಾಪಿಸಿಕೊಳ್ಳುತ್ತಾ ರೋದಿಸಿದನು.

---

೧ ಶರದ್ವಾನ್ ಋಷಿಗಳ ಅಯೋನಿಜಸಂತಾನರಾದ ಕೃಪಕೃಪಿಯರನ್ನು ಶಂತನು ಕೃಪಾವಿಷ್ಟನಾಗಿಯೇ ತನ್ನ ಅರಮನೆಗೆ ತಂದು ಸಾಕಿದ ಪ್ರಸಂಗದಂತಿದೆ ಇದು. ಮತ್ತು ಕಣ್ವ ಋಷಿಗಳು ತಮ್ಮ ಆಶ್ರಮಕ್ಕೆ ತಂದು ಸಾಕಿದ ಶಾಕುಂತಲೆಯ ಪ್ರಸಂಗವನ್ನೂ ಇದು ಹೋಲುತ್ತದೆ.

[೧]'ನಾನೇನಾದರೂ ದಾನಧರ್ಮ, ತಪಸ್ಸುಗಳನ್ನು ಮಾಡಿದ್ದಲ್ಲಿ, ಗುರುಗಳನ್ನು ಭಕ್ತಿಯಿಂದ ಆರಾಧಿಸಿದ್ದಲ್ಲಿ ಆ ಫಲದಿಂದ ನನ್ನ ಪ್ರೇಯಸಿ ಬದುಕಲಿ' ಎಂಬುದಾಗಿ ಬೇಡಿಕೊಂಡ. 'ನಾನು ಹುಟ್ಟಿದಂದಿನಿಂದ ಇಲ್ಲಿಯವರೆಗೂ ಬ್ರಹ್ಮಚರ್ಯವನ್ನು ಕಾಪಾಡಿಕೊಂಡು ಬಂದಿದ್ದರೆ, ಏಕಾದಶ್ಯಾದಿ ವ್ರತನಿಷ್ಠನಾಗಿದ್ದಲ್ಲಿ, ನನ್ನ ಪ್ರಿಯತಮೆ ಕೂಡಲೇ ಸಚೇತನಳಾಗಲಿ. ಕೃಷ್ಣನಲ್ಲಿ, ವಿಷ್ಣುವಿನಲ್ಲಿ, ಲೋಕೇಶನಾದ ಹೃಷೀಕೇಶನಲ್ಲಿ, ಅಸುರದ್ವೇಷಿಯಾದ (ಭಗವಂತನಲ್ಲಿ) ನನಗೆ ಭಕ್ತಿ ನಿಶ್ಚಲವಾಗಿದ್ದ ಪಕ್ಷದಲ್ಲಿ ನನ್ನ ಪ್ರೇಯಸಿಯು ಬದುಕಲಿ' ಎಂಬುದಾಗಿ ಅಂತಿಮವಾಗಿ ತನ್ನ ಸತ್ಯಧರ್ಮಭಕ್ತಿಗಳನ್ನೇ ಪಣವಾಗಿಟ್ಟನು ರುರು, ತನ್ನ ಪ್ರಿಯಕರಳು ಬದುಕಲೆಂದು.

ಹೀಗೆ ಮಾನಸಿಕವಾಗಿ ಮದುವೆಯಾದ ಹೆಂಡತಿಗೋಸ್ಕರ ದುಃಖಿಸುತ್ತಿರುವ ರುರುವಿನ ಬಳಿಗೆ ದೇವದೂತನೊಬ್ಬ ಬಂದು 'ಗಂಧರ್ವ ಅಪ್ಸರೆಯರ ಮಗಳಾದ ಈಕೆಗೆ ಆಯುಷ್ಯ ಮುಗಿದಿದೆ. ಆಯುಷ್ಯ ಮುಗಿದ ಬಳಿಕ ಯಾರೂ ಬದುಕಲಾರರು. ಆದ್ದರಿಂದ ಈಕೆ ಬಗ್ಗೆ ದುಃಖಿಸುವುದು ಸರಿಯಲ್ಲ. ಆದರೂ, ದೇವತೆಗಳು ನಿನ್ನ ಮೇಲಿನ ಕಾರುಣ್ಯದಿಂದ ಒಂದು ಉಪಾಯವನ್ನು ಮಾಡಿದ್ದಾರೆ. ಒಂದು ವೇಳೆ ನೀನು ಅದನ್ನು ನಡೆಸಿದಲ್ಲಿ ಬದುಕಲು ಸಾಧ್ಯ' ಎಂದನು. ಅದಕ್ಕೆ ಕೂಡಲೇ ರುರು ಒಪ್ಪಿ ಆ ಉಪಾಯ ಕೇಳಬಯಸಿದನು. 'ರುರು ನಿನ್ನ ಅರ್ಧಾಯುಷ್ಯವನ್ನು ನಿನ್ನ ಹೆಂಡತಿಗೆ ದಾನ ಮಾಡು. ಅವಳು ಬದುಕುವಳು.' ನಂತರ ದೇವದೂತರು ಯಮಧರ್ಮರಾಜನ ಬಳಿ ಹೋಗಿ 'ಧರ್ಮರಾಜ! ನೀನು ಒಪ್ಪಿದಲ್ಲಿ ರುರುವಿನ ಅರ್ಧಾಯುಷ್ಯ ದಾನದಿಂದ ಮೃತ ಪ್ರಮದ್ವರೆಯು ಬದುಕಲಿ' ಎಂದು ಪ್ರಾರ್ಥಿಸಿದರು. ಅದಕ್ಕೆ ಒಪ್ಪಿದನು ಧರ್ಮರಾಜ. ಕೂಡಲೇ ನಿದ್ರೆ ಹೋದವಳು ಎದ್ದಂತೆ ಪ್ರಮದ್ವರೆ ರುರುವಿನ ಅರ್ಧಾಯುಷ್ಯ ದಾನದಿಂದ ಎದ್ದು ಕುಳಿತಳು.

ರುರು ಪ್ರಮದ್ವರೆಯರ ತಂದೆತಾಯಿಗಳು ಶುಭಮುಹೂರ್ತದಲ್ಲಿ ವಧುವರರ ವಿವಾಹವನ್ನು ವಿಧಿಪೂರ್ವಕವಾಗಿ ಮಾಡಿದರು. ಅವರ ದಾಂಪತ್ಯ ಸುಖಮಯವಾಗಿತ್ತು. ಆದರ್ಶಮಯವಾಗಿತ್ತು. ಮದುವೆಯ ನಂತರ ರುರು ಸರ್ಪಗಳ ವಂಶವನ್ನೇ ನಾಶಮಾಡುವ ಪ್ರತಿಜ್ಞೆಯನ್ನೇ ಮಾಡಿದನು. ಕಂಡಕಂಡಲ್ಲಿ ಸರ್ಪಗಳನ್ನು ಹಿಡಿದು ಅವುಗಳ ಬಾಲವನ್ನು ಗರಗರನೆ ತಿರುಗಿಸಿ ನೆಲಕ್ಕೆ ಅಪ್ಪಳಿಸಿ ಕೊಲ್ಲುತ್ತಿದ್ದನು. ತನ್ನ ಹೆಂಡತಿಯನ್ನು ಕಚ್ಚಿದ ಯಾವುದೋ ಸರ್ಪ, ಅದರ ತಪ್ಪಿಲ್ಲದಿದ್ದರೂ ರುರುವನ್ನು ಸಂಭ್ರಾಂತನನ್ನಾಗಿ ಮಾಡಿ ಎಲ್ಲ ಸರ್ಪಗಳ ಮೇಲೆ ಸೇಡು ತೀರಿಸಿಕೊಳ್ಳಲು ಆರಂಭಿಸಿದನು.

೧ ಯದಿ ದತ್ತಂ ತಪಸ್ತಪ್ತಂ ಗುರವೋ ವಾ ಮಯಾ ಯದಿ।
ಸಮ್ಯಗಾರಾಧಿತಾಸ್ತೇನ ಸಂಜೀವತು ಮಮ ಪ್ರಿಯಾ ॥
ಕೃಷ್ಣೇ ವಿಷ್ಣೌ ಹೃಷೀಕೇಶೇ ಲೋಕೇಽಸುರದ್ವಿಷಿ।
ಯದಿ ಮೇ ನಿಶ್ಚಲಾ ಭಕ್ತಿರ್ಮಮ ಜೀವತು ಸಾ ಪ್ರಿಯಾ ॥ - ಆದಿಪರ್ವ (೯/೪,೬)

ಒಮ್ಮೆ ರುರು ದಾರಿಯಲ್ಲಿ ಮಲಗಿದ ಭಾರಿ ವಯಸ್ಸಾದ ಒಂದು ಸರ್ಪವನ್ನು (**ಡುಂಡುಭ** - ನೀರುಹಾವು) ನೋಡಿ, ಕೊಲ್ಲಲು ಮುಂದಾದಾಗ ಆ ಸರ್ಪವು 'ನಾನು ನಿನಗೆ ಯಾವ ಅಪರಾಧವನ್ನೂ ಮಾಡಿಲ್ಲ, ವ್ಯರ್ಥವಾಗಿ ನನ್ನನ್ನೇಕೆ ಕೊಲ್ಲುವೆ' ಎಂದಿತು. ರುರು ತನ್ನ ಪ್ರತಿಜ್ಞೆಯ ನೆಪ ಹೇಳಿದನು. ಡುಂಡುಭವು 'ಬ್ರಾಹ್ಮಣನೇ! ಮಾನವರನ್ನು ಕಚ್ಚುವ ಸರ್ಪಗಳೇ ಬೇರೆ. ನಾವು ಕಚ್ಚುವವರೂ ಅಲ್ಲ, ನಮ್ಮ ಜಾತಿಯಿಂದ ಯಾರಿಗೂ ಹಿಂಸೆಯಾಗುವುದಿಲ್ಲ. ಆದ್ದರಿಂದ ನಮ್ಮನ್ನು ಕೊಲ್ಲುವುದು ಧರ್ಮವಲ್ಲ' ಎಂದು ನುಡಿಯಿತು. ಇದನ್ನು ಕೇಳಿ ಈ ಸರ್ಪವು ಒಬ್ಬ ಋಷಿ (ಪೂರ್ವಜನ್ಮದಲ್ಲಿ) ಇರಬೇಕೆಂದು ಭಾವಿಸಿ 'ನೀನಾರು? ನಿಜ ಹೇಳು' ಎಂದು ರುರು ಕೇಳಿದನು. ಆಗ ಡುಂಡುಭವು 'ನಾನು ಹಿಂದೆ **ಸಹಸ್ರಪಾದ** ಎಂಬ ಋಷಿಯಾಗಿದ್ದೆ, ನಾನು ಬ್ರಾಹ್ಮಣನೊಬ್ಬನ ಶಾಪದಿಂದ ಈ ಜನ್ಮ ಹೊಂದಿದ್ದೇನೆ ಎಂದನು. ರುರುವು 'ಶಾಪಬರಲು ಕಾರಣವೇನು' ಎಂದು ಕೇಳಲು, ಡುಂಡುಭವು 'ನನಗೆ ಹಿಂದೆ **ಖಗಮ**ನೆಂಬ ಸ್ನೇಹಿತನಿದ್ದನು. ಆತನು ಯಜ್ಞ ಮಾಡುತ್ತಿದ್ದಾಗ ನಾನು ಹಾಸ್ಯಕ್ಕಾಗಿ ಹುಲ್ಲಿನ ಹಾವೊಂದನ್ನು ಮಾಡಿ ಅವನ ಮೇಲೆ ಎಸೆದೆ. ನಿಜ ಸರ್ಪವೆಂದು ಭಾವಿಸಿ ಆತನ ಹೆದರಿ ಮೂರ್ಛಿತನಾದ. ಎಚ್ಚರ ಬಂದ ಮೇಲೆ ಆತನಿಗೆ ಕೋಪ ಬಂದು 'ನನ್ನನ್ನು ಕೃತಕಸರ್ಪದಿಂದ ಪ್ರಜ್ಞಾಹೀನನನ್ನಾಗಿ ಮಾಡಿದೆ. ಆದ್ದರಿಂದ ನೀನು ಕೂಡಾ ನನ್ನ ಶಾಪದಿಂದ ಅಂತಹ ಸರ್ಪವಾಗು' ಎಂದು ಶಪಿಸಿದನು. ಅಂತೆಯೇ ನಾನು ಡುಂಡುಭನಾದೆ. ಪುನಃ ನನ್ನನ್ನು ಕ್ಷಮಿಸೆಂದು ಕೇಳಲು ಆತನು ರುರುವಿನ ದರ್ಶನದಿಂದ ಶಾಪಮೋಕ್ಷವೆಂದು ವಿಶಾಪ ನೀಡಿದನು.

ಹೀಗೆ ಡುಂಡುಭನು ರುರುವಿನ ದರ್ಶನದಿಂದ ಸುಂದರರೂಪ ಸ್ವೀಕರಿಸಿ, ರುರುವನ್ನು ಕುರಿತು 'ಸಕಲಪ್ರಾಣಿಗಳಿಗೂ ಅಹಿಂಸೆಯೇ ಪರಮಧರ್ಮವಾಗಿದೆ. ಆದ್ದರಿಂದ ಬ್ರಾಹ್ಮಣನು ಎಂದೂ ಯಾವ ಪ್ರಾಣಿಗಳನ್ನೂ ಹಿಂಸಿಸಬಾರದು ಎಂದೇ ಶ್ರುತಿ ಹೇಳುತ್ತದೆ. ಬ್ರಾಹ್ಮಣರ ಧರ್ಮಗಳು ವೇದವೇದಾಂಗಗಳ ಅಧ್ಯಯನ, ಸರ್ವಭೂತಗಳಿಗೆ ಅಭಯದಾನ, ಸತ್ಯ ಮಾತನಾಡುವಿಕೆಮುಂತಾದವು. ಪ್ರಜಾಪರಿಪಾಲನೆ, ದುಷ್ಟರಿಗೆಶಿಕ್ಷೆಇವೇಕ್ಷತ್ರಿಯಧರ್ಮಗಳು. ಜನಮೇಜಯನ ಸರ್ಪಯಜ್ಞದಲ್ಲಿ ಸಹಸ್ರಾರು ಸರ್ಪಗಳು ನಾಶವಾದವು. ಆ ಸಮಯದಲ್ಲಿ ಸರ್ಪಗಳ ರಕ್ಷಣೆ ಮಾಡಿದವನು ಆಸ್ತಿಕನೆಂಬ ಬ್ರಾಹ್ಮಣ. ಆದ್ದರಿಂದ ಸರ್ವ ಪ್ರಾಣಿಗಳ ರಕ್ಷಣೆ ಅಹಿಂಸಾದಾನ ಬ್ರಾಹ್ಮಣರ ಧರ್ಮ' ಎಂದು ಉಪದೇಶಿಸಿದನು[೧].

---

೧ ಅಹಿಂಸಾ ಪರಮೋ ಧರ್ಮಃ ಸರ್ವಪ್ರಾಣಭೃತಾಂ ವರ ||
ತಸ್ಮಾತ್ಪ್ರಾಣಭೃತಃ ಸರ್ವಾನ್ ನ ಹಿಂಸ್ಯಾದ್ಬ್ರಾಹ್ಮಣಃ ಕ್ವಚಿತ್ ||
ಬ್ರಾಹ್ಮಣಃ ಸೌಮ್ಯ ಏವೇಹ ಭವತೀತಿ ಪರಾ ಶ್ರುತಿಃ |
ವೇದವೇದಾಂಗವಿನ್ನಾಮ ಸರ್ವಭೂತಾಭಯಪ್ರದಃ |
ಅಹಿಂಸಾ ಸತ್ಯವಚನಂ ಕ್ಷಮಾಚೇತಿ ವಿನಿಶ್ಚಯಾತ್ |
ಬ್ರಾಹ್ಮಣಸ್ಯ ಪರೋಧರ್ಮೋ ವೇದಾನಾಂ ಧಾರಣಾಪಿ ಚ |

ಆಗ ರುರುವು ಡುಂಡುಭನನ್ನು ಜನಮೆಜಯ ಏಕೆ ಹೇಗೆ ಸರ್ಪಗಳನ್ನು ಹಿಂಸಿಸಿದನು. ಆಸ್ತೀಕನಿಂದ ಸರ್ಪಗಳು ಹೇಗೆ ರಕ್ಷಿಸಲ್ಪಟ್ಟವು ಎಂದು ಕೇಳಿದನು. ಋಷಿಯು ಈ ಆಸ್ತೀಕ ಚರಿತೆಯನ್ನು ಮುಂದೆ ಬ್ರಾಹ್ಮಣರಿಂದ ಕೇಳುವೆ ಎಂದು ಹೇಳುತ್ತಾ ಅಲ್ಲಿಯೇ ಅಂತರ್ಧಾನನಾದನು.

**ಸಂದೇಶ :**

ರುರು ಪ್ರಮದ್ವರೆಯರ ಪ್ರೇಮವಿವಾಹ ಅವರ ಆದರ್ಶ ದಾಂಪತ್ಯಗಳು ಅನುಕರಣೀಯವೂ ಸ್ತ್ರೀ-ಪುರುಷರಲ್ಲಿನ ಪರಸ್ಪರ ತಿಳುವಳಿಕೆ, ಏಕಪತ್ನೀವ್ರತದ ಅವಶ್ಯಕತೆ ಮುಂತಾದ ಗುಣಗಳನ್ನು ಪ್ರತಿಪಾದಿಸುತ್ತವೆ. ಅಲ್ಲದೇ ಸ್ತ್ರೀಸಂಗವುಳ್ಳ ಪುರುಷನ ಪಾಡು ಹೇಗೆ ಭಾವನಾಮಯವಾಗಿರುತ್ತವೆ ಎಂದು ಕೂಡ ಇದು ತಿಳಿಸುತ್ತದೆ (**ಸ್ತ್ರೀಸಂಗಿನಾಮಿತಿ ರತಿಂ ಪ್ರಥಯಂಶ್ಚಚಾರ**-ಭಾಗವತ. ೯/೮/೯೩). ಇದು ಅತಿಯಾದಾಗ ಮನುಷ್ಯನು ದುಃಖಿಯಾಗಿಯೇ ದುರ್ಗತಿಯನ್ನೂ ಹೊಂದುತ್ತಾನೆ[೧]. ಎಂಬ ಗೀತೆಯ ತಾತ್ತ್ವಿಕ ಮಾತುಗಳು ಎಂತಹ ಜ್ಞಾನಿಗೂ ಕೆಲವೊಮ್ಮೆ ಜ್ಞಾನವು ಮರೆಯಾಗುತ್ತದೆ ಎನ್ನಲು ರುರುವಿನ ಪ್ರಮದ್ವರೆ ಮೃತಳಾದಾಗಿನ ಮಾತುಗಳಿಂದ ವ್ಯಕ್ತವಾಗುತ್ತವೆ.

ಮಹಾಭಾರತದ ಭೀಮನು ತನ್ನ ಪತ್ನಿಯಾದ ದ್ರೌಪದಿಗೆ ಕೀಚಕ, ಜಟಾಸುರ, ಜಯದ್ರಥಾದಿಗಳಿಂದ ಬಂದ ವಿಪತ್ತನ್ನು ಪರಿಹರಿಸಿದ ಧೀಮಂತ ಪತಿಯಾಗಿ ಮೆರೆಯುತ್ತಾನೆ. ರುರು ಅಪಮೃತ್ಯು ಬಂದ ಮೇಲೆ ತನ್ನ ಪತ್ನಿಯನ್ನು ಬದುಕಿಸುತ್ತಾನೆ. ಅರ್ಜುನಾದಿ ಪತಿಗಳಿಗೆಲ್ಲ ಅಸಾಧ್ಯವಾದ ಸೌಗಂಧಿಕಾ ಪುಷ್ಪಗಳನ್ನು ತಂದು ದ್ರೌಪದಿಯನ್ನು ಸಂತೋಷಪಡಿಸಿದ ಭೀಮನ ಆದರ್ಶ ಪತ್ನೀಪ್ರೇಮ ಅನ್ಯಾದೃಶವಾದುದೇ ಸರಿ.

*****

---

ಕ್ಷತ್ರಿಯಸ್ಯ ಹಿ ಯೋ ಧರ್ಮಃ ಸ ಹಿ ನೇಷ್ಯೇತ ವೈ ತವ।
ದಂಡಧಾರಣಮುಗ್ರತ್ವಂ ಪ್ರಜಾನಾಂ ಪರಿಪಾಲನಮ್ ॥ - ಆದಿಪರ್ವ(೧೧/೧೩-೧೭)

೧ ಯೇ ಹೀ ಸಂಸ್ಪರ್ಶಜಾ ಭೋಗಾಃ ದುಃಖ ಯೋನಯ ಏವ ತೇ।
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ -ಗೀತಾ;
ಮಾತ್ರಾ ಸ್ಪರ್ಶಾಸ್ತು ಕೌಂತೇಯ ಶೀತೋಷ್ಣ ಸುಖದುಃಖದಾಃ।
ಆಗಮಾಪಾಯಿನೋಽನಿತ್ಯಾಸ್ತಾನ್ ತಿತಿಕ್ಷಸ್ವ ಭಾರತ ॥

## ಆಸ್ತಿಕಪರ್ವ

## ೪. ಗರುಡದೇವನಿಂದ ತಾಯಿಯ ದಾಸ್ಯಮೋಚನೆ

ದಕ್ಷಪ್ರಜಾಪತಿಯ ಅನೇಕ ಮಕ್ಕಳಲ್ಲಿ ಇಬ್ಬರು ಸುಂದರಿಯರು, ಕದ್ರು ಮತ್ತು ವಿನತೆಯರು. ಇವರನ್ನು ಬ್ರಹ್ಮನು ಕಶ್ಯಪರಿಗೆ ಕೊಟ್ಟು ವಿವಾಹ ಮಾಡಿದನು. ಕದ್ರೂ, ವಿನತೆಯರು ಕಶ್ಯಪರಿಗೆ ಅಖಂಡ ಸೇವೆ ಮಾಡಿ ಪಾತಿವ್ರತ್ಯದಿಂದ ಒಲಿಸಿಕೊಂಡು ವರವನ್ನು ಪಡೆದರು. ಅಂತೆಯೇ ಹಿರಿಯಳಾದ ಕದ್ರೂ, ಸಮಾನ ಬಲವುಳ್ಳ ೧೦೦೦ ನಾಗಸಂತತಿಯಾಗಲೆಂಬ ವರವನ್ನು ಬೇಡಿದರೆ, ವಿನತೆಯು ಕದ್ರೂದೇವಿಯ ಸಂತಾನಕ್ಕಿಂತ ಮಹಾ ಬಲಶಾಲಿಗಳಾದ ಎರಡೇ ಮಕ್ಕಳಾಗಲೆಂಬ ವರವನ್ನು ಪಡೆದಳು. ಕಾಲಕ್ರಮದಲ್ಲಿ ಕದ್ರೂವಿನತೆಯರು ಕಶ್ಯಪರಿಂದ ಗರ್ಭವತಿಯರಾದರು. ಕಶ್ಯಪರು ಗರ್ಭಪೋಷಣೆಗೆ ಗಮನ ಹರಿಸಲು ತಿಳಿಸಿ ತಪಸ್ಸಿಗಾಗಿ ವನಕ್ಕೆ ಹೋದರು.

ಬಹುಕಾಲದ ನಂತರ ಕದ್ರೂದೇವಿಯು ೧೦೦೦ ಮೊಟ್ಟೆಗಳನ್ನೂ ವಿನತೆಯು ೨ ಮೊಟ್ಟೆಗಳನ್ನು ಪ್ರಸವಿಸಿದರು. ಈ ಮೊಟ್ಟೆಗಳನ್ನು ದಾಸಿಯರು ಶಾಖಪಾತ್ರೆಗಳಲ್ಲಿಟ್ಟು ಕಾಪಾಡುತ್ತಿದ್ದರು. ೫೦೦ ವರ್ಷಗಳ ತರುವಾಯ ಕದ್ರೂದೇವಿಯು ಪ್ರಸವಿಸಿದ ಮೊಟ್ಟೆಗಳೊಡೆದು ೧೦೦೦ ನಾಗಗಳು ಹೊರಬಂದವು. ವಿನತೆಯ ಮೊಟ್ಟೆಗಳು ಮಾತ್ರ ಒಡೆಯಲಿಲ್ಲ. ತನ್ನ ಸಂತತಿ ಬೇಗ ಬರಲಿಲ್ಲವೆಂಬ [೧] ಲೋಭ ಅಸೂಯೆಯಿಂದ ಒಂದು ಮೊಟ್ಟೆಯನ್ನು ತಾನೇ ಒಡೆದಳು ವಿನತಾದೇವಿ. ಅರ್ಧಶರೀರ ಮಾತ್ರ ಬೆಳೆದಿದ್ದ ಒಂದು ಗಂಡು ಮಗು ಕ್ರೋಧತಪ್ತನಾಗಿ ಮೊಟ್ಟೆಯಿಂದ ಹೊರಬಂದು ತಾಯಿಯನ್ನೇ ಶಪಿಸಿತು. 'ನಿನ್ನಿಂದಾಗಿ ನನ್ನ ಶರೀರ ಅಸಮಗ್ರವಾಯಿತು. ಕಾರಣ ನೀನು ದಾಸಿಯಾಗುವೆ. ೫೦೦ ವರ್ಷಗಳ ತರುವಾಯ ಹುಟ್ಟುವ ಮತ್ತೊಬ್ಬ ಮಗನು ನಿನ್ನ ದಾಸ್ಯಮೋಚನೆ ಮಾಡುತ್ತಾನೆ. ಕಾರಣ ಅಲ್ಲಿಯವರೆಗೆ ಉಳಿದ ಮೊಟ್ಟೆಯನ್ನು ಕಾಪಾಡು.' ಹೀಗೆ ಶಪಿಸಿದ ಮಗು **ಅರುಣನು** ವಿಧಿನಿಯಮದಂತೆ ಸೂರ್ಯನ ಸಾರಥಿಯಾಗಿ ಅಂತರಿಕ್ಷಕ್ಕೆ ಹಾರಿದನು. ಸೂರ್ಯೋದಯದ ಮೊದಲ ಭಾಗವೇ ಈ ಅರುಣೋದಯಕಾಲ. ೫೦೦ ವರ್ಷಗಳ ತರುವಾಯ ಮತ್ತೊಂದು

---

೧ ಕುಂತಿದೇವಿಯು ಧರ್ಮರಾಜನನ್ನು ಪಡೆದ ಮೇಲೆ ಆಗಲೇ ಗರ್ಭವತಿಯಾಗಿದ್ದ ಗಾಂಧಾರಿಯು ಅಸೂಯೆಯಿಂದ ಹೊಟ್ಟೆಯನ್ನು ಬಗೆದು ಗರ್ಭಸ್ರಾವ ಮಾಡಿಕೊಂಡ ಘಟನೆಯನ್ನು ಇದು ನೆನಪಿಸುತ್ತದೆ.

ಮೊಟ್ಟೆಯೊಡೆದು ಬಂದ ಪಕ್ಷಿಯೇ ಗರುಡದೇವ. ಹುಟ್ಟಿದೊಡನೆ [೧]ಹಸಿವೆಯಿಂದ ತನಗೆ ವಿಧಿವಿಹಿತವಾದ ಆಹಾರಕ್ಕಾಗಿ ಆಕಾಶಕ್ಕೆ ನೆಗೆದನು.

ಇದೇ ಸಮಯದಲ್ಲಿ ಸಮುದ್ರಮಥನ ಕಾಲದಲ್ಲಿ ಉತ್ಪನ್ನವಾದ ಸರ್ವಲಕ್ಷಣಗಳಿಂದ ಕೂಡಿದ ಅಮೋಘ ಬಲವುಳ್ಳ '**ಉಚ್ಚೈಃಶ್ರವಸ್**' ಎಂಬ ಕಾಂತಿಯುಕ್ತವಾದ ಕುದುರೆಯನ್ನು ಅನತಿದೂರದಲ್ಲಿಯೇನೋಡಿದರುಕದ್ರೂ, ವಿನತೆಯರು. ಅದರಬಣ್ಣದಬಗ್ಗೆಅಕ್ಕತಂಗಿಯರು ಜಿಜ್ಞಾಸೆ ಮಾಡಿದರು. ಈ ಅಶ್ವವು ಬಿಳಿದಾಗಿದೆ ನೀನೇನನ್ನುತ್ತೀ? ಈ ಬಗ್ಗೆ ಪಂದ್ಯ ಕಟ್ಟೋಣ ಎಂದಳು ವಿನತೆ. ಒಪ್ಪಿದ ಕದ್ರೂ ಕುದುರೆ ಬಾಲ ಕಪ್ಪಾಗಿದೆ, ಈ ಪಂದ್ಯದಲ್ಲಿ ಸೋತವರು ಗೆದ್ದವರ ದಾಸಿಯಾಗಬೇಕೆಂದು ನುಡಿದಳು. ಮಾರನೇ ದಿನ ನೋಡೋಣವೆಂದು ಮಾತನಾಡಿಕೊಂಡು ಮನೆಗೆ ನಡೆದರು. ಮನೆಗೆ ಹೋಗಿ ಕದ್ರೂದೇವಿಯು ತನ್ನ ಮಕ್ಕಳನ್ನು ಕರೆದು 'ನೀವು ಕುದುರೆ ಬಾಲಕ್ಕೆ ಕಪ್ಪಾಗಿ ಅಂಟಿಕೊಳ್ಳಿ, ನಾನು ಗೆಲ್ಲುವೆ. ಕದ್ರೂ ದಾಸಿಯಾಗುವಳು' ಎಂದಳು. ಮಕ್ಕಳಾರೂ ಒಪ್ಪದಿರಲು ಸಿಡಿದೆದ್ದ ಕದ್ರೂದೇವಿ 'ಜನಮೇಜಯ ರಾಜನ ಸರ್ಪಸತ್ರದ ಅಗ್ನಿಯಲ್ಲಿ ನನ್ನ ಮಾತನ್ನು ಕೇಳದವರು ಸುಟ್ಟುಹೋಗುವರು' ಎಂದು ಶಪಿಸಿದಳು. ಶಾಪ ಕೇಳಿದ ಬ್ರಹ್ಮನೂ ದುಷ್ಟಸರ್ಪಗಳು ಸಾಯಲಿ ಎಂದು ಅನುಮೋದಿಸಿದನು. ಕಶ್ಯಪರಿಗೂ ಈ ಬಗ್ಗೆ ವಿವರಿಸಿದ ಬ್ರಹ್ಮದೇವ ಕಶ್ಯಪರಿಗೆ ತನ್ನ ಕೆಲ ಸಂತಾನದ ನಾಶದಿಂದ ಖತಿಗೊಳ್ಳದಿರಲೂ ತಿಳಿಸಿ, '**ವಿಷಹರವಿದ್ಯೆ**'ಯನ್ನು ಉಪದೇಶಿಸಿದನು. ಇಷ್ಟರಲ್ಲಿ ಶಾಪಗ್ರಸ್ತರಾದ ಕೆಲವು ಸರ್ಪಗಳು (ತಕ್ಷಕನೇ ಮೊದಲಾದವರೆಂದು ಕೆಲವು ಪಾಠಗಳಲ್ಲಿದೆ) ತಾಯಿಯ ಗೌರವ ಉಳಿಸಲು ರಾತ್ರಿಯೇ ಉಚ್ಚೈಃಶ್ರವಸ್ ಕುದುರೆ ಬಾಲಕ್ಕೆ ಅಂಟಿಕೊಂಡು ಅದನ್ನು ಕಪ್ಪಾಗಿಸಿದವು. ಮಾರನೇ ಬೆಳಿಗ್ಗೆ ಕದ್ರೂವಿನತೆಯರು ಸಮುದ್ರದ ಕಡೆ ನಡೆದರು. ಅದರ ಸೌಂದರ್ಯ ಸವಿಯುತ್ತಾ ಮತ್ತೊಂದು ತೀರಕ್ಕೆ ಹೋದರು. ಮಹಾವೇಗದಿಂದ ಅಂತರಿಕ್ಷದಲ್ಲಿ ಹೋಗುತ್ತಿದ್ದ ಬಾಲವು ಕಪ್ಪಾಗಿರುವ ಆ ಕುದುರೆಯನ್ನು ಇಬ್ಬರೂ ನೋಡಿದರು. ವಿನತೆಯು ಸೋತು ಖಿನ್ನನಾದಳು. ಅಕ್ಕನ ದಾಸಿಯಾದಳು. ಕದ್ರೂದೇವಿಯ ಮೋಸ ಫಲಿಸಿತು.

ಇದೇ ಸಮಯಕ್ಕೆ ಮೊಟ್ಟೆಯೊಡೆದು ವಿನತೆಯ ಮಗ ಗರುಡ ಪಕ್ಷಿಯಾಗಿ ಹೊರಬಂದನು. ಕಾಮರೂಪಿಯೂ, ಮಹಾವೀರನೂ, ಮಹಾಕಾಯನೂ ಆಗಿ, ಎಲ್ಲ ದಿಕ್ಕುಗಳನ್ನು ಬೆಳಗಿಸಿದನು ಗರುಡ. ಆಕಾಶಕ್ಕೆ ಹಾರಿದ ಗರುಡನನ್ನು ನೋಡಿ ದೇವತೆಗಳು ಅಗ್ನಿಗೆ ತನ್ನ ಜ್ವಾಲೆಗಳನ್ನು ವಿರಮಿಸಲು ಮೊರೆಯಿಟ್ಟರು. ಅಗ್ನಿಯು ದೇವತೆಗಳನ್ನು ಸಮಾಧಾನಪಡಿಸುತ್ತಾ 'ಈ ಜ್ವಾಲೆಗಳು ನನ್ನವಲ್ಲ, ಸರ್ಪಗಳ ನಾಶಕ್ಕಾಗಿ ಹುಟ್ಟಿದ ಗರುಡನಿವನು. ದೈತ್ಯರಿಗೆ

---

೧ ಇದರಿಂದ 'ದುಃಖಸ್ಪೃಷ್ಟ ದೇವತೆಗಳಲ್ಲಿ ಗರುಡನೂ ಒಬ್ಬ ಎಂದು ತಿಳಿಯುತ್ತದೆ. ರುದ್ರದೇವರು ಅಳುತ್ತಲೇ ಹುಟ್ಟಿದವರು. ಗರುಡ ಹುಟ್ಟಿದೊಡನೆ ಹಸಿವೆ ನೀಗಿಸಲು ಆಹಾರಕ್ಕಾಗಿ ಅರಸುತ್ತಾ ಹಾರಿದ. 'ದುಃಖಸ್ಪೃಷ್ಟದೇವತೆ' ಎಂದು ಇದರ ಭಾವ. ಇದಾವ ದುಃಖಗಳಿಲ್ಲದ ಜೀವ ಎಂದರೆ ವಾಯುದೇವರು ಎನ್ನುವುದು ಅವರ ಚರಿತ್ರೆ ತಿಳಿಸುತ್ತದೆ.

ಅಹಿತವನ್ನುಂಟುಮಾಡಲು ಉದಿಸಿದ್ದಾನೆ ಎಂದು ಹೇಳಿದನು. ದೇವ ಋಷಿಗಳು ಗರುಡನನ್ನು ಸ್ತೋತ್ರ ಮಾಡಿದರು[೧].

'ತ್ವಮೃಷಿಸ್ತ್ವಂ ಮಹಾಭಾಗಸ್ತ್ವಂ ದೇವಃ ಪತಗೇಶ್ವರಃ।...
ತ್ವಂ ಹಿ ಧಾತಾ ವಿಧಾತಾ ಚ ತ್ವಂ ವಿಷ್ಣುಃ ಸುರಸತ್ತಮಃ॥...
...............
ಖಗೇಶ್ವರಂ ಶರಣಮುಪಾಗತಾ ವಯಂ
ಮಹೌಜಸಂ ಜ್ವಲನಸಮಾನವರ್ಚಸಮ್ ।
ತ್ವಂ ಪಾಹಿ ಸರ್ವಾಂಶ್ಚ ಸುರಾನ್ಮಹಾತ್ಮನಃ॥.... ಇತ್ಯಾದಿ
- ಆದಿಪರ್ವ(ಆಸ್ತಿಕಪರ್ವ-೨೩/೧೫-೨೩)

ಗರುಡನು ದೇವತೆಗಳ ಸ್ತೋತ್ರದಿಂದ ಪ್ರಸನ್ನನಾಗಿ ತನ್ನ ಆಕಾರ ಮತ್ತು ತೇಜಸ್ಸನ್ನು ಸಂಕ್ಷೇಪಗೊಳಿಸಿದನು (ಲೋಕದ ಹಿತವನ್ನು ಗಮನದಲ್ಲಿಟ್ಟುಕೊಂಡು). ನಂತರ ಸಮುದ್ರದ ಆಚೆಯ ತೀರದಲ್ಲಿದ್ದ ತನ್ನ ತಾಯಿಯ ಬಳಿಗೆ ತೆರಳಿದ ಗರುಡ.

ಒಮ್ಮೆ ಕದ್ರೂದೇವಿಯು ತನ್ನನ್ನು ಹಾಗೂ ಆಕೆಯ ಸರ್ಪಮಕ್ಕಳನ್ನು ಎತ್ತಿಕೊಂಡು ಸಮುದ್ರಮಧ್ಯದಲ್ಲಿರುವ ರಮ್ಯವಾದ ನಾಗಾಲಯಕ್ಕೆ ಕರೆದೊಯ್ಯಲು ಆದೇಶಿಸಿದಳು. ವಿನತೆಯು ಕದ್ರೂವನ್ನು, ಗರುಡನು ಹಾವುಗಳನ್ನು ಎತ್ತಿಕೊಂಡು ಹೊರಟರು. ಗರುಡನು ಹಾರುತ್ತಾ ಸೂರ್ಯನ ಸಮೀಪಕ್ಕೂ ಹೋಗಲು ಸೂರ್ಯನ ಶಾಖದಿಂದ ಸರ್ಪಗಳು ಮೂರ್ಛೆ ಹೊಂದಿದರು. ಕದ್ರೂ [೨]ಇಂದ್ರಸ್ತುತಿ ಮಾಡಿ ಮಳೆ ತರಿಸಿಕೊಂಡು ಸರ್ಪಗಳನ್ನು ಸಂತೋಷಪಡಿಸಿದಳು. ಹಾವುಗಳು ಕದ್ರೂ ಜೊತೆಗೆ **ರಾಮಣೀಯಕ** ದ್ವೀಪಕ್ಕೆ ಬಂದವು. ಅಲ್ಲಿ ಕೆಲಕಾಲ ಸುಖವಾಗಿದ್ದ ಸರ್ಪಗಳು ಪುನಃ ಬೇರೆ ದ್ವೀಪಗಳಿಗೆ ಕರೆದೊಯ್ಯಲು ಗರುಡನಿಗೆ ಅಜ್ಞೆ ಮಾಡಿದಾಗ ಗರುಡನು ಉತ್ತರಿಸದೆ ತನ್ನ ತಾಯಿಗೆ ಈ ದಾಸ್ಯ ಪರಿಸ್ಥಿತಿಯ ಕಾರಣ ಕೇಳಿ ತಿಳಿದುಕೊಂಡು ಸರ್ಪಗಳಿಗೆ ದಾಸ್ಯಮೋಚನೆಗೆ ಏನು ಮಾಡಬೇಕೆಂದು ಕೇಳಿದನು. ಅಮೃತ ತಂದು ಕೊಟ್ಟರೆ ದಾಸ್ಯಮೋಚನೆ ಸಾಧ್ಯವೆಂದು ನುಡಿದವು ಸರ್ಪಗಳು. ಕದ್ರೂ ಕೂಡ ಇದನ್ನು ಸಮ್ಮತಿಸಿದಳು.

ಕೂಡಲೇ ಗರುಡನು ತಾಯಿಗೆ ಅಮೃತ ತರುವೆನೆಂದು ತಿಳಿಸಿ ಮೊದಲು ತನಗೆ ಅಹಾರ ಕೇಳಿದನು. ಆಕೆ ಸಮುದ್ರಮಧ್ಯದಲ್ಲಿರುವ ೧೦೦೦ ನಿಷಾದರನ್ನು ತಿನ್ನು, ಬ್ರಾಹ್ಮಣರನ್ನು

೧ ಈ ಸ್ತೋತ್ರದಲ್ಲಿ ಅನೇಕ ಶ್ಲೋಕಗಳಿಗೆ ಶ್ರೀವಾದಿರಾಜರು 'ಲಕ್ಷಾಲಂಕಾರ'ದಲ್ಲಿ ಅರ್ಥ ಬರೆದು ಅನುಗ್ರಹಿಸಿದ್ದಾರೆ. ವಿಷ್ಣುಸನ್ನಿಧಾನ ಪಾತ್ರನಾದ್ದರಿಂದ ಗರುಡನನ್ನೂ ವಿಷ್ಣುವೆಂದು ಈ ಸ್ತೋತ್ರದ ಅಭಿಪ್ರಾಯವಾಗಿದೆ. ದೇವತೆಗಳು ಮಾಡಿದ ಸ್ತೋತ್ರದ ಪೂರ್ಣಪಾಠವನ್ನು ಇದೇ ಪ್ರಕಾಶನದ ಗರುಡಶೇಷಶಿವಸ್ತೋತ್ರಮಂಜರಿಯಲ್ಲಿ ನೋಡಬಹುದು.

೨ ಅ. (೨೫/೭-೧೭)

ಮಾತ್ರ ಕೊಲ್ಲದಿರು ಎಂದಳು. ನಂತರ ಸಮುದ್ರಮಧ್ಯದಲ್ಲಿದ್ದ ನಿಷಾದರನ್ನು ಮಾತ್ರ ತಿಂದು, ಆಕಸ್ಮಿಕವಾಗಿ ತನ್ನ ಬಾಯಿಯೊಳಗೆ ಹೋದ ಬ್ರಾಹ್ಮಣನನ್ನು ಪುನಃ ಹೊರಗೆ ಕಳಿಸಿ ಆಕಾಶದಲ್ಲಿ ಹಾರುತ್ತಾ ತಪೋವನದಲ್ಲಿದ್ದ ತಂದೆ ಕಶ್ಯಪರಿಗೆ ಪ್ರಣಾಮ ಸಲ್ಲಿಸಿ ಪುನಃ ಉತ್ತಮ ಆಹಾರಕ್ಕಾಗಿ ಸೂಚಿಸಲು ಪ್ರಾರ್ಥಿಸಿದಾಗ ಕಶ್ಯಪರು ಸಮೀಪದಲ್ಲಿನ ಸರೋವರದಲ್ಲಿರುವ ಆಮೆ ಹಾಗೂ ಆನೆ ಎರಡನ್ನೂ ತಿನ್ನಲು ತಿಳಿಸಿದರು.

ಈ ಆಮೆ ಮತ್ತು ಆನೆಗಳು ಪೂರ್ವಜನ್ಮದಲ್ಲಿ ಅಣ್ಣತಮ್ಮಂದಿರಾಗಿದ್ದರು. ಆಸ್ತಿವಿಭಾಗದ ವಿಷಯದಿಂದಾಗಿ ಪರಸ್ಪರ ಶಪಿಸಿಕೊಂಡು ಹೀಗಾಗಿದ್ದಾರೆ. ಈಗಲೂ ಪರಸ್ಪರ ರೋಷ, ದ್ವೇಷಗಳಿಂದ ಒಂದನ್ನೊಂದು ಕೊಲ್ಲಲು ಪ್ರಯತ್ನಿಸುತ್ತಿವೆ. ನೀನು ಅವನ್ನು ತಿಂದು ಶಕ್ತಿ ಪಡೆದು, ಅಮೃತ ತರಲು ಪ್ರಯಾಣಿಸು ಎಂದು ಕಶ್ಯಪರು ಆಶೀರ್ವದಿಸಿದರಲ್ಲದೆ ಮಗ ಗರುಡನಿಗೆ ಬ್ರಾಹ್ಮಣ, ಹಸು ಮೊದಲಾದ ಮಂಗಲಪದಾರ್ಥಗಳು, ಶುಭಕರಗಳಾಗಲೆಂದು ಹರಸಿದರು. ದೇವತೆಗಳೊಡನೆ ಯಜ್ಞ ಮಾಡುವಾಗ ಎಲ್ಲ ವೇದಗಳು ಬಲದಾಯಕವಾಗಲಿ ಎಂದೂ ಆಶೀರ್ವದಿಸಿದರು.

ಹೀಗೆ ತಂದೆಯ ಆಶೀರ್ವಾದ ಪಡೆದ ಗರುಡನು ಆ ಸರೋವರದ ಬಳಿಗೆ ಹೋಗಿ ತನ್ನ ಒಂದು ನಖದಿಂದ ಆನೆಯನ್ನು, ಇನ್ನೊಂದರಿಂದ ಆಮೆಯನ್ನೂ ಎಳೆದು ಆಕಾಶಕ್ಕೆ ನೆಗೆದನು. ದಾರಿಯಲ್ಲಿನ ದೇವವೃಕ್ಷಗಳು ನಡುಗಿದವು. ಅಲ್ಲಿಯೇ ಇದ್ದ ಆಲದ ಮರದ ಪ್ರಾರ್ಥನೆಯ ಮೇರೆಗೆ ಅದರ ಮೇಲೆ ಕುಳಿತು ಆನೆ, ಆಮೆಗಳನ್ನು ತಿನ್ನಲು ಕುಳಿತೊಡನೆ ೧೦೦ ಯೋಜನ ವಿಸ್ತೀರ್ಣದ ರೆಂಬೆಯು ಗರುಡನ ಭಾರಕ್ಕೆ ಮುರಿಯಿತು.

ಗರುಡನು ಆ ರೆಂಬೆಯನ್ನು ಬೀಳದಂತೆ ತನ್ನ ಕೊಕ್ಕಿನಿಂದ ಹಿಡಿದು ಆ ರೆಂಬೆಗೆ ಜೋತುಬಿದ್ದು ತಪಸ್ಸನ್ನು ಮಾಡುತ್ತಿದ್ದ **ವಾಲಖಿಲ್ಯ** ಬ್ರಹ್ಮರ್ಷಿಗಳನ್ನು ಕೊಲ್ಲಬಾರದೆಂದು ಯೋಚಿಸಿದನು. ಗಂಧಮಾದನಪರ್ವತದಲ್ಲಿ ತಪಸ್ಸನ್ನು ಮಾಡುತ್ತಿದ್ದ ಕಶ್ಯಪರನ್ನು ಮತ್ತೆ ಕಾಣಲಾಗಿ, ಅವರ ಸಲಹೆಯ ಮೇರೆಗೆ **ವಾಲಖಿಲ್ಯರು** ಆ ರೆಂಬೆಯನ್ನು ತ್ಯಜಿಸಿ ಹಿಮವತ್ಪರ್ವತಕ್ಕೆ ತಪಸ್ಸಿಗೆ ತೆರಳಿದರು. ಗರುಡನ ಭಾರಿ ಪರಾಕ್ರಮದಿಂದ ವಿಸ್ಮಿತರಾದ ವಾಲಖಿಲ್ಯರು ಗರುಡ ಶಬ್ದಕ್ಕೆ ವ್ಯಾಖ್ಯೆ ನೀಡುತ್ತಾರೆ.

**ಗುರುಭಾರಂ ಸಮಾಸಾದ್ಯೋಡ್ಡೀನ ಏಷ ವಿಹಂಗಮಃ ।**
**ಗರುಡಸ್ತು ಖಗಶ್ರೇಷ್ಠಸ್ತಸ್ಮಾತ್ಪನ್ನಗ ಭೋಜನಃ ॥** - **ಅಧ್ಯಾಯ (೩೦/೭)**

---

೧ ಮುಂದೆ ಇದೇ ಗರುಡನ ಮೇಲೆ ಮಂದರಪರ್ವತವನ್ನು ಹೊರಿಸಿ, ಶ್ರೀವಿಷ್ಣು ಅನುಗ್ರಹಿಸಿದ ವಿವರಗಳು ಅಮೃತಮಥನದಲ್ಲಿ ಬರುತ್ತದೆ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ. ಶೇಷನಷ್ಟೇ ಬಲಶಾಲಿಯಾದ ಗರುಡನು ಭೂಮಿಯೆಲ್ಲ ಹೊರುವ ಬಲಶಾಲಿ. ಆದ್ದರಿಂದ ಇದು ಆಶ್ಚರ್ಯವಲ್ಲವೆಂದೂ ಭಾವ.

ಅಹಿತವನ್ನುಂಟುಮಾಡಲು ಉದಿಸಿದ್ದಾನೆ ಎಂದು ಹೇಳಿದನು. ದೇವ ಋಷಿಗಳು ಗರುಡನನ್ನು ಸ್ತೋತ್ರ ಮಾಡಿದರು[೧].

'ತ್ವಮೃಷಿಸ್ತ್ವಂ ಮಹಾಭಾಗಸ್ತ್ವಂ ದೇವಃ ಪತಗೇಶ್ವರಃ ।...
ತ್ವಂ ಹಿ ಧಾತಾ ವಿಧಾತಾ ಚ ತ್ವಂ ವಿಷ್ಣುಃ ಸುರಸತ್ತಮಃ ॥...
...............
ಖಗೇಶ್ವರಂ ಶರಣಮುಪಾಗತಾ ವಯಂ
ಮಹೌಜಸಂ ಜ್ವಲನಸಮಾನವರ್ಚಸಮ್ ।
ತ್ವಂ ಪಾಹಿ ಸರ್ವಾಂಶ್ಚ ಸುರಾನ್ಮಹಾತ್ಮನಃ ॥.... ಇತ್ಯಾದಿ
- ಆದಿಪರ್ವ(ಆಸ್ತಿಕಪರ್ವ-೨೩/೧೫-೨೩)

ಗರುಡನು ದೇವತೆಗಳ ಸ್ತೋತ್ರದಿಂದ ಪ್ರಸನ್ನನಾಗಿ ತನ್ನ ಆಕಾರ ಮತ್ತು ತೇಜಸ್ಸನ್ನು ಸಂಕ್ಷೇಪಗೊಳಿಸಿದನು (ಲೋಕದ ಹಿತವನ್ನು ಗಮನದಲ್ಲಿಟ್ಟುಕೊಂಡು). ನಂತರ ಸಮುದ್ರದ ಆಚೆಯ ತೀರದಲ್ಲಿದ್ದ ತನ್ನ ತಾಯಿಯ ಬಳಿಗೆ ತೆರಳಿದ ಗರುಡ.

ಒಮ್ಮೆ ಕದ್ರೂದೇವಿಯು ತನ್ನನ್ನು ಹಾಗೂ ಆಕೆಯ ಸರ್ಪಮಕ್ಕಳನ್ನು ಎತ್ತಿಕೊಂಡು ಸಮುದ್ರಮಧ್ಯದಲ್ಲಿರುವ ರಮ್ಯವಾದ ನಾಗಾಲಯಕ್ಕೆ ಕರೆದೊಯ್ಯಲು ಆದೇಶಿಸಿದಳು. ವಿನತೆಯು ಕದ್ರೂವನ್ನು, ಗರುಡನು ಹಾವುಗಳನ್ನು ಎತ್ತಿಕೊಂಡು ಹೊರಟರು. ಗರುಡನು ಹಾರುತ್ತಾ ಸೂರ್ಯನ ಸಮೀಪಕ್ಕೂ ಹೋಗಲು ಸೂರ್ಯನ ಶಾಖದಿಂದ ಸರ್ಪಗಳು ಮೂರ್ಛೆ ಹೊಂದಿದರು. ಕದ್ರೂ [೨]ಇಂದ್ರಸ್ತುತಿ ಮಾಡಿ ಮಳೆ ತರಿಸಿಕೊಂಡು ಸರ್ಪಗಳನ್ನು ಸಂತೋಷಪಡಿಸಿದಳು. ಹಾವುಗಳು ಕದ್ರೂ ಜೊತೆಗೆ ರಾಮಣೀಯಕ ದ್ವೀಪಕ್ಕೆ ಬಂದವು. ಅಲ್ಲಿ ಕೆಲಕಾಲ ಸುಖವಾಗಿದ್ದ ಸರ್ಪಗಳು ಪುನಃ ಬೇರೆ ದ್ವೀಪಗಳಿಗೆ ಕರೆದೊಯ್ಯಲು ಗರುಡನಿಗೆ ಆಜ್ಞೆ ಮಾಡಿದಾಗ ಗರುಡನು ಉತ್ತರಿಸದೆ ತನ್ನ ತಾಯಿಗೆ ಈ ದಾಸ್ಯ ಪರಿಸ್ಥಿತಿಯ ಕಾರಣ ಕೇಳಿ ತಿಳಿದುಕೊಂಡು ಸರ್ಪಗಳಿಗೆ ದಾಸ್ಯಮೋಚನೆಗೆ ಏನು ಮಾಡಬೇಕೆಂದು ಕೇಳಿದನು. ಅಮೃತ ತಂದು ಕೊಟ್ಟರೆ ದಾಸ್ಯಮೋಚನೆ ಸಾಧ್ಯವೆಂದು ನುಡಿದವು ಸರ್ಪಗಳು. ಕದ್ರೂ ಕೂಡ ಇದನ್ನು ಸಮ್ಮತಿಸಿದಳು.

ಕೂಡಲೇ ಗರುಡನು ತಾಯಿಗೆ ಅಮೃತ ತರುವೆನೆಂದು ತಿಳಿಸಿ ಮೊದಲು ತನಗೆ ಆಹಾರ ಕೇಳಿದನು. ಆಕೆ ಸಮುದ್ರಮಧ್ಯದಲ್ಲಿರುವ ೧೦೦೦ ನಿಷಾದರನ್ನು ತಿನ್ನು, ಬ್ರಾಹ್ಮಣರನ್ನು

೧ ಈ ಸ್ತೋತ್ರದಲ್ಲಿ ಅನೇಕ ಶ್ಲೋಕಗಳಿಗೆ ಶ್ರೀವಾದಿರಾಜರು 'ಲಕ್ಷಾಲಂಕಾರ'ದಲ್ಲಿ ಅರ್ಥ ಬರೆದು ಅನುಗ್ರಹಿಸಿದ್ದಾರೆ. ವಿಷ್ಣುಸನ್ನಿಧಾನ ಪಾತ್ರನಾದ್ದರಿಂದ ಗರುಡನನ್ನೂ ವಿಷ್ಣುವೆಂದು ಈ ಸ್ತೋತ್ರದ ಅಭಿಪ್ರಾಯವಾಗಿದೆ. ದೇವತೆಗಳು ಮಾಡಿದ ಸ್ತೋತ್ರದ ಪೂರ್ಣಪಾಠವನ್ನು ಇದೇ ಪ್ರಕಾಶನದ ಗರುಡಶೇಷಶಿವಸ್ತೋತ್ರಮಂಜರಿಯಲ್ಲಿ ನೋಡಬಹುದು.

೨ ಅ. (೨೫/೭-೧೭)

ಮಾತ್ರ ಕೊಲ್ಲದಿರು ಎಂದಳು. ನಂತರ ಸಮುದ್ರಮಧ್ಯದಲ್ಲಿದ್ದ ನಿಷಾದರನ್ನು ಮಾತ್ರ ತಿಂದು, ಆಕಸ್ಮಿಕವಾಗಿ ತನ್ನ ಬಾಯಿಯೊಳಗೆ ಹೋದ ಬ್ರಾಹ್ಮಣನನ್ನು ಪುನಃ ಹೊರಗೆ ಕಳಿಸಿ ಆಕಾಶದಲ್ಲಿ ಹಾರುತ್ತಾ ತಪೋವನದಲ್ಲಿದ್ದ ತಂದೆ ಕಶ್ಯಪರಿಗೆ ಪ್ರಣಾಮ ಸಲ್ಲಿಸಿ ಪುನಃ ಉತ್ತಮ ಆಹಾರಕ್ಕಾಗಿ ಸೂಚಿಸಲು ಪ್ರಾರ್ಥಿಸಿದಾಗ ಕಶ್ಯಪರು ಸಮೀಪದಲ್ಲಿನ ಸರೋವರದಲ್ಲಿರುವ ಆಮೆ ಹಾಗೂ ಆನೆ ಎರಡನ್ನೂ ತಿನ್ನಲು ತಿಳಿಸಿದರು.

ಈ ಆಮೆ ಮತ್ತು ಆನೆಗಳು ಪೂರ್ವಜನ್ಮದಲ್ಲಿ ಅಣ್ಣತಮ್ಮಂದಿರಾಗಿದ್ದರು. ಆಸ್ತಿವಿಭಾಗದ ವಿಷಯದಿಂದಾಗಿ ಪರಸ್ಪರ ಶಪಿಸಿಕೊಂಡು ಹೀಗಾಗಿದ್ದಾರೆ. ಈಗಲೂ ಪರಸ್ಪರ ರೋಷ, ದ್ವೇಷಗಳಿಂದ ಒಂದನ್ನೊಂದು ಕೊಲ್ಲಲು ಪ್ರಯತ್ನಿಸುತ್ತಿವೆ. ನೀನು ಅವನ್ನು ತಿಂದು ಶಕ್ತಿ ಪಡೆದು, ಅಮೃತ ತರಲು ಪ್ರಯಾಣಿಸು ಎಂದು ಕಶ್ಯಪರು ಆಶೀರ್ವದಿಸಿದರಲ್ಲದೆ ಮಗ ಗರುಡನಿಗೆ ಬ್ರಾಹ್ಮಣ, ಹಸು ಮೊದಲಾದ ಮಂಗಲಪದಾರ್ಥಗಳು, ಶುಭಕರಗಳಾಗಲೆಂದು ಹರಸಿದರು. ದೇವತೆಗಳೊಡನೆ ಯಜ್ಞಮಾಡುವಾಗ ಎಲ್ಲ ವೇದಗಳು ಬಲದಾಯಕವಾಗಲಿ ಎಂದೂ ಆಶೀರ್ವದಿಸಿದರು.

ಹೀಗೆ ತಂದೆಯ ಆಶೀರ್ವಾದ ಪಡೆದ ಗರುಡನು ಆ ಸರೋವರದ ಬಳಿಗೆ ಹೋಗಿ ತನ್ನ ಒಂದು ನಖದಿಂದ ಆನೆಯನ್ನು, ಇನ್ನೊಂದರಿಂದ ಆಮೆಯನ್ನೂ ಎಳೆದು ಆಕಾಶಕ್ಕೆ ನೆಗೆದನು. ದಾರಿಯಲ್ಲಿನ ದೇವವೃಕ್ಷಗಳು ನಡುಗಿದವು. ಅಲ್ಲಿಯೇ ಇದ್ದ ಆಲದ ಮರದ ಪ್ರಾರ್ಥನೆಯ ಮೇರೆಗೆ ಅದರ ಮೇಲೆ ಕುಳಿತು ಆನೆ, ಆಮೆಗಳನ್ನು ತಿನ್ನಲು ಕುಳಿತೊಡನೆ ೧೦೦ ಯೋಜನ ವಿಸ್ತೀರ್ಣದ ರೆಂಬೆಯು ಗರುಡನ ಭಾರಕ್ಕೆ ಮುರಿಯಿತು.

ಗರುಡನು ಆ ರೆಂಬೆಯನ್ನು ಬೀಳದಂತೆ ತನ್ನ ಕೊಕ್ಕಿನಿಂದ ಹಿಡಿದು ಆ ರೆಂಬೆಗೆ ಜೋತುಬಿದ್ದು ತಪಸ್ಸನ್ನು ಮಾಡುತ್ತಿದ್ದ ವಾಲಖಿಲ್ಯ ಬ್ರಹ್ಮರ್ಷಿಗಳನ್ನು ಕೊಲ್ಲಬಾರದೆಂದು ಯೋಚಿಸಿದನು. ಗಂಧಮಾದನಪರ್ವತದಲ್ಲಿ ತಪಸ್ಸನ್ನು ಮಾಡುತ್ತಿದ್ದ ಕಶ್ಯಪರನ್ನು ಮತ್ತೆ ಕಾಣಲಾಗಿ, ಅವರ ಸಲಹೆಯ ಮೇರೆಗೆ ವಾಲಖಿಲ್ಯರು ಆ ರೆಂಬೆಯನ್ನು ತ್ಯಜಿಸಿ ಹಿಮವತ್ಪರ್ವತಕ್ಕೆ ತಪಸ್ಸಿಗೆ ತೆರಳಿದರು. ಗರುಡನ ಭಾರಿ ಪರಾಕ್ರಮದಿಂದ ವಿಸ್ಮಿತರಾದ ವಾಲಖಿಲ್ಯರು ಗರುಡ ಶಬ್ದಕ್ಕೆ ವ್ಯಾಖ್ಯೆ ನೀಡುತ್ತಾರೆ[1].

**ಗುರುಭಾರಂ ಸಮಾಸಾದ್ಯೋಡ್ಡೀನ ಏಷ ವಿಹಂಗಮಃ ।**
**ಗರುಡಸ್ತು ಖಗಶ್ರೇಷ್ಠಸ್ತಸ್ಮಾತ್ಪನ್ನಗ ಭೋಜನಃ ॥** - **ಅಧ್ಯಾಯ (೩೦/೭)**

---

೧ ಮುಂದೆ ಇದೇ ಗರುಡನ ಮೇಲೆ ಮಂದರಪರ್ವತವನ್ನು ಹೊರಿಸಿ, ಶ್ರೀವಿಷ್ಣು ಅನುಗ್ರಹಿಸಿದ ವಿವರಗಳು ಅಮೃತಮಥನದಲ್ಲಿ ಬರುತ್ತದೆ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ. ಶೇಷನಷ್ಟೇ ಬಲಶಾಲಿಯಾದ ಗರುಡನು ಭೂಮಿಯೆಲ್ಲ ಹೊರುವ ಬಲಶಾಲಿ. ಆದ್ದರಿಂದ ಇದು ಆಶ್ಚರ್ಯವಲ್ಲವೆಂದೂ ಭಾವ.

'ಭಾರೀ ಭಾರವನ್ನು ಅನಾಯಾಸವಾಗಿ ಹೊತ್ತು ಹಾರುವುದರಿಂದ ಹಾವುಗಳೇ ಆಹಾರವಾದ ಈ ಪಕ್ಷಿರಾಜನು ಗರುಡನೆಂದು ಕರೆಯಲ್ಪಡಲಿ'.

ಹೀಗೆ ತಾಯಿಯ ದಾಸ್ಯಮೋಚನೆಯ ಪ್ರಯತ್ನದಲ್ಲಿ ಬ್ರಾಹ್ಮಣರ ಅನುಗ್ರಹ ಸಂಪಾದಿಸಿದ್ದು ಗರುಡನ ಹಿರಿಮೆಯಾಗಿದೆ. ತಂದೆ ಕಶ್ಯಪರ ಆದೇಶದ ಮೇರೆಗೆ ತನ್ನ ಕೊಕ್ಕಿನಲ್ಲಿದ್ದ ರೆಂಬೆಯನ್ನು ಒಂದು ಲಕ್ಷಯೋಜನ ದೂರದಲ್ಲಿದ್ದ ಹಿಮಾಚ್ಛಾದಿತವಾದ ಪರ್ವತದ ಮೇಲೆ ಹಾಕಲು ಆ ಪರ್ವತವು ಕ್ಷಣಕಾಲ ಕಂಪಿಸಿತಂತೆ. ನಂತರ ಈ ಪರ್ವತ ಶಿಖರದ ಮೇಲೆ ಕುಳಿತು ಆಮೆ, ಆನೆಗಳನ್ನು ತಿಂದ ಗರುಡನು, ಕೂಡಲೇ ಪರ್ವತದಿಂದ ಹಾರಿ ದೇವಲೋಕದತ್ತ ಹಾರುತ್ತಿರಲು ಸ್ವರ್ಗದಲ್ಲಿ ಭಾರೀ ಅಪಶಕುನಗಳು ಆದವು. ಸಾವಿರಾರು ಉಲ್ಕೆಗಳು ಉದುರಿದವು. ಪರ್ಜನ್ಯನು ರಕ್ತದ ಮಳೆಗರೆದನು. ದೇವತೆಗಳ ಕಿರೀಟಗಳು ಮಲಿನವಾದವು. ಬೆದರಿದ ದೇವೇಂದ್ರನು ಗುರುಗಳನ್ನು ಇದರ ಕಾರಣ ಕೇಳಿದನು. ಅಮೃತಾಪಹರಣಕ್ಕಾಗಿ ಬರುತ್ತಿರುವ ಗರುಡನಿಂದ ಇಷ್ಟೆಲ್ಲಾ ಆಗುತ್ತಿವೆ ಎಂದು ನುಡಿದರು ಬೃಹಸ್ಪತಿಗಳು. ಇಂದ್ರನು ಹಿಂದೆ ಮಾಡಿದ ವಾಲಖಿಲ್ಯರ ಅಪಮಾನ, ಅಪರಾಧ, ಪ್ರಮಾದಗಳು ಕಾರಣವೆಂದು ನುಡಿದರು. ವಾಲಖಿಲ್ಯರ ಅನುಗ್ರಹದಿಂದ ಜನಿಸಿದ ಗರುಡನ ಮಹಾಪರಾಕ್ರಮವನ್ನೂ ವರ್ಣಿಸಿದರು ಆಚಾರ್ಯ ಬೃಹಸ್ಪತಿಗಳು.

ಇದೆಲ್ಲ ಕೇಳಿ ಬೆದರಿದ ಇಂದ್ರನು ಹೇಗಾದರೂ ಮಾಡಿ ಅಮೃತ ರಕ್ಷಿಸಲು ದೇವಯೋಧರಿಗೆ ಆದೇಶಿಸಿದನು. ದೇವತೆಗಳು ಯುದ್ಧಕ್ಕೆ ಸಜ್ಜಾಗಿರುತ್ತಿರಲು ಗರುಡನೂ ಬಂದನು. ಆತನನ್ನು ನೋಡುತ್ತಲೇ ದೇವತೆಗಳು ಭಯದಿಂದ ಕಂಪಿಸಿದರು. ಗರುಡನಿಗೆ ಹೊಡೆಯಲು ಹೋದ ಆಯುಧಗಳು ತಮ್ಮವರೇ ಆದ ದೇವತೆಗಳನ್ನೆ ಹೊಡೆದವು. ಅಮೃತವನ್ನು ಕಾಯುತ್ತಿದ್ದ ವಿಶ್ವಕರ್ಮನು ಗರುಡನ ರೆಕ್ಕೆಗಳ ಹೊಡೆತದಿಂದ ನಿಶ್ಚೇಷ್ಟಿತನಾದನು. ಗರುಡನು ಎಬ್ಬಿಸಿದ ಧೂಳಿನಿಂದ ದೇವಸೈನ್ಯ ಮೋಹಗೊಂಡಿತು. ಸ್ವರ್ಗ ಲೋಕ ಅಲ್ಲೋಲಕಲ್ಲೋಲವಾಯಿತು. ದೇವತೆಗಳಿಂದ ಬಿಡಲ್ಪಟ್ಟ ಯಾವ ಆಯುಧಗಳೂ ಗರುಡನನ್ನು ಏನೂ ಮಾಡದಾದವು. ತನ್ನ ರೆಕ್ಕೆಗಳ ಬಲದಿಂದಲೇ ದೇವತೆಗಳನ್ನೆಲ್ಲ ಓಡಿಸಿದನು. ಪ್ರಳಯಕಾಲೀನ ರುದ್ರನಂತೆ ಗರುಡನು ಕೋಪಗೊಂಡಾಗ ದೇವತೆಗಳೆಲ್ಲ ಘಾಸಿಗೊಂಡರು.[೧] ಕೂಡಲೇ ಅಮೃತವಿದ್ದ ಕಡೆ ಧಾವಿಸಿ ಅದರ ಸುತ್ತಲೂ ಇದ್ದ ಅಗ್ನಿಜ್ವಾಲೆಗಳನ್ನು ೮೦ ನದಿಗಳ ನೀರನ್ನು ತನ್ನ ಬಾಯಿಯಲ್ಲಿ ತುಂಬಿಕೊಂಡು ತಂದು ಆರಿಸಿದನು. ತಕ್ಷಣ ಅಮೃತವಿದ್ದೆಡೆಗೆ ಸೂಕ್ಷ್ಮರೂಪಧರಿಸಿ, ಅದರ ಸುತ್ತಲೂ ಸುತ್ತುತ್ತ ಪ್ರಜ್ವಲಿಸುತ್ತಿದ್ದ ಚಕ್ರದ ಮಧ್ಯೆ ತೂರಿದನು. ಅಲ್ಲಿದ್ದ ವಿಷ ಸುರಿಸುವ ಘಟಸರ್ಪಗಳ ಕಣ್ಣಿಗೆ ಧೂಳೆರಚಿ ಅನಾಯಾಸವಾಗಿ ಅಮೃತಕಲಶವನ್ನೆತ್ತಿ ಆಕಾಶಕ್ಕೆ ಹಾರಿಹೋದನು. ಹೀಗೆ ತಾಯಿಯ ದಾಸ್ಯಮೋಚನೆಗಾಗಿ ಅಮೃತವನ್ನು ತರುತ್ತಿರಲು

---

೧ ಇದರಿಂದ ಗರುಡನು ಇಂದ್ರಾದಿದೇವತೆಗಳಿಗಿಂತ ಉತ್ತಮದೇವತೆ ಎಂದು ತಿಳಿಯುತ್ತದೆ.

ದಾರಿಯಲ್ಲಿ ಭಗವಂತನಾದ ವಿಷ್ಣುವು ಗರುಡನ ಪರಾಕ್ರಮವನ್ನು ಪ್ರಶಂಸಿಸಿ ಗರುಡನಿಗೆ ತನ್ನ ಧ್ವಜ ಹಾಗೂ ವಾಹನವಾಗೆಂದು ವರವನ್ನಿತ್ತು ಅನುಗ್ರಹಿಸಿದನು.

ಹೀಗೆ ಉಪೇಂದ್ರನ ವರಪಡೆದು ವೇಗವಾಗಿ ಹೋಗುತ್ತಿರಲು ಇಂದ್ರನು ಗರುಡನ ಮೇಲೆ ವಜ್ರಾಯುಧ ಪ್ರಯೋಗಿಸಿದನು. [೧]ಗರುಡನು ಅದು ದಧೀಚಿ ಬ್ರಾಹ್ಮಣರ ಅಸ್ಥಿಯಿಂದ ಆದುದೆಂದು ಅರಿತು ಅದನ್ನು ಗೌರವಿಸುವೆ ಎಂದು ಇಂದ್ರನಿಗೆ ಹೇಳುತ್ತಾ ತನ್ನ ಒಂದು ಗರಿಯನ್ನು ಕೆಳಗೆ ಬೀಳಿಸಿದನು. ಆ ಸುಂದರಗರಿಯನ್ನು ನೋಡಿದ ಋಷಿಗಳು ಗರುಡನನ್ನು ಸುಪರ್ಣನೆಂದೂ ಕರೆದರು. ಗರುಡನ ಪರಾಕ್ರಮವರಿತ ಇಂದ್ರನು ಆತನ ಸ್ನೇಹ, ಮೈತ್ರಿ ಬಯಸಲು ಗರುಡನು ಅನುಗ್ರಹಿಸಿದನು. [೨]ಇಡೀ ಭೂಮಿಯನ್ನು ಚರಾಚರ ಲೋಕಗಳನ್ನು ಒಂದೇ ರೆಕ್ಕೆಯ ಮೇಲೆ ಹೊರಬಲ್ಲೆ, ಇದು ನನ್ನ ಮಹಾಬಲ ಎಂದು ಇಂದ್ರನಿಗೆ ತನ್ನ ಬಲದ ಮಹತ್ತ್ವ ತಿಳಿಸಿದನು ಗರುಡ. ಇಂದ್ರನ ಅಪೇಕ್ಷೆಯ ಮೇರೆಗೆ ಅಮೃತವನ್ನು ಅಪಹರಿಸಿಕೊಂಡು ಹೋಗಲು ಅನುಮತಿಸಿದ ಸುಪರ್ಣನು ತಾಯಿಯ ಬಳಿಗೆ ಹೋದನು. ಸರ್ಪಗಳನ್ನು ಉದ್ದೇಶಿಸಿ 'ನನ್ನ ತಾಯಿಯ ದಾಸ್ಯಮೋಚನೆಯಾಯಿತು. ಈ ಅಮೃತವನ್ನು ಸ್ನಾನಮಾಡಿ ಬಂದು ಕುಡಿಯಿರಿ' ಎಂದು ಹೇಳಿ ಅಮೃತವನ್ನು ಗರುಡನು ದರ್ಭೆಯ ಮೇಲೆ ಇಟ್ಟನು. ಇತ್ತ ಸರ್ಪಗಳೆಲ್ಲ ಸ್ನಾನ ಮಾಡಿ ಜಪ ಮಾಡಿ ಬರುವ ಹೊತ್ತಿಗೆ ಇಂದ್ರನು ಬಂದು ಅಮೃತವನ್ನು ಅಪಹರಿಸಿಯೇ ಬಿಟ್ಟನು. ಸರ್ಪಗಳು ಬಂದು ನಿರಾಶರಾಗಿ ದರ್ಭೆಯನ್ನು ನೆಕ್ಕಲು ಅವುಗಳ ನಾಲಿಗೆಗಳು ಸೀಳಿ ಎರಡಾದವು.

### ಸಂದೇಶಗಳು-ವಿವರಣೆಗಳು

ಹೀಗೆ ಅಮೃತಪಾನಕ್ಕೆ ಅಯೋಗ್ಯರಾದ ವಿಷಸರ್ಪಗಳು ಅಮೃತದಿಂದ ವಂಚಿತರಾದ ಕಥೆಯು '**ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ**' ಎಂಬ ನಿರ್ಣಯದ ಮಾತನ್ನು ನೆನಪಿಸುತ್ತದೆ. ಹೀಗಿರುವಾಗ ದೈತ್ಯ ದಾನವರಿಗೆ ಹೇಗೆ ತಾನೇ ಅಮೃತ ಸಿಕ್ಕೀತು. ಆದ್ದರಿಂದ ಭಗವಂತನೂ ಸಹ ದೈತ್ಯರನ್ನು ವಂಚಿಸಿಯೇ ದೇವತೆಗಳಿಗೆ ಅಮೃತ

---

೧ ಋಷೇರ್ಮಾನಂ ಕರಿಷ್ಯಾಮಿ ವಜ್ರಂ ಯಸ್ಯಾಸ್ಥಿಸಂಭವಮ್ ।
ಏ ತತ್ ಪತ್ರಂ ತ್ಯಜಾಮ್ಯೇಕಂ ಯಸ್ಯಾಂತಂ ನೋಪಲಪ್ಸ್ಯಸೇ ॥ – ಆದಿಪರ್ವ(೩೩/೨,೨೨)
ನ ಚ ವಜ್ರನಿಪಾತೇನ ರುಜಾ ಮೇಽಸ್ತೀಹ ಕಾಚನ ॥

೨ ಸ ಪರ್ವತವನಾಮುರ್ವೀಂ ಸಸಾಗರಜಲಾಮಿಮಾಮ್ ।
ವಹೇ ಪಕ್ಷೇಣ ವೈ ಶಕ್ರ ತ್ವಾಮಪ್ಯತ್ರಾವಲಂಬಿನಮ್ ।
ಸರ್ವಾನ್ ಸಂಪಿಂಡಿತಾನ್ ವಾಪಿ ಲೋಕಾನ್ ಸಸ್ಥಾಣುಜಂಗಮಾನ್ ।
ವಹೇಯಮಪರಿಶ್ರಾಂತೋ ವಿದ್ಧೀದಂ ಮೇ ಮಹದ್ಬಲಮ್ ॥ – ಆದಿಪರ್ವ(೩೪/೪,೫)
ತತೋ ನವತ್ಯಾ ನವತಿಂ ಮುಖಾನಾಂ ಇತ್ಯತ್ರ ಮುಖಾನಾಮ್ ನವತಿಂ ಕೃತ್ವಾ ನವತ್ಯಾಃ ನದೀಃ ಸಮಾಪೀಯೇತಿ ಸಂಬಂಧಃ ॥ – ಇತಿ ಲಕ್ಷಾಲಂಕಾರೇ

ಹಂಚಿದ ತತ್ತ್ವ ಇಲ್ಲಿಯೂ ಕಾಣಬೇಕು. ಎಲ್ಲಕ್ಕೂ ಹೆಚ್ಚಾಗಿ ತಾಯಿಯ ದಾಸ್ಯಮೋಚನೆ ಮಾಡಿದ ಗರುಡನ ಮಾತೃಭಕ್ತಿಯು '**ಮಾತೃದೇವೋ ಭವ**' ಎಂಬ ವೇದಮಂತ್ರವನ್ನು ಸ್ಮರಣೆಗೆ ತರುತ್ತದೆ. ಪಾಂಡವರು ಧೃತರಾಷ್ಟ್ರನು ಬೇಸರ ಪಟ್ಟುಕೊಳ್ಳಬಾರದೆಂದು ವಾರಣಾವತಕ್ಕೂ, ಅರಣ್ಯವಾಸಕ್ಕೂ ತೆರಳಿದುದನ್ನು ಇಲ್ಲಿ ಗಮನಿಸಬಹುದು. ಪಾಂಡವರನ್ನು ದುರ್ಯೋಧನಾದಿಗಳು ಮೋಸ ಮಾಡಿದಂತೆ ಇಲ್ಲೂ ಕದ್ರೂದೇವಿಯ ಮೇಲಿನ ಅಸೂಯೆಯಿಂದ ತಾನಿಟ್ಟ ಮೊಟ್ಟೆಯೊಡೆಯಲು ಪ್ರಯತ್ನಿಸಿ ಅಂಗವಿಕಲ ಪುತ್ರನನ್ನು ಪಡೆದುದು ಗಾಂಧಾರಿಯ ಚರಿತ್ರೆಯನ್ನು ಜ್ಞಾಪಿಸುತ್ತದೆ. ಇಲ್ಲಿ ವಿನತೆಯ ಇಬ್ಬರು ಮಕ್ಕಳೂ ಸಾತ್ವಿಕರಾದರೆ, ಗಾಂಧಾರಿಯ ಮಕ್ಕಳೆಲ್ಲರೂ ತಾಮಸಮನೋವೃತ್ತಿಯರೂ, ಭಗವದ್ವೇಷಿಗಳೂ ಎಂಬುದು ಇಲ್ಲಿಯ ಮತ್ತೊಂದು ಗಮನಾರ್ಹ ಸಂಗತಿ. ತನ್ನ ತಾಯಿಯ ದಾಸ್ಯಮೋಚನೆಗೆ ಗರುಡನು ಅತ್ಯಂತ ಸಂಯಮದಿಂದ, ಸಾತ್ವಿಕತನದಿಂದ ಪ್ರಯತ್ನಿಸಿ, ಶ್ರೀವಿಷ್ಣುವಿನ ಅನುಗ್ರಹವನ್ನೂ ಇಂದ್ರನ ಮೈತ್ರಿಯನ್ನೂ ಗಳಿಸಿದ್ದು ಮತ್ತೊಂದು ವೈಶಿಷ್ಟ್ಯ. ಗಾಂಧಾರಿಯ ಮಕ್ಕಳೆಲ್ಲ ನರಕಕ್ಕೇ ಹೋದರೆ ವಿನತೆಯ ಮಕ್ಕಳೆಲ್ಲ ದೇವಮಾನ್ಯರಾಗುತ್ತಾರೆ. ಇಲ್ಲಿಯ ಅಸೂಯೆಯ ಅಂಶ ತೀರ ಅಲ್ಪ.

*****

## ೫. ಶೇಷದೇವನಿಂದ ಮಾತೃ ಭ್ರಾತೃ ತ್ಯಾಗ

ಕದ್ರೂದೇವಿಯ ಮಕ್ಕಳೆಲ್ಲ ನಾಗಗಳು. ಅದರಲ್ಲಿ ಶೇಷನೇ ಹಿರಿಯ. ನಂತರ ಹುಟ್ಟಿದವರು ವಾಸುಕಿ, ಐರಾವತ, ತಕ್ಷಕ, ಕರ್ಕೋಟಕ, ಧನಂಜಯ, ಕಾಲಿಯಮಣಿನಾಗ ಮುಂತಾದವರು.

ಉಚ್ಚೈಃಶ್ರವ ಕುದುರೆಯ ಬಾಲವನ್ನು ಕಪ್ಪಾಗಿಸಲು ಸಹಕರಿಸಿದ ತನ್ನ ಮಕ್ಕಳಿಗೆ ಶಾಪ ನೀಡಿದ ತಾಯಿಯ ಬಗ್ಗೆ, ಸೋದರನಾದ ಗರುಡನನ್ನು ಹಾಗೂ ಚಿಕ್ಕಮ್ಮ ವಿನತೆಯನ್ನು ದಾಸಿಯಾಗಿಸಿಕೊಂಡ ವಿಷಯವು ಶೇಷದೇವನಿಗೆ ಜುಗುಪ್ಸೆತಂದಿತು. ಅವರೊಡನೆ ವಾಸಿಸಲೂ ಇಚ್ಛಿಸದೇ ಶೇಷನು ವಾಯುಭಕ್ಷನಾಗಿ ಗಂಧಮಾದನ ಪರ್ವತದ ಬಳಿ ಬದರೀಯಲ್ಲಿ ಘೋರ ತಪಸ್ಸನ್ನೇ ಮಾಡಿದನು. ಜಿತೇಂದ್ರಿಯನಾಗಿ ಗೋಕರ್ಣ, ಪುಷ್ಕಕಾರಣ್ಯವೇ ಮೊದಲಾದ ಕ್ಷೇತ್ರಗಳನ್ನು ಸುತ್ತುತ್ತಾ ತಪಸ್ಸು ಮಾಡಿದನು. ಇದನ್ನು ನೋಡಿದ ಬ್ರಹ್ಮದೇವರು ದರ್ಶನ ಕೊಟ್ಟು ತಪಸ್ಸಿನ ಕಾರಣ ಕೇಳಿದನು. ತನ್ನ ಸೋದರರ ಅಧರ್ಮವೃತ್ತಿ, ಪರಸ್ಪರ ಅಸೂಯೆ, ಗರುಡನ ಮೇಲಿನ ದ್ವೇಷದಿಂದ ಬೇಸತ್ತಿರುವುದನ್ನು ಬ್ರಹ್ಮನ ಗಮನಕ್ಕೆ ತಂದನು. ಇವರೊಡನೆ ನಾನಿರಲಾರೆ. ಹೀಗೆಯೇ ತಪಸ್ಸನ್ನು ಮಾಡುತ್ತಾ ಈ ದೇಹ ಬಿಡುವೆ. ದೇಹಬಿಟ್ಟು ನಂತರವೂ ನನಗೆ ಅವರ ಸಹವಾಸ ಬೇಡವೆಂದು ನುಡಿದನು ಶೇಷದೇವ. ಇದನ್ನು ಕೇಳಿ ಬ್ರಹ್ಮದೇವ 'ನಿನ್ನ ತಾಯಿಯ ಸೋದರರ ಅಪರಾಧ ನಾನು ಬಲ್ಲೆ. ಇದಕ್ಕೆ ಪರಿಹಾರವೂ ಆಗಲೇ ಮಾಡಿಯಾಗಿದೆ. ಅವರ ಬಗ್ಗೆ ಶೋಕಿಸದಿರು. ನನ್ನಿಂದ ಬೇಕಾದ ವರ ಕೇಳು, ನಿನ್ನ ಮೇಲೆ ನಾನು ತುಂಬಾ ಸಂತುಷ್ಟನಾಗಿದ್ದೇನೆ. ನಿನ್ನ ಬುದ್ಧಿಯು ಸರ್ವದಾ ಧರ್ಮದಲ್ಲಿರಲಿ ಎಂದನು.

ಶೇಷನೂ 'ಅದನ್ನೇ ನಾನು ಅಪೇಕ್ಷಿಸಿದ್ದೆ. ನನ್ನ ಬುದ್ಧಿಯು ಧರ್ಮ, ತಪಸ್ಸು ಹಾಗೂ ದೇವರಲ್ಲಿ ಆಸಕ್ತವಾಗಿರಲಿ' ಎಂದು ಬೇಡಿದ. ಬ್ರಹ್ಮದೇವ ಮುಂದುವರಿದು 'ಶೇಷ ! ನೀನು ಸಮುದ್ರ, ಶೈಲ, ಗ್ರಾಮ, ಪಟ್ಟಣ ಮೊದಲಾದವುಗಳಿಂದ ಕೂಡಿದ ಈ ಭೂಮಿಯನ್ನು ನಿನ್ನ ಹೆಡೆಯ ಮೇಲೆ ಅಲುಗಾಡದಂತೆ ಧರಿಸು. ಇದರಿಂದ ನಾನು ಸಂತುಷ್ಟನಾಗುವೆನು' ಎಂದು ಹೇಳಿದನು. ಶೇಷನು ಭೂಮಿಯನ್ನು ಸೀಳಿಕೊಂಡು ಹೋಗಿ ಅದನ್ನು ತನ್ನ ಹೆಡೆಯೊಂದರ ಮೇಲೆ ಸಾಸಿವೆಯನ್ನು ಧರಿಸಿದಂತೆ ಸುಲಭವಾಗಿ ಧರಿಸಿದನು. ಶೇಷನ ಸಹಾಯಕ್ಕೆ ಗರುಡನನ್ನೂ ಬ್ರಹ್ಮದೇವರು ಅನುಗ್ರಹಿಸಿದರು.

**ಸಂದೇಶಗಳು-ವಿವರಣೆಗಳು**

ಹೀಗೆ ತನ್ನ ಬಾಂಧವರ ದೌರ್ಜನ್ಯ, ದುರ್ಗುಣಗಳಿಗೆ ಬೇಸತ್ತ ಶೇಷದೇವನು ಅವರಿಂದ ದೂರನಾದರೂ, ಅದೇ ಸಮಯಕ್ಕೆ ತಪೋನಿರತನಾಗಿ ಬ್ರಹ್ಮದೇವರ ಮುಂದೆ ತನ್ನ ಅಳಲನ್ನು ತೋಡಿಕೊಂಡು ಅವರ ಅನುಗ್ರಹ ಸಂಪಾದಿಸಿದುದು ಶೇಷದೇವರ ನ್ಯಾಯದೃಷ್ಟಿಗೆ, ಬಂಧುಗಳ ಶೋಷಣೆಯ ವಿರುದ್ಧ ಅವರ ದನಿಯು ಇಲ್ಲಿ ಧ್ವನಿತವಾಗಿದೆ. ಅನ್ಯಾಯವನ್ನು ಮಾಡಿದ ತಾಯಿಯನ್ನೂ ತ್ಯಾಗ ಮಾಡಿದ್ದು ಅವರ ಧರ್ಮದೃಷ್ಟಿಯ ಸಂಕೇತವಾಗಿದೆ. ಬಂಧುವ್ಯಾಮೋಹತ್ಯಾಗ, ಅದರೊಂದಿಗೆ ಬ್ರಹ್ಮದೇವರ ಅನುಗ್ರಹ ಸಂಪಾದನೆ ಒಟ್ಟಿಗೆ ಸಾಧ್ಯವೆಂದು ಇಲ್ಲಿಯ ಹೃದಯವಾಗಿದೆ. ಅನ್ಯಾಯದ ಪ್ರತಿಭಟನೆಯ ಸಾತ್ತ್ವಿಕ ಪ್ರದರ್ಶನ ಅದರಿಂದ ದೂರ ಇರುವುದೇ ಆಗಿದೆ. ಸ್ವೋತ್ತಮನಿಂದೆಯ ಪ್ರತಿಭಟನೆ ಹೇಗೆ ಮುಖ್ಯವೋ ಬಂಧುಗಳಿಗೆ (ಇತರರಿಗೆ) ಆಗುವ ಶೋಷಣೆಯನ್ನೂ ಸೂಕ್ತರೀತಿಯಾಗಿ ಪ್ರತಿಭಟಿಸುವುದೂ ಹಾಗೆಯೇ ಮುಖ್ಯವೆಂದು ಶೇಷದೇವರ ನಡೆ ತೋರಿಸುತ್ತದೆ.[೧]

**ಪಾಂಡವರಿಗೆ ಆದ ಅನ್ಯಾಯವನ್ನು ವಿದುರ, ಯುಯುತ್ಸು ಹೀಗೆಯೇ ಮಾತಿನಿಂದ ದ್ಯೂತಸಭೆಯಲ್ಲಿ ಹಾಗೂ ಇತರ ಸಂದರ್ಭಗಳಲ್ಲಿ ಪ್ರತಿಭಟಿಸಿ ದೂರ ಹೋದುದನ್ನು ನೋಡಬಹುದಾಗಿದೆ.**

*****

---

೧ ವಾಯುಭಕ್ಷ = ಏಕಾದಶೀ ಮೊದಲಾದ ವ್ರತಾಚರಣೆಯ ಹಾಗೂ ವಾಯುಸಮ್ಮತಶಾಸ್ತ್ರಾಧ್ಯಯನವೇ ಭಕ್ಷವೆಂದು ಇದರ ಮರ್ಮ.

ಕರ್ಣೌ ಪಿಧಾಯ ನಿರಯಾದ್ಯದಕಲ್ಪ ಈಶೇ
ಧರ್ಮಾವಿತರ್ಯ ಸೃಣಿಭಿರ್ನೃಭಿರಸ್ಯಮಾನೇ।
ಛಿಂದ್ಯಾತ್ ಪ್ರಸಹ್ಯ ರುಶತೀಮಸತಾಂ ಪ್ರಭುಶ್ಚೇತ್
ಜಿಹ್ವಾಮಸೂನಪಿ ತತೋ ವಿಸೃಜೇತ್ ಸ ಧರ್ಮಃ॥
-ಸತೀದೇವಿಯು ಸಜ್ಜನರ ಧರ್ಮವನ್ನು ನಿರೂಪಿಸುತ್ತಾ ಹೇಳಿದ ಮಾತು - ಭಾಗವತ(೪/೪/೧೭)

# ೬. ಆಸ್ತೀಕ ಆಖ್ಯಾನ

## (ಆಸ್ತೀಕನಿಂದ ಸರ್ಪವಂಶದ ರಕ್ಷಣೆ)

ತಾಯಿಯ ಶಾಪದಿಂದ ವಿಚಲಿತನಾದ ವಾಸುಕಿಯು ಧರ್ಮಪರಾಯಣರಾದ ಐರಾವತ ಮೊದಲಾದ ಸೋದರಸರ್ಪಗಳೊಡನೆ ತಾಯಿಯ ಶಾಪದಿಂದ ಪಾರಾಗುವುದು ಹೇಗೆಂದು ಸಮಾಲೋಚನೆ ಮಾಡಿದನು. [೧]"ಎಲ್ಲ ಶಾಪಗಳಿಗೂ ಪ್ರಾಯಶ್ಚಿತ್ತ ಪರಿಹಾರ ಉಂಟು. ತಾಯಿಯ ಶಾಪಕ್ಕೆ ಮಾತ್ರ ಮೋಚನೆಯೇ ಇಲ್ಲ' ಹೀಗೆ ಹೆದರಿದ ಎಲ್ಲರೂ ಜನಮೇಜಯನ ಸರ್ಪಸತ್ರದಲ್ಲಿ ತಾವು ನಾಶವಾಗದಿರಲು ಅನೇಕ ನಕಾರಾತ್ಮಕ ಸಲಹೆಗಳನ್ನೇ ನೀಡಿದರು. ಸರ್ಪಯಾಗ ನಡೆಯದಂತೆ, ನಡೆದರೂ ವಿಘ್ನಗಳು ಬರುವಂತೆ ಸೂಚಿಸಿದವು. ಬ್ರಾಹ್ಮಣ ವೇಷಧರಿಸಿ ಸರ್ಪಯಾಗ ಮಾಡಲೇಬೇಡವೆಂದು ಜನಮೇಜಯನಿಗೆ ಯಾಚನೆ ಮಾಡಬೇಕೆಂದೂ ಪುರೋಹಿತನನ್ನೂ, ರಾಜನನ್ನೂ ಕಚ್ಚಿ ಕೊಲ್ಲಲು, ಯಜ್ಞದ ಮೇಲೆ ಮಳೆಗರೆಯಲೂ, ಹೋಮಪಾತ್ರೆಯನ್ನು ಅಪಹರಿಸಲೂ, ಎಲ್ಲ ಸರ್ಪಗಳು ನುಗ್ಗಿ ಯಜ್ಞಶಾಲೆಯಲ್ಲಿದ್ದವರನ್ನೆಲ್ಲ ಕಚ್ಚಿ ಓಡಿಸುವುದೂ; ರಾಜನನ್ನೇ ಅಪಹರಿಸುವುದೂ, ಇವೇ ಮುಂತಾದ ಸಲಹೆಗಳನ್ನು ಕೊಟ್ಟಾಗ ವಾಸುಕಿಯು ಯಾವುದನ್ನೂ ಒಪ್ಪದೇ ತಂದೆಯಾದ ಕಶ್ಯಪರ ಆಶೀರ್ವಾದವು ಬೇಕೆಂದು ಅಭಿಪ್ರಾಯಪಟ್ಟನು.

**ಏಲಾಪತ್ರನೆಂಬ** ಸರ್ಪನು ಮಾತ್ರ ತಾನು ಕೇಳಿದ ರಹಸ್ಯ ವಿಚಾರವನ್ನು ನಿವೇದಿಸಿದನು. 'ಕದ್ರೂದೇವಿಯು ಕೊಟ್ಟ ಶಾಪವು ಕೇವಲ ದುಷ್ಟ ಕ್ಷುದ್ರ ವಿಷಹಾವುಗಳ ಮೇಲೆ ಮಾತ್ರ ಪರಿಣಾಮ ಬೀರಲಿ. ಧರ್ಮಪರರಾದ ಸರ್ಪಗಳು ಸಾಯುವುದಿಲ್ಲ, ಅಲ್ಲದೆ 'ಯಾಯಾವರ ಕುಲದಲ್ಲಿ ಹುಟ್ಟುವ ಜರತ್ಕಾರು ಬ್ರಾಹ್ಮಣನಿಂದ ಜರತ್ಕಾರುವಿನಲ್ಲಿ ಹುಟ್ಟುವ ಆಸ್ತೀಕನು ಜನಮೇಜಯನ ಸರ್ಪಸತ್ರಕ್ಕೆ ಹೋಗಿ ಸರ್ಪಗಳ ನಾಶವನ್ನು ತಪ್ಪಿಸುವನು' ಎಂದು ಬ್ರಹ್ಮದೇವರು ದೇವತೆಗಳಿಗೆ ಹೇಳಿದ ಮಾತನ್ನು ವಾಸುಕಿಯ ಗಮನಕ್ಕೆ ತಂದು, ಕೂಡಲೇ ವಾಸುಕಿಯ ತಂಗಿಯಾದ ಜರತ್ಕಾರುವನ್ನು ಜರತ್ಕಾರು ಬ್ರಾಹ್ಮಣನಿಗೆ ಕೊಡಲು ನಿವೇದಿಸಿದನು ಏಲಾಪತ್ರ.

---

೧ ಸರ್ವೇಷಾಮೇವ ಶಾಪಾನಾಂ ಪ್ರತಿಘಾತೋ ಹಿ ವಿದ್ಯತೇ ।
ನ ತು ಮಾತ್ರಾಭಿಶಪ್ತಾನಾಂ ಮೋಕ್ಷಣಃ ಕ್ವಚನ ವಿದ್ಯತೇ ॥ - ಆದಿಪರ್ವ(೩೭/೪)

ಈ ಪ್ರಸ್ತಾವನೆಯನ್ನು ಎಲ್ಲರೂ ಒಪ್ಪಿದರು. ಹಿಂದೆ ಸಮುದ್ರಮಥನದಲ್ಲಿ ವಾಸುಕಿಯು ಮಾಡಿದ ಸಹಾಯದಿಂದ ತೃಪ್ತದೇವತೆಗಳು ಬ್ರಹ್ಮನಿಗೆ, ವಾಸುಕಿಯು ತನ್ನ ತಾಯಿ ಶಾಪದಿಂದ ಹೆದರಿದುದನ್ನು ಆತನ ಭಯವನ್ನು ಹೋಗಲಾಡಿಸಲು ಬೇಡಿದರು. ಬ್ರಹ್ಮನು ಈಗಾಗಲೇ ತಾನು ಹೇಳಿದಂತೆ ಜರತ್ಕಾರುವಿಗೆ ವಾಸುಕಿಯು ತನ್ನ ತಂಗಿಯನ್ನು ಕೊಡಲಿ. ನಂತರ ವಾಸುಕಿಯು ಎಲ್ಲ ಸರ್ಪಗಳಿಗೆ ಜರತ್ಕಾರುಮುನಿಯು ಕನ್ಯಾರ್ಥಿಯಾಗಿ ಬಂದ ಕೂಡಲೇ ತಿಳಿಸಲು ಆದೇಶಿಸಿದನು.

## ಜರತ್ಕಾರು ಜನ್ಮ-ತಪಸ್ಸು-ಪಿತೃಗಳಿಗೆ ಆಶ್ವಾಸನೆ :

[೧]ಜರಾ ಎಂದರೆ ಕ್ಷಯ (ನಾಶಸೂಚಕ). ಕಾರು ಎಂದರೆ ಅತಿಸ್ಥೂಲ; ಆತನ ಶರೀರ ಭಾರೀ ಸ್ಥೂಲವಾಗಿದ್ದು ಘೋರ ತಪಸ್ಸಿನಿಂದ ಅದನ್ನು ಕ್ಷಯಿಸಿದ್ದರಿಂದ ಜರತ್ಕಾರು ಎಂಬ ಹೆಸರು ಬಂದಿತ್ತು. ಈ ಮುನಿಯು ಊರ್ಧ್ವರೇತಸ್ಕ ಬ್ರಹ್ಮಚಾರಿಯಾಗಿ ವೇದಾಧ್ಯಯನ ಶೀಲನಾಗಿದ್ದ. ಈ ಋಷಿ ಮದುವೆಯ ವಿಚಾರ ಮಾಡಲೇ ಇಲ್ಲ. ಸದಾಚಾರಿಯಾಗಿದ್ದು ಆಹಾರವನ್ನೂ ಬಯಸದೇ ಗಾಳಿಯನ್ನೇ ಆಹಾರವಾಗಿ ಮಾಡಿಕೊಂಡು ಇರುತ್ತಾ ಸಂಚರಿಸುತ್ತಿದ್ದ. ಒಮ್ಮೆ ಸಂಚಾರದಲ್ಲಿರುವಾಗ ಒಂದು ಹಳ್ಳದ ಬಳಿ '**ವೀರಣಸ್ತಂಭ**'ದಲ್ಲಿ ತಲೆಕೆಳಗಾಗಿ ಜೋತುಬಿದ್ದಿದ್ದ ಪಿತೃಗಳನ್ನು ನೋಡಿದನು. ಅಲ್ಲದೇ ದಯೆಯಿಂದ ಅವರನ್ನು ಪ್ರಶ್ನಿಸಿದ. 'ನೀವು ಯಾರು? ನೀವು ಆಶ್ರಯಿಸಿರುವ ಈ ಗಿಡದ ಬೇರೆಲ್ಲವನ್ನು ಇಲಿ ಕಚ್ಚಿದೆ. ಒಂದೇ ತಂತು ಮಾತ್ರ ಉಳಿದಿದೆ. ಅದೂ ಕಚ್ಚಲ್ಪಟ್ಟರೆ ನಿಮ್ಮ ಗತಿ ಏನು? ನಿಮ್ಮ ಒಳಿತಿಗಾಗಿ ನಾನು ನನ್ನ ತಪಸ್ಸನ್ನು ಧಾರೆಯೆರೆಯುವೆ. ನಿಮ್ಮ ದುಃಸ್ಥಿತಿಯಿಂದ ಪಾರಾಗಲು ನಾನು ಏನು ಮಾಡಬೇಕು? ಹೇಳಿರಿ' ಎನ್ನಲು, 'ನಾವೂ ತಪಃಫಲಸಂಪನ್ನರೇ, ನಮ್ಮ ವಂಶ ಕ್ಷಯಿಸಿದೆ. ನಮ್ಮ ಮೇಲಿನ ನಿನ್ನ ಕೃಪೆಗಾಗಿ ಹೇಳುತ್ತೇವೆ. ನಾವು ಯಾಯಾವರ ವಂಶದವರು. ಇಲ್ಲಿಯವರೆಗೂ ಪುಣ್ಯಲೋಕದಲ್ಲಿದ್ದ ನಾವು ನಮ್ಮ ವಂಶ ಕ್ಷಯಿಸಿದ್ದರಿಂದ ನಮ್ಮ ಗತಿ ಹೀಗಾಗಿದೆ. ನಮ್ಮ ವಂಶದವನೊಬ್ಬ ಭೂಮಿಯಲ್ಲಿದ್ದರೂ ಅವನು ಬರೀ ತಪೋಲೋಭಿ, ಸಂತಾನ ಪಡೆದಿಲ್ಲ ಆದ್ದರಿಂದ ನಮಗೆ ಈ ಕಷ್ಟ. ನಮ್ಮ ಮಗ ಜರತ್ಕಾರುವನ್ನು ನೀನು ಎಲ್ಲಾದರೂ ನೋಡಿದಲ್ಲಿ ಅವನಿಗೆ ನಮ್ಮ ಪರಿಸ್ಥಿತಿ ತಿಳಿಸಿ ಮದುವೆಯಾಗಿ ಸಂತಾನ ಪಡೆಯಲು ಹೇಳು. ಆಗಲೇ ನಮಗೆ ಸದ್ಗತಿ. ಅವನೇ ನಮ್ಮ ಏಕಮಾತ್ರ ವೀರಣಸ್ತಂಭ (ಲಾವಂಚ ಪೊದೆ, ಇದರ ಬೇರನ್ನು ನೀರಿಗೆ ಹಾಕಿದರೆ ನೀರು ತಣ್ಣಗಿರುತ್ತದೆ). ಸತ್ಸಂತಾನಕ್ಕಿಂತ ಬೇರೊಂದು ತಪಸ್ಸಾಗಲಿ, ಯಜ್ಞವಾಗಲಿ, ಪುಣ್ಯವಾಗಲಿ ಇಲ್ಲ' ಎಂದು ತಿಳಿಸಲು ಹೇಳಿದರು.

---

೧ ಜರೇತಿ ಕ್ಷಯಮಾಹುರ್ವೈದಾರುಣಂ ಕಾರು ಸಂಜ್ಞಿತಮ್ ।
ಶರೀರಂ ಕಾರು ತಸ್ಯಾಸೀತ್ ತತ್ಸಧೀಮಾನ್ ಶನೈಃ ಶನೈಃ ॥ – ಆದಿಪರ್ವ(೪೦/೩,೪,)
ಕ್ಷಪಯಾಮಾಸ ತೀವ್ರೇಣ ತಪಸೇತ್ಯತ ಉಚ್ಯತೇ ।
**ಜರತ್ಕಾರುರಿತಿ ಬ್ರಹ್ಮನ್** .......................... ॥

ಪಿತೃಗಳ ಮಾತನ್ನು ಕೇಳಿ ಮರುಗಿ ನೀರಾದ ಜರತ್ಕಾರು '**ನಾನೇ ನಿಮ್ಮ ಮಗ ಜರತ್ಕಾರು, ಪಾಪಿ**' ಎಂದು ಪಶ್ಚಾತ್ತಾಪಗೊಂಡು 'ನಾನು ಖಂಡಿತ ಜರತ್ಕಾರು ಎಂಬ ಹೆಸರಿನವಳನ್ನೇ ಮದುವೆಯಾಗಿ ಸಂತಾನ ಪಡೆದು ನಿಮ್ಮನ್ನು ದುರ್ಗತಿಯಿಂದ ದಾಟಿಸುವೆ. ಕನ್ಯಾಭಿಕ್ಷೆಯನ್ನು ಯಾರಾದರೂ ಕೊಡಬೇಕು. ಆದರೆ ನಾನವಳನ್ನು ಸಾಕುವುದಿಲ್ಲ' ಎಂದು ಮೂರು ಕರಾರುಗಳನ್ನು ಪಿತೃಗಳಿಗೂ [೧]ತಿಳಿಸಿ ಅರಣ್ಯದಲ್ಲಿ 'ನಾನು ಕನ್ಯಾಭಿಕ್ಷೆಯನ್ನು ಬೇಡುತ್ತೇನೆ' ಎಂದು ಮೂರು ಬಾರಿ ಗಟ್ಟಿಯಾಗಿ ಕೂಗಿದನು. ಮೇಲಿನ ತನ್ನ ಮೂರು ನಿಯಮಗಳನ್ನು ಸ್ಪಷ್ಟವಾಗಿ ಎಲ್ಲರಿಗೂ ಕೇಳಿಸುವಂತೆ ಹೇಳಿದನು. ಇದನ್ನು ಕೇಳಿದ ಸರ್ಪಗಳು ವಾಸುಕಿಗೆ ತಿಳಿಸಿದವು. ವಾಸುಕಿಯು ಬಂದು ಭಿಕ್ಷಾರೂಪವಾಗಿ ಜರತ್ಕಾರುವಿಗೆ ತನ್ನ ತಂಗಿಯನ್ನು ಸಮರ್ಪಿಸಿ ಆತನ ಇತರ ೩ ನಿಯಮಗಳನ್ನು ಅಂಗೀಕರಿಸಿದನು. ತನ್ನ ನಿಯಮಗಳನ್ನೂ ಜರತ್ಕಾರುಮುನಿ ತಿಳಿಸಿದ ವಾಸುಕಿಗೆ. 'ನಾನು ಈಕೆಯ ಪೋಷಣೆಯ ಭಾರವನ್ನು ಹೊರುವುದಿಲ್ಲ. ಇದು ನನ್ನ ನಿಯಮ, ಈಗಾಗಲೇ ತಿಳಿಸಿಯಾಗಿದೆ. ಈಕೆ ನನಗೆ ಅಪ್ರಿಯವೇನನ್ನಾದರೂ ಮಾಡಿದಲ್ಲಿ ಇವಳನ್ನು ತ್ಯಜಿಸುವೆ.' ವಾಸುಕಿಯು ಅದಕ್ಕೂ ಒಪ್ಪಿದ. ನಂತರ ಜರತ್ಕಾರು ಮುನಿ ಸರ್ಪರಾಜ ವಾಸುಕಿಯ ಅರಮನೆಗೆ ನಡೆದನು. ಅಲ್ಲಿ ಜರತ್ಕಾರುವನ್ನು ಮದುವೆಯಾಗಿ ಮುನಿ ಅರಮನೆಯಲ್ಲಿ ಕೆಲಕಾಲ ಸುಖವಾಗಿದ್ದನು. ಹೆಂಡತಿಗೂ ತನ್ನ ನಿಯಮಗಳನ್ನು ಮತ್ತೆ ಹೇಳದೆ ಬಿಡಲಿಲ್ಲಮುನಿ. 'ನನಗೆ ಅಪ್ರಿಯವಾದುದನ್ನು ಮಾಡಕೂಡದು ಮತ್ತು ಮಾತನಾಡಕೂಡದು. ಹಾಗೇನಾದರೂ ಮಾಡಿದಲ್ಲಿ ನಿನ್ನನ್ನು ಪರಿತ್ಯಜಿಸುವೆ[೨]. ನಿನ್ನ ಮನೆಯನ್ನೂ ಬಿಡುವೆ.' ಬಹಳ ದುಃಖಿತಳಾದ ವಾಸುಕಿಯ ತಂಗಿಯು ನಿರ್ವಾಹವಿಲ್ಲದೆ 'ಹಾಗೆಯೇ ಆಗಲಿ' ಎಂದಳು. ಹೀಗೆಯೇ ತನ್ನ ದುಃಖಶೀಲನಾದ ಗಂಡನನ್ನು ಆತನ ಪ್ರೀತಿಗಾಗಿಯೇ ಜಾಣ್ಮೆಯಿಂದ ಆತನ ಬೇಕು-ಬೇಡುಗಳನ್ನು ಅರಿತು ಉಪಚರಿಸುತ್ತಿದ್ದಳು. ಮುಂದೊಮ್ಮೆ ಋತುಸ್ನಾತೆಯಾದ ಜರತ್ಕಾರು ಗಂಡನನ್ನು ಸೇವಿಸಿದಳು. ಸುಮುಹೂರ್ತದಲ್ಲಿ ಗರ್ಭಧಾರಣೆ ಹೊಂದಿದಳು. ಆಕೆಯ ಗರ್ಭದಲ್ಲಿ ಅಗ್ನಿಯ ತೇಜಸ್ಸಿನಂತಿರುವ ಮಗು ಶುಕ್ಲಪಕ್ಷದ ಚಂದ್ರನಂತೆ ವರ್ಧಿಸ-ತೊಡಗಿತು.

ಒಂದು ದಿನ ಆಯಾಸಗೊಂಡವನಂತೆ ಇದ್ದ ಜರತ್ಕಾರು ಹೆಂಡತಿಯ ತೊಡೆಯ ಮೇಲೆ

---

೧ ಮಯಾ ನಿರ್ವರ್ತಿತಾ ಬುದ್ಧಿಃ ಬ್ರಹ್ಮಚರ್ಯಾತ್ ಪಿತಾಮಹಾಃ।
ಕರಿಷ್ಯೇ ವಃ ಪ್ರಿಯಂ ಕಾಮಂ ನಿವೇಕ್ಷ್ಯೇऽಹಮಸಂಶಯಮ್ ॥
ಸನಾಮ್ನೀಂ ಯದ್ಯಹಂ ಕನ್ಯಾಮುಪಲಪ್ಸ್ಯೇ ಕದಾಚನ।
ಭವಿಷ್ಯತಿ ಚ ಯಾ ಕಾಚಿತ್ ಭೈಕ್ಷ್ಯವತ್ ಸ್ವಯಮುದ್ಯತಾ।
ಪ್ರತಿಗ್ರಹೀತಾ ತಾಮಸ್ಮಿ ನ ಭರೇಯಂ ಚ ಯಾಮಹಮ್।
ಏವಂ ವಿಧಮಹಂ ಕುರ್ಯಾಂ ನಿವೇಶಂ ಪ್ರಾಪ್ನುಯಾಂ ಯದಿ। -ಆದಿಪರ್ವ(೪೬/೭-೧೦)

೨ ವಿಪ್ರಿಯಂ ಮೇ ನ ಕರ್ತವ್ಯಂ ನ ಚ ವಾಚ್ಯಂ ಕದಾಚನ।
ತ್ಯಜೇಯಂ ವಿಪ್ರಿಯೇ ಚ ತ್ವಾಂ ಕೃತೇ ವಾಸಂ ಚ ತೇ ಗೃಹೇ॥ - ಆದಿಪರ್ವ(೭/೮,೯)

ಮಲಗಿದ. ಸ್ವಲ್ಪಹೊತ್ತಿಗೆ ಸೂರ್ಯನೂ ಅಸ್ತಂಗತನಾಗುತ್ತ ಬಂದನು. ಸಂಧ್ಯಾಕಾಲದ ಕರ್ತವ್ಯ ನಿರ್ವಹಣೆಗೆ ಪತಿಯನ್ನು ಎಬ್ಬಿಸಬೇಕೋ ಬೇಡವೋ ಎಂಬ ಜಿಜ್ಞಾಸೆಗೆ ಒಳಗಾಗಿ ಕೊನೆಗೆ ಎಬ್ಬಿಸಿಯೇಬಿಟ್ಟಳು. ತನ್ನ ಗಂಡನನ್ನು ಒಂದು ವೇಳೆ ಎಬ್ಬಿಸದಿದ್ದರೆ ಸಂಧ್ಯಾಲೋಪ, ಎಬ್ಬಿಸಿದರೆ ಪತಿಯ ಕೋಪ. ಯಾವುದು ಶ್ರೇಷ್ಠ? ಸರಿ, ಶಾಸ್ತ್ರ ಅನುಸರಣೆ ಮಾಡಿದರೆ ಪುಣ್ಯವೆಂದು ಭಾವಿಸಿ ಎಬ್ಬಿಸಲು 'ನನಗೆ ಭಾರೀ ಅವಮಾನ ಮಾಡಿದೆ, ಸಹಿಸಲಾರೆ, ಹೊರಟೆ. ನಾನಿನ್ನೂ ಮಲಗಿರುವಾಗ ಸೂರ್ಯ ಹೇಗೆ ಅಸ್ತಂಗತನಾದಾನು? ಇದು ನನ್ನ ದೃಢವಾದ ನಂಬಿಕೆ'[೧] ಎಂದು ಗುಡುಗಿದ ಪತಿ. ಅಸಹಾಯಕಳಾದ ಜರತ್ಕಾರು 'ತಮಗೆ ಧರ್ಮಲೋಪವಾದೀತೆಂದು ಎಬ್ಬಿಸಿದೆನೆ ಹೊರತು, ಅವಮಾನ ಮಾಡಲಿಕ್ಕಲ್ಲ' ಎಂದು ಪರಿಪರಿಯಿಂದ, ದೈನ್ಯದಿಂದ ಹೇಳಿದರೂ ಕೇಳದೆ ಹೊರಟೇಬಿಟ್ಟ ಜರತ್ಕಾರು. ಹೋಗುವಾಗ 'ನಾನು ಹೋದುದಕ್ಕೆ ಶೋಕಿಸಬೇಡ. ನಿನ್ನ ಗರ್ಭದಲ್ಲಿ ಪುರುಷಶಿಶುವಿದೆ. ಅವನು ಅಗ್ನಿಸದೃಶನೂ, ವೇದಪಾರಂಗತನೂ, ಧರ್ಮಾತ್ಮನೂ ಆಗುವನು' ಎಂದು ಆಶ್ವಾಸನೆ ಕೊಟ್ಟು ಪುನಃ ಉಗ್ರವಾದ ತಪಸ್ಸನ್ನು ಮಾಡಲು ಹೊರಟನು.

ತನ್ನ ಅಣ್ಣ ವಾಸುಕಿಗೆ ತಂಗಿ ನಡೆದುದನ್ನು ತಿಳಿಸಿದಳು. ವಾಸುಕಿಗೂ ಹೀಗಾಗುವುದು ಮೊದಲೇ ತಿಳಿದಿತ್ತು. ತಂಗಿಯಲ್ಲಿ ಹುಟ್ಟುವ ಮಗನು ಮುಂದೆ ಸರ್ಪವಂಶ ರಕ್ಷಕನಾಗುವನೆಂದು ನುಡಿದು, ಇಷ್ಟರಿಂದಲೇ ತೃಪ್ತಿಪಡಲು ಸೋದರಿಗೆ ಸಮಾಧಾನ ಹೇಳಿದನು. ಪರಿತ್ಯಕ್ತಳಾದ ಆಕೆಯನ್ನು ಯೋಗ್ಯ ಧನದಾನ, ಹಿತನುಡಿಗಳಿಂದ ಸಂತೈಸಿದನು. ಶುಭಮುಹೂರ್ತದಂದು ಗಂಡು ಮಗುವನ್ನು ಪ್ರಸವಿಸಿದಳು ಜರತ್ಕಾರು. ಆ ಮಗು ವಾಸುಕಿಯ ಅರಮನೆಯಲ್ಲಿ ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಹೊಂದುತ್ತಾ ಮುಂದೆ ಚ್ಯವನರಲ್ಲಿ ೪ ವೇದಗಳನ್ನೂ ಅಧ್ಯಯನ ಮಾಡಿದನು. ಬ್ರಹ್ಮಚರ್ಯಾದಿವ್ರತನಿಷ್ಠನಾಗಿ, ಬುದ್ಧಿವಂತನಾಗಿ, ಸತ್ತ್ವಗುಣ ಸಂಪನ್ನನಾಗಿ ಬೆಳೆದ ಮಗು ಆಸ್ತೀಕನೆಂದೇ ಪ್ರಸಿದ್ಧಿ ಹೊಂದಿತು. 'ಆತನ ತಂದೆ ಆಸ್ತೀಕ ಎಂದು ಹೇಳಿಹೋದುದರಿಂದ ಆಸ್ತೀಕನೆಂದೇ ಹೆಸರು ಬಂದಿತು.[೨] ಆಸ್ತೀಕನು ಸರ್ವಸರ್ಪಗಳಿಗೆ ಹರ್ಷದಾಯಕನಾಗಿ ಬೆಳೆಯಲಾರಂಭಿಸಿದನು.

*****

೧ ಶಕ್ತಿರಸ್ತಿ ನ ವಾಮೋರು ಮಯಿ ಸುಪ್ತೇ ವಿಭಾವಸೋಃ।
ಅಸ್ತಂ ಗಂತುಂ ಯಥಾ ಕಾಲಂ ಇತಿ ಮೇ ಹೃದಿ ವರ್ತತೇ॥ - ಆದಿಪರ್ವ (೪೭/೨೬)

೨ ಅಸ್ತೀ ತ್ಯುಕ್ತ್ವಾ ಗತೋ ಯಸ್ಮಾತ್ ಪಿತಾ ಗರ್ಭಸ್ಥಮೇವ ತಮ್।
ವನಂ ತಸ್ಮಾದಿದಂ ತಸ್ಯ ನಾಮಾಸ್ತೀಕೇತಿ ವಿಶ್ರುತಮ್॥ - ಆದಿಪರ್ವ (೪೮/೨೦)

# ೭. ಪರೀಕ್ಷಿತನ ಉಪಾಖ್ಯಾನ

## (ಪರೀಕ್ಷಿತನ ಅಂತಿಮ ದಿನಗಳು)

ಅಭಿಮನ್ಯುವಿನ ಮಗ ಪರೀಕ್ಷಿತ್‌ರಾಜ, ಶ್ರೀಕೃಷ್ಣನ ಅನುಗ್ರಹದಿಂದ ಅಶ್ವತ್ಥಾಮರು ಬಿಟ್ಟ ಬ್ರಹ್ಮಶಿರೋಸ್ತ್ರದಿಂದಲೂ ಪಾರಾಗಿ ಪುನಃ ಬದುಕಿದ್ದ. ಆತನ ರಾಜ್ಯ ಸುಖೀರಾಜ್ಯವಾಗಿತ್ತು. ಎಲ್ಲ ಪ್ರಜೆಗಳೂ ಧರ್ಮಪರಾಯಣರು. ಧರ್ಮದಿಂದ ರಾಜ್ಯ ಆಳುತ್ತಿದ್ದ. ಬಡವ, ದಲಿತ, ಅಂಗಹೀನ, ಸ್ತ್ರೀಯರ ಯೋಗಕ್ಷೇಮಗಳನ್ನು ಸ್ವತಃ ವಹಿಸುತ್ತಿದ್ದ. ಚಂದ್ರವಂಶದ ಹಿಂದಿನ ರಾಜರಂತೆ ಕೀರ್ತಿಶಾಲಿಯೂ ಆಗಿದ್ದ. ಬೇಟೆಯಲ್ಲೂ ಬಹಳ ಆಸಕ್ತಿ. ೬೦ ವರ್ಷದ ಪರೀಕ್ಷಿತ್ ಒಮ್ಮೆ ಬೇಟೆಗೆ ಹೋಗಿದ್ದ. ಒಂದು ಜಿಂಕೆಗೆ ಬಾಣ ಹೊಡೆದಾಗ ಅದು ಸಾಯದೇ ಹಾಗೇ ಓಡಿ ಹೋಯಿತು. ಪರೀಕ್ಷಿತ ಬೆನ್ನು ಹತ್ತಿದ. ಕಾಡಿನಲ್ಲಿ ಎಲ್ಲೋ ಮರೆಯಾಯಿತು. ಸ್ವಯಂ ಓಡಿದ ದಣಿದ, ಬಾಯಾರಿ ಬಸವಳಿದ, ಹಸಿದು ಕಕ್ರಾಂತನೂ ಆದ. ಶಮೀಕರೆಂಬ ಮುನಿಗಳ ಆಶ್ರಮ ಪ್ರವೇಶಿಸಿದ. ಮುನಿ ಮೌನವ್ರತ ಧರಿಸಿದ್ದ. ರಾಜನು 'ನಾನು ಹೊಡೆದ ಜಿಂಕೆಯನ್ನು ನೋಡಿದೆಯಾ?' ಎಂದು ಎಷ್ಟೋ ಬಾರಿ ಕೇಳಿದರೂ ಮುನಿ ಉತ್ತರಿಸದುದನ್ನು ಕಂಡು ಮೊದಲೇ ಹಸಿವು ಬಾಯಾರಿಕೆಗಳಿಂದ ಬಳಲಿದ ರಾಜನು ಸಮೀಪದಲ್ಲಿದ್ದ ಮೃತ ಸರ್ಪವನ್ನು ಬಿಲ್ಲಿನಿಂದ ತೆಗೆದು ಮುನಿಯ ಹೆಗಲಿಗೆ ಹಾಕಿ ಹಸ್ತಿನಾವತಿಗೆ ನಡೆದ. ಕ್ಷಮಾಶೀಲರಾದ ಋಷಿಗಳು ರಾಜನ ಮೇಲೆ ಕೋಪಗೊಳ್ಳಲಿಲ್ಲ. ಆದರೆ ಈ ವಿಷಯವು ಋಷಿಕುಮಾರ **ಶೃಂಗಿ**ಗೆ ಆತನ ಸ್ನೇಹಿತನಾದ **ಕೃಶ**ನಿಂದ ತಿಳಿದು ಕೃದ್ಧನಾದನು. ಅಲ್ಲದೆ ಆಚಮನ ಮಾಡಿ ಕೈಯಲ್ಲಿ ದರ್ಭೆ ಹಿಡಿದುಕೊಂಡು 'ಪಾಪಿಯಾದ ರಾಜನು ಇಂದಿನಿಂದ ಏಳನೇ ದಿನ ತಕ್ಷಕಸರ್ಪನಿಂದ ಕಡಿಯಲ್ಪಟ್ಟು ಮರಣ ಹೊಂದಲಿ' ಎಂದು ಶಾಪ ಕೊಟ್ಟನು. ತಾನು ಶಾಪ ಕೊಟ್ಟುದುದನ್ನು ತನ್ನ ತಂದೆಗೆ ತಿಳಿಸಲು ಶಮೀಕರು ಮಗನನ್ನು ಅಭಿನಂದಿಸದೇ ರಾಜನ ತಪ್ಪನ್ನು ಮನ್ನಿಸಬೇಕಾಗಿತ್ತು, ರಾಜನು ಅಜ್ಞಾನವಶಾತ್ ಹಸಿವು, ಬಾಯಾರಿಕೆಯಿಂದ ಇದ್ದಾಗ ಮಾಡಿದ ಈ ತಪ್ಪನ್ನು ಬ್ರಾಹ್ಮಣರಾದ ನಾವು ಕ್ಷಮಿಸಬೇಕು. ಕ್ಷಮಿಸುವವರನ್ನು ಧರ್ಮವು ರಕ್ಷಿಸುತ್ತದೆ. ರಾಜರ ರಕ್ಷಣೆ ನಾವು ಮಾಡದಿದ್ದಲ್ಲಿ ನಮಗೂ ತೊಂದರೆಗಳು ತಪ್ಪಿದ್ದಲ್ಲ. ಕ್ರೋಧವು ಧರ್ಮವನ್ನು ನಾಶಮಾಡುತ್ತದೆ. ಕ್ಷಮಾಶೀಲನಿಗೆ ಈ ಲೋಕವೇ ಹೊರತು, ಕ್ರೋಧಶೀಲರಿಗಲ್ಲ' ಹೀಗೆ ವಿಚಾರಮಾಡಿದ ಶಮೀಕರು ಪರೀಕ್ಷಿತ ರಾಜನಿಗೆ **ಗೌರಮುಖ**ನೆಂಬ ತಮ್ಮ ಶಿಷ್ಯನೊಡನೆ ಶೃಂಗಿಯು ಕೊಟ್ಟ ಶಾಪದ ವಿವರಗಳನ್ನು ಹೇಳಿಕಳಿಸಿದರು.

ಇದನ್ನು ತಿಳಿದ ರಾಜನು ಪಶ್ಚಾತ್ತಾಪಗೊಂಡು ಶೋಕಸಂತಪ್ತ ಮನಸ್ಕನಾದನು. ತಾನು ಶೀಘ್ರದಲ್ಲಿ ಸಾಯುವುದಕ್ಕೆ ರಾಜ ಮರುಗಲಿಲ್ಲ. ಆದರೆ ತಾನು ಬ್ರಾಹ್ಮಣರಿಗೆ ಮಾಡಿದ

ಅವಮಾನಕ್ಕಾಗಿ ದುಃಖಿಸಿದ. ಪಶ್ಚಾತ್ತಾಪಗೊಂಡನು. ಮಂತ್ರಿಗಳೊಡನೆ ಸಮಾಲೋಚಿಸಿ, ಮಾಡಬೇಕಾದ ರಾಜಕಾರ್ಯಗಳನ್ನು ಮಾಡಿ ಗಂಗಾನದಿಯಲ್ಲಿ ಏಕಸ್ತಂಭಪ್ರಾಸಾದವನ್ನು ಕೂಡಲೇ ಕಟ್ಟಿಸಿ ಅಲ್ಲಿ ವಾಯುವೂ ಪ್ರವೇಶಿಸದಂತೆ ಮಾಡಿ, ವೈದ್ಯರನ್ನೂ, ಔಷಧಿಗಳನ್ನೂ ವ್ಯವಸ್ಥೆ ಮಾಡಿದನು. ಅಲ್ಲಿಗೆ ಬಂದ ನೂರಾರು ಋಷಿಗಳ ಮಧ್ಯೆ ಇದ್ದು ಶುಕಾಚಾರ್ಯರಿಂದ ಭಾಗವತ ಶ್ರವಣ ಮಾಡಿದನು.

೭ನೇ ದಿನ ಪರೀಕ್ಷಿತನನ್ನು ಕಚ್ಚಲು ತಕ್ಷಕ ಸರ್ಪ ಬರುವ ಹೊತ್ತಿಗೆ ಕಶ್ಯಪಗೋತ್ರದ ಬ್ರಾಹ್ಮಣನೊಬ್ಬನು ರಾಜನನ್ನು ತಕ್ಷಕ ಕಚ್ಚಿದರೆ ಬದುಕಿಸಲು ಹೊರಟಿದ್ದನು. ಇದನ್ನು ನೋಡಿದ ತಕ್ಷಕನು ಆ ಬ್ರಾಹ್ಮಣನಿಗೆ 'ನಾನು ಕಚ್ಚುವ ಈ ವೃಕ್ಷವನ್ನು ಪುನಃ ಬದುಕಿಸು' ಎನ್ನಲು ಬ್ರಾಹ್ಮಣನು ತಕ್ಷಕ ಕಚ್ಚಿದ ವೃಕ್ಷದ ಭಸ್ಮವೆಲ್ಲವನ್ನು ಕೂಡಿಹಾಕಿ ತನ್ನ ಮಂತ್ರಬಲದಿಂದ ವೃಕ್ಷವನ್ನು ಪುನಶ್ಚೇತನಗೊಳಿಸಿದನು. ಇದರಿಂದ ಚಕಿತನಾದ ತಕ್ಷಕನು ಬ್ರಾಹ್ಮಣನಿಗೆ ಧನದಾಸೆ ಹುಟ್ಟಿಸಿ ರಾಜ ಕೊಡುವ ಹಣಕ್ಕಿಂತ ಹೆಚ್ಚು ಹಣ ಕೊಟ್ಟು ಬ್ರಾಹ್ಮಣನನ್ನು ವಾಪಸು ಕಳಿಸಿದನು.

ನಂತರ ಸರಿಯಾಗಿ ೭ನೇ ದಿನ ತಕ್ಷಕನು ಭಾಗವತ ಕೇಳಿ ಪುನೀತನಾದ ಪರೀಕ್ಷಿತನ ಬಳಿಗೆ ಸರ್ಪಗಳನ್ನು ತಪಸ್ವಿಗಳ ಮಾರುವೇಷದಲ್ಲಿ ಕಳಿಸಿದನು. ಅವರು ರಾಜನಿಗೆ ಫಲ ಮೊದಲಾದವುಗಳನ್ನು ಕೊಟ್ಟರು. ರಾಜನು ಸ್ವೀಕರಿಸಿದನು. ಎಲ್ಲ ಸಚಿವರಿಗೆ ತಿನ್ನಲು ಕೊಟ್ಟನು. ತಾನೂ ಸಹ ಯಾವ ಫಲದಲ್ಲಿ ತಕ್ಷಕನು ಕ್ರಿಮಿರೂಪದಲ್ಲಿ ಸೇರಿದ್ದನೋ ಅದನ್ನೇ ಋಷಿವಾಕ್ಯದಿಂದಾಗಿ ತಿನ್ನಲುದ್ಯುಕ್ತನಾದನು. ಆ ಹಣ್ಣಿನಿಂದ ಹೊರಬಂದ ಕಪ್ಪುಕಣ್ಣಿನ ಕೆಂಪು ಬಣ್ಣದ ಕ್ರಿಮಿಯನ್ನು ರಾಜನು ಹಿಡಿದು 'ಸೂರ್ಯ ಅಸ್ತಂಗತನಾಗುತ್ತಿದ್ದಾನೆ ನನಗೆ ವಿಷದ ಭಯವಿಲ್ಲ. ಮುನಿಮಾತು ಸತ್ಯವಾಗಲಿ. ಈ ಕ್ರಿಮಿಯು ನನ್ನನ್ನು ಕಚ್ಚಲಿ' ಎನ್ನುತ್ತಾ ಅದನ್ನು ತನ್ನ ಕುತ್ತಿಗೆಯ ಮೇಲೆ ಇಟ್ಟುಕೊಳ್ಳಲು,ಅದು ತಕ್ಷಕನಾಗಿ ನಗುತ್ತಾ ರಾಜನನ್ನು ಕಚ್ಚಿತು. [೧]ರಾಜನು ಧ್ಯಾನಾಸಕ್ತನಾಗಿ ದೇಹತ್ಯಾಗ ಮಾಡಿದನು. ಪರೀಕ್ಷಿತನನ್ನು ಕಚ್ಚಿದ ತಕ್ಷಕನು ನಂತರ ಆಕಾಶದಲ್ಲಿ ಹೋಗುತ್ತಿದ್ದುದನ್ನು ಎಲ್ಲರೂ ನೋಡಿದರು.

ಆಮೇಲೆ ಮಂತ್ರಿಗಳು ಪರೀಕ್ಷಿತನ ಮಗ ಚಿಕ್ಕ ಬಾಲಕನಾದ ಜನಮೇಜಯನಿಗೆ ಪಟ್ಟಾಭಿಷೇಕ ಮಾಡಿದರು. ಧರ್ಮರಾಜನಂತೆ ಜನಮೇಜಯ ರಾಜ್ಯವಾಳಿದನು. ಆತನಿಗೆ ಮುಂದೆ ವಪುಷ್ಟಮಾ ಎಂಬುವವಳೊಂದಿಗೆ ವಿವಾಹವಾಗಿ, ಆಕೆಯೊಂದಿಗೆ ರಾಜಾ ಪುರೂರವನು ಊರ್ವಶಿಯೊಡನೆ ಸುಖದಿಂದ ಇದ್ದಂತೆ, ವಿಹರಿಸುತ್ತಾ ಸುಖವಾಗಿದ್ದನು.

ಈ ಜನಮೇಜಯನ ಬಳಿಗೆ ಈಗಾಗಲೇ ಉತ್ತಂಕನು ಬಂದು ತಕ್ಷಕನ ವಿರುದ್ಧ ಸೇಡುತೀರಿಸಿಕೊಳ್ಳಲು ಪ್ರಚೋದನೆ ನೀಡಿದ್ದನು. ತನ್ನ ತಂದೆಯನ್ನು ಕೊಂದ ಸೇಡನ್ನು ತೀರಿಸಿಕೊಳ್ಳಲು ರಾಜನು ಪುರೋಹಿತರೊಡನೆ ಚರ್ಚಿಸಿ ಸರ್ಪಸತ್ರವನ್ನು ಆರಂಭಿಸಿದನು.

೧ ಪರೀಕ್ಷಿದಪಿ ರಾಜರ್ಷಿಃ ಆತ್ಮನ್ಯಾತ್ಮಸಮಾತ್ಮನಾ।
ಸಮಾಧಾಯ ಪರಂ ದಧ್ಯೌ ಅಸ್ಪಂದಾಸುರ್ಯಥಾತರುಃ।
ಪ್ರಾಕ್ಕೂಲೇ ಬರ್ಹಿಷ್ಯಾಸೀನೋ ಗಂಗಾಕೂಲ ಉದಙ್ಮುಖ॥ - ಭಾಗವತ(೧೨/೬/೯,೧೦)

ತನ್ನ ತಂದೆಯನ್ನು ದಹಿಸಿಕೊಂದ ತಕ್ಷಕನನ್ನು ಆತನ ಬಂಧುಗಳೊಡನೆ ಯಜ್ಞದಲ್ಲಿ ಆಹುತಿಯಾಗಿಸಲು ಜನಮೇಜಯನು ಸಂಕಲ್ಪಿಸಿದನು.

ಯಜ್ಞಾರಂಭಕ್ಕೆ ಸಕಲ ಸಿದ್ಧತೆಗಳು ನಡೆದವು. ಆಗಲೇ ಸೂತನೊಬ್ಬನು (ಶಿಲ್ಪಶಾಸ್ತ್ರವಿಶಾರದನಾದ ಸ್ಥಪತಿ) ಈ ಯಜ್ಞಶಾಲೆಯನ್ನು ಆರಂಭಿಸಲು ಆರಿಸಿದ ಮುಹೂರ್ತ ಹಾಗೂ ಪ್ರವೇಶವನ್ನು ನೋಡಲಾಗಿ ಈ ಯಜ್ಞವು ಬ್ರಾಹ್ಮಣನೊಬ್ಬನಿಂದ ಮಧ್ಯದಲ್ಲಿಯೇ ನಿಲ್ಲುವುದಾಗಿ ಸೂಚಿಸಿದನು. ಕೂಡಲೇ ಜನಮೇಜಯನು ನನ್ನ ಆಜ್ಞೆ ಇಲ್ಲದೇ ಯಾರನ್ನೂ ಯಜ್ಞಶಾಲೆಯೊಳಗೆ ಬಿಡಕೂಡದೆಂದು ಆದೇಶಿಸಿದನು. ಋತ್ವಿಜರು ಸರ್ಪಗಳ ಹೆಸರುಗಳನ್ನು ಉಚ್ಚರಿಸುತ್ತಾ ಸ್ವಾಹಾಕಾರ ಮಾಡುತ್ತಿರಲು ಸಾವಿರಾರು ಸರ್ಪಗಳು ಒಂದೊಂದೇ ಪ್ರದೀಪಾಗ್ನಿಯಲ್ಲಿ ಬೀಳುತ್ತಿದ್ದವು. ಹೆದರಿದ ತಕ್ಷಕ ಇಂದ್ರನಿಗೆ ಶರಣುಹೊಕ್ಕನು. ಇಂದ್ರ ರಕ್ಷಣೆಯನ್ನು ಕೊಟ್ಟನು. ಇತ್ತ ವಾಸುಕಿ ಸರ್ಪವಂಶನಾಶದಿಂದ ಪರಿತಪಿಸುತ್ತಾ ತನ್ನ ಸಾವೂ ಸನ್ನಿಹಿತವೆಂದು ಬಗೆದು ತಂಬಿ ಜರತ್ಕಾರುವಿಗೆ ಆಕೆಯ ಮಗನಾದ ಆಸ್ತೀಕನನ್ನು ಸರ್ಪಸತ್ರಕ್ಕೆ ಕಳುಹಿಸಿ ಅಳಿದುಳಿದ ಸರ್ಪಸಂತತಿಯ ರಕ್ಷಣೆಗೆ ಪ್ರಾರ್ಥಿಸಿದನು.

ಅದಕ್ಕೆ ಆಸ್ತೀಕನು ವಾಸುಕಿಗೆ 'ನಾನು ಮಂಗಲವಚನಗಳಿಂದ ಜನಮೇಜಯನನ್ನು ಸಂತೋಷಪಡಿಸಿ, ಯಜ್ಞ ನಿಲ್ಲಿಸುವೆ ಚಿಂತಿಸದಿರು' ಎಂದು ಭರವಸೆ ನೀಡಿ ಸತ್ರಕ್ಕೆ ಹೋಗಿ ಅನಂತಕೀರ್ತಿವಂತನಾದ ಜನಮೇಜಯನನ್ನು, ಋತ್ವಿಜರನ್ನು, ಸದಸ್ಯರನ್ನು, ಅಗ್ನಿಯನ್ನು ಹಾಗೂ ಯಜ್ಞವನ್ನು ಪರಿಪರಿಯಿಂದ ಪ್ರಶಂಸಿಸಿದನು. 'ಜನಮೇಜಯ! ನಿನ್ನ ಯಜ್ಞವು ಹಿಂದೆ ವರುಣ, ಚಂದ್ರ, ಬ್ರಹ್ಮ, ಇಂದ್ರ, ಯಮ, ರಂತಿದೇವ, ಗಯ, ಕುಬೇರ, ನೃಗ, ಶ್ರೀರಾಮ, ಯುಧಿಷ್ಠಿರ, ಕೃಷ್ಣ ಮುಂತಾದ ಮಹಾನುಭಾವರ ಯಜ್ಞದಂತಿದೆ. ನಿನಗೆ ಮಂಗಳವಾಗಲಿ. ಸೂರ್ಯಸಮಾನ ವರ್ಚಸ್ಸುಳ್ಳ ವ್ಯಾಸಶಿಷ್ಯರೇ ನಿನ್ನ ಋತ್ವಿಜರು. ನೀನು ಅರ್ಪಿಸುತ್ತಿರುವ ಹೋಮ ದ್ರವ್ಯಗಳನ್ನು ಯಜ್ಞೇಶ್ವರನು ಅಯಾ ದೇವತೆಗಳಿಗೆ ಒಯ್ಯುತ್ತಿದ್ದಾನೆ. ನೀನು ಸಾಕ್ಷಾತ್ ಯಮನೋ ಅಥವಾ ಧರ್ಮರಾಜನೋ, ಇಂದ್ರನೋ ಆಗಿದ್ದೀ. ಅದೇ ರೀತಿ ಭೂಮಿಯನ್ನು ಪಾಲಿಸುತ್ತಿದ್ದೀ. ನಿನಗೆ ಸಮಾನರಾದವರು ಯಾರೂ ಇಲ್ಲ.'

ಹೀಗೆ ಆಸ್ತೀಕನ ಸ್ತೋತ್ರ ಪ್ರಶಂಸೆಗಳನ್ನು ಕೇಳಿದ ರಾಜ, ಋತ್ವಿಜರು ಸದಸ್ಯರೆಲ್ಲ ಸುಪ್ರೀತರಾದರಲ್ಲದೇ ರಾಜನು ಆಸ್ತೀಕನಿಗೆ ವರ ಕೊಡಲು ಸಿದ್ಧನಾದನು. ಎಲ್ಲರೂ ಅದಕ್ಕೆ ಸಮ್ಮತಿಸಿದರು. ಆದರೆ ಹೋತೃ ಮಾತ್ರ 'ರಾಜನ್! ತಕ್ಷಕನ ಆಹುತಿಯೇ ಆಗಿಲ್ಲ' ಎನ್ನಲು, ರಾಜನು ತಕ್ಷಕನು ಬಂದು ಬೀಳುವಂತೆ ಸರ್ವಪ್ರಯತ್ನ ಮಾಡಲು ಸೂಚಿಸಿದನು. ಋತ್ವಿಜರು 'ತಕ್ಷಕನು ಇಂದ್ರನ ಆಶ್ರಯದಲ್ಲಿದ್ದಾನೆ' ಎಂದರು. ತಕ್ಷಕನ ರಕ್ಷಣೆಗಾಗಿ ಇಂದ್ರನೇ ಯಜ್ಞವೇದಿಕೆಯ ಅಂತರಿಕ್ಷದಲ್ಲಿ ಬಂದನು. ತಕ್ಷಕ ಬರಲಿಲ್ಲ. ಕುಪಿತನಾದ ರಾಜನು ಇಂದ್ರಸಮೇತನಾದ ತಕ್ಷಕನನ್ನು ಬೀಳಿಸಲು ಆದೇಶಿಸಿದನು. ಋತ್ವಿಜರು ಹಾಗೆಯೇ ಮಂತ್ರ ಹೇಳಲು ಹೆದರಿದ ಇಂದ್ರನು ತಕ್ಷಕನನ್ನು ಬಿಟ್ಟು ಸ್ವರ್ಗಕ್ಕೆ ವಾಪಸಾದನು. ತಕ್ಷಕನು ಭಯದಿಂದ, ಮಂತ್ರದ ಸೆಳೆತದಿಂದ ಅಗ್ನಿಯ ಕಡೆ ಬರಲು ಆರಂಭಿಸಿದ. ಆಗಲೇ ಋತ್ವಿಜರು 'ರಾಜನ್! ಇನ್ನು ನೀನು

ಬ್ರಾಹ್ಮಣನಿಗೆ ವರ ಕೊಡಬಹುದು' ಎಂದರು. ರಾಜನು 'ನಿನ್ನ ಮನಸ್ಸಿನಲ್ಲಿರುವುದು ಅದೇನೇ ಇರಲಿ, ಕೊಡಲು ಯೋಗ್ಯವಲ್ಲದಿದ್ದರೂ, ಕೊಡುವೆ ವರನ್ನು ಕೇಳು' ಎನ್ನಲು, ಆಸ್ತೀಕನು ಇದೇ ಯೋಗ್ಯಕಾಲವೆಂದು ಭಾವಿಸಿ 'ರಾಜನ್! ವರಕೊಡುವುದಾದಲ್ಲಿ ಈ ಯಜ್ಞವು ಇನ್ನು ನಿಲ್ಲಲಿ. ಸರ್ಪವು ಯಜ್ಞೇಶ್ವರನಲ್ಲಿ ಬೀಳುವುದು ಬೇಡ' ಎಂದನು. ರಾಜನು ಖಿನ್ನವದನನಾದ, ಪುನಃ ಆಸ್ತೀಕನಿಗೆ 'ನಿನಗೆ ಬೆಳ್ಳಿ, ಬಂಗಾರ, ಧನ ಏನೆಲ್ಲ ಕೊಡುವೆ. ಯಜ್ಞನಿಲ್ಲಿಸಬೇಡ' ಎನ್ನಲು, ಆಸ್ತೀಕನು 'ನಾನೇನೂ ಬೇಡೆನು, ನನ್ನ ಮಾತೃಕುಲಕ್ಕೆ ಮಂಗಳವಾಗಲಿ' ಎಂದನು. ಮತ್ತೆ ಮತ್ತೆ ರಾಜನು ಅದನ್ನೇ ಕೇಳಿದರೂ ಆಸ್ತೀಕ ಮಾತ್ರ ಒಪ್ಪಲಿಲ್ಲ. ಕೊನೆಗೆ ಸದಸ್ಯರು 'ಬ್ರಾಹ್ಮಣನಿಗೆ ವರ ಕೊಡಲು' ರಾಜನಿಗೆ ಹೇಳಿದರು.

ಇದನ್ನು ರಾಜನೂ ಒಪ್ಪಿ ಯಜ್ಞದಲ್ಲಿ ಭಾಗವಹಿಸಿದ ಎಲ್ಲರಿಗೂ ಸೂಕ್ತ ಧನ, ವಸ್ತ್ರಾದಿಗಳಿಂದ ಗೌರವಿಸಿದನು. ಆಸ್ತೀಕನೂ ಕೂಡಲೇ ಮನೆಗೆ ತೆರಳಿ ತಾಯಿ ಮತ್ತು ಸೋದರಮಾವ ವಾಸುಕಿಗೆ ಎಲ್ಲ ತಿಳಿಸಿದ. ಸರ್ಪಗಳು ಆಸ್ತೀಕನಿಗೆ ವರ ಕೊಡಲು ಮುಂದಾದರು. ಮತ್ತೆ ಮತ್ತೆ ಒತ್ತಾಯಿಸಿದಾಗ ಆಸ್ತೀಕನು

[೧]'ಬೆಳಿಗ್ಗೆ ಸಾಯಂಕಾಲ ಯಾವ ಮಾನವರು, ಬ್ರಾಹ್ಮಣರು ಈ ನನ್ನ ಧರ್ಮಕಥೆಯನ್ನು ಪಠಿಸುವರೋ, ಅವರಿಗೆ ನಿಮ್ಮ ಭಯ (ಸರ್ಪಭಯ) ಇರದಿರಲಿ' ಎಂದು ಕೇಳಲು ಎಲ್ಲ ಸರ್ಪಗಳು 'ಅಸ್ತು' ಎಂದರು. ಅಲ್ಲದೇ [೨]'ಅಸಿತ, ಆರ್ತಿಮಾನ್, ಸುನೀಥ ಈ ನಾಮಗಳನ್ನು ಯಾರು ಹಗಲಾಗಲಿ, ರಾತ್ರಿಯಾಗಲಿ ಸ್ಮರಿಸುವರೋ ಅವನಿಗೆ ಸರ್ಪ ಭಯವಿರದು.'

[೩]'ಜರತ್ಕಾರು ಬ್ರಾಹ್ಮಣನಲ್ಲಿ ಜರತ್ಕಾರು ನಾಗಕನ್ಯೆಯಲ್ಲಿ ಜನಿಸಿದ ಮಹಾಕೀರ್ತಿವಂತನಾದ ಆಸ್ತೀಕನು ಸರ್ಪಗಳನ್ನು ರಕ್ಷಿಸಿದನೋ ಆತನನ್ನು ಸ್ಮರಿಸುತ್ತಾ ನನ್ನನು ಹಿಂಸಿಸಬೇಡಿರಿ.'

'ಎಲೈ ಸರ್ಪವೇ! ನಿನಗೆ ಮಂಗಳವಾಗಲಿ, ದೂರ ಸರಿ. ಜನಮೇಜಯನ ಯಜ್ಞದ ಕೊನೆಯಲ್ಲಿ ಆಸ್ತೀಕನ ಮಾತನ್ನು ಸ್ಮರಿಸು':

**ಸರ್ಪಾಪಸರ್ಪ ಭದ್ರಂ ತೇ ಗಚ್ಛ ಸರ್ಪ ಮಹಾವಿಷ।**
**ಜನಮೇಜಯಸ್ಯ ಯಜ್ಞಾಂತೇ ಆಸ್ತೀಕವಚನಂ ಸ್ಮರ॥ - ಆದಿಪರ್ವ(೫೮/೨೫)**

---

೧ ಸಾಯಂ ಪ್ರಾತರ್ಯೇ ಪ್ರಸನ್ನಾತ್ಮರೂಪಾ।
ಲೋಕೇ ವಿಪ್ರಾ ಮಾನವಾ ಯೇ ಪರೇಽಪಿ॥
ಧರ್ಮಾಖ್ಯಾನಂ ಯೇ ಪಠೇಯುರ್ಮಮೇದಂ।
ತೇಷಾಂ ಯುಷ್ಮನ್ನೈವ ಕಿಂಚಿತ್ ಭಯಂ ಸ್ಯಾತ್॥ - ಆದಿಪರ್ವ(೫೮/೨೧)

೨ ಅಸಿತಂ ಚಾರ್ತಿಮಂತಂ ಚ ಸುನೀಥಂ ಚಾಪಿ ಯಸ್ಮರೇತ್।
ದಿವಾ ವಾ ಯದಿ ವಾ ರಾತ್ರೌ ನಾಸ್ಯ ಸರ್ಪಭಯಂ ಭವೇತ್॥ - ಆದಿಪರ್ವ(೫೮/೨೩)

೩. ಯೋ ಜರತ್ಕಾರುಣಾ ಜಾತೋ ಜರತ್ಕಾರೌ ಮಹಾಯಶಾಃ।
ಆಸ್ತೀಕಃ ಸರ್ಪಸತ್ರೇ ವಃ ಪನ್ನಗಾನ್ ಯೋಽಭ್ಯರಕ್ಷತ॥
ತಂ ಸ್ಮರಂತಂ ಮಹಾಭಾಗಾ ನ ಮಾಂ ಹಿಂಸಿತು ಮರ್ಹಥ॥ - ಆದಿಪರ್ವ(೫೮/೨೪)

[೧]'ಆಸ್ತೀಕನ ಮಾತನ್ನು ಕೇಳಿಯೂ ಯಾವ ಸರ್ಪವು ದೂರ ಹೋಗುವುದಿಲ್ಲವೋ ಅಂತಹ ಸರ್ಪದ ತಲೆಯು ಶಿಂಶವೃಕ್ಷದ ಫಲದಂತೆ ನೂರು ಹೋಳಾಗುತ್ತದೆ.'

ಹೀಗೆ ಸರ್ಪಗಳು ಆಸ್ತೀಕನಿಗೆ ವರ ಕೊಟ್ಟವು. ಆತನೂ ಮುಂದೆ ಪುತ್ರಪೌತ್ರ ಸಂತತಿ ಹೊಂದಿ ಕಾಲವಶನಾದನು.

**ಸಂದೇಶಗಳು-ವಿವರಣೆಗಳು**

ಈ ಆಸ್ತೀಕ ಆಖ್ಯಾನವು ಆಸ್ತೀಕ, ಜರತ್ಕಾರು, ನಾಗಕನ್ಯೆ, ಜರತ್ಕಾರು, ವಿಪ್ರ, ಜರತ್ಕಾರುಪಿತೃಗಳು, ವಾಸುಕಿ, ತಕ್ಷಕ ಮೊದಲಾದ ಸರ್ಪಗಳು, ಜನಮೇಜಯ, ಪರೀಕ್ಷಿತ ಮೊದಲಾದ ಪ್ರಭೃತಿಗಳ ಮಧ್ಯೆ ಹೆಣೆಯಲಾದ ಅನೇಕಾನೇಕ ತತ್ತ್ವಗಳಿಂದ ಕೂಡಿದ್ದಾಗಿದೆ.

ತಾಯಿ ಶಾಪದಿಂದ ಹೆದರಿದ ವಾಸುಕಿ ಕೇವಲ ತನ್ನ ಒಳಿತಿಗಲ್ಲದೇ ಇಡೀ ಸರ್ಪಕುಲದ ಹಿತಚಿಂತನೆ ಮಾಡಿದ ಈತನಲ್ಲಿ ಕುಂಟುಂಬದ ಹಿರಿಯನ ಗುಣಗಳನ್ನು ನೋಡಬಹುದು. ಆದಕ್ಕಾಗಿ ತನ್ನ ಸೋದರ ಸರ್ಪಗಳೊಡನೆ ಸಮಾಲೋಚನೆ ಮಾಡಿದರೂ, ಅವುಗಳ ನಕಾರಾತ್ಮಕ ಸಲಹೆಗಳನ್ನು ಒಪ್ಪದೇ ಬ್ರಹ್ಮಸಂಕಲ್ಪದಂತೆ ತನ್ನ ತಂಗಿಯನ್ನು ಜರತ್ಕಾರು ಬ್ರಾಹ್ಮಣನಿಗೆ ಕೊಟ್ಟು, ಆತನಿಂದ ಪಡೆದ ಮಗನಿಂದ ಸರ್ಪಕುಲದ ಸಂರಕ್ಷಣೆ ಮಾಡಿದ ಮುತ್ಸದ್ದಿಯೇ ವಾಸುಕಿ. ಈತನ ತಂಗಿಯನ್ನು ಭಿಕ್ಷೆಯಾಗಿ ಸ್ವೀಕರಿಸಿದ ಜರತ್ಕಾರು ಭಾರಿ ಕೋಪಿಷ್ಠ ತಪಸ್ವೀ ಬ್ರಾಹ್ಮಣ. ಆತನೊಡನೆ ಸಂಸಾರ ನಿರ್ವಹಿಸಿದ ಜರತ್ಕಾರುವಿನ ತಾಳ್ಮೆ, ಆಕೆಯ ಪಾತಿವ್ರತ್ಯ, ಪತಿಗೆ ಧರ್ಮಲೋಪವಾಗದಂತೆ ತನ್ನ ಜೀವನದ ಸುಖವನ್ನೇ ತೃಣವಾಗಿಸಿದ ಆಕೆಯ ಗುಣಗಳು ಆದರ್ಶ ಸತಿಯವೇ ಆಗಿವೆ. ತನ್ನ ಸೋದರ ಸರ್ಪಕುಲದ ರಕ್ಷಣೆಗಾಗಿ ಕಠಿಣ ನಿರ್ದಯ ಹೃದಯಿ ಜರತ್ಕಾರುವಿನೊಡನೆ ಆಕೆಯ ದಾಂಪತ್ಯ ಪ್ರತಿಕ್ಷಣವೂ ಅಗ್ನಿಪರೀಕ್ಷೆ ಒಳಗಾಗಿತ್ತು. ಜರತ್ಕಾರು ಬ್ರಾಹ್ಮಣ ನಿಷ್ಠುರ, ಕಠಿಣ ತಪಸ್ವೀ, ಸದಾ ಬ್ರಹ್ಮಚರ್ಯ, ನಿರಾಹಾರ, ಸದಾ ಸಂಚರಣಶೀಲನಾಗಿ ಪರಿವ್ರಾಜಕನಂತೆ ಇದ್ದ. ಆತನ ಮಾತಿಗೆ ಎದುರಾಡುವುದೆಂದರೆ ಜೀವಿತವೇ ಪಣಕ್ಕಿಟ್ಟಂತಾಗಿತ್ತು ಆತನ ಪತ್ನಿಗೆ. ಗಂಗಾದೇವಿ ಪ್ರತೀಪನಿಗೆ ಕೇಳಿದ ವರಗಳಂತೆಯೇ ಈತನ ಕರಾರುಗಳು. '**ಬ್ರಾಹ್ಮಣಸ್ಯ ಚ ದೇಹೋಽಯಂ ಕ್ಷುದ್ರ ಕಾಮಾಯಂ ನೇಷ್ಯತೇ**' ಎಂಬ ಆರ್ಷನುಡಿಗಳೇ ಈತನ ಜೀವನಚರ್ಯೆ ಎನ್ನಬಹುದು. ಕೇವಲ ತನ್ನ ಪಿತೃಗಳ ಸದ್ಗತಿಗಾಗಿ ವಿವಾಹಿತನಾಗಿ ಸಂತಾನ ಪಡೆದನೇ ಹೊರತು ಸ್ತ್ರೀಸಂಗ ಬಯಸಿ ಅಲ್ಲ. ಆದ್ದರಿಂದ ಇಂತಹ ಜೀವಿಗಳು 'ಬ್ರಹ್ಮಚರ್ಯವೇ' ಬ್ರಹ್ಮಪ್ರಾಪ್ತಿಗೆ ಸಾಧನವನ್ನಾಗಿಸಿಕೊಂಡ ಸ್ವಾಭಾವಿಕ ಬ್ರಹ್ಮಚಾರಿಗಳು ಸನಕಾದಿಗಳಂತೆ. [೨]ಆದ್ದರಿಂದ ನೇಪಮಾತ್ರಕ್ಕೆ ಮದುವೆಯಾಗಿ ಮತ್ತೊಂದು ನೆಪದಿಂದ ಪುನಃ ತಪಸ್ಸಿಗೆ ಹೋದುದರಲ್ಲಿ ಯಾವ ಅಪಾರ್ಥಕ್ಕೂ ಎಡೆ ಇಲ್ಲ. '**ಪ್ರಜಾತಂತುಂ**

---

೧ ಆಸ್ತೀಕಸ್ಯ ವಚಃ ಶ್ರುತ್ವಾ ಯಃ ಸರ್ಪೋ ನ ನಿವರ್ತತೇ।
ಶತಧಾ ಭಿದ್ಯತೇ ಮೂರ್ಧ್ನಿ ಶಿಂಶವೃಕ್ಷ ಫಲಂ ಯಥಾ ॥ - ಆದಿಪರ್ವ(೫೮/೨೬)

೨ ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ॥ - ಗೀತಾ(೮/೧೧)

**ಮಾ ವ್ಯವಚ್ಛೇತ್ಸೀಃ** ಎಂಬ ಶ್ರುತಿ ನಿರ್ದೇಶನ ತಪ್ಪಿದಲ್ಲಿ ಅಧಿಕಾರಿಕ ಜೀವಿಗಳಿಗೆ ಆಗುವ ದುರ್ಗತಿಯನ್ನು ತೋರಿಸಿಕೊಡುವುದೇ '**ಯಾಯಾವರ**' ಕುಲದ ಜರತ್ಕಾರು ಪಿತೃಗಳ ಗತಿ ತಿಳಿಸುತ್ತದೆ. ಆದ್ದರಿಂದಲೇ ಜರತ್ಕಾರುವಿಗೆ ಸಂತಾನ ಪಡೆಯಲು ವಿನಂತಿಸುತ್ತಾರೆ.

ಸದಾ ಧರ್ಮಿಷ್ಠನಾದ ಬ್ರಹ್ಮಚರ್ಯ ಪರಿಪಾಲಕನಾದ ಜರತ್ಕಾರುವು ತನ್ನ ಪತ್ನಿಯ ತೊಡೆಯ ಮೇಲೆ ಮಲಗಿದ್ದ. ಸಾಯಂಕಾಲವಾದರೂ, ಏಳದಿದ್ದರೂ, ಆತನ ನಂಬಿಕೆ. 'ನಾನು ಏಳದಿದ್ದ ಮೇಲೆ ಸೂರ್ಯಾಸ್ತ ಹೇಗಾದೀತು' ಪ್ರಕೃತಿ ನಿಯಮಗಳನ್ನು ಸ್ತಂಭಿಸುವಂತಹ ಆತನ ಸದಾಚಾರ ನಿಷ್ಠೆ ಪುರುಷರಲ್ಲಿರಬೇಕಾದ ಗುಣವಾದರೆ, ಜರತ್ಕಾರುವಿನಂತಹ ಪಾತಿವ್ರತ್ಯ ಸ್ತ್ರೀಯಲ್ಲಿರಬೇಕು. ಸಾವಿತ್ರಿಯೇ ಮೊದಲಾದವರು ಯಮನನ್ನು ಒಲಿಸಿ ಪತಿಯನ್ನು ಬದುಕಿಸಿಕೊಂಡರು. ದ್ರೌಪದಿಯ ಪಾತಿವ್ರತ್ಯಕ್ಕೆ ಪತಿವ್ರತಾಗ್ರಣಿ ಸ್ವಯಂ ಸತ್ಯಭಾಮೆಯೇ ಅಚ್ಚರಿ ಆನಂದ ವ್ಯಕ್ತಪಡಿಸುವಳು. ಕುರುಕುಲಕ್ಕೆ ಸಂಕಟವಾದಾಗ ಧರ್ಮರಾಜನು ತಾವು ೧೦೫ ಜನ ಸೋದರರೆಂದು ಭಾವಿಸಿ ಎಲ್ಲರ ಹಿತಚಿಂತನೆಯನ್ನು ಮಾಡುತ್ತಾನೆ (ವಾಸುಕಿಯಂತೆ).

ಪರೀಕ್ಷಿತನ ಪ್ರಸಂಗವೇ ಒಂದು ಪುಟ್ಟ ಭಾಗವತದಂತಿದೆ. ಬ್ರಾಹ್ಮಣರ ದ್ರೋಹ ಮಾಡಿದ್ದೇನೋ ಆಯಿತು. ಅದಕ್ಕೆ ಪಶ್ಚಾತ್ತಾಪ, ಪಾಪ ಪರಿಹಾರಕ್ಕೆ ಭಾಗವತ ಶ್ರವಣ. ಸಾವಿಗೆ ಎಂದೂ ಹೆದರದೆ ಕೊನೆಗೆ ಹರಿಧ್ಯಾನ ಮಾಡಿದ ಮಹಾತ್ಮ ಪರೀಕ್ಷಿತ. ಶಮೀಕರ ಕ್ಷಮಾಗುಣ ಒಂದೆಡೆ ನೋಡಿದರೆ, ಶೃಂಗಿಯ ಅಪ್ರಬುದ್ಧ ನಡೆ, ಕೋಪ ಆರಂಭದ ಸಾಧಕನಲ್ಲಿ ಸಾಮಾನ್ಯವೆಂದು ತೋರುತ್ತದೆ. ಹಣದಾಸೆಗೆ ಪರೀಕ್ಷಿತನನ್ನು ಬದುಕಿಸಲು ಬಂದ ಬ್ರಾಹ್ಮಣ ಕೊನೆಗೆ ತಕ್ಷಕನು ನೀಡಿದ ಭಾರೀ ಹಣದಿಂದ ಕರ್ತವ್ಯಭ್ರಷ್ಟನಾದುದು ಧನಲೋಭಕ್ಕೆ ಉದಾಹರಣೆಯಾಗಿದೆ.

ಜರತ್ಕಾರುವಿನ ಮಗ ಆಸ್ತೀಕ, ರಾಜನ ಯಜ್ಞಾದಿಗಳನ್ನು ಹೊಗಳಿ, ಅವರ ಮನ ಗೆದ್ದು, ಸರ್ಪಕುಲನಾಶವಾಗದಂತೆ ಮಾಡಿದ ಒಳ್ಳೆಯ ಮುತ್ಸದ್ದಿ. ಒಳ್ಳೆಯ ಮಾತಿನಿಂದ ವಂಶನಾಶವಾಗದೇ ಉಳಿದರೆ, ದುರ್ನುಡಿಗಳಿಂದ ವಂಶ ನಿರ್ವಂಶವಾದರೂ ಆಶ್ಚರ್ಯವಿಲ್ಲ. ಆದ್ದರಿಂದಲೇ ನಾಲಿಗೆಗೂ ಒಂದು ಸಂಹಿತೆ (ಶಿಸ್ತು) ಬೇಕು. ಅದು ಇದ್ದಲ್ಲಿ ಜಗತ್ತಿನಲ್ಲಿ ಜಗಳವೇ ಇರದು[೧].

*****

೧ ಆಚಾರವಿಲ್ಲದ ನಾಲಿಗೆ। ನಿನ್ನ ನೀಚಬುದ್ಧಿಯ ಬಿಡು ನಾಲಿಗೆ।
ವಿಚಾರವಿಲ್ಲದೆ ಪರರ ದೂಷಿಸುವುದಕ್ಕೆ ಚಾಚಿಕೊಂಡಿರುವಂಥ ನಾಲಿಗೆ। - ಪುರಂದರದಾಸರು
ತಾನು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ಆಸ್ತೀಕ ಕೇಳಿದ್ದು 'ಸಜ್ಜನರಿಗೆ ಸರ್ಪಭಯವಿರದಿರಲೆಂದು'.

# ಆದಿವಂಶಾವತರಣ ಪರ್ವ

## ೮. ಉಪರಿಚರ ವಸುವಿನ ಚರಿತ್ರೆ

ಚಂದ್ರವಂಶದಲ್ಲಿ ಜನಿಸಿದ ವಿಷ್ಣುಭಕ್ತನಾದ ರಾಜ ಈತನ (ಉಪರಿಚರ) ತಂದೆ ಕೃತಿ. ಬೇಟೆಯಾಡುವುದರಲ್ಲಿ ಸದಾ ಆಸಕ್ತಿ. ನಿತ್ಯದಲ್ಲೂ ಧರ್ಮಭೀರು[೧], ಚೇದಿರಾಜ್ಯದ ರಾಜನಾಗಿದ್ದ ಈತ ಇಂದ್ರದೇವರ ಉಪದೇಶದ ಪ್ರಕಾರ ಬೇಟೆ ಬಿಟ್ಟು ಶಸ್ತ್ರಸನ್ಯಾಸ ಮಾಡಿ ಘೋರ ತಪಸ್ಸನ್ನು ಆರಂಭಿಸಿದ. ಇಂದ್ರ ಪದವಿಯೋಗ್ಯವಾದ ಆತನ ತಪಸ್ಸನ್ನು ನೋಡಿ ದೇವತೆಗಳು ಆತನನ್ನು ತಪಸ್ಸನ್ನೇ ಬಿಡುವಂತೆ ಮನ ಒಲಿಸಿದರು. ಇಂದ್ರನಂತೂ ವಸುವಿಗೆ ದರ್ಶನಕೊಟ್ಟು 'ರಾಜನ್! ತಪಸ್ಸು ಸಾಕು, ರಾಜನಾಗಿ [೨]ಧರ್ಮದಂತೆ ಪ್ರಜಾಪಾಲನೆ ಮಾಡು. ಕ್ಷತ್ರಿಯರಿಗೆ ತಪಸ್ಸು ಮುಖ್ಯ ಧರ್ಮವಲ್ಲ, ನನ್ನ ಸ್ನೇಹಿತನೆಂದೇ ನಿನ್ನನ್ನು ಬಗೆದಿರುವೆ. ನಿನಗೆ ಬೇಕಾದ ದೇಶವನ್ನು ಆರಿಸಿಕೊಂಡು ಇರು. ಈಗ ಚೇದಿ ದೇಶ ತುಂಬಾ ಸಂಪದ್ಭರಿತವಾಗಿದೆ. ಜನರೂ ಧರ್ಮವಂತರು, ವರ್ಣಾಶ್ರಮಧರ್ಮಪಾಲಿಸುವವರು ತಂದೆತಾಯಿಗಳ ಹಿತದಲ್ಲಿಯೇ ಅವರ ಆಸಕ್ತಿ. ಕೃಶವಾದ ಗೋವುಗಳ ಮೇಲೆ ನೊಗ ಹೇರುವುದಿಲ್ಲ, ನಿನಗೆ ಮೂರು ಲೋಕಗಳಲ್ಲಿ ನಡೆಯುವುದೆಲ್ಲ ತಿಳಿಯಲಿ. ದೇವತಾಭೋಗ್ಯವಾದ ಈ ವಿಮಾನ ತೆಗೆದುಕೊ, ಇನ್ನು ಮೇಲೆ ಸದಾ ಆಕಾಶದಲ್ಲಿಯೇ ಎಲ್ಲರ ಮೇಲೆ ಸಂಚರಿಸು. ಈ ವೈಜಯಂತೀಮಾಲೆ ಧರಿಸು. ನಿನಗೆ ಸಂಗ್ರಾಮದಲ್ಲಿ ಎಂದೂ ಶಸ್ತ್ರಗಳಿಂದ ಘಾಸಿಯಾಗದು' ಎಂದು ಹೇಳಿದನಲ್ಲದೇ ಇಂದ್ರನು ಉಪರಿಚರವಸುವಿಗೆ ಒಂದು ಬಿದುರಿನ ದಂಡ (ವೈಣವೀಂ ಯಷ್ಟಿಂ)ವನ್ನು ಶಿಷ್ಟಪಾಲನೆಗೆ ಕೊಟ್ಟನು. ಇದು ಇಂದ್ರಸನ್ನಿಧಾನ ಯುಕ್ತವಾದುದು. ಇದರ ಪೂಜೆ ಎಂದು ಮುಂದೆ ರಾಜರಿಂದ ಸಂಪ್ರದಾಯವೇ ಆಯಿತು. ಈ ಪೂಜೆಯೇ ಇಂದ್ರಪೂಜೆ ಮಾಡುವ ಅರಸರಿಗೆ ಪ್ರಜೆಗಳಿಗೆ ಸಂಪತ್ತು ವಿಜಯಗಳು ದೊರಕುತ್ತವೆ.

ಹೀಗೆ ಇಂದ್ರನಿಂದ ಚೇದಿರಾಜ್ಯ, ವಿಮಾನ, ಇಂದ್ರಮಾಲೆ, ಯಷ್ಟಿ(ದಂಡ)ಗಳನ್ನು ಪಡೆದು ಇಡೀ ಭೂಮಿಯನ್ನು ಪಾಲಿಸುತ್ತಾ ಸುಖವಾಗಿದ್ದನು. ಮುಂದೆ ಇಂದ್ರಾನುಗ್ರಹ ಪಡೆಯಲು ರಾಜನು ಇಂದ್ರೋತ್ಸವವನ್ನು ಮಾಡಿದನು. ಮಹಾಪರಾಕ್ರಮಿಗಳಾದ ಐವರು ಆತನಿಗೆ ಮಕ್ಕಳು. ಅವರಲ್ಲಿ ಬೃಹದ್ರಥನನ್ನು ಮಗಧರಾಜ್ಯಕ್ಕೂ ಪ್ರತ್ಯಗ್ರಹ, ಕುಶಾಂಬ(ಮಣಿವಾಹನ),

---

೧ ರಾಜೋಪರಿಚರೋ ನಾಮ ಧರ್ಮನಿತ್ಯೋ ಮಹೀಪತಿಃ ॥ - ಆದಿಪರ್ವ(೬೩-೧)
ರಾಜೋಪಚರಿಚರೇತ್ಯತ್ರ ರಾಜ್ಞಾಮುಪರಿ ಚರತೀತಿ ರಾಜೋಪಚರಿಚರಃ ॥
- ಲಕ್ಷಾಲಂಕಾರ (ಭಾಗ-೧; ಪುಟ-೬೪)

೨ ಕೃಷ್ಣನ ಉಪದೇಶದಿಂದ ಅರ್ಜುನ ಯುದ್ಧಕ್ಕೆ ಸಿದ್ಧನಾದಂತೆ ಉಪರಿಚರವಸು ಇಂದ್ರೋಪದೇಶದಿಂದ ತಪಸ್ಸನ್ನು ಬಿಟ್ಟು ರಾಜ್ಯಪಾಲನೆಗೆ ತೊಡಗಿದ. ಅದರೆ ಅದೇ ಇಂದ್ರ ಅರ್ಜುನನಾದಾಗ ಆತನ ಜ್ಞಾನತಿರೋಹಿತವಾದುದು ಇಂದ್ರನು ಭಿನ್ನಭಾಗವತಧರ್ಮದವನೆಂದು ಸಿದ್ಧವಾಗುತ್ತದೆ.

ಮಾವೇಲ್ಲ ಮತ್ತು ಯದುಗಳೆಂಬ ನಾಲ್ವರು ಮಕ್ಕಳನ್ನೂ ಅದೇ ಹೆಸರಿನ ದೇಶಗಳಿಗೆ ರಾಜರನ್ನಾಗಿ ಮಾಡಿದನು.

ರಾಜನಂತೂ ಇಂದ್ರದತ್ತವಾದ ವಿಮಾನದಲ್ಲಿ ಆಕಾಶದಲ್ಲಿರುತ್ತಿದ್ದ. ಅಲ್ಲಿ ಗಂಧರ್ವಾಪ್ಸರೆಯರು ಆತನನ್ನು ಸೇವಿಸುತ್ತಿದ್ದರು. ಉಪರಿಚರವಸು ರಾಜನು ಹೆಸರಿಗೆ ತಕ್ಕಂತೆ ಎಲ್ಲರ ಮೇಲೆ ಸಂಚರಿಸುತ್ತಾ ಪ್ರಸಿದ್ಧನಾದನು. ಹೀಗೆ ಸಂಚರಿಸುವಾಗ ಶುಕ್ತಿಮತೀ ಎಂಬ ನದಿಯನ್ನು ತಡೆದು ನಿಲ್ಲಿಸಿದ. ಕೋಲಾಹಲ ಪರ್ವತವನ್ನು ಪಾದದಿಂದ ಮೆಟ್ಟಲು **ಶುಕ್ತಿಮತೀ** ಸಮುದ್ರದ ಕಡೆ ಹರಿಯುವಂತಾದಳು. ತನಗೆ ರಾಜನು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ನದಿಯು ಕೋಲಾಹಲ ಪರ್ವತದಿಂದ ತನ್ನಲ್ಲಿ ಹುಟ್ಟಿದ ಮಗಳು **ಗಿರಿಕೆ**ಯನ್ನು ಮತ್ತು ಮಗ **ವಸು**ವನ್ನು ರಾಜನಿಗೆ ಕೊಟ್ಟಳು. ಉಪರಿಚರನು ವಸುವನ್ನು ತನ್ನ ಸೇನಾಪತಿಯನ್ನಾಗಿ ಮಾಡಿಕೊಂಡನು. **ಗಿರಿಕೆ** ಆತನ ಪ್ರೀತಿಪಾತ್ರ ಮಡದಿಯಾದಳು.

ಒಮ್ಮೆ ಋತುಸ್ನಾತಳಾದ ಗಿರಿಕೆಯು ಪುಂಸವನದಲ್ಲಿ ಪತಿಯೊಡನೆ ಸಂಚರಿಸಲು ಆಪೇಕ್ಷಿಸಿದಳು. ಆದರೆ ಆಗಲೇ ಅರಮನೆಗೆ ಬಂದ ಪಿತೃಗಳ ಸಲುವಾಗಿ ಜಿಂಕೆಗಳನ್ನು ವಧಿಸಿ ತರಲು ಬೇಟೆಗೆ ಗಿರಿಕೆಯನ್ನು ಮನದಲ್ಲಿಯೇ ನೆನೆಯುತ್ತಾ ಹೋದನು. ಮೊದಲೇ ವಸಂತಕಾಲ, ಮನ್ಮಥಪದಾಕ್ರಾಂತನಾದ ರಾಜ ವನದ ಸಿರಿಗೆ ಮತ್ತಷ್ಟೂ ಪತ್ನೀಸಂಗಮ ಮನಸ್ಕನಾಗಿ ಅಶೋಕವೃಕ್ಷ ಒಂದರ ನೆರಳಿನಲ್ಲಿ ಸುಖವಾಗಿ ಕುಳಿತನು. ಮಧುರ ಪುಷ್ಪಗಳ ಪರಿಮಳದಿಂದ ಆಕರ್ಷಿತನಾಗಿ ವನ ಸುತ್ತುತ್ತಿರಲು ಆತನ ವೀರ್ಯಸ್ಖಲನವಾಯಿತು. ಕೂಡಲೇ ಅಮೋಘವಾದ ತನ್ನ ರೇತಸ್ಸು ವ್ಯರ್ಥವಾಗದಿರಲೆಂದು ಮರದೆಲೆಯಲ್ಲಿ ಅದನ್ನು ಇಟ್ಟು[೧] ಅಭಿಮಂತ್ರಿಸಿ ರೇತಸ್ಸನ್ನು ಗಿಡುಗನ ಮೂಲಕ ಕಳಿಸುವ ಮೂಲಕ ಕೃತಕ ಗರ್ಭಧಾರಣೆಗೆ ಪ್ರಯತ್ನಿಸಿದ ಈ ಪ್ರಸಂಗ ವಿಜ್ಞಾನ ಲೋಕಕ್ಕೆ ಒಂದು ಒಗಟು. ಶೈತ್ಯೀಕರಣ ಯಂತ್ರದಲ್ಲಿ ವೀರ್ಯವನ್ನು ಕೆಡದಂತೆ ಇಡಲು ಬರುವುದಾದರೆ ಮಂತ್ರ ಸಾಮರ್ಥ್ಯದಿಂದ ವೀರ್ಯವನ್ನು ಕೆಡದಂತೆ ಪತ್ನಿಗೆ ರವಾನಿಸಿ, ಅಲ್ಲಿ ಗರ್ಭೋತ್ಪತ್ತಿ ಮಾಡಿಸಿದ ಈ ಪ್ರಸಂಗ ವಿಜ್ಞಾನಕ್ಕೆ ಸವಾಲೆನ್ನಬಹುದು. ಸಮೀಪದಲ್ಲಿದ್ದ ಒಂದು ಗಿಡುಗನ ಮೂಲಕ ತನ್ನ ದಾರಿ ಕಾಯುತ್ತಿರುವ ಋತುಸ್ನಾತಳಾದ ತನ್ನ ಪತ್ನಿಗೆ ಕಳಿಸಿದನು. ಆ ಗಿಡುಗ ಹೋಗುತ್ತಿರಲು ದಾರಿಯಲ್ಲಿ ಮತ್ತೊಂದು ಗಿಡುಗವು ಶುಕ್ರವನ್ನು ಆಹಾರವೆಂದು ಬಗೆದು ಇದರೊಡನೆ ಸೆಣಸಾಡಲು ಆ ವೀರ್ಯವು ಕೆಳಗಡೆ ಇದ್ದ ಯಮುನಾ ನದಿಯಲ್ಲಿ ಬಿದ್ದಿತು. ಆ ವೀರ್ಯವನ್ನು ನದಿಯಲ್ಲಿದ್ದ ಒಂದು ಮೀನು ನುಂಗಿತು. ಇದು ಮತ್ತಾರೂ ಆಗಿರದೇ ಬ್ರಹ್ಮ(ಬ್ರಾಹ್ಮಣ)ಶಾಪದಿಂದ ಮೀನಾಗಿದ್ದ ಅದ್ರಿಕಾ ಎಂಬ ಅಪ್ಸರೆಯೇ ಆಗಿದ್ದಳು. ಈ ಮೀನನ್ನು ಬೆಸ್ತರು ಒಮ್ಮೆ ಹಿಡಿದರು. ವಿಚಿತ್ರವಾದ

೧ ಅಮೋಘತ್ವಂ ಚ ವಿಜ್ಞಾಯ ರೇತಸೋ ರಾಜಸತ್ತಮಃ।
ಅಭಿಮಂತ್ರ್ಯಾಥ ತಚ್ಛುಕ್ರಂ ಆರಾತ್ ತಿಷ್ಠಂತಮಾಶುಗಮ್ ॥
... ಮತ್ಪ್ರಿಯಾರ್ಥಮಿದಂ ಸೌಮ್ಯ ಶುಕ್ರಂ ಮಮ ಗೃಹಂ ನಯ ॥ - ಆದಿಪರ್ವ(೬೩/೫೨,೫೩)

ಈ ಗರ್ಭ ಧರಿಸಿದ ಈ ಮೀನನ್ನು ಬೆಸ್ತರು ಹತ್ತನೇ ತಿಂಗಳು ಬಂದಾಗ ಸೀಳಿದರು. ಅದರ ಉದರದಲ್ಲಿ ಒಂದು ಪುರುಷ, ಒಂದು ಸ್ತ್ರೀ ಶಿಶುಗಳನ್ನು ನೋಡಿ ಆಶ್ಚರ್ಯಚಕಿತರಾದರು. ಆದರೆ ಮೀನಾಗಿದ್ದ ಅಪ್ಸರೆಯು ದಿವ್ಯರೂಪ ಧರಿಸಿ ಶಿಶುಗಳನ್ನು ಹರಸಿ, ಶಾಪಮುಕ್ತಳಾಗಿ ಸ್ವರ್ಗಕ್ಕೆ ಹೋದಳು.

ಬೆಸ್ತರು ಈ ಮಕ್ಕಳನ್ನು ತೆಗೆದುಕೊಂಡು ತಮ್ಮ ರಾಜನಾದ ಉಪರಿಚರನಿಗೆ ತೋರಿಸಿದರು. ರಾಜನು ಗಂಡು ಶಿಶುವನ್ನು ತಾನೇ ಇಟ್ಟುಕೊಂಡು ಹೆಣ್ಣು ಶಿಶುವನ್ನು ಬೆಸ್ತರಿಗೇ ಕೊಟ್ಟು ಸಾಕಲು ತಿಳಿಸಿದನು. ಗಂಡು ಮತ್ಸ್ಯರಾಜನೆಂದು ಮುಂದೆ ಪ್ರಸಿದ್ಧನಾದ ವಿರಾಟ ರಾಜ. ಈ ಹೆಣ್ಣು ಶಿಶು ಮೀನಿನ ವಾಸನೆಯಿಂದಾಗಿ ಮತ್ಸ್ಯಗಂಧಿ ಎಂದೂ, ಸತ್ಯವತಿ ಎಂದೂ ಪ್ರಸಿದ್ಧಳಾದಳು. ತಂದೆಯ ಹರಿಗೋಲು ಹಾಕುವ ಕೆಲಸದಲ್ಲಿ ನೆರವಾಗುತ್ತಿದ್ದ ಸತ್ಯವತೀ ದೇವಿಗೆ ಮುಂದೊಮ್ಮೆ ತೀರ್ಥಯಾತ್ರೆಗೆ ಹೊರಟಿದ್ದ ಪರಾಶರ ಋಷಿಗಳನ್ನು ನದೀ ದಾಟಿಸುವ ಪ್ರಸಂಗ ಬಂದಿತು. ಈಕೆಯ [೧]ರೂಪದಿಂದ ಮೋಹಗೊಂಡ ಪರಾಶರರು ಈಕೆಯೊಡನೆ ಸಂಗಮ ಬಯಸಿದರು. ಸಾರ್ವಜನಿಕ ಸ್ಥಳದಲ್ಲಿ ಇದನ್ನು ಬಯಸದ ಸತ್ಯವತೀ ಮಾತಿಗೆ ಪರಾಶರರು ತಮ್ಮ ತಪಃ ಶಕ್ತಿಯಿಂದ ಆ ಪ್ರದೇಶವನ್ನು ಮಂಜು ಕವಿಯುವಂತೆ[೨] ಮಾಡಿದರಲ್ಲದೆ, ಹರೀಚ್ಛೆಯಂತೆ ಆಕೆಯ ಸಂಗಮ ಮಾಡಿದರು. ಅದಕ್ಕೂ ಮೊದಲು ಸತ್ಯವತೀದೇವಿಗೆ ತಮ್ಮ ಸಂಗಮದಿಂದ ಕನ್ಯಾತ್ವ ಹಾನಿಯಾಗದೆಂದೂ, ಆಕೆಯ ಮತ್ಸ್ಯಗಂಧ ಹೋಗಿ ಸುಗಂಧ ಸುರಿಸುವ ಶರೀರವನ್ನಾಗಿಯೂ ಮಾಡಿದರು. ಅಂದಿನಿಂದ ಆಕೆ ಯೋಜನಗಂಧಿಯಾದಳು.

ಹೀಗೆ ಪರಾಶರ - ಸತ್ಯವತೀ ಸಂಗಮದಿಂದ ಅವತರಿಸಿದ ಮಗುವೇ ಶ್ರೀವೇದವ್ಯಾಸರು. ಸಂಗಮವಾದ ಕೂಡಲೇ ಭಗವಂತನು ಆವಿರ್ಭವಿಸಿ, ತಾನು ಅಸಾಮಾನ್ಯ ಚೇತನನೆಂದು

---

೧ ಸಾ ತು ಸತ್ಯವತೀ ನಾಮ ಮತ್ಸ್ಯಘಾತ್ಯಭಿಸಂಶ್ರಯಾತ್ । - ಆದಿಪರ್ವ(೬೩/೬೮)
ತೀರ್ಥಯಾತ್ರಾಂ ಪರಿಕ್ರಾಮನ್ನಪಶ್ಯದ್ವೈ ಪರಾಶರಃ ।
ಅತೀವರೂಪಸಂಪನ್ನಾಂ..... ॥
ದೃಷ್ಟ್ವೈವ ಸ ಚ ತಾಂ ಧೀಮಾನ್ ಚಕಮೇ ಚಾರುಹಾಸಿನೀಮ್ ।
..... ಸಂಗಮಂ ಮಮ ಕಲ್ಯಾಣಿ ಕುರುಷ್ವೇತ್ಯಭ್ಯಭಾಷತ ।
..... ಅವಯೋರ್ದೃಷ್ಟಯೋರೇಭಿಃ ಕಥಂ ತು ಸ್ಯಾತ್ ಸಮಾಗಮಃ ॥
ಏವಂ ತಯೋಕ್ತೋ ಭಗವಾನ್ ನೀಹಾರಮಸೃಜತ್ ಪ್ರಭುಃ ।
ಯೇನ ದೇಶಃ ಸ ಸರ್ವಸ್ತು ತಮೋಭೂತ ಇವಾಭವತ್ ॥ - ಆದಿಪರ್ವ(೬೩/೭೪)

೨ ಶ್ರೀರಾಘವೇಂದ್ರತೀರ್ಥರ ಗುರುಗಳಾದ ಶ್ರೀಸುಧೀಂದ್ರತೀರ್ಥರ ಬಗ್ಗೆ ಹಗಲನ್ನು ರಾತ್ರಿಯನ್ನಾಗಿಸಿದ ಐತಿಹ್ಯವಿರುವಾಗ ಪರಾಶರರು ಹಗಲನ್ನು ರಾತ್ರಿಯಂತೆ ಮಾಡಿದುದು ಆಶ್ಚರ್ಯವಲ್ಲ. ಅಲ್ಲದೆ ಶ್ರೀಸತ್ಯಬೋಧತೀರ್ಥರು ರಾತ್ರಿಯಲ್ಲಿ ಸೂರ್ಯನನ್ನು ತೋರಿಸಿ, ಹಗಲನ್ನಾಗಿಸಿದ ಮತ್ತೊಂದು ಮಹಿಮೆಯನ್ನೂ ಇಲ್ಲಿ ಸ್ಮರಿಸಬಹುದಾಗಿದೆ. ಹರಿಭಕ್ತರಿಗೆ ಇದು ಸಾಧ್ಯವಿರುವಾಗ ಸ್ವಯಂ ಹರಿ ಶ್ರೀಕೃಷ್ಣನು ಜಯದ್ರಥ ಸಂಹಾರಕ್ಕಾಗಿ ಕತ್ತಲನ್ನು ಸೃಷ್ಟಿಸಿದ್ದು ಏನು ಆಶ್ಚರ್ಯ?

ಜಗತ್ತಿಗೆ ತೋರಿಸಿದನು. ಯಮುನಾದ್ವೀಪದಲ್ಲಿ ಜನಿಸಿದ ಪ್ರಯುಕ್ತ ದ್ವೈಪಾಯನವೆಂಬ ಹೆಸರು ಬಂದಿತು ವ್ಯಾಸರಿಗೆ. ತಾಯಿಯ ಅನುಜ್ಞೆ ಪಡೆದ ವ್ಯಾಸರು ಸ್ಮರಿಸಿದ ಕೂಡಲೇ ದರ್ಶನ ಕೊಡುವೆ ಎಂದು ಹೇಳಿ ಮೇರು ಪರ್ವತಕ್ಕೆ ಹೋಗಿ ಅಲ್ಲಿ ಬ್ರಹ್ಮಾದಿ ದೇವತೆಗಳಿಗೆ ಶಾಸ್ತ್ರೋಪದೇಶ ಆರಂಭಿಸಿದರು. ವೇದವಿಭಾಗ ಮಾಡಿದ್ದರಿಂದ ವೇದವ್ಯಾಸರೆನಿಸಿದರು. ಪುರಾಣ-ಇತಿಹಾಸಗಳ ರಚನೆ, ಬ್ರಹ್ಮಸೂತ್ರಗಳ ರಚನೆಗಳಾದವು ವ್ಯಾಸರಿಂದ. ಸುಮಂತು, ಜೈಮಿನಿ, ಪೈಲ, ಶುಕ ಮೊದಲಾದ ಶಿಷ್ಯರೂ, ಅವರಲ್ಲಿ ಆವಿಷ್ಟರಾದ ಬ್ರಹ್ಮಾದಿ ದೇವತೆಗಳು ವ್ಯಾಸರಿಂದ ಯಥಾರ್ಥಜ್ಞಾನ ಪಡೆದು ಧನ್ಯರಾದರು. ಗೌತಮ ಋಷಿಗಳ ಶಾಪದಿಂದ ತಿರೋಹಿತವಾದ ಜ್ಞಾನ ಜಗತ್ತಿನಲ್ಲಿ ಪುನಃ ತನ್ನ ದುಂದುಭಿಯನ್ನು ಮೊಳಗಿಸಿತು.

**ಸಂದೇಶ :**

ವ್ಯಾಸರ ದಯೆಯಿಂದ ಹೀಗೆ ಉಪರಿಚರವಸುವು ಇಂದ್ರಮಾನ್ಯನಾದ ಚಂದ್ರವಂಶದ ದೊರೆಯಲ್ಲದೆ ವ್ಯಾಸರ ತಾಯಿಯಾದ ಸತ್ಯವತೀದೇವಿಯ ತಂದೆಯಾದುದು ಆತನ ಧನ್ಯತೆಯನ್ನು ತಿಳಿಸುತ್ತದೆ. ಸತ್ಯವತೀದೇವಿಯು ಕೇವಲ ಉಪರಿಚರವೀರ್ಯಸಂಭೂತಳು. ಆಕೆಗೆ ತಾಯಿಯೇ ಇಲ್ಲವೆಂದರೆ ತಪ್ಪಾಗದು. ಮೀನಿನ ಶರೀರ ಆಕೆಯ ಶರೀರ ಬೆಳವಣಿಗೆಗೆ ಒಂದು ಅಧಿಷ್ಠಾನ ಮಾತ್ರವಾಯಿತು. ಭಗವಾನ್ ವ್ಯಾಸರು ಅಪ್ರಾಕೃತ ಶರೀರರು. ಅಂತಹವರಿಗೆ ಜನ್ಮ ಕೊಡಲೆಂದೋ ಏನೋ ಸತ್ಯವತೀದೇವಿಯೂ ಕೇವಲ ಉಪರಿಚರವಸುವಿನ ಮಗಳಾದುದು ಆಕೆಯ ಪಾವಿತ್ರ್ಯಕ್ಕೆ ದ್ಯೋತಕವಾಗಿದೆ. ಮುಂದೆ ಧೃತರಾಷ್ಟ್ರ ಪಾಂಡುರಾಜನ ತಂದೆಯಾಗುವ ಮೂಲಕ ವ್ಯಾಸರು ಮಹಾಭಾರತದ ಮೂಲ ಕಥೆಗೂ ಮೂಲವಾಗುವರು. ಇಂತಹ ವ್ಯಾಸರ ತಾತ ಉಪರಿಚರವಸು ಎನ್ನುವುದು ಆತನ ಪ್ರಶಸ್ತಿ. (ಲೋಕದೃಷ್ಟಿಯಿಂದ) ಇಂದ್ರದೇವರ ಮಾತ್ರಿನಂತೆ ಕ್ಷತ್ರಿಯ ಧರ್ಮದಲ್ಲಿ ಬಾಳಿದ ಉಪರಿಚರವಸುವಿನ ಚರಿತೆ **'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ'** ಎಂಬ ಗೀತೆಯ ಮಾತನ್ನು ನೆನಪಿಸುತ್ತದೆ.

ನಾರಾಯಣನ ಅನುಗ್ರಹದಿಂದ ಉಪರಿಚರವಸು ಒಂದು ರಾಜ್ಯವನ್ನು ಪಡೆದ ವಿವರ ಶಾಂತಿಪರ್ವದಲ್ಲಿಯೂ ಬಂದಿದೆ. ಅಲ್ಲದೆ ಇಂದ್ರನು ಆತನಿಗೆ ತನ್ನ ಅರ್ಧಾಸನವನ್ನೇ ಕೊಟ್ಟ ವಿವರಗಳೂ ಬಂದಿದೆ. ಹೀಗೆ ಇಂದ್ರ ಮಾನ್ಯತೆಯ ಪರಾಕಾಷ್ಠತೆ ಇದರಿಂದ ತಿಳಿಯುತ್ತದೆ. ಗರುಡಾನುಗ್ರಹದಿಂದ ಆತನು ಆಕಾಶಗಾಮಿಯೂ ಆಗಿದ್ದನಂತೆ. ಕೊನೆಗೆ ಆತನು ಬ್ರಹ್ಮಲೋಕವನ್ನೇ ಹೊಂದಿದ ಮಹಾತ್ಮನೆಂದು **ಶಾಂತಿಪರ್ವ**ದಲ್ಲಿ ಹೇಳಲಾಗಿದೆ.

*****

# ೯. ಶಕುಂತಲೋಪಾಖ್ಯಾನ

ಚಂದ್ರವಂಶದ ಮಹಾನ್ ಚಕ್ರವರ್ತಿಗಳಲ್ಲಿ ದುಷ್ಯಂತನದು ವಿಶಿಷ್ಟಸ್ಥಾನ. ಪುರುವಂಶದ ಕೀರ್ತಿಯನ್ನುಶಾಶ್ವತವಾಗಿ ಬೆಳಗಿದ(ದುಃಷಂತ)[೧] ಶಕುಂತಲೆಯನ್ನುಗಾಂಧರ್ವ ವಿಧಿಯಿಂದ ಮದುವೆಯಾದ ಧೀಮಂತನಾಗಿದ್ದನು. ಶಕುಂತಲೆಯೋ ಮೊದಲು ರಾಜರ್ಷಿಯಾಗಿ ನಂತರ ಬ್ರಹ್ಮರ್ಷಿಯಾದ, ವಸಿಷ್ಠರನ್ನೂ ಎದುರಿಸಿದ, ಬ್ರಾಹ್ಮಣ್ಯವನ್ನು ವಿಶೇಷ ತಪಸ್ಸನ್ನು ಮಾಡಿ ಪಡೆದ ಛಲಗಾರ ವಿಶ್ವಾಮಿತ್ರನ ಮಗಳು. ದುಷ್ಯಂತನ ರಾಜ್ಯ ಆಸಮುದ್ರಾಂತವಾಗಿತ್ತು. ಜನರೆಲ್ಲ ಸುಖಿಗಳು, ವರ್ಣಾಶ್ರಮ ಪಾಲಕರು, ಸುಳ್ಳನ್ನು ಹೇಳದ ಬ್ರಾಹ್ಮಣರೇ ಆತನ ಪ್ರಜೆಗಳು. ಆತನ ಬಲವು ವಿಷ್ಣುಸಮಾನವೆನ್ನುಷ್ಟು ಹೆಗ್ಗಳಿಕೆಯುಳ್ಳದ್ದು. ಆತನಲ್ಲಿ ಸಮುದ್ರದ ಅಕ್ಷೋಭ್ಯತೆ ಭೂಮಿಯ ಕ್ಷಮಾಗುಣ, ಗದಾಯುದ್ಧ ವಿಶಾರದ ಮುಂತಾದ ಕ್ಷತ್ರಿಯೋಚಿತ ಗುಣಗಳಿದ್ದವು. ಆತನ ರಾಜ್ಯ ದೇವತೆಗಳ ಕಾರುಣ್ಯ ಪೂರಣವಾಗಿತ್ತು.

ಒಮ್ಮೆ ದುಷ್ಯಂತ ವಿವಿಧ ಹಿಂಸಾಪಶುಗಳ ಬೇಟೆಗಾಗಿ ಚತುರಂಗಸೈನ್ಯ ಹಾಗೂ ಅಮಾತ್ಯರೊಡನೆ ಹೊರಟ. ಆತನು ಹೊರಟೊಡನೆ ಪುರಸ್ತ್ರೀಯರೆಲ್ಲ ನೋಡುತ್ತಾ, ಆನಂದಿಸುತ್ತಾ ಇಂದ್ರಸಮನೆಂದೇಬಗೆದರು[೨]. ಗದೆ, ಖಡ್ಗ ಬಾಣಪ್ರಯೋಗಗಳನ್ನುಮಾಡುತ್ತಾ ದುಷ್ಟಮೃಗಗಳನ್ನು ಸಂಹರಿಸುತ್ತಾ ದುಷ್ಯಂತನು ನಡೆದನು. ಬೇಟೆಯಾಡುತ್ತಾ ಜಿಂಕೆಯೊಂದನ್ನು ಬೆನ್ನು ಹತ್ತಿದ ರಾಜನು ಮತ್ತೊಂದು ವನ ಪ್ರವೇಶಿಸಿದ. ಅಷ್ಟು ಹೊತ್ತಿಗೆ ಆತನು ಹಸಿವು-ಬಾಯಾರಿಕೆಗಳಿಂದ ಬಳಲಿದ್ದ. ವನದೊಳಗೆ ಪ್ರವೇಶಿಸಿದಂತೆ ಅದೊಂದು ಭಾರೀ ಶೂನ್ಯ ಪ್ರದೇಶವಾಗಿ ತೋರಿತು. ಅದನ್ನು ದಾಟಿದ ಮೇಲೆ ಸಿಕ್ಕ ಮತ್ತೊಂದು ವನದ ಪರಿಸರ ಭಿನ್ನವಾಗಿತ್ತು. ಪಕ್ಷಿಸಂಕುಲಗಳ ಸುಶ್ರಾವ್ಯವಾದ, ಫಲ-ಪುಷ್ಪಗಳಿಂದ ಭರಿತವಾದ ವೃಕ್ಷಗಳಿಂದ, ಕೋಕಿಲ ಮುಂತಾದ ಪಕ್ಷಿಗಳ ಮಧುರ ನಿನಾದ ಷಟ್ಪದಿಗಳ ಸುಂದರ ನಿನಾದಗಳಿಂದ ಮನಃಪ್ರಸಾದವನ್ನೀಯುವ ಸುಂದರ, ಸುಮಧುರ ಬನದ ಐಸಿರಿಯಿಂದ ದುಷ್ಯಂತನ ಹಸಿವು ಬಾಯಾರಿಕೆಗಳೆಲ್ಲ ದೂರಾದವು. ಮಹೇಂದ್ರನ ನಂದನವನದ ವಾತಾವರಣ, ಕಿಲಕಿಲ ನಿನಾದದಿಂದ ಕೂಡಿದ ಮಾಲಿನೀ ನದಿಯ ಪುಣ್ಯತಾಣ ಸರ್ವಪ್ರಾಣಿಗಳಿಗೆ ಮಾತೃಭೂಮಿಯಂತಿತ್ತು. ಆ ನದಿಯ ತೀರದಲ್ಲಿದ್ದ ಕಣ್ವರ ಆಶ್ರಮವು ನರನಾರಾಯಣಾಶ್ರಮದಂತೆ ಪರಮಪವಿತ್ರವಾಗಿತ್ತು. ಅಲ್ಲಿದ್ದ ಹುಲಿ-ಹಸುಗಳು,

---

೧ ದಾಕ್ಷಿಣಾತ್ಯ, ಔತ್ತರೇಯ ಮ.ಭಾ. ಪಾಠಗಳು, ಶ್ರೀವಾದಿರಾಜರ ಲಕ್ಷಾಲಂಕಾರ, ಭಾವಪ್ರಕಾಶಿಕಾ, ಜನಾರ್ದನಭಟ್ಟರ ವ್ಯಾಖ್ಯಾನಗಳು ಹಾಗೂ ಉತ್ತರಾದಿಮಠದಿಂದ ಮುದ್ರಿತ ಪಾಠಗಳಲ್ಲಿ ದುಷ್ಯಂತ, ದೌಷ್ಯಂತಿ ಎಂದೇ ಇದೆ. ಆದರೆ ಹೃಷೀಕೇಶತೀರ್ಥರ ಪಾಠ ಹಾಗೂ ಪೂನಾ ಭಂಡಾರಕರ್ ಸಂಸ್ಥೆಗಳ ಪಾಠಗಳಲ್ಲಿ ದುಃಷಂತ ಎಂದಿದೆ.

೨ ಪಶ್ಯಂತ ಸ್ತ್ರೀ ಗಣಾಸ್ತತ್ರ ವಜ್ರಪಾಣಿಂ ಸ ಮೇನಿರೇ ॥ - ಆದಿಪರ್ವ (೬೯/೧೦)

ಹಾವು-ಮುಂಗುಸಿಗಳು, ಮೂಷಿಕ-ಮಾರ್ಜಾಲಗಳು ತಮ್ಮ ವೈರವನ್ನೆಲ್ಲ ಮರೆತು ಒಟ್ಟಿಗೆ ಇದ್ದವು[೧].

[೨]ರಾಜ ದುಷ್ಯಂತನು ತಪೋನಿಧಿಗಳಾದ ಕಣ್ವರ ದರ್ಶನಾರ್ಥಿಯಾಗಿ ತನ್ನ ಚತುರಂಗ ಸೈನ್ಯವನ್ನು ವನದ್ವಾರದಲ್ಲೇ ಬಿಟ್ಟು, ರಾಜನ ಪೋಷಾಕುಗಳನ್ನು ತೆಗೆದುಹಾಕಿ, ಮಂತ್ರಿ ಹಾಗೂ ಪುರೋಹಿತರೊಡನೆ ಬ್ರಹ್ಮಲೋಕದಂತೆ ಸಕಲ ವೇದಘೋಷಗಳಿಂದೊಡಗೂಡಿದ ಆಶ್ರಮವನ್ನು ಪ್ರವೇಶಿಸಿದನು. ಆಶ್ರಮದಲ್ಲಿ ನಾನಾ ಶಾಸ್ತ್ರಪ್ರವೀಣರೂ, ವ್ಯಾಸಗ್ರಂಥಗಳನ್ನು ಆಶ್ರಯಿಸಿದವರೂ, ಮೋಕ್ಷಧರ್ಮ ಪರಾಯಣರೂ, ವಿವಿಧ ಪೂರ್ವಪಕ್ಷಗಳನ್ನು ಅನುವಾದಿಸುತ್ತಾ ಉತ್ತರಿಸುತ್ತಾ ಇರುವವರೂ, ವ್ರತನಿಯಮ, ಜಪ-ಹೋಮಪರರಾದ ಬ್ರಾಹ್ಮಣರನ್ನು ರಾಜನು ನೋಡಿದನು. ಇವೆಲ್ಲ ನೋಡುತ್ತಿದ್ದಂತೆ ಮತ್ತಷ್ಟು ನೋಡಬೇಕೆನ್ನಿಸಿತು ರಾಜನಿಗೆ ತೃಪ್ತಿ ಮಾತ್ರ ಆಗಲಿಲ್ಲ. ಮುಂದೆ ನಡೆಯುತ್ತಾ ರಾಜನು ಮಂತ್ರಿ-ಪುರೋಹಿತರನ್ನೂ ಅಲ್ಲಿಯೇ ಬಿಟ್ಟು ತಾನೊಬ್ಬನೇ ಆಶ್ರಮ ಪ್ರವೇಶಿಸಿದ. ಆಶ್ರಮದಲ್ಲಿ ಯಾರೂ ಇರಲಿಲ್ಲ. 'ಇಲ್ಲಿರುವವರಾರು?' ಎಂಬ ರಾಜನ ಕೂಗಿಗೆ ಸಾಕ್ಷಾತ್ ಲಕ್ಷ್ಮಿಯಂತೆ ಇದ್ದ ಒಬ್ಬ ಕನ್ಯೆ ಹೊರಬಂದು ರಾಜನನ್ನು ಸತ್ಕರಿಸಿ ಕುಶಲ ಪ್ರಶ್ನೆಗಳನ್ನು ಮಾಡಿ 'ತನ್ನಿಂದ ಏನು ಆಗಬೇಕು' ಎಂದು ಕೇಳಲು, ರಾಜನು ಆಕೆಯ ಸೌಂದರ್ಯಕ್ಕೆ ಮೋಹಿತನಾಗಿ ತನ್ನ ಪರಿಚಯವನ್ನು ಮಾಡಿಕೊಟ್ಟನು. ಪುರುವಂಶದ ರಾಜನಾದ ದುಷ್ಯಂತ, ಕಣ್ವರ ದರ್ಶನಕ್ಕಾಗಿ ಬಂದಿರುವುದಾಗಿ ಅರುಹಿದ. ಫಲವನ್ನು ತರಲು ಕಣ್ವರು ವನಕ್ಕೆ ತೆರಳಿದ್ದಾರೆ. ಇನ್ನೊಂದು ಮುಹೂರ್ತದಲ್ಲಿ ಬರುವರೆಂದು ತಿಳಿಸಿದಳು ಕನ್ಯೆ. ಆಕೆಯ ರೂಪ ಯೌವ್ವನದಿಂದ ಮರುಳಾದ ರಾಜನು ನೀನು ಏಕೆ ಇಲ್ಲಿಗೆ ಬಂದೆ? ನೀನಾರು? ನಿನ್ನನ್ನು ನೋಡಿದ ಕೂಡಲೇ ನಾನು ಮೆಚ್ಚಿದ್ದೇನೆ. ಬ್ರಾಹ್ಮಣ ಪುತ್ರಿಯರಲ್ಲಿ ಕ್ಷತ್ರಿಯಳಲ್ಲದವಳಲ್ಲಿ ನನ್ನ ಪವಿತ್ರ ಮನಸ್ಸು ಹೋಗದು. ನೀನು ಕ್ಷತ್ರಿಯಳಿರಬೇಕು. ಆದ್ದರಿಂದ ನಾನು ನಿನ್ನನ್ನು ವರಿಸದ್ದೇನೆ. ದಯವಿಟ್ಟು ನನ್ನ ಪತ್ನಿಯಾಗು

---

೧ ಶ್ರೀವಾದಿರಾಜರು ಇರುತ್ತಿದ್ದ ತಪೋವನ ಪ್ರದೇಶದಲ್ಲಿಯೂ ಹೀಗೆಯೇ ಇತ್ತೆಂದು ಇತಿಹಾಸವಿದೆ.

೨ ಸಾಮಾತ್ಯೋ ರಾಜಲಿಂಗಾನಿ ಸೋಽಪನೀಯ ನರಾಧಿಪಃ । ಬ್ರಹ್ಮಲೋಕ ಪ್ರತೀಕಾಶಮಾಶ್ರಮಂ ಸೋಽಭಿವೀಕ್ಷ್ಯ ಹ । ..... ಋಚೋ ಬಹ್ವೃಚ್ಚ ಮುಖ್ಯೈಶ್ಚ .... ಯಜುರ್ವಿದ್ಭಿಶ್ಚ... ಸಾಮಗೀತೈಶ್ಚ ... ಭಾರುಂಡ ಸಾಮ ಗೀತಾಭಿರಥರ್ವಶಿರಸೋದ್ಗತೈಃ । ಅಥರ್ವವೇದ ಪ್ರವರಾಃ......। **ನಾದಿತಃ ಸ (ಆಶ್ರಮಃ) ಬಭೌಶ್ರೀಮಾನ್ ಬ್ರಹ್ಮಲೋಕ ಇವಾಪರಃ । .... ಮೋಕ್ಷಧರ್ಮಪರಾಯಣೈಃ ।** ... ವ್ಯಾಸಗ್ರಂಥ ಸಮಾಶ್ರಿತೈಃ । ..... ಜಪಹೋಮಪರಾನ್ ವಿಪ್ರಾನ್ ದದರ್ಶ ಪರವೀರಹಾ । ಬ್ರಹ್ಮಲೋಕಸ್ಥಮಾತ್ಮಾನಂ ಮೇನೇ ಸ ನೃಪಸತ್ತಮಃ । ನಾ ತೃಪ್ಯತ್ ಪ್ರೇಕ್ಷ್ಯಮಾಣೋ ವೈ ತಪೋವನ ಗುಣೈರ್ಯುತಮ್ ॥ - ಆದಿಪರ್ವ(೭೦/೩೫-೫೦) ರಾಜನ ಸಾತ್ವಿಕ ಗುಣಗಳು ತಪೋವನದ ಆಕರ್ಷಣೆಗೆ ಒಳಗಾಗಿ ಅದರಲ್ಲಿ ಆತ ಮುಳುಗಿಹೋದ. ಪುಣ್ಯಸಂಪಾದನೆಯಲ್ಲಿ ಲೋಭ ಎಷ್ಟಿದ್ದರೂ ಕಡಿಮೆ ಎಂದು ಇದರ ಭಾವ. ಆಧ್ಯಾತ್ಮಿಕ ಸಾಧನೆ ಬಯಸುವವನು ಇಂತಹ ವಾತಾವರಣ ಬಯಸಬೇಕೆಂದು ವ್ಯಾಸರು ಇಲ್ಲಿ ವರ್ಣಿಸಿದ್ದಾರೆ.

ಎಂದು ಹೇಳಿದ ರಾಜ. ಕನ್ಯೆಯು ಅದಕ್ಕೆ 'ನಾನು ಕಣ್ವರ ಮಗಳು, ಅವರನ್ನೇ ಕೇಳು, ನಾನು ಸ್ವತಂತ್ರಳಲ್ಲ' ಎಂದಳು. ದುಷ್ಯಂತನು 'ಕಣ್ವರ ಮಗಳು ನೀನು ಹೇಗೆ ಆದೆ' ಎನ್ನಲು ಶಕುಂತಲೆ[೧]'ರಾಜನ್! ಸಜ್ಜನರಲ್ಲಿ ಇದ್ದುದನ್ನೇ ಹೇಳಬೇಕು. ಇಲ್ಲದಿದ್ದಲ್ಲಿ ಅವನು ಪಾಪಿಯೂ, ಮೂರ್ಖನೂ, ಕಳ್ಳನೂ, ಆತ್ಮವಂಚಕನೂ ಆಗುತ್ತಾನೆ.

ಒಮ್ಮೆ ನಮ್ಮ ಆಶ್ರಮಕ್ಕೆ ಬಂದ ಒಬ್ಬ ಬ್ರಾಹ್ಮಣನಲ್ಲಿ ನನ್ನ ತಂದೆ ಕಣ್ವರು ಹೇಳಿದುದನ್ನೇ ನಾನು ನಿನಗೆ ಹೇಳುವೆ 'ಹಿಂದೊಮ್ಮೆ ವಿಶ್ವಾಮಿತ್ರರು ತಮ್ಮ ಘೋರ ತಪಸ್ಸಿನಿಂದ ಇಂದ್ರಾದಿ ದೇವತೆಗಳನ್ನು ಹೆದರಿಸಿದರು. ತನ್ನ ಇಂದ್ರ ಪದವಿಗೆ ಧಕ್ಕೆ ಬರುವುದೆಂದು ಭಾವಿಸಿದ ಇಂದ್ರನು ಮೇನಕೇ! ವಾಯು-ಮನ್ಮಥ ಮೊದಲಾದವರನ್ನು ಅವರ ತಪೋಭಂಗಕ್ಕೆ ಕಳುಹಿಡಿದ. ಇವರ್ಯಾರಿಗೂ ವಿಶ್ವಾಮಿತ್ರರಿಂದ ತೊಂದರೆಯಾಗದಿರಲೆಂಬ ಅಭಯವನ್ನು ಕೊಟ್ಟು ಕಳಿಸಿದ. ಮೇನಕೆ ಹೆದರುತ್ತಲೇ ವಿಶ್ವಾಮಿತ್ರರ ಆಶ್ರಮಕ್ಕೆ ಬಂದು ಅವರಿಗೆ ನಮಿಸಿ ತನ್ನ ನೃತ್ಯ ಹಾವಭಾವಗಳಿಂದ [೨]ಅವರನ್ನು ಮೋಹಿಸಿ ತಪೋಭಂಗಮಾಡಿ ಅವರಿಗೆ ಅನುರಾಗ ಬರುವಂತೆ ಮಾಡಿ ಅವರೊಡನೆ ಬಹುಕಾಲ ಸುಖವಾಗಿದ್ದಳು. ಮುಂದೊಮ್ಮೆ ಅವರಿಂದ ಒಂದು ಹೆಣ್ಣುಮಗುವನ್ನು ಪಡೆದಳು. ಆ ಮಗುವನ್ನು ಮಾಲಿನೀ ನದೀ ತೀರದಲ್ಲಿಯೇ ಬಿಟ್ಟು ಇಬ್ಬರೂ ಹೊರಟುಹೋದರು. ಯಾರೂ ಇರದ ವನದಲ್ಲಿ ಮಲಗಿದ ಆ ಮಗುವನ್ನು ಶಕುಂತ ಪಕ್ಷಿಗಳು ಸುತ್ತುವರಿದು ಹಿಂಸಾಪಶು, ರಾಕ್ಷಸಾದಿಗಳಿಂದ ರಕ್ಷಿಸಿದವು. ಮುಂದೊಮ್ಮೆ ಕಣ್ವರು

---

೧ ಅನ್ಯಥಾ ಸಂತಮಾತ್ಮಾನಂ ಅನ್ಯಥಾ ಸತ್ಸುಭಾಷತೇ ।
ಸ ಪಾಪೇನಾವೃತೋ ಮೂರ್ಖಃ ಸ್ತೇನ ಆತ್ಮಾಪಹಾರಕಃ ॥
ಇದು ಪ್ರಕ್ಷಿಪ್ತವೆಂದು ಔತ್ತರೇಯ ಪಾಠದಲ್ಲಿದೆ. ಬೇರೆ ಗ್ರಂಥಗಳಲ್ಲಿ ಕೂಡಾ ಇರುವ ಇಂತಹ ವಾಕ್ಯಗಳನ್ನು ಆಚಾರ್ಯ ಮಧ್ವರು ಅನುವ್ಯಾಖ್ಯಾನದಲ್ಲಿ ಉದಾಹರಿಸಿದ್ದಾರೆ. ಆದ್ದರಿಂದ ಇದು ಪ್ರಕ್ಷಿಪ್ತವಲ್ಲ.
ಯೋಽನ್ಯಥಾ ಸಂತಮಾತ್ಮೇಶಮನ್ಯಥಾ ಪ್ರತಿಪದ್ಯತೇ ।
ಕಿಂ ತೇನ ನಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥ ಇತ್ಯಾದಿ । - ಅನುವ್ಯಾಖ್ಯಾನ(೪/೧/೨)
ನಾತ್ರ ಪ್ರಮಾ ಮಮ ಹೃದಿ ಪ್ರತಿಭಾತ್ಯಥಾಪಿ ಧರ್ಮಾಚಲಾ ಮಮ ಮತಿರ್ಹಿ ತದೇವ ಮಾನಂ ॥
- ಮ.ತಾ.ನಿ.ದಲ್ಲಿ ಧರ್ಮರಾಜನ ಮಾತಿನಂತೆ ದುಷ್ಯಂತನು ಅನ್ನುತ್ತಾನೆ
ಸತಾಂ ಹಿ ಸಂದೇಹಪದೇಷು ವಸ್ತುಷು
ಪ್ರಮಾಣಮಂತಃಕರಣಪ್ರವೃತ್ತಯಃ ॥ - ಕಾಳಿದಾಸನ ಶಾಕುಂತಲಾ ನಾಟಕ

೨ ಸಹಸ್ರ ಸಹಸ್ರ ವರ್ಷ ಜಿತೇಂದ್ರಿಯರಾದ ವಿಶ್ವಾಮಿತ್ರರು ಸಹ ಕಾಮವಶರಾದ ಮೇಲೆ ಸಾಮಾನ್ಯರು ಕಾಮಕ್ಕೆ ತುತ್ತಾಗುವುದರಲ್ಲಿ ಆಶ್ಚರ್ಯವೇನು?
ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ ।
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ ॥ - ಗೀತಾ
ಬಲವಾನಿಂದ್ರಿಯಗ್ರಾಮಃ ವಿದ್ವಾಂಸಮಪಿ ಕರ್ಷತಿ ॥ - ಎಂಬ ಆರ್ಯೋಕ್ತಿಯನ್ನು ಸಮರ್ಥಿಸುತ್ತದೆ. ಆದ್ದರಿಂದ ಸ್ತ್ರೀಸಂಗ, ಸಹವಾಸಾದಿಗಳು ಸಾಧಕನ ಪುಣ್ಯನಾಶಕ್ಕೆ ಕಾರಣವಾಗುತ್ತವೆ ಎಂದು ಭಾವ.

ಇದನ್ನು ನೋಡುತ್ತಿರಲು ಪಕ್ಷಿಗಳು 'ಈ ಮಗು ವಿಶ್ವಾಮಿತ್ರ-ಮೇನಕೆಯರ ಮಗು. ಇವಳನ್ನು ಪೋಷಿಸಿ' ಎಂದು ನುಡಿಯಲು, ಕೃಪೆಯಿಂದ ಕಣ್ವರು ತಮ್ಮ ಆಶ್ರಮಕ್ಕೆ ತಂದು ಶಕುಂತ ಪಕ್ಷಿಗಳಿಂದ ರಕ್ಷಿತ ಆದುದರಿಂದ ನನ್ನನ್ನು ಶಕುಂತಲಾ ಎಂದೇ ಕರೆದು ಸಾಕಿದರು. ಕಣ್ವರು ಅಂತೆಯೇ ನನ್ನ ಸಾಕುತಂದೆ.;

ಇದನ್ನೆಲ್ಲ ಕೇಳಿದ ರಾಜನು 'ನೀನು ರಾಜಪುತ್ರಿ ಎಂದು ಸಿದ್ಧವಾಯಿತು (ವಿಶ್ವಾಮಿತ್ರನು ಮೊದಲು ಕ್ಷತ್ರಿಯ. ನಂತರ ವರಬಲದಿಂದ ಬ್ರಾಹ್ಮಣನಾದುದು ಪ್ರಮಾಣ ಪ್ರಸಿದ್ಧವಾದುದು). ಆದ್ದರಿಂದ ನೀನು ನನ್ನ ಪತ್ನಿಯಾಗು. ನಿನಗಾಗಿ ಸುವರ್ಣಮಾಲೆ, ವಸನಗಳು, ಕುಂಡಲಗಳನ್ನೆಲ್ಲ ಕೊಡುವೆ. ಅಷ್ಟೇ ಏಕೆ? ಎಲ್ಲ ರಾಜ್ಯವು ನಿನ್ನದಾಗಲಿ. ನನ್ನನ್ನು ಗಾಂಧರ್ವ ವಿವಾಹ ವಿಧಿಯಿಂದ ಮದುವೆಯಾಗು. ಗಾಂಧರ್ವವಿವಾಹವು ಕ್ಷತ್ರಿಯರಿಗೆ ಶ್ರೇಷ್ಠವೂ ಆಗಿದೆ' ಎಂದು ರಾಜನು ನುಡಿದನು. ಶಕುಂತಲೆಯು 'ರಾಜನ್! ಫಲಗಳನ್ನು ತರಲು ಹೋಗಿರುವ ಕಣ್ವರು ಇನ್ನೊಂದು ಮುಹೂರ್ತದಲ್ಲಿ ಬರುವರು. ಅಲ್ಲಿಯವರೆಗೆ ತಡೆ, ನನ್ನನ್ನು ನಿನಗೆ ಕೊಡುವರು' ಎಂದಳು. ಆದರೆ ಅಲ್ಲಿಯವರೆಗೆ ತಡೆಯಲು ಸಿದ್ಧನಿಲ್ಲದ ರಾಜನು ಗಾಂಧರ್ವವಿಧಿಯಿಂದ ವಿವಾಹಕ್ಕೆ ಒತ್ತಾಯಿಸಿದ. ಕಾರಣ ಪರಸ್ಪರ ಒಪ್ಪಿಗೆಯಿತ್ತು[೧]. ಅದಕ್ಕೆ ಒಪ್ಪಿದ ಶಕುಂತಲೆಯು 'ಒಂದು ವೇಳೆ ನನ್ನಲ್ಲಿ ಹುಟ್ಟುವ ಮಗನಿಗೆ ನಿನ್ನ ನಂತರ ಯುವರಾಜನನ್ನಾಗಿ ಮಾಡಿದ್ದಲ್ಲಿ ನಿನ್ನೊಡನೆ ನನ್ನ ಸಂಗಮವಾಗಲಿ' ಎಂಬ ಷರತ್ತು ಹಾಕಲು, [೨]ರಾಜನೂ ವಿಚಾರಮಾಡದೇ ಒಪ್ಪಿದ. ದುಷ್ಯಂತ-ಶಕುಂತಲೆಯರ ಸಂಗಮವೂ ಆಯಿತು. ನಂತರ ಇಲಲ ಪುತ್ರನಾದ ದುಷ್ಯಂತನು 'ಶಕುಂತಲೆ ನಿನ್ನನ್ನು ಸಕಲ ರಾಜವೈಭವದೊಂದಿಗೆ ನನ್ನ ಅಂತಃಪುರಕ್ಕೆ ಕರೆಯಿಸುವೆ' ಎಂದು ಆಕೆಯನ್ನು ಬಾಹುಗಳಿಂದ ಆಲಂಗಿಸಿ, ಆಕೆಗೆ ಅಭಯ, ಭರವಸೆಗಳನ್ನು ನೀಡಿ, ರಾಜ್ಯಕ್ಕೆ ಅಮಾತ್ಯ, ಸೈನಿಕರೊಡನೆ ನಡೆದನು. ಆದರೆ ಮಾನಸ್ಸಿನಲ್ಲಿಯೇ ಕಣ್ವರು ತನ್ನ ಮೇಲೆ ಕೋಪಿಸುವರೆಂಬ ಭಯ ರಾಜನಿಗೆ ಕಾಡುತ್ತಿತ್ತು. ಮುಹೂರ್ತಕಾಲವಾದ ಮೇಲೆ ಕಣ್ವರು ಆಶ್ರಮಕ್ಕೆ ಬಂದರು. ಲಜ್ಜೆ-ನಾಚಿಕೆಯಿಂದ ಶಕುಂತಲೆ ಅವರನ್ನು ಮಾತನಾಡಿಸಲಿಲ್ಲ, ಆಕೆಗೂ ಭಯ. ಕಣ್ವರು ಧ್ಯಾನದೃಷ್ಟಿಯಿಂದ ಎಲ್ಲವನ್ನೂ ತಿಳಿದರಲ್ಲದೆ, ಆ ಬಗ್ಗೆ ತುಂಬಾ ಸಂತೋಷ ವ್ಯಕ್ತಪಡಿಸಿದರು. ಕಾರಣ ಕ್ಷತ್ರಿಯಳಿಗೆ ಗಾಂಧರ್ವವಿವಾಹವೇ ಯೋಗ್ಯವೆಂದು ಬಗೆದರು ಕಣ್ವರು. ಶಕುಂತಲೆ ಬಿನ್ನವಿಸಿದಳು. 'ಅಪ್ಪ ನಾನು ಇಲ್ಲಿಗೆ ಬಂದಿದ್ದ ದುಷ್ಯಂತನನ್ನು ನಿಮ್ಮ ಅನುಪಸ್ಥಿತಿಯಲ್ಲಿ ಪತಿಯಾಗಿ ಗಾಂಧರ್ವವಿಧಿಯಿಂದ ವರಿಸಿದೆ. ದಯವಿಟ್ಟು ರಾಜನನ್ನು

---

೧ ಸಾ ತ್ವಂ ಮಮ ಸಕಾಮಸ್ಯ ಸಕಾಮಾ ವರವರ್ಣಿನಿ।
ಗಾಂಧರ್ವೇಣ ವಿವಾಹೇನ ಭಾರ್ಯಾ ಭವಿತುಮರ್ಹತಿ॥ - ಆದಿಪರ್ವ(೭೩/೧೪)

೨ ಮಯಿ ಜಾಯೇತ ಯಃ ಪುತ್ರಃ ಸ ಭವೇತ್ ತ್ವದನಂತರಃ।
ಯುವರಾಜೋ ಮಹಾರಾಜ ಸತ್ಯಮೇತದ್ಬ್ರವೀಮಿ ತೇ॥ - ಆದಿಪರ್ವ(೭೩/೧೫)
ಏವಮಸ್ತ್ವಿತಿ ತಾಂ ರಾಜಾ ಪ್ರತ್ಯುವಾಚಾವಿಚಾರಯನ್। - ಆದಿಪರ್ವ(೭೩/೧೮)

ಅನುಗ್ರಹಿಸಿರಿ.' ಅದಕ್ಕೆ ಕಣ್ವರು 'ನಾನೀಗಾಗಲೇ ರಾಜನ ಬಗ್ಗೆ ಸಂತೋಷದಿಂದಲೇ ಇದ್ದೇನೆ. ಬೇಕಾದ ವರವನ್ನು ಕೇಳೆನ್ನಲು, ಶಕುಂತಲೆಯು 'ರಾಜನು ಸದಾ ಧರ್ಮಿಷ್ಠನಾಗಿಯೂ, ರಾಜಪದವಿಯಿಂದ ಎಂದೂ ಚ್ಯುತನಾಗದಿರಲಿ' ಎಂಬ ವರಗಳನ್ನೂ, ದುಷ್ಯಂತನ ಹಿತವನ್ನು ಮನದಲ್ಲಿಟ್ಟುಕೊಂಡೇ ಕೇಳಿದಳು. ಕಣ್ವರು 'ತಥಾಸ್ತು' ಎಂದರಲ್ಲದೆ, 'ಇಂದಿನಿಂದ ನೀನು ಮಹಾತ್ಮನಾದ ದುಷ್ಯಂತನ ಪತಿವ್ರತಾ ಪತ್ನಿಯಾಗು' ಎಂದು ಹರಸಿದರು.

ರಾಜನು ಅತ್ತ ಹಸ್ತಿನಾವತಿಗೆ ಹೋದೊಡನೆ ಇತ್ತ ಶಕುಂತಲೆಯು ರಾಜನಿಗಾಗಿ ಹಗಲೂ, ರಾತ್ರಿ ಕಾಯುತ್ತಿದ್ದಳು. ರಾಜನ ಸಂಗಮದಿಂದ ಶಕುಂತಲೆಯು ಗರ್ಭವತಿಯೂ ಆಗಿದ್ದಳು. ನವಮಾಸ ತುಂಬಿದೊಡನೆ ಮಹಾ ಪರಾಕ್ರಮಿಯಾದ ಕುಮಾರನ ಜನನವೂ ಆಯಿತು. ಮೂರು ವರ್ಷ ಬೆಳೆದ ಮಗುವಿನ ಮೇಲೆ ದೇವತೆಗಳು ಪುಷ್ಪವೃಷ್ಟಿಗರೆದರು. 'ಶಕುಂತಲೆ ನಿನ್ನ ಮಗ ಚಕ್ರವರ್ತಿಯಾಗುವನು. ನೂರು ಅಶ್ವಮೇಧ ಯಾಗಗಳನ್ನು ರಾಜಸೂಯಾದಿ ಯಜ್ಞಗಳನ್ನು ಮಾಡಿ, ಬ್ರಾಹ್ಮಣರಿಗೆ ಅಸಂಖ್ಯ ದಕ್ಷಿಣೆ ಕೊಡುವನು' ಎಂದು ಇಂದ್ರನು ನುಡಿದನು. ಕಣ್ವರು ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದರು. ಮಗುವಿಗೆ ಸರ್ವದಮನ ಎಂದು ಕರೆದರು. ಶುಭ್ರವಾದ ದಂತಪಂಕ್ತಿಗಳಿಂದ ಕೂಡಿದ ಸುಂದರ ಮಗುವಿನ ಕೈಯಲ್ಲಿ ಚಕ್ರಚಿಹ್ನೆ ಇತ್ತು. ಆರುವರ್ಷದ ಮಗು ಸಿಂಹ, ವ್ಯಾಘ್ರಗಳನ್ನು ವರಾಹ, ಮಹಿಷ, ಆನೆಗಳನ್ನು ಮರಕ್ಕೆ ಕಟ್ಟಿಹಾಕಿ ಆಶ್ರಮದ ಮುಂದೆ ಆಟವಾಡುತ್ತಿದ್ದನು. ಕುಮಾರನ ಭಯದಿಂದ ದೈತ್ಯ, ರಾಕ್ಷಸರು ಆಶ್ರಮದ ಕಡೆ ಸುಳಿಯುತ್ತಿರಲಿಲ್ಲ. ಸರ್ವದಮನ ಕುಮಾರ ನಿಜಕ್ಕೂ ಸರ್ವಕ್ರೂರ ಮೃಗ, ದೈತ್ಯರ ದಮನ ಮಾಡುವವನೇ ಆಗಿದ್ದನು. ತನ್ನನ್ನು ಕರೆಯಿಸುವ ಮಾತುಕೊಟ್ಟ ದುಷ್ಯಂತ ಇನ್ನೂ ಕರೆಯಿಸಲೆ ಇಲ್ಲ. ಅಂತೆಯೇ ಶಕುಂತಲೆ ತುಂಬಾ ದುಃಖಿತಳಾಗಿದ್ದಳು. ೧೨ ವರ್ಷಗಳವರೆಗೆ ಮಗು ಸರ್ವದಮನನಿಗೆ ಕಣ್ವರು ಶಸ್ತ್ರ ಶಾಸ್ತ್ರಾಭ್ಯಾಸ ಮಾಡಿಸಿದರು. ಶಕುಂತಲೆಗೆ 'ಮಗಳೇ! ಪತಿವ್ರತಾ ಸ್ತ್ರೀಗೆ ಪತಿಸೇವೆ ಅತಿ ಮುಖ್ಯ. ಆದ್ದರಿಂದ ಪತಿ ಬಳಿಗೆ ಮಗನೊಡನೆ ಹೋಗಿ ಮತ್ತು ಸೇವಿಸು' ಎಂದು ಹೇಳಿದ ಕಣ್ವರು ಶಿಷ್ಯರಿಗೆ 'ಶಕುಂತಲೆಯನ್ನು ರಾಜನಗರಕ್ಕೆ ಮಗನೊಡನೆ ಕರೆದುಕೊಂಡು ಹೋಗಿರಿ. [೧]ವಿವಾಹಿತ ಸ್ತ್ರೀಯರು ಬಾಂಧವರ ಮನೆಯಲ್ಲಿ ಬಹುಕಾಲ ಇರಕೂಡದು. ಇದ್ದಲ್ಲಿ ಅವರ ಕೀರ್ತಿಗೆ ಕಳಂಕ ತಟ್ಟುತ್ತದೆ, ಧರ್ಮಹಾನಿಯಾಗುತ್ತದೆ' ಎಂದರು. ಅದರಂತೆ ಶಿಷ್ಯರು ಶಕುಂತಲೆಯನ್ನು ದುಷ್ಯಂತರಾಜನ ಅರಮನೆಗೆ ಕರೆದೊಯ್ದರು. ರಾಜನಿಗೆ ನಿವೇದಿಸಿ, ಆಶ್ರಮಕ್ಕೆ ಹಿಂದಿರುಗಿದರು.

ಶಕುಂತಲೆ ಹಾಗೂ ಸರ್ವದಮನರು ರಾಜನಿಗೆ ಅಭಿನಂದಿಸಿದರು. 'ರಾಜನ್! ನಿನ್ನಿಂದ ನನ್ನಲ್ಲಿ ಕಣ್ವಾಶ್ರಮದಲ್ಲಿ ಜನಿಸಿದ ಈ ಕುಮಾರನನ್ನು ನೀನೆ ಹಿಂದೆ ಒಪ್ಪಿದಂತೆ ಪರಿಗ್ರಹಿಸಿ ಯುವರಾಜನನ್ನಾಗಿ ಸ್ವೀಕರಿಸು' ಎಂದಳು ಶಕುಂತಲೆ.

---

೧ ನಾರೀಣಾಂ ಚಿರವಾಸೋ ಹಿ ಬಾಂಧವೇಷು ನ ರೋಚತೇ ।
ಕೀರ್ತಿಚಾರಿತ್ರಧರ್ಮಘ್ನಸ್ತಸ್ಮಾನ್ನಯತ ಮಾಚಿರಮ್ ॥ - ಆದಿಪರ್ವ(೭೪/೧೨)

ಇದನ್ನು ಕೇಳಿದ ರಾಜನು ತಾನು ಕೊಟ್ಟ ಮಾತನ್ನು [೧]ಜ್ಞಾಪಿಸಿಕೊಂಡನಾದರೂ 'ನನಗೆ ಇದಾವುದೂ ಸ್ಮರಣೆಯಲ್ಲಿಲ್ಲ' ಎಂದನಲ್ಲದೇ, 'ನಿನ್ನೊಡನೆ ನಾನು ಯಾವುದೇ ಧರ್ಮಕಾಮಾರ್ಥಗಳ ಸಂಬಂಧ ಮಾಡಿಯೇ ಇಲ್ಲ. ನಿನಗೆ ಇಚ್ಛೆ ಬಂದೆಡೆ ಇರು, ಹೋಗು ಏನಾದರೂ ಮಾಡು' ಎಂದು ದುರ್ನುಡಿದನು ದುಷ್ಯಂತ. ಇದನ್ನು ಕೇಳಿದ ಶಕುಂತಲೆ ದುಃಖದಿಂದ ಸ್ತಂಭೀಭೂತಳಾದಳು. ರಾಜನ ಬಗ್ಗೆ ತುಂಬಾ ಕೋಪವೂ ಬಂದಿತು. 'ರಾಜನ್! ತಿಳಿದೂ ಸಹ ಹೀಗೆ ಸಾಮಾನ್ಯರಂತೆ ಮಾತನಾಡುವುದು ನಿನಗೆ ಶೋಭಿಸದು. ಆತ್ಮಸಾಕ್ಷಿಯ ನುಡಿ ಸತ್ಯವು ನಿನಗೂ ಗೊತ್ತು. ಆತ್ಮವಂಚನೆ ಮಾಡಿಕೊಳ್ಳಬೇಡ. ತನ್ನನ್ನೇ ವಸ್ತುಸ್ಥಿತಿಗೆ ವಿರುದ್ಧವಾಗಿ ತಿಳಿಯುವ ವ್ಯಕ್ತಿಯು ಆತ್ಮವಂಚನಕನೂ, ಕಳ್ಳನೇ ಸರಿ. ಅಂತಹವನು ಯಾವ ಪಾಪವನ್ನು ಮಾಡಲೂ ಹೇಸನಷ್ಟೇ.[೨] ನನ್ನ ನಿನ್ನ ವಿವಾಹವಾದುದಕ್ಕೆ ಸಾಕ್ಷಿಗಳಾರೂ ಇಲ್ಲವೆಂದು ಭ್ರಮಿಸಬೇಡ. ಮನುಷ್ಯನ ಪ್ರತಿಚರ್ಯೆಯನ್ನು ಸೂರ್ಯ, ಚಂದ್ರ, ವಾಯು, ಅಗ್ನಿ ಆಕಾಶ, ಭೂಮಿ, ಜಲ, ಹೃದಯ (ಮನೋಭಿಮಾನಿ ರುದ್ರ), ಯಮ, ಹಗಲು-ರಾತ್ರಿ, ಸಂಧ್ಯಾಕಾಲಗಳು, ಧರ್ಮ(ಎಂದರೆ ಈ ಎಲ್ಲ ದೇವತೆಗಳು) ನೋಡುತ್ತಿರುತ್ತಾರೆ. ಆದ್ದರಿಂದ ನಿನ್ನ ನನ್ನ ಗತಿಸಿದ ವೈವಾಹಿಕ ಸಂಬಂಧಕ್ಕೆ ಇವರೆಲ್ಲ ಸಾಕ್ಷಿಭೂತರಾಗಿದ್ದಾರೆ. ಇದನ್ನು ಒಪ್ಪದೇ ಪಾಪಕ್ಕೆ ಗುರಿಯಾಗದಿರು[೩]. ಗೌರವಾರ್ಹಳಾದ ನಿನ್ನ ಪತ್ನಿಯಾದ ಯಾಚಿಸುತ್ತಿರುವ ನನ್ನನ್ನು ಅಂಗೀಕರಿಸದ ನಿನ್ನ ಶಿರಸ್ಸು ನೂರು ಹೋಳಾದೀತು! ಎಚ್ಚರ!

ಅಷ್ಟೇ ಅಲ್ಲ! ನನ್ನಲ್ಲಿ ನೀನು ಮಗುವನ್ನೂ ಪಡೆದಿದ್ದೀಯಾ, ಪುತ್ ಎಂಬ ನರಕದಿಂದ ಪಾರುಮಾಡುವವನೇ ಪುತ್ರ ಎಂದೇ ಬ್ರಹ್ಮನ ವಾಣಿ. ಗೃಹಕೃತ್ಯದಲ್ಲಿ ಕುಶಲಳು, ಪುತ್ರವತೀ, ಪತಿಯನ್ನೇ ತನ್ನ ಪ್ರಾಣ ಎಂದು ಬಗೆದವಳು **ಭಾರ್ಯಾ** ಎನ್ನಿಸುವಳು. ಆ ಗುಣಗಳೆಲ್ಲ ನನ್ನಲ್ಲಿವೆ. ಇಂತಹ ಭಾರ್ಯೆ ಪುರುಷನಿಗೆ ಸ್ನೇಹಿತಳೂ, ಧರ್ಮಾರ್ಥಕಾಮಸಾಧಕಳೂ, ಐಶ್ವರ್ಯಪ್ರಾಪಕಳೂ ಆಗಿ ಆನಂದದಾಯಕಳಾಗಿರುತ್ತಾಳೆ. ಹೆಂಡತಿ ಯಾರೂ ಇಲ್ಲದಾಗ ಸ್ನೇಹಿತಳೂ, ಹಿತಭಾಷಿಯೂ, ಧರ್ಮಕಾರ್ಯಗಳಲ್ಲಿ ಪಿತೃಸ್ಥಾನೀಯಳೂ, ಆರ್ತನಾದ ಪತಿಗೆ ತಾಯಿಯಂತೆಯೂ ಇರುತ್ತಾಳೆ. ಪತಿಯೇ ಭಾರ್ಯಾಗರ್ಭದಿಂದ ಪುನಃ ಹೊರಬಂದು ಪುತ್ರನೆನಿಸುವನು. ನಿನ್ನ ಮಗನೇ ಆದ ಈ ಸರ್ವದಮನನನ್ನು ನೋಡಿಯಾದರೂ ಏಕೆ

---

೧ ಸೋಽಥ ಶ್ರುತ್ವೈವ ತದ್ವಾಕ್ಯಂ ತಸ್ಯಾ ರಾಜಾ ಸ್ಮರನ್ನಪಿ।
ಅಬ್ರವೀನ್ನ ಸ್ಮರಾಮೀತಿ ಕಸ್ಯ ತ್ವಂ ದುಷ್ಟತಾಪಸಿ॥ - ಆದಿಪರ್ವ(೭೪/೧೯)

೨ ಜಾನನ್ನಪಿ ಮಹಾರಾಜ ಕಸ್ಮಾದೇವಂ ಪ್ರಭಾಷಸೇ। - ಆದಿಪರ್ವ(೭೪/೨೫)
ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪದ್ಯತೇ।
ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ॥ - ಆದಿಪರ್ವ(೭೪/೨೭)

೩. ಅರ್ಚಾರ್ಹಾಂ ನಾರ್ಚಯಸಿ ಮಾಂ ಸ್ವಯಂ ಭಾರ್ಯಾಮುಪಸ್ಥಿತಾಮ್।
ಯದಿ ಮೇ ಯಾಚಮಾನಾಯಾ ವಚನಂ ನ ಕರಿಷ್ಯಸಿ॥
ದುಷ್ಯಂತ ಶತಧಾ ಮೂರ್ಧಾ ತತಸ್ತೇಽದ್ಯ ಸ್ಫುಟಿಷ್ಯತಿ॥ - ಆದಿಪರ್ವ(೭೪/೩೪,೩೭)

ಅವಮಾನಮಾಡುತ್ತಿರುವೆ? ಈ ಮಗನನ್ನು ಸ್ಪರ್ಶಿಸಿಯಾದರೂ ಸತ್ಯವರಿ. [೧]ಪುತ್ರಸ್ಪರ್ಶಕ್ಕೆ ಮಿಗಿಲಾದ ಮತ್ತೊಂದು ಸ್ಪರ್ಶಸುಖವಿಲ್ಲ. ಈ ಮಗು ಮೂರುವರ್ಷ ಮುಗಿಸಿದಾಗಲೇ ದೇವತಾವಾಣಿ ಹೇಳಿತ್ತು, ಗೊತ್ತೆ? ಇವನು ಮುಂದೆ ಅಶ್ವಮೇಧ, ರಾಜಸೂಯಯಾಗಗಳನ್ನು ಮಾಡುವನಂತೆ! ಗಾರ್ಹಪತ್ಯಾಗ್ನಿಯಿಂದ ಜನಿಸಿದ ಆಹವನೀಯಾಗ್ನಿಯಂತೆ ನಿನ್ನಿಂದ ಹುಟ್ಟಿದ ಮಗುವೇ ಇದು.

ಇನ್ನು ನನ್ನ ವ್ಯಕ್ತಿತ್ವವೂ ತುಂಬಾ ವಿಶಿಷ್ಟವಾದುದು. ಊರ್ವಶೀ ಪೂರ್ವಚಿತ್ತಿಯೇ ಮೊದಲಾದ ಆರುಜನ ಶ್ರೇಷ್ಠ ಅಪ್ಸರೆಯರಲ್ಲಿ ಒಬ್ಬಳಾದ ಮೇನಕೆಯಲ್ಲಿ ವಿಶ್ವಾಮಿತ್ರ ಬ್ರಹ್ಮರ್ಷಿಯರಿಂದ ಜನಿಸಿದವಳು ನಾನು. ಆದರೆ ಆಗಲೇ ತ್ಯಕ್ತಳಾದ ನಾನು ಬಾಲ್ಯದಲ್ಲಿಯೇ ನಿನ್ನವಳಾದೆ. ಆದರೆ ನೀನೂ ಬಿಟ್ಟ ಮೇಲೆ ಪುನರಪಿ ಆಶ್ರಮಕ್ಕೇ ಹೋಗುವೆ. ಆದರೆ ಈ ನಿನ್ನ ಮಗನನ್ನು ಮಾತ್ರ ನೀನು ತ್ಯಜಿಸುವುದು ಉಚಿತವಲ್ಲ' ಎಂದಳು ಶಕುಂತಲೆ.

'ಶಕುಂತಲೆ! ಸ್ತ್ರೀಯರು ಪ್ರಾಯಃ ಅಸತ್ಯ ನುಡಿಯುವವರು. ಮೇನಕೆಯೊಬ್ಬಳು ಬಂಧಕಿ. ವಿಶ್ವಾಮಿತ್ರನೋ ಬ್ರಾಹ್ಮಣನಾಗಬಯಸಿ ಮೇನಕೆಯ ಮೋಹಕ್ಕೆ ಬಲಿಯಾದ. ನೀನು ಒಬ್ಬ ವೇಶ್ಯೆಯಂತೆ ಮಾತನಾಡುತ್ತಿದ್ದೀ. ಏಕಾಗ್ರಚಿತ್ತನಾದ ಮಹರ್ಷಿ ಎಲ್ಲಿ? ಅಪ್ಸರಾಶ್ರೇಷ್ಠಳಾದ ಮೇನಕೆ ಎಲ್ಲಿ! ಕೃಪಣಳಾದ ನೀನೆಲ್ಲಿ! ಆಗಲೆ ಭಾರೀ ಬೆಳೆದ ಈ ಬಾಲಕ ನಿನ್ನ ಮಗ ಹೇಗಾದಾನು? ನನಗಂತೂ ಇದಾವುದೂ ತಿಳಿಯದು. ಎಲ್ಲಿಗೆ ಬೇಕೋ ಅಲ್ಲಿ ನಡೆ' ಎಂದು ದುಷ್ಯಂತ ಮತ್ತೆ ಆಕೆಯನ್ನು ಕೆಣಕಿದನು.

'ರಾಜನ್! ನಿನ್ನ ತಪ್ಪುಗಳು ಸಾಸುವೆಕಾಳಿನಂತೆ, ನಮ್ಮ ತಪ್ಪುಗಳನ್ನು ಬಿಲ್ವಫಲದಂತೆ ದೊಡ್ಡದಾಗಿ ಮಾತನಾಡುತ್ತೀ. ಮೇನಕೆ ದೇವತೆಗಳಲ್ಲಿಯೆ ಶ್ರೇಷ್ಠಳು. ನೀನು ಭೂಮಿಯಲ್ಲಿ ಮಾತ್ರ ಸಂಚರಿಸಿದರೆ ನಾನು ಭೂಮಿ-ಆಕಾಶಗಳಲ್ಲಿ ಸಂಚರಿಸಬಲ್ಲೆ. ನನ್ನ ಪ್ರಭಾವವನ್ನು ಲಘುವಾಗಿ ಭಾವಿಸಬೇಡ. ನೀನೆ ನನ್ನಲ್ಲಿ ಪಡೆದ ಪುತ್ರನನ್ನು ನೀನೆ ಅಂಗೀಕರಿಸುತ್ತಿಲ್ಲ. ಅಂತಹ ನಿನ್ನ ಐಶ್ವರ್ಯವನ್ನು ದೇವತೆಗಳು ನಾಶ ಮಾಡುವರು. ನೂರು ಕೂಪಗಳಿಗಿಂತ ವಾಪಿಯು, ೧೦೦ ವಾಪಿಗಳಿಗಿಂತ ಒಂದು ಯಜ್ಞ, ಆದರೆ ನೂರು ಯಜ್ಞಗಳಿಗಿಂತ ಒಬ್ಬ ಮಗನೂ, ೧೦೦ ಮಕ್ಕಳಿಗಿಂತ ಸತ್ಯ ಶ್ರೇಷ್ಠ ಆದ್ದರಿಂದ ಸತ್ಯ ಮನ್ನಿಸು. ಸತ್ಯಕ್ಕೆ ಮಿಗಿಲಾದ ಧರ್ಮವಿಲ್ಲ.

---

೧ ಪುತ್ರಸ್ಪರ್ಶಾತ್ ಸುಖತರಃ ಸ್ಪರ್ಶೋ ಲೋಕೇ ನ ವಿದ್ಯತೇ ॥ - ಆದಿಪರ್ವ(೭೪/೫೮)
ಅಸತ್ಯವಚನಾ ನಾರ್ಯಃ ಕಸ್ತೇ ಶ್ರದ್ಧಾಸ್ಯತೇ ವಚಃ ॥ - ಆದಿಪರ್ವ(೭೪/೭೩)
ಅಥಾಂತರಿಕ್ಷಾತ್ ದುಷ್ಯಂತಂ ವಾಗುವಾಚಾಶರೀರಿಣೀ ॥ - ಆದಿಪರ್ವ(೭೪/೧೦೯)
ಋತ್ವಿಕ್ ಪುರೋಹಿತಾಚಾರ್ಯೈಃ ಮಂತ್ರಿಭಿಶ್ಚ ವೃತಂ ತದಾ ।
ಭಸ್ತ್ರಾ ಮಾತಾ ಪಿತಃ ಪುತ್ರೋ ಯೇನ ಜಾತಃ ಸ ಏವ ಸಃ ॥ -ಆದಿಪರ್ವ (೭೪/೧೧೦)
ಭರಸ್ವ ಪುತ್ರಂ ದುಷ್ಯಂತ ಮಾವಮಂಸ್ಥಾಃ ಶಕುಂತಲಾಮ್ ।
ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ ॥ -ಆದಿಪರ್ವ(೭೪/೧೧೨)

ನನ್ನೊಡನೆ ಮಾಡಿಕೊಂಡ ಸಮಯ (ಒಪ್ಪಂದ) ಧಿಕ್ಕರಿಸಬೇಡ. ನಾನು ನಿನ್ನೊಡನೆ ಸಂಗಮ ಮಾಡಿದ್ದು ಸುಳ್ಳಾದಲ್ಲಿ, ನೀನೇ ಅದನ್ನು ವಿಶ್ವಾಸ ಮಾಡದಿದ್ದಲ್ಲಿ, ನಿನ್ನಂತಹವನ ಸಹವಾಸವೇ ಬೇಡ, ಹೊರಟುಹೋಗುವೆ. ನೀನಿಲ್ಲದಿದ್ದರೂ ನನ್ನ ಮಗ ಮುಂದೆ ಈ ವಿಶ್ವವನ್ನು ಆಳಿಯೇ ಆಳುವನು. ಇದು ಇಂದ್ರದೇವರ ಮಾತೂ ಆಗಿದೆ.' ಎಂದು ನುಡಿದ ಶಕುಂತಲೆ, ರಾಜಸಭೆಯಿಂದ ಹೊರಡಲು ಅನುವಾದಳು.

ಆಗಲೇ ಅಂತರಿಕ್ಷದಿಂದ ಅಶರೀರವಾಣಿ 'ದುಷ್ಯಂತ! ನಿನ್ನ ಮಗುವನ್ನು ಪಾಲಿಸು, ಶಕುಂತಲೆಯನ್ನು ಅವಮಾನಿಸಬೇಡ. ನೀನೇ ಈ ಮಗುವಿನ ಗರ್ಭಧಾರಣೆ ಮಾಡಿದವನು. ಶಕುಂತಲೆ ಹೇಳಿದುದು ಸತ್ಯ.... ದುಷ್ಯಂತ - ಶಕುಂತಲೆಯರ ಮಗನಾದ ಪುರುವಂಶ ಪ್ರದೀಪನಾದ ಇವನನ್ನು ನೀನು ನಮ್ಮ ಮಾತಿನಿಂದಾದರೂ ಸ್ವೀಕರಿಸು, ಭರಿಸು. ಆದ್ದರಿಂದ ಇವನು ಭರತನೆಂದೇ ಪ್ರಸಿದ್ಧನಾಗಲಿ.' ಇದನ್ನು ಕೇಳಿದ ದುಷ್ಯಂತಲೂ ತುಂಬಾ ಆನಂದದಿಂದ 'ನಾನು ಕೂಡ ಸರ್ವದಮನನನ್ನು ನನ್ನ ಮಗನೆಂದೇ ತಿಳಿದಿದ್ದೇನೆ. ಒಂದು ವೇಳೆ ಶಕುಂತಲೆಯ ಮಾತನ್ನೇ ಕೇಳಿ ಅದರಂತೆ ನಡೆದಿದ್ದರೆ ಲೋಕಕ್ಕೆ ನನ್ನ ಮಗನ ಬಗ್ಗೆ ಸಂದೇಹ ಬರುತ್ತಿತ್ತು. ಇವನು ಅಕಲಂಕನೆಂದು ಎಲ್ಲರೂ ತಿಳಿಯಲೆಂದೇ ಉದ್ದೇಶಪೂರ್ವಕವಾಗಿ ಹೀಗೆ ವರ್ತಿಸಿದೆ' ಎಂದು ನುಡಿದಾಗ, ಸಕಲ ಪ್ರಜೆಗಳೂ ಆನಂದಿಸಿದರು.

ಶಕುಂತಲೆ, ಭರತರನ್ನು ಸ್ವೀಕರಿಸಿದ ರಾಜ, ಭರತನಿಗೆ ಯೌವರಾಜ್ಯಾಭಿಷೇಕವನ್ನೂ ಮಾಡಿ ಧನ್ಯನಾದನು. ಶಕುಂತಲೆಗೆ 'ನಾನು ನಿನ್ನೊಡನೆ ವಿವಾಹವಾದುದು ರಹಸ್ಯದಲ್ಲಿ. ಕಾರಣ ನಿನ್ನ ಪಾತಿವ್ರತ್ಯ ಪಾವಿತ್ರ್ಯ ಜಗತ್ತಿಗೆಲ್ಲ ಗೊತ್ತಾಗಲೆಂದು ಹೀಗೆ ಮಾಡಿದೆ. ನನಗೂ ಪುತ್ರವತಿಯೊಬ್ಬಳನ್ನು ರಾಣಿಯಾಗಿ ಸ್ವೀಕರಿಸಿದ ಅಪವಾದ ಬರುತ್ತಿತ್ತು. ನನ್ನ ಮಾತುಗಳಿಂದಾದ ದುಃಖವನ್ನು ಮರೆತುಬಿಡು' ಎಂದು ಆಕೆಯನ್ನು ಸಮಾಧಾನ ಮಾಡಿದನು. ದುಷ್ಯಂತನು ಮುಂದೆ ನೂರುವರ್ಷ ರಾಜ್ಯವಾಳಿ ಸ್ವರ್ಗಲೋಕಕ್ಕೆ ಹೋದನು.

ಭರತನು ಮುಂದೆ ಮಹಾರಾಜನಾಗಲು, ಕಣ್ವರೇ ಅವನಿಂದ 'ಶ್ರೀಮಾನ್ ಗೋವಿತತ' ಎಂಬ ಅಶ್ವಮೇಧಯಜ್ಞ ಮಾಡಿಸಿದರು. ಆಗ ಭರತನು ಕಣ್ವರಿಗೆ ಒಂದು ಸಹಸ್ರ ಪದ್ಮಗಳನ್ನು ನೀಡಿದನು. ಭರತನಿಂದ ಭರತಖಂಡಕ್ಕೆ ಕೀರ್ತಿಯೂ, ಅವನ ವಂಶಕ್ಕೆ 'ಭರತವಂಶ'ವೆಂಬ ಹೆಸರೂ ಬಂದಿತು.ಮುಂದಿವನರೆಲ್ಲ 'ಭಾರತ' ಎಂದೇ ಹೆಸರಾದರು.

## ಸಂದೇಶಗಳು :

೧. ಧರ್ಮದಿಂದ ರಾಜ್ಯವಾಳಿದ ದುಷ್ಯಂತ ಭಗವಂತನ ವಿಶೇಷ ಸನ್ನಿಧಾನಕ್ಕೆ ಪಾತ್ರನಾದ್ದರಿಂದಲೇ ವಿಷ್ಣುಸಮನೆಂಬ ಕೀರ್ತಿಗೆ ಪಾತ್ರನಾಗಿದ್ದ. ಆದ್ದರಿಂದ –

೨. ಧರ್ಮಪಾಲನೆ ಭಗವಂತನ ವಿಶೇಷ ಸನ್ನಿಧಾನಕ್ಕೆ ಕಾರಣವಾಗುತ್ತದೆ. ಕಣ್ವರ ತಪೋವನ ಪ್ರವೇಶಿಸಿದ ದುಷ್ಯಂತನಿಗೆ ಹಸಿವು, ಬಾಯಾರಿಕೆ, ಶ್ರಮಗಳೆಲ್ಲ ಹೋದವು. ಇನ್ನು ತಪಸ್ಸನ್ನೇ ಮಾಡಿದಲ್ಲಿ, ತಪಸ್ಸಿದ್ಧಿ ಹೊಂದಿದಲ್ಲಿ ಎಲ್ಲಿಯ ಬಾಯಾರಿಕೆ, ಹಸಿವು, ಶ್ರಮ,

ದುಮ್ಮಾನಗಳು. ಆದ್ದರಿಂದಲೇ '**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ**' ಎಂದೇ ಗೀತೆ ಹೇಳುತ್ತದೆ. ಸಾಂಸಾರಿಕ ದುಃಖಶಮನಕ್ಕೆ ತಪಸ್ಸಿನ ಅನಿವಾರ್ಯತೆ ಅಷ್ಟೇ ಅನಿವಾರ್ಯ.

೩. ಶಕುಂತಲೆಯನ್ನು ಪ್ರೇಮಿಸಿದ ದುಷ್ಯಂತನ ನಿರ್ಮಲ ಮನಸ್ಸು ಆಕೆಯ ವರ್ಣವನ್ನೂ ಗುರುತಿಸಿತು. ಇಂತಹ ವಂಶದಲ್ಲಿ ಮುಂದೆ ಜನಿಸುವ ಧರ್ಮರಾಜನ ಮಾತನ್ನು ಈಗಾಗಲೇ ಹೇಳಿಯಾಗಿದೆ. ಸಜ್ಜನರ ಮನಸ್ಸು ಎಂದೂ ದುಷ್ಟ ವಿಷಯಗಳಿಗೆ ಹೋಗದು. ಪಾಂಡವರ ವರ್ಣ ಪರೀಕ್ಷೆ ಮಾಡಿದ ದ್ರುಪದ ಚರಿತ್ರೆ ಪಾಂಡವರ ಕ್ಷತ್ರಧರ್ಮ ರೀತಿಯನ್ನೂ ಇಲ್ಲಿ ಗಮನಿಸಬಹುದು.

೪. ಶಕುಂತಲೆ ಅಬಲೆ, ಅವಿವಾಹಿತಳು. ಅಂತಹವಳು ಕಣ್ವರ ಅಧೀನಳಾಗಿ ಅವಳ ವರ್ತನೆ, ಎಲ್ಲ ಅವಿವಾಹಿತ ಸ್ತ್ರೀಯರು ಹೇಗೆ ವರ್ತಿಸಬೇಕೆಂದು ತಿಳಿಸುತ್ತದೆ. ಪ್ರೇಮಿಸುವುದು ತಪ್ಪಲ್ಲದಿದ್ದರೂ ವಿವಾಹ ವಿಧಿಗಳನ್ನು ಸ್ವವಿಹಿತ ವರ್ಣದಂತೆ ವರ್ಣಸಾಂಕರ್ಯಕ್ಕೆ ಎಡೆ ಕೊಡದಂತೆ ದುಷ್ಯಂತ-ಶಕುಂತಲೆಯರು ನಡೆಸಿ ಆದರ್ಶ ಪ್ರೇಮಿಗಳಾಗಿ ಕಾಣುತ್ತಾರೆ.

೫. ಶಕುಂತಲೆಯ ತಂದೆ ವಿಶ್ವಾಮಿತ್ರರು ಮಹಾತಪಸ್ವಿಗಳಾದರೂ, ಮೇನಕೆಯ ಚೆಲುವಿಗೆ ಮರುಳಾದ ಅಜಿತೇಂದ್ರಿಯರಾಗುತ್ತಾರೆ. '**ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ । ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನ ಮಿಹ ವೈರಿಣಂ**' ಎಂಬ ಗೀತೆಯ ಮಾತು ಅಕ್ಷರಶಃ ಸತ್ಯವಾಗಿ ಇಲ್ಲಿ ಕಾಣುತ್ತದೆ. '**ಬಲವಾನ್ ಇಂದ್ರಿಯ ಗ್ರಾಮಃ ವಿದ್ವಾಂಸಮಪಿ ಕರ್ಷತಿ**' ಎಂಬುದು ಸಾರ್ವಕಾಲಿಕ ಸತ್ಯ.

೬. ತಂದೆ ತಾಯಿಗಳಿಂದ ವನದಲ್ಲಿ ತ್ಯಕ್ತಳಾದ ಶಕುಂತಲೆಯನ್ನು (ಶಿಶುವಿನ) ರಕ್ಷಣೆಯನ್ನು ಭಗವಂತನೇ ಮಾಡಿದ. ದೇವರ ಅನುಗ್ರಹವಿದ್ದವನು ಎಲ್ಲಿ ಬಿದ್ದಿದ್ದರೂ ಅವನ ರಕ್ಷಣೆ ಅಷ್ಟೇ ಸುಖಕರ.

೭. ವಿಶ್ವಾಮಿತ್ರರನ್ನು ನಮಸ್ಕರಿಸಿ ಹೋದ ಮೇನಕೆಗೆ ಆಮೇಲೆ ಅವರನ್ನು ಗೆಲ್ಲುವುದು ಅಷ್ಟೇ ಸುಲಭವಾಯಿತು. ಬ್ರಾಹ್ಮಣರನ್ನು ನಮಸ್ಕರಿಸಿದರೆ ಅವರು ಸೋತು ವಶರಾಗುತ್ತಾರೆ ದ್ರೋಣರನ್ನು ನಮಸ್ಕರಿಸಿದ ಅರ್ಜುನ ಯುದ್ಧದಲ್ಲಿ ಅವರ ಸೇನಾವ್ಯೂಹವನ್ನೇ ಭೇದಿಸಿದ. ಹಾಗೆಯೇ ಸಾತ್ಯಕಿ ಕೂಡಾ.

೮. ದುಷ್ಯಂತ-ಶಕುಂತಲೆಯರು ಧಾರ್ಮಿಕವಾಗಿ ವಿವಾಹವಾದರೂ, ಇಬ್ಬರಿಗೂ ಕಣ್ವರ ಭಯ. ಬ್ರಾಹ್ಮಣರ ಕೋಪದ ಪರಿಣಾಮ ದುಷ್ಯಂತನಿಗೆ ಗೊತ್ತಿತ್ತು. ಅಂತೆಯೇ ಪ್ರಾಯಃ ಅದಕ್ಕಾಗಿಯೇ ಏನೋ ಆತನು ತಾನೇ ವಾಗ್ದಾನ ಮಾಡಿದ್ದರೂ ಶಕುಂತಲೆಯನ್ನು ಕರೆಯಲೂ ಹೋಗಲಿಲ್ಲ, ಕರೆಯಿಸಲೂ ಇಲ್ಲ. ತಪ್ಪು ಮಾಡದಿದ್ದರೂ ದೇವರು, ಬ್ರಾಹ್ಮಣರು, ಸಮಾಜಗಳಿಗೆ ಹೆದರಬೇಕಾಗುತ್ತದೆ. ವಿವಾಹದಂತಹ ಉತ್ಸವಗಳು ಸಾರ್ವಜನಿಕವಾಗಿ ನಡೆದಾಗಲೇ ಅದಕ್ಕೆ ಮನ್ನಣೆ. ಇಲ್ಲದಿದ್ದರೆ ಲೋಕಾಪವಾದಗಳಿಗೆ ಗುರಿಯಾಗಬೇಕಾಗುತ್ತದೆ. ಸ್ವಯಂ

ರಾಮನು ಸೀತೆಯ ಪಾವಿತ್ರ್ಯ ಅರಿತೂ ತ್ಯಜಿಸಿದಂತೆ ಮಾಡಿದ, ಕುಂತಿಯು ಸಮಾಜಕ್ಕೆ ಹೆದರಿ ಜನಿಸಿದ ಮಗ ಕರ್ಣನನ್ನು ತ್ಯಜಿಸಿದಳು. ಆದ್ದರಿಂದ ದುಷ್ಯಂತನು ಶಕುಂತಲೆಯ ಪಾವಿತ್ರ್ಯ, ತನ್ನ ಪತ್ನಿ ಎಂಬ ವಿಷಯ, ಭರತನು ತನ್ನ ಮಗನೆಂಬ ವಿಚಾರ ಗೊತ್ತಿದ್ದರೂ ಅಶರೀರವಾಣಿಯನ್ನು ರಾಜಸಭೆಯಲ್ಲಿ ಕೇಳಿದ ಮೇಲೆಯೇ ಅವರನ್ನು ಪರಿಗ್ರಹಿಸಿ, ತನಗೆ, ಪತ್ನಿ-ಪುತ್ರರಿಗೆ ಬರಬಹುದಾದ ಅಪವಾದಗಳನ್ನೆಲ್ಲ ವ್ಯವಸ್ಥಿತವಾಗಿ ತಪ್ಪಿಸಿಕೊಂಡ ಆದರ್ಶ ರಾಜನಾಗಿ ಕಾಣುತ್ತಾನೆಯೇ ಹೊರತು ಆಧುನಿಕ ವಿಮರ್ಶಕರು ಭಾವಿಸಿದಂತೆ ಹೆಂಡತಿಯನ್ನು ಕಳಂಕಿಯಾಗಿ ಕಂಡ ಅವಿವೇಕಿಯಲ್ಲ. '**ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ। ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ**' ಎಂಬ ಗೀತೆಯ ಮಾತಿನ ಅನುಷ್ಠಾನವನ್ನೇ ದುಷ್ಯಂತ ಮಾಡಿದ್ದಾನೆ. ಲೋಕಾಪವಾದಭೀರುವಾಗಿ ವರ್ತಿಸಬೇಕಾದುದೇ ಎಲ್ಲರ ಕರ್ತವ್ಯ.

೯. ದುಷ್ಯಂತ ಶಕುಂತಲೆಯರ ಮಗ ತಂದೆಯಂತೆ ಧೀಮಂತ. ಮುಂದಿನ ರಾಜರಿಗೆಲ್ಲ ಆದರ್ಶ. ಹೆಸರು ಸರ್ವದಮನ, ಅದಕ್ಕೆ ತಕ್ಕಂತೆ ನಡೆ. ಹುಲಿ, ಸಿಂಹ, ಆನೆ ಮುಂತಾದ ಮೃಗಗಳನ್ನು ಕಟ್ಟಿ ಆಡುತ್ತಿದ್ದ. ಇನ್ನು ಪಾಂಡವ ಭೀಮ ತನ್ನ ಶೈಶವಲದಲ್ಲಿ ಹುಲಿ, ಸಿಂಹಗಳ ಮರ್ದನ ಮಾಡುತ್ತಿದ್ದುದು ಏನಾಶ್ಚರ್ಯ. ಅಂತೆಯೇ ಪಾಂಡವ ಭೀಮನೇ ನಿಜವಾದ ಭರತ[1]. '**ಪ್ರಾಣೋ ಹಿ ಭರತೋ ನಾಮ ಸರ್ವಸ್ಯ ಭರಣಾತ್ ಸ್ಮೃತಃ**' ಎಂಬ ಪ್ರಮಾಣ ನಿಜಕ್ಕೂ ಗಮನಿಸಬೇಕಾದುದು.

೧೦. ಹೀಗೆ ಶಕುಂತಲೋಪಾಖ್ಯಾನ ಇತಿಹಾಸವನ್ನು ಭಾರತದಲ್ಲಿ ದಾಖಲಿಸಿದ ವೇದವ್ಯಾಸರ ಕೌಶಲ್ಯ ಅಪ್ರತಿಮ, ಅಸದೃಶ. ಕಾಳಿದಾಸನ ಶಕುಂತಲೆಯ ನಾಟಕದಲ್ಲಿನ ಎಲ್ಲ ಅಂಕಗಳೂ ಅತ್ಯಂತ ಶ್ರೇಷ್ಠವಲ್ಲ, ರಮ್ಯವೂ ಅಲ್ಲ. ವಿಮರ್ಶಕರೇ ಅಭಿಪ್ರಾಯ ಪಟ್ಟಂತೆ '**ತತ್ರಾಪಿ ಚ ಚತುರ್ಥೋಂಕಃ ಶ್ಲೋಕಸ್ತತ್ರ ಚತುಷ್ಟಯಂ.**' ಶಕುಂತಲಾ ನಾಟಕದ ನಾಲ್ಕನೇ ಅಂಕ, ಅಲ್ಲಿನ ನಾಲ್ಕು ಶ್ಲೋಕಗಳು ರಮ್ಯವಾಗಿವೆ. ಆದರೆ ವ್ಯಾಸರು ರಚಿಸಿದ ಈ ಇತಿಹಾಸದಲ್ಲಿನ ಪ್ರತಿಶ್ಲೋಕ, ಶಬ್ದ, ಅಕ್ಷರಗಳು ರಮ್ಯವೆಂದು ನಿರ್ಮಲಮನಸ್ಕರಿಗೆ ಗೊತ್ತಾಗದಿರದು. ಅಂದಮಾತ್ರಕ್ಕೆ ಶಾಕುಂತಲ ನಾಟಕ ರಮ್ಯವಲ್ಲವೆಂತಾಗಲೀ, ಅದರ ಶ್ರೇಷ್ಠತೆ ಪ್ರಶ್ನಾರ್ಹವೆಂದು ಭಾವಿಸುವುದು ಅನಾವಶ್ಯಕ.

*****

೧ ಭರತನೆಂಬ ಹೆಸರಿನ ಹಲವರು ಪುರಾಣೇತಿಹಾಸಗಳಲ್ಲಿ ದಾಖಲಾಗಿದ್ದಾರೆ. ವೃಷಭನಾಮಕ ಪರಮಾತ್ಮನ ಮಗ ಭರತ (ಭಾಗವತ ೫ನೇ ಸ್ಕಂಧ); ದಶರಥರಾಜನ ಮಗ ಭರತ (ಮನ್ಮಥಾವತಾರ); ದುಷ್ಯಂತನ ಪುತ್ರ ಭರತ; ಭೀಮನ ಮತ್ತೊಂದು ಯೌಗಿಕ ಹೆಸರು ಭರತ; ಅಗ್ನಿದೇವರ ಮಕ್ಕಳು ಭರತ; ಅಗ್ನಿಯ ಒಂದು ಹೆಸರು ಭರತ; ಅಲ್ಲದೆ ನಾಟ್ಯಶಾಸ್ತ್ರಕರ್ತೃ ಭರತ. ಆದ್ದರಿಂದಲೇ ಅದಕ್ಕೆ 'ಭರತನಾಟ್ಯಶಾಸ್ತ್ರ' ಎಂಬ ಹೆಸರು. ಹೀಗೆ ವಿವಿಧ ಭರತರ ಬಗೆಗಿನ ಮಾಹಿತಿಗಳನ್ನು ಸಂಬಂಧಪಟ್ಟ ಗ್ರಂಥಗಳಿಂದ ವಿವರವಾಗಿ, ನಿಖರವಾಗಿ ತಿಳಿಯಬೇಕು.

# ೧೦. [1]ಮಹಾಭಿಷಗುಪಾಖ್ಯಾನ

[2]ಪೂರ್ವಸಮುದ್ರದ ತೀರ(ಪಶ್ಚಿಮ)ದ ತೀರ, ಸಾಲದಕ್ಕೆ ಗಂಗಾಸಾಗರಸಂಗಮ. ಈ ಪ್ರದೇಶಕ್ಕೆ ಪರ್ವಕಾಲದ ಒಂದು ಪೂರ್ಣಿಮೆಯಂದು ಬ್ರಹ್ಮದೇವರು ಆಗಮಿಸಿದಾಗ ಅವರ ಮೇಲೆ ಉಕ್ಕುತ್ತಿದ್ದ ಸಮುದ್ರದ ಜಲಬಿಂದು ಬಿದ್ದಿತು. ಕುಪಿತರಾದ ಬ್ರಹ್ಮದೇವರು ಸಮುದ್ರರಾಜನಿಗೆ 'ನೀನು ಮಹಾಭಿಷಜ' ಎಂಬ ರಾಜನಾಗಿ ಜನಿಸುವೆ. ಈ ರಾಜ ಶರೀರತ್ಯಾಗಾನಂತರ 'ಶಂತನು' ಎಂಬ ರಾಜನಾಗಿ ಹುಟ್ಟುವೆ. ಆಗಲೂ ಗಂಗೆ ನಿನಗೆ ಮೂಲರೂಪದಿಂದಲೇ ಹೆಂಡತಿಯಾಗುವಳು. ಉಕ್ಕುತ್ತಿರುವ ನೀನು ಶಾಂತನಾಗು ಎಂದು ನನ್ನಿಂದ ಹೇಳಿಸಿಕೊಂಡು ಶಾಂತನಾಗಿ, ಮತ್ತೊಂದು ಶರೀರ ಪಡೆಯುವೆ. ಆದ್ದರಿಂದ ಶಂತನು ಎಂಬ ಹೆಸರು ಹೊಂದುವೆ' ಎಂದು ಶಪಿಸಿದರು.

ಹೀಗೆ ಶಾಪಗ್ರಸ್ತ ಸಮುದ್ರರಾಜ ಇಕ್ಷ್ವಾಕುವಂಶದಲ್ಲಿ 'ಮಹಾಭಿಷಜ' ಎಂಬ ರಾಜನಾಗಿ ಅವತರಿಸಿ ಹರಿಭಕ್ತನಾಗಿ ಹಲವು ಕಾಲ ಭೂಮಿಯನ್ನು ಆಳಿದನು. ಸತ್ಯವಾದಿಯಾಗಿಯೂ, ಮಹಾಪರಾಕ್ರಮಿಯಾಗಿಯೂ ಬಾಳಿ, ೧೦೦೦ ಅಶ್ವಮೇಧ, ೧೦೦ ರಾಜಸೂಯಯಾಗಗಳನ್ನು ಮಾಡಿ ಸ್ವರ್ಗಕ್ಕೆ ಹೋದನು. ನಂತರ ಬ್ರಹ್ಮಲೋಕಕ್ಕೂ ಹೋದ ಮಹಾತ್ಮನೇ 'ಮಹಾಭಿಷಕ್' ಮಹಾನುಭಾವ.

ದೇವತೆಗಳು ಇರುವ ಬ್ರಹ್ಮಸಭೆ. ಗಂಗಾದೇವಿಯೂ ಅಲ್ಲಿ ಚಂದ್ರಕಾಂತಿಯಂತೆ ಇರುವ ಶುಭ್ರವಸ್ತ್ರ ಧರಿಸಿದ್ದಳು. ಆಗ ಬೀಸಿದ ಗಾಳಿಯಿಂದ ಆಕೆಯ ವಸ್ತ್ರ ಸಡಿಲವಾಯಿತು

---

೧ ಮಹಾಭಿಷ ಎಂದು ಔತ್ತರೇಯ ಮತ್ತು ಪೂನಾ ಭಂಡಾರಕರ್ ಪಾಠ. ಮಹಾಬಿಷಜ ಎಂದು ಮ. ತಾ. ನಿ. ಪಾಠ.
ನಿರುಕ್ತೇ 'ದ್ವೌ ಚಾಪಾರೌ ವರ್ಣವಿಕಾರನಾಶೌ' ಸತಿ ವರ್ಣವಿಕಾರನಾಶಯೋರುಕ್ತತ್ವಾತ್ ।
ಅಕಾರಸ್ಯ ಆಕಾರಾಖ್ಯ ವಿಕಾರೇ ಸತಿ ತಕಾರ ನಾಶೇ ಚ ಸತಿ ಶಾಂತತನುರಿತ್ಯರ್ಥೇ 'ಶಂತನು'ರಿತಿ ಪದಮ್ ॥
ಹೀಗೆ ಶ್ರೀವಾದಿರಾಜರು ಮ.ತಾ.ನಿ. ಭಾವಪ್ರಕಾಶಿಕೆಯಲ್ಲಿ ಶಂತನು ಶಬ್ದ ನಿರ್ವಚನ ಮಾಡಿದ್ದಾರೆ.

೨ ಪೂರ್ವೋದಧೇಸ್ತೀರಗತೇಬ್ಜಸಂಭವೇ ...... । - ಮ.ತಾ.ನಿ.(೧೧/೧೦)
'ಸಮುದ್ರೋಽಹಂ ಪುರಾ ಪೂರ್ವೇ ವೇಲಾಮಾಸಾದ್ಯ ಪಶ್ಚಿಮಾಮ್ ।
ಪರ್ವಣಾಚೇಂದು ಯುಕ್ತೇನ ತ್ರಿಭಿಕ್ಷುಬ್ಧೋಸ್ಮಿಕಾರಣೈಃ ॥
- ಹರಿವಂಶ (ಜನಾರ್ದನಭಟ್ಟೀಯ ವ್ಯಾಖ್ಯಾನ)

(ಶ್ಲಥಿತಾಂಬರಾಂ ಸ್ವಕಾಂ - ಮ.ತಾ.ನಿ.). ದೇವತೆಗಳೆಲ್ಲ ತಲೆ ತಗ್ಗಿಸಿದರೂ ಮಹಾಭಿಷಜ ರಾಜ ಆಕೆಯನ್ನು ಬ್ರಹ್ಮಸಭೆಯಲ್ಲಿಯೂ ಕಾಮ(ರಾಗ)ದಿಂದ ದಿಟ್ಟಿಸಿ ನೋಡಿದ. ಇದನ್ನು ಗಮನಿಸಿದ ಬ್ರಹ್ಮದೇವರು 'ನಾನು ಹಿಂದೆಯೇ ಶಾಪಕೊಟ್ಟ ಮೇರೆಗೆ ಭೂಮಿಯಲ್ಲಿ ರಾಜನಾಗಿ ಹುಟ್ಟು' ಎಂದು ಹೇಳಿದರು. ಕೂಡಲೇ ಮಹಾಭಿಷಜರಾಜನು ಚಂದ್ರವಂಶದ ಪ್ರತೀಪರಾಜನ ಮಗನಾಗಿ ಶಂತನು ಎಂಬ ಹೆಸರಿನಿಂದ ಹುಟ್ಟಲು ನಿರ್ಧರಿಸಿದನು (೨೮ನೇ ದ್ವಾಪರಯುಗದಲ್ಲಿ).

ಅದೇ ಸಮಯಕ್ಕೆ ಗಂಗಾದೇವಿಯೂ ಸಹ ಧೈರ್ಯಚ್ಯುತನಾದ ಮಹಾಭಿಷಕ್ ರಾಜನ ಬಗ್ಗೆ ಚಿಂತಿಸುತ್ತಾ ಬರುತ್ತಿರಲು ದಾರಿಯಲ್ಲಿ ತೇಜೋವಿಹೀನ ರೂಪವುಳ್ಳ ವಸುದೇವತೆಗಳನ್ನು ಕಂಡು ಅವರ ಪರಿಸ್ಥಿತಿಗೆ ಕಾರಣ ಕೇಳಿದಳು. ತಮ್ಮ ಅಲ್ಪಾಪರಾಧಕ್ಕೆ ವಸಿಷ್ಠರ ಶಾಪವೇ ಕಾರಣವೆಂದೂ, ಅದಕ್ಕಾಗಿ ಅವರೆಲ್ಲ ಮನುಷ್ಯರಾಗಿ ಹುಟ್ಟಬೇಕಾಗಿದೆ ಎಂದು ನಿವೇದಿಸಿದರು. ಅಲ್ಲದೆ ಮನುಷ್ಯಗರ್ಭದಲ್ಲಿ ಪ್ರವೇಶಿಸುವ ಇಚ್ಛೆ ನಮಗೆ ಇಲ್ಲ, ಕಾರಣ ನಿನ್ನ ಮಕ್ಕಳಾಗಿ ಜನಿಸುತ್ತೇವೆ. ನಮ್ಮನ್ನು ಕೂಡಲೇ ನೀರಲ್ಲಿ(ಗಂಗೆಯಲ್ಲಿ) ಹಾಕು. ನಮಗೆ ಹೆಚ್ಚು ಕಾಲ ಮನುಷ್ಯರಾಗಿರಲು ಇಚ್ಛೆಯಿಲ್ಲ' ಎಂದರು. ಗಂಗೆಯು ಅದಕ್ಕೆ ಒಪ್ಪಿ, ನಿಮ್ಮಲ್ಲಿ ಒಬ್ಬರಾದರೂ ನಮಗೆ (ಶಂತನು-ಗಂಗೆಯರಿಗೆ) ಮಗನಾಗಿ ಉಳಿಯಬೇಕು(೮ ವಸುಗಳ ಪೈಕಿ) ಎಂದರು, ವಸುಗಳೂ ಸಂತೋಷದಿಂದ ಒಪ್ಪಿದರು. 'ನಿಮ್ಮನ್ನು ಹುಟ್ಟಿದ ಕೂಡಲೇ ಕೊಂದ ಪಾಪಕ್ಕಾಗಲಿ, ನಿಮ್ಮ ಅಪ್ರಿಯತೆಯಾಗಲಿ ನನಗೆ ಉಂಟಾಗಬಾರದು' ಎಂದು ಕೇಳಲು ವಸುಗಳು ಒಪ್ಪಿದರು.

## ೧೧. ಶಾಂತನು ಉಪಾಖ್ಯಾನ

ಬ್ರಹ್ಮದೇವರ ಶಾಪದ ಮೇರೆಗೆ ವರುಣನು ಚಂದ್ರವಶಂದ ಪ್ರತೀಪರಾಜನ ಮಗನಾಗಿ ಅವತರಿಸುವ ಮುನ್ನವೇ ಒಮ್ಮೆ ಗಂಗೆಯು ಗಂಗಾದ್ವಾರ(ಹರಿದ್ವಾರ)ದ ಬಳಿ ಜಪನಿರತನಾದ ಪ್ರತೀಪರಾಜನ ಬಲತೊಡೆಯ ಮೇಲೆ ಕಾಮಿನೀ ಸ್ತ್ರೀಯಂತೆ (ಸ್ವಾಭಾವಿಕವಾಗಿ ಹಾಗೆ ಇಲ್ಲದಿದ್ದರೂ) ಬಂದು ಕುಳಿತಳು. ಅಲ್ಲದೆ ತನ್ನ ಪತಿಯಾಗು ಎಂದೂ ಪ್ರತೀಪನನ್ನು ಪ್ರಾರ್ಥಿಸಿದಾದ, ಆತನು [1]"ನೀನು ನನ್ನ ಬಲತೊಡೆಯ ಮೇಲೆ ಕುಳತಿರುವ ಕಾರಣ ನನ್ನ ಸೊಸೆಯಾಗುವೆ. ಹೆಂಡತಿಯಾಗಲಾರೆ' ಎಂದು ನುಡಿಯುತ್ತಾನೆ. ಆಗ ಗಂಗೆ, ಆಗಲಿ, ನಾನು ನಿನ್ನ ಮಗನನ್ನು ಕರಾರಿಗೆ ಒಳಪಟ್ಟು ಮದುವೆಯಾಗುವೆ. ಏನೆಂದರೆ –

೧. ನನ್ನನ್ನು ನಿನ್ನ ಮಗನು ನೀನು ಯಾರು ಎಂದು ಕೇಳಬಾರದು.

೨. ನಾನೇನೇ ಮಾಡಲಿ ಅಡ್ಡಿಪಡಿಸಬಾರದು.

೩. ಅಯೋಗ್ಯಕೆಲಸ ಮಾಡಿದಾಗಲೂ ಕಾರಣ ಕೇಳಬಾರದು' ಇವುಗಳಲ್ಲಿ ಒಂದು ಕರಾರನ್ನು ಪಾಲಿಸದಿದ್ದರೂ ನಾನು ಹೊರಟುಹೋಗುವೆ' ಎಂದು ಗಂಗೆ ಹೇಳಿದಾಗ ಪ್ರತೀಪರಾಜನು ಒಪ್ಪಿದನು.

ನಂತರ ಒಳ್ಳೆಯ ಮಗನ ಸಲುವಾಗಿ ಪ್ರತೀಪನು ತಪಸ್ಸನ್ನು ಮಾಡಲಾರಂಭಿಸಿದನು. ಅದರ ಫಲವಾಗಿ ಹುಟ್ಟಿದ ಮಗನೇ ಶಂತನು. ಈತನು ಪ್ರತೀಪನ ಮಧ್ಯಮ ಪುತ್ರ. ಹಿರಿಯ ಮಗ ದೇವಾಪಿ, ಕಿರಿಯನು ಬಾಹ್ಲೀಕ, ಮಹಾಭಿಷಜ ರಾಜನೇ ಬ್ರಹ್ಮಶಾಪದಿಂದ ಶಂತನುವಾಗಿ ಪುನಃ ಅವತರಿಸಿದನು.

*****

---

೧ ಪ್ರಾಪ್ಯ ದಕ್ಷಿಣಮೂರುಂ ಮೇ ............... ।
ಅಪತ್ಯಾನಾಂ ಸ್ನುಷಾಣಾಂ ಚ ಭೀರು ವಿದ್ಧ್ಯೇತದಾಸನಮ್ ।
ಸವ್ಯೋರುಃ ಕಾಮಿನೀ ಭೋಗ್ಯಸ್ತ್ವಯಾ ಸ ಚ ವಿವರ್ಜಿತಃ ॥
........ಸ್ನುಷಾ ಮೇ ಭವ ಸುಶ್ರೋಣಿ ಪುತ್ರಾರ್ಥಂ ತ್ವಾಂ ವೃಣೋಮ್ಯಹಮ್ ॥
– ಆದಿಪರ್ವ(೯೭/೯-೧೧)

ಭಾಗೋಹಿ ದಕ್ಷೋ ದುಹಿತುಃ ಸ್ನುಷಾಯಾಃ ಭಾರ್ಯಾಭಾಗೋ ವಾಮ ಇತಿ ಪ್ರಸಿದ್ಧಃ ॥
– ಮ.ತಾ.ನಿ.(೧೧/೩೨)

ಉವಾಚ ಸಾ (ಗಂಗಾ) ತಂ(ಪ್ರತೀಪಂ) ನ ತುಮಾಂ ಸುತಸ್ತೇ ।
ಕಾಸೀತಿ ಪೃಚ್ಛೇತ್ ನ ತು ಮಾಂ ನಿವಾರಯೇತ್ ।
ಅಯೋಗ್ಯಕರ್ತ್ರೀಮಪಿ ಕಾರಣಂ ಚ ಮತ್ಕರ್ಮಣೋ ನೈವ ಪೃಚ್ಛೇತ್ಕದಾಚಿತ್ ॥
– ಮ.ತಾ.ನಿ.(೧೧/೩೪)

## ೧೨. [೧]ಆಪವ ಉಪಾಖ್ಯಾನ

ದೇವಲೋಕದಲ್ಲಿ ಅಷ್ಟವಸುಗಳು, ಅವರಲ್ಲಿ ದ್ಯು ಕಿರಿಯ ವಸು, ಆತನ ಹೆಂಡತಿ **ವರಾಂಗಿ. ಆಕೆಗೆ ಭೂಲೋಕದಲ್ಲಿ ಸುಬಿಂದ** ಎಂಬ ರಾಜನ ಹೆಂಡತಿ ವರಾಂಗಿ ಸಖಿಯಾಗಿದ್ದಳು. ಮುಪ್ಪು, ಮರಣ ನಾಶಮಾಡುವ ಅಮೃತದಂತಹ ಹಾಲನ್ನು ಕರೆಯುವ ವಸಿಷ್ಠರ ನಂದಿನಿ ಎಂಬ ಹಸುವನ್ನು ತನ್ನ ಸಖಿ ವರಾಂಗಿಗೆ ಕೊಡಲು ದ್ಯುಪತ್ನಿ ವರಾಂಗಿ ತನ್ನ ಪತಿಗೆ (ದ್ಯು) ಪ್ರಚೋದಿಸಿದಳು. ಹೆಂಡತಿಯ ಮಾತನ್ನು ಅನುಸರಿಸಿದ ದ್ಯು ಇತರ ಸೋದರವಸುಗಳ ಸಹಾಯದಿಂದ ನಂದಿನಿಯನ್ನು ಬಂಧಿಸಿ, ಅಪಹರಿಸಿದ. ಇದನ್ನು ತಿಳಿದ ವಸಿಷ್ಠರಿಗೆ ಕೋಪ ಬಂದಿತು. ಅವರ ಅಂತರ್ಯಾಮಿಯಾದ ಬ್ರಹ್ಮದೇವರು ದ್ಯು ಹಾಗೂ ಎಲ್ಲ ವಸುಗಳಿಗೆ 'ಅಧರ್ಮದ ಹಾದಿಯಲ್ಲಿರುವ ನೀವೆಲ್ಲ ಮನುಷ್ಯರಾಗಿ ಹುಟ್ಟಿರಿ' ಎಂದು ಶಪಿಸಿದರು. ದ್ಯು ವಸುವಿಗೆ ಎಲ್ಲ ವಸುಗಳ ಆಯುಷ್ಯ ಸಿಗಲಿ, ಉಳಿದವರು ಹುಟ್ಟಿದ ಕೂಡಲೇ ಪುನಃ ಮರಣ ಹೊಂದಲಿ, ದ್ಯುವಸುವಿಗೆ ಎಂಟು ವಸುಗಳಿಗೆ ಆಗುವ ಗರ್ಭವಾಸ ಹಾಗೂ ಮರಣ ದುಃಖಗಳೂ ಆಗಲಿ. ದ್ಯುವಸುವನ್ನು ಅಧರ್ಮಮಾರ್ಗದಲ್ಲಿ ಎಳೆದ ವರಾಂಗಿಗೆ ಮನುಷ್ಯಜನ್ಮದಲ್ಲಿ ಪತಿ ಸಿಗದೆ, ಪುರುಷ ಆಶ್ರಯಹೊಂದಿ ಮುಂದೆ ಪತಿಯ ಮರಣಕ್ಕೂ ಕಾರಣವಾಗಲಿ. ದ್ಯುವಸು ಬ್ರಹ್ಮಚರ್ಯನಿಷ್ಠನಾಗಿದ್ದು ಮುಂದೆ ಶರತಲ್ಪದಲ್ಲಿದ್ದು ಮರಣ ಹೊಂದಲಿ' ಎಂದು ವಿಶಾಪವನ್ನೂ ಅನುಗ್ರಹಿಸಿದರು.

ಎಲ್ಲ ವಸುಗಳೂ ಗಂಗೆಯನ್ನು ಶರಣುಹೊಂದಿ ಆಕೆಯ ಗರ್ಭದಲ್ಲಿ ಹುಟ್ಟಿದ ಕೂಡಲೇ ತಮ್ಮನ್ನು ಕೊಲ್ಲಲು ಬೇಡಿದರು. ಗಂಗೆಯೂ ಅದಕ್ಕೆ ಒಪ್ಪಿ ತನಗೆ ಯಾವುದೇ ಪಾಪ ಬರದಿರಲೆಂದೂ, ವಸುಗಳ ಅಸಮಾಧಾನ ಬರದಿರಲೆಂದೂ ಅವರ ವಚನ ಪಡೆದಳು.

ಮುಂದೆ ಪ್ರತೀಪನ ಮಗನಾಗಿ ಅವತರಿಸಿದ ಶಂತನು, ಒಮ್ಮೆ ಗಂಗಾನದಿಯ ದಡದಲ್ಲಿ ಸಂಚರಿಸುತ್ತಾ ಇದ್ದಾಗ ಸ್ಫುರದ್ರೂಪಿಯಾದ ಸುಂದರ ಸ್ತ್ರೀಯನ್ನು ಕಂಡು ಮೋಹಗೊಂಡು, ಆಕೆಯ ಮೇಲೆ ಹೇಳಿದ ಕರಾರುಗಳಿಗೆ ಒಳಪಟ್ಟು ಆಕೆಯನ್ನು ಮದುವೆಯಾದನು. ಕಾಲಕ್ರಮೇಣ ಗಂಗೆಯು ಶಂತನುವನ್ನು ಸಂಭೋಗ, ಸ್ನೇಹ, ಜಾಣ್ಮೆ ಹಾಗೂ ಹಾವಭಾವಗಳಿಂದ ಸಂತೋಷಪಡಿಸುತ್ತಾ ೮ ಮಕ್ಕಳನ್ನು ಪಡೆದಳು. ಪ್ರಸವಿಸಿದ ಕೂಡಲೇ

---

೧ ವರುಣನ ಮಗನಾದ ವಸಿಷ್ಠರು ಆಪವ ಎಂಬ ಖ್ಯಾತನಾಮರೂ ಆಗಿದ್ದಾರೆ. – ಆದಿಪರ್ವ(೯೯/೫)

ಎಲ್ಲ ಮಕ್ಕಳನ್ನೂ ಗಂಗೆಯಲ್ಲಿ ಮುಳುಗಿಸಿ ಕೊಲ್ಲುತ್ತಿದ್ದಳು. ಇದೆಲ್ಲ ನೋಡುತ್ತಾ ಆಕೆ ಎಲ್ಲಿ ತನ್ನನ್ನು ಬಿಟ್ಟು ಹೋಗುವಳೋ ಎಂಬ ಭಯದಿಂದ ಸಹಿಸಿಕೊಂಡೇ ಶಂತನು ಇದ್ದನು. ಆದರೆ ೮ನೇ ಮಗುವನ್ನು ನದಿಯಲ್ಲಿ ಮುಳುಗಿಸಿ ಕೊಲ್ಲಲು ಹೋದಾಗ, ಏಳೂ ಮಕ್ಕಳನ್ನು ಕಳೆದುಕೊಂಡ ದುಃಖಾರ್ತನಾದ ಶಂತನು 'ನೀನಾರು? ಮಕ್ಕಳನ್ನು ಕೊಲ್ಲುತ್ತೀಯಲ್ಲ? ನೋಡಲು ಸುರವರಸ್ತ್ರೀಯಂತೆ ಇರುವೆ? ಯಾವ ಕಾರಣಕ್ಕೆ ಕೊಲ್ಲುತ್ತಿದ್ದೀ? ದಯವಿಟ್ಟು ನನಗೆ ಈ ವಿಷಯ ತಿಳಿಯಲು ಅರ್ಹತೆ ಇದ್ದಲ್ಲಿ ತಿಳಿಸು' ಎಂದು ನುಡಿಯಲು ಆಕೆ(ಗಂಗೆ) 'ನಾನು ಗಂಗಾ- ನಿನ್ನ ಹೆಂಡತಿಯೆ. ವಸುದೇವತೆಗಳಿಗೆ ಕೊಟ್ಟ ಮಾತಿನ ಮೇರೆಗೆ ಅವರನ್ನು ಕೊಂದೆ. ಅವರಿಗೆ(ಆಪವ)ವಸಿಷ್ಠರ (ಅವರಲ್ಲಿದ್ದ ಬ್ರಹ್ಮದೇವರ) ಶಾಪವಿದ್ದಿತು. ಆದ್ದರಿಂದಲೇ ಕೊಂದೆ. ಆದರೆ ಈ ಮಗುವನ್ನು ನಿನ್ನ ಇಚ್ಛೆಯಂತೆ ಕೊಲ್ಲುವುದಿಲ್ಲ. ಇವನು ಎಲ್ಲ ವಸುಗಳ ಶಕ್ತಿಯಿಂದ ಕೂಡಿಕೊಂಡು ಮಹಾಬಲಿಷ್ಠನೂ, ಕೀರ್ತಿಶಾಲಿಯೂ ಆಗುವನು. ನಿನ್ನೊಡನೆ ಮದುವೆಯ ಮೊದಲು ಮಾಡಿಕೊಂಡ ನಿಯಮದ ಮೇರೆಗೆ ನಾನಿನ್ನು ನಿನ್ನೊಡನೆ ಇರಲಾರೆ, ಹೋಗುವೆ, ನಿನಗೆ ಮಂಗಳವಾಗಲಿ' ಎಂದು ನುಡಿದು, ಗಂಗೆಯು ಅಲ್ಲಿಯೇ ಅಂತರ್ಧಾನನಾದಳು. ಹೀಗೆ ಅಷ್ಟವಸುಗಳ ಪೈಕಿ ಭೂಮಿಯಲ್ಲಿ ಹುಟ್ಟಿದೊಡನೆ ಗಂಗೆಯಿಂದ ಗಂಗೆಯಲ್ಲಿಯೇ ಹೋದ(ದೇಹಬಿಟ್ಟ) ೭ ವಸುಗಳ ಆಯುಷ್ಯವನ್ನು ಪಡೆದು ಜನಿಸಿದ ಮಹಾನುಭಾವನೇ ೮ನೇ ವಸು ದ್ಯು. ದೇವವ್ರತನೆಂದು ಪ್ರಖ್ಯಾನತಾಗಿ ನಂತರ ಭೀಷ್ಮನಾಗಿ ಕೀರ್ತಿವಂತನಾಗುತ್ತಾನೆ.

**ಸಂದೇಶಗಳು-ವಿವರಣೆಗಳು**

ವರುಣನಂತಹ ದೇವತೆಗೂ ಬ್ರಹ್ಮದೇವರ ಸಭೆಯಲ್ಲಿ ಕಾಮದ ಪ್ರಭಾವವಾಯಿತೆಂದರೆ ಉಳಿದವರ ಪಾಡೇನು? ಅಂತೆಯೇ ವರುಣನೂ ಕಲ್ಯಾದಿದೈತ್ಯವಿದ್ಧನೆಂದೇ ಅರ್ಥ (ಭಿನ್ನ ಭಾಗವತಧರ್ಮ). ಆದರೆ ಅಂತಹವರಿಗೆ ಬ್ರಹ್ಮನ ಶಾಪ ತಟ್ಟುತ್ತೆ ಎಂದರೆ ಸತ್ಯಲೋಕದಿಂದ ಚ್ಯುತರಾಗುವರು. ಆದ್ದರಿಂದ ಬ್ರಹ್ಮದೇವರ ಸನ್ನಿಧಾನವೆಂದರೆ ಆಚಾರ್ಯಶಾಸ್ತ್ರಪ್ರಸಂಗವಿರುವಾಗ ಪತ್ನೀಸಂಗವೂ, ನೋಟವೂ ತ್ಯಾಜ್ಯವೆಂದು ಭಾವ. ಇಲ್ಲದಿದ್ದರೆ ಆಧ್ಯಾತ್ಮಸಾಧನೆ ಕುಂಠಿತಗೊಳ್ಳುತ್ತದೆ (ಕಾಮ ಏಷ ಕ್ರೋಧ ಏಷ... ವಿದ್ಧ್ಯೇನ ಮಿಹ ವೈರಿಣಂ - ಗೀತಾ). ಆದರೆ ವರುಣನು ಭೂಮಿಯಲ್ಲಿ ಅವತರಿಸಿದರೂ ನೂರಾರು ಅಶ್ವಮೇಧ, ರಾಜಸೂಯ ಮಾಡಿದ - ಪುಣ್ಯಾತ್ಮ ದೇವತೆಯಾದ್ದರಿಂದ.

ಬ್ರಹ್ಮದೇವರಿಗೆ ಸಮುದ್ರ ಜಲಬಿಂದು ತಾಗಿಸಿದ್ದೂ ಅಪರಾಧವೇ ಆಯಿತು. ಎಂದರೆ ಸ್ವೋತ್ತಮರ ಮೇಲೆ ಇತರರು ಎಷ್ಟೇ ಶುದ್ಧವಾಗಿದ್ದರೂ ಜಲಾದಿಗಳ ವಿಕ್ಷೇಪ ಅವರ ದ್ರೋಹಕ್ಕೆ ಕಾರಣವಾಗುತ್ತದೆ. ಅವರಿಂದ ದೂರವಿರುವುದೇ ಲೇಸು. ಕಾರಣ ಶುಚಿಯ ಮಟ್ಟ ಅಧಿಕಾರಿಗಳಿಂದ ಅಧಿಕಾರಿಗಳಿಗೆ ಬೇರೆಯೇ ಆಗಿರುತ್ತದೆ. ಸಾಲದ್ದಕ್ಕೆ ಪರ್ವಕಾಲ ಬೇರೆ.

ದ್ಯುನಾಮಕ ವಸು ತನ್ನ ಹೆಂಡತಿಯ ಮಾತಿನ ಮೇರೆಗೆ ವಸಿಷ್ಠರ ನಂದಿನೀ ಧೇನುವನ್ನು ಅಪಹರಿಸಿದ ಪ್ರಸಂಗ ಎಷ್ಟು ಅನರ್ಥಕ್ಕೆ ಕಾರಣವಾಯಿತು? ಊಹಿಸಲೂ ಅಸಾಧ್ಯ. ಪತ್ನಿಯ ಆಸೆ-ಆಕಾಂಕ್ಷೆಗಳನ್ನು ನಡೆಯಿಸುವ ಬಗ್ಗೆ ವಿವೇಕ ಅವಶ್ಯ. ಆದ್ದರಿಂದ ೮ ವಸುಗಳ ಜನ್ಮದುಃಖ, ಮೃತ್ಯುಕಾಲೀನ ದುಃಖಗಳನ್ನು ಅನುಭವಿಸಲು ದೇವಲೋಕ ಬಿಟ್ಟು ನರಲೋಕದಲ್ಲಿ ೮೦೦ ವರ್ಷಗಳಷ್ಟು ದೀರ್ಘಕಾಲ ದ್ಯುವಸು ಬಾಳಬೇಕಾಯಿತು. ಹೆಂಡತಿಯ ದಾಸನೇ ಆದಲ್ಲಿ ಅಂತಹ ಪತಿಗಾಗುವ ಅನರ್ಥಗಳ ಸರಮಾಲೆ ಊಹಿಸಲೂ ಅಸಾಧ್ಯವೆಂದು ಪ್ರತಿಯೊಬ್ಬ ಗೃಹಸ್ಥನೂ ತಿಳಿದುಕೊಂಡು ಹೆಂಡತಿಯ ಧಾರ್ಮಿಕ ಆಸೆ-ಆಕಾಂಕ್ಷೆಗಳನ್ನು ಮಾತ್ರ ಈಡೇರಿಸುವ ದೃಷ್ಟಿಕೋನವಿಟ್ಟುಕೊಳ್ಳಬೇಕೆಂಬುದು ಈ ಪ್ರಸಂಗದ ಭಾವ. ಅಷ್ಟೇ ಅಲ್ಲದೇ ದ್ಯುವಸು ಭೀಷ್ಮರಾದ ಮೇಲೆ ದುರ್ಯೋಧನನ ಪರವಾಗಿರಬೇಕಾಯಿತು. ಇವೆಲ್ಲ ಪ್ರತಿಕ್ರಿಯೆಗಳ ಸರಮಾಲೆ. ಇಷ್ಟರ ಮಧ್ಯೆಯೂ ದೇವವ್ರತನ ಸಾಧನೆ, ಭೀಷ್ಮರ ಸಾಧನೆ, ಕೃಷ್ಣನ ಮೆಚ್ಚುಗೆಗೆ ಪಾತ್ರವಾಯಿತು. ೪೭೫ ವರ್ಷಗಳವರೆಗೆ ದೇವವ್ರತನ ಶಸ್ತ್ರಶಾಸ್ತ್ರಾಧ್ಯಯನಗಳು ಅವರ ಸಾಧನೆಯ ಮತ್ತೊಂದು ಮುಖ. ಅವರ ಅಖಂಡ ಬ್ರಹ್ಮಚರ್ಯ, ಕೃಷ್ಣದೀಕ್ಷೆ, ಪಾಂಡವರ ಬಗೆಗಿನ ಪಕ್ಷಪಾತಗಳು ಅವರ ದೈವೀ ಸ್ವಭಾವವನ್ನು ನಿರೂಪಿಸುವ ಅಂಶಗಳು.

*****

## ೧೩. ಸತ್ಯವತೀ ಲಾಭೋಪಾಖ್ಯಾನ

ಪ್ರತೀಪರಾಜನ ಮಗನಾಗಿ ಜನಿಸಿದ ಮಹಾಭಿಷಕ್ ಶಂತನು ಎಂಬ ಹೆಸರಿನಿಂದ ಪ್ರಸಿದ್ಧ ರಾಜನಾಗಿದ್ದನು. ಗಂಗಾದೇವಿಯೆ ಆತನಿಗೆ ಪತ್ನಿಯಾಗಿದ್ದಳು ಮೂಲರೂಪದಿಂದ. ಆದರೆ ಶಂತನುವಿಗೆ ಕೊನೆಯ ಮಗು (೮ನೇ ವಸು ದ್ಯು) ಹುಟ್ಟುವವರೆಗೆ ಅದು ತಿಳಿದಿರಲಿಲ್ಲ. ಕೊನೆ ಮಗು ಹುಟ್ಟಿದೊಡನೆ ಗಂಗೆ ತನ್ನ ದೇವತ್ವವನ್ನು ಬಹಿರಂಗಪಡಿಸಿ, ಹಿಂದೆ ಮಾಡಿದ ಕರಾರಿನ ಪ್ರಕಾರ ದೇವಲೋಕಕ್ಕೆ ಹೊರಟಳಷ್ಟೇ. ಪರೋಕ್ಷಪ್ರಿಯರಾದ ದೇವತೆಗಳು ಎಂದೂ ತಮ್ಮ ಸ್ವರೂಪವನ್ನು ಪ್ರದರ್ಶಿಸುತ್ತಾ ಭೂಮಿಯಲ್ಲಿ ಇರುವುದಿಲ್ಲ. ಇದೇ ದೇವರಹಸ್ಯ. ಗಂಗೆ ಹೋಗುವಾಗ ದೇವವ್ರತನನ್ನು (ಮಗನನ್ನು) ಕರೆದುಕೊಂಡು ವರುಣಾಲಯಕ್ಕೆ ಹೋದಳು. ನಂತರ ದೇವವ್ರತನಿಗೆ ಬೃಹಸ್ಪತ್ಯಾಚಾರ್ಯರಲ್ಲಿ ೫೦ವರ್ಷ ವೇದಾಧ್ಯಯನ, ಪರಶುರಾಮರಲ್ಲಿ ೫೦ವರ್ಷ ಶಾಸ್ತ್ರತತ್ತ್ವಶ್ರವಣ, ೨೫ವರ್ಷ ಅಸ್ತ್ರಾಭ್ಯಾಸ ಮಾಡಿಸಿ, ಪುನಃ (ಶಂತನು) ಪತಿಗೆ ಮಗನನ್ನು ಸಮರ್ಪಿಸಿದಳು. ಮತ್ತೆ ದೇವವ್ರತನು ಬೃಹಸ್ಪತ್ಯಾಚಾರ್ಯರಲ್ಲಿ ೫೦ವರ್ಷ ವೇದಾಧ್ಯಯನ, ೩೦೦ವರ್ಷ ಪರಶುರಾಮರಲ್ಲಿ ಅಸ್ತ್ರಾಭ್ಯಾಸ ಮಾಡಿ ಸರ್ವಜ್ಞನೇ ಆದನು. ಇಂತಹ ವಿದ್ಯಾವಂತ ಪುತ್ರನೊಡನೆ ಶಂತನು ೪ವರ್ಷಕಾಲ ತುಂಬಾ ಆನಂದದಿಂದ ಇದ್ದನು. ಅಲ್ಲದೆ ಯುರಾಜನನ್ನಾಗಿಯೂ ಅಭಿಷೇಕ ಮಾಡಿದನು.

ಇದೇ ಸಮಯಕ್ಕೆ ಸರಿಯಾಗಿ ಒಮ್ಮೆ ಶಂತನುರಾಜನು ಯಮುನಾ ನದಿಕಡೆ ಬೇಟೆಗಾಗಿ ಹೋದಾಗ ಆ ಪ್ರದೇಶವೆಲ್ಲ ಸುಗಂಧಮಯವಾದುದನ್ನು ಆಘ್ರಾಣಿಸಿ (ವಾಸನೆ ಹೊಂದಿ) ಸುತ್ತಲೂ ತಿರುಗಾಡಿದನು. ಆಗ ಆತನು ದೇವತೆಯಂತಿರುವ ಒಬ್ಬ ಕನ್ಯೆಯನ್ನು ನೋಡಿದನು. ಆಕೆ ಬೇರಾರೂ ಆಗಿರದೇ ಪರಾಶರರಿಂದ ಅನುಗ್ರಹೀತಳಾದ ಸತ್ಯವತೀ ಎಂಬ ಖ್ಯಾತನಾಮಳಾದವಳೇ ಆಗಿದ್ದಳು. ನೀನ್ಯಾರು ಎಂದು ರಾಜನು ಆಕೆಯನ್ನು ಕೇಳಲು 'ನಾನು ಬೆಸ್ತರಾಜನ ಕನ್ಯೆ, ಸಾಕುಮಗಳು. ನಮ್ಮ ತಂದೆಯ ಆಜ್ಞೆಯ ಮೇರೆಗೆ ನಾನು ಧರ್ಮಾರ್ಥವಾಗಿಯೇ ಜನರನ್ನು ನದೀ ದಾಟಿಸುವೆನು' ಎಂದಳು. ರೂಪ, ಮಾಧುರ್ಯ, ಸುಗಂಧ ಬೀರುವ ಶರೀರಕಾಂತಿಗಳಿಂದ ಕೂಡಿದ ದೇವತೆಗಳ ರೂಪ ಹೋಲುವ ಆಕೆಯನ್ನು ರಾಜ ಶಂತನು ಕಾಮಿಸಿದನು. ನಂತರ ಆಕೆಯ ತಂದೆಯ ಬಳಿಗೆ ಹೋಗಿ ಆಕೆಯನ್ನು

ತನಗೆ ಧಾರೆ ಎರೆಯಲು ಕೋರಿದನು. ದಾಶರಾಜನು ರಾಜನನ್ನು ಸತ್ಕರಿಸಿ, 'ರಾಜನ್! ನಿನ್ನ ಸಮನಾದ ವರ ಬೇರೆ ಯಾರಿದ್ದಾರೆ? ಆದರೆ ನನ್ನ ಮಾತನ್ನು ನಡೆಸಿಕೊಟ್ಟಲ್ಲಿ ಕನ್ಯಾದಾನ ಮಾಡುವೆ' ಎಂದನು. ಅದಕ್ಕೆ ರಾಜನು 'ನಿನ್ನ ವರವನ್ನು ತಿಳಿದ ನಂತರ ವಾಗ್ದಾನ ಕೊಡಲು ಯೋಗ್ಯವಾಗಿದ್ದರೆ ನಡೆಸಿಕೊಡುವೆ' ಎಂದನು. ದಾಶರಾಜನು 'ಈಕೆಯಲ್ಲಿ ಜನಿಸುವ ಪುತ್ರನೇ ನಿನ್ನ ಉತ್ತರಾಧಿಕಾರಿ ಚಕ್ರವರ್ತಿಯಾಗಬೇಕು, ಅದೇ ನನ್ನ ಆಸೆ' ಎಂದನು. ರಾಜನಿಗೆ ಇದು ರುಚಿಸಲಿಲ್ಲ. ಆದರೆ ಕನ್ಯೆಯನ್ನು ಮನಸಾರೆ ಮೋಹಿಸಿದ ರಾಜನು ಕಾಮಾಗ್ನಿಯಿಂದ ಚಿಂತೆಗೀಡಾಗಿ[೧] ಏನೂ ಉತ್ತರಿಸದೇ ಹಸ್ತಿನಾಪುರಕ್ಕೆ ಹಿಂದಿರುಗಿದನು. ಚಿಂತಾಕ್ರಾಂತನಾದ ರಾಜ ಕೆಲದಿನ ಮೌನವಾಗಿಯೇ ಇದ್ದಾಗ, ರಾಜನನ್ನು ದೇವವ್ರತನು ರಾಜನ ವ್ಯಸನಕ್ಕೆ ಕಾರಣ ಕೇಳಿದನು. ರಾಜನು ನೇರವಾಗಿ ತನ್ನ ಆಶಯವನ್ನು ತಿಳಿಸಿದೆ 'ದೇವವ್ರತ, ಯದ್ಯಪಿ ನೀನು ಮಹಾಪೌರುಷಶಾಲಿ, ಧರ್ಮನಿಷ್ಠ ನೂರು ಮಕ್ಕಳಿಗೆ ಸಮಾನ; ನಿನಗೆ ವಿಪತ್ತುಗಳೂ ಬರದಿರಬಹುದು, ಆದಾಗ್ಯೂ ನೀನು ಯಾವುದಾದರೂ ಕಾರಣದಿಂದ ಸಮರದಲ್ಲಿ ಪ್ರಾಣತ್ಯಾಗ ಮಾಡಿದಲ್ಲಿ, ಭರತವಂಶದ ಗತಿ ಏನು?'

ಹೀಗೆ ನುಡಿದ ತಂದೆಯ ಮಾತಿನ ಅಂತರ್ಯ ರಾಜನ ಸಾರಥಿಯಿಂದ ತಿಳಿಯಿತು. ಕೂಡಲೇ ದೇವವ್ರತನು ಹಿರಿಯರಿಂದ ಕೂಡಿಕೊಂಡು ನೇರವಾಗಿ ಬೆಸ್ತರ ರಾಜನ ಮನೆಗೆ ಹೋಗಿ ತಂದೆಯ [೨]ಸಲುವಾಗಿ ಕನ್ಯಾದಾನ ಮಾಡಿಕೊಡಲು ದಾಶರಾಜನನ್ನು ಪ್ರಾರ್ಥಿಸಿದನು. ದಾಶರಾಜನು ಹಿಂದಿನ ಕರಾರನ್ನೇ ಹಾಕಿದಾಗ ದೇವವ್ರತನು [೩]ಸತ್ಯವತಿಯಲ್ಲಿ ಹುಟ್ಟುವ ಮಗನೆ ನಮಗೆ ರಾಜನಾಗುವನು. ಆದರೆ ದಾಶರಾಜ ಪುನಃ 'ನಿನಗೆ ಮಕ್ಕಳಾದಲ್ಲಿ ಅವರ ಬಗ್ಗೆ ನನಗೆ ಸಂಶಯವಿದೆ' ಎನ್ನಲು, ದೇವವ್ರತನು ದಾಶರಾಜನ ಸಭೆಯಲ್ಲಿ ಎಲ್ಲ ರಾಜರ ಮಧ್ಯೆಯೇ [೪]'ಇಂದಿನಿಂದ ನಾನು ಬ್ರಹ್ಮಚಾರಿಯಾಗಿಯೇ ಇರುತ್ತೇನೆ. ಅಪುತ್ರನಾದರೂ ನನಗೆ ಶಾಶ್ವತ ಲೋಕಗಳು ಇವೆ' (ಸದ್ಗತಿ ಇದ್ದೇ ಇದೆ). ಇದರಿಂದ ಸಂತೋಷಗೊಂಡ ದಾಶರಾಜನು ಶಂತನುವಿಗೆ ಸತ್ಯವತೀಯನ್ನು ಕೊಡಲು ಒಪ್ಪಿದನು. ದೇವವ್ರತನ ಈ ದೇವತೋಷಕರವಾದ ಪ್ರತಿಜ್ಞೆಯು ದೇವತೆಗಳಿಂದ ಮತ್ತು ಋಷಿಗಳಿಂದ ಶ್ಲಾಘಿಸಲ್ಪಟ್ಟಿತಲ್ಲದೆ, ಅವರು ಪುಷ್ಪವೃಷ್ಟಿಯನ್ನು ಮಾಡಿ, ಈ ಭಯಂಕರ ವ್ರತ ಮಾಡಿದ್ದರಿಂದ ದೇವವ್ರತನನ್ನು **ಭೀಷ್ಮನೆಂದು ಕರೆದರು:**

---

೧ ತಚ್ಚಿಂತಯಾ ಮ್ಲಾನಮುಖಂ ಜನಿತ್ರಂ ದೃಷ್ಟ್ವೈವ ದೇವವ್ರತ ಆಶ್ವಪೃಚ್ಛತ್ ।
ತತ್ಕಾರಣಂ ಸಾರಥಿಮಸ್ಯ ತಸ್ಮಾತ್ ಶ್ರುತ್ವಾಖಿಲಂ ದಾಶಗೃಹಂ ಜಗಾಮ ॥ -ಮ.ತಾ.ನಿ.(೧೧/೭೬)

೨ ಅಭಿಗಮ್ಯ ದಾಶರಾಜಂ ಕನ್ಯಾಂ ವವ್ರೇ ಪಿತುಃ ಸ್ವಯಮ್ ॥ - ಆದಿಪರ್ವ(೧೦೦/೭೫)

೩. ಯೋಽಸ್ಯಾಂ ಜನಿಷ್ಯತೇ ಪುತ್ರಃ ಸ ನೋ ರಾಜಾ ಭವಿಷ್ಯತಿ ॥ - ಆದಿಪರ್ವ(೧೦೦/೮೭)

೪ ಅದ್ಯ ಪ್ರಭೃತಿ ಮೇ ದಾಶ ಬ್ರಹ್ಮಚರ್ಯಂ ಭವಿಷ್ಯತಿ ।
ಅಪುತ್ರಸ್ಯಾಪಿ ಮೇ ಲೋಕಾಃ ಭವಿಷ್ಯಂತ್ಯಕ್ಷಯಾ ದಿವಿ ॥ - ಆದಿಪರ್ವ(೧೦೦/೯೬)

ತತೋಽಂತರಿಕ್ಷೇಽಪ್ಸರಸೋ ದೇವಾಃ ಸರ್ಷಿಗಣಾಸ್ತದಾ ।
ಅಭ್ಯವರ್ಷಂತ ಕುಸುಮೈರ್ಭೀಷ್ಮೋಽಯಮಿತಿ ಚಾಬ್ರುವನ್ ॥
- ಆದಿಪರ್ವ(೧೦೦/೯೮)

..... ನಾಹಂಕರವಾಣಿ ರಾಜ್ಯಂ । .... ವ್ಯೇತೂರ್ಧ್ವರೇತಾಃ ಸತತಂ ಭವಾನಿ... ।
ಭೀಮವ್ರತತ್ವಾದಿ ತದಾಽಸ್ಯ ನಾಮ ಕೃತ್ವಾ ಭೀಷ್ಮ ಇತಿ ಹ್ಯಚೀಕ್ಲೃಪನ್ ॥
- ಮ.ತಾ.ನಿ.(೧೧/೭೭,೭೮)

ನಂತರ ಭೀಷ್ಮರು ಸತ್ಯವತಿಯನ್ನು ಕರೆದುತಂದು ತಂದೆಗೆ ಸಮರ್ಪಿಸಿದರು. ಸಂತೋಷಗೊಂಡ ತಂದೆ ಭೀಷ್ಮರ ಅಪಾರ ತ್ಯಾಗಕ್ಕೆ ಮೆಚ್ಚಿ ಸ್ವಚ್ಛಂದಮೃತ್ಯುತ್ವ(ಸ್ವೇಚ್ಛಾ-ಮರಣ), ಶತ್ರುಗಳಿಂದ ಅಜೇಯತ್ವ ಹಾಗೂ ಬಲಾತ್ಕಾರವಾಗಿ ಗ್ರಹಣವಾಗದಂತಹ ವರ-ಗಳನ್ನು ಕೊಟ್ಟನು. ಮನಮೆಚ್ಚಿದ ಮಡದಿ ಸತ್ಯವತೀಯೊಡನೆ ಶಂತನು ಬಹುವರ್ಷಗಳವರೆಗೆ ಸುಖವಾಗಿ ಬಾಳಿದನು. ಆತನ ಪರಿಶುದ್ಧವಾದ ಮನಸ್ಸು ಬಯಸಿದ್ದು ಕೊನೆಗೆ ಭಗವಚ್ಚಿತ್ತಕ್ಕೂ ಬಂದು ಸತ್ಯವತೀಯನ್ನು ಪಡೆದ ಪ್ರಸಂಗವೇ 'ಸತ್ಯವತೀಲಾಭ' ಉಪಾಖ್ಯಾನದ ಸಾರ.

ಸತ್ಯವತೀ ಕ್ಷತ್ರಿಯಳು, ಶಂತನು ಕ್ಷತ್ರಿಯ. ಆತ ಬಯಸಿದ್ದು ತಪ್ಪಾಗಲಿಲ್ಲ.

*****

# ೧೪. ಚಿತ್ರಾಂಗದೋಪಾಖ್ಯಾನ

ಸತ್ಯವತೀದೇವಿಯನ್ನು ಮದುವೆಯಾದ ಶಂತನು ಆಕೆಯಿಂದ ಚಿತ್ರಾಂಗದ ಹಾಗೂ ವಿಚಿತ್ರವೀರ್ಯರೆಂಬ ಮಕ್ಕಳನ್ನು ಪಡೆದನು. ಮಕ್ಕಳು ಇನ್ನೂ ಚಿಕ್ಕವರಾಗಿದ್ದಾಗಲೇ ಶಂತನುರಾಜ ಜೀರ್ಣಗೊಂಡ ತನ್ನ ಶರೀರವನ್ನು ನೋಡಿ [1]'ಇಂತಹ ಶರೀರದಿಂದ ಯಾವ ಸಾಧನೆಯು ತಾನೇ ಸಾಧ್ಯವಾದೀತು?' ಎಂದು ಬಗೆದು ಸ್ವೇಚ್ಛೆಯಿಂದಲೇ ದೇಹತ್ಯಾಗ ಮಾಡಿ, ತನ್ನ ಮೂಲಸ್ವರೂಪ ಸೇರಿಕೊಂಡನು. ಭೀಷ್ಮರು ತಂದೆಯ ಉತ್ತರಕ್ರಿಯೆಯನ್ನು ಮಾಡಿದರು. ನಂತರ ದಾಶರಾಜನಿಗೆ ಮಾತು ಕೊಟ್ಟಂತೆ ಚಿತ್ರಾಂಗದನಿಗೆ ಪಟ್ಟಕಟ್ಟಿ ವಿಚಿತ್ರವೀರ್ಯನನ್ನು ಯುವರಾಜನನ್ನಾಗಿ ಮಾಡಿದರು. ಚಿತ್ರಾಂಗದನು ಮಹಾಪರಾಕ್ರಮಿಯಾಗಿದ್ದನಲ್ಲದೆ, ಯಾವ ಮನುಷ್ಯನನ್ನೂ ತನಗೆ ಸರಿಸಾಟಿಯಿಲ್ಲವೆಂದೇ ಭಾವಿಸಿದ್ದನು. ಅಂತೆಯೇ ಎಲ್ಲ ರಾಜರನ್ನೂ ಸೋಲಿಸಿದ್ದನು.

**'ಮನುಷ್ಯಂ ನ ಹಿ ಮೇನೇ ಸ ಕಂಚಿತ್ ಸದೃಶಮಾತ್ಮನಃ' (ಆದಿಪರ್ವ-೧೦೧/೬)**

ಮುಂದೊಮ್ಮೆ ಚಿತ್ರಾಂಗದನೆಂಬ ಹೆಸರಿನ ಗಂಧರ್ವನು ತನ್ನ ಹೆಸರಿನಂತಿರುವ ಈ ಪೌರವರಾಜನನ್ನು ಸಂಧಿಸಿ 'ನಿನ್ನ ಹೆಸರನ್ನು ಬದಲಾಯಿಸು ಅಥವಾ ನನ್ನೊಡನೆ ಯುದ್ಧಕ್ಕೆ ಬಾ' ಎನ್ನಲು ಚಿತ್ರಾಂಗದನು ಯುದ್ಧವನ್ನೇ ಆರಿಸಿದನಲ್ಲದೇ, ಕುರುಕ್ಷೇತ್ರದ ಸರಸ್ವತೀತೀರದಲ್ಲಿ ಅವರಿಬ್ಬರ ಮಧ್ಯೆ ಘೋರ ಯುದ್ಧವೂ ನಡೆಯಿತು. [2]ಆದರೆ ಯುದ್ಧದಲ್ಲಿ ಗಂಧರ್ವನ ಅಧಿಕಪರಾಕ್ರಮದಿಂದಾಗಿ ಮಾಯಾಯುದ್ಧದಿಂದ ಚಿತ್ರಾಂಗದ ಹತನಾದನು. ನಂತರ ಭೀಷ್ಮರು ಚಿಂತ್ರಾಗದನ ಉತ್ತರಕ್ರಿಯೆಗಳನ್ನು ಮಾಡಿ, ವಿಚಿತ್ರವೀರ್ಯನನ್ನು ರಾಜನನ್ನಾಗಿ ಮಾಡಿ ಅವನ ನೆರವಿಗೆ ನಿಂತರು. ವಿಚಿತ್ರವೀರ್ಯನಾದರೂ ಧರ್ಮಶಾಸ್ತ್ರಕುಶಲನಾದ ಭೀಷ್ಮರನ್ನು ಗೌರವದಿಂದ ಕಾಣುತ್ತಾ ರಾಜ್ಯವನ್ನು ಧರ್ಮದಿಂದ ಪಾಲಿಸಿದನು.

**ಸಂದೇಶ :**

ವೇದವ್ಯಾಸರನ್ನೇ ಮಗನಾಗಿ ಪಡೆದ ಸತ್ಯವತೀದೇವಿಯು ಪರಾಶರರ ಅನುಗ್ರಹದಿಂದ ಕನ್ಯೆಯಾಗಿಯೇ ಇದ್ದಳು. ಅಂತೆಯೇ ಶಂತನುವಿನೊಡನೆ ಆಕೆಯ ವಿವಾಹ - ಮರುಮದುವೆಯಾಗಲೆ ಇಲ್ಲ. ಶಂತನು ಕ್ಷತ್ರಿಯ, ಸತ್ಯವತೀ ಬೆಸ್ತರ ಮಗಳಲ್ಲ. ಬೆಸ್ತರೊಡನೆ ಇದ್ದ ಉಪರಿಚರ ವಸುವಿನ ಮಗಳೆಂದು ಈಗಾಗಲೇ ನೋಡಿಯಾಗಿದೆ. ಶಂತನುವಿನ ಮನಸ್ಸು ಪರಿಶುದ್ಧವಾದುದು. ಸಜ್ಜನಿಕೆಯ ಸಂಪನ್ನತೆಯುಳ್ಳವರ ವಿಚಾರ ಪ್ರಾಯಶಃ ಶಾಸ್ತ್ರೀಯವಾಗಿಯೇ ಇರುತ್ತದೆ. ಆದ್ದರಿಂದ ಮೇಲ್ನೋಟಕ್ಕೆ ಕ್ಷತ್ರಿಯಳಾಗಿ ತೋರದಿದ್ದರೂ

---

೧ ಜೀರ್ಣೇನ ದೇಹೇನ ಹಿ ಕಿಂ ಮಮೇತಿ। - ಮ.ತಾ.ನಿ.(೧೧/೮೨)
ಶರೀರಮಾದ್ಯಂ ಖಲು ಧರ್ಮಸಾಧನಮ್ ॥ ಇತಿ ಅನ್ಯತ್ರ।

೨ ನದ್ಯಾಸ್ತೀರೇ ಸರಸ್ವತ್ಯಾಃ ಸಮಾಸ್ತಿಸ್ರೋಽಭವದ್ರಣಃ ॥ - ಆದಿಪರ್ವ(೧೦೧/೮)

ಸತ್ಯವತೀ ನಿಜವಾಗಿಯೂ ಕ್ಷತ್ರಿಯಳಾದುದರಿಂದ ಆಕೆಯಲ್ಲಿನ ಶಂತನುವಿನ ಪ್ರೇಮ, ವಿವಾಹದಲ್ಲಿ ಪರ್ಯವಸಾನವಾಯಿತು. ಆದ್ದರಿಂದ ಮನಶ್ಶುದ್ಧಿಯಿದ್ದಲ್ಲಿ ಸಾಕ್ಷಿಯು ಸರಿಯಾದ ನಿರ್ಣಯ ತೆಗೆದುಕೊಳ್ಳತ್ತದೆ ಎನ್ನಲು ಇದೂ ಒಂದು ದೃಷ್ಟಾಂತ. ಧರ್ಮರಾಜನು ಸಹ ದ್ರೌಪದೀಯನ್ನು ಮದುವೆಯಾಗುವಾಗ ಇಂತಹ ಮಾತನ್ನೇ ಆಡುತ್ತಾನೆ ದ್ರುಪದನಿಗೆ. [೧]"ನನಗೆ ಪ್ರಮಾಣವೇನೂ ಗೊತ್ತಿಲ್ಲ, ಆದರೆ ನನ್ನ ಮನಸ್ಸು ಧರ್ಮ ಬಿಟ್ಟು ಬೇರೊಂದು ಹೇಳದು. ಅದೇ ಪ್ರಮಾಣ'. ಆದ್ದರಿಂದ ಜೀವನದಲ್ಲಿ ಸದಾಚಾರ, ಶುದ್ಧವಾದ ಮನಸ್ಸಿನ ವಿಚಾರಗಳಿಗೆ ಧರ್ಮ, ಶಾಸ್ತ್ರ ಸಜ್ಜನರು ಅಂತಿಮವಾಗಿ ಭಗವಂತನ ಆಸರೆ ಸಿಗುತ್ತದೆ. ಮನೋಭೀಷ್ಟಗಳು ಸಿದ್ಧಿಸುತ್ತವೆ.

ದೇವವ್ರತನ ತಾಯಿ ಗಂಗೆ, ತಂದೆ ಶಂತನು. ಶಾಪಗ್ರಸ್ತನಾಗಿ ಜನಿಸಿದರೂ ದ್ಯು ವಸುವಿನ (ದೇವವ್ರತನ) ಸಾಧನೆ ಅಪಾರ. ತನ್ನ ಒಟ್ಟಾರೆ ಜೀವಿತಾವಧಿಯ ಸುಮಾರು ಶೇ. ೬೦ರಷ್ಟು ಕಾಲ ಶಸ್ತ್ರಾಸ್ತ್ರಾಧ್ಯಯನಕ್ಕಾಗಿ ಮೀಸಲಿಟ್ಟ ಈ ದಿಟ್ಟ ಕ್ಷತ್ರಿಯ ಕುಲಕ್ಕೇ ಭಯಂಕರನಾಗಿದ್ದ ವಿಷ್ಣುಭಕ್ತನಾಗಿದ್ದ. ಹೆಚ್ಚು ಕ್ಷತ್ರಿಯರು ಈತನ ಬಲಕ್ಕೆ ಬೆದರಿದರೆ, ಜರಾಸಂದನಂತಹವರು ವಿಷ್ಣುಭಕ್ತನಾದ್ದರಿಂದ ಕೆಣಕಲು ಹೆದರುತ್ತಿದ್ದರು. ಆದ್ದರಿಂದ ಸ್ವವರ್ಣಾಶ್ರಮ ಧರ್ಮಪರಿಪಾಲನೆ ಜಗತ್ತಿನಲ್ಲಿ ಜಯ ತಂದುಕೊಡುವ ಸಾಧನವಾಗಿದೆ.

ತಂದೆಗಾಗಿ ಗೃಹಸ್ಥ ಜೀವನವನ್ನೇ ತ್ಯಾಗಮಾಡಿದ ಮಹಾತ್ಯಾಗಿ ದೇವವ್ರತ ಭೀಷ್ಮನಾಗುತ್ತಾನೆ, ಪಿತೃಮಾನ್ಯನಾಗುತ್ತಾನೆ. ಪಿತೃದೇವೋ ಭವವೆಂಬ ಶ್ರುತಿಯ ಸಂದೇಶಕ್ಕೆ ಆದರ್ಶ ದೃಷ್ಟಾಂತ ಭೀಷ್ಮರೇ. ತಂದೆಯ ವಿವಾಹವನ್ನು ಮಾಡಿ, ತಾನು ಬ್ರಹ್ಮಚಾರಿಯಾಗಿದ್ದು ಅಸದೃಶ ಸಾಧನೆಯಲ್ಲವೇ? ಅಲ್ಲದೇ **'ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ'** ಎಂಬ ಗೀತೆಗೆ ಭೀಷ್ಮರನ್ನು ಉದಾಹರಿಸಬಹುದು. ತ್ಯಾಗದಲ್ಲಿ ಕಾಣುವ ಸುಖ, ಭೋಗದಲ್ಲಿ ಸಿಗದು. ಅದಕ್ಕೆ ಭೀಷ್ಮರಂತಹವರು ಸಾಕ್ಷಿಯಾಗಿದ್ದಾರೆ. ಆದ್ದರಿಂದ ಅವರು ಸಮಕಾಲೀನ ಕ್ಷತ್ರಿಯರಿಗೆಲ್ಲ ಅನಭಿಷಿಕ್ತ ದೊರೆಯಾಗಿದ್ದರು. ದೇವಮಾನ್ಯರಾಗಿದ್ದರು.

ಸತ್ಯವತಿಯ ಮಗ ಚಿತ್ರಾಂಗದ ಮತ್ತೊಬ್ಬ ದಿಟ್ಟ ಕ್ಷತ್ರಿಯ. ಸ್ವಧರ್ಮ ಪಾಲನೆಯ ಛಲ, ತನ್ನ ಹೆಸರನ್ನು ಬದಲಾಯಿಸಬಾರದೆಂಬ ಹಠ ತೋರಿಕೆಗೆ ವಿಚಿತ್ರವಾಗಿ ಕಂಡರೂ **'ಯುದ್ಧೇ ಚಾಪ್ಯಪಲಾಯನಂ'** ಎಂಬ ಕ್ಷತ್ರಿಯ ಧರ್ಮಪರಿಪಾಲಕನೆಂಬ ಹೆಗ್ಗಳಿಕೆ ಚಿತ್ರಾಂಗದನಿಗೆ ಸಲ್ಲುತ್ತದೆ. ವೈಯಕ್ತಿಕ ಧರ್ಮ, ಕುಲಧರ್ಮಗಳನ್ನು ಒಟ್ಟಾರೆ ಸಾಧಿಸಿದ ಮಹಾತ್ಮ ಚಿತ್ರಾಂಗದ.

*****

---

೧ ನಾತ್ರ ಪ್ರಮಾ ಮಮ ಹೃದಿ ಪ್ರತಿಭಾತ್ಯಥಾಪಿ ಧರ್ಮಾಚಲಾ ಮಮ ಮತಿರ್ಹಿ ತದೇವ ಮಾನಂ।
- ಮ.ತಾ.ನಿ.(೧೯/೧೫೨)

# ೧೫. ಯಯಾತಿ ಉಪಾಖ್ಯಾನ

ಚಂದ್ರವಂಶದ ಅನೇಕ ಚಕ್ರವರ್ತಿಗಳಲ್ಲಿ ಯಯಾತಿಯೂ ಒಬ್ಬ ಮುಖ್ಯ. ಈತನ ತಂದೆ ನಹುಷ(ಇಂದ್ರಪದವಿಯನ್ನು ಕೆಲಕಾಲ ಅಲಂಕರಿಸಿದ ಮಹಾನುಭಾವ). ತಾಯಿ ವಿರಜಾ, ಈಕೆ ಪಿತೃದೇವತೆಗಳ ಕನ್ಯೆ.

ಯಯಾತಿಗೆ ಶುಕ್ರಾಚಾರ್ಯರ ಪುತ್ರಿಯಾದ ದೇವಯಾನಿ ಮತ್ತು ವೃಷಪರ್ವದಾನವನ ಮಗಳು ಶರ್ಮಿಷ್ಠಾ ಎಂಬ ಇಬ್ಬರು ಪತ್ನಿಯರು. ಹೀಗೆ ಬ್ರಾಹ್ಮಣ ಹಾಗೂ ದಾನವ ಪುತ್ರಿಯರನ್ನು ವಿವಾಹವಾದ ಈತನ ಚರಿತ್ರೆ ವಿಚಿತ್ರ.

## ದೇವಯಾನಿಯ ವಿಫಲ ಪ್ರೇಮಪ್ರಸಂಗ

ಕಶ್ಯಪರ ಪತ್ನಿಯರು ಅದಿತಿ, ದಿತಿ, ದನು ಮುಂತಾದ ೧೩ ಜನ. ಅದಿತಿಯಲ್ಲಿ ದೇವತೆಗಳೂ (ಆದಿತ್ಯರೂ) ದಿತಿಯಲ್ಲಿ ದೈತ್ಯರೂ, ದನುವಿನಲ್ಲಿ ದಾನವರೂ ಸೃಷ್ಟಿಯಾದರು. ದೈತ್ಯರಿಗೆ ದೇವತೆಗಳಲ್ಲಿ ಸ್ವಾಭಾವಿಕ ದ್ವೇಷ. ಅಂತೆಯೇ ಆಗಾಗ್ಗೆ ಅವರ ಮಧ್ಯೆ ಯುದ್ಧ ಪ್ರಸಂಗಗಳು, ದೇವತೆಗಳಿಗೆ ಬೃಹಸ್ಪತ್ಯಾಚಾರ್ಯರೂ, ದೈತ್ಯದಾನವರಿಗೆ ಶುಕ್ರಾಚಾರ್ಯರು ಗುರುಗಳು. [1]ಮೃತ ಸಂಜೀವಿನಿ ವಿದ್ಯೆಬಲ್ಲ ಶುಕ್ರರು ಸತ್ತ ದೈತ್ಯರನ್ನು ಬದುಕಿಸುತ್ತಿದ್ದರು. ಬೃಹಸ್ಪತ್ಯಾಚಾರ್ಯರಿಗೆ ಆ ವಿದ್ಯೆ ಗೊತ್ತಿದ್ದಿಲ್ಲ. ಅಂತೆಯೇ ದೇವತೆಗಳಿಗೆ ಚಿಂತೆ.

ಬೃಹಸ್ಪತ್ಯಾಚಾರ್ಯರ ಮಗ ಕಚನನ್ನು ದೇವತೆಗಳು ಶುಕ್ರಾಚಾರ್ಯರಲ್ಲಿ ಹೋಗಿ ಬ್ರಹ್ಮಚರ್ಯೆಯಿಂದ ಸೇವಿಸಿ, ಅವರ ಪ್ರೀತಿಪಾತ್ರ ಮಗಳಾದ ದೇವಯಾನಿಯನ್ನೂ ಸಂತೋಷಪಡಿಸಿ ಮೃತಸಂಜೀವಿನೀ ವಿದ್ಯೆಯನ್ನು ಉಪದೇಶಿಸಿಕೊಂಡು ಬರಲು ಕಳಿಸಿದರು. ಕಚನೂ ಶುಕ್ರರ ಬಳಿಗೆ ಬಂದು ೧೦೦೦ ವರ್ಷ ಗುರುಸೇವೆ ಮಾಡಲು ಬಂದಿರುವುದಾಗಿ ಬಿನ್ನೈಸಲು ಶುಕ್ರರೂ ಒಪ್ಪಿದರು. ಕಚ ಬ್ರಹ್ಮಚರ್ಯ ವ್ರತ ಸ್ವೀಕರಿಸಿ, ಗುರುಸೇವೆ ಹಾಗೂ ಅವರ ಮಗಳಾದ ದೇವಯಾನಿಯನ್ನು ಗಾಯನ, ನರ್ತನ, ವಾದನಗಳಿಂದ ಸಂತೋಷಪಡಿಸುತ್ತಿದ್ದನು. ದೇವಯಾನಿಯೂ ಕಚನ ನಿಯಮ, ವ್ರತಗಳಿಗೆ ಧಕ್ಕೆ ಬಾರದಂತೆ ಸ್ನೇಹದಿಂದ ವರ್ತಿಸುತ್ತಾ ಪರಸ್ಪರ ಸಂತೋಷದಿಂದಿರುತ್ತಿದ್ದರು.

ಹೀಗೆ ೫೦೦ ವರ್ಷಗಳು ಮುಗಿದವು. ಗುರುಸೇವೆಯ ಅಂಗವಾಗಿ ಗೋಪಾಲಕನಾಗಿದ್ದ ಕಚ, ದಾನವರು ಬೃಹಸ್ಪತ್ಯಾಚಾರ್ಯರ ಮೇಲಿನ ದ್ವೇಷದಿಂದ ಕಚನು ವಿದ್ಯಾ ಸಂಪಾದಿಸುವನೆಂಬ ಅಸೂಯೆಯಿಂದ ಕಚನನ್ನು ದೂರ ಸೆಳೆದೊಯ್ದು ಕತ್ತರಿಸಿ, ನಾಯಿ,

---

೧ ನ ತಾನ್ ಸಂಜೀವಯಾಮಾಸ ಬೃಹಸ್ಪತಿರುದಾರಧೀಃ।
ನ ಹಿ ವೇದ ಸ ತಾಂ ವಿದ್ಯಾಂ ಯಾಂ ಕಾವ್ಯೋ ವೇತ್ತಿ ವೀರ್ಯವಾನ್ ॥
ಸಂಜೀವಿನೀಂ ತತೋ ದೇವಾ ವಿಷಾದಮಗಮನ್ ಪರಮ್ ॥ - ಆದಿಪರ್ವ(೭೬/೧೦)

ತೋಳಗಳಿಗೆ ಹಾಕಿದರು. ರಾತ್ರಿಯಾದರೂ ಕಚ ಆಶ್ರಮಕ್ಕೆ ಬಾರದಿರಲು ದೇವಯಾನಿ ದುಃಖಿಸುತ್ತಾ [೧]ತಂದೆಗೆ 'ಕಚನನ್ನು ರಾಕ್ಷಸರು ಕೊಂದಿರಬೇಕು. ಇನ್ನೂ ಬರಲಿಲ್ಲ, ಅವನಿಲ್ಲದೆ ನಾ ಬದುಕಲಾರೆ' ಎನ್ನಲು ಶುಕರು 'ಕಚ ಬಾ' ಎಂದು ಮೃತ ಕಚನನ್ನು ಕರೆಯಲು, ಕಚನು ತೋಳಗಳ ಶರೀರ ಭೇದಿಸಿಕೊಂಡು ಬಂದೇಬಿಟ್ಟ, ದೇವಯಾನಿ ತುಂಬಾ ಮುದಗೊಂಡಳು. ನಡೆದುದನ್ನು ತಿಳಿಸಿದ ಕಚ.

ಮುಂದೊಮ್ಮೆ ದೇವಯಾನಿ ತನ್ನ ಸಿಂಗಾರಕ್ಕಾಗಿ ಹೂವುಗಳನ್ನು ತರಲು ಕಚನಿಗೆ ಹೇಳಲು ಕಚ ಹೊರಟ. ದಾನವರು ಬೆನ್ನತ್ತಿದರು. ಅವನನ್ನು ನುಚ್ಚುನೂರು ಮಾಡಿ ಸಮುದ್ರದಲ್ಲಿ ಎಸೆದರು. ಕಚನು ಬಾರದಿರಲು ದೇವಯಾನಿಯ ಪ್ರಾರ್ಥನೆಯ ಮೇರೆಗೆ ಸಂಜೀವಿನೀ ಮಂತ್ರದಿಂದ ಮತ್ತೆ ಆಹ್ವಾನಿಸಲು ಕಚನು ಬದುಕಿ ಬಂದನು. ದಾನವರು ಮಾಡಿದುದನ್ನು ಮತ್ತೆ ತಿಳಿಸಿದನು.

ಮೂರನೇ ಬಾರಿಯೂ ದೇವಯಾನಿಗೆ ಪುಷ್ಪಗಳನ್ನು ತರಲು ಹೋದಾಗಲೂ ದಾನವರು ಈ ಬಾರಿ ತಮ್ಮ ಗುರುಗಳ ಮೇಲೆಯೇ ಛಲದಿಂದ ಕಚನನ್ನು ಸಂಹರಿಸಿ, ಅವನ ಶರೀರವನ್ನು ಸುಟ್ಟು ಉಳಿದ ದಗ್ಧ ಶರೀರವನ್ನು ಪುಡಿಮಾಡಿ ಸುರೆಯಲ್ಲಿ ಬೆರೆಸಿ ಶುಕ್ರರಿಗೇ ಕೊಟ್ಟರು. ಕಚನು ಮತ್ತೂ ಬರಲಿಲ್ಲವಲ್ಲ ಎಂಬ ಶೋಕದಿಂದ ತಂದೆಗೆ ಬಿನ್ನವಿಸಲು ಅವರು ಮಗಳಿಗೆ ಸಮಾಧಾನ ಹೇಳಿದರು 'ಕಚ ಸತ್ತಿದ್ದಾನೆ ನಿಜ, ನಾನೇನು ಮಾಡಲಿ? ಪುನಃ ಬದುಕಿಸಿದರೂ, ದಾನವರು ಕೊಲ್ಲುವರು. ದುಃಖಿಸಬೇಡ, ಅಳಬೇಡ ಈ ಬ್ರಾಹ್ಮಣ ವಟುವನ್ನು ಮತ್ತೆ ಬದುಕಿಸುವುದು ಅಸಾಧ್ಯ' ಎಂದರು. ಆದರೆ ದೇವಯಾನಿ ತಂದೆಯ ಮಾತನ್ನು ಒಪ್ಪಲಿಲ್ಲ. 'ನನಗೆ ಕಚ ಅತ್ಯಂತ ಪ್ರಿಯ, ಆತ ಮಹಾತಪಸ್ವೀ, ಶಿಷ್ಯನ ರಕ್ಷಣೆ ನಮ್ಮ ಜವಾಬ್ದಾರಿ, ಬದುಕಿಸದಿದ್ದರೆ ನಾನೂ ಬದುಕೆನೆಂದಳು.'

ಶುಕ್ರರಿಗೆ ಮಗಳೆಂದರೆ ಪಂಚಪ್ರಾಣ. ಆಕೆಯ ಮಾತಿನಲ್ಲಿ ಸತ್ಯವೂ ಇತ್ತು. ಕಚನು ಇದೆಲ್ಲ ಕೇಳುತ್ತಲೇ ಇದ್ದ ಶುಕ್ರರ ಉದರದಲ್ಲಿದ್ದುಕೊಂಡು. 'ಗುರುಗಳೇ ನಿಮ್ಮ ಉದರದಲ್ಲಿ ನಾನು ಅಸುರರು ಕೊಟ್ಟ ಸುರೆಯ ಮೂಲಕ ಹೋಗಿದ್ದೇನೆ. ನೀವು ಕರೆದರೆ ನಾನು ನಿಮ್ಮ ಉದರ ಭೇದಿಸಿಕೊಂಡು ಬಂದರೆ, ನಿಮ್ಮನ್ನು ಕೊಂದ ಪಾಪಕ್ಕೆ ಗುರಿಯಾಗುವೆ' ಎಂದ ಕಚ. ಶುಕ್ರ, ದೇವಯಾನಿಯರಿಗೆ ಚಿಂತೆಯಾಯಿತು. ಆದರೆ ಉಪಾಯವು ಹೊಳೆಯಿತು. ಶುಕ್ರರು ಮಗು! ನಿನಗೆ ವಿದ್ಯೋಪದೇಶ ಮಾಡಿದ್ದೇನೆ. ನೀನು ಕಚರೂಪಿಯಾದ ಇಂದ್ರನಾಗಿರದಿದ್ದ ಪಕ್ಷದಲ್ಲಿ ವಿದ್ಯೆ ಸಿದ್ಧಿಯಾಗಲಿ ಎಂದರು. ಶುಕ್ರರು ಕರೆದ ಕೂಡಲೇ ಉದರ ಭೇದಿಸಿ ಬಂದ ಕಚ ಅವರ ಉಪದೇಶದಂತೆ ಗುರುಗಳನ್ನು ಬದುಕಿಸಿ ಧನ್ಯನಾದ. ಶುಕ್ರರನ್ನು ತಂದೆ ತಾಯಿಯೆಂದು

---

೧ ವೃಕೈಂ ಹತೋ ಮೃತೋ ವಾಪಿ ಕಚಸ್ತಾತ ಭವಿಷ್ಯತಿ।
ತಂ ವಿನಾ ನ ಚ ಜೀವೇಯಮಿತಿ ಸತ್ಯಂ ಬ್ರವೀಮಿ ತೇ॥ – ಆದಿಪರ್ವ(೭೬/೩೦,೪೫)

ಭಾವಿಸಿದ. ಅವರಿಗೆ ದ್ರೋಹ ಬಗೆಯಲಿಲ್ಲ, ವಿದ್ಯೆಯನ್ನು ಕೊಟ್ಟ ಬ್ರಹ್ಮನನ್ನು ಉಪದೇಶಿಸಿದ ಗುರುಗಳನ್ನು ವಿದ್ಯೆ ಹೊಂದಿದ ಯಾವ ಶಿಷ್ಯರು ಗೌರವಿಸುವುದಿಲ್ಲವೋ ಅವರು ಪಾಪಲೋಕಗಳಿಗೆ ಹೋಗುವವರಲ್ಲದೇ ಜಗತ್ತಿನಲ್ಲಿ ಕೀರ್ತಿವಂತರೂ ಆಗುವುದಿಲ್ಲವೆಂದು ಕಚ ನುಡಿದನು.

ನಂತರ ದಾನವರನ್ನು ಕರೆಸಿ ನಿಂದಿಸಿ ಕಳಿಸಿದರು 'ನಿಮ್ಮ ಅಚಾತುರ್ಯದಿಂದ ಕಚನು ವಿದ್ಯಾಸಿದ್ಧಿಯನ್ನು ಹೊಂದಿದನು' ಅವನು ನನ್ನ ಸಮಾನನಾದ ಎಂದು.

ಕಚನು ೧೦೦೦ ವರ್ಷಗಳವರೆಗೆ ಸೇವೆ ಮಾಡಿ ಸ್ವರ್ಗಕ್ಕೆ ಮರಳಲು ಗುರುಗಳಿಂದ ಅನುಮತಿ ಪಡೆದನು.

ಕಚನು ಹೊರಡಲು ಅನುವಾಗಲು ದೇವಯಾನಿಯು 'ನೀನು ನನಗೆ ಪೂಜ್ಯ, ನಿನ್ನ ತಪಸ್ಸು ಇಂದ್ರಿಯನಿಗ್ರಹದಿಂದ ನಾನು ಮಾರು ಹೋಗಿದ್ದೇನೆ. ನಿನ್ನ ವ್ರತ ಮುಗಿದಿದೆ. ನನ್ನ ಪಾಣಿಗ್ರಹಣವನ್ನು ವಿಧ್ಯುಕ್ತನಾಗಿ ಮಂತ್ರಪುರಸ್ಸರವಾಗಿ ಮಾಡು ಎಂದು ಬೇಡಿಕೊಂಡಳು. ಆದರೆ ಗುರುಪುತ್ರಿಯು ಗುರುವಿನಂತೆ [೧]ಪೂಜ್ಯಳೆಂಬ ಭಾವನೆಯಿಂದ ಕಚನು ದೇವ-ಯಾನಿಯ ಪಾಣಿಗ್ರಹಣಕ್ಕೆ ಒಪ್ಪಲಿಲ್ಲ. ದೇವಯಾನಿಗೆ ಕೋಪ ಬಂತು 'ಒಂದು ವೇಳೆ ನೀನು ನನ್ನನ್ನು ಧರ್ಮಕಾಮ ಅರ್ಥಗಳಲ್ಲಿ ಯಾಚಿಸಿದರೂ ಸ್ವೀಕರಿಸುವುದಿಲ್ಲವಾದರೆ ನಿನಗೆ ಉಪದೇಶಿಸಲ್ಪಟ್ಟ ವಿದ್ಯೆ ಸಿದ್ಧಿಯಾಗದಿರಲಿ' ಎಂದು ಶಾಪವಿತ್ತಳು. 'ನಿನ್ನಲ್ಲಿ ಯಾವುದೇ ದೋಷದಿಂದ ನಾನು ನಿನ್ನನ್ನು ವಿವಾಹವಾಗುತ್ತಿಲ್ಲ ಎಂದು ತಿಳಿಯದಿರು. ಗುರುಪುತ್ರಿ ಪೂಜ್ಯಳೆಂಬ ಭಾವನೆ ನನ್ನದು. ವೃಥಾ ಶಪಿಸಿದ ನಿನ್ನನ್ನು ಯಾವ ಋಷಿಪುತ್ರನೂ ಮದುವೆಯಾಗದಿರಲಿ. ನನ್ನ ವಿದ್ಯೆ ನನಗೆ ಸಿದ್ಧಿಯ್ಯಾಗದಿದ್ದರೂ ನಾನು ಉಪದೇಶಿಸುವ ಶಿಷ್ಯರಿಗೆ ಸಿದ್ಧಿಯಾಗುತ್ತದೆ' ಎಂದು ಹೇಳಿ ಕಚ ಸುರಾಲಯಕ್ಕೆ ಹೊರಟನು.

ಸ್ವರ್ಗಕ್ಕೆ ಸಿದ್ಧವಿದ್ಯನಾಗಿ ಬಂದ ಕಚನನ್ನು ದೇವತೆಗಳು ಅಭಿನಂದಿಸಿ, ಪೂಜಿಸಿದರು. ದೈತ್ಯದಾನವರನ್ನು ಗೆಲ್ಲಲು ಇಂದ್ರನು ಆರಂಭಿಸಲು, ಸಂಚರಿಸುತ್ತಿರಲು, ವನವೊಂದರಲ್ಲಿದ್ದ ಜಲಾಶಯದಲ್ಲಿ ಕ್ರೀಡಿಸುತ್ತಿದ್ದ ಸ್ತ್ರೀಯರ ವಸ್ತ್ರಗಳನ್ನು, ಸ್ವಯಂ ಗಾಳಿಯಾಗಿ ಹಾರಿಸಿದ. ಇದನ್ನು ಗಮನಿಸಿ ಸ್ತ್ರೀಯರೆಲ್ಲ ತಮ್ಮ ವಸ್ತ್ರಗಳಿಗಾಗಿ ಹುಡುಕಿದರು. ಜಲಕ್ರೀಡೆಯಾಡುತ್ತಿದ್ದ ದೇವಯಾನಿ, ಶರ್ಮಿಷ್ಠೆಯರೂ ಈ ಗೊಂದಲದಲ್ಲಿ ತಮ್ಮ ವಸ್ತ್ರಗಳನ್ನು ಅದಲುಬದಲಾಗಿ ಧರಿಸಿದ್ದರು. ತಮ್ಮ ವಸ್ತ್ರ ಧರಿಸಿದ್ದುದನ್ನು ನೋಡಿದ ದೇವಯಾನಿ, ಶರ್ಮಿಷ್ಠೆಯರು ಪರಸ್ಪರ ನಿಂದಿಸಿ ಕಲಹ ಮಾಡಿದರು. ಅದು ವಿಕೋಪಕ್ಕೆ ಹೋಗಿ ಶರ್ಮಿಷ್ಠೆ ದೇವಯಾನಿಯನ್ನು ಬಾವಿಯೊಂದಕ್ಕೆ ತಳ್ಳಿ, ಆಕೆ ಸತ್ತಳೆಂದು ಭಾವಿಸಿ, ಅರಮನೆಗೆ ನಡೆದಳು. ಅದೇ ಹೊತ್ತಿಗೆ

---

೧ ಯಥಾ ಮಮ ಗುರುರ್ನಿತ್ಯಂ ಮಾನ್ಯಃ ಶುಕ್ರಃ ಪಿತಾ ತವ।
ದೇವಯಾನಿ ತಥೈವ ತ್ವಂ ನೈವಂ ಮಾಂ ವಕ್ತುಮರ್ಹಸಿ॥ - ಆದಿಪರ್ವ(೭೭/೮)

ಶ್ರಾಂತನಾಗಿ, ಬಾಯಾರಿ ಬಂದ ಯಯಾತಿ ರಾಜ ದೇವಯಾನಿಯ ಆಕ್ರಂದನವನ್ನು ಕೇಳಿ ಆಕೆಯ ಪ್ರಾರ್ಥನೆಯ ಮೇರೆಗೆ ಬಾವಿಯಿಂದ ತನ್ನ ಬಲಗೈಯಿಂದ ಮೇಲೆತ್ತಿದ. ಪರಸ್ಪರ ಪರಿಚಯವು ಆಯಿತು. ನಂತರ ಯಯಾತಿ ವಾಪಾಸಾದನು.

ಆ ಹೊತ್ತಿಗೆ **ಘೂರ್ಣಿಕಾ** ಎಂಬ ದಾಸಿ ಅಲ್ಲಿಗೆ ಬಂದಳು. ಆಕೆಯ ಮೂಲಕ ತಂದೆ ಶುಕ್ರರಿಗೆ ಶರ್ಮಿಷ್ಠೆಯ ದೌರ್ಜನ್ಯವನ್ನೆಲ್ಲ ತಿಳಿಸಿ ತಾನಿದ್ದಲ್ಲಿಗೆ ಬರಲು ಹೇಳಿ ಕಳಿಸಿದಳು ದೇವಯಾನಿ. ಆಚಾರ್ಯ ಶುಕ್ರರು ಬಂದು ತುಂಬಾ ದುಃಖಿತರಾದರು. ಶರ್ಮಿಷ್ಠೆ ಹಾಗೂ ಆಕೆಯ ತಂದೆ ವೃಷಪರ್ವ (ದಾನವ) ರಾಜನ ಮೇಲೂ ಖತಿಗೊಂಡರು. ಗುರುಗಳನ್ನು ಹೀಯಾಳಿಸಿದ ಶರ್ಮಿಷ್ಠೆಯನ್ನು ೧೦೦೦ ದಾಸಿಯರೊಂದಿಗೆ ದೇವಯಾನಿಯ ದಾಸ್ಯದಲ್ಲಿರಬೇಕೆಂಬ ದೇವಯಾನಿಯ ಅಪೇಕ್ಷೆಯಂತೆ ಆತನ ಮಗಳೂ ದೇವಯಾನಿಯ ದಾಸಳಾದಳು. ವೃಷಪರ್ವ ರಾಜನಿಗೆ ಶರ್ಮಿಷ್ಠೆಯ ವರ್ತನೆ ಹಿಡಿಸಿಯೇ ಇರಲಿಲ್ಲ. ಮಾಡಿದ ಅಪರಾಧಕ್ಕೆ ಈ ಶಿಕ್ಷೆ ರಾಜನಿಗೆ ಅಪಕೀರ್ತಿ. ಮುಂದೆ ದೇವಯಾನಿ ಮದುವೆಯಾದಾಗಲೂ ಅಲ್ಲಿಯೂ ಈ ಶರ್ಮಿಷ್ಠೆ ದಾಸಿಯಾಗಿಯೇ ಆತನನ್ನು ಅನುಸರಿಸಿದಳು.

ಒಮ್ಮೆ ಸಖಿಯರೊಂದಿಗೆ ದೇವಯಾನಿ ಶರ್ಮಿಷ್ಠೆಯರು ವನದಲ್ಲಿ ವಿಹರಿಸುತ್ತಿದ್ದಾಗ ಯಯಾತಿ ರಾಜನು ಬಾಯಾರಿಕೆಯಿಂದ ದಣಿವನ್ನು ಆರಿಸಲು ಬಂದನು. ದೇವಯಾನಿ ರಾಜನನ್ನು ಸತ್ಕರಿಸಿ, ಹಿಂದಿನ ಪ್ರಸಂಗವನ್ನು ನೆನಪಿಸಿ ತನ್ನ ಪಾಣಿಗ್ರಹಣ ಮಾಡಲು ಬೇಡಿದಳು. ಯಯಾತಿಗೆ ಬ್ರಾಹ್ಮಣ ಕುವರಿಯನ್ನು ಹೇಗೆ ಮದುವೆ ಆಗುವುದು ಎಂಬ ಯೋಚನೆ. ದೇವಯಾನಿ ತನ್ನ ಪ್ರಿಯ ತಂದೆಯನ್ನು ಅಲ್ಲಿಗೇ ಕರೆಸಿಬಿಟ್ಟಳು. ಶುಕ್ರರನ್ನು ಪ್ರದಕ್ಷಿಣೆ ಹಾಕಿ ಗೌರವಿಸಿದ ಯಯಾತಿ.

ಹೀಗೆ ಯಯಾತಿ ರಾಜ ಬ್ರಾಹ್ಮಣಿಯಾದ ದೇವಯಾನಿಯನ್ನು ಪಡೆದು ಆಕೆಯಲ್ಲಿ ಒಬ್ಬ ಮಗನನ್ನು (ಯದು) ಪಡೆದನು.

೧೦೦೦ ವರ್ಷಗಳಾದವು, ಶರ್ಮಿಷ್ಠೆ ಯೋಚಿಸಿದಳು. ನಾನಿನ್ನೂ ವಿವಾಹಿತಳಾಗಲಿಲ್ಲ, ಮಕ್ಕಳನ್ನು ಪಡೆಯಲಿಲ್ಲ, ದೇವಯಾನಿ ಮಗನನ್ನು ಪಡೆದಳು. ನನ್ನ ಯೌವನ ವ್ಯರ್ಥ, ದೇವಯಾನಿ ವರಿಸಿದಂತೆ ನಾನೂ ಯಯಾತಿಯನ್ನೇ ವರಿಸುವೆ. ಅವನಿಂದಲೇ ಪುತ್ರಫಲ ಪಡೆಯುವೆ. ಹೀಗೆ ಚಿಂತಿಸುತ್ತಾ ಅಶೋಕವನದಲ್ಲಿ ಒಬ್ಬಳೇ ಇದ್ದಾಗ ಯಯಾತಿ ರಾಜನು ಬಂದನು. ಆತನನ್ನು ಪ್ರಶಂಸಿಸಿ [೧] 'ರಾಜ! ನನಗೆ ಋತುದಾನ ಮಾಡು' ಎಂದು ಬೇಡಿದಳು (ನನ್ನ ಪತಿಯಾಗು). ಆದಕ್ಕೆ ಯಯಾತಿಯು 'ಶರ್ಮಿಷ್ಠೆ! ನಾನು ಈಗಾಗಲೇ ಶುಕ್ರಾಚಾರ್ಯರಿಗೆ

---

೧ ಋತುಂ ದೇಹಿ ನರಾಧಿಪ (ಅ. ೮೨/೧೩) ಇತ್ಯತ್ರ ಋತುಂ ದೇಹಿ ಮಮ ಪತಿರ್ಭವೇತಿ ಭಾವಃ।
- ಲಕ್ಷಾಲಂಕಾರ (ಭಾಗ-೧; ಪು. ೮೩)

ಭಾವಿಸಿದ. ಅವರಿಗೆ ದ್ರೋಹ ಬಗೆಯಲಿಲ್ಲ, ವಿದ್ಯೆಯನ್ನು ಕೊಟ್ಟ ಬ್ರಹ್ಮನನ್ನು ಉಪದೇಶಿಸಿದ ಗುರುಗಳನ್ನು ವಿದ್ಯೆ ಹೊಂದಿದ ಯಾವ ಶಿಷ್ಯರು ಗೌರವಿಸುವುದಿಲ್ಲವೋ ಅವರು ಪಾಪಲೋಕಗಳಿಗೆ ಹೋಗುವರಲ್ಲದೇ ಜಗತ್ತಿನಲ್ಲಿ ಕೀರ್ತಿವಂತರೂ ಆಗುವುದಿಲ್ಲವೆಂದು ಕಚ ನುಡಿದನು.

ನಂತರ ದಾನವರನ್ನು ಕರೆಸಿ ನಿಂದಿಸಿ ಕಳಿಸಿದರು 'ನಿಮ್ಮ ಅಚಾತುರ್ಯದಿಂದ ಕಚನು ವಿದ್ಯಾಸಿದ್ಧಿಯನ್ನು ಹೊಂದಿದನು' ಅವನು ನನ್ನ ಸಮಾನನಾದ ಎಂದು.

ಕಚನು ೧೦೦೦ ವರ್ಷಗಳವರೆಗೆ ಸೇವೆ ಮಾಡಿ ಸ್ವರ್ಗಕ್ಕೆ ಮರಳಲು ಗುರುಗಳಿಂದ ಅನುಮತಿ ಪಡೆದನು.

ಕಚನು ಹೊರಡಲು ಅನುವಾಗಲು ದೇವಯಾನಿಯು 'ನೀನು ನನಗೆ ಪೂಜ್ಯ, ನಿನ್ನ ತಪಸ್ಸು ಇಂದ್ರಿಯನಿಗ್ರಹದಿಂದ ನಾನು ಮಾರು ಹೋಗಿದ್ದೇನೆ. ನಿನ್ನ ವ್ರತ ಮುಗಿದಿದೆ. ನನ್ನ ಪಾಣಿಗ್ರಹಣವನ್ನು ವಿಧ್ಯುಕ್ತನಾಗಿ ಮಂತ್ರಪುರಸ್ಸರವಾಗಿ ಮಾಡು ಎಂದು ಬೇಡಿಕೊಂಡಳು. ಆದರೆ ಗುರುಪುತ್ರಿಯು ಗುರುವಿನಂತೆ [೧]ಪೂಜ್ಯಳೆಂಬ ಭಾವನೆಯಿಂದ ಕಚನು ದೇವ-ಯಾನಿಯ ಪಾಣಿಗ್ರಹಣಕ್ಕೆ ಒಪ್ಪಲಿಲ್ಲ. ದೇವಯಾನಿಗೆ ಕೋಪ ಬಂತು 'ಒಂದು ವೇಳೆ ನೀನು ನನ್ನನ್ನು ಧರ್ಮಕಾಮ ಅರ್ಥಗಳಲ್ಲಿ ಯಾಚಿಸಿದರೂ ಸ್ವೀಕರಿಸುವುದಿಲ್ಲವಾದರೆ ನಿನಗೆ ಉಪದೇಶಿಸಲ್ಪಟ್ಟ ವಿದ್ಯೆ ಸಿದ್ಧಿಯಾಗದಿರಲಿ' ಎಂದು ಶಾಪವಿತ್ತಳು. 'ನಿನ್ನಲ್ಲಿ ಯಾವುದೇ ದೋಷದಿಂದ ನಾನು ನಿನ್ನನ್ನು ವಿವಾಹವಾಗುತ್ತಿಲ್ಲ ಎಂದು ತಿಳಿಯದಿರು. ಗುರುಪುತ್ರಿ ಪೂಜ್ಯಳೆಂಬ ಭಾವನೆ ನನ್ನದು. ವೃಥಾ ಶಪಿಸಿದ ನಿನ್ನನ್ನು ಯಾವ ಋಷಿಪುತ್ರನೂ ಮದುವೆಯಾಗದಿರಲಿ. ನನ್ನ ವಿದ್ಯೆ ನನಗೆ ಸಿದ್ಧಿಯಾಗದಿದ್ದರೂ ನಾನು ಉಪದೇಶಿಸುವ ಶಿಷ್ಯರಿಗೆ ಸಿದ್ಧಿಯಾಗುತ್ತದೆ' ಎಂದು ಹೇಳಿ ಕಚ ಸುರಾಲಯಕ್ಕೆ ಹೊರಟನು.

ಸ್ವರ್ಗಕ್ಕೆ ಸಿದ್ಧವಿದ್ಯನಾಗಿ ಬಂದ ಕಚನನ್ನು ದೇವತೆಗಳು ಅಭಿನಂದಿಸಿ, ಪೂಜಿಸಿದರು. ದೈತ್ಯದಾನವರನ್ನು ಗೆಲ್ಲಲು ಇಂದ್ರನು ಆರಂಭಿಸಲು, ಸಂಚರಿಸುತ್ತಿರಲು, ವನವೊಂದರಲ್ಲಿದ್ದ ಜಲಾಶಯದಲ್ಲಿ ಕ್ರೀಡಿಸುತ್ತಿದ್ದ ಸ್ತ್ರೀಯರ ವಸ್ತ್ರಗಳನ್ನು ಸ್ವಯಂ ಗಾಳಿಯಾಗಿ ಹಾರಿಸಿದ. ಇದನ್ನು ಗಮನಿಸಿ ಸ್ತ್ರೀಯರೆಲ್ಲ ತಮ್ಮ ವಸ್ತ್ರಗಳಿಗಾಗಿ ಹುಡುಕಿದರು. ಜಲಕ್ರೀಡೆಯಾಡುತ್ತಿದ್ದ ದೇವಯಾನಿ, ಶರ್ಮಿಷ್ಠೆಯರೂ ಈ ಗೊಂದಲದಲ್ಲಿ ತಮ್ಮ ವಸ್ತ್ರಗಳನ್ನು ಅದಲುಬದಲಾಗಿ ಧರಿಸಿದ್ದರು. ತಮ್ಮ ವಸ್ತ್ರ ಧರಿಸಿದ್ದುದನ್ನು ನೋಡಿದ ದೇವಯಾನಿ, ಶರ್ಮಿಷ್ಠೆಯರು ಪರಸ್ಪರ ನಿಂದಿಸಿ ಕಲಹ ಮಾಡಿದರು. ಅದು ವಿಕೋಪಕ್ಕೆ ಹೋಗಿ ಶರ್ಮಿಷ್ಠೆ ದೇವಯಾನಿಯನ್ನು ಬಾವಿಯೊಂದಕ್ಕೆ ತಳ್ಳಿ, ಆಕೆ ಸತ್ತಳೆಂದು ಭಾವಿಸಿ, ಅರಮನೆಗೆ ನಡೆದಳು. ಅದೇ ಹೊತ್ತಿಗೆ

---

೧ ಯಥಾ ಮಮ ಗುರುರ್ನಿತ್ಯಂ ಮಾನ್ಯಃ ಶುಕ್ರಃ ಪಿತಾ ತವ।
ದೇವಯಾನಿ ತಥೈವ ತ್ವಂ ನೈವಂ ಮಾಂ ವಕ್ತುಮರ್ಹಸಿ॥ - ಆದಿಪರ್ವ(೭೭/೮)

ಶ್ರಾಂತನಾಗಿ, ಬಾಯಾರಿ ಬಂದ ಯಯಾತಿ ರಾಜ ದೇವಯಾನಿಯ ಆಕ್ರಂದನವನ್ನು ಕೇಳಿ ಆಕೆಯ ಪ್ರಾರ್ಥನೆಯ ಮೇರೆಗೆ ಬಾವಿಯಿಂದ ತನ್ನ ಬಲಗೈಯಿಂದ ಮೇಲೆತ್ತಿದ. ಪರಸ್ಪರ ಪರಿಚಯವು ಆಯಿತು. ನಂತರ ಯಯಾತಿ ವಾಪಾಸಾದನು.

ಆ ಹೊತ್ತಿಗೆ **ಘೂರ್ಣಿಕಾ** ಎಂಬ ದಾಸಿ ಅಲ್ಲಿಗೆ ಬಂದಳು. ಆಕೆಯ ಮೂಲಕ ತಂದೆ ಶುಕ್ರರಿಗೆ ಶರ್ಮಿಷ್ಠೆಯ ದೌರ್ಜನ್ಯವನ್ನೆಲ್ಲ ತಿಳಿಸಿ ತಾನಿದ್ದಲ್ಲಿಗೆ ಬರಲು ಹೇಳಿ ಕಳಿಸಿದಳು ದೇವಯಾನಿ. ಆಚಾರ್ಯ ಶುಕ್ರರು ಬಂದು ತುಂಬಾ ದುಃಖಿತರಾದರು. ಶರ್ಮಿಷ್ಠೆ ಹಾಗೂ ಆಕೆಯ ತಂದೆ ವೃಷಪರ್ವ (ದಾನವ) ರಾಜನ ಮೇಲೂ ಖತಿಗೊಂಡರು. ಗುರುಗಳನ್ನು ಹೀಯಾಳಿಸಿದ ಶರ್ಮಿಷ್ಠೆಯನ್ನು ೧೦೦೦ ದಾಸಿಯರೊಂದಿಗೆ ದೇವಯಾನಿಯ ದಾಸ್ಯದಲ್ಲಿರಬೇಕೆಂಬ ದೇವಯಾನಿಯ ಅಪೇಕ್ಷೆಯಂತೆ ಆತನ ಮಗಳೂ ದೇವಯಾನಿಯ ದಾಸಳಾದಳು. ವೃಷಪರ್ವ ರಾಜನಿಗೆ ಶರ್ಮಿಷ್ಠೆಯ ವರ್ತನೆ ಹಿಡಿಸಿಯೇ ಇರಲಿಲ್ಲ. ಮಾಡಿದ ಅಪರಾಧಕ್ಕೆ ಈ ಶಿಕ್ಷೆ ರಾಜನಿಗೆ ಅಪಕೀರ್ತಿ. ಮುಂದೆ ದೇವಯಾನಿ ಮದುವೆಯಾದಾಗಲೂ ಅಲ್ಲಿಯೂ ಈ ಶರ್ಮಿಷ್ಠೆ ದಾಸಿಯಾಗಿಯೇ ಆತನನ್ನು ಅನುಸರಿಸಿದಳು.

ಒಮ್ಮೆ ಸಖಿಯರೊಂದಿಗೆ ದೇವಯಾನಿ ಶರ್ಮಿಷ್ಠೆಯರು ವನದಲ್ಲಿ ವಿಹರಿಸುತ್ತಿದ್ದಾಗ ಯಯಾತಿ ರಾಜನು ಬಾಯಾರಿಕೆಯಿಂದ ದಣಿವನ್ನು ಆರಿಸಲು ಬಂದನು. ದೇವಯಾನಿ ರಾಜನನ್ನು ಸತ್ಕರಿಸಿ, ಹಿಂದಿನ ಪ್ರಸಂಗವನ್ನು ನೆನಪಿಸಿ ತನ್ನ ಪಾಣಿಗ್ರಹಣ ಮಾಡಲು ಬೇಡಿದಳು. ಯಯಾತಿಗೆ ಬ್ರಾಹ್ಮಣ ಕುವರಿಯನ್ನು ಹೇಗೆ ಮದುವೆ ಆಗುವುದು ಎಂಬ ಯೋಚನೆ. ದೇವಯಾನಿ ತನ್ನ ಪ್ರಿಯ ತಂದೆಯನ್ನು ಅಲ್ಲಿಗೇ ಕರೆಸಿಬಿಟ್ಟಳು. ಶುಕ್ರರನ್ನು ಪ್ರದಕ್ಷಿಣೆ ಹಾಕಿ ಗೌರವಿಸಿದ ಯಯಾತಿ.

ಹೀಗೆ ಯಯಾತಿ ರಾಜ ಬ್ರಾಹ್ಮಣಿಯಾದ ದೇವಯಾನಿಯನ್ನು ಪಡೆದು ಆಕೆಯಲ್ಲಿ ಒಬ್ಬ ಮಗನನ್ನು (ಯದು) ಪಡೆದನು.

೧೦೦೦ ವರ್ಷಗಳಾದವು, ಶರ್ಮಿಷ್ಠೆ ಯೋಚಿಸಿದಳು. ನಾನಿನ್ನೂ ವಿವಾಹಿತಳಾಗಲಿಲ್ಲ, ಮಕ್ಕಳನ್ನು ಪಡೆಯಲಿಲ್ಲ, ದೇವಯಾನಿ ಮಗನನ್ನು ಪಡೆದಳು. ನನ್ನ ಯೌವನ ವ್ಯರ್ಥ, ದೇವಯಾನಿ ವರಿಸಿದಂತೆ ನಾನೂ ಯಯಾತಿಯನ್ನೇ ವರಿಸುವೆ. ಅವನಿಂದಲೇ ಪುತ್ರಫಲ ಪಡೆಯುವೆ. ಹೀಗೆ ಚಿಂತಿಸುತ್ತಾ ಅಶೋಕವನದಲ್ಲಿ ಒಬ್ಬಳೇ ಇದ್ದಾಗ ಯಯಾತಿ ರಾಜನು ಬಂದನು. ಆತನನ್ನು ಪ್ರಶಂಸಿಸಿ[೧] 'ರಾಜ! ನನಗೆ ಋತುದಾನ ಮಾಡು' ಎಂದು ಬೇಡಿದಳು (ನನ್ನ ಪತಿಯಾಗು). ಅದಕ್ಕೆ ಯಯಾತಿಯು 'ಶರ್ಮಿಷ್ಠೆ ನಾನು ಈಗಾಗಲೇ ಶುಕ್ರಾಚಾರ್ಯರಿಗೆ

---

೧ ಋತುಂ ದೇಹಿ ನರಾಧಿಪ (ಅ. ೮೨/೧೩) ಇತ್ಯತ್ರ ಋತುಂ ದೇಹಿ ಮಮ ಪತಿರ್ಭವೇತಿ ಭಾವಃ।
- ಲಕ್ಷಾಲಂಕಾರ (ಭಾಗ-೧; ಪು. ೮೩)

ನಿನ್ನನ್ನು ವಿವಾಹವಾಗುವುದಿಲ್ಲ ಎಂದು ಮಾತು ಕೊಟ್ಟಿರುವಾಗ ಹೇಗೆ ನಿನ್ನನ್ನು ವಿವಾಹವಾಗಲಿ' ಎಂದನು. ಶರ್ಮಿಷ್ಠೆಯು 'ಸತ್ಯಪರಿಪಾಲನೆ ರಾಜನಿಗೆ ಯುಕ್ತವಾದರೂ ಕೆಲವು ವಿಷಯಗಳಲ್ಲಿ ಅಸತ್ಯ ನುಡಿದರೆ ದೋಷವಿಲ್ಲ.

[೧]"ಹಾಸ್ಯಕ್ಕಾಗಿ, ವಿವಾಹಕಾಲದಲ್ಲಿ, ಸ್ತ್ರೀಯರೊಡನೆ ಇರುವಾಗ, ಪ್ರಾಣರಕ್ಷಣೆಗೆ ಸರ್ವಧನಾಪಹಾರ ಕಾಲಗಳಲ್ಲಿ ಹೇಳುವ ಅಸತ್ಯ ಪಾಪಕರವಲ್ಲ. ದೇವಯಾನಿಯ ದಾಸಿಯಾದ ನಾನು ಅಂತೆಯೇ ನಿನ್ನ ದಾಸಿಯೂ ಹೌದು. ಸಂತಾನಾರ್ಥಕ್ಕಾಗಿ ದಾಸಿಯಾದ ನಾನು ಅಂತೆಯೇ ನಿನ್ನ ದಾಸಿಯೂ ಹೌದು. ಸಂತಾನಾರ್ಥಕ್ಕಾಗಿ ಬೇಡುತ್ತಿರುವೆ' ಎಂದಳು. ರಾಜನು 'ಯಾಚಿಸುವವರ ಅಭೀಷ್ಟ ಈಡೇರಿಸುವ ವ್ರತ ನನ್ನದು' ಎಂದು ಒಪ್ಪಿದ. ಆಕೆಯ ಇಚ್ಛೆಯಂತೆ ಪಾಣಿಗ್ರಹಣವನ್ನು ಮಾಡಿ ಆಕೆಯಲ್ಲಿ ಒಬ್ಬ ಮಗನನ್ನು ಪಡೆದನು (ದ್ರುಹ್ಯ).

ದೇವಯಾನಿಯು ಶರ್ಮಿಷ್ಠೆ ಮಗನನ್ನು ಪಡೆದುದನ್ನು ಕೇಳಿ ವಿಸ್ಮಯಗೊಂಡಳು. ಆದರೆ ಶರ್ಮಿಷ್ಠೆ ಋಷಿಯೊಬ್ಬನಿಂದ ಈ ಮಗನನ್ನು ಪಡೆದೆ ಎಂದು ಅಸತ್ಯ ನುಡಿದಳು.

ಮುಂದೆ ದೇವಯಾನಿಯು ತುರ್ವಸು ಎಂಬ ಮಗನನ್ನು ರಾಜನಿಂದ ಪಡೆದಳು. ಶರ್ಮಿಷ್ಠೆಯು ಮತ್ತೆರಡು ಪುತ್ರರನ್ನು (ಅನು, ಪೂರ) ರಹಸ್ಯವಾಗಿ ಪಡೆದಳು.

ಒಂದು ದಿನ ಅಶೋಕವನದಲ್ಲಿ ಶರ್ಮಿಷ್ಠೆಯ ಮಕ್ಕಳು ಆಡುತ್ತಿದ್ದಾಗ ಅವರನ್ನು ನೇರವಾಗಿ ಮಾತನಾಡಿಸಿದ ದೇವಯಾನಿ, ಆ ಮಕ್ಕಳ ತಂದೆ ತನ್ನ ಪತಿ ಯಯಾತಿಯೇ ಎಂದು ತಿಳಿದು ಖತಿಗೊಂಡು ತನ್ನ ತಂದೆ ಶುಕ್ರರಿಗೆ ತಿಳಿಸಿದಳು.

ಮಗಳ ಮಾತನ್ನು ಕೇಳಿ ದುಃಖ, ಕೋಪಗಳಿಂದ ಶುಕ್ರರು ರಾಜನನ್ನು 'ನಿನಗೆ ವೃದ್ಧಾಪ್ಯ ಉಂಟಾಗಲಿ' ಎಂದು ಶಪಿಸಿದರು[೨]. ಯಯಾತಿಯ ವಿವರಣೆ ಶುಕ್ರರಿಗೆ ಹಿಡಿಸಲಿಲ್ಲ– ಪುತ್ರಿವ್ಯಾಮೋಹದಿಂದಾಗಿ. ಯಯಾತಿ ಒಡನೆಯೇ ವೃದ್ಧನಾದನು. ಪಶ್ಚಾತ್ತಾಪದಿಂದ ರಾಜನು ಮರುಗಿದ, ಬೇಡಿದ 'ದೇವಯಾನಿಯೊಡನೆ ನಾನು ಯೌವನದ ಸುಖದಿಂದ ತೃಪ್ತನಾಗಿಲ್ಲ. ನನಗೆ ವೃದ್ಧಾಪ್ಯ ಬರದಿರಲೆಂದು ಅನುಗ್ರಹಿಸಿ' ಎನ್ನಲು, ಶುಕ್ರರು 'ನಿನ್ನ ವೃದ್ಧಾಪ್ಯವನ್ನು ಬೇರೆಯವರಿಗೆ ಕೊಟ್ಟು ಅವನಿಂದ ಯೌವನ ಪಡೆ' ಎಂದು ವಿಶಾಪವಿತ್ತರು. ಯಯಾತಿಯು ಮತ್ತೆ ಯಾವ ನನ್ನ ಮಗನು ನನಗೆ ತನ್ನ ಯೌವನವನ್ನು ಕೊಡುವನೋ, ಅವನು ರಾಜ್ಯ, ಪುಣ್ಯ, ಹಣ, ಕೀರ್ತಿವಂತನಾಗುವಂತೆ ಅನುಗ್ರಹಿಸಲು ಕೋರಿದ. ಅದಕ್ಕೆ

---

೧ ನ ನರ್ಮಯುಕ್ತಂ ವಚನಂ ಹಿನಸ್ತಿ ನ ಸ್ತ್ರೀಷು ರಾಜನ್ ನ ವಿವಾಹಕಾಲೇ।
ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾಣ್ಯಾಹುರಪಾತಕಾನಿ ॥
– ಆದಿಪರ್ವ (೮೨/೧೬)

೨ ಪೂರ್ವಂ ವಯಃ ಪರಿತ್ಯಜ್ಯ ಜರಾಂ ಸದ್ಯೋಽನ್ವಪದ್ಯತ। – ಆದಿಪರ್ವ(೮೩/೩೭)

ಶುಕ್ರರು 'ನನ್ನನ್ನು ಸ್ಮರಿಸಿ ಯಾರಿಗೆ ವೃದ್ಧಾಪ್ಯ ಕೊಡುವಿಯೋ, ಅವನು ರಾಜನಾಗುವನು. ನಿನಗೆ ಪಾಪವೂ ಬರದು....' ಎಂದರು.

ಯಯಾತಿಯು ತನ್ನ ಮಕ್ಕಳಲ್ಲಿ ಒಬ್ಬೊಬ್ಬರನ್ನು ಕರೆದು ತನಗೆ ಯೌವನ ಕೊಟ್ಟು ತನ್ನ ಮುಪ್ಪನ್ನು ತೆಗೆದುಕೊಳ್ಳಲೂ, ೧೦೦೦ವರ್ಷಗಳ ನಂತರ ಮುಪ್ಪನ್ನು ವಾಪಸು ಪಡೆಯುವುದಾಗಿ ಹೇಳಿದನು. ದೇವಯಾನಿಯ ಮಕ್ಕಳಾರೂ ತಮ್ಮ ಯೌವನ ತ್ಯಾಗಕ್ಕೆ ಒಪ್ಪಲಿಲ್ಲ. ಶರ್ಮಿಷ್ಠೆಯ ಮೂವರು ಮಕ್ಕಳಲ್ಲಿ, ಇಬ್ಬರು ಒಪ್ಪಲಿಲ್ಲ. ಚಿಕ್ಕ ಮಗ ಪೂರು ತಂದೆಗೆ ತನ್ನ ಯೌವನವನ್ನು ಕೊಟ್ಟು ತಂದೆಯ ವೃದ್ಧಾಪ್ಯ ಪಡೆದು **'ಪಿತೃದೇವೋ ಭವ'** ಎಂಬ ಶ್ರುತಿಯ ಆಜ್ಞೆಯನ್ನು ಜಗತ್ತಿಗೆ ನಡೆದು ತೋರಿಸಿದ. ಮುಪ್ಪನ್ನು ಸ್ವೀಕರಿಸದ ತನ್ನ ಇತರ ಮಕ್ಕಳನ್ನು ಯಯಾತಿ ಶಪಿಸಿದ. ಯದುವಿಗೆ ನಿನ್ನ ಮಕ್ಕಳಾರೂ ರಾಜರಾಗದಿರಲಿ ಎಂದು ಶಪಿಸಿದ. ಇತರರಿಗೂ ಅನೇಕ ರೀತಿಯಿಂದ ಶಪಿಸಿದ. ಆದ್ದರಿಂದ ಯಾದವರಾರೂ ಮುಂದೆ ರಾಜರಾಗಲಿಲ್ಲ. ಅದರೆ ಯಾದವ ಕೃಷ್ಣನು ರಾಜರನ್ನೇ ಮಾಡುವ ರಾಜಾಧಿರಾಜನೆಂಬುದನ್ನು ಮರೆಯುವಂತಿಲ್ಲ.

ಯಯಾತಿಯು ಶುಕ್ರರನ್ನು ಸ್ಮರಿಸಿ ಪೂರುವಿಗೆ ಮುಪ್ಪನ್ನು ಕೊಟ್ಟು ಆತನಿಂದ ಯೌವನ-ವನ್ನು ಪಡೆದನು. ೧೦೦೦ವರ್ಷಗಳವರೆಗೆ ನಂದನಾದಿ ವನಗಳಲ್ಲಿ ಊಹಾತೀತವಾದ ವಿಷಯಸುಖಗಳನ್ನು ಅನುಭವಿಸಿದರೂ ಕಾಮತೃಷ್ಣೆ ಮಾತ್ರ ಕಡಿಮೆಯಾಗದಿದ್ದದನ್ನು ಮನಗಂಡನು. [೧]ಅದರಂತೆ ರಾಜ್ಯವನ್ನು ಧರ್ಮಾವಿರುದ್ಧವಾಗಿ ಆಳಿದನು.

ನಂತರ ಮಗನನ್ನು ಕರೆದು ಆಶೆಯ ಇತಿಮಿತಿಗಳನ್ನು ವಿವರಿಸಿದ. 'ಪ್ರಪಂಚದಲ್ಲಿರುವ ಧನಕನಕಗಳೆಲ್ಲ ಒಬ್ಬನಿಗೇ ಇದ್ದರೂ ತೃಪ್ತಿ ಇರದು. ಆದ್ದರಿಂದ ಕಾಮದ ತೃಪ್ತಿ ಕಾಮನೆಯ ತ್ಯಾಗದಿಂದಲೇ ಹೊರತು, ಅದನ್ನು ತೃಪ್ತಿ ಪಡಿಸುತ್ತಾ ಹೋದಂತೆಲ್ಲ ಅಲ್ಲ. ಆದ್ದರಿಂದ ಪೂರು, ನನಗೆ ಈಗ ವೈರಾಗ್ಯ ಬಂದಿದೆ. ಇನ್ನಾದರೂ ನಾನು ಬ್ರಹ್ಮಪ್ರಾಪ್ತಿಗೆ ಪ್ರಯತ್ನಿಸುವೆ. ನಿನ್ನ ತ್ಯಾಗಕ್ಕೆ ಪ್ರೀತನಾಗಿದ್ದೇನೆ. ನಿನ್ನ ಯೌವನ ಸ್ವೀಕರಿಸು. ಈ ರಾಜ್ಯವನ್ನೂ ತೆಗೆದುಕೋ. ನೀನು ನನ್ನ ಪ್ರೀತಿಪಾತ್ರ ಮಗ' ಎಂದನು.

ಪೂರು ತಂದೆಯಿಂದ ಯೌವನ ಪಡೆದ. ರಾಜನು ಪುರುವಿಗೆ ಅಭಿಷೇಕ ಮಾಡಲು ಉದ್ಯುಕ್ತನಾಗಲು ಬ್ರಾಹ್ಮಣರು ಹಿರಿಯಮಗ ಯದು ನಂತರ, ತುರ್ವಸು, ದ್ರುಹ್ಯ, ಅನು ಇವರನ್ನು ಬಿಟ್ಟು ಕನಿಷ್ಠ ಪುತ್ರ ಪುರುವಿಗೆ ಏಕೆ ಪಟ್ಟಕಟ್ಟುವೆ ಎಂದು ಕೇಳಿದರು. ಅದಕ್ಕೆ ಯಯಾತಿಯು 'ಯದು ಮೊದಲಾದ ನಾಲ್ವರು ಪುತ್ರರು ತಂದೆಯಾದ ನನ್ನ ಮಾತನ್ನು ಪಾಲಿಸಲಿಲ್ಲ. ಮಾತಾಪಿತೃವಾಕ್ಯಪಾಲಕರೇ ನಿಜವಾದ ಪುತ್ರರು. ಪೂರು ನನ್ನ ಮಾತನ್ನು

---

೧ ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ॥

ನಡೆಸಿದ ನಿಜವಾದ ಮಗ. ಅಲ್ಲದೇ ನನಗೆ ಶಾಪ ಕೊಟ್ಟ ಶುಕ್ರರು ಸಹ ವೃದ್ಧಾಪ್ಯ ಯೌವನ ವಿನಿಮಯ ಮಾಡಿಕೊಳ್ಳುವ ಮಗನಿಗೇ ರಾಜ್ಯವೆಂದು ಅನುಮೋದಿಸಿದ್ದಾರೆ' ಎಂದನು. ಪ್ರಜೆಗಳು ಇದನ್ನು ಅನುಮೋದಿಸಿದರು. ಶುಕ್ರರ ಮಾತನ್ನು ಅವರೆಲ್ಲ ಸಂಭಾವಿಸಿದರು.

ನಂತರ ಯಯಾತಿ ಪೂರುವಿಗೆ ರಾಜ್ಯಾಭಿಷೇಕ ಮಾಡಿ ಬ್ರಾಹ್ಮಣ ತಾಪಸರೊಡನೆ ವನಕ್ಕೆ ತಪಸ್ಸಿಗಾಗಿ ತೆರಳಿದನು. ಪುರುವಿನ ವಂಶದವರೇ ಪೌರವರು- ಶಂತನು, ಪಾಂಡು, ಧೃತರಾಷ್ಟ್ರ ಪಾಂಡವರು, ದುರ್ಯೋಧನಾದಿಗಳು ಚಂದ್ರವಂಶದಲ್ಲಿ ಮುಂದೆ ಬರುವರು.

ಯದುವಂಶದವರೇ ಯಾದವರು. ತುರ್ವಸುವಿನ ವಂಶದವರೇ ಯವನರು; ದ್ರುಹ್ಯನ ಮಕ್ಕಳೆಲ್ಲ ಭೋಜರೆಂದೂ, ಅನುವಿನ ಮಕ್ಕಳು ಮ್ಲೇಚ್ಛ ಜಾತಿಯವರಾದರು.

ಯಯಾತಿಯು ವನಕ್ಕೆ ತೆರಳಿ ವಾನಪ್ರಸ್ಥ ಆಶ್ರಮ ಸ್ವೀಕರಿಸಿ ಇಂದ್ರಿಯನಿಗ್ರಹ ಮಾಡುತ್ತಾ ತಪಸ್ಸನ್ನು ಮಾಡಿದನು. ಪಿತೃದೇವತೆಗಳನ್ನು ತರ್ಪಣಾದಿಗಳಿಂದ ತೃಪ್ತಿ ಪಡಿಸಿದನು. ಅಗ್ನಿಪೂಜೆ, ಅತಿಥಿಪೂಜೆ, ಶಿಲೋಂಛವೃತ್ತಿ ಜೀವನ, ಮುನಿಶೇಷಾನ್ನ ಭೋಜನನಾಗಿ ೧೦೦೦ವರ್ಷ ಕಳೆದನು. ನಂತರ ೩೦ ವರ್ಷಗಳ ಕಾಲ ವಾಕ್, ಮನಗಳನ್ನು ನಿಗ್ರಹಿಸಿ ಕೇವಲ ನೀರನ್ನು ಕುಡಿದು ನಂತರ ಒಂದು ವರ್ಷ ಕೇವಲ ವಾಯುಭಕ್ಷನಾಗಿದ್ದನು. ಆಮೇಲೆ ೧ವರ್ಷ ಪಂಚಾಗ್ನಿಗಳ ಮಧ್ಯೆ ತಪಸ್ಸನ್ನು ಮಾಡಿದನು. ನಂತರ ೬ ತಿಂಗಳು ವಾಯುಸೇವನೆ ಮಾತ್ರ ಮಾಡಿ ಒಂದೇ ಕಾಲಿನ ಮೇಲೆ ನಿಂತು ತಪಸ್ಸು ಮಾಡಿದನು. ಹೀಗೆ ತೀವ್ರ ತಪಸ್ಸನ್ನು ಮಾಡಿ ರಾಜನು ಸ್ವರ್ಗಕ್ಕೆ ಹೋದನು.

## ಸಂದೇಶಗಳು-ವಿವರಣೆಗಳು

೧. ದೇವದೈತ್ಯರು ಸಂಘರ್ಷದಲ್ಲಿ ದೇವತೆಗಳು ದೈತ್ಯ ಗುರುಗಳಿಂದಲೂ ವಿದ್ಯೆ ಕಲಿತುದು ವಿದ್ಯಾಲಾಲಸೆಯ ಮಹತ್ತ್ವ ತಿಳಿಸುತ್ತದೆ. ವಿದ್ಯೆಯ ಮೂಲಕ್ಕಿಂತ ವಿದ್ಯಾಭಿಮಾನ ತುಂಬಾ ಅನುಕರಣೀಯವೇ ಸರಿ.

೨. ವಿದ್ಯಾರ್ಜನೆಗೆ ಬಂದವನು ಶತ್ರುಪಕ್ಷದವನಾದರೂ ಕಚನಿಗೆ ಅನುಗ್ರಹ ಮಾಡಿದ ಶುಕ್ರರ ವಿಶಾಲ ಭಾವನೆ, ಕಚನ ಗುರುಭಕ್ತಿ, ಗುರುಪುತ್ರಿಭಕ್ತಿ, ಆತನ ಅಖಂಡ ಬ್ರಹ್ಮಚರ್ಯಗಳು ಅನುಕರಣೀಯವೇ ಆಗಿವೆ. ಎಂತಹ ಪ್ರಚೋದನಾತ್ಮಕ ಸನ್ನಿವೇಶದಲ್ಲಿದ್ದರೂ ವಿದ್ಯಾರ್ಥಿಯು ಹೇಗಿರಬೇಕೆಂದು ಕಚನಿಂದ ತಿಳಿಯಬಹುದಾದ ಪಾಠ.

೩. ದೇವಯಾನಿಯು ಕಚನಿಗೆ ನೀಡಿದ ಸಹಕಾರ, ಸಹಾಯ ಸಾವಿನ ದವಡೆಯಿಂದಲೇ ೩ ಬಾರಿ ಪಾರು ಮಾಡಿಸಿದುದು ಮಾನ್ಯ. ಶಿಷ್ಯರ ಶೋಷಣೆಯಾಗಬಾರದೆಂಬ ಆಕೆಯ ವಿಚಾರ, ಶಿಷ್ಯರನ್ನು ಆಪತ್ತುಗಳಿಂದ ಪರಿಹಾರ ಮಾಡಿಸಿದ ಆಕೆಯ ಔದಾರ್ಯ ಅತ್ಯಂತ ಅನುಕರಣೀಯ. ಆದರೆ ದೇವಯಾನಿ ಕೊನೆಗೆ ಸೋಲುತ್ತಾಳೆ, ಶಾಪ ಕೊಟ್ಟು

೪. ದೇವಯಾನಿಯ ಪ್ರೇಮದ ಆಳ ತಿಳಿದೂ ಕಚ ಆಕೆಯಲ್ಲಿ ಪೂಜ್ಯಭಾವನೆಯನ್ನೇ ಪ್ರದರ್ಶಿಸಿದ. ಶಾಪ ಸ್ವೀಕರಿಸಿದನೇ ಹೊರತು ಭಾವನಾತ್ಮಕನಾಗಿ ಆಕೆಯ ಪಾಣಿಗ್ರಹಣ ಮಾಡಲೇ ಇಲ್ಲದ ಆದರ್ಶ ಶಿಷ್ಯ ಬ್ರಹ್ಮಚಾರಿಯೇ ಕಚ.

೫. ಶರ್ಮಿಷ್ಠೆಯು ಬ್ರಾಹ್ಮಣರನ್ನು, ಗುರುಗಳನ್ನು ನಿಂದಿಸಿ ದಾಸಿಯಾಗಿ ಶಿಕ್ಷೆ ಅನುಭವಿಸುತ್ತಾಳೆ. ಬ್ರಾಹ್ಮಣರ ಗುರುಗಳ ಅನುಮಾನ ಎಂದೂ ಸಲ್ಲದು. ದರ್ಪಕ್ಕೆ ತಕ್ಕ ಶಿಕ್ಷೆ ತಪ್ಪಿದ್ದಲ್ಲ, ಎಂತಹ ಶ್ರೇಷ್ಠ ಸಾಧನೆಯಲ್ಲಿದ್ದರೂ.

೬. ಶರ್ಮಿಷ್ಠೆಯಿಂದ ಬಾವಿಗೆ ತಳ್ಳಲ್ಪಟ್ಟ ದೇವಯಾನಿ ಯಯಾತಿಯ ಮಾನವೀಯತೆಯಿಂದಾಗಿ ಮೇಲೇರಿ ಆತನ ರಾಣಿಯೂ ಆಗುತ್ತಾಳೆ. ಅಲ್ಲೂ ಯಯಾತಿ, ದೇವಯಾನಿ ಬ್ರಾಹ್ಮಣಿ. ಆಕೆಯೊಡನೆ ವಿವಾಹ ಅಶಾಸ್ತ್ರೀಯವೆಂದು ಬಗೆದ ನಿಜವಾದ ಕ್ಷತ್ರಧರ್ಮಪಾಲಕ. ಅಂತೆಯೇ ಅಂತಹ ರಾಜನಿಗೆ ದೇವಯಾನಿಯಂತಹ ತಪಸ್ವೀ ಬ್ರಾಹ್ಮಣಿಯ ಕೈ ಹಿಡಿಯುವ ಭಾಗ್ಯ ಸಿಗುತ್ತದೆ. ಆದರೆ ಆಕೆಯ ಸ್ವಾರ್ಥ ಶರ್ಮಿಷ್ಠೆಯ ವ್ಯಕ್ತಿತ್ವಕ್ಕೆ ಧಕ್ಕೆ ತರುತ್ತದೆ. ತಾನು ಪತಿಸೌಖ್ಯದಿಂದ ವಂಚಿತಳಾಗುತ್ತಾಳೆ ತಂದೆಯ ಶಾಪದಿಂದ.

೭. ಶುಕ್ರಾಚಾರ್ಯರ ಪುತ್ರೀವ್ಯಾಮೋಹ ಅಸಹನೆಯಾಗುವಷ್ಟು! ಅಂತೆಯೇ ಅಳಿಯನಿಗೆ ಮುಪ್ಪು ಬರಲೆಂಬ ಶಾಪ ಕೊಡುವಷ್ಟು ಕ್ರೌರ್ಯ, ನಂತರ ಔದಾರ್ಯ, ವಿಶಾಪಗಳು ಬ್ರಾಹ್ಮಣೋಚಿತ ಕ್ಷಮಾಗುಣಕ್ಕೆ ನಿದರ್ಶನ.

೮. ಯಯಾತಿಯು ಶರ್ಮಿಷ್ಠೆಯ ಮೇಲೆ ತೋರಿದ ಔದಾರ್ಯ ಪಾಣಿಗ್ರಹಣ ಶರ್ಮಿಷ್ಠೆಯ ಯಾಚನೆಗೆ ತಕ್ಕ ಮರ್ಯಾದೆ, ಆಕೆಯ ಧಾರ್ಮಿಕ, ಲೌಕಿಕ ಪ್ರಶ್ನೆಗಳು ಆಕೆಯನ್ನು ರಾಜಪತ್ನಿಯನ್ನಾಗಿಸಿದವು. ಸ್ತ್ರೀಸಹಜವಾದ ಸಂತಾನಭಿಕ್ಷೆ ಯಯಾತಿಗೆ ಮಾಡಿದಾಗ, ಆತನ ಸತ್ಯಸಂಧತೆಯೇ ಪಣಕ್ಕಿಟ್ಟಾದರೂ ಶರ್ಮಿಷ್ಠೆಯನ್ನು ಮದುವೆಯಾದ.

೯. ಯಯಾತಿಯ ಐವರು ಮಕ್ಕಳಲ್ಲಿ ಪೂರು ಪ್ರದರ್ಶಿಸಿದ ಸ್ವಾರ್ಥತ್ಯಾಗದ ಪರಮಾವಧಿ. ಯೌವನ ದಾನ ಒಂದು ಐತಿಹಾಸಿಕ ದಾಖಲೆ. ರಾಜ್ಯಕೋಶಗಳ ದಾನಮಾಡಿದವರು ಸಿಗುತ್ತಾರೆ. ತನ್ನ ಖಾಸಗಿ ಬದುಕನ್ನೇ ತ್ಯಾಗ ಮಾಡಿದ ಮಹಾತ್ಮ ಪೂರು. ಆದರೆ ಉಳಿದ ಯಾವ ಮಕ್ಕಳೂ ಆ ಮಟ್ಟಕ್ಕೆ ಬರದ ಅಪ್ರಬುದ್ಧರು.

೧೦. ಯಯಾತಿಯ ವೈರಾಗ್ಯ, ಕಾಮದ ಇತಿಮಿತಿ, ಜ್ಞಾನ ಇಡೀ ಆಧ್ಯಾತ್ಮ ವಿಜ್ಞಾನಕ್ಕೆ ದೃಷ್ಟಾಂತಪ್ರಾಯವಾಗಿದೆ.

**ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ - ಆದಿಪರ್ವ(೮೫/೧೨)**

ಮುಪ್ಪು, ಯೌವನಗಳ ವಿನಿಮಯವು ಆಧುನಿಕ ವಿಜ್ಞಾನಕ್ಕೆ ಒಂದು ಭಾರಿ ಸವಾಲು. ಕಾಮಾಗ್ನಿಗೆ ವಿಷಯಗಳ ಸೇವನೆಯೆಂಬ ತುಪ್ಪ ಹಾಕಿದಷ್ಟು ಕಾಮಗಳು ಹೆಚ್ಚುತ್ತವೆ.

ಇನ್ನೂ ಬೇಕೆನ್ನಿಸುತ್ತದೆ. ಕಾಮವನ್ನು ತಣಿಸಲು ಅಸಾಧ್ಯ. ಅಗ್ನಿಗೆ ತುಪ್ಪ ಹಾಕಲು ಅಗ್ನಿ ಪ್ರಜ್ವಲಿಸುತ್ತದೆಯೇ ಹೊರತು ನಂದುವುದಿಲ್ಲ.

೧೧. ಭಾರತದ ಮೂಲಕಥೆಯಲ್ಲಿ ಅರ್ಜುನ, ಊರ್ವಶಿ ಪ್ರಸಂಗ ಗಮನಾರ್ಹ. ಕಚನು ದೇವಯಾನಿಯನ್ನು ಪೂಜ್ಯಭಾವನೆಯಿಂದ ಕಂಡಂತೆ ಅರ್ಜುನನೂ ಊರ್ವಶಿಯನ್ನು ಕಂಡನು. ಆಕೆಯ ಶಾಪಕ್ಕೆ ಒಳಗಾದುದನ್ನು[೧] ಅರಣ್ಯಪರ್ವದಲ್ಲಿ ನೋಡಬಹುದಾಗಿದೆ. ಅಲ್ಲದೆ ಅದೇ ಅರ್ಜುನನು ವಿರಾಟನ ಮಗಳನ್ನು (ಉತ್ತರೆಗೆ) ನಾಟ್ಯಶಾಸ್ತ್ರ ಹೇಳಿಕೊಡುತ್ತಿದ್ದರಿಂದ ಶಿಷ್ಯಳನ್ನಾಗಿ ನೋಡುತ್ತಿದ್ದ. ಅಂತೆಯೇ ಆಕೆಯನ್ನು ಮದುವೆಯಾಗಲು ಒಪ್ಪದೇ ತನ್ನ ಮಗ ಅಭಿಮನ್ಯುವಿಗೆ ತೆಗೆದುಕೊಂಡುದುದನ್ನು ನೋಡುತ್ತೇವೆ.

೧೨. ಕಾಮದಇತಿಮಿತಿಗಳನ್ನುಯಯಾತಿಯುಅದನ್ನುಅನುಭವಿಸಿಯೇತಿಳಿದುಕೊಂಡ. **'ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ'** ಎಂದು. **'ಔಪಸ್ಥ್ಯಜೈಹ್ವ್ಯಂ ಬಹುಮಾನ್ಯಮಾನಃ'** ಎಂಬ ಭಾಗವತದ ಮಾತಿಗೆ ಉದಾಹರಣೆಯಾಗಿ ಯಯಾತಿಯ ವರ್ತನೆ(ಆತ ಜ್ಞಾನಿಯಾಗಿದ್ದರೂ). ಅನೇಕ ಪತ್ನಿಯರಿದ್ದ ಮಧ್ಯಮ ಪಾಂಡವ ಭೀಮನ ಪ್ರಜ್ಞೆ, ಕಾಮವೆಂದರೆ ದೈಹಿಕತೃಷೆಯಾಗಿರಲಿಲ್ಲ. ನಿಜವಾದ ಕಾಮವೆಂದರೆ **'ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ'** ಎಂಬ ಗೀತೋಕ್ತಿಯಂತೆ(೭/೧೧) ಇಚ್ಛೆ ಶ್ರೀಹರಿಯೇ ಆಗಿದ್ದ, ಶ್ರೀಭೀಮಸೇನನಿಗೆ **'ಕಾಮಂ ಹಿ ಕಾಮ್ಯಾಭಿಮಾಹುರಾರ್ಯಾಃ'** (ಮ.ತಾ.ನಿ.-೨೯/೫೬) ಎಂದು ಭಾವಿಸಿದ ಭೀಮನೆಲ್ಲಿ, ಅದನ್ನು ಸಾಮಾನ್ಯ ಅರ್ಥದಲ್ಲಿ ತಿಳಿದು ಅನುಭವಿಸಿ ಅದನ್ನು ತ್ಯಾಗ ಮಾಡಿದ ಯಯಾತಿ ಎಲ್ಲಿ? ಆದ್ದರಿಂದಲೇ ಎಲ್ಲೆಡೆ ದೇವರನ್ನು ಕಂಡ ಭೀಮ ಜೀವೋತ್ತಮನಾದ. ಯಯಾತಿಯೇ ಮೊದಲಾದವರು ಸಾಮಾನ್ಯ ಜೀವರಾದರು. ಭೀಮನಿಗಿಂತ ತುಂಬಾ ಕಡಿಮೆಯಾದರೂ ಯಯಾತಿಗಿಂತ ಉತ್ತಮನಾದ ಧರ್ಮರಾಜನು ದೈಹಿಕ ತೃಷೆಯಿಂದ, ತನ್ನ ಜೀವನದಲ್ಲಿ ಬಹುಬೇಗನೆ **'ವನಿತಾ ನಿವೃತ್ತನಾಗಿ** ಮೋಕ್ಷಕ್ಕಾಗಿ ಸಾಧನೆ ಮಾಡಿದ ಧರ್ಮಸ್ವರೂಪಿಯಾಗಿದ್ದನು. ಯಯಾತಿ ಶಾಪ ಬಂದ ಮೇಲೆ ವನಿತಾ ನಿವೃತ್ತನಾಗದೆ ಬಹಳ ತಡವಾಗಿ ನಿವೃತ್ತನಾದನೆಂದು ಭಾರತ ಹೇಳುತ್ತದೆ. ಆದ್ದರಿಂದ ಪಾಂಡವರು ಯಯಾತಿಗಿಂತ ಶ್ರೇಷ್ಠ

*****

---

೧ ಮ.ತಾ.ನಿ.(೨೨/೧೫೪)

# ೧೬. ಅಣಿಮಾಂಡವ್ಯೋಪಾಖ್ಯಾನ

ಸರ್ವಧರ್ಮ ಬಲ್ಲವನೂ, ಸತ್ಯ, ತಪಸ್ಸುಗಳಲ್ಲಿ ನಿರತನಾದ ಮಾಂಡವ್ಯನೆಂಬ ಬ್ರಾಹ್ಮಣನು ತನ್ನ ಆಶ್ರಮದ ದ್ವಾರದಲ್ಲಿರುವ ಮರದ ಕೆಳಗೆ ಕೈಯೆತ್ತಿ ಮೌನವ್ರತಧಾರಿಯಾಗಿ ಬಹಳ ಕಾಲದಿಂದ ತಪಸ್ಸು ಮಾಡುತ್ತಿದ್ದ. ಆಶ್ರಮಕ್ಕೆ ಒಮ್ಮೆ ನಗ, ನಾಣ್ಯಗಳನ್ನು ಕದ್ದು ತಂದ ಕಳ್ಳರು ಪ್ರವೇಶಿಸಿದರು. ಅವರ ಹಿಂದೆ ರಾಜಭಟರು ಬೆನ್ನಟ್ಟಿ ಬರುತ್ತಿರುವುದನ್ನರಿತ ಕಳ್ಳರು ಇದ್ದ ನಗನಾಣ್ಯಗಳನ್ನು ಆಶ್ರಮದಲ್ಲಿಯೇ ಇಟ್ಟು ಅಲ್ಲಿಯೇ ಅಡಗಿಕೊಂಡರು. ಬೆನ್ನಟ್ಟಿ ಬರುತ್ತಿದ್ದ ರಾಜಭಟರು ಆಶ್ರಮಕ್ಕೆ ಬಂದು ಮೌನವಾಗಿ ಕುಳಿತಿದ್ದ ಮುನಿಯನ್ನು ಕುರಿತು 'ಎಲೈ ಬ್ರಾಹ್ಮಣನೇ! ಯಾವ ಮಾರ್ಗದಿಂದ ಕಳ್ಳರು ಹೋದರು ತಿಳಿಸು, ನಾವು ಅದೇ ಮಾರ್ಗದಿಂದ ಶೀಘ್ರವಾಗಿ ಹೋಗುವೆವು' ಹೀಗೆ ಹೇಳಿದ ರಾಜಭಟರನ್ನು ಕುರಿತು ಮುನಿಯು ಏನೂ ಮಾತನಾಡಲಿಲ್ಲ. ನಂತರ ರಾಜಭಟರು ಆಶ್ರಮವನ್ನು ಹುಡುಕಲು, ಅಲ್ಲಿ ಅಡಗಿದ್ದ ಕಳ್ಳರನ್ನೂ, ಕದ್ದ ನಗನಾಣ್ಯಗಳನ್ನು ನೋಡಿದರು. ಆದ್ದರಿಂದ ಅವರಿಗೆ ಈ ಮುನಿಯ ಮೇಲೆ ಸಂಶಯವುಂಟಾಯಿತು. ರಾಜಭಟರು ಕಳ್ಳರನ್ನೂ, ಮುನಿಯನ್ನು ಬಂಧಿಸಿ ರಾಜನಿಗೆ ನಿವೇದಿಸಿದರು. ಕಳ್ಳರೊಂದಿಗೆ ಋಷಿಯನ್ನೂ ಶೂಲಕ್ಕೇರಿಸಲು ರಾಜನು ಆದೇಶವಿತ್ತನು. ಬಹುಕಾಲದವರೆಗೆ ಈ ಋಷಿಯು ಶೂಲದಲ್ಲಿಯೇ ಇದ್ದರೂ ನಿರಾಹಾರನಾಗಿದ್ದು ಯೋಗಬಲದಿಂದ ಮರಣ ಹೊಂದಲಿಲ್ಲ. ತನ್ನ ಆಶ್ರಮವಾಸಿ ಮಹರ್ಷಿಗಳನ್ನೂ ತಾನಿದ್ದಲ್ಲಿಗೆ ಆಮಂತ್ರಿಸಿದನು. ಬಂದ ಋಷಿಗಳು ಮಾಂಡವ್ಯರ ಸ್ಥಿತಿಗೆ ಮರುಗಿ, ಇದಕ್ಕೆ ಕಾರಣವೇನೆಂದು ಕೇಳಿದರು.

ಮಾಂಡವ್ಯರು ಆ ಋಷಿಗಳನ್ನು ಕುರಿತು 'ಇದಕ್ಕಾಗಿ ನಾನು ಯಾರನ್ನು ನಿಂದಿಸಲಿ, ನನ್ನನ್ನೇ ನಿಂದಿಸಬೇಕಾಗಿದೆ' ಎಂದು ನುಡಿದರು. ಮಾಂಡವ್ಯರು ಬದುಕಿರುವುದನ್ನು ರಾಜಭಟರು ರಾಜನಿಗೆ ನಿವೇದಿಸಲು , ರಾಜನು ಮಂತ್ರಿಗಳೊಡನೆ ಆಗಮಿಸಿ ಶೂಲದಲ್ಲಿರುವ ಮಾಂಡವ್ಯರನ್ನು ಅಜ್ಞಾನದಿಂದಾದ ಅಪರಾಧ, ಪ್ರಮಾದಗಳನ್ನು ಕ್ಷಮಿಸಲು ಕೋರಿದನು. ಮಾಂಡವ್ಯರು ರಾಜನನ್ನು ಕ್ಷಮಿಸಿದರು. ರಾಜಭಟರು ಮಾಂಡವ್ಯರನ್ನು ಕೆಳಗಿಳಿಸಿ ಶೂಲದಿಂದ ಬೇರ್ಪಡಿಸಲು ಪ್ರಯತ್ನಿಸಿದರೂ, ಸಾಧ್ಯವಾಗದೇ ಮಹರ್ಷಿಯ ಶರೀರದೊಳಗೆ ಹೊಕ್ಕ ಶೂಲವನ್ನು ಬಿಟ್ಟು ಉಳಿದ ಶೂಲಭಾಗವನ್ನು ಕತ್ತರಿಸಿದರು. ಶೂಲದ ಭಾಗ ಶರೀರದಲ್ಲಿ ಸಿಕ್ಕಿದರೂ ಮುನಿಯು ನೋವಿಲ್ಲದೆ ತಿರುಗಾಡುತ್ತಿದ್ದನು. ಅನಂತರವೂ ಆತನು ಭಾರಿ ತಪಸ್ಸನ್ನು ಮಾಡಿ ಉತ್ತಮ ಲೋಕಗಳನ್ನು ಜಯಿಸಿದನು. ಅಂದಿನಿಂದ ಮಾಂಡವ್ಯರು '**ಅಣಿಮಾಂಡವ್ಯ**'ರೆಂದು ಖ್ಯಾತನಾಮರಾದರು.

ನಂತರ ಮಾಂಡವ್ಯರು ಯಮ ಸದನಕ್ಕೆ ಹೋಗಿ 'ನಾನು ಮಾಡಿದ ಯಾವ ಅಪರಾಧದಿಂದ ಈ ಶೂಲದ ಯಾತನೆಯನ್ನು ನಿರಂತರ ಅನುಭವಿಸಬೇಕಾಗಿದೆ? ಕೂಡಲೇ

ಹೇಳು. ನನ್ನ ತಪಃಶಕ್ತಿಯ ಫಲ ಎಷ್ಟೆಂದು ತೋರಿಸುವೆ' ಎಂದು ಹೇಳಿದರು. ಯಮನು, ನೀವು (ನೊಣ) [1]ಚಿಟ್ಟೆಗಳ ಹಿಂದಿನ ಭಾಗಕ್ಕೆ ಹುಲ್ಲಿನ ಕಡ್ಡಿಯಿಂದ ಚುಚ್ಚಿ ತೊಂದರೆ ಕೊಟ್ಟಿದ್ದರಿಂದ ಈ ಯಾತನೆ ಎಂದನು. ಅಣಿಮಾಂಡವ್ಯರು ಈ ಅಪರಾಧ ನಾನು ಮಾಡಿದ್ದು ಯಾವಾಗ ಎನ್ನಲು, ಯಮನು 'ನೀವು ಬಾಲಕರಾಗಿದ್ದಾಗ' ಎಂದನು. ಅದಕ್ಕೆ ಋಷಿಗಳು 'ಧರ್ಮರಾಜ! ಹನ್ನೆರಡು ವರ್ಷಗಳವರೆಗೆ ಮಾಡಿದ ಅಪರಾಧ ಪಾಪವೆನಿಸದು. ಅಲ್ಪಾಪರಾಧಕ್ಕೆ ಈ ಶಿಕ್ಷೆ ಬಹಳವಾಯಿತು. ಬ್ರಾಹ್ಮಣ ವಧೆಯಂತಹ ಈ ಶಿಕ್ಷೆ ಎಲ್ಲ ಪ್ರಾಣಿಗಳ ವಧೆಗಿಂತ ದೊಡ್ಡದು. ಆದ್ದರಿಂದ ನೀನು ಶೂದ್ರಯೋನಿಯಲ್ಲಿ ಮನುಷ್ಯನಾಗಿ ಹುಟ್ಟುವೆ. ಇನ್ನು ಮೇಲೆ ೧೪ ವರ್ಷಗಳವರೆಗೆ ಮಾಡಿದ ಅಪರಾಧಗಳು ಪಾತಕಗಳಾಗದಿರಲಿ, ಈ ನಿಯಮ ಇನ್ನು ಮುಂದೆ ಜಾರಿ ಇರಲಿ' ಎಂದು ನುಡಿದು ಹೊರಟರು.

ಆದ್ದರಿಂದ ಮಾಂಡವ್ಯರ ಶಾಪದಿಂದಾಗಿ ಯಮಧರ್ಮರಾಜನು ೨೮ನೇ ದ್ವಾಪರಯುಗದಲ್ಲಿ ವ್ಯಾಸರ ಮಗನಾಗಿ ಅಂಬಿಕೆಯ ದಾಸಿಯಲ್ಲಿ ಶೂದ್ರನಾಗಿ ಜನಿಸಿದನು.

## ಸಂದೇಶಗಳು- ವಿವರಣೆಗಳು

ವಾಸ್ತವವಾಗಿ ಮಾಂಡವ್ಯರು ವಸಿಷ್ಠ ಸಾಮ್ಯವನ್ನು ಹೊಂದಬೇಕೆಂದು ತಪಸ್ಸು ಮಾಡುತ್ತಿದ್ದರು. ಇಂತಹ ತಪಸ್ಸಿನಿಂದ ಮಾಂಡವ್ಯರಿಗೇ ಹಾನಿಯೆಂದು ಭಾವಿಸಿ ಹರಿಇಚ್ಛೆಯಿಂದಲೇ ಯಮನು ಋಷಿಗಳಿಗೆ ಅವರು ಮಾಡಿದ ಅಪರಾಧ ತಿಳಿಸದೇ ಬೇರೆ ಅಪರಾಧ ಹೇಳಿ ಅವರಿಗೆ ಕೋಪ ಬರುವಂತೆ ಮಾಡಿ ಅವರಿಂದ ಶಾಪ ಪಡೆದು, ಮಾಂಡವ್ಯರಿಗೆ ಆಗಲಿರುವ ಅನರ್ಥದಿಂದ ಕಾಪಾಡಿದನೇ ಹೊರತು ಅಸತ್ಯ ನುಡಿಯಲಿಲ್ಲ. ಅವರಿಗೆ ಕೊಟ್ಟ ಶಿಕ್ಷೆಯೂ ವಾಸ್ತವವಾಗಿ ಅವರು ಮಾಡಿದ ಅಪರಾಧಕ್ಕಿಂತ ಕಡಿಮೆಯೇ ಆಗಿತ್ತು ಎನ್ನುವುದು ಇಲ್ಲಿ ಅಡಗಿರುವ ತತ್ತ್ವ. [2]ಆದ್ದರಿಂದ ತನ್ನ ಯೋಗ್ಯತೆ ಮೀರಿದುದನ್ನು ಬಯಸಿದಲ್ಲಿ ಶಿಕ್ಷೆ ಆಗಿಯೇ ಆಗುತ್ತದೆ ಎಂದು ಒಟ್ಟು ಫಲಿತಾರ್ಥ.

*****

---

೧ ... ಮಕ್ಷೀವಧಾದಿತ್ಯವದತ್ ಯಮಸ್ತಂ। - ಮ.ತಾ.ನಿ.(೧೧/೧೩೯)

೨ ವಸಿಷ್ಠಸಾಮ್ಯಂ ಸಮಭೀಪ್ಸಮಾನಂ ಪ್ರಚ್ಯಾವನ್ನಿಚ್ಛಯಾ ಶಾಪಮಾಪ।
.... ನಾಸತತ್ವಾ ತಸ್ಯ ಚ ತತ್ರ ಹೇತುಃ ಶಾಪಂ ಗೃಹೀತುಂ ಸ ತಥೈವ ಚೋಕ್ತ್ವಾ ॥
ಅವಾಪ ಶೂದ್ರತ್ವಂ ........... ॥ - ಮ.ತಾ.ನಿ.(೧೧/೧೩೮)
ಅಯೋಗ್ಯಕಾಮಾಖ್ಯದೋಷಾದೇವ ಶೂಲಾರೋಪಣಮಿತಿ ಭಾವಃ।... ಇತ್ಯಾದಿ।
ಭಾವಪ್ರಕಾಶಿಕಾಯಾಂ ಶ್ರೀವಾದಿರಾಜಶ್ರೀಪಾದಾಃ॥
ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ॥ - ಮ.ತಾ.ನಿ.(೧/೯೫)

# ೧೭. ವ್ಯುಷಿತಾಶ್ವನ ಕಥೆ

ಪಾಂಡುರಾಜನು ಕಿಂದಮ ಋಷಿಯ ಶಾಪದಿಂದಾಗಿ ಪತ್ನೀಸಂಗಮದಿಂದ ವಂಚಿತನಾದ. ಸಂತಾನ ಆತನಿಗೆ ಇನ್ನೂ ಆಗಿರಲಿಲ್ಲ. ಕುಂತಿ ದೇವಿಗೆ ಯೋಗ್ಯ ಪರಪುರುಷನಿಂದ ಸಂತಾನ ಪಡೆಯಲು ಪ್ರಚೋದಿಸಿದಾಗ ಕುಂತಿಯು ಅದನ್ನು ವಿರೋಧಿಸಿ, 'ನಾನು ನಿನ್ನನ್ನು ಬಿಟ್ಟು ಬೇರೆ ಯಾರನ್ನು ಮನಸಾ ಚಿಂತಿಸೆ. ನಿನ್ನಿಂದಲೇ ಸಂತಾನ ಪಡೆಯುವೆ. ಒಂದು ವೇಳೆ ಮೃತನಾದರೂ ನೀನು ತಪಸ್ವಿಯಾದ್ದರಿಂದ ಸಂತಾನ ಕೊಡಬಲ್ಲೆ. ಈ ಬಗ್ಗೆ ಪುರಾಣದಲ್ಲಿಯ **ವ್ಯುಷಿತಾಶ್ವನ** ಕಥೆಯನ್ನು ಕೇಳು ಮಹಾರಾಜ!' ಎಂದಳು.

**ಪುರುವಂಶದ** ಶ್ರೇಷ್ಠ ರಾಜ ವ್ಯುಷಿತಾಶ್ವ. ಆತ ಯಾಗ ಮಾಡುತ್ತಿದ್ದ ವೇಳೆ ಇಂದ್ರಾದಿದೇವತೆಗಳೂ, ಋಷಿಗಳೂ ಸ್ವತಃ ಆಗಮಿಸಿ ಸೋಮರಸಪಾನ ಮಾಡುತ್ತಿದ್ದರು (ಅಗ್ನಿ ಮೂಲಕ ಸ್ವೀಕಾರಕ್ಕಿಂತ ಇದು ಶ್ರೇಷ್ಠ ಎಂದು ಭಾವ). ದೇವತೆಗಳು, ಋಷಿಗಳು ಯಜ್ಞದಲ್ಲಿ ತಾವೇ ಎಲ್ಲ ಕೆಲಸ ನಿರ್ವಹಿಸುತ್ತಿದ್ದರು. ಆತನ ಬಲ ೧೦ ಆನೆಗಳ ಬಲ. ಅಶ್ವಮೇಧಯಾಗ ಮಾಡಿ ಎಲ್ಲ ದಿಗ್ವಿಜಯ ಮಾಡಿದ್ದನು. ಪ್ರಜೆಗಳನ್ನು ಮಕ್ಕಳಂತೆಯೇ ಪಾಲನೆ ಮಾಡುತ್ತಿದ್ದ. ಬ್ರಾಹ್ಮಣರಿಗೆ ಭೂರಿದಕ್ಷಿಣೆ ನೀಡುತ್ತಿದ್ದ.

ಈತನ ಹೆಂಡತಿ ಕಕ್ಷೀವಂತನ ಮಗಳು ಭದ್ರಾ, ತುಂಬಾ ಚೆಲುವೆ. ಅನ್ಯೋನ್ಯ ಸಂಬಂಧ. ಅತನಿಗೆ ಅತ್ಯಾಸಕ್ತಿಯಿಂದಾಗಿ (ಕಾಮಭೋಗದಿಂದ) ಕ್ಷಯದಿಂದ ಪರಲೋಕಸೇರಿದ: 'ಅತಿಸಕ್ತಾಸ್ತಪೋಹೀನಾಃ ಕಥಂಚಿನ್ಮೃತಿಮಾಪ್ನುಯುಃ' (ಮ.ತಾ.ನಿ. ೧೧/೮೪). ಭದ್ರೆಯ ದುಃಖಕ್ಕೆ ಪಾರವೇ ಇರಲಿಲ್ಲ. 'ನಾನು ನಿನ್ನ ಗತಿಯನ್ನೇ ಹೊಂದುವೆ. ಕೃಪೆ ಮಾಡಿ ನನ್ನನ್ನು ಕರೆದುಕೋ. ಪತಿಯಿಲ್ಲದ ಜೀವನ ನರಕಸದೃಶ. ಕಳೆದ ಜನ್ಮದಲ್ಲಿ ಪರಸ್ಪರ ಪ್ರೇಮಿಗಳನ್ನು ಅಗಲಿಸಿದ್ದೆ, ಅಂತೆಯೇ ಈ ವಿರಹ' ಎಂದು ರೋದಿಸುತ್ತಾ ಶವಾಲಿಂಗನ ಮಾಡುತ್ತಾ ಅನ್ನಾಹಾರ ತೊರೆದು ರೋದಿಸುತ್ತಾ ಕುಳಿತಳು.

ವ್ಯುಷಿತಾಶ್ವನ ಯಜ್ಞ, ಯಾಗಾದಿಗಳ ಪುಣ್ಯಫಲವೋ ಏನೋ ಶವದಿಂದ ವಾಣಿ ಬಂದಿತು. 'ಭದ್ರೆ ಏಳು! ನಿನಗೆ ವರ ಕೊಡುವೆ. ಋತುಸ್ನಾತಳಾದ ೮, ೧೪ನೇ ದಿನ ನನ್ನ ಹಾಸಿಗೆಯ ಮೇಲೆ ಇರು. ನನ್ನಿಂದ ನಿನ್ನಲ್ಲಿ ಪುತ್ರರನ್ನು ಪಡೆಯುವೆ'. ಅದೇ ರೀತಿ ಆ ಪತಿವ್ರತೆ ಮಾಡಿದಳು. ಪತಿಯ ಶವ ಸಂಗಮದಿಂದಲೇ ಮಹಾಪರಾಕ್ರಮಿಗಳಾದ ३ ಶಾಲ್ವಪ್ರಮುಖರನ್ನು ४ ಮದ್ರಮುಖ್ಯರನ್ನು ಪಡೆದು ಸುಖಿಯಾಗಿದ್ದಳು (ಅ. ೧೨೦/३३-३೭).

ಆದ್ದರಿಂದ ಪಾಂಡುರಾಜ, ನೀನು ನನ್ನಿಂದ ಮಕ್ಕಳನ್ನು ಪಡೆಯಬಹುದು (ಶಾಪವಿದ್ದರೂ, ನೀನು ಸಾವನ್ನಪ್ಪಿದರೂ, ನಿನ್ನಿಂದಲೇ ನಾನು ಸಂತಾನ ಪಡೆಯುವೆ ವಿನಃ ಬೇರೆ ಪುರುಷನಿಂದ ಒಲ್ಲೆ).

## ಸಂದೇಶಗಳು- ವಿವರಣೆಗಳು

ಇಲ್ಲಿಯ ಕುಂತಿಯ ಪಾತಿವ್ರತ್ಯ ಪಾಂಡುರಾಜನ ಧರ್ಮಪ್ರಜ್ಞೆ, ಆಪತ್ಕಾಲಿನ ಧಮಾನುಷ್ಠಾನವೇ ಮೊದಲಾದ ವಿಷಯಗಳು ಹೃದಯಸ್ಪರ್ಶಿಯಾಗಿ ಬಂದಿವೆ. ಪಾತಿವ್ರತ್ಯದಿಂದ ಶವವು ಅವ್ಯಕ್ತವಾಗಿ ಜೀವ ಪಡೆದು ಸಂತಾನ ಕೊಡಲು ಸಮರ್ಥವಾಯಿತು ಎಂದು ಭಾವ. ಭಗವಂತ ಅನುಗ್ರಹಿಸಲು ಏನು ತಾನೇ ಆಗದು? ಆಧುನಿಕ ವಿಜ್ಞಾನಕ್ಕೆ ಇದೊಂದು ಒಗಟು!

*****

## ೧೮. ತಪತೀಕಥಾ

ಭಗವಾನ್ ಸೂರ್ಯನ ಹೆಂಡತಿ ಸಂಜ್ಞೆ, ತ್ವಷ್ಟೃವಿನ ಮಗಳು. ಈಕೆಯಲ್ಲಿ ಸೂರ್ಯನು **ಯಮ, ಯಮುನೆ** ಎಂಬ ಅವಳಿ ಮಕ್ಕಳನ್ನು ಪಡೆದನು. ನಂತರ ಸೂರ್ಯನ ತಾಪ ತಾಳಲಾರದೆ ತಪಸ್ಸಿಗೆ ಹೋದಳು (ಸಂಜ್ಞೆ). ಹೋಗುವಾಗ ತನ್ನನ್ನೇ ಹೋಲುತ್ತಿದ್ದ **ಛಾಯಾ** ಎಂಬ ತರುಣಿಯನ್ನು ಸೃಷ್ಟಿಸಿ, ಸೂರ್ಯನೊಡನೆ ದಾಂಪತ್ಯದಿಂದಿರಲು ಹೇಳಿ ರಹಸ್ಯವಾಗಿ ಹೋದಳು. ಸೂರ್ಯನಿಗೆ ಇದಾವುದೂ ತಿಳಿಯದೇ ಛಾಯೆಯೊಡನೆ ಇದ್ದ. ಆಕೆಯಲ್ಲಿ ಜನಿಸಿದ ಮಹಾನುಭಾವೆ ತಪತೀ. ಅಲ್ಲದೆ **ಸಾವರ್ಣಿಮನು** ಹಾಗೂ **ಶನೈಶ್ಚರ**ರೆಂಬ ಮಕ್ಕಳನ್ನು ಪಡೆದನು ಸೂರ್ಯ.

[೧]ಹೆಸರಿಗೆ ತಕ್ಕಂತೆ **ತಪತೀ** ಸದಾ ತಪೋನಿರತ, ಸಾಧ್ವಿಯಾಗಿದ್ದಳು. ಆಕೆಯ ಅಪ್ರತಿಮಸೌಂದರ್ಯವು ದೇವ, ರಕ್ಷ, ಯಕ್ಷ, ಕಿನ್ನರಸ್ತ್ರೀಯರನ್ನು ಮೀರುತ್ತಿತ್ತು. ಆಕೆಗೆ ಅನುರೂಪ ಪತಿ ಸಿಗಲಾರನೆಂದೇ ಸೂರ್ಯ ಭಾವಿಸಿದ್ದ. ಯೌವನ ಸಂಪನ್ನನಾದ ಆಕೆಗೆ ಯೋಗ್ಯವರಾನ್ವೇಷಣೆ ಸೂರ್ಯನಿಗೂ ಚಿಂತೆಯೇ ಆಯಿತು.

[೨]ಅದೇ ಸಮಯದಲ್ಲಿ ಚಂದ್ರವಂಶದಲ್ಲಿ **ಋಕ್ಷ**ನೆಂಬ ರಾಜನ ಮಗ ಸಂವರಣನೆಂಬುವವನಿದ್ದನು. ಆತನು ದೈಹಿಕ ಹಾಗೂ ಮಾನಸಿಕ ಶುಚಿತ್ವ ಉಳ್ಳವನಾಗಿ ಉಪವಾಸವ್ರತ (ಏಕಾದಶೀ, ವಿಷ್ಣುಪಂಚಕ, ಭೀಷ್ಮಪಂಚಕ ಮುಂತಾದ) ವಿವಿಧ ರೀತಿಯ ತಪಸ್ಸುಗಳಿಂದ ಅಹಂಕಾರ, ಮಮಕಾರಗಳನ್ನು ಬಿಟ್ಟು ಸೂರ್ಯನನ್ನು ಸೇವಿಸುತ್ತಾ ಆರಾಧಿಸಿದನು. ಆತನು ತುಂಬಾ ರೂಪಶಾಲಿಯೂ ಆಗಿದ್ದನು. ಇಂತಹ ತನ್ನ ಭಕ್ತನನ್ನು ತನ್ನ ಮಗಳಾದ ತಪತಿಗೆ ಯೋಗ್ಯಪತಿಯೆಂದು ಸೂರ್ಯ ಭಾವಿಸಿದನು.

ಒಮ್ಮೆ ಸಂವರಣನು ಪರ್ವತ ಉಪವನಗಳಲ್ಲಿ ಬೇಟೆಯಾಡಲು ಸಂಚಾರ ಮಾಡುತ್ತಿದ್ದಾಗ ಆತನ ಕುದುರೆಯು ಹಸಿವು, ಬಾಯಾರಿಕೆಗಳಿಂದಾಗಿ ಆ ಪರ್ವತದಲ್ಲಿಯೇ ಅಸು ನೀಗಿತು.

---

೧ ಏತಸ್ಯ ತಪತೀ ನಾಮ ಬಭೂವ ಸದೃಶೀ ಸುತಾ ।
ವಿಶ್ರುತಾ ತ್ರಿಷು ಲೋಕೇಷು ತಪತೀ ತಪಸಾ ಯುತಾ ॥ - ಆದಿಪರ್ವ(೧೭೦/೬,೭)
ನ ದೇವೀ ನಾಸುರೀ ಚೈವ ನ ಯಕ್ಷೀ ನ ರಾಕ್ಷಸೀ ।
ನಾಪ್ಸರಾ ನ ಚ ಗಂಧರ್ವೀ ತಥಾ ರೂಪೇಣ ಕಾಚನ ॥ - ಆದಿಪರ್ವ(೧೭೦/೮)
೨ ಅಥರ್ಕ್ಷಪುತ್ರಃ ಕೌಂತೇಯ ಕುರೂಣಾಮೃಷಭೋ ಬಲೀ । - ಆದಿಪರ್ವ(೧೭೦/೧೨)

ಅದೇ ಸಮಯದಲ್ಲಿ ಸೂರ್ಯಪುತ್ರಿ ತಪತೀದೇವಿ ಅಲ್ಲಿಯೇ ಏಕಾಂಗಿಯಾಗಿರುವುದನ್ನು ನೋಡಿದನು. ಆಕೆಯ ಅಸದೃಶ ಸೂರ್ಯಸದೃಶಕಾಂತಿ, ವರ್ಚಸ್ಸುಗಳಿಂದಾಗಿ ರಾಜನು ಆಕೆಯನ್ನು ಏಕಾಗ್ರದೃಷ್ಟಿಯಿಂದ ನೋಡಿ ಆಕೆಯಲ್ಲಿ ಮನಸ್ಸಿಟ್ಟನು. ದೇವಾಸುರಮನುಷ್ಯ-ಲೋಕಗಳಲ್ಲಿನ ಎಲ್ಲ ಸೌಂದರ್ಯರಾಶಿಯೇ ಆಕೆಯಲ್ಲಿ ಮೇಳವಿಸಿದಂತಿತ್ತು. ಆಕೆಯ ಬಳಿಗೆ ಹೋಗಿ 'ನೀನು ಯಾರು? ನಿರ್ಜನ ಅರಣ್ಯದಲ್ಲಿ ಒಬ್ಬಳೇ ಇಲ್ಲೇಕೆ ನಿಂತಿರುವೆ' ಎಂದನು. ಆಕೆ ಅದಕ್ಕೆ ಉತ್ತರ ಕೊಡದೇ ಮಿಂಚಿನಂತೆ ಮಾಯವಾದಳು. ಎಷ್ಟೇ ಹುಡುಕಿದರೂ ರಾಜನಿಗೆ ಆಕೆ ಸಿಗಲೇ ಇಲ್ಲ. ಕಾಮಮೋಹಿತನಾದ ರಾಜ ಭೂಮಿಯ ಮೇಲೆ ಕುಸಿದ. ತಕ್ಷಣ ತಪತೀ ರಾಜನಿಗೆ ತೋರಿ ಸಮಾಧಾನ ಮಾಡಿದಳು. ರಾಜನು ಆಕೆಗೆ 'ಪ್ರಾಣಗಳೇ ಹೋಗುತ್ತಿರುವ ನನ್ನನ್ನು ಸೇವಿಸು. ನನ್ನ ಪ್ರಾಣಗಳು ನಿನ್ನ ಅಧೀನವಾಗಿವೆ. ನಿನ್ನನ್ನು ತೊರೆದು ನಾನು ಜೀವಿಸೆ. ಬೇರಾವಳನ್ನು ವರಿಸಲಾರೆ. ಗಾಂಧರ್ವವಿವಾಹದಿಂದ ನನ್ನನ್ನು ಮದುವೆಯಾಗು. ಕಾರಣ ವಿವಾಹಗಳಲ್ಲಿ ಗಾಂಧರ್ವ ವಿವಾಹವು ಶ್ರೇಷ್ಠ ತಾನೇ?'

[1]ಅದಕ್ಕೆ ತಪತಿಯು 'ನಾನು ಸ್ವತಂತ್ರಳಲ್ಲ. ತಂದೆಯ ಅಧೀನ. ನನ್ನ ತಂದೆಯನ್ನೇ ಯಾಚಿಸು' ಎಂದಳು. 'ನಿನ್ನಂಥ ಪವಿತ್ರವಂಶಜನಾದ, ಭಕ್ತವತ್ಸಲನಾದ ರಾಜನನ್ನು ಯಾವ ಸ್ತ್ರೀಯು ತಾನೇ ವರಿಸಳು? ನಾನು ಸಾವಿತ್ರಿಯ ತಂಗಿ, ಸೂರ್ಯಪುತ್ರಿ' ಎಂದು ಪರಿಚಯ ಮಾಡಿಕೊಂಡಳು. ಹೀಗೆ ಉತ್ತರಿಸಿ, ತಪತಿಯು ಆಕಾಶಮಾರ್ಗದಲ್ಲಿ ಮಾಯವಾದಳು.

ಪುನಃ ರಾಜನು ಆಕೆಯನ್ನು ಅನ್ವೇಷಿಸುತ್ತಾ ಭೂಮಿ ಮೇಲೆ ಬೀಳುತ್ತಾ ಹೊರಟನು. ಇದನ್ನು ನೋಡಿ ರಾಜ ಪರಿವಾರಕ್ಕೆ ಬಹಳ ದುಃಖವಾಯಿತು. ಅವರು ರಾಜನು ಬಹಳ ಬಳಲಿರಬಹುದೆಂದು ಭಾವಿಸಿ, ಅತನಿಗೆ ಧೈರ್ಯ ಹೇಳಿದರು. ಶೀತನ ನೀರಿನಿಂದ ಪ್ರೋಕ್ಷಿಸಿದರು. ಒಬ್ಬ ಸಚಿವನನ್ನು ಮಾತ್ರ ಉಳಿಸಿಕೊಂಡು ಉಳಿದ ಪರಿವಾರವನ್ನು ರಾಜನು ರಾಜಧಾನಿಗೆ ಕಳಿಸಿ ಆ ಪರ್ವತ ತಪ್ಪಲಿನಲ್ಲಿಯೇ ಕುಳಿತನು. ನಂತರ ಶುಚಿರ್ಭೂತನಾಗಿ, ಕೃತಾಂಜಲಿಯಾಗಿ ಸೂರ್ಯಾರಾಧನೆಗೆ ಊರ್ಧ್ವ ಮುಖನಾಗಿ ನಿಂತನು.

ನಂತರ ಕುಲಪುರೋಹಿತರಾದ ವಸಿಷ್ಠರನ್ನು ಸ್ಮರಿಸಿದನು. ತಾನು ಹಗಲು-ರಾತ್ರಿ ಸೂರ್ಯಾರಾಧನೆ ಮಾಡುತ್ತಿರಲು ೧೨ನೆ ದಿನ ವಸಿಷ್ಠರು ಆಗಮಿಸಿದರು. ಸಂವರಣನು ತಪತಿಯನ್ನು ವರಿಸಿರುವುದನ್ನು ತಿಳಿದ ವಸಿಷ್ಠರು ಆತನ ಇಚ್ಛಾಪೂರ್ತಿಗಾಗಿ ಕೃತಾಂಜಲಿಗಳಾಗಿ ಸೂರ್ಯನನ್ನು ಸ್ತೋತ್ರ ಮಾಡಲಾರಂಬಿಸಿದರು (ಪರಿಶಿಷ್ಟ ನೋಡಿರಿ - ಅಜಾಯ ಲೋಕತ್ರಯಪಾವನಾಯ ಇತ್ಯಾದಿ). ಸ್ತೋತ್ರ ತುಷ್ಟಸೂರ್ಯನು ವಸಿಷ್ಠರಿಗೆ ದರ್ಶನ ಕೊಟ್ಟು

೧ ಮಯಿ ಚೇದಸ್ತಿ ತೇ ಪ್ರೀತಿಃ ಯಾಚಸ್ವ ಪಿತರಂ ಮಮ ।
ನ ಸ್ವತಂತ್ರಾ ಹಿ ಯೋಷಿತಃ ॥
ಕಾ ಹಿ ಸರ್ವೇಷು ಲೋಕೇಷು ವಿಶ್ರುತಾಭಿಜನಂ ನೃಪಮ್ । - ಆದಿಪರ್ವ(೧೭೧/೨೦,೨೨)
ಕನ್ಯಾ ನಾಭಿಲಷೇನ್ನಾಥಂ ಭರ್ತಾರಂ ಭಕ್ತವತ್ಸಲಂ ॥ - ಆದಿಪರ್ವ(೧೭೧/೨೪)

'ನಿಮ್ಮ ಅಭೀಷ್ಟೆಯು ಎಷ್ಟೇ ದುಷ್ಕರವಾಗಿದ್ದರೂ ಕೊಡುವೆ' ಎಂದು ನುಡಿಯಲು ವಸಿಷ್ಠರು 'ನಿನ್ನ ಮಗಳಾದ ತಪತೀದೇವಿಯನ್ನು ನನ್ನ ಶಿಷ್ಯನಾದ ಸಂವರಣನಿಗೋಸ್ಕರ ಬೇಡುತ್ತಿದ್ದೇನೆ. ಆ ರಾಜನು ಕೀರ್ತಿವಂತನೂ, ಧರ್ಮಾರ್ಥಜ್ಞನೂ ಆಗಿದ್ದಾನೆ.' ಕೂಡಲೇ ಕೊಡುವೆನೆಂದು ಸೂರ್ಯನು ಹೇಳಿ ವಸಿಷ್ಠರಿಗೆ ತನ್ನ ಮಗಳನ್ನು **ಸಂವರಣ** ರಾಜನಿಗೋಸ್ಕರ ಕೊಟ್ಟರು.

ನಂತರ ವಸಿಷ್ಠರು ಸಂವರಣ ರಾಜನಲ್ಲಿಗೆ ೧೨ನೇ ರಾತ್ರಿ ಬಂದರು. ಆಕಾಶದಿಂದ ಧರೆಗೆ ಬೀಳುತ್ತಿರುವ ಮಿಂಚಿನಂತೆ ಬರುತ್ತಿರುವ ತಪತಿಯನ್ನು ನೋಡಿದ ರಾಜನು ರೋಮಾಂಚನಗೊಂಡು ಆನಂದಪುಲಕಿತನಾದನು. ಆ ಪರ್ವತ ತಪ್ಪಲಿನಲ್ಲಿಯೇ ರಾಜನು ವಸಿಷ್ಠರ ಸನ್ನಿಧಾನದಲ್ಲಿ[೧]ಅವರ ಅನುಗ್ರನಹದಿಂದ ತಪತಿಯನ್ನು ಪಾಣಿಗ್ರಹಣ ಮಾಡಿದನು. ೧೨ವರ್ಷ ಕಾಲ ರಾಜನು ಆ ಗಿರಿಯಲ್ಲಿ ತಪತಿಯೊಡನೆ ವಿಹರಿಸಿದನು. ಈ ಮಧ್ಯೆ ೧೨ವರ್ಷಗಳ ಕಾಲ ಆತನ ರಾಜ್ಯದಲ್ಲಿ ಮಳೆಬೆಳೆ ಇಲ್ಲದೆ ಕ್ಷಾಮ-ಡಾಮರಗಳಾದವು. ರಾಜ್ಯ ನಿರ್ಜನವಾಗಲಾರಂಭಿಸಿತು. ಆಗ [೨]ವಸಿಷ್ಠರು ತಮ್ಮ ತಪಸ್ಸಿನಂದ ಮಳೆ ಬರಿಸಿದರು. ರಾಜದಂಪತಿಗಳನ್ನು ರಾಜಧಾನಿಗೆ ಕರೆತಂದರು. ಆತ ಬಂದ ಕೂಡಲೇ ಪುನಃ ಇಂದ್ರನು ಮಳೆಗೆರೆದನು. ಸುಭಿಕ್ಷೆ ಉಂಟಾಯಿತು. ಪ್ರಜೆಗಳು ಹಿಂದಿರುಗಿದರು. ರಾಜನು ೧೨ ವರ್ಷಗಳವರೆಗೆ ತಪತಿಯೊಡನೆ ಯಜ್ಞಗಳನ್ನು ಮಾಡಿದನು. ತಪತಿಯಲ್ಲಿ ರಾಜನು ಪಡೆದ ಮಗನೇ ಕುರು. ಆತನ ವಂಶವೇ ಕುರುವಂಶ (ಕೌರವರು). ತಪತೀವಂಶದಲ್ಲಿ ಬಂದುದರಿಂದ ಅರ್ಜುನಾದಿಗಳು ತಾಪತ್ಯರೆನ್ನಿಸಿದರು.

## ಸಂದೇಶಗಳು-ವಿವರಣೆಗಳು

ಈ ಕಥೆಯನ್ನು ಚಿತ್ರರಥ ಗಂಧರ್ವನು ದ್ರೌಪದೀಸ್ವಯಂವರಕ್ಕೆ ಹೋಗುತ್ತಿದ್ದ ಅರ್ಜುನನಿಗೆ ಹೇಳಿದನು.

ಇಲ್ಲಿ ಗುರುಗಳಾದ ವಸಿಷ್ಠರ ಅನುಗ್ರಹದಿಂದ ಸಂವರಣ ರಾಜನು ತಾನು ಪ್ರೇಮಿಸಿದ ಕನ್ಯೆಯನ್ನು ವಿವಾಹವಾಗಲು ಸಮರ್ಥನಾದನು. ತಾನೂ ಸೂರ್ಯಾರಾಧನೆ ಮಾಡಿ ಆತನ ಅನುಗ್ರಹ ಸಂಪಾಸಿದ್ದ. ನಂತರ ಕನ್ಯಾರ್ಥಿಯಾಗಿಯೂ ಆರಾಧನೆ ಮಾಡಿದ. ಶಿಷ್ಯನ ಮೇಲಿನ ಕೃಪೆಯಿಂದ ಸ್ವಯಂ ಸೂರ್ಯಾರಾಧನೆ ಮಾಡಿ ಶಿಷ್ಯನಿಗೆ ಸೂರ್ಯಪುತ್ರಿಯನ್ನು ತಂದು

---

೧ ಲೇಭೇ ಸಂವರಣೋ ರಾಜಾ ವಸಿಷ್ಠಸ್ಯೈವ ತೇಜಸಾ। - ಆದಿಪರ್ವ(೧೭೨/೩೨)
ರಾಜನು ತಪಸ್ಸು ಮಾಡಿದ ೧೨ನೇ ದಿನ ಬಂದ ವಸಿಷ್ಠರು ಅಂದು ರಾತ್ರಿಯೇ ರಾಜನ ವಿವಾಹ ಮಾಡಿಸಿದರು.

೨ ಅಭ್ಯವರ್ಷತ ಧರ್ಮಾತ್ಮಾ ವಸಿಷ್ಠೋ ಮುನಿಸತ್ತಮಃ। - ಆದಿಪರ್ವ(೧೭೨/೪೪)

ವಿವಾಹ ಮಾಡಿದ ವಸಿಷ್ಠರ ಮಹಿಮೆ, ಶಿಷ್ಯವಾತ್ಸಲ್ಯ, ಸಂವರಣನ [೧]ಗುರುದೇವಭಕ್ತಿಗಳೇ ಇಲ್ಲಿಯ ಸಂದೇಶಗಳು.

ಮುಂದೆ ಅರ್ಜುನಾದಿಗಳು ಧೌಮ್ಯರೆಂಬ ಯೋಗ್ಯ ಕುಲಪುರೋಹಿತರನ್ನು ಆರಿಸಿಕೊಂಡರೆಂಬ ಇತಿಹಾಸ ತಿಳಿದುದೇ. ತಾನು ಮೆಚ್ಚಿದ ಸುಭದ್ರೆಯನ್ನು ಕೃಷ್ಣನೇ ಅರ್ಜುನನಿಗೆ ಮದುವೆ ಮಾಡಿಸಿದ. ಕೃಷ್ಣ ಅರ್ಜುನನ ಗೀತೋಪದೇಶಕ ಗುರು ಹಾಗೂ ದೇವತೆಯೂ ಆಗಿದ್ದ ಎಂಬುದನ್ನು ಭಾರತದಲ್ಲಿ ನಾವು ನೋಡುತ್ತೇವೆ. ಸಂವರಣನ ಪಾಲಿಗೆ ವಸಿಷ್ಠರು ಇದ್ದರೆ ಅರ್ಜುನನಿಗೆ ಸಾಕ್ಷಾತ್ ಕೃಷ್ಣನೇ ಎಲ್ಲವನ್ನು ನಿರ್ವಹಿಸಿದನು.

**'ತಂ ವಂದೇ ಪಿತರಂ ಪತಿಂ ಗುರುತಮಂ ವಂದೇ ರಮಾವಲ್ಲಭಮ್'**

– ವಿಷ್ಣುತತ್ತ್ವನಿರ್ಣಯಟೀಕಾ

ಎಂದೇ ಪೂರ್ವಾರ್ಜುನರಾದ ಶ್ರೀಜಯತೀರ್ಥರು ಸ್ತುತಿಸಿದ್ದಾರೆ.

*****

೧ ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ।
ತಸ್ಯೈತೇ ಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ॥

## ೧೯. ಕಲ್ಮಾಷಪಾದನ ಕಥೆ

ಇಕ್ಷ್ವಾಕುವಂಶದ ರಾಜ ಕಲ್ಮಾಷಪಾದ. ಶತ್ರುಮರ್ದನನಾದ ಈತ ಒಮ್ಮೆ ಬೇಟೆಯಾಡುತ್ತಾ ಬಳಲಿ ವಿಶ್ರಾಂತಿಗಾಗಿ ಸ್ಥಳ ಅರಸುತ್ತಿದ್ದ. ದಾರಿಯಲ್ಲಿ ವಸಿಷ್ಠರ ಹಿರಿಯ ಮಗ ಶಕ್ತಿ ಬಂದನು. ರಾಜನು ಅವನನ್ನು 'ದಾರಿಬಿಟ್ಟು ದೂರ ಸರಿ ನಾನು ಮೊದಲು ಮುಂದೆ ಹೋಗುವೆ' ಎಂದ. ಶಕ್ತಿಯು ಸೌಜನ್ಯದಿಂದ 'ಬ್ರಾಹ್ಮಣರಿಗೆ ದಾರಿ ಮೊದಲು, ಅದೇ ಧರ್ಮ ಆದ್ದರಿಂದ ನೀನೆ ದಾರಿ ಕೊಡು' ಎಂದ. ಹೀಗೆ ಇಬ್ಬರೂ ಪರಸ್ಪರ ದಾರಿಗಾಗಿ ವಾಗ್ವಾದ ಮಾಡುತ್ತಾ ನಿಂತರು. ರಾಜ ನಂತರ ಶಕ್ತಿಗೆ ತನ್ನ ಬೆತ್ತದಿಂದ ಹೊಡೆದೂ ಬಿಟ್ಟ. ಬ್ರಾಹ್ಮಣನಾದ ಶಕ್ತಿಗೆ ಕೋಪ ಉಕ್ಕಿತು 'ರಾಕ್ಷಸನಂತೆ ಹಿಂಸಿಸುವ ನಿನಗೆ ನರಮಾಂಸಭಕ್ಷಕ ರಾಕ್ಷಸತ್ವ ಬರಲಿ' ಎಂದು ಶಾಪವಿತ್ತ. ಒಂದು ಚಿಕ್ಕ ವಿಷಯ ಇಷ್ಟು ದೀರ್ಘವಾಯಿತು. ಪ್ರತಿಷ್ಠೆಯ ದಾಸ್ಯದ ಫಲವನ್ನು ರಾಜ ತಿಂದ.

ರಾಜನಿಗೆ ತನ್ನ ತಪ್ಪಿನ ಅರಿವಾಗಿ ಶರಣಾಗತನಾದ. ಋಷಿಗಳಿಗೆ. ಶಕ್ತಿ ಸಮಾಧಾನ ಹೊಂದುವುದರೊಳಗೆ ಇದನ್ನೆಲ್ಲ ಗಮನಿಸುತ್ತಿದ್ದ ವಿಶ್ವಾಮಿತ್ರ ವಸಿಷ್ಠರ ಮೇಲಿನ ವೈರದಿಂದ ಕಿಂಕರನೆಂಬ ರಾಕ್ಷಸನನ್ನು ಆಹ್ವಾನಿಸಿ ರಾಜನಪಾದ ಸೇರುವಂತೆ ಮಾಡಿದ. ತಾನು ದೂರ ಅರಣ್ಯ ಸೇರಿದ. ಕಿಂಕರನ ಪ್ರಭಾವದಿಂದ ರಾಜ ಎಲ್ಲ ಮರೆತು ರಾಕ್ಷಸನಂತಾದ.

ಅದೇ ವೇಳೆಗೆ ಅಲ್ಲಿಗೆ ಆಗಮಿಸಿದ ಹಸಿದ ಬ್ರಾಹ್ಮಣನೊಬ್ಬನಿಗೆ ಸೂಕ್ತ ಆಹಾರ ಕಳಿಸಿಕೊಡುವೆ ಎಂದು ವಾಗ್ದಾನ ಮಾಡಿ, ರಾಜನು ಅರಮನೆಗೆ ಹೋಗಿ ಆಹಾರ ಕಳಿಸುವುದನ್ನೇ ಮರೆತ. ರಾತ್ರಿ ಸರಿಹೊತ್ತಿಗೆ ಮತ್ತೆ ಜ್ಞಾಪಕವಾಗಿ ಅಡುಗೆಯವರಿಗೆ ಅರಣ್ಯದಲ್ಲಿದ್ದ ಬ್ರಾಹ್ಮಣನಿಗೆ ಆಹಾರ (ಮಾಂಸದ) ಕಳಿಸಲು ತಿಳಿಸಿದ. ಅಡುಗೆಯವನು ಹೇಗೋ ಕಷ್ಟಪಟ್ಟು ಕೊನೆಗೆ ನರಮಾಂಸದ ಆಹಾರ, ಅನ್ನ ಒಯ್ದ. ಆದರೆ ಬ್ರಾಹ್ಮಣನಿಂದ ಕೋಪಕ್ಕೆ ಗುರಿಯಾದ ರಾಜ, ರಾಜನಿಗೆ ರಾಕ್ಷಸನ ಪೂರ್ಣಸ್ವಭಾವ ಬರಲಿ. ಅಭಕ್ಷ್ಯ ಭೋಜನ ಮಾಡುವ ನರಭಕ್ಷಕನಾಗಲಿ ಎಂದು ಶಾಪವನ್ನು ಕೊಟ್ಟ ಬ್ರಾಹ್ಮಣ.

ಹೀಗೆ ಶಕ್ತಿ ಹಾಗೂ ಈ ಬ್ರಾಹ್ಮಣರ ಎರಡೂ ಶಾಪಗಳಿಂದ ಮತ್ತು ದೇಹದೊಳಗಿರುವ ಕಿಂಕರ ರಾಕ್ಷಸನ ಉನ್ಮಾದಗಳಿಂದ ರಾಜ ಬಾಯ್ತೆರೆದು ಕಂಡ ಕಂಡ ಮನುಷ್ಯರನ್ನು ತಿನ್ನಹತ್ತಿದ. ತಪೋವನಕ್ಕೂ ನುಗ್ಗಿದ. ಶಕ್ತಿಯನ್ನು ಕಂಡು ನಿಂದಿಸಿ, ಆತನನ್ನೇ ನುಂಗಿದ. ಶಕ್ತಿ ಕೊಟ್ಟ ಶಾಪ ಶಕ್ತಿಗೇ ಮುಳುವಾಯಿತು. ಇದರ ಸೂತ್ರಧಾರ ವಿಶ್ವಾಮಿತ್ರ. ಇಷ್ಟರಿಂದಲೇ ತೃಪ್ತನಾಗದೆ

ಕಿಂಕರನನ್ನು ಉತ್ತೇಜಿಸಿ, ರಾಜನು ಶಕ್ತಿಯ ಆಶ್ರಮಕ್ಕೆ ನುಗ್ಗಿ ಅವನ ಸೋದರರನ್ನೆಲ್ಲ ಕೊಂದು ನುಂಗಿದ. ಹೀಗೆ ವಸಿಷ್ಠರ ಸಂತಾನ/ವಂಶ ನಿರ್ವಂಶವಾಯಿತು.

ಇದರಿಂದ ವಸಿಷ್ಠರಿಗೆ ಆದ ಪುತ್ರಶೋಕ ಅಷ್ಟಿಷ್ಟಲ್ಲ. ಕ್ಷಮಾಗುಣ ಮಾತ್ರ ಅವರು ಬಿಡಲಿಲ್ಲ. ವಿಶ್ವಾಮಿತ್ರರ ಕುತಂತ್ರ ಅವರಿಗೆ ತಿಳಿಯಿತು. ಆದರೂ ಕೋಪಗೊಳ್ಳಲಿಲ್ಲ. ಭೂಮಿಯಂತೆ ಧರ್ಮರಾಜನಂತೆ, ವಿಸ್ಮೃತವಾದ ಕ್ಷಮೆಯನ್ನೇ ಅವಲಂಬಿಸಿದರು(ಕ್ಷಮಾಮಾಲಂಬ್ಯ ವಿಸ್ಮೃತಾಂ), ಮಕ್ಕಳಿಲ್ಲದ ಮನೆಯಲ್ಲಿರುವುದಕ್ಕಿಂತ ಆತ್ಮಹತ್ಯೆಯೇ ಮೇಲೆಂದು ಮೇರುಪರ್ವತದಿಂದ ಬಿದ್ದರು. ಕಾಡ್ಗಿಚ್ಚಿನಲ್ಲಿ ನುಗ್ಗಿದರೂ, ಸಮುದ್ರದಲ್ಲಿ ಬಿದ್ದರೂ, ಭಗವಂತನ ಪ್ರಾಣಪ್ರಿಯರಾದ ವಸಿಷ್ಠರ ಪ್ರಾಣ ಮಾತ್ರ ಅವರನ್ನು ಬಿಡಲಿಲ್ಲ. ಅವರ ತಪಸ್ಸು ವ್ರತನಿಷ್ಠೆ ಅವರನ್ನು ಕಾಪಾಡಿತು. ಮತ್ತೆ ಆಶ್ರಮಕ್ಕೆ ಬಂದರು, ದುಃಖ ಉಮ್ಮಳಿಸಿತು. ನದಿಯಲ್ಲಿ ಪ್ರವಾಹದಲ್ಲಿ ಶಿಲೆ ಕಟ್ಟಿಕೊಂಡು ಬಿದ್ದರು. ಪ್ರವಾಹ ಅವರನ್ನು ದಡಕ್ಕೆ ತಲುಪಿಸಿತು. ಹೈಮವತೀ ನದಿಯಲ್ಲಿ ಬಿದ್ದರೂ ಅಲ್ಲಿನ ಮೊಸಳೆ, ತಿಮಿಂಗಿಲುಗಳು ತಿನ್ನಲಿಲ್ಲ. ನದಿಯೇ ನೂರಾರು ಕವಲೊಡೆದು ದೂರಾಯಿತು. ಮತ್ತೆ ಆಶ್ರಮಕ್ಕೆ ಬಂದರು.

ದಾರಿಯಲ್ಲಿ ಗರ್ಭಿಣಿಯಾದ ಅವರ ಸೊಸೆ (ಶಕ್ತಿಪತ್ನೀ) **ಅದೃಶ್ಯಂತಿ** ಮಾವನ ಹಿಂದೆ ಆಶ್ರಯಕ್ಕಾಗಿ ಬರುತ್ತಿದ್ದಳು. ಆಕೆಯ ಉದರದಿಂದ ವೇದಧ್ವನಿ ಬರುತ್ತಿತ್ತು. ವಸಿಷ್ಠರ ಆನಂದಕ್ಕೆ ಪಾರವೇ ಇರಲಿಲ್ಲ. ಆನಂದಬಾಷ್ಪ ಸುರಿಯಿತು ಕಣ್ಣುಗಳಿಂದ. ಆತ್ಮಹತ್ಯೆಯ ವಿಚಾರ ಬಿಟ್ಟು ಆಶ್ರಮಕ್ಕೆ ತೆರಳಿದರು; ತಮ್ಮ ಕರುಳಿನ ಕುಡಿ ಬೆಳೆಯಿತು ಎಂದು.

ದಾರಿಯಲ್ಲಿ ಮತ್ತೆ ಕಲ್ಮಾಷಪಾದನ ಆರ್ಭಟ. ಸೊಸೆಗೆ ಹೆದರಿಕೆ, ವಸಿಷ್ಠರಿಂದ ಅಭಯ. ರಕ್ಷಣೆ ಮಾವನಿಂದ. ವಸಿಷ್ಠರು ಕೇವಲ ಹುಂಕಾರ ಮಾಡಲು ರಾಕ್ಷಸನ ಆರ್ಭಟ ಅಡಗಿತು. ಮಂತ್ರಪೂತವಾದ ಜಲ ಪ್ರೋಕ್ಷಿಸಿದರು. ರಾಜ ಶಾಪವಿಮುಕ್ತನಾದ ರಾಹು ಮುಕ್ತ ಸೂರ್ಯನಂತೆ. ರಾಜ ರಾಕ್ಷಸಮುಕ್ತನಾಗಿ ವಸಿಷ್ಠರ ಪಾದಕ್ಕೆ ಶರಣಾದ. ನಾನು ಸೌದಾಸನ ಮಗ, ತಮ್ಮ ಶಿಷ್ಯನೂ ಹೌದು. ತಮಗೆ ಯಾವ ಸೇವೆ ಮಾಡಲಿ? ಎಂದ ರಾಜ.

ವಸಿಷ್ಠರು ರಾಜ! ಎಲ್ಲ ಕಾಲರೂಪ ಹರಿಯ ಇಚ್ಛೆ. ರಾಜಧಾನಿಗೆ ಹೋಗು ಪ್ರಜಾಪಾಲನೆ ಮಾಡು. ಆದರೆ -

**ಬ್ರಾಹ್ಮಣಂ ತು ಮನಷ್ಯೇಂದ್ರ ಮಾವಮಂಸ್ಥಾಃ ಕದಾಚನಃ ॥**

**- ಆದಿಪರ್ವ(೧೭೬/೩೧)**

ಬ್ರಾಹ್ಮಣರನ್ನು ಎಂದೂ ಅವಮಾನ ಮಾಡಬೇಡ ಎಂದರು. ರಾಜ ಒಪ್ಪಿದ. ನಡೆದ ರಾಜ್ಯಕ್ಕೆ. ಅದಕ್ಕೂ ಮುನ್ನ ಇಕ್ಷ್ವಾಕುಕುಲವೃದ್ಧಿಗೆ ತಮ್ಮಿಂದ ರೂಪಶೀಲಗುಣೋಪೇತನಾದ ಮಗನನ್ನು ಇಚ್ಛಿಸುತ್ತೇನೆ. ಅನುಗ್ರಹಿಸಬೇಕೆಂದ ರಾಜ. ತಥಾಸ್ತು ಎಂದರು ಗುರುಗಳು.

ಹನ್ನೆರಡು ವರ್ಷಗಳ ಕಾಲ ಕಾಣದಿದ್ದ ರಾಜನನ್ನು ಕಂಡ ಅಯೋಧ್ಯಾನಗರ ಹರ್ಷವೈಭವದಿಂದ ಕಲ್ಮಾಷಪಾದನನ್ನು ಸ್ವಾಗತಿಸಿತು. ರಾಜನು ಪತ್ನಿಯನ್ನು ವಸಿಷ್ಠರ ಸೇವೆಗೆ ಕಳಿಸಿದ. ಶುಭಮುಹೂರ್ತದಲ್ಲಿ ವಸಿಷ್ಠರಿಂದ[೧] ಗರ್ಭಧರಿಸಿದಳು. ಅನೇಕ ವರ್ಷಗಳಾದರೂ ಪ್ರಸವಿಸಲಿಲ್ಲ. ರಾಣಿ ಕಲ್ಲಿನಿಂದ ಹೊಟ್ಟೆಯನ್ನು ಕುಕ್ಕಿದಳು. ನಂತರ ಕೂಡಾ ೧೨ವರ್ಷಗಳ ತರುವಾಯ ಗರ್ಭದಿಂದ ಹೊರಬಂದ ಮಗುವೇ ಅಶ್ಮಕ. ಕಲ್ಲಿನ ಆಘಾತದಿಂದ ಹುಟ್ಟಿದ್ದರಿಂದ ಅಶ್ಮಕನೆಂಬ ಹೆಸರು ಇಡಲ್ಪಟ್ಟಿತು.

ಮುಂದೆ ಅಶ್ಮಕ ಚಕ್ರವರ್ತಿಯಾಗಿ ವಂಶಪ್ರದೀಪನಾದ. ಪೌದನ್ಯವೆಂಬ ನಗರ ನಿರ್ಮಾಣ ಮಾಡಿದನು.

## ಸಂದೇಶ :

ವಿಶ್ವಾಮಿತ್ರರ ವೈರ ಫಲಿಸಲಿಲ್ಲ, ಕ್ಷಮಾಸಮುದ್ರರಾದ ವಸಿಷ್ಠರ ಮೇಲೆ. ಕ್ಷಮೆಯಿಂದ ಸಾಧಿಸುವ ಫಲ ವೈರದಿಂದ, ಅಸೂಯೆಯಿಂದ ಎಂದೂ ಸಾಧ್ಯವಾಗದು. ತನ್ನ ವಂಶ ನಿರ್ವಂಶವಾದಾಗಲೂ ವಸಿಷ್ಠರ ಕ್ಷಮೆ ಭೂಮಾತೆಯ ಕ್ಷಮೆಯನ್ನೂ ಮೀರಿಸುತ್ತದೆಯೋ ಎಂಬಂತೆ ಭಾಸವಾಗುತ್ತದೆ. ಕ್ಷಮೆಯ ವಿಭೂತಿರೂಪ ವಸಿಷ್ಠರಲ್ಲಿ ನೋಡುತ್ತೇವೆ. ಬ್ರಾಹ್ಮಣರ ಅವಮಾನ ಎಂದೂ ಒಳ್ಳೆಯದಕ್ಕೆ ಕಾರಣವಾಗದು. ಬ್ರಾಹ್ಮಣರು ಶಾಪಾನುಗ್ರಹಸಂಪನ್ನರು. ಉದಾ: ಶಾಪಾನುಗ್ರಹಶಕ್ತೋऽನ್ಯೋ ರಾಘವೇಂದ್ರಾನ್ನವಿದ್ಯತೇ ಎಂದು ಶ್ರೀರಾಘವೇಂದ್ರತೀರ್ಥರಲ್ಲಿ ಪ್ರಸಿದ್ಧಿಯನ್ನು ಎಲ್ಲರೂ ಬಲ್ಲರು.

*****

೧ ಈ ಪದ್ಧತಿಯು ಕಲಿಯುಗದಲ್ಲಿ ನಿಷೇಧಿತವಾಗಿದೆ.

# ೨೦. ಔರ್ವ ಉಪಾಖ್ಯಾನ

ಬ್ರಹ್ಮರ್ಷಿ ವಸಿಷ್ಠರ ಮಗ ಶಕ್ತಿ. ವಿಶ್ವಾಮಿತ್ರರು ಕಿಂಕರನೆಂಬ ರಾಕ್ಷಸನನ್ನು ಆಹ್ವಾನಿಸಿ, ಕಲ್ಮಾಷಪಾದರಾಜನ ಪಾದ ಸೇರುವಂತೆ ಮಾಡಿ ತನ್ಮೂಲಕ ವಸಿಷ್ಠರ ನೂರು ಜನ ಮಕ್ಕಳನ್ನು ಅದರಲ್ಲೂ ಶಕ್ತಿಯನ್ನು ತಿಂದುಹಾಕಿದ್ದು ನೋಡಿದ್ದೇವೆ. ಆ ಶಕ್ತಿಯ ಹೆಂಡತಿ ಆಗಲೇ ಗರ್ಭವತಿಯಾಗಿದ್ದಳು. ಶಕ್ತಿಯ ಮರಣದ ತರುವಾಯ ಹುಟ್ಟಿದ ಮಗುವೇ [೧]ಪರಾಶರ (ಮರಣದಿಂದ ಪಾರುಮಾಡಿದವನು). ಪರಾಶರರಿಗೆ ಮುಂದೊಮ್ಮೆ ತಮ್ಮ ತಂದೆ ಕಲ್ಮಾಷಪಾದ ರಾಜನಿಂದ (ರಾಕ್ಷಸ) ತಿನ್ನಲ್ಪಟ್ಟಿದ್ದು ಕೇಳಿ ಬಹಳ ದುಃಖವಾಗಿ ಸರ್ವಲೋಕನಾಶ ಮಾಡಲು ನಿಶ್ಚಯಿಸಲು ವಸಿಷ್ಠರು, ಪರಾಶರರನ್ನು ಸಮಾಧಾನಪಡಿಸಲು ಹೇಳಿದ ಕಥೆಯೆ ಔರ್ವೋಪಾಖ್ಯಾನ.

ಹಿಂದೆ ಕೃತವೀರ್ಯನೆಂಬ ರಾಜನಿದ್ದನು. ಈ ಭೃಗುಗಳ ಶಿಷ್ಯನಾಗಿದ್ದನು. ಈತ ಯಜ್ಞಯಾಗಮಾಡಿ ತನ್ನ ಐಶ್ವರ್ಯವನ್ನೆಲ್ಲ ಭೃಗುವಂಶದ ಬ್ರಾಹ್ಮಣರಿಗೆ ಹಂಚಿಬಿಟ್ಟಿದ್ದನು. ಕೃತವೀರ್ಯವನು ಸ್ವರ್ಗಸ್ಥನಾದ ಮೇಲೆ ಆತನ ವಂಶದ ರಾಜರಲ್ಲಿ ಮುಂದೆ ಐಶ್ವರ್ಯ ಹೇರಳವಾಗಿರಲಿಲ್ಲ. ಅದ್ದರಿಂದ ಅವರು ಕೃತವೀರ್ಯನು ಐಶ್ವರ್ಯವನ್ನು ಹಂಚಿದ ಭಾರ್ಗವವಂಶದ ಬ್ರಾಹ್ಮಣರನ್ನು ಹೊಡೆದು, ಬಡಿದು, ಹೆದರಿಸಿ ಹಣ ಸುಲಿಗೆ ಮಾಡಿದರು. ಕೆಲವರು ಕೊಟ್ಟರು, ಕೆಲ ಬ್ರಾಹ್ಮಣರು ಹಣ ಬಚ್ಚಿಟ್ಟರು. ಕೊಡದವರನ್ನು ರಾಜರು ನಿಂದಿಸಿದರು. ಕ್ಷಮೆ ಬೇಡಿದರೂ ಈ ಕ್ಷತ್ರಿಯರು ಬಿಡಲಿಲ್ಲ ನಿರಪರಾಧಿ ಬ್ರಾಹ್ಮಣರನ್ನು, ಮಕ್ಕಳನ್ನು ಸ್ತ್ರೀಯರನ್ನು ಕೊಂದೇಬಿಟ್ಟರು. ಗರ್ಭಿಣೀ ಸ್ತ್ರೀಯರನ್ನೂ ಬಿಡಲಿಲ್ಲ. ಕೆಲ ಬ್ರಾಹ್ಮಣರು ಹಿಮವತ್ಪರ್ವತಕ್ಕೂ ಓಡಿಹೋದರು. ಒಬ್ಬ ಸ್ತ್ರೀ ತನ್ನ ವಂಶದ ಕುಡಿ ನಾಶವಾಗಬಾರದೆಂದು ತನ್ನ ಗರ್ಭವನ್ನು ಯೋಗಶಕ್ತಿಯಿಂದ ಉದರದಿಂದ ತೊಡೆಗೆ ವರ್ಗಾಯಿಸಿಕೊಂಡಳು[೨]. ಮತ್ತೊಬ್ಬ ಬ್ರಾಹ್ಮಣ ಸ್ತ್ರೀಯು ಇದನ್ನು ಆ ದುಷ್ಟ ಕ್ಷತ್ರಿಯರಿಗೆ ತಿಳಿಸಿದಳು. ಆ ಕ್ಷತ್ರಿಯರು ಗರ್ಭವನ್ನು

---

೧ ಪರಾಸುಃ ಸ ಯತಸ್ತೇನ ವಸಿಷ್ಠಃ ಸ್ಥಾಪಿತೋ ಮುನಿಃ।
ಗರ್ಭಸ್ಥೇನ ತತೋ ಲೋಕೇ ಪರಾಶರ ಇತಿ ಸ್ಮೃತಃ ॥

೨ ತಾಸಾಮನ್ಯತಮಾ ಗರ್ಭಂ ಭಯಾತ್ ದಧ್ರೇ ಮಹೌಜಸಮ್ ।
ಊರುಣೈಕೇನ ವಾಮೋರುರ್ಭರ್ತುಃ ಕುಲವಿವೃದ್ಧಯೇ ॥ - ಆದಿಪರ್ವ(೧೭೭/೨೨)

ಕೊಲ್ಲಲು ಬಂದರು. ಆ ಗರ್ಭವತೀ ಸ್ತ್ರೀಯ ತೇಜಸ್ಸು ಅನ್ಯಾದೃಶವಾಗಿತ್ತು. ಕ್ಷತ್ರಿಯರು ಹೆದರಿದರು. ಆ ಗರ್ಭವು ಆ ಸ್ತ್ರೀಯ ತೊಡೆಯನ್ನು ಭೇದಿಸಿಕೊಂಡು ಹೊರಬಂದಿತು. [೧]ಆ ಶಿಶುವಿನ ದೃಷ್ಟಿತಾಗಿ ಆ ಕ್ಷತ್ರಿಯರ ಕಣ್ಣುಗಳು ಕುರುಡಾದವು. ಹೆದರಿದ ರಾಜರು ಬ್ರಾಹ್ಮಣಸ್ತ್ರೀಯರನ್ನು ಶರಣುಹೊಕ್ಕರು. ಕಣ್ಣು ಬರುವಂತೆ ಅನುಗ್ರಹಿಸಲು ಬೇಡಿದರು.

ಅದಕ್ಕೆ ಆಕೆ 'ಮಕ್ಕಳೇ! ನಾನು ನಿಮ್ಮ ಕಣ್ಣುಗಳನ್ನು ಅಪಹರಿಸಿಲ್ಲ. ಈ ಭೃಗುವಂಶದ ಶಿಶು ನಿಮ್ಮ ಮೇಲೆ ಕೋಪಗೊಂಡಿದೆ. ಭೃಗುವಂಶ ನಿರ್ವಂಶವಾಗಲೆಂಬ ನಿಮ್ಮ ವಿಚಾರವೇ ಇದಕ್ಕೆಲ್ಲ ಕಾರಣ. ನನ್ನ ಈ ಶಿಶುವನ್ನು ೧೦೦ವರ್ಷ ತೊಡೆಯಲ್ಲಿ ಕಾಪಾಡಿದೆ. ಆಗಲೇ ಅದು ವೇದಾಧ್ಯಯನ ಮಾಡಿದೆ. ನಿಮ್ಮನ್ನು ನಾಶಮಾಡಲು ಅದು ನಿಶ್ಚಯಿಸಿದೆ. ಆದ್ದರಿಂದ ನನ್ನ ತೊಡೆ(ಊರು)ಭೇದಿಸಿ ಹೊರಬಂದ ಈ [೨]ಔರ್ವ ಶಿಶುವನ್ನೇ ಪ್ರಾರ್ಥಿಸಿ. ಆಗ ರಾಜ ಕುಮಾರರೆಲ್ಲ ಆ ಶಿಶುವನ್ನು ಅಂಗಲಾಚಿ ಬೇಡಿಕೊಂಡರು. ಬಾಲಕ ಸುಪ್ರೀತನಾದ. ಕಣ್ಣುಗಳು ಬಂದವು. ತಾಯಿ ಮಗುವಿಗೆ ನಮಸ್ಕರಿಸಿ, ರಾಜರು ತಮ್ಮ ರಾಜ್ಯಕ್ಕೆ ಹೋದರು.

ಔರ್ವರು ಮುಂದೆ ಕ್ಷತ್ರಿಯರಿಂದ ತಮ್ಮ ವಂಶನಾಶವಾಗುತ್ತಿದ್ದರೂ ಎಲ್ಲ ಜನರೂ ಸುಮ್ಮನಿದ್ದುದಕ್ಕಾಗಿ ಸರ್ವಲೋಕವಿನಾಶ ಮಾಡಲು ಕಠೋರ ತಪಸ್ಸನ್ನು ಆರಂಭಿಸಿದರು. ಇದರಿಂದ ದೇವಾಸುರ ಮನುಷ್ಯರೆಲ್ಲ ಸಂತಾಪಗೊಂಡರು. ಪಿತೃದೇವತೆಗಳು ಕೂಡಲೇ ಬಂದು 'ನಿನ್ನ ತಪಸ್ಸಿನಿಂದ ೩ ಲೋಕಗಳು ಪರಿತಪಿಸುತ್ತಿವೆ. ಲೋಕಕಲ್ಯಾಣಕ್ಕಾಗಿ ಸಿಟ್ಟನ್ನು ಬದಿಗಿಡು. ಭೃಗುಕುಲದ ಬ್ರಾಹ್ಮಣರು ಅಸಮರ್ಥರಾಗಿ ಸಾಯಲಿಲ್ಲ. ಆದಷ್ಟು ಬೇಗನೇ ಮೃತ್ಯುವನ್ನು ಹೊಂದಿ ಸ್ವರ್ಗಲೋಕಕ್ಕೆ ಹೋಗಲು ಕ್ಷತ್ರಿಯರಿಗೆ ಪ್ರಚೋದಿಸಿ ಹತರಾದೆವು' ಅಸಾಮರ್ಥ್ಯದಿಂದಲ್ಲ. ಇಲ್ಲದಿದ್ದರೆ ನಾವು ಸಾಯುತ್ತಿದ್ದಿಲ್ಲ.'

[೩]ಆದ್ದರಿಂದ ಕ್ಷತ್ರಿಯರ ನಾಶಕ್ಕೆ ಪ್ರಯತ್ನಿಸದಿರು. ಸರ್ವಲೋಕವಿನಾಶದ ವಿಚಾರವೂ ಯೋಗ್ಯವಲ್ಲ. ನಿನ್ನ ಕೋಪದಿಂದ ನಿನ್ನ ತಪಶ್ಶಕ್ತಿ ಎಲ್ಲ ನಾಶವಾದೀತು. ಈ ಮಾತುಗಳನ್ನು ಕೇಳಿದ ಔರ್ವರು 'ಪಿತೃಗಳೇ! ನನ್ನ ಪಿತೃಗಳು ವಂಶದವರನ್ನು ಕೊಲ್ಲುತ್ತಿದ್ದರೂ ಈ ಎಲ್ಲ ಲೋಕದ ಜನರು ಸುಮ್ಮನಿದ್ದುದು ಸರಿಯೆ? ಆದ್ದರಿಂದ ಅನ್ಯಾಯವನ್ನು ಪ್ರತಿಭಟಿಸದ ಈ ಲೋಕಗಳನ್ನು ನಾನು ನಾಶಮಾಡಲು ತಪಸ್ಸನ್ನು ಮಾಡುತ್ತಿದ್ದೇನೆ. ನನ್ನ ಕೋಪ ಆರಲು ಸಾಧ್ಯವಿಲ್ಲ. ಪಾಪದ ಭೀತಿಗಾಗಿ ಪಾಪಿಗಳಿಗೆ ಶಿಕ್ಷೆ ನೀಡುವುದು ಅನಿವಾರ್ಯ. ಪ್ರಪಂಚವನ್ನೇ ಸುಡಲು

---

೧ ಮುಷ್ಣನ್ ದೃಷ್ಟೀಃ ಕ್ಷತ್ರಿಯಾಣಾಂ ಮಧ್ಯಾಹ್ನ ಇವ ಭಾಸ್ಕರಃ।
ತತಶ್ಚಕ್ಷುರ್ವಿಹೀನಾಸ್ತೇ ಗಿರಿದುರ್ಗೇಷು ಬಭ್ರಮುಃ॥ - ಆದಿಪರ್ವ(೧೭೭/೨೪)

೨ ಅನೇನೈವ ಚ ವಿಖ್ಯಾತಃ ನಾಮ್ನಾ ಲೋಕೇಷು ಸತ್ತಮಃ।
ಸ ಔರ್ವ ಇತಿ ವಿಪ್ರರ್ಷಿಃ ಊರುಂ ಭಿತ್ವಾ ವ್ಯಜಾಯತ॥ - ಆದಿಪರ್ವ(೧೭೮/೮)

೩ ಮಾ ವಧೀಃ ಕ್ಷತ್ರಿಯಾಂಸ್ತಾತ ನ ಲೋಕಾನ್ ಸಪ್ತ ಪುತ್ರಕ।
ದೂಷಯಂತಂ ತಪಸ್ತೇಜಃ ಕ್ರೋಧಮುತ್ಪತಿತಂ ಜಹಿ॥ - ಆದಿಪರ್ವ(೧೭೮/೨೨)

ಸಮರ್ಥವಾದ ಈ ಕೋಪಾಗ್ನಿಯನ್ನು ನಿಗ್ರಹಿಸಿದಲ್ಲಿ ಅದು ನನ್ನನ್ನೇ ಸುಡುತ್ತದೆ' ಎಂದನು. ಅದಕ್ಕೆ ಪಿತೃಗಳು ನಿನ್ನ ಕೋಪವನ್ನು ಸರ್ವಲೋಕಗಳಿಗೂ ಆಸರೆಯಾದ ನೀರಿನಲ್ಲಿ ತ್ಯಜಿಸು. ನಿನ್ನ ಕೋಪಾಗ್ನಿ ಸರ್ವಲೋಕಗಳನ್ನು ಬಲಿ ಕೊಟ್ಟಂತೆಯೂ ಆಗುತ್ತದೆ, ಸರ್ವಲೋಕನಾಶವೂ ತಪ್ಪುತ್ತದೆ' ಎಂದರು.

ಅದೇ ಮೇರೆಗೆ ಔರ್ವರು ತಮ್ಮ ಕೋಪವನ್ನು ಸಮುದ್ರದಲ್ಲಿ ತ್ಯಾಗ ಮಾಡಿದರು. ಅದೇ ವಡವಾನಲ ರೂಪದಿಂದ ನೀರನ್ನು ಯಾವಾಗಲೂ ದಹಿಸುತ್ತಿರುತ್ತದೆ.

## ಸಂದೇಶಗಳು-ವಿವರಣೆಗಳು

ಹೀಗೆ ಔರ್ವರು ತಾವು ಶಿಶುವಾದಾಗಿನಿಂದ ತೋರಿದ ಅಗಾಧ ತಪೋಸಾಮರ್ಥ್ಯ, ದುಷ್ಟಕ್ಷತ್ರಿಯರ ಕಣ್ಣುಗಳನ್ನು ಕಿತ್ತಿದ್ದು '**ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ**' ಎಂಬ ಬ್ರಾಹ್ಮಣರ ಬಲವು ಲೋಕಕ್ಕೆ ವಿದಿತವಾಯಿತು.

ಆದರೆ ತಪಸ್ಸನ್ನು ಲೋಕನಾಶಕ್ಕೆ ಉಪಯೋಗಿಸುವುದು ವಿಹಿತವಲ್ಲವೆಂಬ ಪಿತೃಗಳ ಉಪದೇಶ ತಪಸ್ಸಿನ ಸಂಚಯಕ್ಕೆ ಕಾರಣವಾಗುತ್ತದೆ:

**ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥- ಗೀತಾ(೩/೩೭)**

ಎಂಬ ಗೀತೋಕ್ತಿಯ ಸಂದೇಶದಂತೆ ಕ್ರೋಧದ ಸಂಯಮ ಪುಣ್ಯಸಂಚಯಕ್ಕೆ ಕಾರಣವಾಗುತ್ತದೆ. ಆದ್ದರಿಂದ ಬ್ರಾಹ್ಮಣನು ತಪಸ್ಸನ್ನು ಮಾಡುವುದು ಎಷ್ಟು ಮುಖ್ಯವೋ ಸಂಪಾದಿಸಿದ ಪುಣ್ಯವನ್ನು ಉಳಿಸಿಕೊಳ್ಳುವುದೂ ಅಷ್ಟೇ ಮುಖ್ಯವೆಂಬುದು ಇಲ್ಲಿಯ ಹೃದಯ. ತನ್ನ ಪೂರ್ವಜರ ಮೇಲೆ ಅಪಾರ ಭಕ್ತಿ ಸದಭಿಮಾನಗಳೂ ಅಷ್ಟೇ ಮುಖ್ಯ.

*****

# ಅರ್ಜುನ ವನವಾಸಪರ್ವ

## ೨೧. ಸುಂದೋಪಸುಂದಕಥಾ

ನಾರದರು ಧರ್ಮರಾಜನಿಗೆ ಹೇಳಿದ ಕಥೆಯಿದು. ಹಿರಣ್ಯಕಶಿಪುವಿನ ವಂಶದಲ್ಲಿ ನಿಕುಂಭನೆಂಬ ಮಹಾಕ್ರೂರಿಯೂ, ಬಲಶಾಲಿಯೂ ಆದ ದೈತ್ಯನಿದ್ದನು. ಅವನ ಮಕ್ಕಳೇ ಸುಂದ, ಉಪಸುಂದರು. ತಂದೆಯಂತೆ ಪರಾಕ್ರಮಿಗಳೂ, ಮಹಾಕ್ರೂರಿಗಳೂ ಆಗಿದ್ದ ಇವರಲ್ಲಿದ್ದ ಮುಖ್ಯಗುಣ ಅನ್ಯೋನ್ಯತೆ. ಯಾವಾಗಲೂ ಅವರು ಜೊತೆಗೇ ಇದ್ದು ಆಟ, ಪಾಠ, ಭೋಜನ, ಶಯನ, ಮಾತುಕತೆ ಹೀಗೆ ಏಕದೇಹನ್ಯಾಯದಿಂದ ಇರುತ್ತಿದ್ದರು. ಮೂರುಲೋಕಗಳನ್ನು ಗೆಲ್ಲಬೇಕೆಂಬ ಆಸುರೀ ಆಶಯದಿಂದ ವಿಂಧ್ಯಪರ್ವತಕ್ಕೆ ಹೋಗಿ ಬ್ರಹ್ಮದೇವರನ್ನು ಕುರಿತು ಹೆಬ್ಬೆಟ್ಟಿನ ಮೇಲೆ ನಿಂತು ಉಗ್ರ ತಪಸ್ಸನ್ನು ಆರಂಭಿಸಿದರು. ಆಹಾರ ತ್ಯಜಿಸಿ, ವಲ್ಕಲ ಧರಿಸಿ, ತಮ್ಮ ಶರೀರದ ಮಾಂಸವನ್ನೇ ಕತ್ತರಿಸಿ ಯಜ್ಞೇಶ್ವರನಿಗೆ ಆಹುತಿ ಹಾಕುತ್ತಿದ್ದರು. ಇವರ ತಪಸ್ಸಿಗೆ ವಿಂಧ್ಯಪರ್ವತ ಕಾದು ಅದರ ಧೂಮ ಎಲ್ಲೆಡೆ ಪಸರಿಸಿತು. ದೇವತೆಗಳು ಭೀತರಾದರು. ದೇವತೆಗಳು ಒಡ್ಡಿದ ವಿಘ್ನಗಳಾವುವೂ ಫಲಕಾರಿಯಾಗಲಿಲ್ಲ.

ಕೊನೆಗೆ ಬ್ರಹ್ಮದೇವನು ಪ್ರತ್ಯಕ್ಷನಾಗಿ ವರ ಕೊಡುವುದಾಗಿ ಹೇಳಲು ಸುಂದೋಪಸುಂದರು 'ನಮಗೆ ಮಾಯಾವಿದ್ಯೆ, ಅಸ್ತ್ರವಿದ್ಯೆಗಳಲ್ಲಿ ನೈಪುಣ್ಯತೆಯನ್ನೂ, ಮಹಾಪರಾಕ್ರಮಿಗಳಾಗುವಂತೆ ಹಾಗೂ ಕಾಮರೂಪಿಗಳಾಗುವಂತೆ ಮತ್ತು ಅಮರರಾಗುವಂತೆ ಅನುಗ್ರಹಿಸು' ಎಂದು ಬೇಡಿದರು.

ಅದಕ್ಕೆ ಬ್ರಹ್ಮನು ಅಮರತ್ವ ಮಾತ್ರ ನಿಮಗೆ ದೊರೆಯದು. ಉಳಿದವು ದೊರೆಯುತ್ತವೆ ಎಂದು ಅನುಗ್ರಹಿಸಿದನು. ನೀವು ಇಚ್ಛಿಸಿದ ಮರಣ ಬರಲಿ ಎನ್ನಲು ಅವರು ನಮ್ಮಿಬ್ಬರಿಗೆ ನಮ್ಮಿಂದಲೇ ಮರಣ ಬರಲಿ ಎಂದು ಬೇಡಿದರು. ಕಾರಣ, ತಮ್ಮ ಅನ್ಯೋನ್ಯತೆ ಎಂದೂ ವೈಮನಸ್ಯಕ್ಕೆ ಕಾರಣವಾಗದೆಂದು ಅವರು ಭ್ರಮಿಸಿದ್ದರು.

ಹೀಗೆ ಅಜೇಯತ್ವ ಸಂಪಾದಿಸಿ, ಮೂರುಲೋಕಗಳಿಗೆ ದಾಳಿ ಮಾಡಿ ಅನಾಯಾಸವಾಗಿ ದೇವತೆಗಳನ್ನು ಸೋಲಿಸಿದರು. ತ್ರೈಲೋಕ್ಯಾಧಿಪತ್ಯ ಸಂಪಾದಿಸಿ ಭೂಲೋಕದಲ್ಲಿಯೂ ಬ್ರಾಹ್ಮಣ, ಹವ್ಯಕವ್ಯಗಳನ್ನು ನಾಶಮಾಡುತ್ತಾ, ಯಜ್ಞಸಂಭಾರಗಳನ್ನು ಅಪವಿತ್ರಗೊಳಿಸುತ್ತ, ಗೋಬ್ರಾಹ್ಮಣರಿಗೆ ದ್ರೋಹ ಮಾಡುತ್ತ, ತಪಸ್ವಿಗಳೆಲ್ಲರೂ ಪಲಾಯನ ಮಾಡುವಂತೆ ಕ್ರೂರವಾಗಿ ವರ್ತಿಸಲಾರಂಭಿಸಿದರು. ಸಿದ್ಧಚಾರಣ, ಗಂಧರ್ವರೂ, ಋಷಿಗಳೂ, ದೇವತೆಗಳೂ

ಅದೃಶ್ಯರಾದರು. ಸಿಂಹ, ಹುಲಿ ಮುಂತಾದ ಕ್ರೂರಮೃಗಗಳ ರೂಪಧರಿಸಿ, ಋಷಿಮುನಿಗಳನ್ನು ಸಂಹರಿಸಿದರು. ಯಜ್ಞ, ಯಾಗ, ಪಿತೃಕ್ರಿಯೆಗಳು, ದಾನ, ವೇದೋಕ್ತಕರ್ಮಗಳೆಲ್ಲ ನಿಂತವು. ಹೀಗೆ ಶತ್ರುಗಳೇ ಇಲ್ಲದವರಾಗಿ ಸುಂದೋಪಸುಂದರು ಕುರುಕ್ಷೇತ್ರದಲ್ಲಿ ಬಂದು ನೆಲೆಸಿದರು. ಸುಂದೋಪಸುಂದರ ಹಿಂಸೆ ತಾಳಲಾರದೆ ದೇವಋಷಿಸಿದ್ಧರೇ ಮೊದಲಾದ ಸಜ್ಜನರೆಲ್ಲ ಬ್ರಹ್ಮದೇವರನ್ನು ಭೇಟಿ ಮಾಡಿ ಅವರನ್ನು ಸಂಹರಿಸಲು ಪ್ರಾರ್ಥಿಸಿದರು. ಸ್ವಲ್ಪ ಹೊತ್ತು ಚಿಂತಿಸಿದಂತೆ ಮಾಡಿದ ಬ್ರಹ್ಮನು ವಿಶ್ವಕರ್ಮನನ್ನು ಕರೆದು ಅತ್ಯಂತ ಸುಂದರಿಯನ್ನು ನಿರ್ಮಿಸೆಂದು ಆದೇಶಿಸಿದನು. ಬ್ರಹ್ಮನನ್ನು ನಮಸ್ಕರಿಸಿ ವಿಶ್ವಕರ್ಮನು ಮೂರುಲೋಕಗಳಲ್ಲಿ ದರ್ಶನೀಯ ಪದಾರ್ಥಗಳನ್ನೆಲ್ಲ ಸಂಗ್ರಹಿಸಿ ಕೋಟ್ಯಂತರ ರತ್ನಗಳ ಕಾಂತಿಸೌಂದರ್ಯಗಳನ್ನೆಲ್ಲ ಏಕತ್ರ ಮೇಳವಿಸಿ, ಎಲ್ಲ ತರಹದ ಸುಂದರ ಪದಾರ್ಥಗಳಿಂದಲೂ ಸಾರಭಾಗವನ್ನು ಸಂಗ್ರಹಿಸಿ [೧]ನಿರ್ಮಿಸಿದ ಆಕೃತಿಯನ್ನು **ತಿಲೋತ್ತಮೆ** ಎಂದು ಬ್ರಹ್ಮದೇವನು ಕರೆದನು. ತಿಲೋತ್ತಮೆ ಬ್ರಹ್ಮನಿಗೆ ನಮಸ್ಕರಿಸಿ ಅತನ ಆದೇಶದ ಮೇರೆಗೆ ಸುಂದೋಪಸುಂದರಲ್ಲಿ ವಿರೋಧ ಉಂಟುಮಾಡಲು ಹೊರಟಳು. ಆಕೆಯ ಸೌಂದರ್ಯ ರುದ್ರಾದಿದೇವತೆಗಳನ್ನು ದಿಗ್ಭ್ರಮೆಗೊಳಿಸಿತು. ಆಕೆಯನ್ನು ನೋಡಲು ರುದ್ರದೇವರೇ ಚತುರ್ಮುಖನಾದರೆ, ಇಂದ್ರ ಮೈತುಂಬಾ ಕಣ್ಣುಗಳನ್ನು ಹೊಂದಿ ಸಹಸ್ರಾಕ್ಷನಾದನಂತೆ!![೨]

ಮೂರು ಲೋಕಗಳಲ್ಲಿ ಶತ್ರುಗಳೇ ಇಲ್ಲವಾಗಲು ಸುಂದೋಪಸುಂದರು ಬರೀ ಭೋಗಾಸಕ್ತರಾಗಿ ಸುಖಲೋಲುಪರಾದರು. ಹೀಗೆ ಸುಖವಾಗಿರುತ್ತಾ ವಿಂಧ್ಯಪರ್ವತದ ಬಳಿ ವಿಹಾರ ಮಾಡುತ್ತಿದ್ದಾಗ ತಿಲೋತ್ತಮೆಯ ದರ್ಶನದಿಂದ, ಅಲೌಕಿಕ ರೂಪದಿಂದ ವ್ಯಾಮೋಹಗೊಂಡು ಇಬ್ಬರೂ ಆಕೆಯನ್ನು ಪ್ರತ್ಯೇಕವಾಗಿ ಬಂದು ಆಕೆಯ ಎರಡೂ ಕೈಗಳನ್ನು ಹಿಡಿದುಕೊಂಡರು. 'ಇವಳು ನನ್ನ ಹೆಂಡತಿ, ನಿನ್ನವಳಲ್ಲ, ನಿನಗೆ ಪೂಜ್ಯಳಾಗುವವಳು' ಎಂದ ಸುಂದ. 'ಈಕೆ ನನ್ನವಳು ನಿನಗೆ ಸೊಸೆಯಾಗಬೇಕು' ಎಂದ ಉಪಸುಂದ. ಇದನ್ನೇ ಸಾಧಿಸುತ್ತಿದ್ದ ತಿಲೋತ್ತಮೇ ಮತ್ತೊಮ್ಮೆ ಅವರತ್ತ ಕಟಾಕ್ಷಬೀರಿ ಕಾಮಬಾಣ ಪ್ರಯೋಗಿಸಲು ಭ್ರಾಂತರಾಗಿ ಸಹೋದರಪ್ರೇಮವನ್ನು, ಅನ್ಯೋನ್ಯತೆಯನ್ನು ಮರೆತರು. ಅಲ್ಲದೇ ಇವಳು ನನಗೆ ಸೇರತಕ್ಕವಳು ಎಂದು ಇಬ್ಬರೂ ವಾದಿಸುತ್ತಾ ಗದಾಯುದ್ಧವನ್ನೇ ಪರಸ್ಪರ ಆರಂಭಿಸಿಬಿಟ್ಟರು. ಪರಸ್ಪರ ಹೊಡೆದಾಡುತ್ತಾ ಗದಾಪ್ರಹಾರಗಳಿಂದ ಇಬ್ಬರೂ ಬಿದ್ದು ಮರಣವನ್ನಪ್ಪಿದರು.

ಹೀಗೆ ಒಬ್ಬ ಸ್ತ್ರೀಯನ್ನು ಬಯಸಿದ ಸುಂದೋಪಸುಂದರು ಪರಸ್ಪರ ಹತರಾದರು. ಆದ್ದರಿಂದ ನೀವಾದರೂ ಪಂಚಪತಿಗಳು, ಒಬ್ಬ ದ್ರೌಪದಿಯನ್ನು ವಿವಾಹವಾಗಿದ್ದೀರಿ.

---

೧ ತಿಲಂ ತಿಲಂ ಸಮಾನೀಯ ರತ್ನಾನಾಂ ಯದ್ವಿನಿರ್ಮಿತಾ।
ತಿಲೋತ್ತಮೇತಿ ತತ್ತಸ್ಯಾ ನಾಮ ಚಕ್ರೇ ಪಿತಾಮಹಃ॥ - ಆದಿಪರ್ವ(೨೧೦/೧೮)

೨ ಏವಂ ಚತುರ್ಮುಖಃ ಸ್ಥಾಣುಃ ಮಹಾದೇವೋಽಭವತ್ ಪುರಾ।
ತಥಾ ಸಹಸ್ರನೇತ್ರಶ್ಚ ಬಭೂವ ಬಲಸೂದನಃ॥ - ಆದಿಪರ್ವ(೨೧೦/೨೮)

ನಿಮ್ಮಲ್ಲಿ ಹೀಗೆ ಎಂದೂ ಸ್ತ್ರೀನಿಮಿತ್ತ ವಿವಾದವಾಗಬಾರದು. ಆದ್ದರಿಂದ ನಿಮ್ಮಲ್ಲಿ ಪರಸ್ಪರ ಒಪ್ಪಂದ (ಸಮಯ) ಮಾಡಿಕೊಳ್ಳಿ ಎಂಬ ನಾರದರ ಉಪದೇಶದಂತೆ ಪಾಂಡವರು ತಾವು ಯಾರಾದರೂ ದ್ರೌಪದಿಯ ಜೊತೆ ಇದ್ದಾಗ ಇನ್ನೊಬ್ಬ ಸೋದರನು ನೋಡಿದಲ್ಲಿ ೧೨ ತಿಂಗಳು ಬ್ರಹ್ಮಚಾರಿಯಾಗಿ ವನವಾಸ ಮಾಡಬೇಕೆಂಬ ನಿಯಮವನ್ನು ಮಾಡಿಕೊಂಡು ಪರಸ್ಪರ ಅನ್ಯೋನ್ಯವಾಗಿಯೇ ಇದ್ದರು.

## ಸಂದೇಶಗಳು-ವಿವರಣೆಗಳು

ಯದ್ಯಪಿ ಸುಂದೋಪಸುಂದರು ಒಬ್ಬ ಸ್ತ್ರೀ ನಿಮಿತ್ತ ಪರಸ್ಪರ ಹತರಾದರೂ, ಎಲ್ಲರಿಗೂ ಹೀಗೆ ಆಗುತ್ತದೆ ಎಂದು ಹೇಳಲು ಬರದು. ಸುಂದೋಪಸುಂದರು ದೈತ್ಯರು. ತಮ್ಮ ಯೋಗ್ಯತೆ ಮೀರಿದ ಸ್ತ್ರೀಯನ್ನು ಬಯಸಿದ್ದರಿಂದ ಹತರಾದರು. ಪಾಂಡವರಾದರೋ ತಮಗೆಲ್ಲ ಯೋಗ್ಯಳೇ ಆದ (ದ್ರೌಪದಿಯಲ್ಲಿ ಬೇರೆ ಸುರಸ್ತ್ರೀಯರು ಶಚಿ, ಶ್ಯಾಮಲಾ, ಉಷಾ ಎಂಬ ಅರ್ಜುನ, ಧರ್ಮ, ನಕುಲ-ಸಹದೇವರ ಸ್ವಾಭಾವಿಕ ಪತ್ನಿಯರೇ ಆಶ್ರಯ ಪಡೆದು ಇದ್ದುದರಿಂದ) ಪತ್ನಿಯನ್ನು ಮದುವೆ ಆದುದರಿಂದ ಸುಂದೋಪಸುಂದರ ಪರಿಸ್ಥಿತಿ ಬರಲಿಲ್ಲ.

ಆದರೂ ಲೋಕದ ನಿಯಮಗಳನ್ನು ತಾವು ಎಷ್ಟೇ ದೊಡ್ಡವರಾದರೂ ಪಾಲಿಸಬೇಕೆಂಬುದು ಇಲ್ಲಿನ ತತ್ತ್ವ. ಆದ್ದರಿಂದ ಪಾಂಡವರು ಪರಸ್ಪರ ದ್ರೌಪದೀಜೊತೆ ಇರಬೇಕಾದ ಅವಧಿಯನ್ನು ನಿಗದಿಪಡಿಸಿಕೊಂಡೇ ಇದ್ದು, ಲೋಕಕ್ಕೆಲ್ಲ ಆದರ್ಶ ದಂಪತಿಗಳಾಗಿ ತೋರಿಸಿಕೊಟ್ಟಿದ್ದಾರೆ.

**ವಿ.ಸೂ : ಗೀತಾಪ್ರೆಸ್ ಪ್ರಕಾಶನದಲ್ಲಿ ೧೨ ವರ್ಷವೆಂದು ಪಾಠವಿದೆ. ಟಿ.ಆರ್. ಕೃಷ್ಣಾಚಾರ್ಯರ ಪುಸ್ತಕದಲ್ಲಿ ೧೨ ತಿಂಗಳೆಂದೇ ಸರಿಯಾಗಿದೆ. ಗೀತಾಪ್ರೆಸ್ ಪಾಠ ಮುಂದಿನ ಘಟನೆಗಳಿಗೆ ವಿರೋಧಿಯಾದುದು ಎಂಬುದನ್ನು ಗಮನಿಸಬೇಕು.**

*****

# ೨೨. ಶ್ವೇತಕಿ ಕಥಾ

ಅಗ್ನಿಯು ಖಾಂಡವವನದಹನ ಮಾಡಿದುದರ ಕಾರಣವನ್ನು ತಿಳಿಸುವ ಈ ಕಥೆಯ ನಾಯಕ ಶ್ವೇತಕಿ ಎಂಬ ಪರಮ ಧಾರ್ಮಿಕನಾದ, ದಾನ, ಯಜ್ಞ, ತಪಸ್ಸುಗಳನ್ನು ಅವಿರತವಾಗಿ ಮಾಡುತ್ತಿದ್ದ ರಾಜ. ಒಂದರ ನಂತರ ಮತ್ತೊಂದು ಯಜ್ಞ ಮಾಡುತ್ತಿದ್ದ ರಾಜನಿಂದಾಗಿ ಋತ್ವಿಜರಿಗೆ ಬಿಡುವಿಲ್ಲದೇ ದಣಿದರು. ಸಾಲದ್ದಕ್ಕೆ ಯಜ್ಞದ ಧೂಮದ ಅವ್ಯಾಹತ ಪರಿಣಾಮವಾಗಿ ಕಣ್ಣುಗಳು ತಮ್ಮ ಪಾಟವತೆ ಕಳೆದುಕೊಂಡುದುದರಿಂದ ಅವರೆಲ್ಲ ಒಂದಾಗಿ ರಾಜನಿಗೆ ತಮ್ಮ ಅಸಹಾಯಕತೆಯನ್ನು ನಿವೇದಿಸಿದರು. ಮತ್ತೊಮ್ಮೆ ರಾಜನು ಒಂದು ನೂರುವರ್ಷಕಾಲ ನಡೆಸುವ ಯಜ್ಞಕ್ಕೆ ಋತ್ವಿಜರನ್ನು ತುಂಬಾ ಗೌರವದಿಂದ, ಸಾಕಷ್ಟು ದಾನವನ್ನು ಕೊಟ್ಟು ಕರೆದನು.

'ಒಂದು ವೇಳೆ ನೀವು ಬರದಿದ್ದರೆ ಬೇರೆ ಋತ್ವಿಜರಿಂದ ಮಾಡಿಸುವೆ' ಎಂದು ರಾಜ ನುಡಿಯಲು ಅವರು 'ನಾವು ಹಿಂದಿನ ಯಜ್ಞ[೧]ಕರ್ಮಗಳಲ್ಲಿ ಭಾಗವಹಿಸಿ ಶ್ರಮವಾಗಿದೆ. ನಮಗೆ ವಿಶ್ರಾಂತಿ ಬೇಕು. ಆದ್ದರಿಂದ ನೀನು ಬೇಕಾದರೆ ರುದ್ರದೇವರ ಬಳಿಗೆ ಹೋಗಿ ಅವರಿಂದ ಯಜ್ಞ ಮಾಡಿಸಿಕೋ' ಎಂದು ನುಡಿಯಲು, ರಾಜನು ಕ್ರುದ್ಧನಾಗಿ ಕೈಲಾಸಕ್ಕೆ ಹೋಗಿ ರುದ್ರದೇವರನ್ನೇ ಕುರಿತು ಉಪವಾಸ ಪರನಾಗಿ ಆರಾಧನೆ ಮಾಡಿದನು. ಒಮ್ಮೆ ೧೨ನೆ ಕಾಲದಲ್ಲೀ ಒಮ್ಮೊಮ್ಮೆ ೧೬ನೇ ಕಾಲದಲ್ಲಿಯೂ ಕಂದಮೂಲಫಲಗಳನ್ನು ಸ್ವೀಕರಿಸುತ್ತಾ ರಾಜನು ೬ ತಿಂಗಳವರೆಗೆ ಕೈಮೇಲಕ್ಕೆತ್ತಿ ಕಣ್ಣನ್ನು ಪಿಳುಕಿಸದೆ ತಪಸ್ಸನ್ನು ಮಾಡಿದನು.

ಇದರಿಂದ ಸಂತುಷ್ಟನಾದ ಶಂಕರನು ದರ್ಶನಕೊಟ್ಟು ವರಬೇಡೆಂದು ನುಡಿಯಲು, ರಾಜನು 'ಸುರೇಶ್ವರನಾದ ಶಂಕರನೇ! ನೀನು ಸ್ವಯಂ ನಾನು ಸಂಕಲ್ಪಿಸಿದ ಯಜ್ಞವನ್ನು ಮಾಡಿಸು' ಎಂದು ಬೇಡಿದನು. ಇದನ್ನು ಕೇಳಿ ಶಂಕರನು 'ಯಾಜಕರಾಗುವುದು ನಮ್ಮ ವಿಷಯಕ್ಕೆ(ವ್ಯಾಪ್ತಿಗೆ) ಬರುವುದಿಲ್ಲ. ಆದರೂ ಒಂದು ನಿಬಂಧನೆಗೆ ಒಳಪಟ್ಟು ಮಾಡಿಸುವೆ. ಒಂದು ವೇಳೆ ನೀನು ಬ್ರಹ್ಮಚರ್ಯದಿಂದ ೧೨ವರ್ಷಗಳವರೆಗೆ ಸತತವಾಗಿ ಅಗ್ನಿಯನ್ನು ಆಜ್ಯಧಾರೆಯಿಂದ ತೃಪ್ತಿಪಡಿಸಿದಲ್ಲಿ ನಾನು ನಿನಗೆ ಯಾಜಕನಾಗುವೆ' ಎಂದು ನುಡಿದನು.

---

೧ ತತೋ ವಯಂ ಪರಿಶ್ರಾಂತಾಃ ಸತತಂ ಕರ್ಮವಾಹಿನಃ।
ಶ್ರಮಾದಸ್ಮಾತ್ ಪರಿಶ್ರಾಂತಾನ್ ಸ ತ್ವಂ ನ ಸ್ಮರ್ತುಮರ್ಹಸಿ॥ – ಆದಿಪರ್ವ(೨೨೨/೩೪)
ಗಚ್ಛ ರುದ್ರ ಸಕಾಶಂ ತ್ವಂ ಸ ಹಿ ತ್ವಾಂ ಯಾಜಯಿಷ್ಯತಿ। – ಆದಿಪರ್ವ(೨೨೨/೩೫)
ಉಪವಾಸಪರೋ ರಾಜನ್ ಕದಾಚಿತ್ ದ್ವಾದಶೇ ಕಾಲೇ ಕದಾಚಿದಪಿ ಷೋಡಶೇ॥ ಇತ್ಯಾದಿ..

ಅಂತೆಯೇ ರಾಜನು ೧೨ವರ್ಷಕಾಲ ಸತತವಾಗಿ ತಪ್ಪದೇ ಅಗ್ನಿಯನ್ನು ಆಜ್ಯದಿಂದ ತೃಪ್ತಿಪಡಿಸಿದ. ಪ್ರೀತನಾದ ಶಂಕರನು ದರ್ಶನಕೊಟ್ಟು 'ರಾಜನ್! ಯಾಜನ ಮಾಡಿಸುವುದು ಬ್ರಾಹ್ಮಣರ ಕರ್ತವ್ಯ. ಆದ್ದರಿಂದ ನಾನು ನೇರವಾಗಿ ನಿನಗೆ ಯಾಜನ ಮಾಡಿಸುವುದಿಲ್ಲ. ಆದರೆ ನನ್ನದೇ ಅವತಾರವಾದ ದೂರ್ವಾಸರು ನಿನಗೆ ಯಜ್ಞ ಮಾಡಿಸುವರು.' ಎಂದು ಅನುಗ್ರಹಿಸಲು, ರಾಜನು ತನ್ನ ರಾಜ್ಯಕ್ಕೆ ತೆರಳಿ ಯಜ್ಞದ ಸಿದ್ಧತೆಗಳನ್ನು ಮಾಡಿ ಪುನಃ ರುದ್ರದೇವರನ್ನು ಕಂಡನು. ರುದ್ರದೇವರು ದೂರ್ವಾಸರನ್ನು ಕರೆದು ಶ್ವೇತಕಿಗೆ ಪರಿಚಯಿಸಿ ಯಾಗ ಮಾಡಿಸಲು ತಿಳಿಸಿದರು. ದೂರ್ವಾಸರು ಆ ಯಜ್ಞವನ್ನು ವಿಧಿಪೂರ್ವಕವಾಗಿ ೧೨ ವರ್ಷಗಳ ಕಾಲ ನಿರ್ವಹಿಸಿಕೊಟ್ಟರು. ಋತ್ವಿಜರೆಲ್ಲರು ಭೂರಿದಕ್ಷಿಣೆಯಿಂದ ತೃಪ್ತರಾದರು. ಅಗ್ನಿಯು ಹವಿಸ್ಸಿನಿಂದ ತೃಪ್ತಿಯಾದನು. ಬೇರೆ ಯಾರ ತಪಸ್ಸನ್ನು ಸ್ವೀಕರಿಸಲು ಇಚ್ಛಿಸದೆ ಪಾಂಡುವರ್ಣನಾದನು (ಒಂದು ತರಹದ ಅಜೀರ್ಣವಾಯಿತು). ಹಸಿವೆಯೇ ಇಂಗಿ ಹೋಯಿತು. ಅನುದಿನವೂ ಶಕ್ತಿ ಕುಂದಲಾರಂಭಿಸಿತು. ತೇಜೋವಿಹೀನನಾದನು, ಬ್ರಹ್ಮದೇವರ ಬಳಿಗೆ ಹೋಗಿ ತನ್ನ ಅಳಲನ್ನು ತೋಡಿಕೊಂಡನು. ಆಗ ಬ್ರಹ್ಮನು ಅಗ್ನಿಗೆ 'ಖಾಂಡವವನವನ್ನು ಅದರಲ್ಲಿನ ದುಷ್ಟಪ್ರಾಣಿಗಳನ್ನು ಸುಡು. ಅದನ್ನು ಸವಿದೊಡೆ ನಿನ್ನ ಪಚನಶಕ್ತಿ ವರ್ಧಿಸುತ್ತದೆ' ಎಂದು ನುಡಿಯಲು ಅಗ್ನಿಯು ಖಾಂಡವದಹನಕ್ಕೆ ಅಣಿಯಾದನು.

## ಸಂದೇಶಗಳು–ವಿವರಣೆಗಳು

'ಶ್ವೇತಕಿ'ಯ ನಿರಂತರ ಯಜ್ಞಾಖ್ಯ ಸ್ವಧರ್ಮ ದೀಕ್ಷೆಯೇ ಇಲ್ಲಿಯ ಸಂದೇಶ. ರುದ್ರದೇವರನ್ನು ಒಲಿಸಿ, ಅವರನ್ನೇ ಯಾಜಕರನ್ನಾಗಿಸಿದುದು ಮತ್ತೊಂದು ದಾಖಲೆ. ಸತ್ಕರ್ಮಾನುಷ್ಠಾನದಿಂದ ದೇವತೆಗಳು ತೃಪ್ತರಾಗಿ ಸ್ವಯಂ ನೆರವಾಗುತ್ತಾರೆ ಎನ್ನುವುದೇ ಇಲ್ಲಿಯ ತತ್ತ್ವ.

ಹೀಗೆಯೇ ಪಾಂಡವರ ರಾಜಸೂಯ, ಅಶ್ವಮೇಧ ಯಜ್ಞಗಳಿಗೆ ಸಾಕ್ಷಾತ್ ಭಗವಂತನೇ ಪರಶುರಾಮ, ವ್ಯಾಸಕೃಷ್ಣರೂಪಗಿಂದ ಯಜ್ಞ ಮಾಡಿಸಿದುದು ಭಾರತದಲ್ಲಿ ಪ್ರಸಿದ್ಧವಾದುದಾಗಿದೆ.

# ೨೩. ಶಾಂರ್ಜಕೋಪಾಖ್ಯಾನ

ಅಗ್ನಿದೇವನ ಪ್ರಾರ್ಥನೆಯ ಮೇರೆಗೆ ಖಾಂಡವವನ ದಹನಕ್ಕೆ ಅನುಕೂಲ ಮಾಡಿಕೊಟ್ಟ ಅರ್ಜುನ ಕೃಷ್ಣರು ವನದಲ್ಲಿದ್ದ ಮಯಾಸುರನಿಗೆ, ಅಶ್ವಸೇನ ಸರ್ಪನಿಗೆ ಅಭಯಕೊಟ್ಟ ಪರಿಣಾಮವಾಗಿ ಅವರು ಬದುಕಿದರು. ಅದರಂತೆ 'ಅಗ್ನಿಯನ್ನು ಪ್ರಾರ್ಥಿಸಿದ ೪ ಪಕ್ಷಿಗಳು (ಶಾಂರ್ಜಕ ಎಂಬ) ಸಹ ಹತರಾಗಲಿಲ್ಲ. ಇದೇ ಶಾಂರ್ಜಕೋಪಾಖ್ಯಾನದ ವಸ್ತು'.

ಹಿಂದೆ ಮಂದಪಾಲನೆಂಬ ವ್ರತನಿಯಮರತನಾದ ಮಹರ್ಷಿ ಇದ್ದನು. ಜಿತೇಂದ್ರಿಯನಾಗಿ ಸ್ವಾಧ್ಯಾಯರತನಾಗಿ ನಂತರ ಕಾಲವಶನಾದ. ಪಿತೃಲೋಕಗಳಿಗೆ ಹೋದರೂ ಆತನಿಗೆ ತಕ್ಕ ಫಲಗಳು ಮಾತ್ರ ಸಿಗಲಿಲ್ಲ. ಯಮಧರ್ಮರಾಜನ ಸಭೆಯಲ್ಲಿದ್ದ ದೇವತೆಗಳನ್ನು ಕಾರಣ ಕೇಳಲು, ಅವರು 'ಮನುಷ್ಯರು ಹುಟ್ಟುತ್ತಲೇ ಋಷಿ, ದೇವ, ಪಿತೃಋಣಗಳಿಂದ ಹುಟ್ಟುತ್ತಾರೆ. ಹಾಗೂ ಸಂತಾನ ಪಡೆದು ಪಿತೃಋಣ ತೀರಿಸುತ್ತಾರೆ. ನೀನು ಸಂತಾನಪಡೆದ ನಂತರ ಪುಣ್ಯಲೋಕಗಳನ್ನು ಹೊಂದುವೆ.' ಪುತ್‌ನಾಮಕ ನರಕದಿಂದ ಪಾರಾಗಲೂ ಸಂತಾನಕ್ಕಾಗಿ ಪ್ರಯತ್ನಿಸು' ಎಂದರು.

ಮಂದಪಾಲನು ಕ್ಷಣಕಾಲ ಯೋಚಿಸಿ ಅತ್ಯಲ್ಪಕಾಲದಲ್ಲಿ ಬಹಳ ಸಂತಾನ ಪಡೆದು ಪಕ್ಷಿಯಾಗಿ ಜನಿಸಲು ನಿರ್ಧರಿಸಿ '**ಶಾಂರ್ಜಕ**' ಎಂಬ ಪಕ್ಷಿಜನ್ಮ ಹೊಂದಿ, **ಜರಿತಾ** ಎಂಬ ಹೆಣ್ಣು ಶಾಂರ್ಜಕ ಪಕ್ಷಿಯಲ್ಲಿ ೪ ಪುತ್ರರನ್ನು ಪಡೆದನು. ಅವೆಲ್ಲವೂ ಬ್ರಹ್ಮಜ್ಞಾನಿಗಳೂ ಆಗಿದ್ದವು ಎಂಬುದು ವಿಶೇಷ. ಬ್ರಹ್ಮಜ್ಞಾನಿಯ ಮಕ್ಕಳು ಯಾವ ಯೋನಿಯಲ್ಲಿ ಜನಿಸಿದ್ದರೇನು? ಅವನ್ನು ಅಲ್ಲಿಯೇ ಬಿಟ್ಟು ಶಾಂರ್ಜಕನು (ಮಂದಪಾಲ ಋಷಿ) ಮತ್ತೊಂದು ಹೆಣ್ಣು ಪಕ್ಷಿ ಲಪಿತಾ ಎಂಬುವಳ ಬಳಿ ಹೋದನು.

ಇದರಿಂದ ಜರಿತಾ ಸ್ವಾಭಾವಿಕವಾಗಿ ಚಿಂತಾಗ್ರಸ್ತಳಾದಳು. ಲಪಿತೆಯ ಜೊತೆಯಲ್ಲಿದ್ದ ಕಾಲದಲ್ಲಿಯೇ ಅಗ್ನಿಯು ಖಾಂಡವವನದಹನ ಮಾಡುತ್ತಿದ್ದನಷ್ಟೇ. ಪ್ರಜ್ವಲಿಸುತ್ತಿದ್ದ ಅಗ್ನಿಯು ಜರಿತೆಯ ಮಕ್ಕಳು ಇದ್ದಕಡೆಗೆ ಧಾವಿಸಿ ಬರುತ್ತಿದ್ದುದನ್ನು ಕಂಡ ತಂದೆ ಶಾಂರ್ಜಕ ಪಕ್ಷಿಯು ಪುತ್ರವಾತ್ಸಲ್ಯದಿಂದಾಗಿ ಪುತ್ರಪಕ್ಷಿಗಳ ರಕ್ಷಣೆ ಕೋರಿ ಅಗ್ನಿಯನ್ನು ಸ್ತೋತ್ರಮಾಡಿದನು[೧]. ಸ್ತೋತ್ರದಿಂದ ಸಂತುಷ್ಟನಾದ ಅಗ್ನಿಯು ಮಂದಪಾಲನ ಪ್ರಾರ್ಥನೆಯ ಮೇರೆಗೆ ಶಾಂರ್ಜಕ ಪಕ್ಷಿಗಳನ್ನು ಸುಡಲಿಲ್ಲ, ಕಾಪಾಡಿದ.

---

೧ ತ್ವಮಗ್ನೇ ಸರ್ವಲೋಕಾನಾಂ ಮುಖಂ ತ್ವಮಸಿ ಹವ್ಯವಾಟ್ । ಇತ್ಯಾದಿ ।

- ಆದಿಪರ್ವ(೨೨೮/೨೩-೩೪)

ಪಾಪ ಜರಿತೆಗೆ ಇದೆಲ್ಲ ಗೊತ್ತಿದ್ದಿಲ್ಲ. ತನ್ನನ್ನು ಬಿಟ್ಟು ಮತ್ತೊಂದು ಹೆಣ್ಣಿನ ಬಳಿ (ಲಪಿತೆಯ) ಹೋದ ಗಂಡನ ಬಗ್ಗೆ ಸ್ವಾಭಾವಿಕವಾಗಿಯೇ ಕೋಪಗೊಂಡ ಜರಿತೆ ಒಂದು ಕಡೆ ಮಕ್ಕಳು ಸಾಯುವರೆಂಬ ಸಂಕಟ (ಅಗ್ನಿಯಿಂದ), ಇನ್ನೊಂದೆಡೆ ಅವುಗಳ ರಕ್ಷಣೆಯ ಚಿಂತೆಗೆ ಈಡಾದಳು. 'ನಿನ್ನ ಮಕ್ಕಳಾದ ಜರತಾರಿ, ಕುಲದೀಪನಾಗುವನು. ಸಾರಿಸೃಕ್ಕನು ಪಿತೃವಂಶವೃದ್ಧಿ ಮಾಡುವವನು. ಸ್ತಂಭಮಿತ್ರ ತಪಸ್ವಿಯಾಗುವವನು. ಕಿರಿಯಮಗ ಬ್ರಹ್ಮಜ್ಞಾನಿಗಳಲ್ಲಿಯೇ ಶ್ರೇಷ್ಠನಾಗುವನು' ಎಂದು ಹೇಳಿ ಹೊರಟ ನಿಮ್ಮ ತಂದೆಯ ಮಾತು ಸತ್ಯವಾದೀತೇ? ನಿಮ್ಮನ್ನು ಹೇಗೆ ಕಾಪಾಡಲಿ? ನಾನು ಸತ್ತಾದರೂ ಕಾಪಾಡುವೆ. ಈ ಧಗಧಗಿಸುವ ಅಗ್ನಿಯಿಂದ ಪಾರಾಗುವುದು ಹೇಗೆ? ಹೀಗೆ ಚಿಂತಿಸುತ್ತಿರಲು ಒಂದು ಮರಿ 'ಅಮ್ಮ! ನಮ್ಮ ವ್ಯಾಮೋಹ ಬಿಡು. ನೀನು ಹೊರಡು. ನಿನಗೆ ಮತ್ತೆ ಸಂತತಿಯಾದೀತು. ನಮಗೆ ಹೇಗಿದ್ದರೂ ರೆಕ್ಕೆಗಳಿಲ್ಲ ಹಾರೆವು. ನೀನಾದರೂ ಬದುಕು.' ಅದಕ್ಕೆ ತಾಯಿ 'ಮಕ್ಕಳೇ! ನೀವು ಈ ಮರದ ಬುಡದ ಬಿಲದಲ್ಲಿ ಸೇರಿ ಬದುಕಿರಿ. ಅದಕ್ಕೆ ಮಕ್ಕಳು 'ನಾವು ಬಿಲದಲ್ಲಿದ್ದರೆ ಇಲಿ ಬಂದು ಕೊಲ್ಲುತ್ತದೆ. ಅದರ ಬದಲಾಗಿ ಯಜ್ಞೇಶ್ವರನಲ್ಲಿ ಸತ್ತರೆ ಸದ್ಗತಿಯಾದೀತು' ಎಂದವು. ಅದಕ್ಕೆ ತಾಯಿ 'ಈಗ ತಾನೆ ಹೊರಬಂದ ಇಲಿ ಗಿಡುಗದಿಂದ ಒಯ್ಯಲ್ಪಟ್ಟಿತು. 'ಆದ್ದರಿಂದ ನೀವು ಬಿಲಕ್ಕೆ ಹೋದರೆ ಸಾಯದಿರಬಹುದು. ನಾನು ಗಿಡುಗನಿಂದ ನಿಮಗೆ ಅಭಯವನ್ನೂ ಕೇಳಿದ್ದೇನೆ, ಹೊರಡಿ' ಎಂದಳು. ಮಕ್ಕಳು ಒಪ್ಪಲಿಲ್ಲ. ಅಗ್ನಿಯೂ ರಭಸವಾಗಿ ಬಂದೇ ಬಿಟ್ಟಿತು. ಜರಿತೆ ಕೂಡಲೇ ಹಾರಿ ಸುರಕ್ಷಿತ ಸ್ಥಳಕ್ಕೆ ಹೋದಳು. ನಂತರ ಮರಿ ಪಕ್ಷಿಗಳು ಪರಸ್ಪರ ಮಾತನಾಡಿಕೊಂಡು ಅಗ್ನಿಯನ್ನು ಸ್ತೋತ್ರ ಮಾಡಲು ನಿರ್ಧರಿಸಿ ಸ್ತೋತ್ರ ಮಾಡಿದವು. ಅದರ ಫಲವಾಗಿ ಅಗ್ನಿಯು ಪಕ್ಷಿಗಳಿಗೆ ಅಭಯವನ್ನೂ ಹಾಗೂ ಸ್ವಾಭಾವಿಕ ಶತ್ರುಗಳಾದ ಬೆಕ್ಕುಗಳಿಂದ ಅಭಯವನ್ನೂ ದಯಪಾಲಿಸಿದನು. ಬೆಕ್ಕುಗಳನ್ನು ನಾಶಮಾಡಿದನು.

ಇತ್ತ ಮಂದಪಾಲನಿಗೆ ಪುತ್ರರ ಚಿಂತೆ. ಮನದ ದುಗುಡ. ಲಪಿತೆಗೆ ಸಮಾಧಾನ ಹೇಳಿ ಜರಿತೆಯ ಬಳಿ ಬಂದ ಲಪಿತೆಯೊಡನೆ ಇದ್ದುದೂ ಪಿತೃಋಣ ತೀರಿಸಲು ಎಂಬುದನ್ನು ಮನಗಾಣಿಸಿದ. ಅಗ್ನಿ ಪ್ರಶಾಂತವಾದೊಡನೆ ಜರಿತೆಯೂ ತನ್ನ ಮಕ್ಕಳ ಬಳಿ ಬಂದಳು. ಮಂದಪಾಲನಿಗೆ (ಪಕ್ಷಿರೂಪದ) ಹೆಂಡತಿ ಮಕ್ಕಳನ್ನು ನೋಡಿ ಆನಂದವೇನೋ ಆಯಿತು. ಆದರೆ ಅವರ್ಯಾರೂ ಈತನ ಬರವನ್ನು ಸ್ವಾಗತಿಸಲಿಲ್ಲ, ಕಾರಣ ತಮ್ಮನ್ನು ಆಪತ್ತಿನಲ್ಲಿ ಬಿಟ್ಟು ಹೋದುದಕ್ಕಾಗಿ; ಅದನ್ನು ಅವರು ಸ್ಪಷ್ಟವಾಗಿ ಹಂಗಿಸಿಯೂ ಬಿಟ್ಟರು. ಲಪಿತೆಯೊಡನೆ ಸರಸಾಟಕ್ಕೆ ಹೋದುದನ್ನು ವ್ಯಂಗ್ಯ ಕಟುನುಡಿಗಳಿಂದ ನಿಂದಿಸಿದರು. ಪಾಪ ಮಂದಪಾಲನ ಯಾವ ಸಮಾಧಾನದ ನುಡಿಗಳೂ ಅವರನ್ನು ಸಮಾಧಾನಪಡಿಸಲಿಲ್ಲ. ಆತನ ಉದ್ದೇಶ ಅರ್ಥವಾಗಲಿಲ್ಲ. 'ಇವಳು ನನ್ನ ಪತ್ನಿ, ವಿಶ್ವಾಸಪಾತ್ರಳು' ಎಂದು. ಸ್ತ್ರೀಯರಲ್ಲಿ ನಂಬಿಕೆ ಸಲ್ಲದು. ಮಕ್ಕಳನ್ನು ಪಡೆದ ಮೇಲೆ ಸ್ತ್ರೀಯರು ಪತಿಸೇವೆಯನ್ನು ಮಾಡರು ಎಂದು ದುಃಖದಿಂದ ಉದ್ಗರಿಸಿದ.

ತಂದೆಯ ಉದ್ವಿಗ್ನನುಡಿಗಳು ಮಡದಿಮಕ್ಕಳನ್ನು ಎಚ್ಚರಿಸಿದವು. ತಂದೆ ಮಂದಪಾಲನನ್ನು ಸ್ವಾಗತಿಸಿ ಆದರಿಸಿದರು. ಮಂದಪಾಲನು ತಾನು ಲಪಿತೆಯೊಡನೆ ಇದ್ದಾಗಲೂ ಜರಿತೆ, ಹಾಗೂ ಮಕ್ಕಳ ಯೋಗಕ್ಷೇಮಕ್ಕಾಗಿ ಅಗ್ನಿಸ್ತೋತ್ರ ಮಾಡಿದುದನ್ನು ತಿಳಿಸಿದ. ಮಕ್ಕಳೂ ತಾವು ಸ್ತೋತ್ರ ಮಾಡಿದುದನ್ನು ತಿಳಿಸಿದರು.

'ನೀವೆಲ್ಲ ಋಷಿಗಳು ನನ್ನ ಬಗ್ಗೆ ಆಗ್ರಹ ಬೇಡ. ಅಗ್ನಿಗೂ ಇದು ಗೊತ್ತು' ಎಂದ ಮಂದಪಾಲ.

ಹೀಗೆ ಮಂದಪಾಲ ಸಂತಾನ ಪಡೆದು ಸುಖಾಂತವಾಗಿ ಜೀವನ ಕಳೆದ.

## ಸಂದೇಶಗಳು-ವಿವರಣೆಗಳು

೧. ಅಧಿಕಾರಿಕ ಜೀವಿಗಳಿಗೆ ಸಂತಾನ ಪಡೆಯಲೇಬೇಕಾಗುತ್ತದೆ. ಪಾಂಡುರಾಜನೇ ಅದಕ್ಕೆ ಸಾಕ್ಷಿ. ಎಲ್ಲರಿಗೂ ಇದು ಕಡ್ಡಾಯವಲ್ಲ. ಆದರೆ ಸಂತಾನಪ್ರಾಪ್ತಿ ಪಿತೃಋಣಮೋಚನೆಗೆ ಅವಶ್ಯ. ಅಪವಾದಾತ್ಮಕವಾಗಿ ಭೀಷ್ಮ ಸಂಧ್ಯಕಾಸುತ ಮೊದಲಾದವರು ಸಂತಾನವಿಲ್ಲದೆಯೂ ಸದ್ಗತಿ ಹೊಂದಿದವರೂ ಇದ್ದಾರೆ.

೨. ಕುಟುಂಬ ರಕ್ಷಣೆಯು ತಂದೆ-ತಾಯಿಗಳ ಪರಮ ಕರ್ತವ್ಯ. ಮಡದಿ ಮಕ್ಕಳ ಜೊತೆಯಲ್ಲಿರಲಿ, ಬಿಡಲಿ ಅವರ ಹಿತಚಿಂತನೆ ಕರ್ತವ್ಯ. ದೂರವಿದ್ದಾಗ ದೇವರ ಪ್ರಾರ್ಥನೆಯನ್ನು ಮಾಡಿಯಾದರೂ ಹಿತಚಿಂತನೆ ಮಾಡಬೇಕು. ಆದ್ದರಿಂದ ಮಂದಪಾಲ ಸ್ತೋತ್ರ ಮಾಡಿ ಮಡದಿ, ಮಕ್ಕಳನ್ನು ರಕ್ಷಣೆ ಮಾಡಿದ. ಆದ್ದರಿಂದ ನಿತ್ಯಜೀವನದಲ್ಲಿ ಸ್ತೋತ್ರಗಳ ಪಠಣ ನಮ್ಮ ರಕ್ಷಣೆಗೆ ಸೋಪಾನ. ದೇವರ ಸೇವೆ, ಪತಿಸೇವೆ, ಗುರುಹಿರಿಯರ ಸೇವೆ ಎಂದೂ ವ್ಯರ್ಥವಾಗದು (ನ ದೇವತೋಷಣಂ ವೃಥಾ - ಮ.ತಾ.ನಿ).

೩. ಯಾವುದೇ ಜನ್ಮದಲ್ಲಿ ಮಾಡಿದ ವೇದಾಧ್ಯಯನವು ಎಂತಹ ಕುತ್ಸಿತ ಯೋನಿ ಬಂದರೂ ವ್ಯರ್ಥವಾಗದು. ಅಂತೆಯೇ ಜರಿತರ್ಯಾದಿ ಪಕ್ಷಿಗಳು ಜಗತ್ತು ಕಂಡ ಪಕ್ಷಿರೂಪದ ವೇದದ್ರಷ್ಟಾರರಾಗಿದ್ದಾರೆ.

ಆದ್ದರಿಂದ ಸ್ವಾಧ್ಯಾಯ, ತಪಸ್ಸು, ವ್ರತ, ನಿಯಮನಿಷ್ಠೆಗಳು ಜೀವನದ ಆಧ್ಯಾತ್ಮಿಕ ಕವಚಗಳಾಗಿವೆ.

# ವೈವಾಹಿಕಪರ್ವ

## ೨೪. ಪಂಚಕನ್ಯೋಪಾಖ್ಯಾನ

ದ್ರೌಪದೀ ಸ್ವಯಂವರದಲ್ಲಿ ಅರ್ಜುನನು ದ್ರುಪದನ ಕರಾರಿನಂತೆ ಧನುಸ್ಸನ್ನು ಹೆದೆ ಏರಿಸಿ, ಯಶಸ್ವಿಯಾದ ಹಿನ್ನೆಲೆಯಲ್ಲಿ ದ್ರೌಪದಿಯು ಅರ್ಜುನನನ್ನು ವರಿಸಿದಳಷ್ಟೆ. ಆದರೆ ಮುಂದೆ ಪಾಂಡವರು ದ್ರೌಪದಿಯನ್ನು ಕರೆದುಕೊಂಡು ಅವರು ವಾಸ್ತವ್ಯ ಮಾಡಿದ ಮನೆಗೆ ಬಂದು ಕುಂತಿಗೆ ಹೇಳಿದಾಗ ಆಕೆ ನೀವು ಎಲ್ಲರೂ ಜೊತೆಯಲ್ಲಿ ಭುಂಜಿಸಿ ಎಂದು ಹೇಳುತ್ತಾಳೆ. ಆಕೆಗೆ ಪೂರ್ಣ ವಿಷಯ ಗೊತ್ತಿರದೆ ಹೇಳಿದ್ದಳು. ಆದರೆ ತಾಯಿಯ ಮಾತನ್ನು ಎಲ್ಲರೂ ಧರ್ಮರಾಜಾದಿಯಾಗಿ ಸ್ವೀಕರಿಸಿ, ತಾವೆಲ್ಲ ದ್ರೌಪದಿಯನ್ನು ಮದುವೆಯಾಗುವುದಾಗಿ ಹೇಳಿದಾಗ ದ್ರುಪದನು ಆರಂಭದಲ್ಲಿ ಒಪ್ಪಲಿಲ್ಲ.

ಧರ್ಮರಾಜನು ನಾನೆಂದೂ ಸುಳ್ಳು ಮಾತನಾಡಿಲ್ಲ, ನನ್ನ ಮನಸ್ಸು ಎಂದು ಅಧಾರ್ಮಿಕ ವಿಚಾರವನ್ನು ಮಾಡುವುದಿಲ್ಲ. ಎಂದು ಹೇಳಿ ಒಬ್ಬ ಸ್ತ್ರೀಗೆ ಬಹುಪತಿತ್ವ ವಿಷಯದಲ್ಲಿ ಹಿಂದೆಯೂ ಪ್ರಸಂಗಗಳಿವೆ ಎಂದು ಹೇಳುತ್ತಾನೆ.

ಹಿಂದೆ ಜಟಿಲನೆಂಬ ಗೌತಮಗೋತ್ರದ ಬ್ರಾಹ್ಮಣನ ಮಹಾಪ್ರಾಜ್ಞಳಾದ, ತಪಸ್ವಿಯಾದ ಮಗಳು ಧರ್ಮಾಸಕ್ತರಲ್ಲಿ ಶ್ರೇಷ್ಠರಾದ ಏಳು ಋಷಿಗಳನ್ನು ವಿವಾಹವಾದಳೆಂದು ಪುರಾಣಗಳಲ್ಲಿ ಹೇಳಲಾಗಿದೆ.[೧]

ಹಾಗೆಯೇ ಕಂಡು ಋಷಿಯ ಮಗಳಾದ ವಾರ್ಕ್ಷಿಯೂ ತಪಸ್ಸಿನಿಂದ ಶುದ್ಧಾಂತಃ ಕರಣರಾದ ಒಂದೇ ಹೆಸರುಳ್ಳ ಅಣ್ಣ-ತಮ್ಮಂದಿರಾದ ಪ್ರಚೇತಸರನ್ನು ವಿವಾಹವಾದಳೆಂದು ಹೇಳಲಾಗಿದೆ.[೨]

---

೧ ಶ್ರೂಯತೇ ಹಿ ಪುರಾಣೇಷು ಜಟಿಲೋ ನಾಮ ಗೌತಮಃ।
ತಸ್ಯ ಪುತ್ರೀ ಮಹಾಪ್ರಾಜ್ಞೀ ಗೌತಮಸ್ಯ ತಪಸ್ವಿನೀ॥
ಋಷೀನಧ್ಯಾಸಿತವತೀ ಸಪ್ತಧರ್ಮಭೃತಾಂ ವರಾನ್॥ - ೧೯೫/೧೪
ಇದು ಪೂನಾ ಪ್ರಕಾಶನದಲ್ಲಿದೆ (ಆಣ್ಕಾಐ, ಪುಣೆ)

೨ ತಥೈವ ಮುನಿಜಾ ವಾರ್ಕ್ಷೀ ತಪೋಭಿರ್ಭಾವಿತಾನ್ ಮುನೀನ್।
ದಶಾಭಜದೃಷೀನ್ ಭ್ರಾತೄನೇಕನಾಮ್ನಃ ಪ್ರಚೇತಸಃ॥ - ೧೯೫/೧೫

ಇವೆರಡು ಪೂರ್ವೇತಿಹಾಸದ ನಿದರ್ಶನಗಳಾಗಿ ಇತಿಹಾಸದಲ್ಲಿ ಕಂಡುಬರುತ್ತವೆ ಎಂದು ಧರ್ಮರಾಜನು ತಾವೆಲ್ಲ ದ್ರೌಪದಿಯನ್ನು ವಿವಾಹವಾಗುವುದು ತಪ್ಪಲ್ಲವೆಂದು ಪ್ರತಿಪಾದಿಸುತ್ತಾನೆ. ನಂತರವೇದವ್ಯಾಸರು ದ್ರುಪದನಿಗೆ ದ್ರೌಪದಿಯ ಪೂರ್ವಜನ್ಮವೃತ್ತಾಂತ, ಅಲ್ಲಿ ಆಕೆಯಲ್ಲಿದ್ದ ಇತರ ಸ್ತ್ರೀಜೀವರ ವಿಷಯಗಳನ್ನು ತಿಳಿಸುತ್ತಾರೆ.

ಇದೇ ನಾಳಾಯನೀ ಉಪಾಖ್ಯಾನ ಅಥವಾ ಪಂಚಕನ್ಯೋಪಾಖ್ಯಾನ. ಇದು ಕುಂಭಕೋಣಂ ಹಾಗೂ ತತ್ತ್ವಸಂಶೋಧನ ಸಂಸತ್ ಪಲಿಮಾರುಮಠಗಳಲ್ಲಿ ಸಿಗುತ್ತದೆ (೨೧೨,೨೧೩ ಮತ್ತು ೧೯೬ನೇ ಅಧ್ಯಾಯಗಳಲ್ಲಿ ಕ್ರಮವಾಗಿ ಬಂದಿವೆ).

ಅದರ ಸಾರ ಹೀಗಿದೆ.

ವೇದವ್ಯಾಸರು ದ್ರೌಪದಿಯು ಪಾಂಡವರ ಪತ್ನಿಯಾಗಬಹುದೆಂದು ತಿಳಿಸಲು ಈಗಾಗಲೇ ಗೌತಮೀ ಹಾಗೀ ವಾರ್ಕ್ಷೀ ಎಂಬ ಕನ್ಯೆಯರು ಬಹುಪತಿಯರನ್ನು ವರಿಸಿದ್ದರೆಂಬ ಪೂರ್ವವೃತ್ತಾಂತವನ್ನು ಧರ್ಮರಾಜನ ಮೂಲಕ ಹೇಳಿಸಿದ್ದಾರೆ.

ಮುಂದೆ ವ್ಯಾಸರು ದ್ರುಪದನಿಗೆ ನಿನ್ನ ರಾಣಿಯೂ ಕೂಡಾ ದ್ರೌಪದಿ ವೇದಿಮಧ್ಯೆಯಿಂದ ಬಂದಾದ ಮೇಲೆ 'ನನ್ನ ಮಗಳು ಐವರ ಪತ್ನಿಯಾಗಬೇಕೆಂದು ಪ್ರಾರ್ಥಿಸಿದ್ದಳು' ಎಂಬ ವಿಷಯವನ್ನು ಹೇಳುತ್ತಾರೆ. ಯದ್ಯಪಿ ಈ ಅಂಶ ಮ.ತಾ.ನಿದಲ್ಲಿ ಬಂದಿಲ್ಲ. ಯಾಜೋಪಯಾಜರು ತಮ್ಮ ತಪಸ್ಸನ್ನು ಇದಕ್ಕಾಗಿ ಧಾರೆಯೆರೆದಿದ್ದಾರೆ.[೧]

ನೋಡುರಾಜ! ಈನಿನ್ನದ್ರೌಪದೀ(ಮಗಳು) ಹಿಂದೆವೃದ್ಧನಾದ, ಕುಷ್ಠರೋಗಗ್ರಸ್ತನಾದ, ಚರ್ಮ, ಅಸ್ಥಿಗಳು ಮಾತ್ರ ಉಳಿದಿದ್ದು, ಕಟುಕನಾದ (ನಿಷ್ಠುರವಚನನಾದ), ಕೋಪಿಷ್ಠನಾದ, ದುರ್ಗಂಧನಾದ, ಸುಕ್ಕಿದ ಚರ್ಮವುಳ್ಳ, ನೆರೆತ ಕೂದಲಿನ (ಬಿಳಿ), ವಿರೂಪನಾದ ಮುದ್ಗಲ- ನನ್ನು (ಮೌದ್ಗಲ್ಯ) ಪತಿಯನ್ನಾಗಿ ಹೊಂದಿ, ತಾನು ಸ್ವಯಂ ಮಹಾವ್ರತನಿಷ್ಠಳಾಗಿದ್ದು, ಸೇವಿಸಿದ್ದಳು. ಅವನ ಉಚ್ಛಿಷ್ಟ ಭೋಜನ ಮಾಡುತ್ತಾ ಪತಿಸೇವೆ ಮಾಡುತ್ತಿದ್ದಳು. ಒಮ್ಮೆ ಆತನು ಉಣ್ಣುವಾಗ ಅಂಗುಷ್ಠವು ಭೋಜನಪಾತ್ರೆಯಲ್ಲಿ ಉದುರಿತು. ನಾಳಾಯನಿ ಬೇಸರಿಸದೆ, ಅದನ್ನು ತೆಗೆದು, ಆ ಅನ್ನವನ್ನು ಉಂಡಳು. ಹೀಗೆ ಆಕೆಯ ಸೇವೆಯಿಂದ ಪ್ರಸನ್ನನಾದ ಮುದ್ಗಲ ಪತ್ನಿಗೆ ಬೇಕಾದ ವರ ಕೇಳೆಂದರು. ಅನೇಕ ಬಾರಿ ಹೇಳಿದಾಗ ಆಕೆ ವರ ಬೇಡಿದಳು.

---

ಈ ವಿಷಯಗಳು ಗೀತಾಪ್ರೆಸ್ ಪ್ರಕಾಶಿತ ಭಾರತದಲ್ಲೂ (ಆದಿಪರ್ವ ೧೯೫/೧೪-೧೬), ಕುಂಭಕೋಣಂ ಪ್ರಕಾಶದಲ್ಲೂ(೨೧೧/೧೪,೧೫)ಬಂದಿವೆ.

೧ ಯಾಜೋಪಯಾಜೌ ಧರ್ಮಘೃಣೀ ತಪೋಭ್ಯಾಂ ತೌ ಚಕ್ರತುಃ ಪಂಚಪತಿತ್ವಮಸ್ಯಾಃ।
ಸಾ ಧರ್ಮತಃ ಪಾಂಡುಸುತ್ತೈರವಾಪ್ತಾ ಭಾರ್ಯಾ ಕೃಷ್ಣಾ ಮೋದತಾಂ ವೈ ಕುಲಂ ತೇ॥
- ೧೯೬/೨

ಅದಕ್ಕೂ ಮೊದಲು ಮುದ್ಗಲ 'ನಾನು ವೃದ್ಧನೂ ಅಲ್ಲ, ಕಟುಕನೂ ಅಲ್ಲ, ಅಸೂಯಾ-ಪರನೂ ಅಲ್ಲ, ಕೋಪಿಷ್ಠನೂ ಅಲ್ಲ, ದುರ್ಗಂಧಯುಕ್ತನಲ್ಲ, ಇಂದ್ರಿಯಲೋಲುಪನೂ ಅಲ್ಲ. ಆದರೂ ನಿನಗೆ ಎಂತಹ ವಾಸದ ಮನೆಬೇಕು? ನಿನ್ನನ್ನು ಹೇಗೆ ಸಂತೋಷಪಡಿಸಬೇಕು? ನಿನಗೆ ಮಂಗಳವಾಗಲಿ, ನಿನ್ನಾಸೆಯನ್ನು ಹೇಳು' ಎಂದನು.

ಆಗ ನಾಳಾಯನೀ ಹೇಳುತ್ತಾಳೆ. 'ನನ್ನನ್ನು ನೀನು ಐದು ದೆಹಗಳನ್ನು ತೆಗೆದುಕೊಂಡು ರಮಿಸು. ರಮಿಸಿ ಪುನಃ ಒಂದೇ ದೇಹದಿಂದ ರಮಿಸಬೇಕು'.[೧]

ಅದಕ್ಕೆ ಮುದ್ಗಲ ಬ್ರಹ್ಮರ್ಷಿಯು 'ಹಾಗೆಯೇ ಆಗಲಿ' ಎಂದು ಐದು ರೂಪವನ್ನು ತೆಗೆದುಕೊಂಡು ಕಾಮರೂಪಿಯಾಗಿ ಸಂಚರಿಸುತ್ತಾ ರಮಿಸಿದನು. ದೇವಲೋಕಕ್ಕೆ ಹೋದಾಗ ಋಷಿಗಳೊಡನೆ ಹೋದಾಗ ದೇವತೆಗಳ ಅಮೃತಾನ್ನಕ್ಕೆ ಸಮಾನವಾದ ಆಹಾರ ಸೇವಿಸುತ್ತಾ ದೇವಲೋಕದಲ್ಲಿ ಸಂಚರಿಸಿದನು. ಅಲ್ಲಿ ಶಚಿಯಿಂದ ಪೂಜಿಸಲ್ಪಟ್ಟು ಮಹೇಂದ್ರನ ಸೇನೆ-ಯೊಡನೆ ಆಕೆಯೊಡನೆ ರಮಿಸುತ್ತಾ ಸಂಚರಿಸಿದನು. ಸೂರ್ಯರಥವೇರಿ ಮೇರುಪರ್ವತಕ್ಕೆ ಪ್ರದಕ್ಷಿಣೆ ಮಾಡಿ ಅಲ್ಲಿ ವಾಸಿಸಲು ಇಚ್ಛಿಸಿದನು. ಆಕಾಶಗಂಗೆಯಲ್ಲಿ ಸ್ನಾನ ಮಾಡಿ ಚಂದ್ರಮಂಡಲದ ಪರಿಸರದಲ್ಲಿ ವಾಸ ಮಾಡಿದನು. ಮುದ್ಗಲನು ಒಂದು ಪರ್ವತರೂಪ ಧರಿಸಿದಾಗ ಮಹರ್ಷಿಯು ಪ್ರಭಾವದಿಂದ ನಾಳಾಯನಿ ಒಂದು ಮಹಾನದಿಯಾಗಿ ಹರಿದಳು. ಆತನು ಪುಷ್ಪಪೂರ್ಣವಾದ ಸಾಲವೃಕ್ಷವಾದಾಗ ಆಕೆ ಲತೆಯಾಗಿ ಆತನನ್ನೇ ಸುತ್ತಿಕೊಂಡಳು. ಆತನ ರೂಪ, ಶರೀರಗಳಿಗೆ ತಕ್ಕಂತೆ ತಾನೂ ಅನುರೂಪ ಶರೀರಗಳನ್ನು ತೆಗೆದುಕೊಂಡು ಅದನ್ನು ಪೋಷಿಸಿದಳು. ಆತನ ಹೆಗಲಿನ ಮೇಲೆ ಕುಳಿತುಕೊಂಡು ಸಂಚರಿಸಿದಳು. ಆಗ ಅವರಲ್ಲಿ ಪ್ರೀತ್ಯುದ್ರೇಕವಾಯಿತು. ಆತನು ಒಂದೇ ಶರೀರ ತೆಗೆದುಕೊಂಡಾಗ ಆತನ ಅನುಗ್ರಹ ಹಾಗೂ ದೈವಯೋಗದಿಂದ ಒಂದೇ ಶರೀರವನ್ನು ತೆಗೆದುಕೊಂಡು ಜನಿಸಿದಳು. ಆ ಬ್ರಾಹ್ಮಣನು ದೈವಯೋಗದಿಂದ ಹಾಗೂ ಮೊದಲಿನಿಂದಲೂ ತಪಸ್ವಿನಿಯಾದ ಆಕೆಯನ್ನು ಮತ್ತೆ ಪತ್ನಿಯಾಗಿ ಪಡೆದನು.

ಹೀಗೆ ನಾಳಾಯನೀ (ನಳನ ಮಗಳು) ದಮಯಂತಿಯನ್ನೂ ಮೀರಿದ ಪಾತಿವ್ರತ್ಯದಿಂದ ಅರುಂಧತಿಯಂತೆ, ಸೀತೆಯಂತೆ ಶೋಭಿಸಿದಳು. ನೋಡು ದ್ರುಪದ! ಈಕೆಯೇ ನಿನಗೆ ಮಗಳಾಗಿ ದ್ರೌಪದಿಯಾಗಿ ಜನಿಸಿದ್ದಾಳೆ. ಮುದ್ಗಲನ ಪತ್ನಿಯಾಗಿದ್ದಾಗ, ಆಕೆ ಪತಿಸೇವೆಗಾಗಿ ಅವನ ದುರವಸ್ಥೆಯನ್ನು ಸಹಿಸಿಕೊಂಡು ಅವನ ಸೇವೆ ಮಾಡಿದ್ದಳು. ಜುಗುಪ್ಸಿತ ದೇಹದಲ್ಲಿದ್ದ ಪತಿಯನ್ನು ಹೊಂದಿದಾಗಲೇ ಮಹಾಪತಿವ್ರತೆಯಾಗಿದ್ದು, ಈಗ ಹಾಗೆ ಇರದಿರುವಳೇ? ಆದ್ದರಿಂದ ಧರ್ಮರಾಜಾದಿಗಳೊಡನೆ ತನ್ನಲ್ಲಿರುವ ವಿವಿಧ ಸ್ತ್ರೀಯರು ತಮ್ಮ ತಮ್ಮ

---

೧ ಪಂಚಧಾ ಮಾಂ ವಿಭಕ್ತಾತ್ಮಾ ಭಗವನ್ ಲೋಕವಿಶ್ರುತ।
ರಮಯ ತ್ವಮಚಿಂತ್ಯಾತ್ಮನ್ ಪುನಶ್ಚೈಕತ್ವಮಾಸ್ಥಿತಃ॥ - ೧೯೬/೧೨

ಪತಿಗಳೊಡನೆ ರಮಿಸಿದಳು. ಆದ್ದರಿಂದ ಬಹುಪತಿತ್ವವು ದೋಷಕರವಲ್ಲ, ದ್ರೌಪದೀ ವಿಷಯದಲ್ಲಿ.

ನಾಳಾಯನಿಯು ತನಗೆ ಮಗಳಾಗಿ ಜನಿಸಲು ಕಾರಣವೇನೆಂದು ದ್ರುಪದ ಕೇಳಿದ. ಅದಕ್ಕೆ ವ್ಯಾಸರು 'ರುದ್ರದೇವರ ವರದಿಂದ' ಎಂದು ಹೇಳಿ ಅದನ್ನು ವಿವರಿಸಿದರು. 'ಇಂದ್ರಸೇನ ಎಂದು ವಿಖ್ಯಾತಳಾದ ನಾಳಾಯನಿಯು ಮುದ್ಗಲರೊಡನೆ ಕಳೆದ ವರ್ಷಗಳು ಆ ಮಹರ್ಷಿಗೆ ಒಂದು ಕ್ಷಣದಂತೆ ಹೋದವು. ಒಮ್ಮೆ ಆ ಮಹರ್ಷಿಯು ತಪಶ್ಶುದ್ಧನಾಗಿ, ಭಗವತ್ಪ್ರಸಾದ ಬಯಸಿ ಗೃಹಸ್ಥಾಶ್ರಮ ತ್ಯಾಗ ಮಾಡಿ, ನಾಳಾಯನಿಯನ್ನು ಪರಿತ್ಯಾಗ ಮಾಡಿದನು. ಆಗ ಆಕೆ ಭೂಮಿಯ ಮೇಲೆ ಬಿದ್ದಳು (ವಿರಹದಿಂದ). ಆಕೆ ಪತಿಯನ್ನು 'ನನ್ನನ್ನು ಬಿಡಬೇಡಿ, ನಿಮ್ಮೊಡನೆ ನಾನು ಇನ್ನೂ ಕಾಮ ತೃಪ್ತಿ ಹೊಂದಿಲ್ಲ. ನನಗೆ ಕಾಮ ನೀಡಿರಿ' ಎಂದಳು. ಆಗ ಬ್ರಹ್ಮರ್ಷಿಯು ನನ್ನ ಮುಂದೆ ನೀನು ನಿರ್ದಾಕ್ಷಿಣ್ಯವಾಗಿ, ನಿಶ್ಶಂಕಳಾಗಿ ತಪೋವಿಘ್ನ ಮಾಡುತ್ತಿರುವೆ. ಆದ್ದರಿಂದ ನನ್ನ ಮಾತನ್ನು ಕೇಳು.

'ನೀನು ಮನುಷ್ಯಲೋಕದಲ್ಲಿ ಕೀರ್ತಿವಂತಳಾದ ರಾಜಪುತ್ರಿಯಾಗಿ ದ್ರುಪದನಿಗೆ ಜನಿಸುವೆ. ನಿನಗೆ ಆಗ ಪ್ರಸಿದ್ಧರಾದ ಐವರು ಪತಿಗಳಿರುತ್ತಾರೆ. ಅವರೊಡನೆ ನೀನು ಬಹುಕಾಲ ಸುಖ ಅನುಭವಿಸುವೆ' ಎಂದನು.

ಹೀಗೆ ಪತಿಯಿಂದ ಶಪ್ತಳಾದ ನಾಳಾಯನಿಯು (ಇಂದ್ರಸೇನೆಯು) ಬೇಸರಗೊಂಡು, ಭೋಗಗಳಲ್ಲಿ ತೃಪ್ತಿ ಕಾಣದವಳಾಗಿ ರುದ್ರದೇವರನ್ನು ತಪಸ್ಸಿನಿಂದ ಆರಾಧಿಸಿದಳು. ಎಲ್ಲಾ ಆಸೆ ತೊರೆದು, ಗಾಳಿಯನ್ನೇ ಆಹಾರವಾಗಿ ಸೇವಿಸುತ್ತಾ (ಉಪವಾಸ) ವ್ರತಶೀಲಳಾಗಿ ಸೂರ್ಯಾಭಿಮುಖವಾಗಿ ಪಂಚಾಗ್ನಿಗಳ ಮಧ್ಯೆ ತಪಸ್ಸನ್ನು ಮಾಡಿದಳು. ಆಕೆಯ ತಪಕ್ಕೆ ಮೆಚ್ಚಿ ರುದ್ರದೇವರು ವರಕೊಟ್ಟರು.

ಮಂಗಲೇ! ನೀನು ಮುಂದಿನ ಜನ್ಮದಲ್ಲಿ ಮನುಷ್ಯರ ಮಧ್ಯೆ ಜನಿಸುವೆ. ಅಲ್ಲಿ ನಿನಗೆ ಸದ್ವೃತ್ತರಾದ ಐವರು ಪತಿಗಳಾಗುವರು. ಅವರೆಲ್ಲರೂ ಮಹೇಂದ್ರನಂತೆ ಶರೀರವುಳ್ಳವರಾಗಿಯೂ, ತತ್ಸಮ ಪರಾಕ್ರಮಿಗಳೂ ಆಗಿರುತ್ತಾರೆ. ಅವರಲ್ಲಿದ್ದು (ಅವರೊಡನೆ) ನೀನು ದೇವತೆಗಳ ಮಹಾಕಾರ್ಯ ಮಾಡುವೆ.

ಹೀಗೆ ರುದ್ರದೇವರು ವರ ನೀಡಲು ನಾಳಾಯನಿಯು 'ನಾನು ಒಬ್ಬ ಪತಿ ಕೇಳಿದೆ. ಆದರೆ ನೀವು ನನಗೆ ಐವರು ಹೇಗೆ ಪತಿಗಳಾಗುವರು? ಅದನ್ನು ಹೇಳು' ಎಂದಳು. ನೀನು ಐದು ಬಾರಿ ಪತಿಂ ದೇಹಿ ಎಂದು ಕೇಳಿದೆ. ಆದ್ದರಿಂದ ನಿನಗೆ ಸುಖ ಕೊಡುವ ಐವರು ಪತಿಗಳಾಗುವರು ಎಂದು ರುದ್ರದೇವರು ಉತ್ತರಿಸಿದರು.

ರುದ್ರದೇವರಿಗೆ ಮತ್ತೆ ಇಂದ್ರಸೇನೆಯು 'ಸ್ತ್ರೀಯರಿಗೆ ಒಬ್ಬ ಪತಿ, ಧರ್ಮ. ಹಾಗೆ ಪುರುಷರಿಗೆ ಅನೇಕ ಪತ್ನಿಯರು ಇದ್ದರೂ, ಅದೂ ಧರ್ಮವೇ ಎಂದು ಹಿರಿಯರು ಒಪ್ಪಿದ್ದಾರೆ.

ಬಾಲ್ಯದಲ್ಲಿಯೇ ಸ್ತ್ರೀಗೆ ಒಬ್ಬನೇ ಪತಿ ಎನ್ನುವುದು ಲೋಕನೀತಿ. ಆದರೆ ಆಪತ್ಕಾಲ ಬಂದಾಗ, ಪತಿವಿಯೋಗವಾದಾಗ ಸಂತಾನಕ್ಕಾಗಿ ನಿಯೋಗ ಪದ್ಧತಿಯಿಂದ ಎರಡನೇ ಪತಿಯನ್ನು ಹೇಳಿದ್ದಾರೆ. ಒಂದು ವೇಳೆ ಮೂರನೇ ಪತಿಯನ್ನು ಹೊಂದಿದರೆ ಅದಕ್ಕೆ ಪ್ರಾಯಶ್ಚಿತ್ತವಿದೆ. ನಾಲ್ಕನೇ ಪತಿ ಇದ್ದರೆ ಆಕೆ ಪತಿತಳಾಗುತ್ತಾಳೆ. ಹೀಗಿರುವಾಗ ನಾನು ಅನೇಕರನ್ನು (ಐದು) ಹೇಗೆ ಪತಿನ್ನಾಗಿ ಸ್ವೀಕರಿಸಲಿ. ಇಂತಹ ಸಾಂಕರ್ಯದಿಂದ ಬಿಡುಗಡೆ ಹೇಗೆ? ಎಂದಳು.

ಅದಕ್ಕೆ ಮಹದೇವರು ಹಿಂದೆ ಸ್ತ್ರೀಯರು ಅನಾವೃತರಾಗಿದ್ದರು (ಪತಿಯೊಡನೆಯೇ ಇರಬೇಕೆಂಬ ನಿಯಮವಿರಲಿಲ್ಲ). ಪ್ರತಿಕಾರ್ಯದಲ್ಲೂ ಶುದ್ಧರಾಗಿರುತ್ತಿದ್ದರು. ನೀನು ಒಂದು ಬಾರಿ ಪತಿಂ ದೇಹಿ ಎಂದು ಹೇಳಲಿಲ್ಲ. ಆದ್ದರಿಂದ ನಿನಗೆ ಅಧರ್ಮವುಂಟಾಗುವುದಿಲ್ಲ ಎಂದರು.

ಮತ್ತೆ ಇಂದ್ರಸೇನೆಯು 'ಆಯಿತು. ನಾನು ಎಲ್ಲರೊಡನೆ ಸಂಗ ಮಾಡಿದರೂ ಪ್ರತಿದಿನವೂ ನಾನು ಕುಮಾರಿಯೇ ಆಗಬೇಕು. ನಾನು ಹಿಂದೆ ಪತಿಸೇವೆ ಮಾಡಿ ಸಿದ್ಧಿ ಪಡೆದಿದ್ದೇನೆ. ಆದರೆ ಭೋಗೇಚ್ಛೆ ಹೋಗಲಿಲ್ಲ. ಆದ್ದರಿಂದ ನಾನು ಬಯಸುವ ಭೋಗ ನನಗೆ ಉಂಟಾಗಬೇಕು.' ಎಂದು ಕೇಳಿದಳು. ಅದಕ್ಕೆ ಮಹದೇವರು 'ಮುಂದಿನ ಜನ್ಮದಲ್ಲಿ ಬೇರೆ ದೇಹದೊಳಗೆ ನೀನು ನಿನ್ನನ್ನೂ ಸೇರಿ ಐದು ಜನದೇವಿಯರ ಜೊತೆ ವಾಸ ಮಾಡಿ ನಿತ್ಯವೂ ಕುಮಾರಿಯಾಗಿ ಅಧಿಕವಾದ ಅಂಶದಿಂದ ಇರುತ್ತೀಯ'[೧] ಎಂದರು.

ಎಲೈ ಪುಣ್ಯವಂತಳೇ! ನೀನು ಗಂಗೆಗೆ ಹೋಗು. ಅಲ್ಲಿ ನೀನು ನೋಡುವ ಸುರರಾಜನಾದ ದೇವೇಂದ್ರನನ್ನು ನನ್ನ ಬಳಿ ಕರೆದುಕೊಂಡು ಬಾ' ಎಂದನು ಮಹದೇವ.

ಹೀಗೆ ವಿಶ್ವನಾಥ ಹೇಳಲು ಇಂದ್ರಸೇನೆ ರುದ್ರದೇವರಿಗೆ ಪ್ರದಕ್ಷಿಣೆ ಹಾಕಿ ಪವಿತ್ರವಾದ ಗಂಗಾನದಿಯ ಕಡೆ ಹೊರಟಳು.

*****

---

೧ ರತಿಶ್ಚ ಭದ್ರೇ ಸಿದ್ಧಿಶ್ಚ ನ ಭಜೇತೇ ಪರಸ್ಪರಮ್ ।
ದುರ್ಭಗಾ ಲಪ್ಸ್ಯಸೇ ಸಿದ್ಧಿಂ ಯೋಗೇನ ಚ ಮಹತ್ತ್ವತಾಮ್ ॥
ಅನ್ಯದೇಹಾಂತರೇ ತ್ವಂ ಚ ರೂಪಭಾಗ್ಯಗುಣಾನ್ವಿತಾ ।
ಪಂಚಭಿಃ ಪ್ರಾಪ್ಯ ಕೌಮಾರಂ ಮಹಾಭಾಗಾ ಭವಿಷ್ಯಸಿ ॥ – ೧೯೬/೪೨,೪೩
ಕುಂಭಕೋಣಂ ಪ್ರಕಾಶನದಲ್ಲಿ ಅಧ್ಯಾಯ ೨೧೩/೨೬–೨೮.

## ೨೫. ಪಂಚೇಂದ್ರೋಪಾಖ್ಯಾನ

ಹಿಂದೆ ನೈಮಿಶಾರಣ್ಯದಲ್ಲಿ ದೇವತೆಗಳು ಒಂದ ಸತ್ರ(ಬಹುದಿನಗಳ ಕಾಲ ಮಾಡುವ)ಯಾಗದಲ್ಲಿ ನಿರತರಾಗಿದ್ದರು. ಅಲ್ಲಿ ಯಮನೇ ಯಜ್ಞಪಶುವಧಸ್ಥಾನದಲ್ಲಿದ್ದನು. ಯಮ ಸತ್ರದೀಕ್ಷಿತನಾದ್ದರಿಂದ ಪ್ರಜೆಗಳ ಸಂಹಾರ ಕಾರ್ಯ ನಿಂತು ಹೋಗಿ ಮನುಷ್ಯರು ಸಾಯದೇ ಭೂಲೋಕದಲ್ಲಿ ಅವರ ಸಂಖ್ಯೆ ನಿರಂಕುಶವಾಯಿತು. ದೇವತೆಗಳು ಚಿಂತೆಗೊಂಡು ಬ್ರಹ್ಮನ ಬಳಿಗೆ ಹೋಗಿ, 'ನಮಗೂ, ಮನುಷ್ಯರಿಗೂ ವೈಶಿಷ್ಟ್ಯ ಇಲ್ಲವಾಗಿದೆ. ಕಾರಣ, ಅವರು ಅಮರ್ತ್ಯರಾಗಿದ್ದಾರೆ. ಅವರಿಂದ ನಮಗೆ ಭಯ ಉಂಟಾಗಿದೆ ಎಂದರು.[೧] ಅದಕ್ಕೆ ಬ್ರಹ್ಮನು ನೀನು ಅಮರ್ತ್ಯರು. ಮರ್ತ್ಯರಾದ ಮನುಷ್ಯರಿಂದ ನಿಮಗೆ ಭಯ ಹೇಗಾಗುತ್ತದೆ? ಎಂದನು. ಅದಕ್ಕೆ ಯಮನು ದೀಕ್ಷಿತನಾಗಿರುವ ವಿಷಯ ಪ್ರಜಾಪತಿಯ ಗಮನಕ್ಕೆ ತಂದರು. ಬ್ರಹ್ಮನೂ ಯಮನ ಸತ್ರಯಾಗದೀಕ್ಷೆ ಮುಗಿದ ಮೇಲೆ ಮತ್ತೆ ಸಂಹಾರಕಾರ್ಯ ಆರಂಭವಾಗಿ ನಿಮಗೆ ವೈಶಿಷ್ಟ್ಯ ದೊರಕುತ್ತದೆ ಎಂದನು.[೨]

ಬ್ರಹ್ಮನ ವಾಕ್ಯ ಕೇಳಿ ಎಲ್ಲರೂ ಗಂಗಾತೀರಕ್ಕೆ ಹೋದರು. ಅಲ್ಲಿ ಕುಳಿತಾಗ ಭಾಗೀರಥಿಯಲ್ಲಿ ಒಂದು ಕಮಲವನ್ನು ನೋಡಿದರು. ಆಶ್ಚರ್ಯವಾಯಿತು ದೇವತೆಗಳಿಗೆ. ಆಗ ಇಂದ್ರದೇವರು ಒಬ್ಬರೇ ಮುಂದೆ ಹೋಗಿ ಗಂಗೋತ್ಪತ್ತಿಯ ಸ್ಥಳದಲ್ಲಿ ಅಗ್ನಿಯಂತೆ ತೇಜಸ್ವಿಯಾದ ಒಬ್ಬ ಅಳುತ್ತಿರುವ ವನಿತೆಯನ್ನು ನೋಡಿ, ನೀನಾರು? ಏಕೆ ಅಳುವೆ? ನಿಜ ಹೇಳು ಎಂದು ಕೇಳಿದರು. ಅದಕ್ಕೆ ಆ ವನಿತೆಯು ನಾನೇಕೆ ಅಳುತ್ತಿರುವೆ ಎಂದು ನಿನಗೆ ತೋರಿಸುವೆ ಎಂದು ಮುಂದೆ ನಡೆದಳು. ಇಂದ್ರ ಆಕೆಯನ್ನು ಅನುಸರಿಸಿದನು. ಮುಂದೆ ಪರ್ವತರಾಜನ ಶಿರೋಭಾಗದಲ್ಲಿ (ಪರ್ವತಾಗ್ರದಲ್ಲಿ) ಸಿಂಹಾಸನದ ಮೇಲೆ ಪಗಡೆಯಾಡುತ್ತಿರುವ, ಪತ್ನಿ ಪಾರ್ವತಿಯೊಡನೆ ಕುಳಿತಿರುವ ರುದ್ರದೇವರನ್ನು ಇಂದ್ರನು ನೋಡಿದನು. ನಂತರ ರುದ್ರದೇವರಿಗೆ ಈ ವಿಶ್ವವೆಲ್ಲ ನನ್ನ ಅಧೀನದಲ್ಲಿದೆ. ನಾನು ಇದರೊಡೆಯ ಎಂದು ಕೋಪದಿಂದ ಹೇಳಿದನು.

ಕೋಪದಿಂದ ನುಡಿದ ಇಂದ್ರನನ್ನು ನೋಡಿ ರುದ್ರದೇವರು ನಕ್ಕಾಗ, ಅದರಿಂದ ಇಂದ್ರ ಸ್ತಂಭಿತನಾಗಿ (ಕಂಬದಂತೆ) ವೃಕ್ಷದಂತೆ ಅಲುಗಾಡದೆ ನಿಂತನು. ನಂತರ ಪಗಡೆಯಾಟ

---

೧ ಭಯಂ ನಸ್ತೀವ್ರಂ ಮಾನುಷಾಣಾಂ ಸಮೃಧ್ಯಾ ।
ತಸ್ಮಾದ್ ಭಯಾದುದ್ವಿಜಂತಃ ಸುಖೇಪ್ಸವಃ ॥ - ೧೯೭/೪

೨ ಕಿಂ ವೋ ಭಯಂ ಮಾನುಷೇಭ್ಯೋ ಯೂಯಂ ಸರ್ವೇ ಯತೋಽಮರಾಃ ।
ನ ವೋ ಮರ್ತ್ಯ ಸಕಾಶಾತ್ ವೈ ಭಯಂ ಭವತಿ ಕರ್ಹಿಚಿತ್ ॥ - ೧೯೫/೫

ಮುಗಿದ ಮೇಲೆ ರುದ್ರದೇವರು ಅಳುತ್ತಿದ್ದ ಆ ವನಿತೆಗೆ ಹೀಗೆ ಹೇಳಿದರು. 'ಈ ಇಂದ್ರನನ್ನು ಕರೆದುಕೊಂಡು ಬಾ. ಅವನಿಗೆ ಮತ್ತೆ ಗರ್ವ ಬರದಿರಲಿ ಎಂದು. ಆಗ ಆ ವನಿತೆಯು ಶಕ್ರನನ್ನು ಸ್ಪರ್ಶ ಮಾಡುತ್ತಲೇ ಅವನ ಅಂಗಗಳು ಸಡಿಲವಾಗಿ ಭೂಮಿಯ ಮೇಲೆ ಬಿದ್ದನು. ನಂತರ ರುದ್ರದೇವರು ಶಕ್ರನಿಗೆ ಇನ್ನೊಮ್ಮೆ ಹೀಗೆ ಮಾಡಬೇಡ ಎಂದು ಹೇಳಿದರು. ಮತ್ತು ಅವನಿಗೆ 'ಈ ದೊಡ್ಡ ಪರ್ವತವನ್ನು ನಿನ್ನ ಮಹಾಬಲದಿಂದ ತಿರುಗಿಸಿ ಅದರ ಬಳಿಗೆ ಪ್ರವೇಶಿಸು. ಅಲ್ಲಿ ಸೂರ್ಯಕಾಂತಿಸಮರಾದ ನಿನ್ನಂತಹವರು ಇದ್ದಾರೆ' ಎನ್ನಲಾಗಿ, ಇಂದ್ರನು ರುದ್ರದೇವರು ಹೇಳಿದಂತೆ ಮಾಡಿ ಒಳಗೆ ನೋಡಲು, ಅಲ್ಲಿ ಸಮಾನಕಾಂತಿಯ ನಾಲ್ವರನ್ನು ನೋಡಿ, ನಾನೂ ಕೂಡಾ ಅವರ ಗತಿಯನ್ನು ಹೊಂದದಿರಲು ಏನು ಮಾಡಬೇಕೆಂದು ಯೋಚಿಸಿ ದುಃಖಿತನಾದನು.

ನಂತರ ರುದ್ರದೇವರು ಸಿಟ್ಟಿನಿಂದ ಇಂದ್ರನನ್ನು ನೀನು ನನ್ನನ್ನು ಹುಡುಗಾಟದಿಂದ ಅವಮಾನಿಸಿದ್ದೀಯಾ. ಕಾರಣ ನೀನು ಈ ಗುಹೆಯನ್ನು ಪ್ರವೇಶ ಮಾಡು ಎಂದರು. ಈ ಮಾತನ್ನು ಕೇಳಿದ ಇಂದ್ರನು ಪರ್ವತಶಿಖರದಲ್ಲಿ ವಾಯುವಿನಿಂದ ಕಂಪಿಸುವ (ನಡುಗುವ) ಅಶ್ವತ್ಥಪತ್ರದಂತೆ ಭಯದಿಂದ ನಡುಗಿದನು. ಫಲವಾಗಿ ಅವನು ಪರ್ವತಗುಹೆ ಪ್ರವೇಶಿಸುವುದರಿಂದ ನಿವಾರಿತನಾದ. ಭಾವೀ ಶೇಷರೂಪಿಯಾದ ರುದ್ರನನ್ನು ಶಕ್ರನು ನನಗೆ ಈಗ ನೀನು ರಕ್ಷಕನಾಗು ಎಂದನು.

ಮಹಾಭಯಂಕರ ಧನುರ್ಧಾರಿಗಳಾದ ರುದ್ರದೇವರು ಇಂದ್ರನನ್ನು ಕುರಿತು ಹೀಗೆ ಅಹಂಕಾರಿಗಳು ಮೋಕ್ಷಮಾರ್ಗವಾದ ಶೇಷರೂಪಿಯಾದ ನನ್ನನ್ನು ಹೊಂದುವುದಿಲ್ಲ. ಈ ನಾಲ್ವರೂ ಹಿಂದೆ ಹೀಗೆಯೇ ದುರಹಂಕಾರಿಗಳಾಗಿದ್ದರು. ಆದ್ದರಿಂದ ಅವರು ಈ ಗುಹೆ ಸೇರಿದ್ದಾರೆ ಎಂದನು. ಈ ವನಿತೆ ನಿಮಗೆಲ್ಲರಿಗೆ ಪತ್ನಿಯಾಗುವರು. ನೀವೆಲ್ಲ ಮನುಷ್ಯರಾಗಿ ಅಲ್ಲಿ ಅಸಾಧಾರಣವಾದ ಭೂಭಾರಹರಣ ಕಾರ್ಯ ಮಾಡಿ, ಶೂರರನ್ನೆಲ್ಲ ಸಂಹರಿಸಿ, ಪುನಃ ಇಂದ್ರಲೋಕಕ್ಕೆ ಬಂದು ಸತ್ಕಾರಾರ್ಹರಾಗುವಿರಿ. ನಾನು ಹೇಳಿದಂತೆ ಮಾಡಬೇಕು. ಇದರಿಂದ ಅನೇಕ ಪ್ರಯೋಜನಗಳಿವೆ.

ಈ ಮಾತುಗಳನ್ನು ಕೇಳಿದವರೆಲ್ಲ ಪೂರ್ವೇಂದ್ರರಾಗಿದ್ದವರು. ಅವರು ನುಡಿದರು. ನಾವು ದೇವಲೋಕದಿಂದ ಮಾನವಲೋಕಕ್ಕೆ ಹೋಗುವ (ನಾವು) ದೇವತೆಗಳಾದ ಧರ್ಮ, ವಾಯು, ಇಂದ್ರ, ಅಶ್ವಿನೀದೇವತೆಗಳು. ನಮ್ಮನ್ನು ತಾಯಿಯ ಉದರದಲ್ಲಿ ಧರಿಸಲಿ.

ಇದೆಲ್ಲ ನಿರೂಪಸಿದ ವ್ಯಾಸರು ಮುಂದುವರಿಸುತ್ತಾ -

ಇದನ್ನು ಕೇಳಿದ ರುದ್ರದೇವರು ನಾನು ದೇವಕಾರ್ಯದ ಸಲುವಾಗಿ ನನ್ನ ಪರಾಕ್ರಮ-ವಿರುವ, ನನ್ನಿಂದ ಉತ್ಪನ್ನರಾದ ಐದನೆಯ ಪುರುಷನನ್ನು ನಮಗೆ ಕೊಡುತ್ತೇನೆ ಎಂದರು. ನಂತರ ಉಗ್ರಕರ್ಮರಾದ ರುದ್ರದೇವರು ಪಂಚೇಂದ್ರರಿಗೆ ಅವರಿಗೆ ಬೇಕಾದ ಬಯಕೆಯನ್ನು

ಅನುಗ್ರಹಿಸಿ ಮನುಷ್ಯಯೋನಿಯಲ್ಲಿ ಹಾಕಿದರು. ಇವರ ಭಾರ್ಯೆ, ಪತ್ನಿಯಾದ ಲೋಕಮನೋಹರಳಾದ(ಆ ವನಿತೆಯನ್ನು) ಶ್ರೀದೇವಿಯನ್ನುಮನುಷ್ಯಯೋನಿಗೆಹಾಕಿದರು (ಆ ವನಿತೆ ಭಾರತೀ, ಶ್ರೀಶಬ್ದವಾಚ್ಯಳು). ಪಂಚೇಂದ್ರರನ್ನು ವನಿತೆಯನ್ನು ಕರೆದುಕೊಂಡು ನಾರಾಯಣನ ಬಳಿಗೆ ರುದ್ರದೇವರು ಹೋಗಿ (ಎಲ್ಲವನ್ನು ತಿಳಿಸಲಾಗಿ) ಆತನು ಹಾಗೆಯೇ ಆಗಲಿ ಎಂದು ಸಮ್ಮತಿಸಲು ಎಲ್ಲರೂ ಭೂಮಿಯಲ್ಲಿ ಅವತರಿಸಿದರು.

ದೇವತಾಶ್ರೇಷ್ಠನಾದ ವಿಷ್ಣುವು ಇಂದ್ರನನ್ನು ಶೇಷ ಹಾಗೂ ವಾಯುದೇವರಿಂದ ಕೂಡಿದ ನರಾವೇಶವುಳ್ಳವನನ್ನಾಗಿ ಕಲ್ಪಿಸಿ, ತನ್ನ ಕೂದಲುಗಳಲ್ಲಿ ಒಂದು ಬಿಳಿ, ಒಂದು ಕಪ್ಪು ಕೂದಲನ್ನು ಕಿತ್ತಿದನು. ಈ ಕೂದಲುಗಳೇ ರೋಹಿಣೀ ದೇವಿಯಲ್ಲಿ ಬಲರಾಮನಾಗಿ, ದೇವಕೀದೇವಿಯಲ್ಲಿ ಕೃಷ್ಣನಾಗಿ ಅವತರಿಸಿದವು. ಹಿಂದೆ ಆ ಪರ್ವತಶ್ರೇಷ್ಠದಲ್ಲಿದ್ದವರೇ ಹಿಂದೆ ಇಂದ್ರರಾಗಿದ್ದವರು. ಈಗ ಅವರೇ ಮಹಾಶೂರರಾದ ಪಾಂಡವರಾಗಿ ಜನಿಸಿದ್ದಾರೆ. ಇಂದ್ರಾಂಶನೇ ಅರ್ಜುನನಾಗಿದ್ದಾನೆ. ಹೀಗೆ ಇವರ ಪತ್ನಿಯೇ ದ್ರೌಪದೀ. ಇವರ ಪಾಲಿಗೆ ಲಕ್ಷ್ಮೀ ಇದ್ದಂತೆ ಇದ್ದಾಳೆ. ಇಂತಹ ದೈವಯೋಗವಿಲ್ಲದಿದ್ದರೆ ಯಜ್ಞದ ಕೊನೆಗೆ ಭೂಮಿಯಿಂದ ಎದ್ದು ಬರುವುದು ಹೇಗೆ? ಆಕೆಯ ಸೌಂದರ್ಯ ಚಂದ್ರಸೂರ್ಯರ ಕಾಂತಿಯನ್ನು ಹೋಲುತ್ತದೆ. ಒಂದು ಕ್ರೋಶದಿಂದ ಬೀಸುವ ಆಕೆಯ ಸುಗಂಧವು ದೈವಯೋಗವಿಲ್ಲದಿದ್ದರೆ ಹೇಗೆ ಸಾಧ್ಯವಾದೀತು? ಎಂದು ವ್ಯಾಸರು ನುಡಿದರು ದ್ರುಪದನಿಗೆ.

ದ್ರೌಪದೀ ವ್ಯಕ್ತಿತ್ವನ್ನು ಸ್ಥಿರಪಡಿಸಲು ವ್ಯಾಸರು ದ್ರುದಪನಿಗೆ ದಿವ್ಯದೃಷ್ಟಿ ಕೊಟ್ಟರು. ಆ ಮೇರೆಗೆ ದ್ರುಪದನು ಆ ದಿವ್ಯದೃಷ್ಟಿಯಿಂದ ಪಾಂಡವರ ಪೂರ್ವದಿವ್ಯದೇಹಗಳಿಂದ ಕೂಡಿದುದನ್ನು ನೋಡಿದನು. ಅವರೆಲ್ಲರೂ ಚಿನ್ನದ ಕಿರೀಟಧಾರಿಗಳೂ, ಇಂದ್ರನಂತೆ ತೇಜಸ್ವಿಗಳೂ, ಅಗ್ನಿ ಆದಿತ್ಯರ ವರ್ಣಗಳನ್ನು ಹೊರದಿದವರೂ, ಮನೋಹರ ರೂಪಿಗಳೂ, ಸಾಲವೃಕ್ಷದಂತೆ ಎತ್ತರವಾದ ಯುವಕರಾದ ಎಲ್ಲರನ್ನೂ ನೋಡಿದನು. ಅವರೆಲ್ಲ ರುದ್ರ, ಇಂದ್ರರಂತೆ ಮಹಾತೇಜಸ್ವಿಗಳಾಗಿ ಕಂಡರು. ಅವರೆಲ್ಲರೂ ಪೂವೇಂದ್ರರಾಗಿದ್ದುದನ್ನು ತಿಳಿದು ಆಶ್ಚರ್ಯಚಕಿತನಾದ ದ್ರುಪದನು ತನ್ನ ಮಗಳನ್ನು ಅನುಪಮವಾದ ಲಕ್ಷ್ಮಿಯಂತೆ ಕಂಡನು. ದ್ರೌಪದಿಯ ಮಹದಾಶ್ಚರ್ಯಕರವಾದ ರೂಪವನ್ನು ಕಂಡು ದ್ರುಪದನು ವ್ಯಾಸರ ಪಾದಗಳನ್ನು ಹಿಡಿದು ನಿಮಗಿದು ಆಶ್ಚರ್ಯವಲ್ಲ ಎಂದು ಪ್ರಸನ್ನನಾಗಿ ನುಡಿದನು.

ಹೀಗೆ ಭಾರತದ ಪಂಚೇಂದ್ರೋಪಾಖ್ಯಾನವು ಪಾಂಡವರು ಹಿಂದೆ ಇಂದ್ರ ಪದವಿಯಲ್ಲಿದ್ದವರೆಂದೂ, ದ್ರೌಪದಿಯು ಆ ಪಾಂಡವರ ಪತ್ನಿಯಾಗಲು ಅರ್ಹಳೆಂದೂ ತಿಳಿಸುತ್ತದೆ.

ಇಷ್ಟಲ್ಲದೆ ಇತರ ಪುರಾಣಾದಿಗಳ ಆಧಾರದ ಮೇಲೆ ಈ ಉಪಾಖ್ಯಾನದ ಪೂರ್ಣ ಹಿನ್ನೆಲೆಯನ್ನು ಆಚಾರ್ಯರು ಮ.ತಾ.ನಿ.ದ ಅಧ್ಯಾಯ ೧೯ರಲ್ಲಿ ಶ್ಲೋಕ ೧೫೮-೧೮೮

(೩೦ ಶ್ಲೋಕಗಳು) ವಿವಾಹೋತ್ತರ ವಿಷಯಗಳನ್ನು ಸಂಗ್ರಹಿಸಿದ್ದಾರೆ. ಒಟ್ಟಾರೆ ದ್ರೌಪದಿಯ ಪಂಚಪತಿತ್ವ ಪ್ರಸಂಗವು ಅಧ್ಯಾಯ ೧೮೮ರಲ್ಲಿ ೧೦೩-೧೫೨ರವರೆಗಿದೆ. ಅದನ್ನು ಅನುವಾದ ಸಮೇತ ಕೊಡಲಾಗಿದೆ. ನಿರ್ಣಯವಿಲ್ಲದಿದ್ದರೆ ವಿಷಯವು ಸಂಪೂರ್ಣ ಸಂಶಯರಹಿತವಾಗಿರುವುದಿಲ್ಲ.

## ಸಂದೇಶಗಳು - ವಿವರಣೆಗಳು

ಮಹಾಭಾರತದಲ್ಲಿ ಹೀಗೆ ದ್ರೌಪದೀ ಪಂಚಪತಿತ್ವ ವಿಚಾರವು ಪಂಚೇಂದ್ರೋಪಾಖ್ಯಾನ, ಪಂಚಕನ್ಯೋಪಾಖ್ಯಾನದ ಮೂಲಕ ಬಂದಿದೆಯಾದರೂ, ಅನೇಕ ಸಂಶಯಗಳಿಗೆ ಎಡೆ ಮಾಡಿಕೊಡುತ್ತದೆ, ಸಾಮಾನ್ಯ ಜಿಜ್ಞಾಸುಗಳಿಗೆ. ಅಲ್ಲಿ ದ್ರುಪದನಿಗೆ ಯಾವುದೇ ಸಂಶಯ ಉಳಿಯಲಿಲ್ಲ. ಕಾರಣ ಅವರೆಲ್ಲ ದೇವತೆಗಳು, ವ್ಯಾಸರಿಂದ ಉಪದೇಶ ಹೊಂದಿದವರು.

ಆದರೆ ದ್ರೌಪದಿಯಲ್ಲಿ ಯಾರೆಲ್ಲ ದೇವತಾಸ್ತ್ರೀಯರು ಇದ್ದರು. ಇತ್ಯಾದಿ ವಿಷಯಗಳು ಕೇವಲ ಭಾರತದಿಂದ ಗೊತ್ತಾಗುವುದಿಲ್ಲ. ಅದಕ್ಕಾಗಿ ವ್ಯಾಸರಿಂದಲೇ ಆದಿಷ್ಟವಾದ ಆಚಾರ್ಯರು ವಿವಿಧ ಪುರಾಣಾದಿಗಳನ್ನು ಮಥನ ಮಾಡಿ ನಿರ್ಣಯಗಳನ್ನು ಕಥಾಭಾಗ-ಗಳನ್ನು ತೋರಿಸಿದ್ದಾರೆ. ಅವೆಲ್ಲವುಗಳು ಸಮಗ್ರ ಚಿತ್ರ, ದೃಷ್ಟಿಕೋಣವನ್ನು ಕೊಡುತ್ತದೆ. ಅದಕ್ಕಾಗಿ ಇಲ್ಲಿ ಆ ಭಾಗಗಳನ್ನು ಅನುವಾದ ಸಮೇತ ಕೊಡಲಾಗಿದೆ.

ಅದರಿಂದ ದ್ರೌಪದಿಯ ಶುದ್ಧವ್ಯಕ್ತಿತ್ವ, ಚಾರಿತ್ರ್ಯ ಸಾಬೀತಾಗುತ್ತದೆ. ಒಂದು ವೇಳೆ ಅರ್ಥವಾಗದಿದ್ದರೂ, ದೈವೀಭೋಗವು ಮಾನುಷಭೋಗಕ್ಕಿಂತ ವಿಲಕ್ಷಣವೆಂಬ ಆಚಾರ್ಯರ ನಿರ್ಣಯ ಮನಸ್ಸಮಾಧಾನ ನೀಡುತ್ತದೆ. ದೈವೀಭೋಗಗಳಿರಲಿ, ಪ್ರಪಂಚದಲ್ಲಿ ಕೂಡಾ ಪ್ರಜೋತ್ಪಾದನಾಪ್ರಕ್ರಿಯೆಗಳು ವಿಭಿನ್ನ ಪ್ರಾಣಿ, ಪಕ್ಷಿ, ಸಸ್ಯಗಳಲ್ಲಿ ಬೇರೆ ಬೇರೆಯಾಗಿಯೇ ಇವೆ. ಇದು ವೈಜ್ಞಾನಿಕ ಸತ್ಯವೂ ಕೂಡಾ.

# ಸಭಾಪರ್ವ

## ೨೬. ಸುಧನ್ವೋಪಾಖ್ಯಾನ

ನರಸಿಂಹದೇವರನ್ನು ಒಲಿಸಿಕೊಂಡ ದೈತ್ಯೇಂದ್ರ ಪ್ರಹ್ಲಾದನ ಮಗ ವಿರೋಚನ ಹಾಗೂ ಅಂಗಿರಸ ಮುನಿಪುತ್ರ ಸುಧನ್ವರು ಕನ್ಯೆಯೋರ್ವಳನ್ನು ಮದುವೆಯಾಗಲು ಬಯಸಿ ವಿವಾದಕ್ಕಿಳಿದರು[೧]. 'ನಾನೇ ಅವಳನ್ನು ವರಿಸಲು ಶ್ರೇಷ್ಠ ಎಂದು'. ಇದರ ತೀರ್ಪಿಗಾಗಿ ಇಬ್ಬರೂ ಪ್ರಹ್ಲಾದ ರಾಜರನ್ನೇ ಮೊರೆಹೊಕ್ಕರು. ಈ ವಿವಾದ ಪರಸ್ಪರರ ಪ್ರಾಣವನ್ನೇ ಪಣವನ್ನಾಗಿರಿಸಿತ್ತು. ಪ್ರಹ್ಲಾದರ ಮುಂದೆ ಸುಧನ್ವನಂತೂ ಕ್ರೋಧದಿಂದ ಜ್ವಲಿಸುವ ಬ್ರಹ್ಮದಂಡದಂತೆ 'ರಾಜನ್! ಈ ಪ್ರಶ್ನೆಗೆ ನೀನು ಉತ್ತರಿಸದಿದ್ದರೆ ಅಥವಾ ಸುಳ್ಳನ್ನೇ ಹೇಳಿದರೆ ಇಂದ್ರದೇವ ನಿನ್ನ ಶಿರಸ್ಸನ್ನು ನೂರು ಹೋಳು ಮಾಡುವನು' ಎಂದು ಗುಡುಗಿದನು. ಪ್ರಹ್ಲಾದ ತತ್ತರಿಸಿ ಉತ್ತರ ಪಡೆಯಲು ಕಶ್ಯಪರನ್ನೇ 'ತಾತ ! ನೀನು ದೇವಾಸುರ ವಿಪ್ರರ ಧರ್ಮ ಬಲ್ಲವ. ಆದಕಾರಣ ಧಾರ್ಮಿಕ ಪ್ರಶ್ನೆಯೊಂದಕ್ಕೆ ಉತ್ತರಿಸದಿದ್ದರೆ ಅಥವಾ ತಪ್ಪು ಉತ್ತರ ಕೊಟ್ಟವನಿಗೆ ಸಿಗುವ ಲೋಕಗಳಾವುವು? ದಯವಿಟ್ಟು ತಿಳಿಸು' ಎಂದು ಕೇಳಿದ.

ಮಹಾಜ್ಞಾನಿಗಳಾದ ಕಶ್ಯಪರು ಉತ್ತರಿಸುತ್ತ ಹೀಗೆ ಹೇಳಿದರು. 'ಕಾಮ, ಕ್ರೋಧ, ಭಯಗಳಿಗೆ ಒಳಗಾಗಿ ಕೇಳಿದ ಪ್ರಶ್ನೆಗೆ ಉತ್ತರಿಸದಿದ್ದರೆ ಒಂದು ಸಾವಿರ ವಾರುಣ ಪಾಶಬಂಧಕ್ಕೆ ಒಳಗಾಗುತ್ತಾನೆ[೨]. ಸಾಕ್ಷಿ ಹೇಳುವವನು ತಪ್ಪು ಹೇಳಿದರೂ ಪ್ರಶ್ನೆಯನ್ನೇ ಕೇಳದಿದ್ದರೂ, ಉತ್ತರ ಕೊಡದಿದ್ದರೂ ಇದೇ ಶಿಕ್ಷೆಗೆ ಒಳಗಾಗುತ್ತಾನೆ. ಪಾಶವಿಮೋಚನೆಗೆ ಒಂದುಸಾವಿರ ವರ್ಷವೇ ಬೇಕಾಗುತ್ತದೆ.

**'ಸಾಕ್ಷೀಂ ವಾ ವಿಬ್ರುವನ್ ಸಾಕ್ಷ್ಯಂ ಗೋಕರ್ಣ ಶಿಥಿಲಂ ಚರನ್ ॥[೩]'**

---

೧ ...ವಿರೋಚನಃ 'ಕನ್ಯಾಹೇತೋರಾಂಗೀರಸಂ ಸುಧನ್ವಾನಮುಪಾದ್ರವತ್ ।
ಅಹಂ ಜ್ಯಾಯಾನಹಂ ಜ್ಯಾಯಾನಿತಿ ಕನ್ಯೇಪ್ಸಯಾ ತದಾ ॥
ತಯೋರ್ದೇವನಮತ್ರಾಸೀತ್ ಪ್ರಾಣಯೋರಿತಿ ನಃ ಶ್ರುತಮ್ ॥ – ೬೮/೬೭

೨ ಯೋ ವೈ ಪ್ರಶ್ನಂ ನ ವಿಬ್ರೂಯಾತ್ ವಿತಥಂ ಚೈವ ನಿರ್ದಿಶೇತ್ ।
ಕೇ ವೈ ತಸ್ಯ ಪರೇ ಲೋಕಾಸ್ತನ್ಮಮಾಚಕ್ಷ್ವ ಪೃಚ್ಛತಃ ॥

೩ 'ಸಾಕ್ಷೀ ವಾ ವಿಬ್ರುವನ್ – (ಸಾಕ್ಷ್ಯಂ.... ವಿಪರೀತತಯಾ ವದನ್')
'ಗೋಕರ್ಣಶಿಥಿಲಂಚರನ್ – ಗೋಕರ್ಣಶಿಥಿಲಂ = ಗೌಃ ಆರ್ತಾನಾಂ ಪ್ರಶ್ನವಾಕ್'
ಕರ್ಣಾತ್ ಶ್ರೋತ್ರಾತ್ ಶಿಥಿಲಾ ವಿಸ್ರಂಸಿತಾ... ಔದ್ಧತ್ಯಾತ್ ಪ್ರಶ್ನವಾಕ್ಯಮೇವ ಅಶೃಣ್ವನ್ ಇತ್ಯರ್ಥಃ ।
.... ಪ್ರತ್ಯುತ್ತರ ಮವದನ್ ಇತ್ಯರ್ಥಃ । – ಶ್ರೀವಾದಿರಾಜಸ್ವಾಮಿಗಳ ಲಕ್ಷಾಲಂಕಾರ

ಒಂದು ವೇಳೆ ಧರ್ಮವು ಅಧರ್ಮಾಕ್ರಾಂತವಾಗಿ ಸಭೆಯಲ್ಲಿ ಪ್ರಶ್ನಿತವಾದಾಗ ಸಭಾಸದಸ್ಯರು ತೃಪ್ತಿಕರವಾಗಿ ಪರಿಹಾರ ನೀಡಬೇಕು. ಇಲ್ಲದಿದ್ದಲ್ಲಿ ಆ ಬಾಣ ಇಡೀ ಸಭೆಯನ್ನು ಬಾಧಿಸುತ್ತದೆ. ಅಧರ್ಮದ ಖಂಡನೆಯನ್ನು ಮಾಡದಿದ್ದಲ್ಲಿ ಆ ಪಾಪದ ಅರ್ಧಭಾಗ ಸಭಾಧ್ಯಕ್ಷನಿಗೂ, ಕಾಲುಭಾಗ ಸಭಾಸದಸ್ಯರಿಗೂ, ಕಾಲು ಭಾಗ ಪಾಪ ಮಾಡಿದವನಿಗೂ ಬರುತ್ತದೆ. ಪಾಪವನ್ನು ಖಂಡಿಸಿದಲ್ಲಿ ಪಾಪಿಗೆ ಪೂರ್ಣಪಾಪದ ಫಲ ಬರುತ್ತದೆ.

**ಅರ್ಧಂ ಹರತಿ ವೈ ಶ್ರೇಷ್ಠಃ ಪಾದೋ ಭವತಿ ಕರ್ತೃಷು ।**
**ಪಾದಶ್ಚೈವ ಸಭಾಸತ್ಸು ಯೇ ನ ನಿಂದಂತಿ ನಿಂದಿತಂ ॥**
**ಏನೋ ಗಚ್ಛತಿ ಕರ್ತಾರಂ ನಿಂದಾಹೋಽಕ ಯತ್ರನಿಂದ್ಯತೇ ॥**

**- ಸಭಾಪರ್ವ (೬೮/೭೮,೭೯)**

ಒಂದು ವೇಳೆ ಸುಳ್ಳು ತೀರ್ಪು ನೀಡಿದ್ದಲ್ಲಿ ತೀರ್ಪು ನೀಡಿದವನು ತನ್ನ ಹಿಂದಿನ ಹಾಗೂ ಮುಂದಿನ ಏಳು ಜನ್ಮಗಳ ಪುಣ್ಯ ಕಳೆದುಕೊಳ್ಳುತ್ತಾನೆ.

ಸುಳ್ಳು ತೀರ್ಪುಗಾರನು ಜಗತ್ತಿನಲ್ಲಿ ಐಶ್ವರ್ಯ ಕಳೆದುಕೊಂಡವನ, ಮಗನನ್ನು ಕಳೆದುಕೊಂಡವನ, ಸಾಲದ ಬಾಧೆ ಇರುವವನ, ವಿಧವೆಯ, ಬಂಜೆಯ, ಹುಲಿಯ ಬಾಯಿಯಲ್ಲಿ ಸಿಲುಕಿದವನ ಮುಂತಾದ ಆರ್ತರ ದುಃಖವನ್ನು ಹೊಂದುತ್ತಾನೆ. ಆದ್ದರಿಂದ ಎಲೈ ಪ್ರಹ್ಲಾದ ! ತೀರ್ಪುಗಾರ ಸತ್ಯವನ್ನರಿತು ಸತ್ಯವನ್ನೇ ನುಡಿಯಬೇಕು. ಮೌನತೀರ್ಪು ತೀರ್ಪಲ್ಲ, ಅದು ಮೋಸ. ಸತ್ಯ ನುಡಿಯುವ ಸಾಕ್ಷಿಯು ಧರ್ಮ, ಅರ್ಥಗಳಿಂದ ವಂಚಿತನಾಗುವುದಿಲ್ಲ.

**'ಸಮಕ್ಷಂ ದರ್ಶನಾತ್ ಸಾಕ್ಷೀ ಶ್ರವಣಾಚ್ಚೇತಿ ಧಾರಣಾತ್ ।**
**ತಸ್ಮಾತ್ಸತ್ಯಂ ಬ್ರುವನ್ ಸಾಕ್ಷೀ ಧರ್ಮಾರ್ಥಾಭ್ಯಾಂ ನ ಹೀಯತೇ ॥'**[೧]

ಇಷ್ಟನ್ನು ಕೇಳಿದ ಪ್ರಹ್ಲಾದ ತನ್ನ ಮಗ ವಿರೋಚನನಿಗೆ ಹೇಳಿದ.

'ನೀನು ಬಯಸಿದ ಕನ್ಯೆಯನ್ನು ವಿವಾಹವಾಗಲು ಸುಧನ್ವನೇ ಶ್ರೇಷ್ಠ ನನಗಿಂತ ಅಂಗಿರಸರು ಉತ್ತಮರು, ಸುಧನ್ವನ ತಾಯಿ ನಿನ್ನ ತಾಯಿಗಿಂತ ಉತ್ತಮಳು. ವಿರೋಚನ

---

ಈ ಉಪಾಖ್ಯಾನದಲ್ಲಿ ಹತ್ತು ಕಠಿಣ ಶಬ್ದಗಳಿಗೆ ಶ್ರೀವಾದಿರಾಜರು ತಮ್ಮ ಲಕ್ಷಾಲಂಕಾರದಲ್ಲಿ ವ್ಯಾಖ್ಯಾನಿಸಿದ್ದಾರೆ. ಇಲ್ಲಿ ಒಂದೆರಡು ಮಾದರಿಯಾಗಿ ಕೊಡಲಾಗಿದೆ.

'ಶಿಥಿಲಶ್ಚರನ್' - ಎಂದು ಗೀತಾಪ್ರೆಸ್ ಪ್ರ.ಪಾಠ.

೧ ಸಮಕ್ಷಂ ದರ್ಶನಾತ್ ಇತ್ಯತ್ರ ಇತಿ ಸಮಕ್ಷಂ ದರ್ಶನಂ ಯಥಾ ।
ತಥಾ ಶ್ರವಣಾತ್, ಧಾರಣಾತ್, ಪತ್ರಶಿಲಾದಿಷು ಶಾಸನರೂಪೇಣ ಧಾರಣಾತ್ ॥

- ಶ್ರೀವಾದಿರಾಜಸ್ವಾಮಿಗಳು (ಲಕ್ಷಾಲಂಕಾರ)

ನಿನ್ನ ಪ್ರಾಣಗಳಿಗೆ ಸುಧನ್ವನೆ ಒಡೆಯ[೧] (ಅವನಿಗೆ ನಿನ್ನ ಪ್ರಾಣಗಳನ್ನು ಅಪಹರಿಸಲು ಅಧಿಕಾರ ಉಂಟು).

ಈ ಮಾತಿನಿಂದ ಸಂತುಷ್ಟನಾದ ಸುಧನ್ವನು 'ಪ್ರಹ್ಲಾದರಾಜ! ನೀನು ಪುತ್ರವ್ಯಾಮೋಹ ಬಿಟ್ಟು ಸತ್ಯ ನುಡಿದೆ. ನಿನ್ನ ಪುತ್ರನಿಗೆ ಪ್ರಾಣದಾನ ಮಾಡುತ್ತಿದ್ದೇನೆ. ವಿರೋಚನ ನೂರು ವರ್ಷ ಬಾಳಲಿ' ಎಂದ.

## ಸಂದೇಶಗಳು-ವಿವರಣೆಗಳು

ಹೀಗೆ ಧಾರ್ಮಿಕ ಪ್ರಶ್ನೆಗೆ ಸತ್ಯಾಧಾರಿತ ಉತ್ತರವನ್ನು ಅನುವಾದ ಮಾಡಿದ ಪ್ರಸಂಗವನ್ನು ವಿದುರನು ಕುರುಸಭೆಯಲ್ಲಿ ನಿರೂಪಿಸುತ್ತಾ 'ಪರಮನೀಚನಾದ ದುರ್ಯೋಧನ, ದುಃಶಾಸನರ ದುರ್ವರ್ತನೆ, ಇವರ ಅನುಯಾಯಿಯಾದ ಕರ್ಣಾದಿಗಳ ದುರ್ಭಾಷಣದಿಂದ ನೊಂದ ರಜಸ್ವಲೆಯಾದ, ಏಕವಸ್ತ್ರಳಾದ, ದ್ರೌಪದಿಯು ಪ್ರಶ್ನೆ ಕೇಳಿದಳು. ಉತ್ತರಿಸಲು ಕೋರಿದರೂ ರಾಜರಾರೂ ಉತ್ತರಿಸಲಿಲ್ಲ. ವಿದುರನನ್ನು ಹೊರತುಪಡಿಸಿ ಭೀಮನಂತೆ ಯಾರೂ ಪ್ರತಿಭಟಿಸಲಿಲ್ಲ. ಈ ಬಗೆಗಿನ ವಿವರವನ್ನು ಮಹಾಭಾರತದ ಮೂಲ ಹಾಗೂ ಶ್ರಿಮಧ್ವಾಚಾರ್ಯರ ನಿರ್ಣಯಗ್ರಂಥಗಳಿಂದ ಪಡೆಯಬಹುದು. ಭೀಷ್ಮರು ಧರ್ಮಜನನ್ನು ಕೇಳೆಂದರು. ಅಂತೆಯೇ ಅವರು ಕರ್ತವ್ಯ ಭ್ರಷ್ಟರಾಗುತ್ತಾರೆ. ಧರ್ಮದ್ರೋಹಿಗಳಾಗುತ್ತಾರೆ. ಶ್ರೀಕೃಷ್ಣನ ಆಗ್ರಹಕ್ಕೆ, ಪಾಂಡವರ ವಿಶೇಷವಾಗಿ ಭೀಮ-ದ್ರೌಪದಿಯರ ಅನುಗ್ರಹದಿಂದ ವಂಚಿತರಾಗುತ್ತಾರೆ. ದುರ್ಯೋಧನಾದಿಗಳಂತೂ ನರಕಭಾಜನರಾಗುತ್ತಾರೆ. ಎನ್ನುವುದು ಭಾರತದಿಂದ ತಿಳಿಯುವ ತತ್ತ್ವವಾಗಿದೆ. ಆದ್ದರಿಂದ ಸಮಾಜದ ಸ್ವಾಸ್ಥ್ಯಕ್ಕೋಸ್ಕರ ಅಧರ್ಮವನ್ನು ಗ್ರಹಿಸಿದ ಎಲ್ಲರೂ ಅದನ್ನು ಮೂಲೋತ್ಪಾಟನೆಗೆ ಒಗ್ಗೂಡಬೇಕು. ಅಧರ್ಮವನ್ನು ಪ್ರೋತ್ಸಾಹಿಸದೆ ಖಂಡಿಸುವ ಪ್ರವೃತ್ತಿಯನ್ನು (ಯಾರೇ ತಪ್ಪು ಮಾಡಿದರೂ) ಬೆಳೆಸಿಕೊಂಡಾಗ ಮಾತ್ರ ಜಗತ್ತಿನಲ್ಲಿ ಧರ್ಮ ಉಳಿದೀತು.

*****

---

೧ ಶ್ರೇಯಾನ್ ಸುಧನ್ವಾ ತ್ವತ್ತೋ ವೈ ಮತ್ತಃ ಶ್ರೇಯಾಂಸ್ತದಾಂಗಿರಾಃ।
ಮಾತಾ ಸುಧನ್ವ ನಶ್ಚಾಪಿ ಮಾತೃತಃ ಶ್ರೇಯಸೀ ತವ॥
ವಿರೋಚನ ಸುಧನ್ವಾಯಂ ಪ್ರಾಣಾನಾಮೀಶ್ವರಸ್ತವ॥ - ಸಭಾಪರ್ವ (೬೮/೮೬)

# ವನಪರ್ವ

## ಅರಣ್ಯಪರ್ವ

### ೨೭. ಸುರಭಿ-ಇಂದ್ರೋಪಾಖ್ಯಾನ

ಗೋವುಗಳ ತಾಯಿಯಾದ 'ಸುರಭಿ'ಯು (ಕಾಮಧೇನು) ಒಮ್ಮೆ ಅಳುತ್ತಾ ಇಂದ್ರನ ಬಳಿ ಬಂದಳು. ಅದರ ಬಗ್ಗೆ ಅನುಕಂಪದಿಂದ 'ನೀನು ಏಕೆ ಅಳುವೆ? ದೇವತೆಗಳು ಸೌಖ್ಯದಿಂದಿರುವರಷ್ಟೇ? ಮನುಷ್ಯರಿಗಾಗಲಿ, ಗೋವುಗಳಿಗಾಗಲಿ ಏನು ಆಪತ್ತಿಲ್ಲವಷ್ಟೇ?' ಎಂದು ಕೇಳಿದನು. ಅದಕ್ಕೆ ಕಾಮಧೇನು 'ನಮಗೆ ಯಾವುದೇ ತೊಂದರೆ ಇಲ್ಲ. ಆದರೆ ಭೂಲೋಕದಲ್ಲಿ ದುರ್ಬಲನಾದ ನನ್ನ ಮಗನ ಕಷ್ಟ ನೋಡಿ ದುಃಖಿಸುತ್ತಿದ್ದೇನೆ. ನೋಡು ಇಂದ್ರ! ಭೂಲೋಕದಲ್ಲಿ ದುರ್ಬಲನಾದ ನನ್ನ ಮಗನನ್ನು ಆ ಕ್ರೂರ ರೈತನು ಹೇಗೆ ಚಾವಟಿಯಿಂದ ಹೊಡೆದು ನೇಗಿಲನ್ನು (ಎತ್ತನ್ನು) ಹೇರಿ ಎಳೆಯುತ್ತಿದ್ದಾನೆ. ಈ ನನ್ನ ಮಗ ಮರಣಾಸನ್ನನಾಗಿದ್ದಾನೆ. ಆದರೆ ರೈತನು ಅದು ಕೆಳಗೆ ಬಿದ್ದರೂ ನೇಗಿಲನ್ನು ಹೇರಿ ಬಾಲವನ್ನು ತಿರುಗಿಸುತ್ತಾ ಹೊಡೆಯುತ್ತಾ ಭಾರವನ್ನು ಎಳೆಯುವಂತೆ ಮಾಡುತ್ತಿದ್ದಾನೆ. ಇದರಿಂದ ನನ್ನ ಮನಸ್ಸು ನೊಂದಿದೆ. ಅಂತೆಯೇ ಅಳು ಬರುತ್ತಿದೆ, ದುಃಖಿಸುತ್ತಿದ್ದೇನೆ' ಎಂದಿತು.

ಅದಕ್ಕೆ ಇಂದ್ರನು 'ನಿನ್ನ ಸಾವಿರಾರು ಮಕ್ಕಳು ಹೀಗೆಯೇ ಪೀಡಿಸಲ್ಪಡುತ್ತಿದ್ದರೂ, ಅದೇಕೆ ಆ ಎತ್ತಿಗಾಗಿ ದುಃಖಿಸುತ್ತೀ'' ಎನ್ನಲು, ಕಾಮಧೇನು 'ನನಗೆ ಎಲ್ಲ ಮಕ್ಕಳ ಮೇಲೆ ಸಮಾನ ಪ್ರೀತಿ ಇದ್ದರೂ ದೀನ ಸ್ಥಿತಿಯಲ್ಲಿರುವ ಈ ಎತ್ತಿನ ಬಗ್ಗೆ ನನಗೆ ಹೆಚ್ಚು ಅನುಕಂಪವಿದೆ' ಎಂದು ನುಡಿದಳು.

ಇದರಿಂದ ವಿಸ್ಮಿತನಾದ ಇಂದ್ರನು ದೈನ್ಯಾವಸ್ಥೆಯಲ್ಲಿದ್ದ ಎತ್ತು ಇದ್ದ ಕಡೆ ಭಾರೀ ಮಳೆ ಸುರಿಸಿ ಅದನ್ನು ಶೋಷಿಸುತ್ತಿದ್ದ ರೈತನಿಗೆ ವಿಘ್ನ ಉಂಟು ಮಾಡಿ, ಅದಕ್ಕೆ ಸಂತೋಷ ಕೊಟ್ಟನು.

ಈ ಕಥೆಯನ್ನು ವೇದವ್ಯಾಸರು ಧೃತರಾಷ್ಟ್ರನಿಗೆ ಹೇಳುತ್ತಾ 'ನೋಡು ರಾಜ! ನನಗೆ ನೀನು ಹೇಗೆ ಮಗನೋ, ಹಾಗೆಯೇ ಪಾಂಡುವೂ ಮಗನೇ. ನಿನ್ನ ಮಕ್ಕಳು ೧೦೧ ಜನ ಸುಖಿಗಳೂ, ಬಲಿಷ್ಠರೂ ಆಗಿ ಪಾಂಡುಪುತ್ರರಾದ ಐವರನ್ನೂ ದುಃಖಿಗಳನ್ನಾಗಿ ಮಾಡಿದ್ದಾರೆ. ಅಂತೆಯೇ ಅವರು ಹೇಗೆ ಬದುಕಿಯಾರು? ಹೇಗೆ ವೃದ್ಧಿ ಹೊಂದಿಯಾರು? ಎಂದೇ ದೀನರಾದ

ಪಾಂಡವರ ಬಗ್ಗೆ ನನ್ನ ಚಿಂತೆ, ಪರಿತಾಪ. ಆದ್ದರಿಂದ ನಿನ್ನ ಮಕ್ಕಳು ಬದುಕಬೇಕೆಂದು ನೀನು ಇಚ್ಛಿಸಿದ್ದಲ್ಲಿ ಅವರು ಪಾಂಡವರೊಡನೆ ಶಾಂತಿ ಮಾಡಿಕೊಳ್ಳಲಿ' ಎಂದು ಧೃತರಾಷ್ಟ್ರನಿಗೆ ಉಪದೇಶಿಸುತ್ತಾರೆ.

ಪಾಂಡವರ ಬಗ್ಗೆ ವೇದವ್ಯಾಸರ ವಿಶ್ವಾಸ, ಅಭಿಮಾನಗಳು ಗುಣಮೂಲವಾದುದು. ಅವರಿಗೆ ಕೌರವರಿಂದಾದ ಅನ್ಯಾಯ, ಶೋಷಣೆಯನ್ನು ವ್ಯಾಸರು ಸ್ವಾಭಾವಿಕವಾಗಿಯೇ ಸಹಿಸಲಿಲ್ಲ. ಧೃತರಾಷ್ಟ್ರನಿಗೆ ಆತನ ಮಕ್ಕಳ ದುರ್ವರ್ತನೆಗೆ ಎಚ್ಚರಿಕೆಯಿಂದ ಕೂಡಿದ ಉಪದೇಶ ಮಾಡಿದರು. ದುರ್ಯೋಧನಾದಿಗಳಿಗೆ ನೇರವಾಗಿ ಮಾತನಾಡಲೂ ಇಲ್ಲ, ಮಾತನಾಡಲು ಇಚ್ಛಿಸಲೂ ಇಲ್ಲ. '**ನ ಸಂವದೇ ತೈಃ**' (ಮ.ತಾ.ನಿ.-೨೨/೧೭) ಎಂದೇ ಧೃತರಾಷ್ಟ್ರನಿಗೆ ವ್ಯಾಸರು ಹೇಳುತ್ತಾರೆ.

## ಸಂದೇಶಗಳು–ವಿವರಣೆಗಳು

ಭಗವಂತನು ತನ್ನ ಭಕ್ತರಿಗಾದ ಅನ್ಯಾಯವನ್ನು ಎಂದೂ ಸಹಿಸುವುದಿಲ್ಲವೆಂಬುದೇ ಇಲ್ಲಿನ ಸಂದೇಶ (ಅವರು ದುರ್ಬಲರಿರಲಿ, ಸಬಲರಿರಲಿ, ಅಲ್ಪಸಂಖ್ಯಾತರೇ ಆಗಿರಲಿ). ವ್ಯಾಸರ ಉಪದೇಶ ಕೂಡಾ ಪುತ್ರ ವ್ಯಾಮೋಹದಿಂದಾಗಿ ಧೃತರಾಷ್ಟ್ರನಿಗೆ ತನ್ನ ತಪ್ಪನ್ನು ತಿದ್ದಿಕೊಳ್ಳಲು ಆಗಲೆ ಇಲ್ಲ. ಅದರ ಫಲವಾಗಿ ತನ್ನ ಮಕ್ಕಳೆಲ್ಲರನ್ನೂ ಕಳೆದುಕೊಂಡ.

ತನ್ನ ಮಕ್ಕಳಂತೆ ಬೇರೆಯವರ ಮಕ್ಕಳನ್ನೂ ಪ್ರೀತಿಸಿದಾಗಲೇ ಹರಿಯ ಅನುಗ್ರಹ ಸಾಧ್ಯ. ತನ್ನ ಮಕ್ಕಳನ್ನು ಮಾತ್ರ ಪ್ರೀತಿಸಿ, ಬೇರೆಯವರ ಮಕ್ಕಳನ್ನು ಪಕ್ಷಪಾತದಿಂದ ನೋಡುವವನು ತನ್ನ ಮಕ್ಕಳನ್ನು ಕಳೆದುಕೊಂಡಲ್ಲಿ ಆಶ್ಚರ್ಯವಿಲ್ಲವೆಂಬುದೇ ಇಲ್ಲಿಯ ಹೃದಯ:

**ಪಾಂಡೋಃ ಪಂಚೈವ ಲಕ್ಷ್ಯಂತೇ ತೇಽಪಿ ಮಂದಾಃ ಸುದುಃಖಿತಾಃ ।**
**ಕಥಂ ಜೀವೇಯುರತ್ಯಂತಂ ಕಥಂ ವರ್ಧೇಯುರಿತ್ಯಪಿ ॥**
**ಇತಿ ದೀನೇಷು ಪಾರ್ಥೇಷು ಮನೋ ಮೇ ಪರಿತಪ್ಯತೇ ॥**

- ವನಪರ್ವ(೯/೧೯-೨೩)

# ಅರ್ಜುನಾಭಿಗಮನಪರ್ವ

## ೨೮. ಸೌಭವಧೋಪಾಖ್ಯಾನ

ಸಾಲ್ವದೇಶದ ರಾಜ ಬ್ರಹ್ಮದತ್ತ. ಇವನು ಶಿಶುಪಾಲನ ಸ್ನೇಹಿತ. ಅಂತೆಯೇ ಸದಾ ಕೃಷ್ಣದ್ವೇಷ ಆತನ ತತ್ತ್ವವೇ ಆಗಿತ್ತು. ಇವನಿಗೆ 'ಕ್ಷೇಮವೃದ್ಧಿ' ಮತ್ತು 'ವೇಗವಾನ್ (ವೇಗವಂತ)' ಎಂಬ ಇಬ್ಬರು ಸೇನಾಧಿಪತಿಗಳೂ, 'ವಿವಿಂಧ್ಯ' ಎಂಬ ಮಿತ್ರನೂ ಇದ್ದರು. ಈ ಬ್ರಹ್ಮದತ್ತ 'ವೃಷಪರ್ವ' ರಾಜನ (ಅಸುರ) ತಮ್ಮ 'ಅಜಕ'ನ ಮಗನಾಗಿದ್ದನು. ಇವನು ಸಾಲ್ವ ಎಂದೇ ಪ್ರಸಿದ್ಧನಾಗಿದ್ದನು (ಸಾಲ್ವದೇಶದ ರಾಜನಾದ್ದರಿಂದ). ಈ ಬ್ರಹ್ಮದತ್ತನು (ಬಲಿ ಚಕ್ರವರ್ತಿಯಲ್ಲಿದ್ದು ಅವನ ಮನಸ್ಸನ್ನು ಕೆಡಿಸಿದ) 'ಬಲಿ' ಎಂದ ಅಸುರನೆ ಆಗಿದ್ದನು. ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಎಲ್ಲರಿಂದಲೂ ಅಭೇದ್ಯವಾದ ಮಾಯಾಮಯವಾದ ಆಕಾಶದಲ್ಲಿರುವ ವಿಮಾನಾಕಾರದ ಪಟ್ಟಣವನ್ನು ಪಡೆದಿದ್ದನು. ಅದೇ ಸೌಭ. ಅದು ಆಕಾಶದಲ್ಲಿ ಎಲ್ಲೆಡೆ ಸಂಚರಿಸುತ್ತಿತ್ತು. ಹೀಗಾಗಿ ಸಾಲ್ವನ ಮಾಯಾಮಯ ಶಕ್ತಿಯನ್ನು ಎದುರಿಸುವುದು ರುದ್ರದೇವರ ವರದಿಂದಾಗಿ ಅಸಾಧ್ಯವಾಗಿತ್ತು.

ರಾಜಸೂಯಯಾಗದಲ್ಲಿ ಶಿಶುಪಾಲನ ವಧ ಬ್ರಹ್ಮದತ್ತನನ್ನು ಕನಲಿಸಿತು. ಕೃಷ್ಣ ಇನ್ನೂ ಪಾಂಡವರ ಬಳಿಯೇ ಇದ್ದಾಗ ಬ್ರಹ್ಮದತ್ತನು ದ್ವಾರಕೆಯನ್ನು ಮುತ್ತಿದ್ದನು. ಈ ವಾರ್ತೆ ಕೇಳಿದ ಕೃಷ್ಣನು ಮೊದಲು ಪ್ರದ್ಯುಮ್ನ, ಸಾಂಬ ಮೊದಲಾದವರನ್ನು ಕಳಿಸಿದನು. ಸಾಲ್ವನು ಅದೇ ವೇಳೆಗೆ ತನ್ನ ಭೌಮ ವಿಮಾನದೊಡನೆ ಬಂದು ದ್ವಾರಕೆ ನಗರ ಉದ್ಯಾನಾದಿಗಳನ್ನು ದ್ವಾರಕಾವಾಸಿಗಳನ್ನೂ ಹಿಂಸಿಸಿದನು. ಕೂಡಲೇ ಪ್ರದ್ಯುಮ್ನ, ಸಾಂಬ ಮೊದಲಾದವರು ಸೈನ್ಯದೊಂದಿಗೆ ಸಾಲ್ವನನ್ನು ಎದುರಿಸಲು ಬಂದರು. ಸಾಲ್ವನು ವಿಮಾನದಿಂದಿಳಿದು ರಥವೇರಿ ಪ್ರದ್ಯುಮ್ನಾದಿಗಳೊಡನೆ ಯುದ್ಧಕ್ಕೆ ಬಂದನು. ಪ್ರದ್ಯುಮ್ನನು ಕ್ಷೇಮವೃದ್ಧಿಯೊಡನೆ ಘೋರ ಯುದ್ಧ ಮಾಡಿ ಅವನನ್ನು ಓಡಿಸಿದನು. ಸಾಂಬನು ವೇಗವಂತನೊಡನೆ ಯುದ್ಧಮಾಡಿ ಅವನನ್ನು ಸಂಹರಿಸಿದನು. ಚಾರುದೇಷ್ಣನು ವಿವಿಂಧ್ಯನನ್ನು ಕೊಂದನು. ಕೋಪಗೊಂಡ ಸಾಲ್ವನು ಪ್ರದ್ಯುಮ್ನನೊಡನೆ ಕದನಕ್ಕಿಳಿದನು. ಸಾಲ್ವನ ಪರಾಕ್ರಮಕ್ಕೆ ಹೆದರಿದ ಯಾದವರಿಗೆ ಪ್ರದ್ಯುಮ್ನ ಒಂದು ಹಂತದಲ್ಲಿ ಅಭಯಕೊಟ್ಟವನಾದರೂ ತಾನೂ ಒಮ್ಮೆ ಮೂರ್ಛೆಗೊಂಡನು. ಪ್ರದ್ಯುಮ್ನನ ಸಾರಥಿ ದಾರುಕ ರಣರಂಗದಿಂದ ವಾಪಾಸು ಹೋಗುತ್ತಿರಲು ಪ್ರದ್ಯುಮ್ನನಿಗೆ ಎಚ್ಚರ ಬಂದು ದಾರುಕನನ್ನು ಆಕ್ಷೇಪಿಸಿ ಪುನಹ ಯುದ್ಧಕ್ಕೆ ಬಂದನು. ಸಾಲ್ವನು ಬಿಟ್ಟ ಎಲ್ಲ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದ ಸೋಲಿಸಿ ಸಾಲ್ವನನ್ನು ಕೊಲ್ಲಲು ಕೃಷ್ಣ ಕೊಟ್ಟ ಒಂದು ಅಮೋಘ

ಬಾಣವನ್ನು ಹೂಡಿದಾಗ ಅಶರೀರವಾಣಿ ಮೂಲಕ ವಾಯುದೇವ 'ಪ್ರದ್ಯುಮ್ನ ಈ ಬಾಣ ಅಮೋಘ, ಇದನ್ನು ಬಿಡಬೇಡ. ಕೃಷ್ಣಾವತಾರದಲ್ಲಿ ಸಾಲ್ವನನ್ನು ಕೊಲ್ಲಲು ನಾರಾಯಣನಿಂದ ಸಂಕಲ್ಪಿಸಲ್ಪಟ್ಟಿದೆ. ಆದ್ದರಿಂದ ಪರಶುರಾಮನು ಹಿಂದೆ ಇವನನ್ನು ಸೋಲಿಸಿ ಓಡಿಸಿದನೇ ಹೊರತು ಕೊಲ್ಲಲಿಲ್ಲ' ಎಂದು ಹೇಳಲು ಪ್ರದ್ಯುಮ್ನನು ಆ ಬಾಣವನ್ನು ಪುನಃ ಬತ್ತಳಿಕೆಗೆ ಸೇರಿಸಿದ. ಆಗಲೇ ಘಾಸಿಗೊಂಡ ಸಾಲ್ವನು ರಥದಿಂದ ಹೊರಬಂದು ವಿಮಾನವೇರಿ (ಭೌಮ) 'ಬಾಲಕನೊಡನೆ ಕಲಹದಿಂದೇನು ಪ್ರಯೋಜನ? ಕೃಷ್ಣನೊಂದಿಗೆ ಯುದ್ಧ ಯೋಗ್ಯ' ಎಂದು ತನ್ನ ರಾಜ್ಯಕ್ಕೆ ವಾಪಸ್ಸಾದ.

ಪ್ರದ್ಯುಮ್ನ ಸಾಂಬ ಚಾರುದೇಷ್ಣರು ಸಾಲ್ವನ ಸೈನ್ಯವನ್ನು ಸಂಹರಿಸಿ, ತಾವೂ ತಮ್ಮ ನಗರಕ್ಕೆ ಆನಂದದಿಂದ ವಾಪಸ್ಸಾದರು.

ಕೃಷ್ಣನು ಈ ವಿಷಯ ಮುಂದುವರೆಸುತ್ತಾ 'ಧರ್ಮರಾಜ! ನಾನೂ ಆ ಹೊತ್ತಿಗೆ ದ್ವಾರಕೆಗೆ ಬಂದೆ. ಎಲ್ಲ ವಿಷಯ ತಿಳಿದು ಸಾಲ್ವನನ್ನು ಸಂಹಾರ ಮಾಡುವ ಪ್ರತಿಜ್ಞೆಗೈದು ಎಲ್ಲರಿಗೂ ಅಭಯಕೊಟ್ಟು ಸಾಲ್ವನ ರಾಜ್ಯಕ್ಕೆ ನಡೆದೆ. ಅವನು ಸಾಗರದ ಮೇಲೆ ತನ್ನ ಪಟ್ಟಣದಲ್ಲಿ ಭೌಮ ವಿಮಾನದಲ್ಲಿರುವುದನ್ನು ನಾನು ನೋಡಿದೆ. ಆವನು ನನ್ನ ಮೇಲೆ ಬಿಟ್ಟ ಅಸ್ತ್ರಗಳನ್ನೆಲ್ಲಾ ನಿವಾರಿಸಿದೆ. ಸಾಲ್ವನಾದರೋ ನನ್ನ ಮೇಲೆ ಮಾಯಾ ಯುದ್ಧವನ್ನೇ ಸಾರಿದ. ನನ್ನ ತಂದೆ ವಸುದೇವನನ್ನು ಕೊಂದು ಆತನ ಶವವನ್ನೇ ರಣರಂಗದಲ್ಲಿ ನನ್ನ ಬಳಿಯೇ ತಂದು ತೋರಿಸಿ, ಮಾಯಾಜಾಲ ಮಾಡಿದ ತೋರಿಸಿದ. ಆತನ ಆ ಮಾಯಾಜಾಲವನ್ನು ಲೀಲಾಜಾಲವಾಗಿ ವಿಜ್ಞಾನಾಸ್ತ್ರ ಪ್ರಯೋಗಿಸಿ ನಾಶ ಮಾಡಿದೆ. ಅವನ ವಿಮಾನವನ್ನೂ ಸಮುದ್ರದಲ್ಲಿ ಸುದರ್ಶನ ಪ್ರಯೋಗಮಾಡಿ ಬೀಳಿಸಿದೆ. ನಂತರ ಅವನು ರಥದಲ್ಲಿ ಕುಳಿತು ಯದ್ಧಮಾಡಲು ಅವನ ಕೈಗಳನ್ನು ಬಾಣದಿಂದ ಕತ್ತರಿಸಿ ರಥವನ್ನು ಗದೆಯಿಂದ ತುಂಡುತುಂಡಾಗಿ ಮಾಡಿ ಅವನ ಶಿರಸ್ಸನ್ನು ಚಕ್ರದಿಂದ ಕತ್ತರಿಸಿ ಸಂಹರಿಸಿದೆ. ನಂತರ ಬ್ರಹ್ಮಾದಿ ದೇವತೆಗಳಿಂದ ಸ್ತುತಿಸಿಗೊಂಡ ನಾನು ದ್ವಾರಕೆಗೆ ಹೋದೆ.'

'ಇದೆಲ್ಲ ನಡೆದಾಗಲೇ ನೀವು ದುರ್ದ್ಯೂತದಲ್ಲಿ ಸೋತು ಅರಣ್ಯಕ್ಕೆ ಬಂದ ಸಮಾಚಾರ ತಿಳಿಯಿತು. ನಾನು ದ್ವಾರಕೆಯಲ್ಲಿ ಇಲ್ಲದುದರಿಂದ ನಿಮ್ಮ ಬಳಿಗೆ ಬರಲು ಆಗಲಿಲ್ಲ. ಆದ್ದರಿಂದ ನಿಮಗೆ ಈ ವ್ಯಸನ ಉಂಟಾಯಿತು. ನಾನು ದ್ವಾರಕೆಯಲ್ಲಿದ್ದಿದ್ದರೆ ನಿಮಗೆ ಈ ಪರಿಸ್ಥಿತಿ ಬರುತ್ತಿರಲಿಲ್ಲ. ನಾನು ನಿಮ್ಮ ಬಳಿ ಬಂದು ನಿಮ್ಮನ್ನು ದ್ಯೂತದಿಂದ ಪಾರು ಮಾಡುತ್ತಿದ್ದೆ' ಎಂದ.

## ಸಂದೇಶಗಳು – ವಿವರಣೆಗಳು

ಸರ್ವತ್ರ ವ್ಯಾಪ್ತನಾದ ಕೃಷ್ಣನು ಎಲ್ಲೆಡೆ ಇರುವಾಗ ಕೃಷ್ಣನ ಅಸನ್ನಿಧಾನ [೧]ಕಾರಣವೆಂದು ಹೇಳುವುದು ಸರಿಯಲ್ಲ. ಧರ್ಮರಾಜನಲ್ಲಿ ರಾಜಸೂಯಯಾಗದಲ್ಲಿ ಸಂಗೃಹಿತವಾದ ಹೆಚ್ಚಿನ ಪುಣ್ಯವು ಇತರ ಪಾಂಡವರಿಗೆ ದ್ರೌಪದಿಗೆ ವರ್ಗಾಯಿಸಲೋಸುಗವೇ ಉದ್ದೇಶಪೂರ್ವಕವಾಗಿ ಅಸುರಮೋಹಕ್ಕಾಗಿ ಕೃಷ್ಣನು ಹೀಗೆ ನುಡಿದಿದ್ದಾನೆ. ದುರ್ಯೋಧನಾದಿಗಳು ಇನ್ನೂ ಹೆಚ್ಚು ಪಾಪ ಮಾಡಿ ನಾಶವಾಗಲೂ ಕೃಷ್ಣನು ಅಲ್ಲಿಗೆ ಹೋಗಲಿಲ್ಲ. ರಾಜಸೂಯಯಾಗ ಮಾಡುವಾಗ ಕೃಷ್ಣನ ಸಲಹೆ ಕೇಳಿದ ಧರ್ಮರಾಜ ದ್ಯೂತ ಆಡಬೇಕೆ? ಬೇಡವೇ? ಎಂದು ಕೃಷ್ಣನನ್ನು ಸಲಹೆ ಕೇಳಲೇ ಇಲ್ಲ ಎಂಬುದು ಅತನ ಪ್ರಾರಬ್ಧಕರ್ಮವೇ ಸರಿ. ಅಂತೆಯೇ ಕೃಷ್ಣನು ಧರ್ಮರಾಜನ ಸಹಾಯಕ್ಕೂ ಬರಲಿಲ್ಲ. '**ನಾಪೃಷ್ಟಃ ಕಸ್ಯಚಿತ್ ಬ್ರೂಯಾತ್**' ಎಂಬ ಧರ್ಮಸೂಕ್ತಿ ಇಲ್ಲಿ ಅಡಗಿದೆ.

ರುದ್ರವರದಿಂದ ಅವಧ್ಯನಾದ ಭೌಮನ ಸಂಹಾರವನ್ನು ಕೃಷ್ಣನು ಮಾಡಿದುದರಿಂದ ಕೃಷ್ಣನು 'ರುದ್ರೋತ್ತಮ' ಎಂಬ ಮುಖ್ಯ ಸಂದೇಶವು ಇಲ್ಲಿ ಅಡಗಿದೆ.

ಕೃಷ್ಣನು ಭಗವಂತ. ಸರ್ವದೇಶಕಾಲಗಳಲ್ಲಿರುವವನಿಗೆ ನಿರ್ದಿಷ್ಟ ದೇಶಕಾಲಗಳಲ್ಲಿಲ್ಲ-ವೆಂದಾಗಲೀ, ಆದರಿಂದ ಅಸಾಮರ್ಥ್ಯಾದಿಗಳಾಗಲೀ ಹೇಗೆ ತಾನೇ ಹೇಳಲು ಸಾಧ್ಯ?

ಕೃಷ್ಣನು ಹಾಗೆ ಹೇಳಿ ಧರ್ಮರಾಜನಂತಹ ಜ್ಞಾನಿಯನ್ನೂ ಮೋಹಗೊಳಿಸಿದ(**ಮುಹ್ಯಂತಿ ಯಂ ಸೂರಯಃ** – ಭಾಗವತ. ೧/೧/೧) ಎಂಬ ಸಂದೇಶವನ್ನು ಇಲ್ಲಿ ಗ್ರಹಿಸಬೇಕು ಎಂದು ಶ್ರೀಮದಾಚಾರ್ಯರು ಸೂಚಿಸುತ್ತಾರೆ.

*****

---

೧ ಯದ್ಯಹಂ ದ್ವಾರಕಾಯಾಂ ಸ್ಯಾಂ ರಾಜನ್ ಸನ್ನಿಹಿತಃ ಪುರಾ।
ಆಗಚ್ಛೇಯಮಹಂ ದ್ಯೂತಮನಾಹೂತೋಽಪಿ ಕೌರವೈಃ॥ – ವನಪರ್ವ(೧೩/೧,೨)

೨ ಸನ್ನಿಧಾನೇಽಥವಾ ದೂರೇ ಕಾಲವ್ಯವಹಿತೇಽಪಿ ವಾ।
ಸ್ವಭಾವಾದ್ವಾ ವ್ಯವಹಿತೇ ವಸ್ತುವ್ಯವಹಿತೇಽಪಿ ವಾ॥
ನಾಶಕ್ತಿರ್ವಿದ್ಯತೇ ವಿಷ್ಣೋಃ ನಿತ್ಯಾವ್ಯವಹಿತತ್ವತಃ।
ತಥಾಪಿ ನರಲೋಕಸ್ಯ ಕರೋತ್ಯನುಕೃತಿಂ ಪ್ರಭುಃ॥
ದುಷ್ಟಾನಾಂ ದೋಷವೃದ್ಧ್ಯರ್ಥಂ ಭೀಮಾದೀನಾಂ ಗುಣೋನ್ನತೇಃ।
ಯುಧಿಷ್ಠಿರೇಽತಿವೃದ್ಧಂತು ರಾಜಸೂಯಾದಿ ಸಂಭವಮ್॥
ಧರ್ಮಂ ಚ ಸಂಕ್ರಾಮಯಿತುಂ ಕೃಷ್ಣಾಯಾಮನುಜೇಷು ಚ।
ಯೋಗ್ಯತಾಕ್ರಮತೋ ವಿಷ್ಣುರಿಚ್ಛಯೇತ್ಥಮಚೀಕ್ಲೃಪತ್॥ ಇತ್ಯಾದಿ।
– ಮ.ತಾ.ನಿ.(೨೨/೩೧-೩೬)

# [೧]ನಲೋಪಾಖ್ಯಾನಪರ್ವ

## ೨೯. ನಳೋಪಾಖ್ಯಾನ

ಪಾಂಡವರು ಅರಣ್ಯವಾಸದಲ್ಲಿರುವಾಗ ಮುಂದೆ ಆಗಲಿರುವ ಯುದ್ಧದಲ್ಲಿ ಕೌರವರನ್ನು ಎದುರಿಸಲು ಸಿದ್ಧತೆಗೋಸುಗ ಅರ್ಜುನನಿಗೆ ವೇದವ್ಯಾಸರು ಮಂತ್ರೋಪದೇಶವನ್ನು ಧರ್ಮರಾಜನ ಮೂಲಕ ಮಾಡಿಸಿದರು. ಅದರಂತೆ ಅರ್ಜುನನು ಮಹಾಸ್ತ್ರಗಳನ್ನು ಪಡೆಯಲು ಹೋಗಿ ರುದ್ರದೇವರಿಂದ ಪಾಶುಪತಾಸ್ತ್ರ ಹಾಗೂ ಇತರ ದೇವತೆಗಳಿಂದ ದಿವ್ಯಾಸ್ತ್ರಗಳನ್ನು ಪಡೆದನು.

ಇತ್ತ ಪಾಂಡವರು ಅರ್ಜುನನ ಬರವಿಗಾಗಿ ಕಾಯುತ್ತ ಶೋಕಿಸುತ್ತಿದ್ದರು. ಭೀಮನಂತೂ ಎನ್ನುತ್ತಾನೆ–

**ನಿದೇಶಾತ್ತೇ ಮಹಾರಾಜ ಗತೋಽಸೌ ಭರತರ್ಷಭ।**
**ಅರ್ಜುನಃ ಪಾಂಡುಪುತ್ರಾಣಾಂ ಯಸ್ಮಿನ್ ಪ್ರಾಣಾಃ ಪ್ರತಿಷ್ಠಿತಾಃ॥**

**- ವನಪರ್ವ (೫೨/೬)**

ಅಣ್ಣ! ಯಾರನ್ನು ಆಶ್ರಯಿಸಿ ನಮ್ಮ ಪ್ರಾಣಗಳು ಉಳಿದಿವೆಯೋ(ಒಂದು ವೇಳೆ) ಯಾರ ಅವಸಾನವಾದಲ್ಲಿ ಪಾಂಚಾಲರೂ, ವಾಸುದೇವಾದಿ ಯಾದವರೂ, ನಾವೂ ಪ್ರಾಣಬಿಡುವೆವೋ ಅಂತಹ ಅರ್ಜುನನು....' ಎಂದು ಉದ್ಗರಿಸಿ ಅರ್ಜುನನ ಅನಿವಾರ್ಯತೆಯನ್ನು ಕೊಂಡಾಡುತ್ತಾನೆ. ಇಷ್ಟೆಲ್ಲ ಆದುದು ನೀನು ದ್ಯೂತ ಆಡಿದುದರಿಂದ ಎಂದು ಅಣ್ಣನನ್ನು ಕ್ಷತ್ರಿಯ ಧರ್ಮದಂತೆ ನಡೆಯಲು ಹುರಿದುಂಬಿಸುತ್ತಾನೆ.

**'ನ ಹಿ ಧರ್ಮೋ ಮಹಾರಾಜ ಕ್ಷತ್ರಿಯಸ್ಯ ವನಾಶ್ರಯಃ' -ವನಪರ್ವ(೫೨/೧೫)**

ಕ್ಷತ್ರಿಯನಿಗೆ ವನದ ಬದುಕು ಧರ್ಮವಲ್ಲ ಎಂದು ಮುಂತಾಗಿ ಹೇಳುತ್ತಾ 'ಮೋಸ ಮಾಡಿದವರನ್ನು ಮೋಸ ಮಾಡುವುದರಿಂದಲೇ ಕೊಲ್ಲುವುದು ಧರ್ಮ' ಎಂದೂ ಹೇಳುತ್ತಾನೆ.

**'ನಿಕೃತ್ಯಾ ನಿಕೃತಿಪ್ರಜ್ಞಾ ಹಂತವ್ಯಾ ಇತಿ ನಿಶ್ಚಯಃ।' - ವನಪರ್ವ(೫೨/೨೨)**

---

೧ ವಿ.ಸೂ. : ಈ ಉಪಾಖ್ಯಾನವನ್ನು ಉಪಪರ್ವವನ್ನಾಗಿ ಔತ್ತರೇಯ ಹಾಗೂ ದಾಕ್ಷಿಣಾತ್ಯ ಪಾಠಗಳಲ್ಲಿ ಪರಿಗಣಿಸಲಾಗಿದೆ.

ಇವೆಲ್ಲವನ್ನೂ ಒಪ್ಪಿದ ಧರ್ಮರಾಜ ಹದಿಮೂರು ವರ್ಷಗಳ ನಂತರವೇ ದುರ್ಯೋಧನಾದಿಗಳನ್ನು ಸಂಹರಿಸೋಣ ಎಂದು ನುಡಿಯುತ್ತಿರುವಾಗ ಮಹರ್ಷಿ **ಬೃಹದಶ್ವರು** ಬರುತ್ತಾರೆ. ಅವರನ್ನು ಸತ್ಕರಿಸಿದ ಧರ್ಮರಾಜನು ತನ್ನ ಪರಿಸ್ಥಿತಿಯನ್ನು ನಿವೇದಿಸಿಕೊಳ್ಳುತ್ತಾನೆ[೨].

'ಜೂಜಾಟದಲ್ಲಿ ನಿಪುಣನಲ್ಲದ ನನ್ನನ್ನು ಕೌರವರು ಶಕುನಿಯ ಮೂಲಕ ಅದರಲ್ಲಿ ಸೋಲಿಸಿ, ನನ್ನ ರಾಜ್ಯ, ಕೋಶವನ್ನು ಸೆಳೆದುಕೊಂಡು ನಮ್ಮ ಪ್ರಾಣಗಳಿಗಿಂತ ಪ್ರಿಯಳಾದ ಏಕವಸ್ತ್ರಳಾದ ದ್ರೌಪದಿಯನ್ನು ಸಭೆಯಲ್ಲಿ ತಂದರು. ನಮ್ಮನ್ನು ಅರಣ್ಯಕ್ಕೆ ಅಟ್ಟಿದ್ದಾರೆ. ಕೌರವರ ಹಾಗೂ ಕರ್ಣನ ಕಠೋರ ಮಾತುಗಳು ನಮ್ಮನ್ನು ದುಃಖಿತರನ್ನಾಗಿ ಮಾಡಿವೆ. ನಮ್ಮ ಪ್ರಾಣ ಪ್ರಿಯ ಅರ್ಜುನನು ನಮ್ಮೊಡನೆ ಇಲ್ಲ, ಅವನ ವಿಯೋಗ ನಮ್ಮೆಲ್ಲರನ್ನು ದಹಿಸುತ್ತಿದೆ. ಅವನು ಅಸ್ತ್ರಗಳನ್ನು ಪಡೆದು ಬರುವುದನ್ನು ನಾನು ಯಾವಾಗ ನೋಡುತ್ತೇನೆ.'

ಮಹರ್ಷಿಗಳೇ ! ನೀವೇ ಹೇಳಿ, ನನಗಿಂತಲೂ ಹೆಚ್ಚು ಕಷ್ಟಪಟ್ಟ ರಾಜನನ್ನು ನೀವು ಈ ಭೂಲೋಕದಲ್ಲಿ ಎಲ್ಲಾದರೂ ಕೇಳಿದ್ದೀರಾ? ನೋಡಿದ್ದೀರಾ? ನನ್ನಷ್ಟು ದುಃಖಪಡುತ್ತಿರುವವರು ಬೇರೆ ಯಾರೂ ಇಲ್ಲವೆಂದೇ ನನ್ನ ಭಾವನೆಯಾಗಿದೆ' ಎಂದು ಧರ್ಮರಾಜ ನುಡಿದ[೧].

---

೧ ಅಸ್ತಿರಾಜಾ ಮಯಾಕಶ್ಚಿತ್ ಅಲ್ಪಭಾಗ್ಯತರೋ ಭುವಿ।
ಭವತಾ ದೃಷ್ಟಪೂರ್ವೋ ವಾ ಶ್ರುತಪೂರ್ವೋऽಪಿ ವಾಕ್ವಚಿತ್ ॥ - ವನಪರ್ವ (೫೨/೫೦)

೨ ಅರ್ಜುನನು ಪಾಶುಪತಾಸ್ತ್ರ ಪಡೆದು ಸ್ವರ್ಗದಲ್ಲಿದ್ದ ವಿಚಾರವನ್ನು ಧರ್ಮರಾಜನಿಗೆ ತಿಳಿಸಿದವರೇ ಬೃಹದಶ್ವರು. ಇವರಿಗೆ ಲೋಮಶ ಎಂಬ ನಾಮಾಂತರವಿರುವಂತೆ ತೋರುತ್ತದೆ. **ಕನಕದಾಸರು** ತಮ್ಮ ನಳಚರಿತ್ರೆಯಲ್ಲಿ ಲೋಮಶ ಮುನಿಗಳೆಂದು ಕರೆದಿದ್ದಾರೆ. 'ರ' ಮತ್ತು 'ಲ' ಕಾರಗಳಿಗೆ ಭೇದವಿಲ್ಲ. ಆದ್ದರಿಂದ ರೋಮಶವೆಂದರೆ ಲೋಮಶ. ಇವರೇ ಬೃಹದಶ್ವರು ಎಂದೆನಿಸುತ್ತದೆ.

ರಾಯರೊಳಗಗ್ಗಳೆಯ ನಾ ಕೌಂ-
ತೇಯನಿಗೆ ರೋಮಶ ಮಹಾಮುನಿ
ರಾಯ ವಿಸ್ತರಿಸಿದನು ನಳ ಭೂ ವರನ ಚರಿತೆಯನು ॥
ಎಲೆ ಮಹೀಪತಿ ನೀನಿನಿತು ಉ-
ಮ್ಮಳಿಸಲೇಕರಸುಗಳು ಪೂರ್ವದ
ನಳ ಹರಿಶ್ಚಂದ್ರಾದಿ ರಾಘವನೃಪತಿ ಹಳವುದಲಿ।
ಲಲನೆಯರ ತಾವಗಲಿ ಕಷ್ಟವ
ಬಳಸಿದರು ಅವರಂತೆ ನಿನಗುಪ-
ಟಳಗಳುಂಟೇ ಬರಿದೆ ಮನನೋಯದಿರು ನೀನೆಂದ ॥
ಪರಮ ಋಷಿಗಳ ನೆರವಿಯೇ ಸಭೆ
ಹರಿಯ ತಾರುಣ್ಯಾಂಬುಧಿಯೇ ಸಿರಿ
ನರ ವೃಕೋದರ ಮಾದ್ರಿತನಯರು ನಿನಗೆ ಬಾಹುಬಲ।

**ಆದಕ್ಕೆ ಬೃಹದಶ್ವರು 'ರಾಜನ್! ನಿನಗಿಂತಲೂ ದುಃಖ ಅನುಭವಿಸಿದ ರಾಜನಿದ್ದನು. ಆವನೇ ನಳಮಹಾರಾಜ' ಎಂದು ಉತ್ತರಿಸುತ್ತಾರೆ.**

**'ಯಸ್ತ್ವತ್ತೋ ದುಃಖಿತತರೋ ರಾಜಾऽऽಸೀತ್ ಪೃಥಿವೀಪತೇ ।**

**- ವನಪರ್ವ (೫೨/೫೨)**

**'ಆಸೀದ್ರಾಜಾ ನಲೋ ನಾಮ ವೀರಸೇನಸುತೋ ಬಲೀ ॥' - ೫೩/೧**

ಅವನು ನಿಷಧದೇಶದರಾಜ, ವೀರಸೇನನ ಮಗ. ನಳನನ್ನು ಆತನ ಸಹೋದರ ಪುಷ್ಕರನೇ ಮೋಸದಿಂದ ದ್ಯೂತದಲ್ಲಿ ಸೋಲಿಸಿ ಅರಣ್ಯಕ್ಕೆ ಅಟ್ಟಿದ ದ್ರೋಹಿ. ನಳನು ಹೆಂಡತಿಯೊಡನೆ ದುಃಖಿತನಾಗಿ ಅರಣ್ಯದಲ್ಲಿ ವಾಸಿಸಿದ. ಅವನ ಜೊತೆಗೆ ದಾಸ, ದಾಸಿಯರಾಗಲಿ, ಸಹೋದರರಾಗಲೀ, ಬಂಧುಗಳಾಗಲೀ ಯಾರೂ ಇರಲಿಲ್ಲ. ನಿನಗಾದರೋ ಲೋಕವೀರರಾದ ಭೀಮಾರ್ಜುನರಂತಹ ಸಹೋದರರೂ, ಸಾವಿರಾರೂ ಬ್ರಹ್ಮರ್ಷಿ ಸದೃಶರಾದ ಋಷಿ, ಮುನಿ, ಸನ್ಯಾಸಿಗಳು ಜೊತೆಯಲ್ಲಿಯೇ ಇದ್ದಾರೆ. ನೀನು ತುಂಬಾ ಭಾಗ್ಯವಂತ. ಆದ್ದರಿಂದ ದುಃಖಿಸಬೇಡ' ಎಂದು ಸಮಾಧಾನ ಪಡಿಸುತ್ತಾರೆ.

ತನಗಿಂತಲೂ ಭಾಗ್ಯಹೀನನಾದ ನಲನೆಂಬ ಮಹಾರಾಜನಿದ್ದನು ಎಂಬ ವಿಷಯ ಕೇಳಿದ ಧರ್ಮರಾಜನು ಮಹಾತ್ಮನಾದ ನಳಚರಿತ್ರೆಯನ್ನು ವಿಸ್ತಾರವಾಗಿ ನಿರೂಪಿಸಲು ಬೃಹದಶ್ವರನ್ನು ಪ್ರಾರ್ಥಿಸಿದನು.

ಬೃಹದಶ್ವ ಮುನಿಗಳು ಮುಂದುವರೆದು ಹೇಳಿದರು. 'ನಿಷಧ ದೇಶದ ರಾಜನಾದ ನಳನು ಸದ್ಗುಣ ಸಂಪನ್ನನೂ, ಮಹಾರೂಪವಂತನೂ, ಅಶ್ವವಿದ್ಯೆ ಬಲ್ಲವನೂ, ದೇವೇಂದ್ರನಂತೆ ಎಲ್ಲ ರಾಜರಿಗೂ ರಾಜನಾಗಿಯೂ, ಬ್ರಾಹ್ಮಣ ಪ್ರಿಯನೂ, ವೇದಾಧ್ಯಯನ ಸಂಪನ್ನನೂ, ಸತ್ಯವಾದಿಯೂ, ಅಕ್ಷೌಹಿಣೀ ಸೇನಾರಾಜನೂ ಆಗಿದ್ದನು. ಇಂದ್ರಿಯ ನಿಗ್ರಹ ಸಂಪತ್ತುಳ್ಳವನಾಗುವುದರೊಡನೆ ಸ್ತ್ರೀಯರು ಬಯಸುವ ರೂಪಸಂಪನ್ನನಾಗಿಯೂ, ಧನುರ್ವೇದನಿಪುಣನಾಗಿಯೂ, ಲೋಕರಕ್ಷಣೆಯಲ್ಲಿ ಮನುವಿನಂತೆ ಇದ್ದನು. ಜೊತೆಗೆ ಪಗಡೆಯಾಟವು ಆತನಿಗೆ ಪ್ರಿಯವಾಗಿದ್ದಿತು.'

ಇದೇ ವೇಳೆ ವಿದರ್ಭ ದೇಶದಲ್ಲಿ ಮಹಾಪರಾಕ್ರಮಶಾಲಿಯಾದ, ಸರ್ವಗುಣಸಂಪನ್ನನಾದ **ಭೀಮ**ನೆಂಬ ರಾಜನಿದ್ದನು. ಮಕ್ಕಳ ಪ್ರೇಮಿಯಾದ ಆತನಿಗೆ ಮಕ್ಕಳೇ ಇರಲಿಲ್ಲ.

ಅದೇ ಸಮಯಕ್ಕೆ ಭೀಮರಾಜನಲ್ಲಿಗೆ **ದಮನ** ಎಂಬ ಬ್ರಹ್ಮರ್ಷಿಗಳು ಬಂದರು. ಸಂತತಿ ಬಯಸುತ್ತಿದ್ದ ಭೀಮ ರಾಜನು ಅವರನ್ನು ಅನೇಕ ರೀತಿಯಿಂದ ಮಹಾರಾಣಿಯೊಂದಿಗೆ

ತರುಣಿಯೇ ಭೋಗ್ಯೈಕಸಂಪ-
ತ್ತರುತರದ ವನರಾಜ್ಯ ನಿನಗಿಂ-
ತಿರಲು ಸರಿಯಾರರಸ ಚಿಂತಿಸಲೇಕೆ ನೀನೆಂದ ॥ - ನಳಚರಿತ್ರೆ (೧/೧೫,೧೬)

ಸೇವೆಗೈದನು. ಅವರ ಸತ್ಕಾರದಿಂದ ಪ್ರೀತರಾದ ಮುನಿಗಳು ಪ್ರಸನ್ನರಾಗಿ ಒಬ್ಬ ಮಗಳು (ಕನ್ಯಾರತ್ನ) ಹಾಗೂ ಮೂವರು ಪುತ್ರರು ಆಗಲೆಂದು ಅನುಗ್ರಹಿಸಿದರು. ಅಂತೆಯೇ ರಾಜದಂಪತಿಗಳಿಗೆ **ದಮಯಂತಿ** ಎಂಬ ಕನ್ಯೆಯೂ, **ದಮ**, **ದಾಂತ** ಹಾಗೂ **ದಮನ** ಎಂಬ ಮೂವರು ಪುತ್ರರು ಜನಿಸಿದರು.

ಅವರಲ್ಲಿ ದಮಯಂತಿಯು ತನ್ನ ರೂಪ, ತೇಜಸ್ಸು ಕೀರ್ತಿಗಳಿಂದ ಲೋಕವಿಖ್ಯಾತಳಾದಳು. ಪ್ರೌಢಳಾದ ಆಕೆಯನ್ನು ನೂರಾರು ದಾಸಿಯರು ಶಚಿಯನ್ನು ಸೇವಿಸುವಂತೆ ಸೇವಿಸಿದರು.

**ಅತೀವರೂಪಸಂಪನ್ನಾ [1]ಶ್ರೀರಿವಾಯತಲೋಚನಾ ।**
**ನ ದೇವೇಷು ನ ಯಕ್ಷೇಷು ತಾದೃಗ್ರೂಪವತೀ ಕ್ವಚಿತ್ ॥**
**ಮಾನುಷೇಷ್ವಪಿ ಚಾನ್ಯೇಷು ದೃಷ್ಟಪೂರ್ವಾಥವಾ ಶ್ರುತಾ ।**
**ಚಿತ್ತ ಪ್ರಸಾದನೀ ಬಾಲಾ ದೇವಾನಾಮಪಿ ಸುಂದರೀ ॥**

**- ವನಪರ್ವ (೫೩/೧೩,೧೪)**

ಲಕ್ಷ್ಮಿಯಂತೆ ವಿಶಾಲ ಲೋಚನೆಯಾಗಿದ್ದ ದಮಯಂತಿ ದೇವತೆಗಳೂ ಕಾಮಿಸುವ ರೂಪಸಿಯಾಗಿದ್ದಳು. ನಳನು ಭೂಲೋಕದಲ್ಲಿ ಅಪ್ರತಿಮನಾಗಿದ್ದು ರೂಪದಲ್ಲಿ ಮನ್ಮಥನ ಪ್ರತಿರೂಪನಾಗಿದ್ದನು.

ನಳದಮಯಂತಿಯರ ರೂಪಲಾವಣ್ಯ ಗುಣಗಳನ್ನು ಕವಿಗಳೂ, ಆಯಾದೇಶದ ಜನರು (ವಾರ್ತಾಚಾರರು) ಅವರ ಬಳಿಗೆ ಹೋಗಿ ಕೊಂಡಾಡಿದರು.

ನಳದಮಯಂತಿಯರು ದಂಪತಿಗಳಾಗಲು ಯೋಗ್ಯರೆಂದು ಜನ ಬಯಸುತ್ತಿದ್ದರು.

ಹೀಗೆ ನಳ ದಮಯಂತಿಯರು ಕೇವಲ ಜನರ ವಾರ್ತೆಗಳಿಂದಲೇ ಆಕರ್ಷಿತರಾಗಿ ಪರಸ್ಪರ ಪ್ರೇಮಿಸತೊಡಗಿ, ತಮ್ಮ ತಮ್ಮಲ್ಲಿಯೇ ವಿವಾಹವಾಗಲು ನಿಶ್ಚಯಿಸಿದರು.

ನಳ, ದಮಯಂತಿಯ ಮೇಲಿನ ಕಾಮಾಗ್ನಿಯಿಂದ ದಹಿಸಲ್ಪಡುತ್ತಿದ್ದ. ಅದನ್ನು ತಡೆಯಲು ಅಸಮರ್ಥನಾದ. ಒಂದು ದಿನ ತನ್ನ ಅಂತಃಪುರ ಸಮೀಪದ ವನದಲ್ಲಿ ಸಂಚರಿಸುತ್ತಿರಲು, ಅಲ್ಲಿಯೇ ಸಂಚರಿಸುತ್ತಿದ್ದ ಹಂಸಪಕ್ಷಿಗಳಲ್ಲಿ ಒಂದನ್ನು ಹಿಡಿದ. ಬೆದರಿದ ಹಂಸ ನಳನಿಗೆ 'ರಾಜನ್! ನನ್ನನ್ನು ಕೊಲ್ಲಬೇಡ. ನಿನ್ನನ್ನೇ ಮದುವೆಯಾಗಲು ದಮಯಂತಿಗೆ ನಾನು ತಿಳಿಸುತ್ತೇನೆ' ಎಂದಿತು. ನಳ ಆ ಹಂಸವನ್ನು ಬಿಟ್ಟ. ಹಂಸವು ನೇರವಾಗಿ ದಮಯಂತಿ ಬಳಿಗೆ ಹೋಗಿ ಮನುಷ್ಯರಂತೆ ಮಾತನಾಡುತ್ತಾ ಎಂದಿತು. 'ನಳನು ನಿಷಾಧಾಧಿಪ, ರೂಪದಲ್ಲಿ ಅಶ್ವಿನಿದೇವತೆ, ನೀನು ಅವನನ್ನು ವರಿಸಿದೆಯಾದರೆ ನಿನ್ನ ಜನ್ಮ ಸಫಲ, ನೀನು ನಾರಿಮಣಿ, ನಳ ಮನುಷ್ಯರಲ್ಲಿಯೇ ಶ್ರೇಷ್ಠ'

---

೧ ದಮಯಂತಿಯು ಲಕ್ಷ್ಮೀಯಂತೆ ಎಂಬ ಉಪಮೆಯು ಉಚ್ಚೋಪಮಾಲಂಕಾರ ದೃಷ್ಟಿಯಿಂದ, ಅದು ವಾಸ್ತವ ಅಲ್ಲ

**ವಿಶಿಷ್ಟಯಾ ವಿಶಿಷ್ಟೇನ ಸಂಗಮೋ ಗುಣವಾನ್ ಭವೇತ್'**

**- ವನಪರ್ವ(೫೩/೩೧)**

ವಿಶಿಷ್ಟ (ರೂಪಗಳುಳ್ಳವ)ನೊಡನೆ ವಿಶಿಷ್ಟ (ರೂಪಲಾವಣ್ಯಗುಣವಿರುವ)ಳಾದ ನಿನ್ನ ಸಮಾಗಮವು ಉತ್ತಮ ಫಲದಾಯಕವಾಗುತ್ತದೆ. ಅದೊಂದು ಉತ್ತಮ ಜೋಡಿ.

ಇದನ್ನು ಕೇಳಿದ ದಮಯಂತಿಗೆ ಆದ ಆನಂದ ಅಷ್ಟಿಷ್ಟಲ್ಲ. ತನ್ನ ಸಮ್ಮತಿಯನ್ನು ಅದೇ ಹಂಸದ ಮೂಲಕ ನಳನಿಗೆ ತಿಳಿಸಿದಳು. ಹಂಸ ನಳನಿಗೆ ದಮಯಂತಿಯ ಪ್ರೇಮ ಸಮ್ಮತಿ ತಿಳಿಸಿ ಮತ್ತೇ ದಮಯಂತಿಗೆ ನಳನ ಮರು ಸಂದೇಶ ತಲುಪಿಸಿತು.

ಹೀಗೆ ನಳದಮಯಂತಿಯರ ಪ್ರೇಮಾಂಕುರ ಹಂಸ ದೌತ್ಯದಿಂದ ಸಫಲವಾಯಿತು.

**ಗುಣದೊಳತಿಶೀಲದಲಿ ಮಾತಿನ**
**ಭಣಿತಿಯಲಿ ಗಾಂಭೀರ್ಯದಲಿ ವಿಶ-**
**ರಣದಲನುಪಮ ವಿದ್ಯೆಯಲಿ ಗುರುದೈವಭಕ್ತಿಯಲಿ।**
**.......... ಶರ್ವಾಣಿರತಿಯರಿ-**
**ಗೆಣೆಯೆನಿಪ ಸುಂದರಿಗೆ ಮಿಕ್ಕಿನ**
**ಬಣಗು ಸತಿಯರು ಸರಿಯೆ ಲೋಕದೊಳೆಂದನಾ ಮುನಿಪ॥**

**.............. ನಳನೃಪನ**
**ಶೀಲವನು ಸೌಂದರ್ಯ ವಿಭವ ವಿ-**
**ಶಾಲಮತಿ ಲಾವಣ್ಯ ರೂಪಗು-**
**ಣಾಳಿಗಳ ವಿಸ್ತರಿಸಿ ಕೊಂಡಾಡಿದರು ಕವಿ ಜನರು। - ನಳಚರಿತ್ರೆ(೧/೩೪,೩೫)**

ಹಂಸಪಕ್ಷಿಯ ದೌತ್ಯದಿಂದ ನಳನೊಡನೆ ವಿವಾಹದ ಕನಸನ್ನು ಹೊತ್ತ ದಮಯಂತಿಯು ದಿನೇ ದಿನೇ ನಳನ ಚಿಂತೆಯಲ್ಲಿ ಕೃಶಳಾಗುತ್ತಾ ಬಿಳುಚಿಕೊಂಡಳು (ನಿಸ್ತೇಜಳಾದಳು). ದೀನಳಾಗಿ ನಳನನ್ನೇ ಧ್ಯಾನಿಸುತ್ತಾ ಆಕಾಶದ ಕಡೆಗೆ ನೋಡುತ್ತಾ ನಿದ್ದೆ, ಹಸಿವು, ನೀರಡಿಕೆಗಳನ್ನು ಬಿಟ್ಟಳು. ರಾಜಭೋಗವಂತೂ ಆಕೆಯಿಂದ ದೂರವಾಯಿತು. ಹಗಲು, ರಾತ್ರಿ ನಳನನ್ನೇ ಕೂಗಿ ಕರೆಯುತ್ತಾ ನಿದ್ರೆಯನ್ನೂ ತೊರೆದಳು. ವಿರಹಾಗ್ನಿ ಆಕೆಯನ್ನು ದಹಿಸಲಾರಂಭಿಸಿತು.

ದಮಯಂತಿಯ ಈ ಪರಿಸ್ಥಿತಿಯನ್ನು ಗಮನಿಸಿದ ಇಂಗಿತಜ್ಞರಾದ ಆಕೆಯ ಗೆಳತಿಯರು ಆಕೆಯ ತಂದೆ ಭೀಮ ರಾಜನ ಗಮನಕ್ಕೆ ತಂದರು[೧].

---

೧ 'ನ ಶಯ್ಯಾಸನ ಭೋಗೇಷು ರತಿಂ ವಿಂದತಿ ಕರ್ಹಿಚಿತ್।
ನ ನಕ್ತಂ ನ ದಿವಾ ಶೇತೇ ಹಾಹೇತಿ ರುದತೀ ಪುನಃ॥ - ವನಪರ್ವ (೫೪/೪)
ಅತ್ತಲಾ ದಮಯಂತಿ ನಳನೊಳು
ಚಿತ್ತವಿಟ್ಟಳು ನೃಪಗೆ ವಿರಹವು

ಮಗಳ ಯೌವನಾವಸ್ಥೆಯ ಪರಿಣಾಮದಿಂದ ಉದ್ಭೂತವಾದ ಈ ದೈನ್ಯಾವಸ್ಥೆಯನ್ನರಿತು ಭೀಮರಾಜನು ಕೂಡಲೆ ದಮಯಂತಿಯ ಸ್ವಯಂವರ ಘೋಷಣೆಗೈದನು. ಇದನ್ನು ಕೇಳಿದ ಎಲ್ಲ ರಾಜರು ಅಲಂಕೃತರಾಗಿ ಚತುರಂಗ ಸೈನ್ಯ ವೈಭವದೊಂದಿಗೆ ವಿದರ್ಭರಾಜ್ಯಕ್ಕೆ (ಭೀಮರಾಜನ ರಾಜಧಾನಿಗೆ) ಆಗಮಿಸಿದರು. ಆಗಮಿಸಿದ ಕನ್ಯಾಪೇಕ್ಷಿಗಳಾದ ರಾಜಕುಮಾರರನ್ನು ಯಥೋಚಿತವಾಗಿ ಸತ್ಕರಿಸಿದನು ಭೀಮರಾಜ.

ಇದೇ ವೇಳೆಗೆ ನಾರದರು ಮತ್ತು ಪರ್ವತ ಮಹರ್ಷಿಗಳು ದೇವರಾಜನ ಭವನಕ್ಕೆ ಹೋದರು. ಇಂದ್ರನಿಂದ ಸತ್ಕೃತರಾದರು. ಭೂಲೋಕದ ರಾಜರ ಕ್ಷೇಮಸಮಾಚಾರ ತಿಳಿಸಿದಾಗ ಇಂದ್ರನು 'ಇತ್ತೀಚಿಗೆ ಸ್ವರ್ಗಲೋಕಕ್ಕೆ ಯಾವುದೇ ರಾಜರೂ ಯುದ್ಧ ಮಾಡಿ ರಣರಂಗದಲ್ಲಿ ಮಡಿದು ಸ್ವರ್ಗ ಸುಖ ಭೋಗಿಸಲು ಬರುತ್ತಿಲ್ಲ ಕಾರಣವೇನು?' ಎಂದನು. ಅದಕ್ಕೆ ನಾರದರು 'ಭೂಲೋಕದಲ್ಲಿ ಸದ್ಯ ದಮಯಂತಿ ಸ್ವಯಂವರದಲ್ಲಿ ಭಾಗವಹಿಸಲು ನಿರತರಾಗಿದ್ದಾರೆ. ಅವರಿಗೆ ಯುದ್ಧದ ಬಯಕೆ ಇಲ್ಲ' ಎಂದರು. ಅದೇ ವೇಳೆಗೆ ಅಗ್ನಿ, ಯಮ, ವರುಣರು ಇಂದ್ರನ ಬಳಿಗೆ ಬಂದು ಸ್ವಯಂವರ ವಿಷಯವನ್ನು ಕೇಳಿ 'ನಾವೂ ಸ್ವಯಂವರಕ್ಕೆ ಹೋಗೋಣ' ಎಂದರು. ಇಂದ್ರನೂ ಸಮ್ಮತಿಸಿದ. ಹೀಗೆ **ಇಂದ್ರಾಗ್ನಿಯಮವರುಣರು ವಿದರ್ಭದೇಶಕ್ಕೆ (ದಮಯಂತಿಯನ್ನು ವರಿಸಲು)** ಹೊರಟರು, ಪರೀಕ್ಷಿಸಲು.

ಇದೇ ಸಮಯಕ್ಕೆ ದಮಯಂತಿಯಲ್ಲಿ ಅನುರಕ್ತನಾದ ನಳನು ಹೋಗುತ್ತಿದ್ದನು. ಇದನ್ನು ಗಮನಿಸಿದ ದೇವತೆಗಳು ಆಕಾಶದಿಂದ ಕೆಳಗಿಳಿದು ರೂಪದಿಂದ ಮೂರ್ತಿವೆತ್ತ ಮನ್ಮಥನಂತಿದ್ದ ನಳನನ್ನು ನೋಡಿ ಆಶ್ಚರ್ಯ ಚಕಿತರಾಗಿ ನುಡಿದರು. 'ರಾಜನ್! ನೀನು ಸತ್ಯವ್ರತ, ನಮ್ಮ ದೂತನಾಗಿ ನೀನು ನಮಗೆ ಸಹಾಯ ಮಾಡೆಂದರು' ನಳನು ಕೂಡಲೇ ಒಪ್ಪಿ 'ನೀವಾರು?' ಎಂದು ನಂತರ ಕೇಳಿದನು. ಅದಕ್ಕೆ ಇಂದ್ರನು 'ರಾಜನ್! ನಾವು ಇಂದ್ರ, ಅಗ್ನಿ, ಯಮ, ವರುಣರೆಂಬ ದಿಕ್ಪಾಲಕರು. ದಮಯಂತಿಯ ಸಲುವಾಗಿ ಬಂದಿದ್ದೇವೆ.

---

ಹೊತ್ತಿತಾಕೆಯ ಮೆಲೆ ಇರ್ವರಿಗಾಯ್ತು ಸಂತಾಪ।
ಚಿತ್ತಜನು ಪಾತಕನು ವಿರಹವ
ಹೊತ್ತಿಸಿದನಿಬ್ಬರಿಗೆ ಮದನನ
ಹೆತ್ತವನು ವರಪುರದರಸ ಚೆನ್ನಿಗರಾಯ ಕರುಣಿಸಿದ। - ನಳಚರಿತ್ರೆ (೨/೪೯)

.....................
..............ಸತಿಗೆ ನೃ-
ಪಾಲನಂಗವು ಗೋಚರಿಸಲೆಂತಹುದೋ ವಿರಹಾಗ್ನಿ
ನಾಲಿಗೆಗೆ ದ್ರವವಿಲ್ಲ ಮಂಚದ
ಮೇಲೆ ಮಲಗಲು ಬಲಿದವಸ್ಥೆಯ
ಹೇಳ ಅನ್ನೇ ನರಸ ದಮಯಂತಿಯ ಮನೋವ್ಯಥೆಯ ॥ - ನಳಚರಿತ್ರೆ (೩/೧)

ನೀನು ದಮಯಂತಿಯ ಬಳಿಗೆ ಹೋಗಿ ನಮ್ಮ ನಾಲ್ವರಲ್ಲಿ ಒಬ್ಬರನ್ನು ವರಿಸಲು ತಿಳಿಸಿ ಬಾ'. ಎಂದನು.

ಇದನ್ನು ಕೇಳಿದ ನಳನು ಪ್ರಾಂಜಲನಾಗಿ 'ನಾನೂ ಆ ದಮಯಂತಿಯ ಸಲುವಾಗಿ ಸಂಕಲ್ಪ ಮಾಡಿ ಹೋಗುತ್ತಿರುವಾಗ ಬೇರೆಯವರ - ನಿಮ್ಮ ಸಲುವಾಗಿ ಹೇಗೆ ತಾನೇ ನನ್ನನ್ನೇ ಕಳುಹಿಸುವಿರಿ, ಆದ್ದರಿಂದ ಕ್ಷಮಿಸಿರಿ' ಎಂದನು.

ಅದಕ್ಕೆ ದೇವತೆಗಳು 'ನಮ್ಮ ಕೆಲಸವನ್ನು ಮಾಡುವುದಾಗಿ ಮೊದಲು ಒಪ್ಪಿ ಈಗ ಮಾಡೆನು ಎಂದು ಹೇಗೆ ಹೇಳುವೆ? ಕೂಡಲೇ ಹೊರಡು' ಎಂದರು.

ಮಾತಿಗೆ ಕಟ್ಟುಬಿದ್ದ ನಳನು ಮತ್ತೆ 'ಅಂತಃಪುರಗಳನ್ನು ಪ್ರವೇಶಿಸುವುದು ಕಠಿಣಕಾರ್ಯ. ಭಾರಿ ಭದ್ರತೆಗಳು ಇರುತ್ತವೆ. ಹೀಗಿರುವಾಗ ನಾನು ಹೇಗೆ ಪ್ರವೇಶಿಸಲಿ' ಎಂದ. ಇಂದ್ರನು 'ರಾಜ ! ನೀನು ಪ್ರವೇಶಿಸುವೆ. ಭಯಬೇಡ' ಎಂದನು. ಅಂತೆಯೇ ನಳನು ರಾಜಭಟರಿಂದ ರಕ್ಷಿತವಾದ ಅಂತಃಪುರ ಪ್ರವೇಶಿಸಿ ದಮಯಂತಿಯನ್ನು ನೋಡಿ, ದೇವತೆಗಳ ಸಂದೇಶ ಮುಟ್ಟಿಸಿದ. ಅಂತಃಪುರ ಪ್ರವೇಶಿಸಿದ ನಳನ ತೇಜಸ್ಸಿನಿಂದ ದಮಯಂತಿಯ ಕಾಮ ವೃದ್ಧಿಸಿತು. ಆತನನ್ನು ಕಂಡ ಅಲ್ಲಿಯ ಜನರು ಆತನನ್ನು ದೇವನೋ, ಯಕ್ಷನೋ, ಗಂಧರ್ವನೋ ಎಂದು ಬಗೆದರು.

ಮುಗುಳ್ನಗೆಯಿಂದ ಮೊದಲೇ ನಳನನ್ನು ದಮಯಂತಿಯು ಮಾತನಾಡಿಸಿದಳು. ದೇವತೆಗಳ ಅಭಿಲಾಷೆಗೆ ಪ್ರತಿಕ್ರಿಯಿಸಿದ ದಮಯಂತಿ 'ನಾನು ಹಂಸಗಳ ಮಾತುಗಳನ್ನು ಕೇಳಿದಾಗಿನಿಂದ ನಿನ್ನನ್ನೇ ವರಿಸಿದ್ದೇನೆ. ಬೇರೆ ಯಾರನ್ನೂ ವರಿಸೆನು. ಒಂದು ವೇಳೆ ನನ್ನನ್ನು ನೀನು ತಿರಸ್ಕರಿಸಿದಲ್ಲಿ ನಾನು ವಿಷ ಕುಡಿದೋ, ಅಗ್ನಿಯನ್ನು ಪ್ರವೇಶಿಸಿಯೋ, ನೇಣು ಹಾಕಿಕೊಂಡೋ ದೇಹ ತ್ಯಾಗ ಮಾಡುವೆ' ಎಂದಳು.

**ಹಂಸಾನಾಂ ವಚನಂ ಯತ್ತು ತನ್ಮಾಂ ದಹತಿ ಪಾರ್ಥಿವ ।**
**ಯದಿ ತ್ವಂ ಭಜಮಾನಾಂ ಮಾಂ ಪ್ರತ್ಯಾಖ್ಯಾಸ್ಯಸಿ ಮಾನದ ॥**
**ವಿಷಮಗ್ನಿಂ ಜಲಂ ರಜ್ಜುಮಾಸ್ಥಾಸ್ಯೇ ತವ ಕಾರಣಾತ್ ॥**

**- ವನಪರ್ವ (೫೬/೩,೪)**

ಇದನ್ನು ಕೇಳಿದ ನಳನು 'ಲೋಕಪಾಲಕರಾದ ದೇವತೆಗಳನ್ನು ಬಿಟ್ಟು ಅವರ ಪಾದಧೂಳಿಗೂ ಸಮನಾಗದ ನನ್ನನ್ನು ವರಿಸುವುದು ತಪ್ಪಾದೀತು. ದೇವತೆಗಳಿಗೆ ವಿರುದ್ಧವಾಗಿ ನಡೆಯುವುದು ಮೃತ್ಯುವಿಗೆ ಆಹ್ವಾನ ಕೊಟ್ಟಂತೆ'[೧] ಎಂದನು.

'ಸಮಸ್ತ ಪ್ರಪಂಚವನ್ನೂ ಸುಡುವ ಅಗ್ನಿದೇವ, ಯಾರ ಭಯದಿಂದ ಜಗವೆಲ್ಲ ಧರ್ಮಾಚರಣೆ ಮಾಡುತ್ತದೋ ಅಂತಹ ಯಮ, ದೈತ್ಯ-ದಾನವರನ್ನು ಮರ್ದಿಸುವ

೧ ವಿಪ್ರಿಯಂ ಹ್ಯಾಚರನ್ ಮರ್ತ್ಯೋ ದೇವಾನಾಂ ಮೃತ್ಯುಮೃಚ್ಛತಿ ॥ - ವನಪರ್ವ(೫೬/೭)

ಮಹಾತ್ಮನೂ, ಧರ್ಮಾತ್ಮನೂ ಆದ ಇಂದ್ರನನ್ನು ಅಥವಾ ವರುಣನನ್ನಾದರೂ ವರಿಸು' ಎಂದು ಮತ್ತೆ ನಳನು ಅವರ ಸಂದೇಶವನ್ನು ಪುನರುಚ್ಚರಿಸಲು ದಮಯಂತಿಯು ನಳ ಮಹಾರಾಜನೇ ನಾನಂತೂ ಈ ದೇವತೆಗಳೆಲ್ಲರನ್ನು ನಮಸ್ಕರಿಸಿ ನಿನ್ನನ್ನೇ ವರಿಸುವೆ ಎಂದಳು.

'ದೇವತೆಗಳಿಗೆ ಮಾತು ಕೊಟ್ಟು ನಾನು ಹೇಗೆ ನಿನ್ನನ್ನು ಒಪ್ಪಲಿ' ಎಂದ ರಾಜಾ ನಳ. ಅದಕ್ಕೆ ದಮಯಂತಿಯು 'ನನಗೆ ಒಂದು ಉಪಾಯ ಹೊಳೆಯುತ್ತಿದೆ. ಏನೆಂದರೆ ನೀನು ಹಾಗೂ ದೇವತೆಗಳೆಲ್ಲರೂ ಸ್ವಯಂವರಕ್ಕೆ ಬನ್ನಿರಿ. ನಾನು ಲೋಕಪಾಲಕರ ಸನ್ನಿಧಿಯಲ್ಲಿಯೆ ನಿನ್ನನ್ನು ವರಿಸುವೆ. ಆಗ ನಿನಗೇನೂ ದೋಷ ಬರದು'[೧] ಎಂದಳು.

ಹೀಗೆ ದಮಯಂತಿಗೆ ದೇವ ಸಂದೇಶ ನೀಡಿದ ನಳನು ವಾಪಸು ಬಂದು ದೇವತೆಗಳಿಗೆ ದಮಯಂತಿಯ ಮರು ಸಂದೇಶ ನಿವೇದಿಸಿದನು.

ತಾನು ಈ ವಿಷಯದಲ್ಲಿ ನಿಃಸ್ವಾರ್ಥಿಯಾಗಿ ನಡೆದಿರುವುದಾಗಿ ತಿಳಿಸುತ್ತಾ ತಾವೇ ಇದಕ್ಕೆ ಪ್ರಮಾಣಭೂತರಾಗಿದ್ದೀರಿ ಎಂದು ನಳನು ತಿಳಿಸಿ ವಿರಮಿಸಿದನು[೨].

ಮುಂದೆ ಭೀಮರಾಜನು - [೩]ಶುಭತಿಥಿ ಹಾಗೂ ಮುಹೂರ್ತದಲ್ಲಿ ಸ್ವಯಂವರಕ್ಕಾಗಿ ಆಗಮಿಸಿದ ರಾಜರನ್ನು ಕರೆಯಲು, ಬಂದ ಎಲ್ಲ ರಾಜರು ದಮಯಂತಿಯನ್ನು ಪಡೆಯುವ ಆಸೆಯಿಂದ ಸ್ವಯಂವರ ರಂಗಮಂಟಪವೆಂಬ ಪರ್ವತವನ್ನು ಸಿಂಹಗಳು ಪ್ರವೇಶಿಸುವಂತೆ ಪ್ರವೇಶಿಸಿದರು. ಎಲ್ಲ ರಾಜರು ಆಕರ್ಷಕ ಆಭರಣ, ಕರ್ಣಕುಂಡಲ, ಹೂಮಾಲೆಗಳಿಂದ ಅಲಂಕೃತರಾಗಿ ಬಂದಿದ್ದರು. ಮಂಟಪವನ್ನು ಪ್ರವೇಶಿಸಿದ ದಮಯಂತಿಯ ಕಂಗಳು ನಳನನ್ನು ಹುಡುಕುತ್ತಿದ್ದವು. ರಾಜರ ಮನಗಳನ್ನು, ಕಣ್ಣುಗಳನ್ನು ಆಕೆಯ ಪ್ರಭೆಯು ಕದ್ದಿದ್ದವು:

**ಮುಷ್ಣಂತೀ ಪ್ರಭಯಾ ರಾಜ್ಞಾಂ ಚಕ್ಷೂಂಷಿ ಚ ಮನಾಂಸಿ ಚ ॥ (ಅ. ೫೭/೮).**

ನಳನನ್ನು ಹುಡುಕುತ್ತಿದ್ದ ದಮಯಂತಿಯ ಕಂಗಳು 'ಐವರು ನಳರನ್ನು' ನೋಡಿ ಸಂದೇಹದಿಂದ ಚಿಂತೆಗೀಡಾದಳು. ಐದು ಜನರಲ್ಲಿ ಯಾರನ್ನು ನೋಡಿದರೂ ನಳನೆಂದೇ ಬಗೆದಳು. ಅಂತೆಯೇ ತುಂಬಾ ದುಃಖಿತಳಾದ ದಮಯಂತಿಯು ದೇವತೆಗಳ ಲಕ್ಷಣಗಳನ್ನು ನೆನೆದರೂ ಎಲ್ಲರೂ ಭೂಮಿಯ ಮೇಲೆ ಕಾಲೂರಿದವರಂತೆ ಕಂಡಳು. ಮತ್ತೆ ಮತ್ತೆ ಯೋಚಿಸಿ ತಾನು ಮೊದಲೇ ನಿರ್ಧರಿಸಿದಂತೆ ದೇವತೆಗಳನ್ನು ಶರಣು ಹೊಕ್ಕು ಮನಸಾ ನಮಸ್ಕರಿಸಿ ನಡುಗುತ್ತಾ ನುಡಿದಳು.

---

೧ ತೇಷಾಮಹಂ ಸನ್ನಿಧೌ ತ್ವಾಂ ವರಯಿಷ್ಯಾಮಿ ನೈಷಧ ॥ - ವನಪರ್ವ (೫೬/೩೦)

೨ ಏತಾವದೇವ ವಿಬುಧಾ ಯಥಾ ವೃತ್ತ ಮುದಾಹೃತಮ್ ।
ಮಯಾಶೇಷಂ ಪ್ರಮಾಣಂ ತು ಭವಂತಸ್ತ್ರಿದಶೇಶ್ವರಾಃ ॥ - ವನಪರ್ವ (೫೬/೩೧)

೩ ಅಥ ಕಾಲೇ ಶುಭೇ ಪ್ರಾಪ್ತೇತಿ ಥೌ ಪುಣ್ಯಕ್ಷಣೇ ತಥಾ ।
ಆಜುಹಾವ ಮಹೀಪಾಲಾನ್ ಭೀಮೋ ರಾಜಾ ಸ್ವಯಂವರೇ ॥ - ವನಪರ್ವ (೫೭/೧)

'ಹಂಸಪಕ್ಷಿಗಳ ಮಾತನ್ನು ಕೇಳಿದಾಗಿನಿಂದಲೂ ನಾನು ನಳನನ್ನೇ ಮನಸಾ, ವಾಚಾ ಪತಿಯಾಗಿ ವರಿಸಿದ್ದೇನೆ. ಇದು ದೇವತೆಗಳಿಂದಲೂ ನಿರ್ಧರಿಸಲ್ಪಟ್ಟುದ್ದುದಾಗಿದೆ. ಈ ಸತ್ಯ ನಿರ್ಧಾರ ಸತ್ಯ ಪರಿಪಾಲನೆಗೆಳಿಗಾಗಿ ದೇವತೆಗಳೇ! ದಯವಿಟ್ಟು ನನಗೆ ಐವರಲ್ಲಿ ನಳ ಯಾರೆಂದು ತೋರಿಸಿರಿ. ನಿಮ್ಮ ಸ್ವರೂಪವನ್ನು ಪ್ರಕಟಪಡಿಸಿ ಪುಣ್ಯಶ್ಲೋಕನಾದ ನಳನನ್ನು ಗುರುತಿಸಲು ಸಹಾಯ ಮಾಡಿರಿ' ಎಂದು ದೇವತೆಗಳನ್ನು ಮನಸಾ ಪ್ರಾರ್ಥಿಸಲು ದಮಯಂತಿಯ ಮನಃಶುದ್ಧಿ ವಿವೇಕಯುಕ್ತವಾದ ಬುದ್ಧಿ ಹಾಗೂ ನಳನ ಮೇಲಿನ ಭಕ್ತಿಗೆ ಮೆಚ್ಚಿ ದೇವತೆಗಳು ತಮ್ಮ ಸ್ವರೂಪ ಪ್ರಕಟಪಡಿಸಿದರು. ದಮಯಂತಿಗೆ ನಳನಾರೆಂದು ಗುರುತು ಸಿಕ್ಕು ಆತನ ಕೊರಳಿಗೆ ಮಾಲೆಯನ್ನು ಹಾಕಿ ವರಿಸಿದಳು. ಹತಾಶರಾದ ರಾಜರು ಮರುಗಿದರು, ದೇವತೆಗಳು ಮಹರ್ಷಿಗಳು ಆನಂದದಿಂದ ನಳನನ್ನು ಕೊಂಡಾಡಿದರು. ದೇವತೆಗಳು ನಳದಮಯಂತಿಯನ್ನು ಹೀಗೆ ಅನುಗ್ರಹಿಸಿ ತಮ್ಮ ಲೋಕಕ್ಕೆ ನಡೆದರು. ನಂತರ ಬಂದ ರಾಜರು ತಮ್ಮ ರಾಜ್ಯಗಳಿಗೆ ವಾಪಸಾದರು. ಎಲ್ಲರೂ ಪ್ರಯಾಣ ಮಾಡಿದ ಮೇಲೆ ವಿವಾಹ ಮಹೋತ್ಸವ ಸಂಭ್ರಮದಿಂದ ನಡೆಯಿತು.

ನಳನು ಕೆಲದಿನ ಅಲ್ಲಿಯೇ ಇದ್ದು ಭೀಮರಾಜನ ಅಪ್ಪಣೆ ಪಡೆದು ತನ್ನ ನಿಷಧರಾಜ್ಯಕ್ಕೆ ಹಿಂತಿರುಗಿ ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತಾ ಸತಿಯೊಡನೆ ಸಂತೋಷದಿಂದ ಕಾಲಕಳೆದನು. ಅಶ್ವಮೇಧಾದಿಯಾಗಗಳಿಂದ ದೇವತೆಗಳನ್ನು ಬಹುದಕ್ಷಿಣೆಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸುತ್ತಾ ದಮಯಂತಿಯೊಡನೆ ರಮಣೀಯವಾದ ಉಪವನಾದಿಗಳಲ್ಲಿ ವಿಹರಿಸುತ್ತಿದ್ದನು. ಮುಂದೆ ದಮಯಂತಿಯಲ್ಲಿ 'ಇಂದ್ರಸೇನ ಹಾಗೂ ಇಂದ್ರಸೇನಾ' ಎಂಬ ಇಬ್ಬರು ಮಕ್ಕಳನ್ನು (ಒಂದು ಗಂಡು, ಒಂದು ಹೆಣ್ಣು) ಪಡೆದು ಭೂಮಿಗೆ ಭೂಷಣಪ್ರಾಯನಾದ ರಾಜನಾಗಿ ಪ್ರಜೆಗಳನ್ನು ರಂಜಿಸಿದನು[೧].

ಸ್ವಯಂವರ ಮುಗಿಸಿಕೊಂಡ ವಾಪಸಾದ ಇಂದ್ರಾದಿ ದೇವತೆಗಳು ದಾರಿಯಲ್ಲಿ ಕಲಿ, ದ್ವಾಪರರನ್ನು ಕಂಡರು. ಸ್ವಯಂವರ ಮುಗಿದ ವಿಷಯ ನಳನನ್ನು ದಮಯಂತಿ ವರಿಸಿದ ವಿಷಯ ಕೇಳಿ ಕನಲಿದ ಕಲಿಯು ಅಸಹನೆಯಿಂದ ಹಲ್ಲು ಕಡಿಯುತ್ತ ದಮಯಂತಿಯು ದೇವತೆಗಳ ಸನ್ನಿಧಿಯಲ್ಲಿಯೇ ಮನುಷ್ಯನಾದ ನಳನನ್ನು ವರಿಸಿರುವುದು ದಂಡಾರ್ಹ

---

೧ ದೇವಕುಲ ಸಂಭವರು ರಕ್ಷಿಸಿ
ನೀವು ಮಗಳೆಂದೆನ್ನ ಭಾವಿಸಿ
ಪಾವನರು ತರಳೆಯನು ಪತಿಕರಿಸೆಂದಳಿಂದುಮುಖಿ।
ಖಿಳಿಲನೇ ಪ್ರಚ್ಛನ್ನವೇ ಷವ
ಕಳೆದು ಯಮ ಪವಮಾನ ವರುಣರು
ಬಳಿಕ ಸುರಪತಿ ಮೆಚ್ಚಿ ದಮಯಂತಿಯನು ಕೊಂಡಾಡಿ। - ನಳಚರಿತ್ರೆ (೩/೬೬,೬೭)

ಅಪರಾಧವೆಂದು ನುಡಿದನು. ದೇವತೆಗಳು ಅದನ್ನು ಒಪ್ಪದೇ 'ನಳನು ಧರ್ಮ ಬಲ್ಲವ. ಸಚ್ಚಾರಿತ್ರವಂತ ವೇದವಿದ್ಯಾಪ್ರವೀಣ, ಯಜ್ಞಾದಿಗಳಲ್ಲಿ ನಿರತ, ಸತ್ಯ, ಅಹಿಂಸೆಗಳಲ್ಲಿ ದೀಕ್ಷಾಬದ್ಧ ಲೋಕಪಾಲಸಮ. ಅಂತಹವನನ್ನು ವರಿಸಿರುವುದರಲ್ಲಿ ತಪ್ಪೇನಿದೆ? ಅದು ಕೂಡಾ ನಮ್ಮ ಅಪ್ಪಣೆಯಿಂದಲೇ ಆದ್ದರಿಂದ ತಪ್ಪೇನಿದೆ? ಅವನಿಗೆ ಶಪಿಸುವುದೆಂದರೆ ತನ್ನನ್ನೇ ಶಪಿಸಿಕೊಂಡಂತೆ ಎಂದು ನುಡಿದರು.

ಕಲಿಯು ಮಾತ್ರ ಇದಕ್ಕೆ ಒಪ್ಪದೆ 'ನಾನು ನಳನಲ್ಲಿ ಸೇರಿ ಅವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡುವೆ. ನೀನು ಅಕ್ಷಗಳಲ್ಲಿದ್ದು ಸಹಾಯ ಮಾಡು ಎಂದು ದ್ವಾಪರನಿಗೆ ನುಡಿದು ನಿಷಧರಾಜ್ಯಕ್ಕೆ ಹೊರಟನು.

ನಳನನ್ನು ಪ್ರವೇಶ ಮಾಡಲು ಕಲಿಯು ೧೨ ವರ್ಷ ಕಾದು ಒಮ್ಮೆ ನಳನು ಮೂತ್ರವಿಸರ್ಜನೆ ಮಾಡಿ ಸರಿಯಾಗಿ ಕಾಲು ತೊಳೆಯದೆ ಸಂಧ್ಯಾವಂದನೆ ಮಾಡಿ ಬಿಟ್ಟನು. ಕೂಡಲೇ ಕಲಿಯು ನಳನನ್ನು ಪ್ರವೇಶ ಮಾಡಿದನು[೧].

ನಂತರ ಕಲಿಯು ನಳನ ಸೋದರನಾದ ಪುಷ್ಕರನಲ್ಲಿಗೆ ಹೋಗಿ 'ನೀನು ತಕ್ಷಣ ನಳನಲ್ಲಿಗೆ ಹೋಗಿ ಪಗಡೆಯಾಡಲು ಹೋಗು. ನಿನಗೆ ಸಹಾಯ ಮಾಡುವೆ. ನಳ ರಾಜ್ಯ, ಕೋಶಗಳನ್ನು ಕಳೆದುಕೊಳ್ಳುವನು. ನೀನೇ ರಾಜನಾಗುವೆ' ಎನ್ನಲು ಪುಷ್ಕರ ನಳನಲ್ಲಿಗೆ ಹೋಗಿ ಪಗಡೆಯಾಡಲು ಪ್ರೇರಿಸಿದ. ನಳನೂ ಒಪ್ಪಿ ಅನೇಕ ತಿಂಗಳುಗಳವರೆಗೆ ಪಗಡೆಯಾಡಿದ. ತನ್ನ ಧರ್ಮಪತ್ನಿಯಾದ ದಮಯಂತಿಯ, ಅಮಾತ್ಯರ, ಸಚಿವರ, ಪ್ರಜೆಗಳ ಯಾರ ಮಾತಿಗೂ ಕಿವಿಗೊಡದೆ ರಾಜ್ಯ, ಕೋಶ ಎಲ್ಲವನ್ನೂ ಪುಷ್ಕರನಿಗೆ ಸೋತನು[೨].

## ಮಕ್ಕಳು ಭೀಮರಾಜನ ಬಳಿಗೆ

ವಿವೇಕಿಯಾದ ದಮಯಂತಿಯು ಉನ್ಮತ್ತನಂತೆ ವರ್ತಿಸುತ್ತಿದ್ದ ನಳನನ್ನು ನೋಡಿ ನೊಂದು ಮಕ್ಕಳನ್ನು ತನ್ನ ತವರೂರಿಗೆ ಭೀಮರಾಜನಲ್ಲಿಗೆ ವಾರ್ಷ್ಣೇಯನ (ಸಾರಥಿಯ) ಮೂಲಕ ಕಳುಹಿಸಿಕೊಟ್ಟಳು. ವಾರ್ಷ್ಣೇಯನು ಅವರನ್ನು ಭೀಮರಾಜನಲ್ಲಿ ಬಿಟ್ಟು ತಾನು ಅಯೋಧ್ಯೆಯ ರಾಜನಾದ ಋತುಪರ್ಣನಲ್ಲಿಗೆ ಬಂದು ಅಲ್ಲಿಯೇ ಆತನ ಸಾರಥಿಯಾಗಿದ್ದನು.

---

೧ ಅಥಾಸ್ಯ ದ್ವಾದಶೇ ವರ್ಷೇ ದದರ್ಶ ಕಲಿರಂತರಮ್ ।
ಕೃತ್ವಾ ಮೂತ್ರಮುಪಸ್ಪೃಶ್ಯ ಸಂಧ್ಯಾಮನ್ವಸ್ತ ನೈಷಧಃ ॥
ಅಕೃತ್ವಾ ಪಾದಯೋಃ ಶೌಚಂ ತತ್ರೈನಂ ಕಲಿರಾವಿಶತ್ ॥ - ವನಪರ್ವ(೫೯/೨,೩)

೨ ತಥಾ ತದಭವತ್ ದ್ಯೂತಂ ಪುಷ್ಕರಸ್ಯ ನಲಸ್ಯ ಚ ।
ಯುಧಿಷ್ಠಿರ ಬಹೂನ್ ಮಾಸಾನ್ ಪುಣ್ಯಶ್ಲೋಕಸ್ತ್ವಜೀಯತ ॥ - ವನಪರ್ವ(೫೯/೧೮)

## ನಳದಮಯಂತಿಯರ ಅರಣ್ಯಪ್ರವೇಶ-ಪಕ್ಷಿಗಳಿಂದ ವಸ್ತ್ರಾಪಹರಣ

ರಾಜ್ಯ, ಕೋಶ, ಸರ್ವಸ್ವವನ್ನೂ ಕಳೆದುಕೊಂಡ ನಳನನ್ನು ನೋಡಿ ಪುಷ್ಕರನು ಇನ್ನು ಉಳಿದ ನಿನ್ನ ಪತ್ನಿ ದಮಯಂತಿಯನ್ನೂ ಪಣಕ್ಕೆ ಇಡು ಎಂದಾಗ ನಳನ ಕೋಪ ನೆತ್ತಿಗೇರಿತು. ಆದರೂ ತಡೆದುಕೊಂಡು, ದುರುಗುಟ್ಟಿನೋಡಿ ತನ್ನ ಮೈಮೇಲಿದ್ದ ವಸ್ತ್ರಾಭರಣಗಳನ್ನೂ ಕಳಚಿ ಏಕವಸ್ತ್ರನಾಗಿ ಉತ್ತರೀಯವನ್ನೂ ಹೊದೆಯದೇ ಅರಣ್ಯಕ್ಕೆ ನಡೆದನು. ದಮಯಂತಿಯೂ ತನ್ನೆಲ್ಲ ಆಭರಣಗಳನ್ನು ಕಳಚಿ ಏಕವಸ್ತ್ರಳಾಗಿ ನಳನನ್ನು ಅನುಸರಿಸಿದಳು[೧].

ಕಲಿಯ ಪ್ರಭಾವಕ್ಕೊಳಗಾದ ಪುಷ್ಕರನು 'ನಳನನ್ನು ಯಾರೂ ಸತ್ಕಾರ ಮಾಡಕೂಡದು. ಒಂದು ವೇಳೆ ಮಾಡಿದಲ್ಲಿ ಅವರನ್ನು ಕೊಲ್ಲುವೆ' ಎಂದು ಪ್ರಜೆಗಳಿಗೆ ಆಜ್ಞೆಮಾಡಿದನು.

ಅಂತೆಯೇ ನಳನು ೩ ದಿನಗಳ ಕಾಲ ನಗರದ ಗಡಿಯಾಚೆ ಕೇವಲ ನೀರು ಕುಡಿದು ದಿನಗಳೆದನು. ದಿನೇ ದಿನೇ ಹಸಿವು ಬಾಯಾರಿಕೆ ಹೆಚ್ಚಿತು. ದಂಪತಿಗಳು ಅಲ್ಲಲ್ಲಿ ಸಿಕ್ಕ ಹಣ್ಣು ಗಡ್ಡೆ-ಗೆಣಸು ತಿನ್ನುತ್ತಾ ಕಾಲ ಕಳೆದರು.

ಆ ಹೊತ್ತಿಗೆ ಆಕಾಶದಲ್ಲಿ ಸುವರ್ಣಸದೃಶ ಪಕ್ಷಿಗಳನ್ನು ನೋಡಿದ ನಳನು ತಾನು ಉಟ್ಟ ಬಟ್ಟೆಯನ್ನೇ ಆ ಪಕ್ಷಿಗಳ ಮೇಲೆ ಎಸೆದು ಪಕ್ಷಿಗಳನ್ನು ಹಿಡಿದು ತನ್ನ ಹಸಿವನ್ನು ಇಂಗಿಸಲು ಪ್ರಯತ್ನಿಸಿದ. ಆದರೆ ಆ ಪಕ್ಷಿಗಳು ಪಕ್ಷಿಗಳಾಗಿರದೆ **'ಅಕ್ಷಗಳೇ'** (ಪಗಡೆಗಳು) ಆಗಿದ್ದವು. ಅಂತೆಯೇ ಅವು ನಳನು ಒಗೆದ ಬಟ್ಟೆಯನ್ನೂ ಎತ್ತಿಕೊಂಡು ಮೇಲೆ ಹಾರಿದವು. ನಳ ದಿಗಂಬರನಾದ[೨].

## ನಳನಿಂದ ಪತ್ನಿತ್ಯಾಗ

ಹೀಗೆ ಹಸಿವು, ಬಾಯಾರಿಕೆ, ಕೊನೆಗೆ ಪ್ರಾಣವೂ ಉಳಿಯದಿರುವ ಸ್ಥಿತಿಗೆ ತಲುಪಿದರು ನಳದಮಯಂತಿಯರು. ನಳನು ಆಗ ದಮಯಂತಿಗೆ 'ಈ ಪರಿಸ್ಥಿತಿಯಲ್ಲಿ ನೀನು ನಿನ್ನ ತಂದೆಯ ಮನೆಗೆ ಹೋಗು. ನನ್ನ ಜೊತೆಗೆ ಇರುವುದು ಸುಖಕರವಲ್ಲ. ಇದೋ, ಇದು

---

೧ ಉತ್ಸೃಜ್ಯ ಸರ್ವಗಾತ್ರೇಭ್ಯೋ ಭೂಷಣಾನಿ ಮಹಾಯಶಾಃ।
ಏಕವಾಸಾ ಹ್ಯಸಂವೀತಃ ಸುಹೃಚ್ಛೋಕವಿವರ್ಧನಃ ॥
ದಮಯಂತ್ಯೇಕವಸ್ತ್ರಾಥ ಗಚ್ಛಂತಂ ಪುಷ್ಠತೋಽನ್ವಗಾತ್ ॥ - ವನಪರ್ವ(೬೧/೩,೭)

೨ ದೃಷ್ಟ್ವಾ ದಿಗ್ವಾಸಸಂ ಭೂಮೌ ಸ್ಥಿತಂ ದೀನಮಧೋಮುಖಮ್।
ವಯಮಕ್ಷಾಃ ಸುದುರ್ಬುದ್ಧೇ ತವ ವಾಸೋ ಜಿಹೀರ್ಷವಃ ॥
ಆಗತಾ ನ ಹಿ ನಃ ಪ್ರೀತಿಃ ಸವಾಸಸಿ ಗತೇ ತ್ವಯಿ ॥ - ವನಪರ್ವ (೬೧/೧೩,೧೬)
'ನಾವು ಅಕ್ಷಗಳು. ನೀನು ಏಕವಸ್ತ್ರನಾಗಿರುವುದನ್ನು ನಾವು ಸಹಿಸೆವು. ಆದ್ದರಿಂದ ಆ ಬಟ್ಟೆಯನ್ನೂ ನಾವು ಅಪಹರಿಸಿದ್ದೇವೆ' ಎಂದವು ಪಕ್ಷಿಗಳು. ಹೀಗೆ ನಳದಮಯಂತಿಯರನ್ನು ಕಲಿದ್ವಾಪರರು ಪೀಡಿಸಲು ಆರಂಭಿಸಿದರು.

ವಿದರ್ಭದ ದಾರಿ' ಎಂದು ತೋರಿಸಿದ. ದೀನಳಾದ ದಮಯಂತಿಯು ಇದಕ್ಕೊಪ್ಪದೆ ನಳನು ಕೊಟ್ಟ ಮಾತನ್ನು ಜ್ಞಾಪಿಸಿದಳು. 'ಒಂದು ವೇಳೆ ಹೋಗುವುದಾದರೆ ನಾವಿಬ್ಬರೂ ವಿದರ್ಭಕ್ಕೆ ಹೋಗೋಣ. ನಮ್ಮ ತಂದೆಯು ನಿನ್ನನ್ನು ಸತ್ಕರಿಸುವನು' ಎಂದಳು ದಮಯಂತಿ[೧].

ಇದಕ್ಕೆ ನಳ ಒಪ್ಪಲಿಲ್ಲ 'ನಾನೀಗ ವಿಷಮ ಸ್ಥಿತಿಯಲ್ಲಿರುವಾಗ ಹೇಗೆ ನಿನ್ನ ತಂದೆಯ ರಾಜ್ಯಕ್ಕೆ ಹೋಗಲಿ[೨]' (ಆತನು ಸತ್ಕರಿಸಿದರೂ).

'ನಿನ್ನನ್ನು ಬಿಟ್ಟು ಹೋಗೆ' ಎಂದು ತಿಳಿಸಲು ಆಕೆಯ ವಸ್ತ್ರಾರ್ಧವನ್ನೇ ತಾನೂ ಸುತ್ತಿಕೊಂಡು ದಮಯಂತಿಯನ್ನು ಸಾಂತ್ವನಗೊಳಿಸಲು ಆರಂಭಿಸಿದನು. ಹೀಗೆ ಹಸಿವು, ಬಾಯಾರಿಕೆಗಳಿಂದ ಶ್ರಾಂತರಾದ ದಂಪತಿಗಳು ಅರಣ್ಯದಲ್ಲಿ ಅಲೆಯುತ್ತಾ ಒಂದು ಸಭಾಮಂಟಪವನ್ನು ನೋಡಿ ಅಲ್ಲಿಯೇ ಒರಗಿದರು. ದುಃಖದಿಂದ ದಮಯಂತಿಗೆ ಶ್ರಮದಿಂದ ನಿದ್ರೆ ಹತ್ತಿತು. ನಳನಿಗೆ ಮಾತ್ರ ನಿದ್ದೆ ಬರಲಿಲ್ಲ.

ಮುಂದೇನು ಮಾಡಲಿ ಎಂದು ಮರುಗುತ್ತಾ ಶೋಕಿಸಿದ. ತನ್ನ ಪರಿಸ್ಥಿತಿಯನ್ನು ವಿಮರ್ಶಿಸಿಕೊಂಡ. ಇಂತಹ ಸ್ಥಿತಿಗಿಂತ ಮರಣವೇ ಲೇಸೆಂದು ಭಾವಿಸಿದ. ಪತ್ನಿಯನ್ನು ತ್ಯಜಿಸಿ ದೂರ ಹೋಗಲೇ? ಎಂದು ಮರುಗಿದ. ನನ್ನನ್ನೇ ನಂಬಿದ ಆಕೆಯನ್ನು ಬಿಟ್ಟು ಹೋಗುವುದು ಸರಿಯಲ್ಲವೆಂದು ಅಂದುಕೊಂಡ. ಮಾನಸಿಕ ಸ್ಥಿತಿಯ ವಿರೋಧಾಭಾಸಗಳು ಅವನನ್ನು ಗೊಂದಲಕ್ಕೆ ಸಿಲುಕಿತು.

ಹೀಗೆ ಚಿಂತಿಸಿ ದುಃಖಿಸುತ್ತಾ ಆಕೆಯ ವಸ್ತ್ರಾರ್ಧವನ್ನು ಆಕೆಯ ಮಲಗಿದ ಸ್ಥಿತಿಯಲ್ಲಿಯೇ ಅಲ್ಲೇ ಸಿಕ್ಕ ಕತ್ತಿಯಿಂದ ಕತ್ತರಿಸಿ ಅದನ್ನೇ ಉಟ್ಟುಕೊಂಡು ಹೋಗಿಯೇಬಿಟ್ಟ ಮತ್ತೇ ಬಂದ. ಆದರೆ ಕೊನೆಗೆ ಮತ್ತೇ ಹೋದವನು ಮಲಗಿದ ಪತಿವ್ರತೆಯನ್ನು ಏಕಾಂಗಿಯಾಗಿ ಭಯಾರಣ್ಯದಲ್ಲಿ ತ್ಯಜಿಸಿ ಕಲಿಯ ಒತ್ತಡಕ್ಕೆ ಸಿಲುಕಿ ಹೋಗಿಯೆ ಬಿಟ್ಟ[೩].

ಆದರೆ ದಮಯಂತಿಯನ್ನು ಬಿಟ್ಟು ಹೋಗುವಾಗ ನಳನಿಗೆ ಅವಳನ್ನು ಯಾರೂ ಬಲಾತ್ಕರಿಸಲಾರರೆಂಬ ಭರವಸೆಯಿತ್ತು. ಆಕೆಯ ಪಾತಿವ್ರತ್ಯ ತಪಸ್ಸು ಆಕೆಯನ್ನು ಕಾಯುತ್ತದೆ ಎಂದು ನಂಬಿದ್ದ ನಳನು ದೇವತೆಗಳನ್ನು ಆಕೆಯ ರಕ್ಷಣೆಗಾಗಿ ಬೇಡಿದ[೪].

---

೧ ಸಹಿತಾವೇವ ಗಚ್ಛಾವೋ ವಿದರ್ಭಾನ್ ಯದಿ ಮನ್ಯಸೇ।
ವಿದರ್ಭರಾಜಸ್ತತ್ರ ತ್ವಾಂ ಪೂಜಯಿಷ್ಯತಿ ಮಾನದ॥ - ವನಪರ್ವ (೬೧/೩೫,೩೬)

೨ ನ ತು ತತ್ರ ಗಮಿಷ್ಯಾಮಿ ವಿಷಮಸ್ಥಃ ಕಥಂಚನ। - ವನಪರ್ವ (೬೨/೧)

೩ ಆಕೃಷ್ಯಮಾಣಃ ಕಲಿನಾ ...............
ದ್ವಿಧೇವ ಹೃದಯಂ ತಸ್ಯ ದುಃಖಿತ ಸ್ಯಾಭವತ್ ತದಾ।
ಅವಕೃಷ್ಟಸ್ತು ಕಲಿನಾ ಮೋಹಿತಃ ಪ್ರಾದ್ರವನ್ನಲಃ॥ - ವನಪರ್ವ (೬೨/೨೬,೨೮,೨೯)

೪ ರಕ್ಷಂತು ತ್ವಾಂ ಮಹಾಭಾಗೇ ಧರ್ಮೇಣಾಸಿ ಸಮಾವೃತಾ।
ಆದಿತ್ಯಾ ವಸವೋ ರುದ್ರಾ ಅಶ್ವಿನೌ ಸ ಮರುದ್ಗಣಾ॥ - ವನಪರ್ವ (೬೨/೨೪)

## ದಮಯಂತಿ ವಿಲಾಪ-ಅಜಗರಸರ್ಪಗ್ರಹಣ-ರಕ್ಷಕವ್ಯಾಧ ಕಾಮುಕನಾದ ಮತ್ತು ಹತನಾದ

ಸ್ವಲ್ಪಹೊತ್ತಿನ ನಂತರ ಎಚ್ಚೆತ್ತ ದಮಯಂತಿಯು ತನ್ನ ಪಕ್ಕದಲ್ಲಿ ನಳನನ್ನು ನೋಡದೇ ಪರಿತಪಿಸಲಾರಂಭಿಸಿದಳು. 'ಹಾ ಮಹಾರಾಜಾ! ನೈಷಧ! ನನ್ನನ್ನು ಏಕೆ ಅರಣ್ಯದಲ್ಲಿ ಒಬ್ಬಳನ್ನೇ ಬಿಟ್ಟು ಹೋದೆ? ನನಗೆ ಕೊಟ್ಟ ಮಾತನ್ನು ಮರೆತು ಏಕೆ ಹೋದೆ? ನಾನು ಮಾಡಿದ ಅಪಕಾರವಾದರೂ ಏನು? ನಾನು ನನ್ನ ಬಗ್ಗೆ ಶೋಕಿಸೆ. ನೀನು ಹೇಗೆ ಒಬ್ಬನೇ ಇರುವೆ? ಹಸಿವು, ಬಾಯಾರಿಕೆಗಳು ನಿನ್ನನ್ನು ಬಾಧಿಸುವುದಿಲ್ಲವೇ?' ಹೀಗೆ ವಿಲಾಪಗೈಯುತ್ತಾ ಬಿಕ್ಕಿ ಬಿಕ್ಕಿ ಅಳುತ್ತಾ ಕುಸಿದು ಬಿದ್ದಳು. ನಳನೆಲ್ಲಿ? ಎಲ್ಲಿನಲ್ಲ? ಎಂದು ಉನ್ಮತ್ತಳಂತೆ ಅರಣ್ಯದಲ್ಲಿ ತಿರುಗುತ್ತಾ ಬೀಳುತ್ತಾ ಇರುವಾಗ ಒಂದು ಅಜಗರ ಸರ್ಪವು ಹಸಿವೆಯಿಂದ ದಮಯಂತಿಯನ್ನು ಹಿಡಿದು ನುಂಗಲಾರಂಭಿಸಿತು. ಇಂತಹ ಪ್ರಸಂಗದಲ್ಲೂ ದಮಯಂತಿಯು ತನ್ನ ಬಗ್ಗೆ ಶೋಕಿಸದೆ ನಳನ ಬಗ್ಗೆ ದುಃಖಿಸಿದಳು. ಹಸಿದು ಬಳಲಿ ಬರುವ ನಿನ್ನನ್ನು ಇನ್ನು ಯಾರು ತಾನೇ ವಿಚಾರಿಸುವರು? ಎಂದು ಪರಿತಪಿಸುತ್ತಾ ಇರುವಾಗ ಆಕೆಯ ರೋಧನವು ಅಲ್ಲಿಯೇ ಬೇಟೆಗಾಗಿ ತಿರುಗುತ್ತಿದ್ದ ವ್ಯಾಧನೊಬ್ಬನಿಗೆ ಕೇಳಿಸಿ ತನ್ನಲ್ಲಿದ್ದ ಶಸ್ತ್ರ(ಖಡ್ಗ)ದಿಂದ ಅಜಗರವನ್ನು ಸೀಳಿ ದಮಯಂತಿಯನ್ನು ಸಾವಿನ ದವಡೆಯಿಂದ ಪಾರು ಮಾಡಿದನು. ಆಕೆಯನ್ನು ನೀರಿನಿಂದ ಚುಮುಕಿಸಿ ಹಣ್ಣುಗಳನ್ನು ತಿನ್ನಲು ಕೊಟ್ಟು ಉಪಚರಿಸಿ ಸಂತೈಸಿದನು.

ಮುಂದೆ ದಮಯಂತಿಯನ್ನು ನೋಡುತ್ತಾ ನೋಡುತ್ತಾ ಆ ವ್ಯಾಧನು ಕಾಮಾರ್ತನಾಗಿ ನೋಡಿದನು. ಇದನ್ನರಿತ ದಮಯಂತಿಯು ಆತನ ದುಷ್ಟ ಭಾವನೆಗಳನ್ನು ನೋಡಿ ಕನಲಿ ಕೆಂಡವಾಗಿ 'ಒಂದು ವೇಳೆ ನಾನು ನಳನನ್ನು ಬಿಟ್ಟು ಬೇರೆ ಯಾರನ್ನಾದರೂ ಮನಸಾ ಇಚ್ಛಿಸದೆ ಇದ್ದಲ್ಲಿ ಆ ಕ್ಷುದ್ರ ವ್ಯಾಧನು ಮರಣ ಹೊಂದಲಿ' ಎಂದು ಶಾಪಕೊಟ್ಟಳು[೧]. ಕೂಡಲೇ ಪರಸ್ತ್ರೀಯನ್ನು ತಾಯಿಯನ್ನಾಗಿ, ಸೋದರಿಯನ್ನಾಗಿ ಕಾಣಬೇಕಾಗಿದ್ದ ವ್ಯಾಧನು ದಮಂಯತಿಯ ಕ್ರೋಧಾಗ್ನಿಯಿಂದ ಸುಟ್ಟ ಮರದಂತೆ ಕೆಳಗೆ ಸತ್ತುಬಿದ್ದನು. ದಮಯಂತಿಯ ಪಾತಿವ್ರತ್ಯ ವಿಜೃಂಭಿಸಿತು. ಆಕೆಯ ಸಚ್ಚಾರಿತ್ರ್ಯ ನಳನು ಎಣಿಸಿದಂತೆ ಆಕೆಯನ್ನು ಕಾಪಾಡಿತು.

## ದಮಯಂತಿಯ ದುಃಖವಿಲಾಪ-ತಪಸ್ವಿಗಳ ಸಾಂತ್ವನ

ತನ್ನ ಮಾನಹರಣ ಮಾಡಲು ಬಂದ ವ್ಯಾಧನನ್ನು ಪಾತಿವ್ರತ್ಯ ಪ್ರಭಾವದಿಂದ ವಧಿಸಿದ ದಮಯಂತಿಯು ಮುಂದೆ ಏಕಾಂಗಿಯಾಗಿ ಭಯಾನಕ ಅರಣ್ಯದಲ್ಲಿ ಪತಿಯ ಅನ್ವೇಷಣೆ

---

೧ ಲಕ್ಷಯಿತ್ವಾ ಮೃಗವ್ಯಾಧಃ ಕಾಮಸ್ಯ ವಶಮೇಯಿವಾನ್ ।
ಯದ್ಯಹಂ ನೈಷಧಾದನ್ಯಂ ಮನಸಾಪಿ ನ ಚಿಂತಯೇ ॥
ತಥಾಯಂ ಪತತಾಂ ಕ್ಷುದ್ರೋ ಪರಾಸುರ್ಮೃಗಜೀವನಃ ।.....
ವ್ಯಸುಃ ಪಪಾತ ಮೇದಿನ್ಯಾಮಗ್ನಿದಗ್ಧ ಇವ ದ್ರುಮಃ ॥ - ವನಪರ್ವ (೬೩/೩೩,೩೮,೩೯)

ಮಾಡುತ್ತಾ ನಿರ್ಭೀತಳಾಗಿಯೇ ಶೋಕಾಗ್ನಿಯಿಂದ ಬೆಂದು, ನೊಂದು ಗಂಡನನ್ನೇ ಸ್ಮರಿಸುತ್ತಾ ನಡೆದಳು. ಆ ಕಾಡಿನಲ್ಲಿ ಕ್ರೂರವಾದ ಪ್ರಾಣಿಗಳೂ, ವೈವಿಧ್ಯಪೂರ್ಣವಾದ ವೃಕ್ಷಗಳೂ, ಗುಹೆಗಳೂ, ಸರೋವರಗಳೂ, ನದಿಗಳೂ ಇದ್ದವು. ಅವೆಲ್ಲವನ್ನೂ ದಾಟಿ ಒಂದು ಶಿಲೆಯ ಮೇಲೆ ಕುಳಿತು ಹೀಗೆ ಮರುಗಹತ್ತಿದಳು.

'ಹಾ ರಾಜನ್! ಕ್ಷತ್ರಿಯ ಧರ್ಮಗಳಾದ ಅಶ್ವಮೇಧಾದಿ ಯಾಗಗಳನ್ನು ಮಾಡಿ ನನ್ನ ಬಗ್ಗೆ ನಿನಗೇಕೆ ಮಿಥ್ಯಾವರ್ತನೆ? ನಿನ್ನ ಮಾತಿಗೆ ವಿರುದ್ಧವಾಗಿ ನಡೆಯಲು ಕಾರಣವಾದರೂ ಏನು? ನಾಲ್ಕು ವೇದಗಳ, ಸಾಂಗಗಳ ಅಧ್ಯಯನ ಹಾಗೂ ಸತ್ಯನಿಷ್ಠೆ ಇವೆರಡೂ ಒಂದೇ ಫಲ ಕೊಡುತ್ತವೆಯಷ್ಟೆ ನಿನ್ನ ಸತ್ಯನಿಷ್ಠೆ ಎಲ್ಲಿ ಹೋಯಿತು? ನಿನ್ನ ನಡೆ ಅಶಾಸ್ತ್ರವಾಯಿತಲ್ಲವೇ? ನಿನಗಿಂತ ಪ್ರಿಯವಸ್ತು ಮತ್ತೊಂದಿಲ್ಲ? ಎಂಬ ನೀನೇ ಅಂದ ಮಾತು ಸುಳ್ಳಾಯಿತೇ?'

ಮುಂದೆ ಹೋಗುತ್ತಿರಲು ಸಿಂಹವೊಂದು ಅವಳಿಗೆದುರಾಯಿತು. ಅದರ ಮುಂದೆ ತನ್ನ ಪರಿಚಯ ಮಾಡಿಕೊಂಡು [೧]''ನೀನು ನಲನನ್ನು ನೋಡಿದ್ದರೆ ತೋರಿಸು. ಇಲ್ಲವೇ ನನ್ನನ್ನೇ ತಿನ್ನು' ಎಂದು ಭಾವನಾತ್ಮಕವಾಗಿ ನುಡಿದಳು. ಶಾರ್ದೂಲ ಮರು ನುಡಿಯದೆ ಮುಂದೆ ನಡೆಯಿತು. ಮತ್ತು ಶೋಕಗ್ರಸ್ತಳಾದ ದಮಯಂತಿಯು ಮುಂದೆ ಹೋಗುತ್ತಿರಲು ಒಂದು ಪರ್ವತದ ಮುಂದೆ ನಿಂತು 'ಎಲೈ ಗಿರಿರಾಜ! ನಿನಗೆ ನಮಸ್ಕಾರ. ನೀನಾದರೂ ನನ್ನ ಪತಿಯನ್ನು ಎಲ್ಲಾದರೂ ನೋಡಿದ್ದಿಯಾ?' ಎಂದಳು. ಪರ್ವತ ಜಡ ಹೇಗೆ ಉತ್ತರಿಸೀತು?

ದಮಯಂತಿಯ ವಿಲಾಪ ಶೋಕ ಮತ್ತೂ ಹೆಚ್ಚಿತು. 'ರಾಜನ್! ಹೆದರಿ, ಬೆದರಿ ಬೆಂಡಾಗಿರುವನನ್ನನ್ನುದಯವಿಟ್ಟುವೈದರ್ಭೀ ಎಂದುಕರೆದುಸಮಾಧಾನಮಾಡಲಾರೆಯಾ? ಹೀಗೆ ಪ್ರಲಾಪ ಮಾಡುತ್ತಾ ಮೂರು ಹಗಲು-ರಾತ್ರಿ ತಿರುಗಾಡುತ್ತಾ ಉತ್ತರದಿಕ್ಕಿಗೆ ಹೋದಳು. ಅಲ್ಲೊಂದು ತಾಪಸಾರಣ್ಯ ಅವಳ ಕಣ್ಣಿಗೆ ಬಿತ್ತು. ಅಲ್ಲಿ ವಸಿಷ್ಠ ಭೃಗು, ಅತ್ರಿ ಮೊದಲಾದ ಬ್ರಹ್ಮರ್ಷಿ ಸದೃಶರಾದ ಕೇವಲ ವಾಯು, ನೀರು, ತರಗೆಲೆಗಳ ಮೇಲೆ ಪ್ರಾಣಧಾರಣ ಮಾಡಿದ ಜಿತೇಂದ್ರಿಯರಾದ ಮಹಾತ್ಮರನ್ನು ನೋಡಿ ಅವರಿಗೆ ನಮಸ್ಕರಿಸಿದಳು. ಆ ತಪಸ್ವಿಗಳೂ ಇವಳನ್ನು ಯೋಗ್ಯವಾಗಿ ಸತ್ಕರಿಸಿದರು. ತಪಸ್ವಿಗಳ ಕುಶಲಕ್ಷೇಮಾದಿಗಳನ್ನು ಕೇಳಲು ಮರೆಯಲಿಲ್ಲ ದಮಯಂತಿ. ತಪಸ್ವಿಗಳು ದಮಯಂತಿಯನ್ನು ವನದೇವತೆಯೋ, ನದೀ, ಪರ್ವತದ ಅಧಿದೇವತೆ ಇರಬಹುದೆಂದು 'ನೀನಾರು?' ಎಂದು ಕೇಳಿದರು.

ಅವರಿಗೆ ಉತ್ತರಿಸಿದ ದಮಯಂತಿ ತನ್ನ ಕರುಣಾಜನಕ ಕಥೆಯನ್ನು ತೋಡಿಕೊಂಡು ನೀವೇನಾದರೂ ನಲನನ್ನು ನೋಡಿದಿರಾ? ಒಂದು ವೇಳೆ ನಳನನ್ನು ಇನ್ನು ಕೆಲದಿನಗಳಲ್ಲಿ

---

೧ ಆಶ್ವಾಸಯ ಮೃಗೇಂದ್ರೇಹ ಯದಿ ದೃಷ್ಟಸ್ತ್ವಯಾ ನಲಃ।
ಮಾಂ ಖಾದಯ ಮೃಗಶ್ರೇಷ್ಠ ದುಃಖಾದಸ್ಮಾದ್ವಿಮೋಚಯ ॥ - ವನಪರ್ವ (೬೪/೩೪,೩೫)

ಕಾಣದಿದ್ದಲ್ಲಿ ತಾನು ಈ ದೇಹತ್ಯಾಗ ಮಾಡುವುದಾಗಿ ಹೇಳಿದಳು[೧]. ಅದಕ್ಕೆ ತಪಸ್ವಿಗಳು 'ಎಲೈ ಮಂಗಳಾಂಗಿಯೇ! ನೀನು ಅತಿಶೀಘ್ರದಲ್ಲಿ ನಿನ್ನ ಪತಿಯನ್ನು ನೋಡುವೆ. ನಾವು ತಪಸ್ಸಿನಿಂದ ಇದನ್ನು ಮನಗಂಡಿದ್ದೇವೆ' ಎಂದು ಹೇಳಿ ಅಂತರ್ಧಾನರಾದರು[೨]. ದಮಯಂತಿಗೆ ಆಶ್ಚರ್ಯ, ಆನಂದಗಳು ಏಕಕಾಲಕ್ಕೆ ಆಗಿ ಮತ್ತೇ ಮುಂದೆ ನಡೆದಳು.

ದಾರಿಯಲ್ಲಿ ಕಂಡ ಅಶೋಕವೃಕ್ಷವನ್ನು ತನ್ನನ್ನೂ ವಿಶೋಕಳನ್ನಾಗಿ ಮಾಡಲು ಪ್ರಾರ್ಥಿಸಿದಳು. ಮುಂದೆ ಪರ್ವತ, ನದ-ನದಿ, ಗಿರಿಶೃಂಗಗಳನ್ನು, ರಮ್ಯವಾದ ಮೃಗ-ಪಕ್ಷಿಗಳನ್ನು ನೋಡುತ್ತಾ ಹೋಗುತ್ತಿರಲು ಆನೆ, ಕುದುರೆ, ರಥಗಳಿಂದ ಕೂಡಿದ ವರ್ತಕರ ಗುಂಪೊಂದು ಆಕೆಯ ಕಣ್ಣಿಗೆ ಬಿತ್ತು. ಕೂಡಲೇ ಆ ಜನರ ಗುಂಪಿನ ಮಧ್ಯೆ ಸೇರಿದಳು. ಈಕೆಯ ಅರ್ಧವಸ್ತ್ರಯುಕ್ತ ಮಲೀನ ಶರೀರ, ಧೂಳಿನಿಂದ ವಿವರ್ಣವಾದ, ಆದರೆ ಸುರೂಪಿಯಾದ ಆಕೆಯನ್ನು ಕಂಡು ಕೆಲವರು ಹೆದರಿ ಓಡಿದರು. ಮತ್ತೆ ಕೆಲವರು ಜೋರಾಗಿ ಕೂಗಿದರು. ಚಿಂತಾಗ್ರಸ್ತರಾದರು ಹಲವರು, ಕೆಲವರು ಮಾತ್ರ ದಯೆ, ಅನುಕಂಪದಿಂದ ನೀನಾರು ಎಂದು ಕೇಳಿದರು. ನೀನು ವನದೇವತೆಯೋ? ಪರ್ವತ ಅಥವಾ ದಿಗ್ದೇವತೆಯೋ? ರಾಕ್ಷಸಿಯೋ? ಯಕ್ಷಿಣಿಯೋ? ಎಂದು ಕೇಳುತ್ತಾ 'ಸತ್ಯ ನುಡಿ' ಎಂದು ಹೇಳುತ್ತಾ ನಿನಗೆ ನಾವು ಶರಣಾಗಿದ್ದೇವೆ ಎಂದೂ ಕೆಲವರು ನುಡಿದರು. ನಾವು ಸುಖವಾಗಿ ವಾಪಸು ಹೋಗಬೇಕು. ಹಾಗೆ ನಮ್ಮನ್ನು ಅನುಗ್ರಹಿಸು ಎಂದು ಅವರೆಲ್ಲ ನುಡಿಯುತ್ತಿರಲು ದಮಯಂತಿಯು 'ನೀವು ಭಾವಿಸಿದಂತೆ ನಾನು ರಾಕ್ಷಸಿ, ಯಕ್ಷಿಣಿ, ಯಾವ ದೇವತೆಯೂ ಅಲ್ಲ. ನಾನು ನಳಮಹಾರಾಜನ ಪತ್ನಿ. ನೀವು ಆತನನ್ನು ನೋಡಿದ್ದರೆ ತಿಳಿಸಿ' ಎಂದು ಬೇಡಿಕೊಂಡಳು.

ಆಗ ವರ್ತಕರ ಗುಂಪಿನ ಯಜಮಾನನಾದ **ಶುಚಿ** ಎನ್ನುವವನು 'ನಾನು ಈ ಗುಂಪಿನ ನಾಯಕ. ನಾವು ನಿನ್ನನ್ನು ಬಿಟ್ಟು ಯಾವ ಮನುಷ್ಯನನ್ನೂ ನೋಡಿಲ್ಲ. ನಳನನ್ನು ನೋಡಿಲ್ಲ. ನಮ್ಮ ಮೇಲೆ ಯಕ್ಷರಾಜನಾದ ಮಣಿಭದ್ರನು ಪ್ರಸನ್ನನಾಗಲಿ. ನಮಗೆ ಮಂಗಳವಾಗಲಿ' ಎಂದು ಹಾರೈಸಿಕೊಂಡನು. ನೀವೆಲ್ಲಿಗೆ ಹೋಗುತ್ತಿದ್ದೀರಿ? ಎಂದು ದಮಯಂತಿಯು ಕೇಳಲು ಆತನು 'ನಾವು ಮುಂದೆ ಚೇದಿರಾಜನಾದ ಸುಬಾಹುವಿನ ದೇಶಕ್ಕೆ ವ್ಯಾಪರಕ್ಕಾಗಿ ಹೋಗುತ್ತಿದ್ದೇವೆ' ಎಂದು ಉತ್ತರಿಸಿದನು.

## ಕಾಡಿನ ಆನೆಗಳ ದಾಳಿ - ವರ್ತಕರ ನಾಶ - ಚೇದಿರಾಜನ ಮನೆಗೆ ದಮಯಂತಿ

ವರ್ತಕನಾಯಕನೊಡನೆ ದಮಯಂತಿಯು ನಳನನ್ನು ಚೇದಿದೇಶದಲ್ಲಿ ಹುಡುಕುವ ಆಸೆಯಿಂದ ಹೊರಟಳು. ಹಲವು ದಿನ ದಾರುಣವಾದ ಕಾಡುಮೇಡುಗಳಲ್ಲಿ ಪ್ರಯಾಣ

---

೧ ಯದಿ ಕೈಶ್ಚಿದಹೋರಾತ್ರೈರ್ನ ದ್ರಕ್ಷ್ಯಾಮಿ ನಲಂ ನೃಪಮ್ ।
ಆತ್ಮನಾ ಶ್ರೇಯಸಾ ಯೋಕ್ಷ್ಯೇ ದೇಹಸ್ಯಾಸ್ಯ ವಿಮೋಚನಾತ್ ॥ - ೬೪/೮

೨ ವಯಂ ಪಶ್ಯಾಮ ತಪಸಾ ಕ್ಷಿಪ್ರಂ ದ್ರಕ್ಷ್ಯಸಿ ನೈಷಧಮ್ । - ವನಪರ್ವ(೬೪/೯೨)

ಮಾಡಿದ ವರ್ತಕರು ಸುಂದರವಾದ ಸರೋವರವನ್ನು ಕಂಡು ಅಲ್ಲಿಯೇ ವಿಶ್ರಮಿಸಲು ನಿಶ್ಚಯಿಸಿದರು. ಆಗಲೇ ರಾತ್ರಿಯಾಗಿತ್ತು. ಆ ನಿರ್ಮಲ ಸರೋವರದ ಸುತ್ತಲೂ ಬಹುಫಲಪುಷ್ಪಸಮೇತವಾದ ವೃಕ್ಷಗಳೂ, ನಾನಾ ಪಕ್ಷಿ ಸಂಕುಲಗಳಿಂದ ಕೂಡಿದ ಅರಣ್ಯವಿತ್ತು. ಆ ಪರಿಸರ ಆಹ್ಲಾದಕರವಾಗಿತ್ತು.

ಶ್ರಾಂತರಾದ ವರ್ತಕರು ನಿದ್ರೆ ಹೋಗಿದ್ದರು. ಮಧ್ಯರಾತ್ರಿ ಹೊತ್ತಿಗೆ ಇವರು ಇರುವ ಪ್ರದೇಶಕ್ಕೆ ಮದಿಸಿದ ಕಾಡಾನೆಗಳು ನುಗ್ಗಿ ವರ್ತಕರನ್ನು ಅವರ ಆನೆ, ಕುದುರೆ, ಒಂಟೆಗಳನ್ನೂ, ಸರಕು, ಸಾಮಗ್ರಿಗಳನ್ನೂ, ಅವರು ಸಂಪಾದಿಸಿದ ಸಂಪತ್ತನ್ನೂ ತುಳಿಯುತ್ತಾ ಕೊಲ್ಲುತ್ತಾ ನುಗ್ಗಿದವು. ವರ್ತಕರು ಭಯಭೀತರಾಗಿ ಎಚ್ಚೆತ್ತು ತಾವೂ ಪರಸ್ಪರ ತುಳಿತಕ್ಕೆ ಸಿಕ್ಕಿ ಅನೇಕರು ಸತ್ತರು. ಅವರು ಸಂಪಾದಿಸಿದ ಮುತ್ತು, ರತ್ನ ದ್ರವ್ಯಗಳು ಚೆಲ್ಲಾಪಿಲ್ಲಿಯಾಗಿ ಬಿದ್ದುದಲ್ಲದೇ ಅವರ ಆಕ್ರಂದನ ಮುಗಿಲು ಮುಟ್ಟಿತು.

ಕೆಲವರು ಇದಕ್ಕೆ ಕಾರಣ ಯಕ್ಷರಾಜನಾದ ಕುಬೇರ ಮತ್ತು ಮಣಿಭದ್ರನನ್ನು ಪೂಜಿಸದಿರುವುದು ಕಾರಣವೆಂದು ಭಾವಿಸಿದರು. ಮತ್ತೆ ಕೆಲವರು ತಾವು ಹಿಂದೆ ಕಂಡ ದುಷ್ಟ ಶಕುನಗಳು ಕಾರಣವೆಂದು ಬಗೆದರು. ಹಲವರು ತಮ್ಮೊಡನೆ ಬಂದು ಸೇರಿರುವ ಈ ಹೊಸ ಸ್ತ್ರೀಯೇ ಕಾರಣವೆಂದರು. ಆಕೆಯನ್ನು ಕಂಡಕೂಡಲೇ ಕೊಲ್ಲಿರಿ ಎಂದು ಕೂಗಾಡುತ್ತಿದ್ದರು. ಅಳಿದುಳಿದವರು ಅಲ್ಲಲ್ಲಿ ಚೆಲ್ಲಿದ್ದ ರತ್ನಾದಿ ದ್ರವ್ಯಗಳನ್ನು ತೆಗೆದುಕೊಂಡು ಹೋಗಲು ಕೂಗಾಡಿದರು.

ಈ ಆಕ್ರಂದನ ಮಲಗಿದ್ದ ದಮಯಂತಿಗೂ ಕೇಳಿಸಿ ಕೂಡಲೇ ಎದ್ದು ದೂರ ಓಡಿದಳು. ತನ್ನ ಬಗ್ಗೆ ಮಾತನಾಡುತ್ತಿದ್ದುದನ್ನು ಅವರಿಗೆ ತಿಳಿಯದಂತೆ ಅಡಗಿ ಕೇಳಿ ನೊಂದಳು. ತನ್ನ ದುರ್ವಿಧಿಯನ್ನು ನಿಂದಿಸಿದಳು. ತಾನು ಈ ಜನ್ಮದಲ್ಲಿ ಯಾವ ಪಾಪವನ್ನು ಪ್ರಾಯಃ ಮಾಡಿಲ್ಲ. ಪೂರ್ವಜನ್ಮದ ಪಾಪಗಳೇ ತನ್ನ ಈ ಪರಿಸ್ಥಿತಿಗೆ ಕಾರಣವೆಂದು ಮರುಗಿದಳು. ಅಥವಾ ತಾನು ಲೋಕಪಾಲಕರನ್ನು ವರಿಸದಿರುವುದೇ ಕಾರಣವಾಗಿರಬೇಕೆಂದು ತನ್ನನ್ನೇ ನಿಂದಿಸಿಕೊಂಡಳು[೧].

ಅಳಿದುಳಿದ ವರ್ತಕರು ಹಾಗೂ ಬ್ರಾಹ್ಮಣರ ಗುಂಪನ್ನು ಸೇರಿದ ದಮಯಂತಿಯು ಚೇದಿರಾಜನಾದ ಸುಬಾಹುವಿನ ದೇಶಕ್ಕೆ ಸಾಯಂಕಾಲ ಸೇರಿದಳು.

ಅರ್ಧವಸ್ತ್ರಳಾಗಿ, ಮುಕ್ತಕೇಶಳಾಗಿ, ಕೃಶಳಾಗಿ, ದೀನಳಾಗಿ ದಮಯಂತಿಯು ಉನ್ಮತ್ತಳಂತೆ ಚೇದಿರಾಜನ ಅರಮನೆಯ ಮುಂದೆ ಬರುತ್ತಿರಲು ಆಕೆಯನ್ನು ಮಕ್ಕಳು, ಪುರವಾಸಿಗಳು ಅನುಸರಿಸಿದರು. ಜನರಿಂದ ಹಿಂಸೆಗೆ ಒಳಗಾಗಿದ್ದ ಆ ಹುಚ್ಚಿಯಂತಿದ್ದ

---

೧ ನೂನಂ ಜನ್ಮಾಂತರಕೃತಂ ಪಾಪಮಾಪತಿತಂ ಮಹತ್ ।
ಮನ್ಯೇ ಸ್ವಯಂವರಕೃತೇ ಲೋಕಪಾಲಾಃ ಸಮಾಗತಾಃ ॥
ಪ್ರತ್ಯಾಖ್ಯಾತಾ ಮಯಾ ತತ್ರ ನಲಸ್ಯಾರ್ಥಾಯ ದೇವತಾಃ ॥ - ವನಪರ್ವ(೬೫/೩೩,೪೧,೪೨)

ಆಕೆಯನ್ನು ರಾಜಮಾತೆಯು ಅರಮನೆಗೆ ಕರೆಸಿಕೊಂಡು 'ಎಲೈ ಕಲ್ಯಾಣಿ! ಲಕ್ಷ್ಮಿಯಂತೆ ವಿಶಾಲ ಕಣ್ಣುಳ್ಳ ನೀನಾರು?' ಅದಕ್ಕೆ ಆಕೆಯು ತಾನೊಬ್ಬ ಸಾಮಾನ್ಯ ಹೆಂಗಸು, ಬಯಸಿದ್ದಲ್ಲಿ ವಾಸಿಸುವವಳು, ಸೈರಂಧ್ರಿ ಜಾತಿಯವಳು, ಹಣ್ಣು-ಹಂಪಲು, ಗಡ್ಡೆ-ಗೆಣಸು ತಿನ್ನುವವಳು ಎಂದು ತನ್ನಲ್ಲಿ ಅನುರಕ್ತನಾದ ಗುಣಸಂಪನ್ನ ಪತಿಯನ್ನು ಹುಡುಕುತ್ತಿರುವುದಾಗಿ ತನ್ನ ಹಿಂದಿನ ಕಥೆಯನ್ನು ಹೇಳಿಕೊಂಡಳು. ರಾಜಮಾತೆಯ ಮುಂದೆ ಹಿಂದೆಲ್ಲ ಹೇಳಿದಂತೆ ತನ್ನ ನಿಜವಾದ ಪರಿಚಯವನ್ನು ಮಾಡಿಕೊಳ್ಳಲಿಲ್ಲ[೧].

ಆ ಹೆಂಗಸಿನ ದೈನ್ಯ ಮಾತುಗಳನ್ನು ಕೇಳಿದ ಮನಕರಗಿದ ರಾಜಮಾತೆಯು ಕಲ್ಯಾಣಿ ನಮ್ಮಲ್ಲಿಯೇ ನೀನಿರು. ನಿನ್ನ ಮೇಲೆ ನನಗೆ ಪ್ರೀತಿ ಉದಯಿಸಿದೆ. ನಮ್ಮ ಪುರುಷರು ನಿನ್ನ ಪತಿಯನ್ನು ಹುಡುಕುವರು. ನಿನ್ನ ಪತಿಯೇ ಇಲ್ಲಿಗೆ ಬಂದರೆ ನಿನ್ನನ್ನು ಸೇರಿಸುತ್ತೇವೆ ಎಂದಳು.

ರಾಜಮಾತೆಯ ಮಾತನ್ನು ಕೇಳಿ ದಮಯಂತಿಯು 'ನಾನು ನಿಮ್ಮಲ್ಲಿಯೇ ಕೆಲವು ಷರತ್ತಿಗೊಳಪಟ್ಟು ಇರುವೆ[೨] - ನಾನು ಯಾರ ಎಂಜಲೂ ಉಣ್ಣುವುದಿಲ್ಲ, ಯಾರ ಪಾದವನ್ನೂ ತೊಳೆಯುವುದಿಲ್ಲ, ಪರಪುರುಷರೊಡನೆ ಮಾತನಾಡುವುದಿಲ್ಲ, ನನ್ನನ್ನು ಯಾರಾದರೂ ಕೆಣಕಿದಲ್ಲಿ ಅವನನ್ನು ವಧೆ ಮಾಡುವ ಹೊಣೆ ನಿಮ್ಮದು. ನನ್ನ ಪತಿಯನ್ನು ಹುಡುಕಲು ಹೋಗುವ ಬ್ರಾಹ್ಮಣರನ್ನು ಮಾತ್ರ ನಾನು ಮಾತನಾಡಿಸುತ್ತೇನೆ.'

ದಮಯಂತಿಯ ಮಾತಿಗೆ ರಾಜಮಾತೆ ನಗುನಗುತ್ತಾ ಒಪ್ಪಿ ತನ್ನ ಮಗಳಾದ ಸುನಂದೆಗೆ ದೇವರೂಪಿಯಾದ ಇವಳನ್ನು ಸೈರಂಧ್ರಿ (ಅಂತಃಪುರದಲ್ಲಿರುವ ಸ್ವತಂತ್ರಳಾಗಿರುವ ಸೇವಕಿ - ಕರಕುಶಲಗಳನ್ನು ಮಾಡಲು ಇರುವ) ಎಂದು ತಿಳಿ ಎಂದು ನಿಯೋಜಿಸಿದಳು. ಇವಳು ನಿನ್ನ ಸಖಿ, ಇವಳೊಡನೆ ನಿಃಸಂಕೋಚವಾಗಿ ಇರಲು ಸೂಚಿಸಿದಳು.

ಅಂತೆಯೇ ಸುನಂದೆಯು ದಮಯಂತಿಯನ್ನು ಸ್ವೀಕರಿಸಿ ತನ್ನ ಸಖಿಯರೊಂದಿಗೆ ಅಂತಃಪುರಕ್ಕೆ ನಡೆದಳು. ಅವರಿಂದ ಪೂಜ್ಯಳಾಗಿ ಸತ್ಕರಿಸಲ್ಪಟ್ಟ ಉದ್ವೇಗರಹಿತಳಾಗಿ ಧ್ಯಾನಿಸುತ್ತಾ, ಅರಮನೆಯಲ್ಲಿ ಅಜ್ಞಾತವಾಸದಿಂದ ಇರಲಾರಂಭಿಸಿದಳು-ದಮಯಂತಿ.

---

೧ ತಂ ಮಾರ್ಗಮಾಣಾ ಭರ್ತಾರಂ ದಹ್ಯಮಾನಾ ದಿವಾನಿಶಮ್ ।
ನ ವಿಂದಾಮ್ಯಮರಪ್ರಖ್ಯಂ ಪ್ರಿಯಂ ಪ್ರಾಣೇಶ್ವರಂ ಪ್ರಭುಮ್ ॥ - ವನಪರ್ವ(೬೫/೬೨,೬೩)

೨ ಸಮಯೇನೋತ್ಸಹೇ ವಸ್ತುಂ ತ್ವಯಿ ವೀರಪ್ರಜಾಯಿನಿ ।
ಉಚ್ಛಿಷ್ಟಂ ನೈವ ಭುಂಜೀಯಾಂ ನಕುರ್ಯಾಂ ಪಾದಧಾವನಮ್ ॥
ನ ಚಾಹಂ ಪುರುಷಾನನ್ಯಾನ್ ಪ್ರಭಾಷೇಯಂ ಕಥಂಚನ ।
ಪ್ರಾರ್ಥಯೇತ್ ಯದಿ ಮಾಂ ಕಶ್ಚಿತ್ ದಂಡ್ಯ ಸ್ತೇ ಸ ಪುಮಾನ್ ಭವೇತ್ ॥
ವಧ್ಯಶ್ಚ ತೇಽಸಕೃನ್ಮಂದ ಇತಿ ಮೇ ವ್ರತಮಾಹಿತಮ್ ।
............... ರಾಜಮಾತೇದಮಬ್ರವೀತ್ ।
ಸರ್ವಮೇತತ್ ಕರಿಷ್ಯಾಮಿ ದಿಷ್ಟ್ಯಾ ತೇ ವ್ರತಮೀದೃಶಮ್ ॥ - ವನಪರ್ವ(೬೫/೬೭-೭೨)

## ನಳನಿಂದ ಕರ್ಕೋಟಕ ಶಾಪ ವಿಮೋಚನೆ-ನಳನಿಗೆ ಆಶ್ವಾಸನೆ

ಮಲಗಿದ ದಮಯಂತಿಯನ್ನು ವನಮಧ್ಯದಲ್ಲಿ ಏಕಾಂಗಿಯಾಗಿಯೇ ಬಿಟ್ಟು ಬಂದ ನಳ ಸಂಚರಿಸುತ್ತಿರಲು ಕಾಡ್ಗಿಚ್ಚನ್ನು ನೋಡಿದ. ಅದರ ಮಧ್ಯದಿಂದ ಪವಿತ್ರವಾದ 'ನಲನೇ ಓಡಿ ಬಾ, ನನ್ನನ್ನು ರಕ್ಷಿಸು' ಎಂಬ ಆರ್ತಧ್ವನಿಯು ಬಂದಿತು. ಕೂಡಲೇ 'ಹೆದರದಿರು' ಎಂದ ನಲ ಆ ಅಗ್ನಿಯ ಮಧ್ಯೆಯೇ ಪ್ರವೇಶಿಸಿ ಭಾರೀ ಸರ್ಪವೊಂದನ್ನು ನೋಡಿದ. ಅದು ತನ್ನನ್ನು ಪರಿಚಯಿಸಿಕೊಳ್ಳುತ್ತಾ 'ನಾನು ಕರ್ಕೋಟಕನೆಂಬ ನಾಗ, ಒಮ್ಮೆ ನಾರದರನ್ನು ವಂಚಿಸಿದ ಪರಿಣಾಮವಾಗಿ ಸ್ಥಾವರನಂತೆ ಇದ್ದೇನೆ. ನಲನು ಬಂದು ಕಾಪಾಡುವವರೆಗೆ ನನ್ನ ಶಾಪ ವಿಮೋಚನೆ ಇಲ್ಲ. ಒಂದು ಹೆಜ್ಜೆಯೂ ಚಲಿಸಲು ಅಸಮರ್ಥನಾಗಿದ್ದೇನೆ. ಆದ್ದರಿಂದ ನನ್ನನ್ನು ರಕ್ಷಿಸು. ನಾನು ನಿನಗೆ ಸ್ನೇಹಿತನಾಗಿ ಸಹಾಯ ಮಾಡುವೆ' ಎನ್ನುತ್ತಾ ಕರ್ಕೋಟಕನು ಅಂಗುಷ್ಠ ಗಾತ್ರದ ನಾಗನಾದ.

ಕೂಡಲೇ ನಳನು ಅವನನ್ನು ಎತ್ತಿ ದಾವಾಗ್ನಿ ಇರದ ಪ್ರದೇಶಕ್ಕೆ ಹೋದ. ಮತ್ತೆ ಕರ್ಕೋಟಕ ನಾಗನು 'ನಳ ! ನೀನೀಗ ಹೆಜ್ಜೆಗಳನ್ನು ಎಣಿಸುತ್ತಾ ಮುಂದೆ ಹೋಗು. ನಿನಗೆ ಸಹಾಯ ಮಾಡುವೆ' ಎಂದ. ನಳನು ಎಣಿಸುತ್ತಾ ಒಂಭತ್ತು ಹೆಜ್ಜೆ ನಂತರ ಹತ್ತನೆಯ ಹೆಜ್ಜೆ ಇಟ್ಟು ದಶ ಎಂದಾಗ ನಾಗನು ನಳನನ್ನು ಕಚ್ಚಿ ವಿರೂಪಗೊಳಿಸಿದನು[೧]. ನಂತರ ನಾಗ 'ರಾಜ ನಿನ್ನನ್ನು ಮುಂದೆ ಯಾರೂ ಗುರುತು ಹಿಡಿಯಬಾರದೆಂದು ನಾನು ಕಚ್ಚಿದ್ದೇನೆ. ನಿನ್ನಲ್ಲಿ ಸೇರಿದ ನನ್ನ ವಿಷವು ನಿನಗೆ ಬಾಧಿಸದು. ವಿಷ ನಿನ್ನಲ್ಲಿರುವವರೆಗೂ ಕಲಿಯನ್ನು ಸಂಕಟಪಡಿಸುತ್ತದೆ. ನಿನಗೆ ಶತ್ರುಗಳಿಂದ, ವಿಷಜಂತುಗಳಿಂದ ಭಯವಿಲ್ಲ. ವೇದಾಧ್ಯಯನ ಸಂಪನ್ನ ಬ್ರಾಹ್ಮಣರ ಶಾಪವೂ ನಿನ್ನನ್ನೇನೂ ಮಾಡದು. ಯುದ್ಧದಲ್ಲಿ ನಿನಗೆ ಜಯ ಖಚಿತ. ನೀನು ನೇರವಾಗಿ ಅಯೋಧ್ಯೆಯ ರಾಜನಾದ ಋತುಪರ್ಣನಲ್ಲಿಗೆ ಹೋಗಿ ಅಲ್ಲಿ ಬಾಹುಕನೆಂಬ ಹೆಸರಿನಿಂದ ಅವನ ಸಾರಥಿಯಾಗಿ, ಸ್ನೇಹಿತನಾಗಿರು. ಅವನು ನಿನಗೆ ಅಕ್ಷವಿದ್ಯೆ ಹೇಳಿಕೊಡುತ್ತಾನೆ. ನೀನು ಅವನಿಗೆ ಅಶ್ವಹೃದಯ ಕಲಿಸು. ನೀನು ಕಲಿಯುವ ಅಕ್ಷಹೃದಯ ನಿನಗೆ ಶ್ರೇಯಸ್ಸನ್ನು ನೀಡುತ್ತದೆ. ನಿನ್ನ ನಿಜರೂಪ ಯಾವಾಗ ಬಯಸುವೆಯೋ ಆಗ ಈ ಎರಡು ದಿವ್ಯಾಂಬರಗಳನ್ನು ಧರಿಸು, ನನ್ನನ್ನು ಸ್ಮರಿಸು' ಎಂದೆಲ್ಲ ಹೇಳಿ ನಳನಿಗೆ ದಿವ್ಯವಸ್ತ್ರಗಳನ್ನು ನೀಡಿ ನಾಗರಾಜನು ಅಲ್ಲಿಯೇ ಅಂತರ್ಧಾನನಾದನು.

---

೧ ತಸ್ಯ ದಷ್ಟಸ್ಯ ತದ್ರೂಪಂ ಕ್ಷಿಪ್ರಮಂತರಧೀಯತ।......
ಮಯಾ ತೇಽಂತರ್ಹಿತಂ ರೂಪಂ ನ ತ್ವಾಂ ವಿದ್ಯುರ್ಜನಾ ಇತಿ ॥.........
ರಾಜನ್ ವಿಷನಿಮಿತ್ತಾ ಚ ನ ತೇ ಪೀಡಾ ಭವಿಷ್ಯತಿ।......
ಸ್ವಂ ರೂಪಂ ಚ ಯದಾ ದ್ರಷ್ಟುಮಿಚ್ಛೇಥಾಸ್ತ್ವಂ ನರಾಧಿಪ॥
ಸಂಸ್ಮರ್ತವ್ಯಸ್ತದಾ ತೇಽಹಂ ವಾಸಶ್ಚೇದಂ ನಿವಾಸಯೇಃ।
ಅನೇನ ವಾಸಸಾಚ್ಛನ್ನಃ ಸ್ವಂ ರೂಪಂ ಪ್ರತಿಪತ್ಸ್ಯತೇ॥ - ವನಪರ್ವ (೬೬/೧೨-೨೫)

## ನಳನಿಗೆ ಋತುಪರ್ಣನ ಆಶ್ರಯ

ಕರ್ಕೋಟಕನು ಅದೃಶ್ಯನಾಗಲು ನಳಮಹಾರಾಜನು ಅಯೋಧ್ಯಾಧಿಪನಾದ ಋತುಪರ್ಣನ ರಾಜ್ಯವನ್ನು ಹತ್ತನೇ ದಿನ ಪ್ರವೇಶಿಸಿ ರಾಜನನ್ನು ಭೇಟಿಯಾಗಿ 'ನಾನು ಬಾಹುಕನೆಂಬ ಅಶ್ವವಿದ್ಯೆ, ಪಾಕವಿದ್ಯೆ, ಅರ್ಥಶಾಸ್ತ್ರ ಮುಂತಾದ ವಿದ್ಯೆಗಳಲ್ಲಿ ನನ್ನ ಸಮರು ಯಾರೂ ಈ ಭೂಮಿಯಲ್ಲಿ ಇಲ್ಲ. ನನ್ನನ್ನು ರಾಜ್ಯಭಾರದ ಯಾವುದೇ ವಿಷಯಗಳ ಬಗ್ಗೆ ಸಲಹೆಗಾರರನನ್ನಾಗಿ ಇಟ್ಟುಕೋ. ನನಗೆ ಸೂಕ್ತ ಉದ್ಯೋಗ ನೀಡು' ಎಂದು ಬಿನ್ನವಿಸಿದ.

ಋತುಪರ್ಣನು 'ಹೌದು ನನಗೂ ಶೀಘ್ರಯಾನದ ಬಗ್ಗೆ ಅವಶ್ಯಕತೆ ಇದೆ. ನೀನು ಅಶ್ವಾಧ್ಯಕ್ಷನಾಗು. ನಿನಗೆ ೧೦,೦೦೦ (ಸುವರ್ಣ) ವೇತನ ಕೊಡುವೆ. ನಿನಗೆ ಸಹಾಯಕರಾಗಿ ವಾರ್ಷ್ಣೇಯ, ಜೀವಲರಿರುತ್ತಾರೆ' ಎಂದನು.

ಇದಕ್ಕೆ ಒಪ್ಪಿದ ನಳನು ವಾರ್ಷ್ಣೇಯ, ಜೀವಲರೊಡನೆ ಅಯೋಧ್ಯೆಯಲ್ಲಿ ಸತ್ಕೃತನಾಗಿ ದಮಯಂತಿಯನ್ನೇ ನೆನೆಯುತ್ತಾ ಕಾಲ ಕಳೆಯುತ್ತಿದ್ದ. ಪ್ರತಿದಿನ ಸಂಜೆ ಈ ಶ್ಲೋಕ ಹೇಳುತ್ತಿದ್ದ:

**ಕ್ವ ನು ಸಾ ಕ್ಷುತ್ಪಿಪಾಸಾರ್ತಾ ಶ್ರಾಂತಾ ಶೇತೇ ತಪಸ್ವಿನೀ ।**
**ಸ್ಮರಂತೀ ತಸ್ಯ ಮಂದಸ್ಯ ಕಂ ವಾ ಸಾದ್ಯೋಪತಿಷ್ಠತಿ ॥ - ವನಪರ್ವ (೬೭/೧೦)**

ಹಸಿವು, ಬಾಯಾರಿಕೆಯಿಂದ ಬಳಲಿದ (ದಮಯಂತಿ) ತಪಸ್ವಿನಿಯಾದ ದಮಯಂತಿಯು ತನ್ನನ್ನು ಬಿಟ್ಟು ತೆರಳಿದ. ಆ ಮೂಢನನ್ನು ನೆನೆಯುತ್ತಾ ಎಲ್ಲಿದ್ದಾಳೆ.

ಈ ಮಾತನ್ನು ಕೇಳಿದ ಜೀವಲನು ಬಾಹುಕನನ್ನು ಈ ಬಗ್ಗೆ ವಿವರಣೆ ಕೇಳಲಾಗಿ ನಳನು ತನ್ನ ಹೆಸರನ್ನು ಹೇಳದೇ ತನ್ನ ಸ್ನೇಹಿತನೊಬ್ಬ ಹೆಂಡತಿಯನ್ನು ಬಿಟ್ಟು ಹೋದನೆಂದೂ, ಆ ಬಗ್ಗೆ ತನ್ನ ಮರುಕವನ್ನು ಹೀಗೆ ನೆನೆಯುತ್ತಿರುವುದಾಗಿ ಹೇಳಿದನು. ಹೀಗೆ ಅಜ್ಞಾತವಾಸದಲ್ಲಿ ನಳರಾಜನು ಕೆಲಕಾಲ ಕಳೆದನು.

## ಭೀಮರಾಜನಿಂದ ನಳದಮಯಂತಿಯರ ಅನ್ವೇಷಣೆಗೆ ಪ್ರಯತ್ನ

ಇತ್ತ ಭೀಮರಾಜನು ನಳ ರಾಜ್ಯ ಕಳೆದುಕೊಂಡು ವನಕ್ಕೆ ತೆರಳಿದಾಗಿನಿಂದ ನಳ ದಮಯಂತಿಯರ ಅನ್ವೇಷಣೆಗಾಗಿ ಪುಷ್ಕಳವಾಗಿ ಧನಕೊಟ್ಟು ಕುಶಲರಾದ ಬ್ರಾಹ್ಮಣರನ್ನು ಕಳುಹಿಸಿದ್ದನು. ದಂಪತಿಗಳನ್ನು ಕರೆತಂದವರಿಗೆ ೧೦೦೦ ಗೋವುಗಳನ್ನು, ಅಗ್ರಹಾರಗಳನ್ನು ಕೊಡುವೆ. ಅವರ ಇರವಿನ ಬಗ್ಗೆ ನೀಡುವವರಿಗೆ ೧೦೦೦ ಗೋವು, ಧನ ಕೊಡುವುದಾಗಿ ಹೇಳಿದ್ದ. ಪ್ರಾಯಃ ಯಾರಿಗೂ ಈ ಮಾಹಿತಿ ತಿಳಿಯಲಿಲ್ಲ.

ಆದರೆ **ಸುದೇವ**ನೆಂಬ ಬ್ರಾಹ್ಮಣ ಚೇದಿರಾಜನಗರಕ್ಕೆ ಬಂದು ಆ ರಾಜನ (ಸುಬಾಹು) ಅರಮನೆಯಲ್ಲಿ ನಡೆಯುತ್ತಿದ್ದ ಪುಣ್ಯಾಹವಾಚನ ಕಾರ್ಯಕ್ರಮದಲ್ಲಿ ರಾಜಪುತ್ರಿ

ಸುನಂದೆಯೊಡನೆ ಇದ್ದ ಅಪ್ರತಿಮ ರೂಪಸಿಯೂ, ಕೃಶಳೂ, ಮಲಿನಳೂ, ಅಲಂಕಾರ ಮಾಡಿಕೊಳ್ಳದೇ ಇದ್ದ ಹೊಗೆಯ ಮಧ್ಯದಲ್ಲಿರುವ ಅಗ್ನಿಯಂತಿರುವ ದಮಯಂತಿಯನ್ನು ನೋಡಿ ಅರಮನೆ ಪ್ರವೇಶಿಸಿದನು. ಆಕೆಯ ರೂಪ, ಔದಾರ್ಯ, ಪತಿಗಾಗಿ ಕಾಯುತ್ತಿರುವಂತೆ ಕಾಣುವ ದಮಯಂತಿಯನ್ನು ನೋಡಿದನು. ನಾರಿಯರಿಗೆ ಪತಿಯೇ ನಿಜಕ್ಕೂ ಭೂಷಣ, ಒಡವೆ. ಇವಳು ಪತಿಯಿಲ್ಲದೆಯೂ ಶೋಭಿಸುತ್ತಿದ್ದಾಳೆ. ಸುಖಾರ್ಹಳಾದರೂ ಶೋಕಿಸುತ್ತಿರುವಳು. ಈಕೆಯನ್ನು ಕಂಡು ಆಶ್ವಾಸನೆ ಕೊಡುತ್ತೇನೆ ಎಂದು ವಿಚಾರ ಮಾಡಿ ಸುದೇವನು ದಮಯಂತಿಯ ಬಳಿಗೆ ಬಂದು ನುಡಿದನು.

'ಮಂಗಳೆ! ನಾನು ವಿದರ್ಭರಾಜನ ಮಗನ ಸ್ನೇಹಿತ. ಭೀಮರಾಜನ ಆದೇಶದ ಮೇರೆಗೆ ನಿನ್ನನ್ನು ಹುಡುಕಲು ಬಂದಿರುವೆ. ನಿಮ್ಮ ತಂದೆತಾಯಿಯರು ಕುಶಲರು. ನಿನಗಾಗಿ ನಿನ್ನ ಬಂಧುವರ್ಗ ದುಃಖಿತಪ್ತರಾಗಿದ್ದಾರೆ. ನೂರಾರು ಬ್ರಾಹ್ಮಣರು ನಿನಗಾಗಿ ಅನ್ವೇಷಣೆಯಲ್ಲಿ ತೊಡಗಿದ್ದಾರೆ; ಎಂದನು ಸುದೇವ.

ಸುದೇವನನ್ನು ನೋಡಿದೊಡನೆ ಆತನ ಪರಿಚಯವನ್ನು ಸ್ಮರಿಸಿ ಶೋಕತಪ್ತಳಾಗಿ ರೋದಿಸಿ ತನ್ನ ಕಥೆ ಹೇಳಿಕೊಂಡಳು. ಇದನ್ನು ಗಮನಿಸಿದ ಸುನಂದೆ ತನ್ನ ತಾಯಿಗೆ ಇದನ್ನು ತಿಳಿಸಿದಳು. ಕೂಡಲೇ ಧಾವಿಸಿದ ರಾಜಮಾತೆ ಬ್ರಾಹ್ಮಣನಿಂದ ದಮಯಂತಿಯ ಎಲ್ಲ ವಾರ್ತೆಯನ್ನು ಕೇಳಿ ತಿಳಿದುಕೊಂಡಳು. ಸುದೇವ ನುಡಿದ 'ಮಹಾರಾಣಿಯೇ! ಇವಳು ಭೀಮರಾಜನ ಮಗಳು. ನಳಮಹಾರಾಜನ ಪತ್ನಿ ದಮಯಂತಿ. ನಳಮಹಾರಾಜ ತನ್ನ ಸೋದರನಿಂದ ದುರ್ದ್ಯೂತ ನಿಮಿತ್ತ ರಾಜ್ಯವನ್ನು ಕಳೆದುಕೊಂಡು ಹೆಂಡತಿಯೊಡನೆ ವನಕ್ಕೆ ತೆರಳಿದ. ನಂತರ ಹೇಗೋ ನಿಮ್ಮಲ್ಲಿ ಅಜ್ಞಾತವಾಸದಿಂದ ಇದ್ದಾಳೆ'.

'ಈಕೆಯು ರೂಪದಿಂದ ಯಾವ ಮನುಷ್ಯರಿಗೂ ಕಡಿಮೆ ಇಲ್ಲ. ಈಕೆಯ ಭ್ರೂಮಧ್ಯದಲ್ಲಿ ಸಹಜವಾದ ಮಚ್ಚೆ ಇದೆ. ಆದರೆ ಈಗ ಅದು ಮಲಿನವಾದ ಶರೀರದಲ್ಲಿ ಮರೆಯಾಗಿದೆ. ಈ ಮಚ್ಚೆಯಿಂದ ನಾನು ದಮಯಂತಿಯನ್ನು ಗುರುತಿಸಿದೆ' ಎಂದನು ಸುದೇವ.

ಸುದೇವನ ಮಾತನ್ನು ಕೇಳಿದ ರಾಜಮಾತೆಯು 'ಹೌದು, ಈಕೆ ದಮಯಂತಿಯೇ. ನಾನೂ ಹಾಗೂ ದಮಯಂತಿಯ ತಾಯಿ ಸೋದರಿಯರು. ನಾನು ಇವಳ ಚಿಕ್ಕಮ್ಮ' ಎಂದು ಗುರುತಿಸುತ್ತಾ ದಮಯಂತಿಯ ಬಗ್ಗೆ ಮಾತೃವಾತ್ಸಲ್ಯ ತೋರಿದಳು. ದಮಯಂತಿಯು ತನ್ನ ಚಿಕ್ಕಮ್ಮನನ್ನು ವಂದಿಸಿ, ಕೃತಜ್ಞತೆ ತೋರಿಸಿದಳು. ತನ್ನನ್ನು ತಂದೆಯಾದ ಭೀಮರಾಜನ ಮನೆಗೆ ಕಳುಹಿಸಲು ವ್ಯವಸ್ಥೆ ಮಾಡಲು ಕೋರಿದಂತೆ ರಾಜಮಾತೆಯು ಮೇನೆಯಲ್ಲಿ ದಮಯಂತಿಯನ್ನು ಸೂಕ್ತ ರಾಜಬಲದೊಂದಿಗೆ ಕಳುಹಿಸಿದಳು. ತವರಿಗೆ ಮರಳಿದ ದಮಯಂತಿಯನ್ನು ಪುರವಾಸಿಗಳು, ಬಂಧುಗಳು ಸತ್ಕರಿಸಿದರು. ಸಂಭ್ರಮದಿಂದ ದೇವತಾ ಪೂಜಾದಿಗಳನ್ನು ಮಾಡಿದರು. ಸುದೇವನಿಗೆ ಭೀಮರಾಜನು ಸಹಸ್ರ ಗೋವುಗಳನ್ನು ಕೊಟ್ಟನು.

ದಮಯಂತಿಯು ತಾಯಿಯನ್ನು ತನ್ನ ಪತಿಯ ಅನ್ವೇಷಣೆಗೆ ಪ್ರಯತ್ನಿಸಲು ರಾಜನಿಗೆ ತಿಳಿಸಿದಳು. ರಾಜನು ಕೂಡಲೇ ಬ್ರಾಹ್ಮಣರನ್ನು ಇದಕ್ಕಾಗಿ ನಿಯೋಜಿಸಿದ. ಆ ಬ್ರಾಹ್ಮಣರಿಗೆ ದಮಯಂತಿಯು ಅವರು ಹೋದ ಕಡೆಯಲ್ಲೆಲ್ಲ ಜನಸ್ತೋಮವಿರುವಡೆಯಲ್ಲಿ ಈ ಮಾತುಗಳನ್ನು ಮತ್ತೇ ಮತ್ತೇ ಸಾರಲು ಹೇಳಿದರು:

**ಕ್ವ ನು ತ್ವಂ ಕಿತವಚ್ಛಿತ್ತ್ವಾ ವಸ್ತ್ರಾರ್ಧಂ ಪ್ರಸ್ಥಿತೋ ಮಮ ।**
**ಉತ್ಸೃಜ್ಯ ವಿಪಿನೇ ಸುಪ್ತಾಮನುರಕ್ತಾಂ ಪ್ರಿಯಾಂ ಪ್ರಿಯ ॥**
**ಸಾ ವೈ ಯಥಾ ತ್ವಯಾ ದೃಷ್ಟ್ವಾ ತಥಾಽಽಸ್ತೇ ತ್ವತ್ಪ್ರತೀಕ್ಷಿಣೀ ।**
**ದಹ್ಯಮಾನಾ ಭೃಶಂ ಬಾಲಾ ವಸ್ತ್ರಾರ್ಧೇನಾಭಿಸಂವೃತಾ ॥**
**ಪ್ರಸಾದಂ ಕುರು ವೈ ವೀರ ಪ್ರತಿವಾಕ್ಯಂ ದದಸ್ವ ಚ ॥ ಇತ್ಯಾದಿ ।**
**- ವನಪರ್ವ(೬೯/೩೭-೪೭)**

'ಎಲೈ ಜೂಜುಕೋರನೇ! ಅರಣ್ಯದಲ್ಲಿಮಲಗಿದ್ದಪತ್ನಿಯಅರ್ಧವಸ್ತ್ರವನ್ನುಕತ್ತರಿಸಿಕೊಂಡು ನಿನ್ನಲ್ಲಿಯೇ ಅನುರಕ್ತಳಾದವಳನ್ನು ಬಿಟ್ಟು ಎಲ್ಲಿ ಹೋದೆ? ಇಂದಿಗೂ ನಿನ್ನ ಸ್ಮರಣೆಯಲ್ಲಿಯೇ ಬೇಯುತ್ತಿರುವ ಆಕೆ ಅದೇ ಅರ್ಧವಸ್ತ್ರಧರಿಸಿಯೇ ನಿನಗಾಗಿ ಕಾಯುತ್ತಿರುವಳು. ಆಕೆಯ ಬಗ್ಗೆ ಅನುಕಂಪವಿಲ್ಲವೇ? ಗಂಡನಿಂದ ರಕ್ಷಿಸಲ್ಪಡಬೇಕಾದವಳು ಹೆಂಡತಿ. ಗಾಳಿಯ ಸಹಕಾರದಿಂದ ವನವನ್ನು ಸುಡುವ ಬೆಂಕಿಯಂತೆ ಆಕೆಯನ್ನು ನಿನ್ನ ವಿರಹಾಗ್ನಿಯು ಆಕೆಯನ್ನು ಸುಡುತ್ತಿದೆ. ಸ್ವಯಂವರದಲ್ಲಿ ಕೊಟ್ಟ ಮಾತನ್ನು ಉಳಿಸಿಕೋ. ಕ್ರೂರತೆ ಪತ್ನಿ ಬಗ್ಗೆ ಬೇಡ. ದಯೆ ತೋರು.' ಎಂದು ದಮಯಂತಿಯು ಬ್ರಾಹ್ಮಣರಿಗೆ ನಾಲ್ಕಾರು ಜನ ಸೇರಿರುವ ಕಡೆಯಲ್ಲೆಲ್ಲ ಕೂಗಿ ಹೇಳಲು ತಿಳಿಸಿದಳು.

ಹೀಗೆ ಹೇಳಿದಾಗ ಯಾವ ಪುರುಷನಾದರೂ ಉತ್ತರಿಸಿದಲ್ಲಿ ಅದನ್ನು ಯಥಾವತ್ತಾಗಿ ತನಗೆ ಕೂಡಲೇ ಬಂದು ತಿಳಿಸಲು ಬ್ರಾಹ್ಮಣರನ್ನು ಬಿನ್ನವಿಸಿದಳು. ಅಂತೆಯೇ ಬ್ರಾಹ್ಮಣರು ದೇಶವಿದೇಶಗಳಲ್ಲಿ ಸಂಚರಿಸುತ್ತಾ ದಮಯಂತಿ ಹೇಳಿದಂತೆ ಜನಸಮ್ಮರ್ದದಲ್ಲಿ ಕೂಗುತ್ತಾ ನಳನನ್ನು ಹುಡುಕುವ ಕೆಲಸದಲ್ಲಿ ಮಗ್ನರಾದರು.

ಬೃಹದಶ್ವ ಮುನಿಗಳು ಕಥೆಯನ್ನು ಮುಂದುವರೆಸುತ್ತಾ ಯುಧಿಷ್ಠಿರನಿಗೆ ಹೇಳಿದರು.

ರಾಜನ್! ನಳನನ್ನು ಹುಡುಕುತ್ತಾ ಹೋದಂತೆ ಅನೇಕ ದಿನಗಳು ಗತಿಸಿದವು. ಅನ್ವೇಷಿಸಲು ಹೋದ ಬ್ರಾಹ್ಮಣರಲ್ಲಿ **ಪರ್ಣಾದ**ನೆಂಬ ಬ್ರಾಹ್ಮಣನು ರಾಜ್ಯಕ್ಕೆ ಹಿಂದಿರುಗಿ ಬಂದು ದಮಯಂತಿಗೆ ನಿವೇದಿಸಿದ. ನಾನು ನಳನನ್ನು ಹುಡುಕುತ್ತಾ ಹುಡುಕುತ್ತಾ ಕೊನೆಗೆ ಋತುಪರ್ಣರಾಜನು ಆಳುವ ಅಯೋಧ್ಯೆಗೆ ಹೋಗಿ ಆ ರಾಜನ ಬಳಿ ನೀನು ಕೊಟ್ಟ ಸಂದೇಶವನ್ನು ಹೇಳಿದೆನಾದರೂ ರಾಜನು ಮಾತ್ರ ಏನೂ ಉತ್ತರಿಸಲೇ ಇಲ್ಲ. ಅವನ ಸಭೆಯಲ್ಲಿಯೂ ಯಾರೂ ಏನೂ ಹೇಳಲೇ ಇಲ್ಲ. ರಾಜನ ಅಪ್ಪಣೆ ಪಡೆದ ನಾನು

ಹೊರನಡೆದಾಗ ಏಕಾಂತದಲ್ಲಿ ಋತುಪರ್ಣರಾಜನ ಸಾರಥಿಯೂ, ಅಶ್ವಶಾಲಾಧ್ಯಕ್ಷನೂ, ಕುರೂಪಿಯೂ, ಮೋಟಾದ ಕೈಗಳುಳ್ಳವನೂ ಆದ **ಬಾಹುಕ**ನೆಂಬುವವನು ನನ್ನನ್ನು ಸಂಧಿಸಿ ಮಾತನಾಡಿಸಿದನು. ಅವನು ಪಾಕಶಾಸ್ತ್ರದಲ್ಲೂ ನಿಪುಣನಾಗಿದ್ದವನು, ನನ್ನನ್ನು ನೋಡಿ ನಿಟ್ಟುಸಿರು ಬಿಟ್ಟು ಬಿಕ್ಕಿ ಬಿಕ್ಕಿ ಅಳುತ್ತಾ ಹೀಗೆ ನುಡಿದನು.

'**ಪತಿವ್ರತಾಸ್ತ್ರೀಯರು ಎಂತಹ ವಿಷಮ ಪರಿಸ್ಥಿತಿಯಲ್ಲೂ ಆಪತ್ತಿನಲ್ಲೂ ತಮ್ಮನ್ನು ತಾವೇ ರಕ್ಷಿಸುವರು** ಅದರಿಂದ ಅವರು ಸ್ವರ್ಗಕ್ಕೆ ಯೋಗ್ಯರಾಗುತ್ತಾರೆ. ಪತಿಯಿಂದ ತ್ಯಕ್ತರಾದರೂ ಕೂಡಾ ಪತಿ ಬಗ್ಗೆ ಕೋಪಗೊಳ್ಳರು. ಪತಿವ್ರತೆಯರು ಸಚ್ಚಾರಿತ್ರ್ಯವೆಂಬ ವಜ್ರಕವಚದಿಂದ ತಮ್ಮ ಪ್ರಾಣಗಳನ್ನು ಧರಿಸುತ್ತಾರೆ. ತನ್ನನ್ನು ಬಿಟ್ಟುಹೋದ ಗಂಡನ ಬಗ್ಗೆ ಕೂಡಾ ದಮಯಂತಿಯು ಸಿಟ್ಟಾಗಬಾರದು. ಏಕೆಂದರೆ ನಿನ್ನ ಗಂಡ ಅತ್ಯಂತ ವಿಷಮ ಪರಿಸ್ಥಿತಿ, ಅಸಹಾಯಕ ಸ್ಥಿತಿಯಲ್ಲಿದ್ದ. ಪಕ್ಷಿಗಳು ತಾನು ಉಟ್ಟ ಬಟ್ಟೆಯನ್ನು ಕಸಿದುಕೊಂಡಿದ್ದವು. ಮನೋವ್ಯಾಧಿಯಿಂದ ದಗ್ಧವಾಗಿದ್ದನು. ಈ ಮೊದಲೇ ರಾಜ್ಯಕೋಶಗಳೆಲ್ಲವನ್ನೂ ಕಳೆದುಕೊಂಡಿದ್ದನು. ಆದ್ದರಿಂದ ಅತ್ಯಂತ ಅಸಹಾಯಕನಾದ ಗಂಡನ ಬಗ್ಗೆ ಹೆಂಡತಿಯು ಕೋಪ ಮಾಡುವುದು ಬೇಡ' ಎಂದು ಆ ಬಾಹುಕ ನುಡಿದುದನ್ನು ಕೇಳಿದ ಕೂಡಲೇ ನಾನು ಇಲ್ಲಿಗೆ ಬಂದೆ.

> **ವೈಷಮ್ಯಮಪಿ ಸಂಪ್ರಾಪ್ತಾ ಗೋಪಾಯಂತಿ ಕುಲಸ್ತ್ರಿಯಃ ।**
> **............................ ಭರ್ತೃಭಿಶ್ಚೈವ ನ ಕುಪ್ಯಂತಿ ॥**
> **ಪ್ರಾಣಾಂಶ್ಚಾರಿತ್ರಕವಚಾನ್ ಧಾರಯಂತಿ ವರಸ್ತ್ರಿಯಃ ।**
> **ವಿಷಮಸ್ಥೇನ ಮೂಢೇನ ಪರಿಭ್ರಷ್ಟಸುಖೇನ ಚ ।**
> **ಯತ್ ಸಾ ತೇನ ಪರಿತ್ಯಕ್ತಾ ತತ್ರ ನ ಕ್ರೋದ್ಧುಮರ್ಹತಿ ॥ ಇತ್ಯಾದಿ**
> **- ವನಪರ್ವ(೭೦/೮-೧೩)**

ಹೀಗೆ ನುಡಿದ ಪರ್ಣಾದನ ಮಾತನ್ನು ಕೇಳಿ ದಮಯಂತಿಯು ಏಕಾಂತದಲ್ಲಿ ತನ್ನ ತಾಯಿಗೆ ಇದೆಲ್ಲವನ್ನು ಹೇಳಿ 'ಅಮ್ಮ ಈ ವಿಷಯ ನಮ್ಮ ಅಪ್ಪನಿಗೆ ತಿಳಿಯಬಾರದು. ನನ್ನನ್ನು ಕರೆತಂದ ಸುದೇವ ಬ್ರಾಹ್ಮಣನನ್ನು ಕೂಡಲೇ ಅಯೋಧ್ಯೆಗೆ ಕಳಿಸುವ ವ್ಯವಸ್ಥೆ ಮಾಡು' ಎಂದಳು. ಸುದೇವನನ್ನು ಕಳಿಸುವ ಮುನ್ನ ಪರ್ಣಾದ ಬ್ರಾಹ್ಮಣನಿಗೆ ದಮಯಂತಿಯು ಸಾಕಷ್ಟು ಧನವನ್ನು ಬಹುಮಾನವಾಗಿ ಕೊಟ್ಟು ಸತ್ಕರಿಸಿದ್ದಲ್ಲದೇ ನಳನು ವಾಪಸು ಬಂದ ಮೇಲೆ ಮತ್ತೂ ಸಂಭಾವನೆ ಕೊಡುವುದಾಗಿ ತಿಳಿಸಿದಳು.

ಇತ್ತ ಸುದೇವನು ಬಂದ ಕೂಡಲೇ ತಾಯಿಯ ಸಮುಖದಲ್ಲಿಯೇ 'ನೀನು ಕೂಡಲೇ ಅಯೋಧ್ಯೆಗೆ ಹೋಗಿ ಋತುಪರ್ಣನಿಗೆ ತಿಳಿಸು. ದಮಯಂತಿಯು ಮತ್ತೆ ಮದುವೆಯಾಗಲು ಸ್ವಯಂವರಕ್ಕಾಗಿ ಸನ್ನದ್ಧಳಾಗಿದ್ದಾಳೆ. ಇದಕ್ಕಾಗಿ ನಾನಾ ದೇಶದ ರಾಜರು ಬರುತ್ತಿದ್ದಾರೆ. ಸ್ವಯಂವರ ನಾಳೆಯೇ ನಡೆಯಲಿದೆ. ನಳ ಬದುಕಿದ್ದಾನೆಯೋ, ಇಲ್ಲವೋ ಎಂಬ ವಿಷಯ

ಇದುವರೆಗೂ ತಿಳಿಯದೇ ಇರುವುದರಿಂದ ಈ ನಿರ್ಧಾರಕ್ಕೆ ದಮಯಂತಿಯು ಬಂದಿದ್ದಾಳೆ ನೀನೂ ಈ ಸ್ವಯಂವರಕ್ಕೆ ಬರಬಹುದು[೧].'

ಋತುಪರ್ಣನು ಸುದೇವನ ಮಾತನ್ನು ಕೇಳಿ ಕೂಡಲೇ ಒಂದೇ ದಿನದಲ್ಲಿ ವಿದರ್ಭಕ್ಕೆ ಕರೆದುಕೊಂಡು ಹೋಗಲು ಸಮರ್ಥನು ಬಾಹುಕ ಮಾತ್ರ ಎಂದು ಬಗೆದು ತನ್ನ ಇಚ್ಛೆಯನ್ನು ಬಾಹುಕನಿಗೆ ತಿಳಿಸಿದನು. ಇದನ್ನು ಕೇಳಿದ ನಳನು ಬೆಂದು ಹೋದನು. ದಮಯಂತಿಯ ಈ ಕ್ರೂರನಿರ್ಧಾರನಳನನ್ನುಕಂಗೆಡಿಸಿದರೂಇದರಲ್ಲಿತನ್ನನ್ನುಕರೆಸುವಹುನ್ನಾರವಿರಬಹುದೆಂದು ಬಗೆದನು. ತನ್ನ ಕ್ರೂರ ನಡತೆ ದಮಯಂತಿಯ ಮರುವಿವಾಹಕ್ಕೆ ಕಾರಣವಾಗಿರಬಹುದೆಂದೂ ತರ್ಕಿಸಿದನು. ಏನೇ ಇರಲಿ ಋತುಪರ್ಣ ಹಾಗೂ ತನ್ನ ಸಲುವಾಗಿ ಸ್ವಯಂವರಕ್ಕೆ ಹೋಗಲು ನಿಶ್ಚಯಿಸಿ ಸಮ್ಮತಿಸಿದನು.

**ದಮಯಂತೀ ............**
**ಅಸ್ಮದರ್ಥೇ ಭವೇದ್ವಾಯಮುಪಾಯಶ್ಚಿಂತಿತೋ ಮಹಾನ್ ।**
**ಸ್ತ್ರೀ ಸ್ವಭಾವಶ್ಚಪಲೋ ಲೋಕೇ ಮಮ ದೋಷಶ್ಚ ದಾರುಣಃ ॥**
**ನೈವಂ ಸಾ ಕರ್ಹಿಚಿತ್ಕುರ್ಯಾತ್ ಸಾಪತ್ಯಾ ಚ ವಿಶೇಷತಃ ।**
**ಋತುಪರ್ಣಸ್ಯ ವೈ ಕಾಮಮಾತ್ಮಾರ್ಥಂ ಚ ಕರೋಮ್ಯಹಮ್ ॥**
**- ವನಪರ್ವ (೭೧/೪-೮)**

ನಂತರ ಒಂದೇ ದಿನದಲ್ಲಿ ವಿದರ್ಭ ದೇಶಕ್ಕೆ ಹೋಗಲು ಸೂಕ್ತವಾದ ಅಶ್ವಗಳನ್ನು ಆರಿಸಿಕೊಂಡನು. ಆರಿಸಿದ ಕುದುರೆಗಳು ನೋಡಲು ತೆಳುವಾಗಿದ್ದರೂ ಸಲ್ಲಕ್ಷಣಗಳಿಂದ ಕೂಡಿದ್ದವು. ಋತುಪರ್ಣನಿಗೆ ಇದೆಲ್ಲ ಅರ್ಥವಾಗಲಿಲ್ಲ. ಆಗ ಬಾಹುಕನು 'ನೀನೇ ಆರಿಸು. ಆದರೆ ಅವು ಸಕಾಲಕ್ಕೆ ಮುಟ್ಟದಿದ್ದಲ್ಲಿ ನಾನು ಜವಾಬ್ದಾರಿಯಾಗೆನು' ಎಂದನು. ಋತುಪರ್ಣನು ಕೊನೆಗೆ ಕುದುರೆಗಳ ಆಯ್ಕೆಯನ್ನು ಬಾಹುಕನಿಗೇ ಬಿಟ್ಟಾಗ ಬಾಹುಕನು ಸಿಂಧೂರ ದೇಶದಲ್ಲಿ ಹುಟ್ಟಿದ, ಅಗಲವಾದ ಮೂಗು ಇರುವ ದಪ್ಪ ಕೆನ್ನೆಗಳಿರುವ ಮತ್ತು ಸುಳಿಗಳಿರುವ ವಾಯುವೇಗದಲ್ಲಿ ಓಡುವ ಕುದುರೆಗಳನ್ನು ಆರಿಸಿದನು. ಆಯ್ದ ಕುದುರೆಗಳಿಗೆ ಹಣೆಯ ಮೇಲೆ ಒಂದು ಸುಳಿ, ತಲೆ ಮೇಲೆ ಎರಡು, ಎರಡು ಪಾರ್ಶ್ವಗಳಲ್ಲಿ, ಉಪಪಾರ್ಶ್ವಗಳಲ್ಲಿ ಎರಡೆರಡರಂತೆ ನಾಲ್ಕು, ಎದೆ ಮೇಲೆ ಎರಡು ಹೀಗೆ ಒಟ್ಟು ಹತ್ತು

---

೧ ಋತುಪರ್ಣಂ ವಚೋ ಬ್ರೂಹಿ .................. ।
ಆಸ್ಥಾಸ್ಯತಿ ಪುನರ್ಭೈಮೀ ದಮಯಂತೀ ಸ್ವಯಂವರಮ್ ॥
ತಥಾ ಚ ಗಣಿತಃ ಕಾಲಃ ಶ್ವೋಭೂತೇ ಸ ಭವಿಷ್ಯತಿ ।
ಯದಿ ಸಂಭಾವನೀಯಂ ತೇ ಗಚ್ಛ ಶೀಘ್ರಮರಿಂದಮ ॥
ಸೂರ್ಯೋದಯೇ ದ್ವಿತೀಯಂ ಸಾ ಭರ್ತಾರಂ ವರಯಿಷ್ಯತಿ ।
ನ ಹಿ ಜ್ಞಾಯತೇ ವೀರೋ ನಲೋ ಜೀವತಿ ವಾ ನ ವಾ ॥ - ವನಪರ್ವ(೭೦/೨೩-೨೬)

ಸುಳಿಗಳಿರುವುದು ಸಲ್ಲಕ್ಷಣವುಳ್ಳ ಕುದುರೆಗಳೆಂದು ಬಾಹುಕನು ರಾಜನಿಗೆ ವಿವರಿಸಿ ಒಪ್ಪಿಸಿ ಪ್ರಯಾಣಕ್ಕೆ ಸನ್ನದ್ಧನಾದನು[೧].

## ವಿದರ್ಭಕ್ಕೆ ಋತುಪರ್ಣನ ಪಯಣ

**ಋತುಪರ್ಣ** ನುಡಿದ – 'ನೀನೇ ಅಶ್ವತತ್ತ್ವಜ್ಞ, ಅದರಲ್ಲಿ ಕುಶಲ; ನೀನು ನಿರ್ಧರಿಸುವ ಕುದುರೆಗಳನ್ನೇ ರಥಕ್ಕೆ ಕಟ್ಟು' ನಂತರ ಬಾಹುಕನು ಸಮರ್ಥವಾದ ವೇಗವುಳ್ಳ ಕುದುರೆಗಳನ್ನು ಕಟ್ಟಿದ. ಋತುಪರ್ಣ ರಥ ಹತ್ತಿದ. ಆಗ ಆ ಉತ್ತಮ ಕುದುರೆಗಳು ಮುಗ್ಗರಿಸಿ ಕೆಳಗೆ ಬಿದ್ದು ಮೊಣಕಾಲೂರಿ ನಿಂತವು. ನಂತರ ಬಾಹುಕನು ತೇಜೋಬಲದಿಂದ ಕೂಡಿದ ಆ ಕುದುರೆಗಳ ಮೈದಡವಿ, ಸಂತೈಸಿ, ಮೇಲಕ್ಕೆಬ್ಬಿಸಿ, ಸಹಸಾರಥಿಯಾದ ವಾರ್ಷ್ಣೇಯನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಚಾವಟಿಗಳಿಂದ ಮುನ್ನಡೆಯಲು ತಿವಿದನು. ಹೀಗೆ ಪ್ರಚೋದಿತವಾದ ಕುದುರೆಗಳು ರಥದಲ್ಲಿರುವವರನ್ನು ಭ್ರಾಂತಿಗೊಳಿಸುತ್ತಾ ಆಕಾಶಕ್ಕೆ ನೆಗೆದವು. ಅಯೋಧ್ಯಾಧಿಪತಿಯಾದ ಋತುಪರ್ಣನು ಕುದುರೆಗಳ ವಾಯುವೇಗವನ್ನು ಗಮನಿಸಿ ಆಶ್ಚರ್ಯಚಿತನಾದನು.

ಕುದುರೆಗಳ ಆಯ್ಕೆ, ರಥಧ್ವನಿಗಳನ್ನು ಗಮನಿಸಿದ ವಾರ್ಷ್ಣೇಯನು 'ಈ ಬಾಹುಕನು ದೇವರಾಜನಾದ ಇಂದ್ರನ ಸಾರಥಿಯಾದ ಮಾತಲಿಯೇ? ಕಾರಣ ಮಾತಲಿಯ ಲಕ್ಷಣಗಳೆಲ್ಲ ಇವನಲ್ಲಿ ಕಾಣುತ್ತಿವೆಯಲ್ಲ! ಅಥವಾ ಕುದುರೆ ಜಾತಿ, ಲಕ್ಷಣಬಲ್ಲ ಶಾಲಿಹೋತ್ರನು ಭೂಮಿಯಲ್ಲಿ ಮನುಷ್ಯನಾಗಿ ಬಂದಿರುವನೆ? ಅಥವಾ ಶತ್ರುಸಂಹಾರಿಯಾದ ನಳನೇ ಇವನಾ? ಬಾಹುಕ, ನಳ ಇವರಲ್ಲಿ ವಿದ್ಯಾ ವಯಸ್ಸುಗಳ ಸಾಮ್ಯವಿದೆ. ಆದರೆ ನಳನ ರೂಪ ಇವನಲ್ಲಿಲ್ಲ, ಆದ್ದರಿಂದ ಇವನು ನಳನಿರಲಿಕ್ಕಿಲ್ಲ[೨].

ಅಥವಾ ನಳಮಹಾತ್ಮ ಈ ಪ್ರಚ್ಛನ್ನ ವೇಷದಲ್ಲಿರಬಹುದಲ್ಲ! ಏಕೆಂದರೆ ಮಹಾತ್ಮರು ಒಮ್ಮೊಮ್ಮೆ ವಿಧಿಯಾಟಕ್ಕೆ ಸಿಲುಕಿ ಭೂಮಿಯಲ್ಲಿ ಹೀಗೆ ಸಂಚರಿಸುತ್ತಿರುತ್ತಾರೆ.

**ಪ್ರಚ್ಛನ್ನಾಹಿ ಮಹಾತ್ಮಾನಶ್ಚರಂತಿ ಪೃಥಿವೀಮಿಮಾಮ್ ।**
**ದೈವೇನ ವಿಧಿನಾ ಯುಕ್ತಾ ಶಾಸ್ತ್ರೋಕ್ತೈಶ್ಚ ನಿರೂಪಣೈಃ ॥** - ವನಪರ್ವ(೭೧/೩೧)

ಬಾಹುಕನಲ್ಲಿ ನಳನ ರೂಪ ಮಾತ್ರವಲ್ಲ ವಿದ್ಯೆ ಹಾಗೂ ರಾಜಲಕ್ಷಣಗಳಿವೆ. ಅವನೇ ಬಾಹುಕನಾಗಿರಬಾರದೇಕೇ?

---

೧ ಏಕೋ ಲಲಾಟೇ ದ್ವೌ ಮೂರ್ಧ್ನಿ ದ್ವೌದ್ವೌ ಪಾರ್ಶ್ವೋಪಪಾರ್ಶ್ವಯೋಃ ।
ದ್ವೌದ್ವೌ ದಕ್ಷಸಿ ವಿಜ್ಞೇಯೌ ಪ್ರಯಾಣೇ ಚೈಕ ಏವ ತು ॥
ಏತೇ ಹಯಾ ಗಮಿಷ್ಯಂತಿ ವಿದರ್ಭಾನ್ ನಾತ್ರ ಸಂಶಯಃ ॥ - ವನಪರ್ವ(೭೧/೧೬,೧೭)

೨ ನಾಯಂ ನಲೋ ಮಹಾವೀರ್ಯಸ್ತದ್ವಿದ್ಯಶ್ಚ ಭವಿಷ್ಯತಿ । - ವನಪರ್ವ(೭೧/೩೦)

ನಳಂ ಸರ್ವಗುಣೈರ್ಯುಕ್ತಂ ಮನ್ಯೇ ಬಾಹುಕಮಂತತಃ ॥ - ವನ.(೭೧/೩೩)

ವಾರ್ಷ್ಣೇಯ ಹೀಗೆ ಯೋಚಿಸಿದನು. ಋತುಪರ್ಣರಾಜನು ಬಾಹುಕನ ಹಯವಿದ್ಯಾಕೌಶಲದಲ್ಲಿ ಏಕಾಗ್ರತೆ, ಕುದುರೆಗಳ ಆಯ್ಕೆಯಲ್ಲಿ ತೋರಿದ ನೈಪುಣ್ಯಗಳನ್ನು ತುಂಬಾ ಸಂತೋಷಗೊಂಡನು.

ಬೃಹದಶ್ವರು ಮುಂದುರೆಸುತ್ತಾ 'ಯುಧಿಷ್ಠಿರ! ಬಾಹುಕನು ರಥವನ್ನು ಆಕಾಶದಲ್ಲಿ (ಗರುಡ) ಪಕ್ಷಿಯು ಹಾರುವಂತೆ ದಾರಿಯಲ್ಲಿನ ಪರ್ವತ, ನದಿಗಳನ್ನು ದಾಟಿಸಿಕೊಂಡು ಹೊರಟನು. ಹೀಗೆ ಹೋಗುವಾಗ ಭಾಂಗಾಸುರಿ(ಋತುಪರ್ಣ) ರಾಜನ ಉತ್ತರೀಯವು ರಥದಿಂದ ಕೆಳಗೆ ಬಿದ್ದಿತು. ಕೂಡಲೇ ರಾಜನು ಬಾಹುಕನಿಗೆ ರಥವನ್ನು ನಿಲ್ಲಿಸಲು ಹಾಗೂ ವಾರ್ಷ್ಣೇಯನು ಉತ್ತರೀಯವನ್ನು ತರಲು ತಿಳಿಸಿದನು. ಆಗ ಬಾಹುಕ ನುಡಿದ ರಾಜನ್! ಈಗಾಗಲೇ ರಥ ವಸ್ತ್ರ ಬಿದ್ದ ಜಾಗದಿಂದ ಒಂದು ಯೋಜನ ಮುಂದೆ ಬಂದಿದೆ. ಉತ್ತರೀಯವನ್ನು ತರುವುದು ಅಸಾಧ್ಯ. ಋತುಪರ್ಣ ಆ ವಿಷಯ ಅಲ್ಲಿಗೇ ನಿಲ್ಲಿಸಿದ.

ರಥ ಮತ್ತೇ ಅದೇ ವೇಗದಲ್ಲಿ ಮುಂದುವರೆಯಿತು. ದಾರಿಯಲ್ಲಿ ಒಂದು ವಿಭೀತಕವೆಂಬ ಫಲಭರಿತ ವೃಕ್ಷವನ್ನು ನೋಡಿದ ಋತುಪರ್ಣನು ತನ್ನ ಗಣನಶಕ್ತಿ (ಸಂಖ್ಯಾನಶಕ್ತಿ) ಪ್ರದರ್ಶಿಸುತ್ತಾ ನುಡಿದ. 'ನೋಡು ಬಾಹುಕ! ಇದರಲ್ಲಿ ಕೆಳಗೆ ಉದುರಿದ ಎಲೆಗಳು ಮತ್ತು ಹಣ್ಣುಗಳು ವೃಕ್ಷದ ಮೇಲಿರುವ ಎಲೆಗಳಿಗಿಂತ ಹಾಗೂ ಹಣ್ಣುಗಳಿಗಿಂತ ಕ್ರಮವಾಗಿ ೧೦೧ ಹೆಚ್ಚಾಗಿವೆ. ಇದೇ ಮರದ ಎರಡು ರೆಂಬೆಗಳಲ್ಲಿ ಐದು ಕೋಟಿ ಎಲೆಗಳಿವೆ. ಪೂರ್ವದಿಕ್ಕಿನ ಎರಡು ಶಾಖೆಗಳಲ್ಲಿ ಹಾಗೂ ಅವುಗಳ ಉಪಶಾಖೆಗಳಲ್ಲಿ ೨೦೯೫ ಹಣ್ಣುಗಳಿವೆ. ನೀನು ಬೇಕಾದರೆ ಪರೀಕ್ಷಿಸು.'

ಇದನ್ನು ಕೇಳಿದ ಬಾಹುಕ ರಾಜನ ಈ ವಿದ್ಯಾನೈಪುಣ್ಯವನ್ನು ಪರೀಕ್ಷಿಸಲು ವಾರ್ಷ್ಣೇಯನಿಗೆ ಕುದುರೆಗಳ ಕಡಿವಾಣಗಳನ್ನು ಕೊಟ್ಟು(ರಾಜನಿಂದ ಅನುಮತಿ ಪಡೆದು) ರಥದಿಂದ ಇಳಿದೇ ಬಿಟ್ಟ.

ಬಾಹುಕನು ಪರೀಕ್ಷೆ ಮಾಡಿಯೇ ತೀರುವನೆಂದು ನಿರೀಕ್ಷಿಸದ ಋತುಪರ್ಣ ವಿದರ್ಭ ಸೇರಲು ಹಂಬಲಿಸಿದರೂ ಬಾಹುಕನು ಮಾತ್ರ ಒಪ್ಪದೇ ಆ ವಿಭೀತಕ ಮರದ ನಿರ್ದಿಷ್ಟ ಕೊಂಬೆಗಳನ್ನು ಕಡಿದು ಋತುಪರ್ಣನು ಹೇಳಿದ ಎಲೆ, ಹಣ್ಣುಗಳ ಸಂಖ್ಯೆಗಳನ್ನು ಖಚಿತಪಡಿಸಿಕೊಂಡು ಸಂತೋಷಗೊಂಡನಲ್ಲದೇ, ಈ ಸಂಖ್ಯಾಶಾಸ್ತ್ರವನ್ನು ಉಪದೇಶಿಸಲು ವಿನಂತಿಸಿದ. ಅದಕ್ಕೆ ಪ್ರತಿಯಾಗಿ ವಿನಿಮಯ ರೂಪವಾಗಿ ಅಶ್ವವಿದ್ಯೆಯನ್ನು ಉಪದೇಶಿಸುವುದಾಗಿ ಬಾಹುಕರೂಪಿ ನಳನು ರಾಜನಿಗೆ ವಚನವಿತ್ತ.

ಇದರಿಂದ ಮುದಗೊಂಡ ಋತುಪರ್ಣನು ಬಾಹುಕನಿಗೆ ಸಂಖ್ಯಾಶಾಸ್ತ್ರವಲ್ಲದೆ ಅಕ್ಷವಿದ್ಯೆಯನ್ನೂ ಕೂಡಲೇ ಉಪದೇಶಿಸಿದ. ಅಲ್ಲದೆ ಅಶ್ವವಿದ್ಯೆಯನ್ನು ಸ್ವಲ್ಪ ಸಮಯದ ನಂತರ ಉಪದೇಶಿಸಲು ವಿನಂತಿಸಿದ. ಕಾರಣ ಅತನಿಗೆ ತೀವ್ರವಾಗಿ ವಿದರ್ಭ ಸೇರಬೇಕಿತ್ತು.

ಗಣಯಿತ್ವಾ ಯಥೋಕ್ತಾಸಿ ತಾವಂತ್ಯೇವ ಫಲಾನಿ ತು ॥ ೭೨/೨೪ ॥
ಶ್ರೋತುಮುಚ್ಛಾಮಿ ತಾಂ ವಿದ್ಯಾಂ ಯಯೈತತ್ ಜ್ಞಾಯತೇ ನೃಪ ॥ ೨೫ ॥
ತಮುವಾಚ ತತೋ ರಾಜಾ ತ್ವರಿತೋ ಗಮನೇ ನೃಪ।
ವಿದ್ಧ್ಯಕ್ಷಹೃದಯಜ್ಞಂ ಮಾಂ ಸಂಖ್ಯಾನೇ ಚ ವಿಶಾರದಂ ॥ ೨೬ ॥

ಬಾಹುಕಸ್ತಮುವಾಚಾಥ ದೇಹಿ ವಿದ್ಯಾಮಿಮಾಂ ಮಮ।
ಮತ್ತೋಽಪಿ ಚಾಶ್ವಹೃದಯಂ ಗೃಹಾಣ ಪುರುಷರ್ಷಭ ॥ ೨೭ ॥

........ ಋತುಪರ್ಣಸ್ತತೋ ರಾಜಾ ಬಾಹುಕಂ .....
ಯಥೋಕ್ತಂ ತ್ವಂ ಗೃಹಾಣೇದಮಕ್ಷಾಣಾಂ ಹೃದಯಂ ಪರಮ್।
ನಿಕ್ಷೇಪೋ ಮೇಽಶ್ವಹೃದಯಂ ತ್ವಯಿ ತಿಷ್ಠತು ಬಾಹುಕ।
ಏವಮುಕ್ತ್ವಾದದೌ ವಿದ್ಯಾಮೃತುಪರ್ಣೋ ನಲಾಯ ವೈ ॥ ೨೯ ॥

ಬಾಹುಕನು ಋತುಪರ್ಣನಿಂದ ಅಕ್ಷವಿದ್ಯೆ ಪಡೆದೊಡನೆ ಕಲಿಯು ಬಾಹುಕನಿಂದ (ನಳನಿಂದ) ಕರ್ಕೋಟಕ ವಿಷವನ್ನು ಕಾರುತ್ತಾ ಶರೀರದಿಂದ ಹೊರಬಂದು ತಾನು ದಮಯಂತಿಯ ಶಾಪದಿಂದಾಗಿ ಇಲ್ಲಿಯವರೆಗೆ ಇದ್ದುದಾಗಿ ಬಾಹುಕನಿಗೆ ಹೇಳಿ ಶಾಪ ವಿಮುಕ್ತನಾದನು. ಕಲಿಯಿಂದ ಇಲ್ಲಿಯವರೆಗೆ ಪೀಡಿಸಲ್ಪಟ್ಟ ನಳನು ಕೋಪದಿಂದ ಕಲಿಗೆ ಶಾಪ ಕೊಡುವುದರೊಳಗಾಗಿ ಕಲಿಯು ನಳನನ್ನು ದೈನ್ಯದಿಂದ ಪ್ರಾರ್ಥಿಸಿ ಕ್ಷಮೆ ಯಾಚಿಸಿ ನುಡಿದ. 'ರಾಜನ್! ನಿನ್ನನ್ನು ಸ್ಮರಿಸುವವರಿಗೆ ಎಂದೆಂದಿಗೂ ನನ್ನ ಭಯವಿರದಿರಲಿ. ಭಯಾರ್ತನಾದ ನನ್ನನ್ನು ಶಪಿಸಬೇಡ.[೧]"

ಕಲಿಯ ಯಾಚನೆಯಂತೆ ನಳನು ಶಪಿಸಲಿಲ್ಲ. ಕಲಿಯು ತೊಲಗಿದ. ಅಲ್ಲಿಯೇ ಇದ್ದ ವಿಭೀತಕ ವೃಕ್ಷವನ್ನು ಸೇರಿದ. ಅಂದಿನಿಂದ ಈ ವೃಕ್ಷ ಕಲಿಯ ಆಶ್ರಯದಿಂದಾಗಿ ಯಾವುದೇ ಕಾರ್ಯಕ್ಕೂ ಮಂಗಳಕರವೆನಿಸಲಿಲ್ಲ. ಕಲಿ ನಳರ ನಡುವೆ ನಡೆದ ಸಂವಾದ ಮಾತ್ರ ಯಾರಿಗೂ ಕಾಣಲಿಲ್ಲ, ಕೇಳಿಸಲಿಲ್ಲ.

ಮತ್ತೇ ರಥವೇರಿದ ನಳ ವೇಗದಿಂದ ವಿದರ್ಭದ ಕಡೆಗೆ ರಥವನ್ನು ಓಡಿಸಿದ. ನಳನು ಕಲಿಯಿಂದ ಮುಕ್ತನಾದರೂ ಆತನಲ್ಲಿ ಕುರೂಪ ಮಾತ್ರ ಹಾಗೆಯೇ ಉಳಿದಿತ್ತು[೨].

---

೧ ಶರಣಂ ತ್ವಂ ಪ್ರಪನ್ನೋಽಸ್ಮಿ ಶೃಣು ಚೇದಂ ವಚೋ ಮಮ।
ಯೇ ಚ ತ್ವಾಂ ಮನುಜಾ ಲೋಕೇ ಕೀರ್ತಯಿಷ್ಯಂತ್ಯತಂದ್ರಿತಾಃ॥
ಮತ್ಕೃತಂ ಭಯಂ ತೇಷಾಂ ನ ಕದಾಚಿದ್ಭವಿಷ್ಯತಿ।
ಭಯಾರ್ತಂ ಶರಣಂ ಯಾತಂ ಯದಿ ಮಾಂ ತ್ವಂ ನ ಶಪ್ಸ್ಯಸೇ॥ - ವನಪರ್ವ(೭೨/೩೬,೩೭)

೨ ವಿಮುಕ್ತಃ ಕಲಿನಾ ರಾಜನ್ ರೂಪಮಾತ್ರ ವಿಯೋಜಿತಃ॥ - ವನಪರ್ವ (೭೨/೪೩)

## ಋತುಪರ್ಣನು ವಿದರ್ಭ ರಾಜಧಾನಿಗೆ ಹೋದುದು - ಭೀಮರಾಜನಿಂದ ಸಮ್ಮಾನ, ದಮಯಂತಿಯ ವಿಲಾಪ

ಬಾಹುಕನ ಸಾರಥ್ಯದಲ್ಲಿ ಋತುಪರ್ಣನು ಅಂದೇ ಸಾಯಂಕಾಲ ವಿದರ್ಭ ದೇಶವನ್ನು ತಲುಪಿದ. ನಾಗರಿಕರಿಂದ ವಿಷಯ ತಿಳಿದ ಭೀಮರಾಜನು ಋತುಪರ್ಣನನ್ನು ರಾಜಧಾನಿಯ ದ್ವಾರದಲ್ಲಿಯೇ ತನ್ನ ಅಧಿಕಾರಿಗಳಿಂದ ಸತ್ಕರಿಸಿ ಪುರ ಪ್ರವೇಶ ಮಾಡಿಸಿದ. ಋತುಪರ್ಣನ ರಥದ ಧ್ವನಿ ಇಡೀ ಪುರವನ್ನೇ ಕಂಪಿಸಿತು. ಎಲ್ಲರೂ ಇದು ನಳ ಮಹಾರಾಜನ ರಥಧ್ವನಿ ಎಂದೂ, ನಳನ ಅಶ್ವಗಳೇ ಬಂದಿವೆ ಎಂದು ಬಗೆದರು. ದಮಯಂತಿಯೂ ಹಾಗೆಯೇ ಬಗೆದು ಆಶ್ಚರ್ಯ ಹಾಗೂ ಆನಂದ ಪಟ್ಟಳು. ಭೀಮರಾಜನ ಕುದುರೆಶಾಲೆಯ ಕುದುರೆಗಳೂ, ನವಿಲುಗಳೂ, ಆನೆಗಳೂ ಈ ರಥ ಧ್ವನಿಯಿಂದ ನಾದ ಮಾಡಿದವು. ಅವೆಲ್ಲಕ್ಕೂ ಭೀಮರಾಜನ ಮನೆಗೆ ಹಿಂದೆ ನಳರಾಜನು ಬಂದ ನೆನಪಿನ ಸಂಸ್ಕಾರಗಳಿಂದ ಹಾಗೆ ನೆಗೆದಾಡಿದವು.

ದಮಯಂತಿಯ ಆನಂದಕ್ಕೆ ಪಾರವೇ ಇರಲಿಲ್ಲ. ನಳನ ರಥ ಘೋಷವು ಭೂಮಂಡಲವನ್ನೇ ಆವರಿಸಿದಂತೆ ನನ್ನ ಮನಸ್ಸು ಆಹ್ಲಾದಗೊಂಡಿದೆ. ಇಂದು ನಾನು ನಳನ ಮುಖಚಂದ್ರವನ್ನು ನೋಡದಿದ್ದಲ್ಲಿ ನಾನು ನಿಃಸಂಶಯವಾಗಿ ಸಾಯುತ್ತೇನೆ. ಇಂದು ನಾನು ಆತನ ಬಾಹುಗಳ ಮಧ್ಯೆ ಇದ್ದು ಸುಖ ಸ್ಪರ್ಶ ಹೊಂದದಿದ್ದಲ್ಲಿ ನಾನು ಖಂಡಿತವಾಗಿ ಉಳಿಯುವುದಿಲ್ಲ. ಇಂದು ಮೇಘನಿನಾದದಂತಿರುವ ನಳನು ನನ್ನ ಸಮೀಪ ಬರದಿದ್ದಲ್ಲಿ ನಾನು ಅಗ್ನಿಪ್ರವೇಶ ಮಾಡಿ ಬಿಡುವೆ. ಮದಿಸಿದ ಆನೆಗಳಂತೆ ನಡೆಯುವ ಸಿಂಹ ಪರಾಕ್ರಮಿ ನಳ ಬರದಿದ್ದಲ್ಲಿ ನಾನು ಸಾಯುವುದು ಖಚಿತ.

ನನ್ನ ಪ್ರಭು ನಳ ಸುಳ್ಳು ಹೇಳಿದ್ದು ನಾನು ಎಂದೂ ಕೇಳಿಲ್ಲ. ಯಾರಿಗೂ ಅಪಕಾರ ಮಾಡಿದ್ದಿಲ್ಲ. ತನ್ನವರ ಮುಂದೆಯೂ ಪರಿಹಾಸಕ್ಕಾದರೂ ಸುಳ್ಳಾಡಿಲ್ಲ. ನಳನು ಕ್ಷಮಾಸಮುದ್ರ, ವೀರ, ದಾನಶೂರ, ಏಕಾಂತದಲ್ಲೂ ನೀಚಪುರುಷರಂತೆ ವರ್ತಿಸದೆ, ನಪುಂಸಕನಂತೆ ಇದ್ದವ, (ಶುದ್ಧ ಬ್ರಹ್ಮಚಾರಿ) ಪರಮಗುಣಶಾಲಿ' ಹೀಗೆ ತನ್ನ ಪತಿಯನ್ನು ನೆನೆಯುತ್ತಾ ಹಗಲು ರಾತ್ರಿ ಪರಿತಪಿಸಿದಳು ದಮಯಂತಿ. ಇಂತು ವಿಲಾಪ ಮಾಡುತ್ತಾ ಎಚ್ಚರತಪ್ಪಿದವಳಂತೆ ಅರಮನೆಯ ಮಹಡಿಯನ್ನು ಏರಿ ನಳನನ್ನು ನೋಡಲು ಅಲ್ಲಿ ಕುಳಿತಳು. ಆದರೆ ಆಕೆ ನೋಡಿದ್ದು ಋತುಪರ್ಣ, ವಾರ್ಷ್ಣೇಯ ಹಾಗೂ ಬಾಹುಕರನ್ನು ಮಾತ್ರ.

ಬಾಹುಕನು ರಥ ನಿಲ್ಲಿಸಿದ ಕೂಡಲೇ ಋತುಪರ್ಣನು ನೇರವಾಗಿ ಭೀಮರಾಜನ ಬಳಿ ನಡೆದ. ಭೀಮರಾಜ ಬಂದ ಅತಿಥಿಯನ್ನು ಯಥೋಚಿತವಾಗಿ ಸತ್ಕರಿಸಿದ. ಋತುಪರ್ಣನಿಗೆ ಅರಮನೆಯ ಪರಿಸ್ಥಿತಿ ಆಶ್ಚರ್ಯ ತಂದಿತು. ಭೀಮರಾಜ ಮಗಳ ಸ್ವಯಂವರದ ವಾರ್ತೆ ಎತ್ತಲಿಲ್ಲ. ಇದರ ಹಿಂದೆ ಇದ್ದ ದಮಯಂತಿ-ತಾಯಿಯರ ಈ ಸ್ತ್ರೀತಂತ್ರ ಭೀಮರಾಜನಿಗೆ ಗೊತ್ತಿದ್ದರೆ ತಾನೇ ಆ ವಿಷಯ ಪ್ರಸ್ತಾಪಿಸುವುದು. ಅಂತೆಯೇ ರಾಜನಿಗೆ ಋತುಪರ್ಣನು

ಸ್ವಯಂವರಕ್ಕಾಗಿ ಬಂದಿರುವುದೂ ಸ್ವಾಭಾವಿಕವಾಗಿ ಗೊತ್ತಾಗಲಿಲ್ಲ. ಮದುವೆಯ ಸಂಭ್ರಮ, ವಿಪ್ರರ ಓಡಾಟ ಯಾವುದೂ ಕಾಣದೇ ಋತುಪರ್ಣ ಅವಾಕ್ಕಾದ. ಭೀಮರಾಜ ಹಾಗೂ ಋತುಪರ್ಣ ಇಬ್ಬರಿಗೂ ಇರುಸು-ಮುರುಸು. ಭೀಮರಾಜನು ಬಂದ ಅತಿಥಿಯನ್ನು ಏಕೆ ಬಂದಿದ್ದೀಯಾ ಎಂದು ಕೇಳುವಂತಿಲ್ಲ. ಋತುಪರ್ಣ ತನ್ನ ಉದ್ದೇಶ ಹೇಳುವಂತಿಲ್ಲ. ಅಂತೂ ಕೊನೆಗೆ ಭೀಮರಾಜನೇ ಬಂದ ಕಾರಣ ಕೇಳಿಬಿಟ್ಟ. ಅವಾಕ್ಕಾದ ಋತುಪರ್ಣನು ಕ್ಷಣಕಾಲ ಯೋಚಿಸಿ, ಬುದ್ಧಿವಂತಿಕೆಯಿಂದಲೇ ಎಂಬಂತೆ ತಮ್ಮನ್ನು ಕಾಣಲು, ಗೌರವಿಸಲು ಬಂದಿದ್ದೇನೆಂದ[೧].

ಭೀಮರಾಜ ಇದನ್ನು ನಂಬದಿದ್ದರೂ ನಂಬಿದವನಂತೆ ನಟಿಸುತ್ತಾ ಇಷ್ಟು ಚಿಕ್ಕ ಕಾರ್ಯಕ್ಕಾಗಿ ಅಷ್ಟು ದೂರ (೧೦೦ ಯೋಜನ) ದಿಂದ ಒಂದೇ ದಿನದಲ್ಲಿ ಬರಲು ಕಾರಣವೇನಿರಬಹುದು? ಎಂದು ಚಿಂತಿಸಿದ. ಆದರೆ ಅದನ್ನು ತೋರಗೊಡದೇ ಬೆಳಗಿನವರೆಗೂ ವಿಶ್ರಮಿಸಿ ಎಂದು ಹೇಳಿ ಅತಿಥಿಯನ್ನು ಬೀಳ್ಕೊಟ್ಟನು.

ಋತುಪರ್ಣನೂ ವಾರ್ಷ್ಣೇಯನೊಡನೆ ತಮಗಾಗಿ ಏರ್ಪಾಟಾದ ಬಿಡಾರಕ್ಕೆ ಹೋಗಿ ವಿಶ್ರಮಿಸಿದನು.

ಇತ್ತ ಬಾಹುಕನು ರಥ ಶಾಲೆಗೆ ರಥ ಒಯ್ದು ಅಶ್ವಗಳನ್ನು ಬಿಚ್ಚಿ ಅವುಗಳನ್ನು ಸಂತೈಸಿ ತಾನೂ ವಿಶ್ರಾಂತಿಗಾಗಿ ರಥದ ಸಮೀಪ ಕುಳಿತನು.

ಇತ್ತ ದಮಯಂತಿಯು ರಥ ಧ್ವನಿಯನ್ನೇ ನೆನೆಯುತ್ತಾ ನಳನದೇ ಆದರೂ, ಇಲ್ಲಿರುವ ವಾರ್ಷ್ಣೇಯನೇ ನಳನಿಂದ ಸಾರಥ್ಯ ಏಕೆ ಕಲಿತಿರಬಾರದು? ಅಥವಾ ಋತುಪರ್ಣನೇ ನಳನಂತೆ ಏಕೆ ಬಿಟ್ಟಿರಬಾರದು? ಏನೇ ಆದರೂ ನಳನನ್ನು ಪತ್ತೆ ಹಚ್ಚಲು ದಮಯಂತಿಯು ಬಾಹುಕನಿದ್ದೆಡೆಗೆ ತನ್ನ ದೂತೆಯಾದ ಕೇಶಿನಿಯನ್ನು ಕಳಿಸಿದಳು.

## ಬಾಹುಕ-ಕೇಶಿನಿಯರ ಸಂವಾದ

ದಮಯಂತಿಯು ಕೇಶಿನಿಗೆ 'ಈ ಬಾಹುಕನೇ ನಳನಿರಬಹುದೆಂದು ನನಗೆ ಭಾರೀ ಸಂದೇಹವಿದೆ. ಅವನ ಬಳಿಗೆ ಹೋಗಿ ಕುಶಲ ಪ್ರಶ್ನೆಗಳನ್ನು ಮಾಡು. ಅವನಾರೆಂದು ತಿಳಿಯಲು ಪ್ರಯತ್ನಿಸು. ಹಿಂದೆ ಬ್ರಾಹ್ಮಣನು ಅಯೋಧ್ಯೆಯಲ್ಲಿ ಆಡಿದ್ದ ಮಾತನ್ನು ನೀನು ಪುನರುಚ್ಚರಿಸಿ ಅವನು ಅದಕ್ಕೆ ನೀಡುವ ಪ್ರತಿಕ್ರಿಯೆಯನ್ನು ಸೂಕ್ಷ್ಮವಾಗಿ ಗಮನಿಸಿ ನನಗೆ ಯಥಾವತ್ತಾಗಿ ಬಂದು ತಿಳಿಸು' ಎಂದು ಹೇಳಿ ಕಳಿಸಿದಳು.

ಆದರಂತೆ ಕೇಶಿನಿ ಬಂದು ಬಾಹುಕನಿಗೆ 'ಎಲೈ ಮಹಾನುಭಾವನೇ! ನಿನಗೆ ಸ್ವಾಗತ! ನೀನು ಸುಖವಾಗಿರುವೆಯಷ್ಟೇ? ದಮಯಂತಿಯು ನಿನಗಾಗಿ ಹೇಳಿರುವ ಮಾತನ್ನು ಕೇಳು.

---

೧ ಆಗತೋಽಸ್ಮಿತ್ಯುವಾಚೈನಂ ಭವಂತಮಭಿವಾದಕಃ। - ವನಪರ್ವ(೭೩/೨೫)

ನೀವು ಇಲ್ಲಿಗೆ ಅಯೋಧ್ಯೆಯಿಂದ ಯಾವಾಗ ಹೊರಟಿರಿ? ಇಲ್ಲಿಗೆ ಬಂದ ಕಾರಣವೇನು? ದಯವಿಟ್ಟು ಇದಕ್ಕೆ ಉತ್ತರಿಸು.'

ಕೇಶಿನಿಯ ಮಾತು ಕೇಳಿದ ಬಾಹುಕ ಉತ್ತರಿಸಿದ. 'ನಮ್ಮ ರಾಜ ಋತುಪರ್ಣನು ದಮಯಂತಿಯ ದ್ವಿತೀಯ ಸ್ವಯಂವರದ ವಾರ್ತೆ ಕೇಳಿದ. ಅದು ನಾಳೆಯೇ ಏರ್ಪಾಟಾಗಿದೆಯಂತೆ. ಅದಕ್ಕಾಗಿ ಋತುಪರ್ಣನು ೧೦೦ ಯೋಜನ ಕ್ರಮಿಸಿ ಇಲ್ಲಿಗೆ ಬಂದಿದ್ದಾನೆ. ನಾನೇ ಆತನ ಸಾರಥಿ.'

ಕೇಶಿನಿ ಮತ್ತೇ 'ನಿಮ್ಮಲ್ಲಿ ಈ ಮೂರನೆಯವರಾರು? ನೀನಾರು? ನಿಮ್ಮ ಕುಲಗೋತ್ರಗಳ ವಿವರಗಳನ್ನು ಕೊಡುವಿರಾ? ನೀನೇಕೆ ಋತುಪರ್ಣನ ಸಾರಥ್ಯ ವಹಿಸಿರುವೆ?' ಎಂದು ಕೇಳಿದಳು. ಅದಕ್ಕೆ ಬಾಹುಕನು ಉತ್ತರಿಸುತ್ತಾ 'ವಾರ್ಷ್ಣೇಯನೂ ಋತುಪರ್ಣನ ಸಾರಥಿಯೇ. ಹಿಂದೆ ನಳ ಮಹಾರಾಜನು ರಾಜ್ಯಭ್ರಷ್ಟನಾಗಿ ವನಕ್ಕೆ ಹೋಗಲು ಈ ಭಾಂಗಾಸುರಿಯ (ಋತುಪರ್ಣ) ಆಶ್ರಯದಲ್ಲಿರುವವನು. ನಾನೂ ಅಶ್ವವಿದ್ಯೆ ಬಲ್ಲವ. ಆದ್ದರಿಂದ ಅಶ್ವಶಾಲಾಧ್ಯಕ್ಷನನ್ನಾಗಿ ಹಾಗೂ ಅಡುಗೆಯವನನ್ನಾಗಿ ಋತುಪರ್ಣನು ನನ್ನನ್ನು ನಿಯಮಿಸಿಕೊಂಡಿದ್ದಾನೆ.'

ಮತ್ತೆ ಕೇಶಿನಿಯು ಬಾಹುಕನಿಗೆ 'ವಾರ್ಷ್ಣೇಯನಿಗೆ ನಳನು ಎಲ್ಲಿ ಹೋಗಿರಬೇಕೆಂದು ತಿಳಿದಿರಬೇಕಲ್ಲವೇ? ಆತನು ನಿನಗೆ ನಳನ ಬಗ್ಗೆ ಏನಾದರೂ ಹೇಳಿದ್ದಾನಾ?' ಎಂದಳು. ಅದಕ್ಕೆ ಬಾಹುಕನು ವಾರ್ಷ್ಣೇಯನು ನಳನ ಇಬ್ಬರು ಮಕ್ಕಳನ್ನು ಇಲ್ಲಿಯೇ (ಭೀಮರಾಜನಲ್ಲಿ) ಬಿಟ್ಟು ಎಲ್ಲಿಗೋ ತನ್ನ ಇಚ್ಛಾನುಸಾರ ಹೋದನು. ವಾರ್ಷ್ಣೇಯನಿಗೆ ನಳನ ಬಗ್ಗೆ ಏನೂ ಗೊತ್ತಿಲ್ಲ. ಬೇರೆ ಯಾರಿಗೂ ನಳನ ಬಗ್ಗೆ ಏನೂ ಗೊತ್ತಿಲ್ಲ. ಆ ನಳನು ತನ್ನ ರೂಪ ಕಳೆದುಕೊಂಡು ಆಪತ್ತಿಗೆ ಸಿಲುಕಿಕೊಂಡವನಾಗಿ ಇಲ್ಲಿಯೇ ಎಲ್ಲೋ ಯಾರಿಗೂ ತಿಳಿಯದಂತೆ ಸಂಚರಿಸುತ್ತಿದ್ದಾನೆ. ನಳನೇ ತನ್ನ ಬಗ್ಗೆ ಬಲ್ಲನೇ ಹೊರತು ಬೇರಾರೂ ಆತನ ಬಗ್ಗೆ ತಿಳಿದಿಲ್ಲ. ಕಾರಣ ನಳನು ತನ್ನ ಗುರುತನ್ನು ಯಾರಿಗೂ ತಿಳಿಸಿಲ್ಲ. ಅಥವಾ ಆತನ ಪತ್ನಿ ದಮಯಂತಿಗೆ ತಿಳಿದಿರಬಹುದು[೧].'

ಇದನ್ನೆಲ್ಲ ಕೇಳಿದ ಕೇಶಿನಿಯು ಬಾಹುಕನಿಗೆ 'ಬಾಹುಕ! ಹಿಂದೆ ಅಯೋಧ್ಯೆಗೆ ಬಂದ ಬ್ರಾಹ್ಮಣನು ಸ್ತ್ರೀಯೊಬ್ಬಳು ಹೇಳಿದ ಮಾತನ್ನು ನಿನಗೆ ಹೇಳಿದನು. ಆಗ ನೀನು ಕೊಟ್ಟ ಉತ್ತರವೇನು? ದಯವಿಟ್ಟು ತಿಳಿಸುವೆಯಾ' ಎಂದಳು. ದಮಯಂತಿಯು ಕಳಿಸಿದ ಸಂದೇಶ ಹೀಗಿತ್ತು.

---

೧ ನ ಚಾನ್ಯಃ ಪುರುಷಃ ಕಶ್ಚಿನ್ನಲಂ ವೇತ್ತಿ ಯಶಸ್ವಿನಿ।
ಗೂಢಶ್ಚರತಿ ಲೋಕೇಽಸ್ಮಿನ್ ನಷ್ಟರೂಪೀ ಮಹೀಪತಿಃ॥
ಆತ್ಮೈವ ತು ನಲಂ ವೇದ ಯಾ ಚಾಸ್ಯ ತದನಂತರಾ।
ನ ಹಿ ವೈಸ್ತಾನಿ ಲಿಂಗಾನಿ ನಲಃ ಶಂಸತಿ ಕರ್ಹಿಚಿತ್॥ – ವನಪರ್ವ (೭೪/೧೫,೧೬)

'ಎಲೈ ಜೂಜುಕೋರ! ನನ್ನ ಸೀರೆಯ ಅರ್ಧಭಾಗವನ್ನು ಕಿತ್ತು ಎಲ್ಲಿಗೆ ಹೋದೆಯೋ? ನಿನ್ನಲ್ಲಿಯೇ ಅನುರಕ್ತಳಾಗಿ ನಿನ್ನ ಪ್ರಿಯಪತ್ನಿಯನ್ನು ತೊರೆದು ಎಲ್ಲಿಗೆ ಹೋದೆಯೋ? ಅವಳೀಗ ನಿನ್ನನ್ನೇ ಕಾಯುತ್ತಾ ಹಗಲೂ, ರಾತ್ರಿ ಅಳುತ್ತಾ, ಕೊರಗುತ್ತಾ ಬೆಂದು ಹೋಗಿರುವಳು. ದಯವಿಟ್ಟು ಆಕೆಯ ಮೇಲೆ ಪ್ರಸನ್ನನಾಗಿ ಮಾತನಾಡಿಸು.'

ಇದನ್ನು ಕೇಳಿದ ಬಾಹುಕನು ಹೃದಯ ನೊಂದು ಕಣ್ಣೀರಿನಿಂದ ಬಂದ ದುಃಖವನ್ನು ತಡೆದು ಉತ್ತರಿಸಿದನು( ಬ್ರಾಹ್ಮನನಿಗೆ ಕೊಟ್ಟ ಉತ್ತರ).

'ಎಲೈ ಬ್ರಾಹ್ಮಣ! ಪತಿವ್ರತಾ ಸ್ತ್ರೀಯರು ಎಂತಹ ಆಪತ್ತಿನಲ್ಲಿದ್ದರೂ ತಮ್ಮನ್ನು ತಾವು ರಕ್ಷಿಸಿಕೊಳ್ಳುವರು. ಆದರಿಂದಲೇ ಅವರಿಗೆ ಸದ್ಗತಿ. ಪತಿರಹಿತವಾದರೂ ಕೋಪಗೊಳ್ಳುವುದಿಲ್ಲ. ತಮ್ಮ ಪ್ರಾಣರಕ್ಷಣೆಗಾಗಿ ಸದಾಚಾರವೆಂಬ ಕವಚವುಳ್ಳವರಾಗಿರುತ್ತಾರೆ. ಆಪತ್ತಿನಲ್ಲಿರುವ, ಸುಖವಂಚಿತನಾದ, ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳದ, ಪಕ್ಷಿಗಳಿಂದ ಉಟ್ಟ ಬಟ್ಟೆಯನ್ನೂ ಕಳೆದುಕೊಂಡ, ಮನೋವ್ಯಥೆಗಳಿಂದ ಬೆಂದ ಪತಿಯ ಬಗ್ಗೆ ಸಾಧ್ವಿಯಾದ ನೀನು ಕೋಪಗೊಳ್ಳಬೇಡ. ನಿನ್ನನ್ನು ಚೆನ್ನಾಗಿ ನೋಡಿಕೊಂಡಿರಲಿ, ಬಿಟ್ಟಿರಲಿ, ಅಂತಹ ಗಂಡನ ಬಗ್ಗೆ ಕ್ರೋಧಗೊಳ್ಳದಿರು' ಹೀಗೆ ನುಡಿಯುತ್ತಾ ಬಾಹುಕನು ದುಃಖ ತಡೆದುಕೊಳ್ಳಲಾಗದೆ ಬಿಕ್ಕಿ ಬಿಕ್ಕಿ ಅತ್ತನು. ನಂತರ ಕೇಶಿನಿಯು ಕೂಡಲೇ ದಮಯಂತಿಯ ಬಳಿಗೆ ಹೋಗಿ ಎಲ್ಲವನ್ನೂ ನಿವೇದಿಸಿ ಬಾಹುಕನಲ್ಲಿ ಆದ ವಿಕಾರಗಳನ್ನು ನಿರೂಪಿಸಿದಳು.

## ಕೇಶಿನಿಯಿಂದ ಬಾಹುಕನ ಪರೀಕ್ಷೆ

ಬಾಹುಕನ ಮಾತುಗಳನ್ನು ಕೇಶಿನಿಯಿಂದ ಕೇಳಿದ ದಮಯಂತಿಯು ದುಃಖಿತಳಾದಳು. ಬಾಹುಕನು ನಳನೇ ಇರಬೇಕೆಂಬ ಸಂಶಯ ಆಕೆಗೆ ಹೆಚ್ಚಾಯಿತು. ಮತ್ತೇ ಕೇಶಿನಿಗೆ ದಮಯಂತಿಯು 'ನೀನು ಪುನಃ ಬಾಹುಕನ ಹತ್ತಿರ ಹೋಗು ಮಾತನಾಡಬೇಡ. ಆತನ ನಡಾವಳಿಗಳ ಬಗ್ಗೆ ಸೂಕ್ಷ್ಮವಾಗಿ ತಿಳಿದುಕೋ. ಅವನು ಬೆಂಕಿಯನ್ನಾಗಲಿ, ನೀರನ್ನಾಗಲಿ ಕೇಳಿದರೆ ಕೊಡಬೇಡ. ಎಲ್ಲವನ್ನೂ ನನಗೆ ತಿಳಿಸು' ಎಂದು ಹೇಳಿದಳು[೧].

ಅಲ್ಲದೆ 'ಯಾವುದಾದರೂ ದೈವೀ ಹಾಗೂ ಮಾನುಷವಾದ ವಿಚಿತ್ರಗಳನ್ನು ಕಂಡಲ್ಲಿ ನನಗೆ ಬಂದು ತಿಳಿಸು' ಎಂದು ದಮಯಂತಿ ತಿಳಿಸಿದ ಮೇರೆಗೆ ಕೇಶಿನಿಯು ಬಾಹುಕನ ಬಳಿಗೆ ಹೋಗಿ ಆತನ ಚರ್ಯೆಗಳನ್ನು ಗಮನಿಸಿ ದಮಯಂತಿಗೆ ಹೀಗೆ ನಿವೇದಿಸಿದಳು.

---

೧ ಗಚ್ಛ ಕೇಶಿನಿ ಭೂಯಸ್ತ್ವಂ ಪರೀಕ್ಷಾಂ ಕುರು ಬಾಹುಕೇ।
ಅಬ್ರುವಾಣಾ ಸಮೀಪಸ್ಥಾ ಚರಿತಾನ್ಯಥ ಲಕ್ಷಯ॥
ನ ಚಾಸ್ಯ ಪ್ರತಿಬಂಧೇನ ದೇಯೋಽಗ್ನಿರಪಿ ಕೇಶಿನಿ।
ಯಾಚಕೇ ನ ಜಲಂ ದೇಯಂ ಸರ್ವಥಾ ತ್ವರಮಾಣಯಾ॥
ನಿಮಿತ್ತಂ ಯತ್ ತ್ವಯಾ ದೃಷ್ಟಂ ಬಾಹುಕೇ ದೈವಮಾನುಷಮ್।
ಯಚ್ಚಾನ್ಯದಪಿ ಪಶ್ಯೇಥಾಸ್ತಚ್ಚಾಖ್ಯೇಯಂ ತ್ವಯಾ ಮಮ॥ - ವನಪರ್ವ(೭೫/೨-೬)

'ನಾನು ಈ ಹಿಂದೆ ಇಂತಹ ವೈಚಿತ್ರ್ಯವನ್ನು ಎಲ್ಲೂ ಕೇಳಿಲ್ಲ, ನೋಡಿಲ್ಲ. ಆ ಬಾಹುಕನು ಓಡಾಡುವಾಗ ಬಾಗಿಲು ಚಿಕ್ಕದಿದ್ದರೂ ತಲೆತಗ್ಗಿಸಿ ಹೋಗುವುದಿಲ್ಲ, ಬಾಗಿಲೇ ಆತನ ಎತ್ತರ ಹಾಗೂ ದೇಹದ ಪರಿಮಾಣಕ್ಕೆ ತಕ್ಕಂತೆ ಬದಲಾಗಿಬಿಡುತ್ತದೆ. ಕಿರಿದಾದ ಮಾರ್ಗವೂ ಹಿರಿದಾಗಿ ಅವಕಾಶ ಮಾಡಿಕೊಡುತ್ತದೆ. ಅಡುಗೆ ಮಾಡಲು ತಂದ ಮಾಂಸವನ್ನು ತೊಳೆಯಲು ಬಾಹುಕನು ಬರಿದಾದ ಪಾತ್ರೆಗಳನ್ನು ಎವೆಯಿಕ್ಕದೆ ನೋಡಿದ ಕೂಡಲೇ ಪಾತ್ರೆಗಳು ನೀರಿನಿಂದ ತುಂಬಿದವು. ಒಂದು ಮುಷ್ಟಿ ಹುಲ್ಲನ್ನು ತೆಗೆದುಕೊಂಡು ಸೂರ್ಯನಿಗೆ ತೋರಿಸಿದೊಡನೆ ಬೆಂಕಿಯು ಧಗಧಗನೆ ಹೊತ್ತಿಕೊಂಡಿತು. ಅಗ್ನಿಯನ್ನು ಮುಟ್ಟಿದರೂ ಆತನ ಕೈ ಸುಡಲಿಲ್ಲ. ಅವನು ಕುಳಿತಲ್ಲಿಯೇ ನೀರು ಹರಿದು ಬರುತ್ತಿತ್ತು. ಅವನು ಹೂಗಳನ್ನು ಕೈಗಳಿಂದ ಹಿಸುಕಿದರೂ ಅವು ಕಂದಲಿಲ್ಲ, ಬಾಡಲಿಲ್ಲ, ಮೊದಲಗಿಂತಲೂ ಹೆಚ್ಚು ಸುಗಂಧಿಗಳಾದವು. ಈ ಅದ್ಭುತ ಚರ್ಯೆಗಳನ್ನು ನೋಡಿ ನನಗೆ ಭಾರಿ ಆಶ್ಚರ್ಯವಾಯಿತು' ಎಂದಳು ಕೇಶಿನಿ[೧].

ಇದನ್ನೆಲ್ಲ ಕೇಳಿದ ದಮಯಂತಿಯು ಬಾಹುಕನನ್ನು ನಳನೆಂದು ಶಂಕಿಸುತ್ತಾ ಆತನ ರೂಪದ ಬಗ್ಗೆ ದುಃಖಿಸುತ್ತಾ ಮತ್ತೆ ಕೇಶಿನಿಗೆ ಹೇಳಿದಳು. 'ಕೇಶಿನಿ ಮತ್ತೇ ಹೋಗಿ ಬಾಹುಕನಿಗೆ ತಿಳಿಯದಂತೆ ಆತನು ಅಡುಗೆ ಮಾಡಿದ ಮಾಂಸದ ಸ್ವಲ್ಪಭಾಗವನ್ನು ತಾ' ಎಂದಳು. ಕೂಡಲೇ ಕೇಶಿನಿಯು ಅಲ್ಲಿಗೆ ಹೋಗಿ ಬಿಸಿಬಿಸಿಯಾದ ಮಾಂಸವನ್ನು ತಂದು ದಮಯಂತಿಗೆ ಕೊಟ್ಟಳು. ಅದನ್ನು ತಿಂದ ದಮಯಂತಿಯು ಇದನ್ನು ತಯಾರಿಸಿದ ಬಾಹುಕನು ನಳನೇ ಎಂದು ತಿಳಿದು ತುಂಬಾ ದುಃಖಿಸಿದಳು (ಆತನ ರೂಪ ವಿಕಾರದ ಬಗ್ಗೆ). ನಂತರ ಸಮಾಧಾನ ಮಾಡಿಕೊಂಡು ಮುಖ ತೊಳೆದುಕೊಂಡು ತನ್ನ ಇಬ್ಬರೂ ಮಕ್ಕಳನ್ನು (ಇಂದ್ರಸೇನ, ಇಂದ್ರಸೇನಾ) ಕೇಶಿನಿಯೊಡನೆ ಬಾಹುಕನ ಬಳಿಗೆ ಕಳಿಸಿದಳು. ಬಾಹುಕನು ಮಕ್ಕಳನ್ನು ಕಂಡೊಡನೆ

---

೧ ದೃಢಂ ಶುಚ್ಯುಪಚಾರೋಽಸೌ ನ ಮಯಾ ಮಾನುಷಃ ಕ್ವಚಿತ್ ।
ದೃಷ್ಟಪೂರ್ವಃ ಶ್ರುತೋ ವಾಪಿ ದಮಯಂತಿ ತಥಾ ವಿಧಃ ॥
ಹ್ರಸ್ವಮಾಸಾದ್ಯ ಸಂಚಾರಂ ನಾಸೌ ವಿನಮತೇ ಕ್ವಚಿತ್ ।
ಸಂಕಟೇಽಪ್ಯಸ್ಯ ಸುಮಹಾನ್ ವಿವರೋ ಜಾಯತೇಽಧಿಕಃ ॥
ಪ್ರೇಕ್ಷಿತಂ ತತ್ರ ರಾಜ್ಞಾತು ಮಾಂಸಂ ಚೈವ ಪ್ರಭೂತವತ್ ।
ತಸ್ಯ ಪ್ರಕ್ಷಾಲನಾರ್ಥಾಯ ಕುಂಭಾಸ್ತ್ರೋಪಕಲ್ಪಿತಾಃ ॥
ತೇ ತೇನಾವೇಕ್ಷಿತಾಃ ಕುಂಭಾಃ ಪೂರ್ಣಾ ಏವಾಭವಂಸ್ತತಃ ।
ತೃಣಮುಷ್ಟಿಂ ಸಮಾದಾಯ ಸವಿತುಸ್ತಂ ಸಮೀದಧತ್ ॥
ಅಥ ಪ್ರಜ್ವಲಿತಸ್ತತ್ರ ಸಹಸಾ ಹವ್ಯವಾಹನಃ ।
ಯದಗ್ನಿಮಪಿಸಂಸ್ಪೃಶ್ಯ ನೈವಾಸೌದಹ್ಯತೇ ಶುಭೇ ॥
ಛಂದೇನ ಚೋದಕಂ ತಸ್ಯ ವಹತ್ಯಾವರ್ಜಿತಂ ದ್ರುತಮ್ ।
ಮೃದ್ಯಮಾನಾನಿ ಪಾಣಿಭ್ಯಾಂ ತೇನ ಪುಷ್ಪಾಣಿ ನಾನ್ಯಥಾ ॥
ಭೂಯ ಏವ ಸುಗಂಧೀನಿ ಹೃಷಿತಾನಿ ಭವಂತಿ ಹಿ ।
ಏತಾನ್ಯದ್ಭುತಲಿಂಗಾನಿ ದೃಷ್ಟ್ವಾಽಹಂ ದ್ರುತಮಾಗತಾ ॥ - ವನಪರ್ವ(೭೫/೮-೧೭)

ಪುತ್ರವಾತ್ಸಲ್ಯದಿಂದ ಮಗ್ನನಾಗಿ ಅಪ್ಪಿಕೊಂಡು ತೊಡೆಯ ಮೇಲೆ ಕೂರಿಸಿಕೊಂಡು ದುಃಖಿತಪ್ತನಾಗಿ ಜೋರಾಗಿ ಅತ್ತನು.

ಕೂಡಲೇ ತಾನು ಯಾರೆಂದು ಕೇಶಿನಿಗೆ ತಿಳಿಯದಿರಲೆಂದು 'ಕೇಶಿನಿ! ನನಗೂ ಇಂತಹ ಅವಳಿಜವಳಿ ಮಕ್ಕಳಿವೆ. ಅವರ ಜ್ಞಾಪಕವಾಗಿ ಅತ್ತುಬಿಟ್ಟೆ. ಮತ್ತೆ ಮತ್ತೆ ನನ್ನ ಬಳಿಗೆ ಬರುವ ನಿನ್ನನ್ನು ನೋಡಿ ನಮ್ಮ ಬಗ್ಗೆ ಬೇರೆಯವರು ತಪ್ಪು ತಿಳಿದಾರು. ಮೇಲಾಗಿ ನಾವು ಇಲ್ಲಿಗೆ ಅತಿಥಿಗಳಾಗಿ ಬಂದವರು. ಕಾರಣ ನೀನಿಲ್ಲಿಗೆ ಪದೇ ಪದೇ ಬರಬೇಡ. ಮಕ್ಕಳನ್ನು ಕರೆದುಕೊಂಡು ಹೊರಟುಹೋಗು. ನಿನಗೆ ಮಂಗಳವಾಗಲಿ' ಎಂದನು.

## ದಮಯಂತಿ-ಬಾಹುಕರ ಭೇಟಿ - ನಳದಮಯಂತಿಯರ ಮಿಲನ

ಪುಣ್ಯಶ್ಲೋಕನಾದ, ಧೀಮಂತನಾದ ಬಾಹುಕನು ಮಕ್ಕಳನ್ನು ಕರೆದುಕೊಂಡು ಹೋದಾಗ ನಡೆದುಕೊಂಡ ರೀತಿ, ಅತನಲ್ಲಿ ಅದ ವಿಕಾರಗಳನ್ನು ದಮಯಂತಿಗೆ ಕೇಶಿನಿಯು ವಿವರಿಸಿದಳು. ತಕ್ಷಣ ದಮಯಂತಿಯು ಆಕೆಯನ್ನು ತನ್ನ ತಾಯಿಯ ಬಳಿಗೆ ಕಳುಹಿಸಿ ವಾರ್ತೆಗಳನ್ನೆಲ್ಲ ತಿಳಿಸಿದಳು. ಅಲ್ಲದೆ ಬಾಹುಕನು ನಳನೇ ಆಗಿರಬೇಕೆಂದು, ಆದರೂ ಕುರೂಪದಿಂದಾಗಿ ನಳನು ಹೌದೇ? ಅಲ್ಲವೇ? ಎಂಬ ಶಂಕೆ ಇದೆ ಎಂದು, ಅದಕ್ಕಾಗಿ ನಳನನ್ನು ವೈಯಕ್ತಿಕವಾಗಿ ಕರೆಸಲು ಅಥವಾ ಭೇಟಿಮಾಡಲು ತಾಯಿಯ ಅನುಮತಿಯನ್ನು ಕೋರಿದಳು. ಭೀಮರಾಜನ ಮಡದಿಯು ಇದಕ್ಕೆ ಕೂಡಲೇ ಒಪ್ಪಿ ಅರಮನೆಯೊಳಗೆ ಬಾಹುಕನನ್ನು ಕರೆಸಲು ಆದೇಶಿಸಿದಳು. ಇದಕ್ಕೆ ಭೀಮರಾಜನು ಒಪ್ಪಿದನು.

ದಮಯಂತಿಯ ಅಪೇಕ್ಷೆಯಂತೆ ಭೀಮರಾಜ ಹಾಗೂ ಮಹಾರಾಣಿಯ ಆದೇಶದ ಮೇರೆಗೆ ಬಾಹುಕನು ಅರಮನೆಗೆ ದಮಯಂತಿಯನ್ನು ನೋಡಲು ಬಂದನು. ದಮಯಂತಿಯನ್ನು ನೋಡುತ್ತಿದ್ದಂತೆ ಆತನಿಗೆ ಕಣ್ಣುತುಂಬಾ ನೀರು ತುಂಬಿತು. ಶೋಕ ದುಃಖಗಳಿಂದ ಕೂಡಿದನು. ದಮಯಂತಿಯು ಹಾಗೆಯೇ ಶೋಕದಿಂದ ಕೂಡಿದಳು. ಕಾಷಾಯವಸ್ತ್ರಧರಿಸಿದ್ದ ದಮಯಂತಿಯು ಹಾಗೆಯೇ ಮಾತನಾಡಿಸಿದಳು. 'ಹೇ ಬಾಹುಕ! ನೀನು ಈ ಹಿಂದೆ ಅರಣ್ಯದಲ್ಲಿ ಒಬ್ಬಳೆ ಆಯಾಸದಲ್ಲಿ ಬಳಲಿ ಬೆಂಡಾದ, ನಿದ್ರೆ ಹೋದ, ನಿರಪರಾಧಿಯಾದ, ಪ್ರಿಯಳಾದ ಪತ್ನಿಯನ್ನು ಬಿಟ್ಟುಹೋದ ಪುರುಷನೊಬ್ಬನನ್ನು ಎಲ್ಲಾದರೂ ನೋಡಿದಿಯಾ? ನಳನಲ್ಲದೆ ಯಾರು ತಾನೇ ಹಾಗೆ ಬಿಟ್ಟು ಹೋಗಿರಲು ಸಾಧ್ಯ. ನಾನು ಮಾಡಿದ ಅವರಾಧವಾದರೂ ಏನು? ದೇವತೆಗಳನ್ನು ಬಿಟ್ಟು ಯಾರನ್ನು ನಾನು ವರಿಸಿದ್ದೆನೋ ಅಂತಹ ಪತಿಹಿತಚಿಂತಕಳಾದ ಇಬ್ಬರ ಮಕ್ಕಳ ತಾಯಿಯಾದ ನನ್ನನ್ನು ಹೇಗೆ ಬಿಟ್ಟನು? ದೇವತೆಗಳ ಮುಂದೆ, ಅಗ್ನಿಸಾಕ್ಷಿಯಾಗಿ ಪಾಣಿಗ್ರಹಣ ಮಾಡಿದ ನನ್ನನ್ನು ಹೇಗೆ ತ್ಯಾಗ ಮಾಡಿದನು? **'ನಾನು ಎಂದೆಂದೂ ನಿನ್ನವನು'** ಎಂದು ದೇವತೆಗಳ ಮುಂದೆಯೇ ಪ್ರತಿಜ್ಞೆ ಮಾಡಿದ ನನ್ನನ್ನು ಹೇಗೆ ಬಿಟ್ಟು ನಡೆದ? ಹೇಳಬಲ್ಲೆಯಾ?'

ಸುಪ್ತಾಮುತ್ಸೃಜ್ಯ ವಿಪಿನೇ ಗತೋ ಯಃ ಪುರುಷಃ ಸ್ತ್ರಿಯಮ್ ।
ಅನಾಗಸಾಂ ಪ್ರಿಯಾಂ ಭಾರ್ಯಾಂ ವಿಜನೇ ಶ್ರಮಮೋಹಿತಾಮ್ ॥
ಕಿಮುತಸ್ಯ ಮಯಾ ಬಾಲ್ಯಾದಪರಾದ್ಧಂ ಮಹೀಪತೇಃ ।
ಸಾಕ್ಷಾದ್ದೇವಾನಪಾಹಾಯ ವೃತೋ ಯಃ ಸ ಪುರಾ ಮಯಾ ॥
ಭವಿಷ್ಯಾಮೀತಿ ಸತ್ಯಂತು ಪ್ರತಿಶೃತ್ಯ ಕ್ವತದ್ಗತಮ್ ॥

- ವನಪರ್ವ(೭೬/೧೦-೧೪)

ಹೀಗೆ ನುಡಿದ ದಮಯಂತಿಯು ದುಃಖ ತಡೆಯದೇ ಬಿಕ್ಕಿ ಬಿಕ್ಕಿ ಅತ್ತುದನ್ನು ಕಂಡ ನಳನು ಉತ್ತರಿಸಿದನು.

'ನಾನು ರಾಜ್ಯ ಕಳೆದುಕೊಂಡಿದ್ದು ನಿನ್ನನ್ನುತ್ಯಾಗಮಾಡಿದ್ದುಎಲ್ಲವೂ ಕಲಿಯಪ್ರಭಾವದಿಂದ ನನ್ನ ಮೂಲಕ ನಡೆದುಹೋಯಿತು. ನನ್ನನ್ನೇ ಚಿಂತಿಸುತ್ತಾ ಶೋಕಿಸುತ್ತಾ ವನದಲ್ಲಿದ್ದ ನೀನು ಒಮ್ಮೆ ಕಲಿಗೆ ಶಾಪ ಹಾಕಿದೆ. ನನ್ನಲ್ಲಿದ್ದ ಅವನು ಮತ್ತೆ ನಿನ್ನ ಶಾಪದಿಂದ ಬೆಂದವನಾದನು. ಆದರೆ ನನ್ನ ತಪಸ್ಸು (ದುಃಖ ಸಹನೆ ಎಂಬ ಮೊದಲಾದ) ಹಾಗೂ ಇತರ ಕರ್ಮಾನುಷ್ಠಾನಗಳಿಂದಾಗಿ ನಮ್ಮ ಶುಭೋದಯ ಸಮೀಪಿಸಿದೆ. ಕಲಿಯು ಈಗ ನನ್ನಿಂದ ದೂರ ಹೋಗಿದ್ದಾನೆ. ಆದ್ದರಿಂದ ನಿನ್ನನ್ನು ನೋಡಲು ಬಂದಿದ್ದೇನೆ. ಬೇರಾವ ಉದ್ದೇಶವೂ ಇಲ್ಲ. ಆದರೆ ಪತಿವ್ರತೆಯಾದ ನೀನು ಎರಡನೇ ಗಂಡನನ್ನು ವರಿಸಲು ತೆಗೆದುಕೊಂಡ ನಿರ್ಧಾರ ಸರಿಯೇ? 'ದಮಯಂತಿಯು ಸ್ವೇಚ್ಛೆಯಿಂದ ದ್ವಿತೀಯ ಸ್ವಯಂವರವನ್ನು ಮಾಡಿಕೊಳ್ಳುತ್ತಿದ್ದಾಳೆ' ಎಂಬ ವಾರ್ತೆ ಕೇಳುತ್ತಲೇ ಭಾಂಗಾಸುರಿ ಇಲ್ಲಿಗೆ ಬಂದಿದ್ದಾನೆ. ನಿನ್ನ ನಿರ್ಧಾರ ಸಾಧುವೇ?[೧]'

ದಮಯಂತಿಯು ನಳನ ಈ ಮಾತುಗಳನ್ನು ಕೇಳಿ ಪ್ರಾಂಜಲಳಾಗಿ ಅಳುತ್ತಾ, ಹೆದರುತ್ತಾ ಹೇಳಿದಳು.

'ರಾಜನ್! ನಾನು ದೇವತೆಗಳನ್ನೂ ತ್ಯಜಿಸಿ ನಿನ್ನನ್ನೇ ವರಿಸಿದವಳು. ಹೀಗಿರುವಾಗ ನಿನ್ನನ್ನು ಬಿಟ್ಟು ಹೇಗೆ ತಾನೇ ಬೇರೆಯವರನ್ನು ಬಯಸೇನು? ನನ್ನ ಸ್ವಯಂವರ ವಾರ್ತೆ ನಿನ್ನ ಬರವಿಗಾಗಿ ನಾನು ಮಾಡಿದ ಉಪಾಯವೇ ಹೊರತು ಬೇರೆನೂ ಅಲ್ಲ. ಅದೂ ಬ್ರಾಹ್ಮಣರ ಮೂಲಕ ಒಂದು ದಿನದೊಳಗೆ ಒಂದುನೂರು ಯೋಜನ ದೂರವನ್ನು ಕ್ರಮಿಸಿ ಬರಲು ನಿನ್ನನ್ನು ಹೊರತುಪಡಿಸಿ ಬೇರೆ ಯಾರಿಗೆ ತಾನೆ ಸಾಧ್ಯ? ನಾನು ದೋಷರಹಿತಳು, ನಿನ್ನ ಪಾದ

---

೧ ಕಥಂ ನು ನಾರೀ ಭರ್ತಾರಮನುರಕ್ತಮನುವ್ರತಮ್ ।
ಉತ್ಸೃಜ್ಯ ವರಯೇದನ್ಯಂ ಯಥಾತ್ವಂ ಭೀರು ಕರ್ಹಿಚಿತ್ ॥
ಭೈಮೀ ಕಿಲ ಸ್ಮ ಭರ್ತಾರಂ ದ್ವಿತೀಯಂ ವರಯಿಷ್ಯತಿ ।
ಸ್ವೈರವೃತ್ತಾ ಯಥಾ ಕಾಮಂ...................... - ವನಪರ್ವ(೭೬/೨೨-೨೪)
.............................. ತತೋಽಹಮಿಹ ಚಾಗತಃ ।
ತ್ವದರ್ಥಂ ವಿಪುಲ ಶ್ರೋಣಿ ನ ಹಿ ಮೇಽನ್ಯತ್ತ್ವಯೋಜನಮ್ ॥ - ವನಪರ್ವ(೭೬/೨೧)

ಮುಟ್ಟಿ ಪ್ರಮಾಣ ಮಾಡಿ ಹೇಳುತ್ತೇನೆ. ಕಾಯೇನ, ಮನಸಾ, ವಾಚಾ ನಾನು ಪರಿಶುದ್ಧಳು. ಒಂದು ವೇಳೆ ನಾನು ಅಪ್ರಮಾಣಿಕಳಾದರೆ ಪರಪುರುಷನನ್ನು ಹೊಂದುವ ಆಸೆ ಹೊಂದಿದ್ದರೆ ನನ್ನ ಪ್ರಾಣಗಳನ್ನು ಕೂಡಲೆ ಪ್ರಾಣದೇವನಾದ ವಾಯು, ದಿವಾರಾತ್ರಿ ದೇವತೆಗಳಾದ ಸೂರ್ಯ-ಚಂದ್ರರು ಅಪಹರಿಸಲಿ[೧].'

ಹೀಗೆ ದಮಯಂತಿಯು ನುಡಿಯುತ್ತಿರಲು ವಾಯುದೇವರು ಆಕಾಶದಿಂದ 'ಹೇ ನಳ! ಈ ದಮಯಂತಿಯು ಯಾವ ಪಾಪವನ್ನು ಮಾಡಿಲ್ಲ; ಇದು ಸತ್ಯ. ಆಕೆಯು ಶೀಲನಿಧಿ ಯಾಗಿದ್ದಾಳೆ. ನಾವು ಮೂವರು (ವಾಯು, ಸೂರ್ಯ, ಚಂದ್ರ) ಇದಕ್ಕೆ ಸಾಕ್ಷಿಯಾಗಿದ್ದೇವೆ. ನಿನ್ನ ಆಗಮನಕ್ಕಾಗಿ ಆಕೆಯು ಸ್ವಯಂವರದ ನಾಟಕ ಮಾಡಿದ್ದಾಳೆ. ಆಕೆಯ ಶೀಲದ ಬಗ್ಗೆ ಶಂಕಿಸಬೇಡ. ಆಕೆಯೊಡನೆ ಸುಖವಾಗಿರು[೨].'

ಹೀಗೆ ವಾಯುವಿನ ಆಕಾಶವಾಣಿಯೊಡನೆ ದೇವತೆಗಳಿಂದ (ನಳದಮಯಂತಿಯರ ಮೇಲೆ) ಪುಷ್ಪವೃಷ್ಟಿ ಆಯಿತು; ದೇವ ದುಂದುಭಿ ಮೊಳಗಿತು; ಮಂದಮಾರುತ ಬೀಸಿತು. ಈ ಅದ್ಭುತವನ್ನು ಕಂಡ ನಳನು ದಮಯಂತಿಯ ಬಗ್ಗೆ ಇದ್ದ ಸಂದೇಹ ಕಳೆದು ಕೊಂಡನು. ನಂತರ ಬಾಹುಕ ರೂಪಿ ನಳನು ಕರ್ಕೋಟಕ ಸರ್ಪವನ್ನು ನೆನೆಯುತ್ತಾ, ಆತನು ಕೊಟ್ಟ ವಸ್ತ್ರವನ್ನು ಧರಿಸಿದೊಡನೆ ಮೊದಲಿನ ರೂಪ ಹೊಂದಿ ಮಹಾರಾಜನಾಗಿ ಕಂಡನು. ಇದನ್ನು ನೋಡುತ್ತಲೇ ದಮಯಂತಿಯು ಆನಂದದಿಂದ ನಳನನ್ನು ಬಿಗಿದಪ್ಪಿ ಗಟ್ಟಿಯಾಗಿ ಅತ್ತಳು. ನಳನೂ ದಮಯಂತಿಯನ್ನು ಆಲಿಂಗಿಸಿ, ಮಕ್ಕಳನ್ನು ಮುತ್ತಿಟ್ಟು, ಅವರ ಶಿರಸ್ಸನ್ನು ಆಘ್ರಾಣಿಸಿದನು. ಹೆಂಡತಿಯನ್ನು ಸಂತೈಸಿದನು. ದಮಯಂತಿಯು ತನ್ನ ಹಿಂದಿನ ದುಃಖ-

---

೧ ನ ಮಾಮರ್ಹಸಿ ಕಲ್ಯಾಣ ದೋಷೇಣ ಪರಿಶಂಕಿತುಮ್ ।
ಉಪಾಯೋಽಯಂ ಮಯಾ ದೃಷ್ಟೋ ನೈಷಾಧಾನಯನೇ ತವ ॥
ತ್ವಾಮೃತೇ ನಹಿ ಲೋಕೇಽನ್ಯ ಏಕಾಹ್ನಾ ಪೃಥಿವೀಪತೇ ।
ಸಮರ್ಥೋ ಯೋಜನ ಶತಂ ಗಂತುಮಶ್ವೈರ್ನರಾಧಿಪ ॥
ಸ್ಪೃಶೇಯಂ ತೇನ ಸತ್ಯೇನ ಪಾದಾವೇತೌ ಮಹೀಪತೇ ।
......................... ಭೂತಸಾಕ್ಷೀ ಸದಾಗತಿಃ ॥
ಏಷ ಮೇ ಮುಂಚತು ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ॥ ಇತ್ಯಾದಿ ।
- ವನಪರ್ವ (೭೬/೨೬-೩೫)

೨ ......................... ವಾಯುರಂತರಿಕ್ಷಾದಭಾಷತ ।
ನೈಷಾ ಕೃತವತೀ ಪಾಪಂ ನಲ ಸತ್ಯಂ ಬ್ರವೀಮಿ ತೇ ॥
ರಾಜನ್ ಶೀಲನಿಧಿಃ ಸ್ಫೀತೋ ದಮಯಂತ್ಯಾ ಸುರಕ್ಷಿತಃ ।
ಸಾಕ್ಷಿಣೋ ರಕ್ಷಿಣಶ್ಚಾಸ್ಯಾ ವಯಂ ತ್ರೀನ್ ಪರಿವತ್ಸರಾನ್ ॥
ಉಪಾಯೋ ವಿಹಿತಶ್ಚಾಯಂ ತ್ವದರ್ಥಮತುಲೋಽನಯಾ ।
ನಾತ್ರಶಂಕಾ ತ್ವಯಾ ಕಾರ್ಯಾ ಸಂಗಚ್ಛ ಸಹ ಭಾರ್ಯಯಾ ॥ - ವನಪರ್ವ(೭೬/೩೬-೩೯)

ಗಳನ್ನು ನೆನೆದು ಸುದೀರ್ಘ ನಿಟ್ಟುಸಿರು ಬಿಟ್ಟಳು. ಹೀಗೆ ಪರಸ್ಪರ ನಳದಮಯಂತಿ ಯರು ತಮ್ಮ ದೀರ್ಘದುಃಖವನ್ನು ಮರೆತು ಮತ್ತೆ ಒಂದಾದರು.

ಇತ್ತ ದಮಯಂತಿಯ ತಾಯಿಯು ಭೀಮರಾಜನಿಗೆ ನಡೆದುದೆಲ್ಲವನ್ನು ಹೇಳಲಾಗಿ ರಾಜನು ತುಂಬಾ ಸಂತೋಷದಿಂದ ದಂಪತಿಗಳು ಇಂದು ವಿಶ್ರಮಿಸಲಿ. ನಾಳೆ ಬೆಳಿಗ್ಗೆ ನಳನು ಆಹ್ನೀಕಾದಿಗಳನ್ನು ಮುಗಿಸಿದ ನಂತರ ದಮಯಂತಿ ಸಹಿತನಾದ ನಳನನ್ನು ನೋಡುವೆನೆಂದನು.

ಅಂದು ರಾತ್ರಿ ನಳದಮಯಂತಿಯರು ತಾವು ಇಲ್ಲಿಯವರೆಗೆ ವನದಲ್ಲಿ ಅನುಭವಿಸಿದ್ದೆಲ್ಲವನ್ನು ಪರಸ್ಪರ ಹೇಳಿಕೊಳ್ಳುತ್ತಾ ಸುಖವಾಗಿ ಕಳೆದರು. ಹೀಗೆ ನಳ ಮಹಾರಾಜನು ಭೀಮರಾಜನ ಮನೆಯಲ್ಲಿಯೇ ಸುಖವಾಗಿ ದಮಯಂತಿಯೊಡನೆ ಇದ್ದನು.

ರಾಜ್ಯ ಕಳೆದುಕೊಂಡು ಅಷ್ಟು ಹೊತ್ತಿಗೆ ಮೂರು ವರ್ಷವಾಗಿತ್ತು. ದಂಪತಿಗಳ ಆನಂದಕ್ಕೆ ಮೇರೆ ಇರಲಿಲ್ಲ. ಬಾಡಿಹೋಗುತ್ತಿರುವ ಸಸ್ಯಕ್ಕೆ ಮಳೆ ಬಂದಂತೆ ದಮಯಂತಿಯು ತನ್ನ ಕಾಂತಿಯ ಹಾಗೂ ಶರೀರ ಸೌಂದರ್ಯದ ಪುನರ್ಜನ್ಮ ಪಡೆದಳು. ಹಗಲಿರುಳೂ ಕಂಬನಿಯಲ್ಲಿಯೇ ಕಳೆದ ದಮಯಂತಿಯು ನಳನನ್ನು ಪಡೆದು ಚಂದ್ರೋದಯದಿಂದ ಕೂಡಿದ ರಾತ್ರಿಯಂತೆ ಕಂಗೊಳಿಸಿದಳು[೧].

**ಸಂದೇಶಗಳು-ವಿವರಣೆಗಳು**

೧. ನಳ ಸ್ವಯಂ ಕ್ಷತ್ರಿಯವೀರ ಮಹಾರಾಜ. ವಿದ್ಯೆ, ಪರಾಕ್ರಮ, ರೂಪ, ಯೌವನ, ಕ್ಷತ್ರಿಯಯೋಗ್ಯ ಆಚಾರ-ವಿಚಾರಗಳೆಲ್ಲ ಇದ್ದರೂ ವಿಧಿ ಬರಹದಂತೆ ಮೋಸದ ಜೂಜಿಗೆ ತುತ್ತಾಗಿ ಅರಣ್ಯವಾಸ ಮಾಡಬೇಕಾಯಿತು. ಭಗವದ್ಭಕ್ತರಿಗೂ ಪ್ರಾರಬ್ಧ ಕರ್ಮದ ಅನುಭವ ಬೆನ್ನು ಹತ್ತದೆ ಬಿಡಲಿಲ್ಲ. ಜೂಜಾಡಿದ್ದು ಅದರ ಸೂಚಕ ಮಾತ್ರ (ಧರ್ಮರಾಜನಂತೆ). ಆದ್ದರಿಂದ ನಮ್ಮ ಜೀವನದಲ್ಲಿ ಬರುವ, ಬರಲಿರುವ ದುಃಖಪಡುವ ಸನ್ನಿವೇಶಗಳಿಗೆ ಸಾಮಾನ್ಯ ಮನುಷ್ಯರಂತೂ ಸದಾ ಮಾನಸಿಕವಾಗಿ ಸಿದ್ಧವಾಗಿರಲೇ ಬೇಕು.

**ಬ್ರಹ್ಮಾಪರೋಕ್ಷೇಽಪಿ ವಿಕರ್ಮಸೂಚಕಂ**
**ಪ್ರಾರಬ್ಧ ಪಾಪಸ್ಯ ವಿಷಾಶನಂ ಯಥಾ ॥** - ಮ.ತಾ.ನಿ.(೩೨/೧೧೦)

---

೧ ಸ ಚತುರ್ಥೇ ತತೋ ವರ್ಷೇ ಸಂಗಮ್ಯ ಸಹ ಭಾರ್ಯಯಾ ।
ಸರ್ವಕಾಮೈಃ ಸುಸಿದ್ಧಾರ್ಥೋ ಲಬ್ಧವಾನ್ ಪರಮಾಂ ಮುದಮ್ ॥
........................................
ರಾರಾಜ್ಯ ಭೈಮೀ ಸಮವಾಪ್ತಕಾಮಾ ಶೀತಾಂಶುನಾ ರಾತ್ರಿರಿವೋದಿತೇನ ॥
- ವನಪರ್ವ (೭೬/೫೨,೫೩)

೨. ಧರ್ಮರಾಜನು ತನ್ನ ಮಾನಸಿಕ ಬೇಗೆಯನ್ನು ಬಗೆಹರಿಸಿಕೊಳ್ಳಲು ಬೃಹದಶ್ವರಂತಹ ಮುನಿಗಳನ್ನು ಆಶ್ರಯಿಸಿದ. ಅವರು ಧರ್ಮರಾಜನ ಮನೋವ್ಯಾಧಿ ಪರಿಹರಿಸಲು ನಳೋಪಾಖ್ಯಾನವೇ ಮೊದಲಾದವುಗಳನ್ನು ಉಪದೇಶಿಸಿದರು. ಹಾಗೆಯೇ ನಾವಾದರೂ ನಮ್ಮ ಆಧಿ (ಮಾನಸಿಕ ವ್ಯಾಧಿ) ನಿವಾರಣೆಗೆ ಜ್ಞಾನಿಗಳನ್ನು ಆಶ್ರಯಿಸಿ ತತ್ತ್ವೋಪದೇಶ ಪಡೆಯಬೇಕು.

೩. ಭೀಮರಾಜನಿಗೆ ಮಕ್ಕಳೇ ಇರಲಿಲ್ಲ. ಮನೆಗೆ ಬಂದ ದಮನ ಋಷಿಗಳ ಸೇವೆಯನ್ನು ರಾಜ ಹಾಗೂ ಮಹಾರಾಣಿ ಇಬ್ಬರೂ ಮಾಡಿ ದಮಯಂತಿಯಂತಹ ಮಗಳನ್ನು, ಇಬ್ಬರು ರಾಜಕುವರರನ್ನು ಪಡೆದು ರಾಜ್ಯದ ಉತ್ತರಾಧಿಕಾರಿತ್ವ ಸಮಸ್ಯೆಯನ್ನು, ನಳ ಚಕ್ರವರ್ತಿಯಂತಹ ಪುಣ್ಯಶೀಲ ಅಳಿಯನನ್ನೂ ಪಡೆದು ಧನ್ಯರಾದರು. ಅಂತೆಯೇ ಸತ್ಸಂತಾನಾಪೇಕ್ಷಿಗಳು ಜ್ಞಾನಿಗಳ ಸೇವೆಯನ್ನು ಮಾಡಿದಲ್ಲಿ ಅವರ ಪೂರ್ವಕರ್ಮಗಳಿಗೆ ಅನುಗುಣವಾಗಿ ಸಂತಾನ ಪಡೆಯಬಹುದು.

೪. ನಳದಮಯಂತಿಯರು ಅಪ್ರತಿಮ ರೂಪ, ಸೌಂದರ್ಯ, ದೈವಭಕ್ತಿ ಮೊದಲಾದ ಗುಣಗಳನ್ನು ಇಬ್ಬರೂ ಪರಸ್ಪರ ನೋಡದೇ ಹೋದರೂ ಮಧ್ಯವರ್ತಿ ಜನರಿಂದ ತಿಳಿದುಕೊಂಡು ಪ್ರೀತಿಸಿದರು. ಹಂಸಪಕ್ಷಿಯ ದೌತ್ಯವೂ ಪ್ರೇಮಾಂಕುರಕ್ಕೆ ಸಹಾಯವಾಯಿತು. ಸದ್ಗುಣಗಳಿದ್ದಲ್ಲಿ ವರಕನ್ಯಾನ್ವೇಷಣೆ ಸುಲಭ.

೫. ನಳ ದಮಯಂತಿಯರ ಪ್ರೇಮದ ಆಳದ ಪರೀಕ್ಷೆಯನ್ನು ಇಂದ್ರಾದಿ ದೇವತೆಗಳೇ ಸ್ವತಃ ಮಾಡಿ ನಳದಮಯಂತಿಯರನ್ನು ಅನುಗ್ರಹಿಸಿದರು. ನಳನ ಪ್ರಾಮಾಣಿಕತೆ ದೇವತೆಗಳ ಬಗ್ಗೆ ಇದ್ದ ವಿಧೇಯತೆ ಆತನನ್ನು ಕಾಪಾಡಿದರೆ ದಮಯಂತಿಯ ಪಾತಿವ್ರತ್ಯ ನಳನ ಸಂಪಾದನೆಗೆ ದೇವತೆಗಳೇ ಒಲಿದು ತಮ್ಮ ಸ್ವರೂಪ ಪ್ರದರ್ಶಿಸಿ ಅನುಗ್ರಹಿಸಿದರು. ದಮಯಂತಿಯ ದೇವತಾ ಪ್ರಾರ್ಥನೆ ವ್ಯರ್ಥವಾಗಲಿಲ್ಲ: '**ನ ದೇವತೋಷಣಂ ವೃಥಾ**'. ಅಂತೆಯೇ ವಿವಾಹ ಕಾಲದಲ್ಲಿ ದೇವತಾ ಪ್ರಾರ್ಥನೆಗಳು ಸಕಲ ವಿಘ್ನ ಪರಿಹಾರಕಗಳಾಗುತ್ತವೆ.

೬. ತಮ್ಮದಲ್ಲದ್ದನ್ನು ಬಯಸುವವರು ಕಲ್ಯಾದಿ ಅಸುರರು. ಕಲಿಯು ಅಂತೆಯೇ ದಮಯಂತಿಯನ್ನು ಬಯಸಿದ. ಇಂದ್ರದೇವರ ಮಾತನ್ನು ಕೇಳದೇ ನಳನಲ್ಲಿ ದ್ವೇಷ ಆರಂಭಿಸಿದ. ಕಲಿದ್ವಾಪರರು ಸೇರಿ ನಳನನ್ನು ಪುಷ್ಕರನ ಮೂಲಕ ಜೂಜಿನಲ್ಲಿ ಸೋಲಿಸಿ ಕಾಡಿಗೆ ಅಟ್ಟಿದರು. ಇದೇ ಅಸುರೀ ಸ್ವಭಾವ. ಧರ್ಮ, ನ್ಯಾಯಸಮ್ಮತವಾದ ನಳದಮಯಂತಿಯರ ಸ್ವಯಂವರವನ್ನು ಕಲಿದ್ವಾಪರರು ಸಹಿಸಲಿಲ್ಲ. ಆದರೆ ನಳನನ್ನು ಪ್ರವೇಶಿಸಲು ಕಲಿಗೆ ೧೨ ವರ್ಷ ಹಿಡಿಯಿತು. ಅಷ್ಟು ಧರ್ಮಿಷ್ಠನಾಗಿದ್ದ ನಳ. ಆದಕ್ಕಾಗಿ ನಾವು ಯಥಾಶಕ್ತಿ ಧಾರ್ಮಿಕ ಜೀವನ ನಡೆಸುವುದು ಸೂಕ್ತ. ಆಗ ನಾವು ದಾರಿ ತಪ್ಪುವುದಿಲ್ಲ (ಶಾಸ್ತ್ರೋಕ್ತವಾದ ದೈಹಿಕ, ಮಾನಸಿಕ ಶೌಚಗಳು ಕಲಿಪ್ರವೇಶವನ್ನು ತಪ್ಪಿಸಬಲ್ಲವು). ಧರ್ಮರಾಜನ ರಾಜಸೂಯದ ವೈಭವ,

ದ್ರೌಪದಿಯಂತಹ ಪತ್ನಿ ದುರ್ಯೋಧನನ ಅಸೂಯೆಗೆ ಈಡುಮಾಡಿ ಧರ್ಮರಾಜನನ್ನು ಕಾಡಿಗೆ ಅಟ್ಟಲು ಕಾರಣವಾಯಿತು.

೭. ನಳ ಧರ್ಮ ತಪ್ಪಿ ನಡೆದಾಗ ರಾಜ್ಯ, ಐಶ್ವರ್ಯ ಕಳೆದುಕೊಂಡರೂ ಆ ದಮಯಂತಿಯು ಪತಿಗೆ ಪಗಡೆಯಾಟ ಬಿಡಲು ಪರಿಪರಿಯಿಂದ ತಾನೂ ಬೇಡಿಕೊಂಡಳಲ್ಲದೆ ಅಮಾತ್ಯರಿಂದ, ಪೌರರಿಂದ ಹೇಳಿಸಿ ಕರ್ತವ್ಯ ಪ್ರಜ್ಞೆ ಮೆರೆದಳು. ಧರ್ಮರಾಜನಿಗೂ ಸಹ ದ್ರೌಪದಿ, ಭೀಮಾದಿ ಅನುಜರೂ, ವಿದುರ ಮೊದಲಾದವರು ಹೇಳಿದರೂ ಧರ್ಮರಾಜ ದ್ಯೂತ ಮುಂದುವರಿಸಿ ರಾಜ್ಯಭ್ರಷ್ಟನಾದ. ಹೆಂಡತಿಯನ್ನು ಪಣಕ್ಕಿಟ್ಟು ಧರ್ಮಜ ತಪ್ಪೆಸಗಿದರೆ ನಳ ಆ ತಪ್ಪು ಮಾಡಲಿಲ್ಲ.

ಹೀಗೆ ಗಂಡ ತಪ್ಪಿದಾಗ ಹೆಂಡತಿಯಾದರೂ ಗಂಡನಿಗೆ ಕರ್ತವ್ಯಪ್ರಜ್ಞೆ ಮೂಡಿಸಲು ಪ್ರಯತ್ನಿಸಬೇಕು. ತನ್ನ ಮಕ್ಕಳನ್ನು ತನ್ನ ತವರಿಗೆ ಕಳಿಸುತ್ತಾಳೆ ದಮಯಂತಿ. ದ್ರೌಪದಿಯ ಮಕ್ಕಳನ್ನು ಧೃಷ್ಟದ್ಯುಮ್ನ-ಕೃಷ್ಣರು ತಮ್ಮಲ್ಲಿಗೆ ಕರೆದೊಯ್ಯುತ್ತಾರೆ.

೮. ವನಕ್ಕೆ ತೆರಳಿದರೂ ನಳದಮಯಂತಿಯರನ್ನು ಕಲಿ ಬಿಡದೆ ಅವರ ವಸ್ತ್ರವನ್ನು ಕಸಿದ ನಳ ದಿಗಂಬರನಾದ. ಹೆಂಡತಿಯ ವಸ್ತ್ರವನ್ನೇ ಕತ್ತರಿಸಿ ಉಟ್ಟ. ಇಬ್ಬರೂ ಅಸಹಾಯಕರಾದರು. ಅನ್ನ-ನೀರಿಗೂ ಎರವಾದರು. ಆದರೆ ಪಾಂಡವರು, '**ದಿವಿ ದೇವವತ್ ಸುಖಮ್**' ಎಂದಂತೆ ವನದಲ್ಲೂ ಲಕ್ಷಾಂತರ ಬ್ರಾಹ್ಮಣರಿಗೆ, ಋಷಿಮುನಿ, ಸನ್ಯಾಸಿಗಳಿಗೆ ಭಕ್ಷ್ಯ ಉಣಿಸಿ, ಅವರೂ ದೇವತೆಗಳಂತೆ ಸುಖವಾಗಿದ್ದರು. ಆದ್ದರಿಂದ ವಿಧಿಲಿಖಿತ ಏನೇ ಇದ್ದರೂ ಯಾರನ್ನೂ ಬಿಡದು. ಅದನ್ನು ಅನುಭವಿಸುವ ಸ್ಥೈರ್ಯವನ್ನು ಭಗವಂತ ಕೊಡಲೆಂದು ಪ್ರಾರ್ಥಿಸಬೇಕು.

೯. ಅಸಹಾಯಕನಾದ ನಳ ಪತ್ನಿಯ ಪಾತಿವ್ರತ್ಯ ನಂಬಿ ತ್ಯಾಗಮಾಡಿ ಏಕಾಂಗಿಯಾಗಿ ಹೊರಟ. ದಮಯಂತಿಯು ಮುಂದೆ ಅಜಗರ ಸರ್ಪಕ್ಕೆ ತುತ್ತಾಗಿ ವ್ಯಾಧನಿಂದ ಪಾರಾದರೂ, ಅವನ ಕಾಮಪಿಪಾಸೆಗೆ ಗುರಿಯಾದರೂ, ತನ್ನ ಪಾತಿವ್ರತ್ಯದಿಂದ ವ್ಯಾಧನಿಗೆ ಶಾಪಕೊಟ್ಟು ಸಾಯಿಸಿದಳು. ಪಾತಿವ್ರತ್ಯ ಎಂತಹ ವಿಪತ್ತನ್ನೂ ಎದುರಿಸಬಲ್ಲದು. ದ್ರೌಪದಿಯೂ ಸಹ ದುರ್ಯೋಧನ, ದುಃಶಾಸನರ ದೌರ್ಜನ್ಯಕ್ಕೆ ಒಳಗಾಗಿ ಕೃಷ್ಣಾನುಗ್ರಹದಿಂದ ವಿಪತ್ತಿನಿಂದ ಪಾರಾದಳು. ವನದಲ್ಲಿ ಜಯದ್ರಥನ ತೊಂದರೆಯಾದಾಗಲೂ ಭೀಮಾರ್ಜುನರ ಸಕಾಲಿಕ ಮಧ್ಯಪ್ರವೇಶದಿಂದ ಪಾರಾದುದು. ಆಕೆಯ ಹರಿಭಕ್ತಿ ಮತ್ತು ಪಾತಿವ್ರತ್ಯದ ಮಹಿಮೆಯಿಂದಲೇ. ದ್ರೌಪದೀ ದುರ್ಯೋಧನ, ದುಃಶಾಸನ, ಜಯದ್ರಥರಿಗೆ ಶಾಪಕೊಡದೆ ಅಚ್ಛಿನ್ನ ಭಾಗವತೆಯಾದಳು. ದಮಯಂತಿ ಶಾಪಕೊಟ್ಟು ಆಪತ್ತಿನಿಂದ ಪಾರಾದರೂ, ದ್ರೌಪದಿಯಂತೆ ಅಚ್ಛಿನ್ನ ಭಾಗವತೆಯಾಗಲಿಲ್ಲ.

೧೦. ವನದಲ್ಲಿ ದಮಯಂತಿ ಒಬ್ಬಳೇ ಅತ್ತಿಂದಿತ್ತ ತಿರುಗುವಾಗ ತಪಸ್ವಿಗಳ ಸಮೂಹವೇ ದರ್ಶನಕೊಟ್ಟು ಮಾರ್ಗದರ್ಶನ ನೀಡುತ್ತದೆ. ಅದಕ್ಕೂ ಆಕೆಯ ಪಾತಿವ್ರತ್ಯವೇ ಕಾರಣ.

**ಪಾತಿವ್ರತ್ಯದಿಂದ ಸ್ತ್ರೀಯರು ಎಂತಹ ವಿಪತ್ತಿನಿಂದಲೂ ಪಾರಾಗಬಲ್ಲರು.** ಮುಂದೆ ಆಕೆ ಚೇದಿರಾಜ ಸುಬಾಹುವಿನ ಅರಮನೆಯಲ್ಲಿ ಆಶ್ರಯಹೊಂದಿ ವಿಪತ್ತಿನಿಂದ ಪೂರ್ಣ ಪಾರಾಗುತ್ತಾಳೆ.

೧೧. ದಮಯಂತಿ ಚೇದಿರಾಜ ಸುಬಾಹುವಿನ ಅರಮನೆಯಲ್ಲಿ ಆಶ್ರಯ ಪಡೆದರೂ, ತನ್ನತನವನ್ನು ಎಂದೂ ಬಿಟ್ಟುಕೊಡದೇ ತನ್ನ ಗುರುತೂ ಆಗದಂತೆ ನೋಡಿಕೊಳ್ಳುತ್ತಾಳೆ. ಅಲ್ಲೂ ಪಾತಿವ್ರತ್ಯಕ್ಕೆ ಆದ್ಯತೆ. ಸರಳವಾದ ಉಡುಗೆಯಿಂದ ಸೌಂದರ್ಯ ಪ್ರದರ್ಶನಕ್ಕೆ ಎಂದೂ ಹೋಗದೇ ಸರಳ ಜೀವನ ನಡೆಸಿ ಪಾತಿವ್ರತ್ಯ ಮೆರೆದು ಸ್ತ್ರೀಧರ್ಮವನ್ನು ಎತ್ತಿ ತೋರಿಸುತ್ತಾಳೆ. ಅದೇ ಆಕೆಗೆ ಬೇಗನೆ ನಳ ಸಿಗುವಂತೆ ಮಾಡುತ್ತದೆ. **ಪತಿಯ ಮುಂದೆ ಸೌಂದರ್ಯ ಪ್ರದರ್ಶನವೇ ಹೊರತು ಪ್ರಪಂಚದ ಮುಂದಲ್ಲ.**

೧೨. ನಳ ಸ್ವಯಂ ಅರಣ್ಯದಲ್ಲಿ ದುಃಖಪಡುತ್ತಿದ್ದರೂ ಕರ್ಕೋಟಕ ಸರ್ಪದ ಆರ್ತನಾದಕ್ಕೆ ಸ್ಪಂದಿಸಿ ಬೆಂಕಿಯಿಂದ ರಕ್ಷಿಸುತ್ತಾನೆ. ಹೇಳಿದಂತೆ ಕೇಳಿ ಕುರೂಪಿಯಾಗಿ ಅವರಿಂದ ಸರ್ಪ ವರ ಪಡೆದು ಮುಂದೆ ಬಾಹುಕನಾಗಿ ಋತುಪರ್ಣರಾಜನ ಸಾರಥಿಯಾಗಿ ಕರ್ತವ್ಯ ನಿರ್ವಹಿಸಿ ದಮಯಂತಿಯನ್ನು ನೋಡುವ ಸೌಭಾಗ್ಯ ಪಡೆಯುತ್ತಾನೆ. ಇದಕ್ಕೆಲ್ಲ ಆತನ ಕರ್ತವ್ಯಪ್ರಜ್ಞೆ, ರಾಜಧರ್ಮ ಪರಿಪಾಲನೆಯೆ ಕಾರಣ. ಆದ್ದರಿಂದ **ಸ್ವಧರ್ಮ ಪರಿಪಾಲನೆ ಹಾಗೂ ಆರ್ತರ ರಕ್ಷಣೆಯು ಎಲ್ಲರ ಕರ್ತವ್ಯವಾಗಿದೆ.**

೧೩. ದಮಯಂತಿಯನ್ನು ತಾನು ತ್ಯಾಗ ಮಾಡಿದ್ದು ತಪ್ಪು ಎಂಬ ಅರಿವು ನಳನಿಗೆ ಸದಾ ಇತ್ತು. ತನ್ನ ಶರೀರದಲ್ಲಿ ಕಲಿಯ ಬಾಧೆಯಿಂದ ಎಂದೂ ತಿಳಿದಿದ್ದ ನಳ ಅಸಹಾಯಕನಾಗಿ ವರ್ತಿಸಿದೆ ಎಂದು ಪ್ರಾಮಾಣಿಕವಾಗಿ ದಮಯಂತಿಗೆ ಸಂದೇಶ ಕಳಿಸುವ ಮೂಲಕ **ಪ್ರಾಮಾಣಿಕ ಜೀವನದ ಅವಶ್ಯಕತೆ** ಎಲ್ಲರಿಗೂ ತಿಳಿಸಿದ್ದಾನೆ.

೧೪. ಋತುಪರ್ಣನಿಗೆ ತನ್ನ ಸಾರಥ್ಯ ನೀಡುವ ಮೂಲಕ ತನ್ನ ಪತ್ನಿಯ ಸ್ವಯಂವರಕ್ಕೆ ತಾನೇ ಕರೆದುಕೊಂಡು ಹೋಗುತ್ತಾನೆ ನಳ. ದಮಯಂತಿಯ ಯೋಜನೆ ಏನೇ ಇದ್ದರೂ ತನ್ನನ್ನು ನಂಬಿದ ಋತುಪರ್ಣರಾಜನನ್ನು ಸಕಾಲಕ್ಕೆ ವಿದರ್ಭಕ್ಕೆ ಕರೆದುಕೊಂಡು ಹೋಗುವ ಮೂಲಕ **ರಾಜಸೇವೆಯನ್ನು ಭೃತ್ಯನು ಹೇಗೆ ನಿರ್ವಹಿಸಬೇಕೆಂದು ತೋರಿಸುತ್ತಾನೆ.**

೧೫. ದಮಯಂತಿಯು ತನ್ನ ಪತಿಯನ್ನು ಕರೆಸಲು ಸುಳ್ಳು ಸ್ವಯಂವರ ಯೋಜನೆ ಮಾಡಿ ಯಶಸ್ಸನ್ನು ಗಳಿಸುತ್ತಾಳೆ. ಅಲ್ಲೂ ಆಕೆಯ ಪಾತಿವ್ರತ್ಯ ಕುಂದದೆ ಮಿಂಚುತ್ತದೆ. ಸ್ತ್ರೀಯರಿಗೆ ಪಾತಿವ್ರತ್ಯ ಸಕಲ ಪುರುಷಾರ್ಥ ಸಾಧಕ.

೧೬. ತನಗೆ ಉಪಕರಿಸಿದ ನಳನಿಗೆ ಕರ್ಕೋಟಕ ಸರ್ಪ ತೋರಿಕೆಗೆ ಮೊದಲು ಕುರೂಪಿಯನ್ನಾಗಿ ಮಾಡಿದರೂ, ಮುಂದೆ ಋತುಪರ್ಣನಿಗೆ ಸಾರಥ್ಯ ವಹಿಸುವಿಕೆ, ಕಲಿ ನಿವಾರಣೋಪಾಯಗಳನ್ನು ತಿಳಿಸಿ ಪ್ರತ್ಯುಪಕಾರವನ್ನೇ ಮಾಡುತ್ತಾನೆ. ಕರ್ಕೋಟಕ

ದ್ರೌಪದಿಯಂತಹ ಪತ್ನಿ ದುರ್ಯೋಧನನ ಅಸೂಯೆಗೆ ಈಡುಮಾಡಿ ಧರ್ಮರಾಜನನ್ನು ಕಾಡಿಗೆ ಅಟ್ಟಲು ಕಾರಣವಾಯಿತು.

೭. ನಳ ಧರ್ಮ ತಪ್ಪಿ ನಡೆದಾಗ ರಾಜ್ಯ, ಐಶ್ವರ್ಯ ಕಳೆದುಕೊಂಡರೂ ಆ ದಮಯಂತಿಯು ಪತಿಗೆ ಪಗಡೆಯಾಟ ಬಿಡಲು ಪರಿಪರಿಯಿಂದ ತಾನೂ ಬೇಡಿಕೊಂಡಳಲ್ಲದೆ ಅಮಾತ್ಯರಿಂದ, ಪೌರರಿಂದ ಹೇಳಿಸಿ ಕರ್ತವ್ಯ ಪ್ರಜ್ಞೆ ಮೆರೆದಳು. ಧರ್ಮರಾಜನಿಗೂ ಸಹ ದ್ರೌಪದಿ, ಭೀಮಾದಿ ಅನುಜರೂ, ವಿದುರ ಮೊದಲಾದವರು ಹೇಳಿದರೂ ಧರ್ಮರಾಜ ದ್ಯೂತ ಮುಂದುವರಿಸಿ ರಾಜ್ಯಭ್ರಷ್ಟನಾದ. ಹೆಂಡತಿಯನ್ನು ಪಣಕ್ಕಿಟ್ಟು ಧರ್ಮಜ ತಪ್ಪೆಸಗಿದರೆ ನಳ ಆ ತಪ್ಪು ಮಾಡಲಿಲ್ಲ.

ಹೀಗೆ ಗಂಡ ತಪ್ಪಿದಾಗ ಹೆಂಡತಿಯಾದರೂ ಗಂಡನಿಗೆ ಕರ್ತವ್ಯಪ್ರಜ್ಞೆ ಮೂಡಿಸಲು ಪ್ರಯತ್ನಿಸಬೇಕು. ತನ್ನ ಮಕ್ಕಳನ್ನು ತನ್ನ ತವರಿಗೆ ಕಳಿಸುತ್ತಾಳೆ ದಮಯಂತಿ. ದ್ರೌಪದಿಯ ಮಕ್ಕಳನ್ನು ಧೃಷ್ಟದ್ಯುಮ್ನ-ಕೃಷ್ಣರು ತಮ್ಮಲ್ಲಿಗೆ ಕರೆದೊಯ್ಯುತ್ತಾರೆ.

೮. ವನಕ್ಕೆ ತೆರಳಿದರೂ ನಳದಮಯಂತಿಯರನ್ನು ಕಲಿ ಬಿಡದೆ ಅವರ ವಸ್ತ್ರವನ್ನು ಕಸಿದ ನಳ ದಿಗಂಬರನಾದ. ಹೆಂಡತಿಯ ವಸ್ತ್ರವನ್ನೇ ಕತ್ತರಿಸಿ ಉಟ್ಟ. ಇಬ್ಬರೂ ಅಸಹಾಯಕರಾದರು. ಅನ್ನ-ನೀರಿಗೂ ಎರವಾದರು. ಆದರೆ ಪಾಂಡವರು, **'ದಿವಿ ದೇವವತ್ ಸುಖಮ್'** ಎಂದಂತೆ ವನದಲ್ಲೂ ಲಕ್ಷಾಂತರ ಬ್ರಾಹ್ಮಣರಿಗೆ, ಋಷಿಮುನಿ, ಸನ್ಯಾಸಿಗಳಿಗೆ ಭಕ್ಷ್ಯ ಉಣಿಸಿ, ಅವರೂ ದೇವತೆಗಳಂತೆ ಸುಖವಾಗಿದ್ದರು. ಆದ್ದರಿಂದ ವಿಧಿಲಿಖಿತ ಏನೇ ಇದ್ದರೂ ಯಾರನ್ನೂ ಬಿಡದು. ಅದನ್ನು ಅನುಭವಿಸುವ ಸ್ಥೈರ್ಯವನ್ನು ಭಗವಂತ ಕೊಡಲೆಂದು ಪ್ರಾರ್ಥಿಸಬೇಕು.

೯. ಅಸಹಾಯಕನಾದ ನಳ ಪತ್ನಿಯ ಪಾತಿವ್ರತ್ಯ ನಂಬಿ ತ್ಯಾಗಮಾಡಿ ಏಕಾಂಗಿಯಾಗಿ ಹೊರಟ. ದಮಯಂತಿಯು ಮುಂದೆ ಅಜಗರ ಸರ್ಪಕ್ಕೆ ತುತ್ತಾಗಿ ವ್ಯಾಧನಿಂದ ಪಾರಾದರೂ, ಅವನ ಕಾಮಪಿಪಾಸೆಗೆ ಗುರಿಯಾದರೂ, ತನ್ನ ಪಾತಿವ್ರತ್ಯದಿಂದ ವ್ಯಾಧನಿಗೆ ಶಾಪಕೊಟ್ಟು ಸಾಯಿಸಿದಳು. ಪಾತಿವ್ರತ್ಯ ಎಂತಹ ವಿಪತ್ತನ್ನೂ ಎದುರಿಸಬಲ್ಲದು. ದ್ರೌಪದಿಯೂ ಸಹ ದುರ್ಯೋಧನ, ದುಃಶಾಸನರ ದೌರ್ಜನ್ಯಕ್ಕೆ ಒಳಗಾಗಿ ಕೃಷ್ಣಾನುಗ್ರಹದಿಂದ ವಿಪತ್ತಿನಿಂದ ಪಾರಾದಳು. ವನದಲ್ಲಿ ಜಯದ್ರಥನ ತೊಂದರೆಯಾದಾಗಲೂ ಭೀಮಾರ್ಜುನರ ಸಕಾಲಿಕ ಮಧ್ಯಪ್ರವೇಶದಿಂದ ಪಾರಾದುದು. ಆಕೆಯ ಹರಿಭಕ್ತಿ ಮತ್ತು ಪಾತಿವ್ರತ್ಯದ ಮಹಿಮೆಯಿಂದಲೇ. ದ್ರೌಪದೀ ದುರ್ಯೋಧನ, ದುಃಶಾಸನ, ಜಯದ್ರಥರಿಗೆ ಶಾಪಕೊಡದೆ ಅಚ್ಚಿನ್ನ ಭಾಗವತೆಯಾದಳು. ದಮಯಂತಿ ಶಾಪಕೊಟ್ಟು ಆಪತ್ತಿನಿಂದ ಪಾರಾದರೂ, ದ್ರೌಪದಿಯಂತೆ ಅಚ್ಚಿನ್ನ ಭಾಗವತೆಯಾಗಲಿಲ್ಲ.

೧೦. ವನದಲ್ಲಿ ದಮಯಂತಿ ಒಬ್ಬಳೇ ಅತ್ತಿಂದಿತ್ತ ತಿರುಗುವಾಗ ತಪಸ್ವಿಗಳ ಸಮೂಹವೇ ದರ್ಶನಕೊಟ್ಟು ಮಾರ್ಗದರ್ಶನ ನೀಡುತ್ತದೆ. ಅದಕ್ಕೂ ಆಕೆಯ ಪಾತಿವ್ರತ್ಯವೇ ಕಾರಣ.

**ಪಾತಿವ್ರತ್ಯದಿಂದ ಸ್ತ್ರೀಯರು ಎಂತಹ ವಿಪತ್ತಿನಿಂದಲೂ ಪಾರಾಗಬಲ್ಲರು.** ಮುಂದೆ ಆಕೆ ಚೇದಿರಾಜ ಸುಬಾಹುವಿನ ಅರಮನೆಯಲ್ಲಿ ಆಶ್ರಯಹೊಂದಿ ವಿಪತ್ತಿನಿಂದ ಪೂರ್ಣ ಪಾರಾಗುತ್ತಾಳೆ.

೧೧. ದಮಯಂತಿ ಚೇದಿರಾಜ ಸುಬಾಹುವಿನ ಅರಮನೆಯಲ್ಲಿ ಆಶ್ರಯ ಪಡೆದರೂ, ತನ್ನತನವನ್ನು ಎಂದೂ ಬಿಟ್ಟುಕೊಡದೇ ತನ್ನ ಗುರುತೂ ಆಗದಂತೆ ನೋಡಿಕೊಳ್ಳುತ್ತಾಳೆ. ಅಲ್ಲೂ ಪಾತಿವ್ರತ್ಯಕ್ಕೆ ಆದ್ಯತೆ. ಸರಳವಾದ ಉಡುಗೆಯಿಂದ ಸೌಂದರ್ಯ ಪ್ರದರ್ಶನಕ್ಕೆ ಎಂದೂ ಹೋಗದೇ ಸರಳ ಜೀವನ ನಡೆಸಿ ಪಾತಿವ್ರತ್ಯ ಮೆರೆದು ಸ್ತ್ರೀಧರ್ಮವನ್ನು ಎತ್ತಿ ತೋರಿಸುತ್ತಾಳೆ. ಅದೇ ಆಕೆಗೆ ಬೇಗನೆ ನಳ ಸಿಗುವಂತೆ ಮಾಡುತ್ತದೆ. **ಪತಿಯ ಮುಂದೆ ಸೌಂದರ್ಯ ಪ್ರದರ್ಶನವೇ ಹೊರತು ಪ್ರಪಂಚದ ಮುಂದಲ್ಲ.**

೧೨. ನಳ ಸ್ವಯಂ ಅರಣ್ಯದಲ್ಲಿ ದುಃಖಪಡುತ್ತಿದ್ದರೂ ಕರ್ಕೋಟಕ ಸರ್ಪದ ಆರ್ತನಾದಕ್ಕೆ ಸ್ಪಂದಿಸಿ ಬೆಂಕಿಯಿಂದ ರಕ್ಷಿಸುತ್ತಾನೆ. ಹೇಳಿದಂತೆ ಕೇಳಿ ಕುರೂಪಿಯಾಗಿ ಅವರಿಂದ ಸರ್ಪ ವರ ಪಡೆದು ಮುಂದೆ ಬಾಹುಕನಾಗಿ ಋತುಪರ್ಣರಾಜನ ಸಾರಥಿಯಾಗಿ ಕರ್ತವ್ಯ ನಿರ್ವಹಿಸಿ ದಮಯಂತಿಯನ್ನು ನೋಡುವ ಸೌಭಾಗ್ಯ ಪಡೆಯುತ್ತಾನೆ. ಇದಕ್ಕೆಲ್ಲ ಆತನ ಕರ್ತವ್ಯಪ್ರಜ್ಞೆ, ರಾಜಧರ್ಮ ಪರಿಪಾಲನೆಯೆ ಕಾರಣ. ಆದ್ದರಿಂದ **ಸ್ವಧರ್ಮ ಪರಿಪಾಲನೆ ಹಾಗೂ ಆರ್ತರ ರಕ್ಷಣೆಯು ಎಲ್ಲರ ಕರ್ತವ್ಯವಾಗಿದೆ.**

೧೩. ದಮಯಂತಿಯನ್ನು ತಾನು ತ್ಯಾಗ ಮಾಡಿದ್ದು ತಪ್ಪು ಎಂಬ ಅರಿವು ನಳನಿಗೆ ಸದಾ ಇತ್ತು. ತನ್ನ ಶರೀರದಲ್ಲಿ ಕಲಿಯ ಬಾಧೆಯಿಂದ ಎಂದೂ ತಿಳಿದಿದ್ದ ನಳ ಅಸಹಾಯಕನಾಗಿ ವರ್ತಿಸಿದೆ ಎಂದು ಪ್ರಾಮಾಣಿಕವಾಗಿ ದಮಯಂತಿಗೆ ಸಂದೇಶ ಕಳಿಸುವ ಮೂಲಕ **ಪ್ರಾಮಾಣಿಕ ಜೀವನದ ಅವಶ್ಯಕತೆ** ಎಲ್ಲರಿಗೂ ತಿಳಿಸಿದ್ದಾನೆ.

೧೪. ಋತುಪರ್ಣನಿಗೆ ತನ್ನ ಸಾರಥ್ಯ ನೀಡುವ ಮೂಲಕ ತನ್ನ ಪತ್ನಿಯ ಸ್ವಯಂವರಕ್ಕೆ ತಾನೇ ಕರೆದುಕೊಂಡು ಹೋಗುತ್ತಾನೆ ನಳ. ದಮಯಂತಿಯ ಯೋಜನೆ ಏನೇ ಇದ್ದರೂ ತನ್ನನ್ನು ನಂಬಿದ ಋತುಪರ್ಣರಾಜನನ್ನು ಸಕಾಲಕ್ಕೆ ವಿದರ್ಭಕ್ಕೆ ಕರೆದುಕೊಂಡು ಹೋಗುವ ಮೂಲಕ **ರಾಜಸೇವೆಯನ್ನು ಭೃತ್ಯನು ಹೇಗೆ ನಿರ್ವಹಿಸಬೇಕೆಂದು ತೋರಿಸುತ್ತಾನೆ.**

೧೫. ದಮಯಂತಿಯು ತನ್ನ ಪತಿಯನ್ನು ಕರೆಸಲು ಸುಳ್ಳು ಸ್ವಯಂವರ ಯೋಜನೆ ಮಾಡಿ ಯಶಸ್ಸನ್ನು ಗಳಿಸುತ್ತಾಳೆ. ಅಲ್ಲೂ ಆಕೆಯ ಪಾತಿವ್ರತ್ಯ ಕುಂದದೆ ಮಿಂಚುತ್ತದೆ. ಸ್ತ್ರೀಯರಿಗೆ ಪಾತಿವ್ರತ್ಯ ಸಕಲ ಪುರುಷಾರ್ಥ ಸಾಧಕ.

೧೬. ತನಗೆ ಉಪಕರಿಸಿದ ನಳನಿಗೆ ಕರ್ಕೋಟಕ ಸರ್ಪ ತೋರಿಕೆಗೆ ಮೊದಲು ಕುರೂಪಿಯನ್ನಾಗಿ ಮಾಡಿದರೂ, ಮುಂದೆ ಋತುಪರ್ಣನಿಗೆ ಸಾರಥ್ಯ ವಹಿಸುವಿಕೆ, ಕಲಿ ನಿವಾರಣೋಪಾಯಗಳನ್ನು ತಿಳಿಸಿ ಪ್ರತ್ಯುಪಕಾರವನ್ನೇ ಮಾಡುತ್ತಾನೆ. ಕರ್ಕೋಟಕ

ವೇದೋಕ್ತ ಸರ್ಪ, ಕಶ್ಯಪರ ಸತ್ಸಂತಾನ. ದೇವಸ್ವಭಾವದ ಆತನಿಗೆ ಮಾಡಿದ ನಳನ ಸೇವೆ ವ್ಯರ್ಥವಾಗಲಿಲ್ಲ: '**ನ ದೇವತೋಷಣಂ ವೃಥಾ**'.

೧೭. ಕುರೂಪಿಯಾದ ನಳನನ್ನು (ಬಾಹುಕ) ದಮಯಂತಿ ಅನೇಕ ಪರೀಕ್ಷೆಗಳನ್ನು ಮಾಡಿಯೇ ಪತಿಯೆಂದು ಗುರುತಿಸುತ್ತಾಳೆ. **ಪತಿಯ ಪರೀಕ್ಷೆಯೂ ಸತಿಯ ಕರ್ತವ್ಯ.**

೧೮. ಋತುಪರ್ಣನಲ್ಲಿ ಸಂಖ್ಯಾಶಾಸ್ತ್ರವನ್ನು ಗುರುತಿಸಿದ ನಳ ಆತನಿಂದ ಅದನ್ನು ಪಡೆದು ತಾನೆ ಅದಕ್ಕೆ ಪ್ರತಿಯಾಗಿ ಅಶ್ವವಿದ್ಯೆ ಉಪದೇಶಿಸುತ್ತಾನೆ. ಅಕ್ಷವಿದ್ಯೆಯನ್ನು ಆತನಿಂದ ಪಡೆದು ವಿದ್ಯಾವಿನಿಮಯ ಚಾತುರ್ಯ ತೋರಿಸುತ್ತಾನೆ. **ಪರಸ್ಪರರ ಸಂಭಾವನೆ ವಿದ್ಯಾವಿನಿಮಯಕ್ಕೆ ಕಾರಣವಾಗಿ ವಿದ್ವಾಂಸರ ಸದಭಿರುಚಿಗೆ ಕಾರಣವಾಗುತ್ತದೆ.**

೧೯. ಋತುಪರ್ಣನಿಂದ ಅಕ್ಷವಿದ್ಯೆ ಪಡೆದ ಮೇಲೆ ನಳನಿಂದ ಕಲಿಯು ನಿರ್ಗಮಿಸಿದ. ಆ ಬಲ ನಳನನ್ನು ಕಲಿಯ ನಿಗ್ರಹ ಸಮರ್ಥವಾಗಿ ಮಾಡಿಸಿತು. ತನ್ನ ಸೋದರನನ್ನು ಮುಂದೆ ಅದೇ ವಿದ್ಯೆಯಿಂದ ಸೋಲಿಸಿದ. **ಅಕ್ಷವಿದ್ಯಾ ನೈಪುಣ್ಯತೆ ತಪ್ಪಲ್ಲ. ಅದರ ವ್ಯಸನಿಯಾಗಿ ದಾಸನಾಗಬಾರದು.**

೨೦. ದಮಯಂತಿಯಿಂದ ನಡೆಸಲಾದ ಎಲ್ಲ ಪರೀಕ್ಷೆಗಳನ್ನು ಇಂದ್ರಾದಿದೇವತೆಗಳು ಸ್ವಯಂವರದಲ್ಲಿ ಕೊಟ್ಟ ವರ ಬಲದಿಂದ ನಳನು ಎದುರಿಸಿ, ತಾನು ನಳನೆಂದು ಸಾಬೀತುಪಡಿಸಿದ. ದಮಯಂತಿಯ ಮುಂದೂ ತನ್ನ ಪ್ರಾಮಾಣಿಕತೆಯನ್ನು ಪ್ರದರ್ಶಿಸಿ ಆಕೆಯ ಮೆಚ್ಚುಗೆಗೆ ಪಾತ್ರನಾಗುತ್ತಾನೆ. **ದಮಯಂತಿಯ ಪಾತಿವ್ರತ್ಯವನ್ನು ಸ್ವಯಂ ವಾಯುದೇವ ಅಂತರಿಕ್ಷವಾಣಿಯಿಂದ ಖಚಿತ ಪಡಿಸುತ್ತಾನೆ.**

೨೧. ತನಗೆ ಆಶ್ರಯಕೊಟ್ಟ ಋತುಪರ್ಣನಿಗೆ ಕೃತಜ್ಞತೆಯನ್ನು ತಿಳಿಸುತ್ತಾನೆ. ತನ್ನೊಡನೆ ಪಗಡೆಯಾಡಿ ರಾಜ್ಯವನ್ನು ಕಸಿದುಕೊಂಡ ತನ್ನ ಸೋದರ ಪುಷ್ಕರನನ್ನು ಕ್ಷಮಿಸಿ, ಜೀವದಾನ ಮಾಡಿ ನಳಮಹಾರಾಜನು **ಕ್ಷಮಯಾ ಧರಿತ್ರೀ** ಎಂದು ಜಗತ್ತಿಗೆ ತೋರಿಸುತ್ತಾನೆ. ಪುಷ್ಕರ ಪಗಡೆಯಾಡಲು ಕಾರಣ ಕಲಿಯೇ ಹೊರತು ಪುಷ್ಕರನಲ್ಲವೆಂದು ನಳನಿಗೆ ಗೊತ್ತಿತ್ತು. ಹೀಗೆ '**ವಿಷವಿಕ್ಕಿದವನಿಗೆ ಷಡ್ರಸವನುಣಿಸಲು ಬೇಕು । ಮೋಸ ಮಾಡಿದವನ ಹೆಸರು ಮಗನಿಗೆ ಇಡಬೇಕು ॥**' ಎಂಬ ದಾಸರ ವಾಣಿಗೆ ಸಾಕ್ಷಿಯಾಗಿದೆ ನಳೋಪಾಖ್ಯಾನ.

ಹದಿಮೂರುವರ್ಷ ವನವಾಸ, ಅಜ್ಞಾತವಾಸ ಮಾಡಿದ ಪಾಂಡವರು ದುರ್ಯೋಧನಾದಿಗಳನ್ನು ಸಂಹರಿಸಿ ರಾಜ್ಯ ಪಡೆದು ಸುಖವಾಗಿರುತ್ತಾರೆ. **ನಳೋಪಾಖ್ಯಾನದಲ್ಲಿ ಪುಷ್ಕರ ತಾತ್ಕಾಲಿಕ ಖಳನಾಯಕನಾದರೆ, ಕಲಿಯ ಅಪರಾ-**

---

೧ ಕರ್ಕೋಟಕೋ ನಾಮ ಸರ್ಪೋ ಯೋ ದೃಷ್ಟಿವಿಷ ಉಚ್ಯತೇ।
ತಸ್ಯ ಸರ್ಪಸ್ಯ ಸರ್ಪತ್ವಂ ತಸ್ಮೈ ಸರ್ಪ ನಮೋಽಸ್ತುತೇ॥ - ಋಗ್ವೇದ (೫/೪/೨೨)

**ವತಾರನಾದ ದುರ್ಯೋಧನ ಶಾಶ್ವತ ಖಳನಾಯಕನಾದ್ದರಿಂದ ಧರ್ಮರಾಜನಿಗೆ ರಾಜ್ಯ ಕೊಡದೆ ನಾಶವಾಗುತ್ತಾನೆ.**

ಹೀಗೆ ನಳದಮಯಂತಿಯರು ಕಲಿಮುಕ್ತರಾಗಿ ಸುಖವಾಗಿರುತ್ತಾರೆ. ಮೂರು ವರ್ಷ ಇಬ್ಬರೂ ಅನುಭವಿಸಿದ ವೇದನೆ ಹೇಳತೀರದಾದರೂ ದೇವತಾನುಗ್ರಹದಿಂದ ಮತ್ತೆ ಒಂದಾಗುತ್ತಾರೆ. ಆದ್ದರಿಂದ **ಕಲಿಯಿಂದ ಮುಕ್ತರಾಗಲು ಕರ್ಕೋಟಕ ಸರ್ಪ, ದಮಯಂತೀ, ನಳ, ಋತುಪರ್ಣರಾಜರ ಕೀರ್ತನಸ್ಮರಣೆ ಮಾಡಲು ವ್ಯಾಸರು ತಿಳಿಸುತ್ತಾರೆ:**

**ಕರ್ಕೋಟಕಸ್ಯ ನಾಗಸ್ಯ ದಮಯಂತ್ಯಾ ನಲಸ್ಯ ಚ।**
**ಋತುಪರ್ಣಸ್ಯ ರಾಜರ್ಷೇಃ ಕೀರ್ತನಂ ಕಲಿನಾಶನಮ್ ॥**

- ವನಪರ್ವ(೭೯/೧೦)

# ತೀರ್ಥಯಾತ್ರಾಪರ್ವ

## ೩೦. ಶ್ರೀಹನುಮದ್ರಾಮಾಯಣ

### ಶ್ರೀಮದ್ಧನುಮದುಕ್ತ ರಾಮೋಪಾಖ್ಯಾನ

ಪಾಂಡವರು ವನವಾಸದಲ್ಲಿದ್ದ ಪ್ರಸಂಗ. ಒಮ್ಮೆ ದ್ರೌಪದೀ-ಭೀಮಸೇನರು ಏಕಾಂತದಲ್ಲಿ ಕುಳಿತಾಗ ಸಹಸ್ರದಳ ಸೌಗಂಧಿಕಾ ಪುಷ್ಪವೊಂದು ಮೇಲಿನಿಂದ ಬಿತ್ತು. ಅದನ್ನು ತೆಗೆದುಕೊಂಡ ದ್ರೌಪದಿಯು ಧರ್ಮರಾಜನಿಗೆ ಕೊಡಬಯಸಿದಳು. ಅಲ್ಲದೆ ಇಂತಹ ಇನ್ನೂ ಅನೇಕ ಪುಷ್ಪಗಳನ್ನು ತಂದುಕೊಡಲು ಭೀಮನನ್ನು ಪ್ರಾರ್ಥಿಸಿದಳು. ಅಂತೆಯೇ ಅದನ್ನು ತರಲು ಹೊರಟ ಭೀಮಸೇನನು, ನಾವೆಲ್ಲರೂ ಹೋಗುವ ಬದರೀ ಹಾಗೂ ನರಾಗಮ್ಯವಾದ ಬದರೀಕ್ಷೇತ್ರವನ್ನು ದಾಟಿ ಮುಂದೆ ಗಂಧಮಾದನಪರ್ವತದ ಕಾಡುಗಳಲ್ಲಿ ವಿಸ್ತಾರವಾದ ಬಾಳೆವನವನ್ನು ಪ್ರವೇಶಿಸುತ್ತಾನೆ. ಅಲ್ಲಿದ್ದ ಹನುಮಂತನ ಬಾಲದ ಭಾರಿ ಸ್ಫೋಟ ಧ್ವನಿಯು ಕೇಳುತ್ತದೆ ಭೀಮನಿಗೆ. ಕ್ರಮೇಣ ಹನುಮಂತನ ದರ್ಶನವಾಗಿ ಭೀಮನೂ ಪ್ರತಿಯಾಗಿ ಗರ್ಜಿಸುತ್ತಾನೆ. ಆಗ ಹನುಮಂತ-ಭೀಮರ ನಡುವೆ ವಾನರ-ಮನುಷ್ಯ ಸಹಜ ಸಂಭಾಷಣೆಯಾಗುತ್ತದೆ. ಪರಸ್ಪರ ಪರಿಚಯವೂ ಆಗುತ್ತದೆ. ದಾರಿ ಬಿಡಲು ಕೇಳಿದ ಭೀಮನಿಗೆ ಹನುಮಂತನು ದಾರಿ ಬಿಡೆನೆನ್ನುತ್ತಾನೆ. ನಾನು ವ್ಯಾಧಿಗ್ರಸ್ತನಾಗಿದ್ದೇನೆ. ನನ್ನ ಬಾಲವನ್ನು ದಾಟಿ ಮುಂದೆ ಹೋಗಲು ಹನುಮಂತನು ಸೂಚಿಸುತ್ತಾನೆ.

ಭಗವಂತನು ದೇಹವನ್ನು ವ್ಯಾಪಿಸಿರುವಾಗ ನಿನ್ನ ಬಾಲವನ್ನು ದಾಟುವುದು ನಿನ್ನನ್ನು ಅವಮಾನ ಮಾಡಿದಂತೆ. ವೇದಗಳಿಂದ ಭಗವಂತನನ್ನು ತಿಳಿದ ನಾನು ಹಿರಿಯವನಾದ ನಿನ್ನನ್ನು ದಾಟಿ ಅವಮಾನ ಮಾಡುವುದಿಲ್ಲ. ತಿಳಿಯದಿದ್ದರೆ ದಾಟುತ್ತಿದ್ದೆ (ದಾಟಿ ಅಪರಾಧಿ ಯಾಗುತ್ತಿದ್ದೆ). ಹನುಮಂತನಂತೆ ನಾನೂ ಸಾಗರದಾಟಬಲ್ಲೆ ಈ ಗಿರಿಯನ್ನೂ ದಾಟಬಲ್ಲೆ ಎಂದು ಭೀಮ ನುಡಿಯಲು ಹನುಮಂತನು 'ಹನುಮಂತ ಯಾರು?' ಎಂದು ಕೇಳುತ್ತಾನೆ. ಆಗ ಭೀಮನು ಹನುಮಂತನು ತನ್ನ ಅಣ್ಣನೆಂದು ರಾಮಾಜ್ಞೆಯಿಂದ ಸೀತಾನ್ವೇಷಣೆಗಾಗಿ ಸಾಗರ ಉಲ್ಲಂಘನೆಯನ್ನು ಮಾಡಿದನು ಎನ್ನುತ್ತಾನೆ. ಮತ್ತೆ ದಾರಿ ಬಿಡದಿದ್ದರೆ ನಿನ್ನನ್ನು ಕೊಲ್ಲುವೆ ಎಂದು ಬೆದರಿಸುತ್ತಾನೆ.

ಮುಂದೆ ತನ್ನ ಪರಾಕ್ರಮ ತೋರೆನ್ನಲು ಭೀಮನು ಬಾಲವೆತ್ತಲಾಗದೆ ನಮಸ್ಕರಿಸಿ ನೀನಾರು? ಕ್ಷಮಿಸೆಂದು ಬೇಡುತ್ತಾನೆ.

ಭೀಮಾಂಜನೇಯರು ತಮ್ಮ ದೇವತ್ವ ಪ್ರಕಟಿಸದೆ ಸಾಮಾನ್ಯರಂತೆ ಹಾಗೂ ದ್ವಾಪರಯುಗದವರಿಗೆ ತ್ರೇತಾಯುಗದ ಶಕ್ತಿ ಇರದೆಂಬ ಸಾಮಾನ್ಯ ನಿಯಮವನ್ನು ತೋರಿಸುತ್ತಾರೆ.

ಭೀಮನ ಪ್ರಾರ್ಥನೆಯಂತೆ ಹನುಮಂತನು ತಾನು ಕೇಸರಿ–ಅಂಜನಾದೇವಿ ಕಪಿ ದಂಪತಿಗಳ ಪುತ್ರನೆಂದೂ ಪರಿಚಯಿಸುತ್ತಾ ರಾಮಚರಿತೆಯನ್ನು ಸಂಕ್ಷಿಪ್ತವಾಗಿ ಹೇಳುತ್ತಾನೆ. ಇದೇ ಶ್ರೀಹನುಮತ್ಪ್ರೋಕ್ತ ರಾಮಚರಿತೆ (ಅಧ್ಯಾಯ ೧೪೭).

**ಅಹಂ ಕೇಸರಿಣಃ ಕ್ಷೇತ್ರೇ ವಾಯುನಾ ಜಗದಾಯುಷಾ।**
**ಜಾತಃ ಕಮಲ ಪತ್ರಾಕ್ಷ ಹನುಮಾನ್ ನಾಮ ವಾನರಃ॥** -೧೪೭/೨೭

ಕಮಲಪತ್ರದಂತೆ ಕಣ್ಣುಳ್ಳ ಭೀಮನೇ! ನಾನು ಕೇಸರಿ ಎಂಬ ಕಪಿಯ ಹೆಂಡತಿಯಲ್ಲಿ ಜಗತ್ತಿಗೆ ಆಯುಃಪ್ರದನಾದ ವಾಯುವಿನಿಂದ ಹನುಮಂತನೆಂಬ ವಾನರನಾಗಿ ಜನಿಸಿದೆ.

**ಸೂರ್ಯಪುತ್ರಂ ಚ ಸುಗ್ರೀವಂ ಶಕ್ರಪುತ್ರಂ ಚ ವಾಲಿನಮ್।**
**ಸರ್ವೇ ವಾನರರಾಜಾನಸ್ತಥಾ ವಾನರ ಯೂಥಪಾಃ॥**
**ಉಪತಸ್ಥುರ್ಮಹಾವೀರ್ಯಾ ಮಮ ಚ ಮಿತ್ರಕರ್ಷಣ॥** -೧೪೭/೨೮,೨೯

ಹಾಗೆಯೇ ಸೂರ್ಯಪುತ್ರನಾದ ಸುಗ್ರೀವನನ್ನೂ, ಇಂದ್ರಪುತ್ರನಾದ ವಾಲಿಯನ್ನೂ ಇತರ ವಾನರರಾಜರು ಸೇವಿಸುತ್ತಿದ್ದರು.

**ಸುಗ್ರೀವೇಣಾಭವತ್ಪ್ರೀತಿರನಿಲಸ್ಯಾಗ್ನಿನಾ ಯಥಾ।**
**ನಿಕೃತಃ ಸ ತತೋ ಭ್ರಾತ್ರಾ ಕಸ್ಮಿಂಶ್ಚಿತ್ಕಾರಣಾಂತರೇ॥**
**ಋಷ್ಯಮೂಕೇ ಮಯಾ ಸಾರ್ಧಂ ಸುಗ್ರೀವೋ ನ್ಯವಸಚ್ಚಿರಮ್॥** -೧೪೭/೩೦

ವಾಯುಪುತ್ರ ಹನುಮಂತನಿಗೆ ಸುಗ್ರೀವನೊಡನೆ ಸ್ನೇಹವಿತ್ತು. ಅದು ಅಗ್ನಿಯೊಡನೆ ಇದ್ದ ವಾಯುವಿನ ಸ್ನೇಹದಂತೆ. ಯಾವುದೋ ಒಂದು ಕಾರಣದಿಂದಾಗಿ ಸುಗ್ರೀವ ತನ್ನ ಅಣ್ಣನಿಂದ ವಂಚಿತನಾಗಿ ನನ್ನೊಡನೆ ಋಷ್ಯಮೂಕಪರ್ವತ ಪ್ರದೇಶದಲ್ಲಿ ವಾಸಮಾಡಿದನು.

**ಅಥ ದಾಶರಥಿರ್ವೀರೋ ರಾಮೋ ನಾಮ ಮಹಾಬಲಃ।**
**ವಿಷ್ಣುರ್ಮಾನುಷರೂಪೇಣ ಚಚಾರ ವಸುಧಾತಲಮ್॥** -೧೪೭/೩೧

ವಿಷ್ಣುವು ರಾಮನೆಂಬ ಹೆಸರಿನಿಂದ ದಶರಥನ ಮಗನಾಗಿ ಅವತರಿಸಿ ಭೂಲೋಕದಲ್ಲಿ ಸಂಚರಿಸಿದನು.

**ಸ ಪಿತುಃ ಪ್ರಿಯಮನ್ವಿಚ್ಛನ್ ಸಹಭಾರ್ಯಃ ಸಹಾನುಜಃ।**
**ಸಧನುರ್ಧನ್ವಿನಾಂ ಶ್ರೇಷ್ಠೋ ದಂಡಕಾರಣ್ಯಮಾಶ್ರಿತಃ॥** -೧೪೭/೩೨

ಶ್ರೀರಾಮನು ತಂದೆಯ ಸಂತೋಷಕ್ಕಾಗಿ ಹೆಂಡತಿ ಸೀತೆ, ತಮ್ಮ ಲಕ್ಷ್ಮಣನೊಡನೆ ಧನುರ್ಧಾರಿಯಾಗಿ ದಂಡಕಾರಣ್ಯಕ್ಕೆ ಬಂದನು.

**ತಸ್ಯ ಭಾರ್ಯಾ ಜನಸ್ಥಾನಾಚ್ಛಲೇನಾಪಹೃತಾ ಬಲಾತ್।**
**ರಾಕ್ಷಸೇಂದ್ರೇಣ ಬಲಿನಾ ರಾವಣೇನ ದುರಾತ್ಮನಾ॥**

**ಸುವರ್ಣರತ್ನಚಿತ್ರೇಣ ಮೃಗರೂಪೇಣ ರಕ್ಷಸಾ ।**
**ವಂಚಯಿತ್ವಾ ನರವ್ಯಾಘ್ರಂ ಮಾರೀಚೇನ ತದಾನಘ ॥** -೧೪೭/೩೩,೩೪

ಬಲಿಷ್ಠನಾದ ರಾಕ್ಷಸಶ್ರೇಷ್ಠನಾದ, ದುಷ್ಟನಾದ ರಾವಣನು ಸೀತಾಕೃತಿಯನ್ನು ಜನಸ್ಥಾನ ಪ್ರದೇಶದಿಂದ ಬಲಾತ್ಕಾರವಾಗಿ ಅಪಹರಿಸಿದನು. ಅದು ಸಾಧ್ಯವಾದುದು ಮಾರೀಚನು ಬಂಗಾರದ ಜಿಂಕೆ ವೇಷಧರಿಸಿ ಮೋಸ ಮಾಡಿದುದರಿಂದ (ಲೋಕದೃಷ್ಟಿಯಿಂದ ರಾಮನು ಮೋಸ ಹೊಂದಿದಂತೆ ನಟಿಸಿದ).

## ಅಧ್ಯಾಯ - ೧೪೮

**ಹೃತದಾರಃ ಸಹಭ್ರಾತ್ರಾ ಪತ್ನೀಂ ಮಾರ್ಗನ್ ಸ ರಾಘವಃ ।**
**ದೃಷ್ಟವಾನ್ ಶೈಲಶಿಖರೇ ಸುಗ್ರೀವಂ ವಾನರರ್ಷಭಮ್ ॥ ೧ ॥**
**ತೇನ ತಸ್ಯಾಭವತ್ಸಖ್ಯಂ ರಾಘವಸ್ಯ ಮಹಾತ್ಮನಃ ।**
**ಸ ಹತ್ವಾ ವಾಲಿನಂ ರಾಜ್ಯೇ ಸುಗ್ರೀವಮಭಷಿಕ್ತವಾನ್ ॥ ೨ ॥**

ಹೆಂಡತಿಯನ್ನು ಕಳೆದುಕೊಂಡ ರಾಮನು ಲಕ್ಷ್ಮಣನೊಡನೆ ಸೀತೆಯನ್ನು ಹುಡುಕುತ್ತಾ ಋಷ್ಯಮೂಕಪರ್ವತ ಪ್ರದೇಶದಲ್ಲಿ ಸುಗ್ರೀವನನ್ನು ಕಂಡನು. ಅವನೊಡನೆ ಸ್ನೇಹ ಉಂಟಾಯಿತು. ಸುಗ್ರೀವನ ಪ್ರಾರ್ಥನೆಯಂತೆ ವಾಲಿಯನ್ನು ರಾಮನು ಸಂಹರಿಸಿ ಸುಗ್ರೀವನನ್ನು ಕಪಿರಾಜ್ಯದಲ್ಲಿ ಅಭಿಷೇಕ ಮಾಡಿದನು.

**ಸರಾಜ್ಯಂ ಪ್ರಾಪ್ಯ ಸುಗ್ರೀವಃ ಸೀತಾಯಾಃ ಪರಿಮಾರ್ಗಣೇ ।**
**ವಾನರಾನ್ ಪ್ರೇಷಯಾಮಾಸ ಶತಶೋಥ ಸಹಸ್ರಶಃ ॥ ೩ ॥**
**ತತೋ ವಾನರಕೋಟೀಭಿಃ ಸಹಿತೋಽಹಂ ನರರ್ಷಭ ।**
**ಸೀತಾಂ ಮಾರ್ಗನ್ ಮಹಾಬಾಹೋ ಪ್ರಯಾತೋ ದಕ್ಷಿಣಾಂ ದಿಶಮ್ ॥ ೪ ॥**

ರಾಜ್ಯ ಪಡೆದ ಸುಗ್ರೀವ ಸೀತಾನ್ವೇಷಣೆಗೆ ಸಹಸ್ರಾರು ಕಪಿಗಳನ್ನು ನಿಯೋಜಿಸಿದ. ಅವರೊಂದಿಗೆ ಹೊರಟ ನಾನು ದಕ್ಷಿಣ ದಿಕ್ಕಿಗೆ ಬಂದೆ.

**ತತಃ ಪ್ರವೃತ್ತಿಃ ಸೀತಾಯಾ ಗೃಧ್ರೇಣ ಸುಮಹಾತ್ಮನಾ ।**
**ಸಂಪಾತಿನಾ ಸಮಾಖ್ಯಾತಾ ರಾವಣಸ್ಯ ನಿವೇಶನೇ ॥ ೫ ॥**

ನಂತರ ಮಹಾತ್ಮನಾದ ಸಂಪಾತಿ ಎಂಬ ಹದ್ದಿನಿಂದ ಸೀತೆಯು ರಾವಣನ ಪಟ್ಟಣದಲ್ಲಿರುವ ವಿಷಯ ತಿಳಿಯಿತು.

**ತತೋಽಹಂ ಕಾರ್ಯಸಿದ್ಧ್ಯರ್ಥಂ ರಾಮಸ್ಯಾಕ್ಲಿಷ್ಟಕರ್ಮಣಃ ।**
**ಶತಯೋಜನವಿಸ್ತೀರ್ಣಮರ್ಣವಂ ಸಹಸ್ಯಾಪ್ಲುತಃ ॥ ೬ ॥**
**ಅಹಂ ಸ್ವವೀರ್ಯಾದುತ್ತೀರ್ಯ ಸಾಗರಂ ಮಕರಾಲಯಮ್ ।**
**ಸುತಾಂ ಜನಕರಾಜಸ್ಯ ಸೀತಾಂ ಸುರಸುತೋಪಮಾಮ್ ॥ ೭ ॥**

ದೃಷ್ಟವಾನ್ ಭರತಶ್ರೇಷ್ಠ ರಾವಣಸ್ಯ ನಿವೇಶನೇ ।
ಸಮೇತ್ಯ ತಾಮಹಂ ದೇವೀಂ ವೈದೇಹೀಂ ರಾಘವಪ್ರಿಯಾಮ್ ॥ ೮ ॥

ದಗ್ಧ್ವಾ ಲಂಕಾಮಶೇಷೇಣ ಸಾಟ್ಟಪ್ರಾಕಾರತೋರಣಾಮ್ ।
ಪ್ರತ್ಯಾಗತಶ್ಚಾಪಿ ಪುನರ್ನಾಮ ತತ್ರ ಪ್ರಕಾಶ್ಯ ಚ ॥ ೯ ॥

ನಂತರ ನಾನು ಶ್ರೀರಾಮನ ಸೇವಾಕಾರ್ಯಸಾಧನೆಗೆ ಒಂದು ನೂರು ಯೋಜನ ವಿಸ್ತೀರ್ಣವಿದ್ದ ಸಮುದ್ರವನ್ನು ರಾಮಾನುಗ್ರಹದಿಂದ ನನ್ನ ಸಾಮರ್ಥ್ಯದಿಂದ ದಾಟಿ ರಾವಣನ (ಅಶೋಕವನ) ಪ್ರದೇಶದಲ್ಲಿ ರಾಮಪ್ರಿಯಳಾದ ಸೀತೆಯನ್ನು ಕಂಡೆ. ಆಕೆಗೆ ರಾಮನ (ಉಂಗುರ ಕೊಟ್ಟು) ಸಂದೇಶ ನೀಡಿ ರಾವಣನ (ಪರಿವಾರದ ಅನೇಕರನ್ನು ಸಂಹರಿಸಿ) ಎತ್ತರವಾದ ಗೋಡೆಗಳುಳ್ಳ ಲಂಕೆಯನ್ನು ಪೂರ್ಣವಾಗಿ ಬಾಲದ ಬೆಂಕಿಯಿಂದ ಸುಟ್ಟು ಮತ್ತೆ ವಾಪಸಾದೆ.

ಮದ್ವಾಕ್ಯಂ ಚಾವಧಾರ್ಯಾಶು ರಾಮೋ ರಾಜೀವಲೋಚನಃ ।
ಸ ಬುದ್ಧಿಪೂರ್ವಂ ಸೈನ್ಯಸ್ಯ ಬದ್ಧ್ವಾ ಸೇತುಂ ಮಹೋದಧೌ ॥ ೧೦ ॥

ವೃತೋ ವಾನರ ಕೋಟೀಭಿಃ ಸಮುತ್ತೀರ್ಣೋ ಮಹಾರ್ಣವಮ್ ।
ತತೋ ರಾಮೇಣ ವೀರೇಣ ಹತ್ವಾ ತಾನ್ ಸರ್ವರಾಕ್ಷಸಾನ್ ॥ ೧೧ ॥

ರಣೇ ತು ರಾಕ್ಷಸಗಣಂ ರಾವಣಂ ಲೋಕರಾವಣಮ್ ।
ನಿಶಾಚರೇಂದ್ರಂ ಹತ್ವಾತು ಸಭ್ರಾತೃ ಸುತಬಾಂಧವಮ್ ॥ ೧೨ ॥

ರಾಜ್ಯೇಭಿಷಿಚ್ಯ ಲಂಕಾಯಾಂ ರಾಕ್ಷಸೇಂದ್ರಂ ವಿಭೀಷಣಮ್ ।
ಧಾರ್ಮಿಕಂ ಭಕ್ತಿಮಂತಂ ಚ ಭಕ್ತಾನುಗತ ವತ್ಸಲಮ್ ॥ ೧೩ ॥

ತತಃ ಪ್ರತ್ಯಾಹೃತಾ ಭಾರ್ಯಾ ನಷ್ಟಾ ವೇದಶೃತಿರ್ಯಥಾ ।
ತಯೈವ ಸಹಿತಃ ಸಾಧ್ವ್ಯಾ ಪತ್ನ್ಯಾ ರಾಮೋ ಮಹಾಯಶಾಃ ॥ ೧೪ ॥

ಗತ್ವಾ ತತೋಽತಿತ್ವರಿತಃ ಸ್ವಾಂ ಪುರೀಂ ರಘುನಂದನಃ ।
ಅಧ್ಯಾವಸತ್ ತತೋಯೋಽಧ್ಯಾಮಯೋಧ್ಯಾಂ ದ್ವಿಷತಾಂ ಪ್ರಭುಃ ।
ತತಃ ಪ್ರತಿಷ್ಠಿತೋ ರಾಜ್ಯೇ ರಾಮೋ ನೃಪತಿಸತ್ತಮಃ ॥ ೧೫ ॥

ನನ್ನ ಮಾತನ್ನು ಕೇಳಿದ ರಾಮನು ಕೋಟ್ಯಂತರ ಕಪಿಸೈನ್ಯದಿಂದ ಕೂಡಿ ಸಮುದ್ರಕ್ಕೆ ಸೇತುವೆಯನ್ನು ನಿರ್ಮಿಸಿ ಸಮುದ್ರದಾಟಿ (ಲಂಕೆಗೆ ಲಗ್ಗೆ ಇಟ್ಟು) ಎಲ್ಲ ರಾಕ್ಷಸಸೈನ್ಯವನ್ನು ಪುತ್ರಾದಿ ಬಂಧು-ಬಾಂಧವರಿಂದ ಕೂಡಿದ ಲೋಕದ ಜನರನ್ನು ಅಳಿಸುತ್ತಿದ್ದ ಆದ್ದರಿಂದಲೇ ರಾವಣನೆಂದು ಕುಖ್ಯಾತನಾದ ರಾವಣನನ್ನು ಕೊಂದು, ರಾಕ್ಷಸರಲ್ಲಿ ಉತ್ತಮನಾದ, ರಾಮಭಕ್ತನಾದ, ಧೈರ್ಯ, ಬುದ್ಧಿಯುಳ್ಳ ವಿಭೀಷಣನನ್ನು ರಾಕ್ಷಸರ ರಾಜನನ್ನಾಗಿ ಅಭಿಷೇಕ ಮಾಡಿದನು. ನಂತರ ಕಳೆದುಹೋದ ವೇದವನ್ನು ಮತ್ತೆ ಪಡೆದಂತೆ ಸಾಧ್ವಿಯಾದ ಸೀತೆಯನ್ನು

ಹೊಂದಿ ಆಕೆಯೊಡನೆ ಕೂಡಲೇ ಶತ್ರುಗಳಿಂದ ಯುದ್ಧ ಮಾಡಲು ಅಶಕ್ಯವಾದ ತನ್ನ ಅಯೋಧ್ಯಾ ಪಟ್ಟಣಕ್ಕೆ ಬಂದು ಅಭಿಷಿಕ್ತನಾದನು.

**ವರಂ ಮಯಾ ಯಾಚಿತೋಸೌ ರಾಮೋ ರಾಜೀವಲೋಚನಃ।**
**ಯಾವದ್ರಾಮ ಕಥೇಯಂ ತೇ ಭವೇಲ್ಲೋಕೇಷು ಶತ್ರುಹನ್ ॥**
**ತಾವಜ್ಜೀವೇಯಮಿತ್ಯೇವಂ ತಥಾ ಸ್ತ್ವಿತಿ ಚ ಸೋಬ್ರವೀತ್ ॥ ೧೭ ॥**

ಲೋಕಗಳಲ್ಲಿ ನಿನ್ನ ಚರಿತೆಯು ಇರುವವರೆಗೆ ನಾನು ಜೀವಿಸಿರಬೇಕೆಂಬ ವರ ನಾನು ಕೇಳಲು ರಾಮನು ಹಾಗೆಯೇ ಆಗಲಿ ಎಂದು ವರವಿತ್ತನು.

**ಸೀತಾಪ್ರಸಾದಾಚ್ಚ ಸದಾ ಮಾಮಿಹಸ್ಥಮರಿಂದ ಮೇ।**
**ಉಪತಿಷ್ಠಂತಿ ಹಿ ದಿವ್ಯಾ ಹಿ ಭಾಗಾ ಭೀಮ ಯಥೇಪ್ಸಿತಾ ॥ ೧೮ ॥**

ಭೀಮ! ರಾಮಸೀತೆಯರ ಅನುಗ್ರಹದಿಂದ ನನಗಿಲ್ಲಿ ಎಲ್ಲ ಬಯಕೆಗಳು ಸಿಗುತ್ತಿವೆ.

**ದಶವರ್ಷ ಸಹಸ್ರಾಣಿ ದಶವರ್ಷಶತಾನಿ ಚ।**
**ರಾಜ್ಯಂ ಕಾರಿತವಾನ್ ರಾಮಸ್ತತಃ ಸ್ವಭವನಂ ಗತಃ ॥ ೧೯ ॥**

**ತದಿಹಾಪ್ಸರಸಸ್ತಾತ ಗಂಧರ್ವಾಶ್ಚ ಸದಾನಘ।**
**ತಸ್ಯ ವೀರಸ್ಯ ಚರಿತಂ ಗಾಯಂತೋ ರಮಯಂತಿ ಮಾಮ್ ॥ ೨೦ ॥**

(ಹೀಗೆ) ರಾಮನು ಭೂಲೋಕವನ್ನು ೧೧೦೦೦ ವರ್ಷರಾಜ್ಯವಾಳಿ ತನ್ನ ಲೋಕಕ್ಕೆ ಹೋದನು. ಇಲ್ಲಿ ಅಪ್ಸರೆಯರು, ಗಂಧರ್ವರೂ ಸದಾ ನನ್ನ ಮುಂದೆ ರಾಮಚರಿತೆಯನ್ನು ಗಾನ ಮಾಡುತ್ತಾ ನನ್ನನ್ನು ಸಂತೋಷಪಡಿಸುತ್ತಿದ್ದಾರೆ.

ಇದು ಭೀಮನಿಗೆ ಹನುಮಂತನು ನಿರೂಪಿಸಿದ ರಾಮಚರಿತ್ರೆ. ಇದರ ವಿಸ್ತಾರವೇ ಮುಂದೆ ಮಾರ್ಕಂಡೇಯರು ಧರ್ಮರಾಜನಿಗೆ ೨೦ ಅಧ್ಯಾಯಗಳಲ್ಲಿ ರಾಮಚರಿತೆಯನ್ನು ವರ್ಣಿಸಿದ್ದಾರೆ. ಭಾಗವತದಲ್ಲಿ ರಾಮಚರಿತೆಯು ನವಮಸ್ಕಂಧದಲ್ಲಿ ಬಂದಿದೆ (ಅ. ೮/೯). ವಾಲ್ಮೀಕಿರಾಮಾಯಣವು ಉಪಲಬ್ಧವಿರುವ ರಾಮಚರಿತೆಗಳಲ್ಲಿ ವಿಸ್ತೃತವಾದುದು (೨೪೦೦೦ ಶ್ಲೋಕಗಳು).

ಪ್ರಸ್ತುತಹನುಮಂತದೇವರಿಂದನಿರೂಪಿತವಾದುದು(ಮೇಲಿನದು) ನಿತ್ಯಪಾರಾಯಣಕ್ಕೆ ಉಪಯುಕ್ತವಾದ ಸಂಕ್ಷಿಪ್ತ ಚರಿತೆಯಾಗಿದೆ.

## ಸಂದೇಶಗಳು

೧. ಹೆಂಡತಿಯ ಮನಃಸಂತೋಷ ಪಡಿಸುವ ಹೂವು ತರಲು ಹೋದ ಭೀಮ ದಾರಿಯುದ್ದಕ್ಕೂ ದುಷ್ಟಶಕ್ತಿಗಳ ಸಂಹಾರ ಮಾಡುತ್ತ ನಡೆದನೆಂದು ಭಾರತ ತಿಳಿಸುತ್ತದೆ. ಎಷ್ಟೇ ಲೌಕಿಕ ಕಾರ್ಯದಲ್ಲಿದ್ದರೂ ಅಲ್ಲೂ ಹರಿ ಪ್ರೀತಿಗೋಸ್ಕರ ವರ್ಣಾಶ್ರಮ ಧರ್ಮ

ಪರಿಪಾಲನೆಯೇ ಇಲ್ಲಿಯ ಮುಖ್ಯ ಸಂದೇಶ. ಭೀಮ ಕ್ಷತ್ರಿಯನಾದ್ದರಿಂದ ದುಷ್ಟಶಕ್ತಿಗಳ ಸಂಹಾರ ಮಾಡಿದನು. ಬ್ರಾಹ್ಮಣ ಜ್ಞಾನಾರ್ಜನೆ ಮಾಡಬೇಕು.

೨. ದಾರಿಯಲ್ಲಿ ಸಿಕ್ಕ ಹನುಮಂತ ವೃದ್ಧ ಕಪಿ. ತನಗೆ ಆ ಕಪಿ ಯಾರೆಂದು ಗೊತ್ತಿದ್ದರೂ ಗೊತ್ತಿಲ್ಲದಂತೆ ಭೀಮ ಒಬ್ಬ ಕ್ಷತ್ರಿಯನಾಗಿ ವರ್ತಿಸುತ್ತಾನೆ. ಕಪಿಗೆ ಹೆದರುವುದಿಲ್ಲ. ದಾರಿಬಿಡಲು ತಿಳಿಸುತ್ತಾನೆ. ಬಿಡದಿದ್ದಾಗ ಕೊಲ್ಲುವುದಾಗಿ ಬೆದರಿಕೆ ಹಾಕಿದ್ದು ಕ್ಷತ್ರಿಯೋಚಿತ ಧರ್ಮ ಪ್ರದರ್ಶನವೇ ಹೊರತು ಉದ್ಧಟತನದ ಪ್ರದರ್ಶನವಲ್ಲ.

೩. ಬಾಲದಾಟಿ ಹೋಗಲು ಒಪ್ಪದ ಭೀಮನು ಕಪಿ (ಹನುಮಂತ)ಯಲ್ಲೂ ಭಗವಂತನನ್ನು ನೋಡುವ ಸರ್ವವ್ಯಾಪ್ತ್ಯೋಪಾಸಕನಾಗಿ ಗೋಚರಿಸುತ್ತಾನೆ. ತನ್ನ ಬಲದ ದರ್ಶನ ಮಾಡಿಸುತ್ತಾನೆ.

೪. ಬಾಲದಾಟಲು ಆಗದಂತೆ ತೋರಿಸಿದ್ದು ನಟನೆಯೇ ಹೊರತು ಅದು ನಿಜವಾಗಿಯೂ ಅಸಾಮರ್ಥ್ಯವಲ್ಲ. ಅಸಾಮರ್ಥ್ಯ ತೋರಿದ್ದು ಯುಗಭೇದದಿಂದಾಗಿ ಶಕ್ತಿಹ್ರಾಸವಾಗುತ್ತದೆ. ಜೀವರಲ್ಲಿ ಎಂದು ತೋರಿಸಲು ಹೊರತು ನಿಜವಾಗಿಯೂ ಹನುಮ ಭೀಮರಲ್ಲಿ ಯಾವ ಬಲವ್ಯತ್ಯಾಸವೂ ಇಲ್ಲ. ವಾಸ್ತವವಾಗಿ **'ಇಚ್ಛಾವ್ಯಕ್ತಿಃ ಪ್ರಾಯಶೋ ಮಾರುತಸ್ಯ'** ಎಂದು ಆಚಾರ್ಯರು ತಿಳಿಸಿದಂತೆ ವಾಯುದೇವರು ಇಚ್ಛೆಪಟ್ಟಲ್ಲಿ ತಮ್ಮ ಬಲ ತೋರಿಸಬಲ್ಲರು.

೫. ಈ ಪ್ರಸಂಗದಲ್ಲಿ ಭೀಮನು ಹಾಗೆ ಇಚ್ಛಿಸದೆ ಇದ್ದುದರಿಂದ ಅಸಾಮರ್ಥ್ಯ ತೋರಿಸಿದನು. ಇಚ್ಛೆ ಮಾಡುವುದೂ, ಬಿಡುವುದು ಅವರಿಗೇ ಸೇರಿದ್ದು. ಆದ್ದರಿಂದ ಹಾಗೆ ವರ್ತಿಸಿದನು.

೬. ಎಂಥ ವೃದ್ಧಾಪ್ಯ ಇದ್ದರೂ ಹರಿಕಥಾಶ್ರವಣದಲ್ಲಿಯೇ ಸಮಯ ಕಳೆಯಬೇಕೆಂದು ಹನುಮಂತನ ನಡವಳಿಕೆಯಿಂದ ತಿಳಿಯುತ್ತದೆ:

**ಶ್ರವಣಾದಿವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್ - ಅನುವ್ಯಾಖ್ಯಾನ**

೭. ರಾಮಾಯಣದ ಸಂದೇಶಗಳಂತೂ ಅನಂತ, ಅಪಾರ.

ಉಲ್ಲೇಖಗಳು :

(ಮಹಾಭಾರತ ವನಪರ್ವ (ತೀರ್ಥಯಾತ್ರಾಪರ್ವ) ಅಧ್ಯಾಯ ೧೪೭-೧೪೮)

೧. ಭಂಡಾರಕರ್ ಪ್ರಾಚ್ಯವಿದ್ಯಾ ಸಂಶೋಧನ ಮಂದಿರ ಪ್ರಕಟಿತ ಮಹಾಭಾರತ ಆರಣ್ಯಕ ಪರ್ವ ಅಧ್ಯಾಯ ೧೪೭ (ಶ್ಲೋಕಗಳು ೨೩-೪೧=೧೯ ಶ್ಲೋಕಗಳು)

೨. ಶ್ರೀಸದ್ಗುರು ಪ್ರಕಟಣೆ, ದೆಹಲಿ (ಟಿ.ಆರ್.ಕೃಷ್ಣಾಚಾರ್ಯ, ಕುಂಭಕೋಣ ಇವರು ಸಂಪಾದಿಸಿ ೧೯೯೧) (ಅಧ್ಯಾಯ ೧೪೯-೧೫೦=೯+೨೨=೩೧ ಶ್ಲೋಕಗಳು)

*****

# ೩೧. ಅಗಸ್ತ್ಯ ಚರಿತ್ರೆ

ಲೋಮಶ ಮುನಿಗಳೊಂದಿಗೆ ತೀರ್ಥಯಾತ್ರೆಯನ್ನು ಮುಂದುವರೆಸಿದ ಧರ್ಮರಾಜನು ಅಗಸ್ತ್ಯಾಶ್ರಮಕ್ಕೆ ಬಂದು ಅಲ್ಲಿ **ದುರ್ಜಯಾ** ಎಂಬ ಸ್ಥಳದಲ್ಲಿ ಉಳಿದುಕೊಂಡನು. ನಂತರ ಲೋಮಶರನ್ನು ಪ್ರಾರ್ಥಿಸಿದನು. ಇಲ್ಲಿ ಅಗಸ್ತ್ಯರು ವಾತಾಪಿಯನ್ನು ಏಕೆ ಕೊಂದರು? ಮಾನವಾಂತಕನಾದ ದೈತ್ಯನ ಪ್ರಭಾವವೇನಾಗಿತ್ತು? ಈ ದೈತ್ಯನ ಬಗ್ಗೆ ಅಗಸ್ತ್ಯರು ಕೋಪಗೊಳ್ಳಲು ಕಾರಣವೇನು?

ಇದಕ್ಕೆ ಉತ್ತರಿಸಿದ ಲೋಮಶರು ವಾತಾಪಿ, ಇಲ್ವಲರ ವೃತ್ತಾಂತವನ್ನು ವಿವರಿಸಿದರು.

**ಮಣಿಮತಿ** ಎಂಬ ಪಟ್ಟಣದಲ್ಲಿ **ಇಲ್ವಲ**ನೆಂಬ ದೈತ್ಯನಿದ್ದನು. ಅವನ ತಮ್ಮ **ವಾತಾಪಿ.** ಒಮ್ಮೆ ಇಲ್ವಲನು ಬ್ರಾಹ್ಮಣನೊಬ್ಬನನ್ನು ಸತ್ಕರಿಸಿ ತನಗೆ ಇಂದ್ರಸಮನಾದ ಮಗನನ್ನು ಅನುಗ್ರಹಿಸಬೇಕೆಂದು ಕೇಳಿದನು. ಆದರೆ ಆ ಬ್ರಾಹ್ಮಣನು ಇಲ್ವಲನಿಗೆ ಇಂದ್ರಸಮನಾದ ಮಗನನ್ನು ಅನುಗ್ರಹಿಸುವ ವರವನ್ನು ದಯಪಾಲಿಸಲಿಲ್ಲ. ಇಲ್ವಲ ಕೋಪಗೊಂಡ. ಅಷ್ಟೇ ಅಲ್ಲ, ಬ್ರಾಹ್ಮಣದ್ವೇಷಿಯೂ ಆದ. ಅಂದಿನಿಂದ ತಮ್ಮ ಮನೆಗೆ ಬ್ರಾಹ್ಮಣರನ್ನು ಸತ್ಕಾರಕ್ಕಾಗಿ ಆಹ್ವಾನಿಸಿ ತನ್ನ ತಮ್ಮ ವಾತಾಪಿಯನ್ನು ಮಾಯಾವಿದ್ಯೆಯಿಂದ ಆಡನ್ನಾಗಿ ಪರಿವರ್ತಿಸಿ ಆ ಆಡನ್ನು ಕೊಂದು, ಅದರ ಮಾಂಸವನ್ನು ಬೇಯಿಸಿ ಊಟದಲ್ಲಿ ಬಡಿಸುತ್ತಿದ್ದನು. ಆ ವಾತಾಪಿಯೂ ಮಾಯಾವಿದ್ಯೆ ಬಲ್ಲವನಾಗಿದ್ದು ಆಡಾಗಿ ಪರಿವರ್ತಿತನಾಗಿ ಬ್ರಾಹ್ಮಣನನ್ನು ವಂಚಿಸುವಲ್ಲಿ ಸಹಕರಿಸಿ ಪಾಪಭಾಗಿಯಾಗುತ್ತಿದ್ದ. ಮಾಂಸ ಭಕ್ಷಿಸಿ ಊಟವಾದ ನಂತರ ತೃಪ್ತಿಗಾಗಿ ಹೊರಹೋಗುತ್ತಿದ್ದ ಬ್ರಾಹ್ಮಣನನ್ನು ಇಲ್ವಲನು **ಆಗಚ್ಛ ವಾತಾಪೇ** ಎಂದು ಉಚ್ಚ ಧ್ವನಿಯಿಂದ ಕರೆಯುತ್ತಿದ್ದ. ಈ ಅಭಿಚಾರಿಕೆ ವಿದ್ಯೆಯ ಮಂತ್ರದ ಪ್ರಭಾವದಿಂದ ಬ್ರಾಹ್ಮಣನ ಹೊಟ್ಟೆಯೊಡೆದುಕೊಂಡು ವಾತಾಪಿ ಮತ್ತೆ ಮೊದಲಿನಂತೆ ನಗುತ್ತ ಹೊರಬರುತ್ತಿದ್ದ. ಬ್ರಾಹ್ಮಣರು ಮರಣಹೊಂದುತ್ತಿದ್ದರು. ಹೀಗೆ ಇಲ್ವಲ ವಾತಾಪಿಗಳು ಬ್ರಾಹ್ಮಣಪೀಡಕರಾಗಿದ್ದರು[೧].

---

೧ ಇ�ಲ್ವಲೋ ನಾಮ ದೈತೇಯ ಆಸೀತ್ ಕೌರವನಂದನ।
ಮಣಿಮತ್ಯಾಂ ಪುರಿ ಪುರಾ ವಾತಾಪಿಸ್ತಸ್ಯ ಚಾನುಜಃ॥
ಸ ಬ್ರಾಹ್ಮಣಂ ತಪೋಯುಕ್ತಮುವಾಚ ದಿತಿನಂದನಃ।
ಪುತ್ರಂ ಮೇ ಭಗವಾನೇಕಮಿಂದ್ರತುಲ್ಯಂ ಪ್ರಯಚ್ಛತು॥
ತಸ್ಮೈ ಸ ಬ್ರಾಹ್ಮಣೋ ನಾದಾತ್ ಪುತ್ರಂ ವಾಸವಿಸಮ್ಮಿತಮ್।
ಚುಕ್ರೋಧ ಸೋಽಸುರಸ್ತಸ್ಯ ಬ್ರಾಹ್ಮಣಸ್ಯ ತತೋ ಭೃಶಮ್॥

ಇದೇ ಸಮಯದಲ್ಲಿ ಅಗಸ್ತ್ಯರು ಭಾರೀ ಹಳ್ಳವೊಂದರಲ್ಲಿ ಹಿಂದುಮುಂದಾಗಿ ಜೋತಾಡುತ್ತಾ ಬಿದ್ದಿದ್ದ ಪಿತೃಗಳನ್ನು ನೋಡಿ ಹೀಗೇಕೆ ನೀವು ಇರುವಿರೆಂದು ಕೇಳಿದರು. ಅದಕ್ಕೆ ಬ್ರಹ್ಮವಾದಿಗಳಾದ ಅವರು ನಾವು ನಿನ್ನ ಪಿತೃಗಳು - ಪಿತಾಮಹ ಪ್ರಪಿತಾಮಹರೇ. ನಮ್ಮ ವಂಶದವನೇ ಆದ ನೀನು ಸಂತಾನ ಪಡೆಯದೇ ನಮ್ಮ ಪರಿಸ್ಥಿತಿ ಹೀಗಾಗಿದೆ. ಒಂದು ವೇಳೆ ನೀನು ಸತ್ಪುತ್ರನನ್ನು ಪಡೆದಲ್ಲಿ ನಮ್ಮ ಈ ಗತಿಗೆ ಮೋಕ್ಷ ಸಿಗುತ್ತದೆ. ಅದಕ್ಕೆ ಅಗಸ್ತ್ಯರು ಒಪ್ಪಿ ಸತ್ಸಂತಾನ ಪಡೆಯಲು ಒಪ್ಪಿ ಆತಂಕ ಪಡದಿರಲು ಪ್ರಾರ್ಥಿಸಿದರು.

ಈ ಬಗ್ಗೆ ಚಿಂತಿಸಿದ ಅಗಸ್ತ್ಯರು ತಮಗೆ ಸೂಕ್ತ ಕನ್ಯೆಯನ್ನು ಎಲ್ಲೂ ಕಾಣಲಿಲ್ಲ.

**'ಆತ್ಮನಃ ಪ್ರಸವಸ್ಯಾರ್ಥೇ ನಾಪಶ್ಯತ್ ಸದೃಶೀಂ ಸ್ತ್ರಿಯಮ್'**. ಅದಕ್ಕಾಗಿ ಪ್ರಪಂಚದಲ್ಲಿನ ಅತ್ಯುತ್ತಮ ಗುಣಗಳೆಲ್ಲವನ್ನೂ ಒಂದೆಡೆ ಸಂಗ್ರಹಿಸಿದ ಸ್ತ್ರೀಬೀಜವೊಂದನ್ನು ಸಂತಾನಕ್ಕಾಗಿ ತಪಸ್ಸನ್ನಾಚರಿಸುತ್ತಿದ್ದ ವಿದರ್ಭರಾಜನಿಗೆ ಅನುಗ್ರಹಿಸಿದರು[೧].

ಆ ಬೀಜವನ್ನು ಸೇವಿಸಿದ ವಿದರ್ಭರಾಜನ ಪತ್ನಿಯು ಗರ್ಭವತಿಯಾಗಿ ಸಕಾಲದಲ್ಲಿ ಸ್ತ್ರೀ ಶಿಶುವೊಂದನ್ನು ಪ್ರಸವಿಸಿದಳು. ಬ್ರಾಹ್ಮಣರು ಆ ಮಗುವಿಗೆ ಲೋಪಾಮುದ್ರಾ ಎಂದು ಹೆಸರಿಟ್ಟರು. ಕಾರಣ ಆ ಮಗುವು ಎಲ್ಲ ಪ್ರಾಣಿಗಳ ಅತ್ಯುತ್ತಮ ಲಕ್ಷಣಗಳೆಲ್ಲವನ್ನೂ (ಮುದ್ರಾ-ಲಕ್ಷಣ) ತಿರಸ್ಕರಿಸುವಂತಹ(ಲೋಪವಾಗುವ) ಅಸದೃಶ ಸುಂದರವಾಗಿತ್ತು. ಮಗುವು ಅಗ್ನಿಯಂತಹ ತೇಜಸ್ಸನ್ನೂ ಹಾಗೂ ಆಕಾಶದಲ್ಲಿ ರೋಹಿಣೀನಕ್ಷತ್ರದಂತೆ ಶೋಭಾಯವಾಗಿದ್ದು ವೃದ್ಧಿ ಹೊಂದಿತು. ಯೌವನ ಹೊಂದಿದಾಗ ಆಕೆಯನ್ನು ಯಾವ ಪುರುಷನೂ ವರಿಸಲಿಲ್ಲ. ಕಾರಣ ವಿದರ್ಭರಾಜನು ಆಕೆಯನ್ನು ತಾವು ಇಚ್ಛಿಸಿದರೆ ತಮ್ಮ ಮೇಲೆ ಕೋಪಗೊಳ್ಳಬಹುದೆಂಬ ಭಯ[೨].

ಹೀಗಿರುವಾಗ ಅಗಸ್ತ್ಯರು ವಿದರ್ಭರಾಜನ ಬಳಿಗೆ ಬಂದು ತಾವು ಸಂತಾನಾಪೇಕ್ಷಿಗಳಾಗಿದ್ದು ಲೋಪಾಮುದ್ರೆಯನ್ನು ತಮಗೆ ಧಾರೆಯೆರೆಯಲು ಕೇಳಿದರು. ಈ ಮಾತನ್ನು ಕೇಳಿದೊಡನೆ ಮೂರ್ಛೆಹೊಂದಿದ ರಾಜನು ಅಗಸ್ತ್ಯರ ವಿರುದ್ಧ ಮಾತನಾಡಲೂ ಅಸಮರ್ಥನಾದ.

---

ತತೋ ವಾತಾಪಿಮಸುರಂ ಛಾಗಂ ಕೃತ್ವಾ ಸುಸಂಸ್ಕೃತಮ್ ।
ತಂ ಬ್ರಾಹ್ಮಣಂ ಭೋಜಯಿತ್ವಾ ಪುನರೇವ ಸಮಾಹ್ವಯತ್ ॥
ಏವಂ ಸ ಬ್ರಾಹ್ಮಣಂ ರಾಜನ್ ಭೋಜಯಿತ್ವಾ ಪುನಃ ಪುನಃ ।
ಹಿಂಸಯಾಮಾಸ ದೈತೇಯ ಇಲ್ವಲೋ ದುಷ್ಟಚೇತನಃ ॥ ಇತ್ಯಾದಿ । - ವನಪರ್ವ(೯೬/೪-೧೩)

೧ ಸ ತಸ್ಯ ತಸ್ಯ ಸತ್ತ್ವಸ್ಯ ತತ್ತದಂಗಮನುತ್ತಮಮ್ ।
ಸಂಗೃಹ್ಯ ತತ್ಸಮೈರಂಗೈರ್ನಿರ್ಮಮೇ ಸ್ತ್ರಿಯಮುತ್ತಮಾಮ್ ॥ - ವನಪರ್ವ(೯೬/೨೦)

೨ ಆಸ್ತೇ ತೇಜಸ್ವಿನೀ ಕನ್ಯಾ ರೋಹಿಣೀವ ದಿವ ಪ್ರಭಾ ।
ಯೌವನಸ್ಥಾಮಪಿ ಚ ತಾಂ ಶೀಲಾಚಾರಸಮನ್ವಿತಾಮ್ ॥
ನ ವವ್ರೇ ಪುರುಷಃ ಕಶ್ಚಿತ್ ಭಯಾತ್ತಸ್ಯ ಮಹಾತ್ಮನಃ ॥ - ವನಪರ್ವ(೯೬/೨೮)

ರಾಣಿಯೂ ಶಾಪಕ್ಕೆ ಹೆದರಿ ಮಾತನಾಡದಿರಲು, ಲೋಪಾಮುದ್ರೆಯೇ ತಂದೆಯ ಸಂಕಟ ಪರಿಹಾರಕ್ಕಾಗಿ ತನ್ನನ್ನು ಅಗಸ್ತ್ಯರಿಗೆ ವಿವಾಹಪೂರ್ವಕವಾಗಿ ಕನ್ಯಾದಾನ ಮಾಡಿಕೊಡಲು ತಂದೆಯನ್ನು ಒಪ್ಪಿಸಿದಳು. ಅಂತೆಯೇ ಲೋಪಾಮುದ್ರೆಯನ್ನು ಅಗಸ್ತ್ಯರಿಗೆ ವಿಧಿಪೂರ್ವಕವಾಗಿ ವಿವಾಹ ಮಾಡಿಕೊಟ್ಟನು ವಿದರ್ಭರಾಜ.

ವೈಭವದಿಂದ ಮದುವೆ ಮಾಡಿಕೊಂಡ ಋಷಿಗಳು ನಂತರ ಲೋಪಾಮುದ್ರೆಗೆ ಈ ವೈಭವೋಪೇತವಾದ ವಸ್ತ್ರಾಭರಣಗಳನ್ನು ತ್ಯಜಿಸಿ ತಾಪಸರಿಗೆ ಯೋಗ್ಯವಾದ ನಾರು ಉಡುಗೆಗಳನ್ನು ಧರಿಸಲು ಸೂಚಿಸಿದಾಗ, ಲೋಪಾಮುದ್ರೆ ಮರುಮಾತನಾಡದೆ ಹಾಗೆಯೇ ಸಿದ್ಧಳಾಗಿ ಪತಿಯೊಡನೆ ಹೊರಟಳು. ಗಂಗಾದ್ವಾರಕ್ಕೆ ಬಂದ ಅಗಸ್ತ್ಯರು ಉಗ್ರ ತಪಸ್ಸನ್ನಾರಂಭಿಸಿದರು. ಲೋಪಾಮುದ್ರೆ ಅವರಿಗೆ ಅನುಕೂಲೆಯಾಗಿ ತಾಪಸಿ ಪತಿವ್ರತೆಯಾಗಿ ಸೇವೆಗೈಯುತ್ತಿದ್ದಳು. ತಪಸ್ಸಿನಿಂದ ಆಕೆಯ ಶಾಂತಿ ಇಮ್ಮಡಿಗೊಂಡಿತು. ಆಕೆಯ ಸೇವೆಯಿಂದ ಸಂತುಷ್ಟರಾದ ಅಗಸ್ತ್ಯರು ತಮ್ಮೊಡನೆ ಸಂಗಮಕ್ಕಾಗಿ ಆಹ್ವಾನಿಸಿದರು.

ಅವರಿಂದ ಮುದಗೊಂಡ ಲೋಪಾಮುದ್ರೆ ಲಜ್ಜೆಯಿಂದ ನಮಿಸುತ್ತಾ 'ಭಗವನ್! ನಾನೂ ಸಂತಾನಾರ್ಥವಾಗಿ ತಮ್ಮೊಡನೆ ಸಂಗಮ ಬಯಸುವೆನಾದರೂ ಈ ತಾಪಸಿ ವೇಷದಿಂದ ಬಯಸುವುದಿಲ್ಲ, ನಾನು ನಮ್ಮ ತಂದೆಯ ಅರಮನೆಯಲ್ಲಿ ಮಲಗುತ್ತಿದ್ದಂತಹ ವೈಭವೋಪೇತವಾದ ಮಂಚದಲ್ಲಿ ತಮ್ಮೊಡನೆ ರಮಿಸಬೇಕೆಂದು ನನ್ನ ಇಚ್ಛೆ. ತಾವೂ ವಸ್ತ್ರಾಭರಣಾದಿ ಅಲಂಕಾರಗಳಿಂದ ಕೂಡಿದ ಯುವಕರಾಗಬೇಕು. ಈ ಚೀರಕಾಷಾಯ ವಸ್ತ್ರ ಧರಿಸಿ ನಿಮ್ಮೊಡನೆ ರಮಿಸುವುದು ನನಗೆ ಇಷ್ಟವಿಲ್ಲ, ಸುಂದರ ವಸ್ತ್ರವಿಭೂಷಣಾದಿಗಳಿಂದ ಕೂಡಿದ ನಾವು ರಮಿಸುವುದು ಅಪವಿತ್ರವಲ್ಲವಷ್ಟೆ ಎಂದಳು.

ಇದನ್ನು ಕೇಳಿದ ಅಗಸ್ತ್ಯರು 'ನೀನು ಬಯಸುವಂತೆ ನಾನು ದಿವ್ಯಾಭರಣ ವಸ್ತ್ರಗಳಿಂದ ಅಲಂಕೃತನಾಗಲು ನನ್ನಲ್ಲಿ ದ್ರವ್ಯವಿಲ್ಲವಲ್ಲ' ಎಂದರು. ಅದಕ್ಕೆ ಅವರ ಪತ್ನಿಯು 'ತಾವು ಅಂತಹ ಸಂಪತ್ತನ್ನು ಸಂಪಾದಿಸಲು ಸಮರ್ಥರಾಗಿದ್ದೀರಿ. ಕ್ಷಣಮಾತ್ರದಲ್ಲಿ ಸಂಪಾದಿಸಬಲ್ಲಿರಿ' ಎಂದಳು. ಅದಕ್ಕೆ ಋಷಿಗಳು 'ಸಂಪಾದಿತವಾದ ತಪಸ್ಸನ್ನು ನಾಶಪಡಿಸುವ ವಿಚಾರವನ್ನು ಹೇಳಬೇಡ. ನಮ್ಮ ತಪಸ್ಸು ನಾಶವಾಗದ ಯಾವುದಾದರೂ ಉಪಾಯವಿದ್ದಲ್ಲಿ ಹೇಳು' ಎಂದರು.

ಪುನಃ ಲೋಪಾಮುದ್ರೆಯು 'ನನ್ನ ಋತುಕಾಲ ಸ್ವಲ್ಪಭಾಗ ಮಾತ್ರ ಉಳಿದಿದೆ. ಆದ್ದರಿಂದ ಈ ಬಗ್ಗೆ ನೀವೇ ಯೋಚಿಸಿ ಐಶ್ವರ್ಯ ಸಂಪಾದಿಸಿ ನನ್ನ ಋತುಕಾಲವನ್ನು ಸಾರ್ಥಕ ಮಾಡಿರಿ. ನಿಮ್ಮ ತಪಸ್ಸೂ ನನ್ನ ಋತುಕಾಲ ಎರಡೂ ಹಾಳಾಗದಂತೆ ತಾವೇ ಸೂಕ್ತವಾಗಿ ನಿರ್ಧರಿಸಿರಿ' ಎಂದಳು.

ತಮ್ಮ ಪತ್ನಿ ಲೋಪಾಮುದ್ರೆಯ ಅಪೇಕ್ಷೆ ಈಡೇರಿಸಲು ಅಗಸ್ತ್ಯರು ಸಂಪತ್ತನ್ನು ಬೇಡಲು ಮೊದಲು ಶ್ರುತರ್ವಾಣನೆಂಬ ರಾಜನ ಬಳಿಗೆ ಹೋದರು. ಅಗಸ್ತ್ಯರು ಬರುತ್ತಿರುವ ವಿಷಯ

ತಿಳಿದು ರಾಜನು ತನ್ನ ಅಮಾತ್ಯರೊಡನೆ ತನ್ನ ದೇಶದ ಗಡಿಯಲ್ಲಿಯೇ ಅವರನ್ನು ಸ್ವಾಗತಿಸಿ, ಅರಮನೆಗೆ ಆಹ್ವಾನಿಸಿ, ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ ಬಂದ ಕಾರಣವನ್ನು ನಮ್ರವಾಗಿ ಪ್ರಾರ್ಥಿಸಿದ. ಅದಕ್ಕೆ ಅಗಸ್ತ್ಯರು 'ನಾನು ಸಂಪತ್ತನ್ನು ಬೇಡಲು ಬಂದಿರುವೆ. ನಿನ್ನ ಪ್ರಜೆಗಳಿಗೆ ತೊಂದರೆಯಾಗದಿದ್ದಲ್ಲಿ ಯಥಾಶಕ್ತಿ ಹಣ ನೀಡು' ಎಂದು ಕೇಳಿದರು.

ಕೂಡಲೇ ರಾಜನು ತನ್ನ ರಾಜ್ಯದ ಆಯವ್ಯಯದ ದಾಖಲಾತಿಗಳನ್ನು ನೀಡಿ ನಿಮಗೆ ಬೇಕಾದಷ್ಟು ಸಂಪತ್ತನ್ನು ಸ್ವೀಕರಿಸಿ ಎಂದು ಉತ್ತರಿಸಿದ. ಅಗಸ್ತ್ಯರು ರಾಜನ ಆಯವ್ಯಯ ಸಮವಾಗಿರುವುದೆಂದು ಗಮನಿಸಿ ಇಂತಹ ಪ್ರಸಂಗದಲ್ಲಿ ತಾವು ಹಣ ಬಯಸಿದ್ದಲ್ಲಿ ರಾಜನು ಪ್ರಜೆಗಳಿಗೆ ಮತ್ತೆ ತೆರಿಗೆ ಹಾಕಬೇಕಾಗುವುದೆಂದು ಭಾವಿಸಿದರು. ರಾಜನ ಕೊಡುಗೆಯನ್ನು ನಯವಾಗಿ ನಿರಾಕರಿಸಿದ ಅಗಸ್ತ್ಯರು ಶ್ರುತರ್ವಾಣನೊಡನೆ **ಬ್ರಧ್ನಶ್ವ** ಎಂಬ ಮತ್ತೊಬ್ಬ ರಾಜನ ಬಳಿಗೆ ಹೋದರು.

ತನ್ನ ರಾಜ್ಯಕ್ಕೆ ಬಂದ ಅಗಸ್ತ್ಯರನ್ನೂ ಶ್ರುತರ್ವಾಣ ರಾಜನನ್ನೂ ಆದರದಿಂದ ಬರಮಾಡಿಕೊಂಡ ಬ್ರಧ್ನಶ್ವನೂ ಅಗಸ್ತ್ಯರ ಬರವಿಗೆ ಕಾರಣ ಕೇಳಿದ. ಋಷಿಗಳು ತಮ್ಮ ಬೇಡಿಕೆ ಮುಂದಿಟ್ಟಾಗ, ಈ ರಾಜನೂ ತನ್ನ ಆಯವ್ಯವನ್ನು ತೆರೆದು ತೋರಿಸಿದ. ಈತನ ಪರಿಸ್ಥಿತಿಯೂ ಹಾಗೆಯೇ ಇರಲು, ಅಗಸ್ತ್ಯರು ತಮ್ಮ ಬೇಡಿಕೆಯನ್ನು ಒತ್ತಾಯಿಸದೆ ಬ್ರಧ್ನಶ್ವನನ್ನೂ ಕರೆದುಕೊಂಡು ಮೂವರೂ **ತ್ರಸದಸ್ಯು** ಎಂಬ ಮಹಾಧನಿಕ ರಾಜನ ಬಳಿಗೆ ಸಾರಿದರು.

ಅಗಸ್ತ್ಯರು ಈ ರಾಜನನ್ನು ಕೂಡಾ ತಮಗೆ ಹಾಗೂ ತನ್ನೊಡನೆ ಬಂದಿರುವ ಶ್ರುತರ್ವಾಣ, ಬ್ರಧ್ನಶ್ವ ರಾಜರಿಗೂ ಹಣದ ಅವಶ್ಯಕತೆ ಇದೆ ಎಂದೂ, 'ನಿನ್ನಲ್ಲಿ ಹೆಚ್ಚುವರಿ ಸಂಪತ್ತಿದ್ದರೆ ನಮಗೆ (ಮೂವರಿಗೂ) ಯಥಾಶಕ್ತಿ ಕೊಡು' ಎಂದು ಬೇಡಿದರು. ಈ ರಾಜನ ಪರಿಸ್ಥಿತಿಯೂ ಮೊದಲಿನ ರಾಜರಂತೆ ಆಯವ್ಯಯ ಸಮನಾಗಿದ್ದುದರಿಂದ ಬೇಡದಿರಲು ಅಗಸ್ತ್ಯರು ನಿರ್ಧರಿಸಿದರು.

ನಂತರ ಮೂವರು ರಾಜರು ಅಗಸ್ತ್ಯರಿಗೆ ಇಲ್ವಲನೆಂಬ ದಾನವನು ಈ ಭೂಲೋಕದಲ್ಲಿ ಭಾರೀ ಶ್ರೀಮಂತ. ಅವನನ್ನೇ ನಾವೆಲ್ಲ ಹೋಗಿ ಬೇಡೋಣ ಎಂದಾಗ ಅಗಸ್ತ್ಯರೂ ಒಪ್ಪಿ ಇಲ್ವಲನ ಬಳಿಗೆ ಹೊರಟರು[೧].

ತನ್ನ ಬಳಿಗೆ ಬರಲಿರುವ ಮೂವರು ರಾಜರು ಹಾಗೂ ಅಗಸ್ತ್ಯರನ್ನು ಮೊದಲೇ ತಿಳಿದ ಇಲ್ವಲನು ತನ್ನ ರಾಜ್ಯದ ಗಡಿಯಲ್ಲಿಯೇ ಸತ್ಕರಿಸಿ, ಅವರ ಆತಿಥ್ಯಕ್ಕಾಗಿ ತನ್ನ ಸೋದರನಾದ

---

೧ ವಿತ್ತಕಾಮಾನಿಹ ಪ್ರಾಪ್ತಾನ್ ವಿದ್ಧಿ ನಃ ಪೃಥಿವೀಪತೇ।
ಯಥಾಶಕ್ತ್ಯವಿಹಿಂಸ್ಯಾನ್ಯಾನ್ ಸಂವಿಭಾಗಂ ಪ್ರಯಚ್ಛ ನಃ॥ - ವನಪರ್ವ(೯೮/೧೫)
ಅಯಂ ವೈದಾನವೋ ಬ್ರಹ್ಮನ್ನಿಲ್ವಲೋ ವಸುಮಾನ್ ಭುವಿ।
ತಮತಿಕ್ರಮ್ಯ ಸರ್ವೇಽದ್ಯ ವಯಂ ಚಾರ್ಥಾಮಹೇ ವಸುಃ॥ - ವನಪರ್ವ(೯೮/೧೯)

ರಾಣಿಯೂ ಶಾಪಕ್ಕೆ ಹೆದರಿ ಮಾತನಾಡದಿರಲು, ಲೋಪಾಮುದ್ರೆಯೇ ತಂದೆಯ ಸಂಕಟ ಪರಿಹಾರಕ್ಕಾಗಿ ತನ್ನನ್ನು ಅಗಸ್ತ್ಯರಿಗೆ ವಿವಾಹಪೂರ್ವಕವಾಗಿ ಕನ್ಯಾದಾನ ಮಾಡಿಕೊಡಲು ತಂದೆಯನ್ನು ಒಪ್ಪಿಸಿದಳು. ಅಂತೆಯೇ ಲೋಪಾಮುದ್ರೆಯನ್ನು ಅಗಸ್ತ್ಯರಿಗೆ ವಿಧಿಪೂರ್ವಕವಾಗಿ ವಿವಾಹ ಮಾಡಿಕೊಟ್ಟನು ವಿದರ್ಭರಾಜ.

ವೈಭವದಿಂದ ಮದುವೆ ಮಾಡಿಕೊಂಡ ಋಷಿಗಳು ನಂತರ ಲೋಪಾಮುದ್ರೆಗೆ ಈ ವೈಭವೋಪೇತವಾದ ವಸ್ತ್ರಾಭರಣಗಳನ್ನು ತ್ಯಜಿಸಿ ತಾಪಸರಿಗೆ ಯೋಗ್ಯವಾದ ನಾರು ಉಡುಗೆಗಳನ್ನು ಧರಿಸಲು ಸೂಚಿಸಿದಾಗ, ಲೋಪಾಮುದ್ರೆ ಮರುಮಾತನಾಡದೆ ಹಾಗೆಯೇ ಸಿದ್ಧಳಾಗಿ ಪತಿಯೊಡನೆ ಹೊರಟಳು. ಗಂಗಾದ್ವಾರಕ್ಕೆ ಬಂದ ಅಗಸ್ತ್ಯರು ಉಗ್ರ ತಪಸ್ಸನ್ನಾರಂಭಿಸಿದರು. ಲೋಪಾಮುದ್ರೆ ಅವರಿಗೆ ಅನುಕೂಲೆಯಾಗಿ ತಾಪಸಿ ಪತಿವ್ರತೆಯಾಗಿ ಸೇವೆಗೈಯುತ್ತಿದ್ದಳು. ತಪಸ್ಸಿನಿಂದ ಆಕೆಯ ಶಾಂತಿ ಇಮ್ಮಡಿಗೊಂಡಿತು. ಆಕೆಯ ಸೇವೆಯಿಂದ ಸಂತುಷ್ಟರಾದ ಅಗಸ್ತ್ಯರು ತಮ್ಮೊಡನೆ ಸಂಗಮಕ್ಕಾಗಿ ಆಹ್ವಾನಿಸಿದರು.

ಅವರಿಂದ ಮುದಗೊಂಡ ಲೋಪಾಮುದ್ರೆ ಲಜ್ಜೆಯಿಂದ ನಮಿಸುತ್ತಾ 'ಭಗವನ್! ನಾನೂ ಸಂತಾನಾರ್ಥವಾಗಿ ತಮ್ಮೊಡನೆ ಸಂಗಮ ಬಯಸುವೆನಾದರೂ ಈ ತಾಪಸಿ ವೇಷದಿಂದ ಬಯಸುವುದಿಲ್ಲ. ನಾನು ನಮ್ಮ ತಂದೆಯ ಅರಮನೆಯಲ್ಲಿ ಮಲಗುತ್ತಿದ್ದಂತಹ ವೈಭವೋಪೇತವಾದ ಮಂಚದಲ್ಲಿ ತಮ್ಮೊಡನೆ ರಮಿಸಬೇಕೆಂದು ನನ್ನ ಇಚ್ಛೆ. ತಾವೂ ವಸ್ತ್ರಾಭರಣಾದಿ ಅಲಂಕಾರಗಳಿಂದ ಕೂಡಿದ ಯುವಕರಾಗಬೇಕು. ಈ ಚೀರಕಾಷಾಯ ವಸ್ತ್ರ ಧರಿಸಿ ನಿಮ್ಮೊಡನೆ ರಮಿಸುವುದು ನನಗೆ ಇಷ್ಟವಿಲ್ಲ. ಸುಂದರ ವಸ್ತ್ರವಿಭೂಷಣಾದಿಗಳಿಂದ ಕೂಡಿದ ನಾವು ರಮಿಸುವುದು ಅಪವಿತ್ರವಲ್ಲವಷ್ಟೆ' ಎಂದಳು.

ಇದನ್ನು ಕೇಳಿದ ಅಗಸ್ತ್ಯರು 'ನೀನು ಬಯಸುವಂತೆ ನಾನು ದಿವ್ಯಾಭರಣ ವಸ್ತ್ರಗಳಿಂದ ಅಲಂಕೃತನಾಗಲು ನನ್ನಲ್ಲಿ ದ್ರವ್ಯವಿಲ್ಲವಲ್ಲ' ಎಂದರು. ಅದಕ್ಕೆ ಅವರ ಪತ್ನಿಯು 'ತಾವು ಅಂತಹ ಸಂಪತ್ತನ್ನು ಸಂಪಾದಿಸಲು ಸಮರ್ಥರಾಗಿದ್ದೀರಿ. ಕ್ಷಣಮಾತ್ರದಲ್ಲಿ ಸಂಪಾದಿಸಬಲ್ಲಿರಿ' ಎಂದಳು. ಅದಕ್ಕೆ ಋಷಿಗಳು 'ಸಂಪಾದಿತವಾದ ತಪಸ್ಸನ್ನು ನಾಶಪಡಿಸುವ ವಿಚಾರವನ್ನು ಹೇಳಬೇಡ. ನಮ್ಮ ತಪಸ್ಸು ನಾಶವಾಗದ ಯಾವುದಾದರೂ ಉಪಾಯವಿದ್ದಲ್ಲಿ ಹೇಳು' ಎಂದರು.

ಪುನಃ ಲೋಪಾಮುದ್ರೆಯು 'ನನ್ನ ಋತುಕಾಲ ಸ್ವಲ್ಪಭಾಗ ಮಾತ್ರ ಉಳಿದಿದೆ. ಆದ್ದರಿಂದ ಈ ಬಗ್ಗೆ ನೀವೇ ಯೋಚಿಸಿ ಐಶ್ವರ್ಯ ಸಂಪಾದಿಸಿ ನನ್ನ ಋತುಕಾಲವನ್ನು ಸಾರ್ಥಕ ಮಾಡಿರಿ. ನಿಮ್ಮ ತಪಸ್ಸೂ ನನ್ನ ಋತುಕಾಲ ಎರಡೂ ಹಾಳಾಗದಂತೆ ತಾವೇ ಸೂಕ್ತವಾಗಿ ನಿರ್ಧರಿಸಿರಿ' ಎಂದಳು.

ತಮ್ಮ ಪತ್ನಿ ಲೋಪಾಮುದ್ರೆಯ ಅಪೇಕ್ಷೆ ಈಡೇರಿಸಲು ಅಗಸ್ತ್ಯರು ಸಂಪತ್ತನ್ನು ಬೇಡಲು ಮೊದಲು **ಶ್ರುತರ್ವಾಣ**ನೆಂಬ ರಾಜನ ಬಳಿಗೆ ಹೋದರು. ಅಗಸ್ತ್ಯರು ಬರುತ್ತಿರುವ ವಿಷಯ

ತಿಳಿದು ರಾಜನು ತನ್ನ ಅಮಾತ್ಯರೊಡನೆ ತನ್ನ ದೇಶದ ಗಡಿಯಲ್ಲಿಯೇ ಅವರನ್ನು ಸ್ವಾಗತಿಸಿ, ಅರಮನೆಗೆ ಆಹ್ವಾನಿಸಿ, ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ ಬಂದ ಕಾರಣವನ್ನು ನಮ್ರವಾಗಿ ಪ್ರಾರ್ಥಿಸಿದ. ಅದಕ್ಕೆ ಅಗಸ್ತ್ಯರು 'ನಾನು ಸಂಪತ್ತನ್ನು ಬೇಡಲು ಬಂದಿರುವೆ. ನಿನ್ನ ಪ್ರಜೆಗಳಿಗೆ ತೊಂದರೆಯಾಗದಿದ್ದಲ್ಲಿ ಯಥಾಶಕ್ತಿ ಹಣ ನೀಡು' ಎಂದು ಕೇಳಿದರು.

ಕೂಡಲೇ ರಾಜನು ತನ್ನ ರಾಜ್ಯದ ಆಯವ್ಯಯದ ದಾಖಲಾತಿಗಳನ್ನು ನೀಡಿ ನಿಮಗೆ ಬೇಕಾದಷ್ಟು ಸಂಪತ್ತನ್ನು ಸ್ವೀಕರಿಸಿ ಎಂದು ಉತ್ತರಿಸಿದ. ಅಗಸ್ತ್ಯರು ರಾಜನ ಆಯವ್ಯಯ ಸಮವಾಗಿರುವುದೆಂದು ಗಮನಿಸಿ ಇಂತಹ ಪ್ರಸಂಗದಲ್ಲಿ ತಾವು ಹಣ ಬಯಸಿದ್ದಲ್ಲಿ ರಾಜನು ಪ್ರಜೆಗಳಿಗೆ ಮತ್ತೆ ತೆರಿಗೆ ಹಾಕಬೇಕಾಗುವುದೆಂದು ಭಾವಿಸಿದರು. ರಾಜನ ಕೊಡುಗೆಯನ್ನು ನಯವಾಗಿ ನಿರಾಕರಿಸಿದ ಅಗಸ್ತ್ಯರು ಶ್ರುತರ್ವಾಣನೊಡನೆ ಬ್ರಧ್ನಶ್ವ ಎಂಬ ಮತ್ತೊಬ್ಬ ರಾಜನ ಬಳಿಗೆ ಹೋದರು.

ತನ್ನ ರಾಜ್ಯಕ್ಕೆ ಬಂದ ಅಗಸ್ತ್ಯರನ್ನೂ, ಶ್ರುತರ್ವಾಣ ರಾಜನನ್ನೂ ಆದರದಿಂದ ಬರಮಾಡಿಕೊಂಡ ಬ್ರಧ್ನಶ್ವನೂ ಅಗಸ್ತ್ಯರ ಬರವಿಗೆ ಕಾರಣ ಕೇಳಿದ. ಋಷಿಗಳು ತಮ್ಮ ಬೇಡಿಕೆ ಮುಂದಿಟ್ಟಾಗ, ಈ ರಾಜನೂ ತನ್ನ ಆಯವ್ಯವನ್ನು ತೆರೆದು ತೋರಿಸಿದ. ಈತನ ಪರಿಸ್ಥಿತಿಯೂ ಹಾಗೆಯೇ ಇರಲು, ಅಗಸ್ತ್ಯರು ತಮ್ಮ ಬೇಡಿಕೆಯನ್ನು ಒತ್ತಾಯಿಸದೆ ಬ್ರಧ್ವಶ್ವನನ್ನೂ ಕರೆದುಕೊಂಡು ಮೂವರೂ ತ್ರಸದಸ್ಸು ಎಂಬ ಮಹಾಧನಿಕ ರಾಜನ ಬಳಿಗೆ ಸಾರಿದರು.

ಅಗಸ್ತ್ಯರು ಈ ರಾಜನನ್ನು ಕೂಡಾ ತಮಗೆ ಹಾಗೂ ತನ್ನೊಡನೆ ಬಂದಿರುವ ಶ್ರುತರ್ವಾಣ, ಬ್ರಧ್ನಶ್ವ ರಾಜರಿಗೂ ಹಣದ ಅವಶ್ಯಕತೆ ಇದೆ ಎಂದೂ, 'ನಿನ್ನಲ್ಲಿ ಹೆಚ್ಚುವರಿ ಸಂಪತ್ತಿದ್ದರೆ ನಮಗೆ (ಮೂವರಿಗೂ) ಯಥಾಶಕ್ತಿ ಕೊಡು' ಎಂದು ಬೇಡಿದರು. ಈ ರಾಜನ ಪರಿಸ್ಥಿತಿಯೂ ಮೊದಲಿನ ರಾಜರಂತೆ ಆಯವ್ಯಯ ಸಮನಾಗಿದ್ದುದರಿಂದ ಬೇಡದಿರಲು ಅಗಸ್ತ್ಯರು ನಿರ್ಧರಿಸಿದರು.

ನಂತರ ಮೂವರು ರಾಜರು ಅಗಸ್ತ್ಯರಿಗೆ ಇಲ್ವಲನೆಂಬ ದಾನವನು ಈ ಭೂಲೋಕದಲ್ಲಿ ಭಾರೀ ಶ್ರೀಮಂತ. ಅವನನ್ನೇ ನಾವೆಲ್ಲ ಹೋಗಿ ಬೇಡೋಣ ಎಂದಾಗ ಅಗಸ್ತ್ಯರೂ ಒಪ್ಪಿ ಇಲ್ವಲನ ಬಳಿಗೆ ಹೊರಟರು[೧].

ತನ್ನ ಬಳಿಗೆ ಬರಲಿರುವ ಮೂವರು ರಾಜರು ಹಾಗೂ ಅಗಸ್ತ್ಯರನ್ನು ಮೊದಲೇ ತಿಳಿದ ಇಲ್ವಲನು ತನ್ನ ರಾಜ್ಯದ ಗಡಿಯಲ್ಲಿಯೇ ಸತ್ಕರಿಸಿ, ಅವರ ಆತಿಥ್ಯಕ್ಕಾಗಿ ತನ್ನ ಸೋದರನಾದ

---

೧ ವಿತ್ತಕಾಮಾನಿಹ ಪ್ರಾಪ್ತಾನ್ ವಿದ್ಧಿ ನಃ ಪೃಥಿವೀಪತೇ।
ಯಥಾಶಕ್ತ್ಯವಿಹಿಂಸ್ಯಾನ್ಯಾನ್ ಸಂವಿಭಾಗಂ ಪ್ರಯಚ್ಛ ನಃ॥ - ವನಪರ್ವ(೯೮/೧೫)
ಅಯಂ ವೈದಾನವೋ ಬ್ರಹ್ಮನ್ನಿಲ್ವಲೋ ವಸುಮಾನ್ ಭುವಿ।
ತಮತಿಕ್ರಮ್ಯ ಸರ್ವೇಽದ್ಯ ವಯಂ ಚಾರ್ಥಾಮಹೇ ವಸುಃ॥ - ವನಪರ್ವ(೯೮/೧೯)

ವಾತಾಪಿಯನ್ನು ಆಡನ್ನಾಗಿ ಪರಿವರ್ತಿಸಿ, ಕತ್ತರಿಸಿ, ಅದರ ಮಾಂಸದಿಂದ ಎಲ್ಲರಿಗೂ ಬಡಿಸಲು ಸಿದ್ಧತೆ ಮಾಡುತ್ತಿರುವುದನ್ನು ಗಮನಿಸಿದ ಈ ಮೂವರು ರಾಜರು ಖಿನ್ನರಾದರು. ಪ್ರಾಣ ಹೋದಂತೆ ಆದರು. ಕಾರಣ ಈ ಇಲ್ವಲ ಹಿಂದೆ ಹೀಗೆಯೇ ಬ್ರಾಹ್ಮಣರನ್ನು ಸಂಹರಿಸುತ್ತಿರುವ ವಿಷಯ ತಿಳಿದಿದ್ದರು. ಆಗ ಅಗಸ್ತ್ಯರು ತನ್ನೊಡನೆ ಬಂದ ರಾಜರನ್ನು ಕುರಿತು 'ನೀವು ಈ ಬಗ್ಗೆ ವಿಷಾದಿಸಬೇಡಿ. ನಾನೊಬ್ಬನೇ ಆ ಮಹಾಸುರನನ್ನು ಉಣ್ಣುತ್ತೇನೆ (ವಾತಾಪಿಯನ್ನು ಆಡಾಗಿ ಮಾಡಿ, ನಂತರ ಮಾಡಿದ ಆ ಆಡಿನ ಮಾಂಸದ ಅಡುಗೆಯನ್ನು ನಾನೊಬ್ಬನೇ ಉಣ್ಣುತ್ತೇನೆ ಎಂದು ಇದರ ಅಭಿಪ್ರಾಯ) ಎಂದರು.

**ವಿಷಾದೋ ವೋ ನ ಕರ್ತವ್ಯೋ ಹ್ಯಹಂ ಭೋಕ್ಷ್ಯೇ ಮಹಾಸುರಮ್ । ೯೯/೪**

ನಂತರ ಅಗಸ್ತ್ಯರು ಧುರ್ಯಾಸನ (ಅಶ್ವಾಸನ-ವೃಷಭಾಸನ?)ದಲ್ಲಿ ಕುಳಿತರು. ದೈತ್ಯೇಂದ್ರನಾದ ಇಲ್ವಲನು ಇವರನ್ನು ಮೋಸಗೊಳಿಸಿದೆ ಎಂದು ಸೂಚಿಸುವಂತೆ ನಗುತ್ತಾ ಉಣಬಡಿಸಿದಾಗ ಅಗಸ್ತ್ಯರೊಬ್ಬರೇ ಎಲ್ಲವನ್ನು ಉಂಡರು. ನಂತರ ಅಸುರನು ವಾತಾಪಿಯನ್ನು ಜೋರಾಗಿ ಕೂಗಿ ಕರೆದ '**ವಾತಾಪೇ ನಿಷ್ಕ್ರಮಸ್ವ**' ಎಂದು. ಆದರೆ ಆಗಲೇ ಅಗಸ್ತ್ಯರು ಗುಡುಗಿನಂತೆ ಧ್ವನಿ ಮಾಡುವ ಅಪಾನವಾಯುವನ್ನು ವಿಸರ್ಜಿಸಿದರು.

(ಎಲೈ ವಾತಾಪಿ ಹೊರಗೆ ಬಾ) ಎಂದು ಇಲ್ವಲನು ಮತ್ತೆ ಮತ್ತೆ ಕರೆದರೂ ವಾತಾಪಿ ಬರಲಿಲ್ಲ. ಅಗಸ್ತ್ಯರು 'ಅವನನ್ನು ನಾನಾಗಲೇ ಜೀರ್ಣಿಸಿಕೊಂಡಾಯ್ತು. ಅವನು ಹೇಗೆ ತಾನೇ ಹೊರಬಂದಾನು?' ಎಂದು ನುಡಿಯಲು ಇಲ್ವಲನು ವಿಷಾದಗೊಂಡು ಮಂತ್ರಿಗಳೊಡನೆ ಕೈಮುಗಿದು 'ತಾವು ಏಕೆ ಬಂದಿದ್ದೀರಿ? ನಿಮಗೇನು ಸೇವೆ ಮಾಡಲಿ' ಎಂದನು.

ಅದಕ್ಕೆ ಅಗಸ್ತ್ಯರು ನಸುನಗುತ್ತಾ 'ನೀನು ಸಮರ್ಥನೂ, ಧನೇಶ್ವರನೆಂದೂ ತಿಳಿದಿದ್ದೇವೆ. ನನ್ನೊಡನೆ ಬಂದಿರುವ ರಾಜರು ಮಹಾಧನಿಕರಲ್ಲ, ನನಗಂತೂ ಭಾರೀ ಸಂಪತ್ತು ಬೇಕಿದೆ. ನಿನ್ನ ಪ್ರಜೆಗಳಿಗೆ ಹಿಂಸೆಯಾಗದಂತೆ ನಮಗೆಲ್ಲ ಸಂಪತ್ತನ್ನು ವಿತರಿಸು' ಎಂದರು. ಅದಕ್ಕೆ ಇಲ್ವಲನು 'ನಾನು ಎಷ್ಟು ಧನವನ್ನು ತಮಗೆಲ್ಲ ಕೊಡಲು ಉದ್ದೇಶಿಸಿದ್ದೇನೆ? ಎಂಬುದನ್ನು ಹೇಳಿದಲ್ಲಿ ನಾನು ಅದರಂತೆ ಕೊಡುವೆ' ಎಂದು ಉತ್ತರಿಸಿದನು[೧].

---

೧ ಅಗಸ್ತ್ಯಏವ ಕೃತ್ಸ್ನಂತು ವಾತಾಪಿಂ ಬುಭುಜೇ ತತಃ ।
ತತೋ ವಾಯುಃ ಪ್ರಾದುರಭೂದಧಸ್ತಸ್ಯ ಮಹಾತ್ಮನಃ ॥
ಶಬ್ದೇನ ಮಹತಾ ತಾತ ಗರ್ಜನ್ನಿವ ಯಥಾ ಘನಃ ।
ವಾತಾಪೇ ನಿಷ್ಕ್ರಮಸ್ವೇತಿ ಪುನಃ ಪುನರುವಾಚ ಹ ॥
ಕುತೋ ನಿಷ್ಕ್ರಮಿತುಂ ಶಕ್ತೋ ಮಯಾ ಜೀರ್ಣಸ್ತು ಸೋಽಸುರಃ ।
ಈಶಂ ಹ್ಯಸುರ ವಿದ್ಮಸ್ತ್ವಾಂ ವಯಂ ಸರ್ವೇ ಧನೇಶ್ವರಮ್ ॥
ಏತೇ ಚ ನಾತಿಧನಿನೋ ಧನಾರ್ಥಶ್ಚ ಮಹಾನ್ ಮಮ ।
ಯಥಾಶಕ್ತ್ಯವಿಹಿಂಸ್ಯಾನ್ಯಾನ್ ಸಂವಿಭಾಗಂ ಪ್ರಯಚ್ಛನಃ ॥

ತಮ್ಮ ಧ್ಯಾನದೃಷ್ಟಿಯಿಂದ ತಿಳಿದ ಅಗಸ್ತ್ಯರು ಇಲ್ವಲನಿಗೆ 'ನೀನು ಮೂವರು ರಾಜರಿಗೆ ಪ್ರತಿಯೊಬ್ಬರಿಗೂ ೧೦೦೦೦ ಗೋವುಗಳು, ೧೦೦೦೦ ಸುವರ್ಣನಾಣ್ಯಗಳನ್ನು ನನಗೆ ಇದಕ್ಕಿಂದ ಎರಡು ಪಟ್ಟು ಕೊಡಲು ಇಚ್ಛಿಸಿದ್ದಿ. ಅಲ್ಲದೆ ಒಂದು ಸುವರ್ಣರಥ ಹಾಗೂ ಮನೋವೇಗದಲ್ಲಿ ಓಡುವ ಎರಡು ಕುದುರೆಗಳನ್ನು ನನಗೆ ಕೊಡಲು ಉದ್ದೇಶಿಸಿದ್ದಿ' ಎಂದು ನುಡಿದಾಗ ಇಲ್ವಲನು ಆಶ್ಚರ್ಯಚಕಿತನಾದನು. ತಾನು ಕೊಡಲಿರುವ ರಥವು ಸುವರ್ಣಮಯವೆಂದು ನಿಶ್ಚಯಪಡಿಸಿಕೊಂಡಾಗ ತುಂಬಾ ವ್ಯಥೆಯಾಯಿತು. ಮಾತು ಕೊಟ್ಟಿದ್ದರಿಂದ ಇಲ್ವಲನು ಮೂವರು ರಾಜರಿಗೆ ಕೂಡಲೇ ಗೋ ಹಾಗೂ ಹಿರಣ್ಯಗಳನ್ನು ಅಗಸ್ತ್ಯರಿಗೆ ೨೦೦೦೦ ಗೋವು, ೨೦೦೦೦ ಹಿರಣ್ಯನಾಣ್ಯಗಳನ್ನು, ಸುವರ್ಣರಥ, ವಿರಾವಿ, ಸುರಾವ ಎಂಬ ಕುದುರೆಗಳನ್ನು ಕೊಟ್ಟನು. ಈ ರಥದಲ್ಲಿಯೇ ಕುಳಿತ ರಾಜರು ತಮ್ಮ ರಾಜ್ಯಗಳಿಗೆ ತೆರಳಿದರು. ಅಗಸ್ತ್ಯರು ತಮ್ಮ ಆಶ್ರಮಕ್ಕೆ ಹೋಗಿ ಪತ್ನಿಗೆ ತಾವು ತಂದ ಸಂಪತ್ತನ್ನು ತೋರಿಸಲು ಲೋಪಾಮುದ್ರೆ ತುಂಬಾ ಮುದಗೊಂಡಳು. ಅವರ ಗಾರ್ಹಸ್ಥ್ಯ ಜೀವನ ಹಚ್ಚ ಹಸಿರಾಗಿ ವಿಜೃಂಭಿಸಿತು.

ಪತಿಯು ತನ್ನ ಅಭಿಲಾಷೆಗಳನ್ನು ಪೂರೈಸಲು ಲೋಪಾಮುದ್ರೆಯು ಸಂತಾನಾಪೇಕ್ಷೆ ವ್ಯಕ್ತಪಡಿಸಿದಳು. ಅದಕ್ಕೆ ಲೋಪಾಮುದ್ರೆಯ ಚಾರಿತ್ರ್ಯದಿಂದ ಸಂತೋಷಗೊಂಡ ಅಗಸ್ತ್ಯರು 'ನಿನಗೆ ಸಾವಿರ ಪುತ್ರರು ಬೇಕೆ? ಸಾವಿರ ಪುತ್ರರ ಸಮರಾದ ನೂರು ಪುತ್ರರು ಬೇಕೆ? ಅಥವಾ ಅಷ್ಟು ಸಾಮರ್ಥ್ಯವಿರುವ ಹತ್ತು ಪುತ್ರರು ಅಥವಾ ಸಾವಿರಕ್ಕೆ ಸಮನಾದ ಒಬ್ಬ ಪುತ್ರ ಸಾಕೇ' ಎಂದು ಕೇಳಿದರು.

ಅದಕ್ಕೆ ಲೋಪಾಮುದ್ರೆಯು ಸಾವಿರ ಕೆಟ್ಟ ಪುತ್ರರಿಗಿಂತ ಒಬ್ಬ ಜ್ಞಾನಿಯಾದ ಪುತ್ರ ಶ್ರೇಯಸ್ಕರ ಎಂದು ಬಿನ್ನವಿಸಿದಳು[೧].

ಹೆಂಡತಿಯ ಅಪೇಕ್ಷೆಯಂತೆ ಮುಂದೆ ಅಗಸ್ತ್ಯರಿಂದ ಲೋಪಾಮುದ್ರೆಯು ಮಹಾ ತಪಸ್ವಿಯಾದ ಒಂದು ಗಂಡು ಮಗುವನ್ನು ೭ ವರ್ಷಗಳ ಕಾಲ ಗರ್ಭ ಹೊತ್ತು ಪಡೆದಳು. ಆ ಮಗುವೇ **ದೃಢಸ್ಯು** ಬಾಲಕ. ದೃಢಸ್ಯು ಸಮಿತ್ತಿನ ಹೊರೆಯನ್ನೇ ಹೊರುತ್ತಿದ್ದ. ಆದ್ದರಿಂದ ಅವನಿಗೆ **ಇಧ್ಮವಾಹ**ನೆಂಬ ಅನ್ವರ್ಥನಾಮವೂ ಬಂದಿತು. ಲೋಪಾಮುದ್ರೆಯು ಗರ್ಭಿಣಿಯಿದ್ದಾಗಲೇ ಅಗಸ್ತ್ಯರು ತಪಸ್ಸಿಗೆ ತೆರಳಿದರಂತೆ. ತಪಸ್ವಿಯಾದ ಮಗನನ್ನು ಪಡೆದ ಅಗಸ್ತ್ಯರು ಪಿತೃಗಳೂ ಸಲ್ಲೋಕವನ್ನು ಹೊಂದಿದರು. ಅಗಸ್ತ್ಯರು ತಮ್ಮ ಕರ್ತವ್ಯ ಮಾಡಿ ತಮ್ಮ ಪಿತೃಗಳ ಅನುಗ್ರಹಕ್ಕೂ ಪಾತ್ರರಾದರು.

---

ದಿತ್ಸಿತಂ ಯದಿ ವೇತ್ಸಿ ತ್ವಂ ತತೋ ದಾಸ್ಯಾಮಿ ತೇ ವಸು ॥ - ವನಪರ್ವ(೯೯/೬,೭,೯,೧೧-೧೩)

೧ ಸಹಸ್ರ ಸಮ್ಮಿತಃ ಪುತ್ರಃ ಏಕೋಽಸ್ತ್ವಸ್ತು ತಪೋಧನ।
ಏಕೋಹಿ ಭಹುಭಿಃ ಶ್ರೇಯಾನ್ ವಿದ್ವಾನ್ ಸಾಧುರಸಾಧುಭಿಃ॥ - ವನಪರ್ವ(೯೯/೨೨)

ಪ್ರಹ್ಲಾದನ ವಂಶದವನಾದ ವಾತಾಪಿಯನ್ನು ಹೀಗೆ ಉಪಶಮನ ಮಾಡಿದ (ಅವನನ್ನು ಆಹಾರವಾಗಿ ಬಡಿಸಿದಾಗ ಜೀರ್ಣಿಸಿಕೊಂಡ) ಅಗಸ್ತ್ಯರ ಆಶ್ರಮವನ್ನು ಯುಧಿಷ್ಠಿರ ನೋಡಿ, ಅಲ್ಲಿನ ಭೃಗುತೀರ್ಥದಲ್ಲಿ ಪಿತೃತರ್ಪಣಾದಿಗಳನ್ನು ಕೊಟ್ಟನು. ತಾನು ಕಳೆದುಕೊಂಡ ತೇಜಸ್ಸನ್ನು ಮತ್ತೆ ಪಡೆಯಲು ಮಿಂದನು. ಪರಶುರಾಮದೇವರೂ ಅಲ್ಲಿಯೇ ಮಿಂದು ತಾವು ದಾಶರಥಿ ರಾಮನಿಂದ ಕಳೆದುಕೊಂಡ ತೇಜಸ್ಸನ್ನು ಮತ್ತೆ ಪಡೆದರೆಂದು ಲೋಮಶರು ನುಡಿದರು!!

ಧರ್ಮರಾಜನ ಅಪೇಕ್ಷೆಯಂತೆ ಲೋಮಶರು ಮತ್ತೆ ಅಗಸ್ತ್ಯರ ಮಹಿಮೆಯನ್ನು ಹೇಳಲಾರಂಭಿಸಿದರು.

ಕೃತಯುಗದಲ್ಲಿ **ಕಾಲಕೇಯ**ರೆಂಬ ದಾನವರು ವೃತ್ರಾಸುರನನ್ನು ಆಶ್ರಯಿಸಿ ಇಂದ್ರಾದಿದೇವತೆಗಳನ್ನು ಪೀಡಿಸುತ್ತಿದ್ದರು. ವೃತ್ರಾಸುರನ ಸಂಹಾರಕ್ಕಾಗಿ ಇಂದ್ರಾದಿದೇವತೆಗಳು ಬ್ರಹ್ಮನನ್ನು ಸೂಕ್ತ ಉಪಾಯಕ್ಕಾಗಿ ಪ್ರಾರ್ಥಿಸಿದರು. ಅದಕ್ಕೆ ಬ್ರಹ್ಮದೇವರು ದಧೀಚಿ ಋಷಿಗಳ ಅಸ್ಥಿಗಳಿಂದ (ಮೂಳೆ-ಎಲುಬುಗಳಿಂದ) ಮಾಡಿದ ವಜ್ರಾಯುಧದಿಂದ ವೃತ್ರನನ್ನು ಕೊಲ್ಲಬಹುದೆಂದು ಸೂಚಿಸಿದಾಗ ನಾರಾಯಣನನ್ನು ಮುಂದೆ ಮಾಡಿಕೊಂಡು ದೇವತೆಗಳು ಸರಸ್ವತೀ ನದಿಯ ತೀರದಲ್ಲಿದ್ದ ದಧೀಚ್ಯಾಶ್ರಮಕ್ಕೆ ಹೋಗಿ ಬ್ರಹ್ಮದೇವರು ತಿಳಿಸಿದಂತೆ ಅವರನ್ನು ಅಸ್ಥಿದಾನಕ್ಕಾಗಿ ಪ್ರಾರ್ಥಿಸಿದರು. ಪ್ರಾರ್ಥನೆಯನ್ನು ಮನ್ನಿಸಿದ ದಧೀಚಿಗಳು ಪ್ರಾಣತ್ಯಾಗ ಮಾಡಿ ಅಸ್ಥಿದಾನ ಮಾಡಿದರು (ಈ ಕಥೆಯು ಭಾಗವತದಲ್ಲಿಯೂ ವಿಸ್ತಾರವಾಗಿ ಬಂದಿದೆ - ೬/೮/೧೨).

ದೇವತೆಗಳು ಅಸ್ಥಿ ಸಂಗ್ರಹಿಸಿ ತ್ವಷ್ಟೃ ದೇವತೆಗೆ ನೀಡಲು ಆತನು ವಜ್ರಾಯುಧ ನಿರ್ಮಿಸಿ ಇದರಿಂದ ವೃತ್ರಾಸುರ ವಧೆ ಸಾಧ್ಯವೆಂದು ಇಂದ್ರನಿಗೆ ಕೊಟ್ಟನು (ಅಸ್ಥಿಗಳು ನಾರಾಯಣಕವಚ ಮಂತ್ರದಿಂದ ಬಲಿಷ್ಠವಾಗಿದ್ದವು).

ಎಲ್ಲ ದೇವತೆಗಳಿಂದ ಕೂಡಿದ ಇಂದ್ರನು ಭೂಮ್ಯಾಕಾಶ ವ್ಯಾಪಿಸಿದ ವೃತ್ರಾಸುರನೊಂದಿಗೆ ಭಾರಿಯುದ್ಧಮಾಡಿದನು. ವೃತ್ರನೊಡನೆಇದ್ದಕಾಲಕೇಯದಾನವರು, ಸುವರ್ಣಕವಚಗಳಿಂದ ಕೂಡಿ ದೇವತೆಗಳನ್ನು ಭೀತಿ ಪಡಿಸಿದರು. ದಾವಾಗ್ನಿಯಿಂದ ಸುಟ್ಟ ಪರ್ವತದಂತಾಯಿತು ದೇವತೆಗಳ ಸ್ಥಿತಿ. ಅವರೆಲ್ಲ ಓಡಿದರು. ಇಂದ್ರನೂ ಭೀತನಾಗಿ ನಾರಾಯಣನನ್ನು ಶರಣಾದ. ನಾರಾಯಣನು ತನ್ನ ತೇಜಸ್ಸನ್ನು ಇಂದ್ರನಲ್ಲಿರಿಸಿದ. ಬ್ರಹ್ಮರ್ಷಿಗಳೂ ತಮ್ಮ ತೇಜಸ್ಸನ್ನು ಇಂದ್ರನಿಗೆ ಧಾರೆ ಎರೆದರು. ಇಂದ್ರ ದೇವಋಷಿ, ಬಲದಿಂದ ಬಲಿಷ್ಠನಾದ. ಇದನ್ನು ಗಮನಿಸಿದ ವೃತ್ರಾಸುರ ಮಹಾನಾದ ಮಾಡಿದ. ಅದರಿಂದ ಭೂಮಿ, ಪರ್ವತಗಳು, ಆಕಾಶಗಳಲ್ಲಿ ಮರುನಿನಾದ ಉಂಟಾದವು. ಇಂದ್ರ ವೃತ್ರನ ಮೇಲೆ ವಜ್ರಾಯುಧ ಪ್ರಯೋಗಿಸಿದ. ವೃತ್ರನು ವಿಷ್ಣುವಿನ ಕೈಯಿಂದ ಬಿಡಲ್ಪಟ್ಟ ಮಂದರ ಪರ್ವತದಂತೆ ಬಿದ್ದು ಪ್ರಾಣಬಿಟ್ಟ. ನಂತರ ಹೋರಾಡಿದ ದಾನವರನ್ನು ದೇವತೆಗಳು ನಾಶ ಮಾಡಿದರು. ಉಳಿದ ದಾನವರು ಪ್ರಾಣದ

ಉಳಿವಿಗಾಗಿ ಸಮುದ್ರದ ತಳವನ್ನು ಆಶ್ರಯಿಸಿ ಮುಂದಿನ ಯುದ್ಧ ತಂತ್ರದ ಬಗ್ಗೆ ಚಿಂತಿಸಿದರು. ಇತ್ತ ದೇವತೆಗಳು ಸಂತುಷ್ಟರಾದರು.

ದಾನವರೆಲ್ಲ ಸೇರಿ ಇನ್ನು ಮುಂದೆ ಭೂಲೋಕದಲ್ಲಿರುವ ಸ್ವಾಧ್ಯಾಯ, ವಿದ್ಯಾತಪೋಯಜ್ಞ ನಿರತರಾದ ಬ್ರಾಹ್ಮಣರನ್ನು, ಆಶ್ರಮಗಳನ್ನು ನಾಶಮಾಡಲು ಚಿಂತಿಸಿದರು. ಏಕೆಂದರೆ ಲೋಕಗಳು ನಿಂತಿರುವುದು ತಪಸ್ವಿಗಳ ತಪೋಬಲದಿಂದ. ತಪಸ್ವಿಗಳ ನಾಶದಿಂದ ಮೂರು ಲೋಕಗಳ ನಾಶವಾಗುವುದೆಂದು ದಾನವರು ಭ್ರಮಿಸಿದ್ದರು. ಹಿರಣ್ಯಕಶಿಪು ಕೂಡಾ ಹೀಗೆಯೇ ಭ್ರಮಿಸಿದ್ದನೆಂದು ಭಾಗವತ ತಿಳಿಸುತ್ತದೆ (೭/೨/೧೧).

ದಾನವರು ಹೀಗೆ ಸಮುದ್ರವನ್ನು ಆಶ್ರಯಿಸಿ ರಾತ್ರಿ ಹೊರಗೆ ಬಂದು ಆಶ್ರಮದಲ್ಲಿನ ಮುನಿಗಳನ್ನು ತಿನ್ನಲಾರಂಭಿಸಿದರು. ವಸಿಷ್ಠಾಶ್ರಮದಲ್ಲಿನ ೧೮೮ ಬ್ರಾಹ್ಮಣರನ್ನು, ಒಂಭತ್ತು ಜನ ಮುನಿಗಳನ್ನೂ ತಿಂದರು. ಚ್ಯವನಾಶ್ರಮಕ್ಕೆ ಹೋಗಿ ನೂರು ಜನ ಹಣ್ಣು, ಗೆಡ್ಡೆ, ಗೆಣಸುಗಳನ್ನು ತಿಂದು ಜೀವಿಸುತ್ತಿದ್ದ ಮುನಿಗಳನ್ನು ತಿಂದರಂತೆ. ಭಾರದ್ವಾಜಾಶ್ರಮದಲ್ಲಿನ ಇಪ್ಪತ್ತು ವಾಯ್ವಾಹಾರಿಗಳಾದ ಮುನಿಗಳು ಇವರಿಗೆ ಬಲಿಯಾದರು. ಹೀಗೆ ಬೆಳಗಾಗುವುದರೊಳಗಾಗಿ ಶವಗಳ ರಾಶಿ, ರಕ್ತಸಿಕ್ತ ಶರೀರಗಳು ಕಾಣತೊಡಗಿದವು. ಜಗತ್ತಿನಲ್ಲಿ ವರ್ಣಾಶ್ರಮ ಧರ್ಮಗಳ ಉತ್ಸಾಹ, ಯಜ್ಞಯಾಗಗಳು ಮರೆಯಾದವು. ಕೆಲವು ಮುನಿಗಳು ಈ ದಾನವರನ್ನು ಬೆನ್ನು ಹತ್ತಿ ಹೋದರೂ, ಸಮುದ್ರವನ್ನು ಆಶ್ರಯಿಸಿದವರನ್ನು ಪತ್ತೆ ಹಚ್ಚಲಾಗಲಿಲ್ಲ. ಎಲ್ಲರೂ ಇಂದ್ರನನ್ನೂ, ಇಂದ್ರನು ನಾರಾಯಣನನ್ನು ಶರಣಾಗಿ ಸ್ತೋತ್ರ ಮಾಡಿದರು.

**ತ್ವಂ ನಃ ಸ್ರಷ್ಟಾ ಚ ಭರ್ತಾ ಚ ಹರ್ತಾ ಚ ಜಗತಃ ಪ್ರಭೋ ।**
**ಅಸ್ಮಾಕಂ ಭಯಭೀತಾನಾಂ ತ್ವಂ ಗತಿರ್ಮಧುಸೂದನ ॥**
**ರಕ್ಷ ಲೋಕಾಂಶ್ಚ ದೇವಾಂಶ್ಚ ಶಕ್ರಂ ಚ ಮಹತೋ ಭಯಾತ್ ।**
**- ವನಪರ್ವ(೧೦೨/೨೦-೨೬)**

**ನ ಚ ಜಾನೀಮ ಕೇನೇಮೇ ರಾತ್ರೌ ವಧ್ಯಂತಿ ಬ್ರಾಹ್ಮಣಾಃ ।**
**- ವನಪರ್ವ(೧೦೩/೩)**

ಬ್ರಾಹ್ಮಣರು ಯಾರಿಂದ ಹತರಾಗುತ್ತಿದ್ದಾರೆ ಎಂದು ನಾವು ತಿಳಿಯಲು ಅಸಮರ್ಥರಾಗಿದ್ದೇವೆ. ಬ್ರಾಹ್ಮಣರು ನಾಶವಾದರೆ ಈ ಭೂಲೋಕ, ಸ್ವರ್ಗಲೋಕ ನಾಶವಾದಂತೆ. ನಿನ್ನ ಅನುಗ್ರಹದಿಂದ ನಾವು ರಕ್ಷಿಸಲ್ಪಡಬೇಕಾಗಿದೆ.

ಹೀಗೆ ಸ್ತೋತ್ರ ಮಾಡಿದಾಗ ವಿಷ್ಣುವು ಕಾಲೇಯರೆಂಬ (ಕಾಲಕೇಯ) ಕ್ರೂರರಾದ ದಾನವರಿಂದ ಈ ಭಯವುಂಟಾಗಿದೆ. ಅವರು ಸಮುದ್ರದಲ್ಲಿದ್ದು ನಿಮಗೆ ಹಿಂಸಕರಾಗಿದ್ದಾರೆ. ಸಮುದ್ರವನ್ನು ಶೋಷಿಸದ(ಒಣಗಿಸದ) ಹೊರತು ದಾನವರನ್ನು ಕೊಲ್ಲಲಾಗದು. ಅದು ಅಗಸ್ತ್ಯರು ಮಾತ್ರ ಮಾಡಬಲ್ಲರು. ಕಾರಣ ಅವರನ್ನೇ ಶರಣು ಹೊಂದಿ' ಎಂದನು:

**ನ ತು ಶಕ್ಯಾಃ ಕ್ಷಯಂ ನೇತುಂ ಸಮುದ್ರಾಶ್ರಯಗಾ ಹಿ ತೇ ।**
**ಅಗಸ್ತ್ಯೇನ ವಿನಾ ಕೋ ಹಿ ಶಕ್ತೋಽನ್ಯೋಽರ್ಣವಶೋಷಣೇ ॥**
**- ವನಪರ್ವ(೧೦೩/೧೦,೧೧)**

ನಂತರ ದೇವತೆಗಳು ಬ್ರಹ್ಮದೇವರಿಗೆ ಈ ವಿಷಯ ತಿಳಿಸಿ ಅಗಸ್ತ್ಯಾಶ್ರಮಕ್ಕೆ ಹೋಗಿ, ಅಲ್ಲಿ ಅಗಸ್ತ್ಯರನ್ನು ಬಿನ್ನವಿಸಿದರು.

'ಹಿಂದೆ ನೀವು ನಹುಷನಿಂದ ಸಂತಪ್ತರಾದ ದೇವತೆಗಳನ್ನು ಕಾಪಾಡಿದಿರಿ. ಬೆಳೆಯುತ್ತಿದ್ದ ವಿಂಧ್ಯಪರ್ವತವನ್ನು ತಡೆದು ಲೋಕಕ್ಕೆ ಉಪಕಾರ ಮಾಡಿದಿರಿ. ಲೋಕವು ಕತ್ತಲಿನಿಂದ ಆಗ ಪಾರಾಯಿತು ಎಂದು ದೇವತೆಗಳು ಆಗ ಬಿನ್ನವಿಸಲು, ಅಗಸ್ತ್ಯರು ಸಮುದ್ರಪಾನಕ್ಕೆ ಒಪ್ಪಿದರು.

ವಿಂಧ್ಯ ಪರ್ವತ ಬೆಳೆಯುತ್ತಿದ್ದ ವಿಷಯದ ಬಗ್ಗೆ ಧರ್ಮರಾಜನು ವಿವರವಾಗಿ ಕೇಳಿದಾಗ ಲೋಮಶರು ನುಡಿದರು.

'ಚಿನ್ನದ ಪರ್ವತ ಮೇರು, ಇದನ್ನು ಸುತ್ತುವುದು ಸೂರ್ಯನ ವಿಧಿಕೃತ ಆದೇಶ. ಹಾಗೆಯೇ ಮಾಡುತ್ತಿರಲು ವಿಂಧ್ಯಪರ್ವತವು (ಅದರ ಅಭಿಮಾನಿ ದೇವತೆ) ತನ್ನ ಸುತ್ತಲೂ ಸೂರ್ಯನು ಏಕೆ ಸುತ್ತಬಾರದು ಎಂದು ಸೂರ್ಯನಿಗೆ ಆಗ್ರಹಿಸಿದನು. ಸೂರ್ಯನು 'ಇದು ಪರಮಾತ್ಮನ ಆದೇಶ. ಆ ಮೇರೆಗೆ ನಾನು ಕರ್ತವ್ಯ ನಿರತನಾಗಿದ್ದೇನೆ' ಎಂದನು. ವಿಂಧ್ಯ ಒಪ್ಪಲಿಲ್ಲ, ಅಲ್ಲದೆ ತಾನು ಸ್ವಯಂ ಬೆಳೆಯಲು ಆರಂಭಿಸಿದ. ಇದರಿಂದ ಚಂದ್ರಸೂರ್ಯರ ಮಾರ್ಗ(ಚಲನೆ)ಕ್ಕೆ ಅಡ್ಡಿಯಾಯಿತು. ದೇವತೆಗಳು ಬಂದು ವಿಂಧ್ಯನನ್ನು ತಡೆದರೂ ವಿಂಧ್ಯಪರ್ವತ ಅವರಿಗೆ ಬೆಲೆ ಕೊಡದೆ ತನ್ನ ವೃದ್ಧಿ ಮುಂದುವರೆಸಿದ. ದೇವತೆಗಳು ಅಗಸ್ತ್ಯಾಶ್ರಮಕ್ಕೆ ಬಂದು ವಿಂಧ್ಯಪರ್ವತದ ಬೆಳವಣಿಗೆಯನ್ನು ತಡೆಯಲು ಕೋರಿದರು. ಕೂಡಲೇ ಅಗಸ್ತ್ಯರು ವಿಂಧ್ಯಶೈಲದ ಹತ್ತಿರ ಲೋಪಾಮುದ್ರೆಯೊಡನೆ ಹೋಗಿ 'ವಿಂಧ್ಯಪರ್ವತರಾಜ! ನಾನು ದಕ್ಷಿಣಯಾತ್ರೆಗೆ ಯಾವುದೋ ಒಂದು ಕಾರ್ಯಕ್ಕೋಸ್ಕರ ಹೊರಟ್ಟಿದ್ದೇನೆ. ನಾನು ವಾಪಸು ಬರುವವರೆಗೂ ನೀನು ಬೆಳೆಯಬೇಡ. ನಾನು ವಾಪಸು ಬಂದಮೇಲೆ ನೀನು ನಿನ್ನ ಬೆಳವಣಿಗೆಯನ್ನು ಮುಂದುವರೆಸು' ಎಂದು ಕೋರಿದರು. ವಿಂಧ್ಯರಾಜ ಒಪ್ಪಿದ. ಅಗಸ್ತ್ಯರು ವಿಂಧ್ಯ ದಾಟಿ ದಕ್ಷಿಣಕ್ಕೆ ಹೋದವರು ವಾಪಸು ಬರಲಿಲ್ಲ. ವಿಂಧ್ಯಪರ್ವತ ತನ್ನ ಬೆಳವಣಿಗೆಯನ್ನು ಮುಂದುವರೆಸಲು ಸಾಧ್ಯವಾಗದೇ ಹಾಗೆ ಉಳಿದ[೧].

---

೧ ಮಾರ್ಗಮಿಚ್ಛಾಮ್ಯಹಂ ದತ್ತಂ ಭವತಾ ಪರ್ವತೋತ್ತಮ ।
ದಕ್ಷಿಣಾಮಭಿಗಂತಾಽಸ್ಮಿ ದಿಶಂ ಕಾರ್ಯೇಣ ಕೇನಚಿತ್ ॥
ಯಾವದಾಗಮನಂ ಮಹ್ಯಂ ತಾವತ್ತ್ವಂ ಪ್ರತಿಪಾಲಯ ।
ನಿವೃತ್ತೇ ಮಯಿ ಶೈಲೇಂದ್ರ ತತೋ ವರ್ಧಸ್ವ ಕಾಮತಃ ॥
ಏವಂ ಸ ಸಮಯಂ ಕೃತ್ವಾ ......................... ।

'ನೋಡು ಧರ್ಮರಾಜ! ಇದು ಅಗಸ್ತ್ಯರ ಮಹಿಮೆ ಎಂದರು ಲೋಮಶರು. ಮುಂದೆ ದೇವತೆಗಳ ಪ್ರಾರ್ಥನೆ ಮೇರೆಗೆ ಸಮುದ್ರಜಲ ಪಾನಮಾಡಿ ಅದನ್ನು ಒಣಗಿಸಲು ಒಪ್ಪಿದ ಅಗಸ್ತ್ಯರು ಮನುಷ್ಯ, ಋಷಿ, ಗಂಧರ್ವ, ದೇವತೆಗಳೊಡನೆ ಭೋರ್ಗರೆಯುವ ಸಮುದ್ರದ ಬಳಿ ಸೇರಿದರು.

ಆಗ ಅಗಸ್ತ್ಯರು ದೇವತೆಗಳನ್ನು ಉದ್ದೇಶಿಸಿ 'ನಾನು ಲೋಕಹಿತಕ್ಕಾಗಿ ಸಮುದ್ರವನ್ನು ಕುಡಿಯುತ್ತೇನೆ. ಮುಂದಿನ ಕರ್ತವ್ಯಕ್ಕಾಗಿ ನೀವು ಸಿದ್ಧರಾಗಿರಿ' ಎಂದರು. ಹಾಗೆ ನುಡಿಯುತ್ತಾ ತಮ್ಮ ತಪೋಬಲದಿಂದ ಎಲ್ಲರೂ ನೋಡುತ್ತಿರಲು ಸಮುದ್ರವನ್ನೆಲ್ಲ ಕುಡಿದರು. ದೇವತೆಗಳು ಆಶ್ಚರ್ಯಗೊಂಡರು. ಅಗಸ್ತ್ಯರನ್ನು ಸ್ತೋತ್ರದಿಂದ ತೃಪ್ತಿಗೊಳಿಸಿದರು[೧].

ಸಮುದ್ರ ನಿರ್ಮಲವಾಯಿತು. ಮರೆಯಾಗಿದ್ದ ದಾನವರು ಪ್ರತ್ಯಕ್ಷರಾದರು. ಹರ್ಷಿತರಾದ ದೇವತೆಗಳು **ಕಾಲೇಯ ದಾನವರನ್ನು** ನಾಶ ಮಾಡಿದರು. ಗೋ, ಬ್ರಾಹ್ಮಣರನ್ನೂ, ತಪಸ್ವಿಗಳನ್ನೂ ನಾಶ ಮಾಡುತ್ತಿದ್ದ ದಾನವರು ಹತರಾದರು. ಮತ್ತೆ ದೇವತೆಗಳು ಸಮುದ್ರವನ್ನು ಜಲದಿಂದ ತುಂಬಿಸಲು ಅಗಸ್ತ್ಯರನ್ನು ಪ್ರಾರ್ಥಿಸಲು ಅವರು 'ನಾನು ಈಗಾಗಲೇ ಕುಡಿದ ನೀರು ಜೀರ್ಣವಾಗಿದೆ. ಸಮುದ್ರ ತುಂಬಿಸಲು ಬೇರೊಂದು ಉಪಾಯ ಹುಡುಕಿರಿ' ಎಂದು ಹೇಳಿದಾಗ ವಿಷಾದ ಹೊಂದಿದ ಹಾಗೂ ಅವಾಕ್ಕಾದ ದೇವತೆಗಳು ಮುನಿಗೆ ನಮಿಸಿ ಬ್ರಹ್ಮನ ಬಳಿಗೆ ಸಾರಿದರು[೨].

## ಸಂದೇಶಗಳು

೧. ದೈತ್ಯಶಕ್ತಿಗಳಿಂದ ದೂರವಿರಬೇಕು. ಜೊತೆಗೆ ಅವರನ್ನು ಸಮಯ ಬಂದಾಗ ಎದುರಿಸಲು ತಪಃಶಕ್ತಿ ಸಂಪಾದಿಸಬೇಕು (ಇಲ್ವಲನನ್ನು ಅಗಸ್ತ್ಯರು ಸಮರ್ಥವಾಗಿ ಎದುರಿಸಿದಂತೆ).

---

ಅದ್ಯಾಪಿ ದಕ್ಷಿಣಾದ್ದೇಶಾತ್ ವಾರುಣಿರ್ನ ನಿವರ್ತತೇ।
ಯಥಾ ವಿಂಧ್ಯೋ ನ ವರ್ಧತೇ .................. ॥ - ವನಪರ್ವ (೧೦೪/೧೨-೧೩)

೧ ಅಹಂ ಲೋಕಹಿತಾರ್ಥಂ ವೈ ಪಿಬಾಮಿ ವರುಣಾಲಯಮ್।
ಸಮುದ್ರಮಪಿಬತ್ ಕ್ರುದ್ಧಃ ಸರ್ವಲೋಕಸ್ಯ ಪಶ್ಯತಃ॥
ಪೀಯಮಾನಂ ಸಮುದ್ರಂ ತಂ ದೃಷ್ಟ್ವಾ ಸೇಂದ್ರಾಸ್ತದಾಮರಾಃ।
ವಿಸ್ಮಯಂ ಪರಮಂ ಜಗ್ಮುಃ ಸ್ತುತಿಭಿಶ್ಚಾಪ್ಯ ಪೂಜಯನ್॥
ತ್ವಂ ನ ಸ್ತ್ರಾತಾ ವಿಧಾತಾ ಚ ಲೋಕಾನಾಂ ಲೋಕಭಾವನಃ।
ತ್ವಂ ಪ್ರಸಾದಾತ್ಸಮುಚ್ಛೇದಂ ನ ಗಚ್ಛೇತ್ ಸಾಮರಂ ಜಗತ್॥ - ವನಪರ್ವ(೧೦೩/೨-೫)

೨ ಪೂರಯಸ್ವ ಮಹಾಬಾಹೋ ಸಮುದ್ರಂ ಲೋಕಭಾವನ।
ಯತ್ತ್ವಯಾ ಸಲಿಲಂ ಪೀತಂ........................ ॥
ಜೀರ್ಣಂ ತದ್ಧಿ ಮಯಾ ತೋಯಮುಪಾಯೋಽನ್ಯಃ ಪ್ರಚಿಂತ್ಯತಾಮ್।
ವಿಸ್ಮಿತಾಶ್ಚ ವಿಷಣ್ಣಾಶ್ಚ ಬಭೂವುಃ ಸಹಿತಾಃ ಸುರಾಃ॥ - ವನಪರ್ವ(೧೦೫/೧೫-೧೮)

೨. ಪಿತೃವಾಕ್ಯ ಪರಿಪಾಲನೆ ಎಲ್ಲರ ಕರ್ತವ್ಯ. ಅಗಸ್ತ್ಯರು ತಮ್ಮ ಪಿತೃಗಳ ಮಾತಿನಂತೆ ಸಂತಾನ ಪಡೆದು ಅವರ ಸದ್ಗತಿಗೆ ಕಾರಣರಾದರು (ಅಗಸ್ತ್ಯರು ದೃಢಸ್ಯು - ಇಧ್ಮವಾಹನೆಂಬ ಮಗನನ್ನು ಪಡೆದರು). '**ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ**' ಎಂಬ ವೇದಾದೇಶದ ಪಾಲನೆಯಿಂದ ಪಿತೃಗಳನ್ನು ಸಂತೋಷ ಪಡಿಸಬಹುದು.

೩. ತಪಸ್ಸು ಜೀವನದ ಎಲ್ಲ ಹಂತದಲ್ಲೂ ಅನಿವಾರ್ಯ. ವಿವಾಹಪೂರ್ವ ಹಾಗೂ ನಂತರ ಕೂಡಾ ಅದು ಅನಿವಾರ್ಯ. ವೈವಾಹಿಕ ಜೀವನ ಆಧ್ಯಾತ್ಮಿಕ ಸಾಧನೆಗೆ ಮೀಸಲಿರಬೇಕೆ ಹೊರತು, ವಿಷಯ ಭೋಗಗಳಲ್ಲಿ ಕೊನೆಗೊಳ್ಳಬಾರದು (ಅಗಸ್ತ್ಯರು ವಿವಾಹವಾದ ಕೂಡಲೇ ಮತ್ತೇ ತಪಸ್ಸಿಗೆ ತೆರಳಿದರಷ್ಟೇ).

೪. ಪತ್ನಿಯ ಸಾತ್ವಿಕ ಆಶೆಗಳನ್ನು ನೆರವೇರಿಸುವುದು ಪತಿಯ ಕರ್ತವ್ಯ. ಆದರೆ ಅದಕ್ಕಾಗಿ ಸಂಪಾದಿಸಿದ ತಪೋವ್ಯಯವಾಗಕೂಡದು. ಅಗಸ್ತ್ಯರು ಹಾಗೆ ವರ್ತಿಸಿದರು.

೫. ಬ್ರಾಹ್ಮಣರು ತಮ್ಮ ಸುಖಜೀವನಕ್ಕಾಗಿ ಒಂದು ಹಂತದಲ್ಲಿ ರಾಜಾದಿಗಳನ್ನು ಬೇಡಿದರೂ, ಅವರಿಗೆ ತೊಂದರೆ ಪೀಡೆ ಕೊಡದಂತೆ ಹಣ ಸಂಪಾದಿಸಬೇಕು (ಅಗಸ್ತ್ಯರಂತೆ).

**ಧರ್ಮೇಣೇಜ್ಯಾ ಸಾಧನಾನಿ ಸಾಧಯಿತ್ವಾ ವಿಧಾನತಃ ॥ - ಸದಾಚಾರಸ್ಮೃತಿ**

೬. ಅಗಸ್ತ್ಯರಿಗೆ ದಾನ ಮಾಡಲು ಅಸಮರ್ಥರಾದ ರಾಜರು ಪ್ರಾಮಾಣಿಕವಾಗಿ ಅವರನ್ನು ಅನುಸರಿಸಿದ್ದರಿಂದ ಅವರಿಗೂ (ರಾಜರಿಗೂ) ಐಶ್ವರ್ಯ ಸಿಕ್ಕಿತು. ಮಹಾತ್ಮರ ಸಂಗ ಇಹಪರಗಳಲ್ಲಿ ಸುಖದಾಯಕ.

**ಸದ್ಭಿರ್ಹಿ ಸಂಗತಿರಿಹೈವ ಸುಖಸ್ಯ ಹೇತುಃ ಮೋಕ್ಷೈಕಹೇತುರಥ । - ಮ.ತಾ.ನಿ.**

೭. ಇಲ್ವಲನ ನಡೆ ತನ್ನ ಐಶ್ವರ್ಯ ಹಾಗೂ ಸೋದರನ ನಾಶಕ್ಕೆ ಕಾರಣವಾಯಿತು. ಜರಾಸಂಧನಂತೆಗದೆಯನ್ನೂ ತಾಯಿಯನ್ನೂ ಕಳೆದುಕೊಂಡ ಇಲ್ವಲ. ಆದ್ದರಿಂದ ದುರಾಚಾರ ಸರ್ವನಾಶಕ್ಕೆ ಕಾರಣ. ಸದಾಚಾರ ತನಗೂ, ತನ್ನನ್ನು ನಂಬಿದವರ ಹಿತಕ್ಕೆ ಕಾರಣ.

**ರಾಜಾ ಸ್ವಮಾತೃತ ಉತೋ ಗದಯಾ ಚ ಹೀನಃ । - ಮ.ತಾ.ನಿ.**

೮. ವೃತ್ರಾಸುರನನ್ನು ನಂಬಿದ ಕಾಲಕೇಯರು ನಾಶವಾದರು. ಅಗಸ್ತ್ಯರನ್ನು ನಂಬಿದ ಮೂವರೂ ರಾಜರು ಐಶ್ವರ್ಯ ಸಂಪಾದಿಸಿ ಉದ್ಧಾರವಾದರು. ಆದ್ದರಿಂದ ಮಹಾತ್ಮರ ಸಂಗ ಶ್ರೇಯಸ್ಸಿಗೆ ಕಾರಣ.

೯. ದುಷ್ಟರ ಸಂಹಾರಕ್ಕೆ ತನ್ನ ಶರೀರವನ್ನು ತ್ಯಾಗ ಮಾಡಲು ಸಿದ್ಧರಾಗಿರಬೇಕು (ದಧೀಚಿ ಮುನಿಗಳಂತೆ). ಅವರ ಶರೀರ ಅತ್ಯಂತ ಪವಿತ್ರ. ಅವರ ಅಸ್ಥಿಗಳು ಪವಿ - ವಜ್ರದಂತೆ ದೃಢ, ವಜ್ರಾಯುಧಕ್ಕೆ ಕಾರಣವಾಯಿತು. ಆದ್ದರಿಂದ **ನಮ್ಮ ಶರೀರದ ಪ್ರತಿ**

**ಜೀವ ಕಣ ನಾರಾಯಣಮಯವಾಗಿರಬೇಕು. ಆದಕ್ಕಿರುವ ಒಂದೇ ಉಪಾಯ ಸಂತತ ನಾರಾಯಣಸ್ಮರಣೆ.**

೧೦. ಭಗವಂತನ ಶಕ್ತಿಯ ಮೂಲ ಯಜ್ಞಯಾಗಾದಿಗಳಲ್ಲ, ಬ್ರಾಹ್ಮಣರೂ ಅಲ್ಲ. ಬ್ರಾಹ್ಮಣರ ಶಕ್ತಿಯ ಮೂಲ ಭಗವಂತ. **ನಾರಾಯಣನೇ ಬ್ರಹ್ಮಣ್ಯದೇವ.**

೧೧. ವಾದ ವಿವಾದ, ಬಲಪ್ರಯೋಗವಿಲ್ಲದೆ ವಿಂಧ್ಯ ಪರ್ವತದ ಬೆಳವಣಿಗೆ ನಿಲ್ಲಿಸಿದ **'ಯೋಗಃ ಕರ್ಮಸು ಕೌಶಲಮ್'**. ಇದರ ಮರ್ಮ ಬಲ್ಲ ಕರ್ಮಯೋಗಿಗಳು ಅಗಸ್ತ್ಯರು; **ಉಪಾಯದಿಂದ ಕಾರ್ಯಸಾಧನೆಯೇ ಬುದ್ಧಿವಂತಿಕೆ.**

೧೨. ಸಮುದ್ರಜಲವನ್ನು ಕುಡಿದು, ಆದನ್ನು ಒಣಗಿಸಿದ ಅಗಸ್ತ್ಯರು, ಆದನ್ನು ತುಂಬಿಸಲು ಆಗದೆಂದು ತಿಳಿಸಿದರು. ಏಕೆಂದರೆ ಜೀವನು ಅಪೂರ್ಣ ಶಕ್ತಿಯುಳ್ಳವ, ಭಗವಂತನೇ ಪೂರ್ಣಶಕ್ತ... ಇತ್ಯಾದಿ.

## ೩೨. ಭಗೀರಥಚರಿತ್ರೆ - ಧರೆಗಿಳಿದ ಭಾಗೀರಥೀ

ಸಮುದ್ರ ಮತ್ತೆ ಪೂರ್ಣವಾಗುವ ಬಗ್ಗೆ ದೇವತೆಗಳು ಬ್ರಹ್ಮದೇವರನ್ನು ಕೇಳಲು, ಬ್ರಹ್ಮದೇವರು 'ಇದಕ್ಕಾಗಿ ಬಹಳಕಾಲ ಕಾಯಬೇಕಾಗುವುದು, ಮುಂದೆ ಭಗೀರಥ ಮಹಾರಾಜ ತನ್ನ ಜ್ಞಾತಿಗಳಿಗಾಗಿ ಸಮುದ್ರವನ್ನು ಭಾಗೀರಥೀ ಜಲದಿಂದ ತುಂಬಿಸುತ್ತಾನೆ. ಅಲ್ಲಿಯವರೆಗೆ ನೀವು ಕಾಯಬೇಕು' ಎನ್ನಲು ದೇವತೆಗಳ ತಮ್ಮ ತಮ್ಮ ಲೋಕಗಳಿಗೆ ಹೋದರು[೧].

ಈ ವಿಷಯವನ್ನು ವಿವರವಾಗಿ ಕೇಳಲು ಧರ್ಮರಾಜ ಬಯಸಿದ. ಅಂತೆಯೇ ಲೋಮಶರು ವಿವರಿಸಿದರು.

ರಾಜನ್! ಇಕ್ಷ್ವಾಕು ವಂಶದಲ್ಲಿ **ಸಗರ**ನೆಂಬ ರಾಜನಿದ್ದನು. ರೂಪವಂತನೂ, ಮಹಾಬಲಿಷ್ಠನೂ ಆದ ಆತನಿಗೆ ಮಕ್ಕಳು ಇರಲಿಲ್ಲ. ಹೈಹಯ, ತಾಲಜಂಘ ಮೊದಲಾದ ರಾಜರನ್ನು ತನ್ನ ವಶದಲ್ಲಿಟ್ಟು ರಾಜ್ಯಭಾರ ಮಾಡುತ್ತಿದ್ದ. ಆತನಿಗೆ ರೂಪಯೌವನಗಳಿಂದ ಸೊಕ್ಕಿದ್ದ ಇಬ್ಬರು ಪತ್ನಿಯರಿದ್ದರು. ಅವರು **ವಿದರ್ಭ** ಹಾಗೂ **ಶಿಬಿ** ರಾಜನ ಮಕ್ಕಳು. ಅವರೊಂದಿಗೆ ಕೈಲಾಸಗಿರಿಗೆ ತೆರಳಿದ ರಾಜ ಸಂತಾನಕ್ಕಾಗಿ ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಒಲಿಸಿಕೊಂಡ. ದರ್ಶನವಿತ್ತ ಶಿವನಿಗೆ ರಾಜರಾಣಿಯರು ನಮಿಸಿ ಪುತ್ರಸಂತಾನಕ್ಕಾಗಿ ಪ್ರಾರ್ಥಿಸಿದರು. ಪ್ರತ್ಯಕ್ಷನಾದ ಶಿವ 'ನೀವು ವರ ಕೇಳಿದ ಮುಹೂರ್ತದ ಪ್ರಕಾರ ಜ್ಯೇಷ್ಠಪತ್ನಿಯಲ್ಲಿ ನಿಮಗೆ ಅರವತ್ತು ಸಾವಿರ ಮಕ್ಕಳು - ಮಹಾದರ್ಪಿಷ್ಠರೂ, ಶೂರರೂ ಆಗಿರುತ್ತಾರೆ. ಆದರೆ ಅವರು ಪ್ರೌಢರಾಗುತ್ತಲೇ ನಾಶವಾಗುತ್ತಾರೆ. ಇನ್ನೊಬ್ಬಳಲ್ಲಿ ಒಬ್ಬ ಕುಲದೀಪಕನಾದ ಮಗ ಹುಟ್ಟುವನು' ಎಂದು ಹೇಳಿ ಅಂತರ್ಧಾನನಾದ[೨].

---

೧ ಮಹತಾ ಕಾಲ ಯೋಗೇನ ಪ್ರಕೃತಿಂ ಯಾಸ್ಯತೇಽರ್ಣವಃ।
ಜ್ಞಾತೀಂಶ್ಚ ಕಾರಣಂ ಕೃತ್ವಾ ಮಹಾರಾಜೋ ಭಗೀರಥಃ॥
ಪೂರಯಿಷ್ಯತಿ ತೋಯೌಘೈಃ ಸಮುದ್ರಂ ನಿಧಿಮಂಭಸಾಂ॥ - ವನಪರ್ವ(೧೦೬/೨)

೨ ಯಸ್ಮಿನ್ ವೃತೋ ಮುಹೂರ್ತೇಽಹಂ ತ್ವಯೇಹ ನೃಪತೇ ಪರಮ್।
ಷಷ್ಟಿಃ ಪುತ್ರಸಹಸ್ರಾಣಿ ಶೂರಾಃ ಪರಮದರ್ಪಿತಾಃ॥
ಏಕಸ್ಥಾಂ ಸಂಭವಿಷ್ಯಂತಿ ......................... ।
ತೇ ಚೈವ ಸರ್ವೇ ಸಹಿತಾಃ ಕ್ಷಯಂ ಯಾಸ್ಯಂತಿ ಪಾರ್ಥಿವ॥
ಏಕೋ ವಂಶಧರಃ ಶೂರ ಏಕಸ್ಯಾಂ ಸಂಭವಿಷ್ಯತಿ॥ - ವನಪರ್ವ (೧೦೬/೧೪-೧೬)

ಸಗರ ಮಹಾರಾಜ ರಾಣಿಯರೊಡನೆ ತನ್ನ ಮನೆಗೆ ಬಂದು ಸಂತೋಷಪಟ್ಟು ಇರುತ್ತಿರಲು ಅವರು ಮುಂದೆ ಗರ್ಭಿಣಿಯರಾದರು.

ವೈದರ್ಭಿಯು ಕಾಲಕ್ರಮದಲ್ಲಿ ಒಂದು ಸೋರೇಕಾಯಿ (ಈಸುಗುಂಬಳಕಾಯಿ-ಅಲಾಬು)ಯನ್ನು ಹೆತ್ತಳು. ಶೈಬ್ಯಳು ದೇವರೂಪಿಯಾದ ಮಗುವನ್ನು ಹೆತ್ತಳು. ಬೇಸರಗೊಂಡ ರಾಜನು ಸೋರೇಕಾಯಿಯಯನ್ನು ವಿಸರ್ಜಿಸಲು ಚಿಂತಿಸುತ್ತಿರಲು ಆಕಾಶವಾಣಿ ನುಡಿಯಿತು.

'ರಾಜನ್! [1]ಸೋರೇಕಾಯಿ ರೂಪದ ಪುತ್ರರನ್ನು ತ್ಯಾಗ ಮಾಡುವ ಸಾಹಸ ಮಾಡಬೇಡ. ಅದನ್ನು ಪ್ರಯತ್ನಪೂರ್ವಕವಾಗಿ ರಕ್ಷಿಸು. ತುಪ್ಪತುಂಬಿದ ಪಾತ್ರೆಗಳಲ್ಲಿ ಸೋರೇಕಾಯಿಯಲ್ಲಿನ ಪ್ರತಿಬೀಜವನ್ನು ವಿಶಿಷ್ಟವಾದ ಉಷ್ಣತೆಯಲ್ಲಿ ರಕ್ಷಿಸು. ಅದರಿಂದ ೬೦೦೦೦ ಪುತ್ರರನ್ನು ಹೊಂದುವೆ. ಮಹದೇವರ ಮಾತನ್ನು ನಡೆಸು, ಅದಕ್ಕೆ ವಿರುದ್ಧ ಹೋಗಬೇಡ.'

ಸಗರನು ಆಕಾಶವಾಣಿಯ ಅಣತಿಯಂತೆ ಹಾಗೆಯೇ ಸೋರೇಕಾಯಿಯಲ್ಲಿನ ಗರ್ಭರೂಪದ ಬೀಜಗಳನ್ನು ತುಪ್ಪ ತುಂಬಿದ ೬೦೦೦೦ ಪಾತ್ರೆಗಳಲ್ಲಿ ರಕ್ಷಿಸಿದನು. ಅದಕ್ಕಾಗಿ ೬೦೦೦೦ ದಾಸಿಯರನ್ನು ನೇಮಿಸಿದ[2]. ತುಂಬಾ ಕಾಲವಾದ ಮೇಲೆ ಮಹಾಬಲಶಾಲಿಗಳಾದ ೬೦೦೦೦ ಪುತ್ರರು ಆ ಘಟಗಳಿಂದ ಎದ್ದುಬಂದರು. [3]ಅವರೆಲ್ಲ ರುದ್ರವರದಿಂದಾಗಿ ಅಪ್ರತಿಮ ತೇಜಸ್ವಿಗಳೂ, ಭಯಂಕರವೂ, ಕ್ರೂರಕರ್ಮಿಗಳೂ, ಆಕಾಶಗಾಮಿಗಳೂ ಆಗಿದ್ದರು. ಅವರೆಲ್ಲ ಒಂದಾಗಿ ದೇವತೆಗಳನ್ನೂ, ಗಂಧರ್ವರನ್ನೂ, ರಾಕ್ಷಸರನ್ನೂ ಎಲ್ಲ ಪ್ರಾಣಿಗಳನ್ನು ಪೀಡಿಸಲಾರಂಭಿಸಿದಾಗ, ದೇವತೆಗಳಿಂದ ಕೂಡಿಕೊಂಡು ಎಲ್ಲರೂ ಬ್ರಹ್ಮನನ್ನು ಇವರ ನಿಯಂತ್ರಣಕ್ಕಾಗಿ ಶರಣುಹೊಕ್ಕರು. ಅತಿಶೀಘ್ರದಲ್ಲಿ ಇವರೆಲ್ಲ ತಮ್ಮದೇ ಆದ ಅಪರಾಧದಿಂದ ನಾಶಹೊಂದುವರೆಂದು ಬ್ರಹ್ಮನು ದೇವತೆಗಳಿಗೆ ಅಭಯಕೊಟ್ಟನು.

ಮುಂದೆ ಸಗರರಾಜನು ಅಶ್ವಮೇಧಯಾಗ ಮಾಡಲು ದೀಕ್ಷಿತನಾದ. ೬೦೦೦೦ ಮಕ್ಕಳು ಯಜ್ಞಾಶ್ವದ ರಕ್ಷಣೆಗೆ ಭೂಪ್ರದಕ್ಷಿಣೆ ಮಾಡುತ್ತಾ ತೆರಳಿದರು. ಅಗಸ್ತ್ಯರಿಂದ ಖಾಲಿಯಾದ

---

೧ ರಾಜನ್ ಮಾಂ ಸಾಹಸಂ ಕಾರ್ಷೀಃ ಪುತ್ರಾನ್ನ ತ್ಯಕ್ತುಮರ್ಹಸಿ ।
ಅಲಾಬುಮಧ್ಯಾನ್ನಿಷ್ಕೃಷ್ಯ ಬೀಜಂ ಯತ್ನೇನ ಗೋಪ್ಯತಾಮ್ ॥
ಸೋಪಸ್ವೇದೇಷು ಪಾತ್ರೇಷು ಘೃತಪೂರ್ಣೇಷು ಭಾಗಶಃ ।
ಮಹಾದೇವೇನ ದಿಷ್ಟಂ ತೇ..... ಮಾತೇ ಬುದ್ಧಿರತೋಽನ್ಯಥಾ ॥ - ವನಪರ್ವ(೧೦೬/೨೧-೨೩)

೨ ತತಃ ಕಾಲೇನ ಮಹತಾ ಸಮುತ್ತಸ್ಥುರ್ಮಹಾಬಲಾಃ ॥ - ವನಪರ್ವ(೧೦೬/೩)

೩ ರುದ್ರಪ್ರಸಾದಾತ್ ..... ತೇ ಘೋರಾ ಕ್ರೂರಕರ್ಮಾಣಃ ಆಕಾಶಪರಿಸರ್ಪಿಣಃ ।
....... ತ್ರಿದಶಾಂಶ್ಚಾಪ್ಯಬಾಧಂತ ತಥಾ ಗಂಧರ್ವ ರಾಕ್ಷಸಾನ್ ।
ಬ್ರಹ್ಮಾಣಂ ಶರಣಂ ಜಗ್ಮುಃ । ..... ತಾನುವಾಚ .... ಸರ್ವಲೋಕಪಿತಾಮಹಃ ।
ನಾತಿದೀರ್ಘೇಣ ಕಾಲೇನ ಸಾಗರಾಣಾಂ ಕ್ಷಯೋ ಮಹಾನ್ । ಭವಿಷ್ಯತಿ ।
- ವನಪರ್ವ(೧೦೭/೩-೯)

ಸಮುದ್ರಪ್ರದೇಶಕ್ಕೆ ಹೋಗುತ್ತಲೇ ಅಶ್ವವು ಅದೃಶ್ಯವಾಯಿತು. ಅಶ್ವವು ಅಪಹರಿಸಲ್ಪಟ್ಟಿತೆಂದು ಭಾವಿಸಿದ ಮಕ್ಕಳು ಸಗರ ಮಹಾರಾಜನಿಗೆ ಕೂಡಲೇ ತಿಳಿಸಿದರು. ತಂದೆಯ ಆಜ್ಞೆಯಂತೆ ಎಲ್ಲ ದಿಕ್ಕುಗಳನ್ನು ಸುತ್ತಿದರೂ, ಎಲ್ಲೂ ಅವರಿಗೆ ಕುದುರೆ ಕಾಣಲಿಲ್ಲ, ಕುದುರೆ ಕಳ್ಳನೂ ಕಾಣಲಿಲ್ಲ. ತಂದೆಗೆ ಮತ್ತೇ ತಿಳಿಸಲಾಗಿ ಕೋಪೋದ್ರಿಕ್ತನಾದ ಸಗರನು ಅಶ್ವವಿಲ್ಲದೆ ವಾಪಸು ಬರಬೇಡಿ ಎಂದು ಆಜ್ಞೆ ಮಾಡಿದನು. ಅಂತೆಯೇ ಮತ್ತೆ ಕುದುರೆಗಾಗಿ ಅವರ ಹುಡುಕಾಟ ಆರಂಭವಾಯಿತು. ಅಶ್ವವು ಅದೃಶ್ಯವಾದ ಸಮುದ್ರದ ಕಡೆ ಬಂದರು. ಅಲ್ಲೊಂದು ಬಿಲ ನೋಡಿ, ಅದನ್ನು ಅಗೆಯುತ್ತಾ ಹೋದರು. ಅದರ ಅಗೆತದಿಂದ ಸಮುದ್ರಾಂತರಾಳದ ಸಾವಿರಾರು ಪ್ರಾಣಿಗಳು ಮಾತ್ರ ಹತವಾದವು, ಕುದುರೆ ಕಾಣಲಿಲ್ಲ. ಕಾಲ ಸವೆಯುತ್ತಾ ಹೋಯಿತು; ಅಗೆದು ಅಗೆದು ಕೊನೆಗೆ ಪಾತಾಳಕ್ಕೆ ಹೋದರು. ಅಲ್ಲಿ ಮಹಾತೇಜಸ್ವಿಯಾದ ಮಹಾತ್ಮನೊಬ್ಬನನ್ನೂ, ಅಲ್ಲಿಯೇ ಸುತ್ತಾಡುತ್ತಿದ್ದ ಕುದುರೆಯನ್ನೂ ನೋಡಿ, ಆ ಮಹಾತ್ಮನೇ ಚೋರನೆಂದು ಭಾವಿಸಿ, ಅವನ ಮೇಲೆ ಏರಿಹೋದರು. [೧]ಆ ಮಹಾತ್ಮ ಬೇರಾರು ಆಗಿರದೆ ವಾಸುದೇವನೆಂದು ಕರೆಯಲ್ಪಡುವ ಕಪಿಲರೂಪಿ ಪರಮಾತ್ಮನೇ ಆಗಿದ್ದ ಎನ್ನುವುದು ಅವರಿಗೆ ತಿಳಿಯಲಿಲ್ಲ. ಅಂತೆಯೇ ಕಪಿಲನ ಮೇಲೆ ಏರಿ ಹೋದ ಈ ಮಕ್ಕಳು ಆತನ ಕೆಂಗಣ್ಣಿಗೆ ಗುರಿಯಾಗಿ ಸುಟ್ಟು ಭಸ್ಮರಾದರು.

ಮಕ್ಕಳ ಮರಣದ ವಾರ್ತೆಯನ್ನು ಸಗರ ಮಹಾರಾಜನಿಗೆ ನಾರದರು ತಿಳಿಸಿದರು. ರುದ್ರದೇವರ ಮಾತನ್ನು ನೆನೆದ ಸಗರ ಮಹಾರಾಜನು ಮಕ್ಕಳ ಮರಣದಿಂದ ಒಂದು ಮುಹೂರ್ತಕಾಲ ದುಃಖಿತನಾದ. ರುದ್ರದೇವರ ಮಾತು ಸತ್ಯವಾಯಿತು ಎಂದು ಭಾವಿಸಿದ ರಾಜ.

ನಂತರ **ಸಗರ** ತನ್ನ ಮೊಮ್ಮಗನಾದ **ಅಂಶುಮಂತ**ನನ್ನು (ಶಿಬಿ ಪುತ್ರಿ ಶೈಬ್ಯಳಲ್ಲಿ ಜನಿಸಿದ **ಅಸಮಂಜಸ**ನ ಮಗ) ಕರೆದು ಯಜ್ಞಾಶ್ವವನ್ನು ಕಪಿಲರಿಂದ ಪಡೆದು ಬರಲು ತಿಳಿಸಿದ.

ಅಸಮಂಜಸನೆಂಬ ಮಗನೂ ಕೂಡಾ ಹಿಂದೆಯೇ ರಾಜ್ಯದಿಂದ ಗಡಿಪಾರು ಮಾಡಲ್ಪಟ್ಟಿದ್ದ. ಕಾರಣ ಅವನು ಚಿಕ್ಕವನಾಗಿದ್ದಾಗಲೇ ರಾಜ್ಯದಲ್ಲಿ ಚಿಕ್ಕಮಕ್ಕಳನ್ನು ಕುತ್ತಿಗೆ ಹಿಸುಕಿ ನದಿಯಲ್ಲಿ ಮುಳುಗಿಸಿ ಕೊಲ್ಲುತ್ತಾ ಆಟವಾಡುತ್ತಿದ್ದ. ಇದರಿಂದ ಬೇಸತ್ತ ಪ್ರಜೆಗಳ ದೂರಿನ ಮೇರೆಗೆ ಸಗರನು ಅಸಮಂಜಸನನ್ನು ದೇಶದಿಂದ ಹೊರಹಾಕಿಸಿದ. ಆದ್ದರಿಂದ ಅವನ ಮಗನಾದ **ಅಂಶುಮಂತನ (ಅಂಶುಮಾನ್)** ಮೇಲೆ ಸಗರನ ಯಜ್ಞಾಶ್ವವನ್ನು ಪಾತಾಳದಿಂದ ತರುವ ಜವಾಬ್ದಾರಿ ಬಿದ್ದಿತ್ತು. ತಾತನ ಆದೇಶದ ಮೇರೆಗೆ ಅಂಶುಮಂತನು ಪಾತಾಳಕ್ಕೆ ಹೋಗಿ

---

೧ ವಾಸುದೇವೇತಿ ಯಂ ಪ್ರಾಹುಃ ಕಪಿಲಂ ಮುನಿ ಪುಂಗವಮ್ ।
ದದಾಹ ಸಮಹಾತೇಜಾ ಮಂದಬುದ್ಧೀನ್ ಸ ಸಾಗರಾನ್ ॥ - ವನಪರ್ವ(೧೦೭/೩೨,೩೩)

ಕಪಿಲರೂಪಿ ಭಗವಂತನನ್ನು ನಮಿಸಿ, ಆತನ ಅನುಗ್ರಹ ಸಂಪಾದಿಸಿ ವರಗಳನ್ನು [1]ಪಡೆದನು. ಅಶ್ವವನ್ನು ವಾಪಸು ತಂದು ತಾತನಿಗೆ ಒಪ್ಪಿಸಿ, ತಾತನ ಅನುಗ್ರಹವನ್ನೂ ಸಂಪಾದಿಸಿದನು:

**ಅಂಶುಮಂತನು ಕಪಿಲರನ್ನು ಕೇಳಿದ ವರಗಳು -**

೧. ಯಜ್ಞೀಯ ಅಶ್ವವನ್ನು ಅನುಗ್ರಹಿಸುವುದು; ೨. ತನ್ನ ಪಿತೃಗಳು ಪವಿತ್ರರಾಗಬೇಕು.

**ಕಪಿಲರು ಕೊಟ್ಟ ವರಗಳು -**

೧. ನಿನ್ನ ಪ್ರಭಾವದಿಂದ ಸಗರರು (೬೦೦೦೦) ಸ್ವರ್ಗಕ್ಕೆ ಹೋಗುವರು. ನಿನ್ನ ಮೊಮ್ಮಗ ಭಗೀರಥನು ಸ್ವರ್ಗದಿಂದ ಗಂಗೆಯನ್ನು ತಂದು ಪಿತೃಗಳ ಮೇಲೆ ಹರಿಸಿ, ಅವರನ್ನು ಪಾವನಗೊಳಿಸುವನು. ಭಗೀರಥನು ರುದ್ರದೇವರನ್ನು ಪ್ರೀತಿಪಡಿಸಿ, ಗಂಗೆಯನ್ನು ಭೂಮಿಯಿಂದ ಪಾತಾಳಕ್ಕೆ ತಂದು ಪಿತೃಗಳ ಸದ್ಗತಿಗೆ ಕಾರಣನಾಗುತ್ತಾನೆ.

೨. ನಿನ್ನ ತಾತನ ಯಾಜ್ಞೀಯ ಕುದುರೆಯನ್ನು ಸ್ವೀಕರಿಸು.

ಮೊಮ್ಮಗನ ಸೇವೆಯಿಂದ ತಾತ ಸಗರ ತೃಪ್ತನಾದ. ಪುತ್ರಮರಣ ದುಃಖವನ್ನು ಮರೆತ. ಬಹುಕಾಲ ರಾಜ್ಯವಾಳಿ ಸಗರ ಮೊಮ್ಮಗನಿಗೆ ರಾಜ್ಯಭಾರ ವಹಿಸಿ ಸ್ವರ್ಗಕ್ಕೆ ಹೋಗುವನು.

ಅಂಶುಮಂತನೂ ತಾತನಂತೆ ರಾಜ್ಯವಾಳಿ ತನ್ನ ಮಗನಾದ ದಿಲೀಪನಿಗೆ ರಾಜ್ಯಭಾರ ವಹಿಸಿದ. ದಿಲೀಪನು ತನ್ನ ಮುತ್ತಾತರ ಸಲುವಾಗಿ ಗಂಗೆ ತರಲು ಪ್ರಯತ್ನಿಸಿದರೂ ಸಾಧ್ಯವಾಗದೇ ತಪಿಸಿದ. ಅವನ ಮಗ ಭಗೀರಥನಿಗೆ ರಾಜ್ಯಭಾರ ವಹಿಸಿದ ದಿಲೀಪನು ವನಕ್ಕೆ ತಪಸ್ಸಿಗೆ ಹೋದನು. ಕಾಲಕ್ರಮೇಣ ಆತನೂ ಸ್ವರ್ಗಕ್ಕೆ ಬಿಜಯಗೈದನು.

ಭಗೀರಥ ಮಹಾರಾಜನು ಸಕಲ ಪ್ರಜೆಗಳ ಮನೋನಯನಗಳಿಗೆ ಆನಂದಕರನಾಗಿದ್ದನು. ತನ್ನ ಪಿತೃಗಳಿಗೆ ಇದುವರೆಗೂ ಸ್ವರ್ಗತಿ ಆಗಿಲ್ಲದಿರುವ ವಿಷಯ ಹಾಗೂ ಕಪಿಲ ಭಗವಂತನಿಂದ ಅವರು ಹತರಾದ ವಿಷಯವನ್ನು ಕೇಳಿದ. ದುಃಖಿತನಾದ ರಾಜ್ಯಪಾಲನೆಗಿಂತ ತಕ್ಷಣದ ಕರ್ತವ್ಯ ಪಿತೃಗಳಿಗೆ ಸದ್ಗತಿಗಾಗಿ ಪ್ರಯತ್ನಿಸುವುದೆಂದು ಭಾವಿಸಿದ ಭಗೀರಥನು ರಾಜ್ಯಾಡಳಿತದ ಹೊಣೆಯನ್ನು ಸಚಿವರಿಗೆ ವಹಿಸಿ ಸುಂದರವಾದ ಹಿಮಾಲಯ ತಪ್ಪಲಲ್ಲಿ ಗಂಗಾರಾಧನೆಗೆ ತೆರಳಿದನು. ಹಿಮಾಲಯ ಪರ್ವತ ಒಮ್ಮೆ ಬಂಗಾರದಂತೆ, ಒಮ್ಮೆ ಬೆಳ್ಳಿಯಂತೆ, ಮತ್ತೊಮ್ಮೆ ಅಂಜನದ ಗಾಳಿಯಂತೆ ಕಂಗೊಳಿಸುತ್ತಿತ್ತು (ಸೂರ್ಯನ ಕಿರಣಗಳು ಪರ್ವತದ ಮೇಲೆ ವಿವಿಧ ಸಮಯಗಳಲ್ಲಿ (ಬೆಳಿಗ್ಗೆ ಮಧ್ಯಾಹ್ನ ಸಾಯಂಕಾಲ) ಬೀಳುವುದರ ಆಧಾರದ ಮೇಲೆ ಅದರ ಬಣ್ಣ ಬದಲಾಗುತ್ತಿರುವುದ ಇಂದೂ ನೋಡಬಹುದಾಗಿದೆ). ಒಂದು ಸಾವಿರ ವರ್ಷಗಳವರೆಗೆ

---

೧ ತವಚೈವ ಪ್ರಭಾವೇಣ ಸ್ವರ್ಗಂ ಯಾಸ್ಯಂತಿ ಸಾಗರಾಃ।
ಪೌತ್ರಶ್ಚತೇ ತ್ರಿಪಥಗಾಂ ತ್ರಿದಿವಾದಾನಯಿಷ್ಯತಿ ॥
ಹಯಂ ನಯಸ್ವ ಭದ್ರಂ ತೇ ಯಜ್ಞೀಯಂ ನರಪುಂಗವ ॥ - ವನಪರ್ವ(೧೦೭/೫೬,೫೭)

ಕೇವಲ ಹಣ್ಣು, ಗಡ್ಡೆ-ಗೆಣಸು, ನೀರುಗಳನ್ನು ಮಿತವಾಗಿ ಸೇವಿಸಿ ಘೋರ ತಪಸ್ಸನ್ನು ಮಾಡಿದ ಭಗೀರಥನಿಗೆ ಗಂಗೆ ಪ್ರತ್ಯಕ್ಷಳಾದಳು. ಬೇಕಾದ ವರ ಬೇಡೆಂದು ಭಗೀರಥನಿಗೆ ಹೇಳಿದಳು.

ಆಗ ಭಗೀರಥನು 'ಅಮ್ಮ! ನಮ್ಮ ಪೂರ್ವಜರಾದ ೬೦೦೦೦ ಜನ ಸಗರನ ಮಕ್ಕಳು ಕಪಿಲ ಭಗವಂತನಿಂದ ಹತರಾಗಿ ಸ್ವರ್ಗಕ್ಕೆ ಇನ್ನೂ ಹೋಗಿಲ್ಲ. ನಿನ್ನ ಜಲದಿಂದ ಅವರ ಭಸ್ಮದ ಮೇಲೆ ಅಭಿಷೇಕವಾಗದ ಹೊರತು ಅವರಿಗೆ ಸ್ವರ್ಗವಿಲ್ಲ. ಆದ್ದರಿಂದ ಅವರಿಗೆ ಸ್ವರ್ಗವಾಗುವುದಕ್ಕಾಗಿ ನೀನು ಅವರ ಮೇಲೆ ಹರಿದು, ಅವರನ್ನು ಪವಿತ್ರರನ್ನಾಗಿ ಮಾಡೆಂದು ಯಾಚಿಸುತ್ತೇನೆ' ಎಂದನು[೧].

ಭಗೀರಥನ ಪ್ರಾರ್ಥನೆಯನ್ನು ಮನ್ನಿಸಿದ ಗಂಗೆ ತಾನು ಆಕಾಶದಿಂದ ಬೀಳುವ ತನ್ನ ವೇಗವನ್ನು ತಡೆಯಲು ಶಂಕರನ ಹೊರತು ಬೇರಾರೂ ಸಮರ್ಥರಲ್ಲ. ಆದ್ದರಿಂದ ಆತನನ್ನು ತಪಸ್ಸಿನಿಂದ ಒಲಿಸಲು ತಿಳಿಸಿದಳು. ಅದರಂತೆ ಭಗೀರಥನು ಶಿವನನ್ನು ಪಿತೃಸ್ವರ್ಗಪ್ರಾಪ್ತಿಗಾಗಿ ತಪಸ್ಸಿನಿಂದ ಒಲಿಸಿ, ಆಕಾಶದಿಂದ ಬರುವ ಗಂಗೆಯನ್ನು ಧರಿಸಲು ವರವನ್ನು ಪಡೆದನು.

ನಂತರ ಗಂಗೆಯು ಆಕಾಶದಿಂದ ಧರೆಗೆ ಧುಮುಕುವ ದೃಶ್ಯವನ್ನು ದೇವ, ಗಂಧರ್ವ, ಋಷಿಗಳು ನೋಡುತ್ತಿರುವಾಗಲೇ ಶಿವನು ಗಂಗೆಯನ್ನು ತನ್ನ ಜಟೆಯಲ್ಲಿ ಧರಿಸಿದನು. ಮುತ್ತಿನ ಮಾಲೆಯಂತೆ ತನ್ನ ಹಣೆಯ ಮೇಲೆ ಬಿದ್ದ ಗಂಗೆಯನ್ನು ಶಿವನು ಭೂಮಿಯ ಮೇಲೆ ಭಗೀರಥನ ಅಪೇಕ್ಷೆಯಂತೆ ಮೂರು ಭಾಗವಾಗಿ ಹರಿಸಿದ. ಗಂಗೆಯು ಹಿಮವತ್ಪರ್ವತದ ಶೃಂಗಗಳಿಂದ ನಾದ ಮಾಡುತ್ತ ಧರೆಗಿಳಿದು ಸಾಗರ ಸೇರಿ, ಅದನ್ನು ತುಂಬಿಸಿದಳು. ನಂತರ ಸಗರ ಪುತ್ರರ ಶರೀರಗಳಿರುವ ಕಡೆ ಸಾಗಿ ಅವರನ್ನು ಪವಿತ್ರಗೊಳಿಸಿ ಸ್ವರ್ಗಯೋಗ್ಯರನ್ನಾಗಿಸಿದಳು. ಆಗ ಗಂಗಾಧರ ದೇವತೆಗಳೊಡನೆ ಕೈಲಾಸಕ್ಕೆ ನಡೆದ:

**ಸ ರಾಜ್ಯಂ ಸಚಿವೇ ನ್ಯಸ್ಯ ......................**
**ಜಗಾಮ ಹಿಮವತ್ಪಾರ್ಶ್ವಂ ತಪಸ್ತಪ್ತುಂ ನರೇಶ್ವರ।**
**ಆರಿರಾಧಯಿಷುರ್ಗಂಗಾಂ ತಪಸಾ .... ಹಿಮವಂತಂ ನಗೋತ್ತಮಮ್।**
**ಕ್ವಚಿತ್ಕನಕಸಂಕಾಶಂ ಕ್ವಚಿತ್ ರಜತಸನ್ನಿಭಮ್।**
**ಕ್ವಚಿದಂಜನಪುಂಜಾಭಂ ಹಿಮವಂತಮುಪಾಗತಮ್।**
**ಫಲಮೂಲಾಂಬು ಸಂಭಕ್ಷಃ ಸಹಸ್ರ ಪರಿವತ್ಸರಾನ್।**
**ಸಂವತ್ಸರಸಹಸ್ರೇಷು .... ದರ್ಶಯಾಮಾಸ ತಂ ಗಂಗಾ...... ॥**

**- ವನಪರ್ವ(೧೦೮/೧,೩,೪,೧೨-೧೪)**

**ಸ್ವರ್ಗಂ ನಯ ಮಹಾಭಾಗೇ ಮತ್ಪಿತೃನ್ ಸಗರಾತ್ಮಜಾನ್ ॥**

**- ವನ.(೧೦೮/೨೦)**

---

೧ ಸ ತು ರಾಜಾ... ಬಭೂವ ಸರ್ವಲೋಕಸ್ಯ ಮನೋನಯನನಂದನಃ।

ನಂತರ ಭಗೀರಥನು ಪಿತೃಗಳಿಗೆ ಉದಕತರ್ಪಣ ಕೊಟ್ಟು ಪೂರ್ಣಮನೋರಥನಾದನು. ಗಂಗೆಯನ್ನು ತನ್ನ ಮಗಳೆಂದೇ ಭಾವಿಸಿದನು. ಭಗೀರಥನ ಸಲುವಾಗಿ ಬಂದ ಗಂಗೆ ಭಾಗೀರಥೀ ಎನಿಸಿದಳು.

ಹೀಗೆ ಅಗಸ್ತ್ಯರು ಕುಡಿದು ಖಾಲಿ ಮಾಡಿದ್ದ ಸಮುದ್ರ ಭಗೀರಥ ಪ್ರಯತ್ನದಿಂದಾಗಿ ಮತ್ತೆ ತುಂಬಿತು. ಸಗರಪುತ್ರರು ಸ್ವರ್ಗ ಪಡೆದರು. **ಭಗೀರಥ ಸಾರ್ಥಕ ಸಾಗರನಾದ.**

*****

# ೩೩. ಋಷ್ಯಶೃಂಗೋಪಾಖ್ಯಾನ

ಪಾಂಡವರು ಲೋಮಶ ಋಷಿಗಳ ಜೊತೆಗೆ ತೀರ್ಥಯಾತ್ರಾಕ್ರಮದಲ್ಲಿ ಮುಂದೆ ನಂದಾ, ಅಪರನಂದಾ ನದಿಗಳನ್ನೂ, ಹೇಮಕೂಟ(ಋಷಭ)ವೆಂಬ ಪರ್ವತವನ್ನೂ ಸಂದರ್ಶಿಸಿ ತೀರ್ಥಸ್ನಾನಗಳನ್ನು ಮಾಡುತ್ತಾ ಕೌಶಕೀ ನದಿದರ್ಶನ ಪಡೆದರು. ಈ ನದಿಯ ತೀರದಲ್ಲಿ ವಿಶ್ವಾಮಿತ್ರರ ದಿವ್ಯಾಶ್ರಮ. ಇನ್ನೊಂದೆಡೆ ಕಶ್ಯಪವಂಶದ ವಿಭಾಂಡಕ ಋಷಿಗಳ ಆಶ್ರಮವನ್ನೂ ಲೋಮಶರು ತೋರಿಸಿದರು. ಈ ವಿಭಾಂಡಕ ಋಷಿಗಳ ಮಗನೇ ಋಷ್ಯಶೃಂಗ. ಈತನ ತಪಃಪ್ರಭಾವದಿಂದ ಅಂಗದೇಶ ರಾಜನಾದ ಲೋಮಪಾದ, ಅನಾವೃಷ್ಟಿಪೀಡಿತ ತನ್ನ ರಾಜ್ಯದಲ್ಲಿ ಇಂದ್ರದೇವರಿಂದ ಮಳೆ ಪಡೆದು ಆತನ ದೇಶ ಸಮೃದ್ಧವಾಯಿತೆಂದು ಲೋಮಶರು ಹೇಳಲು, ಅದನ್ನು ವಿವರವಾಗಿ ತಿಳಿಸಲು ಧರ್ಮರಾಜನು ಕೋರಿದನು.

ಆಗ ಧರ್ಮರಾಜನನ್ನು ಕುರಿತು ಲೋಮಶರು ನುಡಿದರು. ಕಶ್ಯಪವಂಶದ ವಿಭಾಂಡಕ ಋಷಿಗಳು ಸದಾ ತಪೋನಿರತರು. ತಪಸ್ಸಿನಿಂದ ಶ್ರಾಂತರಾದ ಅವರು ಒಮ್ಮೆ ಸರೋವರ ಒಂದರಲ್ಲಿದ್ದಾಗ ಊರ್ವಶೀ ಎಂಬ ಅಪ್ಸರೆಯ ಛಾಯೆಯನ್ನು ನೀರಿನಲ್ಲಿ ನೋಡಿದರು. ಪರಿಣಾಮ ಅವರ ರೇತಃಸ್ಖಲನವಾಗಿ ನೀರಿನಲ್ಲಿ ಬಿದ್ದಿತು. ಆಗ ಅದೇ ಸರೋವರದಲ್ಲಿ ನೀರು ಕುಡಿಯುತ್ತಿದ್ದ ಜಿಂಕೆಯು ಆ ರೇತಸ್ಸನ್ನು ನೀರಿನೊಡನೆ ನುಂಗಿತು. ಇದರಿಂದ ಜಿಂಕೆ ಗರ್ಭಿಣಿಯೂ ಆಯಿತು[೧].

ಈ ಜಿಂಕೆ ಹಿಂದ ಒಬ್ಬ ದೇವಕನ್ಯೆ. ಈಕೆಯ ಯಾವುದೋ ಅಪರಾಧಕ್ಕಾಗಿ ಬ್ರಹ್ಮನ ಶಾಪದಿಂದಾಗಿ ಈಕೆಗೆ ಜಿಂಕೆಯ ಜನ್ಮ ಬಂದಿತು. ಮುಂದೆ ಗರ್ಭಿಣಿಯಾಗಿ ಮುನಿಯನ್ನು ಹೆತ್ತು ಮತ್ತೆ ದೇವತ್ವ ಹೊಂದುವ ವಿಶಾಪವೂ ಆಕೆಗೆ ದೊರೆತಿತ್ತು. ಗರ್ಭಿಣಿ ಜಿಂಕೆ ಋಷಿಯನ್ನು ಹೆತ್ತಿತು. ಅವನೇ ಋಷ್ಯಶೃಂಗ[೨].

ಈ ಮಹಾಋಷಿ ಹುಟ್ಟಿದಾಗಲೇ ಆತನ ತಲೆಯ ಮೇಲೊಂದು ಕೋಡು ಇತ್ತು. ಆದ್ದರಿಂದ ಋಷಿಯ ಹೆಸರನ್ನು **ಋಷ್ಯಶೃಂಗ** ಎಂದಿಡಲಾಗಿತ್ತು.

---

೧ ವಿಭಾಂಡಕಸ್ಯ ವಿಪ್ರರ್ಷೇಃ ತಪಸಾ ಭಾವಿತಾತ್ಮನಃ।
ಮಹಾಹ್ರದಂ ಸಮಾಸಾದ್ಯ ................
ದೀರ್ಘಕಾಲಂ ಪರಿಶ್ರಾಂತಃ ................
ತಸ್ಯರೇತಃ ಪ್ರಚಸ್ಕಂದ ದೃಷ್ಟ್ವಾಪ್ಸರಸಮುರ್ವಶೀಮ್ ।
ಅಪ್ಸೂಪಸ್ಪೃಶತೋ ರಾಜನ್ ಮೃಗೀ ತಚ್ಚಾಪಿಬತ್ ತದಾ।
ಸಹ ತೋಯೇನ ತೃಷಿತಾ ಗರ್ಭಿಣೀ ಚಾಭವತ್ತತಃ। – ವನಪರ್ವ(೧೧೦/೩೨-೩೬)

೨ ಸಾಪುರೋಕ್ತಾ ಭಗವತಾ ಬ್ರಹ್ಮಣಾ ಲೋಕಕರ್ತೃಣಾ।
ದೇವಕನ್ಯಾ ಮೃಗೀ ಭೂತ್ವಾ ಮುನಿಂ ಸೂಯ ವಿಮೋಕ್ಷ್ಯಸೇ।
ತಸ್ಯಾಂ ಮೃಗ್ಯಾಂ ಸಮಭವತ್ ತಸ್ಯ ಪುತ್ರೋ ಮಹಾನೃಷಿಃ॥ – ವನಪರ್ವ(೧೧೦/೩೬-೩೮)

ಋಷ್ಯಶೃಂಗನು ತನ್ನ ತಂದೆಯನ್ನು ಬಿಟ್ಟು ಬೇರಾರನ್ನೂ ನೋಡೇ ಇರಲಿಲ್ಲ. ಆದ್ದರಿಂದ ಆತನ ಮನಸ್ಸು ಸದಾ ಬ್ರಹ್ಮಚರ್ಯರತವಾಗಿತ್ತು:

> ತಸ್ಯರ್ಷೇಃ ಶೃಂಗಂ ಶಿರಸಿ ರಾಜನ್ನಾಸೀನ್ಮಹಾತ್ಮನಃ।
> ತೇನರ್ಷ್ಯಶೃಂಗ ಇತ್ಯೇವ ತದಾ ಸ ಪ್ರಥಿತೋಽಭವತ್।
> ನ ತೇನ ದೃಷ್ಟಪೂರ್ವೋಽನ್ಯಃ ಪಿತರನ್ಯತ್ರ ಮಾನುಷಃ।
> ತಸ್ಮಾತ್ತಸ್ಯ ಮನೋ ನಿತ್ಯಂ ಬ್ರಹ್ಮಚರ್ಯೇಽಭವನ್ನೃಪ॥

-ವನಪರ್ವ(೧೧೦/೩೯,೪೦)

ಇದೇ ಕಾಲದಲ್ಲಿ ಅಂಗದೇಶದ ರಾಜನಾದ ಲೋಮಪಾದನು ಬ್ರಾಹ್ಮಣನೊಬ್ಬನಿಗೆ ಬೇಕಾದುದನ್ನು ದಾನ ಮಾಡುವುದಾಗಿ ಒಪ್ಪಿ ನಂತರ ನಾನು ವಾಗ್ದಾನ ಮಾಡಿಯೇ ಇಲ್ಲವೆಂದು ಹೇಳಿ ಬರಿಗೈಲಿ ಕಳುಹಿಸಿದನೆಂದು ಜನರು ಆಡಿಕೊಂಡಿದ್ದರು. ಪರಿಣಾಮವಾಗಿ ಆ ದೇಶದ ಬ್ರಾಹ್ಮಣರು ಸಿಟ್ಟಾಗಿ ದೇಶವನ್ನೇ ಬಿಟ್ಟರು. ದೇಶದಲ್ಲಿ ನಿತ್ಯನೈಮಿತ್ತಿಕ ಕಾರ್ಯಗಳು, ಯಜ್ಞಾದಿಗಳು ನಿಂತವು. ದೇವೇಂದ್ರನೂ ಈ ಪುರೋಹಿತಾಪಚಾರದಿಂದಾಗಿ ಆ ದೇಶಕ್ಕೆ ಮಳೆಗರೆಯುವುದನ್ನೇ ನಿಲ್ಲಿಸಿದ. ಆಗ ರಾಜನು ಬ್ರಾಹ್ಮಣರನ್ನು ಇದಕ್ಕಾಗಿ ಪರಿಹಾರ ಕೇಳಿದ. ಬ್ರಾಹ್ಮಣರು ದೇಶತ್ಯಾಗ ಮಾಡಿದ ಬ್ರಾಹ್ಮಣರನ್ನು ಮತ್ತೆ ಕರೆಯಿಸಿ ಸಾಂತ್ವನಗೊಳಿಸಲು ತಿಳಿಸಿದರು. ಒಬ್ಬ ಮುನಿಯು ಋಷ್ಯಶೃಂಗವನ್ನು ಕರೆಯಿಸಿದಲ್ಲಿ ಇಂದ್ರ ಮತ್ತೇ ದೇಶಕ್ಕೆ ಮಳೆಗರೆಯುತ್ತಾನೆಂದು ಹೇಳಿದ. ಆ ಪ್ರಕಾರ ಪಶ್ಚಾತ್ತಾಪ ಪಟ್ಟ ರಾಜನು ಬ್ರಾಹ್ಮಣರನ್ನು ಸ್ವತಃ ಭೇಟಿಯಾಗಿ ಅವರನ್ನು ಸಮಾಧಾನ ಮಾಡಿ ರಾಜ್ಯಕ್ಕೆ ಮತ್ತೆ ಕರೆತಂದ. ಬ್ರಾಹ್ಮಣರೂ ಆ ದೇಶದ ಪ್ರಜೆಗಳೂ ಇದರಿಂದ ಸಂತುಷ್ಟರಾದರು. ನಿತ್ಯನೈಮಿತ್ತಿಕ ಕಾರ್ಯಗಳು ಪುನರರಾಂಭಗೊಂಡವು.

ಋಷ್ಯಶೃಂಗನನ್ನು ಕರೆಸಲು ರಾಜನು ತನ್ನ ಅಮಾತ್ಯರೊಡನೆ ಚರ್ಚಿಸಿ ತನ್ನ ದೇಶದ ವೇಶ್ಯೆಯರನ್ನು ಕರೆಸಿ ತಂದೆಯನ್ನು ಹೊರತುಪಡಿಸಿ ಯಾರನ್ನೂ ನೋಡದಿರುವ ಋಷ್ಯಶೃಂಗನನ್ನು ಹೇಗಾದರೂ ಕರೆದುಕೊಂಡು ಬನ್ನಿ ಎಂದು ಕೋರಿದ. ಅವರು ರಾಜಭಯ ಹಾಗೂ ಋಷಿಯ ಕೋಪ ಹಾಗೂ ಶಾಪಗಳಿಗೆ ಹೆದರಿ ಆಗದೆಂದರು. ಆದರೆ ಒಬ್ಬ ವೃದ್ಧ ವೇಶ್ಯೆ ಮಾತ್ರ ಈ ಕೆಲಸವನ್ನು ಒಪ್ಪಿಕೊಂಡಳು. ಈ ಕಾರ್ಯಕ್ಕೆ ತನಗೆ ಬೇಕಾದ ಸೌಕರ್ಯಗಳನ್ನು ಒದಗಿಸಲು ಬೇಡಿದಳು. ರಾಜನು ಆಕೆಗೆ ಬೇಕಾದ ಜನ, ಧನ ಹಾಗೂ ಇತರೆ ವಸ್ತುಗಳನ್ನು ಯಥೇಚ್ಛವಾಗಿ ಪೂರೈಸಿದ. ಆ ವೃದ್ಧ ವೇಶ್ಯೆ ಸುಂದರಿಯಾದ ಹಲವು ವೇಶ್ಯೆಯರನ್ನೂ, ಧನ, ರತ್ನ ಮುಂತಾದ ಪದಾರ್ಥಗಳೊಡನೆ ಋಷ್ಯಶೃಂಗ ತಪಸ್ವಿಯ ವನಕ್ಕೆ ತೆರಳಿದಳು.

ನಂತರ ಋಷ್ಯಶೃಂಗರ ಆಶ್ರಮದ ಹತ್ತಿರದ ನದಿಯಲ್ಲಿಯೇ ಒಂದು ಸುಂದರವಾದ ವಿಹಾರಯೋಗ್ಯವಾದ ನೌಕಾಶ್ರಮವನ್ನು ರಚಿಸಿದಳು. ನಂತರ ವಿಭಾಂಡಕರು ಹೊರಹೋಗುವುದನ್ನೇ ತನ್ನ ಚಾರರ ಮೂಲಕ ಕಾಯುತ್ತಾ ಅವರು ಹೊರಹೋದ

ನಂತರ ಋಷ್ಯಶೃಂಗರನ್ನು ನೋಡಲು ತನ್ನ ಮಗಳೂ ಹಾಗೂ ವೇಶ್ಯೆಯೂ ಆದ ಸುಂದರ ಯುವತಿಯನ್ನು ಆಶ್ರಮಕ್ಕೆ ಕಳಿಸಿದಳು.

ಆಶ್ರಮಕ್ಕೆ ಬಂದ ವೇಶ್ಯಾ ಯುವತಿ ತನ್ನ ಹಾವಭಾವ, ಒಯ್ಯಾರಗಳಿಂದ ಮುಗ್ಧ ಮನಸ್ಸಿನ ಜಗತ್ತನ್ನು ಅರಿಯದ ಋಷ್ಯಶೃಂಗನ ಬಳಿಗೆ ಬಂದು ಕುಶಲ ಪ್ರಶ್ನೆ ಮಾಡಲಾರಂಭಿಸಿದಳು.

'ಎಲೈ ಮುನಿಯೇ! ನೀವೆಲ್ಲ ಕುಶಲವೇ? ನಿಮಗೆ ಬೇಕಾದ ಕಂದಮೂಲ ಫಲಗಳು ಹೇರಳವಾಗಿ ಲಭ್ಯವಿದೆಯೇ? ನಿನ್ನನ್ನು ನೋಡಲು ಬಂದಿರುವೆ! ನಿಮ್ಮ ಜಪತಪಾದಿಗಳು ನಿರ್ವಿಘ್ನವಾಗಿ ಸಾಗಿವೆಯಷ್ಟೇ? ನಿಮ್ಮ ತಂದೆ ಸೌಖ್ಯವಷ್ಟೇ! ನಿಮ್ಮ ಸ್ವಾಧ್ಯಾಯ ಚೆನ್ನಾಗಿ ನಡೆದಿದೆಯೇ? ಋಷ್ಯಶೃಂಗ!'

ಇಂತಹ ಭಾರೀ ರೂಪರಾಶಿಯ ನವತರುಣಿಯನ್ನು ಎಂದೂ ನೋಡದ ಋಷ್ಯಶೃಂಗನು 'ನೀನೊಂದು ಮಹಾಜ್ಯೋತಿಯಂತೆ ತೋರುತ್ತಿರುವಿ! ನಿನ್ನನ್ನು ನಮಿಸುತ್ತೇನೆ. ಪಾದ್ಯ, ಅರ್ಘ್ಯ ಸ್ವೀಕರಿಸು. ಫಲಮೂಲಗಳನ್ನು ಸೇವಿಸು. ಆ ಕುಶಾಸನದ ಮೇಲೆ ಕೂರು. ಈ ಆಸನವು ತುಂಬಾ ಮೃದುವಾಗಿದೆ. ನಿನ್ನ ಆಶ್ರಮವೆಲ್ಲಿದೆ? ನೀನು ದೇವತೆಯಂತೆ ಕಾಣುತ್ತಿರುವೆ! ನೀನು ಆಚರಿಸುತ್ತಿರುವ ವ್ರತ ಯಾವುದು? ಎಂದನು.

ಇದಕ್ಕೆ ಉತ್ತರಿಸುತ್ತಾ ಆ ವೇಶ್ಯಾಕುಮಾರಿಯು 'ನನ್ನ ಆಶ್ರಮವು ಪರ್ವತದ ಹತ್ತಿರ ಇಲ್ಲಿಂದ ಮೂರುಯೋಜನ ದೂರದಲ್ಲಿದೆ. ನಾನು ಯಾರಿಂದಲೂ ಅಭಿವಾದನ ಮಾಡಿಸಿಕೊಳ್ಳಬಾರದೆಂಬ ವ್ರತದಲ್ಲಿದ್ದೇನೆ. ಅರ್ಘ್ಯಪಾದ್ಯಾದಿಗಳನ್ನು ಸ್ವೀಕರಿಸುವುದಿಲ್ಲ ನಾನೇ ತಮ್ಮನ್ನು ನಮಸ್ಕರಿಸಬೇಕು. ನಿಮ್ಮನ್ನು ಅಪ್ಪಿಕೊಳ್ಳಲು ಬಯಸುತ್ತೇನೆ' ಎಂದಳು. ಅದರೆ ಋಷ್ಯಶೃಂಗರು ಆಕೆಗೆ ಕರೂಷ, ಅಂಜೂರ ಮೊದಲಾದ ಹಣ್ಣುಗಳನ್ನು ಕೊಟ್ಟಳು. ಆಕೆ ಮಾತ್ರ ಅವೆಲ್ಲವನ್ನೂ ಬಿಟ್ಟು ಋಷಿಗಳಿಗೆ ತಾನು ತಂದ ಅನರ್ಹವಾದ ಭಕ್ಷ್ಯಗಳನ್ನು ತಿನ್ನಲು ಕೊಟ್ಟಳು. ಅದರೆ ಅವೆಲ್ಲವೂ ಸವಿಯಲು ರುಚಿಕರವಾಗಿದ್ದವು. ಅಲ್ಲದೆ ಋಷ್ಯಶೃಂಗನಿಗೆ ಸುಗಂಧಮಾಲ್ಯಗಳನ್ನು ಚಿತ್ರವಿಚಿತ್ರ ಉಡುಗೆಗಳನ್ನೂ ಪಾನೀಯಗಳನ್ನು ಕೊಡುತ್ತ, ಅವನೊಡನೆ ನಗುತ್ತಾ, ಕಲೆಯುತ್ತಾ ಕ್ರೀಡಿಸಿದಳು. ಚೆಂಡಾಟ ಮೊದಲಾದುವನ್ನು ಆಡುತ್ತಾ ಋಷ್ಯಶೃಂಗನ ಅಂಗಾಂಗಗಳನ್ನು ತನ್ನ ಅಂಗಾಂಗಗಳೊಡನೆ ಆಲಂಗಿಸಿದಳು. ಮುನಿಕುಮಾರ ಉದ್ರೇಕಗೊಂಡ, ಪ್ರಲೋಭಿತನಾದ. ಕಾಮವಿಕಾರಗಳು ಕಾಣಿಸಿದವು. ಮತ್ತೆ ಮತ್ತೆ ಆತನ ದೇಹವನ್ನು ಮರ್ದಿಸುತ್ತಾ ತನ್ನ ಆಶ್ರಮದಲ್ಲಿ ಅಗ್ನಿಹೋತ್ರ ನೆಪಹೇಳಿ ಮೆಲ್ಲಗೆ ಮರೆಯಾದಳು.

ಆಕೆ ಅಲ್ಲಿಂದ ಮರೆಯಾಗುತ್ತಲೇ ಇತ್ತ ಋಷ್ಯಶೃಂಗ ಮದನಮತ್ತನಾಗಿ ಹುಚ್ಚನಂತಾಗಿ ನಿಃಶ್ವಾಸ ಬೀರುತ್ತಾ ಆರ್ತನಾದ. ಸ್ವಲ್ಪಹೊತ್ತಿನಲ್ಲಿಯೇ ತಂದೆ ಆಶ್ರಮಕ್ಕೆ ಬಂದರು. ಎಂದಿನ ಭಾವನೆಗಳಿಲ್ಲದ, ವಿಪರೀತವಾಗಿ ವರ್ತಿಸುವ, ಎಲ್ಲೋ ಮನವಿರುವ ದೀನನಾದ ಮಗನನ್ನು ಕಂಡು, 'ಇಂದಿನ ಅಗ್ನಿಹೋತ್ರ ಕಾರ್ಯವಾಯಿತೇ? ಸಮಿತ್ತುಗಳನ್ನು ತಂದೆಯಾ?

ಅಗ್ನಿಹೋತ್ರಕ್ಕೆ ಬೇಕಾದ ಹೂವು, ಚಂದನಗಳನ್ನು ಶುದ್ಧ ಮಾಡಿ, ಹಾಲು ಕರೆಯಲು ಹಸುವನ್ನು ತರಲಿಲ್ಲವೇ? ಇಂದು ಏಕೆ ಹೀಗೆ ಚಿಂತಾಮಗ್ನನಾಗಿದ್ದೀ? ಇಂದು ನಮ್ಮ ಆಶ್ರಮಕ್ಕೆ ಯಾರು ಬಂದಿದ್ದರು' ಹೇಳೆಂದರು[೧].

ತಂದೆಯ ಮಾತಿಗೆ ಋಷ್ಯಶೃಂಗನು 'ಅಪ್ಪ! ನಮ್ಮ ಮನೆಗೆ ಬಂದ ತಪಸ್ವಿಯು, ಜಟಾಧಾರಿಯೂ, ಬ್ರಹ್ಮಚಾರಿಯೂ, ಬಂಗಾರದ ಮೈಬಣ್ಣದಿಂದಲೂ, ಸೂರ್ಯನಂತಹ ಪ್ರಕಾಶವುಳ್ಳ, ನೀಲಕೇಶವುಳ್ಳ, ಮನೋಹರವಾದ ಎರಡು ಕೇಶರಹಿತ ಮಾಂಸದ ಪಿಂಡಗಳುಳ್ಳ (ಸ್ತನವೆಂದು ಹೇಳದೆ), ಸುಂದರ ವಸ್ತ್ರ ಮೊದಲಾದ ಅಲಂಕಾರಗಳನ್ನು ಮಾಡಿಕೊಂಡ, ರೂಪಿಯಾಗಿದ್ದನು. ಅವನ ಕೋಗಿಲೆಯ ಕಂಠಧ್ವನಿಯನ್ನು ಕೇಳಿ ನನಗೆ ವಿರಹವ್ಯಥೆ ಉಂಟಾಗಿದೆ. ಒಟ್ಟಾರೆ ಆ ತಪಸ್ವಿಯು ಸರ್ವಾವಯವ ಸುಂದರನಾಗಿದ್ದ. ಅವನು ನನ್ನನ್ನು ಅಪ್ಪಿದ. ರುಚಿ ರುಚಿಯಾದ ಸ್ವಾದಭರಿತವಾದ ಫಲ, ಪಾನೀಯಗಳನ್ನು, ಭಕ್ಷ್ಯಗಳನ್ನು ಕೊಟ್ಟನು. ಅವನು ಕೊಟ್ಟ ಹಣ್ಣು ಹಂಪಲುಗಳು ನಾನು ಕೊಟ್ಟವುಗಳಿಗಿಂತ ರುಚಿಕರವಾಗಿದ್ದವು. ಇವೇ ಅವನು ನನ್ನ ಮೇಲೆ ಹಾಕಿದ ಸುಗಂಧ ಹೂವಿನ ಮಾಲೆಗಳು. ಅವನ ಹತ್ತಿರ ಸದಾ ಇರಬೇಕೆಂದು ನನ್ನ ಮನದ ಆಸೆ. ಅವನ ಬಳಿಗೆ ಹೋಗಲು ನಾನು ಇಚ್ಛಿಸುತ್ತೇನೆ' ಎಂದು ತನ್ನ ಭಾವನೆಗಳನ್ನು ತಂದೆಗೆ ಹೇಳಿಕೊಂಡನು (ಬಂದವರು ಹೆಣ್ಣು ಎಂದೂ ಆತನಿಗೆ ಗೊತ್ತಿರಲಿಲ್ಲ).

೧. ವೇಶ್ಯಾ ಯುವತಿಯ ಬಗ್ಗೆ ಋಷ್ಯಶೃಂಗನ ಭಾವನೆಗಳು–

**ಪೃಚ್ಛಾಮಿ ತ್ವಾಂ ಕ ಇಹಾದ್ಯಾಗತೋಽಭೂತ್ ॥ - (೧೧೧/೩೨)**
**ಇಹಾಗತೋ ಜಟಿಲೋ ಬ್ರಹ್ಮಚಾರೀ...**
**ಸ್ವತಃ ಸುರಾಣಾಮಿವ ಶೋಭಮಾನಃ ॥ - ವನಪರ್ವ(೧೧೨/೧)**
**ಆಶ್ಚರ್ಯರೂಪಾ ಪುನರಸ್ಯ ಕಂಠೇ ...**
**ದ್ವೌ ಚಾಸ್ಯ ಪಿಂಡಾವಧರೇಣ ಕಂಠಾ**
**ದಜಾತರೋಮೌ ಸುಮನೋಹರೌ ಚ ॥ - ವನಪರ್ವ(೧೧೨/೩)**
**ವಕ್ತ್ರಂ ಚ ತಸ್ಯಾದ್ಭುತದರ್ಶನೀಯಮ್ ।**
**ಪುಂಸ್ಕೋಕಿಲಸ್ಯೇವ ಚ ತಸ್ಯವಾಣೀ....**
**ತಾಂ ಶೃಣ್ವತೋ ಮೇ ವ್ಯಥಿತೋಽಂತರಾತ್ಮಾ ॥ - ವನಪರ್ವ(೧೧೨/೭)**

---

೧ ಸಾತಾನಿ ............ ಭಕ್ಷ್ಯಾಣ್ಯನರ್ಹಾಣಿ ದದೌ ತತೋಽಸ್ಯ । - (೧೧೧/೧೪)
......ಗಾತ್ರೈಶ್ಚ ಗಾತ್ರಾಣಿ ನಿಷೇವಮಾಣಾ ।
ಸಮಾಶ್ಲಿಷಚ್ಚಾಸಕೃದೃಷ್ಯಶೃಂಗಮ್ ॥ - (೧೧೧/೧೬)
ಪ್ರಲೋಭಯಾಮಾಸ ಸುತಂ ಮಹರ್ಷೇಃ ।
ತಸ್ಯಾಂ ಗತಾಯಾಂ ಮದನೇನ ಮತ್ತೋ ॥ - (೧೧೧/೧೯
ವಿಭಾಂಡಕ ಪುತ್ರಮುವಾಚ ದೀನಮ್ ॥ - (೧೧೧/೨೧)

ಇಚ್ಛಾಮಿ ತಸ್ಯಾಂತಿಕಮಾಶು ಗಂತುಮ್ ॥ - ವನಪರ್ವ(೧೧೨/೧೭)
ಚರ್ತುಂ ತಥೇಚ್ಛಾ ಹೃದಯೇ ಮಮಾಸಿ।
ದುನೋತಿ ಚಿತ್ತಂ ಯದಿ ತಂ ನ ಪಶ್ಯೇ ॥ - ವನಪರ್ವ(೧೧೨/೧೯)

೨. ಅದಕ್ಕೆ ವಿಭಾಂಡಕರು 'ಮಗನೇ! ನಮ್ಮ ತಪೋಭಂಗ ಮಾಡಲು ರಾಕ್ಷಸರು ಸುಂದರರೂಪಗಳನ್ನು ಧರಿಸಿ ಸಂಚರಿಸುತ್ತಿರುತ್ತಾರೆ. ಅವರ ಪ್ರಲೋಭನೆಗಳಿಗೆ ನಾವು ಒಳಗಾಗಬಾರದು. ನಮಗೆ ವಿಘ್ನಗಳನ್ನುಂಟು ಮಾಡಿ ಅವರು ಸಂತೋಷ ಪಡುತ್ತಾರೆ ಎಂದು ನುಡಿದರು. ಆಶ್ರಮಕ್ಕೆ ಯಾವುದೋ ಸ್ತ್ರೀ ಬಂದಿರಬೇಕು ಎಂದು ಭಾವಿಸಿದ ವಿಭಾಂಡಕರು ಆಕೆಯನ್ನು ಹುಡುಕಲು ಹೊರಟರು. ಮರುದಿನ ವನದಲ್ಲಿ ಸುತ್ತಿದರೂ ಆ ಯುವತಿ ಸಿಗಲಿಲ್ಲ. ನಂತರ ಆಶ್ರಮಕ್ಕೆ ವಾಪಸ್ಸು ಬಂದರು.

ವಿಭಾಂಡಕರು ಆ ಯುವತಿಯನ್ನು ಹುಡುಕಲು ಹೋದಾಗಲೇ ಆ ವೇಶ್ಯೆಯ ಪುತ್ರಿ ಮತ್ತೆ ಆಶ್ರಮಕ್ಕೆ ಬಂದಳು. ಆಕೆಯನ್ನು ನೋಡಿದ ಕೂಡಲೇ ಸಂಭ್ರಮಗೊಂಡ ಋಷ್ಯಶೃಂಗ ಆಕೆಯೊಡನೆ ತಾನೇ 'ನಿಮ್ಮ ಆಶ್ರಮಕ್ಕೆ ಹೋಗೋಣ' ಎನ್ನುತ್ತಾ ಹೊರಟನು. ಚಿತ್ರವಿಚಿತ್ರವಾದ ನೌಕಾಶ್ರಮಕ್ಕೆ ಬಂದು ಮುಂದೆ ನೇರವಾಗಿ ಅರಮನೆಯ ಆ ವೃದ್ಧ ವೇಶ್ಯೆಯು ರಾಜನ ಪುರಪ್ರವೇಶ ಮಾಡಿಸಿ ಅರಮನೆಯ ಅಂತಃಪುರಕ್ಕೆ ಕರೆದುಕೊಂಡು ಹೋಗಿ ರಾಜನಿಗೆ ಋಷ್ಯಶೃಂಗನನ್ನು ಒಪ್ಪಿಸಿದಳು. ಋಷ್ಯಶೃಂಗ ಪುರಪ್ರವೇಶ ಮಾಡುತ್ತಲೇ ಇಂದ್ರದೇವ ರಾಜ್ಯಕ್ಕೆ ಸಮೃದ್ಧ ಮಳೆ ಬರಿಸಿದ. ರಾಜನ ಆಸೆ ಈಡೇರಿತು. ರಾಜ ಲೋಮಪಾದನು ಋಷ್ಯಶೃಂಗರಿಗೆ ತನ್ನ ಮುದ್ದಾದ ಮಗಳು ಶಾಂತೆಯನ್ನು ಕೊಟ್ಟು ವಿವಾಹವನ್ನು ಮಾಡಿದನು.

ಇತ್ತ ವಿಭಾಂಡಕರು ಆಶ್ರಮಕ್ಕೆ ಬಂದಾಗ ಮಗನಿರಲಿಲ್ಲ. ಇದು ಆ ಯುವತಿಯ ಕೆಲಸವೇ, ಇದಕ್ಕೆ ಕಾರಣ ನೆರೆಯ ಅಂಗರಾಜ ಲೋಮಪಾದನೇ ಎಂದು ಭಾವಿಸಿ, ಕ್ರೋಧತಪ್ತರಾದ ವಿಭಾಂಡಕರು, ರಾಜನ ಪುರಕ್ಕೆ ನಡೆದರು. ಇದನ್ನೆಲ್ಲ ಊಹಿಸಿದ್ದ ರಾಜನು ರಾಜ್ಯ ಪ್ರವೇಶಿಸುವ ಋಷಿಗಳನ್ನು ಚೆನ್ನಾಗಿ ಸತ್ಕರಿಸಲು ತನ್ನ ಪ್ರಜೆಗಳಿಗೆ, ಗೋಪಾಲರಿಗೆ ಆದೇಶಿಸಿದ್ದ. ಪ್ರಜೆಗಳೂ ಕೂಡಾ ಹಸಿದು ಬಂದ ಋಷಿಗಳನ್ನು ಸತ್ಕರಿಸಿ 'ಇದೆಲ್ಲವೂ ನಿಮ್ಮ ಪುತ್ರ ಋಷ್ಯಶೃಂಗನದೇ. ನಾವೆಲ್ಲ ನಿಮ್ಮ ದಾಸರು, ನಿಮ್ಮ ಆಜ್ಞಾಧಾರಿಗಳು' ಎಂದೆಲ್ಲ ಕೊಂಡಾಡಿ ಸತ್ಕರಿಸಿದರು.

ಸಂತುಷ್ಟರಾದ ವಿಭಾಂಡಕರು ಅಂಗದೇಶಾಧಿರಾಜನ ಅರಮನೆಗೆ ಹೋಗಿ, ಅಲ್ಲಿ ಸ್ವರ್ಗದಲ್ಲಿನ ದೇವೇಂದ್ರನಂತಿರುವ ಮಗನನ್ನು ಕಂಡು ಮುದಗೊಂಡರು.

ಮಗನಿಗೆ ತಂದೆಯ ಉತ್ತರ -

೨. ರಕ್ಷಾಂಸಿ ಚೈತಾನಿ ಚರಂತಿ ಪುತ್ರ...
ವಿಘ್ನಂ ಸದಾ ತಪಸಶ್ಚಿಂತ ಯಂತಿ ॥ - ವನಪರ್ವ(೧೧೩/೧)

**ರಕ್ಷಾಂಸಿ ತಾನೀತಿ ನಿವಾರ್ಯ ಪುತ್ರಂ**
**ವಿಭಾಂಡಕಸ್ತಾಂ ಮೃಗಯಾಂ ಬಭೂವ ||** - ವನಪರ್ವ(೧೧೩/೫)

ಋಷ್ಯಶೃಂಗನೇ ಯುವತಿಯೊಡನೆ ಹೊರಟ -

**೩. ಪ್ರೋವಾಚ ಚೈನಾಂ ಭವತಃ ಶ್ರಮಾಯ |**
**ಗಚ್ಛಾವ ಯಾವನ್ನ ಪಿತಾಮಮೈತಿ ||** - ವನಪರ್ವ(೧೧೩/೭)

ವಿಭಾಂಡಕರನ್ನು ಸ್ವಾಗತಿಸಿದ ಪ್ರಜೆಗಳು -

**೪. ಊಚುಸ್ತತಸ್ತೇಭ್ಯುಪಗಮ್ಯ ಸರ್ವೇ**
**ಧನಂ ತವೇದಂ ವಿಹಿತಂ ಸುತಸ್ಯ ||** - ವನಪರ್ವ(೧೧೩/೧೭)
**ದೇಶೇಷು ದೇಶೇಷು ಸ ಪೂಜ್ಯಮಾನ** - ವನಪರ್ವ(೧೧೩/೧೮)
**ದಾಸಾಃ ಸ್ಮ ಸರ್ವೇ ತವ ವಾಚಿ ಬದ್ಧಾಃ |** - ವನಪರ್ವ(೧೧೩/೧೩)
**ದದರ್ಶ ಪುತ್ರಂ ದಿವಿ ದೇವಂ ಯಥೇಂದ್ರಮ್ |** - ವನಪರ್ವ(೧೧೩/೧೯)

ನಂತರ ಮಿಂಚಿನಂತೆ ಹೊಳೆಯುವ ತನ್ನ ಸೊಸೆಯಾದ ಶಾಂತಾದೇವಿಯನ್ನು ವಿಭಾಂಡಕರು ಕಂಡು ಆನಂದತುಂದಿಲರಾದರು. ಮಗ ಸೊಸೆಯರನ್ನು ಅಲ್ಲಿಯೇ ಬಿಟ್ಟು ಮಗನಿಗೆ ವಿಭಾಂಡಕರು 'ಮಗನೇ! ನಿನಗೆ ಪುತ್ರನೊಬ್ಬ ಜನಿಸಿದ ಕೂಡಲೇ ರಾಜನ ಆಸೆಗಳನ್ನೆಲ್ಲ ಪೂರೈಸಿ ಮತ್ತೆ ತಪಸ್ಸಿಗೆ ವನಕ್ಕೆ ಬರಬೇಕೆಂದು' ನುಡಿದು ವನಕ್ಕೆ ತೆರಳಿದರು.

ಋಷ್ಯಶೃಂಗನೂ ಕೂಡ ಮಗ ಜನಿಸಿದ ನಂತರ ಪತ್ನಿಯೊಡನೆ ತನ್ನ ತಂದೆಯ ಆಶ್ರಮಕ್ಕೆ ತೆರಳಿದನು. ಶಾಂತೆಯೂ ಕೂಡಾ ಗಂಡನೊಡನೆ, ಚಂದ್ರನೊಡನೆ ಬರುವ ರೋಹಿಣಿಯಂತೆ, ವಸಿಷ್ಠರ ಪತ್ನಿ ಅರುಂಧತಿಯಂತೆ, ಅಗಸ್ತ್ಯರ ಪತ್ನಿ ಲೋಪಾಮುದ್ರೆಯಂತೆ, ನಳನ ಪತ್ನಿ ದಮಯಂತಿಯಂತೆ, ಇಂದ್ರನ ಪತ್ನಿಯಾದ ಶಚೀಯಂತೆ ಸಹಧರ್ಮಿಣಿಯಾಗಿ ಬಾಳಿದಳು.

ಇದುವೇ ಅವರ ಆಶ್ರಮ ಧರ್ಮರಾಜ! ಇದೇ ಆ ಸರೋವರ. ಇಲ್ಲಿ ಸ್ನಾನ ಮಾಡಿ ಕೃತಕೃತ್ಯನಾಗೆಂದು ಲೋಮಶರು ಧರ್ಮರಾಜನಿಗೆ ನುಡಿದರು.

## ಸಂದೇಶಗಳು

೧. ಎಂತಹ ತಪಸ್ವಿಯಾಗಿದ್ದರೂ ಸ್ತ್ರೀಯರ ರೂಪರಾಶಿಯು ಅವರ ಮನಸ್ಸನ್ನು ಆಕರ್ಷಿಸಿ, ಬ್ರಹ್ಮಚರ್ಯವನ್ನು ನಾಶ ಮಾಡಬಲ್ಲದು. ಕಾಮಜಯ ಅಷ್ಟು ಕಷ್ಟ ಎನ್ನಲು ವಿಭಾಂಡಕರ ರೇತಸ್ಖಲನವೇ ಸಾಕ್ಷಿ. ಕಾಮ ಎಲ್ಲ ಸಾಧಕರ ವೈರಿ. ಋಷ್ಯಶೃಂಗರಂತಹ ಮುಗ್ಧ ಬ್ರಹ್ಮಚಾರಿಯೂ ಕಾಮಕ್ಕೆ ತುತ್ತಾಗುವುದು ಪ್ರಕೃತಿಯ ನಿಯಮ.

'**ಬಲವಾನ್ ಇಂದ್ರಿಯ ಗ್ರಾಮೋ ವಿದ್ವಾಂಸಮಪಿ ಕರ್ಷತಿ**' ಎಂಬ ಮಾತು ಅಕ್ಷರಶಃ ಸತ್ಯ.

೨. ಋಷ್ಯಶೃಂಗರ ಹುಟ್ಟೂ ವಿಚಿತ್ರ. ತಾಯಿಯಿಲ್ಲದಂತೆ ಬೆಳೆದವರು. ಪ್ರಾಣ ಶರೀರದಲ್ಲಿ ದ್ರುಪದ, ದ್ರೋಣರದೂ ಮತ್ತೊಂದು ತರಹದಲ್ಲಿ ವಿಚಿತ್ರ. ಇವರೆಲ್ಲರ ಹುಟ್ಟನ್ನು ವೈಜ್ಞಾನಿಕವಾಗಿ ವಿವರಿಸುವುದು ಅಸಾಧ್ಯ. ವಿಜ್ಞಾನಿಗಳೂ ಕೂಡಾ ಇಂತಹ ಹುಟ್ಟುಗಳನ್ನು **abnormal** ಎಂದು ಹೇಳುತ್ತಾರೆ. ಆದರೆ ಬ್ರಹ್ಮಸೂತ್ರಗಳು ಇವನ್ನು ವಿವರಿಸಿವೆ[೧].

೩. ಯಾರಿಗೇ ಆದರೂ ಮಾತುಕೊಟ್ಟು ದಾನ ಮಾಡದಿದ್ದರೆ ಆತ ಮಾತ್ರವಲ್ಲ ಇಡೀ ಸಮುದಾಯಕ್ಕೇ ತೊಂದರೆ ತಪ್ಪಿದ್ದಲ್ಲ. ಲೋಮಪಾದರಾಜನ ತಪ್ಪಿನಿಂದಾಗಿ ಇಡೀ ರಾಜ್ಯ ದುರ್ಭಿಕ್ಷೆಗೆ ಒಳಗಾಯಿತು. ವಿಶೇಷವಾಗಿ ಬ್ರಾಹ್ಮಣರಿಗೆ ಮಾಡುವ ಅಪಚಾರ. ಆದರೆ ಪಶ್ಚಾತ್ತಾಪ ಎಲ್ಲ ಅಪರಾಧಕ್ಕೂ ಪರಿಹಾರಕ.

೪. ಋಷ್ಯಶೃಂಗರ ಸೂಕ್ತವಾದ ಕಾಮಭಾವನೆಗಳು ಆಶ್ರಮಕ್ಕೆ ಬಂದ ವೇಶ್ಯಾ ಯುವತಿಯ ಚೇಷ್ಟೆಗಳಿಂದ ಉದ್ರಿಕ್ತಗೊಂಡವು. ಆದ್ದರಿಂದ ಸ್ತ್ರೀಸಂಗವು ಸಾಧಕನ ಅರಿವಿಗೆ ಬರದೆಯೇ, ಅವನ ಸಾಧನೆ ಹಾಳುಮಾಡಬಲ್ಲದು. ಆದರೆ ಇಲ್ಲಿ ಮಾತ್ರ **ರಾಜ್ಯದ ದುರ್ಭಿಕ್ಷೆ ಸಮಸ್ಯೆಗೆ ದೈವೀ ಉಪಾಯವಾಗಿ** ಮುಂದೆ ಋಷ್ಯಶೃಂಗರು ರಾಜನ ಅಳಿಯನಾಗಿ ಮೆರೆಯುತ್ತಾರೆ. ಋಷ್ಯಶೃಂಗನ ಸಾಧನೆಗೆ ಯಾವುದೂ ಅಡ್ಡಿಯಾಗಲಿಲ್ಲ.

೫. ಋಷ್ಯಶೃಂಗರು ಮೊದಲು ಸ್ತ್ರೀಸಂಗಕ್ಕೆ ಬಲಿಯಾದರೂ ಮತ್ತೆ ತಪೋನಿರತರಾದರು. ಆದ್ದರಿಂದ **ಕಾಮ ನಮ್ಮನ್ನು ತಿನ್ನದೆ, ಅದೇ ನಮ್ಮ ದಾಸ್ಯದಲ್ಲಿರುವಂತೆ ನಾವು ಜೀವಿಸಬೇಕು.**

೬. ವಿಭಾಂಡಕರು ತಮ್ಮ ಮಗನಿಂದ ಲೋಕಕಲ್ಯಾಣವಾಗುವುದೆಂದು ನೋಡಿ ಸಂತೋಷಗೊಂಡು, ಮತ್ತೆ ಆತನನ್ನು ತಪಸ್ಸಿಗೇ ಹೊರಡಲು ಆದೇಶ ಮಾಡುತ್ತಾರೆ. ನಮ್ಮ **ಲೋಕಪ್ರವೃತ್ತಿ ಹಿತಮಿತವಾಗಿದ್ದಷ್ಟೂ ಚೆನ್ನ, ಅದು ನಮಗೆ ಸಾಧಕವಾಗುತ್ತದೆ.** ಆದ್ದರಿಂದಲೇ ಶ್ರೀಮದಾಚಾರ್ಯರು –

**ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರುಮಾನಸಮೀಶಪದೇ ।**

– ಎಂದು ಆದೇಶಿಸುತ್ತಾರೆ.

ಅದನ್ನೇ ಉಪನಿಷತ್ತು –

**ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ ।**

– ಎಂದು ನಿರ್ದೇಶಿಸಿದೆ.

*****

---

೧ 'ಯೋನ್ಯಧಿಕರಣ' – ಗರ್ಭೇ ವಾ ಬಹಿರೇವಾಥ ಕ್ವಚಿತ್ಸ್ಥಾನಾಂತರೇಷು ಚ ಇತೀ ಬ್ರಾಹ್ಮೇ
– ಬ್ರಹ್ಮಸೂತ್ರ ಭಾಷ್ಯ ೩/೧/೨೦

# ೩೪. ಜಾಮದಗ್ನ್ಯರಾಮಚರಿತೆ

## (ಪರಶುರಾಮಚರಿತ್ರೆ)

**ಕೌಶಕೀ**(ನದೀ), **ಗಂಗಾಸಾಗರಸಂಗಮ** ಮತ್ತು **ವೈತರಣೀ** ನದಿಗಳ ಯಾತ್ರೆ ಮುಗಿಸಿದ ಪಾಂಡವರು **ಮಹೇಂದ್ರಪರ್ವತ**ಕ್ಕೆ ಬಂದು ಅಲ್ಲಿ ಆ ರಾತ್ರಿ ಕಳೆದರು. ನಂತರ ಬೆಳಿಗ್ಗೆ ಪ್ರಾತರಾಹ್ನಿಕ ಮಾಡಿ ಅಲ್ಲಿದ್ದ ವಸಿಷ್ಠಾದಿ ತಪಸ್ವಿಗಳನ್ನು ಯುಧಿಷ್ಠಿರನು ಅನುಜರೊಡನೆ ಕಂಡು ಅವರಿಂದ ಆಶೀರ್ವಾದಗಳನ್ನು ಪಡೆದು ಭಾರ್ಗವರಾಮನ ಅನುಚರನಾದ **ಅಕೃತವ್ರಣ**ನನ್ನು ಕೇಳಿದನು.

'ಪೂಜ್ಯರೇ! ಪರಶುರಾಮ ದೇವರು ಇಲ್ಲಿ ತಪಸ್ವಿಗಳಿಗೆ ಯಾವಾಗ ದರ್ಶನವೀಯುತ್ತಾರೆ? ಅವರು ಬಂದಾಗ ನಾನೂ ಅವರನ್ನು ದರ್ಶನ ಪಡೆಯಲು ಇಚ್ಛಿಸುತ್ತೇನೆ' ಎಂದನು ಯುಧಿಷ್ಠಿರ. ಅದಕ್ಕೆ ಅಕೃತವ್ರಣನು 'ರಾಮನಿಗೆ ನೀನು ಇಲ್ಲಿಗೆ ಬಂದಿರುವುದು ತಿಳಿದೇ ಇದೆ. ತಾಪಸರು ರಾಮನನ್ನು ಅಷ್ಟಮೀ, ಚತುರ್ದಶಿಯಂದು (ಶುಕ್ಲಪಕ್ಷ) ದರ್ಶನ ಮಾಡುವರು. ನಾಳೆಯೇ ಚತುರ್ದಶೀ, ನೀನು ನಾಳೆಯೇ ದರ್ಶನ ಪಡೆಯಬಹುದು' ಎಂದನು.

ಅದಕ್ಕೆ ಯುಧಿಷ್ಠಿರನು ಪರಶುರಾಮರ ಅದ್ಭುತವಾದ ಕ್ಷತ್ರಿಯ ಸಂಹಾರಾತ್ಮಕವಾದ ಮಹಿಮೆ ಕೇಳ ಬಯಸಿದನು.

ನಂತರ ಅಕೃತವ್ರಣನು ಪರಶುರಾಮನ ದೇವತಾಸಮನಾದ ಚರಿತ್ರೆ ಹೇಳಲಾರಂಭಿಸಿದನು.

**ರಾಮಸ್ಯ ಜಾಮದಗ್ನ್ಯಸ್ಯ ಚರಿತಂ ದೇವಸಂಮಿತಮ್ ।**
**ಹೈಹಯಾಧಿಪತೇಶ್ಚೈವ ಕಾರ್ತವೀರ್ಯಸ್ಯ ಭಾರತ ॥**

**- ವನಪರ್ವ(೧೧೫/೧೦)**

ಹೈಹಯ ವಂಶದ ಅಧಿಪತಿ ಕಾರ್ತವೀರ್ಯಾರ್ಜುನ. ಅವನಿಗೆ ಒಂದುಸಾವಿರ ಬಾಹುಗಳೂ, ಬಂಗಾರದ ವಿಮಾನವೂ ಇದ್ದಿತು. ಅವನು ದತ್ತಾತ್ರೇಯರೂಪಿ ವಿಷ್ಣುವಿನ ಅನುಗ್ರಹದಿಂದ ಇವುಗಳೊಡನೆ ಯೋಗ ಸಾಮರ್ಥ್ಯವನ್ನು ಹೊಂದಿದ್ದನು[೧].

ಭಗವಂತನ ಅನುಗ್ರಹದಿಂದ ಅವನ ರಥಕ್ಕೆ ಪೃಥಿವೀಲೋಕದಲ್ಲಿ ತಡೆರಹಿತ ಗತಿ ಇತ್ತು. ಹೀಗೆ ಅವನ ಐಶ್ವರ್ಯಕ್ಕೆ ಪಾರವಿರದ ಗರ್ವಿಷ್ಠನಾದ. ಪರಿಣಾಮ ದೇವತೆ, ಋಷಿ, ಗಂಧರ್ವ ಹಾಗೂ ಇತರ ಪ್ರಾಣಿಗಳೆಲ್ಲವನ್ನೂ ಪೀಡಿಸಲಾರಂಭಿಸಿದ[೨].

---

೧ ವಿಷ್ಣೋಃ ದತ್ತಾತ್ರೇಯ ನಾಮ್ನಃ ಪ್ರಸಾದಾತ್ ಯೋಗವೀರ್ಯವಾನ್ । - ಮ.ತಾ.ನಿ.(೧೧/೩)

೨ ಮಮರ್ದ ದೇವಾನ್ಯಕ್ಷಾಂಶ್ಚ ಋಷೀಂಶ್ಚೈವ ಸಮಂತತಃ ।
ಭೂತಾಂಶ್ಚೈವ ಸ ಸರ್ವಾಂಸ್ತು ಪೀಡಯಾಮಾಸ ಸರ್ವತಃ ॥ - ವನಪರ್ವ(೧೧೫/೧೪)

ಬಾಧೆಗೆ ಒಳಗಾದ ಎಲ್ಲರೂ ದೇವತೆಗಳನ್ನು ಮುಂದೆ ಮಾಡಿಕೊಂಡು ವಿಷ್ಣುವನ್ನೇ ಶರಣು ಹೊಕ್ಕರು. ದೇವರಾಜ ಇಂದ್ರನನ್ನೂ ಪೀಡಿಸುತ್ತಿರುವ ಕಾರ್ಯವೀರ್ಯಾರ್ಜುನನ್ನು ಕೊಲ್ಲಲು ಬಿನ್ನವಿಸಿದರು[೧].

ನಂತರ ಕಾರ್ತವೀರ್ಯನ ಸಂಹಾರಕ್ಕಾಗಿ ವಿಷ್ಣುವು ಇಂದ್ರನೊಡನೆ ಸಮಾಲೋಚನೆ ಮಾಡಿ, ಆತನಿಗೆ ಭರವಸೆ ನೀಡಿ ತನ್ನದೇ ಆದ ರಮ್ಯವಾದ ಬದರಿಕಾಶ್ರಮಕ್ಕೆ ಹೊರಟನು.

ಇದೇ ಸಮಯದಲ್ಲಿ ಭೂಲೋಕದಲ್ಲಿ ಕಾನ್ಯಕುಬ್ಜ ದೇಶದಲ್ಲಿ ಗಾಧಿ ಎಂಬ ರಾಜನಿದ್ದನು. ಆತನು ಒಮ್ಮೆ ವನವಾಸಕ್ಕೆ ಹೋದಾಗ ಅಲ್ಲಿ ಆತನಿಗೆ ಅಪ್ಸರೆಗೆ ಸಮಳಾದ ಕನ್ಯೆ ಜನಿಸಿದಳು. ಈ ಕನ್ಯೆಯನ್ನು ಋಚೀಕ ಮಹರ್ಷಿಯು ಬಯಸಿ ರಾಜನನ್ನು ಕನ್ಯಾದಾನ ಮಾಡಲು ಪ್ರಾರ್ಥಿಸಿದ. ಗಾಧಿಯು ಕನ್ಯಾದಾನಕ್ಕೆ ಸಮ್ಮತಿಸಿದನಾದರೂ, ಕನ್ಯಾಶುಲ್ಕವಾಗಿ ಬಿಳಿಬಣ್ಣದ ಒಂದು ಸಾವಿರ ಕುದುರೆಗಳನ್ನು ಕೊಡಲು ತಿಳಿಸಿದನು. ಆ ಕುದುರೆಗಳ ಒಂದು ಕಿವಿಯು ಶ್ಯಾಮಲವರ್ಣದ್ದಾಗಿರಬೇಕು ಎಂದೂ ಬಯಸಿದ.

ಋಚೀಕರು ಇದಕ್ಕೆ ಒಪ್ಪಿ ವರುಣನಿಂದ ಒಂದು ಸಾವಿರ ಶಾಮಲ ಕುದುರೆಗಳನ್ನು ಗಾಧಿ ರಾಜನಿಗೆ ಕನ್ಯಾಶುಲ್ಕವಾಗಿ ಕೊಟ್ಟು ಕನ್ಯೆಯನ್ನು ವಿವಾಹವಾಗಿ ಸುಖವಾಗಿದ್ದರು. ವರುಣನು ಆ ಕುದುರೆಗಳನ್ನು ಗಂಗಾನದಿಯ ಮೂಲಕ ಕೊಟ್ಟನು. ಕುದುರೆಗಳು ಹೊರಬಂದ ಆ ಗಂಗಾನದಿಯ ಸ್ಥಳವು '**ಅಶ್ವತೀರ್ಥ**' ಎಂದು ಪ್ರಸಿದ್ಧವಾಯಿತು[೨].

ಗಾಧಿರಾಜನು ಋಚೀಕರಿಂದ ತನ್ನ ಕುಲದ ಸಂಪ್ರದಾಯದ ಮೇರೆಗೆ ಅನಿವಾರ್ಯವಾಗಿ ಕನ್ಯಾಶುಲ್ಕವನ್ನು ಒಲ್ಲದ ಮನಸ್ಸಿನಿಂದಲೇ ಕೇಳಿ ಪಡೆದನು. ಋಚೀಕರು ಸತ್ಯವತಿಯೊಡನೆ ಸ್ವೇಚ್ಛೆಯಾಗಿ ವಿಹರಿಸಿದರು.

---

೧ ದೇವದೇವಂ ಸುರಾರಿಘ್ನಂ ವಿಷ್ಣುಂ ಸತ್ಯಪರಾಕ್ರಮಮ್ ।
ಭಗವನ್ ಭೂತರಕ್ಷಾರ್ಥಮರ್ಜುನಂ ಜಹಿ ವೈ ಪ್ರಭೋ ॥ – ವನಪರ್ವ(೧೧೫/೧೬)

೨ ಋಚೀಕೋ ಭಾರ್ಗವಸ್ತಾಂ ಚ ವರಯಾಮಾಸ ಭಾರತ ।
ತಮುವಾಚ ತತೋ ಗಾಧಿರ್ಬ್ರಾಹ್ಮಣಂ ಸಂಶಿತವ್ರತಮ್ ॥
ಉಚಿತಂ ನ ಕುಲೇ ಕಿಂಚಿತ್ಪೂರ್ವೈರ್ಯತ್ಸಂಪ್ರವರ್ತಿತಮ್ ।
ಏಕತಃ ಶ್ಯಾಮಕರ್ಣಾನಾಂ ಪಾಂಡುರಾಣಾಂ ತರಸ್ವಿನಾಮ್ ॥
ಸಹಸ್ರಂ ವಾಜಿನಾಂ ಶುಲ್ಕಂ ಇತಿವಿದ್ಧಿ ದ್ವಿಜೋತ್ತಮ ।
ನ ಚಾಪಿ ಭಗವಾನ್ ವಾಚ್ಯೋ೭ದೀಯತಾಮಿತಿ ಭಾರ್ಗವ ॥
ದೇಯಾ ಮೇ ದುಹಿತಾ ಚೈವ ತ್ವದ್ವಿಧಾಯ ಮಹಾತ್ಮನೇ ।
ತಸ್ಮೈ ಪ್ರಾದಾತ್ಸಹಸ್ರಂ ವೈ ವಾಜಿನಾಂ ವರುಣಸ್ತದಾ ॥
ತದಶ್ವತೀರ್ಥಂ ವಿಖ್ಯಾತಮುತ್ಥಿತಾ ಯತ್ರ ತೇ ಹಯಾಃ ।
ಗಂಗಾಯಾಂ ಕಾನ್ಯಕುಬ್ಜೇ ವೈ ದದೌ ಸತ್ಯವತೀಂ ತದಾ ॥
– ವನಪರ್ವ(೧೧೫/೨೦-೨೩,೨೭,೨೮)

ತನ್ನ ಮಗ ಸೊಸೆಯರು ವಿವಾಹ ಮಾಡಿಕೊಂಡು ಸುಖವಾಗಿರುವುದನ್ನು ನೋಡಲು ಒಮ್ಮೆ ಭೃಗು ಋಷಿಗಳು ಋಚೀಕರ ಆಶ್ರಮಕ್ಕೆ ಬಂದರು. ಆಗ ಋಚೀಕ ದಂಪತಿಗಳು ಬಂದ ಭೃಗುಗಳನ್ನು ಸತ್ಕರಿಸಿ ಪ್ರಾಂಜಲರಾಗಿ ನಿಂತರು. ಸೊಸೆಯ ನಡೆಯಿಂದ ಸಂತುಷ್ಟರಾದ ಭೃಗುಋಷಿಗಳು ವರ ಕೇಳಲು ಹೇಳಿದಾಗ ಆಕೆ ತನಗೆ ಹಾಗೂ ತನ್ನ ತಾಯಿಗೆ ಪುತ್ರಸಂತಾನ ಬೇಡಿದಳು[೧].

ಆಗ ಭೃಗುಋಷಿಗಳು 'ಎಲೈ ಮಗಳೇ! ನೀನು ಮತ್ತು ನಿನ್ನ ತಾಯಿ ಋತುಸ್ನಾತರಾದ ಮೇಲೆ ಕ್ರಮವಾಗಿ ಅಶ್ವತ್ಥ ಹಾಗೂ ಅತ್ತಿಮರ (ಔದುಂಬರ) ವೃಕ್ಷಗಳನ್ನು ಅಲಿಂಗಿಸಿಕೊಳ್ಳಿ. ನಾನು ವಿರಾಟ್‌ಪುರುಷನ ಮಂತ್ರ ಜಪಾನುಸಂಧಾನವನ್ನು ಬಹಳ ಪ್ರಯತ್ನಿಸಿ, ಎರಡು ಚರುಗಳನ್ನು ಸಿದ್ಧಗೊಳಿಸಿ ಪ್ರತ್ಯೇಕವಾಗಿ ಇಲ್ಲಿ ಇರಿಸಿದ್ದೇನೆ. ನೀನು ಹಾಗೂ ನಿನ್ನ ತಾಯಿ ಈ ಚರುಗಳನ್ನು ಭಕ್ಷಿಸಿರಿ' ಎಂದು ಹೇಳಿ ಹೊರಟರು.

ಮಾವನವರ ಆಶಯವನ್ನು ಸತ್ಯವತೀದೇವಿಯು ತನ್ನ ತಾಯಿಗೆ ತಿಳಿಸಿದಳು. ಮುಂದೆ ಒಮ್ಮೆ ಋತುಸ್ನಾತರಾದ ಮೇಲೆ ಇಬ್ಬರೂ ವೃಕ್ಷಗಳನ್ನು ಆಲಿಂಗಿಸಿ ಚರುಭಕ್ಷಣ ಮಾಡಿದರಾದರೂ, ಭೃಗುಗಳು ಹೇಳಿದಂತೆ ಮಾಡದೇ ಸತ್ಯವತಿಯು ಅಶ್ವತ್ಥವನ್ನೂ, ಆಕೆಯ ತಾಯಿಯು ಔದುಂಬರವನ್ನು ಆಲಿಂಗಿಸಿಕೊಂಡರಲ್ಲದೇ ಚರುಗಳನ್ನು ಅದಲುಬದಲು ಮಾಡಿ ಭಕ್ಷಿಸಿದರು. ಕಾರಣ ಸತ್ಯವತಿಯ ತಾಯಿಯ ಪ್ರೇರಣೆ, ವಂಚನೆಯಿಂದ ಹೀಗೆ ನಡೆದು ಹೋಯಿತು.

ಕೆಲವು ಕಾಲದ ಬಳಿಕ ಭೃಗುಗಳು ಇದನ್ನು ತಮ್ಮ ದಿವ್ಯದೃಷ್ಟಿಯಿಂದ ತಿಳಿದು ಸತ್ಯವತಿಯ ಮನೆಗೆ ಬಂದು ನುಡಿದರು. ನಾನು ಹೇಳಿದಂತೆ ನಡೆಯದೆ ವಿಪರೀತವಾಗಿ ವರ್ತಿಸಿದ್ದರಿಂದ ಎಲೈ ಸತ್ಯವತಿಯೇ ನಿನಗೆ ಕ್ಷಾತ್ರ ವೃತ್ತಿಯ ಬ್ರಾಹ್ಮಣನೂ, ನಿನ್ನ ತಾಯಿಗೆ ಬ್ರಾಹ್ಮಣಾಚಾರದ ಕ್ಷತ್ರಿಯನೂ ಜನಿಸುವರೆಂದರು. ಸತ್ಯವತಿಗೆ ತನ್ನ ತಪ್ಪಿನ ಅರಿವಾಗಿ ಪರಿಪರಿಯಿಂದ ನನಗೆ ಸಹಜ ಬ್ರಾಹ್ಮಣ ಪುತ್ರನೇ ಬೇಕೆಂದು ಬೇಡಿದಳು. ಅದು ಸಾಧ್ಯವಾಗದೆಂದು ಮಾವ ನುಡಿಯಲು, ಕನಿಷ್ಟ ನನ್ನ ಮಗನಾದರೂ ಹಾಗಾಗದಿರಲಿ, ಮೊಮ್ಮಗನು ಕ್ಷಾತ್ರವೃತ್ತಿಯ ಬ್ರಾಹ್ಮಣನಾಗಲಿ ಎಂದು ಪ್ರಾರ್ಥಿಸಲು ಮಾವನು ತಥಾಸ್ತು ಎಂದರು. ಅವರ ಅನುಗ್ರಹದ ಪರಿಣಾಮವಾಗಿಯೇ ಜಮದಗ್ನಿಗಳು ಸಕಾಲದಲ್ಲಿ ಸತ್ಯವತಿಗೆ ಜನಿಸಿದರು. ಅವರು ತಮ್ಮ ತೇಜಸ್ಸು ವರ್ಚಸ್ಸುಗಳಿಂದ, ವೇದಾಧ್ಯಯನದಿಂದ ಅನೇಕ ಋಷಿಗಳನ್ನು ಮೀರಿಸಿದ್ದರು. ಧನುರ್ವೇದ ಬಲ್ಲವರಾಗಿ ಹದಿನಾಲ್ಕು ವಿಧವಾದ ಅಸ್ತ್ರಗಳನ್ನು ಬಲ್ಲವರಾಗಿ ಸೂರ್ಯಸದೃಶ ತೇಜಸ್ವಿಗಳಾಗಿದ್ದರು:

---

೧ ವರಂ ವೃಣೀಷ್ವ ಸುಭಗೇ ದಾತಾ ಹ್ಯಸ್ಮಿ ತವೇಪ್ಸಿತಮ್ ।....
ಆತ್ಮನಶ್ಚೈವ ಮಾತುಶ್ಚ ಪ್ರಸಾದಂ ಚ ಚಕಾರ ಸಃ ॥ - ವನಪರ್ವ(೧೧೫/೩೩,೩೪)

ಆಲಿಂಗನೇ ಚರೌ ಚೈವ ಚಕ್ರತುಸ್ತೇ ವಿಪರ್ಯಯಮ್ ।
ಬ್ರಾಹ್ಮಣ ಕ್ಷತ್ರವೃತ್ತಿರ್ವೈ ತವ ಪುತ್ರೋ ಭವಿಷ್ಯತಿ ॥
ಕ್ಷತ್ರಿಯೋ ಬ್ರಾಹ್ಮಣಾಚಾರೋ ಮಾತುಸ್ತವ ಸುತೋ ಮಹಾನ್ ।
ನ ಮೇ ಪುತ್ರೋ ಭವೇದೀದೃಕ್ ಕಾಮಂ ಪೌತ್ರೋ ಭವೇದಿತಿ ।
ಏವಮಸ್ತ್ವಿತಿ ಸಾ ತೇನ .................. ॥ - ವನ.(೧೧೫/೩೭,೪೦-೪೩)

ಮುಂದೆ ಜಮದಗ್ನಿ ಋಷಿಗಳು ವೇದಾಧ್ಯಯನ ಹಾಗೂ ತಪಸ್ಸನ್ನು ಮಾಡುತ್ತಾ ದೇವತೆಗಳನ್ನು ಪ್ರಸನ್ನೀಕರಿಸಿಕೊಂಡರು. ನಂತರ **ಪ್ರಸೇನಜಿತ**ನೆಂಬ ರಾಜನನ್ನು ಕಂಡು, ಆತನ ಮಗಳಾದ ರೇಣುಕಾದೇವಿಯನ್ನು ವರಿಸಲು ಕನ್ಯಾದಾನ ಮಾಡಬೇಕೆಂದು ರಾಜನನ್ನು ಕೇಳಲು, ರಾಜನು ಒಪ್ಪಿ ಕನ್ಯಾದಾನ ಮಾಡಿದನು. ಅನುಕೂಲೆಯಾದ ರೇಣುಕೆಯೊಂದಿಗೆ ಜಮದಗ್ನಿಗಳು ಆಶ್ರಮಕ್ಕೆ ಬಂದು ದಾಂಪತ್ಯ ಜೀವನ ನಡೆಸುತ್ತಲೇ, ತಪಸ್ಸನ್ನೂ ಮಾಡುತ್ತಿದ್ದರು. ಅವರಿಗೆ ರೇಣುಕೆಯಲ್ಲಿ ರುಮಣ್ವಾನ್, ಸುಷೇಣ, ವಸು, ವಿಶ್ವಾವಸು ಮತ್ತು ರಾಮ(ಪರಶುರಾಮ) ಎಂಬ ಐದು ಗಂಡುಮಕ್ಕಳು ಜನಿಸಿದರು. ಕಿರಿಯ ಮಗನೇ ಸಾಕ್ಷಾತ್ ವಿಷ್ಣುವಿನ ಅವತಾರಿಯಾದ ಪರಶುರಾಮ.

ಒಮ್ಮೆ ಮಕ್ಕಳೆಲ್ಲ ಹಣ್ಣುಹಂಪಲು ತರಲು ವನಕ್ಕೆ ಹೋದಾಗ ನಿಯತವ್ರತಳಾದ ರೇಣುಕೆಯು ಸ್ನಾನಕ್ಕಾಗಿ ಜಲಾಶಯಕ್ಕೆ ಹೋದಳು. ಅದೇ ಜಲಾಶಯದಲ್ಲಿ **ಮೂರ್ತಿಕಾವತ** ದೇಶದ ರಾಜನಾದ **ಚಿತ್ರರಥ**ನು ತನ್ನ ಪತ್ನಿಯರೊಡನೆ ಜಲಕ್ರೀಡೆಯಾಡುವುದನ್ನು ರೇಣುಕೆಯು ದೈವವಶಾತ್ ನೋಡಿ ತಾನೂ ಕೂಡಾ ಅವನೊಡನೆ ವಿಹರಿಸಲು ಇಷ್ಟಪಟ್ಟಳು. ಹೀಗೆ ಮನಸಾ ವ್ಯಭಿಚಾರಕ್ಕೆ ಒಳಗಾದಳು ರೇಣುಕೆ[1].

ಹಾಗೆಯೇ ನಡುಗುತ್ತಾ ಆಶ್ರಮಕ್ಕೆ ಧಾವಿಸಿದ ರೇಣುಕೆಯನ್ನು ನೋಡಿದ ಜಮದಗ್ನಿಗಳು ಪತ್ನಿಯ ಮಾನಸಿಕ ವ್ಯಭಿಚಾರವನ್ನು ಆಕೆಯ ಕಾಂತಿಹೀನ ಮುಖದಿಂದ ತಿಳಿದು ಕುಪಿತರಾಗಿ ಕೂಡಲೇ ನಿಂದಿಸಿದರು. ವನದಿಂದ ಮರಳಿದ ಮಕ್ಕಳನ್ನು ಮೊದಲು ಹಿರಿಯನಾದ **ರುಮಣ್ವಾನ್**ನನ್ನು ತಾಯಿ ರೇಣುಕೆಯ ವಧೆಗೆ ಆಜ್ಞಾಪಿಸಿದರು. ಮಾತೃಸ್ನೇಹದಿಂದ ಅತನು ಸುಮ್ಮನಿರಲು ಉಳಿದ ಮಕ್ಕಳಿಗೆ ಹೇಳಿದರೂ, ಅವರಾರೂ ಮಾತೃವಧೆಗೆ ಮನಸ್ಸು ಮಾಡದೇ ಮೌನಧರಿಸಿದರು. ನಂತರ ಬಂದ ಪರಶುರಾಮನಿಗೆ ತಾಯಿವಧೆಗೆ ಆಜ್ಞೆ ಮಾಡಿದಾಗ ಅವರು ತಾಯಿಯ ಶಿರಚ್ಛೇದವನ್ನು ಮಾಡಿಯೇ ಬಿಟ್ಟರು:

---

೧ ಸಾ ತು ಚಿತ್ರರಥಂ ನಾಮ ಮಾರ್ತಿಕಾವತಕಂ ನೃಪಮ್ ।
ದದರ್ಶ ರೇಣುಕಾ ರಾಜನ್ನಾಗಚ್ಛಂತಿ ಯದೃಚ್ಛಯಾ ॥
ಕ್ರೀಡಂತಂ ಸಲಿಲೇ ದೃಷ್ಟ್ವಾ ಸಭಾರ್ಯಂ ಪದ್ಮಮಾಲಿನಮ್ ।
ಋದ್ಧಿಮಂತಂ ತತಸ್ತಸ್ಯ ಸ್ಪೃಹಯಾಮಾಸ ರೇಣುಕಾ ॥
ವ್ಯಭಿಚಾರಾಚ್ಚ ತಸ್ಮಾತ್ ಸಾ ಕ್ಲಿನ್ನಾಂಭಸಿ ವಿಚೇತನಾ ॥ - ವನಪರ್ವ(೧೧೬/೬-೮)

**ತಾನಾನುಪೂರ್ವ್ಯಾದ್ ಭಗವಾನ್ ವಧೇ ಮಾತುರಚೋದಯತ್ ।**
**ನ ಚ ತೇ ಜಾತ ಸಂಸ್ನೇಹಾಃ ಕಿಂಚಿದೂಚುರ್ವಿಚೇತಸಃ ॥**
**ತತ ಆದಾಯ ಪರಶುಂ ರಾಮೋ ಮಾತುಃ ಶಿರೋऽಹರತ್ ॥**

**- ವನಪರ್ವ(೧೧೬/೧೧,೧೪)**

ಮಾತು ಕೇಳದ ಮಕ್ಕಳನ್ನು ಜಮದಗ್ನಿಗಳು ಮೃಗಪಕ್ಷಿಗಳಂತೆ ಬುದ್ಧಿಶೂನ್ಯರಾಗಿ ಎಂದು ಶಪಿಸಿದರು. ತಮ್ಮ ಮಾತು ನಡೆಸಿಕೊಟ್ಟ ಪರಶುರಾಮರ ಬಗ್ಗೆ ಪ್ರಸನ್ನರಾದ ತಂದೆ ವರ ಕೇಳಲು ತಿಳಿಸಿದಾಗ ಪರಶುರಾಮನು - ನನ್ನ ತಾಯಿಯು ಪುನರ್ಜನ್ಮ ಹೊಂದಲಿ, ಸೋದರರು ಮೊದಲಿಂತಾಗಲಿ, ತಾಯಿಗೆ ಮಗ ವಧೆ ಮಾಡಿದನೆಂಬ ಸ್ಮರಣೆ ಬರದಿರಲಿ, ನನಗೆ ಮಾತೃವಧೆಯ ದೋಷವು ಬರದಿರಲಿ ಹಾಗೂ ನನಗೆ ದೀರ್ಘಾಯುಷ್ಯ, ಯುದ್ಧದಲ್ಲಿ ಅಜೇಯತೆಗಳನ್ನು ಅನುಗ್ರಹಿಸಲು ಬೇಡಿದರು. ಪ್ರಸನ್ನರಾದ ಮಹಾತಪಸ್ವಿಗಳಾದ ಜಮದಗ್ನಿಗಳು ಎಲ್ಲ ವರಗಳನ್ನು ಅನುಗ್ರಹಿಸಿದರು[೧].

ಹೀಗೆ ಕೆಲವು ಕಾಲ ಕಳೆಯುತ್ತಿರಲು ಮಕ್ಕಳೆಲ್ಲ ಆಶ್ರಮದಿಂದ ಹೊರಗೆ (ಕಾಡಿಗೆ ಕಂದ ಮೂಲ, ಫಲ, ದರ್ಭೆಗಳಿಗಾಗಿ) ಹೋದಾಗ ಕಾರ್ತವೀರ್ಯಾರ್ಜುನನು ಆಶ್ರಮಕ್ಕೆ ಐಶ್ವರ್ಯ ಮದದಿಂದ ಬಂದನು. ರೇಣುಕೆಯು ಆತನನ್ನು ಸತ್ಕರಿಸಿದರೂ ಅದಕ್ಕೆ ಮನ್ನಿಸದೆ ಹೋಮಧೇನುವಿನ ಕರುವನ್ನು ಬಲಾತ್ಕಾರವಾಗಿ ಅಪಹರಿಸಿ ಅದನ್ನು ಒಯ್ದನು. ಅಲ್ಲದೇ ಆಶ್ರಮದಲ್ಲಿನ ಗಿಡಮರಗಳನ್ನು ನಾಶಮಾಡಿ ಹೋದನು. ನಂತರ ಆಶ್ರಮಕ್ಕೆ ಬಂದ ಪರಶುರಾಮನಿಗೆ ಜಮದಗ್ನಿಗಳು ಅರ್ಜುನನ ದೌರ್ಜನ್ಯವನ್ನು ಹೇಳಿದಾಗ ಪರಶುರಾಮನು ಕುಪಿತನಾಗಿ ಪರಶು ಹಾಗೂ ಭಲ್ಲಾಯುಧಗಳನ್ನು ಹಿಡಿದುಕೊಂಡು ಕಾರ್ತವೀರ್ಯಾರ್ಜುನನನ್ನು ಬೆನ್ನತ್ತಿ ಹೊರಟನು.

ಅರ್ಜುನನಿಗೆ ಯುದ್ಧಕ್ಕೆ ನಿಂತ ಪರಶುರಾಮನು ತನ್ನ ಭಲ್ಲಾಯುದ್ಧಗಳಿಂದ ಆವನ ಸಾವಿರ ತೋಳುಗಳನ್ನು ಕಡಿದು ಸಂಹರಿಸಿದನು.

ಮುಂದೆ ಅರ್ಜುನನ ದಾಯಾದಿಗಳು ಪರಶುರಾಮನ ಮೇಲಿನ ಕೋಪದಿಂದ ಅವನಿಲ್ಲದಿದ್ದಾಗ ಆಶ್ರಮಕ್ಕೆ ನುಗ್ಗಿ ಜಮದಗ್ನಿಯನ್ನು, ಋಷಿಗಳನ್ನು ಪೀಡಿಸಿ ಎಳೆದಾಡಿದರು. ಅಲ್ಲದೇ ಜಮದಗ್ನಿಯನ್ನು ಕೊಂದು ಹೋದರು. ನಂತರ ಬಂದ ಪರಶುರಾಮನು ತಂದೆಯ ಮರಣದಿಂದ ತುಂಬಾ ದುಃಖಿತನಾಗಿ(ನಂತೆ) ವಿಲಾಪ ಮಾಡಿದ[೨].

---

೧ ಸ ವವ್ರೇ ಮಾತುರುತ್ಥಾನಮಸ್ಮೃತಿಂ ಚ ವಧಸ್ಯ ವೈ ।
ಪಾಪೇನ ತೇನ ಚಾ ಸ್ಪರ್ಶಂ ಭ್ರಾತೄಣಾಂ ಪ್ರಕೃತಿಂ ತಥಾ ॥
ಅಪ್ರತಿದ್ವಂದ್ವತಾ ಯುದ್ಧೇ ದೀರ್ಘಮಾಯುಶ್ಚ ಭಾರತ ।
ದದೌ ಚ ಸರ್ವಾನ್ ಕಾಮಾಂಸ್ತಾನ್ ಜಮದಗ್ನಿರ್ಮಹಾತಪಾಃ ॥ - ವನಪರ್ವ(೧೧೬/೧೭,೧೮)

೨ ಸ ದೃಷ್ಟ್ವಾ ಪಿತರಂ ವೀರಸ್ತಥಾ ಮೃತ್ಯುವಶಂ ಗತಮ್ ।
ಅನರ್ಹಂತಂ ತಥಾಭೂತಂ ವಿಲಲಾಪ ಸುದುಃಖಿತ ॥ - ವನಪರ್ವ(೧೧೬/೨೯)

ಪರಶುರಾಮನು ತಂದೆಯ ಮರಣದಿಂದ ದುಃಖಿತಪ್ತನಾಗಿ ಮಾಡಿದ ವಿಲಾಪ ಮನಕರಗುವಂತಹುದು. **ಭಗವಂತನ ಎಲ್ಲ ವ್ಯಾಪಾರಗಳು ಪರಿಪೂರ್ಣ. ದುಃಖವಿಲ್ಲ-ದಿದ್ದರೂ ದುಃಖಾಭಿವ್ಯಕ್ತಿಯಲ್ಲಿಯೂ ಭಗವಂತನೇ ಸೀಮಾತೀತ. ಅಳುವುದರಲ್ಲೂ ಅವನಂತೆ ಯಾರೂ ಅಳಲಾರರು.** ತಂದೆಯ ಮರಣವನ್ನು ಕುರಿತು ಆತನ ಮಾತುಗಳು 'ಅಪ್ಪ ನನ್ನ ಅಪರಾಧದಿಂದ ಕ್ಷುದ್ರ ಹೈಹಯರಿಂದ ನೀನು ಹತನಾದೆಯಲ್ಲ! (ಆಗ ತಾನು ಮನೆಯಲ್ಲಿದ್ದಿಲ್ಲ ಎಂಬ ಭಾವನೆ ಇಲ್ಲಿ ಸೂಚಿತವಾಗಿದೆ) ನಿನ್ನನ್ನು ಅವರು ವನದಲ್ಲಿ ಮೃಗವನ್ನು ಬಾಣಗಳಿಂದ ಕೊಲ್ಲುವಂತೆ ಕೊಂದರಲ್ಲ, ಸನ್ಮಾರ್ಗದಲ್ಲಿದ್ದ, ಧರ್ಮಬಲ್ಲ, ತಪೋನಿರತರಾದ, ನಿರಪರಾಧಿಗಳಾದ, ಯುದ್ಧ ಮಾಡದೇ ಇದ್ದ ನಿಮ್ಮನ್ನು ಅವರು ಹೇಗೆ ತಾನೇ ಕೊಂದರು? ಅವರಿಗೆ ಹೇಗೆ ತಾನೆ ನಾಚಿಕೆಯಾಗಲಿಲ್ಲ.

ಹೀಗೆ ನಾನಾವಿಧವಾಗಿ ದುಃಖಿಸಿದ ಪರಶುರಾಮನು ನಂತರ ತಂದೆಯ ಪ್ರೇತಕಾರ್ಯಗಳನ್ನು ಮಾಡಿ, ಅಗ್ನಿಯಲ್ಲಿ ತಂದೆಯ ಪವಿತ್ರ ಶವವನ್ನು ದಹಿಸಿ, ಎಲ್ಲ ಕ್ಷತ್ರಿಯರ (ದುರ್ಮದಾಂಧ) ನಾಶಕ್ಕಾಗಿ ಪ್ರತಿಜ್ಞೆ ಮಾಡಿದನು. ಮಹಾಬಲಶಾಲಿಯಾದ ರಾಮನು ನಂತರ ಯಮಧರ್ಮನಂತೆ ನುಗ್ಗಿ ಕಾರ್ತವೀರ್ಯಾರ್ಜುನ ಮಕ್ಕಳನ್ನು ಕೊಂದನು. ಅವರನ್ನು ಅನುಸರಿಸಿದ ಎಲ್ಲ ಕ್ಷತ್ರಿಯರನ್ನು ೨೧ ಬಾರಿ ಭೂಪ್ರದಕ್ಷಿಣೆ ಮಾಡಿ ಸಂಹರಿಸಿ ಸಮಂತಪಂಚಕದಲ್ಲಿ ಐದು ನೆತ್ತರ ಸರೋವರಗಳನ್ನೇ ನಿರ್ಮಿಸಿದ. ಆ ರಕ್ತದಿಂದಲೇ ರಾಮ ಪಿತೃಗಳಿಗೆ ತರ್ಪಣ ನೀಡಿದನು. ಆಗ ಬಂದ ಪರಶುರಾಮನ ಪಿತಾಮಹನು ಮತ್ತೆ ಕ್ಷತ್ರಿಯ ನಾಶವಾಗದಂತೆ ತಡೆದನು[೧].

ನಂತರ ಪರಶುರಾಮನು ಮಹಾಯಜ್ಞದಿಂದ ದೇವೇಂದ್ರನನ್ನು ತೃಪ್ತಿಪಡಿಸಿ, ತಾನು ಜಯಿಸಿದ ಭೂಮಿಯೆಲ್ಲವನ್ನು ಕಶ್ಯಪನಿಗೆ ದಾನಮಾಡಿದನು. ಕಶ್ಯಪನಿಗೆ ಯಜ್ಞದ ಬಂಗಾರದ ವಿಶಾಲವಾದ ವೇದಿಕೆಯನ್ನು ದಾನವಾಗಿ ಕೊಟ್ಟನು (೨೦ ಮಾರು ಅಗಲ, ಒಂಭತ್ತು ಮಾರು ಎತ್ತರದ ವೇದಿಕೆ). ಆ ವೇದಿಕೆಯನ್ನು ಕಶ್ಯಪನ ಅನುಮತಿ ಮೇರೆಗೆ ಋತ್ವಿಜರು ಪರಸ್ಪರ ಹಂಚಿಕೊಂಡರು. ಆದ್ದರಿಂದ ಆ ಬ್ರಾಹ್ಮಣರಿಗೆ **ಖಾಂಡವಾಯನ** ಎಂಬ ಹೆಸರು ಬಂದಿತು.

ಹೀಗೆ ಪರಶುರಾಮನು ಭೂ ಮಂಡಲದಲ್ಲಿದ್ದ ದುಷ್ಟಕ್ಷತ್ರಿಯರ ಸಂಹಾರ ಮಾಡಿ, ಕಶ್ಯಪನಿಗೆ ಭೂದಾನ ಮಾಡಿ ಮಹೇಂದ್ರ ಶೈಲೇಂದ್ರದಲ್ಲಿ (ತಪೋನಿರತನಾಗಿ) ಇಲ್ಲಿಯೇ ವಾಸವಾಗಿದ್ದಾನೆ.

---

೧ ಜಘ್ನಿವಾನ್ ಕಾರ್ತವೀರ್ಯಸ್ಯ ಸುತಾನೇಕೋಂತಕೋಪಮಃ ।
ತ್ರಿಃಸಪ್ತಕೃತ್ವಃ ಪೃಥಿವೀಂ ಕೃತ್ವಾ ನಿಃಕ್ಷತ್ರಿಯಾಂ ಪ್ರಭುಃ ॥
ಸಮಂತಪಂಚಕೇ ಪಂಚ ಚಕಾರ ರುಧಿರಹ್ರದಾನ್ ।
ಸ ತೇಷು ತರ್ಪಯಾಮಾಸ ಭೃಗೂನ್ ಭೃಗಕುಲೋದ್ವಹಃ ॥
ಸಾಕ್ಷಾದ್ದದರ್ಶ ಚರ್ಚೀಕಂ ಸ ಚ ರಾಮಂ ನ್ಯವಾರಯತ್ ॥ – ವನಪರ್ವ(೧೧೭/೭-೧೦)

ಈ ರೀತಿ ಕ್ಷತ್ರಿಯರಿಗೂ ಪರಶುರಾಮನಿಗೂ ವೈರ ಉಂಟಾಯಿತು. ರಾಮನು ಭೂಮಂಡಲವನ್ನು ಗೆದ್ದು ದಾನ ಮಾಡಿದನೆಂದು ಧರ್ಮರಾಜನಿಗೆ ಅಕೃತವರ್ಣನು ಹೇಳಿದನು.

ನಂತರ ಮಾರನೇ ದಿನವೇ ಪರಶುರಾಮನು (ಚತುರ್ದಶಿಯಂದು) ಮಹೇಂದ್ರಪರ್ವತದಲ್ಲಿದ್ದ ಬ್ರಾಹ್ಮಣರಿಗೆ ಹಾಗೂ ಧರ್ಮರಾಜಾದಿ ಪಾಂಡವರಿಗೆ ದರ್ಶನವಿತ್ತನು. ಧರ್ಮರಾಜನು ಅವನ ಪೂಜೆಗೈದು ಬ್ರಾಹ್ಮಣರನ್ನು ಸತ್ಕರಿಸಿದ. ಪರಶುರಾಮನೂ ಧರ್ಮರಾಜನ ಧರ್ಮನಿಷ್ಠೆಯನ್ನು ಪ್ರಶಂಸಿಸಿದನು. ಧರ್ಮರಾಜನು ಅಂದು ರಾತ್ರಿ ಅಲ್ಲಿಯೇ ಇದ್ದು ಮುಂದೆ ದಕ್ಷಿಣದಿಕ್ಕಿಗೆ ಅನುಜರೊಡನೆ ಹೋದನು.

ಈ ಪರಶುರಾಮನ ಮಹಿಮಾಚರಿತ್ರೆಯು ಮುಂದೆ ಶಾಂತಿಪರ್ವದ ಅಧ್ಯಾಯ ೪೯ರಲ್ಲಿಯೂ ಬಂದಿದೆ. ಅಲ್ಲಿ ಕ್ಷತ್ರಿಯ ಸಂಹಾರದ ವಿವರಣೆ ವಿಶೇಷವಾಗಿ ಬಂದಿದೆ.

## ಸಂದೇಶಗಳು-ವಿವರಣೆಗಳು

೧. ಪರಶುರಾಮಕ್ಷೇತ್ರಕ್ಕೆ ಬಂದ ಯುಧಿಷ್ಠಿರನು ಅವರ ಆಗಮನ ವಿಷಯ ತಿಳಿದುಕೊಂಡದ್ದಲ್ಲದೆ, ಅವರು ಬರುವವರೆಗೆ ಕಾದಿದ್ದು ದರ್ಶನ ಪಡೆದು ಅವರಿಂದ ಅನುಗ್ರಹ ಪಡೆದು ಧನ್ಯವಾಗುತ್ತಾನೆ. ಭಗವಂತನ ಬರವಿಗಾಗಿ ನಾವು ಕಾಯಬೇಕು. ಈ ವಿಷಯದಲ್ಲಿ ಶಾಠ್ಯ ಕೂಡದು.

೨. ದತ್ತಾತ್ರೇಯ ರೂಪಿ ಭಗವಂತನ ಅನುಗ್ರಹ ಪಡೆದೂ ತನ್ನ ಜೀವನಸಾರ್ಥಕ ಪಡಿಸಿಕೊಳ್ಳದ ಕಾರ್ತವೀರ್ಯಾರ್ಜುನ, ಐಶ್ವರ್ಯ ಮದಾಂಧನಾಗಿ ಗುರು-ಹಿರಿಯರ ಹಾಗೂ ದೇವಾಗ್ರಹಕ್ಕೆ ತುತ್ತಾಗಿ ತಾನೂ ನಾಶವಾಗಿ ತನ್ನ ಕುಲ ಹಾಗೂ ಇಡೀ ಕ್ಷತ್ರಿಯ ಕುಲದ ನಾಶಕ್ಕೆ ಕಾರಣನಾದುದು, ಮದಾಂಧನ ಗತಿ ಏನಾಗುವುದೆಂದು ತಿಳಿಸುತ್ತದೆ. **ಭಗವಂತನು ಎಂದೂ ನಡತೆಗೆಟ್ಟವರನ್ನು ಕ್ಷಮಿಸ.**

೩. ಭಗವಂತನ ಅನುಗ್ರಹ ಸಂಪಾದನೆ ಅದು ಕೇವಲ ಧನಾತ್ಮಕ ಕಾರ್ಯಗಳಿಗೆ ಮಾತ್ರ ಉಪಯುಕ್ತವೇ ಹೊರತು, ಇತರ ಭಗವದ್ಭಕ್ತರಿಗೆ ಕಿರುಕುಳ ಕೊಡಲು ಅಲ್ಲ. ಹಾಗಾದರೆ ಸಪುತ್ರಮಿತ್ರ ಬಾಂಧವನಾಶ ಖಚಿತವೆನ್ನಲು ಕಾರ್ತವೀರ್ಯಾರ್ಜುನನೆ ಸಾಕ್ಷಿ.

೪. ಗಾಧಿರಾಜ ಋಚೀಕರಿಂದ ಕನ್ಯಾಶುಲ್ಕ ಪಡೆದುದು ಸ್ವಾರ್ಥಕ್ಕಲ್ಲ. ಕೇವಲ ಕುಲಧರ್ಮ ಕ್ಷತ್ರಿಯಧರ್ಮ ನಿರ್ವಹಣೆಗಾಗಿಯೇ ಹೊರತು ಕೇವಲ ದೊಡ್ಡಸ್ತಿಕೆ ತೋರಲಿಲ್ಲ.

೫. ಋಚೀಕರತಪಸ್ಸು ಅವರಿಗೆ ಬೇಕಾದ ಸಾವಿರ ಕುದುರೆಗಳ ಸಂಪಾದನೆಗೆ ನೆರವಾಯಿತು. ಮಾಡಿದ ತಪಸ್ಸು ದೇವತಾ ತೃಪ್ತಿ ಎಂದೂ ವ್ಯರ್ಥವಾಗವು. '**ನ ದೇವತೋಷಣಂ ವೃಥಾ**', '**ಸರ್ವೇಹಿ ಪುರುಷಾರ್ಥಾ ಸ್ಯುಃ ಜ್ಞಾನಾದೇವ ನ ಸಂಶಯಃ**' ಶಾಸ್ತ್ರಜ್ಞಾನ (ಪರೋಕ್ಷ),

ಅಪರೋಕ್ಷ ಜ್ಞಾನ-ತಪಸ್ಸಿನಿಂದ ಐಹಿಕ ಪಾರಮಾರ್ಥಿಕ ಫಲಗಳು ಸಿಗುವುದು ಸುಲಭವೇ ಸರಿ.

೬. ಭೃಗು ಋಷಿಗಳು ತಿಳಿಸಿದಂತೆ ನಡೆಯದ ಸೊಸೆ ಹಾಗೂ ಆಕೆಯ ತಾಯಿ ಯೋಗ್ಯ ಫಲ ಹೊಂದಲಿಲ್ಲ. ಶಾಸ್ತ್ರೋಕ್ತ ವಿಧಾನದಿಂದಲೇ ಸಾಧು ಫಲವೇ ಹೊರತು ಮನಸ್ಸಿಗೆ ಬಂದಂತೆ ಮಾಡಿದರೆ ಇಲ್ಲ. ಆದರೂ ಸೊಸೆಯ ಪರಿಪರಿ ಪ್ರಾರ್ಥನೆಯನ್ನು ಭೃಗುಗಳು ಮನ್ನಿಸಿ ಅನುಗ್ರಹಿಸುತ್ತಾರೆ. ಪಶ್ಚಾತ್ತಾಪದಿಂದ ಪಾಪ ಪರಿಹಾರವಾಗುತ್ತದೆ ಎನ್ನಲು ಸತ್ಯವತಿಗೆ ಭೃಗುಗಳು ಮಾಡಿದ ಅನುಗ್ರಹವೇ ಸಾಕ್ಷಿ (ಮಗ ಬ್ರಾಹ್ಮಣ, ಮೊಮ್ಮಗ ಕ್ಷತ್ರಿಯ ಬ್ರಾಹ್ಮಣನಾಗುತ್ತಾನೆ ಎಂಬುದು).

೭. ತಪೋ ಬಲದಿಂದ ಇತರರು ಮಾಡುವ ತಪ್ಪುಗಳನ್ನು ಗ್ರಹಿಸಲು ಸಾಧ್ಯವೆನ್ನಲು ರೇಣುಕೆ-ಜಮದಗ್ನಿಯರ ಕಥೆ ಸಾಕ್ಷಿ. ಭೃಗುಗಳು ತಮ್ಮ ಸೊಸೆ ಹಾಗೂ ಆಕೆಯ ತಾಯಿಯು ಮಾಡಿದ ವಿಪರೀತ ಚರುಭಕ್ಷಣ ರೂಪ ಅಪರಾಧ ತಿಳಿದುಕೊಂಡರು.

೮. ಪಿತೃವಾಕ್ಯ ಪರಿಪಾಲನೆಯಿಂದ ಆದ ಅನಾಹುತವನ್ನು ಬೆಣ್ಣೆಯಲ್ಲಿನ ಕೂದಲನ್ನು ತೆಗೆದಂತೆ ತೆಗೆದು ಪರಶುರಾಮರು ಸತ್ತ ತಾಯಿ, ಬುದ್ಧಿಭ್ರಮಣೆಗೊಳಗಾದ ಸೋದರರಿಗೆ ಪುನರ್ಜನ್ಮವನ್ನೇ ತಂದು ಕೊಟ್ಟರು. ಯದ್ಯಪಿ ಪರಶುರಾಮರಿಗೆ ಅದು ದೊಡ್ಡ ವಿಷಯವೆಲ್ಲವಾದರೂ ಪಿತೃವಾಕ್ಯ ಪರಿಪಾಲನೆಯ ಪಾಠ ತಿಳಿಸಿದರು, ಲೋಕಕ್ಕೆ.

೯. ತಂದೆಯನ್ನು ಅವಮಾನಿಸಿ ಕೊಂದ ಹೈಹಯರ ಹುಟ್ಟಡಗಿಸಿದ ರಾಮನು ಮಗನ ಕರ್ತವ್ಯ ಏನೆಂದು ತಿಳಿಸಿಕೊಡುತ್ತಾನೆ.

೧೦. ರಾಮನು ಸಾಮಾನ್ಯ ಮನುಷ್ಯನಂತೆ ದುಃಖಿಸುತ್ತಾನೆ. ಸತ್ತಾಗ ತಂದೆ ಪರಶುರಾಮ ಸಾಕ್ಷಾತ್ ವಿಷ್ಣುವಿನ ರೂಪ ಮನುಷ್ಯರು ಹೇಗೆ ವ್ಯವಹರಿಸಬೇಕೆಂಬ ಲೋಕ ವಿಡಂಬನೆ ಇಲ್ಲಿದೆ. ಅಸುರರಿಗೆ ಮೋಹ ಬರಿಸುವುದು ಇದರ ಇನ್ನೊಂದು ಉದ್ದೇಶ. ತಾನು ಆಶ್ರಮದಲ್ಲಿದ್ದರೆ ಜಮದಗ್ನಿಗಳು ಕೊಲ್ಲಲ್ಪಡುತ್ತಿರಲಿಲ್ಲ ನಿಜ. ಆದರೆ, ಇದ್ದಿದ್ದರೆ ದುಷ್ಟಕ್ಷತ್ರಿಯರ ಸಂಹಾರವೂ ಆಗುತ್ತಿದ್ದಿಲ್ಲ. ಆದ್ದರಿಂದ ತಂದೆಯ ವಧೆಯ ನಿಮಿತ್ತದಿಂದ ದುಷ್ಟಕ್ಷತ್ರಿಯರ ಸಂಹಾರ ನಡೆಸಿದ ಭಗವಂತ ಮತ್ತೆ ತಾನು ಸರ್ವವ್ಯಾಪ್ತನಾದರೂ ಅಜ್ಞಾನಿಯಂತೆ ನಟಿಸುತ್ತಾನೆ. ದ್ರೌಪದೀ ವಸ್ತ್ರಾಪಹರಣ, ದುರ್ದ್ಯೂತ ಪ್ರಸಂಗದಲ್ಲೂ ಹೀಗೆಯೇ ನುಡಿಯುತ್ತಾನೆ ಕೃಷ್ಣ ನಾನಿದ್ದರೆ ನೀವು ಈ ವ್ಯಸನಕ್ಕೆ ಒಳಗಾಗುತ್ತಿರಲಿಲ್ಲ ಎಂದು. ಆದರೆ ಭಗವಂತನ ಸಾನ್ನಿಧ್ಯವಿಲ್ಲದ ಸ್ಥಳ ಯಾವುದು ತಾನೇ ಇದೆ? ಇದೆಲ್ಲ ಲೋಕವಿಡಂಬನೆ. ಭಗವಂತನು ವಿದ್ಧನಂತೆ (ಹೊಡೆಯಲ್ಪಟ್ಟವನಂತೆ), ಸ್ವಯಂ ಮೋಹಗೊಂಡವನಂತೆ, ದುಃಖಿತನಂತೆ, ನಟಿಸಿ ಲೋಕವನ್ನೇ ಮೋಹಗೊಳಿಸುತ್ತಾನೆ[1].

೧ ಮುಹ್ಯಂತಿ ಯಂ ಸೂರಯಃ - ಭಾಗವತ (೧/೧/೧)

೧೧. ಪರಶುರಾಮನು ಸ್ವಯಂ ತಂದೆಗೆ ಪಿತೃಕ್ರಿಯೆ ಮಾಡಿ ಜಮದಗ್ನಿಗೆ ಸದ್ಗತಿಗಳನ್ನು ಇತ್ತು ಉದ್ಧರಿಸುತ್ತಾನೆ. ಲೋಕವಿಡಂಬನೆಯನ್ನು ಮಾಡಿ ಮಕ್ಕಳ ಕರ್ತವ್ಯ ತಿಳಿಸುತ್ತಾನೆ. ಪಿತೃತರ್ಪಣ ಕೊಟ್ಟು ಮಾದರಿಯಾಗುತ್ತಾನೆ, ಎಲ್ಲ ಮಕ್ಕಳಿಗೆ (ಯದ್ಯಪಿ ಆತನಿಗೆ ಯಾವ ವಿಧಿನಿಷೇಧಗಳೂ ಇಲ್ಲ).

೧೨. ಪರಶುರಾಮನು ಸಮಗ್ರ ಭೂಮಂಡಲವನ್ನು ಗೆದ್ದರೂ ಅದನ್ನು ತಾನೇ ಆಳಬಹುದಿತ್ತು. ಆದರೆ ಅದೆಲ್ಲವನ್ನು ಬ್ರಾಹ್ಮಣರಿಗೆ ದಾನಕೊಟ್ಟು ತಾನು ನಿಃಸ್ವಾರ್ಥಿ ಎಂದು ತೋರಿಸಿಕೊಟ್ಟ ಭಗವಂತನ ಎಲ್ಲ ವ್ಯಾಪಾರಗಳು ಭಕ್ತರ ಒಳಿತಿಗಾಗಿ ಸುಖಕ್ಕಾಗಿ ನಿಃಸ್ವಾರ್ಥ ಜೀವನದಲ್ಲಿಯೇ ನಿಜವಾದ ಸುಖವಿರುವುದು.

ತಂದೆಯ ಆಜ್ಞೆ ಮೇರೆಗೆ ಪರಶುರಾಮದೇವರು ತಾಯಿ ರೇಣುಕೆಯನ್ನು ಸಂಹರಿಸಿದರಷ್ಟೇ? ಆದರಿಂದ ಸಂತುಷ್ಟರಾದ ತಂದೆ ಜಮದಗ್ನಿ ಋಷಿಗಳು ಮಗ ಪರಶುರಾಮನಿಗೆ ವರ ಬೇಡೆಂದಾಗ ಅವನು **ಕೇಳಿದ ವರ ಹಾಗೂ ಪರಶುರಾಮನ ನಡೆಯ ಬಗ್ಗೆ ಶ್ರೀಮದಾಚಾರ್ಯರು ಭಾಗವತತಾತ್ಪರ್ಯದಲ್ಲಿ ಹೀಗೆ ನಿರ್ಣಯ ನೀಡಿದ್ದಾರೆ**[೧].

ಪರಶುರಾಮ ಜಮದಗ್ನಿಗಳಿಗೆ ಲೋಕದೃಷ್ಟಿಯಿಂದ ಮಗನೇ ಹೊರತು, ನಿಜವಾಗಿಯೂ ಮಗನೇ ಅಲ್ಲ, ನಾರಾಯಣಾವತಾರಿಯೇ ಪರಶುರಾಮ. ಅನಂತಶಕ್ತಿಯುಳ್ಳವನು ಸ್ವಯಂ ಸಕಲ ಲೋಕೇಶ್ವರ ತಾನು ರೇಣುಕೆಯನ್ನು ಸಂಹರಿಸಿದ್ದರೆ ಶಾಪದ ಭಯವೂ ಆದ್ದರಿಂದಲೇ ಇಲ್ಲ, ಆದರೂ ಪಿತೃವಾಕ್ಯಪರಿಪಾಲನೆಗಾಗಿ ಅವರ ಸಂತೋಷಕ್ಕಾಗಿ ರೇಣುಕೆಯನ್ನು ಸಂಹರಿಸಿದ. ತಂದೆಗೆ ಜಗತ್ತಿನಲ್ಲಿ ವಿಶೇಷವಾದ ಮಾನ್ಯತೆ ಸಿಗಲಿ ಎಂಬ ಭಾವನೆಯಿಂದ ಅವರ ಮಾತನ್ನು ನಡೆಸಿಕೊಟ್ಟನು. ರೇಣುಕೆಯೂ ಮಾನಸಿಕ ವ್ಯಭಿಚಅರಕ್ಕೆ ತುತ್ತಾಗಿ ಶಿಕ್ಷಾರ್ಹಳೇ ಅಗಿದ್ದಳು. ಅದರೂ ಮಾತೃವಧೆಯಂತಹ ದುಸ್ತರ ಕರ್ಮ ಮಾಡಿ ತಂದೆಯ ಪ್ರೀತಿಪಾತ್ರನಾದ ಪರಶುರಾಮ.

ಮತ್ತೆ ದುಷ್ಟಶಕ್ತಿಯ ಸಂಹಾರಕ್ಕಾಗಿ ೨೧ ಬಾರಿ ಪೃಥ್ವೀ ಪ್ರದಕ್ಷಿಣೆ ಮಾಡಿ ಕ್ಷತ್ರಿಯ ವಂಶವನ್ನೇ ತರಿದು ಬಿಟ್ಟ ವಿಷಯದಲ್ಲೂ ಆಚಾರ್ಯರು ನೀಡಿದ ನಿರ್ಣಯವನ್ನು ನಾವು ಮನನ ಮಾಡುವುದು ಸೂಕ್ತ. ಕ್ಷತ್ರಿಯ ಸಂಹಾರದ ನಂತರ ಕುರುಕ್ಷೇತ್ರದಲ್ಲಿ ಸಮಂತಪಂಚಕದಲ್ಲೂ ರಕ್ತದ ಮಡುವುಗಳನ್ನು ಮಾಡಿ ಅದರಿಂದಲೇ ತರ್ಪಣ ಕೊಟ್ಟ ಪರಶುರಾಮರನ್ನು ಕುರಿತು ಪಿತೃಗಳು ಮತ್ತೆ ಕ್ಷತ್ರಿಯ ಸಂಹಾರ ಸಾಕೆಂದು ತಡೆದರೆಂದು ಕೇಳುತ್ತೇವೆ. ಈ ಬಗ್ಗೆ

---

ಕವಯೋಽಪ್ಯತ್ರ ಮೋಹಿತಾಃ (ಗೀತೆ - ೪/೧೬)
ವಿದ್ವದ್ವತ್ ಮುಗ್ಧವಚ್ಚೈವ ಕೇಶವೋ ವೇದನಾರ್ತವತ್ । - ಮ.ತಾ.ನಿ. (೧೧/೯೬)

೧ ಜಾಮದಗ್ನ್ಯೋ ವರಂ ವವ್ರೇऽನಂತಶಕ್ತಿರಪಿ ಸ್ವಯಮ್ ।
ಪಿತೃಮಾನ್ಯತ್ವ ಸಿದ್ಧ್ಯರ್ಥಂ ಲೋಕೇ ಲೋಕೇಶ್ವರಃ ಪ್ರಭುಃ ॥ - ಭಾಗ.ತಾ.ನಿ.(೧೪/೭)

ಆಚಾರ್ಯರು ಪ್ರಮಾಣೋದಾಹರಣ ಮಾಡಿ ಪರಶುರಾಮರ ಮಹೋನ್ನತ ವ್ಯಕ್ತಿತ್ವವನ್ನು ಸಾರುತ್ತಾರೆ[೧].

ಪರಶುರಾಮನು ದೇವತಾ ಸಾರ್ವಭೌಮ. ಅವನನ್ನು ಪಿತೃಗಳು ತಡೆದುದು ಅವರಲ್ಲಿನ ಪರಶುರಾಮನ ಅಜ್ಞಾನದಿಂದಲೇ ಭಗವಂತನ ಮಾಹಾತ್ಮ್ಯ ತಿಳಿಯದೆ ಪಿತೃಗಳು ಪರಶುರಾಮನನ್ನುದುಷ್ಟಕ್ಷತ್ರಿಯಸಂಹಾರವನ್ನುತಡೆದರು. ಅವರುಹಾಗೆತಡೆಯಬಾರದಿತ್ತು. ಪಿತೃಗಳು ಹಾಗೆ ತಡೆಯಲು ಕಾರಣ ಭಗವಂತನ ಇಚ್ಛಾರೂಪ ಮಾಯೆ. ಅದನ್ನು ಯಾರೂ ಮೀರಲಾರರು[೨].

ಪರಶುರಾಮರಿಗೆ ಕ್ಷತ್ರಿಯ ವಧೆಯಿಂದ ಪಾಪ ಬಂದೀತೆಂಬ ಭಯ ಪಿತೃಗಳಿಗೆ. ಆದ್ದರಿಂದ ತಡೆದರು. ಪುಣ್ಯಪಾಪಗಳನ್ನು ನಿರ್ಮಿಸುವ ಜನಕನಿಗೆ (ಪುಣ್ಯಪಾಪಗಳ ನಿಯಾಮಕನಿಗೆ) ಪಾಪವೆಲ್ಲಿಯದು? ಎಂದು ತಿಳಿಯದೆ ಅವರು ತಡೆದರು. ಕೃಷ್ಣನನ್ನು ದುರ್ಯೋಧನಾದಿಗಳು ಬಂಧಿಸುವರೆಂದು ವಿದುರ ತಿಳಿಸುವ ಆತನ ಭಯವೂ ಇಂತಹುದೇ. ಇವರೆಲ್ಲ ಭಿನ್ನಭಕ್ತರಾದ್ದರಿಂದ ಇವರಿಗೆ ಭಗವದ್ಭಕ್ತಿಯಲ್ಲಿ ಆಗಾಗ್ಗೆ ವ್ಯತ್ಯಯವಾಗುತ್ತಿರುತ್ತದೆ.

ಆದ್ದರಿಂದ ಪರಶುರಾಮರಿಗೆ ತಾಯಿ ವಧೆಯಿಂದ ಪಾಪ ಬರಲೂ ಇಲ್ಲ. ವರ ಬೇಡಿದ್ದು ಕೇವಲ ತಂದೆಗೆ ಲೋಕದಲ್ಲಿ ಕೀರ್ತಿ ಬರಲೆಂದು ಮತ್ತು ಅಸುರ ಜನರನ್ನು ಮೋಹಗೊಳಿಸುವ ಸಲುವಾಗಿ ಎಂದು ತಿಳಿಯುವುದೇ ತತ್ತ್ವ.

ಇಂತಹ ಎಲ್ಲ ಪ್ರಸಂಗಗಳಲ್ಲೂ ಈ ತತ್ತ್ವವನ್ನು ತಪ್ಪದೇ ನೆನಪಿನಲ್ಲಿಟ್ಟುಕೊಂಡಾಗ ವಿಷ್ಣುಸರ್ವೋತ್ತಮತ್ವ ಜ್ಞಾನದ ಸಂಸ್ಕಾರ ಸುಸ್ಥಿರವಾಗಿರುತ್ತದೆ.

## ಪರಶುರಾಮ ಚರಿತೆಯ ಸಂದೇಶಗಳು

೧. ಹೈಹಯ ವಂಶದಲ್ಲಿ ಜನಿಸಿ, ದತ್ತಾತ್ರೇಯರೂಪಿ ವಿಷ್ಣುವಿನ ಅನುಗ್ರಹ ಸಂಪಾದಿಸಿದರೂ, ಕಾರ್ತವೀರ್ಯಾರ್ಜುನ ಐಶ್ವರ್ಯಮದದಿಂದ ವರ್ತಿಸಿದ್ದರಿಂದ ವಿಷ್ಣುವಿನ ಮತ್ತೊಂದು ರೂಪವಾದ ಪರಶುರಾಮರಿಂದ ಹತನಾದ.

೨. ಗೋ ಬ್ರಾಹ್ಮಣರನ್ನು ಅವಮಾನಿಸಿದ್ದು ಕಾರ್ತವೀರ್ಯನ ಮರಣಕ್ಕೆ ಕಾರಣವಾಯಿತು. ಗೋಬ್ರಾಹ್ಮಣ ಪ್ರಿಯನಾದ ವಿಷ್ಣುವು ಅವರ ಅವಮಾನವನ್ನು ಎಂದೂ ಸಹಿಸುವುದಿಲ್ಲ. ತಾನೇ

---

೧ ಅಪಾಪಮಪಿ ದೇವೇಶಂ ಪಿತರಃ ಸಂನ್ಯವರ್ತಯನ್ ।
ಅಜಾನಂತೋಽಸ್ಯ ಮಾಹಾತ್ಮ್ಯಂ ಮೋಹತಸ್ತಸ್ಯ ಮಾಯಯಾ ॥
ಮೋಹಯನ್ಮಾಯಯಾ ಲೋಕಂ ಚಕ್ರೇ ಚಾಪಚಿತಿಂ ವಧೇ ।
**ಪುಣ್ಯಪಾಪಾದಿ ನಿರ್ಮಾತುಃ ಕುತಃ ಪಾಪಾದಿ ಸಂಗತಿಃ ॥** ಇತಿ ಚ । - ಭಾ.ತಾ.ನಿ.(೧೪/೧೯)

೨ ಮಯ ಮಾಯಾ ದುರತ್ಯಯಾ - ಗೀತಾ (೭/೧೪)

ವರಕೊಟ್ಟಿದ್ದ ಕಾರ್ತವೀರ್ಯಾರ್ಜುನನನ್ನು ತಾನೇ ಕೊಂದು ಲೋಕದ ಸಂರಕ್ಷಣೆಗೆ ಮುಂದಾದ ದಂಭ, ದರ್ಪಗಳೆಂದೂ ಸಾಧಕನಿಗೆ ಇರಕೂಡದು. ಪಾಂಡವ-ಅರ್ಜುನನೂ ವಿಪ್ರಶಿಶು ಸಂರಕ್ಷಣೆಯ ವಿಷಯದಲ್ಲಿ ದರ್ಪದಿಂದ ವರ್ತಿಸಿ ಕೃಷ್ಣ-ಬಲರಾಮ ಮೊದಲಾದವರನ್ನು ಹೀಗಳೆದಾಗ ಕೃಷ್ಣನು ಅರ್ಜುನನಿಗೆ ತನ್ನ ಮಹಿಮೆ ತೋರಿಸಿ ಎಚ್ಚರಿಸಿದ. ಕಾರಣ ಅರ್ಜುನನ ದರ್ಪಕ್ಕೆ ಮಿತಿ ಇತ್ತು. ಆತನ ತಪ್ಪಿನ ಅರಿವಿತ್ತು. ಕ್ಷಮೆಯಾಚಿಸಿದ ಅರ್ಜುನ, ಆದ್ದರಿಂದ ಕೃಷ್ಣ ಎಚ್ಚರಿಸಿದ.

**ತಸ್ಮಾನ್ನ ವಿಸ್ಮಯಃ ಕಾರ್ಯಃ ನ ದರ್ಪಶ್ಚ ತ್ವಯಾನಘ ॥ -ಮ.ತಾ.ನಿ.(೨೧/೫೨)**

ಆದರೆ ಕಾರ್ತವೀರ್ಯಾರ್ಜುನನ ಮಿತಿಮೀರಿದ ದರ್ಪ ಆತನನ್ನೇ ಆಹುತಿ ತೆಗೆದುಕೊಂಡಿತು. ಇದಕ್ಕೆ ಕಾರಣ ಆತನು ಕೇವಲ ಚಕ್ರವರ್ತಿ ಅರ್ಜುನನಾದರೋ ಇಂದ್ರ. ಹೀಗೆ ತಾರತಮ್ಯದಲ್ಲಿ ಅಧಿಕನಾದ ಇಂದ್ರರೂಪಿ ಅರ್ಜುನನ ಅಪರಾಧ ಅತ್ಯಲ್ಪ ಹಾಗೂ ತಾತ್ಕಾಲಿಕ. ಕಾರ್ತವೀರ್ಯಾರ್ಜುನನ ಅಪರಾಧ ಮೇರೆ ಮೀರಿತ್ತು, ಅಲ್ಪಾಧಿಕಾರಿಯಾದ್ದರಿಂದ.

೩. ಋಚೀಕರ ತಪಸ್ಸಿಗೆ, ಪ್ರಾಮಾಣಿಕತೆಗೆ ವರುಣದೇವರಿಂದ ಗುರುದಕ್ಷಿಣೆಗೆ ೧೦೦೦ ಅಶ್ವಗಳನ್ನು ಪಡೆಯಲುಸಹಾಯಕವಾಯಿತು. ತಪಸ್ಸಿನಿಂದ ಏನನ್ನಾದರೂ ಪಡೆಯಬಹುದು.

೪. ಭೃಗು ಋಷಿಗಳು ತಮ್ಮ ಮಗಳಿಗೆ, ಆಕೆಯ ತಾಯಿಗೆ ತಮ್ಮ ತಪಸ್ಸನ್ನು ಧಾರೆಯೆರೆದು ಬ್ರಾಹ್ಮಣ ಕ್ಷತ್ರಿಯೋಚಿತ ಸಂತಾನವನ್ನು, ಅದನ್ನು ಮುಂದೆ ಕೊಂಚ ಬದಲಾಯಿಸಲೂ ಸಮರ್ಥರಾದರೂ ಅದಕ್ಕೂ ತಪಸ್ಸೇ ಕಾರಣ.

೫. ಕಾಮ ಎಂತಹ ತಪಸ್ಸಿಗೂ ಹೊರತಾದುದಲ್ಲ. ಜಮದಗ್ನಿಗಳಂತಹ ಮಹಾತಪಸ್ವಿಗಳ ಪತ್ನಿಯೂ ಜಲಕ್ರೀಡೆಯಾಡುತ್ತಿದ್ದ ರಾಜನನ್ನು ಕಂಡು ಕಾಮಕ್ಕೆ ತುತ್ತಾದಳು. ಅದಕ್ಕೆ ಕಾರಣ ಅಂತಹ ಪರಿಸರದಲ್ಲಿದ್ದುದು. ಆದ್ದರಿಂದ ಅಂತಹ ಸನ್ನಿವೇಶಗಳಿಂದ ದೂರವಾಗಿದ್ದರೆ ಚೆನ್ನ[1].

ಸೌಭರಿಗಳು ಕೇವಲ ಮೀನುಗಳ ವಿಹಾರ ನೋಡಿದ್ದಕ್ಕೇ ದಾಂಪತ್ಯ ಜೀವನ ಬಯಸಿದರು. ರೇಣುಕಾದೇವಿ ಚಿತ್ರರಥರಾಜನ-ಪತ್ನಿಯರ ಜಲಕ್ರೀಡೆ ನೋಡಿ ಕಾಮಾವಿಷ್ಟಳಾದುದು ಆಶ್ಚರ್ಯವಲ್ಲ. ಇಂದ್ರಿಯ ನಿಗ್ರಹವಿದ್ದಾಗ ಹೀಗೆ ಆಗದು. ಅದು ಅಧಿಕಾರಭೇದೇನ ನಡೆಯುವ ಪ್ರಕ್ರಿಯೆ. ಆದ್ದರಿಂದ ಇಂದ್ರಿಯನಿಗ್ರಹಕ್ಕೆ ಪ್ರಯತ್ನಿಸುತ್ತಾ ಅಂತಹ ಸನ್ನಿವೇಶದಿಂದ ದೂರವಿರುವುದೇ ಸೂಕ್ತ.

---

೧ ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನ ಮಿಹವೈರಿಣಮ್ ॥ - ಭಗವದ್ಗೀತೆ(೩/೩೭)

**ಅಸಂಗಶಸ್ತ್ರೇಣ ದೃಢೇನ ಛಿತ್ವಾ। - ಭಗವದ್ಗೀತೆ(೧೫/೩)**

೬. ಹೆಂಡತಿ ತಪ್ಪು ಮಾಡಿದಾಗಲೂ ಕ್ಷಮಿಸಲಿಲ್ಲ. ಜಮದಗ್ನಿಗಳು ಆಕೆಗೂ ಶಿಕ್ಷೆ ವಿಧಿಸಿಯೇ ಬಿಟ್ಟರು. ತಪ್ಪು ಮಾಡಿದವರು ಬಂಧುಗಳೇ ಆಗಲೀ ಯಾರೇ ಆಗಲೀ ಶಿಕ್ಷಾರ್ಹವೇ ಸರಿ.

೭. ಜಮದಗ್ನಿಗಳ ಮಾತನ್ನು ನೆರವೇರಿಸಿದನು ಪರಶುರಾಮ. ಆದ್ದರಿಂದ ಪಿತೃವಾಕ್ಯ-ಪರಿಪಾಲಕನಾಗಿ ಆದರ್ಶನಾದ. ಆದರೆ ಮುಂದೆ ತಾಯಿಯನ್ನೂ, ಸಹೋದರರನ್ನೂ ಬದುಕಿಸಿ ಉಳಿಸಿದ ಕಾರುಣ್ಯಮೂರ್ತಿ ಎನಿಸಿದ. ತಂದೆ-ತಾಯಿಗಳ ಮಾತನ್ನು ಅದು ಎಷ್ಟೇ ಕ್ರೂರವಾಗಿದ್ದರೂ ಪಾಲನೆ ಮಾಡುವುದೇ ಮಕ್ಕಳ ಆದ್ಯ ಕರ್ತವ್ಯ.

೮. ಭಗವಂತನ ಭುಜಗಳಿಂದ ಹುಟ್ಟಿದವರೇ ಕ್ಷತ್ರಿಯರು. ಅವರೇ ದುಷ್ಟರಾದರೆ ಅವರಿಗೆ ಶಿಕ್ಷೆ ತಪ್ಪಿದ್ದಲ್ಲ.

**ಛಿಂದ್ಯಾಂ ಸ್ವಬಾಹುಮಪಿ ವಃ ಪ್ರತಿಕೂಲವೃತ್ತಿಮ್ । - ಭಾಗವತ(೩/೧೭/೬)**

ಆದ್ದರಿಂದ ದುಷ್ಟಕ್ಷತ್ರಿಯರೆಲ್ಲರನ್ನು ೨೧ ಬಾರಿ ಭೂಪ್ರದಕ್ಷಿಣೆ ಮಾಡಿ ತರಿದು ಬಿಸುಟಿದ ಪರಶುರಾಮದೇವರ ಆದರ್ಶದಲ್ಲಿ ಯಾವ ಕಳಂಕವೂ ಇಲ್ಲ.

೯. 'ಪರಶುರಾಮರ ವರ್ತನೆಗಳ ನಿರ್ಣಯಗಳನ್ನು ಅಸುರಮೋಹಕ ವರ್ತನೆಯೇ' ಎಂದು ಭಾಗವತತಾತ್ಪರ್ಯನಿರ್ಣಯದಲ್ಲಿ ನಿರೂಪಿಸಿರುವುದನ್ನು ಅವಶ್ಯವಾಗಿ ಗಮನಿಸಬೇಕು.

೧೦. ಪರಶುರಾಮದೇವರು ಆದರ್ಶಬ್ರಾಹ್ಮಣರಿಗೆ ಉಪದೇಶಕರಾಗಿ ದುಷ್ಟಕ್ಷತ್ರಿಯರ ಸಂಹಾರಕರಾಗಿ ಕ್ಷಾತ್ರತೇಜಸ್ಸನ್ನು ಮೆರೆದ '**ಕ್ಷತ್ರಕುಲಾಂತಕ ಶಂಭುವರೇಣ್ಯ**'ರೇ ಆಗಿದ್ದಾರೆ.

ಇತ್ಯಾದಿ....

## ೩೫. ಚ್ಯವನ-ಸುಕನ್ಯಾಚರಿತ್ರೆ

ಪರಶುರಾಮರ ದರ್ಶನ ನಂತರ ಪಾಂಡವರು ಆ ರಾತ್ರಿ ಮಹೇಂದ್ರಪರ್ವತದಲ್ಲಿದ್ದು ಮಾರನೇ ದಿನ ಬ್ರಾಹ್ಮಣರ ಅನುಮತಿ ಪಡೆದು ದಕ್ಷಿಣಾಭಿಮುಖವಾಗಿ ಹೋದರು. ಮುಂದೆ ಪ್ರಭಾಸಕ್ಷೇತ್ರಕ್ಕೆ ಹೋಗಿ ಯಾದವರ ಸಮಾಗಮ, ಸಾತ್ಯಕಿಯ ಪ್ರೋತ್ಸಾಹದ ಮಾತುಗಳನ್ನು ಕೇಳಿ ಕೃಷ್ಣ ಅನುಗ್ರಹ, ಬಲರಾಮನ ಅನುಕಂಪ ಪಡೆದು ಲೋಮಶರೊಡನೆ ಪಯೋಷ್ಣೀ ನದಿಯ ತೀರಕ್ಕೆ ಆಗಮಿಸಿದರು. ಅಲ್ಲಿನ ಬ್ರಾಹ್ಮಣರು ಪಾಂಡವರನ್ನು ಸ್ವಾಗತಿಸಿದರು.

ಲೋಮಶರು ಪಯೋಷ್ಣೀ ನದಿಯ ಮಹತ್ತ್ವ, ಇಲ್ಲಿ ನಡೆದ ನೃಗಚಕ್ರವರ್ತಿಯ ಯಜ್ಞವೈಭವ, ಇಂದ್ರದೇವರು ಸ್ವಯಂ ಬಂದು ಸೋಮರಸ ಮಾಡಿ ಸಂತುಷ್ಟರಾದ ವಿಷಯಗಳನ್ನು ವರ್ಣಿಸಿದರು. ಅಲ್ಲದೇ ವೈದೂರ್ಯಪರ್ವತ, ನರ್ಮದಾನದಿಯ ಮಹತ್ತ್ವವನ್ನು ಪಾಂಡವರು ಕೇಳಿ ಸಂತುಷ್ಟರಾದರು. ಗಯ ಮಾಡಿದ ಅಭೂತಪೂರ್ವ ಯಜ್ಞವರ್ಣನೆ ಕೇಳುತ್ತಾರೆ. ವೈದೂರ್ಯಪರ್ವತ ಸಂದರ್ಶಿಸಿ, ನರ್ಮದೆಯಲ್ಲಿ ಮಿಂದು ಪವಿತ್ರನಾಗಿ ಉತ್ತಮಲೋಕಗಳನ್ನು ಹೊಂದುವ ಈ ಸ್ಥಳವು ಚ್ಯವನರು ಯಜ್ಞ ಮಾಡಿ ಅಶ್ವಿನೀದೇವತೆಗಳಿಗೆ ಸೋಮಪಾನ ಮಾಡಿಸಿ, ಇಂದ್ರದೇವರ ಹಸ್ತವಜ್ರಾಯುಧಸ್ತಂಭ ಮಾಡಿದ ಸ್ಥಳವೂ ಇದುವೇ ಎಂದು ಲೋಮಶರು ಹೇಳಿದಾಗ ಆ ಪ್ರಸಂಗವನ್ನು ವಿವರವಾಗಿ ವರ್ಣಿಸಲು ಧರ್ಮರಾಜನು ಪ್ರಾರ್ಥಿಸುತ್ತಾನೆ[೧].

ಭೃಗುವಂಶಚರಿತ್ರೆಯ ಬಗ್ಗೆ ಆದಿ ಪರ್ವದಲ್ಲಿ ಬಂದಿದೆ.

ಭೃಗುಮಹರ್ಷಿಗಳ ಮಗನೇ ಚ್ಯವನ. ಈ ಸರಸ್ಸಿನ ತೀರದಲ್ಲಿಯೇ ತಪಸ್ಸು ಮಾಡುತ್ತಿದ್ದನು. ವೀರಾಸನದಲ್ಲಿ ಕುಳಿತು ಸ್ಥಾಣುವಿನಂತೆ - ಮಹಾತೇಜಸ್ವಿಗಳಾದ ಇವರ ತಪಸ್ಸು ಅನೇಕ

---

೧ ವೈದೂರ್ಯಪರ್ವತಂ ದೃಷ್ಟ್ವಾ ನರ್ಮದಾಮವತೀರ್ಯ ಚ।
ಸಂಧಿರೇಷ ನರಶ್ರೇಷ್ಠ ತ್ರೇತಾಯಾ ದ್ವಾಪರಸ್ಯ ಚ॥
ಏನಮಾಸಾದ್ಯ ಕೌಂತೇಯ ಸರ್ವಪಾಪ್ಯೈಃ ಪ್ರಮುಚ್ಯತೇ।
ಏಷ ಶರ್ಯಾತಿಯಜ್ಞಸ್ಯ ದೇಶಸ್ತಾತ ಪ್ರಕಾಶತೇ॥
ಸಾಕ್ಷಾತ್ ಯತ್ರಾಪಿ ಬತ್ ಸೋಮಮಶ್ವಿಭ್ಯಾಂ ಸಹ ಕೌಶಿಕಃ।
ಚುಕೋಪ ಭಾರ್ಗವಶ್ಚಾಪಿ ಮಹೇಂದ್ರಸ್ಯ ಮಹಾತಪಾಃ॥
ಸಂಸ್ತಂಭಯಾಮಾಸ ಚ ಚ ತಂ ವಾಸವಂ ಚ್ಯವನಃ ಪ್ರಭುಃ।
ಸುಕನ್ಯಾಂ ಚಾಪಿ ಭಾರ್ಯಾಂ ಸ ರಾಜಪುತ್ರೀಮವಾಪ್ತವಾನ್॥ - ವನಪರ್ವ(೧೨೧/೧೯-೨೨)

ವರ್ಷಗಳವರೆಗೆ ನಡೆಯಿತು. ಇವರ ಸುತ್ತಲೂ ಬಳ್ಳಿಗಳು ಬೆಳೆದವು. ಹುತ್ತವೂ ಬೆಳೆಯಿತು. ಇರುವೆಗಳು ಹುತ್ತವನ್ನು ಮುತ್ತಿದವು. ಆದರೆ ಚ್ಯವನರ ತಪಸ್ಸಿಗೆ ಮಾತ್ರ ಇದರಿಂದ ಯಾವುದೇ ಚ್ಯುತಿ ಬರಲಿಲ್ಲ[೧].

ಒಮ್ಮೆ ಶರ್ಯಾತಿ ಎಂಬ ರಾಜನು ಈ ಸರಸ್ಸಿನಲ್ಲಿ ವಿಹಾರಗೈಯ್ಯಲು ಪರಿವಾರ ಸಮೇತನಾಗಿ ನಾಲ್ಕು ಸಾವಿರ ಪತ್ನಿಯರೊಡನೆ ಸೈನ್ಯಸಮೇತನಾಗಿ ಹಾಗೂ ತನ್ನ ಪ್ರೀತಿಯ ಕುವರಿಯಾದ ಸುಕನ್ಯಾಳೊಡನೆ ಬರುತ್ತಾನೆ. ಈ ಸುಕನ್ಯೆ ತನ್ನ ಸಖಿಯರೊಡನೆ ತನ್ನ ಯೌವನರೂಪಗಳ ಸೊಕ್ಕಿನಿಂದಾಗಿ ವನದ ಐಸಿರಿಯಲ್ಲಿ ಸ್ವೇಚ್ಛಾವಿಹಾರ ಮಾಡುತ್ತಾ ಗಿಡಬಳ್ಳಿಗಳನ್ನು ಮುರಿಯುತ್ತಾ ತಿರುಗಾಡುತ್ತಿದ್ದಳು. ವನವನ್ನೆಲ್ಲ ಮಿಂಚಿನಂತೆ ಸಂಚರಿಸುತ್ತಾ ಚ್ಯವನರ ವಲ್ಮೀಕದ ಬಳಿ ಬಂದಾಗ ಅದರೊಳಗೆ ಇದ್ದ ಚ್ಯವನರು ಈ ನಯನಮನೋಹರಳಾದ ಸುಕನ್ಯೆಯ ರೂಪಕ್ಕೆ ಮಾರುಹೋಗಿ ಕಾಮಪರವಶರಾಗಿ ತಮ್ಮ ಕ್ಷೀಣಧ್ವನಿಯಿಂದಲೇ ಆಕೆಯನ್ನು ಕರೆದರು. ಋಷಿಗಳ ಧ್ವನಿಯೆಂದು ಗುರುತಿಸದಿದ್ದರೂ ಸುಕನ್ಯೆಯು ವಲ್ಮೀಕದಿಂದ ಬಂದ ಶಬ್ದವನ್ನು ಆಲಿಸಿ ವಲ್ಮೀಕದಲ್ಲಿ ತೇಜೋಮಯವಾದ ಕಣ್ಣುಗಳನ್ನು ನೋಡಿ ಕುತೂಹಲದಿಂದ ಮುಳ್ಳೊಂದರಿಂದ ಋಷಿಗಳ ಕಣ್ಣುಗಳನ್ನು ಚುಚ್ಚಿದಳು. ಅದರಿಂದ ನೊಂದ ಋಷಿಗಳು ಖತಿಗೊಂಡು ಶರ್ಯಾತಿ ಸೈನ್ಯದ ಮಲಮೂತ್ರಸ್ತಂಭನ ಮಾಡಿದರು. ಕೂಡಲೇ ಸಮಗ್ರ ಶರ್ಯಾತಿಸೈನ್ಯ ಮಲಮೂತ್ರ ಮಾಡಲಾರದೇ ತುಂಬಾ ದುಃಖಕ್ಕೆ ಒಳಗಾಯಿತು. ಸೇನೆ ರಾಜನಿಗೆ ತನ್ನ ದುಃಖ ತೋಡಿಕೊಂಡಿತು. ರಾಜನು ಇದು ಈ ವನದಲ್ಲಿರುವ ಚ್ಯವನ ಋಷಿಗಳ ಕೋಪದ ಫಲವಿರಬೇಕು. ನಮ್ಮವರು ಯಾರೋ ಆ ಋಷಿಗಳಿಗೆ ಅಪಚಾರ ಮಾಡಿರಬೇಕೆಂದು ಬಗೆದು ಸೇನೆಯನ್ನು ವಿಚಾರಿಸಿ, ಅಲ್ಲಿ ಯಾರೂ ತಾವು ಯಾವುದೇ ಋಷಿಗೆ ಅಪಚಾರ ಬಗೆದಿಲ್ಲವೆಂದು ಪ್ರಾಮಾಣಿಕವಾಗಿ ತಿಳಿಸಿದರು. ಸೈನ್ಯದ ನೋವನ್ನು ಕಂಡ ಸುಕನ್ಯೆ ತಾನೇ ಬಂದು ವಲ್ಮೀಕದಲ್ಲಿದ್ದ ಯಾವುದೋ ಜ್ವಲಿಸುವ ವಸ್ತುವನ್ನು ಚುಚ್ಚಿ ಅಪರಾಧ ತನ್ನದೆಂದೇ ಪ್ರಾಂಜಲಿಯಾಗಿ ತಂದೆಯ ಮುಂದೆ ಒಪ್ಪಿದಳು. ಕೂಡಲೇ ರಾಜನು ವಲ್ಮೀಕದ ಬಳಿಗೆ ಬಂದು ನಡೆದ ತನ್ನ ಮಗಳ ಅಪಚಾರವನ್ನು ನಿವೇದಿಸಿ, ಕ್ಷಮಿಸಲು ಕೋರಿದನು. ಆಗ ಅಪಚಾರದ ಮಾರ್ಜನಕ್ಕಾಗಿ ಮಗಳನ್ನೇ ತಮಗೆ ಧಾರೆಯೆರೆಯಲು ಒಪ್ಪಿದಲ್ಲಿ ಅಪರಾಧವನ್ನು ಕ್ಷಮಿಸುವುದಾಗಿ ಚ್ಯವನರು ಹೇಳಿದಾಗ ರಾಜನು ವಿಚಾರ ಮಾಡದೇ ಹಾಗೇ ಆಗಲಿ ಎಂದು ಒಪ್ಪಿ ತನ್ನ ಮಗಳನ್ನು ಚ್ಯವನರಿಗೆ ಒಪ್ಪಿಸುತ್ತಾನೆ. ಚ್ಯವನರು ಸುಕನ್ಯೆಯನ್ನು ಸ್ವೀಕರಿಸಿ ಸೈನ್ಯಕ್ಕೆ ಒದಗಿದ ದುಃಖವನ್ನು ಪರಿಹರಿಸುತ್ತಾರೆ.

---

೧ ಸಮೀಪೇ ಸರಸಸ್ತಸ್ಯ ತಪಸ್ತೇಪೇ ಮಹಾದ್ಯುತಿಃ।
ಸ್ಥಾಣುಭೂತೋ ಮಹಾತೇಜಾ ವೀರಸ್ಥಾನೇನ ಪಾಂಡವ॥
ಸ ವಲ್ಮೀಕೋಽಭವದೃಷಿರ್ಲತಾಭಿರಿವ ಸಂವೃತಃ।
ತಪ್ಯತೇ ಸ್ಮ ತಪೋ ಘೋರಂ ವಲ್ಮೀಕೇನ ಸಮಾವೃತಃ॥ - ವನಪರ್ವ(೧೨೨/೧-೪)

ಸುಕನ್ಯೆಯಾದರೋ ತಪೋವೃದ್ಧರಾದ ಚ್ಯವನರನ್ನು ಪತಿಯನ್ನಾಗಿ ಪಡೆದು ಅವರ ಸೇವೆಯನ್ನು ನಿತ್ಯವೂ ನಿರ್ವ್ಯಾಜ ರೀತಿಯಲ್ಲಿ ಮಾಡಿ ಅಗ್ನಿ, ಅತಿಥಿಗಳನ್ನು ಸೇವಿಸುತ್ತಾ ಪಾತಿವ್ರತ್ಯದ ಆದರ್ಶಗುಣಗಳನ್ನು ತನ್ನಲ್ಲಿ ರೂಢಿಸಿಕೊಳ್ಳುತ್ತಾಳೆ[೧].

ಒಮ್ಮೆ ಸುಕನ್ಯೆ ಸ್ನಾನಮಾಡಿ ದರ್ಶನೀಯಳಾಗಿರುವಾಗ ಅಶ್ವಿನೀದೇವತೆಗಳು ಆಕೆಯ ಬಳಿ ಬಂದು 'ನೀನಾರು. ಈ ವನದಲ್ಲಿ ಏನು ಮಾಡುತ್ತೀ?' ಎಂದಾಗ ಆಕೆ 'ನಾನು ಶರ್ಯಾತಿಯ ಮಗಳು, ಚ್ಯವನಪತ್ನಿ' ಎಂದು ನುಡಿದಳು. ಅವರು ನಸುನಕ್ಕು, ನಿರಾಭರಣಸುಂದರಿಯೂ, ಉತ್ತಮವಸ್ತ್ರಾದಿಗಳಿಲ್ಲದಿದ್ದರೂ ಪರಮ ಸುಂದರಿಯಾಗಿ ತೋರುವ, ವನದ ಐಸಿರಿಗೂ ಕಾಂತಿಯಂತಿರುವ ನೀನು ವೃದ್ಧನಾದ ಚ್ಯವನನನ್ನು ಹೇಗೆ ತಾನೇ ಸೇವಿಸುತ್ತಿದ್ದೀ? ನಿನ್ನನ್ನು ಪೋಷಿಸಲು ಅಸಮರ್ಥನಾದ ಚ್ಯವನನು ನಿನಗೆ ಹೇಗೆ ಪತಿಯಾದಾನು? ಆದ್ದರಿಂದ ನಿನ್ನ ಯೌವನವನ್ನು ವ್ಯರ್ಥಮಾಡಿಕೊಳ್ಳದೆ ನಮ್ಮಿಬ್ಬರಲ್ಲಿ ಒಬ್ಬರನ್ನು ವರಿಸು' ಎಂದು ಹೇಳಿದಾಗ ಸುಕನ್ಯೆಯು 'ನಾನು ಚ್ಯವನರನ್ನು ಪತಿಯನ್ನಾಗಿ ವರಿಸಿದ್ದೇನೆ. ಈ ಬಗ್ಗೆ ನನ್ನನ್ನು ಸಂದೇಹ ಪಡಬೇಡಿ[೨].'

---

೧ ತತಃ ಸುಕನ್ಯಾ ವಲ್ಮೀಕೇ ದೃಷ್ಟ್ವಾ ಭಾರ್ಗವಚಕ್ಷುಷೀ ।
ಕೌತುಹಲಾತ್ ಕಂಟಕೇನ ಬುದ್ಧಿಮೋಹಬಲಾತ್ಕೃತಾ ।
ಕಿಂ ನು ಖಿಲ್ವದಮಿತ್ಯುಕ್ತ್ವಾ ನಿರ್ಬಿಭೇದಾಸ್ಯಲೋಚನೇ ।
ಅಕ್ರುಧ್ಯತ್ಸ ತಯಾ ವಿದ್ಧೇ ನೇತ್ರೇ ಪರಮಮನ್ಯುಮಾನ್ ।
ತತಃ ಶರ್ಯಾತಿ ಸೈನ್ಯಸ್ಯ ಶಕೃನ್ಮೂತ್ರೇ ಸಮಾವೃಣೋತ್ ।
ಪಿತರಂ ದುಃಖಿತಂ ದೃಷ್ಟ್ವಾ ಸುಕನ್ಯೇದಮಥಾಬ್ರವೀತ್ ।
ಮಯಾಟಂತ್ಯೇಹ ವಲ್ಮೀಕೇ ದೃಷ್ಟಂ ಸತ್ತ್ವಮಭಿಜ್ವಲತ್ ।
ಖದ್ಯೋತವದಭಿಜ್ಞಾತಂ ತನ್ಮಯಾ ವಿದ್ಧಮಂತಿಕಾತ್ ।
ಅಯಾಚದಥ ಸೈನ್ಯಾರ್ಥಂ ಪ್ರಾಂಜಲಿಃ ಪೃಥಿವೀಪತಿಃ ।
ಅಜ್ಞಾನಾದ್ಬಾಲಯಾ ಯತ್ತೇ ಕೃತಂ ತತ್ ಕ್ಷಂತುಮರ್ಹಸಿ ।
ತಾಮೇವ ಪ್ರತಿಗೃಹ್ಯಾಹಂ ರಾಜನ್ ದುಹಿತರಂ ತವ ।
ಕ್ಷಂಸ್ಯಾಮೀತಿ ಮಹೀಪಾಲ ......................... ।
ದದೌ ದುಹಿತರಂ ತಸ್ಮೈ ಚ್ಯವನಾಯ ಮಹಾತ್ಮನೇ ।
ಸುಕನ್ಯಾಪಿ ಪತಿಂ ಲಬ್ಧ್ವಾ ತಪಸ್ವಿನಮನಿಂದಿತಾ ।
ನಿತ್ಯಂ ಪರ್ಯಚರತ್ ಪ್ರೀತ್ಯಾ ...................।
ಅಗ್ನೀನಾಮತಿಥೀನಾಂ ಚ ........................... ।
ಸಮಾರಾಧಯತ ಕ್ಷಿಪ್ರಂ ಚ್ಯವನಂ ಸಾ ಶುಭಾನನಾ ॥ - ವನಪರ್ವ(೧೨೨/೧೨-೨೯)

೨ ಅಸಮರ್ಥಂ ಪರಿತ್ರಾಣೇ ಪೋಷಣೇ ತು ಶುಚಿಸ್ಮಿತೇ ।
ಸಾ ತ್ವಂ ಚ್ಯವನಮುತ್ಸೃಜ್ಯ ವರಯಸ್ವೈಕ ಮಾವಯೋಃ ॥
ರತಾಹಂ ಚ್ಯವನೇ ಪತ್ಯೌ ಮೈವಂ ಮಾಂ ಪರ್ಯಶಂಕತಮ್ ॥ - ವನಪರ್ವ(೧೨೩/೧೦-೧೨)

ಮತ್ತೆ ಅಶ್ವಿನೀದೇವತೆಗಳು ನಿನ್ನ ಪತಿಯನ್ನು ಯೌವನ ಸಂಪನ್ನನನ್ನಾಗಿ ಮಾಡುತ್ತೇವೆ. ಆಗಲಾದರೂ ನಮ್ಮ ಮೂವರಪೈಕಿ ಒಬ್ಬರನ್ನು ಪತಿಯನ್ನಾಗಿ ಆರಿಸಿಕೋ' ಎನ್ನುತ್ತಾರೆ. ಈ ಮಾತನ್ನು ಕೇಳಿದ ಸುಕನ್ಯೆಯು ಪತಿಯ ಬಳಿಗೆ ಹೋಗಿ ಅಶ್ವಿನೀ ದೇವತೆಗಳು ಹೇಳಿದ ಮಾತನ್ನು ಹೇಳಿದಾಗ, ಅವರೂ ಒಪ್ಪುತ್ತಾರೆ. ಅಶ್ವಿನೀದೇವತೆಗಳು ಹಾಗೂ ಚ್ಯವನರು ಸರೋವರದಲ್ಲಿ ಪ್ರವೇಶಿಸುತ್ತಾರೆ. ಮೂವರೂ ಅಪ್ರತಿಮಸುಂದರರೂಪಧಾರಿಗಳಾಗಿ ಒಂದೇ ತೆರನಾಗಿ ತೋರುತ್ತಾ ಸರೋವರದಿಂದ ಹೊರಬಂದು ನಮ್ಮಲ್ಲಿ ಒಬ್ಬನನ್ನು ಪತಿಯನ್ನಾಗಿ ವರಿಸು ಎನ್ನುತ್ತಾರೆ. ಸುಕನ್ಯೆ ಒಂದೇ ತೆರನಾಗಿದ್ದ ಅವರನ್ನು ನೋಡಿ ತನ್ನ ಪತಿಯನ್ನೇ ಮೂವರಲ್ಲಿ ಆರಿಸುತ್ತಾಳೆ[೧]. ಚ್ಯವನರು ಸಂತುಷ್ಟರಾಗಿ ಅಶ್ವಿನೀದೇವತೆಗಳನ್ನು ಕುರಿತು 'ನೀವು ವೃದ್ಧನಾದ ನನ್ನನ್ನು ರೂಪ, ವಯೋಸಂಪನ್ನನನ್ನಾಗಿ ಮಾಡಿದ್ದೀರಿ. ನಿಮಗೆ ನಾನು ಇಂದ್ರನ ಮುಂದೆಯೇ ಸೋಮಪಾನ ಮಾಡಿಸುವೆನು; ಇದು ಸತ್ಯ' ಎನ್ನುತ್ತಾರೆ[೨].

ಮುಂದೆ ಚ್ಯವನ-ಸುಕನ್ಯೆಯರು ಸುಖವಾಗಿ ಜೀವನ ಕಳೆಯುತ್ತಾರೆ.

ಇತ್ತ ಶರ್ಯಾತಿ ಮಹಾರಾಜನು ಅಶ್ವಿನೀದೇವತೆಗಳು ಚ್ಯವನರಿಗೆ ಉತ್ತಮ ಶರೀರ, ವಯಸ್ಸನ್ನು ಕೊಟ್ಟುದುದನ್ನು ಕೇಳಿ ಅವರ ದರ್ಶನಾರ್ಥಿಯಾಗಿ ಅವರ ಆಶ್ರಮಕ್ಕೆ ಬಂದು ಮಗಳ ದಾಂಪತ್ಯವನ್ನು ನೋಡಿ ಸಂತೋಷಪಟ್ಟನು. ಚ್ಯವನರೊಡನೆ ಕ್ಷೇಮಸಮಾಚಾರಾದಿ, ಅವರ ಮಹಿಮೆಗಳನ್ನು ತಿಳಿದುಕೊಂಡನು. ಚ್ಯವನರು ರಾಜನನ್ನು ಸಂತೈಸುತ್ತಾ 'ನಾನು ನಿನ್ನಿಂದ ಯಾಗ ಮಾಡಿಸುವೆನು ಅದಕ್ಕಾಗಿ ಯಜ್ಞಸಂಭಾರಗಳನ್ನು (ಸಿದ್ಧತೆ) ಮಾಡು' ಎಂದರು. ತುಂಬಾ ಸಂತೋಷಗೊಂಡ ಶರ್ಯಾತಿಯಿಂದ ಪ್ರಶಸ್ತವಾದ ದಿನದಂದು ಸರ್ವಕಾಮ ಸಮೃದ್ಧಿ ಕೊಡುವ ಯಜ್ಞವನ್ನು ಚ್ಯವನರು ಮಾಡಿಸಿದರು. ಆಗಲೇ ಚ್ಯವನರು ಅಶ್ವಿನೀದೇವತೆಗಳಿಗೆ ಸೋಮರಸವನ್ನು ಹಿಡಿದುಕೊಂಡು ಇರುವಾಗ ಇಂದ್ರದೇವರು ಅದನ್ನು ಕೊಡದಂತೆ ತಡೆದರು. ಅಶ್ವಿನೀದೇವತೆಗಳು ವೃತ್ತಿಯಿಂದ ದೇವವೈದ್ಯರು ಆದ್ದರಿಂದ ಸೋಮಪಾನಕ್ಕೆ ಅನರ್ಹರು ಎಂದು ನನ್ನ ಅಭಿಪ್ರಾಯವಾಗಿದೆ, ಎಂದ ಇಂದ್ರದೇವ.

ಆಗ ಚ್ಯವನರು ಇವರು ಮಹೋತ್ಸಾಹಿಗಳೂ, ಮಹಾತ್ಮರೂ, ಅತ್ಯುತ್ತಮರೂಪ ಸಂಪತ್ತುಳ್ಳವರು. ಅಲ್ಲದೇ ವೃದ್ಧನಾದ ನನ್ನನ್ನು ದೇವತೆಗಳಂತೆ ಯುವಕನನ್ನಾಗಿ ಮಾಡಿದ್ದಾರೆ[೩]. ಇವರು ಹೇಗೆ ತಾನೇ ಸೋಮಪಾನಕ್ಕೆ ಅನರ್ಹರು. ನಿಮ್ಮಂತೆಯೇ ಇವರೂ ದೇವತೆಗಳಷ್ಟೇ!

---

೧ ಸಾ ಸಮೀಕ್ಷ್ಯ ತು ತಾನ್ ಸರ್ವಾನ್ ತುಲ್ಯರೂಪಧರಾನ್ ಸ್ಥಿತಾನ್ ।
ನಿಶ್ಚಿತ್ಯ ಮನಸಾ ಬುದ್ಧ್ಯಾದೇವೀ ವವ್ರೇ ಸ್ವಕಂ ಪತಿಮ್ ॥ - ವನಪರ್ವ(೧೨೩/೨೧)

೨ ತಸ್ಮಾತ್ ಯುವಾಂ ಕರಿಷ್ಯಾಮಿ ಪ್ರೀತ್ಯೇಹಂ ಸೋಮ ಪೀಥಿನೌ ।
ಮಿಷತೋ ದೇವರಾಜಸ್ಯ ಸತ್ಯಮೇತತ್ ಬ್ರವೀಮಿ ವಾಮ್ ॥ - ವನಪರ್ವ(೧೨೩/೨೩)

೩ ಉಭಾವೇತೌ ನ ಸೋಮಾರ್ಹೌ ನಾಸತ್ಯಾವಿತಿ ಮೇ ಮತಿಃ ।
ಭಿಷಜೌ ದಿಪಿ ದೇವಾನಾಂ ಕರ್ಮಣಾ ತೇನ ನಾರ್ಹತಃ ॥ - ವನಪರ್ವ(೧೨೪/೯)

ಅದಕ್ಕೆ ಇಂದ್ರನು 'ಇವರು ಚಿಕಿತ್ಸೆ ಮಾಡುವವರು.ಇತರರ ಸೇವೆ ಮಾಡುವವರು (ವೈದ್ಯರಾದ್ದರಿಂದ). ತಮಗೆ ಇಷ್ಟರೂಪ ಧರಿಸುತ್ತಾ ಮಾನವ ಲೋಕದಲ್ಲಿ ಸಂಚರಿಸುವ ಇವರು ಹೇಗೆ ಸೋಮಪಾನಾರ್ಹರಾಗುತ್ತಾರೆ?' ಎಂದನು. ಚ್ಯವನರು ಮತ್ತೆ ಸಮಾಧಾನ ಪಡಿಸಿದರಾದರೂ, ಇಂದ್ರ ಅವರ ಮಾತಿಗೆ ಒಪ್ಪದಿದ್ದಾಗ ಬೇಸತ್ತ ಚ್ಯವನರು ಇಂದ್ರನನ್ನು ನಿರಾಕರಿಸುತ್ತಾ ಸೋಮರಸವನ್ನು ಅಶ್ವಿನೀದೇವತೆಗಳಿಗೆ ನೀಡಲು ಸಿದ್ಧರಾದಾಗ ಇಂದ್ರ ಮತ್ತೆ -

**ವಜ್ರಂ ತೇ ಪ್ರಹರಿಷ್ಯಾಮಿ ಘೋರ ರೂಪಮನುತ್ತಮಮ್ ।** - ೧೨೪/೧೫

ಎನ್ನುತ್ತಾ ವಜ್ರಾಯುಧ ಬಿಡಲು ಉದ್ಯುಕ್ತನಾದಾಗ ಚ್ಯವನರು ತಮ್ಮ ಮಂತ್ರಶಕ್ತಿಯಿಂದ ವಜ್ರಾಯುಧವನ್ನು ಹಿಡಿದ ಆತನ ಕೈಯನ್ನೇ ಸ್ತಂಭನಗೊಳಿಸಿದರು[೧] (ಅತ್ತಿತ್ತ ಚಲಿಸದಂತೆ).

ತಮ್ಮ ಮಂತ್ರಶಕ್ತಿಯಿಂದ **ಮದ**ವೆಂಬ ಬೃಹತ್ ಶರೀರವುಳ್ಳ ಮಹಾರಾಕ್ಷಸನನ್ನು ಹುಟ್ಟಿಸಿದರು. ಅವನ ಶರೀರದ ಆಳತೆ, ಪರಿಮಾಣ ದೇವಾಸುರರಿಗೂ ತಿಳಿಯಲಿಲ್ಲ[೨].

**ಮದ** ಎಂಬ ರಾಕ್ಷಸನ ಮುಖ ಬಹುಘೋರ. ಗಲ್ಲಗಳು ಭೂಮ್ಯಂತರಿಕ್ಷ ಆವರಿಸಿದ್ದವು. ಅವನ ನಾಲ್ಕು ಕೋರೆದಾಡಿಗಳು ನೂರಾರು ಯೋಜನೆ ಉದ್ದವಾಗಿದ್ದವು. ಹಲ್ಲುಗಳು ಹತ್ತುಯೋಜನ ಪ್ರಸರಿಸಿದ್ದವು. ಹೀಗೆ ಭಯಾನಕವಾಗಿದ್ದ ಆ ಮದನು ಇಂದ್ರನ ಬಳಿಗೆ ಹೋಗಲು, ಇಂದ್ರನು ತೋಚದಂತಾಗಿ ಚ್ಯವನರನ್ನು ಶರಣುಹೊಂದಿ ಅಶ್ವಿನೀದೇವತೆಗಳಿಗೆ ಸೋಮಪಾನಕ್ಕೆ ಅನುಮೋದಿಸಿದನು. ಅಲ್ಲದೇ 'ಎಲೈ ಋಷಿಯೇ! ನಿನ್ನ ಸುಕನ್ಯೆಯ, ಶರ್ಯಾತಿಯ ಕೀರ್ತಿ ಎಲ್ಲ ಕಡೆ ಪ್ರಸಿದ್ಧಿ ಹೊಂದಲು ನಾನು ಹೀಗೆ ಮಾಡಿದೆ' ಎಂದು ನುಡಿಯುತ್ತಾ ಚ್ಯವನರ ಅನುಗ್ರಹ ಕೋರಿದನು ಇಂದ್ರ[೩].

ಹೀಗೆ ಇಂದ್ರನು ಪ್ರಾರ್ಥಿಸಲು ಚ್ಯವನರು ಪ್ರಸನ್ನರಾದರು. ಇಂದ್ರನನ್ನು ಮದಕೃತ್ಯೆಯಿಂದ ಬಿಡುಗಡೆ ಮಾಡಿದರು. ಮದನನ್ನು ರೂಪಾಂತರಗೊಳಿಸಿ ಪಗಡೆಯಾಟ, ದುಷ್ಟಸ್ತ್ರೀಯರು, ಬೇಟೆ, ಮದ್ಯಪಾನಗಳಲ್ಲಿ ಚ್ಯವನರು ಹಂಚಿ ಬಿಟ್ಟರು. ನಂತರ ಚ್ಯವನರು

---

೧ ತತೋಽಸ್ಮೈ ಪ್ರಾಹರತ್ ವಜ್ರಂ ಘೋರರೂಪಂ ಶಚೀಪತಿಃ ।
ತಸ್ಯ ಪ್ರಹರತೋ ಬಾಹುಂ ಸ್ತಂಭಯಾಮಾಸ ಭಾರ್ಗವಃ ॥ - ವನಪರ್ವ(೧೨೪/೧೭)

೨ ತತಃ ಕೃತ್ಯಾಥ ಸಂಜಜ್ಞೇ ಮುನೇಸ್ತಸ್ಯ ತಪೋಬಲಾತ್ ।
ಮದೋನಾಮ ಮಹಾವೀರ್ಯೋ ಬೃಹತ್ಕಾಯೋ ಮಹಾಸುರಃ ॥ - ವನಪರ್ವ(೧೨೪/೧೯)

೩ ಸೋಮಾರ್ಹಾವಶ್ವಿನಾವೇತಾವದ್ಯ ಪ್ರಭೃತಿ ಭಾರ್ಗವ ।
ಭವಿಷ್ಯತಃ ಸತ್ಯಮೇತದ್ವಚೋ ವಿಪ್ರ ಪ್ರಸೀದಮೇ ॥
ಸುಕನ್ಯಾಯಾಃ ಪಿತುಶ್ಚಾಸ್ಯ ಲೋಕೇ ಕೀರ್ತಿಃ ಪ್ರಥೇದಿತಿ ।
ಅತೋ ಮಯ್ಯೈತದ್ವಿಹಿತಂ ತವ ವೀರ್ಯಪ್ರಕಾಶನಮ್ ॥
ತಸ್ಮಾತ್ಪ್ರಸಾದಂ ಕುರು ಮೇ ಭವತ್ವೇವಂ ಯಥೇಚ್ಛಸಿ ॥ - ವನಪರ್ವ(೧೨೫/೩-೬)

ಮತ್ತೆ ಅಶ್ವಿನೀದೇವತೆಗಳು ನಿನ್ನ ಪತಿಯನ್ನು ಯೌವನ ಸಂಪನ್ನನನ್ನಾಗಿ ಮಾಡುತ್ತೇವೆ. ಆಗಲಾದರೂ ನಮ್ಮ ಮೂವರಪೈಕಿ ಒಬ್ಬರನ್ನು ಪತಿಯನ್ನಾಗಿ ಆರಿಸಿಕೋ' ಎನ್ನುತ್ತಾರೆ. ಈ ಮಾತನ್ನು ಕೇಳಿದ ಸುಕನ್ಯೆಯು ಪತಿಯ ಬಳಿಗೆ ಹೋಗಿ ಅಶ್ವಿನೀ ದೇವತೆಗಳು ಹೇಳಿದ ಮಾತನ್ನು ಹೇಳಿದಾಗ, ಅವರೂ ಒಪ್ಪುತ್ತಾರೆ. ಅಶ್ವಿನೀದೇವತೆಗಳು ಹಾಗೂ ಚ್ಯವನರು ಸರೋವರದಲ್ಲಿ ಪ್ರವೇಶಿಸುತ್ತಾರೆ. ಮೂವರೂ ಅಪ್ರತಿಮಸುಂದರರೂಪಧಾರಿಗಳಾಗಿ ಒಂದೇ ತೆರನಾಗಿ ತೋರುತ್ತಾ ಸರೋವರದಿಂದ ಹೊರಬಂದು ನಮ್ಮಲ್ಲಿ ಒಬ್ಬನನ್ನು ಪತಿಯನ್ನಾಗಿ ವರಿಸು ಎನ್ನುತ್ತಾರೆ. ಸುಕನ್ಯೆ ಒಂದೇ ತೆರನಾಗಿದ್ದ ಅವರನ್ನು ನೋಡಿ ತನ್ನ ಪತಿಯನ್ನೇ ಮೂವರಲ್ಲಿ ಆರಿಸುತ್ತಾಳೆ[೧]. ಚ್ಯವನರು ಸಂತುಷ್ಟರಾಗಿ ಅಶ್ವಿನೀದೇವತೆಗಳನ್ನು ಕುರಿತು 'ನೀವು ವೃದ್ಧನಾದ ನನ್ನನ್ನು ರೂಪ, ವಯೋಸಂಪನ್ನನನ್ನಾಗಿ ಮಾಡಿದ್ದೀರಿ. ನಿಮಗೆ ನಾನು ಇಂದ್ರನ ಮುಂದೆಯೇ ಸೋಮಪಾನ ಮಾಡಿಸುವೆನು; ಇದು ಸತ್ಯ' ಎನ್ನುತ್ತಾರೆ[೨].

ಮುಂದೆ ಚ್ಯವನ-ಸುಕನ್ಯೆಯರು ಸುಖವಾಗಿ ಜೀವನ ಕಳೆಯುತ್ತಾರೆ.

ಇತ್ತ ಶರ್ಯಾತಿ ಮಹಾರಾಜನು ಅಶ್ವಿನೀದೇವತೆಗಳು ಚ್ಯವನರಿಗೆ ಉತ್ತಮ ಶರೀರ, ವಯಸ್ಸನ್ನು ಕೊಟ್ಟುದುದನ್ನು ಕೇಳಿ ಅವರ ದರ್ಶನಾರ್ಥಿಯಾಗಿ ಅವರ ಆಶ್ರಮಕ್ಕೆ ಬಂದು ಮಗಳ ದಾಂಪತ್ಯವನ್ನು ನೋಡಿ ಸಂತೋಷಪಟ್ಟನು. ಚ್ಯವನರೊಡನೆ ಕ್ಷೇಮಸಮಾಚಾರಾದಿ, ಅವರ ಮಹಿಮೆಗಳನ್ನು ತಿಳಿದುಕೊಂಡನು. ಚ್ಯವನರು ರಾಜನನ್ನು ಸಂತೈಸುತ್ತಾ 'ನಾನು ನಿನ್ನಿಂದ ಯಾಗ ಮಾಡಿಸುವೆನು ಅದಕ್ಕಾಗಿ ಯಜ್ಞಸಂಭಾರಗಳನ್ನು (ಸಿದ್ಧತೆ) ಮಾಡು' ಎಂದರು. ತುಂಬಾ ಸಂತೋಷಗೊಂಡ ಶರ್ಯಾತಿಯಿಂದ ಪ್ರಶಸ್ತವಾದ ದಿನದಂದು ಸರ್ವಕಾಮ ಸಮೃದ್ಧಿ ಕೊಡುವ ಯಜ್ಞವನ್ನು ಚ್ಯವನರು ಮಾಡಿಸಿದರು. ಆಗಲೇ ಚ್ಯವನರು ಅಶ್ವಿನೀದೇವತೆಗಳಿಗೆ ಸೋಮರಸವನ್ನು ಹಿಡಿದುಕೊಂಡು ಇರುವಾಗ ಇಂದ್ರದೇವರು ಅದನ್ನು ಕೊಡದಂತೆ ತಡೆದರು. ಅಶ್ವಿನೀದೇವತೆಗಳು ವೃತ್ತಿಯಿಂದ ದೇವವೈದ್ಯರು ಆದ್ದರಿಂದ ಸೋಮಪಾನಕ್ಕೆ ಅನರ್ಹರು ಎಂದು ನನ್ನ ಅಭಿಪ್ರಾಯವಾಗಿದೆ, ಎಂದ ಇಂದ್ರದೇವ.

ಆಗ ಚ್ಯವನರು ಇವರು ಮಹೋತ್ಸಾಹಿಗಳೂ, ಮಹಾತ್ಮರೂ, ಅತ್ಯುತ್ತಮರೂಪ ಸಂಪತ್ತುಳ್ಳವರು. ಅಲ್ಲದೇ ವೃದ್ಧನಾದ ನನ್ನನ್ನು ದೇವತೆಗಳಂತೆ ಯುವಕನನ್ನಾಗಿ ಮಾಡಿದ್ದಾರೆ[೩]. ಇವರು ಹೇಗೆ ತಾನೇ ಸೋಮಪಾನಕ್ಕೆ ಅನರ್ಹರು. ನಿಮ್ಮಂತೆಯೇ ಇವರೂ ದೇವತೆಗಳಷ್ಟೇ!

---

೧ ಸಾ ಸಮೀಕ್ಷ್ಯ ತು ತಾನ್ ಸರ್ವಾನ್ ತುಲ್ಯರೂಪಧರಾನ್ ಸ್ಥಿತಾನ್ ।
ನಿಶ್ಚಿತ್ಯ ಮನಸಾ ಬುದ್ಧ್ಯಾದೇವೀ ವವ್ರೇ ಸ್ವಕಂ ಪತಿಮ್ ॥ - ವನಪರ್ವ(೧೨೩/೨೧)

೨ ತಸ್ಮಾತ್ ಯುವಾಂ ಕರಿಷ್ಯಾಮಿ ಪ್ರೀತ್ಯೇಹಂ ಸೋಮ ಪೀಥಿನೌ ।
ಮಿಷತೋ ದೇವರಾಜಸ್ಯ ಸತ್ಯಮೇತತ್ ಬ್ರವೀಮಿ ವಾಮ್ ॥ - ವನಪರ್ವ(೧೨೩/೨೩)

೩ ಉಭಾವೇತೌ ನ ಸೋಮಾರ್ಹೌ ನಾಸತ್ಯಾವಿತಿ ಮೇ ಮತಿಃ ।
ಭಿಷಜೌ ದಿವಿ ದೇವಾನಾಂ ಕರ್ಮಣಾ ತೇನ ನಾರ್ಹತಃ ॥ - ವನಪರ್ವ(೧೨೪/೯)

ಅದಕ್ಕೆ ಇಂದ್ರನು 'ಇವರು ಚಿಕಿತ್ಸೆ ಮಾಡುವವರು.ಇತರರ ಸೇವೆ ಮಾಡುವವರು (ವೈದ್ಯರಾದ್ದರಿಂದ). ತಮಗೆ ಇಷ್ಟರೂಪ ಧರಿಸುತ್ತಾ ಮಾನವ ಲೋಕದಲ್ಲಿ ಸಂಚರಿಸುವ ಇವರು ಹೇಗೆ ಸೋಮಪಾನಾರ್ಹರಾಗುತ್ತಾರೆ?' ಎಂದನು. ಚ್ಯವನರು ಮತ್ತೆ ಸಮಾಧಾನ ಪಡಿಸಿದರಾದರೂ, ಇಂದ್ರ ಅವರ ಮಾತಿಗೆ ಒಪ್ಪದಿದ್ದಾಗ ಬೇಸತ್ತ ಚ್ಯವನರು ಇಂದ್ರನನ್ನು ನಿರಾಕರಿಸುತ್ತಾ ಸೋಮರಸವನ್ನು ಅಶ್ವಿನೀದೇವತೆಗಳಿಗೆ ನೀಡಲು ಸಿದ್ಧರಾದಾಗ ಇಂದ್ರ ಮತ್ತೆ –

**ವಜ್ರಂ ತೇ ಪ್ರಹರಿಷ್ಯಾಮಿ ಘೋರ ರೂಪಮನುತ್ತಮಮ್ ।** – ೧೨೪/೧೫

ಎನ್ನುತ್ತಾ ವಜ್ರಾಯುಧ ಬಿಡಲು ಉದ್ಯುಕ್ತನಾದಾಗ ಚ್ಯವನರು ತಮ್ಮ ಮಂತ್ರಶಕ್ತಿಯಿಂದ ವಜ್ರಾಯುಧವನ್ನು ಹಿಡಿದ ಆತನ ಕೈಯನ್ನೇ ಸ್ತಂಭನಗೊಳಿಸಿದರು[1] (ಅತ್ತಿತ್ತ ಚಲಿಸದಂತೆ).

ತಮ್ಮ ಮಂತ್ರಶಕ್ತಿಯಿಂದ **ಮದ**ವೆಂಬ ಬೃಹತ್ ಶರೀರವುಳ್ಳ ಮಹಾರಾಕ್ಷಸನನ್ನು ಹುಟ್ಟಿಸಿದರು. ಅವನ ಶರೀರದ ಆಳತೆ, ಪರಿಮಾಣ ದೇವಾಸುರರಿಗೂ ತಿಳಿಯಲಿಲ್ಲ[2].

**ಮದ** ಎಂಬ ರಾಕ್ಷಸನ ಮುಖ ಬಹುಘೋರ. ಗಲ್ಲಗಳು ಭೂಮ್ಯಂತರಿಕ್ಷ ಆವರಿಸಿದ್ದವು. ಅವನ ನಾಲ್ಕು ಕೋರೆದಾಡಿಗಳು ನೂರಾರು ಯೋಜನೆ ಉದ್ದವಾಗಿದ್ದವು. ಹಲ್ಲುಗಳು ಹತ್ತುಯೋಜನ ಪ್ರಸರಿಸಿದ್ದವು. ಹೀಗೆ ಭಯಾನಕವಾಗಿದ್ದ ಆ ಮದನು ಇಂದ್ರನ ಬಳಿಗೆ ಹೋಗಲು, ಇಂದ್ರನು ತೋಚದಂತಾಗಿ ಚ್ಯವನರನ್ನು ಶರಣುಹೊಂದಿ ಅಶ್ವಿನೀದೇವತೆಗಳಿಗೆ ಸೋಮಪಾನಕ್ಕೆ ಅನುಮೋದಿಸಿದನು. ಅಲ್ಲದೇ 'ಎಲೈ ಋಷಿಯೇ! ನಿನ್ನ ಸುಕನ್ಯೆಯ, ಶರ್ಯಾತಿಯ ಕೀರ್ತಿ ಎಲ್ಲ ಕಡೆ ಪ್ರಸಿದ್ಧಿ ಹೊಂದಲು ನಾನು ಹೀಗೆ ಮಾಡಿದೆ' ಎಂದು ನುಡಿಯುತ್ತಾ ಚ್ಯವನರ ಅನುಗ್ರಹ ಕೋರಿದನು ಇಂದ್ರ[3].

ಹೀಗೆ ಇಂದ್ರನು ಪ್ರಾರ್ಥಿಸಲು ಚ್ಯವನರು ಪ್ರಸನ್ನರಾದರು. ಇಂದ್ರನನ್ನು ಮದಕೃತ್ಯೆಯಿಂದ ಬಿಡುಗಡೆ ಮಾಡಿದರು. ಮದನನ್ನು ರೂಪಾಂತರಗೊಳಿಸಿ ಪಗಡೆಯಾಟ, ದುಷ್ಟಸ್ತ್ರೀಯರು, ಬೇಟೆ, ಮದ್ಯಪಾನಗಳಲ್ಲಿ ಚ್ಯವನರು ಹಂಚಿ ಬಿಟ್ಟರು. ನಂತರ ಚ್ಯವನರು

---

೧ ತತೋಽಸ್ಯ ಪ್ರಾಹರತ್ ವಜ್ರಂ ಘೋರರೂಪಂ ಶಚೀಪತಿಃ ।
ತಸ್ಯ ಪ್ರಹರತೋ ಬಾಹುಂ ಸ್ತಂಭಮಾಮಾಸ ಭಾರ್ಗವಃ ॥ – ವನಪರ್ವ(೧೨೪/೧೭)

೨ ತತಃ ಕೃತ್ಯಾಥ ಸಂಜಜ್ಞೇ ಮುನೇಸ್ತಸ್ಯ ತಪೋಬಲಾತ್ ।
ಮದೋನಾಮ ಮಹಾವೀರ್ಯೋ ಬೃಹತ್ಕಾಯೋ ಮಹಾಸುರಃ ॥ – ವನಪರ್ವ(೧೨೪/೧೯)

೩ ಸೋಮಾರ್ಹಾವಶ್ವಿನಾವೇತಾವದ್ಯ ಪ್ರಭೃತಿ ಭಾರ್ಗವ ।
ಭವಿಷ್ಯತಃ ಸತ್ಯಮೇತದ್ವಚೋ ವಿಪ್ರ ಪ್ರಸೀದಮೇ ॥
ಸುಕನ್ಯಾಯಾಃ ಪಿತುಶ್ಚಾಸ್ಯ ಲೋಕೇ ಕೀರ್ತಿಃ ಪ್ರಥೇದಿತಿ ।
ಅತೋ ಮಯ್ಯೈತದ್ವಿಹಿತಂ ತವ ವೀರ್ಯಪ್ರಕಾಶನಮ್ ॥
ತಸ್ಮಾತ್ಪ್ರಸಾದಂ ಕುರು ಮೇ ಭವತ್ವೇವಂ ಯಥೇಚ್ಛಸಿ ॥ – ವನಪರ್ವ(೧೨೫/೩-೬)

ಅಶ್ವಿನೀದೇವತೆಗಳೊಡನೆ ಇಂದ್ರಾದಿ ಎಲ್ಲ ದೇವತೆಗಳಿಗೆ ಸೋಮಪಾನ ಮಾಡಿಸಿ ಸಂತುಷ್ಟಗೊಳಿಸಿದರು.

ಶರ್ಯಾತಿಯೂ ಅನೇಕ ಯಜ್ಞ-ಯಾಗಾದಿಗಳನ್ನು ಮಾಡಿ ದಿಗಂತ ವಿಶ್ರಾಂತ ಕೀರ್ತಿವಂತನಾದನು.

ಚ್ಯವನರು ಸುಕನ್ಯೆಯೊಡನೆ ಸುಖವಾಗಿ ಅನೇಕ ಕಾಲ ವಿಹಾರ ಮಾಡಿದರು. ಹೀಗೆ ಚ್ಯವನರು ವಾಸ ಮಾಡುತ್ತಿದ್ದ ಈ ಪರಿಸರದ ಸರೋವರ ಚ್ಯವನ ಸರೋವರವಾಗಿ ಪ್ರಸಿದ್ಧಿ ಹೊಂದಿದೆ.

ಆದ್ದರಿಂದ ಧರ್ಮರಾಜ ನೀನೂ ಈ ಪುಣ್ಯತೀರ್ಥದಲ್ಲಿ ಅನುಜರೊಡನೆ ಮಿಂದು, ಪಿತೃಗಳನ್ನು ಸಂತೃಪ್ತಿಗಳಿಸು. ಮುಂದೆ ಪುಷ್ಕರಾದಿ ತೀರ್ಥಗಳನ್ನು ಸಂದರ್ಶನ ಮಾಡು ಎಂದು ಲೋಮಶರು ಉಪದೇಶಿಸಿದರು.

## ಸಂದೇಶಗಳು-ವಿವರಣೆಗಳು

೧. ಬ್ರಾಹ್ಮಣನಿಗೆ ವಿಹಿತವಾದುದು ವೇದಾಧ್ಯಯನ, ಶ್ರವಣ, ಮನನ, ನಿಧಿಧ್ಯಾಸನ; ಅದೇ ತಪಸ್ಸು. ಅದನ್ನು ಯಶಸ್ವಿಯಾಗಿ ನಿರ್ವಹಿಸಿದವರು ಚ್ಯವನರು. ಅಂತೆಯೇ ವರ್ಣಾಶ್ರಮಧರ್ಮ ಪರಿಪಾಲನೆ ಪ್ರತಿಬ್ರಾಹ್ಮಣನ ಕರ್ತವ್ಯ.

೨. ಚ್ಯುತಿ ಇಲ್ಲದೇ ತಪಸ್ಸನ್ನು ಮಾಡುತ್ತಿದ್ದರೂ ಚ್ಯವನರು ಸುಕನ್ಯೆಯ ರೂಪಕ್ಕೆ ಮಾರುಹೋಗಿ ತಪೋಭಂಗಕ್ಕೆ ಒಳಗಾದರು. ಸ್ತ್ರೀರೂಪ ಯಾರನ್ನೂ ಬಿಡದು. ಇಂದ್ರಿಯನಿಗ್ರಹ ಅಷ್ಟು ಸುಲಭವಾದುದಲ್ಲ. '**ಬಲವಾನ್ ಇಂದ್ರಿಯಗ್ರಾಮಃ ವಿದ್ವಾಂಸಮಪಿಕರ್ಷತಿ**' ಎನ್ನುವ ಮಾತು ಅತ್ಯಂತ ಸತ್ಯ.

೩. ಆದರೆ ಸುಕನ್ಯೆ ತನ್ನ ಭಾರ್ಯೆ ಎಂಬ ಜ್ಞಾನ ಅವರಿಗಿತ್ತೆಂದು ತೋರುತ್ತದೆ. ಆಕೆಯನ್ನು ಬಯಸಿದ್ದೂ ಹರಿಚಿತ್ತಕ್ಕೆ ಬಂದಿತ್ತು. ಆದ್ದರಿಂದಲೇ ಆಕೆಯನ್ನೇ ವರಿಸಿದರು. ಚ್ಯವನರಂತಹ ಸಜ್ಜನರ ಮನಸ್ಸು ಪಾಪಮಾರ್ಗದಲ್ಲಿ ಹೋಗದು, ಹೋಗಲಿಲ್ಲ. '**ಪ್ರಾಯಃ ಸತಾಂ ನ ಮನಃ ಪಾಪ ಮಾರ್ಗೇ ಗಚ್ಛೇತ್**' (ಮ.ತಾ.ನಿ. ೧೧/೭೭). ಶಂತನು ಸತ್ಯವತಿಯನ್ನು ಕ್ಷತ್ರಿಯಳೆಂದು ಬಗೆದೇ ಬಯಸಿದ. ಅದು ಸತ್ಯವೂ ಆಗಿತ್ತು. ಆಕೆಯನ್ನೇ ಪಡೆದ. ದುಷ್ಯಂತನು ಶಕುಂತಲೆಯನ್ನು ಪಡೆದಂತೆ. ಚ್ಯವನರೂ ಹಾಗೆಯೇ ಸುಕನ್ಯೆಯನ್ನು ಬಯಸಿದರು, ಪಡೆದರು.

೪. ಹುಡುಗಾಟದ ಹುಡುಗಿ ಸುಕನ್ಯೆ ತಿಳಿಯದೇ ಮಾಡಿದ ತಪ್ಪು (ವಲ್ಮೀಕದಲ್ಲಿದ್ದ ಚ್ಯವನರ ಕಣ್ಣುಗಳನ್ನು ಚುಚ್ಚಿದ್ದು) ಅನರ್ಥಕ್ಕೆ ಕಾರಣವಾಯಿತು. ತಪ್ಪು ತಿಳಿದು ಮಾಡಿದರೂ ಅಷ್ಟೇ, ತಿಳಿಯದೇ ಮಾಡಿದರೂ ಅಷ್ಟೇ, ಶಿಕ್ಷೆ ತಪ್ಪಿದ್ದಲ್ಲ. ಆ ರಾಜಕುಮಾರಿ ಮಾಡಿದ ತಪ್ಪಿಗೆ,

ರಾಜನ ಪರಿವಾರ ರಾಜನ ಮನೆಯವರು ತಪ್ಪು ಮಾಡಿದರೂ, ಶಿಕ್ಷೆ ಯಾರಿಗೋ ಆಯಿತು. ಶಿಕ್ಷೆ ಯಾರಿಗೆ ಆಗುತ್ತದೆಂದು ಹೇಳಲು ಧರ್ಮನೇ ಸಮರ್ಥ. ಆದ್ದರಿಂದ ಯಾರೂ ಕೂಡಾ ಧರ್ಮವಿರುದ್ಧಾಚರಣೆ ಮಾಡಬಾರದು. ಶಿಕ್ಷೆ ಅವರಿಗೆ, ಅವರ ಪರಿಹಾರಕ್ಕೆ ಕೆಲವೊಂದು ವೇಳೆ ಯಾರಿಗೂ ಆಗಬಹುದು. ಧರ್ಮದ ರಹಸ್ಯ ಬಲ್ಲವರು ಯಾರು? '**ಧರ್ಮಸ್ಯ ತತ್ತ್ವಂ ನಿಹಿತಂ ಗುಹಾಯಾಮ್**'.

೫. ಸುಕನ್ಯೆಯು ತಾನು ಮಾಡಿದ ತಪ್ಪನ್ನು ಮುಚ್ಚಿಡಲಿಲ್ಲ. ಪ್ರಾಂಜಲವಾಗಿ ಒಪ್ಪುತ್ತಾಳೆ. ತಪ್ಪು ಒಪ್ಪುವುದರಲ್ಲಿರುವ ಜಾಣ್ಮೆ, ಅದು ಪರಿಹಾರಕ್ಕೆ ಕಾರಣವಾಗುತ್ತದೆ. ಅಂತೆಯೇ ರಾಜಪರಿವಾರದವರ ಮಲಮೂತ್ರ ಸ್ತಂಭನ ನಿಂತಿತು.

೬. ಚ್ಯವನರು ಸುಕನ್ಯೆಯನ್ನು ಪ್ರಾಯಶ್ಚಿತ್ತರೂಪವಾಗಿ ಕೇಳಿದಾಗ ರಾಜನು ತನ್ನ ಮಗಳನ್ನು ಕೂಡಲೇ ಧಾರೆಯೆರೆಯಲು ಒಪ್ಪಿ ಪಾಪಪರಿಹಾರ ಮಾಡಿಕೊಳ್ಳುತ್ತಾನೆ. ವೃದ್ಧ ಬ್ರಾಹ್ಮಣನಿಗೆ ಮಗಳನ್ನು ಹೇಗೆ ಕೊಡಲಿ? ಎಂದು ಯೋಚಿಸುವುದೇ ಇಲ್ಲ. ಇಲ್ಲಿಯೇ ರಾಜನ ದೊಡ್ಡಸ್ತಿಕೆ. ಸುಕನ್ಯೆಯೂ ಚ್ಯವನರನ್ನು ವರಿಸಿ ಅವರ ಸೇವೆಯೇ ತನ್ನ ಭಾಗ್ಯವೆಂದು ಬಗೆಯುತ್ತಾಳೆ.

೭. ಬೆಳೆದುದು ರಾಜಕುಮಾರಿಯಾದರೂ, ತಾಪಸಿಯಾಗಿರಲು ಒಪ್ಪುತ್ತಾಳೆ. ತಾಪಸ ಜೀವನದ ಭಾಗ್ಯದ ಮುಂದೆ ಲೌಕಿಕದ ಯಾವ ಭಾಗ್ಯಸಂಪತ್ತು ತೃಣಸಮಾನವೆಂಬ ತಾತ್ತ್ವಿಕ ಮೌಲ್ಯವನ್ನು ಸುಕನ್ಯೆ ಜಗತ್ತಿಗೆ ತೋರಿಸುತ್ತಾಳೆ.

೮. ಸುಕನ್ಯೆಯ ಪಾತಿವ್ರತ್ಯ ಪರೀಕ್ಷೆಯನ್ನು ಅಶ್ವಿನೀದೇವತೆಗಳು ಮಾಡಿದಾಗ, ಚ್ಯವನರು ವೃದ್ಧ ತಪಸ್ವಿಗಳಾದರೂ ಗಂಡನನ್ನು ಬಿಟ್ಟು ಬೇರೆ ಯಾವ ಸುರೂಪಿಯೂ ತನಗೆ ಸಮ್ಮತನಲ್ಲವೆಂದು ಅವರಿಗೆ ತಿಳಿಸುತ್ತಾ ಪ್ರಾರ್ಥಿಸುತ್ತಾ ಅವರ ಅನುಗ್ರಹದಿಂದಲೇ ಗಂಡನನ್ನು ಗುರುತು ಹಿಡಿದು ತನ್ನ ಪಾತಿವ್ರತ್ಯವನ್ನು ಜಗತ್ತಿಗೆ ತೋರಿಸುತ್ತಾಳೆ. (ದಮಯಂತಿಯಂತೆ) ಸುಕನ್ಯಾ ಶ್ರೇಷ್ಠಮಟ್ಟದ ಪತಿವ್ರತೆಯಾಗಿ ಗಂಡ ಹಾಗೂ ದೇವಮಾನ್ಯಳಾಗುತ್ತಾಳೆ. ಪತಿವ್ರತೆಯಾಗಿ ಬಾಳುವುದೇ ಸ್ತ್ರೀಗೆ ಶೋಭೆ ತರುತ್ತದೆ ಹೊರತು, ರೂಪ, ಸಂಪತ್ತುಗಳನ್ನು ಸ್ತ್ರೀಯು ಎಂದೂ ಬಯಸಬಾರದು.

೯. ಚ್ಯವನರು ಅಶ್ವಿನೀದೇವತೆಗಳು ಕೊಟ್ಟ ಸೌಂದರ್ಯಯುಕ್ತ ದೇಹವನ್ನು ಕೃತಜ್ಞತೆಯಿಂದ ಸ್ವೀಕರಿಸುತ್ತಾರೆ. ಅವರಿಗೆ ಅದು ಬಯಸದೇ, ಬೇಡದೇ ಬಂದ ಭಾಗ್ಯ. ಅದಕ್ಕೆ ಕಾರಣ ಅವರ ತಪೋನಿಷ್ಠೆ ಮತ್ತು ಹೆಂಡತಿಯ ಪಾತಿವ್ರತ್ಯ ಸ್ವವರ್ಣಾಶ್ರಮ ಧರ್ಮಪಾಲನೆ. ಅದೇ ಸಕಲ ಸಂಪತ್ಪ್ರದಾಯಕ.

೧೦. ಚ್ಯವನರು ತಮ್ಮ ತಪಸ್ಸಿನ ಬಲದಿಂದ ಅಶ್ವಿನೀದೇವತೆಗಳಿಗೆ ಸೋಮಪಾನಾರ್ಹತೆ ದೊರಕಿಸಿ ಕೊಡುತ್ತಾರೆ. ತಪಸ್ಸಿನಿಂದ ಯಾವುದು ತಾನೇ ಅಸಾಧ್ಯ?

೧೧. ಚ್ಯವನರು ತಪೋ ಬಲದಿಂದ ವಜ್ರಾಯುಧ ಪ್ರಯೋಗಿಸಲು ಸಿದ್ಧನಾದ ಇಂದ್ರನ ಕೈಯನ್ನೇ ಸ್ತಂಭನ ಮಾಡಿದ ಮಹಾತಪಸ್ವಿಗಳು. ಬ್ರಹ್ಮತಪೋಬಲದ ಮುಂದೆ ಇಂದ್ರನ ಬಲವು ನಿಷ್ಕ್ರಿಯವಾಯಿತು. ಯದ್ಯಪಿ ಇಂದ್ರನ ಬಲದ ಮುಂದೆ ಚ್ಯವನರ ಬಲವು ಏನೂ ಅಲ್ಲ. ಆದರೂ ಜಗತ್ತಿಗೆ ಚ್ಯವನರ ಸುಕನ್ಯಾ ಶರ್ಯಾತಿಯರ ಕೀರ್ತಿ ತಿಳಿಯಲಿ ಎಂದೇ ಹಾಗೆ ಮಾಡಿದನೆಂದು ಭಾರತ ಹೇಳುತ್ತದೆ.

**ಹೆಣ್ಣುಸಂತತಿಯನ್ನು ಹೀಗಳೆಯುವ ಇಂದಿನ ಕಾಲದಲ್ಲಿ ಸುಕನ್ಯೆಯ ಚರಿತ್ರೆಯು ಆಕೆಯ, ಆಕೆಯ ತಂದೆ, ಗಂಡ ಚ್ಯವನನ ಮಹತ್ತ್ವ ತಿಳಿಸಿಕೊಡುತ್ತದೆ. ಹೆಣ್ಣು ಹೆತ್ತವರಿಗೂ, ತನಗೂ, ಅಂತಹ ಸಾತ್ತ್ವಿಕ ಹೆಣ್ಣನ್ನು ವರಿಸಿದ ಗಂಡಿಗೂ ಆದರ್ಶಗಳು.**

೧೨. ಚ್ಯವನರು ಇಂದ್ರನ ಪ್ರತಿರೋಧಕ್ಕಾಗಿ ಮದವೆಂಬ ಕೃತ್ಯೆ (ಮಹಾರಾಕ್ಷಸ) ಸೃಷ್ಟಿಸಿ ಇಂದ್ರನನ್ನೇ ಶರಣು ಹೊಂದುವಂತೆ ಮಾಡಿದರು. **ಬ್ರಾಹ್ಮಣನು ತಪೋಬಲದಿಂದ ಇಂದ್ರನನ್ನೂ ಹೆದರಿಸಬಹುದು.**

## ೩೬. ಮಾಂಧಾತನ ಚರಿತ್ರೆ

ಲೋಮಶರ ಉಪದೇಶದಂತೆ ಪಾಂಡವರು ಮುಂದೆ ಚ್ಯವನಸರೋವರ ಮುಂತಾದ ತೀರ್ಥಗಳನ್ನೂ, ಅನೇಕ ಪುಣ್ಯಪರ್ವತಕ್ಷೇತ್ರಗಳನ್ನು ಸಂದರ್ಶಿಸುತ್ತಾ ಯಮುನಾನದಿಗೆ ಬಂದರು. ಈ ನದಿಯ ತೀರದಲ್ಲಿ ಮಾಂಧಾತರಾಜ ದೇವತಾಪ್ರೀತ್ಯರ್ಥ ಮಹಾಯಾಗ ಮಾಡಿದನೆಂದೂ, **ಸಹದೇವನೆಂಬ** ರಾಜನೂ ಇಲ್ಲಿಯೇ ಬಹುದಕ್ಷಿಣಾಕ ಯಾಗ ಮಾಡಿದನೆಂದು ಲೋಮಶರು ಹೇಳಲು ಯುಧಿಷ್ಠಿರನು **ಮಾಂಧಾತನ** ಚರಿತೆ ಕೇಳಲು ಬಯಸಿದನು.

'ಲೋಮಶರೇ! ಮೂರೂ ಲೋಕಗಳನ್ನು ವಿಷ್ಣುವಿನಂತೆ ವಶಮಾಡಿಕೊಂಡ ಯುವನಾಶ್ವನು (ಮಾಂಧಾತನು) ಹುಟ್ಟಿದ ಬಗೆ ಹೇಗೆ? ಇಂದ್ರನ ಸಮಾನ ತೇಜಸ್ಸುಳ್ಳ ಆ ಮಾಂಧಾತನಿಗೆ ಆ ಹೆಸರು ಹೇಗೆ ಬಂದಿತು? ಆತನ ಜನ್ಮಚರಿತ್ರೆ, ಪರಾಕ್ರಮಗಳ ಬಗ್ಗೆ ದಯವಿಟ್ಟು ತಿಳಿಸಿರಿ' ಎಂದನು ಧರ್ಮರಾಜ.

ಅದಕ್ಕೆ ಲೋಮಶರು 'ಮಾಂಧಾತ ಚಕ್ರವರ್ತಿಯು ಮೂರು ಲೋಕಗಳಲ್ಲಿ ಹೇಗೆ ಪ್ರಸಿದ್ಧಿಗೆ ಬಂದನೆಂದು ಹೇಳುತ್ತೇನೆ ಕೇಳು' ಎಂದರು[೧].

'ಸೂರ್ಯವಂಶದಲ್ಲಿ ಇಕ್ಷ್ವಾಕುವೆಂಬ ರಾಜನಿದ್ದನಷ್ಟೆ ಆತನ ವಂಶದಲ್ಲಿ ಮುಂದೆ ಬಂದ ಯೌವನಾಶ್ವ ಬಹು ದಕ್ಷಿಣೆಗಳನ್ನು ಕೊಟ್ಟು ಅನೇಕ ಯಾಗಗಳನ್ನು ಮಾಡಿದ್ದ. ಒಂದು ಸಾವಿರ ಅಶ್ವಮೇಧಯಾಗಗಳಲ್ಲದೆ ಇತರ ಅನೇಕ ಯಜ್ಞಗಳನ್ನು ಮಾಡಿದ್ದ; ವಿಪ್ರರಿಗೆ ಸಾಕಷ್ಟು ದಾನ-ದಕ್ಷಿಣೆ ನೀಡಿದ್ದ.

---

೧ ಮಾಂಧಾತಾ ರಾಜಶಾರ್ದೂಲಸ್ತ್ರಿಷು ಲೋಕೇಷು ವಿಶ್ರುತಃ।
ಕಥಂ ಜಾತೋ ಮಹಾಬ್ರಹ್ಮನ್ ಯೌವನಾಶ್ವೋ ನೃಪೋತ್ತಮಃ।
ಯಸ್ಯ ಲೋಕಾಸ್ತ್ರಯೋ ವಶ್ಯಾ ವಿಷ್ಣೋರಿವ ಮಹಾತ್ಮನಃ।.....
ಮಂತ್ರಿಷ್ವಾಧಾಯ ತದ್ರಾಜ್ಯಂ ವನನಿತ್ಯೋ ಬಭೂವ ಹ।.....
ಪಿಪಾಸಾಶುಷ್ಕಹೃದಯಃ ಪ್ರವಿವೇಶಾಶ್ರಮಂ ಭೃಗೋಃ।
ತಾಮೇವ ರಾತ್ರಿಂ ರಾಜೇಂದ್ರ ಮಹಾತ್ಮಾ ಭೃಗು ನಂದನಃ।
ಇಷ್ಟಿಂ ಚಕಾರ ಸೌದ್ಯುಮ್ನೇಃ ಮಹರ್ಷಿಃ ಪುತ್ರಕಾರಣಾತ್। - ವನಪರ್ವ(೧೨೬/೧-೧೦)
ಯುವನಾಶ್ವೋಽಭವತ್ ತಸ್ಯ ಸೋಽನಪತ್ಯೋ ವನಂ ಗತಃ।
ಭಾರ್ಯಾಶತೇನ ನಿರ್ವಿಣ್ಣ ಋಷಯೋಽಸ್ಯ ಕೃಪಾಲವಃ।
ಇಷ್ಟಿಂ ಸ್ಮ ವರ್ತಯಾಂಚಕ್ರುರೈಂದ್ರೀಂ ತೇ ಸುಸಮಾಹಿತಾಃ। - ಭಾಗವತ(೯/೬/೨೫,೨೬)

ಅವನಿಗೆ ನೂರು ಪತ್ನಿಯರಿದ್ದರೂ ಸಂತಾನವೇ ಇರಲಿಲ್ಲ. ಮಹಾವ್ರತಶೀಲನಾದ ಯುವನಾಶ್ವ ರಾಜರ್ಷಿ ಕೊನೆಗೆ ರಾಜ್ಯದ ಆಡಳಿತವನ್ನು ಮಂತ್ರಿಗಳಿಗೆ ವಹಿಸಿ ವನಕ್ಕೆ ತಪಸ್ಸಿಗಾಗಿ ನಡೆದ. ಅಲ್ಲಿಯೂ ಶಾಸ್ತ್ರೋಕ್ತ ವಿಧಿವಿಧಾನಗಳಿಂದ ವಾನಪ್ರಸ್ಥ ಧರ್ಮಾಚರಣೆಯಲ್ಲಿದ್ದ ಒಮ್ಮೆ ಉಪವಾಸಗಳಿಂದ ಆಯಾಸಗೊಂಡ ರಾಜನು ಬಾಯಾರಿಕೆ ಮೊದಲಾದ ಶ್ರಮದಿಂದ ಬಸವಳಿದು ಭೃಗು ಋಷಿಗಳ ಆಶ್ರಮವನ್ನು ಪ್ರವೇಶ ಮಾಡಿದ. ಅವರು ರಾಜನ ಮೇಲಿನ ಕೃಪೆಯಿಂದ ಅಂದಿನ ರಾತ್ರಿಯೇ ಇಂದ್ರ ಸಂಬಂಧಿಯಾದ (ಪುತ್ರಕಾಮೇಷ್ಟಿ) ಯಾಗವನ್ನು ಮಾಡಿಸಿದ್ದರು.

ಯುವನಾಶ್ವ ಚ್ಯವನರ ಆಶ್ರಮಕ್ಕೆ ಬಂದ ರಾತ್ರಿಯೇ ಅವರು ಮಾಡಿಸಿದ ಯಜ್ಞದ ಫಲರೂಪವಾದ ಒಂದು ಕಲಶದಲ್ಲಿ ರಾಜನಿಗೆ ಇಂದ್ರಸಮನಾದ ಪುತ್ರಸಂತಾನವಾಗಲಿ ಎಂದು ಮಂತ್ರಪೂತವಾದ ಜಲವನ್ನು ಯಜ್ಞವೇದಿಕೆಯ ಬಳಿ ಇರಿಸಿದ್ದರು. ಅದನ್ನು ಯುವನಾಶ್ವನ ಪತ್ನಿಗೆ ಕೊಡುವ ಉದ್ದೇಶದಿಂದ ಇಡಲಾಗಿತ್ತು. ಆದರೆ ಹರಿಚಿತ್ತವೇ ಬೇರೆಯಾಗಿತ್ತು. ಬಾಯಾರಿಕೆಯಿಂದ ಬಸವಳಿದ ಯುವನಾಶ್ವ ಆ ರಾತ್ರಿ ನೀರಿಗಾಗಿ ಆಶ್ರಮದಲ್ಲಿದ್ದವರನ್ನು ಕೂಗಿ ಕರೆದ. ಆತನ ಕ್ಷೀಣಧ್ವನಿ ಯಾರಿಗೂ ಕೇಳಿಸಲಿಲ್ಲ. ಯಜ್ಞವೇದಿಕೆಯ ಬಳಿ ಇದ್ದ ಜಲಕಲಶ ನೋಡಿದ. ಯುವನಾಶ್ವ ತಾನೇ ಆ ಮಂತ್ರಪೂತಜಲವನ್ನು (ಯಾರಿಗಾಗಿ ಇಡಲಾಗಿತ್ತು ಎಂದು ಅರಿಯದೆ) ಕುಡಿದು ಬಿಟ್ಟ.

ನಂತರ ಎದ್ದ ಋತ್ವಿಜರು ಕಲಶದ ನೀರು ಕುಡಿದವರಾರು? ಎಂದು ಕೇಳಿದರು? ರಾಜ ಯುವನಾಶ್ವ ಕುಡಿದನೆಂದು ತಿಳಿದ ಋತ್ವಿಜರು, ಚ್ಯವನ ಮಹರ್ಷಿಗಳು '**ಈಶ್ವರ ಪ್ರಹಿತೇನ ತೇ । ಈಶ್ವರಾಯ ನಮಶ್ಚಕ್ರುರಹೋ ದೈವ ಬಲಂ ಬಲಮ್**' (ಭಾಗವತ- ೯/೭/೨೯) ಎಂದು ಉದ್ಗರಿಸಿದರು. ಋಷಿಗಳ ಸಂಕಲ್ಪ ಒಂದಾಗಿತ್ತು, ಹರಿಯಸಂಕಲ್ಪ ಮತ್ತೇನೋ ಆಗಿತ್ತು. ಅದೇ ನಡೆದುಹೋಯಿತು[೧].

ಚ್ಯವನರು 'ರಾಜ! ನಿನ್ನ ಪತ್ನಿಯು ಕುಡಿಯಬೇಕಾದ ಜಲ ನೀನು ಕುಡಿದೆ. ಇಂದ್ರನನ್ನೂ ಯಮಸದನಕ್ಕೆ ಕಳುಹಿಸಬಲ್ಲ ಪುತ್ರ ನಿನಗಾಗಲಿ ಎಂದು ತಪಸ್ಸನ್ನು ಧಾರೆ ಎರೆದು ಇಟ್ಟ ಜಲವನ್ನು ನೀನು ಕುಡಿಯಬಾರದಿತ್ತು. ಇದನ್ನು ಬದಲಾಯಿಸಲು ನಮಗೆ ಇನ್ನು ಸಾಧ್ಯವಿಲ್ಲ. ಇದರ ಪರಿಣಾಮ ನೀನೆ ಗರ್ಭಧರಿಸುವೆ, ಮಗನನ್ನೂ ಹೆರುವೆ (ಪ್ರಸವಿಸುವೆ). ಇಂದ್ರ ಸಮನಾದ ಪುತ್ರನು ಹುಟ್ಟುವಂತೆ ಮತ್ತೆ ಯಾಗ ಮಾಡಿಸುವೆ. ಗರ್ಭಧಾರಣದಿಂದ ಆಗುವ ದುಃಖವೂ ನಿನಗಾಗದಂತೆ ಮಾಡುವೆ' ಎಂದರು:

**ಯುವನಾಶ್ವೋ ಮಮೇತ್ಯೇವಂ ಸತ್ಯಂ ಸಮಭಿಪದ್ಯತ ।**
**ನ ಯುಕ್ತಮಿತಿ ತಂ ಪ್ರಾಹ ಭಗವಾನ್ ಭಾರ್ಗವಸ್ತದಾ ॥**

೧ ಸತ್ಯಸಂಕಲ್ಪತೋ ವಿಷ್ಣುಃ ನಾನ್ಯಥಾ ತು ಕರಿಷ್ಯತಿ । - ಮ.ತಾ.ನಿ.(೧/೯೬)
ಹರಿಚಿತ್ತ ಸತ್ಯ ಹರಿಚಿತ್ತ
ನರಚಿತ್ತಕ್ಕೆ ಬಂದುದು ಲವಲೇಶ ನಡೆಯದು - ಪುರಂದರದಾಸರು

**ಸುತಾರ್ಥಂ ಸ್ಥಾಪಿತಾ ಹ್ಯಾಪಸ್ತಪಸಾ ಚೈವ ಸಂಭೃತಾಃ।**
**ಮಯಾ ಹ್ಯತ್ರಾಹಿತಂ ಬ್ರಹ್ಮ ತಪ ಆಸ್ಥಾಯ ದಾರುಣಮ್॥**
**ಯಃ ಶಕ್ರಮಪಿ ವೀರ್ಯೇಣ ಗಮಯೇದ್ಯಮಸಾದನಂ।**
**ತಾಭ್ಯಸ್ತ್ವಮಾತ್ಮನಾ ಪುತ್ರಮೀದೃಶಂ ಜನಯಿಷ್ಯಸಿ॥**
**ಯಥಾಶಕ್ರಸಮಂ ಪುತ್ರಂ ಜನಯಿಷ್ಯಸಿ ವೀರ್ಯವಾನ್।**
**ಗರ್ಭಧಾರಣಜಂ ವಾಪಿ ನ ಖೇದಂ ಸಮವಾಪ್ಸ್ಯಸಿ॥**

**- ವನಪರ್ವ(೧೨೬/೧೮-೨೬)**

ನಂತರ ಗರ್ಭಕ್ಕೆ ಹತ್ತುತಿಂಗಳು ತುಂಬಿದ ನಂತರ, ಯುವನಾಶ್ವನ ಹೊಟ್ಟೆಯನ್ನು ಸೀಳಿಕೊಂಡು ಶಿಶು ಹೊರಗೆ ಬಂದಿತು. ಯುವನಾಶ್ವನಿಗೆ ಮಾತ್ರ ಚ್ಯವನರ ತಪಸ್ಸಿನ ಫಲವಾಗಿ ಯಾತನೆ ಏನೂ ಆಗಲಿಲ್ಲ, ಸಾಯಲೂ ಇಲ್ಲ[೧].

ಮಹಾಭಾರತದ ಪ್ರಕಾರ ಎಡಹೊಟ್ಟೆ ಸೀಳಿಕೊಂಡು ಮಗು ಬಂದಿತು, ನೂರು ವರ್ಷ ಮುಗಿದಾಗ ಎಂದೂ ಇದೆ. ಆದರೆ ಭಾಗವತದಲ್ಲಿ -

**ತತಃ ಕಾಲ ಉಪಾವೃತ್ತೇ ಕುಕ್ಷಿಂ ನಿರ್ಭಿದ್ಯ ದಕ್ಷಿಣಮ್। - ಭಾಗವತ(೯/೭/೩೦)**

ಭಾಗವತದಲ್ಲಿ ಗರ್ಭವಾಸಕಾಲ ಪೂರ್ತಿಯಾದಾಗ ಉದರದ ಬಲಭಾಗ ಭೇದಿಸಿಕೊಂಡು ಎಂದಿದೆ. ಇಲ್ಲಿ ಸತ್ಯಧರ್ಮತೀರ್ಥರು -

**'ತತಃ ಕಾಲೇ ದಶಮೆ ಮಾಸಿ ಜಾಯತೇ ಇತಿ ಶ್ರೌತೇ ಸಮಯೇ ಉಪಾವೃತ್ತೇ ಆಯಾತೇ'** ಎಂದು ಹತ್ತು ತಿಂಗಳ ನಂತರ ಎಂದು ವ್ಯಾಖ್ಯಾನ ಮಾಡಿದ್ದಾರೆ. ದೇವೀ ಭಾಗವತದಲ್ಲಿಯೂ ೧೦ ತಿಂಗಳ ನಂತರ ಎಂದು ಇದೆ. ಭಾರತದಲ್ಲಿನ **ವರ್ಷಶತೇ** ಎಂದರೆ **ಪೂರ್ಣಗರ್ಭಕಾಲೇ ಆಯಾತೇ** ಎಂದು ಶ್ರೀಸತ್ಯಧರ್ಮತೀರ್ಥರೀತ್ಯಾ ಅರ್ಥೈಸುವುದು ಸೂಕ್ತ ಎಂದು ತಿಳಿಯುವುದು.

ಈ ಅದ್ಭುತವನ್ನು ನೋಡಲು ಇಂದ್ರನು ದೇವತೆಗಳೊಡನೆ ಬಂದನು. ತಾಯಿಯಿಲ್ಲದ ಈ ಬಾಲಕನು ಯಾರ ಸ್ತನ್ಯಪಾನ ಮಾಡುವನೆಂದು ದೇವತೆಗಳು/ಋಷಿಗಳು ಚಿಂತಿಸುತ್ತಿರಲು ಇಂದ್ರನೇ ಬಂದು, ಈ ಮಗು **ಮಾಂ ಧಾಸ್ಯತಿ** ಎಂದು ನುಡಿಯುತ್ತಾ ತನ್ನ ತೋರುಬೆರಳನ್ನು ಮಗುವಿನ ಬಾಯಿಯಲ್ಲಿಡಲು ಮಗುವು ಇಂದ್ರನ ಅಮೃತಮಯವಾದ ತೋರುಬೆರಳನ್ನು ಚೀಪುತ್ತಲೇ ೧೩ ಗೇಣು ಉದ್ದ ಬೆಳೆಯಿತು:

**ಮಾಮಯಂ ಧಾಸ್ಯತೀತ್ಯೇವಂ ಭಾಷಿತೇ ಚೈವ ವಜ್ರಿಣಾ।**
**ಮಾಂಧಾತೇತಿ ಚ ನಾಮಾಸ್ಯ ಚಕ್ರುಃ ಸೇಂದ್ರಾಃ ದಿವೌಕಸಃ॥**

**- ವನಪರ್ವ(೧೨೬/೩೦)**

ಇಂದ್ರನು ಈ ಮಗು **ಮಾಂ ಧಾಸ್ಯತಿ** ಎಂದು ಹೇಳುತ್ತಿರಲು ಇಂದ್ರಾದಿ ದೇವತೆಗಳು ಮಗುವನ್ನು **ಮಾಂಧಾತ**ನೆಂದು ಕರೆದರು.

---

೧ ತತೋ ವರ್ಷಶತೇ ಪೂರ್ಣೇ ತಸ್ಯ ರಾಜ್ಞೋ ಮಹಾತ್ಮನಃ।
ವಾಮಂ ಪಾರ್ಶ್ವಂ ವಿನಿರ್ಭಿದ್ಯ ಸುತಃ ಸೂರ್ಯ ಇವ ಸ್ಥಿತಃ॥ - ವನಪರ್ವ(೧೨೬/೨೭)

ಕೂಡಲೇ ಮಾಂಧಾತನು ಧ್ಯಾನಾಸಕ್ತನಾಗುತ್ತಿರಲು ಎಲ್ಲ ವೇದಗಳೂ, ಧನುರ್ವೇದವೂ, ದಿವ್ಯಾಸ್ತ್ರಗಳೂ ಮಾಂಧಾತನಿಗೆ ಪ್ರತಿಭಾತವಾದವು. **ಆಜಗವವೆಂಬ** ಧನುಸ್ಸು ಶೃಂಗಗಳಿಂದ ಮಾಡಿದ ಬಾಣಗಳೂ, ಅಭೇದ್ಯ ಕವಚಗಳೆಲ್ಲ ಅವನನ್ನು ಅಲಂಕರಿಸಿದವು. ಸ್ವಯಂ ಇಂದ್ರ ಆತನನ್ನು ಸಿಂಹಾಸನದಲ್ಲಿ ಅಭಿಷೇಕ ಮಾಡಿದನು. ನಂತರ ಮಾಂಧಾತನು ವಿಷ್ಣುವಿನಂತೆ ಮೂರು ಲೋಕಗಳನ್ನು ಗೆದ್ದನು. ಅವನಿಗೆ ಯಾರ ಪ್ರತಿರೋಧವೂ ಇರಲಿಲ್ಲ (**ವಿಷ್ಣುವಿನಂತೆ ಎನ್ನುವ ಹೋಲಿಕೆ ಉತ್ಪ್ರೇಕ್ಷೆ- ಉಚ್ಛೋತಮಾ**). ಮಾಂಧಾತನ ರಾಜ್ಯವು ಸಂಪತ್ಸಮೃದ್ಧಿಯಿಂದ ಕೂಡಿತ್ತು. ಆತನು ಬಹುದಕ್ಷಿಣೆಗಳಿಂದ ಯಜ್ಞಗಳನ್ನು ಮಾಡಿದನು. ಇಂದ್ರನ ಅರ್ಧಾಸನದಲ್ಲಿ ಕೂಡುವ ಭಾಗ್ಯಶಾಲಿಯಾದನು. ಒಂದೇ ದಿನದಲ್ಲಿ ಶಾಸನ ಮಾತ್ರದಿಂದ ಸಮಗ್ರ ಬ್ರಹ್ಮಾಂಡ ಗೆದ್ದನು. ಜಗತ್ತಿನಲ್ಲಿ ಆತನ ಸ್ಮಾರಕವಾಗಿ ಯಜ್ಞಸ್ತಂಭಗಳು ದ್ವಾಪರದಲ್ಲೂ ಕಂಡು ಬಂದವು. ಭೂಮಿಯ ನಾಲ್ಕೂ ದಿಕ್ಕುಗಳಲ್ಲಿ ಯೂಪಸ್ತಂಭಗಳು ಇದ್ದವು. ಯಜ್ಞ ಮಾಡಿದ ಮೇಲೆ ಬ್ರಾಹ್ಮಣರಿಗೆ ಹತ್ತು ಸಾವಿರ ಪದ್ಮ ಗೋದಾನ ಮಾಡಿದ್ದನು[೧] (೧೦೦ ಕೋಟಿ = ೧ ಪದ್ಮ).

ಒಮ್ಮೆ ಲೋಕದಲ್ಲಿ ೧೨ ವರ್ಷ ಅನಾವೃಷ್ಟಿಯಾದಾಗ ಇಂದ್ರನು ನೋಡುತ್ತಿದ್ದಂತೆಯೇ ಮೇಘಗಳಿಗೆ ಅಜ್ಞೆಮಾಡಿ ಮಳೆ ಬರಿಸಿದನು. ಆಗ ಇಂದ್ರ ಪ್ರತಿರೋಧ ಮಾಡದೇ ಸುಮ್ಮನೇ ಇದ್ದನು. ಒಟ್ಟಾರೆ ಮಾಂಧಾತನ ರಾಜ್ಯದಲ್ಲಿ ಎಲ್ಲ ವರ್ಣಾಶ್ರಮದವರೂ ಸುಖವಾಗಿದ್ದರು. ಕುರುಕ್ಷೇತ್ರದ ಮಧ್ಯದಲ್ಲಿರುವ ಈ ಪ್ರದೇಶ ಪುಣ್ಯತಮ, ಇದುವೇ ಮಾಂಧಾತನ ಯಜ್ಞ ಭೂಮಿಯಾಗಿತ್ತು' ಎಂದು ಲೋಮಶರು ನುಡಿದರು[೨].

## ಸಂದೇಶಗಳು

೧. ಸೂರ್ಯವಂಶದ ಪ್ರಭಾವಿರಾಜರಲ್ಲಿ ಮಾಂಧಾತನಿಗೆ ಅನುಪಮ ಸ್ಥಾನವಿದೆ. ಆತನ ಜನನವೇ ಅದ್ಭುತ. ಇಂದ್ರನೇ ನೋಡಲು ಬಂದ ಜನ್ಮನೋತ್ಸವ. ತಾಯಿ ಗರ್ಭಪ್ರವೇಶವಿಲ್ಲದೇ ಹುಟ್ಟಿದ ಮಾಂಧಾತ ಇಂದಿನ ವಿಜ್ಞಾನ ಯುಗಕ್ಕೊಂದು ಸವಾಲು. ನಮ್ಮ ವಿಜ್ಞಾನಿಗಳು ಇದನ್ನು Abnormal ಎಂದು ಕೈ ತೊಳೆದುಕೊಳ್ಳುತ್ತಾರೆ. ಅದು ನಿಜ. ಆದರೆ ಇಂದಿನ ಕಾಲದಲ್ಲಿ Birth (ಹುಟ್ಟುವಿಕೆ) ಜೀವನಕ್ಕೆ ವೇದನೆ ತರುವಂಥವು. ಆದರೆ ಮಾಂಧಾತನಿಗೆ ಅಥವಾ ಹೆತ್ತ ಯುವನಾಶ್ವನಿಗೂ ಏನೂ ಯಾತನೆಯಾಗಲಿಲ್ಲ. ಮೃತ್ಯುವಂತೂ ದೂರವೇ ಉಳಿಯಿತು!!

ಈ ವಿಷಯವು ಬ್ರಹ್ಮಸೂತ್ರ ಭಾಷ್ಯ ಅಧ್ಯಾಯ ೩. ಪಾದ ೧ರಲ್ಲಿ ಯೋನ್ಯಧಿಕರಣದಲ್ಲಿ ಚರ್ಚಿತವಾಗಿ ತೀರ್ಮಾನವಾಗಿದೆ. ಬ್ರಹ್ಮಸೂತ್ರ ೩/೧/೧೯/೨೯.

---

೧ ತೇನ ಪದ್ಮಸಹಸ್ರಾಣಿ ಗವಾಂ ದಶ ಮಹಾತ್ಮನಾ ।
ಬ್ರಾಹ್ಮಣಾನಾಂ ಮಹಾರಾಜ ದತ್ತಾನೀತಿ ಪ್ರಚಕ್ಷತೇ ॥ - ವನಪರ್ವ(೧೨೬/೪೧)

೨ ಪ್ರಜಾಶ್ಚತುರ್ವಿಧಾಸ್ತೇನ ತ್ರಾತಾ ರಾಜನ್ ಕೃತಾತ್ಮನಾ ।
ತೇನಾತ್ಮತಪಸಾ ಲೋಕಾಸ್ತಾಪಿತಾಶ್ಚಾತಿ ತೇಜಸಾ ॥ - ವನಪರ್ವ(೧೨೬/೪೪)

**'....ಅಥಾ ಸಂಮಿತಂ ಸ್ಥಾಣುಭ್ಯೋ ಜಾಯತೇ । ಪಿತುರ್ಮಾತುರಂತರೇ ವಾ ಗರ್ಭೇ ವಾ ಬಹಿರ್ವಾ । ಇತಿ ಪೌಷ್ಯಾಯಣ ಶ್ರುತೇಃ ।**

ಅಸಾಧಾರಣ ಸೃಷ್ಟಿಕ್ರಮ ಹೀಗಿದೆ. ಕೆಲವು ಜೀವರು ಸ್ಥಾವರ ಪದಾರ್ಥದಿಂದಲೇ ಹುಟ್ಟುತ್ತಾರೆ (ಉದಾ: ಶುಕಾಚಾರ್ಯರು). ಇನ್ನು ಕೆಲವರು ತಂದೆಯಿಂದಲೇ ಹುಟ್ಟುತ್ತಾರೆ (ಉದಾ: ಮಾಂಧಾತಾದಿ ರಾಜರು).

ತತ್ತ್ವಪ್ರಕಾಶಿಕಾ(ಬ್ರಹ್ಮಸೂತ್ರಭಾಷ್ಯದ ಟೀಕೆ)ದಲ್ಲಿ ಹೀಗಿದೆ –

**ಸ್ಥಾಣುಷು ಶುಕಾದಯಃ ।**

ಪುರುಷೇ ಮಾಂಧಾತೃಮುಖಾ... ಆದ್ದರಿಂದ Abnormal ಎಂದರೆ ಹೀಗೆ ಅರ್ಥೈಸಬೇಕು.

೨. ಮಾಂಧಾತನ ಜನ್ಮದ ಹಿನ್ನೆಲೆಯಲ್ಲಿ ಚ್ಯವನರ ಮಹಾತಪಸ್ಸಿನ ಫಲ ಇದೆ, ತಪಸ್ಸಿಗೆ ತಕ್ಕ ಫಲ. ಆದ್ದರಿಂದ ಎಲ್ಲರೂ ದೇಹದಂಡನೆ ರೂಪವಾದ ಉಪವಾಸಾದಿ ವ್ರತ ಹಾಗೂ ಶಾಸ್ತ್ರಾಧ್ಯಯನ ರೂಪ ತಪಸ್ಸು ಮಾಡಿದಲ್ಲಿ ಸತ್ಸಂತಾನ ಲಭ್ಯವಿದೆ.

೩. ಜನಿಸಿದ ಮಗುವಿಗೆ ಸ್ತನ್ಯಪಾನ, ಅಮೃತಪಾನ ಮಾಡಿಸಿದ್ದು ಇಂದ್ರದೇವರೇ. ಆದ್ದರಿಂದ ಕೂಡಲೇ ೧೩ ಗೇಣು ಮಗು ಬೆಳೆಯಿತು. ಆಹಾರಕ್ಕೆ ತಕ್ಕ ಬೆಳವಣಿಗೆ. ರತಿಯು ಶಂಬರಾಸುರ ಮನೆಯಲ್ಲಿದ್ದಾಗ ಮಗು ಪ್ರದ್ಯುಮ್ನನನ್ನು ರಸಾಯನಗಳಿಂದಲೇ ನಾಲ್ಕೇ ವರ್ಷಗಳಲ್ಲಿ ಪೂರ್ಣಯುವಕನಾಗಿಸಿದ್ದು ಭಾಗವತಾದಿಗಳಲ್ಲಿ ಬಂದಿದೆ (ಮ.ತಾ.ನಿ. ೧೭/೧೯೧,೧೯೨).

೪. ಮಾಂಧಾತನ ತಪಸ್ಸು ಇಂದ್ರನ ಅರ್ಧಾಸನದಲ್ಲಿ ಕೂಡುವ ಭಾಗ್ಯ ತಂದಿತು. ತಪಸ್ಸು ಎಲ್ಲರಿಗೂ ಅಗತ್ಯ. ಇಂದ್ರನ ಅನುಮತಿ ಇಲ್ಲದೆಯೇ ಮಳೆ ತರಿಸುವ ಸಾಮರ್ಥ್ಯ ತಪಸ್ಸಿನ ಮಹಿಮೆ.

೫. ಆದ್ದರಿಂದ ಮಾಂಧಾತ ರಾಜ ಪ್ರಾತಃ ಸ್ಮರಣೀಯ ಚಕ್ರವರ್ತಿಗಳಲ್ಲಿ ಒಬ್ಬನಾಗಿದ್ದಾನೆ.

**ಮಾಂಧಾತಾ ನಹುಷೋಽಂಬರೀಷ ಸಗರೌ...**

**– ಶ್ರೀರಾಜರಾಜೇಶ್ವರತೀರ್ಥರ ಮಂಗಲಾಷ್ಟಕ**

(ವಿ.ಸೂ.– ಮಾಂಧಾತನ ವಿಷಯಗಳು ಪದ್ಮಪುರಾಣ, ಭಾಗವತ, ದೇವೀಭಾಗವತ, ಮಹಾಭಾರತದ ವನಪರ್ವವಲ್ಲದೆ ಶಾಂತಿಪರ್ವ, ದ್ರೋಣಪರ್ವ, ಅನುಶಾಸನಪರ್ವಗಳಲ್ಲಿ ಬಂದಿವೆ.)

## ೩೭. ಸೋಮಕ-ಜಂತು ಇವರ ಉಪಾಖ್ಯಾನ

ಮಾಂಧಾತರಾಜನ ಚರಿತ್ರೆ ಕೇಳಿದ ಧರ್ಮರಾಜನು ಸೋಮಕರಾಜನ ವೃತ್ತಾಂತ, ಆತನ ಪರಾಕ್ರಮ ಮೊದಲಾದ ಸಾಧನೆಗಳನ್ನು ಕೇಳಬಯಸಿದಾಗ ಲೋಮಶರು ಸೋಮಕರಾಜನ ಕಥೆಯನ್ನು ಹೇಳಲು ಆರಂಭಿಸಿದರು.

ಹಿಂದೆ ಸೋಮಕನೆಂಬ ಧಾರ್ಮಿಕನಾದ ರಾಜನಿದ್ದನು. ಆತನಿಗೆ ನೂರು ಪತ್ನಿಯರಿದ್ದರೂ ಯಾರಲ್ಲೂ ಒಬ್ಬ ಮಗನೂ ಮಹಾಯಜ್ಞ ಮಾಡಿದರೂ ಜನಿಸಲಿಲ್ಲ. ಆತನಿಗೆ ವಯಸ್ಸಾಗಿ ವೃದ್ಧನಾದ. ವ್ರತ ಮೊದಲಾದ ಪ್ರಯತ್ನದ ಫಲವಾಗಿ ಕೊನೆಗೆ ಒಬ್ಬ ಪತ್ನಿಯಲ್ಲಿ ಒಂದು ಗಂಡು ಮಗು ಜನಿಸಿತು. ಅದಕ್ಕೆ ಜಂತು ಎಂಬ ಹೆಸರಿಟ್ಟರು. ಹುಟ್ಟಿದ ಮಗುವಿನ ಬಗ್ಗೆ ಎಲ್ಲ ಪತ್ನಿಯರೂ ತುಂಬಾ ಅಕ್ಕರೆಯಿಂದ ಸಾಕಿದರು. ಯಾವಾಗಲೂ ಆ ಮಗುವಿನ ಸುಖಸಂತೋಷಗಳಲ್ಲಿ ತಮ್ಮ ಸುಖ ಸಮಾಧಾನ ಕಂಡರು.

ಒಮ್ಮೆ ಆ ಮಗುವಿನ ತೊಡೆಯ ಮೇಲ್ಭಾಗಕ್ಕೆ ಇರುವೆ ಕಚ್ಚಲು ಆ ಮಗು ಜೋರಾಗಿ ಅತ್ತಿತ್ತು.

ಇದರಿಂದ ನೊಂದು ತಾಯಿ ಹಾಗೂ ಎಲ್ಲ ರಾಜನ ಪತ್ನಿಯರೂ ಅಳುತ್ತಾ ಕುಳಿತರು. ಇಡೀ ಅರಮನೆಯೇ ರೋದನದಲ್ಲಿ ಮುಳುಗಿ, ರಾಜನಿಗೂ ಗೊತ್ತಾಯಿತು. ಕಾರಣ ತಿಳಿದ ರಾಜನು ಸ್ವಯಂ ಅಂತಃಪುರಕ್ಕೆ ಬಂದು ಮಗುವನ್ನು ಸಮಾಧಾನ ಪಡಿಸಿ ಹೋದನು. ಪುರೋಹಿತರನ್ನು ಕರೆಸಿ ಹೀಗೆ ನುಡಿದನು.

'ಗುರುಗಳೇ! ಏಕಪುತ್ರನಾದ ನನಗೆ ಧಿಕ್ಕಾರ. ಮಕ್ಕಳಿಲ್ಲದಿರುವುದೇ ಲೇಸೆನಿಸುತ್ತದೆ. ಮಕ್ಕಳಿಗೋಸ್ಕರ ಈ ನೂರು ಹೆಂಡಿರನ್ನು ಪರೀಕ್ಷಿಸಿಯೇ( ಜಾತಕಗಳನ್ನು) ಮದುವೆಯಾದರೂ ಮಕ್ಕಳಾಗಲಿಲ್ಲ. ಹೇಗೋ ಒಂದು ಮಗು ಜನಿಸಿತು. ಅದರೂ ಸುಖ ಲಭಿಸುತ್ತಿಲ್ಲ. ನನಗೋ ವಯಸ್ಸಾಗುತ್ತಿದೆ. ನನ್ನ ಪತ್ನಿಯರ ಪ್ರಾಣಗಳೆಲ್ಲ ಜನಿಸಿರುವ ಒಬ್ಬನೇ ಮಗನಲ್ಲಿ ನೆಟ್ಟಿದೆ. ಆದ್ದರಿಂದ ಈಗ ಹೇಗಾದರೂ ಆಗಲಿ ಯಾವ ಕರ್ಮ ಪ್ರಯತ್ನವೇ ಆಗಲಿ ಚಿಕ್ಕದಿರಲಿ ಕಷ್ಟ ಕರವಾಗಿರಲಿ, ನಾನು ನೂರು ಮಕ್ಕಳನ್ನು ಪಡೆಯಬೇಕು. ಅದನ್ನು ದಯವಿಟ್ಟು ತಿಳಿಸಿರಿ' ಎಂದನು[೧].

---

೧ ಧಿಗಸ್ತ್ವಿಹೈಕಪುತ್ರತ್ವಮಪುತ್ರತ್ವಂ ವರಂ ಭವೇತ್ ।
ಇದಂ ಭಾರ್ಯಾಶತಂ ಬ್ರಹ್ಮನ್ ಪರೀಕ್ಷ್ಯ ಸದೃಶಂ ಪ್ರಭೋ ।

ಆಗ ಋತ್ವಿಕರು (ಪುರೋಹಿತರು) 'ರಾಜನ್! ಒಂದು ಪ್ರಯತ್ನವೇನೋ ಇದೆ. ಒಂದು ವೇಳೆ ನೀನು ಅದನ್ನು ಮಾಡಲು ಸಮರ್ಥನಾದಲ್ಲಿ ನೂರು ಮಕ್ಕಳಾಗುವರು. ಅದಕ್ಕೆ ಸೋಮಕರಾಜನು ಅದು ಮಾಡಲು ಯೋಗ್ಯವಾಗಿರಲಿ ಅಥವಾ ಅಯೋಗ್ಯವಾಗಿರಲಿ (ಸುಲಭವಾಗಿರಲಿ ಅಥವಾ ಕಠಿಣವಾಗಿರಲಿ) ಅದು ಮಾಡಿದಂತೆಯೇ ಎಂದು ಭಾವಿಸಿ ಹೇಳಿರಿ' ಎಂದನು[೧].

ಅದಕ್ಕೆ ಪುರೋಹಿತರು - 'ನಾವು ಮಾಡಿಸುವ ಯಜ್ಞದಲ್ಲಿ ನಿನ್ನ ಮಗ ಜಂತುವಿನ ಕರುಳಿನ ತೆಳ್ಳನೆಯ ಪೊರೆಯನ್ನೇ ಹವಿಸ್ಸನ್ನಾಗಿ ಯಜ್ಞೇಶ್ವರನಿಗೆ ಹಾಕಿ, ಅದರ ಧೂಮವನ್ನು ನಿನ್ನ ಎಲ್ಲ ಪತ್ನಿಯರೂ ಆಘ್ರಾಣಿಸಲಿ (ವಾಸನೆ ಸ್ವೀಕರಿಸಲಿ). ಇದರಿಂದ ನಿನ್ನ ಎಲ್ಲ ಪತ್ನಿಯರೂ ಗರ್ಭಿಣಿಯರಾಗಿ ಪುತ್ರರನ್ನು ಪಡೆಯುವರು. ಜಂತು (ನಿನ್ನ ಮಗ) ಮತ್ತೆ ಅದೇ ತಾಯಿಯಲ್ಲಿ ಮಗನಾಗಿ ಜನಿಸುವನು. ಅವನ ಬೆನ್ನಿನ ಮೇಲೆ ಸುವರ್ಣರೇಖೆಯಿರುತ್ತದೆ' ಎಂದರು[೨].

ಪುತ್ರಾಕಾಂಕ್ಷಿಯಾದ ಸೋಮಕರಾಜನು ಪುರೋಹಿತರ ಮಾತಿಗೆ ಒಪ್ಪಲು ಯಜ್ಞ ಆರಂಭವಾಯಿತು. ಆದರೆ ರಾಜಪತ್ನಿಯರು ಜಂತುವಿನ ಮೇಲಿನ ವಾತ್ಸಲ್ಯದಿಂದ ಪಶು ಸ್ಥಾನದಲ್ಲಿಡಲ್ಪಟ್ಟ ಮಗುವನ್ನು ನೋಡಲಾರದೆ ರೋದಿಸುತ್ತಾ ಮಗುವನ್ನು ದೂರ ಕರೆದೊಯ್ದರು. ಆದರೆ ಯಜ್ಞ ಮಾಡಲೇಬೇಕಿತ್ತು. ಕಾರಣ ಪುರೋಹಿತರು ಬಲಾತ್ಕಾರದಿಂದ ಮಗುವನ್ನು ತಾಯಿಯರಿಂದ ಬಿಡಿಸಿಕೊಂಡು ಬಂದು ವಧಿಸಿ, ಅದರ ವಪೆಯನ್ನು ಯಜ್ಞೇಶ್ವರನಿಗೆ ಅರ್ಪಿಸಿದರು. ಆ ಧೂಮವನ್ನು ಆಘ್ರಾಣಿಸಿದ ರಾಜಪತ್ನಿಯರು ದುಃಖದಿಂದ ಕುಸಿದುಬಿಟ್ಟರು.

ಯಜ್ಞದ ಫಲ ಲಭಿಸಿತು. ರಾಜಪತ್ನಿಯರು ಗರ್ಭವತಿಯರಾದರು. ದಶಮಾಸಾನಂತರ ರಾಜನಿಗೆ ನೂರು ಪುತ್ರರು ಜನಿಸಿದರು. ಜಂತುವೂ ಕೂಡಾ ಅದೇ ತಾಯಿಯಲ್ಲಿ ಮಗನಾಗಿ

---

ಪುತ್ರಾರ್ಥಿನಾ ಮಯಾ ವೋಢಂ ನ ತಾಸಾಂ ವಿದ್ಯತೇ ಪ್ರಜಾಃ।
ಸ್ಯಾತ್ತು ಕರ್ಮತಥಾ ಯುಕ್ತಂ ಯೇನ ಪುತ್ರಶತಂ ಭವೇತ್।
ಮಹತಾ ಲಘುನಾ ವಾಪಿ ಕರ್ಮಣಾ ದುಷ್ಕರೇಣ ವಾ। - ವನಪರ್ವ(೧೨೭/೧೨-೧೬)
೧ ಕಾರ್ಯಂ ವಾಕಾರ್ಯಂ ಯದಿ ಯೇನ ಪುತ್ರಶತಂ ಭವೇತ್।
ಕೃತಮೇವೇತಿ ತದ್ವಿದ್ಧಿ ಭಗವಾನ್ ಪ್ರಬ್ರವೀತು ಮೇ॥ - ವನಪರ್ವ(೧೨೭/೧೮)
೨ ಯಜಸ್ವ ಜಂತುನಾ ರಾಜನ್ ತ್ವಂ ಮಯಾ ವಿತತೇ ಕ್ರತೌ।
ತತಃ ಪುತ್ರಶತಂ ಶ್ರೀಮದ್ಭವಿಷ್ಯತ್ಯಚಿರೇಣ ತೇ॥
ವಪಾಯಾಂ ಹೂಯಮಾನಾಯಾಂ ಧೂಮಮಾಘ್ರಾಯ ಮಾತರಃ।
ತತಸ್ತಾಃ ಸುಮಹಾವೀರ್ಯಾನ್ ಜನಯಿಷ್ಯಂತಿ ತೇ ಸುತಾನ್॥
ತಸ್ಯಾಮೇವ ತು ತೇ ಜಂತುರ್ಭವಿತಾ ಪುನರಾತ್ಮಜಃ।
ಉತ್ತರೇ ಚಾಸ್ಯ ಸೌವರ್ಣಂ ಲಕ್ಷ್ಮ ಪಾರ್ಶ್ವೇ ಭವಿಷ್ಯತಿ॥ - ವನಪರ್ವ(೧೨೭/೧೯-೨೧)

ಜನಿಸಿದನು. ಅವನ ಬೆನ್ನಿನ ಮೇಲೆ ಪುರೋಹಿತರು ಹೇಳಿದಂತೆ ಸುವರ್ಣರೇಖೆಯೂ ಇತ್ತು. ಕಾಲ ಗತಿಸಲು ಪುರೋಹಿತರು ಮೊದಲು, ನಂತರ ರಾಜನು ಮರಣಹೊಂದಿ ಯಮಾಲಯಕ್ಕೆ ಹೋದರು. ನಂತರ ಹೋದ ರಾಜನು, ನರಕದಲ್ಲಿ ಸಂಕಟಪಡುತ್ತಿದ್ದ ಬ್ರಾಹ್ಮಣ(ಪುರೋಹಿತ) ರನ್ನು ನೋಡಿ 'ಗುರುಗಳೇ! ನೀವೇಕೆ ನರಕದಲ್ಲಿ ಯಾತನೆ ಅನುಭವಿಸುತ್ತಿದ್ದೀರಿ?' ಎನ್ನಲು ಪುರೋಹಿತರು 'ನಿನಗೆ ಯಜ್ಞ ಮಾಡಿಸಿದ್ದರಿಂದ ನನಗೀಗ ಅಗ್ನಿಯಿಂದ ಸುಡಲ್ಪಡುತ್ತಿದ್ದೇನೆ' ಎಂದರು. ಇದನ್ನು ಕೇಳಿದ ರಾಜನು ಯಮನನ್ನೇ ಕಾರಣ ಕೇಳಿದನು. ಅದಕ್ಕೆ ಯಮಧರ್ಮರಾಜನು 'ರಾಜನ್! ತಪ್ಪು ಮಾಡಿದವನೇ ಫಲ ಅನುಭವಿಸಬೇಕು. ಬೇರೆ ಯಾರೂ ಅನುಭವಿಸಲು ಸಾಧ್ಯವಿಲ್ಲ' ಎಂದನು[೧].

ಯದ್ಯಪಿ ರಾಜ್ಯನಿಗೆ ಉತ್ತಮ ಲೋಕಪ್ರಾಪ್ತಿ ಇದ್ದರೂ, ಆತ ಬಯಸಲಿಲ್ಲ. ತನ್ನ ಗುರುವಿಗೆ ಇಂತಹ ದುರ್ಗತಿಗೆ ತಾನೇ ಕಾರಣನೆಂದು ಭಾವಿಸಿ, ಧರ್ಮರಾಜನಿಗೆ 'ಯಮಧರ್ಮ ನಾನು ನನ್ನ ಪುರೋಹಿತರನ್ನು ಹೀಗೆ ನರಕದಲ್ಲಿ ಬಿಟ್ಟು ನಾನೊಬ್ಬನೇ ಉತ್ತಮಲೋಕಕ್ಕೆ ಹೋಗೆನು. ಪುರೋಹಿತ ಮಾಡಿಸಿದ ಯಜ್ಞ ನನ್ನ ಸಲುವಾಗಿ, ಕಾರಣ ಆತನೊಡನೆ ದುಃಖಾನುಭವಿಸಿ ಮುಂದೆ ಸುಖಲೋಕಗಳಿಗೆ ಹೋಗುವೆ' ಎಂದ.

ಯಮಧರ್ಮ ರಾಜನ ಔದಾರ್ಯವನ್ನು ಗಮನಿಸಿ ನೀನು ಕೆಲಕಾಲ ಪುರೋಹಿತರೊಡನೆ ದುಃಖ ಅನುಭವಿಸಿ, ಆಮೇಲೆ ಇಬ್ಬರೂ ಸದ್ಗತಿ ಹೊಂದಿರಿ ಎಂದು ಹೇಳಲು, ರಾಜನು ಬ್ರಾಹ್ಮಣನೊಡನೆ ನರಕ ಪ್ರವೇಶಿಸಿದ. ಹೀಗಾಗಿ ಪುರೋಹಿತನ ಪಾಪವು ಬೇಗನೇ ಕಳೆಯಿತು. ನಂತರ ಇಬ್ಬರೂ ನರಕದಿಂದ ಬಿಡುಗಡೆಯಾಗಿ ಉತ್ತಮ ಲೋಕಗಳನ್ನು ಹೊಂದಿದರು ಎಂದು ಲೋಮಶರು ಧರ್ಮರಾಜನಿಗೆ ಸೋಮಕರಾಜನ ಚರಿತ್ರೆಯನ್ನು ಆತನ ಗುರುಭಕ್ತಿಯನ್ನು ವರ್ಣಿಸಿದರು.

ಧರ್ಮರಾಜ! ಇದುವೇ ಸೋಮಕರಾಜನ ಆಶ್ರಮವಾಗಿತ್ತು. ಇಲ್ಲಿ ಆರು ರಾತ್ರಿಗಳನ್ನು ವ್ರತ, ನಿಯಮಗಳನ್ನು ಆಚರಿಸುತ್ತಾ ಕಳೆಯುವವನು ಉತ್ತಮ ಲೋಕಗಳನ್ನು ಹೊಂದುತ್ತಾನೆ ಎಂದು ಲೋಮಶರು ಹೇಳಿದರು.

### ಸಂದೇಶಗಳು-ವಿವರಣೆಗಳು

೧. ಸೋಮಕರಾಜನು ಮದುವೆ ಮುನ್ನ ಎಲ್ಲ ಕನ್ಯೆಯರ ಜಾತಕಾದಿಗಳನ್ನು ವಂಶಾದಿ ವಿವರ ಪಡೆದೇ ಮದುವೆಯಾದರೂ ಮಕ್ಕಳಾಗಲಿಲ್ಲ. ಕಾರಣ ಬ್ರಹ್ಮಲಿಖಿತವೇ ಅಂತಿಮ. ಉಳಿದ ಯಾವುದೇ ಪ್ರಯತ್ನಗಳು ಪೂರ್ಣ ಸತ್ಯವಾಗಲಾರವು. **ಜಾತಕಾದಿಗಳು ವ್ಯಕ್ತಿಯ ಪೂರ್ಣಮಾಹಿತಿ ನೀಡಲಾರವು. ಅಥವಾ ಅವನ್ನು ತಿಳಿಯುವ ಸಾಮರ್ಥ್ಯ ಎಲ್ಲರಿಗೂ**

೧ ತ್ವಂ ಮಯಾ ಯಾಜಿತೋ ರಾಜನ್ ತಸ್ಯೇದಂ ಕರ್ಮಣಃ ಫಲಂ
ನಾನ್ಯಃ ಕರ್ತುಃ ಫಲಂ ರಾಜನ್ನುಪಭುಂಕ್ತೇ ಕದಾಚನ - ವನಪರ್ವ(೧೨೮/೧೨-೧೪)

**ಇರಲು ಸಾಧ್ಯವಿಲ್ಲವೆನ್ನುವ ಸತ್ಯ ಚಿರಂತನವಾದುದು.**

೨. ಸೋಮಕರಾಜನ ಪತ್ನಿಯರಲ್ಲಿ ಒಬ್ಬಳಿಗೇನೇ ಮಗುವಾಯಿತು. ಉಳಿದವರೆಲ್ಲ ಆ ಮಗುವನ್ನು ತನ್ನ ಮಗುವೆಂದು ಪ್ರೀತಿಸಿದ ಅವರ ಪುತ್ರವಾತ್ಸಲ್ಯ ಅನ್ಯಾದೃಶ. ಸವತಿಮಾತ್ಸರ್ಯ ಅಡ್ಡಿ ಬರದ ಮಹಾಮಾತೆಯರು ಅವರು. **ಬೇರೆಯವರ ಮಕ್ಕಳನ್ನು ತಮ್ಮ ಮಕ್ಕಳಂತೆ ಭಾವಿಸಬೇಕೆಂಬ ನೀತಿ ಇಲ್ಲಿ ನಮಗೆಲ್ಲ ದಾರಿದೀಪವಾಗಿದೆ.**

ಒಂದು ಇರುವೆ ಮಗುವಿಗೆ ಕಡಿದಾಗಲೂ ಎಲ್ಲ ಪತ್ನಿಯರೂ ದುಃಖಿಸಿದ್ದು ರಾಜನಿಗೂ ಸಂಕಟಕ್ಕೆ ಕಾರಣವಾಯಿತು. ಇಡೀ ಅರಮನೆ ದುಃಖತಪ್ತವಾಯಿತು. ಇಲ್ಲಿಯೂ ಅಷ್ಟೇ ನಿಚ್ಚಳ.

೩. ಹೇಗಾದರೂ ನೂರು ಮಕ್ಕಳನ್ನು ಪಡೆದು ಎಲ್ಲ ಪತ್ನಿಯರೂ ಸುಪುತ್ರ-ವತಿಯರಾಗಬೇಕೆಂಬ ರಾಜನ ಭಾವನೆ. ಎಲ್ಲ ಪತ್ನಿಯರನ್ನೂ ಸಮಾನವಾಗಿ ನೋಡಬೇಕೆಂಬ ರಾಜನ ನಿಷ್ಪಕ್ಷಪಾತಕ್ಕೆ ಉದಾಹರಣೆ. **ಬಹುಪತ್ನಿಯರೊಂದಿಗೆ ಹೇಗೆ ವರ್ತಿಸಬೇಕೆಂಬುದಕ್ಕೆ ಸೋಮಕ ಒಳ್ಳೆಯ ಉದಾಹರಣೆ.**

ಶ್ರೀಕೃಷ್ಣನು ಎಲ್ಲ ಪತ್ನಿಯರಲ್ಲಿ ೧೦ ಪುತ್ರ ಹಾಗೂ ಒಬ್ಬ ಮಗಳನ್ನು ಪಡೆದು ತೋರಿಸಿದ್ದು ಭಾಗವತದಿಂದ ವೇದ್ಯ.

೪. ರಾಜನಿಗೆ ಮಕ್ಕಳಾಗಲಿ ಎಂದು ಯಜ್ಞಮಾಡಿಸಿ ನರಕಕ್ಕೆ ಹೋದ ಪುರೋಹಿತನಿಗೆ ದುಃಖವಾಗಬಾರದೆಂಬ ರಾಜನ ವಿಶಾಲ ಭಾವನೆ, ಬ್ರಾಹ್ಮಣ ಗುರುಭಕ್ತಿ ತುಂಬಾ ಶ್ಲಾಘನೀಯ. ನಿಜವಾದ ರಾಜನ ನಡೆ ಇಲ್ಲಿ ಗಮನಾರ್ಹ. ಪುರೋಹಿತನೊಡನೆ ತಾನೂ ನರಕದಲ್ಲಿದ್ದು ಮುಂದೆ ಪುರೋಹಿತನೊಡನೆ ಸಲ್ಲೋಕ ಪಡೆದ ರಾಜ ನಿಜಕ್ಕೂ ಆದರ್ಶ. **ರಾಜನು ಸ್ವಾರ್ಥಿಯಾಗಬಾರದು. ಅಷ್ಟೇಕೆ ಯಾರೂ ಸ್ವಾರ್ಥಿಯಾಗಬಾರದು. ತಮ್ಮ ಒಳಿತಿಗಾಗಿ ಪ್ರಯತ್ನಿಸಿದವರನ್ನು ಹೇಗೆ ನೋಡಬೇಕೆಂಬ ಕರ್ತವ್ಯ ಇಲ್ಲಿಯ ನೀತಿ.**

೫. ಯಜ್ಞದ ಫಲವಂತೂ ವಿಚಿತ್ರ ಆದರೂ ಸತ್ಯ. ಶಾಸ್ತ್ರೋಕ್ತ ಯಜ್ಞದ ಫಲ ಎಂತಹುದು ಎನ್ನಲು ಇಲ್ಲಿ ಒಳ್ಳೆಯ ದೃಷ್ಟಾಂತ ಬಂದಿದೆ. ಯಜ್ಞಯಾಗಾದಿ ನಿಂದಕರನ್ನು ಎಚ್ಚರಿಸುತ್ತದೆ ಈ ಕಥೆ.

**'ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ'** **- ಗೀತೆ.**

ಇತ್ಯಾದಿ...

## ೩೮. ಉಶೀನರ ಕಥಾ

ಲೋಮಶಮುನಿಗಳು ಧರ್ಮರಾಜನಿಗೆ **ಸರಸ್ವತೀ** ನದಿ, **ಸಿಂಧುಕ್ಷೇತ್ರ**, **ವಿಪಾಶಾ** ನದೀ, **ಉಜ್ಜಾನಕಕ್ಷೇತ್ರ**, **ಕುಶವಾನ್** ಸರೋವರ ಮುಂತಾದ ತೀರ್ಥಕ್ಷೇತ್ರಗಳನ್ನು ವರ್ಣಿಸುತ್ತಾ ವಿತ್ತಸ್ತಾ ನದಿಯ ಪಾಪಹಾರಕತ್ವವನ್ನು ತಿಳಿಸಿದರು. ಮುಂದೆ ಯಮುನಾ ನದಿಯ ಎರಡು ಪಾರ್ಶ್ವಗಳಲ್ಲಿನ **ಜಲಾ-ಉಪಜಲಾ** ಎಂಬ ಎರಡು ನದಿಗಳನ್ನು ತೋರಿಸುತ್ತಾ ಈ ನದಿಗಳ ತೀರದಲ್ಲಿಯೇ **ಉಶೀನರ** ಮಹಾರಾಜ ಯಾಗಮಾಡಿ ಇಂದ್ರನನ್ನೂ ಮೀರಿಸಿದ ಕೀರ್ತಿ ಪಡೆದನೆಂದು ವರ್ಣಿಸಿದರು. ಉಶೀನರನ ಸಾಮರ್ಥ್ಯ ಪರೀಕ್ಷಿಸುವ ಸಲುವಾಗಿ ಇಂದ್ರ, ಅಗ್ನಿ ಇಬ್ಬರೂ **ಗಿಡುಗ** ಹಾಗೂ **ಪಾರಿವಾಳ** ವೇಷ ಧರಿಸಿದರು. ಇಂದ್ರನು ಅಗ್ನಿಯನ್ನು ಬೆನ್ನಟ್ಟಿ ಬರಲು ಪಾರಿವಾಳವು ಭಯಗೊಂಡಂತೆ ನಟಿಸುತ್ತಾ ಉಶೀನರನ ಯಜ್ಞಮಂಟಪಕ್ಕೆ ಬಂದು ಆತನ ತೊಡೆಯ ಮೇಲೆ ಗಿಡುಗನಿಂದ ರಕ್ಷಣೆ ಬೇಡಿ ಕುಳಿತುಕೊಂಡಿತು[೧].

ಪಾರಿವಾಳವನ್ನು ಬೆನ್ನುಹತ್ತಿ ಬಂದ ಗಿಡುಗ ಪಾರಿವಾಳಕ್ಕೆ ರಕ್ಷಣೆ ನೀಡಿದ ರಾಜನನ್ನು ಕುರಿತು 'ರಾಜನ್! ಪಾರಿವಾಳ ನನ್ನ ಆಹಾರವೆಂದು ವಿಹಿತವಾಗಿದ್ದರೂ ನೀನು ಧರ್ಮವಿರುದ್ಧವಾಗಿ ಅದನ್ನು ರಕ್ಷಿಸಬೇಡ. ಅದು ಸರ್ವಧರ್ಮವಿರುದ್ಧ' ಎಂದಿತು. 'ನೀನು ಜಗತ್ತಿನಲ್ಲಿ ಧರ್ಮಾತ್ಮ ಎಂದು ಜನ ಕರೆಯುತ್ತಾರೆ. ಇದು ನಿನ್ನ ಧರ್ಮಫಲವಲ್ಲವೇ?[೨]'

ಅದಕ್ಕೆ ರಾಜನು 'ನಿನ್ನ ಹೆದರಿಕೆಯಿಂದ ನನ್ನ ಬಳಿಗೆ ಪ್ರಾಣರಕ್ಷಣೆ ಕೇಳಿ ಬಂದ ಪಾರಿವಾಳದ ರಕ್ಷಣೆ ನನ್ನ ಧರ್ಮ. ಇದು ನಿನಗೆ ಹೇಗೆ ತಿಳಿಯುತ್ತಿಲ್ಲ? ಪಾರಿವಾಳಕ್ಕೆ ರಕ್ಷಣೆ ಕೊಡದಿರುವುದು

---

೧ ಉಶೀನರೋ ವೈ ಯತ್ರೇಷ್ಟ್ವಾ ವಾಸವಾದತಿರಿಚ್ಯತ।
ಇಂದ್ರಃ ಶ್ಯೇನಃ ಕಪೋತೋಽಗ್ನಿರ್ಭೂತ್ವಾ ಯಜ್ಞೇಽಭಿಜಗ್ಮತುಃ।
ಊರೂ ರಾಜ್ಞಃ ಸಮಾಸಾದ್ಯ ಕಪೋತಃ ಶ್ಯೇನಜಾದ್ಭಯಾತ್।
ಶರಣಾರ್ಥೀ ತದಾ ರಾಜನ್ ನಿಲಿಲ್ಯೇ ಭಯಪೀಡಿತಃ॥ - ವನಪರ್ವ(೧೩೦/೨೧,೨೩,೨೪)

೨ ಧರ್ಮಾತ್ಮಾನಂ ತ್ವಾಹುರೇಕಂ ಸರ್ವೇ ರಾಜನ್ ಮಹೀಕ್ಷಿತಃ।
ಸರ್ವಧರ್ಮವಿರುದ್ಧಂ ತ್ವಂ ಕಸ್ಮಾತ್ ಕರ್ಮ ಚಿಕೀರ್ಷಸಿ॥
ವಿಹಿತಂ ಭಕ್ಷಣಂ ರಾಜನ್ ಪೀಡ್ಯಮಾನಸ್ಯ ಮೇ ಕ್ಷುಧಾ।
ಮಾ ರಕ್ಷೀರ್ಧರ್ಮಲೋಭೇನ ಧರ್ಮಮುತ್ಸೃಷ್ಟವಾನಸಿ॥ - ವನಪರ್ವ(೧೩೧/೧,೨)

ಧರ್ಮವಿರುದ್ಧ' ಮತ್ತು 'ಶರಣಾಗತರನ್ನು ರಕ್ಷಿಸದಿರುವುದು ಬ್ರಹ್ಮಹತ್ಯೆ, ಗೋಹತ್ಯೆಗಳಿಗೆ ಸಮಾನ ಪಾಪಕ್ಕೆ ಕಾರಣ' ಎಂದನು.

ಅದಕ್ಕೆ ಗಿಡುಗ ಉತ್ತರಿಸುತ್ತಾ ರಾಜ! 'ಆಹಾರವೇ ಎಲ್ಲರ ಜೀವನ ಆಹಾರವಿಲ್ಲದಿದ್ದರೆ ಯಾರೂ ಬದುಕರು. ಪಾರಿವಾಳ ನನ್ನ ಆಹಾರ. ನನಗೆ ಈ ಪಾರಿವಾಳದ ಜೀವನ. ಇದಿಲ್ಲದಿದ್ದರೆ ನಾನು ಸಾಯುವೆ. ನನ್ನನ್ನು ನಂಬಿದ ನನ್ನ ಕುಟುಂಬದವರೂ ನಾನು ತರುವ ಆಹಾರದಿಂದ ತಾನೇ ಬದುಕುವುದು. ನಾನು ಸತ್ತರೆ ಆಹಾರವಿಲ್ಲದ ನನ್ನ ಪರಿವಾರವು ಸಾಯುತ್ತದೆ. ಒಂದು ಪಾರಿವಾಳದ ರಕ್ಷಣೆ ನನ್ನ ಹಾಗೂ ನನ್ನ ಪರಿವಾರದ ಮರಣಕ್ಕೆ ಕಾರಣವಾಗುವುದು ಯಾವ ಧರ್ಮ? ನೀನೇ ಯೋಚಿಸು' ಎಂದಿತು.

ಅದಕ್ಕೆ ರಾಜನು ಎಲೈ ಗಿಡುಗನೇ 'ನೀನು ಬಹಳ ಬುದ್ಧಿವಂತಿಕೆಯಿಂದ ಮಂಗಳಕರವಾಗಿ ಮಾತನಾಡುತ್ತಿರುವೆ. ನೀನೇನು ಗರುಡದೇವನೇ? ಹೇಳು. ಪ್ರಾಯಃ ನಿನಗೆ ತಿಳಿಯದಿರುವುದು ಯಾವುದೂ ಇಲ್ಲವೆಂದೇ ತೋರುತ್ತದೆ. ಆದರೆ ಶರಣಾಗತರ ತ್ಯಾಗ ರಾಜನಿಗೆ ಹೇಗೆ ಸರಿಯಾದೀತು.

'ಸರಿ! ನಿನಗೆ ಅಹಾರ ಬೇಕು ತಾನೆ? ಎತ್ತು, ಹಂದಿ, ಜಿಂಕೆ, ಎಮ್ಮೆ ಇವುಗಳಲ್ಲಿ ಯಾವುದನ್ನು ಬಯಸುವೆಯೋ ಅದನ್ನು ಪಾರಿವಾಳದ ಬದಲಾಗಿ ಕೊಡುವೆ. ಅದನ್ನೇ ಸ್ವೀಕರಿಸಬಾರದೇಕೆ?' ಎಂದನು[೧].

ಅದಕ್ಕೆ ಗಿಡುಗನು 'ರಾಜನ್! ನಾನು ವರಾಹ, ಮಹಿಷ, ಮೃಗಗಳನ್ನಾಗಲೀ ಬಯಸದೇ ಬೇರೆ ಯಾವುದೇ ಅಹಾರದಿಂದ ನನಗೆ ಪ್ರಯೋಜನವಿಲ್ಲ. ವಿಧಿವಿಹಿತವಾದ ಆಹಾರ ಪಾರಿವಾಳ. ಅದನ್ನು ಬಿಟ್ಟು ಕೊಡು, ಧರ್ಮದ ಸಾರವನ್ನು ತಿಳಿಯದೆ ಬಾಳೆಗಿಡದ ಕಾಂಡದಂತಿರುವ ಅಧರ್ಮವನ್ನು ನೀನು ನುಡಿಯಬೇಡ' ಎಂದಿತು[೨].

ಪಟ್ಟು ಬಿಡದ ರಾಜನು– 'ಎಲೈ ಗಿಡುಗನೇ! ಶಿಬಿವಂಶದ ರಾಷ್ಟ್ರವನ್ನೇ ಬೇಕಾದರೆ ಕೊಟ್ಟೇನು ಅಥವಾ ಬೇರೆ ಏನನ್ನಾದರೂ ಕೊಡುವೆ. ಶರಣಾಗತನಾದ ಈ ಪಾರಿವಾಳವನ್ನು ಮಾತ್ರ ಕೊಡೆನು' ಎಂದನು. ಆಗ ಗಿಡುಗವು 'ಹಾಗೋ! ನಿನಗೆ ಪಾರಿವಾಳದ ಮೇಲೆ ಅಷ್ಟು

---

೧ ಗೋವೃಷೋ ವಾ ವರಾಹೋ ವಾ ಮೃಗೋ ವಾ ಮಹಿಷೋಽಪಿ ವಾ ।
ತ್ವದರ್ಥಮದ್ಯ ಕ್ರಿಯತಾಂ ಯಚ್ಚಾನ್ಯದಿಹ ಕಾಂಕ್ಷಸಿ ॥ – ವನಪರ್ವ(೧೩೧/೧೪,೧೭)

೨ ನ ವರಾಹಂ ನ ಚೋಕ್ಷಾಣಂ ನ ಮೃಗಾನ್ ವಿವಿಧಾಂಸ್ತಥಾ ।
ಯಸ್ತು ಮೇ ದೇವವಿಹಿತೋ ಭಕ್ಷಃ ಕ್ಷತ್ರಿಯಪುಂಗವ ॥
ತಮುತ್ಸೃಜ ಮಹೀಪಾಲ ಕಪೋತಮಿಮಮೇವ ಮೇ ।
ಶ್ಯೇನಃ ಕಪೋತಾನತ್ತೀತಿ ಸ್ಥಿತಿರೇಷಾ ಸನಾತನೀ ॥
ಮಾ ರಾಜನ್ ಸಾರಮಜ್ಞಾತ್ವಾ ಕದಲೀಸ್ಕಂಧಮಾಶ್ರಯ ॥ – ವನಪರ್ವ(೧೩೧/೧೮-೨೦)

ಸ್ನೇಹವಿದ್ದಲ್ಲಿ ಪಾರಿವಾಳದ ತೂಕದಷ್ಟು ಮಾಂಸವನ್ನು ಕಿತ್ತುಕೊಡು. ಅದು ನನಗೆ ತೃಪ್ತಿ ಕೊಡುತ್ತದೆ ಎಂದಿತು[೧].

ರಾಜನಿಗೆ ತುಂಬಾ ಸಂತೋಷವಾಗಿ ಒಂದು ತಕ್ಕಡಿಯನ್ನು ತರಿಸಿ, ಅದರ ಒಂದು ಬಟ್ಟಲಲ್ಲಿ ಪಾರಿವಾಳವನ್ನು ಕೂರಿಸಿ, ತನ್ನ ದೇಹದ ಮಾಂಸವನ್ನು ಕತ್ತರಿಸುತ್ತಾ ಇನ್ನೊಂದು ಬಟ್ಟಲಲ್ಲಿಡುತ್ತಾ ಹೋದ. ಆದರೆ ಎಷ್ಟೇ ಇಟ್ಟರೂ ಪಾರಿವಾಳದ ತೂಕಕ್ಕೆ ಸಮನಾಗಿ ಮಾಂಸ ಕೊಡಲು ಸಾಧ್ಯವಾಗಲಿಲ್ಲ. ಕೊನೆಗೆ ತಾನೇ ತಕ್ಕಡಿಯಲ್ಲಿ ಕುಳಿತುಬಿಟ್ಟನು[೨].

ಇಂದ್ರನಿಗೆ ಖುಷಿಯಾಯಿತು. ಉಶೀನರ ಪರೀಕ್ಷೆಯಲ್ಲಿ ಗೆದ್ದನು. ಆತನ ಶರಣಾಗತರಕ್ಷಕ ಗುಣ ದೇವತೆಗಳ ಮನಸ್ಸನ್ನು ಸೂರೆಗೊಂಡಿತು. ಇಂದ್ರ ಹೇಳಿದ –

**ಇಂದ್ರೋಽಹಮಸ್ಮಿ ಧರ್ಮಜ್ಞ ಕಪೋತೋ ಹವ್ಯವಾಡಯಮ್ ।**
**ಜಿಜ್ಞಾಸಮಾನೌ ಧರ್ಮಂ ತ್ವಾಂ .......................... ॥**

ನಾನೇ ಇಂದ್ರ (ಗಿಡುಗ), ಪಾರಿವಾಳ ಅಗ್ನಿ, ನಿನ್ನ ಧರ್ಮಪ್ರಜ್ಞೆ ಪರೀಕ್ಷಿಸಲು ನಾವು ಬಂದಿದ್ದೇವೆ. ನಿನ್ನ ಕೀರ್ತಿಯು ಮನುಷ್ಯರು ನಿನ್ನ ಚರಿತ್ರೆಯನ್ನು ಹೇಳುವವರೆಗೆ ಜಗತ್ತಿನಲ್ಲಿ ಶಾಶ್ವತವಾಗಿ ಉಳಿಯಲಿ.

ಹೀಗೆ ನುಡಿದು ಇಂದ್ರನು ಸ್ವರ್ಗಕ್ಕೆ ಅಗ್ನಿಯೊಡನೆ ಹೋದನು. ಮುಂದೆ ಉಶೀನರ ರಾಜನೂ ಧರ್ಮದಿಂದ ರಾಜ್ಯವಾಳಿ ಕಾಲಾಂತರದಲ್ಲಿ ಸ್ವರ್ಗಾರೋಹಣ ಮಾಡಿದನು. ಎಂದರು ಲೋಮಶರು.

ನೋಡು ಧರ್ಮರಾಜ! ಇದೇ ಉಶೀನರನ ಆಶ್ರಮ. ಇಲ್ಲಿ ಇಂದಿಗೂ ದೇವತೆಗಳು, ಮುನಿಗಳು ಬ್ರಾಹ್ಮಣರಿಗೆ ದರ್ಶನ ನೀಡುತ್ತಾರೆ. ಇಂತಹ ಪವಿತ್ರಾಶ್ರಮವಿದು ಎಂದು ಲೋಮಶರು ನುಡಿದರು.

### ಸಂದೇಶಗಳು-ವಿವರಣೆಗಳು

೧. ವರ್ಣಾಶ್ರಮ ವಿಹಿತ ಧರ್ಮಾಚರಣೆ ಸ್ವರ್ಗಾದಿಪ್ರಾಪ್ತಿಗೆ ಸಾಧನ. ಕ್ಷತ್ರಿಯರಿಗೆ ವಿಹಿತವಾದ ಧರ್ಮ ತನ್ನನ್ನು ಆಶ್ರಯಿಸಿದವರ ರಕ್ಷಣೆಯನ್ನು ಉಶೀನರ ರಾಜ ಮಾಡಿ ಸ್ವರ್ಗ ಪಡೆದ. ಹಾಗೆಯೇ ಪ್ರತಿಯೊಬ್ಬರು ಸ್ವವಿಹಿತ ವೃತ್ತಿಯಿಂದ ಬದುಕಬೇಕು.

---

೧ ಆತ್ಮನೋ ಮಾಂಸಮುತ್ಕೃತ್ಯ ಕಪೋತತುಲಯಾ ಧೃತಮ್ ।
ತದಾಂ ದೇಯಂ ತು ತನ್ಮಹ್ಯಂ ತೇನ ತುಷ್ಟಿರ್ಭವಿಷ್ಯತಿ ॥ – ವನಪರ್ವ(೧೩೧/೨೩,೨೪)

೨ ಉತ್ಕೃತ್ಯ ಸ ಸ್ವಯಂ ಮಾಂಸಂ ರಾಜಾ ಪರಮಧರ್ಮವಿತ್ ।
ನ ವಿದ್ಯತೇ ಯದಾಮಾಂಸಂ ಕಪೋತೇನ ಸಮಂ ಧೃತಮ್ ॥
ತತ ಉತ್ಕೃತ್ಯಮಾಂಸೋಽಸಾವಾರುರೋಹ ಸ್ವಯಂ ತುಲಾಮ್ ॥
– ವನಪರ್ವ(೧೩೧/೨೬-೨೮)

೨. ಪಾಂಡವರು ಸ್ವವಿಹಿತ ವೃತ್ತಿಯಿಂದ ಬದುಕಿದವರು. ಅರ್ಜುನ ಬ್ರಾಹ್ಮಣನ ಗೋರಕ್ಷಣೆಗಾಗಿ ತಾನು ತೀರ್ಥಯಾತ್ರೆ ಮಾಡುವ ಪ್ರಾಯಶ್ಚಿತ್ತ ವಿಧಿಯನ್ನು ತಾನೇ ಮಾಡಿಕೊಂಡಿದ್ದರೂ ಗೋರಕ್ಷಣೆ ಮಾಡಿ ನಂತರ ಒಂದು ವರ್ಷ ತೀರ್ಥಯಾತ್ರೆ ಮಾಡಿದ.

೩. ಭೀಮಾರ್ಜುನರು ವಿರಾಟರಾಜನ ಗೋಗ್ರಹಣ ಸಂದರ್ಭದಲ್ಲಿ ಕೌರವರನ್ನೇ ಎದುರಿಸಿ ಅವರನ್ನು ಸೋಲಿಸಿದರು. ವಿರಾಟನ ಗೋವುಗಳನ್ನು ರಕ್ಷಿಸಿದರು.

೪. ಧರ್ಮರಕ್ಷಣೆಗಾಗಿಯೇ ಪಾಂಡವರು ಕುರುಕ್ಷೇತ್ರ ಯುದ್ಧಮಾಡಿ ಸ್ವರ್ಗ ಪಡೆದರು. ಶ್ರೀಹರಿಯ ಅನುಗ್ರಹ ಸಂಪಾದಿಸಿದರು.

೫. ಭೀಮನು ಕ್ಷತ್ರಿಯಧರ್ಮಪಾಲನೆಗಾಗಿ ಯಕ್ಷ ಹಾಗೂ ಅಜಗರ ಪ್ರಶ್ನೆಗಳಿಗೆ ಉತ್ತರಿಸಲಿಲ್ಲ. ವಿದ್ಯೋಪಜೀವನ ಮಾಡದೆ ಅಜಗರನಿಗೆ ಸಿಕ್ಕಂತೆ ಮಾಡಿದ. ಸರೋವರದ ನೀರನ್ನು ಕುಡಿದು ನಿದ್ರೆ ಹೋದನು.

ಆದ್ದರಿಂದ ಸ್ವಧರ್ಮರಕ್ಷಣೆಗಾಗಿ ತಾತ್ಕಾಲಿಕವಾಗಿ ಶ್ರಮಾದಿಗಳಾದರೂ ಅಂತಿಯ ಜಯ ನಿಶ್ಚಿತ.

## ೩೯. ಅಷ್ಟಾವಕ್ರಚರಿತೆ

**ಉದ್ದಾಲಕನೆಂಬ** ಮುನಿಗಳಿಗೆ **ಶ್ವೇತಕೇತು** ಎಂಬ ಮಗನೂ, **ಸುಜಾತಾ** ಎಂಬ ಮಗಳೂ ಇದ್ದರು. ಕಹೋಳರೆಂಬ ಋಷಿಗಳಿಗೆ ತನ್ನ ಮಗಳಾದ **ಸುಜಾತೆಯನ್ನು** ಉದ್ದಾಲಕರು ಕೊಟ್ಟು ಮದುವೆ ಮಾಡಿದ್ದರು. ಸುಜಾತೆ ಗರ್ಭವತಿಯಾದಾಗ ಗರ್ಭಸ್ಥ ಶಿಶು ತನ್ನ ತಂದೆ ಕಹೋಳನ ಅನುಗ್ರಹದಿಂದ ವೇದ-ವೇದಾಂಗಗಳನ್ನು ಬಲ್ಲವನಾಗಿದ್ದನು. ಸ್ವಯಂ ಕಹೋಳ ಉದ್ದಾಲಕರ ಶಿಷ್ಯನಾಗಿ ಅವರಿಂದ ಸಕಲ ಶಾಸ್ತ್ರೋಪದೇಶ ಹೊಂದಿದ್ದನು. ಗುರುಗಳ ಅನನ್ಯ ಸೇವೆಯನ್ನು ಮಾಡಿ ಅವರ ಅನುಗ್ರಹ ಹೊಂದಿದ್ದನು. ಉದ್ಧಾಲಕರ ಮಹಿಮೆ ಆದಿಪರ್ವದಲ್ಲಿ ಈಗಾಗಲೇ ನೋಡಲಾಗಿದೆ.(ಅಧ್ಯಾಯ - ೩) ಗುರು ಶಿಷ್ಯರಿಬ್ಬರೂ ಜಿತೇಂದ್ರಿಯರಾಗಿದ್ದರು.

ಸುಜಾತೆಯ ಗರ್ಭದಲ್ಲಿನ ಮಗು ಒಮ್ಮೆ ತನ್ನ ತಂದೆಯ ಬಗ್ಗೆಯೇ ಹೀಗೆ ನುಡಿಯಿತು. **'ಸೋಧೀಯಾನಂ ಪಿತರಂ ಚಾಪ್ಯುವಾಚ'**.

> **ಸರ್ವಾಂ ರಾತ್ರಿಮಧ್ಯಯನಂ ಕರೋಷಿ**
> **ನೇದಂ ಪಿತಃ ಸಮ್ಯಗಿವೋಪವರ್ತತೇ ॥** - **ವನಪರ್ವ(೧೩೨/೧)**

ಶಿಷ್ಯರಿಗೆ ಪಾಠ ಹೇಳುವಾಗ ಈ ಮಾತನ್ನು ಕೇಳಿಸಿಕೊಂಡ ತಂದೆ ಕಹೋಳನಿಗೆ ಕೋಪ ಬಂದು -

'ಗರ್ಭದಲ್ಲಿರುವ ನೀನು ನನ್ನ ಬಗ್ಗೆ ಪ್ರತಿಕೂಲವಾಗಿ ಮಾತನಾಡುತ್ತಿರುವೆಯಾದ್ದರಿಂದ ನಿನ್ನ(ಶರೀರದಲ್ಲಿ) ಎಂಟು ಕಡೆ ವಕ್ರತೆ ಉಂಟಾಗಲಿ[೧]" ಎಂದು ಹುಟ್ಟುವ ಮಗನಿಗೆ ಶಾಪವಿತ್ತ (ತಂದೆ). ಅಂತೆಯೇ ಮಗುವು ಶರೀರದಲ್ಲಿ ಎಂಟು ವಿಧವಾದ ವಕ್ರತೆಯೊಂದಿಗೆ ಜನಿಸಿತು. ಅದಕ್ಕೆ ಅಷ್ಟಾವಕ್ರ ಎಂದೇ ಹೆಸರಿಟ್ಟರು.

ಧರ್ಮರಾಜನಿಗೆ ಈ ಪ್ರಸಂಗ ವಿವರಿಸಿದ ಲೋಮಶರು ಇದಕ್ಕೂ ಹಿಂದೆ ನಡೆದ ಮತ್ತೊಂದು ಘಟನೆಯನ್ನು ವಿವರಿಸಿದರು.

ಅಷ್ಟಾವಕ್ರನು ಜನಿಸುವ ಮೊದಲೇ ಅವನ ತಂದೆ ಕಹೋಳ ಒಮ್ಮೆ ತನ್ನ ಹೆಂಡತಿ ಸುಜಾತೆಯ ಅಪೇಕ್ಷೆಯ ಮೇರೆಗೆ ಹುಟ್ಟುವ ಮಗುವಿನ ಜಾತಕರ್ಮ ಮಾಡಲು ದ್ರವ್ಯ ಸಂಪಾದನೆಗೋಸ್ಕರ

---

೧ ಯಸ್ಮಾತ್ಕುಕ್ಷೌ ವರ್ತಮಾನೋ ಬ್ರವೀಷಿ।
ತಸ್ಮಾದ್ವಕ್ರೋ ಭವಿತಾಸ್ಯಷ್ಟಕೃತ್ವಃ॥ - ವನಪರ್ವ(೧೩೨/೧೧)

ಜನಕರಾಜನ ಆಸ್ಥಾನಕ್ಕೆ ಹೋಗಿದ್ದನು. ಆಗ ಜನಕರಾಜನ ಆಸ್ಥಾನದಲ್ಲಿ **ವಂದಿ(ಬಂದಿ)** ಎಂಬ ವಿದ್ವಾಂಸನೊಡನೆ ಅನಿವಾರ್ಯವಾಗಿ ವಾದದಲ್ಲಿ ತೊಡಗಿದ ಕಹೋಳ ವಾದದಲ್ಲಿ ಸೋತುಹೋದ. ವಾದದ ಸಮಯ (ಒಪ್ಪಂದ)ದ ಮೇರೆಗೆ ಕಹೋಳನನ್ನು ವಂದಿಯು ನದಿಗೆ ಕೈಕಾಲು ಕಟ್ಟಿಸಿ ತಳ್ಳಿಸಿದನು. ಹೀಗೆ ಕಹೋಳನು ಮಗನು ಜನಿಸುವ ಮೊದಲೇ ಮೃತನಾಗಿದ್ದನು. ಈ ವಿಷಯವು ಮಾವ ಉದ್ದಾಲಕನಿಗೆ ಗೊತ್ತಾಯಿತು. ಮಗಳಾದ ಸುಜಾತೆಗೆ ಇದನ್ನು ರಹಸ್ಯವಾಗಿಡಲು ಸೂಚಿಸಿದ[೧]. ಮಗಳು ಮಗನಿಗೆ ಈ ವಿಷಯವನ್ನು ಹನ್ನೆರಡನೇ ವರ್ಷದವರೆಗೂ ತಿಳಿಸಲೇ ಇಲ್ಲ. ಆದರೆ ಅಷ್ಟಾವಕ್ರನನ್ನು ಕಾಪಾಡುವ ಹೊಣೆ ಉದ್ದಾಲಕನಿಗೆ (ತಾತ=ಮಾತಾಮಹ) ಬಿತ್ತು. ತನ್ನ ಮಗನಾದ ಶ್ವೇತಕೇತುವಿನೊಡನೆ ಅಷ್ಟಾವಕ್ರನನ್ನೂ ನಿರ್ವ್ಯಾಜದಿಂದಲೇ ಬೆಳೆಸಿದ. ಉದ್ದಾಲಕನ ತೊಡೆಯ ಮೇಲೆಯೇ ಅಷ್ಟಾವಕ್ರ(ಮೊಮ್ಮಗ) ಬೆಳೆದ. ಜಾತಕರ್ಮಾದಿಗಳನ್ನು ಮಾಡಿದ ಉದ್ದಾಲಕರನ್ನೇ ಅಷ್ಟಾವಕ್ರನು ತಂದೆ ಎಂದು ತಿಳಿದಿದ್ದ. ಉದ್ದಾಲಕರ ತೊಡೆಯ ಮೇಲಿದ್ದುಕೊಂಡು ಮಗುವು ಶಾಸ್ತ್ರಾರ್ಥಗಳನ್ನು ಚರ್ಚಿಸುತ್ತಿದ್ದ.

ಒಮ್ಮೆ ಅಷ್ಟಾವಕ್ರನು ಉದ್ದಾಲಕರ ತೊಡೆ ಮೇಲೆ ಕುಳಿತಿದ್ದುದು ಶ್ವೇತಕೇತುವಿಗೆ ಸರಿ ಬರಲಿಲ್ಲ. ಅಷ್ಟಾವಕ್ರನು ಶ್ವೇತಕೇತುವನ್ನು ತನ್ನ ಸೋದರನೆಂದೇ ತಿಳಿದಿದ್ದ (ವಾಸ್ತವವಾಗಿ ಶ್ವೇತಕೇತುವು ಅಷ್ಟಾವಕ್ರನಿಗೆ ತಾಯಿಯ ಸೋದರ ಎಂದರೆ ಮಾವನೆಂಬುದು ತಿಳಿದಿರಲಿಲ್ಲ). ಶ್ವೇತಕೇತು ಅಷ್ಟಾವಕ್ರನನ್ನು ತನ್ನ ತಂದೆಯ ತೊಡೆಯಮೇಲಿನಿಂದ ಹೊರಗೆ ಎಳೆದ. ಅಷ್ಟಾವಕ್ರ ಅತ್ತ. ಶ್ವೇತಕೇತು ಉದ್ದಾಲಕರ ತೊಡೆಯೇರಿ ಕುಳಿತು ಅಷ್ಟಾವಕ್ರನಿಗೆ ಹೇಳಿದ 'ಅಷ್ಟಾವಕ್ರ! ನೀನು ನನ್ನ ತಂದೆಯ ತೊಡೆಮೇಲೆ ಕುಳಿತುಕೊಳ್ಳಲು ಯೋಗ್ಯನಲ್ಲ. ನೀನು ಮಗನಲ್ಲ. ಶ್ವೇತಕೇತು ನಿನ್ನ ತಂದೆಯಲ್ಲ ನನ್ನ ತಂದೆಯ ತೊಡೆಯ ಮೇಲೆ ನಾನೇ ಕುಳಿತುಕೊಳ್ಳುವೆ.

ಈ ಮಾತನ್ನು ಕೇಳಿದ ಅಷ್ಟಾವಕ್ರನ ಮನನೊಂದಿತು. ತಾಯಿಯ ಬಳಿ ಹೋಗಿ ಎಲ್ಲ ವಿಷಯ ಹೇಳಿ 'ನನ್ನ ತಂದೆ ಎಲ್ಲಿ' ಎಂದು ಕೇಳಿದ. ಹನ್ನೆರಡು ವರ್ಷ ವಿಷಯ ಮುಚ್ಚಿಟ್ಟ ತಾಯಿ ಸುಜಾತೆ ಎಲ್ಲ ಹೇಳಿದಳು. ಮಗನ ಶಾಪದ ಭಯವೂ ಹೇಳಲು ಕಾರಣವಾಯಿತು. ತಂದೆಯಂತೆ ಮಗನೂ ಶಾಪಾನುಗ್ರಹಸಮರ್ಥನೆಂದು ಅರಿವು ಆಕೆಗೆ ಇದ್ದಿತೇನೋ?

ಅಷ್ಟಾವಕ್ರನು ಎಲ್ಲ ತಿಳಿದುಕೊಂಡು ತನ್ನನ್ನು ತೊಡೆಯಿಂದ ತಳ್ಳಿದ ಸೋದರಮಾವ ಶ್ವೇತಕೇತುವಿನ ಬಳಿಗೆ ಬಂದು ಹೀಗೆ ಹೇಳಿದ –

'ಮಾವ! ಜನಕರಾಜನ ಆಸ್ಥಾನಕ್ಕೆ ಹೋಗೋಣ. ಆತನ ಯಜ್ಞದ ವೈಭವ ದರ್ಶನೀಯವಂತೆ. ಅಲ್ಲಿಯ ಶಾಸ್ತ್ರಾರ್ಥಗೋಷ್ಠಿಯನ್ನು ಶ್ರವಣ ಮಾಡುವ. ಯಜ್ಞವೆಂದು

---

೧ ಸೂತೇನ ವಾದೇ ನಿಮಜ್ಜಿತಂ ತಥಾ।
ಉವಾಚ ತಾಂ ತತ್ರ ತತಃ ಸುಜಾತ-
ಮಷ್ಟಾವಕ್ರೇ ಗೂಹಿತವ್ಯೋಽಯ ಮರ್ಥಃ॥ – ವನಪರ್ವ (೧೩೨/೧೬)

ಮೇಲೆ ಭಾರಿ ಭೋಜನವಿದ್ದೇ ಇರುತ್ತದೆ. ವಿದ್ವಾಂಸರ ಸಹವಾಸದಿಂದ ನಮಗೆ ಜ್ಞಾನ ಸಂಪಾದನೆಯಾಗುತ್ತದೆ. ವೇದಘೋಷ ಶ್ರವಣ ನಮಗೆ ಶ್ರೇಯಃ ಸಾಧನೆಯೂ ಹೌದು' ಎಂದ.

ಸೋದರಳಿಯ ಅಷ್ಟಾವಕ್ರನ ಮಾತು ಶ್ವೇತಕೇತುವಿಗೂ ಹಿಡಿಸಿತು. ಹೋಗೋಣ ಅಂದ. ಇಬ್ಬರೂ ಜನಕನ ಆಸ್ಥಾನಕ್ಕೆ ಹೊರಟರು. ಯಜ್ಞಶಾಲೆಗೆ ಹೋಗುವ ಮಹಾದ್ವಾರದಲ್ಲಿ ರಾಜನ ದರ್ಶನವಾಯಿತು. ಮಹಾದ್ವಾರದ ಬಳಿಯಿದ್ದ ಸೇವಕರು ರಾಜನಿಗೆ ದಾರಿ ಬಿಡಲು ಅಷ್ಟಾವಕ್ರನಿಗೆ ಹೇಳಿದರು[೧].

(ರಾಜನಿಗೆ ದಾರಿಬಿಡಲು ರಾಜ ಸೇವಕರು ಸೂಚಿಸಿದಾಗ) ಆಗ ಅಷ್ಟಾವಕ್ರನು (ರಾಜನಿಗೆ) ನುಡಿದನು.

'ಕುರುಡರಿಗೆ, ಕಿವುಡರಿಗೆ, ಸ್ತ್ರೀಯರಿಗೆ, ಭಾರಹೊತ್ತವರಿಗೆ ದಾರಿ. ರಾಜನೊಬ್ಬನೇ ಬರುತ್ತಿರುವಾಗ, ರಾಜನಿಗೆ ದಾರಿ. ಬ್ರಾಹ್ಮಣನೊಡನೆ ಬರುವಾಗ ಬ್ರಾಹ್ಮಣನಿಗೆ ದಾರಿಬಿಡುವುದು ಸಂಪ್ರದಾಯ, ನೀತಿ (ಆದ್ದರಿಂದ ಈಗ ರಾಜನೊಡನೆ ಬ್ರಾಹ್ಮಣರೂ ಇದ್ದಾರೆ). ಆದ್ದರಿಂದ ಬ್ರಾಹ್ಮಣನಿಗೆ ದಾರಿಯೇ ಹೊರತು ರಾಜನಿಗಲ್ಲ[೨].

ರಾಜನು ಈ ಮಾತನ್ನು ಕೇಳಿ ಸಂತೋಷದಿಂದಲೇ ಅಷ್ಟಾವಕ್ರನಿಗೆ ನೀನೇ ಈ ಹಾದಿಯಲ್ಲಿ ಮೊದಲು ಹೋಗು, ಬ್ರಾಹ್ಮಣನು ಅಗ್ನಿಯಿದ್ದಂತೆ, ಅಗ್ನಿ ಚಿಕ್ಕದಾದರೂ ಪರಿಣಾಮ ಚಿಕ್ಕದಾಗದು. ದೇವೇಂದ್ರನೂ ಸಹ ಬ್ರಾಹ್ಮಣರನ್ನು ನಮಿಸುತ್ತಾನೆ ಎಂದನು. ಮತ್ತೆ ಅಷ್ಟಾವಕ್ರನು ರಾಜನ್! ನಿನ್ನ ಯಜ್ಞವನ್ನು ನೋಡಲು ನಿನ್ನೊಡನೆ ಮಾತನಾಡಲು ಬಂದ

---

೧ ಉದ್ದಾಲಕಂ ಪಿತರಂ ಸೋಽಭಿಮೇನೇ।
ತಥಾಷ್ಟಾವಕ್ರಂ ಭ್ರಾತರಂ ಶ್ವೇತಕೇತುಮ್ ॥
ತತೋ ವರ್ಷೇ ದ್ವಾದಶೇ ಶ್ವೇತಕೇತು-
ರಷ್ಟಾವಕ್ರಂ ಪಿತುರಂಕೇ ನಿಷಣ್ಣಮ್ ।
ಅಪಾಕರ್ಷದ್ಗೃಹ್ಯಪಾಣೌ ರುದಂತಂ
ನಾಯಂ ತವಾಂಕಃ ಪಿತುರಿತ್ಯುಕ್ತವಾಂಶ್ಚ॥
ಗೃಹಂ ಗತ್ವಾ ಮಾತರಂ ಸೋಽಥ ವಿಪ್ರಃ।
ಪಪ್ರಚ್ಛೇದಂ ಕ್ವನು ತಾತೋ ಮಮೇತಿ ॥
ತತಃ ಸುಜಾತಾ ಪರಮಾರ್ತರೂಪಾ।
ಶಾಪಾದ್ಭೀತಾ ಸರ್ವಮೇವಾ ಚಚಕ್ಷೇ॥ - ವನಪರ್ವ(೧೩೨/೧೭-೨೦)

೨ ಅಂಧಸ್ಯ ಪಂಥಾ ಬಧಿರಸ್ಯ ಪಂಥಾಃ ಸ್ತ್ರಿಯಃ ಪಂಥಾ ಭಾರವಾಹಸ್ಯ ಪಂಥಾಃ।
ರಾಜ್ಞಃ ಪಂಥಾ ಬ್ರಾಹ್ಮಣೇನಾಸಮೇತ್ಯ ಸಮೇತ್ಯ ತು ಬ್ರಾಹ್ಮಣಸ್ಯೈವ ಪಂಥಾಃ॥
- ವನಪರ್ವ(೧೩೩/೧)

ನಮ್ಮನ್ನು ನಿನ್ನ ಸೇವಕರು ಒಳಬಿಡುತ್ತಿಲ್ಲ. ಸಹಜವಾಗಿಯೇ ನಮಗೆ ಕೋಪ ಬಂದಿದೆ ಎಂದನು. ಈ ಮಾತನ್ನು ಕೇಳಿಸಿಕೊಂಡ ದ್ವಾರಪಾಲಕನು 'ಎಲೈ ವಟುವೇ! ನಾವು ರಾಜಾಸ್ಥಾನದ ವಿದ್ವಾಂಸರನಾದ ವಂದಿಯ ಆದೇಶಾನುಸಾರ ನಿಮ್ಮನ್ನು ಒಳಗೆ ಬಿಡುತ್ತಿಲ್ಲ. ಸಭೆಯ ಪ್ರವೇಶ ಮಾಡುವವರು ಜ್ಞಾನ ಹಾಗೂ ವಯೋವೃದ್ಧರಾಗಿರಬೇಕೆಂದು ಆದೇಶವಾಗಿದೆ ಎಂದನು. ಅದಕ್ಕೆ ಅಷ್ಟಾವಕ್ರನು ನಾವು ಚಿಕ್ಕವರಾಗಿದ್ದರೂ ಜ್ಞಾನವೃದ್ಧರಾಗಿದ್ದೇವೆ. ನಾವು ವ್ರತ, ನಿಯಮ ಆಚರಿಸುತ್ತಾ ಗುರುಶುಶ್ರೂಷೆ ಮಾಡುವವರು, ಜಿತೇಂದ್ರಿಯರೂ ಆಗಿದ್ದೇವೆ. ಅಗ್ನಿಯ ಕಣವೂ ಮುಟ್ಟಿದೊಡನೆ ಸುಡುವುದು. ಆದ್ದರಿಂದ ಚಿಕ್ಕವರೆಂದು ನನ್ನನ್ನು ಉದಾಸೀನ ಮಾಡಬೇಡಿ' ಎಂದುತ್ತರಿಸಿದನು[೧].

ದ್ವಾರಪಾಲಕ ಇಷ್ಟರಿಂದ ತೃಪ್ತರಾಗದೆ 'ಮಗು! ಹಾಗಾದರೆ ವೇದಪ್ರತಿಪಾದ್ಯವಾದ ಏಕಾಕ್ಷರವು ಯಾವುದು?' ಎಂದು ಕೇಳಿದ. 'ನೀನು ಬಾಲ ವೃಥಾ ಆತ್ಮಶ್ಲಾಘನೆ ಮಾಡಿಕೊಳ್ಳುವುದು ಬೇಡ. ಜ್ಞಾನಿಯು ಲೋಕದಲ್ಲಿ ನಿಜಕ್ಕೂ ದುರ್ಲಭ. ಮಕ್ಕಳು ವೃದ್ಧರಿಂದ ಜ್ಞಾನ ಸಂಪಾದಿಸುತ್ತಾರೆ. ಅತ್ಯಲ್ಪ ಕಾಲದಲ್ಲಿ ಹೇಗೆ ತಾನೇ ಜ್ಞಾನಸಂಪಾದನೆ ಸಾಧ್ಯ? ನೀನು ಜ್ಞಾನವೃದ್ಧನಂತೆ ಮಾತನಾಡುತ್ತಿರುವೆ ಹೊರತು ಜ್ಞಾನದಿಂದ ದೊಡ್ಡವನಂತೆ ಕಾಣುತ್ತಿಲ್ಲವಲ್ಲ' ಎಂದನು[೨].

ಇದಕ್ಕೆ ಅಷ್ಟಾವಕ್ರನು 'ತಲೆಯ ಕೂದಲುಗಳು ಬಿಳಿದಾದ ಮಾತ್ರಕ್ಕೆ ಮಾನವನು ವೃದ್ಧನಾಗಲಾರ. ಬಾಲಕನಾದರೂ ಬಲ್ಲವನನ್ನು ದೇವತೆಗಳೂ ಜ್ಞಾನವೃದ್ಧನೆಂದೇ ತಿಳಿಯುತ್ತಾರೆ. ಋಷಿಗಳು ಸಹ ಸಾಂಗವೇದಾಧ್ಯಯನ ಮಾಡಿದವನನ್ನು, ವಾಗ್ಮಿಯನ್ನು ಗೌರವಿಸುತ್ತಾರೆ ಹೊರತು, ಐಶ್ವರ್ಯ, ವಯಸ್ಸು, ಪರಿಜನ ಇರುವವರನ್ನು ವೃದ್ಧರೆಂದು ಬಗೆದಿಲ್ಲ[೩].

ಎಲೈ ದ್ವಾರಪಾಲಕನೆ! ನಾನು ರಾಜಸಭೆಯಲ್ಲಿರುವ ವಂದಿಯನ್ನು ನೋಡಲು-ವಾದಮಾಡಲು ಬಂದಿದ್ದೇನೆ. ನಾನು ವಾದ ಮಾಡಿದ ಮೇಲೆ ರಾಜಸಭೆಯಲ್ಲಿ ಬ್ರಾಹ್ಮಣರು, ಅಮಾತ್ಯರು, ಮಹಾರಾಜರು ಎಲ್ಲರೂ ನನ್ನ ಜ್ಞಾನದ ಬಗ್ಗೆ ಹೇಳುತ್ತಾರೆ. ನಿನಗೂ ತಿಳಿಯುತ್ತದೆ. ಆದ್ದರಿಂದ ನಮ್ಮ ವಿಷಯವನ್ನು ರಾಜನಿಗೆ ತಿಳಿಸು' ಎಂದು ಅರಿಕೆ

---

೧ ವಯಂ ಹಿ ವೃದ್ಧಾಶ್ಚರಿತವ್ರತಾಶ್ಚ ವೇದಪ್ರಭಾವೇಣ ಸಮನ್ವಿತಾಶ್ಚ।
ನ ಬಾಲ ಇತ್ಯೇವಮವಂತವ್ಯಮಾಹುರ್ಬಾಲೋಽಪ್ಯಗ್ನಿರ್ದಹತಿ ಸ್ಪೃಶ್ಯಮಾನಃ॥
- ವನಪರ್ವ(೧೩೩/೬,೭)

೨ ನ ಹಿ ಜ್ಞಾನಮಲ್ಪಕಾಲೇನ ಶಕ್ಯಮ್। ಕಸ್ಮಾದ್ಬಾಲಃ ಸ್ಥವಿರ ಇವ ಪ್ರಭಾಷಸೇ॥
- ವನಪರ್ವ(೧೩೩/೧೦)

೩ ನ ತೇನ ಸ್ಥವಿರೋ ಭವತಿ ಯೇನಾಸ್ಯ ಪಲಿತಂ ಶಿರಃ।
ಬಾಲೋಽಪಿ ಯಃ ಪ್ರಜಾನಾತಿ ತಂ ದೇವಾಃ ಸ್ಥವಿರಂ ವಿದುಃ॥ - ವನಪರ್ವ(೧೩೩/೧೧)

ಮಾಡಿಕೊಂಡನು. ಅದಕ್ಕೆ ದ್ವಾರಪಾಲಕನು ಒಪ್ಪಿ ನೀವು ಪ್ರಯತ್ನಿಸಿ ಎಂದನು. ನಂತರ ಅಷ್ಟಾವಕ್ರನು ರಾಜನನ್ನು ಕುರಿತು 'ರಾಜನ್! ನೀನು ಜನಕವಂಶದಲ್ಲಿ ಶ್ರೇಷ್ಠರಾಜ. ನೀನು ಯಯಾತಿಯಂತೆ ಯಜ್ಞ ಮಾಡುವರಲ್ಲಿ ಶ್ರೇಷ್ಠ ನಿನ್ನ ಆಸ್ಥಾನದಲ್ಲಿರುವ ವಂದಿಯು ಜ್ಞಾನವೃದ್ಧರನ್ನು ವಾದದಲ್ಲಿ ಸೋಲಿಸಿ, ನದಿಯಲ್ಲಿ ಮುಳುಗಿಸುತ್ತಾನೆಂದು ನಾವು ಕೇಳಿದ್ದೇವೆ. ನಾನು ವಂದಿಯೊಡನೆ ವಾದ ಮಾಡಿ ಬ್ರಹ್ಮಾದ್ವೈತವನ್ನು (ಬ್ರಹ್ಮನು ಭಗವಂತನು ಒಬ್ಬನೇ ಗುಣಪೂರ್ಣನು ಒಬ್ಬನೇ) ಹೇಳಲು ಪ್ರತಿಪಾದಿಸಲು ಬಂದಿದ್ದೇನೆ. ಈ ವಂದಿ ಎಲ್ಲಿದ್ದಾನೆ? ಸೂರ್ಯೋದಯವಾದೊಡನೆ ನಕ್ಷತ್ರಗಳು ಮರೆಯಾಗುವಂತೆ ನಾನು ವಂದಿಯನ್ನು ಸೋಲಿಸುವೆ. ಅದಕ್ಕಾಗಿ ಅವಕಾಶ ಮಾಡಿಕೊಡು ಎಂದು ಕೋರಿದನು ಅಷ್ಟಾವಕ್ರ[೧].

ಆಗ ರಾಜನು 'ಎಲೈ ವಟುವೇ! ನೀನು ವಂದಿಯ ವಾಗ್ಬಲ ತಿಳಿಯದೇ ಮಾತನಾಡುತ್ತಿದ್ದೀಯಾ' ಎಂದನು. ಅದಕ್ಕೆ ಅಷ್ಟಾವಕ್ರನು 'ನನ್ನಂತಹವನೊಡನೆ ಅವನು ಸಂಧಿಸದಿರುವುದರಿಂದ ಅವನು ಸಿಂಹನಂತೆ ಗರ್ಜಿಸುತ್ತಿದ್ದಾನೆ. ಇಂದು ನನ್ನನ್ನು ಸಂಧಿಸಿದಲ್ಲಿ ಅವನು ಅಚ್ಚುಮುರಿದ ಗಾಲಿಯಂತೆ ಭಗ್ನನಾಗುತ್ತಾನೆ' ಎಂದು ಹೇಳಿದರೂ, ರಾಜನು ನಂಬಲಿಲ್ಲ. ರಾಜನು ಅಷ್ಟಾವಕ್ರನನ್ನು ಪರೀಕ್ಷಿಸಲು ಈ ಕೆಳಗಿನ ಪ್ರಶ್ನೆಗಳನ್ನು ಕೇಳುತ್ತಾನೆ. ಅದಕ್ಕೆ ಅಷ್ಟಾವಕ್ರನು ಸೂಕ್ತ ಉತ್ತರಿಸುತ್ತಾನೆ.

**ರಾಜ** : ಮೂವತ್ತು, ಹನ್ನೆರಡು ಅಂಶಗಳಿರುವ ಇಪ್ಪತ್ತುನಾಲ್ಕು ಪರ್ವಗಳಿರುವ, ಮೂರುನೂರಾಅರವತ್ತು ಭಾಗಗಳಿರುವ ವಸ್ತು ತಿಳಿದವನು ವೇದಾರ್ಥಬಲ್ಲವನು ಉತ್ತಮ ಕವಿ ವಿವರಿಸು.

**ಅಷ್ಟಾವಕ್ರ** : ಮೂವತ್ತು ದಿನ, ಹನ್ನೆರಡು ತಿಂಗಳು, ಇಪ್ಪತ್ನಾಲ್ಕು ಪಕ್ಷಗಳು, ಮೂರುನೂರಾಅರವತ್ತು ದಿನಗಳೆಂಬ ಭಾಗಗಳು ಉಳ್ಳ ವಸ್ತು ಸಂವತ್ಸರ. ಎಂದರೆ ಕಾಲದ ವಿವಿಧ ಭಾಗಗಳು. ಇವುಗಳ ನಿಯಾಮಕ ಶ್ರೀಹರಿಯನ್ನು ತಿಳಿದವನು ವೇದಬಲ್ಲವನು.

**ರಾಜ** : ಯಾವ ಪ್ರಾಣಿಯು ನಿದ್ರಿಸುವಾಗಲೂ ಕಣ್ಣನ್ನು ಮುಚ್ಚದು? ಹುಟ್ಟಿದ ಮೇಲೂ ಚಲಿಸದಿರುವ ವಸ್ತು ಯಾವುದು? ಯಾವುದಕ್ಕೆ ಹೃದಯವಿಲ್ಲ? ಯಾವುದು ವೇಗದಿಂದ ವೃದ್ಧಿ ಹೊಂದುತ್ತದೆ?

---

೧ ವೃದ್ಧಾನ್ಸ್ವಂದೀ ವಾದವಿದೋ ನಿಗೃಹ್ಯ । ವಾದೇ .............................. ।
ಜಲೇ ಸರ್ವಾನ್ನಿಜ್ಜಯತೀತಿ ನಃ ಶ್ರುತಮ್ ।
ಸೋಹಂ ಶ್ರುತ್ವಾ ಬ್ರಾಹ್ಮಣಾನಾಂ ಸಕಾಶಾತ್ ।
ಬ್ರಹ್ಮಾದ್ವೈತಂ ಕಥಯಿತುಮಾಗತೋಽಸ್ಮಿ ।
ಕ್ವಾಸೌ ವಂದೀ .......................... । ನಕ್ಷತ್ರಾಣೀವ ಸವಿತಾ ನಾಶಯಾಮಿ ॥
- ವನಪರ್ವ(೧೩೩/೧೮,೧೯)

**ಅಷ್ಟಾವಕ್ರ** : ಮೀನು ನಿದ್ರಿಸುವಾಗಲೂ ಕಣ್ಣು ಮುಚ್ಚದು; ತಾಯಿಯ ಗರ್ಭದಿಂದ ಹೊರಬಂದ ಮೊಟ್ಟೆ ಚಲಿಸುವುದಿಲ್ಲ; ಕಲ್ಲಿಗೆ ಹೃದಯವಿಲ್ಲ; ನದಿಯು ಪ್ರವಾಹದಿಂದಲೇ ವೃದ್ಧಿ ಹೊಂದುತ್ತದೆ ಇತ್ಯಾದಿ.

ಹೀಗೆ ಅಷ್ಟಾವಕ್ರನು ಕೂಡಲೇ ನೀಡಿದ ಉತ್ತರದಿಂದ ತೃಪ್ತನಾದ ರಾಜನು 'ನೀನು ನನಗೆ ಸಮ್ಮತ. ಯಜ್ಞಮಂಟಪಕ್ಕೆ ಹೋಗಲು ನಿನಗೆ ಅವಕಾಶ ನೀಡುತ್ತೇನೆ'[೧] ಎಂದು ರಾಜನು ಅಷ್ಟಾವಕ್ರನನ್ನು ಪ್ರಶಂಸಿಸಿ ವಂದಿಯೊಡನೆ ವಾದಕ್ಕೆ ಅವಕಾಶ ಮಾಡಿಕೊಟ್ಟನು.

ಯಜ್ಞಮಂಟಪವನ್ನು ಪ್ರವೇಶಿಸಿದ ಅಷ್ಟಾವಕ್ರನು ರಾಜನಿಗೆ ಹೇಳಿದ 'ಇಲ್ಲಿ ಸೇರಿರುವ ವಾದಿಗಳ ಮಧ್ಯೆ ವಾದಿಶ್ರೇಷ್ಠನಾದ ವಂದಿಯು ಕಾಣುತ್ತಿಲ್ಲವಲ್ಲ. ಮಹಾಸರೋವರದಲ್ಲಿ ಹಂಸಪಕ್ಷಿಯನ್ನು ಹುಡುಕುವಂತೆ ನಾನು ಹುಡುಕುತ್ತಿದ್ದೇನೆ.' ಅಷ್ಟರಲ್ಲೇ ವಂದಿಯನ್ನು ಕಂಡ ಅಷ್ಟಾವಕ್ರ ನೇರವಾಗಿ ಕೆಣಕಿದ. 'ವಂದಿ! ನನ್ನೊಡನೆ ವಾದಿಸುವಾಗ ನಿನ್ನ ವಾಕ್ಪ್ರವಾಹವೆಂಬ ನದಿಯನ್ನು ನನ್ನ ಪ್ರಳಯಕಾಲಾನಲವು ಒಣಗಿಸಬಲ್ಲದು. ಕಾರಣ ವಾದಕ್ಕೆ ಅಚಲನಾಗಿ ಸಿದ್ಧನಾಗು' ಎಂದನು.

ವಂದಿಯು ಬಾಲಕನಾದ ಅಷ್ಟಾವಕ್ರನನ್ನು ಕೋಪದಿಂದಲೇ ಉತ್ತರಿಸಿದ. 'ನೀನು ಮಲಗಿದ ಹುಲಿಯನ್ನು ಎಬ್ಬಿಸಬೇಡ. ಸರ್ಪದ ಹೆಡೆಯ ಮೇಲೆ ಕಾಲಿಟ್ಟಲ್ಲಿ ಕಚ್ಚಿಸಿಕೊಳ್ಳುವುದು ಖಚಿತ. ದುರಹಂಕಾರದ ಪರ್ವತಕ್ಕೆ ನಿನ್ನ ತಲೆ ಜಜ್ಜಿಕೊಂಡರೆ ನಿನಗೇ ಅಪಾಯ ಹೊರತು ಪರ್ವತಕ್ಕಲ್ಲ.

ಅಗ ಅಷ್ಟಾವಕ್ರನು ಜನಕರಾಜನನ್ನು ಸ್ತೋತ್ರ ಮಾಡಿ ವಂದಿಯು ತನ್ನೊಂದಿಗೆ ವಾದಕ್ಕೆ ಬರಲು ಪ್ರಾರ್ಥಿಸಿದ. ಅಲ್ಲದೆ ತನ್ನ ಕೋಪಾಗ್ನಿಯಿಂದ ಸಭೆಯನ್ನು ಕಂಪಿಸುವಂತೆ ಮಾಡಿ ವಂದಿಗೆ ಹೇಳಿದ:

**ಉಕ್ತೇ ವಾಕ್ಯೇ ಚೋತ್ತರಂ ಮೇ ಬ್ರವೀಹಿ ।**
**ವಾಕ್ಯಸ್ಯ ಚಾಪ್ಯುತ್ತರಂ ತೇ ಬ್ರವೀಮಿ ॥** - ೧೩೪/೭

'ನನ್ನ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳು. ನಿನ್ನ ಪ್ರಶ್ನೆಗಳಿಗೆ ನಾನೂ ಉತ್ತರಿಸುವೆ'

ವಂದಿಯೇ ಮೊದಲು ವಾದಾರಂಭ ಮಾಡಿದ.

**ಏಕ ಏವಾಗ್ನಿರ್ಬಹುಧಾ ಸಮಿಧ್ಯತೇ**
**ಏಕಃ ಸೂರ್ಯಃ ಸರ್ವಮಿದಂ ವಿಭಾತಿ ।**

---

೧ ನತ್ವಾಂ ಮನ್ಯೇ ಮಾನುಷಂ ದೇವಸತ್ತ್ವಂ
ನ ತ್ವಂ ಬಾಲಃ ಸ್ಥವಿರಃ ಸಮ್ಮತೋ ಮೇ ।
ನ ತೇ ತುಲ್ಯೋ ವಿದ್ಯತೇ ವಾಕ್ಪ್ರಲಾಪೇ
ತಸ್ಮಾದ್ದ್ವಾರಂ ವಿತರಾಮ್ಯೇಷ ವಂದೀ ॥ - ವನಪರ್ವ(೧೩೩/೩೦)

**ಏಕೋ ವೀರೋ ದೇವರಾಜೋऽರಿಹಂತಾ**
**ಯಮಃ ಪಿತೃಣಾಮೀಶ್ವರಶ್ಚೈಕ ಏವ ॥** - ೧೩೪/೮

'ಒಬ್ಬನೇ ಅಗ್ನಿಯು ಅನೇಕ ರೀತಿಯಾಗಿ ಪ್ರಜ್ವಲಿಸುತ್ತಾನೆ. ಒಬ್ಬನೇ ಸೂರ್ಯ ಪ್ರಪಂಚವೆಲ್ಲವನ್ನೂ ಪ್ರಕಾಶಪಡಿಸುತ್ತಾನೆ. ಒಬ್ಬನೇ ದೇವರಾಜ (ಇಂದ್ರನು) ಶತ್ರುಸಂಹಾರಕ, ಪಿತೃದೇವತೆಗಳಿಗೆ ಈಶ್ವರ ಯಮನೊಬ್ಬನೇ'.

**ಏಕಂ ಶಾಸ್ತ್ರಂ ದೇವಕೀ ಪುತ್ರಗೀತಮೇಕೋ ಏಕೋ ದೇವೋ ದೇವಕೀ ಪುತ್ರ ಏವ।**
**ಏಕೋ ಮಂತ್ರಸ್ತಸ್ಯ ನಾಮಾನಿ ಯಾನಿ ಕರ್ಮಾಪ್ಯೇಕಂ ತಸ್ಯ ದೇವಸ್ಯ ಸೇವಾ ॥**[೧]

ಎಂಬ ಪುರಾಣದ ಮಾತೂ ಒಂದು ಸಂಖ್ಯೆಯಲ್ಲಿ ಕೃಷ್ಣನ ವಿವಿಧ ಮುಖಗಳನ್ನೂ ಚೆನ್ನಾಗಿ ನಿರೂಪಿಸುತ್ತದೆ. ವಿಷ್ಣುಸರ್ವೋತ್ತಮತ್ವವನ್ನೂ ನಿರೂಪಿಸುತ್ತದೆ. ಇಂತಹ ಅನೇಕ ಮಾತುಗಳು ಶಾಸ್ತ್ರದಲ್ಲಿ ಅಲ್ಲಲ್ಲಿ ಸಿಗುತ್ತವೆ.

ಅದಕ್ಕೆ ಅಷ್ಟಾವಕ್ರನು ಉತ್ತರಿಸಿದ. 'ಇಂದ್ರಾಗ್ನಿಗಳು, ದೇವರ್ಷಿ ನಾರದ, ಪರ್ವತರು, ಅಶ್ವಿನೀದೇವತೆಗಳು, ರಥದ ಎರಡು ಚಕ್ರಗಳು, ಗಂಡಹೆಂಡಿರು. ಹೀಗೆ ಇವರೆಲ್ಲ ಜೋಡಿಗಳು (ಎರಡು) ಬ್ರಹ್ಮದೇವರ ವಿಧಿಯಂತೆ ಒಟ್ಟಾಗಿಯೇ ಇರುತ್ತಾರೆ' (ಹೊರತು ನೀನು ಬಗೆದಂತೆ ಅಗ್ನಿಯು ಒಬ್ಬನೇ ಇರನು). ಇವರೆಲ್ಲ ಪರಸ್ಪರ ಭಿನ್ನರೂ, ತಾರತಮ್ಯೋಪೇತರೂ, ಚಕ್ರಗಳೆಂಬ ಜಡಗಳು ಹೀಗೆ ಸೃಷ್ಟಿಯಲ್ಲಿ ಜಡ, ಜೀವಿ, ದೇವತೆಗಳು ಹೀಗೆ ವಿಭಿನ್ನ ವಸ್ತುಗಳೂ ವ್ಯಕ್ತಿಗಳೂ ಇದ್ದಾರೆ (ಭಿನ್ನಾ ಜೀವಗಣಾ ಹರೇರನುಚರಾ - ತತ್ತ್ವತೋ ಭೇದಃ ಇತ್ಯಾದಿ).

ಕೂಡಲೇ ವಂದಿಯು 'ಜೀವಿಯು ಧಾನ್ಯಾದಿಗಳು, ತಂದೆ, ತಾಯಿ ಮೂಲಕ ಜನಿಸುತ್ತಾನೆ. ಮೂರು ವೇದಗಳಿಂದ ಕೂಡಿದವರು ವಾಜಪ್ರೇಯಿ ಯಜ್ಞವನ್ನು ಮಾಡುತ್ತಾರೆ. ಸೂರ್ಯ, ಚಂದ್ರ, ಅಗ್ನಿಗಳು ಮೂವರು ಅಧ್ವರ್ಯುಗಳು, ಪ್ರಾತಃ, ಸಾಯಂ ಹಾಗೂ ರಾತ್ರಿಗಳೆಂಬ ಮೂರು ಸವನಗಳು - ಸ್ವರ್ಗ, ಮರ್ತ್ಯ, ಪಾತಾಳಗಳೇ ಮೂರು ಲೋಕಗಳು, ದಕ್ಷಿಣಾಗ್ನಿ ಗಾರ್ಹ್ಯಪತ್ಯ, ಆವಹನೀಯಗಳು ಮೂರು ಅಗ್ನಿಗಳು ಎಂದು ಜ್ಞಾನಿಗಳು ಹೇಳುತ್ತಾರೆ ಎಂದು ಮೂರರ ನಂಟನ್ನು ವಿವರಿಸಿದನು.

---

೧ ಅಷ್ಟಾವಕ್ರನು ಕೇವಲ ಒಂದು ಸಂಖ್ಯೆಯ ವಿವಿಧ ದೇವತೆಗಳನ್ನು ಅಗ್ನಿ, ಸೂರ್ಯ, ಇಂದ್ರ, ಯಮರನ್ನು ಅವರ ಮಹತ್ತ್ವ ತಿಳಿಸುತ್ತಾನೆ. 'ಈ ಎಲ್ಲ ದೇವತೆಗಳು ಒಬ್ಬನೇ ಎಂದು ಅದ್ವೈತವಾದಿಯ ಅಭಿಪ್ರಾಯವನ್ನು ಹೇಳಿದಂತೆ' ಎಂದು ವಾದಿರಾಜರು ಲಕ್ಷಾಲಂಕಾರದಲ್ಲಿ ಪೂರ್ವಪಕ್ಷ ತಿಳಿಸುತ್ತಾರೆ. ನಂತರ ಇದನ್ನು ಖಂಡಿಸಿ ಅಷ್ಟಾವಕ್ರನು ಮುಂದೆ ೨ ದೇವತೆಗಳೇ ಮುಂತಾದುವಾಗಿ ಉತ್ತರಿಸಿದ ಎಂದು ಶ್ರೀವಾದಿರಾಜರು ಅರ್ಥೈಸಿದ್ದಾರೆ.

'ಅಗ್ನ್ಯಾದಿಕಂ ಸರ್ವಂ ಏಕಮೇವೇತಿ ವಂದಿನಾ ಉಕ್ತೇ ಸತಿ ಐಕ್ಯವಾದಿನಂ ಪ್ರತಿ ಭೇದವಾದಿವತ್ ದ್ವಾವೇವ ಇತ್ಯುತ್ತರ ಮಾಹ ದ್ವಾವಿತ್ಯಾದಿನಾ'

- ಸೋದೇಮಠದ ಪ್ರಕಟಣೆ - ಲಕ್ಷಾಲಂಕಾರ - ಪ್ರಥಮ ಭಾಗ (ಪು. ೨೯೯)

ತಕ್ಷಣ **ನಾಲ್ಕರ** ನಂಟನ್ನು **ಅಷ್ಟಾವಕ್ರನು** ಬಿಡಿಸಿದನು. ಅದು ಹೀಗಿದೆ –

೧. ಬ್ರಾಹ್ಮಣನಿಗೆ ಆಶ್ರಯವಾದುದು ನಾಲ್ಕು ವೇದಗಳು.

೨. ಯಜ್ಞನಿರ್ವಾಹಕರು ನಾಲ್ವರು – ಯಾರೆಂದರೆ – ಹೋತೃ, ಅಧ್ವರ್ಯು, ಉದ್ಗಾತೃ ಹಾಗೂ ಬ್ರಹ್ಮರೆಂದು ಇವರು ನಾಲ್ವರು.

೩. ನಾಲ್ಕು ವರ್ಣಗಳು.

೪. ದಿಕ್ಕುಗಳು ನಾಲ್ಕು – ಪೂರ್ವಾದಿಗಳು.

೫. ವರ್ಣಗಳು ನಾಲ್ಕು – ಅಕಾರ, ಉಕಾರ, ಮಕಾರಗಳ ಸಂಗಮ ಓಂಕಾರವು ನಾಲ್ಕನೇ ವರ್ಣ.

ಇದನ್ನು ಕೇಳಿದ ವಂದಿ **ಪಂಚ** ಸಂಖ್ಯೆಯ ಒಗಟನ್ನು ಬಿಡಿಸಿದನು. ಅದು–

೧. ಐದು ಅಗ್ನಿಗಳು – ಗಾರ್ಹಪತ್ಯ, ದಕ್ಷಿಣಾಗ್ನಿ, ಆವಹನೀಯ ಮುಂತಾದವು.

೨. ಐದು ಅಕ್ಷರಗಳೇ ಪಾದವಾಗಿರುವ ಛಂದಸ್ಸು ಪಂಕ್ತಿ.

೩. ಐದು ಯಜ್ಞಗಳು – ದೇವ, ಋಷಿ, ಬ್ರಹ್ಮ ಮನುಷ್ಯ ಹಾಗೂ ಪಿತೃಯಜ್ಞಗಳು (ದ್ವಿಜರಿಗೆ ಕರ್ತವ್ಯ). ಅಥವಾ ಅಗ್ನಿಹೋತ್ರ, ದರ್ಶಪೂರ್ಣ ಮಾಸ, ಚಾತುರ್ಮಾಸ್ಯ, ಪಶು ಹಾಗೂ ಸೋಮಯಜ್ಞಗಳು.

೪. ಐದು ಇಂದ್ರಿಯಗಳು – ಕಣ್ಣು ಕಿವಿ, ಮೂಗು, ನಾಲಿಗೆ, ಚರ್ಮ ಅಥವಾ ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳು.

೫. ಐದು ನದಗಳು – ವಿಪಾಶ (ವ್ಯಾಸ), ಐರಾವತೀ (ರಾವೀ), ವಿತಸ್ತಾ (ಜೇಲಂ), ಚಂದ್ರಭಾಗಾ (ಚೇನಾಬ್), ಶತದ್ರು (ಸಟ್ಲಜ್) ಇತ್ಯಾದಿಯಾಗಿ ಬಿಡಿಸಬಹುದು.

ಅದಕ್ಕೆ ಅಷ್ಟಾವಕ್ರನು **ಆರರ** ನಂಟನ್ನು ತೋರಿಸಿದನು ಅವು –

೧. ಅಗ್ನ್ಯಾಧಾನ ಸಮಯದಲ್ಲಿ ಆರು ಗೋವುಗಳನ್ನು ದಕ್ಷಿಣಾರೂಪದಲ್ಲಿ ಕೊಡಬೇಕೆಂದು ಕೆಲವರು ಹೇಳುತ್ತಾರೆ.

೨. ಕಾಲಚಕ್ರದ ಋತುಗಳು – ಆರು (ಒಂದುವರ್ಷದಲ್ಲಿ).

೩. ಇಂದ್ರಿಯಗಳು ಆರು – ಮನಸ್ಸನ್ನು ಸೇರಿ ಐದು ಜ್ಞಾನ, ಕರ್ಮೇಂದ್ರಿಯಗಳು.

೪. ಕೃತ್ತಿಕಾನಕ್ಷತ್ರಗಳು ಆರು.

೫. ಎಲ್ಲ ವೇದಗಳಲ್ಲಿ ಆರು 'ಷಟ್‌ಕೃತಿಕಾಃ' ಎಂಬ ವಿಶೇಷ ಯಜ್ಞಗಳು.

ಇದಕ್ಕೆ ಬಂದಿಯು ಏಳರ ಒಗಟನ್ನು ಹೇಳುತ್ತಾನೆ.

೧. ಗ್ರಾಮ್ಯ ಪಶುಗಳು ಏಳು.

೨. ವನ್ಯಮೃಗಗಳು ಏಳು.

೩. ಒಂದು ಯಜ್ಞವನ್ನು ಏಳು ಛಂದಸ್ಸುಗಳಿಂದ ಪೂರ್ಣ ಮಾಡುತ್ತಾರೆ.

೪. ಋಷಿಗಳು ಏಳು – ಮರೀಚಿ, ಅಂಗಿರಾ, ಅತ್ರಿ, ಪುಲಸ್ತ್ಯ ಪುಲಹ, ಕ್ರತು, ವಸಿಷ್ಠ – ಇವರು ಪ್ರತಿ ಮನ್ವಂತರಕ್ಕೂ ಬೇರೆ ಬೇರೆ.

೫. ಪ್ರಪಂಚದಲ್ಲಿ ಏಳು ವಿಧವಾದ ಪೂಜಾ ಸಾಮಗ್ರಿಗಳು(ಅರ್ಹಣಗಳು) ('ಸಿಂಧುಃ ಶಿರಸ್ಯರ್ಹಣಂ ಪರಿಗೃಹ್ಯ ರೂಪೀ' ಎಂದು ಭಾಗವತದಲ್ಲಿ ಪ್ರಯೋಗವಿದೆ). (ಗಂಧ, ಪುಷ್ಪ ಧೂಪ, ದೀಪ, ನೈವೇದ್ಯ, ಆಚಮನ, ತಾಂಬೂಲ).

೬. ವೀಣೆಯು ಏಳು ತಂತಿಗಳಿಂದ ಮಾಡಲ್ಪಡುತ್ತದೆ.

ಇದನ್ನು ಆಲಿಸಿದ **ಅಷ್ಟಾವಕ್ರನು ಎಂಟರ** ಮಹತ್ತ್ವ ತಿಳಿಸಿದ.

೧. ಎಂಟು ಕೋಶಗಳಿಂದ ಈ ದೇಹವು ನೂರು ವರ್ಷ ಕಾಲವಿರುವ ಚೀಲಗಳಲ್ಲಿರುವುದನ್ನು ಹೊರುತ್ತದೆ.

೨. ಸಿಂಹವನ್ನು ಕೊಲ್ಲುವ ಶರಭಕ್ಕೆ ಎಂಟು ಕಾಲುಗಳು.

೩. ವಸುಗಳು ಎಂಟು.

೪. ಯಜ್ಞಗಳಲ್ಲಿ ಎಂಟು ಸ್ತಂಭಗಳಿರುತ್ತವೆ.

ಇದಕ್ಕೆ **ವಂದಿಯು ಒಂಭತ್ತು** ಪದಾರ್ಥಗಳನ್ನು ಒಟ್ಟುಗೂಡಿಸಿ ನುಡಿದ.

೧. ಪಿತೃಗಳ ಸನ್ನಿಧಾನವಿರುವ ಸ್ಥಾನಗಳು ಒಂಭತ್ತು (ಸಾಮಿಧೇನ್ಯಃ ಸನ್ನಿಧಾನಯುಕ್ತಾನಿ – ಲಕ್ಷಾಲಂಕಾರ).

೨. ಸೃಷ್ಟಿ ಎನ್ನುವುದು ಪ್ರಕೃತಿ ಮುಂತಾದ ಒಂಭತ್ತರ ಸಂಯೋಗ ರೂಪವಾದುದು.

೩. ಬೃಹತೀ ಛಂದಸ್ಸು ಒಂಭತ್ತು ಅಕ್ಷರಪಾದವುಳ್ಳದ್ದು.

೪. ಅಂಕಿಗಳ ಗಣನೆಯಲ್ಲಿ ಒಂಭತ್ತೇ ಕಡೆಯದು.

ಇದಕ್ಕೆ **ಅಷ್ಟಾವಕ್ರನು ಹತ್ತರ** ನಂಟನ್ನು ಬಿಚ್ಚುತ್ತಾನೆ.

೧. ದಿಕ್ಕುಗಳು ಹತ್ತು (ಪೂರ್ವಾದಿ ೪, ಕೋಣಗಳ ದಿಕ್ಕು ೪, ಮೇಲೆ ಹಾಗೂ ಕೆಳಗೆ ೨, ಒಟ್ಟು ಹತ್ತು).

೨. ಹತ್ತು ನೂರು ಸೇರಿದಾಗ ಒಂದು ಸಾವಿರ.

೩. ಗರ್ಭವತೀ ಸ್ತ್ರೀಯರು ಹತ್ತು ತಿಂಗಳು ಗರ್ಭ ಹೊತ್ತಿರುತ್ತಾರೆ.

೪. ಶರೀರದ ಅವಸ್ಥೆಗಳು ಹತ್ತು.

೫. ತತ್ತ್ವೋಪದೇಶಕ್ಕೆ ಅರ್ಹರು, ಅನರ್ಹರು ಹತ್ತು ಹತ್ತು ಮಂದಿ.

(ಹತ್ತು ಅನರ್ಹರು – ರೋಗಿ, ದರಿದ್ರ, ಶೋಕಾರ್ತ, ರಾಜದಂಡನೆ ಹೊಂದಿದವ, ಶಠ, ಬಲ, ಕೆಲಸಕಳೆದುಕೊಂಡವ, ಉನ್ಮತ್ತ, ಅಸೂಯಿ, ಕಾಮಿ)

೬. ಹತ್ತು ಅವಸ್ಥೆಗಳು – ಗರ್ಭವಾಸ, ಜನ್ಮ, ಬಾಲ್ಯ, ಕೌಮಾರ, ಪೌಗಂಡ, ಕೈಶೋರ, ಯೌವನ, ಪ್ರೌಢ, ವಾರ್ಧಕ್ಯ ಮತ್ತು ಮರಣ.

೭. ಹತ್ತು ಪೂಜ್ಯರು – ಅಧ್ಯಾಪಕ, ತಂದೆ, ದೊಡ್ಡಪ್ಪ ರಾಜ, ಸೋದರಮಾವ, ಹೆಣ್ಣುಕೊಟ್ಟ ಮಾವ, ಮಾತಾಮಹ, ಪಿತಾಮಹ, ಬಂಧುಜ್ಯೇಷ್ಠ ಚಿಕ್ಕಪ್ಪ/ದೊಡ್ಡಪ್ಪ

ಇದಕ್ಕೆ ಮತ್ತೇ **ಏಕಾದಶ** ಸಂಖ್ಯೆಯ ನಂಟನ್ನು ಬಿಡಿಸಿದ **ವಂದಿ.**

೧. ಪ್ರಾಣಿಗಳಿಗೆ ಉಪಭೋಗಿಸಲು ಹನ್ನೊಂದು ಇಂದ್ರಿಯಗಳು.

೨. ಯಜ್ಞದಲ್ಲಿರುವ ರೂಪಗಳು ಹನ್ನೊಂದು.

೩. ಮಾನವನಿಗೆ ಕಾಮಾದಿ ಹನ್ನೊಂದು ವಿಕಾರಗಳು (ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಹರ್ಷ, ಶೋಕ, ರಾಗ, ದ್ವೇಷ, ಅಹಂಕಾರ).

೪. ದೇವತೆಗಳಲ್ಲಿ ರುದ್ರರು ಹನ್ನೊಂದು ಮಂದಿ (ಮೃಗವ್ಯಾಧ, ಸರ್ಪ, ನಿಋತಿ, ಅಜೈಕಪಾತ್, ಅಹಿರ್ಬುಧ್ನಿ, ಪಿನಾಕಿ, ದಹನ, ಈಶ್ವರ, ಕಪಾಲಿ, ಸ್ಥಾಣು, ಭವ).

ತನ್ನ ಅಪಾರ ಪಾಂಡಿತ್ಯದಿಂದ **ಹನ್ನೆರಡರ** ಮಹಿಮೆ ತಿಳಿಸಿದ **ಅಷ್ಟಾವಕ್ರ.**

೧. ವರ್ಷದಲ್ಲಿ ಹನ್ನೆರಡು ತಿಂಗಳುಗಳು.

೨. ಜಗತೀ ಛಂದಸ್ಸಿನಲ್ಲಿ ಹನ್ನೆರಡು ಅಕ್ಷರಗಳು (ಪ್ರತಿಪಾದದಲ್ಲಿ).

೩. ಪ್ರಾಕೃತಯಜ್ಞ ಹನ್ನೆರಡು ದಿನ ನಡೆಯಬೇಕು.

೪. ಆದಿತ್ಯರು ಹನ್ನೆರಡು ಮಂದಿ (ಧಾತೃ, ಮಿತ್ರ, ಆರ್ಯಮಾ, ಇಂದ್ರ, ವರುಣ, ಅಂಶ, ಭಗ, ವಿವಸ್ವಾನ್, ಪೂಷಾ, ಸವಿತೃ, ತ್ವಷ್ಟೃ, ವಿಷ್ಣು).

ಇದಕ್ಕೆ ಉತ್ತರಿಸಿದ ವಂದಿಯು **ಹದಿಮೂರು** ಸಂಖ್ಯೆಯ ಮಹತ್ತ್ವ ಹೇಳಲು ಆರಂಭಿಸಿದನು.

೧. ತ್ರಯೋದಶೀ ತಿಥಿಯು ಪಕ್ಷದಲ್ಲಿ ಪ್ರಶಸ್ತವಾದುದು.

೨. ಭೂಮಂಡಲವು ಹದಿಮೂರು ದ್ವೀಪವುಳ್ಳದ್ದು.

ಇಷ್ಟು ಮಾತ್ರ ಹೇಳಿದ ವಂದಿಗೆ ಮುಂದೆ ಏನೂ ಹೊಳೆಯಲಿಲ್ಲ. ಪ್ರತಿಭೆ ಸ್ತಬ್ಧವಾಯಿತು. ಇದನ್ನು ಗಮನಿಸಿದ ಅಷ್ಟಾವಕ್ರನು ಆ ಶ್ಲೋಕವನ್ನು ಪೂರ್ಣಮಾಡಿ ರಾಜ, ಸಭಾಸದರ, ಬ್ರಾಹ್ಮಣರ ಮೆಚ್ಚುಗೆಗೆ ಪಾತ್ರನಾದನು. ಆ ಶ್ಲೋಕ ಹೀಗಿದೆ. ವಂದಿ ಹೇಳಿದ್ದು –

**ತ್ರಯೋದಶೀ ತಿಥಿರುಕ್ತಾ ಪ್ರಶಸ್ತಾ**
**ತ್ರಯೋದಶದ್ವೀಪವತೀ ಮಹೀ ಚ। – ವಂದಿ ಹೇಳಿದ್ದು – ೧೩೪/೧೯**
**ತ್ರಯೋದಶಾಹಾನಿ ಸಸಾರ ಕೇಶೀ**
**ತ್ರಯೋದಶಾದೀನ್ಯತಿಚ್ಛಂದಾಂಸಿ ಚಾಹುಃ ॥ ಅಷ್ಟಾವಕ್ರ ಪೂರ್ಣ ಮಾಡಿದ್ದು**
**– ೧೩೪/೨೦**

ಅಷ್ಟಾವಕ್ರನು ಪೂರ್ಣ ಮಾಡಿದ ಶ್ಲೋಕಾರ್ಧದ ಅರ್ಥ –

೧. ದಮಯಂತೀ ದೇವಿಯ ದೂತಿಯಾದ ಕೇಶಿನೀ ಬಾಹುಕವೇಷಧಾರಿ ನಲನ ಸ್ವರೂಪವನ್ನು ವಿವೇಚಿಸಲು ಹದಿಮೂರು ದಿನ ಕಳೆದಳು. ಕೆಲವರು ಇದಕ್ಕೆ ಕೇಶೀ ಎಂಬ ದಾನವನ್ನು ವಿಷ್ಣುವಿನೊಡನೆ ಹದಿಮೂರು ದಿನ ಯುದ್ಧ ಮಾಡಿದನು' ಎಂದು ನೃಸಿಂಹಪುರಾಣದ ಆಧಾರದ ಮೇಲೆ ವ್ಯಾಖ್ಯಾನಿಸಿದ್ದಾರೆ.

೨. ಮುಖ್ಯ ಛಂದಸ್ಸುಗಳು ಹದಿಮೂರು.

ಹೀಗೆ ವಂದಿಯು ಅಷ್ಟಾವಕ್ರನ ಪಾಂಡಿತ್ಯಕ್ಕೆ ತಲೆಬಾಗಿ ಕುಳಿತಾಗ ರಾಜನನ್ನು ಕುರಿತು ಅಷ್ಟಾವಕ್ರನು 'ರಾಜನ್! ಹೀಗೆಯೇ ವಂದಿಯು[೧] ಈ ಹಿಂದೆ ಅನೇಕ ಬ್ರಾಹ್ಮಣರನ್ನು ಸೋಲಿಸಿ ನೀರಿಗೆ ತಳ್ಳುತ್ತಿದ್ದನಷ್ಟೇ? ಆದ್ದರಿಂದ ಈಗ ಇವನನ್ನೂ ನೀರಿಗೆ ತಳ್ಳಿಸು' ಎಂದು ಪ್ರಾರ್ಥಿಸಿದ.

ರಾಜನು ಉತ್ತರಿಸುವ ಮೊದಲೇ ವಂದಿಯು ಹೀಗೆ ನುಡಿದ.

'ಜನಕ ಮಹಾರಾಜನೇ! ನಾನು ವರುಣನ ಮಗ. ನೀನು ಇಲ್ಲಿ ಯಾಗ ಮಾಡಲು ಆರಂಭಿಸಿದಾಗಲೇ ನನ್ನ ತಂದೆಯೂ ಹನ್ನೆರಡು ವರ್ಷಗಳ ಯಾಗ ಆರಂಭಿಸಿದ್ದ. ಆ ಯಾಗಕ್ಕೆ ಬ್ರಾಹ್ಮಣ ಋತ್ವಿಜರನ್ನು ಕಳಿಸಲು ನಾನು ಇಲ್ಲಿಗೆ ಬಂದು ಬ್ರಾಹ್ಮಣರನ್ನು ಸೋಲಿಸಿದಂತೆ ಮಾಡಿ ಸಮುದ್ರಕ್ಕೆ ತಳ್ಳಿದಂತೆ ಮಾಡಿ ಬ್ರಾಹ್ಮಣರನ್ನು ಅಲ್ಲಿಗೆ ಕಳಿಸಿದೆ. ಅವರೆಲ್ಲ ಮತ್ತೆ ಇಲ್ಲಿಗೆ ವಾಪಸು ಬರುತ್ತಾರೆ. ಆದ್ದರಿಂದ ಇಲ್ಲಿ ಯಾವುದೇ ತರಹದ ಮೋಸವಿಲ್ಲ. ಅಷ್ಟಾವಕ್ರನ ತಂದೆಯೂ

೧ ಅನೇನೈವ ಬ್ರಾಹ್ಮಣಾಃ ಶುಶ್ರುವಾಂಸೋ ವಾದೇ ಜಿತ್ವಾ ಸಲಿಲೇ ಮಜ್ಜಿತಾಃ ಪ್ರಾಕ್।
ತಾನೇವ ಧರ್ಮಾನಯಮದ್ಯ ವಂದೀ ಪ್ರಾಪ್ನೋತು ಗೃಹ್ಯಾಪ್ಸು ನಿಮಜ್ಜಯೈನಮ್ ॥
– ವನಪರ್ವ (೧೩೪/೨೩)

ವಾಪಸು ಬರುತ್ತಾನೆ. ನಾನು ಅಷ್ಟಾವಕ್ರನನ್ನು ಪೂಜಿಸುತ್ತೇನೆ, ಗೌರವಿಸುತ್ತೇನೆ. ಅಷ್ಟಾವಕ್ರನ ಪುಣ್ಯದಿಂದ ನಾನು ಮತ್ತೆ ನಮ್ಮ ತಂದೆಯ ಬಳಿಗೆ ಹೋಗುವಂತಾಯಿತು' ಎಂದನು.

ಇದಕ್ಕೆ 'ವಂದಿಯ ಈ ಮಾತನ್ನು ಯಾರು ನಂಬುತ್ತಾರೆ? ಇದೆಲ್ಲ ಕುತರ್ಕ. ಬ್ರಾಹ್ಮಣರನ್ನು ಕೊಂದಾಯ್ತು, ನನ್ನ ತಂದೆಯೂ ಅಹುತಿಯಾದ. ಇದು ಕೇವಲ ಕುತರ್ಕ, ನಂಬಲು ಅನರ್ಹ ಮಾತು. ರಾಜ ನಿನ್ನ ಬುದ್ಧಿಯೂ ಮಂಕಾಯಿತೇ? ನೀನೇನಾದರೂ ಉಮ್ಮತ್ತಿ (ಶ್ಲೇಷಾತಕ) ಬೀಜ/ಹಣ್ಣನ್ನು ತಿಂದಿದ್ದೀಯಾ? ಅಥವಾ ವಂದಿಯ ಮಾತಿಗೆ ಭ್ರಾಂತನಾಗಿದ್ದೀಯಾ? ನಿನ್ನ ಮೌನಕ್ಕೆ ಕಾರಣವಾದರೂ ಏನು?' ಎಂದಾಗ ರಾಜನು ಉತ್ತರಿಸಿದ.

**ಶೃಣೋಮಿ ವಾಚಂ ತವ ದಿವ್ಯರೂಪಾಂ**
**ಅಮಾನುಷೀಂ ದಿವ್ಯರೂಪೋಽಸಿ ಸಾಕ್ಷಾತ್ ।**
**ಅಜೈಷೀರ್ಯದ್ವಂದಿನಂ ತ್ವಂ ವಿವಾದೇ**
**ನಿಸೃಷ್ಟ ಏಷ ತವ ಕಾಮೋಽದ್ಯ ವಂದೀ ॥** - ೧೩೪/೨೯

ಅಷ್ಟಾವಕ್ರನೇ! ನಿನ್ನ ದೈವೀವಾಣಿಯಿಂದ ನೀನು ದೈವೀಪುರುಷನೆಂದು ಭಾವಿಸಿದ್ದೇನೆ. ನೀನು ವಂದಿಯನ್ನು ಗೆದ್ದಿದ್ದೀಯಾ. ನಿನ್ನಿಷ್ಟದಂತೆ ವಂದಿಗೆ ಶಿಕ್ಷೆಯಾಗಲಿ'. ಅದಕ್ಕೆ ಅಷ್ಟಾವಕ್ರನು –

**ನಾನೇನ ಜೀವತಾ ಕಶ್ಚಿದರ್ಥೋ ಮೇ ವಂದಿನಾ ನೃಪ ।**
**ಪಿತಾ ಯದ್ಯಸ್ಯ ವರುಣೋ ಮಜ್ಜಯೈನಂ ಜಲಾಶಯೇ ॥** - ೧೩೪/೩೦

'ಜನಕರಾಜನೇ! ಈ ವಂದಿಯು ಬದುಕಿ ಉಳಿಯುವುದರಿಂದ ನನಗಾವ ಪ್ರಯೋಗಜನವಿಲ್ಲ, ಆತನು ವರುಣನ ಮಗನೆಂದೇ ಹೇಳಿಕೊಳ್ಳುತ್ತಿದ್ದಾನೆ. ಇರಲಿ, ಅವನನ್ನು ಜಲಾಶಯದಲ್ಲಿಯೇ (ಸಮುದ್ರದಲ್ಲಿಯೇ) ಮುಳುಗಿಸು' ಎಂದು ಅಷ್ಟಾವಕ್ರ ನುಡಿಯಲು, ವಂದಿಯು 'ನನಗೆ ಸಮುದ್ರದಲ್ಲಿ ಮುಳುಗಿಸುವುದರಿಂದ ಯಾವ ಭಯವೂ ಇಲ್ಲ. ತನ್ನ ತಂದೆಯನ್ನು ನಾನು ಸಮುದ್ರದಲ್ಲಿ ಮುಳುಗಿಸಿದೆ ಎಂದು ಅಷ್ಟಾವಕ್ರನು ಹೇಳುತ್ತಿರುವನು. ಆದರೆ, ತನ್ನ ತಂದೆಯನ್ನು ಅಷ್ಟಾವಕ್ರನು ಇನ್ನೊಂದು ಮುಹೂರ್ತದಲ್ಲಿ ನೋಡುತ್ತಾನೆ. ಆತನನ್ನು ನಾನು ಕೊಲ್ಲಿಸಿಲ್ಲ, ಆತನು ನನ್ನ ತಂದೆಯಾದ ವರುಣನ ಯಜ್ಞಕ್ಕೆ ನನ್ನಿಂದ ಕಳಿಸಲ್ಪಟ್ಟಿದ್ದನೇ ಹೊರತು ಸಮುದ್ರದಲ್ಲಿ ಮುಳುಗಿಸಿ ಕೊಲ್ಲಲ್ಪಟ್ಟಿಲ್ಲ' ಎಂದನು[೧].

ವಂದಿಯು ಹೀಗೆ ಹೇಳಿದ ಕೆಲವೇ ಹೊತ್ತಿನಲ್ಲಿ ವರುಣನಿಂದ ಸತ್ಕೃತರಾದ ಎಲ್ಲ ಬ್ರಾಹ್ಮಣರು ಹಾಗೂ ಅಷ್ಟಾವಕ್ರನ ತಂದೆಯೂ ಜನಕರಾಜನ ಆಸ್ಥಾನಕ್ಕೆ ಬಂದರು.

೧ ಅಹಂ ಪುತ್ರೋ ವರುಣಸ್ಯೋತ ರಾಜ್ಞೋ ನ ಮೇ ಭಯಂ ವಿದ್ಯತೇ ಮಜ್ಜಿತಸ್ಯ ।
ಇಮಂ ಮುಹೂರ್ತಂ ಪಿತರಂ ದ್ರಕ್ಷ್ಯತೇಽಯಮಷ್ಟಾವಕ್ರಶ್ಚಿರನಷ್ಟಂ ಕಹೋಳಮ್ ॥
– ವನಪರ್ವ(೧೩೪/೩೧)

ಕಹೋಡ(ಳ) ಜನಕನಿಗೆ ಹೇಳಿದ 'ರಾಜನ್! ಜನರು ಮಕ್ಕಳನ್ನು ವ್ರತನಿಯಮಾದಿಗಳನ್ನು ಮಾಡಿಯಾದರೂ ಬಯಸುತ್ತಾರೆ. ತನ್ನ ಕೈಲಾಗದುದನ್ನು ನನ್ನ ಮಗ ಮಾಡಿ ತೋರಿಸಿದ (ವಂದಿಯನ್ನು ನಾನು ಸೋಲಿಸಲಾಗದಿದ್ದರೂ, ನನ್ನ ಮಗ ಸೋಲಿಸಿದ ಎಂದು ಭಾವ). ದುರ್ಬಲ ತಂದೆ ತಾಯಿಗಳಿಗೆ ಬಲಿಷ್ಠರೂ, ಅಜ್ಞಾನಿಗಳಿಗೆ ಸುಜ್ಞಾನಿಗಳಾದ ಮಕ್ಕಳು ಹುಟ್ಟುತ್ತಾರೆ. ಆದರಿಂದ ತಂದೆ-ತಾಯಿಗಳಿಗೆ ಆಗದುದನ್ನು ಮಕ್ಕಳು ಸಾಧಿಸಿ ತೋರಿಸುತ್ತಾರೆ (ತಂದೆ/ತಾಯಿಗಳನ್ನು ಬಂಧಿಸಿದ ಕಂಸನನ್ನು ಸಂಹರಿಸಿ ಅವರನ್ನು ಬಂಧನದಿಂದ ಬಿಡುಗಡೆ ಮಾಡಿದ ಕೃಷ್ಣನು ಆದರ್ಶಸುತನಾದ ಉದಾಹರಣೆಗಳೂ ಇವೆ). ಹೀಗೆ ತನ್ನ ಮಗನನ್ನು ಕೊಂಡಾಡಿದ ಕಹೋಳನು (ಹಿಂದೆ ಗರ್ಭದಲ್ಲಿದ್ದ ತನ್ನ ಮಗುವನ್ನು ತಾನೇ ಶಪಿಸಿದ್ದ) ರಾಜನಿಗೆ ಶುಭಕೋರಿದ. ಕ್ಷತ್ರಿಯನಿಗೆ ಶತ್ರುಗಳದೇ ಸಮಸ್ಯೆ. ಅಂತಹ ಶತ್ರುಗಳನ್ನು ರಾಜನೇ ಬಂದು ಕೊಲ್ಲಲಿ ಎಂದು ಜನಕರಾಜನನ್ನು ಮಂಗಳಾಶಂಸನ ಮಾಡಿದನು.

ಜನಕನ ಯಜ್ಞದಲ್ಲಿ **ಉಕ್ಥ** ಸಂಬಂಧಿಯಾದ ಸಾಕ್ಷಾತ್ ಪರಮಾತ್ಮನೇ ಗಾನ ಮಾಡಲ್ಪಡುತ್ತಿದ್ದಾನೆ (ವಿವರಗಳಿಗೆ ಐತರೇಯ ಉಪನಿಷತ್ ಭಾಷ್ಯ ನೋಡುವುದು). ಯಥೇಚ್ಛ ಸೋಮಪಾನವೂ ನಡೆಯುತ್ತಿದೆ. ದೇವತೆಗಳು ಸಾಕ್ಷಾತ್ತಾಗಿ ಬಂದು ಹವಿಸ್ಸನ್ನು ಸ್ವೀಕರಿಸುತ್ತಿದ್ದಾರೆ ಎಂದು ವೇದವ್ಯಾಸರು ಜನಕನ ಯಜ್ಞವನ್ನು ಕೊಂಡಾಡಿದರು[೧].

ನಂತರ ವಂದಿ ಪಂಡಿತನು ಜನಕರಾಜನ ಅಪ್ಪಣೆ ಪಡೆದು ಸಮುದ್ರ ಪ್ರವೇಶಿಸಿದ. ಅಷ್ಟಾವಕ್ರನು ತಂದೆಯನ್ನು ನಮಸ್ಕರಿಸಿದ. ಅಲ್ಲಿದ್ದ ಸಭಾ ಬ್ರಾಹ್ಮಣರು ಅಷ್ಟಾವಕ್ರನನ್ನು ಸತ್ಕರಿಸಿದರು. ನಂತರ ಅಷ್ಟಾವಕ್ರನು ಸೋದರಮಾವ ಹಾಗೂ ತಂದೆಯೊಡನೆ ತಮ್ಮ ಆಶ್ರಮಕ್ಕೆ ತೆರಳಿದರು.

ನಂತರ ಕಹೋಳನು ಅಷ್ಟಾವಕ್ರನಿಗೆ ಇಲ್ಲಿಯೇ ಇರುವ ನದಿಯಲ್ಲಿ ಸ್ನಾನ ಮಾಡಲು ತಿಳಿಸಿದನು. ಸ್ನಾನ ಮಾಡಿದ ಅಷ್ಟಾವಕ್ರನ ದೇಹದ ವಕ್ರತೆಗಳೆಲ್ಲಾ ಹೋಗಿ ಸಮಾಂಗನಾದ ಎಂದರೆ, ಅಂಗಗಳೆಲ್ಲ ಸಮಸರಿಯಾದವು, ವಕ್ರತೆಗಳು ಹೋದವು. ಆ ನದಿ ಅಂದಿನಿಂದ **ಸಮಂಗಾ** ಎಂಬ ಹೆಸರು ಪಡೆಯಿತು[೨].

---

೧ ಮಹದೌಕ್ಥ್ಯಂ ಗೀಯತೇ ಸಾಮ ಚಾಗ್ರ್ಯಂ
ಶುಚೀನ್ ಭಗಾನ್ ಪ್ರತಿಜಗೃಹುಶ್ಚ ಹೃಷ್ಟಾಃ।
ಸಾಕ್ಷಾದ್ದೇವಾ ಜನಕಸ್ಯೋತ ರಾಜ್ಞಃ॥ – ವನಪರ್ವ(೧೩೪/೩೬)

೨ ತತೋಽಷ್ಟಾವಕ್ರ ಮಾತು ರಥಾಂತಿಕೇ ಪಿತಾ
ನದೀಂ ಸಮಂಗಾಂ ಶೀಘ್ರಮಿಮಾಂ ವಿಶಸ್ವ।
ಪ್ರೋವಾಚ ಚೈನಂ ಸ ತಥಾ ವಿವೇಶ
ಸಮೈರಂಗೈಶ್ಚಾಪಿ ಬಭೂವ ಸದ್ಯಃ॥ – ವನಪರ್ವ(೧೩೪/೩೯)
ನದೀ ಸಮಂಗಾ ಚ ಬಭೂವ ಪುಣ್ಯಾ
ಯಸ್ಯಾಂ ಸ್ನಾತೋ ಮುಚ್ಯತೇ ಕಿಲ್ಬಿಷಾದ್ಧಿ॥ – ವನಪರ್ವ(೧೩೪/೪೦)

ಹೀಗೆ ಅಷ್ಟಾವಕ್ರನ ಚರಿತ್ರೆಯನ್ನು ವಿವರಿಸಿದ ಲೋಮಶರು 'ಧರ್ಮರಾಜ ನೀನೂ ಈ ನದಿಯಲ್ಲಿ ಸ್ನಾನ ಪಾನ, ಅವಗಾಹನಾದಿಗಳಿಂದ ಸೇವಿಸು' ಎಂದು ಧರ್ಮರಾಜನಿಗೆ ಉಪದೇಶಿಸಿದರು.

## ಸಂದೇಶಗಳು

೧. ಗುರು ಶುಶ್ರೂಷೆಯಿಂದ ಶಾಸ್ತ್ರಸಿದ್ಧಿ. ಕಹೋಳ ಉದ್ದಾಲಕರ ಸೇವೆಯಿಂದ ಸಕಲವಿದ್ಯಾಪಾರಂಗತನಾದ.

೨. ಕಹೋಳನ ಹೆಂಡತಿ ಸುಜಾತ, ಆಕೆಯಲ್ಲಿ ಜನಿಸಲಿರುವ ಪುತ್ರನೂ ತಂದೆಯ ಅನುಗ್ರಹದಿಂದ ವೇದಾಂಗ ನಿಪುಣನಾಗಿದ್ದ, ತಂದೆಗೆ ಹುಟ್ಟಲಿರುವ ಮಗನ ಯೋಗ್ಯತೆ ಗೊತ್ತಿತ್ತು. ತಪಸ್ವಿಯಾದ ತಂದೆಯಂತೆ ಮಗನೂ ಅಭಿಜಾತಜ್ಞಾನಿ. ಆದ್ದರಿಂದ ತಂದೆತಾಯಿಯರು ವಿದ್ಯಾಸಂಪನ್ನರಾದರೆ ಮಕ್ಕಳ ಭವಿಷ್ಯ ಉಜ್ವಲವಾಗಿರುತ್ತದೆ.

೩. ತಂದೆಯನ್ನೂ ಮೀರಿದ ವಿದ್ವತ್ತು ಗರ್ಭಸ್ಥ ಶಿಶುವಿಗೆ ಇತ್ತು. ಆದ್ದರಿಂದ ತಂದೆತಾಯಿಯರ ತಪಸ್ಸು ತಮಗಿಂತ ಉತ್ತಮ ವಿದ್ಯಾವಂತ-ತಪಸ್ವಿಯರನ್ನು ಪಡೆಯಲು ಸಹಾಯಕ. ಆದ್ದರಿಂದಲೇ ತಂದೆಯ ತಪ್ಪುಗಳನ್ನು ಗರ್ಭದಲ್ಲಿದ್ದುಕೊಂಡೇ ಮಗು ಹೇಳಲು ಸಮರ್ಥವಾಯಿತು.

೪. ತಂದೆ ಮುಂಗೋಪಿ, ಪ್ರಾಯಃ ಅಸೂಯಾಪರ. ಆದ್ದರಿಂದ ಮಗನಿಗೆ ಶಾಪಕೊಟ್ಟು ಪಾಪ ಕಟ್ಟಿಕೊಂಡ. ಮಕ್ಕಳ ಶ್ರೇಯಸ್ಸನ್ನು ಸಹಿಸದ ತಂದೆಯರಿರುತ್ತಾರೆ, ಇದು ಆಶ್ಚರ್ಯ, ಆದರೆ ಸತ್ಯ.

೫. ಹುಟ್ಟಿದ ಮಗು ಅಷ್ಟಾವಕ್ರವಾಯಿತು. ತಂದೆಯ ಶಾಪ ಮಾರಕ. ಕಾರಣ ತಂದೆಯ ದೋಷಗಳನ್ನು (ಅಥವಾ ಇತರರ) ಎಣಿಸುವುದು ಅಥವಾ ವಸ್ತುನಿಷ್ಠವಾಗಿ ತಿಳಿಸುವುದೂ ಸಹ ಕೆಲವೇಳೆ ಅನಾಹುತಕ್ಕೆ ಕಾರಣವಾದೀತು. ದೋಷಜ್ಞಾನವಿರಲಿ, ಅದನ್ನು ಹೇಳದಿದ್ದರೆ ಒಳಿತು. ಕೇಳುವವರೆಲ್ಲ ವಸ್ತುನಿಷ್ಠವಾಗಿ/ನಿರ್ಮತ್ಸರರಾಗಿ ಅದನ್ನು ಸ್ವೀಕರಿಸುತ್ತಾರೆಂಬ ಭರವಸೆ ಎಲ್ಲಿದೆ? ಕಹೋಳನೇ ಇದಕ್ಕೆ ಸಾಕ್ಷಿ.

೬. ಅಷ್ಟಾವಕ್ರನ ತಾತ ಉದ್ದಾಲಕ. ಉದ್ದಾಲಕನ ಮಗ ಶ್ವೇತಕೇತು. ಕಹೋಳನು ವಂದಿಯಿಂದ ಸೋತು ನಾಪತ್ತೆಯಾಗಿದ್ದ, ಆದ್ದರಿಂದ ಅಷ್ಟಾವಕ್ರನ ರಕ್ಷಣಾಭಾರ ತಾತನ ಮೇಲೆಯೇ ಇತ್ತು. ಅಷ್ಟಾವಕ್ರ ತನ್ನ ತಾತನ ತೊಡೆಯ ಮೇಲೆ ಕುಳಿತುಕೊಂಡದ್ದನ್ನು ಶ್ವೇತಕೇತು (ಅಷ್ಟಾವಕ್ರನ ಸೋದರಮಾವ) ಸಹಿಸಲಿಲ್ಲ, ಕಾರಣ ಅಸೂಯೆ ಕೆಲಸ ಮಾಡಿತು. ಧ್ರುವರಾಜನನ್ನು ಸುರುಚಿಯು ಉತ್ತಾನಪಾದನ ತೊಡೆಯಿಂದ ದಬ್ಬಿದಂತೆ. ಅಸೂಯೆ ಕೇವಲ ಸವತಿ ಮಾತ್ಸರ್ಯವಲ್ಲ, ಅನೇಕ ಕಡೆ ಅದರ ಬಳ್ಳಿ ಹಬ್ಬಿರುತ್ತದೆ. ಪಾಂಡವರ

ಉತ್ಕರ್ಷವನ್ನು ದುರ್ಯೋಧನಾದಿಗಳು ಸಹಿಸದೆ ಹಸ್ತಿನಾವತಿಯಿಂದಲೇ ಹೊರ ಹಾಕಿದ್ದು ಈ ಅಸೂಯೆಯಿಂದಲೇ. ಆದರೆ ದುರ್ಯೋಧನಾದಿಗಳ ಅಸೂಯೆ ಶಾಶ್ವತವಾಗಿತ್ತು. ಇಲ್ಲಿ ಶ್ವೇತಕೇತು ಮಾರನೇ ದಿನವೇ ಅಳಿಯನೊಡನೆ (ಅಷ್ಟಾವಕ್ರನೊಡನೆ) ಒಂದಾಗಿ ಪ್ರೀತಿ ವಿಶ್ವಾಸ ತೋರಿಸಿದ. ದುರ್ಯೋಧನಾದಿಗಳಂತೆ ಆಜನ್ಮ ದ್ವೇಷಿಸಲಿಲ್ಲ, ಅಸೂಯೆ ಪಡಲಿಲ್ಲ.

೭. ಜನಕರಾಜನ ಯಜ್ಞಶಾಲೆಗೆ ರಾಜನೊಡನೆ ದ್ವಾರಪಾಲರೊಡನೆ ಶ್ವೇತಕೇತು–ಅಷ್ಟಾವಕ್ರರು ಶಾಸ್ತ್ರಜ್ಞಾನ, ಬುದ್ಧಿವಂತಿಕೆ, ಉತ್ತಮ ನಡತೆ, ವಿನಯ ಮೊದಲಾದ ನಡೆಗಳಿಂದ ಅವರ ಮನಸ್ಸನ್ನು ಗೆದ್ದು ಪ್ರವೇಶ ಪಡೆದ. ಆದ್ದರಿಂದ ಸಾಂದರ್ಭಿಕ ಬುದ್ಧಿವಂತಿಕೆ, ವಿನಯಾದಿಗಳಿಂದ ಯಾರನ್ನಾದರೂ ವಶಪಡಿಸಿಕೊಳ್ಳಬಹುದು.

**ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ।**
**ಏತಾನಿ ಮಾನ್ಯಸ್ಥಾನಾನಿ ಗರೀಯೋಹ್ಯುತ್ತರೋತ್ತರಮ್ ॥**

ಎಂಬ ಮಾತಿಗೆ (ಕೃಷ್ಣಾಮೃತಮಹಾರ್ಣವ) ಉದಾಹರಣೆಯಾಗಿ ಬಾಲಕ ಅಷ್ಟಾವಕ್ರ ಉದಾಹರಣೆಯಾಗಿದ್ದಾನೆ. ರಾಜನು ಅದನ್ನು ತನ್ನ ಮಾತಿನಲ್ಲಿ ತೋರಿಸುತ್ತಾನೆ. ಅಷ್ಟಾವಕ್ರನ ಕಠಿಣ ಮಾತುಗಳನ್ನು ರಾಜ ಮನ್ನಿಸುತ್ತಾನೆ. ಹಿರಿಯರು, ರಾಜಾದಿಗಳು ಹಾಗಿರಬೇಕು.

೮. '**ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ**' ಎಂಬ ಕವಿಮಾತು ಇಲ್ಲಿ ಮಾರ್ಮಿಕವಾಗಿ ಬಂದಿದೆ. ಶಾಸ್ತ್ರಜ್ಞಾನಕ್ಕೂ ವಯಸ್ಸಿನ ಅಂತರಕ್ಕೂ ಯಾವ ಸಂಬಂಧವೂ ಇಲ್ಲ. ಚಿಕ್ಕವನೂ ಜ್ಞಾನಿಯಾಗಿರಬಹುದು. ವೃದ್ಧನೂ ದಡ್ಡನಾಗಿಯೇ ಇರಬಹುದು. ವಯಸ್ಸಿಗಿಂತ ಅವನ ಜ್ಞಾನ ಮುಖ್ಯ. ಆದ್ದರಿಂದಲೇ ವಂದಿ ಜ್ಞಾನ, ವಯೋವೃದ್ಧನಾಗಿದ್ದರೂ ಅಲ್ಪ ವಯಸ್ಸಿನ ಅಷ್ಟಾವಕ್ರನು ತನ್ನ ಪಾಂಡಿತ್ಯ ತೋರಿಸಿಯೇ ಬಿಟ್ಟ.

೯. ವಂದಿ ಕೇಳಿದ ಪ್ರಶ್ನೆಗಳು ಒಗಟಿನಂತಿವೆ. ಅವುಗಳ ರಹಸ್ಯ ಅಷ್ಟಾವಕ್ರ ಬಿಡಿಸಿ, ತನ್ನ ಜಾಣ್ಮೆ ತೋರಿದ. ಈ ಎಲ್ಲ ಒಗಟುಗಳ ಆಧ್ಯಾತ್ಮಿಕ ಅರ್ಥಗಳ ಚಿಂತನೆ ಅವಶ್ಯ.

೧೦. ವಂದಿಯ ದರ್ಪ (ವಿದ್ಯಾಮದ) ಅಷ್ಟಾವಕ್ರನ ಉತ್ತರಗಳಿಂದ ಇಳಿಯಿತು. ವಂದಿ ಅದನ್ನು ಒಪ್ಪಿದ್ದು ಅದು ನಿಜವಾದ ಸೌಜನ್ಯ. ಇಲ್ಲದಿದ್ದರೆ ದರ್ಪವು ಅಧಃಪತನಕ್ಕೆ ಕಾರಣವಾಗುತ್ತದೆ (ನಹುಷನ ಚರಿತ್ರೆ ಇದಕ್ಕೆ ಉದಾಹರಣೆ). ತನ್ನ ತಪ್ಪನ್ನು ಒಪ್ಪುವವನು ಮಾನ್ಯನಾಗುತ್ತಾನೆ (ಕೃಷ್ಣನು ಅರ್ಜುನನಿಗೆ ವಿಪ್ರ ಶಿಶುರಕ್ಷಣೆ ವಿಷಯದಲ್ಲಿ ತನ್ನ ಮಹಿಮೆ ತೋರಿಸಿದ. ಅರ್ಜುನನ ದರ್ಪ ಇಳಿಯಿತು. ಅದೇ ರೀತಿ ಇಂದ್ರನ ಅಜ್ಞಾನ ದರ್ಪಗಳೂ ಕೂಡ ಗೋವರ್ಧನಪರ್ವತೋದ್ಧರಣ ಪ್ರಸಂಗ, ಪಾರಿಜಾತಾಪಹರಣ ಪ್ರಸಂಗಗಳಲ್ಲಿಂದ ನಾಶವಾಯಿತು). ಕಾರಣ ದರ್ಪ ಕೂಡದು. **ಚಿಕ್ಕವರ ಬಗ್ಗೆಯೂ ಹಿರಿಯರು ದರ್ಪದಿಂದ ಅಮಾನವೀಯವಾಗಿ ವರ್ತಿಸಕೂಡದು.**

೧೧. ತನ್ನ ತಂದೆ ಹಾಗೂ ಇತರ ಬ್ರಾಹ್ಮಣರನ್ನು ಸಮುದ್ರದಲ್ಲಿ ವಂದಿಯು ಮುಳುಗಿಸಿ ಕೊಂದನೆಂಬ ವಾರ್ತೆಯಿಂದ ಕೃದ್ಧನಾದ ಅಷ್ಟಾವಕ್ರನು ಸೇಡು ತೀರಿಸಿಕೊಳ್ಳುತ್ತಾನೆ. ವಂದಿಯು ಅದಕ್ಕೆ ಒಪ್ಪುತ್ತಾನೆ. ಆದರೆ ವಂದಿಯನ್ನು ರಾಜದೂತರು ಸಮುದ್ರದಲ್ಲಿ ಮುಳುಗಿಸಿದರೆಂದೇನೂ ಭಾರತ ಹೇಳುವುದಿಲ್ಲ. ವಂದಿಯು ತಾನೇ ಸಮುದ್ರ ಪ್ರವೇಶಿಸುತ್ತಾನೆ.

೧೨. ಯಾರನ್ನೂ ತಾನು ಸಮುದ್ರದಲ್ಲಿ ಮುಳುಗಿಸಿ ಕೊಂದಿಲ್ಲವೆಂದೂ, ಕೇವಲ ತನ್ನ ತಂದೆ ವರುಣನ ಯಾಗಕ್ಕೆ ಬ್ರಾಹ್ಮಣರನ್ನು ಅತಿಥಿಗಳನ್ನಾಗಿ ಕಳಿಸಿದೆ ಎಂದು ಹೇಳುತ್ತಾನೆ ವಂದಿ. ಮೇಲ್ನೋಟಕ್ಕೆ ಮುಳುಗಿಸಿದ್ದೇ ಹೊರತು, ವಸ್ತುಸ್ಥಿತಿಯಲ್ಲ. ಇದನ್ನೂ ತಿಳಿಯಬೇಕು.

೧೩. ತಂದೆಯು (ಕಹೋಳ) ಮಾತ್ರ ತನ್ನ ಮಗನು ತನ್ನನ್ನು ಮೀರಿದವನೆಂಬ ಸತ್ಯವನ್ನು ಕೊನೆಗಾದರೂ ಒಪ್ಪುವ ಹೃದಯ ವಿಶಾಲತೆ ಮೆಚ್ಚುವಂತಹದು.

**ಹಿರಿಯರಲ್ಲಿ ಕಿರಿಯರಲ್ಲಿರುವ ಗುಣಗಳನ್ನು ಗುರುತಿಸುವ ನಡತೆಯಿರಬೇಕು. ಇದು ಉಭಯರಿಗೂ ತಾರಕ. ಇದರಿಂದ ಪ್ರತೀಕಾರ ಭಾವನೆಗಳು ನಿಂತು ನಿಜವಾದ ಆಧ್ಯಾತ್ಮಿಕ ಪ್ರಗತಿ ಸಾಧ್ಯ.**

## ೪೦. ರೈಭ್ಯ ಮತ್ತು ಯವಕ್ರೀತರ ಕಥೆ

ಲೋಮಶಮುನಿಗಳು ಧರ್ಮರಾಜನಿಗೆ ಸಮಂಗಾ ನದಿ (ಇದರ ಮೊದಲ ಹೆಸರು **ಮಧುವಿಲಾ**; ಅಷ್ಟಾವಕ್ರನ ದೇಹದ ವಕ್ರತೆಗಳು ನ್ಯೂನತೆಗಳು ಇಲ್ಲಿ ಸ್ನಾನ ಮಾಡಿದ್ದರಿಂದ ಹೋದವು. ಆದ್ದರಿಂದ ಇದೇ ನದಿಗೆ ಮುಂದೆ ಸಮಂಗಾ ಎಂಬ ಹೆಸರು ಬಂತು), **ಕರ್ದಮಿಲ ಸರೋವರ**, **ಮೈನಾಕ** ಪರ್ವತದ ಮಧ್ಯದಲ್ಲಿನ ವಿನಶನ ಕ್ಷೇತ್ರ ಮುಂತಾದುವುಗಳನ್ನು ತೋರಿಸುತ್ತಾ ಅದರ ಹತ್ತಿರವಿರುವ **ಗಂಗಾನದಿ**, **ಭೃಗುತುಂಗ**ಪರ್ವತಗಳನ್ನು ತೋರಿಸಿದರು. ಅಲ್ಲಿರುವ ಬಿಸಿಯಾದ ಹಾಗೂ ಶೀತಲವಾದ ಗಂಗಾ ನದಿಯಲ್ಲಿ ಸ್ನಾನ ಮಾಡಲು ಹೇಳಿದರು.

ಇದರ ಹತ್ತಿರ ಸ್ಥೂಲಶಿರಮಹರ್ಷಿಗಳ ಹಾಗೂ ರೈಭ್ಯಾಶ್ರಮಗಳಿವೆ ಎಂದು ಹೇಳುತ್ತಾ, ಭರದ್ವಾಜರ ಪುತ್ರನಾದ ಯವಕ್ರೀತ ನಾಶವಾದುದು ಇಲ್ಲಿಯೇ ಎಂದು ಹೇಳಿದಾಗ ದರ್ಮರಾಜನು ಆ ವೃತ್ತಾಂತವನ್ನು ವಿವರಿಸಲು ಕೇಳಿದನು.

ಲೋಮಶರು ಆ ಯವಕ್ರೀತನ ಚರಿತೆಯನ್ನು[೧] ಹೀಗೆ ಉಪದೇಶಿಸಿದರು.

'ಧರ್ಮರಾಜ! ಭರದ್ವಾಜ ಹಾಗೂ ರೈಭ್ಯರು ಒಳ್ಳೆಯ ಸ್ನೇಹಿತರು. ಪರಸ್ಪರ ಪ್ರೀತಿ ವಿಶ್ವಾಸದಿಂದ ಇಲ್ಲಿಯೇ ಬೆಳೆದವರು. ರೈಭ್ಯನಿಗೆ ಅರ್ವಾವಸು ಹಾಗೂ ಪರಾವಸು ಎಂಬ ಇಬ್ಬರು ಮಕ್ಕಳಿದ್ದರು. ರೈಭ್ಯ ತಪಸ್ವಿಯೂ, ವಿದ್ವಾಂಸನೂ ಆಗಿದ್ದ. ಅವನ ಮಕ್ಕಳು ಬಾಲ್ಯದಿಂದಲೇ ಕೀರ್ತಿಶಾಲಿಗಳಾಗಿ ಸಮಾಜದಲ್ಲಿ ತಂದೆಯೊಂದಿಗೆ ಬಹಳ ಮಾನ್ಯತೆ ಗಳಿಸಿದ್ದರು. ಆದರೆ ಭರದ್ವಾಜರು ತಪಸ್ವಿಗಳಾಗಿದ್ದರೂ ಸಮಾಜದಲ್ಲಿ ಅವರಿಗೆ ಮಾನ್ಯತೆ ಇರಲಿಲ್ಲ. ಇದು ಭರದ್ವಾಜರ ಮಗನಾದ ಯವಕ್ರೀತನನ್ನು ಕೆರಳಿಸಿತು.

ಕೋಪ ಹಾಗೂ ಅಸೂಯೆಯಿಂದ ತಾನೂ ಸಮಾಜದಲ್ಲಿ ಮಾನ್ಯತೆ ಗಳಿಸಲು ಅದಕ್ಕಾಗಿ ವೇದಜ್ಞಾನ ಹೊಂದಲು ಭಾರಿ ತಪಸ್ಸನ್ನು ಆರಂಭಿಸಿದ. ಯಜ್ಞೇಶ್ವರನಲ್ಲಿ ತನ್ನ ದೇಹವನ್ನು ಹೋಮಿಸತೊಡಗಿದ. ಯವಕ್ರೀತನ ಈ ಕ್ರೂರ ತಪಸ್ಸು ಇಂದ್ರನನ್ನೂ ಸಂಕಟಕ್ಕೀಡು ಮಾಡಿತು. ಇಂದ್ರ ಪ್ರತ್ಯಕ್ಷನಾಗಿ ಇಂತಹ ಘೋರ ತಪಸ್ಸಿಗೆ ಕಾರಣವಾದರೂ ಏನೆಂದು ಕೇಳಿದ.

---

೧ ಯವಕ್ರೀತ ಹಾಗೂ ಯವಕ್ರೀ ಎರಡೂ ಒಂದೇ ಅರ್ಥವುಳ್ಳ ಪುಲ್ಲಿಂಗ ಶಬ್ದಗಳು. ಯವಕ್ರೀತ ಅಕಾರಾಂತ, ಯವಕ್ರೀ ಈಕಾರಾಂತ ಶಬ್ದ. ಈಕಾರಾಂತ ಪುಲ್ಲಿಂಗ ಶಬ್ದಗಳು ಸಂಸ್ಕೃತದಲ್ಲಿ ಅಪರೂಪ.

ಅದಕ್ಕೆ ಯವಕ್ರೀತನೆಂದ 'ಬ್ರಾಹ್ಮಣರಿಗೆ ಅಧ್ಯಯನ ಮಾಡದೇ ವೇದಗಳು ಸ್ಫುರಿಸಬೇಕು. ಅದಕ್ಕಾಗಿ ಈ ತಪಸ್ಸು. ವೇದಗಳನ್ನು ಗುರುಮುಖದಿಂದ ತಿಳಿಯಲು ಬಹಳ ಕಾಲ ಬೇಕಾಗುತ್ತದೆ. ಆದ್ದರಿಂದ ಈ ಭಯಂಕರ ತಪಸ್ಸಿನಿಂದಲೇ ವೇದಾಧ್ಯಯನ ಎಲ್ಲ ಜ್ಞಾನ ಪ್ರಾಪ್ತಿ ನನಗೆ ಹಾಗೂ ಎಲ್ಲ ಬ್ರಾಹ್ಮಣರಿಗೂ ಆಗಬೇಕು.'

ಅದಕ್ಕೆ ಇಂದ್ರನು 'ಇದು ಸರಿಯಾದ ಮಾರ್ಗವಲ್ಲ. ಗುರುಗಳಿಂದ ವೇದಾಧ್ಯಯನ ಮಾಡಿ ಜ್ಞಾನ ಸಂಪಾದಿಸು' ಎಂದು ಹೇಳಿ ಹೊರಟನು. ಆದರೆ ಯವಕ್ರೀತನು ಮಾತ್ರ ಮತ್ತೆ ತನ್ನ ಘೋರ ತಪಸ್ಸು ಮಾಡಿ ಇಂದ್ರನಿಗೆ ಸಂತಾಪ ಉಂಟುಮಾಡಲು ಇಂದ್ರ ಬಂದು ತಡೆದು ಹೇಳಿದ[1].

ಹೇ ಯವಕ್ರೀತ! ನೀನು ಅಸಾಧ್ಯವಾದುದನ್ನು ಆರಂಬಿಸಿದ್ದೀಯಾ ! ಇದು ವಿವೇಕದಿಂದ ಮಾಡಿದ್ದಲ್ಲ. ಆದರೂ ನಿನ್ನ ತಪಸ್ಸಿಗೆ (ನಾನು ಮೆಚ್ಚಿ) ನಿನಗೆ ಹಾಗೂ ನಿನ್ನ ತಂದೆಗೆ ವೇದಗಳು ಪ್ರತಿಭಾತವಾಲಿ(ಸ್ಫುರಿಸಲಿ) ಎಂಬ ವರ ನೀಡುವೆ. ಇದರಿಂದ ತೃಪ್ತನಾಗಿ ಈ ತಪಸ್ಸನ್ನು ನಿಲ್ಲಿಸು ಎಂದು ಇಂದ್ರ ನುಡಿಯಲು, ಯವಕ್ರೀತನು 'ದೇವರಾಜ! ನೀನು ಹೇಳಿದಂತೆ ನಾನು ಮಾಡಲಾರೆ. ನೀನು ನನ್ನ ಅಭಿಲಾಷೆ ಪೂರೈಸದಿದ್ದಲ್ಲಿ ನಾನು ಮತ್ತೂ ಘೋರವಾದ ತಪಸ್ಸನ್ನು ಮಾಡುವೆ. ನನ್ನ ಅಂಗಾಂಗಗಳನ್ನು ಅಗ್ನಿಯಲ್ಲಿ ಹೋಮಿಸುವೆ' ಎಂದ.

ಹೀಗೆ ಯವಕ್ರೀತನು ಇಂದ್ರನ ಮಾತನ್ನು ಕೇಳದಿರಲು ಮಹಾಬುದ್ಧಿಶಾಲಿಯಾದ ಇಂದ್ರನು ಯೋಚಿಸಿ ನೂರಾರು ವರ್ಷ ವೃದ್ಧನಾದ ಯಕ್ಷ್ಮ ರೋಗಪೀಡಿತನಾದ ವೃದ್ಧಬ್ರಾಹ್ಮಣ ವೇಷವನ್ನುತಳೆದು ಅಲ್ಲಿರುವ ಗಂಗಾನದಿಗೆ ಸೇತುವೆಯನ್ನು ಕಟ್ಟಲು ಮುಷ್ಟಿಯಿಂದ ಮರಳನ್ನು ಹಾಕಲಾರಂಭಿಸಿದನು. ಇದನ್ನು ನೋಡಿದ ಯವಕ್ರೀತನು 'ಎಲೈ ಬ್ರಾಹ್ಮಣನೇ! ಏನಿದು ನಿನ್ನ ವ್ಯರ್ಥಪ್ರಯತ್ನ. ಅಸಾಧ್ಯವಾದ ಕಾರ್ಯವನ್ನು ಮಾಡಲು ಪ್ರಯತ್ನಿಸುತ್ತಿದ್ದೀಯಲ್ಲ' ಎಂದನು.

ಆಗ ಬ್ರಾಹ್ಮಣ ವೇಷಧಾರಿಯಾದ ಇಂದ್ರನು 'ಮರಳಿನ ಸೇತುವೆಯಿಂದ ಗಂಗೆಯನ್ನು ಬಂಧಿಸಲು ನನ್ನ ಪ್ರಯತ್ನವಿದೆ. ಇದರಿಂದ ತೊಂದರೆಗೊಳಗಾದ ಜನರು ಗಂಗೆಯನ್ನು ದಾಟಬಲ್ಲರು.' ಇದಕ್ಕೆ ಯವಕ್ರೀತನು ಉತ್ತರಿಸಿದ 'ಮರಳಿನಿಂದ ಸೇತುವೆ ನಿರ್ಮಾಣ ಅಶಕ್ಯ. ಗಂಗಾ ಪ್ರವಾಹ ಅಸದಳ. ಈ ಪ್ರಯತ್ನ ಬಿಡು. ಸಾಧ್ಯವಾದ ಬೇರೆ ವಿಚಾರ ಮಾಡು.' ಅದಕ್ಕೆ ಇಂದ್ರ ಉತ್ತರಿಸಿದ.

---

೧ ಅಮಾರ್ಗ ಏಷ ವಿಪ್ರರ್ಷೇ ಯೇ ನ ತ್ವಂ ಯಾತುಮಿಚ್ಛಸಿ।
ಕಿಂ ವಿಘಾತೇನ ತೇ ವಿಪ್ರ ಗಚ್ಛಾಧೀಹಿ ಗುರೋರ್ಮುಖಾತ್ ॥ - ವನಪರ್ವ(೧೩೫/೨೨)
ಅಶಕ್ಯೋಽರ್ಥಃ ಸಮಾರಬ್ಧೋ ನೈತದ್ ಬುದ್ಧಿಕೃತಂ ತವ।
ಪ್ರತಿಭಾಸ್ಯಂತಿ ವೈ ವೇದಾಸ್ತವ ಚೈವ ಪಿಶುಶ್ಚತೇ ॥ - ೧೩೫/೨೬

ಗುರುಗಳ ಹೊರತಾಗಿಯೂ 'ವೇದಾರ್ಥ ಜ್ಞಾನಕ್ಕಾಗಿ ನೀನು ತಪಸ್ಸು ಮಾಡುತ್ತಿದ್ದೀ. ಅದು ಸಾಧ್ಯವಾದರೆ ಇದೂ ಸಾಧ್ಯವಾದೀತು. ಅದಕ್ಕಾಗಿ ನನ್ನ ಪ್ರಯತ್ನ.'

ಇಂದ್ರರೂಪೀ ಬ್ರಾಹ್ಮಣನೇ ತನಗೆ ಬುದ್ಧಿ ಕಲಿಸಲು ಹೀಗೆ ಮಾಡಿದ್ದಾನೆಂದು ಅರಿತ ಯವಕ್ರೀತನು ಇಂದ್ರನನ್ನು ಕುರಿತು 'ಇಂದ್ರನೇ! ನಿನ್ನ ಪ್ರಯತ್ನದಂತೆ (ಮರಳಿನಿಂದ ಸೇತುವೆ ನಿರ್ಮಾಣ) ನನ್ನ ಪ್ರಯತ್ನವೂ (ತಪಸ್ಸಿನಿಂದ ವೇದಜ್ಞಾನಪ್ರಾಪ್ತಿ) ವ್ಯರ್ಥವಾಗುವುದಾದಲ್ಲಿ ನಾನು ಇತರರನ್ನು ಮೀರಿಸುವ ವರಗಳನ್ನಾದರೂ ಅನುಗ್ರಹಿಸು' ಎಂದು ಯವಕ್ರೀತನು ಬೇಡಿದ.

ಅದಕ್ಕೆ ಇಂದ್ರನು 'ನಿನಗೆ ಹಾಗೂ ನಿನ್ನ ತಂದೆಗೆ ನಿನ್ನ ಅಪೇಕ್ಷೆಯಂತೆ ವೇದಗಳು ಪ್ರತಿಭಾತವಾಗಲಿ. ನಿನ್ನ ಇತರ ಅಭಿಲಾಷೆಗಳೂ ಈಡೇರುತ್ತವೆ' ಎಂದನು.

ಹೀಗೆ ವರಗಳನ್ನು ಪಡೆದ ಯವಕ್ರೀತನು ತಂದೆ ಬಳಿ ಹೋಗಿ ಹೇಳಿದ 'ಅಲ್ಲ! ನನಗೆ ಹಾಗೂ ನಿನಗೆ ವೇದಗಳೂ (ಅಧ್ಯಯನ ಮಾಡದೇ) ಪ್ರತಿಭಾತವಾಗುತ್ತವೆ. ನಾವು ಇತರರನ್ನು ಇನ್ನು ಮುಂದೆ (ಪಾಂಡಿತ್ಯದಲ್ಲಿ) ಮೀರುತ್ತೇವೆ' ಎಂದ.

ಮಗನ ಮಾತನ್ನು ಕೇಳಿದ ಭರದ್ವಾಜರು ನುಡಿದರು 'ನಿನಗೆ ಬೇಕಾದ ವರಗಳನ್ನು ಪಡೆದಿದ್ದರೂ ಅದರಿಂದ ನೀನು ಗರ್ವಹೊಂದಿ ಬೇಗನೇ ನಾಶ ಹೊಂದುವೆ' ಎಂದು. ಕಾರಣ ಹಿಂದೆ ಇಂತಹ ಮಾತುಗಳನ್ನು ದೇವತೆಗಳು ಆಡಿದ್ದುಂಟು.

ಹಿಂದೊಬ್ಬ ಬಾಲಧಿ ಎಂಬ ಮುನಿ ಇದ್ದ. ಅವನಿಗಿದ್ದ ಮಗನೊಬ್ಬ ಮೃತನಾದ. ಆ ಶೋಕದಿಂದ ಉದ್ವಿಗ್ನಗೊಂಡ ಮುನಿ ಅಸಾಧ್ಯವಾದ ತಪಸ್ಸನ್ನು ಮಾಡಿದ. 'ನನಗೆ ಮರಣಹೀನ ಮಗ' ಬೇಕೆಂದು ವರವನ್ನೂ ಪಡೆದ. ಆದರೆ ದೈವತುಲ್ಯನಾದ ಮಗ ಮಾತ್ರ ಸಿಗಲಿಲ್ಲ.

ಕಾರಣ ಮರ್ತ್ಯನೆಂದೂ ಅಮರ್ತ್ಯನಾಗಲಾರನಷ್ಟೇ? ಆದ್ದರಿಂದ ಎಲೈ ಬಾಲಧಿಯೇ ನೀನೇ ನಿನ್ನ ಮಗನ ಆಯುಷ್ಯಕ್ಕೆ ಕಾರಣ ನಿರೂಪಿಸು. ಮರಣಕ್ಕೆ ಒಂದು ನಿಮಿತ್ತ ತಿಳಿಸು ಎಂದು ದೇವತೆಗಳು ಬಾಲಧಿಗೆ ಹೇಳಿದಾಗ ಬಾಲಧಿಯು 'ಈ ಪರ್ವತಗಳು ಹೇಗೆ ಅನಂತಕಾಲದಿಂದ ಇವೆಯೋ, ಹಾಗೆ ನನ್ನ ಮಗನೂ ಅಕ್ಷಯವಾದ ಆಯುಷ್ಯವುಳ್ಳವನಾಗಲಿ. ಪರ್ವತಗಳೇ ನನ್ನ ಮಗನ ಮರಣಕ್ಕೆ ನಿಮಿತ್ತವಾಗಲಿ.

*****

# ೪೧. ಯವಕ್ರೀತೋಪಾಖ್ಯಾನ

'**ಬಾಲಧಿ**'ಗೆ ಹುಟ್ಟಿದ ಮಗ '**ಮೇಧಾವಿ**'ಯು ಕೋಪ ದರ್ಪಗಳಿಂದ ಋಷಿಗಳನ್ನು ಅವಮಾನಿಸಲು ಆರಂಭಿಸಿದ. ಭೂಮಿಯನ್ನು ಸುತ್ತುತ್ತಾ ಮುನಿಗಳನ್ನು ಛೇಡಿಸುತ್ತಾ ಜ್ಞಾನಿಯಾದ '**ಧನುಷಾಕ್ಷ**'ವೆಂಬ ಮಹಾತಪಸ್ವಿಯನ್ನೂ ಕೆಣಕಿದ. ಕೋಪಗೊಂಡ 'ಧನುಷಾಕ್ಷ' 'ನೀನು ಸುಟ್ಟುಹೋಗೆಂದು' ಮೇಧಾವಿಗೆ ಶಾಪಕೊಟ್ಟ. ಶಾಪ ಫಲ ನೀಡಲಿಲ್ಲ. 'ಮೇಧಾವಿಯ' ಹಿನ್ನೆಲೆ ತಿಳಿದುಕೊಂಡ ಋಷಿಯು ಪರ್ವತವನ್ನು ನಾಶಮಾಡುವ ಕಾಡೆಮ್ಮೆಗಳನ್ನು ಸೃಷ್ಟಿಸಿ ಅವುಗಳಿಂದ ಪರ್ವತಗಳನ್ನು ನಾಶಮಾಡಿಸಿದ. ಕೂಡಲೆ 'ಮೇಧಾವಿಯೂ ಮೃತನಾದ. ಮೃತನಾದ ಮಗನನ್ನು ತಂದು 'ಬಾಲಧಿ' ತುಂಬಾ ಶೋಕಿಸಿದ.

[೧]ನೋಡು ಯುವಕ್ರೀತ! ಹೀಗೆ ನಾನು ಕೇಳಿದ್ದೇನೆ. ಅದೃಷ್ಟವನ್ನು ಮೀರಲೂ ಯಾರಿಗೂ ಸಾಧ್ಯವಿಲ್ಲ. ವರಗಳನ್ನೂ ಪಡೆದ ಬಾಲಕರು ದರ್ಪಿಷ್ಠರಾಗುತ್ತಾರೆ. ಬಾಲಧಿಯ ಮಗನಂತೆ ನೀನು ನಾಶವಾಗಬಾರದೆಂದು ನನ್ನಾಶೆ. ನೀನು ರೈಭ್ಯ ಹಾಗೂ ಅವರ ಮಕ್ಕಳನ್ನು ನೋಡಿ ದುಃಖಿಸುತ್ತಿದ್ದೀಯಾ! ಈ ರೈಭ್ಯ ಮಹಾತಪಸ್ವಿ ಅವನ ಮಕ್ಕಳೂ ಅಂತಹವರೇ! ಆದ್ದರಿಂದ ಅವರ ತಂಟೆಗೆ ಹೋಗದಿರು. ಅವನು ಕೋಪಗೊಂಡರೆ ನಿನ್ನನ್ನೂ ನಾಶಮಾಡಬಲ್ಲ.

ಈ ಉಪದೇಶದ ಮಾತುಗಳನ್ನು ಕೇಳಿದ ಯವಕ್ರೀತನು 'ನೀನು ಹೇಳಿದಂತೆ ನಡೆಯುವೆ. ನೀನು ಹೇಗೆ ಮಾನ್ಯನೋ ಹಾಗೆಯೇ ರೈಭ್ಯನೂ ನನಗೆ ಮಾನ್ಯ ಹಾಗೂ ಪಿತೃ ಸಮಾನ.' ಹೀಗೆ ನುಡಿದ ಯವಕ್ರೀತನು ರೈಭ್ಯರ ತಂಟೆಗೆ ಹೋಗಲಿಲ್ಲ. ಆದರೆ ಇತರ ಮುನಿಗಳ ಬಗ್ಗೆ ಕುಚೋದ್ಯ ಮಾಡುತ್ತಾ ಸಂತೋಷಪಡಲಾರಂಭಿಸಿದನು. ತಂದೆಗೆ ರೈಭ್ಯನ ತಂಟೆಗೆ ಹೋಗೆನೆಂದು ಮಾತುಕೊಟ್ಟ ಯವಕ್ರೀತನು ನಿರ್ಭಯ-ನಿರ್ಲಜ್ಜೆಯಿಂದ ತಿರುಗುತ್ತಾ ವಸಂತ ಮಾಸದಲ್ಲಿ ಒಂದು ದಿನ ರೈಭ್ಯರ ಆಶ್ರಮದ ಪ್ರದೇಶಕ್ಕೆ ಸರ್ಪದ ಹುತ್ತಿಗೆ ಕೈಹಾಕಿದಂತೆ ಹೋದನು ಆ ರಮ್ಯವಾದ ಚಿಗುರು, ಪುಷ್ಪ, ಫಲಗಳಿಂದ ಕೂಡಿದ ಸುಂದರ ಆಶ್ರಯದಲ್ಲಿ ಕಿನ್ನರಿಯಂತೆ ಸಂಚರಿಸುತ್ತಿದ್ದ ರೂಪಸಿಯಾದ ರೈಭ್ಯನ ಸೊಸೆಯನ್ನು ಯವಕ್ರೀತ ನೋಡಿದ. ಆಕೆಯ ರೂಪಕ್ಕೆ ಮೋಹಿತನಾಗಿ 'ನನ್ನನ್ನು ಸೇವಿಸು' ಎಂದು ಆಕೆಯನ್ನು ಮೊರೆಹೋದ. ಯವಕ್ರೀತನ ಸ್ವಭಾವ ಬಲ್ಲವಳೂ ಅವನ ತಪಸ್ಸು-ಶಾಪಭಯದಿಂದಲೂ ಹಾಗೂ ಮಾವನ ತೇಜಸ್ಸನ್ನೂ, ಕೋಪವನ್ನೂ ಬಲ್ಲವಳಾದ ಆ ಸೊಸೆ ಯವಕ್ರೀತನನ್ನು

---

೧ ನ ದಿಷ್ಟಮರ್ಥಮತ್ಯೇತುಂ ಈಶೋ ಮರ್ತ್ಯಃ ಕಥಂಚನ ॥ – ವನಪರ್ವ(೧೩೬\೫೫)

ಉಪಾಯದಿಂದ ತಪ್ಪಿಸಿಕೊಳ್ಳಲು ಅವನೊಡನೆ ರಮಿಸಲು ಒಪ್ಪಿದಂತೆ ನಟಿಸಿ ಅವನೊಡನೆ ಏಕಾಂತದಲ್ಲಿದ್ದಳು.

ನಂತರ ಅವನನ್ನು ಅಲ್ಲಿಯೇ ಬಚ್ಚಿಟ್ಟು ಆಶ್ರಮಕ್ಕೆ ಬಂದಳು. ಅದೇ ಹೊತ್ತಿಗೆ ಆಶ್ರಮಕ್ಕೆ ರೈಭ್ಯರು ಆಶ್ರಮಕ್ಕೆ ಬಂದು ಅಳುತ್ತಿರುವ ಸೊಸೆಯನ್ನು ನೋಡಿ ಆಕೆಯನ್ನು ಸಂತೈಸುತ್ತಾ ವಿಷಯ ತಿಳಿದುಕೊಂಡರು. ಯವಕ್ರೀತನ ಕಾಮಚಾಪಲ್ಯವನ್ನು ಸೊಸೆ ವಿವರಿಸಿದಾಗ ಕೋಪಗೊಂಡ ರೈಭ್ಯರು ತಮ್ಮ ಜಟೆಯಿಂದ ಒಂದು ಕೂದಲನ್ನು ಕಿತ್ತಿ ಸುಸಂಸ್ಕೃತವಾದ ಅಗ್ನಿಯಲ್ಲಿ ಹಾಕಿದಾಗ ಸೊಸೆಯಂತೆ ರೂಪವತಿಯಾದ ಸುಂದರ ಯುವತಿಯು ಅಗ್ನಿಯಿಂದ ಬಂದಳು. ಮತ್ತೆ ಅದೇ ಜಟೆಯಿಂದ ಇನ್ನೊಂದು ಕೂದಲನ್ನು ಕಿತ್ತಿ ಅಗ್ನಿಯಲ್ಲಿ ಹಾಕಿದಾಗ ಒಂದು ರಾಕ್ಷಸ ಕೃತ್ಯೆ ಆವಿರ್ಭವಿಸಿತು. ಆ ಯುವತಿ ಹಾಗೂ ರಾಕ್ಷಸರು ರೈಭ್ಯರ ಆದೇಶ ಹೊತ್ತು ಯವಕ್ರೀತನನ್ನು ಸಂಹರಿಸಲು ಹೊರಟರು. ಮೊದಲು ಯುವತಿಯು ಯವಕ್ರೀತನಲ್ಲಿಗೆ ಹೋಗಿ ಅವನನ್ನು ಮೋಹಗೊಳಿಸುತ್ತಾ ಅವನ ಕಮಂಡಲನ್ನು ಅಪಹರಿಸಿ ಮರೆಯಾದಳು. ನಂತರ ಯವಕ್ರೀತನ ಬೆನ್ನು ಹತ್ತಿದ '**ರಾಕ್ಷಸ ಕೃತ್ಯೆ**'ಯಿಂದ ತಪ್ಪಿಸಿಕೊಳ್ಳಲು ಯವಕ್ರೀತನಿಗೆ ಸಾಧ್ಯವಾಗಲಿಲ್ಲ. ತನ್ನ ತಪಶಕ್ತಿಯಿಂದ ರಾಕ್ಷಸನನ್ನು ಕೊಲ್ಲಲು ಕಮಂಡಲು ಇಲ್ಲ. ಹತ್ತಿರದಲ್ಲಿ ನೀರು ಕಾಣಲಿಲ್ಲ. ಕಮಂಡಲು ನೀರು ಇಲ್ಲದೆ ಏನೂ ಮಾಡುವಂತಿಲ್ಲ. ದಾರಿಯಲ್ಲಿ ಇದ್ದ ನದೀ – ಸರೋವರಗಳು ರಾಕ್ಷಸನ ಮಾಯೆಯಿಂದ ನಿರ್ಜಲವಾಗಿ ಕಂಡವು.

ಕೊನೆಗೆ ಕಂಗೆಟ್ಟು ತನ್ನ ತಂದೆಯ ಆಶ್ರಮಕ್ಕೆ ಹೊರಟನು. ಆಗಲೇ ರಾತ್ರಿಯಾಗಿತ್ತು. ಆಶ್ರಮದ ಕಾವಲುಗಾರ ಕುರುಡು ಶೂದ್ರನೊಬ್ಬ ಯವಕ್ರೀತನೆಂದು ತಿಳಿಯದೆ ತಡೆದ. ಹಿಂದೆಯೇ ಬೆನ್ನು ಹತ್ತಿ ಬರುತ್ತಿದ್ದ ರಾಕ್ಷಸನ್ನು ಯವಕ್ರೀತನನ್ನು ತ್ರಿಶೂಲದಿಂದ ಇರಿದು ಕೊಂದೇ ಬಿಟ್ಟನು. ಯವಕ್ರೀತನು ತನ್ನ ಆಶ್ರಮದ ಮುಂದೆಯೇ ಮರಣಿಸಿದ.

ಹೀಗೆ ಕಾಮಾತುರನಾದ ಫಲವಾಗಿ ಬುದ್ಧಿ ಭ್ರಂಶವಾಗಿ ಕೊನೆಗೆ ತನ್ನ ಸಾವಿಗೆ ತಾನೇ ಕಾರಣನಾದ. ('ಕಾಮಾತುರಾಣಾಂ ನ ಭಯಂ, ನ ಲಜ್ಜಾ' ಎಂಬ ಮಾತು ಸತ್ಯವಾಯಿತು.) ಹೀಗೆ ರೈಭ್ಯರ ಆಜ್ಞೆಯನ್ನು ಪೂರೈಸಿದ ರಾಕ್ಷಸನು ಆ ಯುವತಿಯೊಡನೆ ವಾಸಿಸಿದ.

**'ಸಂಗಾತ್ ಸಂಜಾಯತೇ ಕಾಮಃ....... ಬುದ್ಧಿನಾಶಾತ್ ಪ್ರಣಶ್ಯತಿ.'**

**– ಗೀತೆ(೨/೬೩)**

ಬೆಳಗಾದ ಮೇಲೆ ಇತ್ತ ಭರದ್ವಾಜರು ಪಾತ್ರರಾಹ್ನೀಕ ಸ್ವಾಧ್ಯಾಯಗಳನ್ನು ಮುಗಿಸಿಕೊಂಡು ಆಶ್ರಮಕ್ಕೆ ಬಂದರು. ಪ್ರತಿನಿತ್ಯ ಸ್ವಾಗತಿಸಲು ಬರುತ್ತಿದ್ದ ದಕ್ಷಿಣಾಗ್ನಿ, ಗಾರ್ಹಪತ್ಯ, ಆ ಹವನೀಯಾಗ್ನಿಗಳು ಅಂದು ಬರಲಿಲ್ಲ. ಕಾರಣ ಆಶ್ರಮ ಅಶುಚಿಯಾಗಿತ್ತು. ಭರದ್ವಾಜರು ದ್ವಾರಪಾಲಕನಾದ ಆ ಕುರುಡ ಶೂದ್ರನನ್ನು ಇಂದು

ಏಕೆ? ನೀನೂ ಮೊದಲಿನಂತೆ ಸಂತೋಷ ತೋರುತ್ತಿಲ್ಲ. ಅಗ್ನಿಗಳೂ ಕಾಣುತ್ತಿಲ್ಲ. ಯಾವ ಅನರ್ಥ ಜರುಗಿದೆ? ನನ್ನ ಮಗನು ರೈಭ್ಯರ ತಂಟೆಗೇನಾದರೂ ಹೋದನೇ? ಹೇಳು? ಎಂದಾಗ ಶೂದ್ರಕಾವಲುಗಾರ ನಡೆದುದೆಲ್ಲ ಹೇಳಿದಾಗ ಭರದ್ವಾಜರು ಮರುಗಿ ಮಿಡುಕಿದರು. ಮಗನ ಮರಣವು ಅವರನ್ನೂ ಶೋಕಸಾಗರದಲ್ಲಿ ಮುಳುಗಿಸಿತು. ಎಲ್ಲ ಬ್ರಾಹ್ಮಣರ ಒಳಿತಿಗಾಗಿ ತಪಸ್ಸನ್ನು ಮಾಡಿದ ಅವನ ಗುಣ ಕೊಂಡಾಡಿದರು. ರೈಭ್ಯರ ಗೊಡವೆಗೆ ಹೋಗಬಾರದಾಗಿತ್ತೆಂಬ ತಮ್ಮ ಮಾತನ್ನು ಮರೆತ ಮಗನ ಬಗ್ಗೆ ಶೋಕಿಸಿದರು.

**'ಬ್ರಾಹ್ಮಣಾನಾಂ ಕಿಲಾರ್ಥಾಯ ನನುತ್ವಂ ತಪ್ತವಾಂಸ್ತಪಃ ।**
**ದ್ವಿಜಾನಾಮನಧೀತಾ ವೈ ವೇದಾಃ ಸಂಪ್ರತಿಭಾಂತ್ವಿತಿ ॥'**

**–ವನಪರ್ವ(೧೩೭/೧೦)**

ನನಗೆ ಇರುವುದು ಒಬ್ಬನೇ ಮಗ. ಇದನ್ನು ತಿಳಿದೂ ಕೂಡಾ ರೈಭ್ಯನು ನನ್ನ ಮಗನ ಮರಣಕ್ಕೆ ಕಾರಣನಾದನಲ್ಲ. ಆದ್ದರಿಂದ ರೈಭ್ಯನೂ ತನ್ನ ಜ್ಯೇಷ್ಠಮಗನಿಂದ ಹತನಾಗಲಿ ಎಂದು ಭರದ್ವಾಜರು ಕೋಪ ಶೋಕಗಳ ಭರದಲ್ಲಿ ರೈಭ್ಯರನ್ನು ಶಪಿಸಿದರು.

**ಪ್ರತಿಷಿದ್ಧೋ ಮಯಾ ತಾತ ರೈಭ್ಯಾವಸಥದರ್ಶನಾತ್ ।**

**ಯಃ ಸ ಜಾನನ್ ಮಹಾತೇಜಾ ವೃದ್ಧಸ್ಯೈಕಂ ಮಮಾತ್ಮಜಂ ।**
**ತ್ಯಕ್ಷ್ಯಾಮಿ ತ್ವಾಮೃತೇ ಪುತ್ರ ಪ್ರಾಣಾನಿಷ್ಟತಮಾನ್ ಭುವಿ ।**
**ಯಥಾಹಂ ಪುತ್ರಶೋಕೇನ ದೇಹಂ ತ್ಯಕ್ಷ್ಯಾಮಿ ಕಿಲ್ಬಿಷೀ ।**
**ತಥಾಜ್ಯೇಷ್ಠಃ ಸುತೋ ರೈಭ್ಯಂ ಹಿಂಸ್ಯಾಚ್ಛೀಘ್ರಮನಾಗಸಂ । ೧೩೭–೧೨–೧೫**

ಹೀಗೆ ತನ್ನ ಸ್ನೇಹಿತನನ್ನು ಶಪಿಸಿದ ಭರದ್ವಾಜರು ಮತ್ತೆ ಪಶ್ಚಾತ್ತಾಪದಿಂದ ತಾವು ಶಪಿಸಿದ್ದು ಮಹಾಪಾಪಕರವೆಂದೇ ಭಾವಿಸಿ ದುಃಖಿಸಿದರು.

**'ಶಪಂತೀಷ್ಟಾನ್ ಸಖೀನಾರ್ತಾಸ್ತೇಭ್ಯಃ ಪಾಪತರೋ ನು ಕಃ ।**

ಪುತ್ರಶೋಕದಿಂದ ನನ್ನ ಸಖನಾದ ರೈಭ್ಯರನ್ನೂ ಕಳೆದುಕೊಂಡೆನಲ್ಲ ಎಂದು ಮತ್ತೆ ಮತ್ತೆ ಶೋಕಿಸಿದ ಭರದ್ವಾಜರು ಮಗನ ಅಂತ್ಯಕ್ರಿಯೆ ಮಾಡಿ ಕೊನೆಗೆ ತಾವು ಅದೇ ಅಗ್ನಿಯಲ್ಲಿ ಪ್ರವೇಶಿಸಿ ಪ್ರಾಣ ತೊರೆದರು.

**'ವಿಲಪ್ಯೈವಂ ಬಹುವಿಧಂ ಭರದ್ವಾಜೋಽದಹತ್ ಸುತಂ ।**
**ಸುಸಮಿದ್ಧಂ ತತಃ ಪಶ್ಚಾತ್ ಪ್ರವಿವೇಶ ಹುತಾಶನಂ ॥' ೧೩೭–೧೯**

ಇದೇ ಸಮಯದಲ್ಲಿ ರೈಭ್ಯನ ಶಿಷ್ಯನಾದ **ಬೃಹದ್ದ್ಯುಮ್ನ** ಭೂಪತಿಯು ಒಂದು ಸತ್ರವನ್ನು ಆರಂಭಿಸಿ ಅದಕ್ಕೆ ರೈಭ್ಯನ ಮಕ್ಕಳಾದ **ಅರ್ವಾವಸು** ಹಾಗೂ **ಪರಾವಸು**ಗಳನ್ನು ಸಹಾಯಕರನ್ನಾಗಿ ವರಿಸಿದರು. ತಂದೆಯಿಂದ ಅನುಮತಿ ಪಡೆದ

ಇವರು ಸತ್ರಕ್ಕೆ ತೆರಳಿದರು. ಆಶ್ರಮದಲ್ಲಿ ಪರಾವಸುವಿನ ಹೆಂಡತಿ ಹಾಗೂ ಮಾವ ರೈಭ್ಯರು ಇದ್ದರು.

ಸತ್ರ ನಡೆಯುತ್ತಿರುವ ಸಮಯದಲ್ಲಿ ಪರಾವಸು ಮನೆಗೆ ರಾತ್ರಿ ಪತ್ನಿಯನ್ನು ಕಾಣಲು ಬರುತ್ತಿದ್ದನು. ಒಂದು ರಾತ್ರಿ ಹೀಗೆ ಬಂದಾಗ ವನದಲ್ಲಿ ರೈಭ್ಯರು ಕಪ್ಪು ಚರ್ಮ ಹೊದ್ದು ಬರುತ್ತಿರುವಾಗ ದಾರಿಯಲ್ಲಿ ಬಂದ ಪರಾವಸು ಇದೊಂದು ಕ್ರೂರಮೃಗವೆಂದು ಭ್ರಮಿಸಿ ತನ್ನ ರಕ್ಷಣೆಗಾಗಿ ಅದನ್ನು ಕೊಂದುಬಿಟ್ಟನು. ಅದು ಅಯ್ಯೋ ಎಂದು ಕೂಗುತ್ತಾ ಪ್ರಾಣ ಬಿಡಲು ಪರಾವಸು ಯಾರೆಂದು ಪರೀಕ್ಷಿಸಿದಾಗ ತಾನು ಕೊಂದುದು ತನ್ನ ತಂದೆ ಎಂದೇ ತಿಳಿದು ದುಃಖಿಸಿ ಪ್ರೇತಕಾರ್ಯಗಳನ್ನು ಮಾಡಿದನು.

ನಂತರ ಯಾಗಮಂಟಪಕ್ಕೆ ಹೋಗಿ ತನ್ನ (ತಮ್ಮ) ಸಹೋದರ ಅರ್ವಾವಸುವಿಗೆ ನಡೆದುದನ್ನು ಹೇಳಿ, ತಾನು ಬ್ರಹ್ಮಹತ್ಯಾ-ಪಿತೃಹತ್ಯೆ ಗೈದಿರುವುದನ್ನು ಅದರ ವಿಮೋಚನೆಗಾಗಿ ಅರ್ವಾವಸುವು ಪ್ರಾಯಶ್ಚಿತ್ತಾದಿಗಳನ್ನು ಮಾಡಲು ತಿಳಿಸಿದ. ಅಣ್ಣನ ಹಿತಕ್ಕೋಸ್ಕರ ಅರ್ವಾವಸು 'ಅಣ್ಣಾ, ಈ ಬೃಹದ್ದ್ಯುಮ್ನ ಯಾಗ ನೀನು ಪೂರೈಸು. ನಾನು ನಿನ್ನ ಪಾಪವಿಮೋಚನೆಗಾಗಿ ಜಿತೇಂದ್ರಿಯನಾಗಿದ್ದುಕೊಂಡು ವ್ರತಾನುಷ್ಠಾನ ಮಾಡುವೆನು' ಎಂದು ಹೇಳಿ ಹೊರಟನು.

ಅಲ್ಲದೆ ಹೇಳಿದಂತೆ ಅಣ್ಣ ಪಾಪವಿಮೋಚನೆಗಾಗಿ ವ್ರತಾನುಷ್ಠಾನಗಳನ್ನು ಮಾಡಿ ಮತ್ತೆ ಯಾಗಮಂಟಪಕ್ಕೆ ಬರಲು ಪರಾವಸುವು ಸಂತಸಗೊಂಡರೂ ರಾಜನನ್ನು ಕುರಿತು ಹೀಗೆ ನುಡಿದ:

**'ಏಷ ತೇ ಬ್ರಹ್ಮಹಾ ಯಜ್ಞಂ ಮಾ ದ್ರಷ್ಟುಂ ಪ್ರವಿಶೇದಿತಿ।**
**ಬ್ರಹ್ಮಹಾ ಪ್ರೇಕ್ಷಿತೇನಾಪಿ ಪೀಡಯೇತ್ತ್ವಾಮಸಂಶಯಂ॥** ೧೩೮-೧೩

'ಇವನು (ಅರ್ವಾವಸು) ಬ್ರಹ್ಮಹತ್ಯಾ ಮಾಡಿ ಬಂದಿದ್ದಾನೆ. ಇವನು ಯಜ್ಞ ಮಂಟಪ ಪ್ರವೇಶಿಸದಿರಲಿ. ಇವನು ನಿಸ್ಸಂಶಯವಾಗಿ ನಿನ್ನನ್ನೇ ಪೀಡಿಸಿಯಾನು'.

ಈ ಮಾತನ್ನು ನಂಬಿದ ರಾಜನು ದೂತರೊಡನೆ ಅರ್ವಾವಸುವನ್ನು ಯಜ್ಞ ಮಂಟಪದಿಂದ ಹೊರಗೆ ತಳ್ಳಿಸಿಬಿಟ್ಟ. ಅರ್ವಾವಸು ಎಷ್ಟೇ ವಿನಂತಿಸಿದರೂ ರಾಜದೂತರು, ರಾಜನೂ ನಂಬಲಿಲ್ಲ. ಅಣ್ಣನಿಗೆ ಸಹಾಯ ಮಾಡಲು ಹೋಗಿ ಅಣ್ಣನಿಂದ ಮೋಸಕ್ಕೊಳಗಾದ. ಬ್ರಹ್ಮರ್ಷಿಯಾದ ಅರ್ವಾವಸು ನಿರುಪಾಯನಾಗಿ ವನಕ್ಕೆ ಹೋಗಿ ಸೂರ್ಯನನ್ನು ಕುರಿತು ಮೌನದಿಂದ ಮಹಾತಪಸ್ಸನ್ನು ಕೈಗೊಂಡನು. ತಪಸ್ಸಿಗೆ ಮೆಚ್ಚಿ ('ಓಂ ಘೃಣಿಃ ಸೂರ್ಯ ಆದಿತ್ಯೋಂ' ಎಂಬ ಮತ್ತು ಸೂರ್ಯಮಂತ್ರ ಪ್ರಕಾಶಕ ವೇದ ಮಂತ್ರೋಪಾಸನೆಯ ಫಲವಾಗಿ) ಸೂರ್ಯನು ದರ್ಶನವಿತ್ತನು.

**'ಪ್ರೇಷ್ಯೈರುತ್ಸಾರ್ಯಮಾಣಸ್ತು ರಾಜನ್ನರ್ವಾವಸುಸ್ತದಾ।**
**ನ ಮಯಾ ಬ್ರಹ್ಮಹತ್ಯೇಯಂ ಕೃತೇತ್ಯಾಹ ಪುನಃ ಪುನಃ॥**

ನೈವ ಸ್ಮ ಪ್ರತಿಜಾನಾತಿ ಬ್ರಹ್ಮಹತ್ಯಾಂ ಸ್ವಯಂ ಕೃತಾಂ ।
ಮಮ ಭ್ರಾತ್ರಾಕೃತಮಿದಂ ಮಯಾ ಸ ಪರಿಮೋಕ್ಷಿತಃ ॥

ತೂಷ್ಣಿಂ ಜಗಾಮ ಬ್ರಹ್ಮರ್ಷಿರ್ವನಮೇವ ಮಹಾತಪಾಃ ।
ಉಗ್ರಂ ತಪಃ ಸಮಾಸ್ಥಾಯ ದಿವಾಕರಮಥಾಶ್ರಿತಃ ॥

ರಹಸ್ಯವೇದಂ ಕೃತವಾನ್ ಸೂರ್ಯಸ್ಯ ದ್ವಿಜಸತ್ತಮ ॥
ಮೂರ್ತಿಮಾಂಸ್ತಂ ದದರ್ಶಾಥ ಸ್ವಯಮಗ್ರ ಭುಗವ್ಯಯಃ ॥

೩೮-೧೪ ರಿಂದ ೧೮

ಅಲ್ಲದೆ ದೇವತೆಗಳು ಅರ್ವಾವಸುವಿನ ಈ ತಪಸ್ಸಿನಿಂದ ಪ್ರೀತರಾದರಲ್ಲದೆ ಅವನನ್ನೇ (ಬೃಹದ್ಯುನನ ಯಜ್ಞದ) ಮುಖ್ಯ ಪುರೋಹಿತನನ್ನಾಗಿ ವರಿಸಲು ರಾಜನಿಗೆ ನಿರ್ದೇಶಿಸಿದರು. ಪರಾವಸುವನ್ನು ದೇವತೆಗಳು ನಿರಾಕರಿಸಿದರು.

ನಂತರ ಅಗ್ನ್ಯಾದಿ ದೇವತೆಗಳು ಅರ್ವಾವಸುವಿಗೆ ವರವನ್ನು ನೀಡಿದರು. ಅರ್ವಾವಸುವು ತಂದೆಯು ಬದುಕಲಿ, ಸಹೋದರನಾದ ಪರಾವಸುವಿನ ನಿರಪರಾಧಿತ್ವ, ತಂದೆಗೆ ಪರಾವಸುವಿನಿಂದಾದ ಮರಣದ ಸ್ಮರಣೆಯಾಗದಿರಲಿ, ಭರದ್ವಾಜರು ಹಾಗೂ ಯವಕ್ರೀತರು ಜೀವಂತರಾಗಲಿ ಮತ್ತು ಸೂರ್ಯಸಂಬಂಧಿ ವೇದಮಂತ್ರ ಪಠಣ ಮಾಡಿದವರಿಗೆ ಅಪಾರ ಫಲ ಉಂಟಾಗಲಿ ಎಂಬ ವರಗಳನ್ನು ಕೇಳಲು ದೇವತೆಗಳು **'ತಥಾಸ್ತು'** ಎಂದರು. ಕೂಡಲೇ ದೇವತಾನುಗ್ರಹದಿಂದ ರೈಭ್ಯ ಭರದ್ವಾಜ ಹಾಗೂ ಯವಕ್ರೀತರು-ಎಲ್ಲರೂ ಜೀವಂತವಾಗಿ ಎದ್ದರು.

'ತಂ ತೇ ಪ್ರವರಯಾಮಾಸುರ್ನಿರಾಸುಶ್ಚ ಪರಾವಸುಮ್ ।
ತತೋ ದೇವಾ ವರಂ ತಸ್ಮೈದದುರಗ್ನಿ ಪುರೋಗಮಾಃ ॥

ಸ ಚಾಪಿ ವರಯಾಮಾಸ ಪಿತುರುತ್ಥಾನ ಮಾತ್ಮನಃ ।
ಅನಾಗಸ್ತ್ವಂ ತತೋಭ್ರಾತುಃ ಪಿತುಶ್ಚಾ ಸ್ಮರಣಂ ವಧೇ ॥

ಭರದ್ವಾಜಸ್ಯ ಚೋತ್ಥಾನಂ ಯವಕ್ರೀತಸ್ಯ ಚೋಭಯೋಃ ।
ಪ್ರತಿಷ್ಠಾಂ ಚೈವ ವೇದಸ್ಯ ಸೌರಸ್ಯ ದ್ವಿಜಸತ್ತಮಃ ।
ಏವಮಸ್ತ್ವಿತಿ ತಂದೌದೇವಾ ಪ್ರೋಚುಶ್ಚಾಪಿ ವರಾನ್ ದದುಃ ॥

ತತಃ ಪ್ರಾದುರ್ಬಭೂವುಸ್ತೇ ಸರ್ವ ಏವ ಯುಧಿಷ್ಠಿರ' ॥

೧೩೮- ೨೦ ರಿಂದ ೨೩

ಯವಕ್ರೀತನು ಅಗ್ನಿ ಮೊದಲಾದ ದೇವತೆಗಳನ್ನು 'ನಾನು ವೇದಾಧ್ಯಯನ ಮಾಡಿದ್ದೇನೆ. ವ್ರತಾಚರಣೆಗಳನ್ನೂ ಮಾಡಿದ್ದೇನೆ. ಹಾಗಿದ್ದರೂ ತಪಸ್ವಿಯಾದ ನನ್ನನ್ನು ರೈಭ್ಯನು ಹೇಗೆ ತಾನೇ ಕೊಲ್ಲಲು ಸಮರ್ಥನಾದಾನು?' ಎಂದು ಕೇಳಿದನು. ಅದಕ್ಕೆ

ದೇವತೆಗಳು ಯವಕ್ರೀತ! 'ನೀನು ಹಿಂದೆ ಮಾಡಿದಂತೆ ಮುಂದೆ ಮಾಡಬೇಡ. ನೀನು ಗುರುಗಳ ಸೇವೆ ಮಾಡದೆಯೇ ಹಿಂದೆ ವೇದಾಧ್ಯಯನ ಮಾಡಿರುವೆ. ವರದಿಂದ ಮಾತ್ರ ವೇದಗಳು ಪ್ರತಿಭಾತವಾಗಿವೆ. ಆದರೆ ರೈಭ್ಯನಾದರೋ ಗುರುಗಳನ್ನು ತುಂಬಾ ಸೇವಿಸಿ (ಕ್ಲೇಶಗಳನ್ನು ಅನುಭವಿಸಿ) ಬಹುಕಾಲದವರೆಗೆ ವೇದಾಧ್ಯಯನವನ್ನು ಸಂಪ್ರದಾಯಬದ್ಧವಾಗಿ ಅಧ್ಯಯನ ಮಾಡಿದ್ದಾನೆ. ಆದ್ದರಿಂದ ಅವನಲ್ಲಿ ಅಂತಹ ಶಕ್ತಿ ಇರುವುದು ಸಹಜ.' ಎಂದರು.

ಹೀಗೆ ಯವಕ್ರೀತಗೆ ತಿಳಿಹೇಳಿದ ಅಗ್ನ್ಯಾದಿ ದೇವತೆಗಳು ರೈಭ್ಯ, ಭರದ್ವಾಜ, ಯವಕ್ರೀತರನ್ನು ಬದುಕಿಸಿ ಸ್ವರ್ಗಕ್ಕೆ ಮರಳಿದರು'.

ಎಲೈ ಧರ್ಮರಾಜನೇ! ಇದೇ ಆ ಪುಣ್ಯಕ್ಷೇತ್ರ, ಇಲ್ಲಿ ನೀನು ಕೆಲವು ಕಾಲ ವಾಸ ಮಾಡಿ ಸರ್ವಪಾಪವನ್ನೂ ಕಳೆದುಕೊಳ್ಳವೆ ಎಂದು ಲೋಮಶರು ಉಪದೇಶಿಸಿದರು.

## ಯವಕ್ರೀತೋಪಾಖ್ಯಾನ ಸಂದೇಶಗಳು:

1. ಮಧುವಿಲಾ ನದಿಯಲ್ಲಿ ಸ್ನಾನ ಮಾಡಿದಲ್ಲಿ (ಭಕ್ತಿಯಿಂದ) ದೈಹಿಕ ನ್ಯೂನತೆಗಳು ನಾಶವಾಗಿ ಸ್ವಾಭಾವಿಕತೆ ಪಡೆಯುತ್ತೇವೆ. ಆದ್ದರಿಂದಲೇ ಆ ನದಿ **'ಸಮಂಗಾ'** ಎಂದಾಯಿತು. **ಸಮ್-ಸಮ್ಯಕ್ ಅಂಗಾನಿ** (ಯಸ್ಯಾಂ ಸ್ನಾನೇನ) ಇತಿ ಸಮಂಗಾ.

2. ರೈಭ್ಯರ ಸ್ವಾಭಾವಿಕ ಜನಪ್ರಿಯತೆ ನೋಡಿ ಯವಕ್ರೀತ ಅಸೂಯೆಪಟ್ಟು ಅದಕ್ಕಾಗಿ ತಪಸ್ಸು ಮಾಡಿ-ವರ ಪಡೆದರೂ ವ್ಯರ್ಥವಾಯಿತು. ತಾನೂ ನಷ್ಟವಾಗಿ-ತಂದೆ ಹಾಗೂ ತಂದೆಯ ಸ್ನೇಹಿತನಾದ ರೈಭ್ಯರ ನಾಶ ಹೀಗೆ ಸರಣಿ ನಾಶಗಳಿಗೆ ಕಾರಣವಾಯಿತು. ಕಾರಣ **ಇತರರ ಪ್ರಗತಿಯ ಬಗ್ಗೆ ಎಂದೂ ಅಸೂಯೆ ಪಡಬಾರದು**.

3. ಯವಕ್ರೀತ ಮಾಡಿದ **ತಪಸ್ಸೂ ಕೂಡಾ ತಾಮಸ**. ದೇಹದ ಅಂಗಾಂಗಳನ್ನೇ ಹವಿಸ್ಸನ್ನಾಗಿ ಅರ್ಪಿಸುವುದು **ಸಾತ್ವಿಕ ಫಲಕ್ಕೆ ಕಾರಣವಾಗದು**. ಆದ್ದರಿಂದಲೇ ಇಂದ್ರದೇವರು ಅಂತಹ ತಪಸ್ಸನ್ನು ಪರೋಕ್ಷವಾಗಿ ಮೆಚ್ಚಲಿಲ್ಲ.

4. ಯವಕ್ರೀತನ ಒಳ ಉದ್ದೇಶ ರೈಭ್ಯ ಕುಟುಂಬದ ಜನಪ್ರಿಯತೆಯನ್ನು ತಾನೂ-ತಂದೆಯೂ ಮೆಟ್ಟಿ ನಿಲ್ಲುವುದಾಗಿತ್ತು. ಆದರೆ ತೋರಿಕೆಯ ಮಾತುಗಳು ಜನಪ್ರಿಯತೆಯವು. ಎಲ್ಲ ಬ್ರಾಹ್ಮಣರೂ ಗುರೂಪದೇಶವಿಲ್ಲದೆ- ಅಧ್ಯಯನವಿಲ್ಲದೆ-ವೇದವೇದಾಂಗ ಪಾರಂಗತರಾಗಬೇಕು-ಕೇಳಲು ರಮ್ಯ. ಆದರೆ ಸಂಪ್ರದಾಯ, ಶಾಸ್ತ್ರವಿಧಿಗಳ ವಿರೋಧಿ. **ಆದ್ದರಿಂದ ಜನಪ್ರಿಯ ಘೋಷಣೆಗಳು ವಾಸ್ತವ ನೆಲೆಗಟ್ಟಿನಿಂದ ಕೂಡಿರುವುದಿಲ್ಲ**. ಯವಕ್ರೀತನ ಉದ್ದೇಶವೂ ಅಂತಹುದೇ.

ಆದ್ದರಿಂದಲೇ ತಂದೆಯೇ ಅದನ್ನು ಮೆಚ್ಚಲಿಲ್ಲ. ಇಂದ್ರ ದೇವರೂ ಮೆಚ್ಚಲಿಲ್ಲ. ಅವರು ಗುರೂಪಸತ್ತಿ ಮಾಡಿ ಗುರುಗಳ ಸೇವೆ ಮಾಡಿ ವೇದಾಧ್ಯಯನ ಮಾಡಲು ಆದೇಶಿಸುತ್ತಾರೆ. ಯೋಗ್ಯ ಪ್ರಯತ್ನವಿಲ್ಲದೆ ಯಾವ ಕಾರ್ಯವೂ ನಿರೀಕ್ಷಿತಫಲ ನೀಡದು. ಆದ್ದರಿಂದಲೇ ಆಚಾರ್ಯರು '**ಪ್ರಯತ್ನಮೇಕಮಗ್ರತೋ ನಿಧಾಯ ಭೂತಿಮಾಪ್ನುಮಃ** ।' ಎಂದು ಸಂದೇಶ ನೀಡಿದ್ದಾರೆ. (ಮ.ತಾ.ನಿ.–21/98)

5. ಇಂದ್ರದೇವರು ಮನಸ್ಸು ಮಾಡಿದ್ದರೆ ಯವಕ್ರೀತನನ್ನು ಸಂಹರಿಸಬಹುದಿತ್ತು. ಆದರೆ ಅವನು ಬ್ರಾಹ್ಮಣ–ಉತ್ತಮಾಧಿಕಾರಿಯಾದ್ದರಿಂದ ಅವನಿಗೆ ಉಪಾಯದಿಂದಲಾದರೂ ತತ್ವಜ್ಞಾನ ಉಪದೇಶ ಮಾಡಿ ಸನ್ಮಾರ್ಗದಲ್ಲಿ ತರುವವರೆಂದ ಮೇಲೆ ವಾಯುದೇವರ ಬಗ್ಗೆ ಹೇಳಬೇಕೆ? ಆದ್ದರಿಂದಲೇ ಸಂಪ್ರದಾಯದಲ್ಲಿ ತ್ರಿವಿಕ್ರಮ ಪಂಡಿತಾಚಾರ್ಯರ ಈ [1]ಸೂಕ್ತಿ ಬಳಕೆಯಲ್ಲಿದೆ.
6. ಇಂದ್ರದೇವರು ಯವಕ್ರೀತನ ತಪಸ್ಸನ್ನು ವ್ಯರ್ಥಗೊಳಿಸದೆ 'ಎಲ್ಲ ವೇದಗಳು ನಿನಗೆ–ನಿನ್ನ ತಂದೆಗೆ ಪ್ರತಿಭಾತವಾಗಲಿ' ಎಂದು ಆಂಶಿಕವಾಗಿ Partially ಯವಕ್ರೀತನ ಬೇಡಿಕೆ ಈಡೇರಿಸಿ ವರ ನೀಡುತ್ತಾರೆ. ಇದೇ ದೇವತೆಗಳ ಕಾರುಣ್ಯ. '**ನ ದೇವತೋಷಣಂ ವೃಥಾ**' ಎಂಬ ನಿರ್ಣಯದ ಮಾತಿಗೆ ಉದಾಹರಣೆ.
7. ವೇದಾಧ್ಯಯನಕ್ಕೋಸ್ಕರ ಸಾಂಪ್ರದಾಯಿಕವಾಗಿ ಕ್ಲೇಶಪಡದೆ ಬಂದ ವಿದ್ಯೆ ಯವಕ್ರೀತನಿಗೆ ವರವಾಗದೆ ಸಮಾಜಕ್ಕೆ ಕಂಟಕನಾಗಲು ಕಾರಣವಾಯಿತು. ದರ್ಪ ಅವನಲ್ಲಿ ಮನೆ ಮಾಡಿತು. ಕಷ್ಟಪಟ್ಟು ವಿದ್ಯೆ ಬಂದಾಗಲೂ ಮನುಷ್ಯ ಉನ್ಮತ್ತನಾಗಬಹುದು. ಕ್ಲೇಶವಿಲ್ಲದೆ ಬಂದ ಐಶ್ವರ್ಯದಿಂದಂತೂ ಉನ್ಮತ್ತ ನಡೆ – ದರ್ಪದ ವರ್ತನೆಯಲ್ಲಿ ಗತಿ ಕಂಡಿತು ಯವಕ್ರೀತನಲ್ಲಿ. ವಿದ್ಯೆಯಿಂದ ವಿನಯದ ಬದಲು ದರ್ಪ ಬಂತು. ಅದರಿಂದ 'ನನ್ನ ಸಮಾನನಾರು' ಎಂದು ಭಾವಿಸಿ, ರೈಭ್ಯರ ಸೊಸೆಯನ್ನೂ ಬಯಸಿ ನಾಶ ಹೊಂದಿದ ಯವಕ್ರೀತ.

ಮಹಾಭಾರತದ ನಹುಷನ ಪರಿಯೂ ಹೀಗೆಯೇ ಆಯಿತು. ಆತನ ಚಾರಿತ್ರ್ಯ ವರ್ಣಿಸಿದ ಆಚಾರ್ಯರು '**ದರ್ಪಾದೈಚ್ಛತ್ ಶಚೀಮಪಿ**' ಎಂದು ಉದ್ಗರಿಸಿದ್ದಾರೆ. ನಹುಷ ಅಜಗರನಾಗಿ ಬಿದ್ದ ಯವಕ್ರೀತ ಸತ್ತೇ ಹೋದ.

ಹೀಗೆ ಅನಾಯಾಸವಾಗಿ ಬಂದ ವಿದ್ಯೆ ಅನಧಿಕಾರಿಗಳಿಗೆ ಅವರ ಜೀವಕ್ಕೂ ಎರವಾಗುತ್ತದೆ.

'**ದಂಭೋ ದರ್ಪೋऽಭಿಮಾನಶ್ಚ**' (**ಗೀತಾ–೧೬/೪**) ಇವೆಲ್ಲ ತಾಮಸಗುಣ ಗುಣಗಳು. ಆದ್ದರಿಂದ ಐಶ್ವರ್ಯ ಬಂದ ಮೇಲೆ ಎಂದಿಗೂ ದರ್ಪದಿಂದ

1 ಯೇನಾಹಮಿಹ ದುರ್ಮಾರ್ಗಾತ್ ಉಧೃತ್ಯಾಭಿನಿವೇಶಿತಃ ।
ಸಮ್ಯಕ್ ಶ್ರೀವೈಷ್ಣವೇ ಮಾರ್ಗೇ ಪೂರ್ಣಪ್ರಜ್ಞಂ ನಮಾಮ್ಯಹಮ್ ॥

ದೂರವಾಗಿರಬೇಕು. ವಿನಯಶೀಲರಾಗಲು ಪ್ರಯತ್ನಿಸಬೇಕು. ಈ ಬಗ್ಗೆ ನಮ್ಮ ನಡೆಯ ಬಗ್ಗೆ ನಾವೇ ಭಾರೀ ಎಚ್ಚರಿಕೆಯಿಂದ ಇರುವುದು ಸೂಕ್ತ.

ಯವಕ್ರೀತನೇಕೆ? ಇಂದ್ರಾವತಾರಿಯಾದ ಅರ್ಜುನನಿಗೂ ದರ್ಪ ತಪ್ಪಲಿಲ್ಲ. ದರ್ಪದಿಂದ ಅರ್ಜುನನು **'ಅವಮೇನೇsರ್ಜುನಃಕೃಷ್ಣಂ ವಿಪ್ರಸ್ಯ ಶಿಶುರಕ್ಷಣೇ'** ಮ. ತಾ.ನಿ.-೧೮/೨೦

ಬ್ರಾಹ್ಮಣ ಶಿಶುವಿನ ರಕ್ಷಣೆಯ ವಿಷಯದಲ್ಲಿ ಅರ್ಜುನ ಕೃಷ್ಣನನ್ನೂ ಧಿಕ್ಕರಿಸಿದ, ಅವಮಾನಿಸಿದ. ಕರುಣಾಳುವಾದ ಕೃಷ್ಣ ಅರ್ಜುನನಿಗೆ ತನ್ನ ಮಹಿಮಾತಿಶಯ ತೋರಿಸಿ **'ತಸ್ಮಾನ್ನವಿಸ್ಮಯಃ ಕಾರ್ಯಃ ನ ದರ್ಪಶ್ಚ ತ್ವಯಾನಘ'** । ಮ.ತಾ.ನಿ. ೨೧/೫೨ ಎಂದು ದರ್ಪಬಿಡಲು ಪ್ರಚೋದಿಸುತ್ತಾನೆ ಕೃಷ್ಣ-ಅರ್ಜುನನನ್ನು.

ದುಷ್ಪಪುತ್ರನೆಂದು ತಿಳಿದೂ ಭರದ್ವಾಜರಿಗೆ ವ್ಯಾಮೋಹ- ಮಗ ಸತ್ತಾಗ ಅವರ ಮಾತುಗಳಿಂದ ತಿಳಿಯುತ್ತದೆ. ಅವನ ತಪಸ್ಸಿನ ಹಿನ್ನೆಲೆ ಗೊತ್ತಿದ್ದರೂ ಅವನ ಬಗ್ಗೆ ಶೋಕಿಸುತ್ತಾರೆ. ಪುತ್ರಾದಿ ವ್ಯಾಮೋಹ ಯಾರಿಗೂ ತಪ್ಪದು. ಧೃತರಾಷ್ಟ್ರನಿಗೆ ಅವನ ಮಕ್ಕಳ ತಪ್ಪುಗಳ ಪರಿವೆಯೇ ಇರಲಿಲ್ಲ. ಇಲ್ಲಿ ಹಾಗಿಲ್ಲ. ಯವಕ್ರೀತನ ತಪ್ಪಿನ ಅರಿವಿತ್ತು ಭರದ್ವಾಜರಿಗೆ.

ರೈಭ್ಯನ ಕೋಪ ತನ್ನ ಮಗನ ಸಾವಿಗೆ ಕಾರಣವಾಯಿತೆಂದು ಭ್ರಮಿಸಿ, ಭರದ್ವಾಜರೂ ರೈಭ್ಯನನ್ನು ಶಪಿಸಿ ಪುಣ್ಯ ಕಳೆದುಕೊಳ್ಳುತ್ತಾರೆ. ನಂತರ ಶಾಪಕೊಟ್ಟದ್ದನ್ನು ತಾವೇ ಹಳಿದು ಕೊಳ್ಳುತ್ತಾರೆ. ಹೀಗೆ ಅವರ ವಿವೇಕ-ಅವಿವೇಕಗಳನ್ನು ಒಟ್ಟಿಗೆ ನೋಡುತ್ತೇವೆ. ಇದು ಸಜ್ಜನರ ಲಕ್ಷಣ. ತಪ್ಪು ಮಾಡುತ್ತಾರೆ. ಮಾಡಿ ಪರಿತಪಿಸುತ್ತಾರೆ.

ರೈಭ್ಯರ ಮಕ್ಕಳಲ್ಲಿ ಪರಾವಸು ಹಿರಿಯ. ಅವನು ಪ್ರಮಾದದಿಂದ ತಂದೆಯನ್ನು ಕೊಂದು ಆ ಪಾಪದ ಪ್ರಾಯಶ್ಚಿತ್ತಕ್ಕೆ ತನ್ನ ಸೋದರ ಅರ್ವಾವಸುವನ್ನು ಉಪಾಯದಿಂದ ಕಳಿಸಿ, ಅವನು ಆ ಕೆಲಸಮಾಡಿ ಬಂದ ಮೇಲೆ ಅವನನ್ನೇ (ಅರ್ವಾವಸುವನ್ನೇ) ಬ್ರಹ್ಮಹತ್ಯಾ ಮಾಡಿದ ಪಾಪಿ ಎಂದು ರಾಜನಿಗೆ ದೂರುವುದರಲ್ಲಿ ಪರಾವಸುವಿನ ಸ್ವಾರ್ಥದ ಪರಾಕಾಷ್ಠತೆ ಕಾಣುತ್ತೇವೆ. ಅರ್ವಾವಸುವಿಗೆ ಅನ್ಯಾಯಮಾಡಿ ಯಜ್ಞ ಮಂಟಪದಿಂದ ಹೊರಹಾಕಿಸುತ್ತಾನೆ. ಆದ್ದರಿಂದ ಆಚಾರ್ಯರು ಹೇಳುತ್ತಾರೆ.

**ಪ್ರಾಯಃ ಸ್ವಕಾರ್ಯೇ ಪ್ರದಿಪಾದಿತೇ ಹಿ ಮದೋದ್ಧತಾ ನ ಪ್ರತಿಕರ್ತುಮೀಶತೇ ।**
**- ಮ.ತಾ.ನಿ. ೬-೨೯**

*****

# ಮಾರ್ಕಂಡೇಯಸಮಾಸ್ಯಾಪರ್ವ

## ೪೨. ಮತ್ಸ್ಯೋಪಾಖ್ಯಾನ

ಧರ್ಮರಾಜನ ಅಪೇಕ್ಷೆಯ ಮೇರೆಗೆ ಮಾರ್ಕಂಡೇಯರು ವೈವಸ್ವತಮನುವಿನ ಚರಿತೆಯನ್ನು ಹೇಳುತ್ತಾರೆ. ಭಾಗವತರ ೮ನೇ ಸ್ಕಂಧದ ೨೪ನೇ ಅಧ್ಯಾಯದಲ್ಲೂ ಇದು ಬಂದಿದೆ.

ವಿವಸ್ವಾನ್ ಎಂಬ ಹೆಸರಿನ ಸೂರ್ಯನ ಮಗನೇ ವೈವಸ್ವತಮನು. (ನಾವಿರುವುದು ಈ ಮನ್ವಂತರದಲ್ಲಿಯೇ) ಆತನು ಪ್ರಜಾಪತಿ–ಬ್ರಹ್ಮದೇವನಿಗೆ ಸಮನಾದ ಕಾಂತಿ ಉಳ್ಳವವಾಗಿದ್ದ. **(ಇದೊಂದು ಉಚ್ಚೋಪಮೆ ಹೊರತು ವಸ್ತು ಸ್ಥಿತಿಯಲ್ಲ)** ತನ್ನ ತಪಸ್ಸು, ಓಜಸ್ಸು, ಐಶ್ವರ್ಯಗಳಿಂದಾಗಿ ತಂದೆಯನ್ನೂ ಹಾಗೂ ತಾತನನ್ನೂ ಮೀರಿಸಿದ್ದ ವೈವಸ್ವತ ಮನು.

ಒಮ್ಮೆ **ವಿಶಾಲಾ ಬದರಿ**ಯ ತಪ್ಪಲಲ್ಲಿ ಒಂದೇಕಾಲಿನ ಮೇಲೆ ನಿಂತು, ಎರಡೂ ಕೈಗಳನ್ನೂ ಮೇಲಕ್ಕೆತ್ತಿ ತೀವ್ರವಾದ ತಪಸ್ಸನ್ನು ಮಾಡಿದ. ಅಲ್ಲದೆ ತಲೆ ತಗ್ಗಿಸಿ – ಎವೆಯಿಕ್ಕದ ಕಣ್ಣುಗಳಿಂದ ೧೦೦೦೦ ವರ್ಷಗಳವರೆಗೆ ಘೋರವಾದ ತಪಸ್ಸನ್ನು ಮಾಡಿದ ಹೀಗೆ ಜಟಾಧಾರಿಯಾಗಿ ತಪಸ್ಸು ಮಾಡುತ್ತಿದ್ದ ಮನುವನ್ನು **ಚೀರಿಣೀ** ನದೀ ತೀರಕ್ಕೆ ಬಂದ ಮೀನೊಂದು ಮಾತನಾಡಿಸಿತು.

ಭಗವನ್! ನಾನೊಂದು ಚಿಕ್ಕ ಮೀನು. ಹಿರಿಯ ಮೀನುಗಳಿಂದ ನನಗೆ ಭಯ. ಕಾರಣ ನನ್ನನ್ನು ಅವುಗಳಿಂದ ರಕ್ಷಿಸು. ಕಾರಣ ಚಿಕ್ಕಮೀನುಗಳನ್ನೂ ಹಿರಿಯ ಮೀನುಗಳು ತಿನ್ನುವುದು ಮತ್ಸ್ಯ ಜಾತಿಯಲ್ಲಿ ಸಾಮಾನ್ಯವೇ ಆಗಿದೆ. ನೀನು ನನಗೆ ರಕ್ಷಣೆ ನೀಡಿದಲ್ಲಿ ಪ್ರತಿಯಾಗಿ ನಾನೂ ನಿನಗೆ ಮುಂದೊಮ್ಮೆ ಉಪಕಾರ ಮಾಡಿ ತೀರಿಸುತ್ತೇನೆ ಎಂದಿತು ಮೀನು.

> **'ವಿವಸ್ವತ: ಸುತೋ ರಾಜನ್ ಪ್ರಜಾಪತಿಸಮದ್ಯುತಿ;।**
> **ಓಜಸಾ ತೇಜಸಾ ಲಕ್ಷ್ಯಾ ತಪಸಾ ಚ ವಿಶೇಷತ:।**
> **ಅತಿಚಕ್ರಾಮ ಪಿತರಂ ಮನು: ಸ್ವಂ ಚ ಪಿತಾಮಹಮ್।**
> **ಊರ್ಧ್ವಬಾಹುರ್ವಿಶಾಲಾಯಾಂ ಬದರ್ಯಾಂ ಚ ನರಾಧಿಪ।**
> **ಏಕಪಾದಸ್ಥಿತಸ್ತೀವ್ರಂ ಚಕಾರ ಸುಮಹತ್ತಪ; ।**

ದೂರವಾಗಿರಬೇಕು. ವಿನಯಶೀಲರಾಗಲು ಪ್ರಯತ್ನಿಸಬೇಕು. ಈ ಬಗ್ಗೆ ನಮ್ಮ ನಡೆಯ ಬಗ್ಗೆ ನಾವೇ ಭಾರೀ ಎಚ್ಚರಿಕೆಯಿಂದ ಇರುವುದು ಸೂಕ್ತ.

ಯವಕ್ರೀತನೇಕೆ? ಇಂದ್ರಾವತಾರಿಯಾದ ಅರ್ಜುನನಿಗೂ ದರ್ಪ ತಪ್ಪಲಿಲ್ಲ. ದರ್ಪದಿಂದ ಅರ್ಜುನನು **'ಅವಮೇನೇऽರ್ಜುನಃಕೃಷ್ಣಂ ವಿಪ್ರಸ್ಯ ಶಿಶುರಕ್ಷಣೇ'** ಮ. ತಾ.ನಿ.–೧೮/೨೦

ಬ್ರಾಹ್ಮಣ ಶಿಶುವಿನ ರಕ್ಷಣೆಯ ವಿಷಯದಲ್ಲಿ ಅರ್ಜುನ ಕೃಷ್ಣನನ್ನೂ ಧಿಕ್ಕರಿಸಿದ, ಅವಮಾನಿಸಿದ. ಕರುಣಾಳುವಾದ ಕೃಷ್ಣ ಅರ್ಜುನನಿಗೆ ತನ್ನ ಮಹಿಮಾತಿಶಯ ತೋರಿಸಿ **'ತಸ್ಮಾನ್ನವಿಸ್ಮಯಃ ಕಾರ್ಯಃ ನ ದರ್ಪಶ್ಚ ತ್ವಯಾರ್ನಘ** । ಮ.ತಾ.ನಿ. ೨೧/೫೨ ಎಂದು ದರ್ಪಬಿಡಲು ಪ್ರಚೋದಿಸುತ್ತಾನೆ ಕೃಷ್ಣ–ಅರ್ಜುನನನ್ನು.

ದುಷ್ಟಪುತ್ರನೆಂದು ತಿಳಿದೂ ಭರದ್ವಾಜರಿಗೆ ವ್ಯಾಮೋಹ– ಮಗ ಸತ್ತಾಗ ಅವರ ಮಾತುಗಳಿಂದ ತಿಳಿಯುತ್ತದೆ. ಅವನ ತಪಸ್ಸಿನ ಹಿನ್ನೆಲೆ ಗೊತ್ತಿದ್ದರೂ ಅವನ ಬಗ್ಗೆ ಶೋಕಿಸುತ್ತಾರೆ. ಪುತ್ರಾದಿ ವ್ಯಾಮೋಹ ಯಾರಿಗೂ ತಪ್ಪದು. ಧೃತರಾಷ್ಟ್ರನಿಗೆ ಅವನ ಮಕ್ಕಳ ತಪ್ಪುಗಳ ಪರಿವೆಯೇ ಇರಲಿಲ್ಲ. ಇಲ್ಲಿ ಹಾಗಿಲ್ಲ. ಯವಕ್ರೀತನ ತಪ್ಪಿನ ಅರಿವಿತ್ತು ಭರದ್ವಾಜರಿಗೆ.

ರೈಭ್ಯನ ಕೋಪ ತನ್ನ ಮಗನ ಸಾವಿಗೆ ಕಾರಣವಾಯಿತೆಂದು ಭ್ರಮಿಸಿ, ಭರದ್ವಾಜರೂ ರೈಭ್ಯನನ್ನು ಶಪಿಸಿ ಪುಣ್ಯ ಕಳೆದುಕೊಳ್ಳುತ್ತಾರೆ. ನಂತರ ಶಾಪಕೊಟ್ಟದ್ದನ್ನು ತಾವೇ ಹಳಿದು ಕೊಳ್ಳುತ್ತಾರೆ. ಹೀಗೆ ಅವರ ವಿವೇಕ–ಅವಿವೇಕಗಳನ್ನು ಒಟ್ಟಿಗೆ ನೋಡುತ್ತೇವೆ. ಇದು ಸಜ್ಜನರ ಲಕ್ಷಣ. ತಪ್ಪು ಮಾಡುತ್ತಾರೆ. ಮಾಡಿ ಪರಿತಪಿಸುತ್ತಾರೆ.

ರೈಭ್ಯರ ಮಕ್ಕಳಲ್ಲಿ ಪರಾವಸು ಹಿರಿಯ. ಅವನು ಪ್ರಮಾದದಿಂದ ತಂದೆಯನ್ನು ಕೊಂದು ಆ ಪಾಪದ ಪ್ರಾಯಶ್ಚಿತ್ತಕ್ಕೆ ತನ್ನ ಸೋದರ ಅರ್ವಾವಸುವನ್ನು ಉಪಾಯದಿಂದ ಕಳಿಸಿ, ಅವನು ಆ ಕೆಲಸಮಾಡಿ ಬಂದ ಮೇಲೆ ಅವನನ್ನೇ (ಅರ್ವಾವಸುವನ್ನೇ) ಬ್ರಹ್ಮಹತ್ಯಾ ಮಾಡಿದ ಪಾಪಿ ಎಂದು ರಾಜನಿಗೆ ದೂರುವುದರಲ್ಲಿ ಪರಾವಸುವಿನ ಸ್ವಾರ್ಥದ ಪರಾಕಾಷ್ಠತೆ ಕಾಣುತ್ತೇವೆ. ಅರ್ವಾವಸುವಿಗೆ ಅನ್ಯಾಯಮಾಡಿ ಯಜ್ಞ ಮಂಟಪದಿಂದ ಹೊರಹಾಕಿಸುತ್ತಾನೆ. ಆದ್ದರಿಂದ ಆಚಾರ್ಯರು ಹೇಳುತ್ತಾರೆ.

**ಪ್ರಾಯಃ ಸ್ವಕಾರ್ಯೇ ಪ್ರದಿಪಾದಿತೇ ಹಿ ಮದೋದ್ಧತಾ ನ ಪ್ರತಿಕರ್ತುಮೀಶತೇ ।**
**– ಮ.ತಾ.ನಿ. ೬–೨೯**

*****

# ಮಾರ್ಕಂಡೇಯಸಮಾಸ್ಯಾಪರ್ವ

## ೪೨. ಮತ್ಸ್ಯೋಪಾಖ್ಯಾನ

ಧರ್ಮರಾಜನ ಅಪೇಕ್ಷೆಯ ಮೇರೆಗೆ ಮಾರ್ಕಂಡೇಯರು ವೈವಸ್ವತಮನುವಿನ ಚರಿತೆಯನ್ನು ಹೇಳುತ್ತಾರೆ. ಭಾಗವತರ ೮ನೇ ಸ್ಕಂಧದ ೨೩ನೇ ಅಧ್ಯಾಯದಲ್ಲೂ ಇದು ಬಂದಿದೆ.

ವಿವಸ್ವಾನ್ ಎಂಬ ಹೆಸರಿನ ಸೂರ್ಯನ ಮಗನೇ ವೈವಸ್ವತಮನು. (ನಾವಿರುವುದು ಈ ಮನ್ವಂತರದಲ್ಲಿಯೇ) ಆತನು ಪ್ರಜಾಪತಿ-ಬ್ರಹ್ಮದೇವನಿಗೆ ಸಮನಾದ ಕಾಂತಿ ಉಳ್ಳವನಾಗಿದ್ದ. **(ಇದೊಂದು ಉಚ್ಚೋಪಮೆ ಹೊರತು ವಸ್ತು ಸ್ಥಿತಿಯಲ್ಲ)** ತನ್ನ ತಪಸ್ಸು, ಓಜಸ್ಸು, ಐಶ್ವರ್ಯಗಳಿಂದಾಗಿ ತಂದೆಯನ್ನೂ ಹಾಗೂ ತಾತನನ್ನೂ ಮೀರಿಸಿದ್ದ ವೈವಸ್ವತ ಮನು.

ಒಮ್ಮೆ **ವಿಶಾಲಾ ಬದರಿಯ** ತಪ್ಪಲಲ್ಲಿ ಒಂದೇಕಾಲಿನ ಮೇಲೆ ನಿಂತು, ಎರಡೂ ಕೈಗಳನ್ನೂ ಮೇಲಕ್ಕೆತ್ತಿ ತೀವ್ರವಾದ ತಪಸ್ಸನ್ನು ಮಾಡಿದ. ಅಲ್ಲದೆ ತಲೆ ತಗ್ಗಿಸಿ – ಎವೆಯಿಕ್ಕದ ಕಣ್ಣುಗಳಿಂದ ೧೦೦೦೦ ವರ್ಷಗಳವರೆಗೆ ಘೋರವಾದ ತಪಸ್ಸನ್ನು ಮಾಡಿದ ಹೀಗೆ ಜಟಾಧಾರಿಯಾಗಿ ತಪಸ್ಸು ಮಾಡುತ್ತಿದ್ದ ಮನುವನ್ನು **ಚೀರಿಣೀ** ನದೀ ತೀರಕ್ಕೆ ಬಂದ ಮೀನೊಂದು ಮಾತನಾಡಿಸಿತು.

ಭಗವನ್! ನಾನೊಂದು ಚಿಕ್ಕ ಮೀನು. ಹಿರಿಯ ಮೀನುಗಳಿಂದ ನನಗೆ ಭಯ. ಕಾರಣ ನನ್ನನ್ನು ಅವುಗಳಿಂದ ರಕ್ಷಿಸು. ಕಾರಣ ಚಿಕ್ಕಮೀನುಗಳನ್ನೂ ಹಿರಿಯ ಮೀನುಗಳು ತಿನ್ನುವುದು ಮತ್ಸ್ಯ ಜಾತಿಯಲ್ಲಿ ಸಾಮಾನ್ಯವೇ ಆಗಿದೆ. ನೀನು ನನಗೆ ರಕ್ಷಣೆ ನೀಡಿದಲ್ಲಿ ಪ್ರತಿಯಾಗಿ ನಾನೂ ನಿನಗೆ ಮುಂದೊಮ್ಮೆ ಉಪಕಾರ ಮಾಡಿ ತೀರಿಸುತ್ತೇನೆ ಎಂದಿತು ಮೀನು.

**'ವಿವಸ್ವತ: ಸುತೋ ರಾಜನ್ ಪ್ರಜಾಪತಿಸಮದ್ಯುತಿ;।**
**ಓಜಸಾ ತೇಜಸಾ ಲಕ್ಷ್ಯಾ ತಪಸಾ ಚ ವಿಶೇಷತ:।**
**ಅತಿಚಕ್ರಾಮ ಪಿತರಂ ಮನು: ಸ್ವಂ ಚ ಪಿತಾಮಹಮ್।**
**ಊರ್ಧ್ವಬಾಹುರ್ವಿಶಾಲಾಯಾಂ ಬದರ್ಯಾಂ ಚ ನರಾಧಿಪ।**
**ಏಕಪಾದಸ್ಥಿತಸ್ತೀವ್ರಂ ಚಕಾರ ಸುಮಹತ್ತಪ; ।**

**ಸೋऽತಪ್ಯತ ತಪೋ ಘೋರಂ ವರ್ಷಾಣಾಮಯುತಂ ತದಾ ।**
**ಚೀರಿಣೀಂ ತೀರಮಾಗಮ್ಯ ಮತ್ಸ್ಯೋ ವಚನಮಬ್ರವೀತ್**
**ತ್ರಾತುಮರ್ಹಸಿ ಕರ್ತಾಸ್ಮಿ ಕೃತೇ ಪ್ರತಿಕೃತಂ ತವ'॥**

**ವನಪರ್ವ ೧೮೭- ೨ ರಿಂದ ೬**

ಆ ಮೀನಿನ ಮಾತನ್ನು ಕೇಳಿದ ವೈವಸ್ವತನು ತನ್ನ ಕೈಯಲ್ಲಿ ಅದನ್ನು ಹಿಡಿದುಕೊಂಡು ತನ್ನ ಹತ್ತಿರದಲ್ಲಿಯೇ ಇದ್ದ ಮಣ್ಣಿನ ಹೂಜಿಯಲ್ಲಿ ಅದನ್ನು ಇಟ್ಟನು. ಅದು ಅಲ್ಲಿಯೇ ಬಹುಕಾಲ ಇತ್ತು. ಬೆಳೆಯಿತು. ರಾಜನು ಅದನ್ನು ತನ್ನ ಮಗನಂತೆಯೇ ಸಾಕಿದ. ಅದು ಪಾತ್ರೆಯಷ್ಟೇ ದೊಡ್ಡದಾಗಿ ಬೆಳೆದು ಮತ್ತೆ ರಾಜನನ್ನು ಕುರಿತು 'ನನಗೆ ಈ ಪಾತ್ರೆ ಸಾಕಾಗದು. ಇನ್ನೊಂದು ದೊಡ್ಡ ಸ್ಥಾನವನ್ನು ವಾಸಕ್ಕಾಗಿ ವ್ಯವಸ್ಥೆ ಮಾಡು' ಎಂದಿತು. ಅದರ ಮಾತಿನ ಮೇರೆಗೆ ರಾಜನು ಅದನ್ನು ಒಂದುದೊಡ್ಡ ವಾಪಿ (ಬಾವಿ)ಯಲ್ಲಿ ಹಾಕಿದ. ಅಲ್ಲೂ ಹಲವು ವರ್ಷಗಳನ್ನು ಕಳೆದ ಮೀನು ಆ ಬಾವಿಯನ್ನೇ ಪೂರ್ತಿಯಾಗಿ ಆವರಿಸಿತು. ಎರಡು ಯೋಜನ ಉದ್ದ – ಒಂದು ಯೋಜನ ಅಗಲದ ಬಾವಿಯೂ ಅದಕ್ಕೆ ಸಾಕಾಗಲಿಲ್ಲ. ಮತ್ತೆ ಮೀನು ತನ್ನನ್ನು ಗಂಗೆಯಲ್ಲಿ ಅಥವಾ ಬೇರೆಲ್ಲಾದರೂ ಹಾಕು. ನಾನು ನೀನು ಹೇಳಿದಲ್ಲಿರುವೆ ಎಂದಿತು. ನಂತರ ರಾಜನು ಮೀನನ್ನೂ ಗಂಗೆಯಲ್ಲಿ ಬಿಟ್ಟನು. ಮತ್ತೆ ಕೆಲಕಾಲ ಗಂಗೆಯಲ್ಲಿದ್ದ ಮೀನು ಗಂಗೆಯನ್ನೇ ಪೂರ್ಣವಾಗಿ ಆವರಿಸಿ ಸಮುದ್ರದಲ್ಲಿ ತನ್ನನ್ನು ಬಿಡಲು ಹೇಳಲು ರಾಜನು ಹಾಗೆಯೇ ಮಾಡಿದನು. ಹೀಗೆ ಬೆಳೆದ ಭಾರಿ ಮೀನಿನ ಭಾರ ರಾಜನಿಗೆ ಅನಿಸಲಿಲ್ಲ. ರಾಜನು ಸುಖವಾಗಿ ಎತ್ತಿದ – ಅದರ ವಾಸನೆಯೂ ಆತನಿಗೆ ಬಾಧಿಸಲಿಲ್ಲ. ಸಾಕ್ಷಾತ್ ಭಗವಂತನು ಮೀನಾದರೇನು? ವರಾಹವಾದರೇನು? ಅವನು ಸುಗಂಧಿ!!! (**ಸದ್ದೇಹ : ಸುಖಗಂಧಶ್ಚ... ಪೈಂಗಿ ಖಿಲ** ಶೃತಿ–ಗೀತಾಭಾಷ್ಯ ೨–೨೨)

**'ಸುಮಹಾನಪಿ ಮತ್ಸ್ಯಸ್ತು ಸ ಮನೋರ್ನಯತಸ್ತದಾ।**
**ಆಸೀತ್ ಯಥೇಷ್ಟಹಾರ್ಯಶ್ಚ ಸ್ಪರ್ಶಗಂಧಸುಖಸ್ಯ ವೈ ॥ ೧೮೭–೨೫**

ಸಮುದ್ರಕ್ಕೆ ಬಂದ ಮೀನು ರಾಜನನ್ನು ಕುರಿತು 'ರಾಜನ್ ನನ್ನ ರಕ್ಷಣೆಯನ್ನು ನೀನು ವಿಶೇಷವಾಗಿಯೇ ಮಾಡಿದೆ. ಇಷ್ಟರಲ್ಲಿಯೇ ಈ ಭೂಮಿಯು – ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವೆಲ್ಲ ಪ್ರಲಯದಲ್ಲಿ ಸಿಲುಕಿ ಜಲಮಯವಾಗುತ್ತದೆ. ಪ್ರಲಯಕಾಲ ಸಮೀಪಿಸುತ್ತಿದೆ. ಭಯಂಕರ ಕಾಲವದು. ಆಗ ನಿನಗೆ ಹಿತವಾದುದನ್ನು ಹೇಳುತ್ತೇನೆ. ಅದರಂತೆ ಮಾಡು, ಒಂದು ಭದ್ರವಾದ ನಾವೆ ಸಿದ್ಧಪಡಿಸು. ಸಪ್ತರ್ಷಿಗಳೊಡನೆ ಅದನ್ನು ಏರಿ ಕುಳಿತುಕೊ. ಬ್ರಾಹ್ಮಣರ ಹೇಳಿಕೆ ಮೇರೆಗೆ ಮೊದಲೇ ಎಲ್ಲ ಬೀಜಗಳನ್ನು ಪ್ರತ್ಯೇಕವಾಗಿ ಅಲ್ಲಿ ಇಟ್ಟುಕೊ. ನನ್ನ ಸಲುವಾಗಿ ಕಾಯುತ್ತಿರು. ನಾನು ಮತ್ಸ್ಯರೂಪಿಯಾಗಿ ಬರುವೆ. ನನ್ನ ತಲೆಯಲ್ಲಿ ಒಂದು ಕೋಡು ಇರುತ್ತದೆ. ಆ ಕೋಡಿಗೆ ಹಗ್ಗದಿಂದ ನಾವೆಯನ್ನು ಬಿಗಿಯಾಗಿ ಕಟ್ಟು. ನಾನೀಗ ಹೋಗುವೆ.

ಬರಲಿರುವ ಪ್ರಲಯೋದಕವನ್ನು ನೀನು ನನ್ನ ಸಹಾಯವಿಲ್ಲದೆ ದಾಟಲಾರೆ. ನಾನು ಹೇಳಿದ್ದನ್ನು ತಪ್ಪದೆ ಮಾಡು.'

'ಹಾಗೆಯೇ ಮಾಡುವೆನು' ಎಂದು ನುಡಿದ ವೈವಸ್ವತ. ಮತ್ಸ್ಯರೂಪಿ ಭಗವಂತ ಹಾಗೂ ರಾಜನು-ಪರಸ್ಪರರು ತಮ್ಮ ನಿಗದಿತ ಸ್ಥಳಗಳಿಗೆ ಹೊರಟರು.

**'ಅಚಿರಾದ್ಭಗವನ್ ಭೌಮಮಿದಂ ಸ್ಥಾವರ ಜಂಗಮಂ ।**
**ಸರ್ವಮೇವ ಮಹಾಭಾಗ ಪ್ರಲಯಂ ವೈ ಗಮಿಷ್ಯತಿ ।**
**ತಸ್ಮಾತ್ತ್ವಾಂ ಬೋಧಯಾಮ್ಯದ್ಯ ಯತ್ತೇ ಹಿತಮನುತ್ತಮಮ್ ।**
**ನೌಶ್ಚ ಕಾರಯಿತವ್ಯಾ ತೇ....**

**ತತ್ರ ಸಪ್ತರ್ಷಿಭಿ : ಸಾರ್ಧಮಾರುಹೇಥಾ ಮಹಾಮುನೇ ।**
**ಆಗಮಿಷ್ಯಾಮ್ಯಹಂ ಶೃಂಗೀ ವಿಜ್ಞೇಯಸ್ತೇನ ತಾಪಸ ।**
**ತಾ ನ ಶಕ್ಯಾ ಮಹತ್ಯೋ ವೈ ಆಪಸ್ತರ್ತುಂ ಮಯಾ ವಿನಾ' ॥**

**ಅ. ೧೮೭ – ೨೮ ರಿಂದ ೩೪**

ಭಗವಂತನ ಆದೇಶದಂತೆ ರಾಜನು ಪ್ರಲಯಕಾಲ ಪ್ರತೀಕ್ಷೆ ಮಾಡಿದ. ನೌಕೆ ಸಿದ್ಧಗೊಳಿಸಿ ಸಪ್ತರ್ಷಿಗಳು, ಬೀಜಗಳೊಡನೆ ನೌಕೆ ಏರಿ ಮತ್ಸ್ಯವನ್ನೇ ಚಿಂತಿಸುತ್ತಾ ಇರಲು ಚಿಂತಾಮಣಿಯಾದ ಮತ್ಸ್ಯನು ಶೃಂಗಿಯಾಗಿಯೇ ಬಂದ. ಪರ್ವತದಂತಿದ್ದ ಆ ಕೋಡಿಗೆ ನಾವೆಯನ್ನು ಕಟ್ಟಿದ. ನಂತರ ಭಗವಂತನು ಪ್ರಲಯೋದಕದಲ್ಲಿ ವೇಗವಾಗಿ ನೌಕೆಯನ್ನು ಎಳೆದೊಯ್ದು. ಸಮುದ್ರವನ್ನು ದಾಟಿಸಿದ. ಆ ಮಹಾಸಮುದ್ರದಲ್ಲಿ ಈ ಪುಟ್ಟ ನೌಕೆಯು ಸಮುದ್ರದ ತೆರೆಗಳ ಹೊಡೆತಕ್ಕೆ ಸಿಕ್ಕು ನರ್ತನಮಾಡುವಂತೆಯೂ, ಸಮುದ್ರದ ಭೋರ್ಗರೆತದಿಂದಲೂ ನೌಕೆಯು ಪ್ರಲಯದ ಬಿರುಗಾಳಿಗೆ ಸಿಕ್ಕು ಚಪಲಸ್ತ್ರೀಯಂತೆ ಕಂಗೊಳಿಸಿತು. ಭೂಮಿ, ದಿಕ್ಕುಗಳೂ ಆ ನೀರಿನಲ್ಲಿ ಕಾಣಲಿಲ್ಲ. ಹೀಗೆ ಬಹುವರ್ಷಗಳ ಕಾಲ ಮತ್ಸ್ಯನು ಈ ನಾವೆ ರಾಜ, ಸಪ್ತರ್ಷಿಗಳನ್ನು ಕಾಪಾಡಿದ. ಅವರ ಹೊರತಾಗಿ ಬೇರೆ ಯಾರೂ ಅಲ್ಲಿ ತೋರಲಿಲ್ಲ. ಭೂ, ಸ್ವರ್ಗಗಳೆಲ್ಲವೂ ಜಲಮಯವಾದಾಗ ಯಾರು ತಾನೇ ಕಂಡಾರು!!

**'ಮನುರ್ಮನುಜಶಾರ್ದೂಲ ತಸ್ಮಿನ್ ಶೃಂಗೇ ನ್ಯವೇಶಯತ್ ।**
**ಸಂಯತಸ್ತೇನ ಪಾಶೇನ ಮತ್ಸ್ಯಃ ಪರಪುರಂಜಯ ।**
**ವೇಗೇನ ಮಹತಾ ನಾವಂ ಪ್ರಾಕರ್ಷಲ್ಲವಣಾಂಭಸಿ ।**
**ನೃತ್ಯಮಾನಮಿವೋರ್ಮೀರ್ಭಿರ್ಗರ್ಜಮಾನಮಿವಾಂಭಸಾ ।**
**ಕ್ಷೋಭ್ಯಮಾಣಾ ಮಹಾವಾತೈಃನೌಸ್ತಸ್ಮಿನ್ ಮಹೋದಧೌ ।**
**ಘೂರ್ಣತೇ ಚಪಲೇವ ಸ್ತ್ರೀ ಮತ್ತಾ ಪರಪುರಂಜಯಃ ।**
**ನೈವ ಭೂರ್ಮಿರ್ನ ಚ ದಿಶಃ ಪ್ರದಿಶೋ ವಾ ಚಕಾಶಿರೇ॥**

**ವನಪರ್ವ ೧೮೭– ೪೧ ರಿಂದ ೪೪**

ಹೀಗೆ ಹಲವು ವರ್ಷ ಕಳೆದಾಗ ನಾವೆಯನ್ನು ಮತ್ಸ್ಯನೇ ಎಳೆದು ನಿಲ್ಲಿಸಿದ. ಕಾಲಕ್ರಮದಲ್ಲಿ ನೀರಿನ ಮಟ್ಟ ಕಡಿಮೆಯಾಗುತ್ತಲೇ ಹಿಮಾಲಯ ಪರ್ವತದ ಶಿಖರ ಕಾಣಿಸಿತು. ನಂತರ ಮುಗುಳ್ನಗುತ್ತಾ ಭಗವಂತನು (ಮತ್ಸ್ಯನು) ಹಿಮಾಲಯದ ಶೃಂಗಕ್ಕೆ ನಾವೆಯನ್ನು ಕಟ್ಟಲೆಂದು ಆದೇಶಿಸಲು ಸಪ್ತರ್ಷಿಗಳು ನಾವೆಯನ್ನು ಹಿಮವತ್ ಶೃಂಗಕ್ಕೆ ಬಂಧಿಸಿದರು. ಆ ಶೃಂಗಕ್ಕೆ ಅಂದಿನಿಂದ **ನೌಬಂಧನ**ವೆಂಬ ಹೆಸರು ಬಂತು. ಇಂದೂ ಅದನ್ನು ಹಾಗೆಯೇ ಕರೆಯಲಾಗುತ್ತದೆ. ನಂತರ ಭಗವಂತನು ಋಷಿಗಳನ್ನು ಕುರಿತು–

ನಾನು ಪ್ರಜಾಪತಿ – ಬ್ರಹ್ಮನೂ ನಾನೇ । ನನಗಿಂತ ಉತ್ತಮರು ಯಾರೂ ಇಲ್ಲ. ನೀವು ಮತ್ಸ್ಯರೂಪದ ನನ್ನಿಂದ – ಸಂಸಾರ ಭಯದಿಂದ ಬಿಡುಗಡೆ ಆಗಿದ್ದೀರಿ. ದೇವ ಮನುಷ್ಯ ರಾಕ್ಷಸರೇ ಮೊದಲಾದ ಎಲ್ಲ ಪ್ರಜೆಗಳ ಸೃಷ್ಟಿ ವೈವಸ್ವತಮನುವಿನಿಂದ ಇನ್ನು ಮುಂದೆ ನಡೆಯಲಿ. ತಪಸ್ಸಿನಿಂದ ಈ ಪ್ರಜಾಸೃಷ್ಟಿಗೆ ಬೇಕಾದ ಸಾಮರ್ಥ್ಯವನ್ನು ಮನುವು ಪಡೆಯುವನು. ಅದಕ್ಕೆ ನನ್ನ ಅನುಗ್ರಹವಿರುತ್ತದೆ.' ಹೀಗೆ ನುಡಿದ ಭಗವಂತನು (ಮತ್ಸ್ಯನು) ಅಂತರ್ಧಾನ ಹೊಂದಿದನು.

ಭಗವಂತನ ಆದೇಶದ ಮೇರೆಗೆ ಪ್ರಜಾಸೃಷ್ಟಿಗೆ ಬೇಕಾದ ಸಾಮರ್ಥ್ಯ ಪಡೆಯಲು ಘೋರವಾದ ತಪಸ್ಸನ್ನು ಆರಂಭಿಸಿ ಎಲ್ಲ ಪ್ರಜೆಗಳನ್ನು ಸೃಷ್ಟಿ ಮಾಡಿದನು. ಇದುವೇ **ಮತ್ಸ್ಯಪುರಾಣ**ವೆಂದು ಪ್ರಸಿದ್ಧವಾಗಿದೆ. ಈ ಉಪಾಖ್ಯಾನ (ಮತ್ಸ್ಯೋಪಾಖ್ಯಾನ) ಸಕಲ ಪಾಪ ಹರನಾಗಿದ್ದು ಇದನ್ನು ಶ್ರವಣ ಮಾಡುವವನು (ಈ ಅಧ್ಯಾಯ) ಸಕಲ ಪುರುಷಾರ್ಥ ಹೊಂದಿ ಉತ್ತಮವಾದ ಎಲ್ಲ ಲೋಕಗಳಿಗೂ ಹೋಗಲು ಸಮರ್ಥನಾಗುತ್ತಾನೆ.

**'ಅಥಾಬ್ರವೀತ್ ತದಾ ಮತ್ಸ್ಯಸ್ತಾನೃಷೀನ್ ಪ್ರಹಸನ್ ಶನೈಃ ।**
**ಅಸ್ಮಿನ್ ಹಿಮವತಃ ಶೃಂಗೇ ನಾವಂ ಬಧ್ನೀತ ಮಾ ಚಿರಂ ।**
**ತಚ್ಚ ನೌಬಂಧನಂ ನಾಮ ಶೃಂಗಂ ಹಿಮವತಃ ಪರಮ್ ।**
**ಖ್ಯಾತಮದ್ಯಾಪಿ ಕೌಂತೇಯ ..................... ।**
**ಅಹಂ ಪ್ರಜಾಪತಿ ರ್ಬ್ರಹ್ಮಾ ಮತ್ಪರಂ ನಾಧಿಗಮ್ಯತೇ ।**
**ಮತ್ಸ್ಯರೂಪೇಣ ಯೂಯಂ ಚ ಮಯಾಸ್ಮಾನ್ಮೋಕ್ಷಿತಾ ಭಯಾತ್ ।**
**ಮನುನಾ ಚ ಪ್ರಜಾಃ ಸರ್ವಾಃ ಸದೇವಾಸುರ ಮಾನುಷಾಃ ।**
**ಸ್ರಷ್ಟವ್ಯಾಃ ಸರ್ವಲೋಕಾಶ್ಚ .................... ।**

**ತಪಸಾ ಚಾಪಿ ತೀವ್ರೇಣ ಪ್ರತಿಭಾಸ್ಯ ಭವಿಷ್ಯತಿ ।**
**ಮತ್ಪ್ರಸಾತ್ ಪ್ರಜಾಸರ್ಗೇ ನ ಚ ಮೋಹಂ ಗಮಿಷ್ಯತಿ ।**
**ಸ್ರಷ್ಟುಕಾಮಃ ಪ್ರಜಾಶ್ಚಾಪಿ ಮನುರ್ವೈವಸ್ವತಃ ಸ್ವಯಂ ।**
**ತಪಸಾ ಮಹತಾ ಯುಕ್ತಃ ಸೋಽಥ ಸ್ರಷ್ಟುಂ ಪ್ರಚಕ್ರಮೇ ।**
**ಇತ್ಯೇತನ್ಮಾತ್ಸ್ಯಕಂ ನಾಮ ಪುರಾಣಂ ಪರಿಕೀರ್ತಿತಂ ।**

**ಸರ್ವಪಾಪಹರಂ ಮಯಾ ..................... ।**
**ಸ ಸುಖೀ ಸರ್ವಪೂರ್ಣಾರ್ಥಃ ಸರ್ವಲೋಕಮಿಯಾನ್ನರಃ' ॥**
**– ಅ. ೧೮೭/೪೮–೫೮**

## ಸಂದೇಶಗಳು

೧. ಸ್ವಾಧ್ಯಾಯ, ತಪಸ್ಸುಗಳಿಂದ ಕೂಡಿದ ಜೀವನ ತಮ್ಮ ಹಿಂದಿನವರನ್ನು ಮೀರುವಂತೆ ಮಾಡುತ್ತದೆ. ತಂದೆ ತಾಯಿಗಳನ್ನು ಮೀರಿಸುವಂತೆ ಸಾಧಕರಾಗಲು ಪ್ರಯತ್ನಿಸಬೇಕು. ರಾಗದ್ವೇಷಗಳಿಗೆ ಬಲಿಯಾಗದೆ – ಸ್ಪರ್ಧಾಮನೋ ಭಾವನೆ ಬಿಟ್ಟು, ಸಾಧಕರಗಾಬೇಕು. ವೈವಸ್ವತಮನು ಹಾಗೆ ಬದುಕಿದ.

೨. ಭಗವಂತ ಸಾಧನೆ ಮಾಡಿಸಿ ಫಲ ಕೊಡುತ್ತಾನೆ. ಪ್ರಯತ್ನವಿಲ್ಲದೆ ಫಲ ಸಿಗದು. ನಮ್ಮಿಂದ ಸೇವೆ ಮಾಡಿಸಿಕೊಂಡು ತಾನೇ ಕೃತಜ್ಞತೆ ಹೇಳುತ್ತಾನೆ! ಪ್ರಸ್ತುತಃ ಜೀವರು ಭಗವಂತನಿಗೆ ಕೃತಜ್ಞರೇ ಹೊರತು ಭಗವಂತನಲ್ಲ. ಆದರೆ ಭಗವಂತ ಮನುವಿಗೇ ಕೃತಜ್ಞತೆ ಹೇಳಿ ಮೋಹಗೊಳಿಸಿದಂತೆ ಮಾತನಾಡಿದ. ಮನು ಮೋಹಗೊಳ್ಳಲಿಲ್ಲ. ಮತ್ಸ್ಯನ ಮಾತು (ಮೇಲ್ ನೋಟದ) ಮೋಹಕ.

೩. ಭಗವಂತನ ಆದೇಶ ಪರಿಪಾಲನೆ ನಮಗೆ ಮೋಚಕ. **ಶೃತಿಸ್ಮೃತೀ ಹರೇರಾಜ್ಞೇ** ಅದನ್ನು ಪರಿಪಾಲನೆ ಮಾಡಿ ಸಂಸಾರ ಭಯದಿಂದ ಪಾರಾದವರು. ಮನು ಹಾಗೂ ಸಪ್ತರ್ಷಿಗಳು. ಅದರಂತೆ ಭಗವದಾದೇಶ ಪರಿಪಾಲಕರೆಲ್ಲರೂ ಸಂಸಾರ ಭಯದಿಂದ ದೂರಾಗುತ್ತಾರೆ.

೪. ಮತ್ಸ್ಯನು ತಾನು ಸರ್ವಜ್ಞನೆಂದು ಮನುವಿಗೆ ಮಾಡಿದ ಉಪದೇಶದಿಂದ ತಿಳಿಯುತ್ತದೆ. ಆದ್ದರಿಂದ ಮತ್ಸ್ಯನು ಸಾಮಾನ್ಯ ಮತ್ಸ್ಯನಲ್ಲ. ಸಾಕ್ಷಾತ್ ಶ್ರೀಹರಿಯೇ ಸರಿ. ತಾನೇ ಬ್ರಹ್ಮಾದಿಶಬ್ದ ವಾಚ್ಯನೆಂದೂ ತಾನೇ ಸರ್ವೋತ್ತಮನೆಂದು ಉಪದೇಶಿಸಿದ ವಿದ್ಯೆಯೇ ಪರವಿದ್ಯೆ ಎಂದು ತಿಳಿಯುತ್ತದೆ. ಇದರ ವಿಸ್ತಾರವೇ 'ಮತ್ಸ್ಯ ಪುರಾಣ' ಮತ್ಸ್ಯಾವತಾರವನ್ನು ಆಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದ ೩ನೇ ಅಧ್ಯಾಯದಲ್ಲಿ ಸಂಗ್ರಹಿಸಿದ್ದಾರೆ.

**ಮನ್ವಂತರಪ್ರಲಯೇ ಮತ್ಸ್ಯರೂಪೀ ವಿದ್ಯಾಮದಾನ್ಮನವೇ ದೇವದೇವಃ ।**
**ವೈವಸ್ವತಾಯೋತ್ತಮಸಂವಿದಾತ್ಮಾ ವಿಷ್ಣೋಃ ಸ್ವರೂಪಪ್ರತಿಪತ್ತಿರೂಪಾಮ್ ॥**
**– ಮ. ತಾ। ನಿ. ೩–೪೪.**

೫. ವೈವಸ್ವತ ಮನುವಿಗೆ ಮತ್ಸ್ಯರೂಪಿ ಹರಿಯು ಮುಂದೆ ನಡೆಯುವ ಮನ್ವಂತರ ಪ್ರಲಯದ ವಿವರಣೆಗಳನ್ನೂ, ಆಗ ಮಾಡಬೇಕಾದ ಕಾರ್ಯಗಳೆಲ್ಲವನ್ನು ತಿಳಿಹೇಳಿ – ಎಲ್ಲ ಎಚ್ಚರಿಕೆಗಳನ್ನೂ ಕೊಟ್ಟ. ಶ್ರೇಷ್ಠ ಮಾರ್ಗದರ್ಶಕನಾಗಿದ್ದಾನೆ. ಜೀವರ ಮೋಕ್ಷ ಕೊಡಿಸುವ ಜವಾಬ್ದಾರಿಯ ನಿರ್ವಹಣೆ ಇದರಿಂದ ತಿಳಿದು ಅವನು ನಿಜವಾದ ಅರ್ಥದಲ್ಲಿ ಮಾರ್ಗನೂ ಆಗಿದ್ದಾನೆ. '**ಮಾರ್ಗೋ ನೇಯೋ ನಯೋಽನಯಃ** (ವಿ.ಸ. ನಾಮ)

**ಏಷಪಂಥಾ ಏತತ್ಕರ್ಮ–** ಐತರೇಯೋಪನಿಷತ್ ಆದ್ದರಿಂದ ಮಾರ್ಗದರ್ಶಕ ಹೊಣೆ ಹೊತ್ತವರು ಹೇಗಿರಬೇಕೆಂದೂ ಇದರಿಂದ ತಿಳಿಯುತ್ತದೆ.

೬. ಮತ್ಸ್ಯರೂಪಿ ಭಗವಂತನ ಶರೀರವನ್ನು ಎತ್ತಿ ಅತ್ತಿತ್ತ ಓಡಾಡಿಸಿದ ವೈವಸ್ವತ ಮನುವು ಅನುಭವಿಸಿದ್ದು ಆತನ ಪರಿಮಳೋಪೇತವಾದ ಸದ್ಗಂಧಯುತ ಶರೀರ. ಮತ್ಸ್ಯದ ದುರ್ವಾಸನೆ ಅಲ್ಲಿರಲಿಲ್ಲ. ಇದೊಂದು ಮತ್ಸ್ಯ ನಿಜಕ್ಕೂ ಪ್ರಾಕೃತ ಮತ್ಸ್ಯವಾಗಿರದೆ ಅಪ್ರಾಕೃತ ಸುಗಂಧ ಶರೀರದ್ದು ಎಂದು ಭಾರತವೂ ಹೇಳುತ್ತದೆ. ಆಚಾರ್ಯರು ಗೀತಾ ಭಾಷ್ಯದಲ್ಲೂ ಹೇಳಿರುವುದು ಗಮನಿಸಬೇಕಾದ ಮುಖ್ಯ ವಿಷಯ.

೭. ಭಗವಂತನು ವೈವಸ್ವತಮನುವನ್ನು ತನಗೆ ವಾಸವಾಗಿರಲು ಮೊದಲು ಚಿಕ್ಕಸ್ಥಳವನ್ನು, ನಂತರ ಬಾವಿ, ಗಂಗೆ, ಕೊನೆಗೆ ಸಮುದ್ರವನ್ನೆಲ್ಲಾ ಕೇಳಿದ್ದು ಯಾಚನೆಯಲ್ಲ. ಅದು ಕೇವಲ ಕ್ರೀಡೆಗಾಗಿ ಎಂದು ಆಚಾರ್ಯರು ಭಾಗವತದಲ್ಲಿ ತಾತ್ಪರ್ಯ ಬರೆದಿದ್ದಾರೆ[೧].

೮. ವೈವಸ್ವತ ಮನುವಿಗೆ ಮತ್ಸ್ಯರೂಪಿ ಪರಮಾತ್ಮನು ತನ್ನ ಕಾರುಣ್ಯ ಪೂರ್ಣವಾದ ಚರಿತ್ರೆಯನ್ನು ಜ್ಞಾಪಿಸಿಕೊಟ್ಟ ಚರಿತ್ರೆ ಇದು. ನಮಗೂ ಆಸ್ವಾಮಿಯು ತನ್ನ ಚರಿತ್ರೆಗಳನ್ನು ಸ್ಮರಣೆಗೆ ತಂದು ಕೊಡಲಿ.

'ಕರುಣಾಪೂರ್ಣವರಪ್ರದ ಚರಿತಂ ಜ್ಞಾಪಯ ಮೇ ತೇ' ಎಂಬ ಆಚಾರ್ಯರ (ದ್ವಾದಶ ಸ್ತೋತ್ರದ) ಮಾತಿಗೆ ಇದೊಂದು ಉದಾಹರಣೆ.

೯. ಭಗವಂತನ ಕಾರುಣ್ಯ ಗುಣ ಇಲ್ಲಿ ಓತಪ್ರೋತವಾಗಿ ಹರಿದು ಬಂದಿದೆ.

೧೦. **ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ।** ೭–೨೬

– ಎಂಬ **ಗೀತೆಯ** ಮಾತಿಗೂ ಇದೊಂದು ಉತ್ತಮ ನಿದರ್ಶನ ಭಗವಂತನು ತ್ರಿಕಾಲ ವಿಷಯಕ ಜ್ಞಾನಿ ಎಂಬ ಸಂದೇಶ ಇಲ್ಲಿ ಬಂದಿದೆ. ವಿಶೇಷವಾಗಿ **ಭವಿಷ್ಯಾಣಿ** ಎಂಬ ಮಾತಿಗೆ ಇದು ಅತ್ಯುತ್ತಮ ನಿದರ್ಶನ.

ಇತ್ಯಾದಿ.

*****

---

೧ ಅನಂತಶಕ್ತಿರ್ಭಗವಾನ್ ಮತ್ಸ್ಯರೂಪೀ ಜನಾರ್ದನಃ ।
ಕ್ರೀಡಾರ್ಥಂ ಯಾಚಯಾಮಾಸ ಸ್ವಯಂ ಸತ್ಯವ್ರತಂ ನೃಪಮ್ ॥
– ಭಾಗ..ತಾ.(೮/೨೩/೨೪)

## ೪೩.ಮಂಡೂಕೋಪಾಖ್ಯಾನ

ಮಾರ್ಕಂಡೇಯರನ್ನು ಯುಧಿಷ್ಠಿರನು, ಬ್ರಾಹ್ಮಣರ ಮಹಾತ್ಮೆಯನ್ನು ಮತ್ತೆ ಕೇಳಿದ. (ಹಿಂದಿನ ಅಧ್ಯಾಯಗಳಲ್ಲಿ ಮಾರ್ಕಂಡೇಯರು ತಾವು ಪ್ರಲಯದಲ್ಲಿ ಕಂಡ ಕೃಷ್ಣರೂಪ-ಮಹಿಮೆ-ಕಲಿಯುಗದ ಮಹಿಮೆ-ಬ್ರಾಹ್ಮಣರ ಹಿರಿಮೆ-ಗರಿಮೆಗಳನ್ನು ಹೇಳಿದ್ದರು). ಅದಕ್ಕೆ ಅವರು ಬ್ರಾಹ್ಮಣರ ಚರಿತೆಯನ್ನು ಹೇಳಲು ಉಪಕ್ರಮಿಸಿದರು.

**ಇಕ್ಷ್ವಾಕುವಂಶದ ರಾಜ ಪರೀಕ್ಷಿತ**; ಒಮ್ಮೆ ಒಂದು ಕುದುರೆಯನ್ನೇರಿ ಬೇಟೆಗೆ ಜಿಂಕೆಯೊಂದನ್ನು ಬೆನ್ನತ್ತಿ ಹೋದ. ಅದು ತಪ್ಪಿಸಿಕೊಂಡಿತು. ದೂರ ಹೋಯಿತು. ದಾರಿಯಲ್ಲಿ ಹಸಿವು ಬಾಯಾರಿಕೆಯಿಂದ ಬಳಲಿದ ರಾಜ ಒಂದು ದಟ್ಟಾರಣ್ಯ ಪ್ರದೇಶದಲ್ಲಿ ಸುಂದರ ಸರೋವರವನ್ನು ನೋಡಿ ಅಲ್ಲಿಯೇ ತನ್ನ ಕುದುರೆಯನ್ನು ತೊಳೆದು ತಾನೂ ಸ್ನಾನ ಮಾಡಿ ಕುದುರೆಗೆ ಹುಲ್ಲು ಮೊದಲಾದವುಗಳನ್ನು ಕೊಟ್ಟು ತಾನು ವಿಶ್ರಮಿಸಿದ. ಆಗಲೇ ಸುಂದರ ಸಂಗೀತದ ದನಿ ಕೇಳಿಸಿತು. ಮಾನವರಾರೂ ಕಾಣದಿದ್ದರೂ ಆದನಿ ಆತನಿಗೆ ಆಶ್ಚರ್ಯ ತಂದಿತು. ಅಷ್ಟು ಹೊತ್ತಿಗೆ ಒಬ್ಬ ಸುಂದರ ಯುವತಿಯನ್ನು (ಹೂವುಗಳನ್ನು ಸಂಗ್ರಹಿಸುತ್ತಿರುವ) ನೋಡಿದ. ಅವಳೂ ಆ ರಾಜನ ಬಳಿಗೆ ಬಂದಳು. ರಾಜನು ಕೇಳಿದ. ನೀನಾರು? ಆಕೆ 'ನಾನು ಕನ್ಯೆ' ಎಂದಳು. ರಾಜ ಆಕೆಯನ್ನು ಬಯಸಿದ. ಆಕೆ ಒಂದು ನಿಬಂಧನೆಗೆ ಒಳಪಟ್ಟು ರಾಜನಿಗೆ ವಶವಾಗಲು ಒಪ್ಪಿದಳು. ನನಗೆ ನೀನು ನೀರನ್ನು ತೋರಿಸದಿದ್ದರೆ ನಾನು ನಿನ್ನವಳಾಗುವೆ' ಎಂದು. ಕಾಮಿ ರಾಜನು ಇದೇನು ಮಹಾ! ಎಂದು ಕೂಡಲೆ ಒಪ್ಪಿದ. ಕನ್ಯೆ ರಾಜನ ವಶವಾದಳು.

**ಅಥೋವಾಚ ಕನ್ಯಾ ಸಮಯೇನಾಹಂ ಶಕ್ಯಾ ತ್ವಯಾ ಲಬ್ಧುಂ**
**ನೋದಕಂ ಮೇ ದರ್ಶಯಿತವ್ಯಮ್ ಇತಿ** ೧೯೨-೧೧

ಗಾಂಧರ್ವವಿಧಿಯಿಂದ ವಿವಾಹವಾದ ರಾಜ ಆಕೆಯೊಂದಿಗೆ ವಿಹರಿಸಿದ.

ರಾಜನನ್ನು ಕಾಣದ ಪರಿವಾರ ಸೈನ್ಯ ಹುಡುಕುತ್ತಾ ಅವನಿದ್ದಲ್ಲಿಗೆ ಬಂದಿತು. ರಾಜನು ಆನಂದದಿಂದ ನೂತನ ಪಲ್ಲಕ್ಕಿಯಲ್ಲಿ ನೂತನ ಪತ್ನಿಯೊಡನೆ ಅಯೋಧ್ಯೆಗೆ ಹೊರಟ. ಆಕೆಯೊಡನೇ ಸರ್ವದಾ ಇರುತ್ತಾ ರಾಜ್ಯಾಡಳಿತವನ್ನೇ ಮರೆತ.

**ಸ ನಗರಮನುಪ್ರಾಪ್ಯ ರಹಸಿ ತಯಾ ಸಹಾಸ್ತೇ।**
**ತತ್ರಾಭ್ಯಾಶಸ್ಥೋಽಪಿ ಕಶ್ಚಿನ್ನಾಪಶ್ಯತ್** ೧೯೨-೧೪

ರಾಜ್ಯರ ಪ್ರಧಾನ ಅಮಾತ್ಯನು ರಾಜನನ್ನು ನೋಡಲು ಪ್ರಯತ್ನಿಸಿದ ರಾಜನನ್ನು ಸುತ್ತುವರಿದ ದಾಸಿಯರು ಅಮಾತ್ಯನಿಗೆ ರಾಜನ ಪರಿಸ್ಥಿತಿ, ಆತನು ಯಾವ ಕರಾರಿಗೆ ಒಳಪಟ್ಟು ನೂತನ ಸತಿಯೊಡನೆ ಇರುವ ವಿಷಯ ತಿಳಿಸಿದರು.

ಕೂಡಲೆ ಅಮಾತ್ಯನು ಒಂದು ಸುಂದರ ವನವನ್ನು ನಿರ್ಮಿಸಿದ. ಅಲ್ಲಿ ಮುತ್ತಿನ ಆವರಣವುಳ್ಳ ಬಾವಿಯೂ ಇತ್ತು. (ಬಾವಿಯ ನೀರು ಮುತ್ತಿನ ಬಲೆಯಿಂದ ಕಾಣದಂತೆ ಮಾಡಲಾಗಿತ್ತು) ಅಮೃತ ಸದೃಶ ನೀರು ಇದ್ದರೂ ಕಾಣುತ್ತಿದ್ದಿಲ್ಲ. ರಾಜನಿಗೆ ಅಮಾತ್ಯ ಹೇಳಿದ. ರಾಜನ್ 'ನೀನು ನಿನ್ನವಳೊಡನೆ ಈ ಉಪವನದಲ್ಲಿ ವಿಹರಿಸಬಹುದು' ಎಂದು ರಾಜ ಒಪ್ಪಿದ. ನೂತನ ಸತಿಯೊಡನೆ ವಿಹರಿಸಲಾಂಭಿಸಿದ– ನೂತನ ವನದಲ್ಲಿ

**ಅಥಾಮಾತ್ಯೋಽನುದಕಂ ವನಂ ಕಾರಯಿತ್ವಾ ತಸ್ಯಮಧ್ಯೇ ಮುಕ್ತಾಜಾಲಮಯೀಂ ಪಾರ್ಶ್ವೇ ವಾಪೀಂ ಗೂಢಾಂ ಸುಧಾಸಲಿಲಲಿಪ್ತಾಂ** ೧೯೨–೧೭

**ವನಮಿದಂ ಉದಾರಕಂ ಸಾಧ್ವತ್ರ ರಮ್ಯತಾಮಿತಿ** ೧೯೨–೧೮

ವನದಲ್ಲಿ ವಿಹರಿಸುತ್ತಿರಲು ತಂಗಾಳಿಯಿಂದ ನಿರ್ಮಲ ಮನಸ್ಕನಾಗಿ ಸಮೀಪದಲ್ಲಿದ್ದ ಸರೋವರವನ್ನು ನೋಡಿದ. ಅಲ್ಲಿ ಸತಿಯೊಡನೆ ಕುಳಿತ. ಹಸಿವು ಬಾಯಾರಿಕೆಯ ಗೊಂದಲದಲ್ಲಿ ತನ್ನ ಪ್ರತಿಜ್ಞೆಯನ್ನೇ ಮರೆತು ನೀರಿನಲ್ಲಿ ಹೆಂಡತಿಯೊಡನೆ ಜಲಕ್ರೀಡೆಯಾಡಲು ಧುಮುಕಿದ. ಸತಿ ಸುಂದರಿಯೂ ಧುಮುಕಿದಳು. ಬಾವಿಯಲ್ಲಿ ಧುಮುಕಿದಳು ವಾಪಸು ಬರಲೇ ಇಲ್ಲ. ಸತೀ ವಿರಹದಿಂದ ದುಃಖತಪ್ತನಾಗಿ ಸರೋವರವನ್ನೆಲ್ಲ ಆಕೆ ಸಲುವಾಗಿ ಹುಡುಕಿದ. ನೆಚ್ಚಿನ ಮಡದಿ ಮಾತ್ರ ಕಾಣಲೇ ಇಲ್ಲ.

**ತಾಂ ದೇವೀಂ ಸ ರಾಜಾಬ್ರವೀತ್ ಸಾಧ್ವವತರ ವಾಪೀಸಲಿಲಮಿತಿ**
**ಸಾ ತದ್ವಚಃ ಶೃತ್ವಾವತೀರ್ಯ ವಾಪೀಂ ನ್ಯಮಜ್ಜತ್ ನ ಪುನರುದಮಜ್ಜತ್** ೧೯೨–೨೨

**ತಾಂ ಸ ಮೃಗಯಮಾಣೋ ರಾಜಾ ನಾಪಶ್ಯತ್** – ॥ ೨೩ ॥

ದುಃಖತಪ್ತರಾಜನು ರಾಜಭಟರನ್ನು ಸರೋವರದ ನೀರನ್ನು ಹೊರಹಾಕಲು ಆಜ್ಞಾಪಿಸಿದ. ನೀರು ಖಾಲಿಯಾಯಿತೇ ಹೊರತು ಸರೋವರದಲ್ಲಿ ಹೆಂಡತಿ ಸಿಗಲಿಲ್ಲ. ಸಿಕ್ಕದ್ದು ಒಂದು ವಟಗುಟ್ಟುವ ಕಪ್ಪೆ ಮಾತ್ರ.

ರಾಜನಿಗೆ ಕ್ರೋಧ ಉಮ್ಮಳಿಸಿತು. ಈ ಕಪ್ಪೆಯೇ ತನ್ನ ಮಡದಿಯನ್ನು ತಿಂದಿರಬೇಕೆಂದು ಭ್ರಮಿಸಿದ. ರಾಜ, ರಾಜ್ಯದಲ್ಲೆಲ್ಲಾ ಮಂಡೂಕ ಸಂಹಾರಕ್ಕೆ ಆಜ್ಞಾಪಿಸಿದ. ತನ್ನ ದರ್ಶನಕ್ಕೆ ಬರುವವರು ಸತ್ತ ಕಪ್ಪೆಯೊಂದು ತೋರಿಸಲು ತರಬೇಕೆಂದೂ ಅಣತಿ ಮಾಡಿದ.

**ಆಜ್ಞಾಪಯಾಮಾಸ ಸ ರಾಜಾ । ಸರ್ವತ್ರ ಮಂಡೂಕವಧಃ ಕ್ರಿಯತಾಂ ಇತಿ ಯೋ ಮಯಾರ್ಥೀ ಸ ಮಾಂ ಮೃತಮಂಡೂಕೋಪಾಯನಮಾದಾಯೋಪತಿಷ್ಠೇ-ದಿತಿ । ೧೯೨-೨೩,೨೪**

ರಾಜ್ಯದಲ್ಲಿ ಭೀಕರ ಮಂಡೂಕವಧೆ ಆರಂಭಗೊಂಡಿತು. ಮಂಡೂಕರಾಜ ಭೀತನಾಗಿ ತಪಸ್ವಿಯ ವೇಷದಿಂದ ರಾಜನ ಬಳಿಗೆ ಬಂದು ನಿವೇದಿಸಿದ 'ನಿರಪರಾಧಿಗಳಾದ ಕಪ್ಪೆಗಳನ್ನು ಕೊಲ್ಲಿಸಬೇಡ. ಅದರಿಂದ ನಿನಗಾಗುವ ಪ್ರಯೋಜನವಾದರೂ ಏನು? ವಿವೇಚನೆಯಿಲ್ಲದೆ ಮಾಡುವ ಕೋಪ ಸಂಪತ್ತಿನ ನಾಶಕ್ಕೆ ಕಾರಣವಾಗುತ್ತದೆ'. ಅದಕ್ಕೆ ರಾಜನು 'ಕಪ್ಪೆಗಳ ವಂಶ ನಿರ್ವಂಶವಾಗುವವರೆಗೆ ಕಪ್ಪೆಗಳನ್ನು ಕೊಲ್ಲಿಸುವೆ. ನನ್ನ ಹೆಂಡತಿಯನ್ನು ತಿಂದು ಹಾಕಿದ ಕಪ್ಪೆಯನ್ನು ಕ್ಷಮಿಸಲು ಸಾಧ್ಯವಿಲ್ಲ' ಎಂದನು. ಅದಕ್ಕೆ ಮಂಡೂಕ ರಾಜನು, 'ರಾಜನ್, ನಾನೇ ಮಂಡೂಕ ರಾಜ. ನಿನ್ನ ಹೆಂಡತಿ ಬೇರಾರೂ ಅಲ್ಲ ನನ್ನ ಮಗಳೇ!. ನಿನಗೆ ಮೋಸ ಮಾಡಿದಂತೆ ಅನೇಕ ರಾಜರನ್ನು ಮೋಸ ಮಾಡಿದ್ದಾಳೆ. ಅವಳದು ಮೋಸದ ನಡೆ. ಅದಕ್ಕೆ ರಾಜ 'ನಾನು ಅವಳನ್ನೇ ಪಡೆಯಬೇಕು ಅವಳನ್ನು ಒಪ್ಪಿಸು' ಎಂದ. ಅನಿವಾರ್ಯವಾಗಿ ಮಂಡೂಕರಾಜನು ತನ್ನ ಮಗಳನ್ನು (**ಸುಶೋಭನಾ**) ರಾಜನಿಗೆ ಒಪ್ಪಿಸಿ ರಾಜನ್ನು ಸೇವಿಸು ಎಂದನು. ನೀನು ಇಲ್ಲಿಯವರೆಗೆ ಮಾಡಿದ ರಾಜರ ವಂಚನೆಗೆ ನಿನಗೆ ಶಿಕ್ಷೆಯಾಗಲೇ ಬೇಕು. ನಿನ್ನಗೆ ಹುಟ್ಟುವ ಮಕ್ಕಳು ಬ್ರಾಹ್ಮಣರನ್ನು ಗೌರವಿಸದಿರಲಿ ಎಂದು ತಂದೆಯೇ (ಮಂಡೂಕರಾಜ) ಮಗಳನ್ನು ಶಪಿಸಿದ.

**ಮಾ ರಾಜನ್... ನಾರ್ಹಸಿ ಮಂಡೂಕಾನಾಮನಪರಾಧಿನಾಂ ವಧಂ ಕರ್ತುಮಿತಿ । ೨೮**

**ನ ಹಿ ಕ್ಷಮ್ಯತೇ ತನ್ಮಯಾ ದುರಾತ್ಮಭಿಃ ಪ್ರಿಯಾ ಮೇ ಭಕ್ಷಿತಾ ಸರ್ವಥೈವ ವಧ್ಯಾ ಮಂಡೂಕಾಃ ।**

**ಅಹಂ ಆಯುರ್ನಾಮ ಮಂಡೂಕರಾಜೋ ಮಮ ಸಾ ದುಹಿತಾ ಸುಶೋಭನಾ ನಾಮ । ತಸ್ಯಾಃ ದೌಃಶೀಲ್ಯಮೇತತ್ । ಬಹವಸ್ತಯಾ ರಾಜಾನೋ ವಿಪ್ರಲಬ್ಧಾಃ ಪೂರ್ವಾ ಇತಿ ॥ ೩೨**

**ತಮಬ್ರವೀತ್ ರಾಜಾ ತಯಾ ಸಮರ್ಥೀ ಸಾ ಮೇ ದೀಯತಾಂ .........ಪಿತಾದಾದಬ್ರವೀಚ್ಚೈನಾಂ ರಾಜಾನಂ ಶುಶ್ರೂಷಸ್ವೇತಿ ॥ ೩೪**

ರಾಜನು, ತನ್ನ ಮಾವ (ಆಯು)– ಮಗಳಿಗೆ ಕೊಟ್ಟ ಶಾಪದಿಂದ ಅಸಮಾಧಾನ ಹೊಂದಿದರೂ ಆಯುವನ್ನು ಸತ್ಕರಿಸಿದ. ಆತನು ಮಗಳನ್ನು ಸಂತೈಸಿ ಹೊರಟನು.

ಮುಂದೆ ಪರೀಕ್ಷಿತನಿಗೆ ಈ ಸುಶೋಭನೆಯಲ್ಲಿ ಶಲ, ದಲ, ಬಲ ರೆಂಬ ಮೂವರು ಪುತ್ರರಾದರು. ಹಿರಿಯ ಮಗನು ರಾಜ್ಯಭಾರಕ್ಕೆ ಯೋಗ್ಯನಾಗುತ್ತಿರಲು ರಾಜ ಪರೀಕ್ಷಿತನು ವನಕ್ಕೆ-(ವಾನಪ್ರಸ್ಥಾಶ್ರಮ) ನಡೆದ. ಶಲ ರಾಜನಾದ.

ಶಲನೂ ಒಮ್ಮೆ ಬೇಟೆಗೆ ಅರಣ್ಯಕ್ಕೆ ಹೋದ. ದಾರಿಯಲ್ಲಿ ಕಂಡ ಜಿಂಕೆಯನ್ನು ಬೆನ್ನಟ್ಟಿ ಹೋಗಲು ಸೂತನಿಗೆ ತಿಳಿಸಿದ. ಸೂತನು 'ನಮ್ಮ ಕುದುರೆಗಳು ಈ ಜಿಂಕೆಯನ್ನು ಬೆನ್ನಟ್ಟಿ ಹೋಗಲಾರವು. ವಾಮದೇವನ ಮನೋವೇಗದಿಂದ ಹೋಗುವ ಅಶ್ವಗಳು ಮಾತ್ರ ಈ ಜಿಂಕೆಯನ್ನು ಬೆನ್ನಟ್ಟಿ ಹಿಡಿಯಬಲ್ಲವು. ಅದಕ್ಕೆ ರಾಜನು ಹಾಗಿದ್ದರೆ ಆ ವಾಮ್ಯಾಶ್ವಗಳನ್ನು ವಾಮದೇವರ ಬಳಿಗೆ ಹೋಗಿ ತರೋಣ. ಅಲ್ಲಿಗೆ ನಡೆ ಎಂದ. ಸೂತನೊಂದಿಗೆ ವಾಮದೇವನ ಆಶ್ರಮಕ್ಕೆ ಹೋದ ರಾಜನು ವಾಮದೇವರನ್ನು ಕಂಡು ನಮಿಸಿ ತನ್ನ ಉದ್ದೇಶವನ್ನು ಅರುಹಿದ. ವಾಮ್ಯಾಶ್ವಗಳನ್ನು ತನಗೆ ಕೊಡಲು ಕೋರಿದ.

ಅದಕ್ಕೆ ವಾಮದೇವನು 'ನಿನ್ನ ಅಪೇಕ್ಷೆಯಂತೆ ನನ್ನಲ್ಲಿರುವ ಒಂದು ಜೊತೆ ಕುದುರೆಗಳನ್ನು ಕೊಡುವೆ. ನಿನ್ನ ಕೆಲಸ ಮುಗಿದ ಮೇಲೆ ಕುದುರೆಗಳನ್ನು ವಾಪಸು ಕೊಡಬೇಕು' ಎಂದು ಹೇಳಿಕೊಟ್ಟನು.

ರಾಜಕುಮಾರ ಶಲನು ಆ ಕುದುರೆಗಳೊಂದಿಗೆ ಜಿಂಕೆಯನ್ನು ಬೆನ್ನಟ್ಟಿ ಬೇಟೆಮಾಡಿ ನಂತರ ವಾಮದೇವರ ಕುದುರೆಗಳನ್ನು ಮಾತ್ರ ವಾಪಸ್ಸು ಕೊಡಲಿಲ್ಲ.

ವಾಮದೇವನಿಗೆ ರಾಜನ ಈ ನಡೆ ಸರಿ ಬರಲಿಲ್ಲ. ತನ್ನ ಶಿಷ್ಯನನ್ನು ಕಳಿಸಿ ಅಶ್ವಗಳನ್ನು ವಾಪಸ್ಸು ಕಳಿಸಲು ರಾಜನಿಗೆ ಆಗ್ರಹಿಸಿದನು. ರಾಜನು ಉನ್ಮತ್ತನಂತೆ ಮಾತನಾಡಿ– 'ರಾಜಾರ್ಹ ಕುದುರೆಗಳಿವು. ಬ್ರಾಹ್ಮಣರಿಗೇಕೆ' ಎಂದು ಮೂದಲಿಸಿ ವಾಮದೇವನ ಶಿಷ್ಯನನ್ನು 'ಹೋಗು' ಎಂದು ಕಳಿಸಿದ. ಇದನ್ನು ಕೇಳಿದ ವಾಮದೇವ ಕ್ರೋಧದಿಂದ ತಾನೇ ರಾಜನ ಬಳಿಗೆ ಬಂದು ಕುದುರೆಗಳನ್ನು ವಾಪಸ್ಸು ಮಾಡಲು ಕೇಳಿದ. ಅದಕ್ಕೆ ರಾಜನು 'ಬ್ರಾಹ್ಮಣರಿಗೇಕೆ ಕುದುರೆಗಳು? ಎರಡೆತ್ತುಗಳು ಸಾಕು. ಕೊನೆಗೆ ಅವಾದರೂ ಏಕೆ? ನೀನು ಆರಾಧಿಸುವ ವೇದಗಳು ನಿನ್ನನ್ನು ಎಲ್ಲಿಗೆ ಬೇಕಾದರೂ ಎತ್ತಿಕೊಂಡು ಹೋಗಬಲ್ಲವೆಂದು ಮೂದಲಿಸಿದ ರಾಜ. ಅದಕ್ಕೆ ಋಷಿಗಳು, ರಾಜನ್, ನಿಜ, ವೇದಗಳು ನನ್ನನ್ನು ಎತ್ತಿಕೊಂಡು ಹೋಗುವುದು ನನ್ನ ದೇಹಾಂತ್ಯದಲ್ಲಿ, ಆದರೆ ಇಲ್ಲಿರುವವರೆಗೆ ನನಗೂ, ನಿನಗೂ ಎಲ್ಲರಿಗೂ ಪ್ರಯಾಣಕ್ಕೆ ಕುದುರೆಯಂತಹ ಪ್ರಾಣಿಗಳೇ ಬೇಕು. ಆದ್ದರಿಂದ ನನ್ನ ಕುದುರೆಗಳನ್ನು ನನಗೆ ವಾಪಸ್ಸು ಮಾಡು' ಎಂದರು. ಅದಕ್ಕೆ ಶಲ ರಾಜನು, ಹಾಗಾದರೆ ನಿನಗೆ ನಾಲ್ಕು ಕತ್ತೆ ಅಥವಾ ಹೇಸರಗತ್ತೆ, ಅಥವಾ ಉತ್ತಮ ಜಾತಿಯ ಕುದುರೆಗಳನ್ನೇ ಕೊಡುವೆ. ಈ ಕುದುರೆಗಳನ್ನು ಕೊಡೆನು. ಇವು ಬ್ರಾಹ್ಮಣರಲ್ಲಿರಲು ಯೋಗ್ಯವಲ್ಲ ಎಂದ. ಇದರಿಂದ ಕ್ರುದ್ಧರಾದ ವಾಮದೇವರು ರಾಜನ್ ನಾನು ಮಾಡಿದ ವ್ರತ ನಿಯಮಗಳು ಸತ್ಯವಾಗಿದ್ದಲ್ಲಿ ಈಗಲೇ ನಿನ್ನನ್ನೂ ನಾಲ್ವರು ರಾಕ್ಷಸರು ಬಂದು ಕತ್ತರಿಸಿ ಹಾಕಲಿ ಎಂದು ಶಪಿಸಿದರು. ಇದನ್ನು ಕೇಳಿದರೂ ಹೆದರದೆ ರಾಜ, 'ನನ್ನ ಸೇನೆಯು ನಿನ್ನನ್ನು ನಿನ್ನ ಶಿಷ್ಯರನ್ನು ಕೊಂದು ನನ್ನ ಮುಂದೆ ಹಾಕಲಿ' ಎಂದ.

ನಂತರ ಮತ್ತೆ ತಾಳ್ಮೆಯಿಂದ ಋಷಿಗಳು, 'ನೀನು ಕೊಟ್ಟ ಮಾತಿಗೆ ತಪ್ಪದೆ ಕುದುರೆಗಳನ್ನು ವಾಪಸ್ಸು ಮಾಡು. ಇನ್ನೂ ಕಾಲ ಮೀರಿಲ್ಲ' ಎಂದರು ಅದಕ್ಕೆ ಮತ್ತೆ

ರಾಜನು ವಾಮದೇವ-ಬೇಟೆ ಮಾಡುವುದು ನಿಮಗೆ ಧರ್ಮವಲ್ಲ, ನಮಗೆ ಧರ್ಮ. ನಿಮಗೆ ಅಂತಹ ಕುದುರೆಗಳನ್ನು ಕೊಡುವುದಿಲ್ಲ. ಬ್ರಾಹ್ಮಣ ಧರ್ಮ ಬಿಡುವ ನಿನ್ನನ್ನು ನಾನು ಶಿಕ್ಷಿಸಬಲ್ಲೆ. ಆದರೂ ಶಿಕ್ಷಿಸುವುದಿಲ್ಲ. ಆದರೆ ನಿನಗೆ ಕುದುರೆಗಳನ್ನು ಮಾತ್ರ ವಾಪಸ್ಸು ಮಾಡುವುದಿಲ್ಲ' ಎಂದನು.

'ಬ್ರಾಹ್ಮಣನನ್ನು ಕಾಯೇನ-ವಾಚಾ- ಮನಸಾ ಶಿಕ್ಷಿಸುವುದು ಅಪರಾಧ'. ಹಾಗೇ ಶಿಕ್ಷಿಸುವ ನಿನಗೆ ಯೋಗ್ಯಫಲ ನಾನೇ ಕೊಡುವೆ ಎಂದ ವಾಮದೇವ.

ಹೀಗೆನ್ನುತ್ತಲೇ ಈಗಾಗಲೇ ವಾಮದೇವನ ಹಿಂದಿನ ಮಾತಿನಂತೆ ನಾಲ್ವರು ರಾಕ್ಷಸರು ಅಲ್ಲಿಗೆ ಬಂದು ರಾಜನನ್ನು ಕೊಲ್ಲಲು ಉದ್ಯುಕ್ತರಾದಾಗ, ಮತ್ತೆ ರಾಜನು 'ನನ್ನನ್ನು ಕೊಂದ ಮಾತ್ರದಿಂದ ನಿನಗೆ ಅಶ್ವಗಳನ್ನು ನಮ್ಮವರು ಕೊಡುವುದಿಲ್ಲ. ಕೊಟ್ಟರೆ ಅವರು ಭ್ರಷ್ಟರಾಗುತ್ತಾರೆ ಎಂದನು. ಆದರೆ ರಾಕ್ಷಸರು ಅವನನ್ನು ಕೊಂದೇಬಿಟ್ಟರು.

ಹೀಗೆ **ಶಲ** ಸತ್ತು ಹೋಗಲು ಇಕ್ಷ್ವಾಕು ವಂಶದವರು **ದಲ**ನನ್ನು ರಾಜನನ್ನಾಗಿ ಪಟ್ಟ ಕಟ್ಟಿದರು.

ಮತ್ತೆ ವಾಮದೇವನು ದಲನ ಬಳಿಗೆ ಬಂದು ಕುದುರೆಗಳನ್ನು ಕೇಳಿದಾಗ ಅವನು ತನ್ನ ವಿಷಪೂರಿತ ಬಾಣದಿಂದ ಕೊಲ್ಲುವೆನೆಂದು ವಿಷಕಾರಿದನು. ಅದಕ್ಕೆ ವಾಮದೇವನು ನೀನು ಬಿಡುವ ಬಾಣ ನಿನ್ನ ೧೦ ವರ್ಷದ ಮಗನನ್ನು -(ಶ್ಯೇನಜಿತ್‌ನನ್ನು) ಸಂಹರಿಸಲಿ ಎಂದು ನುಡಿದನು. ಪರಿಣಾಮವಾಗಿ ಅವನ ಮಗನು ತಂದೆಯ ಬಿಟ್ಟ ಬಾಣದಿಂದಲೇ ಸಂಹೃತನಾದನು. ಮಗನನ್ನು ಕಳೆದುಕೊಂಡ ಉನ್ಮತ್ತ **ದಲ**ನು ಇದರಿಂದಲೂ ಪಾಠ ಕಲಿಯದೆ ತನ್ನ ಪರಿವಾರದವರ ಮುಂದೆ ಮತ್ತೊಂದು ಬಾಣ ತರಿಸಿ ವಾಮದೇವರ ಮೇಲೆ ಬಿಡಲು ಉದ್ಯುಕ್ತನಾಗಲು – ಅವರು ನೀನು ನನ್ನ ಮೇಲೆ ಈ ಬಾಣವನ್ನು ಪ್ರಯೋಗಿಸಲಾರೆ ಎಂದು ನುಡಿದಾಗ ಅವನ ಕೈಗಳು ಸ್ತಂಭೀಭೂತವಾದವು. ಆಗ ರಾಜನು ತನ್ನ ಅಸಾಮರ್ಥ್ಯವನ್ನು ಗಮನಿಸಿ, **'ಆಯುಷ್ಮಾನ್ ವೈ ಜೀವತು ವಾಮದೇವ'** ಎಂದು ಅವರನ್ನು ಅಭಿನಂದಿಸಿದನು. ರಾಜನ ದುರವಸ್ಥೆಯನ್ನು ನೋಡಿದ ಋಷಿಗಳು 'ಈ ಬಾಣದಿಂದ ನಿನ್ನ ಪಟ್ಟದ ರಾಣಿಯನ್ನು ಮುಟ್ಟು ಆಗ ನೀನು ಈ ಪಾಪದಿಂದ ಮುಕ್ತನಾಗುವೆ' ಎಂದಾಗ- ರಾಜನು ಹಾಗೇ ಮಾಡಿ ಕೈಗಳ ಮರು ಸಾಮರ್ಥ್ಯ ಪಡೆದನು.

ರಾಣಿಗೆ ಗಂಡನ ಅಪಚಾರದ ಅರಿವಾಗಿ ಋಷಿಗಳನ್ನು ಬೇಡಿಕೊಂಡಳು. ತನ್ನ ಪತಿಯು ಸತ್ಕರ್ಮಿಯಾಗುವಂತೆಯೂ, ತನಗೆ ಉತ್ತಮ ಲೋಕಗಳು ಸಿಗುವಂತೆಯೂ ಆಶೀರ್ವದಿಸಲು ಕೇಳಿದಾಗ ಋಷಿಗಳು ತಥಾಸ್ತು ಎಂದರು. ರಾಜ್ಞಿಯೇ! ನಿನ್ನಿಂದಾಗಿ ನಿನ್ನ ಕುಲ ಉದ್ಧಾರವಾಯಿತು. ಬೇಕಾದ ವರ ಕೇಳು ಎಂದರು. ಅದಕ್ಕೆ ರಾಣಿಯು ನನ್ನ ರಾಜನು (ಪತಿಯ) ತಾನು ಮಾಡಿದ ಪಾಪದಿಂದ ಮುಕ್ತನಾಗಲಿ. ನನ್ನ ಸತ್ತ

ಮಗನು ಬದುಕಲಿ, ನಮ್ಮ ಪರಿವಾರದವರಿಗೆ ಶುಭ ಉಂಟಾಗಲಿ ಎಂದು ಬೇಡಿದಾಗ ವಾಮದೇವರು 'ತಥಾಸ್ತು' ಎಂದರು. ಕೂಡಲೆ ರಾಜ ಕುಮಾರನು ನಿದ್ದೆಯಿಂದ ಎಚ್ಚರಗೊಂಡವನಂತೆ ಎದ್ದು ಕುಳಿತ. ದಲನೂ ಪಾಪ ಮೋಚನೆಗೊಂಡು ತನ್ನ ಅಣ್ಣನು ಹಠದಿಂದ ಇಟ್ಟು ಕೊಂಡಿದ್ದ ಅಶ್ವಗಳನ್ನು ವಾಮದೇವರಿಗೆ ವಾಪಸ್ಸು ಮಾಡಿ ಕೃಪಾರ್ಥನಾದನು. ವಾಮದೇವರ ಕ್ಷಮೆ ಬೇಡಿದನು. ವಾಮದೇವರು ಎಲ್ಲರನ್ನು ಅನುಗ್ರಹಿಸಿ ವಾಮ್ಯಾಶ್ವಗಳೊಂದಿಗೆ ತಮ್ಮ ಆಶ್ರಮಕ್ಕೆ ಹಿಂತಿರುಗಿದರು.

## ಸಂದೇಶಗಳು–ವಿವರಣೆಗಳು

೧. ಮಹಾಭಾರತ ಒಂದು ಮಹಾಕಾವ್ಯ. ಸಾಹಿತ್ಯವೆಂದು ನೋಡುವರ ದೃಷ್ಟಿಯಲ್ಲಿ ಇದೊಂದು ಅಪೂರ್ವ ಚಂಪೂಸಾಹಿತ್ಯ. ಕಾರಣ ಇದರಲ್ಲಿ ಗದ್ಯ ಹಾಗೂ ಪದ್ಯದ ಕೃತಿಗಳು ಇವೆ. ಈ ಕಥೆಯಲ್ಲಿ ೨೭ ಪದ್ಯಗಳಿವೆ. ಉಳಿದಂತೆ ಗದ್ಯಭಾಗ; ಎರಡೂ ಸಮಪಾಲಿದೆ ಎಂದರೆ ತಪ್ಪಾಗದು.

೨. ಬ್ರಾಹ್ಮಣರ ತಪಸ್ಸಿಗೆ ಇರುವ ಮಹಿಮೆಗೆ ಇದೊಂದು ಅಪೂರ್ವ ದೃಷ್ಟಾಂತ. ಚ್ಯವನರು ಇಂದ್ರನ ಕೈಗಳನ್ನು ಸ್ತಂಭೀ ಭೂತವನ್ನಾಗಿ ಮಾಡಿದರೆ ಇಲ್ಲಿ ಒಬ್ಬರಾಜನನ್ನು ಹಾಗೆ ಮಾಡಿದ್ದು ಆಶ್ಚರ್ಯವಲ್ಲ.

೩. ಸ್ತ್ರೀಯರ ಸೌಂದರ್ಯ ಎಂತಹವರನ್ನು ಆಕರ್ಷಿಸುತ್ತದೆ. ಆಗ ಅವರ ವಿವೇಕನಾಶವಾಗುತ್ತದೆ. ಎನ್ನಲು ಪರೀಕ್ಷಿತನೇ ಸಾಕ್ಷಿ. ಈ ಪರೀಕ್ಷಿತ ಸೂರ್ಯವಂಶದವನು. ಅರ್ಜುನನ ಮೊಮ್ಮಗ ಪರೀಕ್ಷಿತ ಚಂದ್ರವಂಶದವನು. ಭಿನ್ನ ಕಾಲದಲ್ಲಿ ಜನಿಸಿದ ಒಂದೇ ಹೆಸರಿನ ರಾಜರಿವರು.

೪. ಸ್ತ್ರೀಯರು ವಂಚಕರಾಗಿರುವ ಸಾಧ್ಯತೆ ತಳ್ಳಿ ಹಾಕುವಂತಿಲ್ಲವೆನ್ನಲು ಸುಶೋಭನೆಯೇ ಸಾಕ್ಷಿ. ಮಂಡೂರ ರಾಜನ ಮಗಳು. ಉತ್ತಮ ವಂಶದಲ್ಲಿ ಜನಿಸಿದ ಮಟ್ಟಿಗೆ ಅವರು ಉತ್ತಮ ಶೀಲವಂತರಾಗಿರಬಹುದೆಂಬ ನಿಮಯವೇನೂ ಇಲ್ಲವೆನ್ನಲು ಈಕೆಯ ನಡೆಯೇ ಸಾಕ್ಷಿ. ಸ್ವಯಂ ತಂದೆಯಿಂದ ಶಾಪಪಡೆಯುತ್ತಾಳೆ ಎನ್ನುವುದು ಆಶ್ಚರ್ಯಕರವಾದುದೇ ಸರಿ.

೫. ದುಷ್ಟ ನಡತೆಯ ಮಗಳನ್ನು ಬಿಡದೆ ಆಕೆಗೂ ಶಾಪ ಕೊಟ್ಟ ತಂದೆಯ ನಿಷ್ಪಕ್ಷಪಾತ ಧೋರಣೆ. ಆತನು ಬಾಂಧವ್ಯ ವ್ಯಾಮೋಹದಿಂದ ದೂರನಾಗಿದ್ದ ಎಂಬುದಕ್ಕೆ ಉತ್ತಮ ಉದಾಹರಣೆ. ಗೀತೋಪದೇಶ ತತ್ವಗಳು ಆತನಿಗೆ ಯಾವಾಗಲೋ ನಾಟಿವೆ ಎಂದು ತಿಳಿಯುತ್ತದೆ. ನಾವು ನಮ್ಮ ಮಕ್ಕಳ ತಪ್ಪುಗಳನ್ನು ಬಂಧುಗಳನ್ನು ಹೇಗೆ ನೋಡಬೇಕೆಂಬುದಕ್ಕೆ ಮಂಡೂಕ ರಾಜ ಒಂದು ಒಳ್ಳೆಯ ಉದಾಹರಣೆ.

೬. ಪರೀಕ್ಷಿತನು ತನ್ನ ಪತ್ನಿಯನ್ನು ಮಂಡೂಕ ಕಪ್ಪೆ ತಿಂದಿದೆ ಎನ್ನುವಷ್ಟು ವಿವೇಕ ಶೂನ್ಯನಾಗುತ್ತಾನೆ. ಅದರ ಸಾಧ್ಯಾಸಾಧ್ಯತೆಯನ್ನು ವಿಚಾರಿಸದ ವಿವೇಕ ಶೂನ್ಯತೆ '**ಸ್ತ್ರೀ ಸಂಗಿನಾಂ ಇತಿ ರತಿಂ**' ಎಂಬ ಭಾಗವತದ ಮಾತಿಗೆ ಉತ್ತಮ ಉದಾಹರಣೆ.

೭. ಹೋಗಲಿ, ಒಂದು ಕಪ್ಪೆ ತನ್ನ ಪತ್ನಿಯನ್ನು ತಿಂದುದಕ್ಕೆ ರಾಜ್ಯದ ಎಲ್ಲ ಕಪ್ಪೆಗಳ ನಾಶಕ್ಕೆ ಆದೇಶ ನೀಡುವುದು ಇನ್ನೊಂದು ತಪ್ಪು ನಿರ್ಧಾರದ ಪರಾಕಾಷ್ಠತೆ. ಆದಿಪರ್ವದಲ್ಲಿ ಹೆಂಡತಿಯನ್ನು ಕಚ್ಚಿದ ಸರ್ಪದ ಮೇಲಿನ ದ್ವೇಷದಿಂದ ಬ್ರಾಹ್ಮಣ (ಋುರು) ಕಂಡ ಸರ್ಪಗಳನ್ನು ಕೊಂದ ಕಥೆ, ಸ್ವಯಂ ಜನಮೇಜಯನ ಸರ್ಪಯಾಗ ಇವೆಲ್ಲ ಉದಾಹರಣೆಗಳು–ಸಜ್ಜನರಲ್ಲೂ ಕಾಣುತ್ತವೆ. ತನ್ನ ಕೊಲ್ಲುವವನು ಎಲ್ಲೋ ಹುಟ್ಟಿದ್ದಾನೆಂದು ಕೇಳಿದ ಕಂಸನು ಮಕ್ಕಳನ್ನು ಕೊಲ್ಲುವ ಆದೇಶ ಹಿಂಸಾವಿಹಾರಿಗಳಾದ ದೈತ್ಯರ ಸ್ವಭಾವಕ್ಕೆ ಇನ್ನೊಂದು ದುಷ್ಟ ಉದಾಹರಣೆ.

೮ ಪರೀಕ್ಷಿತ ತಿಳಿದು ತಿಳಿದು ಮತ್ತೆ ಆಕೆಯನ್ನೇ ಆ ಮಂಡೂಕರಾಜನಿಂದ ಪಡೆದು ಆಕೆಯಲ್ಲಿಯೇ ರಮಿಸುತ್ತಾ ಜೀವನ ಕಳೆದುದು ಮತ್ತೊಂದು ಸ್ತ್ರೀಸಂಗ ವ್ಯಸನಕ್ಕೆ ಉದಾಹರಣೆ. ಆಕೆಯಲ್ಲಿ ಹುಟ್ಟುವ ಮಕ್ಕಳು ಬ್ರಹ್ಮದ್ರೋಹಿಗಳಾಗುವರೆಂಬ ಶಾಪ ತಿಳಿದು ಆಕೆಯನ್ನೇ ತನ್ನ ಪತ್ನಿಯಾಗಿ ಪಡೆದ ಪರೀಕ್ಷಿತನ ಸ್ತ್ರೀಸಂಗ ವ್ಯಸನ ಪ್ರಾರಬ್ಧ ಕರ್ಮ ಯಾರನ್ನೂ ಬಿಡದು ಎನ್ನಲು ಉದಾಹರಣೆಯಾಗಿದೆ.

**೯. ಯೇ ಹಿ ಸಂಸ್ಪರ್ಶಜಾ ಭೋಗಾಃದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥**

ಎಂಬ ಗೀತಾವಾಕ್ಯದ (೫/೨೨) ಸಂದೇಶ ಪರೀಕ್ಷಿತನ ಗೃಹಸ್ಥ ಜೀವನದಲ್ಲಿ ನಾವು ನೋಡಲಾರೆವು. ಅಂತಹ ಜ್ಞಾನಿಗಳೇ ಹೀಗೆ ಕಾಮ ಪಾಶಕ್ಕೆ ಬದ್ಧರಾದರೆ ಉಳಿದವರ ಪಾಡೇನು? ಊಹಿಸಲು ಅಸಾಧ್ಯ. ಆದ್ದರಿಂದ ಇದೊಂದು ಕಾಮದಿಂದ ಆಧ್ಯಾತ್ಮ ಪ್ರಗತಿಗೆ ಹಿನ್ನಡೆಯಾಗುತ್ತದೆ ಎನ್ನಲು ಇದೊಂದು ಉತ್ತಮ ಉದಾಹರಣೆ.

ಪರೀಕ್ಷಿತನು ಸುಶೋಭನೆಯನ್ನು ಪಡೆದು ತ್ರಿಲೋಕೈಶ್ವರ್ಯ ಪಡೆದೆನೆಂಬ ಭ್ರಾಂತಿಗೆ ಒಳಗಾಗಿದ್ದನೆಂದು ಭಾರತ ಹೇಳುತ್ತದೆ. '.........**ಸುರತ ಗುಣ ನಿಬದ್ಧ ಹೃದಯೋ ಲೋಕತ್ರಯೈಶ್ವರ್ಯಮಿವೋಪಲಭ್ಯ**' ಎಂದು ವ್ಯಾಸರು ಪರೀಕ್ಷಿತನ ಬಗ್ಗೆ ಉದ್ಗರಿಸುತ್ತಾರೆ. (ಅ,೧೯೨-೩೭)

೧೦. ಆದರೆ ಅದೇ ಪರೀಕ್ಷಿತನು ಗೃಹಸ್ಥನಾಗಿ ಹೆಚ್ಚು ಸಾಧಿಸದಿದ್ದರೂ–ಮಗನು ವಯಸ್ಸಿಗೆ ಬಂದ ಮೇಲೆ ಅವನಿಗೆ ರಾಜ್ಯ ಒಪ್ಪಿಸಿ ವನಕ್ಕೆ ತಪಸ್ಸನ್ನು ಮಾಡಲು ನಡೆದ ಆತನ ಚಾರಿತ್ರ್ಯ ಅಷ್ಟೇ ಮಾನ್ಯವಾದುದು, ಆದರ್ಶವಾದುದು. ಪಾಪಗಳೆಲ್ಲ ತಪಸ್ಸಿನಿಂದ ನಾಶವಾಗುತ್ತದೆ ಎನ್ನಲು ಇದು ಉದಾಹರಣೆ.

೧೧. ಬೇಟೆಗೆ ಹೋಗಿ ಜಿಂಕೆ ಹಿಡಿಯಲು ವಾಮದೇವನ ಅಶ್ವಗಳನ್ನು ವಾಪಸ್ಸು ಕೊಡುವ ನಿಬಂಧನೆಯೊಡನೆ – ಪಡೆದರೂ ಅದನ್ನು ವಾಪಸ್ಸು ಮಾಡದೆ ಕೃತಘ್ನನಾಗುತ್ತಾನೆ. ಕೃತಘ್ನರಿಗೆ ಯಾವ ಪ್ರಾಯಶ್ಚಿತ್ತವೂ ಇಲ್ಲ, ದೇಹಾಂತವೇ ಪ್ರಾಯಶಿತ್ತ. ಹಾಗೆಯೇ ಆಯಿತು – ವಾಮದೇವನಿಗೆ ದ್ರೋಹ ಮಾಡಿದ್ದರಿಂದ ಇಂತಹ ಕೃತಘ್ನರು ಲೋಕದಲ್ಲಿ ವಿರಳರೇನಲ್ಲ. ಆದ್ದರಿಂದಲೇ ಆಚಾರ್ಯರು ಸುಗ್ರೀವನ ಸಂದರ್ಭದಲ್ಲಿ

**'ಪ್ರಾಯ: ಸ್ವಕಾರ್ಯೇ ಪ್ರತಿಪಾದಿತೇ ಹಿ'**
**ಮದೋದ್ಧತಾ ನ ಪ್ರತಿ ಕರ್ತುಮೀಶತೇ'** । – **ಮ.ತಾ.ನಿ.೬/೨೯**

ಎಂದು ಉದ್ಗರಿಸಿದ್ದಾರೆ. ಅವರು ಮದೋನ್ಮತ್ತರು – ಕೆಲವರು ಜನ್ಮಾವಧಿ ಹಾಗೆಯೇ ಇದ್ದು ನಾಶಹೊಂದುತ್ತಾರೆ. ಕೆಲವರು ಮಧ್ಯೆ ತಪ್ಪನ್ನು ತಿದ್ದಿಕೊಳ್ಳುತ್ತಾರೆ. ಶಲತಿದ್ದಿಕೊಳ್ಳದೆ ನಾಶವನ್ನೇ ಹೊಂದಿದ.

೧೨ ವಾಮದೇವನು ಮೊದಲು ಶಾಂತನಾಗಿಯೇ ವರ್ತಿಸಿ ಕೊನೆಗೆ ಶಾಪ ಕೊಡುತ್ತಾನೆ. ಅವನ ತಾಳ್ಮೆ ಅನುಕರಣೀಯ. ದಲನನ್ನು ಹೀಗೆಯೇ ನಿಗ್ರಹಿಸುತ್ತಾರೆ. ಆತನ ಹೆಂಡತಿಯಲ್ಲಿನ ಗುಣಗಳನ್ನು ಮೆಚ್ಚಿ ಅನುಗ್ರಹಿಸುತ್ತಾರೆ. ವಂಶ ಉದ್ಧಾರವಾಗುತ್ತದೆ. ಅದಕ್ಕೆ ವಾಮದೇವನ ಮುತ್ಸದ್ದಿ ತನ ಸಾಕ್ಷಿ.

೧೩. ಶಲ, ನಾಶವಾಗುತ್ತಾನೆ – ದಲನಾಶವಾಗಿ ಉದ್ಧಾರವಾಗುತ್ತಾನೆ – ದಲನ ಪತ್ನಿಯ ಬ್ರಾಹ್ಮಣರ ಗೌರವದಿಂದ ಇಡೀವಂಶ ಉದ್ಧರವಾಗುತ್ತದೆ. ಮಗನೂ ಬದುಕುತ್ತಾನೆ. ಆದ್ದರಿಂದ ಮನೆಯಲ್ಲಿ ಸ್ತ್ರೀಯರಾದವರು ವಿವೇಕಿಗಳಾಗಿರಬೇಕು. ಆಗ ವಂಶೋದ್ಧಾರವಾದೀತು. ಪುರುಷರು ಉನ್ನತ್ತರಾಗಲು ವಿದ್ಯೆ, ಧನ, ಸೌಂದರ್ಯದಿಗಳು ಕಾರಣವಾಗುತ್ತವೆ. ಇಂತಹ ಸಂದರ್ಭದಲ್ಲಿ ಸ್ತ್ರೀಯರ ಪಾತ್ರ ಬಹು ಹಿರಿದು. ರಾವಣನ ಸತಿ ಮಂಡೋದರಿ ಇದಕ್ಕೆ ಉತ್ತಮ ಉದಾಹರಣೆ. ದ್ರೌಪದಿಯಂತೂ ಅತ್ಯುತ್ತಮ ಆದರ್ಶ ಸ್ತ್ರೀ ಈ ದೃಷ್ಟಿಯಲ್ಲಿ ಧರ್ಮರಾಜನ ದೋಷದಿಂದ ಏನೆಲ್ಲ ಅನಾಹುತವಾಯಿತು. **'ಕೃಷ್ಣಯಾ ರಕ್ಷಿತಾ ವಯಂ'** ಎಂದು ಸ್ವಯಂ ಧರ್ಮರಾಜನೇ ಹೇಳುತ್ತಾನೆ. (ಸಾವಿತ್ರಿ ಉಪಾಖ್ಯಾನದಲ್ಲಿ).

೧೪. ಶಲ, ದಲರಲ್ಲಿ ದಲನ ಪಾತ್ರ ಉತ್ತಮ. ಆತನು ಮೊದಲು ಉದ್ಧಟನಾದರೂ ತನ್ನ ಸಾಮರ್ಥ್ಯ ಕುಂದಿದಾಗ ವಾಮದೇವನಿಗೆ ಶರಣಾಗುತ್ತಾನೆ – ಅವರನ್ನು ಗೌರವಿಸುತ್ತಾರೆ.

೧೫. ಶಲನ ಮುಂದಿನ ಚರಿತ್ರೆ ತಿಳಿದಿಲ್ಲವಾಗಿ ಆತನ ಬಗ್ಗೆ ತೀಕ್ಷ್ಣವಾಗಿ ವ್ಯಾಖ್ಯಾನಿಸ ಕೂಡದು.

ಹೀಗೆ ಮಂಡೂಕೋಪಾಖ್ಯಾನ ಒಂದು ಸುಂದರ ಸಾಂಸಾರಿಕ ಉಪಾಖ್ಯಾನ, ಆಧ್ಯಾತ್ಮಿಕ ಮೌಲ್ಯಗಳನ್ನು ಸಾಕಷ್ಟು ಗುರುತಿಸಬಹುದಾದ ಕಥೆಯಾಗಿದೆ. ರಾಗ, ದ್ವೇಷ, ಕ್ರೋಧ, । ಕಾಮ, ಮೋಹ, ಮದಗಳು ಹೇಗೆ ಜೀವನದಲ್ಲಿ ಹಾಸುಹೊಕ್ಕಾಗಿರುತ್ತವೆ– ಇದ್ದವು ಎನ್ನಲು–ತಿಳಿಸಲು ಉತ್ತಮ ಆಖ್ಯಾಯಿಕೆಯಾಗಿದೆ.

*****

# ೪೪. ಬ್ರಾಹ್ಮಣಮಾಹಾತ್ಮ್ಯ – ಬಕಶಕ್ರರ ಸಂವಾದ

ಋಷಿಗಳು, ಬ್ರಾಹ್ಮಣರು ಹಾಗೂ ಯುಧಿಷ್ಠಿರ ಮಹಾರಾಜನು ಮಾರ್ಕಂಡೇಯರನ್ನು ಬಕ ಋಷಿಗಳ ದೀರ್ಘಾಯುತನಕ್ಕೆ ಕಾರಣವೇನೆಂದು ಕೇಳಿದಾಗ ಮಾರ್ಕಾಂಡೇಯರು ಬಕಮಹಾಮುನಿಯ ಮಹಾತಪಸ್ಸೇ ಇದಕ್ಕೆ ಕಾರಣವೆಂದರು. ಆಗ ಧರ್ಮರಾಜನು ಸೋದರರೊಡನೆ ಮಾರ್ಕಾಂಡೇಯರನ್ನು ಕುರಿತು, ಬಕರು ಇಂದ್ರದೇವರ ಸ್ನೇಹಿತನೆಂದೂ, ಚಿರಂಜೀವಿ ಎಂದೂ ಕೇಳಿದ್ದೇನೆ. ಬಕ ಹಾಗೂ ಶಕ್ರರ ಸಮಾಗಮವಾಗಿತ್ತೆಂದೂ ಆಗ ನಡೆದ ಸಂವಾದದಲ್ಲಿ ಸುಖದುಃಖ ಸಮಾಚಾರದಿಂದ ಕೂಡಿದ ವಿಷಯ ಚರ್ಚಿತವಾದುದನ್ನು ತಿಳಿಸಲು ಧರ್ಮರಾಜನು ಕೇಳಿದನು. ಅದಕ್ಕೆ ಮಾರ್ಕಂಡೇಯರು ಉತ್ತರಿಸಿದರು.

ಹಿಂದೊಮ್ಮೆ ದೇವಾಸುರ ಯುದ್ಧದಲ್ಲಿ ದೇವತೆಗಳು ವಿಜಯಿಗಳಾದಾಗ ಇಂದ್ರನು ತ್ರೈಲೋಕೇಶ್ವರನಾದನು. ಆದ್ದರಿಂದ ಆಗ ಲೋಕದಲ್ಲಿ ಉತ್ತಮ ಮಳೆ ಬೆಳೆಗಳಾದವು. ಪ್ರಜೆಗಳು ತಮ್ಮ ತಮ್ಮ ಧರ್ಮಪರಾಯಣರಾಗಿಯೂ, ರೋಗ ರಹಿತರಾಗಿಯೂ ಇರುವುದನ್ನು ಇಂದ್ರನು ನೋಡಿದನು. ಪ್ರಜೆಗಳೆಲ್ಲ ನೆಮ್ಮದಿಯಿಂದ ಇದ್ದರು. ಆಗ ಇಂದ್ರನು ಐರಾವತವನ್ನೇರಿ ಭೂಮಿಯಲ್ಲಿನ ವಿವಿಧ ಋಷ್ಯಾಶ್ರಮಗಳನ್ನು, ನದಿಗಳನ್ನು, ನಗರ, ಜನಪದಗಳ ಪ್ರಜಾಪಾಲನೆಯಲ್ಲಿ ದಕ್ಷರಾದ ರಾಜರನ್ನೂ, ನಾನಾ ಬ್ರಾಹ್ಮಣರಿಂದ ಸೇವಿಸಲ್ಪಟ್ಟ ಸರೋವರಾದಿಗಳನ್ನು ನೋಡುತ್ತಾ ರಮ್ಯವಾದ ಮಂಗಳಕರವಾದ, ಜಿಂಕೆ, ಪಶುಪಕ್ಷಿಗಳಿಂದ ಸೇವಿತವಾದ ಒಂದು ಆಶ್ರಮದಲ್ಲಿದ್ದ ಬಕರನ್ನು ನೋಡಿ ಅಲ್ಲಿಗೆ ಬಂದನು. ಆಗ ಬಕರು ಇಂದ್ರನನ್ನು ಆಶ್ರಮೋಚಿತವಾದ ಕಂದಮೂಲ ಫಲಾಶನ, ಅರ್ಘ್ಯ ಪಾದ್ಯಾದಿಗಳಿಂದ ಉಪಚರಿಸಿದಾಗ ಇಂದ್ರ ಅವರನ್ನು ಕುರಿತು ಹೀಗೆ ಪ್ರಶ್ನಿಸಿದನು.

**ಶತಂ ವರ್ಷ ಸಹಸ್ರಾಣಿ ಮುನೇ ಜಾತಸ್ಯ ತೇಽನಘ ।**
**ಸಮಾಖ್ಯಾಹಿ ಮಮ ಬ್ರಹ್ಮನ್ ಕಿ ದುಃಖಂ ಚಿರಜೀವಿನಾಂ ॥**

**ವನಪರ್ವ–ಅ.೧೯೩–೧೭**

'ನೂರಾರು ಸಾವಿರ ವರ್ಷ (ಒಂದು ಲಕ್ಷ ವರ್ಷ) ವಾಗಿದೆ ನೀನು ಹುಟ್ಟಿ ಬಂದು. ಜೀರಂಜೀವಿಗಳ ದುಃಖಗಳನ್ನು ನನಗೆ ದಯವಿಟ್ಟು ತಿಳಿಸು'. ಅದಕ್ಕೆ ಬಕರು ಉತ್ತರಿಸಲಾರಂಭಿಸಿದರು.

ಚಿರಂಜೀವಿಗಳ ಬದುಕಿನ ಬವಣೆಗಳು ಹಲವು (ಅವರು ಬಹುಕಾಲ ಬದುಕಿದ್ದರಿಂದಾಗಿ ಅವರು ಈ ಪ್ರಪಂಚದಲ್ಲಿ ಅನೇಕ ಕಷ್ಟ ಕಾರ್ಪಣ್ಯಗಳನ್ನು

ನೋಡಬೇಕಾಗುತ್ತದೆ. ಅವುಗಳ ಮಧ್ಯದಲ್ಲಿಯೇ ಜೀವಿಸಬೇಕಾಗುತ್ತದೆ.) ಅವು ಯಾವುವೆಂದರೆ - ಬೇಡವಾದವರೊಡನೆ ವಾಸಿಸುವುದು, ಬೇಕಾದವರಿಂದ ಬೇಗ ವಿಯೋಗ ಹೊಂದುವುದು (ಬೇಕಾದವರು ನಮ್ಮೊಡನೆ ಬಹುಕಾಲ ಇರದೇ ಸಾಯಬಹುದು), ಅಸತ್ಪುರುಷ (ದುರ್ಜನ) ರೊಡನೆ ಸಹವಾಸ, ಕೈಹಿಡಿದ ಪತ್ನಿ, ತನ್ನ ಮಕ್ಕಳ ನಾಶ, ಮೊಮ್ಮೊಕ್ಕಳ ನಾಶ, ಬಂಧು-ಮಿತ್ರರ ನಾಶಗಳನ್ನು ನೋಡಬೇಕಾಗುತ್ತದೆ. ಇದಕ್ಕಿಂತ ದುಃಖ ಯಾವುದಿದೆ? ಜೀವನ ನಿರ್ವಹಣೆಗಾಗಿ ಪರಾವಲಂಬನ ಸಾಲದ್ದಕ್ಕೆ ಸ್ವಯಂ ಹಣವಿಲ್ಲದವನು ಇತರರ ತಿರಸ್ಕಾರಕ್ಕೆ ಒಳಗಾಗುತ್ತಾನೆ. ಚಿರಂಜೀವಿಯು ಕುಲಹೀನರಾದವರ ಪ್ರಗತಿ, ಸತ್ಕುಲ ಪ್ರಸೂತರನಾಶ ನೋಡಬೇಕಾಗುತ್ತದೆ. ಇವರ ಸಹವಾಸ ಬೇರೆ ಆದೀತು! ಈ ಬಗ್ಗೆ ಇಂದ್ರ, ನೀನೂ ಕೂಡಾ ಅನುಭವಿಸಿದ್ದೀಯಲ್ಲಾ! ಸತ್ಕುಲದಲ್ಲಿ ಹುಟ್ಟಿದವರಿಗೆ ಕ್ಲೇಶಗಳು; ದುಷ್ಟ ಜನರ ಹತೋಟಿಗೆ ಒಳಪಟ್ಟಿರುತ್ತಾರೆ. ಇದಲ್ಲ ನೋಡುವ ದೌರ್ಭಾಗ್ಯ ಚಿರಂಜೀವಿಗಳದು ಐಶ್ವರ್ಯವಂತರು ದರಿದ್ರರನ್ನು ಹಿಂಸಿಸುತ್ತಾರೆ. ಜ್ಞಾನದರಿದ್ರರು ನಿಜವಾದ ಜ್ಞಾನಿಗಳನ್ನು ಕ್ಲೇಶ ಪಡಿಸುತ್ತಾರೆ. ಇವೆಲ್ಲ ನೋಡುವುದೇ ಚಿರಂಜೀವಿಗೆ ಬರಬಹುದು.

ಆಗ ಇಂದ್ರನು ಚಿರಂಜೀವಿಯು ಅನುಭವಿಸುವ ಸುಖದ ವಿಷಯಗಳನ್ನು ತಿಳಿಸು ಎಂದಾಗ ಬಕರು:

೧) ದಿನದ ಎಂಟನೇ, ಹನ್ನೆರಡನೇ ಮುಹೂರ್ತದಲ್ಲಿ ಸ್ವಾಭಾವಿಕವಾಗಿ ಸಿಗುವ ತರಕಾರಿಯನ್ನು ಬೇಯಿಸಿಕೊಂಡು ತಿನ್ನುವುದೇ ಅತ್ಯಂತ ಸುಖಕರ.

೨) ದುಷ್ಟ ಗೆಳೆಯರನ್ನು ಆಶ್ರಯಿಸದಿರುವುದು.

೩) ಯಾವನಿಗೆ ಊಟಕ್ಕೆ ಹಗಲುಗಳು ಗಣನೆಗೆ ಬರುವುದಿಲ್ಲವೋ ಅವನೇ ಸುಖಿ. ಆಹಾರ ಸಿಕ್ಕ ದಿನಗಳೇ ಅವನು ಉಣ್ಣುತ್ತಾನೆ. ಇಲ್ಲದಿದ್ದರೆ ಇಲ್ಲ. ಹೆಚ್ಚು ತಿಂದರೂ ಅವನನ್ನು ಯಾರು 'ಕೂಳುಬಾಕ' ಅನ್ನುವುದಿಲ್ಲ (ಮಹಾಶನ).

೪) ಯಾರನ್ನು ಆಶ್ರಯಿಸದೇ ತಾನೇ ಕಷ್ಟಪಟ್ಟು ಸಂಪಾದಸಿ ಉಣ್ಣುವವನು (ಧರ್ಮದಿಂದ ಸಂಪಾದಿಸಿ)

೫) ಬೇಡದೆ, ತಾನೇ ಶ್ರಮಪಟ್ಟು ಸಂಪಾದಿಸಿದ ಹಣ್ಣು, ಹಂಪಲು, ತರಕಾರಿಗಳನ್ನು ಉಣ್ಣುವವನು ಶ್ರೇಷ್ಠ. ಪರಾನ್ನ ಎಷ್ಟೇ ರುಚಿಕರವಾಗಿದ್ದರೂ ನಿಂದ್ಯವೇ ಸರಿ. ಅಂತಹ ಅನ್ನಕ್ಕೆ ಧಿಕ್ಕಾರ.

೬) ಯಾರು ಅತಿಥಿಗಳಿಗೆ ಕೊಟ್ಟು ಪಿತೃಗಳಿಗೆ ನೀಡಿ ಉಳಿದುದನ್ನು ಉಣ್ಣುತ್ತಾನೋ ಅವನೇ ಸುಖಿ. ಇಲ್ಲದವನು ನಾಯಿಗಿಂತಲೂ ಕಡೆ.

೭) ಮಧ್ಯಾಹ್ನದವರೆಗೂ ಕಾದು ಅತಿಥಿ ಅಭ್ಯಾಗತರಿಗೆ ಭೋಜನ ನೀಡಿ ನಂತರ ತಾನು ಉಣ್ಣುವವನು ಧನ್ಯ.

೮) ಅತಿಥಿಗಳು ಬಂದು ಗೃಹಸ್ಥನ ಮನೆಯಲ್ಲಿ ಎಷ್ಟು ಅನ್ನದ ತುತ್ತುಗಳನ್ನು ಉಣ್ಣುತ್ತಾನೋ ಅಷ್ಟು ಸಾವಿರ ಗೋದಾನ ಮಾಡಿದ ಪುಣ್ಯ ಆ ಗೃಹಸ್ಥನಿಗೆ ಬರುತ್ತದೆ. ಅಂದರೆ ಗೃಹಸ್ಥನ ಪಾಪಗಳೂ ನಾಶವಾಗುತ್ತವೆ.

೯) ಮನೆಗೆ ಬರುವ ಅತಿಥಿಗೆ ಹೊಟ್ಟೆ ತುಂಬ ಊಟ–ಕೈತುಂಬ ದಕ್ಷಿಣೆಯನ್ನು ಕೊಟ್ಟು **'ನ ಮಮ ನ ಮಮ'** ಎಂಬ ಅನುಸಂಧಾನವುಳ್ಳ ಗೃಹಸ್ಥನನ್ನು ನೋಡುವ ಭಾಗ್ಯವೇ ಚಿರಂಜೀವಿಯದು.

ಹೀಗೆ ಚಿರಂಜೀವಿಯ ಭಾಗ್ಯ ಎರಡೂ ಇರುತ್ತವೆ. ಅವನ ಜೀವನದಲ್ಲಿ ಅತ್ಯಂತ ದುಃಖಕರವಾದ ಹಾಗೂ ಸುಖಕರ ಪರಿಸರಗಳಲ್ಲಿ ವಾಸಿಸಿ ಅನುಭವಿಸುವುದೇ ಆಗಿದೆ.

ಹೀಗೆ ಬಕರು ಹೇಳಲು ಇಂದ್ರದೇವನು ಅವರಿಗೆ ಹೇಳಿ ಸ್ವರ್ಗಕ್ಕೆ ಹೋದನು.

### ಸಂದೇಶಗಳು–ವಿವರಣೆಗಳು

೧) ಹೆಚ್ಚು ಕಾಲ ಬಾಳುವವನು ತನ್ನ ಜೀವಿತಾವಧಿಯಲ್ಲಿ ಎಲ್ಲ ತರಹದ ಸುಃಖದುಃಖಗಳನ್ನು ಸಮಾಜದಲ್ಲಿ ತನ್ನದೇ ಕುಟುಂಬದಲ್ಲಿ ನೋಡಿ ಅನುಭವಿಸುತ್ತಾನೆ.

೨) ಹೀಗಾಗಿ ಅಂತಹವನು **ಅನುಭವಸಮುದ್ರನಾಗುತ್ತಾನೆ.**

೩) ಸಮಾಜದಲ್ಲಿ ಗಣ್ಯಾತಿ ಗಣ್ಯರಾಗಿ ಎಲ್ಲರ ಗೌರವಕ್ಕೆ ಪಾತ್ರನಾಗುತ್ತಾನೆ. ಜ್ಞಾನನಿಧಿಯಾಗುತ್ತಾನೆ. ಆದ್ದರಿಂದಲೇ ಇಂದಿಗೂ ವಯೋವೃದ್ಧರಿಗೆ ಗೌರವದ ಸ್ಥಾನವಿದೆ– ಸಮಾಜದಲ್ಲಿ **'ವಿತ್ತಂ ಬಂಧುರ್ವಯಃ ಕರ್ಮ'** ಎಂಬ ಆಚಾರ್ಯರ ಮಾತಿಗೆ ಈ ಉಪಾಖ್ಯಾನ ನಿದರ್ಶನವಾಗಿದೆ. ಇನ್ನು ಅವನು ಜ್ಞಾನಿಯಾದರಂತೂ ಸಕಲರಿಂದಲೂ ಮಾನ್ಯನಾಗುತ್ತಾರೆ.

೪) [೧]ಹಣ, ಬಾಂಧವ್ಯ, ವಯಸ್ಸು, ಕರ್ಮನಿಷ್ಠೆ ಇವುಗಳ ನಂತರ ಜ್ಞಾನ ಮಾನ್ಯತೆಯ ಮಾನದಂಡಗಳು. ಕ್ರಮವಾಗಿ ಒಂದಕ್ಕಿಂತ ಮುಂದಿನದು ಹೆಚ್ಚಿನದು. ಜ್ಞಾನಿಯ ಮಾನ್ಯತೆಗೆ ಮೇರೆ ಇಲ್ಲ. ಅವನು ಸರ್ವಮಾನ್ಯ ಕಾರಣ ಅವನ ವಿದ್ಯೆ ಅವನ ಮಾನ್ಯತೆಗೆ ಅಳತೆಗೋಲು. ಬಕರ ವ್ಯಕ್ತಿತ್ವ ವಯಸ್ಸಿನಿಂದ ಹಿರಿಯರು. ಹಾಗೂ ಇಂದ್ರನಿಂದಲೂ ಮಾನ್ಯರಾದ ಜ್ಞಾನಿಗಳು.

ಇಂದ್ರದೇವರ ಈ ನಡೆ ಲೋಕ ವಿಡಂಬನೆಗಾಗಿ, ಲೋಕದಲ್ಲಿ ನಾವು ಹೇಗೆ ವರ್ತಿಸಬೇಕು ಎಂದು ಇಂದ್ರ ತಿಳಿಸುತ್ತಾನೆ.

*****

---

೧ ವಿತ್ತಂ ಬಂಧುರ್ವಯಃ ಕರ್ಮ ಜ್ಞಾನೀ ಚೈವತು ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರೀಯೋ ಹ್ಯುತ್ತರೋತ್ತರಮ್ ॥ – ಕೃಷ್ಣಾಮೃತಮಹಾರ್ಣವ

## ೪೫. ಕ್ಷತ್ರಿಯರ ಮಹತ್ತ್ವ – ಶಿಬಿ ಚರಿತೆ

ಬ್ರಾಹ್ಮಣರ ಮಹತ್ತ್ವವನ್ನು ಕೇಳಿದ ತರುವಾಯ ಪಾಂಡವರು ಕ್ಷತ್ರಿಯರ ಮಹತ್ವದ ಬಗ್ಗೆ ತಿಳಿಸಲು ಮಾರ್ಕಾಂಡೇಯರನ್ನು ಪ್ರಾರ್ಥಿಸಿದರು. ಅದಕ್ಕೆ ಮಾರ್ಕಂಡೇಯರು ಕ್ಷತ್ರಿಯರ ಮಹತ್ತ್ವ ತಿಳಿಸುವ ಇತಿಹಾಸವೊಂದನ್ನು ನಿರೂಪಿಸಿದರು.

ಕುರುವಂಶದ ರಾಜ **ಸುಹೋತ್ರ** ಒಮ್ಮೆ ಮಹರ್ಷಿಗಳನ್ನು ಸಂದರ್ಶಿಸಿ ವಾಪಸು ಬರುವಾಗ **ಉಶೀನರನ** ಪುತ್ರ **ಶಿಬಿಯನ್ನು** ಎದುರಾಗಿ ಕಂಡನು. ಅವರು ಪರಸ್ಪರ ಸಮಾನಸ್ಕಂಧರು, ಪರಸ್ಪರ ಅಭಿನಂದಿಸಿ ಹಾಗೆಯೇ ನಿಂತರು. ಎರಡೂ ರಥಗಳು ಒಂದೇ ಕಿರು ದಾರಿಯಲ್ಲಿ ಹೋಗಬೇಕಿತ್ತು. ಒಬ್ಬರು ದಾರಿ ಕೊಟ್ಟರೆ ಮಾತ್ರ ಇನ್ನೊಬ್ಬರು ಮುಂದೆ ಹೋಗಬಹುದಾದ ಏಕಮುಖ ರಸ್ತೆಯಾದ್ದರಿಂದ ಇಬ್ಬರಲ್ಲಿ ಒಬ್ಬರೂ ಮತ್ತೊಬ್ಬರಿಗೆ ದಾರಿ ಕೊಡದೆ ಇದ್ದುದರಿಂದ ಇಬ್ಬರೂ ಹಾಗೆಯೇ ನಿಂತು ಬಿಟ್ಟರು. ಆಗ ನಾರದರು ಅಲ್ಲಿಗೆ ಆಗಮಿಸಿದರು.

ಪರಸ್ಪರ ಅಭಿಮುಖರಾಗಿ ನಿಂತ ಇಬ್ಬರೂ ರಾಜರನ್ನು ಉದ್ದೇಶಿಸಿ ನಾರದರು

'ಏನಿದು ಇಬ್ಬರೂ ದಾರಿಕೊಡದೆ ಹಾಗೆ ನಿಂತಿರುವಿರಿ'. ಎಂದರು. ಅದಕ್ಕೆ ಅವರು ನಾವು ದಾರಿಯನ್ನು ಮತ್ತೊಬ್ಬರು ಹೋಗದಿರಲೆಂದು ನಿಂತಿಲ್ಲ. ನಾವು ಪರಸ್ಪರ ಸಮಾನರೇ. ಆದ್ದರಿಂದ ಪರಸ್ಪರ ಹಾದಿ ಕೊಡದೆ ನಿಂತಿದ್ದೇವೆ. (ನಮ್ಮಲ್ಲಿ ಉತ್ತಮರು ಯಾರು ಎಂಬುದು ನಮಗೆ ಗೊತ್ತಿಲ್ಲ. ಗೊತ್ತಿದ್ದರೆ ಉತ್ತಮರಿಗೆ ದಾರಿ ಕೊಡಬಹುದಿತ್ತು) ಆಗ ನಾರದರು 'ಸುಹೋತ್ರನೇ! ಕ್ರೂರಿಯು ಸತ್ಪುರುಷನನ್ನು ಸಂಧಿಸಿದಾಗ ಕ್ರೂರಿಯಾಗಿಯೇ ಇರುವನು. ಭೇಟಿಯಾದ ಮಾತ್ರಕ್ಕೆ ಕ್ರೌರ್ಯವನ್ನು ಅವನು ಬಿಡನು. ಸಾಧುವಾದವನೂ ಕೂಡಾ ಸಾಧುಪುರುಷರನ್ನು ಕಂಡಾಗ ಕ್ರೂರಿಯಾಗುವುದಿಲ್ಲ. ಮೃದುವಾಗಿಯೇ ವರ್ತಿಸುತ್ತಾನೆ. ಅವರ ಸ್ವಭಾವ ಬದಲಾಗುವುದಿಲ್ಲ. ನೀವಿಬ್ಬರೂ ಸಾಧುಗಳೇ ಆಗಿರುವಾಗ ಪರಸ್ಪರ ಏಕೆ ಗೌರವಿಸುವುದಿಲ್ಲ! ನಿಮ್ಮಲ್ಲಿಯೇ ಒಬ್ಬರು ದಾರಿ ಕೊಟ್ಟರೆ ನೀವು ಕಳೆದುಕೊಳ್ಳುವುದಾದರೂ ಏನು! ಶಿಬಿ ಕ್ರೂರಿಗಳ ವಿಷಯದಲ್ಲೂ ಮೃದುವಾಗಿ ವರ್ತಿಸುತ್ತಾನೆ ಅವನು ನಿನಗಿಂತ ಶ್ರೇಷ್ಠ.

'ಜಿಪುಣನನ್ನು ದಾನದಿಂದ, ಸುಳ್ಳು ಹೇಳುವವನ್ನು ಸತ್ಯ ಭಾಷಣದಿಂದ, ಕ್ರೂರಿಯನ್ನು ಕ್ಷಮಾಗುಣದಿಂದ, ದುಷ್ಟನನ್ನು ಸದ್ಗುಣದಿಂದ ಗೆಲ್ಲಬೇಕೇ ಹೊರತು ತಾರ್ಕಿಕವಾಗಿ ಚಿಂತಿಸಬಾರದು'.

**ಕ್ರೂರ: ಕೌರವ್ಯ ಮೃದವೇ ಮೃದು: ಕ್ರೂರೇ ಚ ಕೌರವ ।**
**ಸಾಧುಶ್ಚಾಸಾಧವೇ ಸಾಧು: ಸಾಧವೇ ನಾಪ್ನುಯಾತ್ ಕಥಂ ॥**

**ಔಶೀನರ: ಸಾಧುಶೀಲೋ ಭವತೋ ಮಹೀಪತಿಃ ।**

**ಜಯೇತ್ಕದರ್ಯಂ ದಾನೇನ ಸತ್ಯೇನಾನೃತವಾದಿನಂ ।**
**ಕ್ಷಮಯಾ ಕ್ರೂರಕರ್ಮಾಣಮಸಾಧುಂ ಸಾಧುನಾ ಜಯೇತ್ ॥**
**– ವನಪರ್ವ ೧೯೪–೪,೫,೬**

ಹೀಗೆ ಹೇಳಿದ ನಾರದರು ಮೌನವಹಿಸಲಾಗಿ ಸುಹೋತ್ರನು ಶಿಬಿಯನ್ನು ಪ್ರದಕ್ಷಿಣ ಹಾಕಿ, ದಾರಿಕೊಟ್ಟು ಪ್ರಶಂಶಿಸಿದನು. ಶಿಬಿಯು ಮುನ್ನಡೆದನು.

### ಸಂದೇಶಗಳು–ವಿವರಣೆಗಳು

೧) ಹೆಗ್ಗಳಿಕೆ ದೊಡ್ಡಸ್ತಿಕೆಗೆ ವರ್ಣವೇ ಮುಖ್ಯವಲ್ಲ. ವರ್ಣಾಶ್ರಮವನ್ನು ಮೀರಿದ್ದು ಭಕ್ತ್ಯಾದಿ ಸದ್ಗುಣಗಳು ಅವು ಸಾಧನೆಯನ್ನು ಅವಲಂಬಿಸಿರುತ್ತವೆ.

೨) ವಯಸ್ಸು ಮಾತ್ರದಿಂದ ದೊಡ್ಡಸ್ತಿಕೆಯನ್ನು ಅಳೆಯುವುದು ತಪ್ಪು

೩) ತನ್ನನ್ನು ತಾನೇ ಇತರರಿಗೆ ಸಮನೆಂದೋ, ಉತ್ತಮನೆಂದೋ ಭಾವಿಸುವುದು ತಪ್ಪು. ನಿಜವಾದ ಮಾನದಂಡದ ಕಲ್ಪನೆ ತಿಳಿದಿರಬೇಕು.

೪) ತನ್ನ ಇತರರ ದೊಡ್ಡಸ್ತಿಕೆ ತಿಳಿಯಲು ಆತ್ಮವೇದನೆ ಅವಶ್ಯ (Introspection) ಪ್ರಾಯಃ ಸಾಕ್ಷಿಯಿಂದ ತಿಳಿಯದುದು ಯಾವುದೂ ಇಲ್ಲ

೫) ಹಿರಿಯರ (ನಾರದರಂಥ) ಮಾರ್ಗದರ್ಶನ ಹೊಂದಲು ಪಡೆಯಲು ಪ್ರಯತ್ನಿಸಬೇಕು. ಅಥವಾ ಉಪಲಬ್ಧವಿರುವ ಉನ್ನತ ವ್ಯಕ್ತಿಗಳ ಮಾರ್ಗದರ್ಶನ ಪಡೆದರೂ ವಿಷಯವನ್ನು ಸರಿಯಾಗಿ ತಿಳಿಯಬಹುದು.

## ೨. ಬ್ರಾಹ್ಮಣನಿಗೆ ಗೋಸಹಸ್ರದಾನ ಕ್ಷತ್ರಿಯನಿಂದ(ಯಯಾತಿಯಿಂದ) ನಹುಷಚರಿತೆ

ಮಾರ್ಕಾಂಡೇಯರು ಕ್ಷತ್ರಿಯರ ವಿಶೇಷ ಗುಣಗಳನ್ನು ತಿಳಿಸುವ ಯಯಾತಿಯ ಚರಿತ್ರೆಯ ಒಂದು ಭಾಗವನ್ನು ನಿರೂಪಿಸಿದರು.

ಒಮ್ಮೆ ಬ್ರಾಹ್ಮಣನೊಬ್ಬ ಯಯಾತಿಯ ಸಭೆಗೆ ಆಗಮಿಸಿ ತನಗೆ ಗುರುದಕ್ಷಿಣೆಗಾಗಿ ಸಹಾಯ ಕೇಳಲು ಬಂದನು.

**'ಗುರ್ವರ್ಥೀ ಬ್ರಾಹ್ಮಣ ಉಪೇತ್ಯಾಬ್ರವೀತ್ ಭೋ ರಾಜನ್ ।**
**ಗುರ್ವರ್ಥಂ ಭಿಕ್ಷೇಯಂ ಸಮಯಾದಿತಿ' ।** ವನಪರ್ವ ೧೯೫–೧

ಆಗ ಯಯಾತಿಯು ಗುರುದಕ್ಷಿಣೆಯನ್ನು ಯಾವ ನಿಬಂಧನೆಗೊಳಪಟ್ಟು ಪಡೆಯಬಯಸುವೆ? ಎಂದು ಕೇಳಿದನು. ಆಗ ಬ್ರಾಹ್ಮಣನು

**'ಏದ್ವೇಷಣಂ ಪರಮಂ ಜೀವಲೋಕೇ**
**ಕುರ್ಯಾನ್ನರ: ಪಾರ್ಥಿವ ಯಾಚ್ಯಮಾನಃ।**
**ತಂ ತ್ವಾಂ ಪೃಚ್ಛಾಮಿ ಕಥಂ ನು ರಾಜನ್**
**ದದ್ಯಾತ್‌ಭವಾನ್ ದಯಿತಂ ಚ ಮೇऽದ್ಯ' ॥** ೧೯೫-೩

೧) ಯಾಚಿಸುವವನ್ನು ದಾನಿಯು ದ್ವೇಷಿಸಬಾರದು ಕೀಳಾಗಿ ನೋಡಬಾರದು.

೨) ನೀನೇ ಹೇಳು-ಯಾಚಕನ ಬಗ್ಗೆ ನಿನಗಾಗುವ ಮಾನಸಿಕ ಪರಿಣಾಮ-ಗಳಾವುವು?

ಅದಕ್ಕೆ ಯಯಾತಿಯು

**'ನ ಚಾನುಕೀರ್ತಯೇದದ್ಯ ದತ್ವಾ**
**ಅಯಾಚ್ಯಮರ್ಥಂ ನ ಚ ಸಂಶೃಣೋಮಿ ।**
**ಪ್ರಾಪ್ಯಮರ್ಥಂ ಚ ಸಂಶ್ರುತ್ಯ**
**ತಂ ಚಾಪಿ ದತ್ವಾ ಸುಸುಖೀ ಭವಾಮಿ' ॥** ವನಪರ್ವ ೧೯೫-೪

'ನಾನು ದಾನಕೊಟ್ಟ ಮೇಲೆ ಆ ಬಗ್ಗೆ ಯಾರಿಗೂ ಹೇಳಿಕೊಳ್ಳುವುದಿಲ್ಲ. ಕೊಟ್ಟದುದನ್ನು ಮತ್ತೊಮ್ಮೆ ನೆನೆಯುವುದೂ ಇಲ್ಲ. ದಾನಕ್ಕೆ ಅನರ್ಹವಾದುದು ಯಾವುದೂ ಇಲ್ಲವೆಂದು ಬಗೆದಿದ್ದೇನೆ. ಹೀಗೆ ನಾನು ಯಾಚಕರನ್ನು ಹಿಂದೆ ಮುಂದೆ ಎಂದೂ ನೋಡದೆ ಬೇಡಿದುದನ್ನು ಕೂಡಲೆ ಕೊಟ್ಟು ಸುಖವಾಗಿರುತ್ತೇನೆ' ಇದೇ ನನ್ನ ನಿಲುವು ಯಾಚಕರ ಬಗ್ಗೆ

'ಅಲ್ಲದೆ ಎಲೈ ಬ್ರಾಹ್ಮಣನೇ! ನಿನಗೆ ನಾನು ನಿನ್ನ ಗುರು ದಕ್ಷಿಣೆ ನಿರ್ವಹಣೆಗಾಗಿ ಒಂದು ಸಾವಿರ ಕುದುರೆಗಳನ್ನು ಕೊಡುತ್ತೇನೆ. ಯಾಚಿಸುವ ಬ್ರಾಹ್ಮಣನು ನನಗೆ ಅತ್ಯಂತ ಪ್ರಿಯ. ಅವನ ಬಗ್ಗೆ ನಾನೆಂದೂ ಕೋಪಿಸಿಕೊಳ್ಳುವುದಿಲ್ಲ. ಕೊಟ್ಟ ದಾನದ ಬಗ್ಗೆ ಎಂದೂ ದುಃಖಿಸುವುದಿಲ್ಲ. ಪಶ್ಚಾತ್ತಾಪ ಪಡುವುದಿಲ್ಲ.'

**ದದಾಮಿತೇ ರೋಹಿಣೀನಾಂ ಸಹಸ್ರಂ**
**ಪ್ರಿಯೋಹಿ ಮೇ ಬ್ರಾಹ್ಮಣೋ ಯಾಚಮಾನಃ ।**
**ನಮೇ ಮನಃ ಕುಪ್ಯತಿ ಯಾಚಮಾನೇ**
**ದತ್ತಂ ನ ಶೋಚಾಮಿ ಕದಾಚಿದರ್ಥಂ ॥** ೧೯೫-೫

ಹೀಗೆ ನುಡಿದು ರಾಜನು ಬ್ರಾಹ್ಮಣ ಯಾಚಕನಿಗೆ ೧೦೦೦ ಗೋವುಗಳನ್ನು ದಾನಮಾಡಿ ಸುಮ್ಮನಾದನು. ಬ್ರಾಹ್ಮಣನು ದಾನ ಸ್ವೀಕರಿಸಿ ತನ್ನ ಗ್ರಾಮಕ್ಕೆ ತೆರಳಿದನು.

## ಸಂದೇಶಗಳು–ವಿವರಣೆಗಳು

ಬ್ರಾಹ್ಮಣ ಹಾಗೂ ಯಯಾತಿಯರ ಮಾತುಗಳಲ್ಲಿಯೇ ಸಂದೇಶಗಳಿವೆ.

೧) ಯಾಚಕನ ಬಗ್ಗೆ ದ್ವೇಷ, ಕುತ್ಸಿತ ವಿಚಾರ ಸಲ್ಲದು

೨) ದಾನ ಕೊಟ್ಟ ಮೇಲೆ, ಕೊಟ್ಟ ಬಗ್ಗೆ ಯಾರಿಗೂ ಹೇಳಬಾರದು

೩) ಯಾಚಕನ ಬಗ್ಗೆ ತಾತ್ಸಾರ ಭಾವನೆ ಸಲ್ಲದು

೪) ದಾನ ಸ್ವೀಕರಿಸಿದವನು ದಾನಿಯ ಬಗ್ಗೆ ಕೃತಜ್ಞತೆ ಇಟ್ಟುಕೊಳ್ಳಬೇಕು.

*****

## ೪೬. ವೃಷದರ್ಭ–ಸೇದುಕರಾಜರ ಚರಿತ್ರೆ

ಧರ್ಮರಾಜ ಮತ್ತೆ ರಾಜರ ಹಿರಿಮೆಯನ್ನು ಹೇಳಲು ಕೋರಿದ. ಅದಕ್ಕೆ ಮಾರ್ಕಾಂಡೇಯರು .

ಹಿಂದೆ ವೃಷದರ್ಭ ಹಾಗೂ ಸೇದುಕರೆಂಬ ಇಬ್ಬರು ರಾಜರಿದ್ದರು. ಅವರು ರಾಜನೀತಿ ಬಲ್ಲವರೂ ಅದರಂತೆ ನಡೆಯುವವರೂ, ಅಸ್ತ್ರ, ಉಪಾಸ್ತ್ರಗಳನ್ನು (ಧನುರ್ವಿದ್ಯೆ) ಬಲ್ಲವರಾಗಿದ್ದರು.

ಅದರಲ್ಲಿ ಸೇದುಕನಿಗೆ ವೃಷದರ್ಭನು ರಹಸ್ಯವಾಗಿ ಮಾಡಿಕೊಂಡ ವ್ರತವು ಹೇಗೋ ತಿಳಿದಿತ್ತು. ವೃಷದರ್ಭನು 'ಯಾವ ಬ್ರಾಹ್ಮಣನಿಗೂ ಬೆಳ್ಳಿ–ಬಂಗಾರ ಹೊರತಾಗಿ ಬೇರೇನನ್ನೂ ದಾನ ಮಾಡುವುದಿಲ್ಲ'ವೆಂದು ಸಂಕಲ್ಪ–ಪ್ರತಿಜ್ಞೆ ಮಾಡಿದ್ದಲ್ಲದೆ ಹಾಗೆಯೇ ಬಾಲ್ಯದಿಂದಲೂ ಅದರಂತೆ ನಡೆಯುತ್ತಿದ್ದನು. (ಇದೇ ಆತನ ವ್ರತವಾಗಿತ್ತು).

> **'ಸೇದುಕೋ ವೃಷದರ್ಭಸ್ಯ ಬಾಲಸ್ಯೈವ ಉಪಾಂಶುವ್ರತಂ ಅಭ್ಯಜಾನಾತ್**
> **ಕುಪ್ಯಮದೇಯಂ ಬ್ರಾಹ್ಮಣಸ್ಯ'** । **ಅ–೧೯೬–೩**

ಒಮ್ಮೆ ಒಬ್ಬ ಬ್ರಾಹ್ಮಣನು ವೇದಾಧ್ಯಯನವನ್ನು ಪೂರೈಸಿ ಸೇದುಕರಾಜನ ಬಳಿಗೆ ಬಂದು ಆಶೀರ್ವದಿಸಿ ನಾನು ಗುರುದಕ್ಷಿಣೆಯಾಗಿ ಸಂಕಲ್ಪ ಮಾಡಿರುವ ಒಂದು ಸಾವಿರ ಕುದುರೆಗಳನ್ನು ದಾನವಾಗಿ ಕೊಡು' ಎಂದು ಬೇಡಿದನು. ಅದಕ್ಕೆ ಸೇದುಕನು ನನ್ನಲ್ಲಿ ಅಷ್ಟು ಕುದುರೆಗಳು ಇಲ್ಲ, ಎಂದನು. ಆದರೆ ಎಲೈ ಬ್ರಾಹ್ಮಣನೇ ನೀನು ವೃಷದರ್ಭನ ಬಳಿ ಹೋಗಲು ಅವನು ಬೇಡಿದುದನ್ನು ಕೊಡುವ ಸಂಕಲ್ಪ ಮಾಡಿದ್ದಾನೆ. ಅವನನ್ನು ಬೇಡು ಕೊಡುತ್ತಾನೆ, ಎಂದನು. (ಸೇದುಕ ರಾಜನು) ಅದರಂತೆ ಬ್ರಾಹ್ಮಣನು ವೃಷದರ್ಭನ ಬಳಿ ಹೋಗಿ ಸಾವಿರ ಕುದುರೆಗಳನ್ನು ಬೇಡಲು, ರಾಜನು ಬಾರು ಕೋಲಿನಿಂದ ಹೊಡೆದು ಬಿಟ್ಟ.

ಹೀಗೆ ರಾಜನು ಹೊಡೆದಾಗ ಬ್ರಾಹ್ಮಣನು 'ನಿರಪರಾಧಿಯಾದ ನನ್ನನ್ನು ಏಕೆ ಹಿಂಸಿಸಿದಿ (ಹೊಡೆದಿ)' ಎಂದೆನ್ನುತ್ತಾ ಶಾಪ ಕೊಡಲು ಹೋದಾಗ ರಾಜನು 'ಯಾರು ತನ್ನಲ್ಲಿರುವ ಐಶ್ವರ್ಯವನ್ನು ಬ್ರಾಹ್ಮಣನಿಗೆ ದಾನ ಮಾಡುವುದಿಲ್ಲವೊ ಅವನಿಗೆ ನೀನು ಶಾಪ ಕೊಡಬಹುದು. ದಾನಿಯಾದ ನನಗಲ್ಲ. ಶಾಪಕೊಡುವವನು ಬ್ರಾಹ್ಮಣನೂ ಅಲ್ಲ'. ಅಂದನು.

ಅದಕ್ಕೆ ಬ್ರಾಹ್ಮಣನು –

ಎಲೈ ರಾಜಾಧಿರಾಜ! ನಾನು ಸೇದುಕನ ಸಲಹೆ ಮೇರೆಗೆ ನಿನ್ನನ್ನು ಸಾವಿರ ಕುದುರೆಗಳನ್ನು ಯಾಚಿಸಿದೆ. ಆದ್ದರಿಂದ ಇದರಲ್ಲಿ ನನ್ನದೇನೂ ತಪ್ಪಿಲ್ಲ.

ಅದಕ್ಕೆ ರಾಜನು–

'ಆಯಿತು! ನನಗೆ ನಾಳೆ ಬೆಳಗಿನಿಂದ ಮಧ್ಯಾಹ್ನದವರೆಗೆ ಬರುವ ಕಪ್ಪಕಾಣಿಕೆಯನ್ನು ನಿನಗೆ ಕೊಡುವೆ. ಚಾವಟಿಯಿಂದ ಹೊಡೆದ ಬ್ರಾಹ್ಮಣನನ್ನು ನಾನು ಹೇಗೆ ತಾನೇ ಬರಿಗೈಯಿಂದ ಕಳುಹಿಸೇನು?' ಎಂದನು. ಹೀಗೆ ಹೇಳಿದ ವೃಷದರ್ಭನು ಬ್ರಾಹ್ಮಣನಿಗೆ ಮಾರನೇ ದಿನ ಬಂದ ಆದಾಯವನ್ನು ಕೊಟ್ಟು ಸಂತೋಷ ಪಡಿಸಿದನು. ಆತ ಕೊಟ್ಟಿದ್ದು ಬ್ರಾಹ್ಮಣನು ಬೇಡಿದುದಕ್ಕಿಂತ ಅಧಿಕವಾಗಿಯೇ ಇತ್ತು. ಹೀಗೆ ವೃಷದರ್ಭ ತನ್ನ ಮಾತನ್ನು ಉಳಿಸಿಕೊಂಡನು.

## ಸಂದೇಶಗಳು–ವಿವರಣೆಗಳು

ಸೇದುಕನು ವೃಷದರ್ಭನ ರಹಸ್ಯ ಪ್ರತಿಜ್ಞೆ ತಿಳಿದು ಕೊಂಡಿದ್ದನು. ಆದರೆ ಅದರ ಪರೀಕ್ಷೆಯನ್ನು ಬ್ರಾಹ್ಮಣನು ಮೂಲಕ ಮಾಡಿಸಿದ್ದನೆಂದು ಈ ಕಥೆಯಿಂದ ತೋರುತ್ತದೆ. ತನ್ನನ್ನು ಬೇಡಿದ ಬ್ರಾಹ್ಮಣನಿಗೆ ಇತರರ ರಹಸ್ಯ ಪರೀಕ್ಷೆಯನ್ನು ಮಾಡಿಸಿದ್ದು ವೃಷದರ್ಭನ ಕೋಪಕ್ಕೆ ಕಾರಣವಾಯಿತು. ಪರಿಣಾಮ ಬ್ರಾಹ್ಮಣನು ಏಟು ತಿಂದನು. ರಾಜನು ಕೋಪಕ್ಕೆ ಗುರಿಯಾಗಿ ಪಾಪ ಸಂಪಾದಿಸಿದ. ಇದಕ್ಕೆ ಸೇದುಕನ ಪ್ರೇರಣೆ ಕಾರಣವಾಯಿತು. ಆದ್ದರಿಂದ.

೧. ಪರರ ರಹಸ್ಯವನ್ನು ಮತ್ತೊಬ್ಬರಿಂದ ಪರೀಕ್ಷಿಸಬಾರದು.

೨. ಇದರಿಂದ ತನಗೂ ಪಾಪ. ನಿರಪರಾಧಿ ಬ್ರಾಹ್ಮಣನಿಗೆ ಶಿಕ್ಷೆ– ಇದರಿಂದಲೂ ಸೇದುಕನಿಗೆ ಪಾಪ.

೩. ವೃಷದರ್ಭನು ಕೋಪ ಗೊಂಡುದರಿಂದ ಪಾಪ ಕಾರ್ಯಕ್ಕೆ ಕೈ ಹಾಕಿದನು. ಯದ್ಯಪಿ ದಾನ ಮಾಡಿ ಪುಣ್ಯ ಗಳಿಸಿದರೂ ಪಾಪವನ್ನು ಗಳಿಸಿದ. ಬ್ರಾಹ್ಮಣನ ಶಾಪಕ್ಕೆ ಗುರಿಯಾಗಬೇಕಾಗಿತ್ತು. ರಾಜನಾದ ವೃಷದರ್ಭ ಸಮಯೋಚಿತ ಮಾತಿನಿಂದ ತಪ್ಪಿಸಿಕೊಂಡ.

೪. ಬ್ರಾಹ್ಮಣನು ಸಂಯಮಿಯಾಗಿ ವರ್ತಿಸಿ ತನ್ನ ಕಾರ್ಯ ಸಾಧಿಸಿದ ಎಂಬ ಸಂದೇಶಗಳನ್ನು ಊಹಿಸಬಹುದಾಗಿದೆ. ಈ ಬಗ್ಗೆ ಹೆಚ್ಚು ವಿಚಾರ ಮಾಡಬಹುದು.

೫. ಮಹಾಭಾರತದಲ್ಲಿ ಭೀಮನು ರಹಸ್ಯದಲ್ಲಿ ಮಾಡಿದ ಪ್ರತಿಜ್ಞೆಯನ್ನು ಹೇಗೋ ತಿಳಿದಿದ್ದ ದುರ್ಯೋಧನನು ಕರ್ಣನಿಗೆ ಹೇಳಿದ್ದ.

ಅತೂಬರನಾದರೂ ತೂಬರ ಎಂದು ಕರೆಯುವವನನ್ನು ಕೊಲ್ಲುವ ಪ್ರತಿಜ್ಞೆ ಮಾಡಿದ್ದ ಭೀಮ. ಒಮ್ಮೆ ಯುದ್ಧ ಪ್ರಸಂಗದಲ್ಲಿ ಕರ್ಣನು ಭೀಮನನ್ನು ರೇಗಿಸಲು

(ಕೋಪ ಬರುವಂತೆ ಮಾಡಲು) ತೂಬರ ಎಂದು ಗೇಲಿ ಮಾಡಿದ. (ಗಡ್ಡ ಮೀಸೆಗಳು ಹುಟ್ಟದಿರುವವನು - ತೂಬರ) ಇದರಿಂದ ತನ್ನ ಪ್ರತಿಜ್ಞಾನುಸಾರ ಕರ್ಣನನ್ನು ಕೊಲ್ಲಲು ಹೋದನಾದರೂ ಭೀಮನು, ಅರ್ಜುನನ ಪ್ರಾರ್ಥನೆಯ ಮೇರೆಗೆ ಕೊಲ್ಲದೆ ಕರ್ಣನನ್ನು ತುಂಬಾ ಘಾಸಿ ಮಾಡಿದ ವಿವರ ಮಹಾಭಾರತದಲ್ಲಿ ಬಂದಿದೆ. (ದ್ರೋಣಪರ್ವ ಅ- ೧೪೬-೩-೬; ಮತಾನಿ ೨೬-೧೭೪) ಇಲ್ಲಿ ದುರ್ಯೋಧನನು ಕರ್ಣನಿಗೆ ಭೀಮನ ಪ್ರತಿಜ್ಞೆಯನ್ನು ಕರ್ಣನಿಗೆ ತಿಳಿಸಿ ಕರ್ಣನು ಮೃತಪ್ರಾಯನನ್ನಾಗಿಸಿದ. ಮುಂದೆ ಕರ್ಣನು ಅರ್ಜುನನಿಂದ ಸಾವಿಗೀಡಾದ. ಸಜ್ಜನರನ್ನು (ಭೀಮನನ್ನು) ರೇಗಿಸಿದ ಫಲ ಕರ್ಣ ಧುರ್ಯೋಧನರ ಸಾವಿಗೆ ಕಾರಣವಾಯಿತು (ಇದೂ ಒಂದು ಕಾರಣವಾಯಿತು)

ಪ್ರಕೃತ ಕಥೆಯಲ್ಲಿ ಹಾಗಾಗದಿದ್ದರೂ ಬ್ರಾಹ್ಮಣನಿಗೆ ಕಿಂಚಿತ್ ದೈಹಿಕ ಹಿಂಸೆ, ನಂತರ ಸಾಕಷ್ಟು ದಾನ ದೊರಕಿತೆಂದು ತಿಳಿಯಿತು. ಆ ದಾನ ಮತ್ತೆ ಆ ಬ್ರಾಹ್ಮಣನ ಗುರುವಿಗೆ ತಲುಪಿ ದಾನ ಕೊಟ್ಟ ರಾಜ, ದಾನ ಪಡೆದ ವಿಪ್ರ ಗುರುವಿಗೆ ತಲುಪಿ, ದಾನ ಕೊಟ್ಟ ರಾಜ, ದಾನ ಪಡೆದ ವಿಪ್ರ ಹಾಗೂ ಗುರು ದಕ್ಷಿಣೆ ಪಡೆದ ವಿಪ್ರ ಗುರುವೂ ಕೃತಾರ್ಥರಾದರೆಂಬ ಸಂದೇಶ ಈ ಚರಿತ್ರೆಯಿಂದ ತಿಳಿಯುತ್ತದೆ.

*****

# ೪೭. ಶಿಬಿ ಚಕ್ರವರ್ತಿಯ ಪರೀಕ್ಷೆ

ಒಮ್ಮೆ ದೇವತೆಗಳು ಸಭೆ ಸೇರಿ ಭೂಲೋಕದಲ್ಲಿರುವ ಚಂದ್ರವಂಶದ ಉಶೀನರಪುತ್ರ ಶಿಬಿಚಕ್ರವರ್ತಿಯನ್ನು ಪರೀಕ್ಷಿಸಲು ನಿರ್ಧರಿಸಿ, ಇದಕ್ಕಾಗಿ ಇಂದ್ರಾಗ್ನಿ ದೇವತೆಗಳು ಗಿಡುಗ-ಪಾರಿವಾಳ ಪಕ್ಷಿಗಳ ರೂಪ ಸ್ವೀಕರಿಸಿ ಭೂಮಿಗೆ ಬಂದರು.

ಮೊದಲು ಪಾರಿವಾಳ ರೂಪಿ ಅಗ್ನಿಯು ಹಾರುತ್ತಾ ಶಿಬಿಯ ತೊಡೆಯ ಮೇಲೆ ಬಿದ್ದಿತು. ಗಿಡುಗ ವೇಷ ಧರಿಸಿದ ಇಂದ್ರ ಪಾರಿವಾಳವನ್ನು ಬೆನ್ನಟ್ಟಿ ಹಿಂದೆಯೇ ಬಂದನು. ಇದನ್ನು ಗಮನಿಸಿದ ರಾಜಪುರೋಹಿತ "ಗಿಡುಗನಿಂದ ಹೆದರಿದ ಈ ಪಾರಿವಾಳ ತನ್ನ ಪ್ರಾಣರಕ್ಷಣೆಗಾಗಿ ನಿನ್ನನ್ನು ಶರಣಾಗಿದೆ. ಆದರೆ ಶಕುನದ ದೃಷ್ಟಿಯಿಂದ ಹೀಗೆ ಪಾರಿವಾಳ ಮೈಮೇಲೆ ಬೀಳುವುದು ಘೋರ ಪರಿಣಾಮದ ಸಂಕೇತ. ಆದ್ದರಿಂದ ಇದರ ಪರಿಹಾರಕ್ಕಾಗಿ ಪಾತ್ರರಿಗೆ ದ್ರವ್ಯದಾನ ಮಾಡು" ಎಂದ.

**ಪ್ರಾಣರಕ್ಷಾರ್ಥಂ ಶ್ಯೇನಾದ್ಭಿತೋ ಭವಂತಂ ಪ್ರಾಣಾರ್ಥೀ ಪ್ರಪದ್ಯೇ ।**
**ವಸು ದದಾತು ಅಂತವಾನ್ ಪಾರ್ಥಿವೋಽಸ್ಯ ನಿಷ್ಕೃತಿಂ ॥**
**ಕುರ್ಯಾದ್ಘೋರಂ ಕಪೋತಸ್ಯ ನಿಪಾತಮಾಹುಃ ॥** – ಅ. (೧೯೭/೪-೬)

ನಂತರ ಪಾರಿವಾಳವು ರಾಜನನ್ನು ಕುರಿತು,

"ರಾಜನ್! ನಾನು ಗಿಡಗಕ್ಕೆ ಹೆದರಿ ಪ್ರಾಣರಕ್ಷಣೆಗಾಗಿ ನಿನ್ನನ್ನು ಶರಣು ಹೊಕ್ಕಿದ್ದೇನೆ. ನಾನು ಹಿಂದೆ ಒಬ್ಬ ಮುನಿಯಾಗಿದ್ದೆ. ತಪಸ್ಸು ಹಾಗೂ ಇಂದ್ರಿಯ ನಿಗ್ರಹಗಳಿಂದ ಕೂಡಿದ ವೇದಾಧ್ಯಯನ ಮಾಡಿದ ಬ್ರಹ್ಮಚಾರಿ ನಾನೆಂದು ತಿಳಿ. ಅಂತೆಯೇ ಶರೀರ ಕೃಶವಾಗಿದೆ. ನನ್ನ ಗುರುವಿಗೆ ಎಂದೂ ವಿರುದ್ಧವಾಗಿ ಮಾತನಾಡಲಿಲ್ಲ. ಹೀಗೆ ನನ್ನನ್ನು ಪಾಪರಹಿತನೆಂದು ತಿಳಿ. ಅಲ್ಲದೆ ನಾನು ನಾಲ್ಕು ವೇದಗಳನ್ನು ಹೇಳುವೆ. ಛಂದಸ್ಸು ಬಲ್ಲೆ ಎಲ್ಲ ವೇದ-ಛಂದಸ್ಸು ಬಲ್ಲೆ (ವೇದಾಂಗಗಳನ್ನು ತಿಳಿದಿರುವೆ). ಎಲ್ಲ ವೇದಗಳನ್ನು ಅಕ್ಷರಶಃ ಅಧ್ಯಯನ ಮಾಡಿದ್ದೇನೆ. (ಎಲ್ಲ ವೇದಾರ್ಥಗಳನ್ನು ಬಲ್ಲೆ). ಅಂತಹ ಶ್ರೋತ್ರೀಯ ಬ್ರಾಹ್ಮಣನಾದ ನನ್ನನ್ನು (ಈಗ ಪಾರಿವಾಳವಾಗಿರುವ) ಗಿಡುಗನಿಗೆ ದಾನ ಮಾಡುವುದು, ಗಿಡುಗನಿಗೆ ಬಲಿದಾನ ಮಾಡುವುದು ಸಾಧುವಲ್ಲ. ಸರಿ ಎನ್ನಿಸದು" ಎಂದು ಹೇಳಿತು.

**ಸ್ವಾಧ್ಯಾಯೇನ ಕರ್ಶಿತಂ ಬ್ರಹ್ಮಚಾರಿಣಂ ಮಾಂ ವಿದ್ಧಿ ।**
**ತಪಸಾ ದಮೇನ ಯುಕ್ತಮಾಚಾರ್ಯಸ್ಯ ಪ್ರತಿಕೂಲಭಾಷಿಣಂ ॥**
**ಏವಂ ಯುಕ್ತಮಪಾಪಂ ಮಾಂ ವಿದ್ಧಿ** – ಅ. (೧೯೭/೭)

**ಗದಾಮಿ ವೇದಾನ್ ವಿಚಿನೋಮಿ ಛಂದಃ ।**
**ಸರ್ವೇ ವೇದಾ ಅಕ್ಷರಶೋ ಮೇ ಅಧೀತಾಃ ।**

**ನ ಸಾಧು ದಾನಂ ಶ್ರೋತ್ರಿಯಸ್ಯ ಪ್ರದಾನಂ ।**
**ಮಾ ಪ್ರಾದಾಃ ಶ್ಯೇನಾಯ ನ ಕಪೋತೋಽಸ್ಮಿ । – ಅ.(೧೯೭/೮)**

ಅಷ್ಟು ಹೊತ್ತಿಗೆ ಪಾರಿವಾಳವನ್ನು ಬೆನ್ನಟ್ಟಿ ಬರುತ್ತಿದ್ದ ಗಿಡುಗವೂ ರಾಜನ ತೊಡೆಯ ಆಸರೆಯಲ್ಲಿರುವುದನ್ನು ನೋಡಿ, ರಾಜನನ್ನು ಕುರಿತು ಹೀಗೆ ನುಡಿಯಿತು. "ರಾಜನ್! ಈ ಸಂಸಾರದಲ್ಲಿ ಪ್ರತಿ ಪ್ರಾಣಿಯು ಹಿಂದಿನ ಜನ್ಮದಂತೆಯೇ ಹುಟ್ಟಬೇಕೆಂಬ ನಿಯಮವಿಲ್ಲ. (ಕಪೋತ ಕಪೋತನಾಗಿಯೇ, ಮನುಷ್ಯ ಮನುಷ್ಯನಾಗಿಯೇ ಎಂದೇನಿಲ್ಲ). ಯಾವುದೋ ಜನ್ಮ ಬರಬಹುದು. ಕರ್ಮಾನುಸಾರವಾಗಿ ಮನುಷ್ಯ ಪ್ರಾಣಿಯಾಗಿಯೂ (ಪ್ರಾಣಿ ಮನುಷ್ಯನಾಗಿಯೂ – ಬ್ರಾಹ್ಮಣ ಪಕ್ಷಿಯಾಗಿಯೂ, ಪಕ್ಷಿ ಇನ್ನೇನೋ ಆಗಬಹುದು). ಪಾರಿವಾಳ ನನ್ನ ಆಹಾರ. ನನ್ನ ಆಹಾರವನ್ನು ನನಗೆ ಕೊಡದೆ ನೀನು ನನಗೆ ವಿಘ್ನವಾಗಬೇಡ."

**ತ್ವಾಮಾದದಾನೋಽಥ ಕಪೋತಮೇನಂ ।**
**ಮಾ ತ್ವಂ ರಾಜನ್ ವಿಘಕರ್ತಾ ಭವೇಥಾಃ ॥ – ಅ ೧೯೭/೧೦**

ಇದನ್ನು ಕೇಳಿದ ರಾಜ ನುಡಿದ "ಪಾರಿವಾಳ ಹಾಗೂ ಗಿಡುಗಗಳ ಹೀಗೆ ಸುಸಂಸ್ಕೃತವಾದ ಮಾತುಗಳನ್ನು ಯಾರು ತಾನೇ ಕೇಳಿದ್ದಾರೆ? ಇದನ್ನು ತಿಳಿದು ರಾಜಧರ್ಮಕ್ಕೆ ಚ್ಯುತಿ ಬರದಂತೆ ಏನು ಮಾಡಬೇಕು? ಎಂಬುದನ್ನು ವಿವೇಚನೆ ಮಾಡಬೇಕಾಗಿದೆ."

ಎಲೈ ಗಿಡುಗನೇ! ಶರಣಾಗತನಾದವನನ್ನು ರಕ್ಷಿಸದೆ ಶತ್ರುವಿಗೆ ದಾನ ಮಾಡಿದರೆ, ಆ ದೇಶದಲ್ಲಿ ಮಳೆಗಾಲದಲ್ಲಿ ಮಳೆ ಬರದು, ಬಿತ್ತಿದ ಬೀಜ ಹುಟ್ಟದು. ಶತ್ರುವಿಗೆ ದಾನ ಮಾಡುವವನ ರಕ್ಷಣೆಗೆ ಯಾರೂ ಬರುವುದಿಲ್ಲ."

"ಅವನ ಮಕ್ಕಳು ಬಾಲ್ಯದಲ್ಲಿಯೇ ಸಾಯುತ್ತಾರೆ. ಪಿತೃಗಳು ಅವನ ಬಳಿ ಸುಳಿಯುವುದಿಲ್ಲ. ಅವನು ಮಾಡುವ ಯಜ್ಞದ ಹವಿಸ್ಸನ್ನು ದೇವತೆಗಳು ಸ್ವೀಕರಿಸುವುದಿಲ್ಲ. ಅವನು ತಿನ್ನುವ ಅನ್ನ ನಿಷ್ಫಲವಾಗುತ್ತದೆ. ಸ್ವರ್ಗಕ್ಕೆ ಹೋಗಿದ್ದರೂ ಅಂತಹವನು ಸ್ವರ್ಗ ಚ್ಯುತನಾಗುತ್ತಾನೆ.

ಬೆದರಿದ ಹಾಗೂ ಶರಣಾಗತನಾದವನನ್ನು ಶತ್ರುವಿಗೆ ಕೊಟ್ಟರೆ ಇಂದ್ರನಿಂದ ಕೂಡಿದ ದೇವತೆಗಳು ದಾನ ಮಾಡುವವನನ್ನು ವಜ್ರಾಯುಧದಿಂದ ಪ್ರಹಾರ ಮಾಡುತ್ತಾರೆ. ಆದ್ದರಿಂದ ಎಲೈ ಗಿಡುಗನೆ! ಈ ಕಪೋತದ ಬದಲಾಗಿ ಅನ್ನದೊಡನೆ ಹೋರಿಯೊಂದರ ಮಾಂಸವನ್ನು ಬೇಯಿಸಿ ಕಳಿಸುವೆ. ಅದರಿಂದ ತೃಪ್ತನಾಗು ಎಂದನು ರಾಜ.

ಅದಕ್ಕೆ ಗಿಡುಗವು "ರಾಜನ್! ನನಗೆ ಪಾರಿವಾಳದ ಹೊರತಾಗಿ ಹೋರಿಯೂ ಬೇಡ. ಬೇರೆ ಮಾಂಸವೂ ಬೇಡ. ದೇವತೆಗಳಿಂದ ನಿಯೋಜಿತವಾದ ನನ್ನ ಆಹಾರ ಪಾರಿವಾಳ. ಅದನ್ನೇ ಕೊಡು."

**ನಾಸ್ಯ ವರ್ಷಂ ವರ್ಷತಿ ವರ್ಷಕಾಲೇ ।**
**ನಾಸ್ಯ ಬೀಜಂ ರೋಹತಿ ಕಾಲ ಉಪ್ತಂ ॥** ಅ ೧೯೭/೧೨
**ನಾಸ್ಯ ದೇವಾಃ ಪ್ರತಿಗೃಹ್ಣಂತಿ ಹವ್ಯಮ್ ।** ಅ ೧೯೭/೧೩
**ಸೇಂದ್ರಾ ದೇವಾಃ ಪ್ರಹರಂತ್ಯಸ್ಯ ವಜ್ರಮ್ ।** ಅ ೧೯೭/೧೪
**ಉಕ್ಷಾಣಂ ಪಕ್ತ್ವಾ ಸಹ ಓದನೇನ ।**
**ಅಸ್ಮಾತ್ ಕಪೋತಾತ್ ಪ್ರತಿ ತೇ ನಯಂತು ॥** ಅ ೧೯೭/೧೫
**ನೋಕ್ಷಾಣಂ ರಾಜನ್ ಪ್ರಾರ್ಥಯೇಯಂ ನ ಚಾನ್ಯ-**
**ದಸ್ಮಾನ್ಮಾಂ ಸಮಧಿಕಂ ವಾ ಕಪೋತಾತ್ ।**
**ದೇವೈರ್ದತ್ತಃ ಸೋಽದ್ಯ ಮಮೈಷ ಭಕ್ಷ**
**ಸ್ತನ್ಮೇ ದದಸ್ವ ಶಕುನಾನಾಮಭಾವಾತ್ ॥** ಅ ೧೯೭/೧೬
**'ತ್ಯಜೇ ಪ್ರಾಣಾನ್ ನೈವ ದದ್ಯಾಂ ಕಪೋತಂ' ।** ಅ ೧೯೭-೧೮
**'ಯಥಾ ಮಾಂ ವೈ ಸಾಧುವಾದೈಃ ಪ್ರಸನ್ನಾ**
**ಪ್ರಶಂಸೇಯುಃ ಶಿಬಯಃ ಕರ್ಮಣಾ ತು ।**
**ಯಥಾ ಶ್ಯೇನ ಪ್ರಿಯಮೇವ ಕುರ್ಯಾಂ**
**ಪ್ರಶಾಧಿ ಮಾಂ ಯದ್ವದೇಸ್ತತ್ಕರೋಮಿ' ॥** ಅ ೧೯೭-೧೯

ಅದಕ್ಕೆ ಶ್ಯೇನ ಉತ್ತರಿಸಿತು.

ರಾಜನ್ 'ಹಾಗಿದ್ದಲ್ಲಿ ಕಪೋತಕ್ಕೆ ಸಮತೂಕದ ನಿನ್ನ ಬಲ ತೊಡೆಯ ಮಾಂಸವನ್ನು ಕತ್ತರಿಸಿ ಕೊಡು. ನಿನ್ನ ಪ್ರಜೆಗಳು ನಿನ್ನನ್ನು ಮೆಚ್ಚಬಹುದು. ಅದೇ ಪಾರಿವಾಳಕ್ಕೆ ಪ್ರತಿನಿಧಿ ಎಂದು ನಾನು ಭಾವಿಸುತ್ತೇನೆ.'

**'ಊರೋರ್ದಕ್ಷಿಣಾದುತ್ಕೃತ್ಯ ಸ್ವಪಿಶಿತಂ ತಾವತ್ ರಾಜನ್**
**ಯಾವನ್ಮಾಂಸಕಪೋತೇನ ಸಮಂ' ।**

ಇದನ್ನು ಕೇಳಿ ಸಂತೋಷಗೊಂಡ ಶಿಬಿರಾಜನು ಕೂಡಲೇ ತಕ್ಕಡಿಯನ್ನು ತರಿಸಿ ತನ್ನ ಬಲ ತೊಡೆಯ ಮಾಂಸವನ್ನು ಕತ್ತರಿಸಿ ತಕ್ಕಡಿಯ ಒಂದು ಬದಿಯ ಬಟ್ಟಲಲ್ಲಿಟ್ಟನು. ಇನ್ನೊಂದು ಬಟ್ಟಲಲ್ಲಿ ಪಾರಿವಾಳವನ್ನು ಕೂರಿಸಿದ. ಮಾಂಸವಿಟ್ಟ ಬಟ್ಟಲು ಮೇಲೇರಲಿಲ್ಲ. ಮತ್ತೆ ಮತ್ತೆ ತೊಡೆಯ ಮಾಂಸವಿಟ್ಟರೂ ಬಟ್ಟಲು ಏಳದಿದ್ದಾಗ ಪಾರಿವಾಳದ ರಕ್ಷಣೆಗಾಗಿ ತನ್ನ ಇಡೀ ಶರೀರದ ಮಾಂಸವನ್ನೇ ಕೊಡುವುದು ಲೇಸೆಂದು ಬಗೆದು ಮಾಂಸದ ಬಟ್ಟಲಿನಲ್ಲಿ ತಾನೇ ಕುಳಿತು ಬಿಟ್ಟನು. ಆದರೂ ರಾಜನು ನಿರ್ವಿಕಾರನಾಗಿಯೇ ಇದ್ದ.

**'ಗುರುತರ ಏವ ಕಪೋತ ಆಸೀತ್ ।**
**ಏವಂ ಸರ್ವಂ ಸಮಧಿಕೃತ್ಯ ಶರೀರಂ ತುಲಾಯಾಮಾರೋ**
**ಪಯಾಮಾಸ । ತಥಾಪಿ ಗುರುತರ ಏವ ಕಪೋತ ಆಸೀತ್ ।**

**ಅಥ ಸ್ವಯಮೇವ ತುಲಾಯಾಮಾರುರೋಹ । ಏತತ್**
**ವೃತ್ತಾತಂ ದೃಷ್ಟ್ವಾ ಶ್ಯೇನೋ ತ್ರಾತ ಇತ್ಯುಕ್ತ್ವಾ ಪ್ರಾಲೀಯತ**
**೧೯೭-೨೨-೨೩**

ಇದನ್ನು ನೋಡಿದ ಗಿಡುಗರೂಪಿ ಇಂದ್ರನು 'ಪಾರಿವಾಳವು ರಕ್ಷಿಸಲ್ಪಟ್ಟಿತು' ಎಂದು ನುಡಿಯುತ್ತಾ ಮಾಯವಾದನು. ಆಗ ರಾಜ ಪಾರಿವಾಳವನ್ನು ಕುರಿತು ಹೀಗೆ ನುಡಿದ.

'ಎಲೈ ಪಾರಿವಾಳ ಈ ಗಿಡುಗ ಗಿಡುಗ ಪಕ್ಷಿಯಲ್ಲ! ಅವನಾರು? ಇವನೊಬ್ಬ ದೇವತಾ ಪುರುಷನಿರೇಕು.'

ಆಗ ಪಾರಿವಾಳ ಉತ್ತರಿಸಿತು.

ರಾಜನ್! ನಾನು ಅಗ್ನಿದೇವ. ಗಿಡುಗ ಸಾಕ್ಷಾತ್ ಇಂದ್ರ ದೇವ. ನಿನ್ನನ್ನು ಪರೀಕ್ಷಿಸಲು ಬಂದೆವು. ನನ್ನ ರಕ್ಷಣೆಗಾಗಿ ನಿನ್ನ ಶರೀರದಿಂದ ಮಾಂಸದ ರಾಶಿಯನ್ನೇ ಕತ್ತರಿಸಿದ್ದರಿಂದ ದೇಹದಲ್ಲಿ ರಂಧ್ರಗಳಾಗಿವೆ. ನಾನು ಅವನ್ನು ಮಂಗಳಕರಗಳನ್ನಾಗಿಸುವೆ. ಈ ರಂಧ್ರಗಳೆಲ್ಲ ಸುವರ್ಣ ವರ್ಣಗಳಾಗಿಯೂ, ಸುಗಂಧ ಸೂಸುವಂತೆಯೂ ಮಾಡುವೆ. ಅಲ್ಲದೆ ನೀನು ಈ ಪ್ರಜೆಗಳನ್ನು ಬಹುಕಾಲ ದೇವತೆಗಳಿಗೂ ಋಷಿಗಳಿಗೂ ಒಪ್ಪುವಂತೆ ಪಾಲನೆ ಮಾಡುವೆ. ಮತ್ತೆ ನಿನ್ನ ಈ ಪಕ್ಕದಿಂದಲೇ ಮಗನು ಜನಿಸುವನು. ಅವನ ಹೆಸರು '**ಕಪೋತರಾಮ**' ನೆಂದಾಗುವುದು. ಅವನು ನಿನ್ನ ವಂಶದಲ್ಲಿ ಶ್ರೇಷ್ಠ ಪುರುಷನೂ, ಪರಾಕ್ರಮಿಯೂ, ಕೀರ್ತಿವಂತನೂ ಆಗುತ್ತಾನೆ' (ಎಂದು ಅಗ್ನಿದೇವ ನುಡಿಯುತ್ತಾ ಅಂತರ್ಧಾನನಾದನು.)

ಹೀಗೆ ಶಿಬಿ ಚಕ್ರವರ್ತಿಯು ತನ್ನನ್ನು ನಂಬಿದ ಪಾರಿವಾಳದಂತಹ ಪಕ್ಷಿಯನ್ನು ಕಾಪಾಡಿದ. **ಸರ್ವಭೂತಹಿತ**(ಆಶ್ರಯರಕ್ಷಕ)ನಾಗಿರಬೇಕೆಂಬ ರಾಜರ ಲಕ್ಷಣವನ್ನು ಜಗತ್ತಿಗೆ ತೋರಿಸಿದ.

## ಸಂದೇಶಗಳು-ವಿವರಣೆಗಳು

೧. ಸಾಧಕನು ಭೂಮಿಯಲ್ಲಿ ಜನಿಸಿದಾಗ ತನ್ನ ಕರ್ತವ್ಯಗಳನ್ನು (ವರ್ಣಾಶ್ರಮೋಚಿತ) ಮಾಡಿದಾಗಲೂ ಅವುಗಳ ಪರೀಕ್ಷೆಯನ್ನು ದೇವತೆಗಳು ಮಾಡುತ್ತಾರೆ. ಹೇಗೆ ಯಾವ ರೂಪದಲ್ಲಿ ಮಾಡುತ್ತಾರೆ? ಎಂಬುವುದು ತಿಳಿಯದಿರಬಹುದು. ಶಿಬಿಗೂ ತಿಳಿಯಲಿಲ್ಲವೆಂದ ಮೇಲೆ ಉಳಿದ ಮನುಷ್ಯರ ಪಾಡೇನು? ಆದ್ದರಿಂದ ಕರ್ತವ್ಯ ಪರಿಪಾಲನೆ ತುಂಬಾ ಮುಖ್ಯ.

೨. ಕರ್ತವ್ಯ ಪರಿಪಾಲನೆಗಾಗಿ ಪ್ರಾಣತ್ಯಾಗಕ್ಕೂ ಸಿದ್ಧನಾಗಿರಬೇಕು. ಇದಕ್ಕೆ ಶಿಬಿಯೇ ಸಾಕ್ಷಿ. ಪರೀಕ್ಷಿಸುವ ವ್ಯಕ್ತಿಗಳಲ್ಲಿ ಭಗವಂತನನ್ನು ನೋಡುತ್ತಾ ಅವನಿಗೆ ತನ್ನ ಪ್ರಾಣವನ್ನೂ ಸಮರ್ಪಣೆ ಮಾಡುವ ಮನೋಭಾವ ಇರಬೇಕು:

**ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸಂನ್ನಿವೇದಯೇತ್**
**–ಸದಾಚಾರಸ್ಮೃತಿ**

೩. ಬ್ರಾಹ್ಮಣರ ಕರ್ತವ್ಯ ವೇದಾಂಗ ಸಹಿತ ವೇದಾಧ್ಯಯನ ಪ್ರತ್ಯಕ್ಷರ ಅಧ್ಯಯನ ಮಾಡಬೇಕೆಂದು ಅಗ್ನಿದೇವರ ಮಾತುಗಳಿಂದ ಸ್ಪಷ್ಟವಾಗುತ್ತದೆ. ಅಗ್ನಿಯು ದೇವತೆಗಳಲ್ಲಿ ಬ್ರಾಹ್ಮಣ ವರ್ಣವೆಂಬುದು ಇಲ್ಲಿ ಧ್ವನಿತವಾಗಿದೆ.

೪. ಜೀವರಿಗೆ ಬರುವ ವಿವಿಧ ಜನ್ಮಗಳು ಹೀಗೆಯೇ ಎಂದು ಹೇಳಲು ಸಾಧ್ಯವಿಲ್ಲ. ಅವೆಲ್ಲ ಆಯಾ ಜೀವಿಗಳ ಕರ್ಮಾನುಸಾರ. ಸುಜೀವಿಗಳಿಗೆ ಬರುವ ಉತ್ತರೋತ್ತರ ಜನ್ಮಗಳು ಉತ್ತಮವಾಗಿರುತ್ತವೆ.

೫. ಪ್ರತಿಯೊಂದು ಜೀವಿಗೂ ನಿಯತವಾದ ಆಹಾರವಿರುತ್ತದೆ. ಅದನ್ನು ಪ್ರಶ್ನಿಸುವ ಹಕ್ಕು ಯಾರಿಗೂ ಇಲ್ಲ. ಇದು ನಿಸರ್ಗದಲ್ಲಿ ತಾನೇ ತಾನಾಗಿದ್ದಾಗ ಮಾತ್ರ. ಆದರೆ ರಾಜರ (ಶಾಸಕರ) ಕೈಯಲ್ಲಿದ್ದಾಗ ಆಯಾ ಪರಿಸ್ಥಿತಿಗೆ ಅನುಗುಣವಾಗಿರುತ್ತದೆ.

೬. ಶರಣಾಗತರ ರಕ್ಷಣೆ ಮಾಡದಿದ್ದಲ್ಲಿ ರಾಜನಿಗೂ, ರಾಜ್ಯಕ್ಕೂ ಕ್ಷೇಮವಿಲ್ಲ.

೭. ಶಾಸ್ತ್ರ ವಿಧಿಗಳು ಏನೇ ಇದ್ದರೂ ಅದಕ್ಕೆ ಪ್ರತ್ಯಾಮ್ನಾಯವಾಗಿಯೂ (ಪ್ರತಿನಿಧಿ) ಕೆಲವು ವೇಳೆ ಬೇರೆ ಆಯ್ಕೆಗಳು ಇರುತ್ತವೆ. ಆದ್ದರಿಂದಲೇ ಕಪೋತ ಮಾಂಸದ ಬದಲಾಗಿ ತನ್ನ ಮಾಂಸವನ್ನೇ ರಾಜ ಕೊಟ್ಟ. ಇಂತಹ ನೂರಾರು ಆಯ್ಕೆಗಳು ಯಾಜ್ಞಿಕ ಪ್ರಕ್ರಿಯಗಳಲ್ಲಿ ಕಂಡಿವೆ.

ಉದಾ: ಸೋಮಲತೆಯ ಬದಲಾಗಿ ಪೂತಿಕಾ ಎಂಬ ಲತೆಯನ್ನು ಪಯೋಗಿಸುವುದು, ದರ್ಭಗಳ ಬದಲಾಗಿ ಕುಶಗಳನ್ನು ಬಳಸುವುದು, ಕೃಚ್ಛ್ರ ವ್ರತದ ಪ್ರತ್ಯಾಮ್ನಾಯವಾಗಿ ಗೋದಾನ ಮಾಡುವುದು.

೮. ದೇವತೆಗಳನ್ನು ಸಂತೋಷಪಡಿಸಿದಲ್ಲಿ ಅದೆಂದೂ ವ್ಯರ್ಥವಾಗದು. **ನ ದೇವತೋಷಣಂ ವೃಥಾ** ಆದ್ದರಿಂದಲೇ ಶಿಬಿಯ ದೇಹ ವಿಕಾರವಾದರೂ ಅಗ್ನಿದೇವನು ಅದನ್ನು ಮತ್ತೆ ಅಂದವಾಗಿಸಿದ. ಆತನ ಶರೀರದಿಂದಲೇ ಮತ್ತೆ ಸಂತಾನೋತ್ಪಾದನೆ ಆಗಿ ವಂಶದ ಕೀರ್ತಿ ಆಗಸಕ್ಕೇರಿತು. ಅದರಿಂದ ಹರಿ ಪ್ರೀತಿ ಅನುಗ್ರಹವೂ ದೊರಕಿತು. ಎಂದು ಕೈಮುತ್ಯದಿಂದ ಸಿದ್ಧವಾಗುತ್ತದೆ.

೯. ಆದದ್ದೆಲ್ಲ ಒಳಿತೇ ಆಯಿತು ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು ಎಂಬ ದಾಸರ ಮಾತು ಇಲ್ಲಿ ದೃಷ್ಟಾಂತ ಪೂರ್ವಕವಾಗಿ ಬಂದಿದೆ ಎನ್ನಬಹುದು.

೧೦. ಮಹಾಭಾರತದಲ್ಲಿ ಅರ್ಜುನನು ಬ್ರಾಹ್ಮಣನೊಬ್ಬನ ಗೋರಕ್ಷಣೆಗಾಗಿ ತಾನು ಯುಧಿಷ್ಠಿರನೊಂದಿಗೆ ಮಾಡಿಕೊಂಡ ವ್ರತದನ್ವಯ ತೀರ್ಥಯಾತ್ರೆಗೆ ಹೋಗುತ್ತಾನೆ. ಬ್ರಾಹ್ಮಣ ಗೋರಕ್ಷಣೆ ಮಾಡಿ ಗೋದ್ರೋಹಿಗಳನ್ನು ಶಿಕ್ಷಿಸುತ್ತಾನೆ. ಬ್ರಾಹ್ಮಣರ ಅರಣಿ ರಕ್ಷಣೆ ನಿಮಿತ್ತ ಯಕ್ಷ ರೂಪಿ ಯಮಧರ್ಮನ ಪರೀಕ್ಷೆಗೆ ಒಳಪಟ್ಟರೂ

ತಮ್ಮ ಪ್ರಾಣಗಳನ್ನು ಪಾಂಡವರು ಪಣಕ್ಕೆ ಒಡ್ಡುತ್ತಾರೆ. ವಿರಾಟನ ಗೋಗ್ರಹಣ ರಕ್ಷಣೆಗಾಗಿಯೂ ತಮ್ಮ ಪ್ರಾಣಗಳನ್ನು ಲೆಕ್ಕಿಸದೆ ಯುದ್ಧ ಮಾಡಿ ಗೋಮೋಚನ ಮಾಡುತ್ತಾರೆ. ನರಕಾಸುರ, ಜರಾಸಂಧರಂಥ ದೈತ್ಯರು ಬಂದಿಗಳನ್ನಾಗಿಸಿದ ರಾಜಕುಮಾರ, ರಾಜಕುಮಾರಿಯರನ್ನು ರಕ್ಷಿಸಲು ಕೃಷ್ಣ-ಭೀಮರು ಯುದ್ಧ ಮಾಡಿ ನರಕಾಸುರ ಹಾಗೂ ಜರಾಸಂಧರನ್ನು ಸಂಹರಿಸಿದ ಪ್ರಸಂಗಗಳನ್ನು ಕ್ಷತ್ರಿಯ ಧರ್ಮ ಪಾಲನೆಗಾಗಿ ಎಂಬುದನ್ನು ನೋಡಬುದಾಗಿದೆ. ಇಲ್ಲಿ ವರ್ಣಾಶ್ರಮ ಧರ್ಮ ಪರಿಪಾಲನೆಯಿಂದ ಲೋಕ ರಕ್ಷಣೆಯ ಗುರುತರ ಜವಾಬ್ದಾರಿಯ ನಿರ್ವಹಣೆಗಳನ್ನು ನೋಡಬಹುದು. **ಶಿಬಿ ಚಕ್ರವರ್ತಿ ರಕ್ಷಿಸಿದ್ದು ಕೇವಲ ಸಂತ್ರಸ್ತ ನಟನೆಯ ಪಕ್ಷಿಯೊಂದನ್ನು. ಕೃಷ್ಣ ಭೀಮರು ರಕ್ಷಿಸಿದ್ದು ನಿಜವಾಗಿಯೂ ಸಂತ್ರಸ್ತರನ್ನು** ಎಂಬುದನು ಗಮನಿಸಿದಾಗ ಹರಿವಾಯುಗಳ ಮಹಿಮೆಯ ಗರಿಮೆಯನ್ನು ತಿಳಿಯಬಹುದು.

ಅಷ್ಟೇಕೆ? ಭಗವಂತನ ಅವತಾರದ ಉದ್ದೇಶವು **'ಸಾಧುಗಳ ರಕ್ಷಣೆಗಾಗಿ' 'ದುಷ್ಟರ ಶಿಕ್ಷಣಕ್ಕಾಗಿ'.**

ಆದ್ದರಿಂದ ಶಿಬಿ ಚಕ್ರವರ್ತಿಯ ಕಥಾ ಸಂದೇಶ ಭಗವಂತನ ಕಥಾ ಪ್ರತಿಬಿಂಬ. ಭಕ್ತರ ಮಹಿಮೆ ಅಣುವಾದರೆ ಭಗವಂತನ ಮಹಿಮೆ ಅನಂತ ಮೇರುಗಳನ್ನು ಮೀರಿದ್ದು.

**'ವಿಷ್ಣೋರ್ನು ವೀರ್ಯಗಣನಾಂ ಕತಮೋऽರ್ಹತೀಹ**
**ಯಃ ಪ್ರಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ'. – ಭಾಗವತ**

**ವಿಷ್ಣೋರ್ನು ಕಂ ವೀರ್ಯಾಣಿ ... – ಋಗ್ವೇದ(೧\೧೫೪\೧)**

*****

## ೪೮. ಶಿಬಿ ಚರಿತೆ – ನಾರದರಿಂದ ಶಿಬಿ ಮಹಾತ್ಮ್ಯ

ಇಂದ್ರಾಗ್ನಿ ದೇವತೆಗಳು ಶಿಬಿ ಚಕ್ರವರ್ತಿಯನ್ನು ಪರೀಕ್ಷೆ ಮಾಡಿದ ವೃತ್ತಾಂತ ಕೇಳಿದ ಧರ್ಮರಾಜನು ಆತನ ಮಹಿಮೆಯನ್ನು ಮತ್ತೂ ಹೇಳಲು ಮಾರ್ಕಂಡೇಯರನ್ನು ಕೋರಿದನು. ಅದಕ್ಕೆ ಮಾರ್ಕಂಡೇಯರು ಪುನಃ ಹೇಳಲಾರಂಭಿಸಿದರು.

ವಿಶ್ವಾಮಿತ್ರನ ಮಗನಾದ **ಅಷ್ಟಕನು** ಅಶ್ವಮೇಧ ಯಾಗ ಮಾಡಿದಾಗ ಎಲ್ಲ ರಾಜರೂ ಬಂದಿದ್ದರು. ಅಷ್ಟಕನ ಸೋದರರಾದ **ಪ್ರತರ್ದನ, ವಸುಮನಸ್** ಹಾಗೂ ಉಶೀನರನ ಮಗನಾದ **ಶಿಬಿಯೂ** ಬಂದರು. ಯಾಗ ಮುಗಿಯಿತು. ಅಷ್ಟಕನು ತನ್ನ ಸೋದರರೊಡನೆ ರಥದಲ್ಲಿ ಕುಳಿತುಕೊಂಡು ಹೋಗುವಾಗ ದಾರಿಯಲ್ಲಿ ಬಂದ ನಾರದರನ್ನು ನಮಸ್ಕರಿಸಿ ಅವರನ್ನು ರಥದಲ್ಲಿ ಕುಳಿತುಕೊಳ್ಳಲು ಕೋರಿದನು. ನಾರದರು ರಥ ಹತ್ತಿದರು.

ನಾಲ್ಕು ಸಹೋದರರಲ್ಲಿ ಒಬ್ಬನು ನಾರದರನ್ನು ಸತ್ಕರಿಸಿ ಹೀಗೆ ಪ್ರಶ್ನಿಸಿದ.

ನಾರದರೇ! ನಾವು ನಾಲ್ವರೂ ಆಯುಷ್ಮಂತರು (ಚಿರಂಜೀವಿಗಳು) ಅನೇಕಾನೇಕ ಧರ್ಮಕಾರ್ಯ ಮಾಡಿದವರು. ಮುಂದೆ ಸ್ವರ್ಗಕ್ಕೂ ಹೋಗುತ್ತೇವೆ. ಸ್ವರ್ಗ ಅನಿತ್ಯ. ಕಾರಣ ನಮ್ಮಲ್ಲಿ ಮೊದಲು ಸ್ವರ್ಗದಿಂದ ಭೂಮಿಗೆ ಇಳಿಯುವವರು ಯಾರು? ಅದಕ್ಕೆ ನಾರದರು **ಅಷ್ಟಕ** ಮೊದಲು ಇಳಿಯುತ್ತಾನೆ. ಎಂದರು. ಅದಕ್ಕೆ ಕಾರಣವೇನೆಂದು ರಾಜಕುಮಾರ ಮತ್ತೆ ಕೇಳಿದ. ಅದಕ್ಕೆ ನಾರದರು

ಹಿಂದೊಮ್ಮೆ ನಾನು ಈ ಅಷ್ಟಕನ ಮನೆಯಲ್ಲಿದ್ದೆ. ಒಮ್ಮೆ ಆತನು ನನ್ನನ್ನು ರಥದಲ್ಲಿ ಕರೆದುಕೊಂಡು ಹೋಗುವಾಗ ದಾರಿಯಲ್ಲಿದ್ದ ವರ್ಣ ವರ್ಣದ ಸಾವಿರಾರು ಗೋವುಗಳನ್ನು ನೋಡಿದೆ. ಇವು ಯಾರ ಗೋವುಗಳೆಂದು ಕೇಳಿದೆ. ಅದಕ್ಕೆ ಅಷ್ಟಕನು **'ಇವು ನನ್ನಿಂದ ದಾನವಾಗಿ ಕೊಡಲ್ಪಟ್ಟ ಗೋವುಗಳು'** ಎಂದು ತನ್ನನ್ನು ತಾನೇ ಹೊಗಳಿಕೊಂಡ. ಆದ್ದರಿಂದ ಈತನೇ ಮೊದಲು ಸ್ವರ್ಗದಿಂದ ಕೆಳಗೆ ಇಳಿಯುತ್ತಾನೆ' ಎಂದರು.

ಮತ್ತೆ ಉಳಿದ ಮೂವರಲ್ಲಿ ಒಬ್ಬರು ಹಾಗಾದರೆ ನಮ್ಮಲ್ಲಿ ಯಾರು ಮೊದಲು ಸ್ವರ್ಗದಿಂದ ಇಳಿಯುತ್ತಾರೆಂದು ಕೇಳಿದ. ಅದಕ್ಕೆ ನಾರದರು **'ಪ್ರತರ್ದನ'** ಎಂದರು. ಏಕೆ ಎಂದು ಪ್ರಶ್ನೆ ಕೇಳಿದ ರಾಜಕುಮಾರ ಅದಕ್ಕೆ ನಾರದರು–

ಹಿಂದಿನಂತೆ ನಾನು ಪ್ರತರ್ದನನ ಮನೆಯಲ್ಲಿ ಒಮ್ಮೆ ವಾಸವಾಗಿದ್ದೆ. ಆತನು ಒಮ್ಮೆ ನನ್ನನ್ನು ನಾಲ್ಕು ಕುದುರೆಗಳನ್ನು ಕಟ್ಟಿದ ಒಂದು ರಥದಲ್ಲಿ ಕೂರಿಸಿಕೊಂಡು ಹೋಗುವಾಗ ದಾರಿಯಲ್ಲಿ ಒಬ್ಬ ಬ್ರಾಹ್ಮಣನು ಬಂದನು. ರಾಜನನ್ನು ಸ್ವಸ್ತಿ ವಾಚನ ಮಾಡಿ **'ನನಗೊಂದು ಕೂಡಲೆ ಅಶ್ವದಾನ ಮಾಡಲು'** ಕೋರಿದ. ರಾಜನು ರಾಜಧಾನಿಗೆ ವಾಪಸು ಹೋದ ಕೂಡಲೆ ಕೊಡುವುದಾಗಿ ಹೇಳಿದ. ಬ್ರಾಹ್ಮಣ ಒಪ್ಪಲಿಲ್ಲ. ತನಗೆ ಕೂಡಲೆ ಕೊಡಲು ಕೋರಿದ. ರಾಜನು ನಿರುಪಾಯನಾಗಿ ರಥದ ಬಲಭಾಗದಲ್ಲಿ ಕಟ್ಟಿದ್ದ ಕೊನೆಯ ಕುದುರೆಯನ್ನು ದಾನವಾಗಿ ಕೊಟ್ಟ.

ಮೂರೇ ಕುದುರೆಗಳಿಂದ ರಥ ಮುಂದೆ ಹೋಗುತ್ತಿರುವಾಗ ಮತ್ತೊಬ್ಬ ಬ್ರಾಹ್ಮಣನು ಬಂದು ಅಶ್ವದಾನ ಕೋರಿದ. ರಾಜನು ಮೊದಲಿನಂತೆ ಆಮೇಲೆ ಕೊಡುವೆನೆಂದರೂ ಆತನು ಒಪ್ಪದೆ ಕೂಡಲೆ ಕೊಡಲು ಕೋರಿದ. ರಾಜನು ರಥದ ಎಡಭಾಗದ ರಥದ ಕೊನೆಯ ಕುದುರೆಯನ್ನು ಕೊಟ್ಟನು.

ನಂತರ ಎರಡು ಕುದುರೆಗಳೊಡನೆ ರಥ ಸಾಗಿದಾಗ ಹೀಗೆಯೇ ಮತ್ತೆ ಇಬ್ಬರು ಬ್ರಾಹ್ಮಣರು ಒಬ್ಬರಾದ ಮೇಲೆ ಒಬ್ಬರು ಬಂದು ರಾಜನನ್ನು ಒಂದೊಂದು ಕುದುರೆ ದಾನ ಕೋರಿ ಪಡೆದರು. ರಥಕ್ಕೆ ಕುದುರೆಗಳಿಲ್ಲದಾಯಿತು. ನಿರ್ವಿಕಾರನಾದ ರಾಜನು ತಾನೇ ಕುದುರೆಯಂತೆ ರಥವನ್ನು ಎಳೆಯುತ್ತ ನಡೆದನು.

ರಾಜನಿಗೆ ಚಿಂತೆಯಾಯಿತು. ಈಗ ಮತ್ತಾರಾದರೂ ಬ್ರಾಹ್ಮಣರು ಬಂದು ಕೇಳಿದರೆ ನನ್ನಲ್ಲಿ ಏನೂ ಇಲ್ಲವಲ್ಲ ಎಂದು.

**'ರಥಧುರಂ ಗೃಹ್ಣತಾ ವ್ಯಾಹೃತಂ ಬ್ರಾಹ್ಮಣಾನಾಂ**
**ಸಾಂಪ್ರತಂ ನಾಸ್ತಿ ಕಿಂಚಿದಿತಿ'** ॥ ಅ ೧೯೮/೯

ಆದರೆ ರಾಜನು ದಾನ ಕೊಡುತ್ತಾನೆ. ಆದರೆ ತಕ್ಷಣ ಕೊಡಲು ಮನಸ್ಸನ್ನು ಮಾಡಲಿಲ್ಲ. ವಾಪಸ್ಸು ಹೋದ ಮೇಲೆ ಕೊಡುವೆ ಎಂದ.

**'ನಿವೃತ್ತೋ ದಾಸ್ಯಾಮೀತ್ಯ ಬ್ರವೀತ್'** ಅ ೧೯೮/೭

ತಕ್ಷಣ ಕೊಡಲು ಕೋರಿದಾಗಲೇ ದಾನಕ್ಕೆ ಮುಂದಾದ.

**ನಾರದರೆಂದರು 'ಯ ಏಷ ದದಾತಿ ಚಾಸೂಯತಿ ಚ ತೇನ ವ್ಯಾಹೃತೇನ ತಥಾ ಅವತರೇತ್'**

ದಾನವನ್ನೇನೋ ಕೊಡುತ್ತಾನೆ. ಆದರೆ ಅಸೂಯೆ ಪಡುತ್ತಾನೆ. ಆದ್ದರಿಂದ **ಪ್ರತರ್ದನ**ನು ಸ್ವರ್ಗದಿಂದ **ಅಷ್ಟಕ**ನ ನಂತರ ಇಳಿಯುತ್ತಾನೆ'

ನಂತರ ಉಳಿದ ಇಬ್ಬರು ರಾಜಕುಮಾರರು ನಮ್ಮಿಬ್ಬರಲ್ಲಿ ಯಾರು ಸ್ವರ್ಗದಿಂದ ಚ್ಯುತರಾಗುತ್ತೇವೆಂದ? ಅದಕ್ಕೆ ನಾರದರು **ವಸುಮನಸ್** ಎಂದರು. ಏಕೆ ಎಂದು ರಾಜಕುಮಾರರು ಕೇಳಿದರು? ಅದಕ್ಕೂ ಕಾರಣ ನಿರೂಪಿಸಿದರು ನಾರದರು.

ಒಮ್ಮೆ ನಾನು **ವಸುಮನಸ್** ನ ಮನೆಗೆ ಹೋದಾಗ ಅವರ ಮನೆಯಲ್ಲಿ ದೇವತೆಗಳು ಯಜ್ಞಾಂತ್ಯದಲ್ಲಿ ಕೊಟ್ಟ ಪುಷ್ಪ ರಥಕ್ಕೆ ಬ್ರಾಹ್ಮಣರು ಸ್ವಸ್ತಿ ವಾಚನ ಮಾಡುತ್ತಿದ್ದರು ನಂತರ ಎಲ್ಲರಿಗೂ ರಥ ದರ್ಶನವಾಯಿತು. ನಾನು ಅದನ್ನು ನೋಡಿ ಪ್ರಶಂಸಿಸಿದೆ. ರಾಜನು ನನ್ನ ಪ್ರಶಂಸೆಯಿಂದ ತುಷ್ಟನಾಗಿ ನನಗೆ ಆ ರಥವನ್ನು ಕೊಟ್ಟನು. ಎರಡನೆ ಬಾರಿಯೂ ಹೀಗೆಯೇ ನಡೆಯಿತು. ಮೂರನೇ ಬಾರಿ ಒಮ್ಮೆ ಹೀಗೆ ಅವರ ಮನೆಗೆ ಹೋದಾಗ ಸ್ವಸ್ತಿವಾಚನ ನಡೆಯುತ್ತಿತ್ತು. ನಂತರ ರಥ ದರ್ಶನವಾಯಿತು. ನಾನೂ ಅದನ್ನು ಸ್ತುತಿಸಿದೆ. ರಾಜನು ಈ ಬಾರಿ ನನ್ನನ್ನು ಕುರಿತು 'ತಾವು ರಥವನ್ನು ಚೆನ್ನಾಗಿ ಸ್ವಸ್ತಿ ವಾಚನ ಮಾಡಿದಿರಿ' ಎಂದನೇ ಹೊರತು ನನಗೆ ಈ ರಥ ಕೊಡುವ ಮಾತಾಡದೆ ದ್ರೋಹ ಮಾಡಿದ್ದರಿಂದ ಆತನು ಮುಂದೆ ಸ್ವರ್ಗದಿಂದ ಚ್ಯುತನಾಗುತ್ತಾನೆಂದು ನಾರದರು ನುಡಿದರು.

**'ಪುನರೇವ ತೃತೀಯಂ ಸ್ವಸ್ತಿವಾಚನಂ ಸಮಭಾವಯಂ ಅಥ ರಾಜಾ ಬ್ರಾಹ್ಮಣಾನಾಂ ದರ್ಶಯನ್ ಮಾಮಭಿಪ್ರೇಕ್ಷ್ಯ ಅಬ್ರವೀತ್। ಅಥೋ ಭಗವತಾ ಪುಷ್ಪಸ್ಯ ರಥ ಸ್ವಸ್ತಿವಾಚನಾನಿ ಸುಷ್ಠು ಸಂಭಾವಿತಾನಿ ಏತೇನ ದ್ರೋಹವಚನೇನ ಅವತರೇತ್।'** ಅ ೧೯೮-೧೫

ನಾಲ್ವರಲ್ಲಿ ಒಬ್ಬ ರಾಜಕುಮಾರನು ಮತ್ತೆ ಕೇಳಿದನು. ಒಂದು ವೇಳೆ ನೀವು ಹಾಗು ಶಿಬಿ ಸ್ವರ್ಗಕ್ಕೆ ಹೋದರೆ ಯಾರು ಮೊದಲು ಸ್ವರ್ಗದಿಂದ ಕೆಳಗೆ ಬರುವಿರಿ ಎಂದು?

ಅದಕ್ಕೆ ನಾರದರು ನಾನೇ ಮೊದಲು ಭೂಮಿಗೆ ಬರುವೆ. ನಾನು ಶಿಬಿಗೆ ಸಮನಲ್ಲ. (**'ಅಸಾವಹಂ ಶಿಬಿನಾ ಸಮೋ ನಾಸ್ಮಿ'-೧೯೮/೧೬**) ಏಕೆಂದರೆ

ಒಮ್ಮೆ ಒಬ್ಬ ಬ್ರಾಹ್ಮಣನು ಅನ್ನಾರ್ಥಿಯಾಗಿ ಶಿಬಿಯ ಬಳಿಗೆ ಬಂದನು. ಎಂತಹ ಅನ್ನ ಬೇಕೆಂದು ಶಿಬಿ ಕೇಳಿದ. ಅದಕ್ಕೆ ಬ್ರಾಹ್ಮಣನು 'ನಿನ್ನ ಮಗ **ಬೃಹದ್ಗರ್ಭ**ನನ್ನು ಕೊಂದು ಅವನ ಮಾಂಸವನ್ನು ಸಂಸ್ಕರಿಸಿ ಊಟ ಬಡಿಸು, ಎಂದ. ಶಿಬಿರಾಜನು ಸ್ವಲ್ಪವೂ ವಿಚಾರಿಸದೆ ಮಗನನ್ನು ಕೊಂದು ಸಂಸ್ಕರಿಸಿ ಆಹಾರ ತಯಾರಿಸಿ ಅದನ್ನು ಗೌರವದಿಂದ ತಲೆಯ ಮೇಲೆ ಇಟ್ಟುಕೊಂಡು ಬ್ರಾಹ್ಮಣನನ್ನು ಹುಡುಕುತ್ತಾ ಹೊರಟನು.

ದಾರಿಯಲ್ಲಿ ಒಬ್ಬ ಹೇಳಿದ 'ನೀನು ಹುಡುಕುತ್ತಿರುವ ಬ್ರಾಹ್ಮಣನು ಸಿಟ್ಟಾಗಿ ನಗರವನ್ನು ಪ್ರವೇಶಿಸಿ ನಿನ್ನ ಮನೆ, ಕೋಶಾಗಾರ, ಆಯುಧಾಗಾರ, ಅಂತಃಪುರ, ಅಶ್ವಶಾಲೆ, ಗಜಶಾಲೆಗಳನ್ನು ಸುಡುತ್ತಿದ್ದಾನೆ (ಬೆಂಕಿ ಹಚ್ಚುತ್ತಿದ್ದಾನೆ)'

ಆದರೆ ಇದನ್ನೆಲ್ಲಾ ಕೇಳಿದ ಶಿಬಿ ಮುಖದಲ್ಲಿ ಯಾವ ವಿಕಾರ ಹೊಂದದೆ ಆ ಬ್ರಾಹ್ಮಣನನ್ನು ನಗರದಲ್ಲಿ ಕಂಡು 'ಅನ್ನ ಸಿದ್ಧವಾಗಿದೆ' ಎಂದ. ಬ್ರಾಹ್ಮಣನು ಏನೂ ಉತ್ತರಿಸಲಿಲ್ಲ. ಆಶ್ಚರ್ಯದಿಂದ ತಲೆ ತಗ್ಗಿಸಿದ. ಮತ್ತೆ ರಾಜನು ಬ್ರಾಹ್ಮಣನನ್ನು

ಹಿಂದಿನಂತೆ ನಾನು ಪ್ರತರ್ದನನ ಮನೆಯಲ್ಲಿ ಒಮ್ಮೆ ವಾಸವಾಗಿದ್ದೆ. ಆತನು ಒಮ್ಮೆ ನನ್ನನ್ನು ನಾಲ್ಕು ಕುದುರೆಗಳನ್ನು ಕಟ್ಟಿದ ಒಂದು ರಥದಲ್ಲಿ ಕೂರಿಸಿಕೊಂಡು ಹೋಗುವಾಗ ದಾರಿಯಲ್ಲಿ ಒಬ್ಬ ಬ್ರಾಹ್ಮಣನು ಬಂದನು. ರಾಜನನ್ನು ಸ್ವಸ್ತಿ ವಾಚನ ಮಾಡಿ **'ನನಗೊಂದು ಕೂಡಲೆ ಅಶ್ವದಾನ ಮಾಡಲು'** ಕೋರಿದ. ರಾಜನು ರಾಜಧಾನಿಗೆ ವಾಪಸು ಹೋದ ಕೂಡಲೆ ಕೊಡುವುದಾಗಿ ಹೇಳಿದ. ಬ್ರಾಹ್ಮಣ ಒಪ್ಪಲಿಲ್ಲ. ತನಗೆ ಕೂಡಲೆ ಕೊಡಲು ಕೋರಿದ. ರಾಜನು ನಿರುಪಾಯನಾಗಿ ರಥದ ಬಲಭಾಗದಲ್ಲಿ ಕಟ್ಟಿದ್ದ ಕೊನೆಯ ಕುದುರೆಯನ್ನು ದಾನವಾಗಿ ಕೊಟ್ಟ.

ಮೂರೇ ಕುದುರೆಗಳಿಂದ ರಥ ಮುಂದೆ ಹೋಗುತ್ತಿರುವಾಗ ಮತ್ತೊಬ್ಬ ಬ್ರಾಹ್ಮಣನು ಬಂದು ಅಶ್ವದಾನ ಕೋರಿದ. ರಾಜನು ಮೊದಲಿನಂತೆ ಆಮೇಲೆ ಕೊಡುವೆನೆಂದರೂ ಆತನು ಒಪ್ಪದೆ ಕೂಡಲೆ ಕೊಡಲು ಕೋರಿದ. ರಾಜನು ರಥದ ಎಡಭಾಗದ ರಥದ ಕೊನೆಯ ಕುದುರೆಯನ್ನು ಕೊಟ್ಟನು.

ನಂತರ ಎರಡು ಕುದುರೆಗಳೊಡನೆ ರಥ ಸಾಗಿದಾಗ ಹೀಗೆಯೇ ಮತ್ತೆ ಇಬ್ಬರು ಬ್ರಾಹ್ಮಣರು ಒಬ್ಬರಾದ ಮೇಲೆ ಒಬ್ಬರು ಬಂದು ರಾಜನನ್ನು ಒಂದೊಂದು ಕುದುರೆ ದಾನ ಕೋರಿ ಪಡೆದರು. ರಥಕ್ಕೆ ಕುದುರೆಗಳಿಲ್ಲದಾಯಿತು. ನಿರ್ವಿಕಾರನಾದ ರಾಜನು ತಾನೇ ಕುದುರೆಯಂತೆ ರಥವನ್ನು ಎಳೆಯುತ್ತ ನಡೆದನು.

ರಾಜನಿಗೆ ಚಿಂತೆಯಾಯಿತು. ಈಗ ಮತ್ತಾರಾದರೂ ಬ್ರಾಹ್ಮಣರು ಬಂದು ಕೇಳಿದರೆ ನನ್ನಲ್ಲಿ ಏನೂ ಇಲ್ಲವಲ್ಲ ಎಂದು.

**'ರಥಧುರಂ ಗೃಹ್ಣತಾ ವ್ಯಾಹೃತಂ ಬ್ರಾಹ್ಮಣಾನಾಂ**
**ಸಾಂಪ್ರತಂ ನಾಸ್ತಿ ಕಿಂಚಿದಿತಿ'** ॥ ಅ ೧೯೮/೯

ಆದರೆ ರಾಜನು ದಾನ ಕೊಡುತ್ತಾನೆ. ಆದರೆ ತಕ್ಷಣ ಕೊಡಲು ಮನಸ್ಸನ್ನು ಮಾಡಲಿಲ್ಲ. ವಾಪಸ್ಸು ಹೋದ ಮೇಲೆ ಕೊಡುವೆ ಎಂದ.

**'ನಿವೃತ್ತೋ ದಾಸ್ಯಾಮೀತ್ಯ ಬ್ರವೀತ್'** ಅ ೧೯೮/೭

ತಕ್ಷಣ ಕೊಡಲು ಕೋರಿದಾಗಲೇ ದಾನಕ್ಕೆ ಮುಂದಾದ.

**ನಾರದರೆಂದರು 'ಯ ಏಷ ದದಾತಿ ಚಾಸೂಯತಿ ಚ ತೇನ ವ್ಯಾಹೃತೇನ ತಥಾ ಅವತರೇತ್'**

ದಾನವನ್ನೇನೋ ಕೊಡುತ್ತಾನೆ. ಆದರೆ ಅಸೂಯೆ ಪಡುತ್ತಾನೆ. ಆದ್ದರಿಂದ **ಪ್ರತರ್ದ**ನನು ಸ್ವರ್ಗದಿಂದ **ಅಷ್ಟ**ಕನ ನಂತರ ಇಳಿಯುತ್ತಾನೆ'

ನಂತರ ಉಳಿದ ಇಬ್ಬರು ರಾಜಕುಮಾರರು ನಮ್ಮಿಬ್ಬರಲ್ಲಿ ಯಾರು ಸ್ವರ್ಗದಿಂದ ಚ್ಯುತರಾಗುತ್ತೇವೆಂದ? ಅದಕ್ಕೆ ನಾರದರು **ವಸುಮನಸ್** ಎಂದರು. ಏಕೆ ಎಂದು ರಾಜಕುಮಾರರು ಕೇಳಿದರು? ಅದಕ್ಕೂ ಕಾರಣ ನಿರೂಪಿಸಿದರು ನಾರದರು.

ಒಮ್ಮೆ ನಾನು **ವಸುಮನಸ್** ನ ಮನೆಗೆ ಹೋದಾಗ ಅವರ ಮನೆಯಲ್ಲಿ ದೇವತೆಗಳು ಯಜ್ಞಾಂತ್ಯದಲ್ಲಿ ಕೊಟ್ಟ ಪುಷ್ಪ ರಥಕ್ಕೆ ಬ್ರಾಹ್ಮಣರು ಸ್ವಸ್ತಿ ವಾಚನ ಮಾಡುತ್ತಿದ್ದರು ನಂತರ ಎಲ್ಲರಿಗೂ ರಥ ದರ್ಶನವಾಯಿತು. ನಾನು ಅದನ್ನು ನೋಡಿ ಪ್ರಶಂಸಿಸಿದೆ. ರಾಜನು ನನ್ನ ಪ್ರಶಂಸೆಯಿಂದ ತುಷ್ಟನಾಗಿ ನನಗೆ ಆ ರಥವನ್ನು ಕೊಟ್ಟನು. ಎರಡನೆ ಬಾರಿಯೂ ಹೀಗೆಯೇ ನಡೆಯಿತು. ಮೂರನೇ ಬಾರಿ ಒಮ್ಮೆ ಹೀಗೆ ಅವರ ಮನೆಗೆ ಹೋದಾಗ ಸ್ವಸ್ತಿವಾಚನ ನಡೆಯುತ್ತಿತ್ತು. ನಂತರ ರಥ ದರ್ಶನವಾಯಿತು. ನಾನೂ ಅದನ್ನು ಸ್ತುತಿಸಿದೆ. ರಾಜನು ಈ ಬಾರಿ ನನ್ನನ್ನು ಕುರಿತು 'ತಾವು ರಥವನ್ನು ಚೆನ್ನಾಗಿ ಸ್ವಸ್ತಿ ವಾಚನ ಮಾಡಿದಿರಿ' ಎಂದನೇ ಹೊರತು ನನಗೆ ಈ ರಥ ಕೊಡುವ ಮಾತಾಡದೆ ದ್ರೋಹ ಮಾಡಿದ್ದರಿಂದ ಆತನು ಮುಂದೆ ಸ್ವರ್ಗದಿಂದ ಚ್ಯುತನಾಗುತ್ತಾನೆಂದು ನಾರದರು ನುಡಿದರು.

> **'ಪುನರೇವ ತೃತೀಯಂ ಸ್ವಸ್ತಿವಾಚನಂ ಸಮಭಾವಯಂ ಅಥ ರಾಜಾ**
> **ಬ್ರಾಹ್ಮಣಾನಾಂ ದರ್ಶಯನ್ ಮಾಮಭಿಪ್ರೇಕ್ಷ್ಯ ಅಬ್ರವೀತ್। ಅಥೋ**
> **ಭಗವತಾ ಪುಷ್ಪಸ್ಯ ರಥ ಸ್ವಸ್ತಿವಾಚನಾನಿ ಸುಷ್ಠು ಸಂಭಾವಿತಾನಿ ಏತೇನ**
> **ದ್ರೋಹವಚನೇನ ಅವತರೇತ್।'** ಅ ೧೯೮-೧೫

ನಾಲ್ವರಲ್ಲಿ ಒಬ್ಬ ರಾಜಕುಮಾರನು ಮತ್ತೆ ಕೇಳೀದನು. ಒಂದು ವೇಳೆ ನೀವು ಹಾಗು ಶಿಬಿ ಸ್ವರ್ಗಕ್ಕೆ ಹೋದರೆ ಯಾರು ಮೊದಲು ಸ್ವರ್ಗದಿಂದ ಕೆಳಗೆ ಬರುವಿರಿ ಎಂದು?

ಅದಕ್ಕೆ ನಾರದರು ನಾನೇ ಮೊದಲು ಭೂಮಿಗೆ ಬರುವೆ. ನಾನು ಶಿಬಿಗೆ ಸಮನಲ್ಲ. (**'ಅಸಾವಹಂ ಶಿಬಿನಾ ಸಮೋ ನಾಸ್ಮಿ'-೧೯೮/೧೭**) ಏಕೆಂದರೆ

ಒಮ್ಮೆ ಒಬ್ಬ ಬ್ರಾಹ್ಮಣನು ಅನ್ನಾರ್ಥಿಯಾಗಿ ಶಿಬಿಯ ಬಳಿಗೆ ಬಂದನು. ಎಂತಹ ಅನ್ನ ಬೇಕೆಂದು ಶಿಬಿ ಕೇಳಿದ. ಅದಕ್ಕೆ ಬ್ರಾಹ್ಮಣನು 'ನಿನ್ನ ಮಗ **ಬೃಹದ್ಗರ್ಭ**ನನ್ನು ಕೊಂದು ಅವನ ಮಾಂಸವನ್ನು ಸಂಸ್ಕರಿಸಿ ಊಣ ಬಡಿಸು, ಎಂದ. ಶಿಬಿರಾಜನು ಸ್ವಲ್ಪವೂ ವಿಚಾರಿಸದೆ ಮಗನನ್ನು ಕೊಂದು ಸಂಸ್ಕರಿಸಿ ಆಹಾರ ತಯಾರಿಸಿ ಅದನ್ನು ಗೌರವದಿಂದ ತಲೆಯ ಮೇಲೆ ಇಟ್ಟುಕೊಂಡು ಬ್ರಾಹ್ಮಣನನ್ನು ಹುಡುಕುತ್ತಾ ಹೊರಟನು.

ದಾರಿಯಲ್ಲಿ ಒಬ್ಬ ಹೇಳಿದ 'ನೀನು ಹುಡುಕುತ್ತಿರುವ ಬ್ರಾಹ್ಮಣನು ಸಿಟ್ಟಾಗಿ ನಗರವನ್ನು ಪ್ರವೇಶಿಸಿ ನಿನ್ನ ಮನೆ, ಕೋಶಾಗಾರ, ಆಯುಧಾಗಾರ, ಅಂತಃಪುರ, ಅಶ್ವಶಾಲೆ, ಗಜಶಾಲೆಗಳನ್ನು ಸುಡುತ್ತಿದ್ದಾನೆ (ಬೆಂಕಿ ಹಚ್ಚುತ್ತಿದ್ದಾನೆ)'

ಆದರೆ ಇದನ್ನೆಲ್ಲಾ ಕೇಳಿದ ಶಿಬಿ ಮುಖದಲ್ಲಿ ಯಾವ ವಿಕಾರ ಹೊಂದದೆ ಆ ಬ್ರಾಹ್ಮಣನನ್ನು ನಗರದಲ್ಲಿ ಕಂಡು 'ಅನ್ನ ಸಿದ್ಧವಾಗಿದೆ' ಎಂದ. ಬ್ರಾಹ್ಮಣನು ಏನೂ ಉತ್ತರಿಸಲಿಲ್ಲ. ಆಶ್ಚರ್ಯದಿಂದ ತಲೆ ತಗ್ಗಿಸಿದ. ಮತ್ತೆ ರಾಜನು ಬ್ರಾಹ್ಮಣನನ್ನು

'ತಯಾರಿಸಿದ ಅನ್ನವನ್ನು ಉಣ್ಣಲು' ಪ್ರಾರ್ಥಿಸಿದ. ಒಂದು ಮುಹೂರ್ತ ಶಿಬಿಯ ಮುಖವನ್ನು ಸಿಟ್ಟಿನಿಂದ ನೋಡುತ್ತಾ 'ನೀನೇ ಆ ಅನ್ನವನ್ನು ಉಣ್ಣು' ಎಂದ. ಹಾಗೆಯೇ ಆಗಲಿ ಎಂದ ಶಿಬಿ ಮನಸ್ಸನ್ನು ನೋಯಿಸಿಕೊಳ್ಳದೆ ಅನ್ನದ ಪಾತ್ರೆಯನ್ನು ತೆಗೆದು ಉಣ್ಣಲು ಇಚ್ಛಿಸಿದ.

ನಂತರ ಬ್ರಾಹ್ಮಣನು ಶಿಬಿಯ ಕೈ ಹಿಡಿದು ನುಡಿದ

ರಾಜನ್! ನೀನು ಸಿಟ್ಟನ್ನು ಗೆದ್ದಿದ್ದೀಯಾ! ಬ್ರಾಹ್ಮಣನಿಗೆ ಕೊಡ ಬಾರದೆನ್ನುವ ವಸ್ತುವು ಯಾವುದೂ ಇಲ್ಲ. ನೀನು ನಿನ್ನ ರಾಜ್ಯ, ಆಸ್ತಿ, ಸ್ತ್ರೀಯರು, ಕೋಶ, ಸೇನೆ ಎಲ್ಲವನ್ನೂ ಬ್ರಾಹ್ಮಣನಿಗೆ ಕೊಟ್ಟಿದ್ದೀಯಾ! ಹೀಗೆನ್ನುತ್ತಾ ಆ ಬ್ರಾಹ್ಮಣನು ಶಿಬಿಯನ್ನು ಸತ್ಕರಿಸಿ ಗೌರಿವಿಸಿದನು. ಇದನ್ನೆಲ್ಲಾ ಕೇಳುತ್ತಿದ್ದ ರಾಜನು ಮೇಲೆ ನೋಡುತ್ತಿರಲು ದೇವ ಕುಮಾರನಂತಿರುವ ಮಗನನ್ನು ಎದುರಿಗೆ ಕಂಡ ಆತನ ಶರೀರದಿಂದ ಪರಿಮಳ ಸೂಸುತ್ತಿತ್ತು. ತಂದೆ ಮಕ್ಕಳೀರ್ವರನ್ನು ಆಶೀರ್ವದಿಸಿದ ಬ್ರಾಹ್ಮಣನು ಅಲ್ಲಿಯೇ ಅಂತರ್ಧಾನನಾದ.

**ಅಥೈನಂ ಬ್ರಾಹ್ಮಣೋಽಬ್ರವೀತ್ ಯ ಏಷತೇ ಪುತ್ರೋ ಬೃಹದ್ಗರ್ಭೋ ನಾಮ ಏಷ ಪ್ರಮಾತವ್ಯ ಇತಿ ತಮೇನಂ ಸಂಸ್ಕೃರು ಅನ್ನಂ ಚೋಪಪಾದಯ**
ಅ ೧೯೮/೧೮

**...ತೇ ಬ್ರಾಹ್ಮಣೋ ನಗರಂ ಪ್ರವಿಶ್ಯ ದಹತಿ ತೇ ಗೃಹಂ ಕೋಶಾಗಾರಂ... ಚ ಕ್ರುದ್ಧ ಇತಿ** ಅ ೧೯೮/೧೯

**ತಥೇತಿ ಶಿಬಿಸ್ತ ಥೈವಾವಿಮನಾ ಮಹಿತ್ವಾ** ಅ ೧೯೮/೨೨

**ಅಥಾಸ್ಯ ಬ್ರಾಹ್ಮಣೋ ಹಸ್ತಮಗೃಹ್ಣಾತ್ । ಅಬ್ರವೀಚ್ಚೈನಂ ಜಿತಕ್ರೋಧೋಽಸಿ ನ ತೇ ಕಿಂಚಿದಪರಿತ್ಯಾಜ್ಯಂ ಬ್ರಾಹ್ಮಣಾರ್ಥೇ** ಅ ೧೯೮/೨೨-೨೪

ಶಿಬಿಯನ್ನು ಪರೀಕ್ಷಿಸಿದ ಬ್ರಾಹ್ಮಣನು ಮತ್ತಾರೂ ಆಗಿರಲಿಲ್ಲ. ಸಾಕ್ಷಾತ್ ವಿಧಾತೃ ಪುರುಷನೇ ಆಗಿದ್ದ. ಇದನ್ನು ತಿಳಿದ ಅಮಾತ್ಯರು ರಾಜನಿಗೆ ಹೇಳಿದರು.

ಅವರು ರಾಜನನ್ನು ಕೇಳಿದರು-

ರಾಜನ್! ಯಾವ ಫಲ ನಿರೀಕ್ಷಿಸಿ ನೀನು ಹೀಗೆ ಮಾಡಿದೆ? ಅದಕ್ಕೆ ರಾಜನು 'ಕೀರ್ತಿಗೋಸುಗವಾಗಲೀ, ಸಂಪತ್ತಿಗೋಸ್ಕರವಾಗಲೀ, ಭೋಗದ ಆಶೆಯಿಂದಾಗಲೀ ಮಾಡಲಿಲ್ಲ. ನಾನು ಆಚರಿಸಿದ ಮಾರ್ಗ ಸತ್ಪುರುಷರು ಇದನ್ನು ಅನುಸರಿಸಿದ್ದಾರೆ. ಆದ್ದರಿಂದ ಮಹಾಜನರು ತುಳಿದ ದಾರಿಯಲ್ಲಿಯೇ ನಡೆಯುತ್ತಿದ್ದೇನೆ. ಸಜ್ಜನರು ಅನುಸರಿಸುವ ದಾರಿಯಲ್ಲಿಯೇ ನನ್ನ ಮನಸ್ಸು ಧಾವಿಸುತ್ತಿದೆ'.

ಹೀಗೆ ನುಡಿಯುತ್ತಾ, ನಾರದರು, ಶಿಬಿಯ ಈ ಮಾತುಗಳು ನನ್ನ ಕಿವಿಯಲ್ಲಿ ಸದಾ ಧ್ವನಿಸುತ್ತಿವೆ. ಇದೇ ಶಿಬಿಯ ಮಹಾಭಾಗ್ಯ ನಾನೂ ಕಂಡದ್ದು, ಎಂದರು.

**ಶಿಬಿರುವಾಚ –**

**ನೈವಾಹಮೇತದ್ ಯಶಸೇ ದದಾನಿ**
**ನ ಚಾರ್ಥಹೇತೋರ್ನ ಚ ಭೋಗತೃಷ್ಣಯಾ ।**
**ಪಾಪೈರನಾಸೇವಿತ ಏಷ ಮಾರ್ಗ**
**ಇತ್ಯೇವಮೇತತ್ ಸಕಲಂ ಕರೋಮಿ ॥**

**ಸದ್ಭಿಃ ಸದಾಧ್ಯಾಸಿತಂ ತು ಪ್ರಶಸ್ತಂ**
**ತಸ್ಮಾತ್ಪ್ರಶಸ್ತಂ ಶ್ರೂಯತೇ ಮತಿರ್ಮೇ ।**
**ಏತನ್ಮಹಾಭಾಗ್ಯ ವರಂಶಿಬೇಸ್ತು**
**ತಸ್ಮಾದಹಂ ವೇದ ಯಥಾವದೇತತ್' ॥** ಅ ೧೯೮–೨೬,೨೭

## ಸಂದೇಶಗಳು–ವಿವರಣೆಗಳು

ಮಹಾಭಾರತದ ವನಪರ್ವದಲ್ಲಿ ಬಂದಿರುವ ಈ ಉಪಾಖ್ಯಾನವು ಗದ್ಯದಲ್ಲಿ ವೇದವ್ಯಾಸದೇವರಿಂದ ಮೂಡಿ ಬಂದಿರುವ ಗದ್ಯಕಾವ್ಯಗಳಲ್ಲಿ ಒಂದು. ಅಂತೆಯೇ ಮಹಾಭಾರತವನ್ನು ಚಂಪೂ ಎನ್ನಬಹುದು. ಶಿಬಿಚಕ್ರವರ್ತಿಯ ಅಪೂರ್ವ ತ್ಯಾಗದ ಗರಿಮೆಯೇ ಇಲ್ಲಿಯ ವಸ್ತು.

೧) **ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ** ಎಂಬ ಗೀತೆಯ ಮಾತಿನ ಆಂತರ್ಯ ಇಲ್ಲಿ ಮೂಡಿ ಬಂದಿದೆ.

೨) ಸತ್ಪಾತ್ರರಲ್ಲಿ ಮಾಡುವ ದಾನ ಅನಂತ ಫಲದಾಯಕ. ಅದಕ್ಕಾಗಿ ವಿಳಂಬ ಸಲ್ಲದು **ತ್ವರೆ ಮಾಡಿ ದಾನ ಮಾಡು** ಎಂಬ ನೀತಿ ಇಲ್ಲಿದೆ.

೩) ಧರ್ಮರಾಜನು ಬ್ರಾಹ್ಮಣನಿಗೆ ಯಜ್ಞಕ್ಕಾಗಿ ಧನ ದಾನ ಕೇಳಿ ಬಂದಾಗ ಕೂಡಲೆ ಕೊಡಲಿಲ್ಲ. ಬೆಳಗಾದ ಮೇಲೆ ಕೊಡುವೆನೆಂದ. ಆದರೆ ಭೀಮನು ಆಗಲೇ ರಾತ್ರಿಯೇ 'ಅನರ್ಘ್ಯ ಹಸ್ತ ಭೂಷಣ'ವನ್ನು ಕೊಟ್ಟನು. ಇದೇ ಮಹಾಭಾರತದಲ್ಲಿ ಇದು ಬಂದಿದೆ. ತನ್ನಲ್ಲಿದ್ದುದನ್ನು ತಕ್ಷಣ ಕೊಡುವ ಗುಣ ದಾನದ ಮಹತಿಯನ್ನು ಹೆಚ್ಚಿಸುತ್ತದೆ. ಶಿಬಿಯು ಭೀಮನಂಥ ಸತ್ಪುರಷರ ಮಾರ್ಗದರ್ಶನದಲ್ಲಿ ನಡೆದವನು. **'ಯದ್ಯದಾಚರತಿ ಶ್ರೇಷ್ಠ: ತತ್ತದೇವೇತರೋಜನಃ'** ಎಂಬ ಕೃಷ್ಣನ ಮಾತನ್ನೇ (ಗೀತೆ – ೩/೨೧) ಶಿಬಿಯು ನುಡಿಯುತ್ತಾನೆ. ಅಂತೆಯೇ ಶಿಬಿ ಸರ್ವಮಾನ್ಯ ದಾನಶೂರನಾಗುತ್ತಾನೆ.

೪) ಸಾತ್ವಿಕರ ನಡೆಯೇ ಎಲ್ಲರಿಗೂ ಮಾರ್ಗದರ್ಶಿ ಯಾವ ಫಲವನ್ನು ನಿರೀಕ್ಷಿಸದೆ ನಿಷ್ಕಾಮ ಕರ್ಮ ಮಾಡುವುದರಲ್ಲಿಯೇ ಸಾಧನೆಯ ಸಾಫಲ್ಯ ಇರುತ್ತದೆ. ಅದು ಅಷ್ಟಕ, ಪ್ರತರ್ದನ, ವಸುಮನಸ್‌ರಲ್ಲಿ ಕಂಡರೂ ಅದರ ಗರಿಷ್ಠ ಪ್ರಕಾರವನ್ನು ಶಿಬಿಯಲ್ಲಿ ನೋಡುತ್ತೇವೆ.

೫) ದಾನ ಮಾಡುವುದು ಎಷ್ಟು ಶ್ರೇಯಸ್ಕರವೋ ಅದರ ಅನುಷ್ಠಾನ ಸಮಯದಲ್ಲಿ ನಂತರ ಯಾವ ಚಿತ್ತ ವಿಕ್ಷೇಪಕ್ಕೆ ವಿಚಾರಗಳಿಗೆ ಒಳಗಾದರೆ ಮತ್ತು ಫಲಾಪೇಕ್ಷೆಗಳ ಚಿಂತನೆ ಮಾಡಿದರೆ ಅದು ದಾನದ ಫಲವನ್ನು ಕಡಿಮೆಗೊಳಿಸುತ್ತದೆ.

೬) ಸಾಧಕರನ್ನು ದೇವತೆಗಳು ಪರೀಕ್ಷಿಸುತ್ತಿರುತ್ತಾರೆ. ಕಾರಣ ಸಾಧಕರು ತಮ್ಮ ಜೀವನವನ್ನು ತುಂಬಾ ಎಚ್ಚರಿಕೆಯಿಂದ ಗಮನಿಸುತ್ತಾ ತಮ್ಮ ಸುತ್ತ ಮುತ್ತಲಿನ ವ್ಯಕ್ತಿಗಳೊಂದಿಗೆ ವ್ಯವಹರಿಸಬೇಕು. ನಾರದರು ವಿಧಾತೃ ದೇವತೆಗಳು ಇಲ್ಲಿ ಪರೀಕ್ಷಿಸುತ್ತಿದ್ದ ಉತ್ತಮ ವ್ಯಕ್ತಿಗೋ, ದೇವತೆಗಳೇ ಆಗಿದ್ದಾರೆ. ಅವರ ಬಗ್ಗೆ ರಾಜಕುಮಾರರು, ಶಿಬಿ ಚಕ್ರವರ್ತಿ ತುಂಬಾ ಗಂಭೀರವಾಗಿ ನಡೆದು ಕೊಂಡುದುದು ಎಲ್ಲರಿಗೂ ಮಾರ್ಗದರ್ಶಿಯಾಗಿದೆ. ಕಾಮ ಕ್ರೋಧಗಳನ್ನು ಹಿಡಿತದಲ್ಲಿರಿಸಿಕೊಂಡಾಗಲೇ ಸಾಧಕನ ಜೀವನ ಸಾರ್ಥಕತೆಯನ್ನು ಕಂಡೀತು. ನಮ್ಮ ಸುತ್ತಮುತ್ತಲ ವ್ಯಕ್ತಿಗಳ ನೈಜ ಹಾರ್ದವನ್ನು ಚೆನ್ನಾಗಿ ಪರಿಶೀಲಿಸಿ ನಮ್ಮ ವರ್ತನೆಗಳನ್ನು ರೂಪಿಸಿಕೊಳ್ಳುವುದು ಒಳಿತು. ಸ್ತೋತ್ತಮರ ದ್ರೋಹವಾಗದಂತಹ ನಡೆ ರೂಪಿಸಿಕೊಂಡಾಗ ನಮ್ಮ ಯಶಸ್ಸು ಸಿದ್ಧ.

೭) ಒಟ್ಟಾರೆ ನಮ್ಮ ನಡೆಗೆ ಮೂಲಭೂತ ಮಾರ್ಗದರ್ಶನ ಉತ್ತಮರ ನಡೆಯಾಗಿರಬೇಕು ಎಂದು ಶಿಬಿ ತಿಳಿಸುತ್ತಾನೆ.

೮) ಕೀರ್ತಿ, ಹಣಗಳ ಹಿಂದೆ ಬಿದ್ದರೆ ಸಾಧನೆ ಶೂನ್ಯವಾಗುತ್ತದೆ. ಎಂಬ ಅಮೂಲ್ಯ ಸಂದೇಶ ಇಲ್ಲಿದೆ.

೯) ಶಿಬಿ ಹಾಗೂ ತಾವು (ನಾರದರು) ಒಂದು ವೇಳೆ ಸ್ವರ್ಗಕ್ಕೆ ಹೋದಲ್ಲಿ ಮೊದಲು ಸ್ವರ್ಗದಿಂದ ಬರುವವರಾರು? ಎಂಬ ಪ್ರಶ್ನೆಗೆ ಉತ್ತರ ನೀಡುವಾಗ ನಾರದರು ತಾವೇ ಮೊದಲು ಸ್ವರ್ಗದಿಂದ ಇಳಿಯುವುದಾಗಿ ನುಡಿಯುತ್ತಾರಷ್ಟೇ! ಇಲ್ಲಿ ಅವರ ಪ್ರಾಂಜಲ ವಿಮರ್ಶೆ– ತನ್ನನ್ನು ಶಿಬಿಗಿಂತ ಉತ್ತಮನಲ್ಲವೆಂದು ತಾವೇ ವಿಮರ್ಶೆ ಮಾಡುತ್ತಾರೆ. ('ಅಸೌ ಅಹಂ ಶಿಬಿನಾ ನಾಸ್ಮಿ ಸಮಃ')

ಇದರಿಂದ ಪ್ರತಿ ವ್ಯಕ್ತಿಯು ತನ್ನನ್ನು ವಿಮರ್ಶೆಗೆ ಒಳ ಪಡಿಸಲು ಹಿಂಜರಿಯಬಾರದು. ತಾನು ಮತ್ತೊಬ್ಬರಿಗಿಂತ ಕಡಿಮೆ ಎಂದು ಹೇಳಲೂ ಸಿದ್ಧನಾಗಿರಬೇಕೆಂಬ ಪಾರದರ್ಶಕ ವಿಮರ್ಶೆ ಇಲ್ಲಿ ನೋಡುತ್ತೇವೆ. ಇಂತಹ ಗುಣ ಎಷ್ಟು ಜನರಲ್ಲಿ ಕಾಣಬಹುದು? ಬೇರೆಯವರಲ್ಲಿ ಸದಾ ದೋಷವನ್ನೂ, ತನ್ನಲ್ಲಿ ಸದಾ ಗುಣಗಳನ್ನೇ ಕಾಣುವರರು ಜಗತ್ತಿನಲ್ಲಿ ಹೇರಳವಾಗಿ ಸಿಗುತ್ತಾರೆ. ತಾನು ವಿಮರ್ಶಾತೀತನೆಂಬ ಭಾವನೆಯುಳ್ಳವರಿಗೆ ನಾರದರ ಈ ಮಾತು ಕಣ್ಣು ತೆರೆಸುತ್ತದೆ. ಇಂತಹ ಜನರು ಜಗತ್ತಿನಲ್ಲಿ ಇಲ್ಲವೆಂದಲ್ಲ. ಆದರೆ ವಿರಳವೆಂದು ತಿಳಿದರೆ ತಪ್ಪಾಗದು.

೧೦) ಈ ಉಪಾಖ್ಯಾನದಲ್ಲಿ ಬಂದಿರುವ ಶಿಬಿಯ ತ್ಯಾಗವಂತೂ ಅನನ್ಯ. ಹಿಂದಿನ ಉಪಾಖ್ಯಾನದಲ್ಲಿ ತನ್ನ ಶರೀರದ ಮಾಂಸವನ್ನೇ ಕತ್ತರಿಸಿ ಕೊಟ್ಟಿದ್ದರೆ ಇಲ್ಲಿ ತನ್ನ

ಪ್ರತಿರೂಪವಾದ ಮಗನ್ನೇ ಕತ್ತರಿಸಿ ಬ್ರಾಹ್ಮಣರಿಗೆ ಅಡುಗೆ ಮಾಡಿ ಬಡಿಸಲು ಹೋದ ದಾನದ ಪರಿ ವರ್ಣನಾತೀತ. ಮಗನನ್ನು ಕೊಲ್ಲುವುದೆಂದರೆ ಅದು ಊಹಾತೀತ. ಆದರೆ ಹಿಂದಿನ ಭಾರತೀಯ ಸಮಾಜದಲ್ಲಿ ಎಂತಹ ಅಪೂರ್ವ ದಾನಿಗಳಿದ್ದರು ಎನ್ನಲು ಮಹಾಭಾರತ ಚೆಲ್ಲುವ ಬೆಳಕು ಅಪಾರ.

ದಾನ ಮಾಡುವ ಬುದ್ಧಿ ಬರುವುದೇ ಅಪರೂಪ. ಕೊಟ್ಟರೂ ಅತ್ಯಲ್ಪ. ತನ್ನ ಮುಂದಿನ ಪೀಳಿಗೆಗೂ ಆಗಿ ಉಳಿದುದನ್ನು ದಾನ ಮಾಡಿ ಸೈ ಎನ್ನಿಸಿಕೊಳ್ಳುವವರು ಇರುವ ಕಾಲವಿದು. ತನ್ನ ದೇಹ ದಾನ ಮಾಡುವುದಂತೂ ಸ್ವಪ್ನದಲ್ಲೂ ಸ್ಮರಣೆಗೆ ಸಾಧ್ಯವಿಲ್ಲ. ತನ್ನ ಮಗನ ದಾನವಂತೂ ಹೇಗೆ ತಾನೇ ಊಹಿಸಲು ಸಾಧ್ಯ?

ಹೀಗೆ ಈ ಉಪಾಖ್ಯಾನ ಹತ್ತು ಹಲವು ಸಂದೇಶಗಳನ್ನು ನೀಡಿ ನಮ್ಮನ್ನು ಎಚ್ಚರಿಸುತ್ತದೆ. ಅಂತೂ ದಾನದ ಮಹತ್ತ್ವ ಶಿಬಿಯ ಮಹತ್ವ ಇಲ್ಲಿ ಅಂತಹವರು ಯಾವಾಗಲೂ ವಿರಳವೆನ್ನುವುದೇ ಇಲ್ಲಿಯ ತಿರುಳು.

ಇತ್ಯಾದಿ...

*****

# ೪೯. ಇಂದ್ರದ್ಯುಮ್ನ ಉಪಾಖ್ಯಾನ

ಮಾರ್ಕಂಡೇಯರನ್ನು ಪಾಂಡವರು ಹಾಗೂ ಋಷಿಗಳು ಕೇಳುತ್ತಾರೆ. 'ನಿಮಗಿಂತಲೂ ದೀರ್ಘಾಯುಷಿಗಳು ಇದ್ದಾರೆಯೆ?' ಅದಕ್ಕೆ ಅವರು ಇಂದ್ರದ್ಯುಮ್ನ ನೆಂಬ ರಾಜರ್ಷಿಯು ಇದ್ದಾನೆ. ಆತ ಸ್ವರ್ಗಕ್ಕೆ ಹೋಗಿ ಪುಣ್ಯ ಭೋಗ ಮಾಡಿ ಸ್ವರ್ಗಚ್ಯುತನಾಗಿ ಬೀಳುತ್ತಾ ನನ್ನ ಕೀರ್ತಿ ಮುಗಿಯಿತೇ? ಎಂದನು. ಒಮ್ಮೆ ನನ್ನನ್ನು ಕೇಳಿದ 'ತಾವು ನಾನಾರೆಂದು ಬಲ್ಲಿರಾ'? ಅದಕ್ಕೆ ನಾನು ಹೀಗೆ ಉತ್ತರಿಸಿದೆ.

"ನಾವು ಸದಾ ಸಂಚಾರಿಗಳು. ಎಲ್ಲೂ ಒಂದು ರಾತ್ರಿಗಿಂತ ಜಾಸ್ತಿ ಇರುವುದಿಲ್ಲ. ಹೀಗಾಗಿ ಲೌಕಿಕ ವಿಷಯಗಳ ಅರಿವು ಅಷ್ಟಾಗಿ ಇರುವುದಿಲ್ಲ. ವ್ರತ ನಿಯಮಗಳಲ್ಲಿ ನಿರತರಾದ ನಾವು ಪ್ರಾಪಂಚಿಕ ವ್ಯವಹಾರ ತಿಳಿಯೆವು. ಅಂತೆಯೇ ನಾವು ಎಷ್ಟೇ ದೀರ್ಘಾಯುಗಳಾಗಿದ್ದರೂ ನಿನ್ನ ಅರಿವು ನಮಗೆ ಇಲ್ಲ" ಎಂದು.

ಅದಕ್ಕೆ ಇಂದ್ರದ್ಯುಮ್ನ ನಿಮಗಿಂತಲೂ ಯಾರಾದರೂ ದೀರ್ಘಾಯುಗಳು ಇದ್ದಾರೆಯೆ? ಎಂದು ಕೇಳಿದ. ಆಗ ಮಾರ್ಕಂಡೇಯರು 'ಹಿಮಾಲಯ ಪರ್ವತದಲ್ಲಿ **ಪ್ರಾವಾರ ಕರ್ಣ'** ಎಂಬ ಗೂಬೆಯಿದೆ. ನನಗಿಂತಲೂ ಅದು ಚಿರಂಜೀವಿ. ನಿನ್ನ ಬಗ್ಗೆ ತಿಳಿದಿರಬಹುದು. ಇದಕ್ಕೆ ಇಂದ್ರದ್ಯುಮ್ನ ಕೂಡಲೆ ಕುದುರೆಯಾಗಿ ನನ್ನನ್ನು ಕೂಡಿಸಿಕೊಂಡು ಆ ಗೂಬೆಯಿದ್ದ ಹಿಮಾಲಯದ ಪರಿಸರಕ್ಕೆ ಕರೆದೊಯ್ದು ಕೇಳಿದ 'ನೀನು ನನ್ನನ್ನು ಬಲ್ಲೆಯಾ'. ಅದಕ್ಕೆ ಗೂಬೆಯು ಒಂದು ಮುಹೂರ್ತ ಯೋಚಿಸಿ 'ನಿನ್ನ ಬಗ್ಗೆ ನನಗೇನೂ ತಿಳಿಯದು' ಎಂದು ಉತ್ತರಿಸಿತು.

ಆಗ ರಾಜನು ಗೂಬೆಯನ್ನು ಕುರಿತು 'ನಿನಗಿಂತ ಯಾರಾದರೂ ಚಿರಂಜೀವಿಗಳು ಇರುವರೇ' ಎಂದು ಕೇಳಿದ. ಅದಕ್ಕೆ ಗೂಬೆಯು "ಇಲ್ಲಿಯೇ ಹತ್ತಿರದಲ್ಲಿ ಇಂದ್ರದ್ಯುಮ್ನ ಎಂಬ ಸರೋವರವಿದೆ. ಅದರಲ್ಲಿ **ನಾಡೀ ಜಂಘ** ಎಂಬ ಒಂದು ಬಕವಿದೆ. ಅದನ್ನು ನೀನು ವಿಚಾರಿಸು" ಎಂದಿತು.

ನಂತರ ಇಂದ್ರದ್ಯುಮ್ನನು ನನ್ನನ್ನು ಹಾಗೂ ಗೂಬೆಯನ್ನು ತನ್ನ ಮೇಲೆ ಕೂರಿಸಿಕೊಂಡು ಆ ಸರೋವರದ ಬಳಿಗೆ ಹೋಗಿ ಹಾಗೆಯೇ ಕೇಳಿದರೂ ಆ ಬಕ ನನಗೇನೂ ಗೊತ್ತಿಲ್ಲ ಎಂದುತ್ತರಿಸಿತು. ಆಗ ಈ ಮೂವರೂ ಕೇಳಿದರು. (ಬಕನನ್ನು) 'ನಿನಗಿಂತ ಚಿರಂಜೀವಿಗಳಿರುವುದನ್ನು ನೀನು ಬಲ್ಲೆಯಾ' ಎಂದು ಅದಕ್ಕೆ ಅದು 'ಇವೇ ಸರೋವರದ ಒಳಗೆ **'ಅಕೂಪಾರ'** ಎಂಬ ಆಮೆ ಇದೆ. ಅದನ್ನು ಬೇಕಾದರೆ ಕೇಳಿ ಎಂದಿತು.

ಆಮೇಲೆ ಆ ಬಕವು ಆಮೆಯನ್ನು ವಿನಂತಿಸಿತು. ನಮಗೆ ನಿನ್ನಿಂದ ಒಂದು ವಿಷಯ ತಿಳಿಯಬೇಕಿದೆ. ದಯವಿಟ್ಟು ಹೊರಗೆ ಬಾ, ಎಂದಾಗ ಆಮೆ ಬಂತು. ಆಗ ನಾವು ಕೇಳಿದೆವು. 'ನಿನಗೆ ಇಂದ್ರದ್ಯುಮ್ನ ರಾಜನ ಪರಿಚಯವಿದೆಯಾ' ಎಂದು.

ಆಗ ಆಮೆ ಒಂದು ಮುಹೂರ್ತ ಧ್ಯಾನಿಸಿತು. ಅದರ ಕಣ್ಣಾಲಿಯಲ್ಲಿ ನೀರು ತುಂಬಿ ಅಳುತ್ತಾ ಎಚ್ಚರ ತಪ್ಪಿದಂತಾಗಿ ಉದ್ವೇಗಗೊಂಡು ಪ್ರಾಂಜಲಿಯಾಗಿ ಉತ್ತರಿಸಿತು.

'ನಾನು ಇವನನ್ನು ಅರಿಯೆನೆ? ಇವನಿಂದಲೇ ಸಾವಿರಾರು ಯಜ್ಞ ಯೂಪ ಸ್ತಂಭಗಳು ಸ್ಥಾಪಿಸಲ್ಪಟ್ಟಿವೆ. ಯಜ್ಞಾನಂತರ ಬ್ರಾಹ್ಮಣರಿಗೆ ಕೊಟ್ಟ ದಕ್ಷಿಣಾ ರೂಪ ಹಸುಗಳ ಗೊರಸುಗಳ ಆಘಾತದಿಂದ ನಿರ್ಮಿತವಾದುದು ಈ ಸರೋವರ ಅದರ ಹೆಸರು ಈತನದೇ ಇಂತಹ ಅಪೂರ್ವ ಸರೋವರದಲ್ಲಿ ನಾನು ವಾಸವಾಗಿದ್ದೇನೆ. ಹೀಗೆ ಆಮೆ ನುಡಿಯುತ್ತಿದ್ದಂತೆಯೇ ದೇವಲೋಕದಿಂದ ರಥ ಅಲ್ಲಿ ಪ್ರತ್ಯಕ್ಷವಾಯಿತು. ರಥದಿಂದ ಧ್ವನಿಯೊಂದು ಬಂದಿತು. ರಾಜನ್, ಸ್ವರ್ಗದ ಬಾಗಿಲು ನಿನಗಾಗಿ ತೆರೆದಿದೆ. ಕೀರ್ತಿವಂತನಾಗಿ ಉದ್ವೇಗ ರಹಿತನಾಗಿ ಸ್ವರ್ಗಕ್ಕೆ ಹೋಗು. ಈ ರಥ ನಿನಗಾಗಿ ಕಾದಿದೆ. ಅದೇ ಸಮಯಕ್ಕೆ ಇಂದ್ರದ್ಯುಮ್ನನಿಗೆ ಈ ಮಾತುಗಳು ಕೇಳಿಸಿದವು.

**ದಿವಂ ಸ್ಪೃಶತಿ ಭೂಮಿಂ ಚ ಶಬ್ದಃ ಪುಣ್ಯಸ್ಯ ಕರ್ಮಣಃ ।**
**ಯಾವತ್ಸ ಶಬ್ದೋ ಭವತಿ ತಾವತ್ ಪುರುಷ ಉಚ್ಯತೇ ॥**

**ಅಕೀರ್ತಿಃ ಕೀರ್ತ್ಯತೇ ಲೋಕೇ ಯಸ್ಯ ಭೂತಸ್ಯ ಕಸ್ಯಚಿತ್ ।**
**ಸ ಪತತ್ಯಧಮಾನ್ ಲೋಕಾನ್ ಯಾವಚ್ಛಬ್ದಃ ಪ್ರಕೀರ್ತ್ಯತೇ ॥**

**ತಸ್ಮಾತ್ಕಲ್ಯಾಣವೃತ್ತಃ ಸ್ಯಾತ್ ಅನಂತಾಯ ನರಃ ಸದಾ ।**
**ವಿಹಾಯ ಚಿತ್ತಂ ಪಾಪಿಷ್ಠಂ ಧರ್ಮಮೇವ ಸಮಾಶ್ರಯೇತ್ ॥**

**ಅಧ್ಯಾಯ ೧೯೯– ೧೩, ೧೪, ೧೫**

'ಯಾರ ಪುಣ್ಯ ಕರ್ಮಗಳು ಎಷ್ಟು ಕಾಲದವರೆಗೆ ಜಗತ್ತಿನಲ್ಲಿ ಕೇಳುತ್ತಿರುತ್ತದೋ ಅಲ್ಲಿಯವರೆಗೆ ಅವನು ಪುಣ್ಯ ಲೋಕದಲ್ಲಿರುತ್ತಾನೆ'

'ಯಾವ ವ್ಯಕ್ತಿಯ ಕೆಟ್ಟ ಕೆಲಸಗಳು ಲೋಕದಲ್ಲಿ ಪ್ರಸಿದ್ಧಿ ಹೊಂದಿರುತ್ತವೆಯೋ ಅಲ್ಲಿಯವರೆಗೆ ಅವನು ನರಕಾದಿ ಅಧಮ ಲೋಕಗಳಲ್ಲಿಯೇ ಇರುತ್ತಾನೆ'

'ಆದ್ದರಿಂದ ಪ್ರತಿಯೊಬ್ಬನೂ ಮಂಗಲ ಕಾರ್ಯಗಳಲ್ಲಿಯೇ ಮಗ್ನನಾಗಬೇಕು. ದುಷ್ಟ ಬುದ್ಧಿ ಹೊಂದದೆ ಧರ್ಮವನ್ನೇ ಸದಾ ಆಚರಿಸುತ್ತಿರಬೇಕು'.

ಈ ಮಾತುಗಳನ್ನು ಕೇಳಿದ ಇಂದ್ರದ್ಯುಮ್ನ ಆ ರಥಸಾರಥಿಗೆ ಹೇಳಿದ. ನನ್ನೊಡನೆ ಬಂದ ಈ ಇಬ್ಬರೂ ವೃದ್ಧರನ್ನು ಅವರು ಮೊದಲು ಇದ್ದಲ್ಲಿಯೇ ಬಿಟ್ಟು ಬರುತ್ತೇನೆ. ಅಲ್ಲಿಯವರೆಗೂ ನೀನಿಲ್ಲಿಯೇ ಇರು ಎಂದು ಹೇಳಿ ಇಂದ್ರದ್ಯುಮ್ನ ರಾಜ ಮಾರ್ಕಂಡೇಯರನ್ನು, ಗೂಬೆಯನ್ನೂ ಅವರು ಇದ್ದಲ್ಲಿ ಹಾಗೆ ಬಿಟ್ಟು ಬಂದು ರಥವೇರಿ ಸ್ವರ್ಗಕ್ಕೆ ನಡೆದ. ಇವೆಲ್ಲವನ್ನೂ ನಾನು ಸ್ವತಃ ಅನುಭವಿಸಿದೆ ಎಂದು ಪಾಂಡವರಿಗೆ ಮಾರ್ಕಂಡೇಯರು ಹೇಳಿದರು.

ಪಾಂಡವರು ಮಾರ್ಕಂಡೇಯರನ್ನು 'ಸ್ವರ್ಗದಿಂದ ಚ್ಯುತನಾದ ಇಂದ್ರದ್ಯುಮ್ನ ಮತ್ತೆ ಸ್ವರ್ಗಕ್ಕೆ ಹೋಗುವಂತೆ ಮಾಡಿದಿರಿ' ಎಂದರು. ಅದಕ್ಕೆ ಮಾರ್ಕಂಡೇಯರು ಇದುವೇ ಭಾಗವತ ಧರ್ಮ. ಸ್ವಯಂ ಕೃಷ್ಣನೂ ಕೂಡಾ ನರಕದಲ್ಲಿದ್ದ ನೃಗರಾಜನನ್ನು ಸ್ವರ್ಗಕ್ಕೆ ಕಳಿಸಿದನಷ್ಟೆ ಎಂದು ಕೃಷ್ಣನನ್ನು ಸ್ಮರಿಸುತ್ತಾ ಉಪಾಖ್ಯಾನವನ್ನು ಮುಕ್ತಾಯಗೊಳಿಸಿದರು.

## ಸಂದೇಶಗಳು–ವಿವರಣೆಗಳು

೧. ಚಿರ ಆಯುಷ್ಯ ಬದುಕಿಗೂ ಸ್ವರ್ಗದಲ್ಲಿರುವುದಕ್ಕೂ ಇಲ್ಲಿ ಏನೋ ಸಂಬಂಧವಿದೆ ಎಂದು ತೋರುತ್ತಿದೆ. ಬಾಳಿದರೆ ಸ್ವರ್ಗದಲ್ಲಿ ಬಾಳಬೇಕೆಂಬ ಹಂಬಲ ಇಂದ್ರದ್ಯುಮ್ನನದು. ಎಂದು ತೋರುತ್ತದೆ. ಆದ್ದರಿಂದಲೇ ಮಾರ್ಕಂಡೇಯರನ್ನು ಚಿರಂಜೀವಿಗಳ ಬದುಕಿನ ಕಾಲದಲ್ಲಿ ಇದ್ದವನು ಯಾರ್‍ಯಾರನ್ನು ನೋಡಿದಿರಿ ಎಂದು ಕೇಳುತ್ತಾನೆ.

೨. ಭೂಮಿಯಲ್ಲಿ ಬದುಕಿದಾಗಲೂ ಧರ್ಮಿಷ್ಠನಾಗಿ ಬದುಕಿದ್ದಾಗಲೇ ಅದು ಸಾರ್ಥಕ. ತನ್ನ ಪರಿಸರದ ಎಲ್ಲ ಜನರು ತನ್ನನ್ನು ಪ್ರೀತಿಸುವಂತೆ ಶ್ಲಾಘಿಸುವಂತೆ ಬದುಕಬೇಕು. ಕೀರ್ತಿವಂತನಾಗಿ ಬಾಳಬೇಕು. ತಾನು ಭೂಮಿಯನ್ನು ಬಿಟ್ಟು ಬೇರೆ ಲೋಕಕ್ಕೆ ಹೋದರೂ ಬಿಟ್ಟ ಲೋಕದಲ್ಲಿ ಜನರು ತನ್ನನ್ನು ನೆನಸುವಂತಿದ್ದರೆ ಮಾತ್ರ ಆ ಬದುಕು ಸಾರ್ಥಕ. ಇಹ ಲೋಕದಲ್ಲಿ ಜನರು ಎಲ್ಲಿಯವರೆಗೆ ಪ್ರಶಂಶಿಸುವರೋ ಅಲ್ಲಿಯವರೆಗೆ ಪರಲೋಕ ವಾಸ–ಸುಖ ಇದು ಕಟ್ಟಿಟ್ಟ ಬುತ್ತಿ.

೩. ಸದಾಚಾರ ಸದ್ವಿಚಾರಗಳಿಂದ ಕೂಡಿದ ಬದುಕೇ ಬದುಕು.

೪. ಇಂದ್ರದ್ಯುಮ್ನನಿಗೆ ಸ್ವರ್ಗಕ್ಕೆ ಹೋಗಲು ದೇವರಥ ಸಿದ್ಧವಾಗಿದ್ದರೂ ಕೂಡಲೇ ರಥವೇರಿ ಹೋಗದೆ ತನ್ನ ಸಲುವಾಗಿ ತನ್ನೊಡನೆ ಬಂದ ಮಾರ್ಕಂಡೇಯರನ್ನೂ, ಗೂಬೆಯನ್ನೂ ಅವರ ಸ್ಥಾನಗಳಿಗೆ ಬಿಟ್ಟು ಬಂದ ನಂತರವೇ ಸ್ವರ್ಗಕ್ಕೆ ಹೋಗುತ್ತಾ ಸಾಧಕನಲ್ಲಿರಬೇಕಾದ ಮಾನವೀಯ ಗುಣಗಳನ್ನು ತೋರಿಸುತ್ತಾನೆ. ಧರ್ಮ ರಾಜನೂ ಕೂಡಾ ತನ್ನೊಡನೆ ಬಂದ ನಾಯಿಯನ್ನು ಸ್ವರ್ಗಕ್ಕೆ ಕರೆದೊಯ್ಯಲೇ ಬೇಕೆಂದು ಹಠ ಹಿಡಿಯುವುದನ್ನು ನೋಡುತ್ತೇವೆ.

೫. ಈ ಕಥೆಯ ಸಂದೇಶವು ಇಲ್ಲಿಯೇ ಬಂದಿದೆ. ಜೀವನದ ಯಶಸ್ಸಿನ ಗುಟ್ಟು ಇಲ್ಲಿ ರಟ್ಟಾಗಿದೆ. **'ರಾಮನಂತೆ ಬದುಕು ರಾವಣನಂತೆ ಬದುಕ ಬೇಡ'** ಎಂಬ ಲೋಕ ನೀತಿ ಇಲ್ಲಿಯ ತಿರುಳು.

ಇತ್ಯಾದಿ...

# ೫೦. ಧುಂಧುಮಾರ ಉಪಾಖ್ಯಾನ

ಸ್ವರ್ಗದಿಂದ ಚ್ಯುತನಾದ ಇಂದ್ರದ್ಯುಮ್ನನು ಮರಳಿ ಸ್ವರ್ಗಕ್ಕೆ ತೆರಳಿದ ಕಥೆಯನ್ನು ಕೇಳಿದ ಧರ್ಮರಾಜನು ಚಿರಂಜೀವಿಗಳಾದ ಮಾರ್ಕಂಡೇಯರನ್ನು ಪ್ರಶಂಸಿಸುತ್ತಾ ಸೋಲರಿಯದ ಸರದಾರನಾದ ಇಕ್ಷ್ವಾಕುವಂಶದ ಕುವಲಾಶ್ವನು ಧುಂಧುಮಾರನೆಂಬ ಹೆಸರನ್ನು ಹೇಗೆ ಪಡೆದನೆಂದು ವಿವರಿಸಲು ಕೋರುತ್ತಾನೆ.

**'ಕುವಲಾಶ್ವ ಇತಿ ಖ್ಯಾತ ಇಕ್ಷ್ವಾಕುರಪರಾಜಿತಃ ।**
**ಕಥಂ ನಾಮವಿಪರ್ಯಾಸಾತ್ ಧುಂಧುಮಾರತ್ವಮಾಗತಃ' ॥**

**– ವನಪರ್ವ (೨೦೧/೬)**

ಆಗ ಯುಧಿಷ್ಠಿರನಿಗೆ ದೀರ್ಘಾಯುಗಳಾದ ಮಾರ್ಕಾಂಡೇಯರು **ಧುಂಧುಮಾರ ಉಪಾಖ್ಯಾನ**ವನ್ನು ಹೇಳಲುಪಕ್ರಮಿಸಿದರು.

ಹಿಂದೆ ಉದಂಕನೆಂದು ಪ್ರಸಿದ್ಧನಾದ ಮಹರ್ಷಿಗಳು ಮನೋಹರವಾದ 'ಮರುಧನ್ವ' ವೆಂಬ ಮರುಭೂಮಿಯಲ್ಲಿದ್ದ ತಮ್ಮ ಆಶ್ರಮದಲ್ಲಿ ವಿಷ್ಣುವನ್ನು ಕುರಿತು ಕಠಿಣ ತಪಸ್ಸನ್ನು ಬಹುವರ್ಷಕಾಲ ಮಾಡಿದರು. ಅವರ ತಪಸ್ಸಿಗೆ ಮೆಚ್ಚಿದ ಭಗವಂತನಾದ ವಿಷ್ಣು ದರ್ಶನವನ್ನು ಕೊಟ್ಟನು. ದರ್ಶನದಿಂದ ಪುಳಕಿತರಾದ ಋಷಿಗಳು ವಿವಿಧ ರೀತಿಯಿಂದ ಸ್ತೋತ್ರ ಮಾಡಿದರು.

'ಹೇ ದೇವ! ನಿನ್ನಿಂದ ಸುರಾಸುರ ಸ್ಥಾವರ ಜಂಗಮ ಪ್ರಪಂಚ, ನಾನಾ ವಿದ್ಯೆಗಳೂ ಸೃಷ್ಟಿಯಾಗಿವೆ. ಈ ಬ್ರಹ್ಮಾಂಡವೆ ನಿನ್ನ ಅವಯವಗಳು. ನೀನು ಸಂತುಷ್ಟನಾದರೆ ಈ ಜಗತ್ತಿಗೆ ಉಳಿವು. ನೀನು ಖತಿಗೊಂಡರೆ ಮಹಾಭಯ. ಮತ್ತೆ ಭಯ ನಿವಾರಕನು ನೀನೇ ಆಗಿದ್ದೀಯಾ. ನಿನ್ನಿಂದಲೇ ಹಿಂದೆ ದೈತ್ಯರು ನಾಶ ಹೊಂದಿದ್ದಾರೆ. ದೇವತೆಗಳು ಮೋಕ್ಷ ಪಡೆದರು. ನಿನ್ನ ಆರಾಧನೆಯಿಂದ ದೇವತೆಗಳು ಸುಖ ಸಮೃದ್ಧಿ ಹೊಂದುವರು' (ಇತ್ಯಾದಿ)

**'ತ್ವಯಾ ದೇವ ಪ್ರಜಾಃ ಸರ್ವಾಃಸಸುರಾಸುರ ಮಾನವಾಃ ।**
**ಬ್ರಹ್ಮ ವೇದಾಶ್ಚ ವೇದ್ಯಂ ಚ ತ್ವಯಾ ಸೃಷ್ಟಂ ಮಹಾದ್ಯುತೇ**
**ಇಂದ್ರ ಸೋಮಾಗ್ನಿ ವರುಣಾಃ... ।**
**ಪ್ರಹ್ವಾಸ್ತ್ವಾಂ ಉಪತಿಷ್ಠಂತಿ ಸ್ತುವಂತೋ ವಿವಿಧೈಃಸ್ತವೈಃ ।**
**ತ್ವಯಿ ತುಷ್ಟೇ ಜಗತ್‌ಸ್ವಾಸ್ಥ್ಯಂತ್ವಯಿ ಕ್ರುದ್ಧೇ ಮಹದ್ಭಯಂ ।**

**ಆರಾಧಯಿತ್ವಾ ತ್ವಾಂ ದೇವಾಃ ಸುಖಮೇಧಂತಿ ಸರ್ವಶಃ ।**
**ಉತ್ತಂಕಮಬ್ರವೀತ್ ವಿಷ್ಣುಃ ಪ್ರೀತಸ್ತೇಽಹಂ ವರಂ ವೃಣು' ।**
**– ವನಪರ್ವ–ಅ–೨೦೧ – ೧೪ ರಿಂದ ೨೫.**

ಉದಂಕನ ಸ್ತೋತ್ರಕ್ಕೆ ಮೆಚ್ಚಿ ವಿಷ್ಣು ವರವನ್ನು ಬೇಡು ಎಂದು ಉತ್ತಂಕನಿಗೆ ನುಡಿದನು. ಅದಕ್ಕೆ ಉತ್ತಂಕನು

ಜಗತ್ಸೃಷ್ಟಿಕರ್ತನಾದ ಶಾಶ್ವತನಾದ ಪರಮ ಪುರುಷನಾದ (ನಿನ್ನ) ಹರಿಯ ದರ್ಶನವೇ ಸಾಕು. ಅದಕ್ಕಿಂತ ಹೆಚ್ಚಿನ ವರ ಯಾವುದು? ಎಂದು ಯಾವ ಬೇಡಿಕೆಯನ್ನು ಬೇಡಲಿಲ್ಲ.

**'ಪರ್ಯಾಪ್ತೋ ಮೇ ವರೋ ಹ್ಯೇಷ ಯದಹಂ ದೃಷ್ಟವಾನ್ ಹರಿಂ ।**
**ಪುರುಷಂ ಶಾಶ್ವತಂ ದಿವ್ಯ ಸ್ರಷ್ಟಾರಂ ಜಗತಃ ಪ್ರಭುಮ್' ॥**
**ಅ–೨೦೧– ೨೫,೨೬**

ಅದಕ್ಕೆ ವಿಷ್ಣುವು ನಿನ್ನ ನಿಸ್ಪೃಹ ಭಕ್ತಿಯಿಂದ ನನಗೆ ತುಂಬಾ ಸಂತೋಷವಾಗಿದೆ. ಆದ್ದರಿಂದ ನನ್ನಿಂದ ನೀನು ವರವನ್ನು ಪಡೆಯಲೇ ಬೇಕೆಂದ.

ಹೀಗೆ ವಿಷ್ಣುವಿನ ಅನುಗ್ರಹ ವಚನದಿಂದ ಪುಳಕಿತನಾದ ಉತ್ತಂಕನು ಕೈ ಮುಗಿದು 'ಕಮಲದಂತೆ ವಿಶಾಲ ಕಣ್ಣುಳ್ಳವನೇ! ಒಂದು ವೇಳೆ ನೀನು ನನ್ನ ಬಗ್ಗೆ ಸಂತುಷ್ಟನಾಗಿದ್ದಲ್ಲಿ ನನಗೆ ಧರ್ಮ, ಸತ್ಯ, ಇಂದ್ರಿಯ ನಿಗ್ರಹಗಳನ್ನು ಕರುಣಿಸು. ನಿನ್ನಲ್ಲಿ ಸದಾ ಭಕ್ತಿಯನ್ನು ಅನುಗ್ರಹಿಸು' ಎಂದು ಬೇಡಿದನು.

**'ಧರ್ಮೇ ಸತ್ಯೇ ದಮೇ ಚೈವ ಬುದ್ಧಿ ರ್ಭವತು ಮೇ ಸದಾ ।**
**ಅಭ್ಯಾಸಶ್ಚ ಭವೇದ್ಭಕ್ತ್ಯಾ ತ್ವಯಿ ನಿತ್ಯಂ ಮಹೇಶ್ವರ' ॥ ಅ ೨೦೧–೨೯**

ಆಗ ಭಗವಂತನು ನನ್ನ ಅನುಗ್ರಹದಿಂದ ಇದೆಲ್ಲವು ಅಗುತ್ತದೆ. ಅಲ್ಲದೆ ನನ್ನ ಅನುಗ್ರಹದಿಂದ ನಿನಗೆ 'ವೈಷ್ಣವಯೋಗ' ಪ್ರತಿಭಾತವಾಗುತ್ತದೆ. ಅದರಿಂದ ಕೂಡಿಕೊಂಡು ನೀನು ಮೂರುಲೋಕಗಳಿಗೂ ಉಪಕಾರಕವಾದ ಮಹಾಕಾರ್ಯವನ್ನು ಮಾಡುವೆ. **'ಧುಂಧು'** ಎಂಬ ಮಹಾಸುರನು ಲೋಕಗಳ ನಾಶಕ್ಕಾಗಿ ಮಹಾತಪಸ್ಸನ್ನು ಮಾಡುತ್ತಿದ್ದಾನೆ. ಬೃಹದಶ್ವ ರಾಜನ ಮಗನಾದ ಕುವಲಾಶ್ವನು, ನಾನು ನಿನಗೆ ಅನುಗ್ರಹಿಸಿದ ವೈಷ್ಣವ ಯೋಗ ಸಂಪತನ್ನು ನಿನ್ನಿಂದ ಪಡೆದು, ಅವನನ್ನು (ಧುಂಧುವನ್ನು) ಕೊಲ್ಲುತ್ತಾನೆ. ಅದಕ್ಕಾಗಿ ನೀನು ಆ ರಾಜನಿಗೆ ಆದೇಶ ನೀಡುವ ಮೂಲಕ ಅಸುರ ಸಂಹಾರ ಕಾರ್ಯದಲ್ಲಿ ಲೋಕೋಪಕಾರ ಮಾಡುವೆ ಎಂದು ಹೇಳಿ ವಿಷ್ಣುವು ಅಂತರ್ಧಾನನಾದನು.

**'ಸರ್ವಮೇತದ್ಧಿ ಭವಿತಾ ಮತ್ಪ್ರಸಾದಾತ್ ತವ ದ್ವಿಜ ।**
**ಪ್ರತಿಭಾಸ್ಯತಿ ಯೋಗಶ್ಚ ಯೇನ ಮುಕ್ತೋ ದಿವೌಕಸಾಂ ॥**

**ತ್ರಯಾಣಾಮಪಿ ಲೋಕಾನಾಂ ಮಹತ್ಕಾರ್ಯಂ ಕರಿಷ್ಯಸಿ ।**
**ಉತ್ಸಾದನಾರ್ಥಂ ಲೋಕಾನಾಂ ಧುಂಧುರ್ನಾಮ ಮಹಾಸುರಃ ।**

**ತಪಸ್ಯತಿ ತಪೋ ಘೋರಂ ಶೃಣು ಯಸ್ತಂ ಹನಿಷ್ಯತಿ ।**
**ರಾಜಾ ಹಿ ವೀರ್ಯವಾಂಸ್ತಾತ ಇಕ್ಷ್ವಾಕುರಪರಾಜಿತಃ ।**
**ಬೃಹದಶ್ವ ಇತಿಖ್ಯಾತಃ**
**ತಸ್ಯ ಪುತ್ರಃ ಶುಚಿರ್ದಾಂತಃ ಕುವಲಾಶ್ವ ಇತಿ ಶ್ರುತಃ ।**
**ಸ ಯೋಗಬಲಮಾಸ್ಥಾಯ ಮಾಮಕಂ**
**ಶಾಸನಾತ್ತವ ವಿಪ್ರರ್ಷೇ ಧುಂಧುಮಾರೋ ಭವಿಷ್ಯತಿ' ॥**

**ಅ– ೨೦೧– ೩೦ ರಿಂದ ೩೪**

ಉತ್ತಂಕನು ವರ ಪಡೆದ ಸಮಯದಲ್ಲಿಯೇ ಇಕ್ಷ್ವಾಕುವಂಶದಲ್ಲಿ **ಬೃಹದಶ್ವ** ರಾಜನಾಗಿದ್ದನು. ಆತನ ಮಗನೇ **ಕುವಲಾಶ್ವ.** ಕುವಲಾಶ್ವನಿಗೆ ರಾಜ್ಯ ಭಾರ ಒಪ್ಪಿಸಿ ಬೃಹದಶ್ವನು ವನಕ್ಕೆ ತಪಸ್ಸಿಗಾಗಿ ಹೊರಡುವುದನ್ನು ಕೇಳಿದ ಉತ್ತಂಕನು ಬೃಹದಶ್ವನ ಬಳಿಗೆ ಬಂದು ಹೀಗೆ ನಿವೇದಿಸಿದ.

ನಿನ್ನಿಂದಲೇ ಭೂರಕ್ಷಣೆಯಾಗಬೇಕು. ರಾಜನು ಪ್ರಜಾಪಾಲನೆ ಮಾಡಿದಾಗಲೇ ಪ್ರಜೆಗಳು ತಮ್ಮ ತಮ್ಮ ಧರ್ಮಗಳನ್ನು ಅನುಸರಿಸಲು ಸಾಧ್ಯವಾಗುತ್ತದೆ. ನಾನು ವಾಸವಾಗಿರುವ 'ಮರುಧನ್ವ' ಮರುಭೂಮಿಯ ಪ್ರದೇಶದಲ್ಲಿ **'ಉಜ್ಜಾಲಕ'** ಎಂಬ ಮರಳಿ(ಉಸುಕು)ನಿಂದ ಪೂರ್ಣವಾದ ಪ್ರದೇಶವಿದೆ. ಅದು ಬಹು ಯೋಜನ ವಿಸ್ತಾರವಾದುದು. ಈ ಭಯಂಕರ ತಾಣದಲ್ಲಿಯೇ **ಮಧು ಕೈಟಭರ ಪುತ್ರನಾದ ಧುಂಧು** ಎಂಬ ಭಯಂಕರ ಅಸುರನು ಮರಳ ರಾಶಿಯ ಬುಡದಲ್ಲಿ ಗುಹೆಯೊಂದನ್ನು ಮಾಡಿಕೊಂಡು ವಾಸ ಮಾಡುತ್ತಾ ಮೂರು ಲೋಕಗಳ ನಾಶಕ್ಕೋಸ್ಕರ ಬ್ರಹ್ಮದೇವರನ್ನು ಕುರಿತು ತಪಸ್ಸನ್ನು ಮಾಡಿ ದೇವ ದೈತ್ಯ ದಾನವ ಗಂಧರ್ವಾದಿಗಳಿಂದ ಅವಧ್ಯತ್ವ ವರವನ್ನು ಪಡೆದು ಈಗ ನನ್ನ ತಪಸ್ಸಿಗೆ ವಿಘ್ನ ಮಾಡುತ್ತಿದ್ದಾನೆ. ಅವನ ಉಪಟಳದಿಂದ ನಾನು ನಿಶ್ಚಿಂತೆಯಿಂದ ತಪಸ್ಸನ್ನು ಮಾಡಲು ಅಸಮರ್ಥನಾಗಿದ್ದೇನೆ. ಅವನನ್ನು ಸಂಹರಿಸು. ಇದರಿಂದ ನಿನ್ನ ಕೀರ್ತಿ ಶಾಶ್ವತವಾಗುತ್ತದೆ. ಆ ಅಸುರನು ಮರುಭೂಮಿ ಪ್ರದೇಶದ ಒಳಗೆ ಮಲಗಿರುತ್ತಾನೆ. ವರ್ಷಕ್ಕೊಮ್ಮೆ ಏಳುವ ಅವನ ನಿಶ್ವಾಸ ಗಾಳಿಯಿಂದ ಏಳುವ ಧೂಳಿನಿಂದ ಏಳು ದಿನಗಳವರೆಗೆ ಭೂಮಿ ಕಂಪಿಸುತ್ತದೆ. ಭೂಮಿಯ ಮೇಲೆಲ್ಲಾ ಅಗ್ನಿ ಜ್ವಾಲೆ ಧೂಮರಾಶಿ ಸೂರ್ಯ ಮಾರ್ಗವನ್ನೆಲ್ಲಾ ವ್ಯಾಪಿಸಿ ಭೂಮಿಯ ಜನರಿಗೆ ನನಗೂ ವಿಶೇಷ ಹಿಂಸೆಯಾಗುತ್ತಿದೆ. ಕಾರಣ ನೀನು ಅವನಲ್ಲಿಗೆ ಹೋಗು. ನನಗೆ ವಿಷ್ಣುವಿನ ವರವಿದೆ. ವಿಷ್ಣುವಿನ ತೇಜಸ್ಸಿನ ಬಲ ನಿನ್ನನ್ನು ಪ್ರವೇಶಿಸಿ ಅಸುರನನ್ನು ಸಂಹರಿಸುತ್ತದೆ. ಬೇರೆ ಯಾರಿಗೂ ನೂರಾರು ವರ್ಷ ಕಾದಾಡಿದರೂ ಅವನನ್ನು ಕೊಲ್ಲಲು ಸಾಧ್ಯವಿಲ್ಲ. ಎಂದನು ಉತ್ತಂಕ.

'ಭವತಾ ರಕ್ಷಣಂ ಕಾರ್ಯಂ ತತ್ತಾವತ್ ಕರ್ತುಮರ್ಹಸಿ ।
ನಿರುದ್ವಿಗ್ನಸ್ತ ಪಶ್ಚರ್ತುಂ ನಹಿ ಶಕ್ನೋಮಿ ಪಾರ್ಥಿವ ।
ಮಮಾಶ್ರಮಸಮಿಪೇ ಮೇ ಸಮೇಷು ಮರುಧನ್ವಸು ।
ಸಮುದ್ರೋ ವಾಲುಕಾಪೂರ್ಣ ಉಜ್ಜಾಲಕ ಇತಿ ಸ್ಮೃತಃ ।
ಬಹುಯೋಜನವಿಸ್ತೀರ್ಣೋ ಬಹುಯೋಜನ ಮಾಯತಃ ।
ಮಧುಕೈಟಬಯೋಃ ಪುತ್ರೋ ಧುಂಧುರ್ನಾಮ ಸುದಾರುಣಃ ।
ಅಂತರ್ಭೂಮಿರ್ಗತೋ ರಾಜನ್ ವಸತ್ಯಮಿತ ವಿಕ್ರಮಃ ।
ಶೇತೇ ಲೋಕ ವಿನಾಶಾಯ ಲೋಕಾನಾಂ ಚಾಪಿ ಪಾರ್ಥಿವ ।
ಅವಧ್ಯೋ ದೈವತಾನಾಂ ಹಿ
ಅವಾಪ್ಯ ಸ ವರಂ ರಾಜನ್ ಸರ್ವಲೋಕ ಪಿತಾಮಹಾತ್ ।
ತಂ ವಿನಾಶಯ ಭದ್ರಂ ತೇ
ಸಂವತ್ಸರಸ್ಯ ಪರ್ಯಂತೇ ನಿಃಶ್ವಾಸಃ ಸಂಪ್ರವರ್ತತೇ ।
ಯದಾ ತದಾ ಭೂಶ್ಚಲತಿ ಸಪ್ತಾಹಂ ಭೂಮಿ ಕಂಪನಂ ।
ತೇನ ರಾಜನ್ ನ ಶಕ್ನೋಮಿ ತಸ್ಮಿನ್ ಸ್ಥಾತುಂ ಸ್ವ ಆಶ್ರಮೇ ।
ತಂ ವಿನಾಶಯ ರಾಜೇಂದ್ರ
ನ ಹಿ ಧುಂಧುಃ ಮಹಾತೇಜಾಃ
ನಿರ್ದಗ್ಧುಂ ಪೃಥಿವೀಪಾಲ ಸ ಹಿ ವರ್ಷಶತೈರಪಿ' ॥
(ವನವಪರ್ವ ಅ ೨೦೨- ೧೧ ರಿಂದ ೩೧)

ಇದನ್ನು ಭಕ್ತಿಯಿಂದ ಕೇಳಿದ ಬೃಹದಶ್ವನು ಕೃತಾಂಜಲಿಯಾಗಿ ನಿನ್ನ ಆಗಮನ ವ್ಯರ್ಥವಂತೂ ಆಗದು. ನಾನೀಗಾಲೇ ರಾಜ್ಯ ತ್ಯಾಗ ಶಸ್ತ್ರತ್ಯಾಗ ಮಾಡಿ ಬಿಟ್ಟಿದ್ದೇನೆ. ನಾನು ನಿನ್ನ ಅಭೀಷ್ಟ ಪೂರೈಸಲಾರೆ. ನನ್ನ ಮಗ ಕುವಲಾಶ್ವನು ತನ್ನ ೨೧೦೦೦ ಮಕ್ಕಳೊಂದಿಗೆ ನಿನ್ನ ಇಚ್ಛೆಯನ್ನು ಪೂರೈಸುವನು.ಅವನು ಶೀಘ್ರ ಕಾರ್ಯ ಮಾಡುವವನು, ಧೈರ್ಯಶಾಲಿಯಾಗಿಯೂ ಇದ್ದು ನಿನ್ನ ಇಷ್ಟಾರ್ಥ ಈಡೇರಿಸುವನು. ನನ್ನನ್ನು ದಯವಿಟ್ಟು ನಿರ್ಬಂಧನ ಮಾಡಬೇಡವೆಂಬುದಾಗಿ ಬೃಹದಶ್ವರು ಉತ್ತಂಕರನ್ನು ವಿನಂತಿಸಲು ಉತ್ತಂಕರು ಹಾಗೆಯೇ ಆಗಲಿ ಎಂದರು.

ವಾಸ್ತವವಾಗಿ ಕುವಲಾಶ್ವನು ಬೃಹದಶ್ವನಿಗಿಂತ ಹೆಚ್ಚು ಗುಣವಂತನಾಗಿದ್ದನು. ಸಮರ್ಥನಾಗಿದ್ದನು ಎಂದೇ ಭಾರತ ಹೇಳುತ್ತದೆ. 'ಕುವಲಾಶ್ವಶ್ಚ ಪಿತೃತೋ ಗುಣೈರಭ್ಯಧಿಕೋಽಭವತ್' (೨೦೨-೬) ಆದರೂ ಉತ್ತಂಕರು ತಮ್ಮ ಕಾಲದಲ್ಲಿಯೇ ಇದ್ದ ಬೃಹದಶ್ವ ರಾಜನಿಗೆ ತಮ್ಮ ವರ್ಣಾಶ್ರಮ ಧರ್ಮಕ್ಕನು ಗುಣವಾಗಿ ತಮ್ಮ ಸಂಕಟವನ್ನು ಹೇಳಿಕೊಂಡುದು ಅವರಿಗೆ ವಿಹಿತವಾಗಿತ್ತು ಎಂದು ತೋರುತ್ತದೆ. ಯದ್ಯಪಿ ವಿಷ್ಣುವು ಕುವಲಾಶ್ವ ರಾಜನಿಂದಲೇ ಧುಂಧುವಿನ ಸಂಹಾರವೆಂದು ಹೇಳಿದ್ದರೂ ಉತ್ತಂಕರು ರಾಜ್ಯವನ್ನು ಸಂನ್ಯಾಸ ಮಾಡಿ ವನಕ್ಕೆ ಹೋಗುತ್ತಿದ್ದ ಬೃಹದಶ್ವನಿಗೆ ಏಕೆ ಅವಸರ ಪಟ್ಟು ನಿವೇದಿಸಿದರು ಎಂಬ ಸಮಸ್ಯೆಗೆ ಉತ್ತರ ಕಷ್ಟ

ಸಾಧ್ಯವಾಗಿದೆ. ಏಕೆಂದರೆ ಉತ್ತಂಕರಿಗೆ ಸಮಸ್ಯೆಯ ಬರುವುದಕ್ಕೂ ಕುವಲಾಶ್ವ ರಾಜ್ಯನಾಗುವುದಕ್ಕೂ ವಿಲಂಬವೇ ಇಲ್ಲ. ಪ್ರಯಃ ತಮ್ಮ ಸಂಕಟ ಪರಿಹಾರ ಆದಷ್ಟು ಬೇಗನೇ ಆಗಲೆಂದೋ, ಸಂಕಟ ತಡೆಯಲಾರದೆಯೇ ಬೃಹದ್ವಶನನ್ನು ಕೋರಿದರು ಎಂದೋ ಹೇಳಲೇಬೇಕಾಗಬಹುದು. ಈ ಬಗ್ಗೆ ಓದುಗರ ಪ್ರತಿಕ್ರಿಯೆಗಳನ್ನು ಸ್ವಾಗತಿಸುತ್ತೇನೆ (ಹೆಚ್ಚಿನ ಸಮಾಧಾನಗಳಿದ್ದಲ್ಲಿ) ಇದನ್ನು ಕೇಳಿದ ಧರ್ಮರಾಜನು ಧುಂಧು ದೈತ್ಯನು ಯಾರು? ಯಾರ ಮಗ? ಎಂಬ ಪ್ರಶ್ನೆಯನ್ನು ಕೇಳಿದಾಗ ಮಾರ್ಕಾಂಡೇಯರು ಉತ್ತರಿಸಿದರು.

ಲೋಕಗಳೆಲ್ಲಾ ಪ್ರಲಯದಿಂದಾಗಿ ನಾಶವಾದಾಗ ಲೋಕಕರ್ತೃವಾದ ನಾರಾಯಣನೊಬ್ಬನೇ ನಾಗಭೋಗದಲ್ಲಿ ಪ್ರಳಯೋದಕದಲ್ಲಿ ಯೋಗನಿದ್ರೆಯಲ್ಲಿದ್ದನು! ಆಗ ಆತನ ನಾಭಿಯಿಂದ ಸೂರ್ಯ ಕಾಂತಿಯ ಕಾಂತಿಯುಳ್ಳ ಕಮಲವು ಹುಟ್ಟಿತು. ಅಲ್ಲಿ ಲೋಕ ಗುರುವಾದ ಬ್ರಹ್ಮನು ಪ್ರಾದುರ್ಭವಿಸಿದನು. ನಾರಾಯಣನ **ಕಿವಿಯ ಮಲ(Wax)ದಿಂದ** ಮಹಾಪರಾಕ್ರಮಶಾಲಿಗಳಾದ ಇಬ್ಬರು ದಾನವರು ಹುಟ್ಟಿದರು. ಅವರೇ **ಮಧುಕೈಟಭರು**. ಅವರು ನಾಗಶಾಯಿಯಾದ ನಾರಾಯಣನನ್ನು ನೋಡಿ ವಿಸ್ಮಯಗೊಂಡರು. ಕಮಲದಲ್ಲಿದ್ದ ಬ್ರಹ್ಮನನ್ನು ನೋಡಿದರು. ಹಾಗೆಯೇ ನೋಡುತ್ತಾ ಬ್ರಹ್ಮನಿಗೆ ಉಪದ್ರವ ಕೊಡಲು ಆರಂಭಿಸಿದರು. ಅವರಿಂದ ತೊಂದರೆಗೆ ಈಡಾದ ಬ್ರಹ್ಮನು ಕಂಪಿಸಿದ. ಪದ್ಮವೂ ನಡುಗಿತು. ನಾರಾಯಣನೂ ಯೋಗನಿದ್ರೆಯಿಂದ ಎಚ್ಚೆತ್ತು ದಾನವರನ್ನು ನೋಡಿ 'ನಿಮಗೆ ಸ್ವಾಗತ, ನಿಮ್ಮನ್ನು ನೋಡಿ ಸಂತೋಷವಾಗಿದೆ. ನಿಮಗೆ ವರ ನೀಡುವೆ. ಬೇಡಿರೆಂದ' ನಾರಾಯಣ ಅವರು ಮಹಾದರ್ಪದಿಂದ ಅಟ್ಟಹಾಸದಿಂದ ನಕ್ಕು 'ನಾವಿಬ್ಬರೇ ನಿನಗೆ ವರಕೊಡುವೆವು ನೀನೇ ವರವನ್ನು ವಿಚಾರ ಮಾಡದೇ ಬೇಡು' ಎಂದರು.

ಆಗ ನಾರಾಯಣನು ನನಗೂ ವರಬೇಕಾಗಿದೆ. ನೀವು ಮಹಾವೀರರು ನಿಮಗೆ ಸಮಾನರಾರೂ ಇಲ್ಲ. ಲೋಕ ಹಿತಕ್ಕಾಗಿ ವರಬೇಡುವೆ ನೀವಿಬ್ಬರೂ ನನ್ನಿಂದ ಹತರಾಗಬೇಕು' ಎಂದ ಅದಕ್ಕೆ ಮಧುಕೈಟಭರು ನಾವೆಂದು ಸುಳ್ಳನ್ನು ಹೇಳಿಲ್ಲ. ಸತ್ಯಧರ್ಮರತರು ನಾವು. ಬಲ, ರೂಪ, ಶೌರ್ಯ, ಶಮ, ಧರ್ಮ, ತಪಸ್ಸು, ದಾನ, ಶೀಲ, ಇಂದ್ರಿಯ ನಿಗ್ರಹವೇ ಮೊದಲಾದ ಯಾವುದೇ ಗುಣಗಳಲ್ಲಿ ನಮ್ಮನ್ನು ಮೀರಿಸುವವರು ಯಾರೂ ಇಲ್ಲ. ಆದ ಕಾರಣ ನೀನು ಹೇಳಿದ್ದನ್ನು ಮಾಡು. ಕಾಲವನ್ನು ಯಾರೂ ಮೀರಲಾರರಷ್ಟೇ! ಆದರೆ ನಮ್ಮನ್ನು ಶರತ್ತಿಗೆ ಒಳಪಟ್ಟು ನೀನು ಕೊಲ್ಲಬೇಕು! 'ನಮ್ಮನ್ನು ಆಕಾಶವಿರದ ಸ್ಥಳದಲ್ಲಿ ಕೊಲ್ಲು ಮುಂದೆ ನಾವು ನಿನ್ನ ಮಕ್ಕಳಾಗಬೇಕು' ನಿನ್ನ ವರ ಸುಳ್ಳಾಗದಿರಲಿ ನಮ್ಮ ಆಶಯವನ್ನು ಪೂರೈಸು, ಎಂದರು.

ಹಾಗೆಯೇ ಆಗಲಿ ಎಂದ ವಿಷ್ಣುವು ಆಕಾಶವಿರದ ಸ್ಥಾನ ಕಾಣದಾದ. ಕೊನೆಗೆ ತನ್ನ ತೊಡೆಗಳನ್ನು ನೋಡಿ ಅವುಗಳ ಮಧ್ಯದಲ್ಲಿ ಅವರನ್ನು ಇರಿಸಿ ಚಿತ್ತದಿಂದ ಅವರ ಶಿರಶ್ಛೇದನ ಮಾಡಿ ಮಧುಕೈಟಭರನ್ನು ಸಂಹರಿಸಿದನು.

ಮಾರ್ಕಂಡೇಯರು ಮುಂದುವರಿಯುತ್ತಾ ಮಧುಕೈಟಭರ ಪುತ್ರನಾದ ಧುಂಧು ಮಾಡಿದ ಮಹಾತಪಸ್ಸಿನ ಬಗ್ಗೆ ವಿವರಿಸಿದರು. ಮಧುಕೈಟಭರ ಪುತ್ರ ಧುಂಧುವಿನ ತಾಯಿ ಯಾರು ಎಂದು ಭಾರತದಲ್ಲಿ ತಿಳಿಸಿಲ್ಲ ಅದಕ್ಕೆ ಬೇರೆ ಮೂಲಗಳನ್ನು ಹುಡುಕಬೇಕು.

ಈ ಧುಂಧು ಒಂದೇ ಪಾದದ ಮೇಲೆ ನಿಂತು ಬ್ರಹ್ಮದೇವರನ್ನು ಕುರಿತು ತಪಸ್ಸನ್ನು ಮಾಡಿ ಅವರನ್ನು ಒಲಿಸಿದನು. ಅವನು ಬೇಡಿದಂತೆ ಬ್ರಹ್ಮನು ಧುಂಧುವಿಗೆ ದೇವದಾನವ ಯಕ್ಷರಾಕ್ಷಸಾದಿಗಳಿಂದ ಅವಧ್ಯತ್ವವನ್ನು ಅನುಗ್ರಹಿಸಿದನು. ನಂತರ ಧುಂಧು ಬ್ರಹ್ಮದೇವರನ್ನು ಶಿರಸಾ ವಂದಿಸಿ ತನ್ನ ತಂದೆಯರನ್ನು ಕೊಂದ ವಿಷ್ಣುವನ್ನು ಸ್ಮರಿಸಿ ಅವನ ಬಳಿಗೆ ಬಂದನು. ಧುಂಧು ಇಂದ್ರಾದಿ ದೇವತೆಗಳನ್ನು ಗೆದ್ದುದಲ್ಲದೆ ವಿಷ್ಣುವನ್ನು ಗೆದ್ದನೆಂದು ಭಾರತ ತಿಳಿಸುತ್ತದೆ. ಯದ್ಯಪಿ ಬ್ರಹ್ಮವರ ಮಾತ್ರವಿದ್ದರೂ ವಿಷ್ಣುವು ತಾನು ಸೋತಂತೆ ನಟಿಸುತ್ತಾನೆ. ಏಕೆಂದರೆ ಇವನನ್ನು ಕೊಲ್ಲಲು ವಿಷ್ಣುವೇ ಕುವಲಾಶ್ವನನ್ನು ನಿಯೋಜಿಸಿರುವುದರಿಂದ ತಾನು ನೇರವಾಗಿ ಕೊಲ್ಲಲಿಲ್ಲ. ಆದ್ದರಿಂದ ಅವನು ವಿಷ್ಣುವನ್ನು ಹಾಗೂ ಎಲ್ಲ ದೇವತೆಗಳನ್ನು ಅನೇಕ ಬಾರಿ ಬಾಧಿಸಿದನೆಂದು ಮಹಾಭಾರತ ತಿಳಿಸುತ್ತದೆ.

**'ಧುಂಧುರ್ನಾಮ ಮಹಾರಾಜ ತಯೋಃ ಪುತ್ರಃ ಮಹಾದ್ಯುತಿಃ ।**
**ಸತಪೋऽತಪ್ಯತ ಮಹನ್ಮಮಹಾವೀರ್ಯಪರಾಕ್ರಮಃ ।**
**ಅತಿಷ್ಠದೇಕ ಪಾದೇನ ಕೃಶೋ ಧಮನಿ ಸಂತತಃ ।**
**ತಸ್ಮೈ ಬ್ರಹ್ಮ ದದೌ ಪ್ರೀತೋ ವರಂ ವವ್ರೇ ಸ ಚ ಪ್ರಭುಂ ।**
**ದೇವದಾನವ ಯಕ್ಷಾಣಾಂ ಅವಧ್ಯೋऽಹಂ ಭವೇಯಂ ।**
**ಏವಂ ಭವತು ಗಚ್ಛೇತಿ ತಮುವಾಚ ಪಿತಾಮಹಃ ।**
**ಸತುದೇವಾನ್ ಸಗಂಧರ್ವಾನ್ ಜಿತ್ವಾ ಧುಂಧುರಮರ್ಷಣಃ ।**
**ಬಬಾಧ ಸರ್ವಾನಸಕೃದ್ ವಿಷ್ಣುಂ ದೇವಾಶ್ಚ ವೈ ಭೃಶಮ್' ॥**

**ವನಪರ್ವ ೨೦೪ ೧ ರಿಂದ ೬**

ನಂತರ ಧುಂಧು ಉಜ್ಜಾಲಕವೆಂಬ ಸಮುದ್ರದಂತಿದ್ದ ಮರಳಿನಿಂದ ತುಂಬಿದ ಪ್ರದೇಶಕ್ಕೆ ಬಂದು ಅಲ್ಲಿಯೇ ಇದ್ದ ಉತ್ತಂಕರನ್ನು ಬಾಧಿಸತೊಡಗಿದನು. ನಂತರ ಆ ಮರಳುಗಾಡಿನ ಒಳಗೆ ಇದ್ದು ಲೋಕ ನಾಶಕ್ಕಾಗಿ ತಪಸ್ಸನ್ನು ಮಾಡುತ್ತಾ ವಾಸ ಮಾಡಿದನು ಹಾಗೂ ಮಲಗಿದನು. ಅವನು ಉಸಿರು ಬಿಡುತ್ತಿದ್ದಾಗ ಅಗ್ನಿಯ ಕಿಡಿಗಳೇ ಹೊರಬಂದು ಇಡೀ ಪ್ರದೇಶ ಭಯನಕವಾಗಿರುತ್ತಿತ್ತು. ಇದರಿಂದ ಅಲ್ಲಿಯೇ ಆಶ್ರಮ ಮಾಡಿ ಕೊಂಡಿದ್ದ ಉತ್ತಂಕರಿಗೆ ತಡೆಯಲಾಗದೆ ಬೃಹದಶ್ವರಾಜನಲ್ಲಿಗೆ ಹೋದರು (ಇದು ಹಿಂದೆ ಹೇಳಲಾಗಿದೆ. ಬೃಹದಶ್ವನು ಕುವಲಾಶ್ವನಿಗೆ ರಾಜ್ಯ ಒಪ್ಪಿಸಿ ತಪಸ್ಸಿಗಾಗಿ ವನಕ್ಕೆ ಹೋದನಷ್ಟೆ)

ಉತ್ತಂಕರ ಅಪೇಕ್ಷೆಯ ಮೇರೆಗೆ ಕುವಲಾಶ್ವ ತನ್ನ ೨೧೦೦೦ ಮಕ್ಕಳೊಂದಿಗೆ

ಸೈನ್ಯದೊಂದಿಗೆ ಉಜ್ಜಾಲಕ ಮರುಭೂಮಿಗೆ ಬಂದನು. ನಂತರ ವಿಷ್ಣುವು ಈ ಹಿಂದೆ ತಿಳಿಸಿದಂತೆ ಕುವಲಾಶ್ವನನ್ನು ತನ್ನ ತೇಜಸ್ಸಿನೊಡನೆ ಲೋಕ ಹಿತಕ್ಕಾಗಿ ಪ್ರವೇಶಿಸಿದನು. **ಆಗ ಆಕಾಶದಿಂದ ಧ್ವನಿಯೊಂದು ಬಂದಿತು. "ಶ್ರೀಮಂತನಾದ ಅವಧ್ಯನಾದ ಈ ರಾಜನು (ಕುವಲಾಶ್ವನು) ಧುಂಧುಮಾರನೆನಿಸುವನು** ದೇವಧುಂಧುಭಿಗಳು ಮೊಳಗಿದವು ದೇವತೆಗಳು ಪುಷ್ಪವೃಷ್ಟಿಯನ್ನು ರಾಜನ ಮೇಲೆ ಮಾಡಿದರು. ಮಂಗಲ ಮಯವಾದ ಶುಭ ಶಕುನಗಳು ಕಂಡವು. ದೇವತೆಗಳು ವಿಮಾನ ವೇರಿ ಆಂತರಿಕ್ಷದಲ್ಲಿ ಕುವಲಾಶ್ವನು ಧುಂಧುವನ್ನು ಸಂಹಾರ ಮಾಡುವುದನ್ನು ನೋಡಲು ನಿಂತರು.

**ಉತ್ತಂಕವಿಪ್ರ ಸಹಿತಃಕುವಲಾಶ್ವೋ ಮಹೀಪತಿಃ ।**
**ಪುತ್ರೈಃ ಸಹ ಮಹೀಪಾಲ ಪ್ರಯಮೌ ಭರತಷರಭ**
**ಸಹಸ್ರೈ ರೇಕವಿಂಶತ್ಯಾ ಪುತ್ರಾಣಾಮರಿಮರ್ದನ ।**
**ತಮಾವವಿತ್ ತತೋ ವಿಷ್ಣುಃ ಭಗವಾನ್ ತೇಜಸಾ ಪ್ರಭುಃ ।**
**.........................................ದಿವಿ ಶಬ್ದೋ ಮಹಾನ ಭೂತ್**
**ಏಷ ಶ್ರೀಮಾನವಧ್ಯೋಽದ್ಯ ಧುಂಧುಮಾರೋ ಭವಿಷ್ಯತಿ'**

**ಅ-೨೦೪-೧೧ರಿಂದ ೧೪**

ನಂತರ ತನ್ನ ಮಕ್ಕಳಿಂದ ಆ ಮರಳುಗಾಡನ್ನು ೭ ದಿನಗಳ ಕಾಲ ಅಗಿಸಲಾಗಿ ಆ ಮರಳು ಸಮುದ್ರದಲ್ಲಿ ಸೂರ್ಯನಂತೆ ಪ್ರಕಾಶಮಾನವಾಗಿ ಇರುವ ದುಂಧುಮಾರನು ಕಂಡನು. ಅವನನ್ನು ರಾಜಕುಮಾರರು ತಮ್ಮಲ್ಲಿದ್ದ ಆಯುಧಗಳಿಂದ, ಪರಿಘ, ಖಡ್ಗ, ಈಟಿ, ಭರ್ಚಿಗಳಿಂದ ತಿವಿದಾಗ ಕುಂಭಕರ್ಣನಂತೆ ಮಲಗಿದ ಧುಂಧು ಎದ್ದನು. ರಾಜಕುಮಾರರು ಬಗೆದ ಎಲ್ಲ ಆಯುಧಗಳನ್ನು ಧುಂಧು ನುಂಗಿದನಲ್ಲದೆ ಅವನ ಮುಖದಿಂದ ಬಂದ ಯುಗಾಂತ ಕಾಲಾಗ್ನಿಯಂತಿದ್ದ ಅಗ್ನಿಯು ಹೊರಹೊಮ್ಮಿ ಎಲ್ಲ ರಾಜಕುಮಾರರನ್ನೂ ಕಪಿಲ ರೂಪಿ ಭಗವಂತನು ಸಗರನ ೬೦೦೦೦ ಜನ ಮಕ್ಕಳನ್ನು ಸುಟ್ಟಂತೆ ಭಸ್ಮ ಮಾಡಿತು. ಕೂಡಲೆ ರಾಜನು ತನ್ನ ದೇಹದಿಂದ ನೀರನ್ನು ಪ್ರವಾಹೋ ಪಾದಿ ಹರಿಸಿ ಆ ಬೆಂಕಿಯನ್ನು ತನ್ನಲ್ಲಿದ್ದ ವೈಷ್ಣವ ಯೋಗ ಸಾಮರ್ಥ್ಯದಿಂದ ಆರಿಸಿದನು. ನಂತರ ರಾಜನು ಸರ್ವಲೋಕ ಹಿತಕ್ಕಾಗಿ ಬ್ರಹ್ಮಾಸ್ತ್ರವನ್ನು ಧುಂಧುವಿನ ಮೇಲೆ ಬಿಡಲು ಅವನು ಸುಟ್ಟು ಹೋದನು. ಹೀಗೆ ಧುಂಧುವನ್ನು ವಧಿಸಿದರಿಂದ ಧುಂಧುಮಾರನೆಂದು ಕುವಲಾಶ್ವನಿಗೆ ಹೆಸರು ಬಂದಿತು.

**ಅರ್ಣವಂ ಖಾನಯಾಮಾಸ ಕುವಲಾಶ್ವೋ ಮಹೀಪತಿ ಃ ।**
**ಕುವಲಾಶ್ವಸ್ಯ ಪುತ್ರೈಶ್ಚ ತಸ್ಮಿನ್ ವೈ ವಾಲುಕಾರ್ಣವೇ ।**
**ಸಪ್ತಭಿಃ ದಿವಸೈಃ ಖಾತ್ವಾ ದೃಷ್ಟೋ ಧುಂಧುರ್ಮಹಾಬಲಃ**
**ಆಸ್ಯಾತ್‌ವಮನ್ ಪಾವಕಂ ಸ ಸಂವರ್ತಕ ಸಮಂ ತದಾ ।**
**ತಾನ್ ಸರ್ವಾನ್ ನೃಪತೇಃ ಪುತ್ರಾನದಹತ್ ಸ್ವೇನತೇಜಸಾ ।**
**...........................................................ಕುವಲಾಶ್ವೋಮಹೀಪತಿಃ**

ತಸ್ಯ ವಾರಿ ಮಹಾರಾಜ ಸುಸ್ರಾವ ಬಹು ದೇಹತಃ ।
ತದಾಪೀಯ ತತಸ್ತೇಜೋ ರಾಜಾ ವಾರಿಮಯಂ ನೃಪ ।
ಯೋಗೀ ಯೋಗೇನ ವಹ್ನಿಂ ಚ ಶಮಯಾಮಾಸ ವಾರಿಣಾ ।
.......................................ಬ್ರಹ್ಮಾಸ್ತ್ರೇಣ ಚ ರಾಜೇಂದ್ರ ದೈತ್ಯಂ ।
ದದಾಹ ಭರತಶ್ರೇಷ್ಠ ಸರ್ವಲೋಕ ಭವಾಯ ವೈ ।
ಧುಂಧೋರ್ವಧಾತ್ ತದಾ ರಾಜಾ ಕುವಲಾಶ್ವೋ ಮಹಾಮನಾಃ ।
ಧುಂಧುಮಾರ ಇತಿ ಖ್ಯಾತೋ ನಾಮ್ನಾ ಪ್ರತಿ ರಥೋಽಭವತ್' ।

– ೨೦೪/೨೦-೩೪

ಧುಂಧುವನ್ನು ಸಂಹಾರ ಮಾಡಿದ ರಾಜನ ಬಗ್ಗೆ ದೇವತೆಗಳು ಪ್ರೀತರಾಗಿ ವರ ಬೇಡೆಂದರು. ರಾಜನು ಪ್ರಾಂಜಲನಾಗಿ

1. ಬ್ರಾಹ್ಮಣರಿಗೆ ಪುಷ್ಕಲ ದಾನ ಮಾಡಬೇಕೆಂಬ ನನ್ನಾಸೆ ನಿಮ್ಮ ವರದಿಂದ ಪೂರ್ಣವಾಗಲಿ
2. ಶತೃಗಳಿಗೆ ನಾನು ಸೋಲಬಾರದು
3. ವಿಷ್ಣುವಿನೊಡನೆ ನನಗೆ ಸಖ್ಯವಿರಲಿ(ನವವಿಧಭಕ್ತಿಗಳಲ್ಲಿ ಒಂದು. ಸಖ್ಯಮಾತ್ಮನಿವೇದನಮ್)
4. ಪ್ರಾಣಿದ್ರೋಹ ನನ್ನಿಂದಾಗಬಾರದು
5. ಧರ್ಮದಲ್ಲಿ ನನಗೆ ಸದಾ ರತಿ–ಪ್ರೀತಿ (ಧರ್ಮನಿಷ್ಠನಾಗಬೇಕು) ಇರಲಿ.
6. ನನ್ನ ಮರಣಾನಂತರ ಚಿರಂತನ ಕಾಲದವರೆಗೆ ಸ್ವರ್ಗವಾಸ ಸಿಗಲಿ

ಎಂಬ ಆರು ವರಗಳನ್ನು ಬೇಡಿದನು. ಪ್ರೀತರಾದ ದೇವತೆಗಳು 'ತಥಾಸ್ತು' ಎಂದರು ನೆರೆದ ಋಷಿಗಳು, ಉತ್ತಂಕರೂ ಅದಕ್ಕೆ ಓಂ ಎಂದರು. ನಂತರ ರಾಜನು ಅವರಿಂದ ಅನೇಕ ನೀತಿ ಬೋಧಕ ಉಪದೇಶಗಳನ್ನು ಪಡೆದು ರಾಜಧಾನಿಗೆ ತೆರಳಿದನು.

'ಪ್ರೀತೈಶ್ಚ ತ್ರಿದಶೈಃ ಸರ್ವೈಃ ।
ವರಂ ವೃಣೀಷ್ವೇತ್ಯುಕ್ತಃ ಸ ಪ್ರಾಂಜಲಿಃ ಪ್ರಣತಸ್ತದಾ ।
.......................................ಇದಂ ವಚನಮಬ್ರವೀತ್ ।
ದದ್ಯಾಂವಿತ್ತಂ ದ್ವಿಜಾಗ್ರ್ಯೇಭ್ಯಃ ಶತ್ರೂಣಾಂ ಚಾಪಿ ದುರ್ಜಯಃ ।
ಸಖ್ಯಂ ಚ ವಿಷ್ಣು ನಾ ಮೇ ಸ್ಯಾತ್ ಭೂತೇಷ್ವದ್ರೋಹ ಏವ ಚ ।
ಧರ್ಮೇ ರತಿಶ್ಚ ಸತತಂ ಸ್ವರ್ಗೇ ವಾಸಸ್ತಥಾಕ್ಷ ಯಃ ।
ತಥಾಸ್ತು ಇತಿ ತತೋ ದೇವೈಃ ಪ್ರೀತೈರುಕ್ತಃ ಸ ಪಾರ್ಥಿವ' ।

ಅ ೨೦೪–೩೪ ರಿಂದ ೩೭

ರಾಜನ ೨೧೦೦೦ ಮಕ್ಕಳಲ್ಲಿ ದೃಢಾಶ್ವ, ಕಪಿಲಾಶ್ವ, ಚಂದ್ರಾಶ್ವರೆಂಬ ಮೂವರು ಮಾತ್ರ ಉಳಿದಿದ್ದರು. (ಧುಂಧುವಿನೊಡನೆ ಯುದ್ಧದ ಬಳಿಕ) ಮುಂದೆ ಈ ಮಕ್ಕಳಿಂದಲೇ ಅವನ ವಂಶ ಮುಂದುವರಿಯಿತು.

ಹೀಗೆ ಕುವಲಾಶ್ವನ ಚರಿತ್ರೆಯನ್ನು ಹೇಳಿದ ಮಾರ್ಕಾಂಡೇಯರು ಈ ಉಪಾಖ್ಯಾನವು ವಿಷ್ಣು ಕೀರ್ತನ ಪರನೆಂದು ಹೇಳುತ್ತಾರೆ. ವಿಷ್ಣು ತೇಜಸ್ಸಿನಿಂದಷ್ಟೇ ಧುಂಧು ಹತನಾದುದು. ಆದ್ದರಿಂದ ಕುವಲಾಶ್ವ ನಿಮಿತ್ತ ಮಾತ್ರ. ಈ ಉಪಾಖ್ಯಾನ ಶ್ರವಣದಿಂದ ಸಾಧಕನು ಧರ್ಮಾತ್ಮನಾಗಿ, ಸತ್ಸಂತಾನ, ಆಯುಷ್ಯ, ಆರೋಗ್ಯ, ಐಶ್ವರ್ಯಗಳನ್ನು ಹೊಂದುತ್ತಾನೆಂದು ಮಾರ್ಕಂಡೇಯರು ಉಪರಮಿಸುತ್ತಾರೆ.

**'ಇದಂತು ಪುಣ್ಯಮಾಖ್ಯಾನಂ ವಿಷ್ಣೋಃ ಸಮನುಕೀರ್ತನಂ ।**
**ಶೃಣುಯಾದ್ಯ ಸಧರ್ಮಾತ್ಮಾ ಪುತ್ರವಾಂಶ್ಚ ಭವೇನ್ನರಃ ।**
**ಆಯುಷ್ಮಾನ್ ಭೂತಿಮಾಂಶ್ಚೈವ ಶೃತ್ವಾ ಭವತಿ ಪರ್ವಸು ।**
**ನ ಚ ವ್ಯಾಧಿಭಯಂ ಕಿಂಚಿತ್ ಪ್ರಾಪ್ನೋತಿ ವಿಗತಜ್ವರಃ' ।**

## ಸಂದೇಶಗಳು–ವಿವರಣೆಗಳು

೧) ಬ್ರಾಹ್ಮಣನಾದ ಉದಂಕ, ಕ್ಷತ್ರಿಯನಾದ ಕುವಲಾಶ್ವ, ಇಂದ್ರಾದಿಗಳಿಂದ ಬ್ರಹ್ಮದೇವರವರೆಗಿನ ಎಲ್ಲ ದೇವತೆಗಳು, ಸರ್ವೋತ್ತಮನಾದ ವಿಷ್ಣು, (ಉತುಟ ಇಟಿರುಟಿಜಜಡುಟಿರ) ಇವರನ್ನು ಪ್ರತಿನಿಧಿಸುವ ಸಾತ್ವಿಕ ಶಕ್ತಿಗಳು ಹಾಗೂ ಮಧು ಕೈಟಭ, ಧುಂಧುಗಳೆಂಬ ತಾಮಸ ಶಕ್ತಿಗಳ ಮಧ್ಯೆ ನಡೆದ ಇತಿಹಾಸವೇ ಈ ಧುಂಧುಮಾರ ಉಪಾಖ್ಯಾನ

೨) ವಿಷ್ಣು ಸರ್ವೋತ್ತಮತ್ವವನ್ನು ಅತ್ಯಂತ ಸ್ಪಷ್ಟವಾಗಿ, ಸಮಾಧಿ ಭಾಷೆಯಲ್ಲಿ ತಿಳಿಸುವ ಶ್ರೇಷ್ಠ ಕಥೆ, ಚರಿತಂ ವೈಷ್ಣವಾನಾಂ ತು ವಿಷ್ಣೋದ್ರೇಕಾಯ ಕಥ್ಯತೆ' ಎಂಬ ತಾತ್ಪರ್ಯ ನಿರ್ಣಯದ ಮಾತನ್ನು ವಿವರಿಸುವ ಕಥೆ ಇದು (೨/೧೨೯).

೩) ಉತ್ತಂಕ ಋಷಿಗಳ ಗುರುಭಕ್ತಿ, ವಿಷ್ಣುಭಕ್ತಿ, ತಪಸ್ಸಿನ ಉದ್ದೇಶಗಳನ್ನು ತಿಳಿಸುವ ಕಥೆ ಇದು ತಪಸ್ಸು ವಿಷ್ಣುದರ್ಶನದಲ್ಲಿ ಮಾತ್ರ ಪರ್ಯವಸಾನವಾಗಲೆಂಬ ಅವರ ಶ್ರದ್ಧೆ ಎಲ್ಲರಿಗೂ ಆದರ್ಶ ಪ್ರಾಯವಾದುದು. ಭಗವಂತನಿಂದಲೇ 'ಸೈ' ಎನಿಸಿಕೊಂಡ ಅಮರ ಋಷಿ ಉತ್ತಂಕ

೪) ತನ್ನ ಸಂಕಟಗಳನ್ನು ರಾಜನಿಗೆ ಹೇಳಿ ಆತನಿಂದ ಬ್ರಾಹ್ಮಣರ ಸಂಕಟಗಳನ್ನು ಪರಿಹರಿಸಿಕೊಂಡ ವರ್ಣಾಶ್ರಯ ಧರ್ಮ ನಿರೂಪಕ ಕಥೆ ಇದು.

೫) ಕುವಲಾಶ್ವನೂ ಅಷ್ಟೇ ಪ್ರಾಮಾಣಿಕವಾಗಿ ತಂದೆ ಹಾಗೂ ಗುರುಗಳಾದ ಉತ್ತಂಕರ ಆದೇಶವನ್ನು ಪರಿಪಾಲಿಸಿ ದೈತ್ಯನಾದ ಧುಂಧುವನ್ನು ಸಂಹರಿಸಿ ದೇವಕಾರ್ಯ ಮಾಡಿದ ಧೀಮಂತ ಭಕ್ತ.

೬) ತಾನೇ ಧುಂಧುವನ್ನು ಕೊಲ್ಲಲು ಸಾಧ್ಯವಿದ್ದರೂ ಭಕ್ತರಿಂದ ಆ ಕೆಲಸ ಮಾಡಿ ಅವರಿಗೆ ಕೀರ್ತಿ ಕೊಡುವ ವಿಷ್ಣುವಿನ ಪಾತ್ರ 'ಈ ಪರಿಯ ಸೊಬಗು ಇನ್ನಾವ ದೇವರಲಿ ನಾ ಕಾಣೆ' ಎಂಬ ದಾಸರ ನುಡಿಗೆ ಸಾಕ್ಷಿ. ದೇವರ ದೇವ ನಾರಾಯಣನ ಮಹಿಮೆ ಎಲ್ಲ ರೀತಿಯಿಂದಲೂ ಪೂರ್ಣ ಅನುಕರಣೀಯ.

೭) ಭಗವಂತನ ಕಿವಿಯಿಂದ ಹುಟ್ಟಿದ ಮಧು ಕೈಟಭರು ತಮ್ಮ ಜೀವನ ಸಾರ್ಥಕ ಮಾಡಿಕೊಳ್ಳದೆ ದರ್ಪದಿಂದ ದೇವರಿಗೇ ವರ ಕೊಡಲು ಹೋಗಿ ಹತರಾಗುತ್ತಾರೆ. ದುಷ್ಟರು ಎಲ್ಲಿ ಹುಟ್ಟಿದರೂ ಅಷ್ಟೇ, ಸ್ವಭಾವ ಬದಲಾಗದು. 'ಶ್ರೋತ್ರಂ ಬ್ರಹ್ಮೇತಿ ಉಪಾಸೀತ' ಎಂದು ಅವರು ಉಪಾಸನೆ ಮಾಡಿದ್ದರೆ ಮೋಕ್ಷ ಹೊಂದುತ್ತಿದ್ದರು. ಆದರೆ ಹಾಗೆ ಮಾಡದೆ ಭಗವಂತನಿಂದಲೇ ಹತರಾದರು. ಅವರ ಮಗನೂ ಹಾಗೇ ಉನ್ಮತ್ತನಾಗಿ ವಿಷ್ಣುಭಕ್ತನಾದ ಕುವಲಾಶ್ವನಿಂದ ಹತನಾಗುತ್ತಾನೆ ಧುಂಧು ದೈತ್ಯರ ವಂಶದವರೇ ಹೀಗೆ ಎಂದು ಇದರಿಂದ ಸಿದ್ಧವಾಗುತ್ತದೆ.

೮) ಮರುಭೂಮಿಯೊಳಗೆ ಗುಹೆಯಲ್ಲಿ ವಾಸ ಮಾಡಿದ ಧುಂಧು ಈಗಿನ ಊತುಟ ಇಟಿರುಟಿಜಜಡುಟಿರ (ಭೂತಳದ ಕಟ್ಟಡಗಳ ರಚನೆಯನ್ನು) ನೆನಪಿಸುತ್ತವೆ. ಅಂದರೆ ಹಿಂದೆ ಕೂಡಾ ಎಷ್ಟು ಮುನ್ನಡೆದಿತ್ತು ಎಂಬುದನ್ನು ಇದು ತಿಳಿಸುತ್ತದೆ. ಅದು ದೇವತೆಗಳದ್ದೇ ಆಗಲೀ ದೈತ್ಯ ಮೂಲವೇ ಆಗಿರಲಿ (ಪ್ರಾಚೀನ ಇಂಜಿನಿಯರಿಂಗ್ ವಿದ್ಯೆಯು ತಾಂತ್ರಿಕವಾಗಿ ಎಷ್ಟು ಮುಂದುವರಿದಿತ್ತೆಂದು ತಿಳಿಯುತ್ತದೆ.

೯) ಭಗವಂತನು ವರಬೇಡವೆಂದವರಿಗೆ ವರ ಕೊಡುವುದಿಲ್ಲ. ತಾನೇ ವರ ಕೇಳಿದಂತೆ ಅವರ ಮಾತನ್ನು ಒಪ್ಪಿದಂತೆ ಮಾಡಿ ಅವರ ಸಂಹಾರ ಮಾಡುತ್ತಾನೆ. ವಿಷ್ಣುವು ಅಜ್ಞನಂತೆ ನಟಿಸಿ ತನ್ನ ಕಿವಿಯಿಂದ ಹುಟ್ಟಿದ ತನ್ನ ಮಕ್ಕಳನ್ನು ತಾನೇ ಕೊಲ್ಲುತ್ತಾನೆ. ಅವನಿಗೆ ಯಾವುದೇ ಅಭಿಮಾನದ ಗೀಳಿಲ್ಲ. ಪಕ್ಷ ಪಾತವಿಲ್ಲ ಅವನು ಎಲ್ಲರಿಗೂ ಸಮ. ಭಕ್ತಿ ಮಾಡಿದ ಬ್ರಹ್ಮಗೆ ತತ್ತ್ವೋಪದೇಶ ಮಾಡಿದ. ಅನ್ಯಾಯವಾಗಿ ಮೇಲೇರಿ ಬಂದವರನ್ನು ಕೆಳಗೆ ತುಳಿದ. 'ಯೇ ಯಥಾಮಾಂ ಪ್ರಪದ್ಯಂತೇ ತಾನ್ ತಥೈವ ಭಜಾಮ್ಯಹಂ' (ಗೀತೆ-೪/೧೧)

೧೦) ಧುಂಧು ಬ್ರಹ್ಮವರದಿಂದ ದೃಪ್ತನಾಗಿ ಸರ್ವೋತ್ತಮನಾದ ವಿಷ್ಣುವನ್ನು ಬಾಧಿಸಿದ ಎಂದಿದೆ ಭಾರತ, ವಿಷ್ಣು ಬಾಧಿತವಾದುದೂ ನಾಟಕವೇ. ಅವನು ಬಾಧ್ಯನೂ ಭಾಧಕನೂ ಆಗಿ ತೋರುತ್ತಾನೆ. ವಸ್ತುತಸ್ತು ಅವನು ಸಮ. ಭಾದ್ಯ ಬಾಧಕರಲ್ಲಿದ್ದುಕೊಂಡು ಬಾದ್ಯ ಬಾಧಕನಾಗುತ್ತಾನೆ. ಹೊರತು ಬಾಧೆಗೆ ಒಳಗಾಗನು. (ಭಾಗವತ ॥ತಾ॥ ೭ನೇ ಸ್ಕಂಧ ೧ನೇ ಅಧ್ಯಾಯ ನೋಡಿರಿ)

೧೧) ಧುಂಧುವಿನಲ್ಲಿದ್ದುಕೊಂಡು ದೇವತೆಗಳಿಗೆ ಬಾಧಕನಾದ ತಾನೂ ಭಾಧಿತನಾದಂತೆ ನಟಿಸಿದ. ಕುವಲಾಶ್ವನಲ್ಲಿದ್ದುಕೊಂಡು ಧುಂಧುವಿಗೆ ಬಾಧಕನಾಗಿ ಮಾರಕನಾದ ಕುವಲಾಶ್ವನಿಗೆ ಕೀರ್ತಿಕೊಟ್ಟ, ಬ್ರಹ್ಮ ದೇವರಿಂದ ಅವಧ್ಯನಾದವನನ್ನು ಒಬ್ಬ ರಾಜನಿಂದ ಕೊಲ್ಲಿಸಿ ಅವನಿಗೆ ಧುಂಧುಮಾರನೆಂಬ ಕೀರ್ತಿಕೊಟ್ಟ. ವಿಷ್ಣುವಿನ ಕಾರುಣ್ಯಾ ಸಾಗರಕ್ಕೆ ಅನಂತ ನಮಸ್ಕಾರಗಳ ವಿನಃ ನಾವು ಏನನ್ನು ತಾನೇ ಹೇಳಲು ಸಾಧ್ಯ!! (ಅನಂತ ನಮಸ್ಕಾರ ಮಾಡಲು ಅಸಾಧ್ಯವಾದರೂ ಹೇಳಲು ತೊಂದರೆ ಇಲ್ಲವಷ್ಟೇ!) (ವಚನೇ ಕಾ ದರಿದ್ರತಾ)

೧೨) ತನ್ನ ಸೇವೆಗೆ ಕುವಲಾಶ್ವ ದೇವತೆಗಳಿಂದ ಕೇಳಿದ ವರಗಳು ಅಷ್ಟೇ ಅನುಕರಣೀಯ ಅವುಗಳಲ್ಲಿ ವಿಷ್ಣು ಸಖ್ಯ ಮುಖ್ಯ. ಸಖ್ಯವೆಂದರೆ ಸ್ನೇಹ ಸ್ನೇಹವೆಂದರೆ ಭಕ್ತಿ–ಎಂದರೆ ವಿಷ್ಣುಭಕ್ತಿ ಅದನ್ನೇ ಎಲ್ಲರೂ ಬಯಸಬೇಕು. ಸುಗ್ರೀವನೂ ಕೂಡಾ ರಾಮನೊಡನೆ ಬಯಸಿದ್ದು ಸಖ್ಯ. ('ಸಖ್ಯಂ ಚಕಾರ ಹುತಭುಕ್ಪ್ರಮುಖೇ ಚ ತಸ್ಯ ರಾಮೇಣ ಶಾಶ್ವತನಿಜಾರ್ತಿಹರೇಣ ಶೀಘ್ರಂ' (ಮ ತಾ ನಿ ೬–೨).

ಇತ್ಯಾದಿ...

*****

# ೫೧. ಪತಿವ್ರತೋಪಾಖ್ಯಾನ

ಧುಂಧುಮಾರನ ಚರಿತೆಯನ್ನು ಕೇಳಿದ ಯುಧಿಷ್ಠಿರನು ತಿಳಿಯಲು ಹಾಗೂ ಹೇಳಲೂ ಅಸಾಧ್ಯವಾದ ಪತಿವ್ರತಾ ಸ್ತ್ರೀಯರ ಮಹಾತ್ಮೆಯನ್ನು ಕೇಳ ಬಯಸಿದನು.

ಧರ್ಮರಾಜನು ಇಲ್ಲಿ ಇದನ್ನು ಧರ್ಮ ಸಂಬಂಧಿಯಾದ ಪ್ರಶ್ನೆಯೆಂದೇ ಭಾವಿಸಿ ಕೇಳುತ್ತಾನೆ. (ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಪ್ರಶ್ನೆ) (ಪ್ರಶ್ನೆಯನ್ನು ಧರ್ಮರಾಜನು ವಿವೇಚಿಸುತ್ತಾ ಕೇಳುತ್ತಾನೆ. ಜಗತ್ತಿನಲ್ಲಿ ಸೂರ್ಯ, ಚಂದ್ರ, ವಾಯು, ಪೃಥ್ವೀ, ಅಗ್ನಿ ತಂದೆ, ತಾಯಿ, ಹಾಗೂ ಶಾಸ್ತ್ರೋಕ್ತ ಅನೇಕರು ಗುರುಗಳಾಗಿ ಮಾನ್ಯರಾಗಿದ್ದಾರಷ್ಟೆ. ಹಾಗೆಯೇ ಪತಿವ್ರತಾ ಸ್ತ್ರೀಯರೂ ಕೂಡಾ ಮಾನ್ಯರೇ. ಪತಿಯನ್ನು ಆರಾಧಿಸುವುದು ಕಷ್ಟ ಸಾಧ್ಯವಾದುದು. ಅಂತಹ ಸೇವಾ ಕೈಂಕರ್ಯ ಮಾಡಿ ಯಶ ಗೊಳಿಸುವ ಪತಿವ್ರತೆಯರ ಕಾಯಕ ತುಂಬಾ ಕ್ಲಿಷ್ಟಕರವಾದುದೆಂದು ನನ್ನ ಭಾವನೆ ಎನ್ನುತ್ತಾನೆ ಧರ್ಮರಾಜ.

ಪತಿವ್ರತೆಯಲ್ಲಿರಬೇಕಾದ ಗುಣಗಳನ್ನು ಧರ್ಮರಾಜನು ಸಂಗ್ರಹಿಸುತ್ತಾನೆ. ಅವು ೧) ಇಂದ್ರಿಯನಿಗ್ರಹ ೨) ಮನೋನಿಗ್ರಹ ೩) ಪತಿಯೇ ಪರ ದೈವ ಎಂಬ ಅನುಸಂಧಾನ (ಪತಿಯಲ್ಲಿ ಹರಿಯ ಅನುಸಂಧಾನ ಆಚರಣೆ) ೪) ತನ್ನ ಅತ್ತೆ, ಮಾವ, ಮಕ್ಕಳನ್ನು ಹೀಗೆ ತನ್ನ ಪರಿಸರದ ಎಲ್ಲರನ್ನೂ ಅವರ ಅಗತ್ಯಗಳನ್ನು ಪೂರೈಸುವುದರ ಜೊತೆಗೆ ಗಂಡನಿಗೆ ಪ್ರಧಾನವಾಗಿ ಸೇವೆ ಮಾಡುವುದು ೫) ಪತಿಯಿಂದ ಗರ್ಭಧರಿಸಿ ಎಲ್ಲ ತರಹದ ವೇದನೆ ದುಃಖಗಳನ್ನು ಅನುಭವಿಸಿ ಮಕ್ಕಳನ್ನು ಹೆತ್ತು ಸಲಹುವುದು. ಅತ್ಯಂತ ಕಠಿಣವಾದ ಕೆಲಸ ಅಷ್ಟರ ಜೊತೆಗೆ ಪತಿಯ ಸೇವೆಯನ್ನು ಪ್ರಧಾನವಾಗಿ ಮಾಡುವ ಪತಿವ್ರತೆಯರ ಮಹಾತ್ಮೆ ತಿಳಿಸಲು ಧರ್ಮರಾಜನು ಕೋರುತ್ತಾನೆ.

ಧರ್ಮರಾಜನು ಮುಂದುವರೆದು 'ತಂದೆ ತಾಯಿಗಳು ತಮ್ಮ ಮಕ್ಕಳು ಯಶಸ್ಸು, ಐಶ್ವರ್ಯ, ಸಂತಾನ, ಧರ್ಮವಂತರಾಗಬೇಕೆಂದು ಬಯಸುತ್ತಾರೆ. ಅವರ ಆಶೆಯನ್ನು ಸಫಲ ಗೊಳಿಸುವ ಮಕ್ಕಳೇ ನಿಜವಾದ ಮಕ್ಕಳು' ಎನ್ನುತ್ತಾನೆ.

ಸ್ತ್ರೀಯರಿಗೆ ಪತಿಸೇವೆಯೇ ಪರಮಧರ್ಮ ಅವರಿಗೆ ಪ್ರತ್ಯೇಕವಾಗಿ ಬೇರಾವ ಯಜ್ಞ, ಶ್ರಾದ್ಧ, ಉಪವಾಸಗಳಿಲ್ಲ. ಪತಿಶುಶ್ರೂಷೆಯಿಂದಲೇ ಆಕೆ ಸ್ವರ್ಗವನ್ನು ಜಯಿಸುತ್ತಾಳೆ.

**'ಮಾನ್ಯಾ ಹಿ ಗುರುವಃ ಸರ್ವೇ ಏಕಪತ್ನ್ಯಸ್ತಥಾ ಸ್ತ್ರಿಯಃ ।**
**ಪತಿವ್ರತಾನಾಂ ಶುಶ್ರೂಷಾ ದುಷ್ಕರಾ ಪ್ರತಿಭಾತಿ ಮೇ ॥**
**ನಿರುಧ್ಯ ಚೇಂದ್ರಿಯಗ್ರಾಮಂ ಮನಃ ಸಂರುಧ್ಯ ಚಾನಘ ।**
**ಪತಿಂ ದೈವತವಚ್ಚಾಪಿ ಚಿಂತಯಂತ್ಯಃ ಸ್ಥಿತಾ ಹಿ ಯಾಃ ॥**

ಮಾತಾಪಿತ್ರೋಶ್ಚ ಶುಶ್ರೂಷಾ ಸ್ತ್ರೀಣಾಂ ಭರ್ತರಿ ಚ ದ್ವಿಜ ।
ಸ್ತ್ರೀಣಾಂ ಧರ್ಮಾತ್ಸುಘೋರಾದ್ಧಿ ನಾನ್ಯಂ ಪಶ್ಯಾಮಿ ದುಷ್ಕರಮ್ ॥
ನೈವ ಯಜ್ಞಕ್ರಿಯಾಃ ಕಾಶ್ಚಿನ್ನ ಶ್ರಾದ್ಧಂ ನೋಪವಾಸಕಮ್ ।
ಯಾ ತು ಭರ್ತರಿ ಶುಶ್ರೂಷಾ ತಯಾ ಸ್ವರ್ಗಂ ಜಯತ್ಯುತ ॥

ವನಪರ್ವ ೨೦೫-೫,೬,೭,೨೩

ಈ ಪ್ರಶ್ನೆಗಳಿಗೆ ಉತ್ತರದಂತಿರುವ ಕೌಶಿಕ ಬ್ರಾಹ್ಮಣ ಹಾಗೂ ಒಬ್ಬ ಬ್ರಾಹ್ಮಣ ಪತಿವ್ರತೆಯ ಉಪಾಖ್ಯಾನವನ್ನು ಮಾರ್ಕಂಡೇಯರು ತಿಳಿಸುತ್ತಾರೆ.

ವೇದಾಧ್ಯಯನ ಸಂಪನ್ನನೂ, ತಪೋಧನನೂ, ತಪಸ್ವಿಯೂ, ಧರ್ಮಶೀಲನೂ ಆದ **ಕೌಶಿಕನೆಂಬ** ಒಬ್ಬ ಬ್ರಾಹ್ಮಣನಿದ್ದನು. ಆತನು ಷಡಂಗ ಸಮೇತ ವೇದಾಧ್ಯಯನವನ್ನು ಮಾಡಿದ್ದನು. ಒಮ್ಮೆ ಆತನು ಮರದ ಬುಡದಲ್ಲಿ ಕುಳಿತು ವೇದೋಚ್ಚಾರಣೆ ಮಾಡುತ್ತಾ ಇದ್ದಾಗ ಮೇಲಿದ್ದ ಒಂದು ಬಕಪಕ್ಷಿ (ಬಲಾಕಾ) (ಬೆಳ್ಳಕ್ಕಿ) ಕೌಶಿಕನ ತಲೆಯ ಮೇಲೆ ತನ್ನ ಮಲವನ್ನು ವಿಸರ್ಜಿಸಿತು. ಅದರಿಂದ ಬ್ರಾಹ್ಮಣನು ಕೋಪಗೊಂಡು ಆ ಪಕ್ಷಿಯನ್ನು ದಿಟ್ಟಿಸಿ ನೋಡಿದ ಪರಿಣಾಮವಾಗಿ ಅದು ಸತ್ತು ಬಿತ್ತು. ಮರಣಿಸಿದ ಪಕ್ಷಿಯನ್ನು ಕಂಡ ಬ್ರಾಹ್ಮಣನ ಮನಸ್ಸೂ ಕರುಣೆಯಿಂದ ಕರಗಿ **'ಎಂತಹ ಕೆಟ್ಟ ಕೆಲಸ ಮಾಡಿದೆನಲ್ಲ'** ಎಂದು ಮರುಗಿತು. ಪಕ್ಷಿಯ ಮೇಲಿನ ಕ್ರೋಧ, ತನ್ನ ಶರೀರದ ಮೇಲಿನ ವ್ಯಾಮೋಹಗಳು ಬ್ರಾಹ್ಮಣನ ತಪೋಬಲವನ್ನೇ ಉಡುಗಿಸಿದ್ದವು. ಅದರ ಪರಿಣಾಮವಾಗಿ ಬಡ ಜೀವವೊಂದು ನೆಲಕ್ಕೆ ಬಗ್ಗಿತು.

'ತಪಸ್ವೀ ಧರ್ಮಶೀಲಶ್ಚ ಕೌಶಿಕೋ ನಾಮ ಭಾರತ ।
ಸಾಂಗೋಪನಿಷದೋ ವೇದಾನಧೀತೇ ದ್ವಿಜಸತ್ತಮಃ ॥
ಉಪರಿಷ್ಟಾಚ್ಚ ವೃಕ್ಷಸ್ಯ ಬಲಾಕಾ ಸಂನ್ಯಲೀಯತ ।
ತಯಾ ಪುರೀಷಮುತ್ಸೃಷ್ಟಂ ಬ್ರಾಹ್ಮಣಸ್ಯ ತದೋಪರಿ ।
ತಾಮವೇಕ್ಷ್ಯ ತತಃ ಕೃದ್ಧಃ ಸಮಪಧ್ಯಾಯತ ದ್ವಿಃ ।

ಅಪಧ್ಯಾತಾ ಚ ವಿಪ್ರೇಣ ನ್ಯಪತತ್ ಧರಣೀತಲೇ ।
ಬಲಾಕಾಂ ಪತಿತಾಂ ದೃಷ್ಟ್ವಾ......................
ಕಾರಣ್ಯಾದಭಿಸಂತಪ್ತಃ ಪರ್ಯಶೋಚತ ತಾಂ ದ್ವಿಜಃ ।
ಅಕಾರ್ಯಂ ಕೃತವಾನಸ್ಮಿ ರೋಷರಾಗಬಲಾತ್ಕೃತಃ ॥

ವನಪರ್ವ ೨೦೬-೧,೩,೪,೬

ಹೀಗೆ ಬ್ರಾಹ್ಮಣನು ಪರಿತಪಿಸುತ್ತಾ ಎಂದಿನಂತೆ ಸತ್ಕುಲೀನರ ಮನೆಗಳಿಗೆ ಭಿಕ್ಷಾಟನೆಗೆ ತೆರಳಿದನು. ಈ ಹಿಂದೆ ತೆರಳಿದ ಒಬ್ಬರ ಮನೆಗೆ ಹೋಗಿ **'ಭಿಕ್ಷಾಂದೇಹಿ'** ಎಂದು ಕೂಗಲು ಮನೆಯೊಳಗಿನ ಒಡತಿಯಿಂದ 'ನಿಲ್ಲಿರಿ' ಎಂಬ ಧ್ವನಿ ಬಂದಿತು. ಬ್ರಾಹ್ಮಣನು ಕಾದನು. ಅದೇ ಹೊತ್ತಿಗೆ ಆ ಮನೆಯ ಯಜಮಾನ, ಗೃಹಸ್ಥನು

ಬಾಯಾರಿಕೆ ಹಸಿವುಗಳಿಂದ ಬಳಲಿ ಮನೆಗೆ ಬರಲಾಗಿ ಆತನ ಪತ್ನಿಯು ಕೂಡಲೆ ಪತಿಯ ಸೇವೆಗೆ ಸನ್ನದ್ಧಳಾಗಿ ಕೈಕಾಲು ತೊಳೆಯಲು ನೀರನ್ನು ಕೊಟ್ಟು ಊಟಕ್ಕೆ ಬಡಿಸಲಾರಂಭಿಸಿದಳು. ತಾನು ಮಾಡಿದ ವಿವಿಧ ರುಚಿಕರವಾದ ಭಕ್ಷ್ಯ ಭೋಜ್ಯಗಳನ್ನು ಪತಿದೇವನಿಗೆ ಬಡಿಸಿದಳು. ಆಕೆಯ ಈ ಸೇವೆ ಎಂದಿನಂತಿತ್ತು. ಪತಿ ಉಂಡ ನಂತರ ಉಚ್ಚಿಷ್ಠ (ಶೇಷ)ವನ್ನು ಉಣ್ಣುವ ಮಹಾ ವ್ರತ ಆಕೆಯದಾಗಿತ್ತು. ಕುಟುಂಬದ ಹಿತೈಷಿಯೂ ದೇವತಾ ಅತಿಥಿಭೃತ್ಯರ ಸೇವೆ ಅತ್ತೆ ಮಾವಂದಿರ ಸೇವೆ ಆಕೆಯ ದಿನಚರಿಯಾಗಿತ್ತು.

ಇಂದು ತನ್ನ ಪತಿಯ ಸೇವೆಯ ಅವಸರದಲ್ಲಿ ಮನೆ ಮುಂದೆ ಕಾಯುತ್ತಿದ್ದ ಬ್ರಾಹ್ಮಣನಿಗೆ ಭಿಕ್ಷೆ ಹಾಕಲು ತಡವಾಯಿತು. ಪತಿ ಸೇವೆ ನಂತರ ನೆನಪಿಸಿಕೊಂಡ ಸಾಧ್ವಿಯು ನಾಚಿಕೆಯಿಂದ ಭಿಕ್ಷೆ ತೆಗೆದುಕೊಂಡು ಹೊರ ನಡೆದಳು.

ತಡವಾಗಿ ಬಂದ ಗೃಹಿಣಿಯನ್ನು ನೋಡಿ ಬೇಸರದಿಂದ ಕೌಶಿಕ ಬ್ರಾಹ್ಮಣನು ಅದಕ್ಕಾಗಿ ಆಕ್ಷೇಪಿಸಿಯೇ ಬಿಟ್ಟನು. ಬೇಸರಗೊಂಡ, ಖತಿಗೊಂಡ ತೇಜಸ್ಸಿನಿಂದ ಬೆಂಕಿಯಂತೆ ಹೊಳೆಯುತ್ತಿದ್ದ ಬ್ರಾಹ್ಮಣನನ್ನು ನೋಡಿದ ಗೃಹಿಣಿಯು ತಡವಾದುದನ್ನು ಕ್ಷಮಿಸಲು ಸಮಾಧಾನದಿಂದಲೇ ಬೇಡಿದಳು. ಅದಕ್ಕೆ ನಿಜವಾದ ಕಾರಣವನ್ನು ಹೇಳಿದಳು.

'ನನ್ನ ಗಂಡ ಹಸಿದು ಬಸವಳಿದು ಬಂದಿದ್ದ ಆತನ ಸೇವೆಯಲ್ಲಿ ನಿಮ್ಮನ್ನು ಮರೆತೆ. ದಯಮಾಡಿ ಕ್ಷಮಿಸಿ' ಎಂದಳು. ಈ ಕಾರಣಗಳನ್ನು ಕೇಳುವ ಮನಃಸ್ಥಿತಿಯಲ್ಲಿಲ್ಲದ ಬ್ರಾಹ್ಮಣ ಕೋಪದಿಂದಲೇ ನುಡಿದ'.

ಬ್ರಾಹ್ಮಣರು ಶ್ರೇಷ್ಠರಲ್ಲವೆ? ನಿನಗೆ ಗಂಡನೇ ಶ್ರೇಷ್ಠನಾದನೇ? ಗೃಹಸ್ಥಳಾಗಿ ಬ್ರಾಹ್ಮಣರನ್ನು ಅಗೌರವಿಸುತ್ತೀಯಲ್ಲ? ಇದು ಸರಿಯೇ? ಇಂದ್ರನೂ ಬ್ರಾಹ್ಮಣರನ್ನು ಗೌರವಿಸುವಾಗ ಮಾನವರಾಗಿ ಬ್ರಾಹ್ಮಣರನ್ನು ಧಿಕ್ಕರಿಸುತ್ತೀಯ? ಜ್ಞಾನಿಗಳ ಅಭಿಪ್ರಾಯ ನೀನು ಬಲ್ಲೆಯಲ್ಲವೇ?

ಬ್ರಾಹ್ಮಣರು ಅಗ್ನಿಯಂತೆ ಭೂಮಿಯನ್ನು ಸುಡಬಲ್ಲರು!!'

ಈ ಮಾತನ್ನು ಕೇಳಿದ ಕೂಡಲೇ ಪತಿವ್ರತೆಯು 'ಎಲೈ ವಿಪ್ರರ್ಷಿಯೇ! ನಾನೇನೂ ಬಕಪಕ್ಷಿಯಲ್ಲ! ನಿನ್ನ ಕ್ರೋಧದ ಕಣ್ಣು ನನ್ನನ್ನು ಏನು ಮಾಡೀತು? ಆದ್ದರಿಂದ ಸಿಟ್ಟನ್ನು ನಿಯಂತ್ರಿಸು. ನಾನು ದೈವತುಲ್ಯರಾದ ಬ್ರಾಹ್ಮಣರನ್ನು ಎಂದೂ ಅಗೌರವಿಸಿಲ್ಲ! ಅಗೌರವಿಸುವುದಿಲ್ಲ! ಆದರೂ ನನ್ನೀ ಅಪರಾಧವನ್ನು ಕ್ಷಮಿಸು. ಬ್ರಹ್ಮ ಜ್ಞಾನಿಗಳಾದ ಬ್ರಾಹ್ಮಣರ ತೇಜಸ್ಸೇನೆಂಬುದನ್ನು ನಾನು ಬಲ್ಲೆ.

ಕೋಪಗೊಂಡ ಬ್ರಾಹ್ಮಣನು ಮಹಾಸಾಗರದ ನೀರನ್ನೇ ಉಪ್ಪಾಗಿಸಿಬಿಟ್ಟ. ಮುನಿಯ ಕೋಪಾಗ್ನಿಯಿಂದಾಗಿ ದಂಡಕಾರಣ್ಯದಲ್ಲಿ ಅಗ್ನಿ ಇನ್ನೂ ಉರಿಯುತ್ತಲೇ ಇದೆ. ಅಗಸ್ತ್ಯರನ್ನು ಉದಾಸೀನದಿಂದ ನೋಡಿದ ವಾತಾಪಿಯು ಅವರ ಉದರದಲ್ಲಿ

ಜೀರ್ಣನಾದ. ಹೀಗೆ ಬ್ರಾಹ್ಮಣರ ಪ್ರಭಾವವನ್ನು ನಾನು ಬಲ್ಲೆ. ಆದರೂ ನಾನು ಮಾಡಿದ ಈ ಅಪರಾಧವನ್ನು ದಯವಿಟ್ಟು ಕ್ಷಮಿಸು!

'ದೇಹೀತಿ ಯಾಚಮಾನೋಽಸೌ ತಿಷ್ಠೇತ್ಯುಕ್ತಃ ಸ್ತ್ರಿಯಾ ತತಃ ।
ಭರ್ತ್ರಾ ಪ್ರವಿಷ್ಟಃ ಸಹಸಾ ಕ್ಷುಧಾ ಸಂಪೀಡಿತೋ ಭೃಶಂ ।

ಪ್ರಹ್ವಾ ಪರ್ಯಚರಚ್ಚಾಪಿ ಭರ್ತಾರಂ ।
ಉಚ್ಛಿಷ್ಟಂ ಭಾವಿತಾ ಭರ್ತುರ್ಭುಂಕ್ತೇ ನಿತ್ಯಂ ಯುಧಿಷ್ಠಿರ ।
ದೈವತಂ ಚ ಪತಿಂ ಮೇನೇ ಭರ್ತುಶ್ಚಿತ್ತಾನುಸಾರಿಣೀ ।
ಕರ್ಮಣಾ ಮನಸಾ ವಾಚಾ ನಾನ್ಯಚಿತ್ತಾಭ್ಯಗಾತ್ಪತಿಂ ।
ದೇವತಾತಿಥಿಭೃತ್ಯಾನಾಂ ಶ್ವಶ್ರೂಶ್ವಶುರಯೋಸ್ತಥಾ ।
ಕುರ್ವತೀ ಪತಿಶುಶ್ರೂಷಾಂ ಸಸ್ಮಾರಾಥ ಶುಭೇಕ್ಷಣಾ ।
ವ್ರೀಡಿತಾ ಸಾಭವತ್ ಸಾಧ್ವೀ
ಭಿಕ್ಷಾಮಾದಾಯ ವಿಪ್ರಾಯ ನಿರ್ಜಗಾಮ ಯಶಸ್ವಿನೀ ॥
ಬ್ರಾಹ್ಮಣಂ ಕ್ರೋಧಸಂತಪ್ತಂ ಜ್ವಲಂತಮಿವ ತೇಜಸಾ ।

ಸ್ತ್ರೀ–ಉವಾಚ

ಕ್ಷಂತುಮರ್ಹಸಿ ಮೇ ವಿದ್ವನ್ ಭರ್ತಾ ಮೇ ದೈವತಂ ಮಹತ್ ।
ಸ ಚಾಪಿ ಕ್ಷುಧಿತಃ ಶ್ರಾಂತಃ ಪ್ರಾಪ್ತಃ ಶುಶ್ರೂಷಿತೋ ಮಯಾ ।

ಬ್ರಾಹ್ಮಣ ಉವಾಚ

ಬ್ರಾಹ್ಮಣಾ ನ ಗರೀಯಾಂಸೋ ಗರೀಯಾಂಸ್ತೇ ಪತಿಃ ಕೃತಃ ।
ಬ್ರಾಹ್ಮಣಾ ಹ್ಯಗ್ನಿಸದೃಶಾ ದಹೇಯುಃ ಪೃಥಿವೀಮಪಿ ।

ಸ್ತ್ರೀ–ಉವಾಚ

ನಾಹಂ ಬಲಾಕಾ ವಿಪ್ರರ್ಷೇ ತ್ಯಜ ಕ್ರೋಧಂ ತಪೋಧನ ।
ಅನಯಾ ಕೃದ್ಧಯಾ ದೃಷ್ಟ್ಯಾ ಕೃದ್ಧಃ ಕಿಂ ಮಾಂ ಕರಿಷ್ಯಸಿ ॥
ನಾವಜಾನಾಮ್ಯಹಂ ವಿಪ್ರಾನ್ ದೇವೈಸ್ತುಲ್ಯಾನ್ ಮನಸ್ವಿನಃ
ಅಪರಾಧಮಿಮಾಂ ವಿಪ್ರ ಕ್ಷಂತುಮರ್ಹಸಿ ಮೇಽನಘ ।

– ವನಪರ್ವ ಅ. ೨೦೬ ೮ ರಿಂದ ೨೫

ಹೀಗೆ ತನ್ನ ಪರಿಸ್ಥಿತಿಯನ್ನು ಬ್ರಾಹ್ಮಣನಿಗೆ ನಿವೇದಿಸುತ್ತಾ ಮತ್ತೂ ಹೇಳುತ್ತಾಳೆ. ಬ್ರಾಹ್ಮಣರು ಶ್ರೇಷ್ಠರೇ ಆದರೂ ಪತಿವ್ರತೆಗೆ ಪತಿಯೇ ಎಲ್ಲರಿಗಿಂತ ಶ್ರೇಷ್ಠ. ಬ್ರಾಹ್ಮಣ ಹಾಗೂ ಪತಿ ಸೇವೆಗಳು ಒಟ್ಟಾಗಿ ಬಂದಾಗ ನಾನು ಆಯ್ಕೆ ಮಾಡುವುದು ಮೊದಲು ಪತಿಸೇವೆಯನ್ನೇ. ಅದುವೇ ಧರ್ಮ ಎಂದು ಎದೆಗಾರಿಕೆಯಿಂದ ನುಡಿದಳು. ಆ ಸತಿ ಶಿರೋಮಣಿ. ಅಷ್ಟೇಕೆ? ದೇವತಾಸೇವೆಗಿಂತ ಪತಿಸೇವೆ ಶ್ರೇಷ್ಠ!!

**'ಪತಿ ಶುಶ್ರೂಷಯಾ ಧರ್ಮೋ ಯಃ ಸ ಮೇ ರೋಚತೇ ದ್ವಿಜ ।**
**ದೈವತೇಷ್ವಪಿ ಸರ್ವೇಷು ಭರ್ತಾ ಮೇ ದೈವತಂ ಪರಂ ॥'** –೩೦

ಅಷ್ಟೇ ಏಕೆ? ಒಂದು ವೇಳೆ ನಾನು ಮಾಡಿದ್ದು ಧರ್ಮ ವಿರುದ್ಧವಾಗಿದ್ದರೆ ನೀನು ಬಲಾಕಾ ಪಕ್ಷಿಯನ್ನು ಸುಟ್ಟವಿಷಯ. ನನಗೆ ಹೇಗ ತಾನೇ ಗೊತ್ತಾಗುತ್ತಿತ್ತು? (ಪತಿಸೇವೆಯಿಂದ ತ್ರಿಕಾಲದರ್ಶಿಯಾಗಿದ್ದೇನೆ) ಆದ್ದರಿಂದ ನನ್ನ ಆಚರಣೆಯು ಶುದ್ಧವಾದುದು.

**'ಶುಶ್ರೂಷಾಯಾಃ ಫಲಂ ಪಶ್ಯ ಪತ್ಯುರ್ಬ್ರಾಹ್ಮಣ ಯಾದೃಶಂ ।**
**ಬಲಾಕಾ ಹಿ ತ್ವಯಾ ದಗ್ಧಾ ರೋಷಾತ್ ತದ್ವಿದಿತಂ ಮಯಾ ॥'** –೩೧

ಆದ್ದರಿಂದ ಎಲೈ ಬ್ರಾಹ್ಮಣನೇ! ಇವನ್ನು ನೀನು ಅವಶ್ಯ ತಿಳಿದುಕೊ!

1. ಮನುಷ್ಯರ ನಿಜವಾದ ಶತ್ರು – ಕ್ರೋಧ
2. ಕ್ರೋಧ ಮೋಹಗಳನ್ನು ಬಿಟ್ಟವನೇ ಬ್ರಾಹ್ಮಣ
3. ಸತ್ಯ ನುಡಿಯುವವನು – ಗುರುವನ್ನು ಸಂತೋಷಿಸುವವನು, ಹಿಂಸಿಸಲ್ಪಟ್ಟರೂ ಹಿಂಸಿಸದಿರುವವನು ಬ್ರಾಹ್ಮಣನೆಂದು ಕರೆಯುತ್ತಾರೆ– ದೇವತೆಗಳು.
4. ಕಾಮಕ್ರೋಧಗಳನ್ನು ವಶದಲ್ಲಿಟ್ಟುಕೊಂಡವನೇ ಬ್ರಾಹ್ಮಣ
5. ಭಾಗವತ ಧರ್ಮದಲ್ಲಿ ರತನಾದವನೇ ಬ್ರಾಹ್ಮಣ
6. ವೇದಾಧ್ಯಯನ ಮಾಡುವವನು, ಮಾಡಿಸುವವನು; ಯಜ್ಞ ಮಾಡುವವನು ಮಾಡಿಸುವವನು, ದಾನ ಮಾಡುವವನನ್ನು ದೇವತೆಗಳು ಬ್ರಾಹ್ಮಣನೆಂದು ಕರೆಯುವರು.
7. ಬ್ರಹ್ಮಚಾರಿಯೂ ಸ್ವಾಧ್ಯಾಯ ಸಂಪನ್ನನೂ, ಉದಾರಿಯೂ ನಿಗರ್ವಿಯೂ ದೇವತೆಗಳಿಂದ ಬ್ರಾಹ್ಮಣನೆಂದು ಕರೆಯಲ್ಪಡುತ್ತಾನೆ.
8. ಬ್ರಾಹ್ಮಣರಿಗೆ ಹಿತವಾದುದನ್ನು ನುಡಿಯುವವನೇ ನಿಜವಾಗಿ ಸತ್ಯವಂತ.
9. ಬ್ರಾಹ್ಮಣನ ಧರ್ಮಗಳು ಸ್ವಾಧ್ಯಾಯ, ಇಂದ್ರಿಯನಿಗ್ರಹ, ಪ್ರಾಮಾಣಿಕತೆ (ಕಾಯೇನ–ವಾಚಾ–ಮನಸಾ); ಮೊದಲಾದವು.

ಆದ್ದರಿಂದ ಎಲೈ ಬ್ರಾಹ್ಮಣನೇ ನೀನೇನೂ ಸಾಮಾನ್ಯನಲ್ಲ – ನೀನು ಧರ್ಮ ಬಲ್ಲವನೂ, ಸ್ವಾಧ್ಯಾಯ ಸಂಪನ್ನನೂ, ಶುಚಿರ್ಭೂತನೂ, ತಪೋಧನನೂ ಆಗಿರುವೆ. ಆದರೂ ಕೋಪ ಬಿಟ್ಟಿಲ್ಲ. ಧರ್ಮದ ಸ್ವರೂಪ ನೀನು ಇನ್ನೂ ಪೂರ್ಣವಾಗಿ ಸರಿಯಾಗಿ ತಿಳಿದಿಲ್ಲ ಎಂದು ನನ್ನ ಭಾವನೆ.

**ಒಂದು ವೇಳೆ ಧರ್ಮದ ತತ್ತ್ವಗಳನ್ನು ಸರಿಯಾಗಿ ತಿಳಿಯಬಯಸುವೆಯಾದರೆ ಮಿಥಿಲಾನಗರದಲ್ಲಿರುವ ಧರ್ಮವ್ಯಾಧನಲ್ಲಿಗೆ ಅನುಕೂಲವಾದಾಗ ಹೋಗು. ಆತನು ತಂದೆ ತಾಯಿಗೆ ಸೇವಾರತನೂ, ಸತ್ಯವಾದಿಯೂ, ಜಿತೇಂದ್ರಿಯನೂ ಆಗಿದ್ದಾನೆ.**

ನಿನಗೆ ಮಂಗಳವಾಗಲಿ. ನಾನು ಮಾತನಾಡಿದ್ದು ತುಸು ಹೆಚ್ಚಾಗಿದೆ ಎಂದು ಭಾವಿಸಿದ್ದಲ್ಲಿ ದಯಮಾಡಿ ಕ್ಷಮಿಸು.

ಧರ್ಮಬಲ್ಲವರ ದೃಷ್ಟಿಯಲ್ಲಿ ಸ್ತ್ರೀಯರು ಅವಧ್ಯರು ಶಿಕಾರ್ಹರಲ್ಲ

ಹೀಗೆ ನುಡಿದ ಆ ಗೃಹಿಣಿಯ ಮಾತುಗಳನ್ನು ಕೇಳಿದ ಕೌಶಿಕನು 'ನನ್ನ ಕ್ರೋಧ ಇಂಗಿತು. ನಿನ್ನ ಮಾತುಗಳು ನನ್ನ ಒಳ ಕಣ್ಣುಗಳನ್ನು ತೆರೆಯಿಸಿದವು. ನಿನಗೆ ಮಂಗಳವಾಗಲಿ. ನೀನು ತಿಳಿಸಿದಂತೆ ಧರ್ಮವ್ಯಾಧನ ಬಳಿಗೆ ಹೋಗಿ ನನ್ನ ಸಾಧನೆಯನ್ನು ಪೂರೈಸುವೆನು. ಎಂದು ನುಡಿದು ತನ್ನ ಮನೆಗೆ ತೆರಳಿದನು.

**'ಕಾಮಕ್ರೋಧೌ ವಶೌಯಸ್ಯ ತಂ ದೇವಾ ಬ್ರಾಹ್ಮಣಂ ವಿದುಃ ।**
**ಯೋಽಧ್ಯಾಪಯೇದಧೀಯೀತ ಯಜೇದ್ವಾ ಯಾಜಯೀತ ವಾ ।**
**ದದ್ಯಾದ್ವಾಪಿ ಯಥಾಶಕ್ತಿ ತಂ ದೇವಾ ಬ್ರಾಹ್ಮಣಂ ವಿದುಃ ॥**
**ಭವಾನಪಿ ಚ ಧರ್ಮಜ್ಞ ಸ್ವಾಧ್ಯಾಯನಿರತಃ ಶುಚಿಃ ।**
**ನ ತು ತತ್ತ್ವೇನ ಭಗವನ್ ಧರ್ಮಂ ವೇತ್ಸೀತಿ ಮೇ ಮತಿಃ ।**
**ಯದಿ ವಿಪ್ರ ನ ಜಾನೀಷೇ ಧರ್ಮಂ ಪರಮಕಂ ದ್ವಿಜ ।**
**ಧರ್ಮವ್ಯಾಧಂ ತತಃ ಪೃಚ್ಛ ಗತ್ವಾ ತು ಮಿಥಿಲಾಂ ಪುರೀಂ ॥**
**ಅಯುಕ್ತಮಪಿ ಮೇ ಸರ್ವಂ ಕ್ಷಂತುಮರ್ಹಸ್ಸನಿಂದಿತ ।**
**ಸ್ತ್ರಿಯೋ ಹ್ಯವಧ್ಯಾಃ ಸರ್ವೇಷಾಂ ಯೇ ಚ ಧರ್ಮವಿದೋ ಜನಾಃ ॥**

**ಬ್ರಾಹ್ಮಣ ಉವಾಚ**

**'ಪ್ರೀತೋಽಸ್ಮಿ ತವ ಭದ್ರಂ ತೇ ಗತಃ ಕ್ರೋಧಶ್ಚ ಶೋಭನೇ'**
**ವನಪರ್ವ ೨೦೬- ೩೫ ರಿಂದ ೪೭**

## ಸಂದೇಶಗಳು–ವಿವರಣೆಗಳು

೧) ಸ್ತ್ರೀಯರು–ಅಬಲೆಯರು–ಪುರುಷರ ಆಧೀನದಲ್ಲಿದ್ದು ಅವರ ಸಾಧನೆಯೇನೂ ಇಲ್ಲ. ಕೇವಲ ಪುರುಷರ ಶೋಷಣೆಯಲ್ಲಿಯೇ ಇರುವ ಭೋಗ್ಯ ವಸ್ತು ಎಂಬ ಆಧುನಿಕರ ಟೀಕೆಗಳಿಗೆ ಉತ್ತರ ರೂಪವಾಗಿರುವಂತಿದೆ ಈ ಉಪಾಖ್ಯಾನ. ಸ್ತ್ರೀಯರ ಮಹಾತ್ಮೆಯನ್ನು ಮಹಾರಾಜನಾದ ಧರ್ಮರಾಜನೇ ಕೇಳಿ ತಿಳಿಯ ಬಯಸುತ್ತಾನೆ ಎನ್ನುವುದು ವಿಶೇಷ.

೨) ಸ್ತ್ರೀಯರ ಕರ್ತವ್ಯಗಳು ವಿವಾಹವಾದ ಮೇಲೆ ವ್ಯಾಪಕವಾಗಿವೆ. ಪತಿ ಶುಶ್ರೂಷೆಯಲ್ಲದೆ ಪತಿಯ ಅನುಬಂಧಗಳ ವಿಶೇಷವಾಗಿ ಅತ್ತೆ ಮಾವಂದಿರ, ತನ್ನ ಮಕ್ಕಳ ಹೀಗೆ ಇಡೀ ಕುಟುಂಬದ ಜವಾಬ್ದಾರಿ ನಿರ್ವಹಣೆಯನ್ನು ಧರ್ಮರಾಜನು ಮುಕ್ತ ಕಂಠದಿಂದ ಪ್ರಶಂಸಿಸುತ್ತಾನೆ. **ಧರ್ಮದ** ಅಭಿಮಾನಿ ದೇವತೆಯಿಂದಲೇ

ಸ್ತ್ರೀಯರ ಪ್ರಶಂಸೆ, ಸ್ತ್ರೀಯರಿಗೆ ಶಾಸ್ತ್ರದಲ್ಲಿ, ನಿತ್ಯ ಜೀವನದಲ್ಲಿರುವ ಸ್ಥಾನ ಮಾನಗಳ ವಸ್ತುಸ್ಥಿತಿಯನ್ನು ವಿವರಿಸುತ್ತವೆ.

೩) ಧರ್ಮರಾಜನ ಅಭಿಪ್ರಾಯಗಳನ್ನು ಮಾರ್ಕಂಡೇಯರು ಅನುಮೋದಿಸುತ್ತಾರೆ. ಹೀಗೆ ಜ್ಞಾನಿಗಳ ಮನ್ನಣೆಯೂ ಇದಕ್ಕೆ ಸಿಕ್ಕಿದೆ.

೪) ಮಾರ್ಕಂಡೇಯರು ನಿರೂಪಿಸುವಂತೆ ವಿವಾಹಿತ ಸ್ತ್ರೀಯರಿಗೆ ಪತಿಸೇವೆಯ ಹೊರತಾಗಿ ಪ್ರತ್ಯೇಕವಾದ ಯಜ್ಞ, ಶ್ರಾದ್ಧ, ಉಪವಾಸಾದಿಗಳು ಕಡ್ಡಾಯವಲ್ಲ. ಪತಿಸೇವೆಯಿಂದ ಆಕೆ ಮೋಕ್ಷ ಹೊಂದಬಲ್ಲಳು. ಪುರುಷರಾಗಲೀ, ಸ್ತ್ರೀಯರಾಗಲೀ, ಎಲ್ಲ ಸಾಧಕರ ಗುರಿ ಮೋಕ್ಷ. ಅದಕ್ಕಾಗಿ ಸ್ತ್ರೀಯರ ಪ್ರಧಾನಕರ್ತವ್ಯ ಪತಿಸೇವೆ.

೫) ಪತಿಸೇವೆಯೆಂದರೆ ಪತಿಯಿಂದ ಶೋಷಣೆಯಲ್ಲವೇ? ಖಂಡಿತವಾಗಿಯೂ ಅಲ್ಲ. ಪತಿಯೇ ಸ್ತ್ರೀಯರಿಗೆ ಭಗವಂತನ ಪ್ರತಿಮೆ. ಪುರುಷರಿಗೆ ಗುರು ಪ್ರತಿಮೆ, ಹಾಗೆಯೇ ಸಾಲಿಗ್ರಾಮ, ವಿವಿಧ ಪ್ರತಿಮೆಗಳು–ಯಜ್ಞ ಯಾಗಾದಿಗಳು–ವರ್ಣಾಶ್ರಮ ಧರ್ಮಗಳು–ಪ್ರತೀಕಗಳಾದರೆ ಬ್ರಾಹ್ಮಣಾದಿ ಜಂಗಮ ಪ್ರತಿಮೆಗಳು–ಮಾಧ್ಯಮವಾದರೆ ಸ್ತ್ರೀಯರಿಗೆ ಪತಿಮಾತ್ರ ಭಗವಂತನ ಸಾಕ್ಷಾತ್ಕಾರಕ್ಕಿರುವ ಏಕೈಕ ಪ್ರತಿಮೆ–ಮಾಧ್ಯಮ.

೬) ಇದರ ಅರ್ಥ ಪತಿ ಸ್ವೇಚ್ಛಾಚಾರಿ, ವ್ಯಭಿಚಾರಿ, ಶೋಷಕನಾಗಿರಬೇಕಿಲ್ಲ. ಹಾಗಿದ್ದರೆ ಪುರುಷರು ತಮ್ಮ ಪಾಲಿನ ಕರ್ತವ್ಯದಿಂದ ಭ್ರಷ್ಟರಾದಂತೆ. ಆಗ ಅವರು ಪುಣ್ಯ ಕಳೆದುಕೊಳ್ಳುವುದೇ ಹೆಚ್ಚು.

೭) ದುಷ್ಟ ಪತಿಯಿದ್ದರೂ ಅವನನ್ನು ಸಂತೈಸಿರಬೇಕೆಂದು ಸ್ತ್ರೀಯರಿಗೆ ಹೇಳುವ ಆದೇಶದಲ್ಲಿ ಮೇಲಿನ ಸೌಲಭ್ಯವಿದೆ.

೮) ಪತಿಸೇವೆಯಿಂದ ಕೌಶಿಕ ಬ್ರಾಹ್ಮಣನ ಪುರಾ ವೃತ್ತವನ್ನೇ ಗ್ರಹಿಸುವ ಸಾಮರ್ಥ್ಯ ಪಡೆದಿದ್ದಳು. ಬ್ರಾಹ್ಮಣಸ್ತ್ರೀ ತಾನು ಕಾಣದ ನಡೆದ ಘಟನೆಯನ್ನು ಯಥಾವತ್ತಾಗಿ ನಿರೂಪಿಸಿ ಬ್ರಾಹ್ಮಣನಿಗೂ ಉಪದೇಶಿಸಿದ ಪತಿವ್ರತೆಯ ಮಹತ್ತ್ವವನ್ನು ಬ್ರಾಹ್ಮಣನೂ ಕೊಂಡಾಡುತ್ತಾನೆ. ಪತಿ ಸೇವೆಯಿಂದ ಹೀಗೆ ಶಾಸ್ತ್ರೋಕ್ತ ಐಶ್ವರ್ಯ ಸಿದ್ಧಿಗಳನ್ನು ಪಡೆಯಬಹುದು.

೯) ಬ್ರಾಹ್ಮಣ ತಪಸ್ವಿಯೂ, ಸ್ವಾಧ್ಯಾಯ ಸಂಪನ್ನನೂ (ವೇದಾಧ್ಯಯನ) ಆಗಿದ್ದರೂ, ಕೋಪದ ದಾಸನಾಗಿ ಗಳಿಸಿದ ಪುಣ್ಯ ಕಳೆದು ಕೊಳ್ಳುವ ಸ್ಥಿತಿಗೆ ತಲುಪುತ್ತಾನೆ.

೧೦) **ಶಾಸ್ತ್ರಾಧ್ಯಯನ ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ಜಿತೇಂದ್ರಿಯತ್ವ. ಜಿತೇಂದ್ರಿಯನಲ್ಲದವನು ಬ್ರಾಹ್ಮಣನಾಗಿ ಹುಟ್ಟಿದ್ದರೂ ಅವನು ಬ್ರಾಹ್ಮಣನೆಂದು ದೇವತೆಗಳು ಪರಿಗ್ರಹಿಸುವುದಿಲ್ಲವೆಂಬ ಪತಿವ್ರತೆಯ ಮಾತು ಎಲ್ಲ ಪುರುಷರಿಗೆ ಶಾಸ್ತ್ರ ಓದಿದವರಿಗೆ ಎಚ್ಚರಿಕೆಯ ಗಂಟೆಯಾಗಿದೆ!!**

೧೧) ಶಾಸ್ತ್ರಾಧ್ಯಯನವೆಂದಿಗೂ ಸ್ವೇಚ್ಛಾಚಾರಕ್ಕೆ ಕೊಟ್ಟ ಲೈಸೆನ್ಸ್ ಅಲ್ಲ (Licence) ಇಂತಹವನನ್ನು ಸಮಾಜ ದೂರ ಇಡುವುದು ಲೇಸು.

೧೨) ಪತಿವ್ರತೆಯು ಪತಿಸೇವೆಯ ಅವಸರದಲ್ಲಿ ಬ್ರಾಹ್ಮಣನಿಗೆ ಭಿಕ್ಷೆ ತರುವಲ್ಲಿ ತಡ ಮಾಡುತ್ತಾಳೆ. ತಾನೇ ನಿಲ್ಲಿಸಿದ್ದ ಆಕೆಗೆ ಅದರ ಅರಿವಾಗುತ್ತದೆ. **ಕರ್ತವ್ಯದ ಭರದಲ್ಲಿ ಮತ್ತೊಂದು ಕರ್ತವ್ಯ ಮರೆತುದ್ದಕ್ಕೆ ಕ್ಷಮೆಯನ್ನು ೩ ಬಾರಿ ಕೇಳುತ್ತಾಳೆ ಬ್ರಾಹ್ಮಣನನ್ನು.** ಆಕೆ ಪತಿಗೆ ಊಟ ಬಡಿಸುತ್ತಲೇ ಬ್ರಾಹ್ಮಣನಿಗೂ ಭಿಕ್ಷೆ ಕೊಡಬಹುದಿತ್ತೇನೋ ಎಂಬ ಧ್ವನಿ ಆಕೆಯ ಮಾತಿನಿಂದ ತೋರುತ್ತದೆ. ಆಕೆ (Time Management) ಮಾಡಿದ್ದರೆ ಬ್ರಾಹ್ಮಣನ ಕೋಪಕ್ಕೆ ಗುರಿಯಾಗುತ್ತಿದ್ದಿಲ್ಲವೇನೋ

೧೩) ಬ್ರಾಹ್ಮಣನ ಕೋಪದಿಂದ **'ಬಲಾಕಾ'** ಪಕ್ಷಿ ಸಾಯುತ್ತದೆ. ತನ್ನ ಕೋಪದಿಂದ ಆದ ಈ ಅನಾಹುತಕ್ಕೆ ಮರುಗಿ ಪಶ್ಚಾತ್ತಾಪ ಪಡುತ್ತಾನೆ. ಹೀಗೆ ಬ್ರಾಹ್ಮಣನೂ ಕೋಪದ ಪರಿಣಾಮ ತನ್ನ ತಪ್ಪಿನ ಅರಿವನ್ನು ಹೊಂದುತ್ತಾನೆ. ಆದ್ದರಿಂದ ತಪ್ಪು ಮಾಡುವುದು ಸಹಜವಾದರೂ ಅದರ ಬಗ್ಗೆ ಕೂಡಲೆ ಪಶ್ಚಾತ್ತಾಪ ಪಟ್ಟರೆ ಪಾಪ ಸಂಗ್ರಹ ಕಡಿಮೆಯಾದೀತು!!

೧೪) ಪಕ್ಷಿ ಪ್ರಸಂಗದ ನಂತರ ಬ್ರಾಹ್ಮಣ ಸಾಧ್ವಿಯಿಂದ ಭಿಕ್ಷೆಗೆ ಬಂದಾಗ ಮತ್ತೆ ಬ್ರಾಹ್ಮಣ ಎಡವುತ್ತಾನೆ. ಕೋಪತಾಪ ಪ್ರದರ್ಶಿಸಿ ಆ ಪತಿವ್ರತೆಯಿಂದಲೇ ಉಪದೇಶ ಪಡೆಯುತ್ತಾನೆ. ಪಕ್ಷಿಯನ್ನು ಕೊಂದ ಕೆಲವೇ ನಿಮಿಷಗಳಲ್ಲಿ ಮತ್ತೆ ಕೋಪತಾಪಕ್ಕೆ ವಶನಾದುದು ಬ್ರಾಹ್ಮಣನ ಅಪರಿಪಕ್ವತೆಯನ್ನು ತೋರಿಸುತ್ತದೆ. ಆದ್ದರಿಂದ ಕಾಮಕ್ರೋಧಗಳನ್ನು ಗೆಲ್ಲವುದು ಸುಲಭವಲ್ಲ. ದುರ್ಗುಣಗಳನ್ನು ಗೆಲ್ಲಲು ವಿಶೇಷ ಪ್ರಯತ್ನ ಬೇಕೇ ಹೊರತು ಯಾಂತ್ರಿಕವಾದ ಬರೀ ಶಾಸ್ತ್ರಾಧ್ಯಯನ ಸಾಲದು.

೧೫) ಬ್ರಾಹ್ಮಣಿಯು ಬ್ರಾಹ್ಮಣನಲ್ಲಿದ್ದ ಗುಣಗಳನ್ನು ದೋಷಗಳನ್ನು ವಿಮರ್ಶಿಸುತ್ತಾಳೆ. ದೋಷಗಳ ನಿವಾರಣೆಗೆ ಧರ್ಮವ್ಯಾಧನ ಬಳಿಗೆ ಹೋಗಲು ಸೂಚಿಸುತ್ತಾಳೆ. ತಾನು ಪತಿವ್ರತೆಯೆಂದು ಗರ್ವಿಷ್ಠಳಾಗದೆ ಶಾಂತವಾಗಿ ವರ್ತಿಸಿ ಮಾನ್ಯಳಾಗುತ್ತಾಳೆ. ತನ್ನ ತಪ್ಪಿನ ಬಗ್ಗೆ ಒಂದಲ್ಲ ಮೂರು ಬಾರಿ ನಿವೇದಿಸಿ ಕ್ಷಮೆ ಕೇಳುವ ಗುಣ ಗುಣವಂತರಲ್ಲಿಯೂ ಇರಬೇಕು. ಬರೀ **ದೋಷವನ್ನು ಇತರರಲ್ಲಿ ತೋರಿಸುವ ಬದಲು ತಾನೂ ವಿಮರ್ಶೆಗೆ ಒಳಪಡುವವನು ಎಂಬ ಅರಿವು ಇರಬೇಕು. ಏಕೆಂದರೆ ದೋಷ ರಹಿತರು ಹರಿವಾಯುಗಳು ಮಾತ್ರ.** ಉಳಿದವರೆಲ್ಲ ದೋಷಿಗಳೇ ಅದರಲ್ಲಿರುವ ತಾರತಮ್ಯವನ್ನು ಯಾರೂ ಮರೆಯುವಂತಿಲ್ಲ.

ಮಾರ್ಕಂಡೇಯರು ನುಡಿದರು–

ಧರ್ಮರಾಜನೇ! ಕೌಶಿಕನು ಬ್ರಾಹ್ಮಣಸ್ತ್ರೀಯು ತನ್ನ ಬಗ್ಗೆ ನುಡಿದುದನ್ನು ಸ್ಮರಿಸುತ್ತಾ ತನ್ನ ತಪ್ಪಿನ ಬಗ್ಗೆ ಪಶ್ಚಾತ್ತಾಪ ಪಡುತ್ತಾ ಧರ್ಮದ ಸೂಕ್ಷ್ಮತೆಗಳನ್ನು ತಿಳಿಯಲು ಆ ಪತಿವ್ರತೆ ತಿಳಿಸಿದಂತೆ ಮಿಥಿಲಾನಗರದಲ್ಲಿರುವ ತಪೋಧನನಾದ ವ್ಯಾಧನ ಬಳಿಗೆ

ಹೋಗಲು ನಿರ್ಧರಿಸಿದನು. ಮಿಥಿಲೆಗೆ ಹೊರಟ ಕೌಶಿಕನು ದಾರಿಯಲ್ಲಿ ಅನೇಕ ಗ್ರಾಮ, ನಗರ, ಅರಣ್ಯಗಳನ್ನು ದಾಟುತ್ತಾ ಜನಕ ಮಹಾರಾಜನಿಂದ ರಕ್ಷಿತವಾದ ಯಜ್ಞೋತ್ಸವಗಳಿಂದ ಶೋಭಿತವಾದ, ಗೋಪುರಗಳು, ಅರಮನೆಗಳು, ಬಹು ಮಹಡಿ ಕಟ್ಟಡಗಳೂ, ನಾನಾ ಅಂಗಡಿಗಳಿಂದಲೂ, ಕುದುರೆ, ಆನೆ, ರಥಾದಿಗಳಿಂದ ಸೇನೆಯಿಂದ ಶೋಭಾಯಮಾನವಾದ ನಗರವನ್ನು ಪ್ರವೇಶಿಸಿದನು. ಮಿಥಿಲಾ ನಗರದಲ್ಲಿ ನಿತ್ಯೋತ್ಸವಗಳಿಂದ ಕೂಡಿದ ಜನರ ಸಂದಣಿಯನ್ನು ನೋಡುತ್ತಾ ವ್ಯಾಧನ ವಾಸವಾಗಿರುವ ಪ್ರದೇಶವನ್ನು ಬ್ರಾಹ್ಮಣರಿಂದ ಕೇಳಿ ತಿಳಿದುಕೊಂಡು ಅಲ್ಲಿಗೆ ನಡೆದನು. ಪ್ರಾಣಿಗಳ ವಧೆಯ ಸ್ಥಳದಲ್ಲಿ ಕುಳಿತಿರುವ ತಪಸ್ವಿಯಾದ, ಎಮ್ಮೆ, ಮೃಗ (ಜಿಂಕೆ) ಗಳ ಮಾಂಸವನ್ನು ಮಾರುತ್ತಿರುವ, ಮಾಂಸಕೊಳ್ಳುವ ತುಂಬಾ ಜನರಿಂದ ಸುತ್ತುವರಿದ ವ್ಯಾಧವನ್ನು ನೋಡಿ ತಾನು ಸ್ವಲ್ಪ ದೂರ ಹೋಗಿ ಏಕಾಂತದಲ್ಲಿ ನಿಂತುಕೊಂಡನು.

**'ಚಿಂತಯಿತ್ವಾ ತದಾಶ್ಚರ್ಯಂ ಸ್ತ್ರಿಯಾ ಪ್ರೋಕ್ತಮಶೇಷತಃ ।**
**ವಿನಿಂದನ್ ಸ ಸ್ವಮಾತ್ಮಾನಮಾಗಸ್ಕೃತ ಇವಾಬಭೌ ।**
**ತಂ ಗಚ್ಛಾಮ್ಯಹಮದ್ಯೈವ ಧರ್ಮಂ ಪ್ರಷ್ಟುಂ ತಪೋಧನಮ್ ।**
**ಇತಿ ಸಂಚಿಂತ್ಯ ಮನಸಾ ಶ್ರದ್ಧಧಾನಃ ಸ್ತ್ರಿಯಾ ವಚಃ ।**
**ಸಂಪ್ರತಸ್ಥೇ ಸ ಮಿಥಿಲಾಂ ।........**
**ಅಪಶ್ಯತ್ತತ್ರ ಗತ್ವಾ ತಂ ಸೂನಾಮಧ್ಯೇ ವ್ಯವಸ್ಥಿತಂ ।**
**ಮಾರ್ಗಮಾಹಿಷಮಾಂಸಾನಿ ವಿಕ್ರೀಣಂತಂ ತಪಸ್ವಿನಂ ।**
**ಆಕುಲತ್ವಾಚ್ಚ ಕ್ರೇತೃಣಾಂ ಏಕಾಂತೇ ಸಂಸ್ಥಿತೋ ದ್ವಿಜಃ ॥**
**ವನಪರ್ವ ೨೦೭-೧,೩,೫,೧೦,೧೧**

ಆಗ ವ್ಯಾಧನು ತನ್ನನ್ನು ನೋಡಲು ಬಂದ ದ್ವಿಜನನ್ನು ನೋಡಿ ಕೂಡಲೆ ವಿಪ್ರನ ಬಳಿಗೆ ಹೋದನು.

**'ಸ ತು ಜ್ಞಾತ್ವಾ ದ್ವಿಜಂ ಪ್ರಾಪ್ತಂ.......**
**ಆಜಗಾಮ ಯತೋ ವಿಪ್ರಃ ಸ್ಥಿತ ಏಕಾಂತದರ್ಶನೇ' ೨೦೭-೧೨**

ಬ್ರಾಹ್ಮಣನನ್ನು ಕಂಡು ವ್ಯಾಧನು

'ಎಲೈ ದ್ವಿಜೋತ್ತಮ, ನಿನಗೆ ಸ್ವಾಗತ, ನಮಸ್ಕಾರ. ನಾನೇ ನೀನು ಭೇಟಿಯಾಗಲು ಬಯಸಿರುವ ವ್ಯಾಧ. ಬ್ರಾಹ್ಮಣ ಪತ್ನಿಯು ನಿನ್ನನ್ನು ಇಲ್ಲಿಗೆ ನನ್ನನ್ನು ನೋಡಲು ಕಳಿಸಿರುವುದನ್ನೂ ನಾನು ಬಲ್ಲೆ ಎಂದ. ಈ ಮಾತನ್ನು ಕೇಳಿದ ಕೂಡಲೆ ಬ್ರಾಹ್ಮಣನಿಗೆ **'ಇದು ಎರಡನೇ ಆಶ್ಚರ್ಯವೆಂದು ಭಾವಿಸಿದ.'** ವ್ಯಾಧನಾದರೋ ವಿಪ್ರನಿಗೆ 'ನಿನ್ನಂಥವನಿಗೆ ಇದು (ವಧಸ್ಥಾನವಾಸ) ಯೋಗ್ಯವಲ್ಲ. ನೀನು ಇಷ್ಟಪಟ್ಟಲ್ಲಿ ನಮ್ಮ ಮನೆಗೆ ಹೋಗೋಣ' ಎಂದ.

**'ಅಹಂ ವ್ಯಾಧೋ ಹಿ ಭದ್ರಂ ತೇ ಕಿಂ ಕರೋಮಿ ಪ್ರಶಾಧಿ ಮಾಂ ।**
**ಏಕಪತ್ನ್ಯಾ ಯದುಕ್ತೋಽಸಿ ಗಚ್ಛ ತ್ವಂ ಮಿಥಿಲಾಮಿತಿ ।**
**ಜಾನಾಮ್ಯೇತದಹಂ ಸರ್ವಂ ಯದರ್ಥಂ ತ್ವಮಿಹಾಗತಃ ।**
**ಶೃತ್ವಾ ಚ ತಸ್ಯ ತದ್ವಾಕ್ಯಂ ಸ ವಿಪ್ರೋ ಭೃಶವಿಸ್ಮಿತಃ ।**
**ದ್ವಿತೀಯ ಮಿದಮಾಶ್ಚರ್ಯಮಿತ್ಯಚಿಂತಯತ ದ್ವಿಜಃ ।**
**ಅದೇಶಸ್ಥಂ ಹಿ ತೇ ಸ್ಥಾನಂ ಇತಿ ವ್ಯಾಧೋಽಬ್ರವೀದಿದಂ**
**ಗೃಹಂ ಗಚ್ಛಾವ ಭಗವನ್ ಯದಿ ತೇ ರೋಚತೇಽನಘ' ॥**

**ಅ– ೨೦೭–೧೩ ರಿಂದ ೧೬**

ನಂತರ ವ್ಯಾಧನು ಬ್ರಾಹ್ಮಣನನ್ನು ಕರೆದುಕೊಂಡು ಹೋಗಿ ಅರ್ಘ್ಯಪಾದ್ಯ ಆಸನಗಳಿಂದ ಪೂಜಿಸಿದ. ವ್ಯಾಧನ ಉಪಚಾರಗಳನ್ನು ಸ್ವೀಕರಿಸಿದ ಬ್ರಾಹ್ಮಣನು ' ಈ ಘೋರವಾದ ನಿನ್ನ ಕರ್ಮ (ಮಾಂಸಮಾರಾಟ) ನಿನಗೆ ಉಚಿತವೆನಿಸದು ಎಂದು ನನಗನಿಸುತ್ತದೆ. ನಿನ್ನ ಕಾರ್ಯನೋಡಿ ನನಗೆ ತುಂಬಾ ಸಂತಾಪವಾಗುತ್ತಿದೆ' ಎಂದ ಅದಕ್ಕೆ ವ್ಯಾಧನು 'ಬ್ರಹ್ಮನ್, ಇದು ನನಗೆ ವಂಶಾನುಗತವಾಗಿ ಬಂದ ಕುಲಕರ್ಮ. ಆ ಬಗ್ಗೆ ನೀನು ಸಂತಾಪ ಪಡಬೇಡ'

**ಕುಲೋಚಿತಮಿದಂ ಕರ್ಮ ಪಿತೃಪೈತಾಮಹಂ ಪರಂ ।**
**ವರ್ತಮಾನಸ್ಯ ಮೇ ಧರ್ಮೇ ಸ್ವೇ ಮನ್ಯುಂ ಮಾ ಕೃಥಾ ದ್ವಿಜ ॥**

**ಅ.೨೦೭/೨೦**

ಇದು ನಾನಾಗಿಯೇ ಆರಿಸಿಕೊಂಡ ವೃತ್ತಿಯಲ್ಲ. ಬ್ರಹ್ಮನಿಂದ ಕುಲಕ್ಕೆ ವಿಹಿತವೃತ್ತಿ. ಅದನ್ನೇ ನಾನು ಪರಿಪಾಲಿಸುತ್ತಾ ವೃದ್ಧರಾದ ತಂದೆ ತಾಯಿಗಳನ್ನು ಭಕ್ತಿಯಿಂದ ಸೇವಿಸುತ್ತಿದ್ದೇನೆ. ನಾನು ಸತ್ಯವನ್ನು ಹೇಳುತ್ತೇನೆ. ಯಾರ ವಿಷಯದಲ್ಲೂ ಅಸೂಯೆ ಪಡುವುದಿಲ್ಲ. ದೇವತೆ ಅತಿಥಿ ಅಭ್ಯಾಗತರು ಹೀಗೆ ಎಲ್ಲರಿಗೂ ಅನ್ನದಾನ ಮಾಡಿದ ಮೇಲೆ ಉಳಿದುದನ್ನು ನಾನು ಉಣ್ಣುತ್ತೇನೆ.

**'ವಿಧಾತ್ರಾ ವಿಹಿತಂ ಪೂರ್ವಂ ಕರ್ಮ ಸ್ವಮನುಪಾಲಯನ್ ।**
**ಪ್ರಯತ್ನಾಚ್ಚ ಗುರೂವೃದ್ಧೌ ಶುಶ್ರೂಷೇಽಹಂ ದ್ವಿಜೋತ್ತಮ ।**
**ಸತ್ಯಂವದೇ ನಾಭ್ಯಸೂಯೇ ಯಥಾಶಕ್ತಿ ದದಾಮಿ ಚ ।**
**ದೇವತಾತಿಥಿಭೃತ್ಯಾನಾನಾಮವಶೇಷೇನ ವರ್ತಯೇ । ಅ– ೨೦೭–೨೧,೨೨**

ನಾನು ವಾಸವಾಗಿರುವ ಜನಕ ರಾಜ್ಯದಲ್ಲಿ ಯಾರೂ ವರ್ಣಾಶ್ರಮಗಳಿಂದ ಭ್ರಷ್ಟರಾಗಿಲ್ಲ. ನಮ್ಮ ರಾಜನು 'ತನ್ನ ಮಗನೇ ಕೆಟ್ಟ ನಡತೆಯವನಾದರೂ ಶಿಕ್ಷಿಸದೆ ಇರುವುದಿಲ್ಲ. ಧಾರ್ಮಿಕನನ್ನು ಶಿಕ್ಷಿಸುವುದಿಲ್ಲ. ನಾನಾದರೂ ವ್ಯಾಧ. ಮಾಂಸ ಮಾರಿ ಜೀವಿಸುತ್ತೇನೆ. ಪ್ರಾಣಿಗಳನ್ನು ಮಾತ್ರ ಕೊಲ್ಲುವುದಿಲ್ಲ.

**ಪರೇಣ ಹಿ ಹತಾನ್ ಬ್ರಹ್ಮನ್**
**ನ ಸ್ವಯಂ ಹನ್ಮಿ ವಿಪ್ರರ್ಷೇ ವಿಕ್ರೇಣಾಮಿ ಸದಾ ತ್ವಹಮ್ । ಅ–೨೦೭–೩೨**

ನಾನು ಮಾಂಸಹಾರಿಯೂ ಅಲ್ಲ. ಎಂದೂ ಮಾಂಸ ತಿಂದಿಲ್ಲ. ಋತು ಕಾಲದಲ್ಲಿ ಮಾತ್ರ ಪತ್ನಿಯ ಸಂಗಮ ಮಾಡುವೆ, ಹಗಲು ಊಟ ಮಾಡದೇ ಕೇವಲ ರಾತ್ರಿ ಮಾತ್ರ ಭೋಜನ ಮಾಡುತ್ತೇನೆ.

**'ನ ಭಕ್ಷಯಾಮಿ ಮಾಂಸಾನಿ ಋತುಗಾಮೀ ತಥಾ ಹ್ಯಹಂ ।**
**ಸದೋಪವಾಸೀ ಚ ತಥಾ ನಕ್ತಭೋಜೀ ಸದಾ ದ್ವಿಜ' ॥ ಅ-೨೦೬-೩೩**

'ನನ್ನನ್ನು ಹೊಗಳುವವರನ್ನೂ, ನಿಂದಿಸುವವರನ್ನೂ ನಾನು ಯೋಗ್ಯರೀತಿಯಿಂದ ಸತ್ಕರಿಸುತ್ತೇನೆ.'

ಹೀಗೆ ಪಾಪ ಪುಣ್ಯ ಪ್ರಜ್ಞೆ ಅವುಗಳನ್ನು ಹೇಗೆ ಜೀವನದಲ್ಲಿ ಅರಿಯಬೇಕು? ಸಮಾಜದಲ್ಲಿ ಹೇಗೆ ಬದುಕಬೇಕು? ಬೇರೆಯವರ ತಪ್ಪುಗಳನ್ನು ತೋರಿಸದೇ ತನ್ನನ್ನು ಹೊಗಳದೆ ಬದುಕುವುದನ್ನು ವ್ಯಾಧನು ಬ್ರಾಹ್ಮಣನಿಗೆ ತಿಳಿಸುತ್ತಾನೆ. ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವೆಂದರೆ ತನ್ನ ಪಾಪಗಳ ಅರಿವೆಂದೇ ಬೋಧಿಸುತ್ತಾನೆ ಮುಂದೆಂದೂ ಅಂತಹ ಪಾಪಗಳನ್ನು ಮಾಡಬಾರದೆಂಬ ಪ್ರಜ್ಞೆಯನ್ನು ತಿಳಿಸುತ್ತಾನೆ. ಪಾಪ ಮಾಡಿದರೂ ಮಾಡಿಲ್ಲವೆಂದು ತಿಳಿಯಬಹುದು ಆದರೆ ದೇವತೆಗಳು ನಾವು ಮಾಡುವ ಪಾಪಗಳನ್ನು (ಪುಣ್ಯಗಳನ್ನು) ನೋಡುತ್ತಿರುತ್ತಾರೆ. ನಮ್ಮ ಅಂತರ್ಯಾಮಿ ಪರಮಾತ್ಮನೂ ನೋಡುತ್ತಿರುತ್ತಾನೆ. ಇವರನ್ನು ಮೋಸ ಮಾಡಲು ಸಾಧ್ಯವಿಲ್ಲ. ಪವಿತ್ರಾತ್ಮರೆಂದು ಸಮಾಜಕ್ಕೆ ತೋರಿಸುವವರು ಶಿಷ್ಟಾಚಾರ ವಿರೋಧಿಗಳೇ ಬಲ್ಲವರು ಮಾತ್ರ ಪ್ರಾಮಾಣಿಕವಾಗಿ ಬದುಕುತ್ತಾರೆ ಎಂದೆಲ್ಲ ತಿಳಿಸಿದಾಗ ಬ್ರಾಹ್ಮಣನು ಶಿಷ್ಟಾಚಾರದ ಬಗ್ಗೆ ವಿವರಿಸಲು ಪ್ರಾರ್ಥಿಸುತ್ತಾನೆ. ಆಗ ವ್ಯಾಧನು ಶಿಷ್ಟಾಚಾರ ಸಂಪನ್ನರು ಯಾರೆಂದರೆ

೧. ಯಜ್ಞಶೀಲರು, ದಾನಶೀಲರು, ತಪಸ್ಸನ್ನು ಮಾಡುವವರು, ಸತ್ಯ ನಿಷ್ಠೆ ಹಾಗೂ ವೇದಾಧ್ಯಯನ ಸಂಪನ್ನರು ಎಂದು ತಿಳಿಸುತ್ತಾನೆ.

೨. ಕಾಮಕ್ರೋಧಗಳನ್ನು ವಶದಲ್ಲಿಟ್ಟುಕೊಂಡು, ಲೋಭ, ಅಪ್ರಾಮಾಣಿಕತೆ, ದಂಭ ಬಿಟ್ಟು ಧರ್ಮವೇ ಮುಖ್ಯವೆಂದು ತಿಳಿದಿರುತ್ತಾರೆ.

೩. ಗುರುಸೇವೆ, ಸತ್ಯ ಪರಿಪಾಲನೆ, ಕ್ರೋಧವಿಲ್ಲದಿರುವುದು, ದಾನಶೀಲತೆ-ಗಳುಳ್ಳವರು.

ಮುಂದುವರೆದು ಧರ್ಮದ ವ್ಯಾಖ್ಯಾನ ಮಾಡುತ್ತಾನೆ.

**ವೇದೋಕ್ತಃ ಪರಮೋಧರ್ಮಃ ಧರ್ಮಶಾಸ್ತ್ರೇಷು ಚಾಪರಃ ।**
**ಶಿಷ್ಟಾಚಾರಶ್ಚ ಶಿಷ್ಟಾನಾಂ ತ್ರಿವಿಧಂ ಧರ್ಮ ಲಕ್ಷಣಂ ॥ ಅ-೨೦೬-೮೩**

೧. ವೇದೋಕ್ತವಾದುದು ಅತಿಶ್ರೇಷ್ಠ ಧರ್ಮ, ಮನ್ವಾದಿಸ್ಮೃತಿಗಳಲ್ಲಿ ಹೇಳಿದುದೂ ಧರ್ಮ. ಅಲ್ಲದೇ ಶಿಷ್ಟಾಚಾರ ಪ್ರಾಪ್ತವಾದುದು ಅಲಿಖಿತ ಧರ್ಮ ಲಕ್ಷಣವಾಗಿದೆ.

೨. ವಿದ್ಯಾಧ್ಯಯನ, ತೀರ್ಥಸ್ನಾನ, ಕ್ಷಮೆ, ಸತ್ಯನಿಷ್ಠೆ, ಮನೋವಾಕ್ಕಾಯ ಕರ್ಮಗಳಲ್ಲಿ ಒಂದೇ ತೆರನಾಗಿರುವುದು ದೈಹಿಕ, ಮಾನಸಿಕ ಶೌಚಗಳು ಸಜ್ಜನರ ಆಚಾರಗಳಾಗಿವೆ.

೩. ಸರ್ವಭೂತ ದಯೆ, ಅಹಿಂಸಾ, ಸೌಮ್ಯ ಭಾಷಣಗಳು ಶಿಷ್ಟರ ಲಕ್ಷಣ

೪. ಶಿಷ್ಟಾಚಾರ ಸಂಪನ್ನನ ಧರ್ಮಗಳು ಮೂರು (೧) ಯಾರಿಗೂ ಯಾವಾಗಲೂ ತೊಂದರೆ ಕೊಡದಿರುವುದು, (೨) ಶಕ್ತಿ ಮೀರಿ ದಾನ ಮಾಡುವುದು (೩) ಸತ್ಯ ನಿಷ್ಠತೆ.

**'ತ್ರೀಣ್ಯೇನ ತು ಪದಾನ್ಯಾಹುಃ ಸತಾಂ ವ್ರತಮನುತ್ತಮಮ್ ।**
**ನ ಚೈವ ದ್ರುಹ್ಯೇದ್ದದ್ಯಾಚ್ಚ ಸತ್ಯಂ ಚೈವ ಸದಾವದೇತ್' ॥ ಅ-೨೦೭-೯೩**

ಹೀಗೆ ಶಿಷ್ಟಾಚಾರ, ಧರ್ಮಗಳನ್ನು ತಿಳಿದು ಶಿಷ್ಟರ ಸಹವಾಸ ಮಾಡುವುದೇ ಸರ್ವಶ್ರೇಷ್ಠ ಧರ್ಮ ಎಂದನು.

ಮಾರ್ಕಂಡೇಯರು ಮುಂದುವರೆದು –

ಶಾಸ್ತ್ರ, ತತ್ತ್ವಗಳನ್ನು ಇನ್ನೂ ತಿಳಿಯಬಯಸಿದ ಬ್ರಾಹ್ಮಣನಿಗೆ ಮುಂದಿನ ಏಳು ಅಧ್ಯಾಯಗಳಲ್ಲಿ ವಿಸ್ತಾರವಾಗಿ ಹಿಂಸೆ–ಅಹಿಂಸೆ, ಧರ್ಮದ ಸೂಕ್ಷ್ಮ ತತ್ತ್ವಗಳನ್ನು, ಕರ್ಮ ಫಲಗಳನ್ನೂ, ವಿಷಯ ಸುಖ ಸೇವಿಸುವುದು, ಸತ್ಸಂಗದಿಂದಾಗುವ ಲಾಭಗಳ ಬಗ್ಗೆ, ಬ್ರಹ್ಮ ವಿದ್ಯೆ ಕುರಿತು, ಪಂಚಭೂತಗಳು, ಇಂದ್ರಿಯ ನಿಗ್ರಹ, ಸತ್ತ್ವ ರಜಸ್ತಮೋ ಗುಣಗಳ ಸ್ವರೂಪ ಹಾಗೂ ಅವುಗಳ ಫಲ, ಪರಮಾತ್ಮ ಸಾಕ್ಷಾತ್ಕಾರಗಳನ್ನು ಕುರಿತು ವಿಸ್ತಾರವಾಗಿ ಧರ್ಮವ್ಯಾಧ ವಿವರಿಸುತ್ತಾನೆ.

ಬ್ರಾಹ್ಮಣನು ಪ್ರಶ್ನಿಸಿದ, ಧರ್ಮವ್ಯಾಧನು ಆಚರಿಸುತ್ತಿರುವ ಮಾಂಸ ವ್ಯಾಪಾರದಂಥ ಕ್ರೂರ ವೃತ್ತಿಯ ಬಗ್ಗೆ ವಿವರಿಸುತ್ತಾನೆ.

ಎಲೈ ಬ್ರಾಹ್ಮಣನೇ! ನಿಜ, ನನ್ನ ವೃತ್ತಿಯು ಅತಿ ಕ್ರೂರವಾದುದು. ಆದರೆ ವಿಧಿ ಬರಹ ತಪ್ಪಿಸಲು ಯಾರಿಗೂ ಅಸಾಧ್ಯ. ನನ್ನ ಪೂರ್ವಜನ್ಮಪಾಪದ ಫಲವಾಗಿ ನಾನಿಂಥ ಕರ್ಮದಲ್ಲಿರಬೇಕಾಗಿದೆ. ಆದರೂ ಆ ಪಾಪ ನಿವಾರಣೆಗೆ ನಾನು ಪ್ರಯತ್ನಿಸುತ್ತಿದ್ದೇನೆ ಎಂದು ಧರ್ಮವ್ಯಾಧ ಹೇಳುತ್ತಾನೆ.

**'ವಿಧಿಸ್ತು ಬಲವಾನ್ ಬ್ರಹ್ಮನ್ ದುಸ್ತರಂ ಹಿ ಪುರಾ ಕೃತಂ ।**
**ಪುರಾಕೃತಸ್ಯ ಪಾಪಸ್ಯ ಕರ್ಮದೋಷೋ ಭವತ್ಯಯಂ ।**
**ದೋಷಸ್ಯೈತಸ್ಯ ವೈ ಬ್ರಹ್ಮನ್ ವಿಘಾತೇ ಯತ್ನವಾನಹಂ' ॥ –೨೦೮/೨,೩**

ಜೀವಿ ನಿಮಿತ್ತ ಮಾತ್ರ, ಕಟುಕ ಮೊದಲಾದವರಿಂದ ಸಾಯುವ ಜೀವಿಯು ಮೊದಲೇ ನಿಶ್ಚಿತವಾಗಿರುತ್ತದೆ. ಯಾರು ಯಾರಿಂದ ಕೊಲ್ಲಲ್ಪಡಬೇಕೆಂಬುದು

ಮೊದಲೇ ಭಗವಂತನಿಂದ ಆಯಾ ಜೀವಿಗಳ ಪೂರ್ವ ಕರ್ಮಾನುಸಾರವಾಗಿ ನಿಶ್ಚಿತವಾಗಿರುತ್ತದೆ. ಅದನ್ನು ಯಾರೂ ತಪ್ಪಿಸಲು ಸಾಧ್ಯವಿಲ್ಲ.

೧. ಸತ್ತ ಪ್ರಾಣಿಗಳ ಮಾಂಸವು ಸೂಕ್ತ ಸಂಸ್ಕೃತವಾಗಿ ಭಗವಂತನಿಗೆ ನಿವೇದಿತವಾಗಿ ತಿನ್ನಲ್ಪಟ್ಟಾಗ ಆ ಪ್ರಾಣಿಗಳ ಪಾಪಗಳೂ ಯಥಾಯೋಗ್ಯ ನಾಶವಾಗುತ್ತವೆ. ಎಂದರೆ ಆ ಮಾಂಸ ದೇವತಾ, ಅತಿಥಿ, ಪಿತೃಗಳಿಗೆ ಉಪಯೋಗವಾಗಬೇಕು ಆಗ ಮಾತ್ರ.

೨. ಮಾಂಸ ಮಾತ್ರವಲ್ಲ, ಸಸ್ಯಗಳೂ, ಜಿಂಕೆಗಳು, ಪಶು ಪಕ್ಷಿಗಳೂ, ಪ್ರಾಣಿಗಳಿಗೆ ಆಹಾರವೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿದೆ.

೩. ತನ್ನ ಮಾಂಸ ದಾನ ಮಾಡಿದ ಶಿಬಿ ಚಕ್ರವರ್ತಿ ಸ್ವರ್ಗ ಹೊಂದಿದ

೪. ಯಜ್ಞ ಯಾಗಾದಿಗಳಲ್ಲಿ ಪಶು ಬಲಿ ಕೊಡುತ್ತಾರಷ್ಟೆ. ಆ ಪಶುಗಳು ಮಂತ್ರ ಸಂಸ್ಕೃತವಾಗುವುದರಿಂದ ಅವುಗಳು ಸ್ವರ್ಗ ಹೊಂದಿದವು (ಎಂದು ಇತಿಹಾಸ)

೫) ಶ್ರಾದ್ಧ ಯಜ್ಞಗಳಲ್ಲಿನ ಮಾಂಸ ಭಕ್ಷಣ ಮಾಡಿದರೂ ಭಕ್ಷಣ ಮಾಡಿದವನು **'ಅಮಾಂಸಾಶೀ'** (ಮಾಂಸ ತಿನ್ನದವನು) ಎಂದೇ ಕರೆಯಲ್ಪಡುತ್ತಾನೆ. (ಆದರೆ ಕಲಿಯುಗದಲ್ಲಿ ಈ ಕಾರ್ಯಗಳಲ್ಲಿ ಮಾಂಸದ ವಿನಿಯೋಗ ನಿಷಿದ್ಧವಾಗಿದೆ. ಆದ್ದರಿಂದ ಇದು ಉಪಯೋಗಿಸಲ್ಪಡುತ್ತಿಲ್ಲ).

ಯಾವ ರೀತಿಯಾಗಿ ಋತು ಕಾಲದಲ್ಲಿ ಮಾತ್ರ ಪತ್ನಿ ಗಮನ ಮಾಡುವವನನ್ನು ಬ್ರಹ್ಮಚಾರಿ ಎಂದೇ ಶಾಸ್ತ್ರ ಹೇಳುತ್ತವೆಯೇ ಹಾಗೆ ಮೇಲಿನ ಮಾಂಸ ಭಕ್ಷಣ ವಿಷಯವನ್ನು ತಿಳಿಸಲಾಗಿದೆ.

ನನ್ನ ಸ್ವಧರ್ಮ ಎಂದು ಭಾವಿಸಿ ನಾನು ನನ್ನ ಕರ್ಮಾಚರಣೆ ಮಾಡುತ್ತಿದ್ದೇನೆ. ಆದ್ದರಿಂದ ಇದೇ ನನಗೆ ಸ್ವಧರ್ಮ. ಇದರ ತ್ಯಾಗವೇ ಅಧರ್ಮ.

**'ನಿಮಿತ್ತಭೂತಾ ಹಿ ವಯಂ ಕರ್ಮಣೋಽಸ್ಯ ದ್ವಿಜೋತ್ತಮ ।**
**ಯೇಷಾಂ ಹತಾನಾಂ ಮಾಂಸಾನಿ..........**
**ತೇಷಾಮಪಿ ಭವೇದ್ಧರ್ಮ ಉಪಯೋಗೇ ನ ಭಕ್ಷಣೇ ।**
**ದೇವತಾತಿಥಿ ಭೃತ್ಯಾನಾಂ ಪಿತೃಣಾಂ ಚಾಪಿ ಪೂಜನಂ ॥** ೨೦೮-೪,೫

**'ಆತ್ಮಮಾಂಸ ಪ್ರಸಾದೇನ ಶಿಬಿಕೌಶೀನರೋ ನೃಪಃ ।**
**ಸ್ವರ್ಗಂ ಸುದುರ್ಗಮಂ ಪ್ರಾಪ್ತಃ'...** ೨೦೮-೭

**'ದೇವತಾನಾಂ ಪಿತೃಣಾಂ ಚ ಭು ಕ್ತೇ ದತ್ತ್ವಾಪಿ ಯಃ ಸದಾ ।**
**ಯಥಾವಿಧಿ ಯಥಾಶ್ರಾದ್ಧಂ ನ ಪ್ರದುಷ್ಯತಿ ಭಕ್ಷಣಾತ್ ।**
**ಅಮಾಂಸಾಶೀ ಭವತ್ಯೇವಮಿತ್ಯಪಿ ಶ್ರೂಯತೇ ಶ್ರುತಿಃ' ॥** ೨೦೮-೧೪

[೧]'ಭಾರ್ಯಾಂ ಗಚ್ಛನ್ ಬ್ರಹ್ಮಚಾರೀ ಋತೌ ಭವತಿ ಬ್ರಾಹ್ಮಣ'।

'ಸ್ವಕರ್ಮ ತ್ಯಜತೋ ಬ್ರಹ್ಮನ್ನಧರ್ಮ ಇಹ ದೃಶ್ಯತೇ ।
ಸ್ವಕರ್ಮ ನಿರತೋ ಯಸ್ತು ಧರ್ಮ ಸ ಇತಿ ನಿಶ್ಚಯಃ' ॥ ೨೦೮-೯

ನೋಡು! ಬ್ರಾಹ್ಮಣ! ನಾವು ಮಾಡುತ್ತಿರುವ ಕ್ರೂರ ಕರ್ಮಗಳ ಬಗ್ಗೆ ಅದರಿಂದ ಹೇಗೆ ಪಾರಾಗಬೇಕು ಎಂದು ಯೋಚಿಸಬೇಕು. ಅದರಿಂದ ಪಾರಾಗಲು ನಾನು ದಾನ, ಸತ್ಯವಾಕ್ಯ, (ಹಾಸ್ಯಕ್ಕಾದರೂ ಸುಳ್ಳನ್ನು ಹೇಳದಿರುವುದು), ಗುರುಸೇವೆ, ಬ್ರಾಹ್ಮಣ ಪೂಜೆ, ಧರ್ಮರತಿ, ಅಭಿಮಾನ ತ್ಯಾಗ, ಕುತರ್ಕ ತ್ಯಾಗವೆಂಬ ಧರ್ಮಗಳನ್ನು ಆಚರಿಸುತ್ತಿದ್ದೇನೆ.

'ದಾನೇ ಚ ಸತ್ಯವಾಕ್ಯೇ ಚ ಗುರುಶುಶ್ರೂಷಣೇ ತಥಾ ।
ದ್ವಿಜಾತಿ ಪೂಜನೇ ಚಾಹಂ ಧರ್ಮೇ ಚ ನಿರತಃ ಸದಾ ।
ಅಭಿಮಾನಾತಿವಾದಾಭ್ಯಾಂ ನಿವೃತ್ತೋಽಸ್ಮಿ ದ್ವಿಜೋತ್ತಮ' ॥ ೨೦೮-೧೩

ವೃತ್ತಿಯಲ್ಲೂ (ಭೂಮಿ ಉಳುವಾಗ ಹಾಗೂ ಇತರ ಕಡೆ) ಹಿಂಸೆ ಇದ್ದೇ ಇದೆ. ನಾವು ತಿನ್ನುವ ದವಸ ಧಾನ್ಯಗಳೂ ಜೀವಿಗಳೇ. ನಾವು ತಿನ್ನುವುದೂ ಜೀವಿಗಳನ್ನು. ಆದ್ದರಿಂದ ಹಿಂಸಾರಹಿತವಾದ ಭಕ್ಷಣ ಇಲ್ಲವೇ ಇಲ್ಲ. ಕೇವಲ ಮಾಂಸ ಭಕ್ಷಣೆ ಮಾತ್ರ ಹಿಂಸೆ ಎಂದು ಭಾವಿಸಬೇಡ.

'ಕೃಷಿಂ ಸಾಧ್ವಿತಿ ಮನ್ಯಂತೇ ತತ್ರ ಹಿಂಸಾ ಪರಾ ಸ್ಮೃತಾ'।

'ಧಾನ್ಯ ಬೀಜಾನಿ ಯಾನ್ಯಾಹುರ್ವ್ರೀಹ್ಯಾದೀನಿ ದ್ವಿಜೋತ್ತಮ ।
ಸರ್ವಾಣ್ಯೇತಾನಿ ಜೀವಾನಿ ತತ್ರ ಕಿಂ ಪ್ರತಿಭಾತಿ ತೇ' ॥ ೨೦೮-೧೫

ಭೂಮಿ, ಆಕಾಶ, ಜಲ (ನಿಧಿ) ಗಳಲ್ಲಿ ಅನೇಕ ತರಹದ ಜೀವಿಗಳಿವೆ. ಅವೆಲ್ಲವೂ ಪ್ರಾಣಿಗಳಿಂದಲೇ ಜೀವಿಸುತ್ತವೆ. ಹೀಗೆ ಎಲ್ಲ ಪ್ರಾಣಿಗಳಿಗೂ ಪ್ರಾಣಿಗಳಿಂದಲೇ ಜೀವನ.

'ಸರ್ವಂ ವ್ಯಾಪ್ತಮಿದಂ ಬ್ರಹ್ಮನ್ ಪ್ರಾಣಿಭಿಃ ಪ್ರಾಣಿಜೀವನೈಃ' । ೨೦೮-೧೮

ಮನುಷ್ಯರು ಓಡಾಡುವಾಗ, ಕುಳಿತಾಗ, ಮಲಗಿದಾಗ ಕಾಲುಗಳಿಂದ ಪ್ರಾಣಿಗಳನ್ನು ಕೊಲ್ಲುವುದಿಲ್ಲವೇ? ತಿಳಿದೂ, ತಿಳಿಯದೆ ನರರು ಪ್ರಾಣಿಗಳನ್ನು ಕೊಲ್ಲುತ್ತಿರುತ್ತಾರೆ. ಪ್ರಪಂಚದಲ್ಲಿ ಪ್ರಾಣಿ ಹಿಂಸಿಸದವರು ಒಬ್ಬನೂ ಇಲ್ಲ. ಅಹಿಂಸಾವ್ರತಧಾರಿಗಳಾದ ಯತಿಗಳೂ ಪ್ರಾಣಿ ಹಿಂಸೆಯನ್ನು ಅನಿವಾರ್ಯವಾಗಿ ಮಾಡುತ್ತಾರೆ. ಸಜ್ಜನ-ದುರ್ಜನರು, ಕೂಡಾ ತಮಗೆ ಆಗದವರನ್ನು ನಿಂದಿಸುತ್ತಾರೆ. ವಾಚಾ ಮನಸಾ ಹಿಂಸೆ ನೀಡುತ್ತಾರೆ. ಹೀಗಿರುವಾಗ **'ಪೂರ್ಣ ಅಹಿಂಸೆ'** ಎಂಬುದು ಜಗತ್ತಿನಲ್ಲಿ ಎಲ್ಲಿದೆ? ಎಂದು ಇದರ ಭಾವ. ಹೀಗೆ ಹಿಂಸಾಹಿಂಸೆಗಳ ವಿವೇಕವನ್ನು ಬ್ರಾಹ್ಮಣನಿಗೆ

೧ ಇದು ಟಿ.ಆರ್.ಕೃಷ್ಣಾಚಾರ್ಯರ ಪ್ರಕಾಶನದಲ್ಲಿದೆ.

ತಿಳಿಸಿದ ಧರ್ಮವಾಧನ ಮಾತುಗಳ ಮೂಲಕ ಮಹಾಭಾರತವು 'ಅಹಿಂಸಾ ಪರಮೋಧರ್ಮಃ' ಎಂಬ **ಜೈನಮತವನ್ನು ನಿರಾಕರಿಸುತ್ತದೆ**. ಇದರರ್ಥ ಹಿಂಸೆಯೇ ಧರ್ಮವೆಂದೂ ಅಲ್ಲ, ಒಂದು ಮಿತವಾದ ಅರ್ಥದಲ್ಲಿ ಈ ತತ್ತ್ವವು ಸರಿ ಎನ್ನುವುದು ತಾತ್ಪರ್ಯ.

### ಧರ್ಮಾಧರ್ಮಗಳ ಸೂಕ್ಷ್ಮ ಪ್ರಮೇಯಗಳು:–

ಮುಂದುವರಿದ ಧರ್ಮವ್ಯಾಧನು ಬ್ರಾಹ್ಮಣನಿಗೆ ತಿಳಿಸುತ್ತಾನೆ.

೧. ಧರ್ಮನಿರ್ಧಾರ ಮಾಡುವುದು ಶ್ರುತಿಯೇ ಹೊರತು ಪ್ರತ್ಯಕ್ಷಾನುಮಾನ ಪ್ರಮಾಣಗಳಲ್ಲ. ಕಾರಣ ಧರ್ಮವು ಅತೀಂದ್ರಿಯ ವಸ್ತು. ಇದೇ ಧರ್ಮಜ್ಞರ ಅಭಿಪ್ರಾಯ. ಧರ್ಮದ ಸ್ವರೂಪ ಬಹು ವಿಧವಾದುದು. ಅನಂತವೂ ಹೌದು.

೨. ಸತ್ಯವೇ ಯಾವಾಗಲೂ ಹೇಳಬೇಕೆಂಬುದು ನಿಜ. ಆದರೆ ವಿವಾಹ ಕಾಲದಲ್ಲಿ ಪ್ರಾಣ ಹೋಗುವ ಸಂದರ್ಭದಲ್ಲಿ ಸುಳ್ಳು ಹೇಳಿದರೂ ತಪ್ಪಲ್ಲ. ಅದು ಆಗ ಸತ್ಯವೇ ಸರಿ.

೩. ಯಾವುದರಿಂದ ಪ್ರಾಣಿಗಳಿಗೆ ಹಿತವಾಗುತ್ತದೆಯೇ ಅದುವೇ ಸತ್ಯವೇ ಹೊರತು ಯಾಂತ್ರಿಕ ವಾಸ್ತವ ಮಾತುಗಳಲ್ಲ.

೪. ಮನುಷ್ಯನಿಗೆ ಆಗುವ ಶುಭಾಶುಭ ಫಲಗಳು ಅವನು ಹಿಂದೆ ಮಾಡಿದ ಶುಭಾ ಶುಭ ಕರ್ಮಗಳಿಗೆ ಅನುಗುಣವಾಗಿರುತ್ತದೆ. ಅಜ್ಞಾನಿಯು ತನಗೆ ಬರುವ ಅಶುಭ ಫಲಗಳಿಗೆ ದೈವವನ್ನು ಹಳಿಯುತ್ತ ಶುಭ ಫಲಗಳು ಬಂದಾಗ ತನ್ನ ಪ್ರಭಾವವೆಂದು ಬಗೆದು ಪಾಪ ಭಾಗಿಯಾಗುತ್ತಾನೆ. ಮೂಢನು ಸುಖವಾದಾಗ ಹಿಗ್ಗಿ ದುಃಖವಾದಾಗ ಕುಗ್ಗುತ್ತಾನೆ. ತಾನು ಸ್ವತಂತ್ರನು ಎಂದು ಭಾವಿಸುವ ಮೂರ್ಖನು ತಾನು ಬಯಸಿದ್ದೆಲ್ಲವನ್ನೂ ಸಿಗದೆಂದು ತಿಳಿಯುವುದೇ ಇಲ್ಲ. ಪುರುಷ ಪ್ರಯತ್ನ ಮಾತ್ರದಿಂದ ಫಲ ದೊರಕದು. ದೈವಾನುಗ್ರಹವೂ ಬೇಕು.

೫. ಪ್ರಪಂಚದಲ್ಲಿ ಅತಿ ವಿಚಿತ್ರಗಳು ನಡೆಯುತ್ತವೆ. ಸಜ್ಜನರು ದುಃಖ ಪಡುತ್ತಿರುತ್ತಾರೆ. ದುರ್ಜನರು ಆರಾಮಾಗಿರುತ್ತಾರೆ. ಇದಕ್ಕೆಲ್ಲ ಆ ಜನ್ಮದ ಕರ್ಮಗಳೇ ಕಾರಣವಾಗಿರದೆ ಪೂರ್ವ ಜನ್ಮದ ಕರ್ಮ ಫಲಗಳು ಈಗ ಫಲಿಸುತ್ತವೆ ಎಂದು ತಿಳಿಯುವುದು.

೬. ಮನುಷ್ಯರಿಗೆ ಬರುವ ಆಧಿವ್ಯಾಧಿಗಳಿಗೂ ಪೂರ್ವಜನ್ಮದ ಫಲಗಳೇ ಕಾರಣ. ತಿನ್ನಲು ಉಣ್ಣಲು ಬೇಕಾದಷ್ಟಿದ್ದರೂ ರೋಗ ಪೀಡಿತರಾಗಿರುತ್ತಾರೆ. ಜೀರ್ಣಶಕ್ತಿ ಉಳ್ಳವರಾಗಿದ್ದವರಿಗೆ ತಿನ್ನಲು ಅನ್ನವೇ ಸಿಗದು. ಹೀಗೆ ಜಗತ್ತಿನಲ್ಲಿ ಅತಿವಿಚಿತ್ರ ಸಂಗತಿಗಳು ಕಾಣುತ್ತವೆ. ಇದರಿಂದ ದೈವವೇ ಮುಖ್ಯ. ನಮ್ಮನ್ನು ನಿಯಂತ್ರಿಸುವ ಸ್ವತಂತ್ರಶಕ್ತಿ ಇರುವುದನ್ನು ಎಲ್ಲರೂ ಅನುಭವಿಸಬಹುದು.

ಆದ್ದರಿಂದಲೇ ಆಚಾರ್ಯರು ದ್ವಾದಶ ಸ್ತೋತ್ರದಲ್ಲಿ ತಿಳಿಸುತ್ತಾರೆ.

**'ಯದಿ ನಾಮ ಪರೋ ನ ಭವೇತ್ಸ ಹರಿಃ**
**ಕಥಮೇವತು ನಿತ್ಯ ಸುಖಂ ನ ಭವೇತ್'**

ಇದರಿಂದ ಕರ್ಮಫಲಗಳನ್ನು ಜೀವಿಗಳ ಹಿಂದಿನ ಶುಭಾ ಶುಭ ಕರ್ಮಗಳಗನುಗುಣವಾಗಿ ಭಗವಂತನು ನೀಡುತ್ತಾನೆ ಎಂದು ತಿಳಿಯುತ್ತದೆ.

೭. ಒಂದೇ ನಕ್ಷತ್ರ ರಾಶಿಯಲ್ಲಿ ಹುಟ್ಟಿದಾಕ್ಷಣಕ್ಕೆ ಜೀವರ ಫಲಾಫಲಗಳು ಒಂದೇ ಇರುವುದಿಲ್ಲ

೮. ಬ್ರಾಹ್ಮಣನೇ! ಇದು ಅಲ್ಲದೆ ಮುಖ್ಯವಾಗಿ ತಿಳಿಯ ಬೇಕಾದುದು ಈ ಶರೀರ ಅನಿತ್ಯ! ಜೀವ ನಿತ್ಯವಾದರೂ ಜೀವನಿಗೆ ಈಗಿರುವ ದೇಹ ನಾಶದ ಬಳಿಕ ಮತ್ತೊಂದು ದೇಹ ಬರುತ್ತದೆ. ನಾಶ ದೇಹಕ್ಕೆ ಹೊರತು ಆತ್ಮನಿಗಲ್ಲ. ಪುಣ್ಯಶಾಲಿಗಳು ಸತ್ಸುಖವನ್ನೂ, ಪಾಪಿಗಳು ದುಃಖವನ್ನು ದೇಹ ನಾಶದ ಬಳಿಕ ಹೊಂದುತ್ತಾರೆ. ಇದರಿಂದ ಜೀವರಲ್ಲಿ ವೈವಿಧ್ಯ ಇದೆ ಎಂದು ತಿಳಿಯುತ್ತದೆ. ಜೀವರು ಹೊಂದುವ ಸುಖ ದುಃಖಗಳಲ್ಲಿಯೂ ತಾರತಮ್ಯವಿದೆ. ಅವರ ಕರ್ಮಗಳಿಗನುಗುಣವಾಗಿಯೇ ಅವರ ಗತಿ ನಿರ್ಧರಿಸಲ್ಪಡುತ್ತದೆ. ಆದ್ದರಿಂದ–

**ಶುಭೇನ ಕರ್ಮಣಾ ಸ್ವರ್ಗಂ ನಿರಯಂ ಚ ವಿಕರ್ಮಣಾ** ಎಂದರು. (ಅಣುಭಾಷ್ಯ ೩–೧) ಶ್ರೀಮದಾಚಾರ್ಯರು

**'ಶ್ರುತಿಪ್ರಮಾಣೋ ಧರ್ಮೋಽಯಮಿತಿ ವೃದ್ಧಾನುಶಾಸನಂ ।**
**ಸೂಕ್ಷ್ಮಾ ಗತಿರ್ಹಿ ಧರ್ಮಸ್ಯ ಬಹುಶಾಖಾ ಹ್ಯನಂತಿಕಾ' ॥ ೨೧೯–೧**

**'ಪ್ರಾಣಾಂತಿಕೇ ವಿವಾಹೇ ಚ ವಕ್ತವ್ಯಮನೃತಂ ಭವೇತ್' ।**

**'ಯದ್ಭೂತಹಿತಮತ್ಯಂತಂ ತತ್ಸತ್ಯಮಿತಿ ಧಾರಣಾ**
**ವಿಪರ್ಯಯಕೃತೋಽಧರ್ಮಃ ಪಶ್ಯ ಧರ್ಮಸ್ಯ ಸೂಕ್ಷ್ಮತಾಂ' ॥**

**'ವಿಷಮಾಂ ಚ ದಶಾಂ ಪ್ರಾಪ್ತೋ ದೇವಾನ್ ಗರ್ಹತಿ ವೈ ಭೃಶಂ ।**
**ಆತ್ಮನಃ ಕರ್ಮದೋಷಾಣಿ ನ ವಿಜಾನಾತ್ಯಪಂಡಿತಃ' ॥**

**'ಯಥಾಶ್ರುತಿರಿಯಂ ಬ್ರಹ್ಮನ್ ಜೀವಃ ಕಿಲ ಸನಾತನಃ ।**
**ಶರೀರಮಧೃವಂ ಲೋಕೇ ಸರ್ವೇಷಾಂ ಪ್ರಾಣಿನಾಮಿಹ' ॥**

**'ನ ಜೀವನಾಶೋಽಸ್ತಿ ಹಿ ದೇಹಭೇದೇ'**

**'ಸುಪುಣ್ಯಶೀಲಾ ಹಿ ಭವಂತಿ ಪುಣ್ಯಾ**
**ನರಾಧಮಾಃ ಪಾಪಕೃತೋ ಭವಂತಿ' ।** (೨೧೯–೧,೩,೪,೬,೨೩,೨೬,೨೮)

೯. ಪಾಪ ಮಾಡುವ ಸ್ವಭಾವದವನು ಪಾಪದ ಅಂತ್ಯ ಕಾಣಲಾರ ಆದ್ದರಿಂದ ಪುಣ್ಯ ಕರ್ಮ ಮಾಡಲು ಪ್ರಯತ್ನಿಸಬೇಕು.

೧೦. ಇವು ಸುಖಕ್ಕೆ ಸಾಧನ ೧. ಅಸೂಯೆ ಇಲ್ಲದಿರುವುದು; ೨. ಮಾಡಿದ ಉಪಕಾರ ಸ್ಮರಿಸುವುದು-ಕೃತಜ್ಞತಾಭಾವ; ೩. ಜೀತೇಂದ್ರಿಯತೆ; ೪. ದಾನಶೀಲತೆ; ೫. ಶಿಷ್ಟ ಜನರನ್ನು ಅನುಸರಿಸುವುದು; ೬. ಸ್ವವರ್ಣಾಶ್ರಮ ಧರ್ಮಾಚರಣೆ; ೭. ಧರ್ಮದಿಂದಲೇ ಧನ ಸಂಪಾದನೆ ಮಾಡುವುದು; ೮. ಈ ಲೋಕ ನಶ್ವರವೆಂದು ಭಾವಿಸಿ ಅದರ ಬಗ್ಗೆ ವೈರಾಗ್ಯ; ೯. ಶಮದಮ ತಪಸ್ಸುಗಳೆಂಬ ಸಂಪತ್ತು; ೧೦. ಇಂದ್ರಿಯ ನಿಗ್ರಹ – ಇವುಗಳಿಂದ ಅಪರೋಕ್ಷ ಹೊಂದುತ್ತಾನೆ.

**'ಅನಸೂಯಃ ಕೃತಜ್ಞಶ್ಚ ಕಲ್ಯಾಣಾನಿ ಚ ಸೇವತೆ' ।**
**'ಸಂಸ್ಕೃತಸ್ಯ ಚ ದಾಂತಸ್ಯ ನಿಯತಸ್ಯ ಯತಾತ್ಮನಃ ।**
**ಪ್ರಾಜ್ಞಸ್ಯಾನಂತರಾ ವೃತ್ತಿರಿಹ ಲೋಕೇ ಪರತ್ರ ಚ' ।**
**'ಸತಾಂ ಧರ್ಮೇಣ ವರ್ತೇತ ಕ್ರಿಯಾಂ ಶಿಷ್ಟವದಾಚರೇತ್' ।**
**'ಸರ್ವತ್ಯಾಗೇ ಚ ಯತತೇ ದೃಷ್ಟ್ವಾ ಲೋಕಂ ಕ್ಷಯಾತ್ಮಕಂ ।**
**ತತೋ ಮೋಕ್ಷೇ ಪ್ರಯತತೇ'**
**'ಇಂದ್ರಿಯಾಣಾಂ ನಿರೋಧೇನ ಸತ್ಯೇನ ಚ ದಮೇನ ಚ ।**
**ಬ್ರಹ್ಮಣಃ ಪದಮಾಪ್ನೋತಿ (ಅ ೨೦೯-೪೨,೪೩,೪೪,೫೪)**

ಧರ್ಮವ್ಯಾಧನು ಮುಂದುವರಿದು, ಬ್ರಾಹ್ಮಣನಿಗೆ ಇಂದ್ರಿಯ ನಿಗ್ರಹ ಸಂಪಾದನೆ 'ವಿಜ್ಞಾನದ ಸಲುವಾಗಿ' ಸಾಧಕನ ಮನಸ್ಸು ಪ್ರಯತ್ನಿಸುತ್ತದೆ. 'ವಿಜ್ಞಾನ' ವೆಂದರೆ ವಿಶೇಷವಾದ ಜ್ಞಾನ. ಸಾಮಾನ್ಯ ಶಾಸ್ತ್ರಜ್ಞಾನಕ್ಕಿಂತಲೂ ಹೆಚ್ಚಿನ ಶಾಸ್ತ್ರ ಜ್ಞಾನವೇ ವಿಜ್ಞಾನವೆಂದು ತಿಳಿಯುವುದು. ಇಲ್ಲಿರುವ ವಿಜ್ಞಾನವನ್ನು 'ವ್ಯಾವಹಾರಿಕ ಜ್ಞಾನ' ವೆಂದು ಇತ್ತೀಚಿನ ಅನುವಾದದಲ್ಲಿ ಬಂದಿದೆ. ಅದು ಸ್ವರಸವಾಗದು. ಇಂದ್ರಿಯ ನಿಗ್ರಹಕ್ಕಾಗಿ ಬೇಕಾದುದು ಬ್ರಹ್ಮನ ವಿಶೇಷ ಜ್ಞಾನವೇ ಹೊರತು ಪ್ರಪಂಚ ಜ್ಞಾನವಲ್ಲವೆಂದು ಭಾರತದ ಭಾಗವೇ ಆದ ಗೀತೆಯಿಂದ ತಿಳಿಯುತ್ತದೆ. ಹೀಗೆ ವಿಜ್ಞಾನವನ್ನು ಪಡೆದ ಮೇಲೂ ಸಹ ಸಾಧಕನ ಮನಸ್ಸು ಕಾಮಕ್ರೋಧಗಳನ್ನು ಸೇವಿಸುತ್ತದೆ!!. ಇದು ಆಶ್ಚರ್ಯವಾದರೂ ಸತ್ಯ. ಕಾರಣ ಕೇವಲ ಶಾಸ್ತ್ರದ ಶಬ್ದ ಜ್ಞಾನ ಮಾತ್ರದಿಂದ ಜ್ಞಾನಿಯಾಗಲು ಸಾಧ್ಯವಿಲ್ಲ. ಪಡೆದ ಜ್ಞಾನ ಜೀವನದಲ್ಲಿ ಅನುಸರಿಸಿದಾಗಲೇ ಅವನು ನಿಜವಾದ ಸಾಧಕವಾಗುತ್ತಾನೆ. ಅದರ ಫಲವಾಗಿ ರೂಪ ರಸಗಂಧ ಸ್ಪರ್ಶಾದಿಗಳನ್ನು ವಿಶೇಷವಾಗಿ ಸೇವಿಸುತ್ತಾನೆ. ಅದರಿಂದ ರಾಗ ದ್ವೇಷ ಲೋಭ ಮೋಹಗಳು ಅವನಲ್ಲಿ ಕ್ರಮವಾಗಿ ಹುಟ್ಟುತ್ತದೆ. ಹೀಗೆ ಇವುಗಳಿಂದ ಸೋತವನಾಗಿ ಧರ್ಮದಲ್ಲಿಯೇ ಬುದ್ಧಿ ಹುಟ್ಟದಂತಾಗುತ್ತದೆ. ಆದರೆ ತೋರಿಕೆಗೆ ಧರ್ಮಿಷ್ಠನಾಗಿಯೇ ಇರುತ್ತಾನೆ. ಧರ್ಮಾಚರಣೆಯಲ್ಲಿ ನಿರತನಾಗಿರುತ್ತಾನೆ. ಒಂದು ತರಹದ ದಂಭಾಚಾರಕ್ಕೆ ಒಳಗಾಗುತ್ತಾನೆ. ಅವನ ನಿಜವಾದ ಬುದ್ಧಿ ಗೊತ್ತಿರುವ

ಬಂಧುಗಳು, ಪಂಡಿತರು ಅವನ ವರ್ತನೆ ಬಗ್ಗೆ ಆಕ್ಷೇಪಿಸಿದಾಗ ಅವರನ್ನು ಉತ್ತರಿಸಿ ಬಾಯಿ ಬಡಿಯುತ್ತಾನೆ. ತಾನು ಧಾರ್ಮಿಕನಾಗಿಯೇ ಇರುವುದಾಗಿಯೂ, ತನ್ನ ವರ್ತನೆ ಅತ್ಯಂತ ಶಾಸ್ತ್ರೀಯವಾಗಿಯೇ ಇರುವುದಾಗಿ ಸಮರ್ಥಿಸಿಕೊಳ್ಳುತ್ತಾನೆ. ಹೀಗೆ ನೋಡಲು ಧಾರ್ಮಿಕವಾಗಿ, ಗುಟ್ಟಾಗಿ ಅಧರ್ಮದಲ್ಲಿಯೇ ಇರುವುದರಿಂದ ಅವನು ಆತ್ಮ ವಂಚಕನಾಗಿ ಅವನ ಗುಣಗಳು (ವಿಜ್ಞಾನಾದಿಗಳು) ನಾಶವಾಗುತ್ತವೆ. ಸಾಲದ್ದಕ್ಕೆ ಅವನು ತನ್ನಂತೆಯೇ ಇರುವ ಮಿತ್ರರಿಂದೊಡಗೂಡಿ ಪಾಪಕರ್ಮಗಳನ್ನೇ ಮಾಡುತ್ತಿರುತ್ತಾನೆ. ಹೀಗೆ ಇಹಪರಗಳಲ್ಲಿ ದುಃಖ ಭಾಗಿಯಾಗುತ್ತಾನೆ.

ಎಲೈ ಬ್ರಾಹ್ಮಣನೇ! ಆದರೆ ಈ ರೋಗ ದೋಷಾದಿಗಳನ್ನು ತಾನು ಪಡೆದ ವಿಜ್ಞಾನ-ಪ್ರಜ್ಞೆಗಳಿಂದ ವಿವೇಚಿಸಿ ಯಾವನು ಸಾಧು ಸಜ್ಜನರನ್ನು ಸೇವಿಸುತ್ತಾನೋ ಅವನ ಬುದ್ಧಿ ಧರ್ಮದಲ್ಲಿ ಇರುತ್ತದೆ.

ಬ್ರಾಹ್ಮಣನು ಧರ್ಮವ್ಯಾಧನ ಈ ಮಾತುಗಳಿಂದ ಪ್ರಭಾವಿತನಾಗಿ ಆತ ಮಹರ್ಷಿಯೆಂದೇ ಭಾವಿಸುವುದಾಗಿ ಹೇಳಿದ.

**'ವಿಜ್ಞಾನಾರ್ಥಂ ಮನುಷ್ಯಾಣಾಂ ಮನಃ (ಮತಿಃ) ಪೂರ್ವಂ ಪ್ರವರ್ತತೇ**
**ತತ್ಪ್ರಾಪ್ಯ ಕಾಮಂ ಭಜತೇ ಕ್ರೋಧಂ ಚ ದ್ವಿಜಸತ್ತಮ ॥**

**ತತೋ ರಾಗಃ ಪ್ರವರ್ತತೇ ದ್ವೇಷಶ್ಚ ತದನಂತರಂ ।**
**ತತೋ ಲೋಭಃ ಪ್ರಭವತಿ ಮೋಹಶ್ಚ ತದ ನಂತರಮ್ ॥**

**ವ್ಯಾಜೇನ ಚರತೇ ಧರ್ಮಮರ್ಥಂ ವ್ಯಾಜೇನ ರೋಚತೇ ।**
**ವ್ಯಾಜೇನ ಸಿಧ್ಯಮಾನೇಷು ಧನೇಷು ದ್ವಿಜ ಸತ್ತಮ ।**
**ತತ್ರೈವ ರಮತೇ ಬುದ್ಧಿಃ ತತಃ ಪಾಪಂ ಚಿಕೀರ್ಷತಿ' ॥**

**ಅ - ೨೧೦-೨ ರಿಂದ ೬**

**'ಸುಹೃದ್ಭಿರ್ವಾರ್ಯಮಾಣಶ್ಚ ಪಂಡಿತೈಶ್ಚ ದ್ವಿಜೋತ್ತಮ ।**
**ಉತ್ತರಂ ಶ್ರುತಿಸಂಬದ್ಧಂ ಬ್ರವೀತ್ಯ ಶ್ರುತಿಯೋಜಿತಮ್ ॥**

**ತಸ್ಯಾಧರ್ಮ ಪ್ರವೃತ್ತಸ್ಯ ಗುಣಾ ನಶ್ಯಂತಿ ಸಾಧವಃ ।**
**ಏಕಶೀಲೈಶ್ಚ ಮಿತ್ರತ್ವಂ ಭಜಂತೇ ಪಾಪ ಕರ್ಮಿಣಃ ।**

**ಸ ತೇನ ದುಃಖಮಾಪ್ನೋತಿ ಪರತ್ರ ಚ ವಿಪದ್ಯತೇ' ॥ ಅ- ೨೧೦-೭,೧೦**

ಮುಂದುವರಿದ ಧರ್ಮವ್ಯಾಧನು ಬ್ರಾಹ್ಮಣರ ಮಹತ್ತ್ವವನ್ನು ಹೇಳಿ 'ಬ್ರಾಹ್ಮೀ ವಿದ್ಯೆ' ಯನ್ನು ಹೇಳುತ್ತಾನೆ. ಅದೂ ಕೂಡಾ ಬ್ರಾಹ್ಮಣರನ್ನು ಮನಸಾ ನಮಸ್ಕರಿಸಿ ಹೇಳುವುದಾಗಿ ಹೇಳುತ್ತಾನೆ.

ಈ ಪ್ರಪಂಚವನ್ನು ಜಯಿಸಲು ಅಸಾಧ್ಯ. ಇದು ಮಹಾಭೂತಾತ್ಮಕವಾದುದು. ಇದಕ್ಕಿಂತ ಉತ್ತಮವಾದುದು ಮತ್ತೊಂದಿಲ್ಲ.

**'ಇದಂ ವಿಶ್ವಂ ಜಗತ್ಸರ್ವಂ ಅಜಯ್ಯಂ ಚಾಪಿ ಸರ್ವಶಃ ।**
**ಮಹಾಭೂತಾತ್ಮಕಂ ಬ್ರಹ್ಮ ನಾತಃ ಪರತರಂ ಭವೇತ್' ॥ ಅ- ೨೧೦-೧೬**

**'ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।**
**ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ' ॥**

ಬ್ರಹ್ಮಾದಿಗಳು 'ಭೂತಗಳು' ಚೇತನರು, ಪರಮಾತ್ಮನು ಮಹಾಭೂತ ಮಹಾ-ಚೇತನವೆಂಬ ಅಭಿಪ್ರಾಯವನ್ನು ವಿಷ್ಣುಸಹಸ್ರನಾಮ ಸ್ತೋತ್ರ ಮೊದಲಾದವು ಧರ್ಮವ್ಯಾಧನ ಉಪದೇಶದ ಮೂಲಗಳು ಎಂದು ನೋಡಬಹುದಾಗಿದೆ. ಅಲ್ಲದೆ ಧರ್ಮವ್ಯಾಧನು ಮುಂದೆ ಪಂಚಭೂತಗಳನ್ನು ಅವುಗಳ ವಿಷಯಗಳನ್ನು ಮನಸ್ಸೆಂಬ ಆರನೇ ಇಂದ್ರಿಯ, ಏಳನೇ ತತ್ತ್ವ ಬುದ್ಧಿ, ನಂತರ ಅಹಂಕಾರ ಇವುಗಳೊಡನೆ ಮಹತ್ತತ್ತ್ವ ಸತ್ತ್ವಾದಿ ತ್ರಿಗುಣಗಳು, ಅವ್ಯಕ್ತ ತತ್ತ್ವ ಹೀಗೆ ಇವೆಲ್ಲ ಸೇರಿ ೨೪ ತತ್ತ್ವಗಳ ಬಗ್ಗೆ ವಿವರಿಸಿದನು.

ವಿ.ಸೂ.: ಸಾಧಕನಿಗೆ ಎರಡು ಮನೋವೃತ್ತಿಗಳು ಬರುತ್ತವೆ. ಒಂದು ಕೆಟ್ಟ ಬುದ್ಧಿ ಇನ್ನೊಂದು ಒಳ್ಳೆಯ ಬುದ್ಧಿ. 'ವಿಜ್ಞಾನ' ವನ್ನು ತಿಳಿದರೂ ಪಡೆದರೂ ಎಂಬ ಅರ್ಥ ಹೇಳಲು ಶ್ರೀವಾದಿರಾಜರ [1]ಲಕ್ಷಾಲಂಕಾರದ ವ್ಯಾಖ್ಯಾನವನ್ನು ಅನುಸರಿಸಿ ಅರ್ಥ ಹೇಳಲು ಪ್ರಯತ್ನಿಸಲಾಗಿದೆ.

**'ಮತಿಃ ಪೂರ್ವಂ ಪ್ರವರ್ತತೇ ಇತ್ಯತ್ರ ಮತಿಃ ಮನೋವೃತ್ತಿಃ ಸಾ ಚ ದ್ವಿವಿಧಾ ಸುಮತಿಃ ಕುಮತಿಶ್ಚೇತಿ ಕುಮತೇಃ ಫಲಮುಕ್ತ್ವಾ ಸುಮತೇರಪಿ ಫಲಂ ಸಂಕೋಚೇನಾಹ ಉತ್ತಮೇತಿ ಉತ್ತಮೇಭ್ಯಃ ಶ್ರುತಸ್ಯ ಶಾಸ್ತ್ರಸ್ಯ ಸಂಬಂಧೋ ಯಸ್ಯ ಸ ತಥೋಕ್ತಃ ಈದೃಶೋಽಪಿ ಜಿತಃ ಕಾಮ ಕ್ರೋಧಾದ್ಯೈರ್ಜಿತಃ ಶ್ರುತಯಃ ಶ್ರುತೇಃ ಬ್ರವೀತಿ ನ ತು ಶ್ರುತ್ಯುಕ್ತ ಮರ್ಥಮಾಚರತೀತಿ ಭಾವಃ' ।**

ಧರ್ಮವ್ಯಾಧನು ಮುಂದುವರೆದು ಬ್ರಾಹ್ಮಣನಿಗೆ ಪಂಚಭೂತಗಳ ಗುಣವರ್ಣನೆ-ಯನ್ನು ಅವುಗಳು ಜೀವಿಗಳ ಶರೀರದಲ್ಲಿರುವ ರೀತಿ ನೀತಿಗಳನ್ನು ವಿವರಿಸುತ್ತಾನೆ.

ಅಹಂಕಾರ ತತ್ತ್ವದ ಭಾಗವಾದ ತಾಮಸಾಹಂಕಾರದಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ತೇಜಸ್ಸು, ಅದರಿಂದ ಜಲ, ಜಲದಿಂದ ಪೃಥಿವೀ ತತ್ತ್ವಗಳು ಹುಟ್ಟಿರುವುದು ಸರ್ವವೇದ್ಯ. ಈ ಪಂಚಭೂತಗಳ ಗುಣಗಳು ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳು ಕ್ರಮವಾಗಿ ಆಕಾಶ, ವಾಯು, ತೇಜಸ್ಸು, ಜಲ ಹಾಗೂ ಪೃಥಿವೀಗಳ ಗುಣಗಳಾಗಿದ್ದು ಇವೆಲ್ಲ ಪ್ರತಿ ಜೀವಿಯ ಶರೀರದ ಅವಿಭಾಜ್ಯ ಅಂಗಗಳಾಗಿವೆ ಹಾಗೂ ವ್ಯವಸ್ಥಿತವಾಗಿಯೂ ನಿರ್ದಿಷ್ಟ ಪ್ರಮಾಣದಲ್ಲಿ ಮೇಳವಿಸಿವೆ. ಇವುಗಳ ಪ್ರಮಾಣದಲ್ಲಿ ವ್ಯತ್ಯಾಸವಾಗುವವರೆಗೂ ದೇಹದ ಪ್ರಕ್ರಿಯೆಗಳು ಚೆನ್ನಾಗಿ

೧ ಮಹಾಭಾರತ ಲಕ್ಷಾಲಂಕಾರ ಭಾಗ-೧, ಸೋದೆ ಮಠ ಪ್ರಕಾಶನ, ೧೯೫೯, ಪುಟ ೩೧೨

ನಡೆಯುತ್ತವೆ. ಇವುಗಳ ಪರಿಮಾಣದಲ್ಲಿ ಏರುಪೇರಾದಾಗ ಜೀವಿಗಳಿಗೆ ಶರೀರದಲ್ಲಿ ಸಮತೂಕ ತಪ್ಪಿ ಮರಣದಲ್ಲಿ ಪರ್ಯವಸಾನವಾಗುತ್ತದೆ. ಈ ಪಂಚಭೂತಗಳ ಗುಣಗಳು ಕೂಡಾ ವ್ಯವಸ್ಥಿತವಾಗಿರುತ್ತವೆ. ಪೃಥಿವೀ ತತ್ತ್ವ ಕೊನೆಗೆ ಹುಟ್ಟಿದ್ದರೂ ಅದರಲ್ಲಿ ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶದ ಗುಣಗಳಿರುತ್ತವೆ. ೫ ಗುಣಗಳು ಎಂದರೆ ಪೃಥಿವೀಗೆ ಗಂಧ, ರಸ, ರೂಪ, ಸ್ಪರ್ಶ ಹಾಗೂ ಶಬ್ದ ಗುಣಗಳಿರುತ್ತವೆ. ಆದರೆ ಜಲಕ್ಕೆ ಗಂಧದ ಹೊರತಾಗಿ ನಾಲ್ಕು ಗುಣಗಳೂ, ತೇಜಸ್ಸಿಗೆ ಗಂಧ, ರಸ ಹೊರತಾಗಿ ಉಳಿದ ಮೂರು ಗುಣಗಳೂ, ವಾಯುವಿನಲ್ಲಿ ಗಂಧ, ರಸ, ರೂಪಗಳ ಹೊರತಾಗಿ ಕೇವಲ ಎರಡು ಗುಣಗಳೂ, ಆಕಾಶದಲ್ಲಿ ಶಬ್ದ ಗುಣ ಮಾತ್ರ ಇರುತ್ತದೆ. ಹೀಗೆ ಈ ೧೫ ಗುಣಗಳು ಪಂಚ ಭೂತಗಳಲ್ಲಿರುತ್ತದೆ. ಇದರ ಅರ್ಥ ಕಾರ್ಯ ಪ್ರಪಂಚದಲ್ಲಿ ಎಲ್ಲ ಗುಣಗಳೂ ವ್ಯಕ್ತವಾಗಿರುತ್ತವೆ. ಕಾರಣ ಪದಾರ್ಥಗಳಲ್ಲಿ ಕೆಲವು ಅವ್ಯಕ್ತವಾಗಿರುತ್ತವೆ ಎಂದು ಅಭಿಪ್ರಾಯ. ಆಕಾಶವು ಎಲ್ಲ ಭೂತಗಳಿಗೂ ಮೂಲವಾದರೂ ಅದರಲ್ಲಿ ವ್ಯಕ್ತವಾಗುವುದು ಶಬ್ದ ಮಾತ್ರ. ಇವೇ ಮೊದಲಾದ ವಿಷಯಗಳನ್ನು ವ್ಯಾಧನು ಬ್ರಾಹ್ಮಣನಿಗೆ ತಿಳಿಸುತ್ತಾನೆ.

**ಭೂಮಿಃ ಪಂಚಗುಣಾ ಬ್ರಹ್ಮನ್ನುದಕಂ ಚ ಚತುರ್ಗುಣಂ ।**
**ಗುಣಾಸ್ತ್ರಯಸ್ತೇಜಸಿ ಚ .......... ।**
**ಏತೇ ಪಂಚದಶ ಬ್ರಹ್ಮನ್ ಗುಣಾ ಭೂತೇಷು ಪಂಚಸು ।**
**ವರ್ತಂತೇ ಸರ್ವಭೂತೇಷು ಯೇಷು ಲೋಕಾಃ ಪ್ರತಿಷ್ಠಿತಾ ॥**
**ಅನ್ಯೋನ್ಯಂ ನಾತಿವರ್ತಂತೇ ಸಮ್ಯಕ್ ಚ ಭವತಿ ದ್ವಿಜ ।**
**ಯದಾ ತು ವಿಷಮಂ ಭಾವಮಾಚರಂತಿ ಚರಾಚರಾಃ ॥**
**ತದಾ ದೇಹೀ ದೇಹಮನ್ಯಂ ವ್ಯತಿರೋಹತಿ ಕಾಲತಃ ।**
**ಆನುಪೂರ್ವ್ಯಾಂ ವಿನಶ್ಯಂತಿ ಜಾಯಂತೇ ಚಾನುಪೂರ್ವಶಃ ॥**

**ಅ. ೨೧೧ – ೪ ರಿಂದ ೧೦**

**ಮೇಲಿನ ೯ನೇ ಶ್ಲೋಕಕ್ಕೆ ಶ್ರೀ ವಾದಿರಾಜರ ಲಕ್ಷಾಲಂಕಾರದಲ್ಲಿ ಭೂತಗುಣಗಳ ಪರಿಮಾಣ ವ್ಯತ್ಯಾಸವಾದಾಗ ಆಗುವ ವ್ಯಾಧಿಗಳ ವಿವರಗಳನ್ನು ಕೊಟ್ಟು, ಅಂತಿಮವಾಗಿ ಮರಣದಲ್ಲಿ ಪರಿಣಾಮವಾಗುತ್ತದೆ ಎಂದು ವ್ಯಾಖ್ಯಾನ ಮಾಡಿರುತ್ತಾರೆ.**

**ಪೃಥಿವ್ಯಾಧಿಕ್ಯೇ ದೇಹೋ ಭಾರಾಯತೇ, ಜಲಾಧಿಕ್ಯೇ ಮಹೋದರಂ ಜಾಯತೇ, ತೇಜಸ ಆಧಿಕ್ಯೇ ದಾಹೋದ್ರೇಕೋ ಜಾಯತೇ, ತೇನ ಚ ಮರಣಂ ಭವತೀತ್ಯಾಹ ತದೇತಿ – ಲಕ್ಷಾಲಂಕಾರ**

"ದೇಹದಲ್ಲಿ ಪೃಥಿವೀ ಅಂಶ ಅಧಿಕವಾದಾಗ ದೇಹದ ತೂಕ ಜಾಸ್ತಿಯಾಗುತ್ತದೆ, ನೀರಿನ ಅಂಶ ಅಧಿಕವಾದಾಗ **'ಮಹೋದರ'**ವೆಂಬ ರೋಗ ಬರುತ್ತದೆ, ತೇಜಸ್ಸು ಅಧಿಕವಾದಾಗ **'ದಾಹೋದ್ರೇಕ'** (ದೇಹದ ಉಷ್ಣತೆ ಸಾಮಾನ್ಯಕ್ಕಿಂತ ಅಧಿಕವಿರುತ್ತದೆ) ಇದರಿಂದ ಮರಣ ಉಂಟಾಗುತ್ತದೆ."

ಈ ಶಬ್ದಾದಿಗಳು ಇಂದ್ರಿಯ ವಿಷಯಗಳಷ್ಟೇ. ಈ ವಿಷಯಗಳ ಬಗ್ಗೆ ಇಂದ್ರಿಯಗಳನ್ನು ಹಿತಮಿತವಾಗಿ ವ್ಯವಹರಿಸಿ ಅವುಗಳನ್ನು ಅತೀಂದ್ರಿಯವಾದ ಭಗವತ್ತತ್ವದ ಜ್ಞಾನಕ್ಕಾಗಿ ಉಪಯೋಗಿಸಬೇಕು. ಇಂದ್ರಿಯ ವಿಷಯಗಳಿಂದ ವಿಮುಖನಾಗಿ ಪಂಚಭೂತಾದಿಗಳಲ್ಲೆಲ್ಲೂ ಇರುವ ವ್ಯಾಪ್ತನಾದ ಭಗವಂತನನ್ನು ಅರಿಯಲು ಇಂದ್ರಿಯಗಳನ್ನು ನಿಗ್ರಹಿಸಿಕೊಳ್ಳಬೇಕು. ಆದರೆ ಜೀವರಿಗೆ ಆವೃತವಾದ ಅವಿದ್ಯಾಕಾಮ ಕರ್ಮಾದಿ ರೂಪ ಅಜ್ಞಾನದಿಂದಾಗಿ ಇದು ಕ್ಲೇಶಕರವಾಗಿರುತ್ತದೆ. ಆದರೆ ಇಂದ್ರಿಯ ನಿಗ್ರಹದಿಂದ ಆ ಭಗವದ್ದರ್ಶನ ಸಾಧ್ಯವೆಂದು ಧರ್ಮವ್ಯಾಧನು ನಿರೂಪಿಸುತ್ತಾನೆ. ಶರೀರವೆಂಬ ರಥದಲ್ಲಿದ್ದು ಕೊಂಡೇ ಇಂದ್ರಿಯಗಳೆಂಬ ಅಶ್ವಗಳನ್ನು ಮನಸ್ಸೆಂಬ ಹಗ್ಗದಿಂದ ನಿಯಂತ್ರಿಸಿ ಬುಧ್ಯಾದಿಗಳನ್ನು ಭಗವಂತನಲ್ಲಿ ಕರ್ಮ ಜ್ಞಾನ ಯೋಗಗಳಿಂದ ಸಾಕ್ಷಾತ್ಕರಿಸಿದಾಗ ಧ್ಯಾನದ ಫಲವಾದ ನೈಜಾನಂದ ದೊರೆಯುತ್ತದೆ.

**ರಥ: ಶರೀರಂ ಪುರುಷಸ್ಯ ದೃಷ್ಟ-**
**ಮಾತ್ಮಾ ನಿಯಂತೇಂದ್ರಿಯಾಣ್ಯಾಹುರಶ್ವಾನ್ ।**
**ತೈರಪ್ರಮತ್ತಃ ಕುಶಲೀ ಸದಶ್ವೈ**
**ದಾಂತೈಃ ಸುಖಂ ಯಾತಿ ರಥೀವ ಧೀರಃ ॥** ೨೧೧-೨೩

ಸಾಧಕನಿಗೆ ಸರ್ವಭೂತಗಳನ್ನು ಪರಮಾತ್ಮನಲ್ಲಿ, ಪರಮಾತ್ಮನನ್ನು ಎಲ್ಲ ಭೂತಗಳಲ್ಲಿ ವ್ಯಾಪ್ತನೆಂಬ ಚಿಂತನೆ ಅವಶ್ಯವೆಂದು ಹೇಳಿದ ಧರ್ಮ ವ್ಯಾಧನ ಒಂದು ಮಾತು ಸಂದೇಹಕ್ಕೆ ಆಪಾತತ ಕಾರಣವಾಗುವಂತಿದೆ. ಆ ವಾಕ್ಯಗಳು

**ಲೋಕೇ ವಿತತಮಾತ್ಮಾನಂ ಲೋಕಂ ಚಾತ್ಮನಿ ಪಶ್ಯತಿ**
**ಬ್ರಹ್ಮ ಭೂತಸ್ಯ ಸಂಯೋಗೋ ॥** ೨೧೧-೧೪,೧೫

ಇಲ್ಲಿ ಬಂದಿರುವ **ಬ್ರಹ್ಮ ಭೂತಸ್ಯ** ಪಾಠವನ್ನು ಶ್ರೀ ವಾದಿರಾಜರು ಒಪ್ಪಿಲ್ಲ. ಬದಲಾಗಿ **ಬ್ರಹ್ಮ ಭೂತೇನ** ಎಂಬುದು ಸರಿಯಾದ ಪಾಠವೆಂದು ತಿಳಿಸುತ್ತಾ ಅದಕ್ಕೆ **ಬ್ರಹ್ಮಣೋ ವೇದಾತ್ ಭೂತೇನ ಪ್ರತಿಪಾದನೇನ ಸದ್ಧರ್ಮೇಣ** ಎಂದು **ಲಕ್ಷಾಲಂಕಾರದಲ್ಲಿ ವ್ಯಾಖ್ಯಾನಿಸಿ ಬ್ರಹ್ಮಭೂತಸ್ಯ ಎಂಬುದಕ್ಕೆ ಕೆಲವರು ಮಾಡುವ ಅಪವ್ಯಾಖ್ಯಾನವನ್ನು ನಿರಾಕರಿಸಿದ್ದಾರೆ.** ಹೆಚ್ಚಿನ ಮಾಹಿತಿಗಳನ್ನು ಗುರು ಮುಖೇನ ತಿಳಿಯುವುದು.

ನಂತರ ಧರ್ಮವ್ಯಾಧನು ಕೌಶಿಕ ಬ್ರಾಹ್ಮಣನಿಗೆ ಸತ್ತ್ವ ರಜಸ್ತಮೋ ಗುಣಗಳು ಹಾಗೂ ಅವುಗಳ ಕಾರ್ಯಗಳನ್ನು ವಿವರಿಸಿದ್ದಾನೆ.

ಸತ್ತ್ವಗುಣವು ಪ್ರಕಾಶ ಬಾಹುಲ್ಯವುಳ್ಳದ್ದು (ಜ್ಞಾನ ಪ್ರಚುರ) ತಮೋ ಗುಣವು ಮೋಹಾತ್ಮಕ (ಅಜ್ಞಾನ ಮಿಥ್ಯಾಜ್ಞಾನ ಸ್ವರೂಪ) ಆದ್ದರಿಂದ ಸತ್ತ್ವಗುಣವು ತಮೋ ಗುಣಕ್ಕಿಂತ ಶ್ರೇಷ್ಠ. ತಾಮಸಿಯು ಅಜ್ಞಾನಿ, ನಿದ್ರಾಶೀಲ, ಇಂದ್ರಿಯ ನಿಗ್ರಹ ರಹಿತ ಆಲಸಿ ಹಾಗೂ ಕೋಪವುಳ್ಳವನಾಗಿರುತ್ತಾನೆ.

ರಾಜಸ ಸ್ವಭಾವದವನು ವಾಚಾಳಿ, ವಿಚಾರ ಮಾಡಿ ಕಾರ್ಯ ಪ್ರವೃತ್ತನಾಗುವವನು, ತಾನು ಎಲ್ಲರಿಗಿಂತಲೂ ಮಿಗಿಲಾಗಿರುವ ಬಯಕೆಯುಳ್ಳವನು, ವಿನಯ ರಹಿತನೂ, ದುರಭಿಮಾನಿಯೂ ಆಗಿರುತ್ತಾನೆ.

ಮೇಲಿನ ಗುಣಗಳಿಂದ ವಿರುದ್ಧಸ್ವಭಾವದವನು ಸಾತ್ತ್ವಿಕ. ಸಾತ್ತ್ವಿಕನು ಲೋಕ ವ್ಯವಹಾರದಲ್ಲಿ ಆಸಕ್ತಿ ರಹಿತನೂ, ಇಂದ್ರಿಯ ನಿಗ್ರಹವುಳ್ಳವನೂ, ವೈರಾಗ್ಯ ಶಾಲಿಯೂ ಮೃದು ಸ್ವಭಾವದವನೂ, ಪ್ರಾಮಾಣಿಕನೂ, ನಿಸ್ಸಂಶಯ ಪ್ರವೃತ್ತಿವುಳ್ಳವನೂ, ಮಾನಾಪಮಾನಗಳನ್ನು ಸಮನಾಗಿ ಸ್ವೀಕರಿಸುವವನೂ ಆಗಿ ಕಾಯೇನ ವಾಚಾ ಮನಸಾ ಏಕ ಪ್ರಕಾರನಾಗಿರುತ್ತಾನೆ. ಪ್ರಾಮಾಣಿಕನಾಗಿರುತ್ತಾನೆ– ಸಾತ್ವಿಕ ಸ್ವಭಾವದವನು.

ಶೂದ್ರ ಜಾತಿಯಲ್ಲಿ ಹುಟ್ಟಿದ್ದರೂ ಯಾರಲ್ಲಿ ಮೇಲಿನ ಸದ್ಗುಣಗಳಿದ್ದಲ್ಲಿ ಅವು ಗುಣತಃ ಬ್ರಾಹ್ಮಣನೇ ಮುಂದೆ ಅವನು ಕ್ರಮವಾಗಿ ವೈಶ್ಯ, ಕ್ಷತ್ರಿಯನಾಗಿ ನಂತರ ಬ್ರಾಹ್ಮಣನಾಗಿ ಜನಿಸುತ್ತಾನೆ.

**'ಮೋಹಾತ್ಮಕಂ ತಮಸ್ತೇಷಾಂ ರಜ ಏಷಾಂ ಪ್ರವರ್ತಕಂ ।**
**ಅವಿದ್ಯಾ ಬಹುಲೋ ಮೂಢಃ ಸ್ವಪ್ನಶೀಲೋ ವಿಚೇತನಃ ।**
**ದುರ್ಹೃಷೀಕಸ್ತಮೋಧ್ವಸ್ತಃ ಸಕ್ರೋಧಸ್ತಾಮಸೋಽಲಸಃ ॥**

**ಪ್ರವೃತ್ತವಾಕ್ಯೋ ಮಂತ್ರೀ ಚ ಸ್ತಬ್ಧೋ ಮಾನೀ ಚ ರಾಜಸಃ ॥**

**ಪ್ರಕಾಶ ಬಹುಲೋ ಧೀರೋ.... ಅನಸೂಯಕಃ ।**
**ಅಕ್ರೋಧನೋ ನರೋ ಧೀಮಾನ್ ದಾಂತಶ್ಚೈವ ಸ ಸಾತ್ತ್ವಿಕಃ ॥**
**ನ ಚಾಸ್ಯ ಸಂಶಯೋ ನಾಮ ಕ್ವಚಿತ್ ಭವತಿ ಕಶ್ಚನ ॥**
**ಶೂದ್ರಯೋನೌ ಹಿ ಜಾತಸ್ಯ ಸದ್ಗುಣಾನುಪತಿಷ್ಠತಃ ।**
**ವೈಶ್ಯತ್ವಂ ಲಭತೇ ಬ್ರಹ್ಮನ್ ಕ್ಷತ್ರಿಯತ್ವಂ ತಥೈವ ಚ ।**
**ಆರ್ಜವೇ ವರ್ತಮಾನಸ್ಯ ಬ್ರಾಹ್ಮಣ್ಯಮಭಿಜಾಯತೇ' ॥**

**ಅ ೨೧೨ – ೪ ರಿಂದ ೧೨**

ಈ ಹಿನ್ನೆಲೆಯಲ್ಲಿ ಯೇ ಶ್ರೀ ಮದಾಚಾರ್ಯರು ಛಾಂದೋಗ್ಯ ಭಾಷ್ಯದಲ್ಲಿ

**'ಆರ್ಜವಂ ಬ್ರಾಹ್ಮಣೇ ಸಾಕ್ಷಾತ್ ಶೂದ್ರೋಽನಾರ್ಜವಲಕ್ಷಣಂ ।"**

ಎಂದು ಪ್ರಮಾಣ ವಚನ ಉದಾಹರಿಸಿ ನಿಜವಾದ ಬ್ರಾಹ್ಮಣನಲ್ಲಿ ಆರ್ಜವ (ತ್ರಿಕರಣ ಶುದ್ಧಿಯೂ) ಶೂದ್ರನಲ್ಲಿ ಅದಿರದೆಂದೂ ತಿಳಿಸುತ್ತಾರೆ. ಒಂದು ವೇಳೆ ಶೂದ್ರನಲ್ಲಿಯೂ ಆರ್ಜವ ಕಂಡಲ್ಲಿ ಅವನು ಗುಣತಃ ಬ್ರಾಹ್ಮಣನೆಂದು ತಿಳಿಯಬೇಕೆಂಬ ಭಾರತದ ಮರ್ಮ ಧರ್ಮವ್ಯಾಧನ ಮಾತಿನಲ್ಲೂ ಕಾಣುತ್ತದೆ

ಸತ್ತ್ವಾದಿ ಗುಣತ್ರಯಗಳ ಸ್ವಭಾವ ಕೇಳಿದ ನಂತರ ಬ್ರಾಹ್ಮಣನು ನಮ್ಮ ಶರೀರದ ಅಗ್ನಿಯು ಪೃಥಿವೀ ಸಂಬಂಧಿಯಾದ ಸಪ್ತಧಾತುಗಳನ್ನು ಹೊಂದಿ ಶರೀರದಲ್ಲಿ ಹೇಗೆ

ಪ್ರವೃತ್ತಿ ಮಾಡುತ್ತದೆ? ಎಂದು ಪಂಚಪ್ರಾಣಗಳ ಬಗ್ಗೆ ವಿವರಗಳನ್ನು ಕೇಳುತ್ತಾನೆ. ಆಗ ವ್ಯಾಧನು ಪ್ರಾಣವಾಯುವು ಇಡೀ ಶರೀರವ್ಯಾಪಿ. ಶರೀರದ ಶಿರಸ್ಸಿನ ಮೂರ್ಧನ್ಯ ಭಾಗದಲ್ಲಿರುತ್ತದೆ.(ಬ್ರಹ್ಮನಾಡಿ) ಶರೀರದ ಸರ್ವ ವ್ಯಾಪಾರದ ನಿಯಂತ್ರಣವನ್ನು ಇದರಿಂದಲೇ. ಸಕಲ ಜೀವರ ಬ್ರಹ್ಮಜ್ಞಾನಕ್ಕೂ ಮೂಲ ಕಾರಣ ಈ ಪ್ರಾಣ. ಎಲ್ಲ ಜೀವರೂ ಬ್ರಹ್ಮಾಧೀನರು. ಎಲ್ಲ ೨೪ ತತ್ತ್ವಗಳೂ ಈ ಪ್ರಾಣಾಧೀನ. ಜೀವನಿಂದ ಈ ಪ್ರಾಣ ದೂರವಾದಾಗ **ಮೃತ**ನೆಂದು ಕರೆಯುವರು.

ಶರೀರದ ಬೆನ್ನು ಮೂಳೆಯ ಅಧೋಭಾಗ ಮೂಲಾಧಾರವೇ ಸಮಾನ ವಾಯು (ಪ್ರಾಣ) ವಿನ ಸ್ಥಾನ. ವಿವಿಧ ಪ್ರಾಣಿಗಳ ಗತಿಗಳನ್ನು ನಿರ್ದೇಶಿಸುವುದು ಇದರ ವ್ಯಾಪಾರ.

ಇದೇ ಪ್ರಾಣ ಗುದದ ಮೇಲ್ಭಾಗ ಮೂತ್ರಾಶಯ ಇವುಗಳಲ್ಲಿದ್ದು ಅಲ್ಲಿರುವ ಮೂತ್ರ ಪುರೀಷಗಳನ್ನು ಹೊರ ಹಾಕುವಂತೆ ನೋಡಿಕೊಳ್ಳುತ್ತದೆ. ಈ ಭಾಗದಲ್ಲಿಯೂ ಅಗ್ನಿ ಇರುತ್ತದೆ. ಎಲ್ಲ ಪ್ರಾಣಿಗಳಲ್ಲಿಯೂ ತೇಜೋಂಶ ಇದ್ದು ಆಯಾ ವ್ಯಾಪಾರಗಳನ್ನು ಮಾಡಿಸುತ್ತದೆ. ಸಂಬಂಧಿಸಿದ ಪ್ರಾಣ ಸ್ಥಾನಗಳಿಗೆ ಅನುಗುಣವಾಗಿ ಒಂದೇ ಪ್ರಾಣಕ್ಕೆ ಬೇರೆ ಬೇರೆ ಹೆಸರುಗಳಿವೆ. ಆದರೆ ಆಯಾಸ್ಥಾನದಲ್ಲಿರುವ ವ್ಯಾಪಾರ ಮಾಡುವ ದೇವತೆಗಳು ಬೇರೆ ಬೇರೆ ಇರುತ್ತಾರೆ. ಮುಖ್ಯಪ್ರಾಣನ ಮಕ್ಕಳೇ ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನ ನಾಮಕರು, ಶರೀರದ ಮುಂಭಾಗದಲ್ಲಿ ಉದಾನನ ಸ್ಥಾನ ಜೀವಿಗಳು ಮಾಡುವ ಪ್ರಯತ್ನ, ಕರ್ಮ, ಬಲ ಇವುಗಳಲ್ಲಿ ಇರುವ ಪ್ರಾಣ ಶಕ್ತಿಯೇ ಉದಾನವೆಂದು ಅಧ್ಯಾತ್ಮ ಜ್ಞಾನಿಗಳು ಹೇಳುತ್ತಾರೆ. ಶರೀರದ ಪ್ರತಿ ಸಂಧಿ ಸಂಧಿಗಳಲ್ಲಿ ಇದ್ದು ಆಯಾ ವ್ಯಾಪಾರ, ಚಲನವಲನಗಳಿಗೆ ಕಾರಣವಾದುದೇ ಉದಾನ ಪ್ರಾಣವಾಗಿದೆ. ಶರೀರದ ಸಪ್ತಧಾತುಗಳಲ್ಲಿದ್ದು ಅಲ್ಲಿನ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿ ರಸ, ಧಾತು, ಹಾಗೂ ದೋಷಗಳನ್ನು ಪ್ರತ್ಯೇಕಗೊಳಿಸುವ ಕಾರ್ಯ ಮಾಡುವ ಪ್ರಾಣಶಕ್ತಿಯನ್ನು ವ್ಯಾನವೆನ್ನುತ್ತಾರೆ. ಪ್ರಾಣಿಗಳಲ್ಲಿ ದೋಷವೈಷಮ್ಯದಿಂದ ರೋಗವು, ಸಾಮ್ಯದಿಂದ ಆರೋಗ್ಯವೂ ವೃದ್ಧಿ ಹೊಂದುತ್ತದೆ. ಸಮಾನ ಉದಾನಗಳ ಮಧ್ಯೆ ಪ್ರಾಣ ಅಪಾನಗಳಿರುತ್ತವೆ. ನಾಭಿ ಮಧ್ಯದಲ್ಲಿ ಶರೀರದಲ್ಲಿ ಎಲ್ಲ ಪ್ರಾಣಗಳೂ ಇರುತ್ತವೆ. ಹೃದಯದಿಂದ ಎಲ್ಲ ಪ್ರಾಣ ವ್ಯಾಪಾರಗಳು ನಿಯಂತ್ರಿಸಲ್ಪಡುತ್ತವೆ. ಶರೀರದ ಮೇಲೆ, ಕೆಳಗೆ ಸರ್ವತ್ರ ಈ ಪಂಚಪ್ರಾಣಗಳನ್ನು ನಿಯಂತ್ರಿಸಿ ಇರುವ ಮುಖ್ಯಪಾಣ ಶಕ್ತಿಗೂ ಕೂಡಾ ಪ್ರೇರಕ ಶಕ್ತಿಯಾಗಿ ಭಗವಂತನು 'ಪ್ರಾಣ' ನಾಮಕನಾಗಿಯೇ ಇದೇ ಶರೀರದಲ್ಲಿರುತ್ತಾನೆ. ಅವನೇ ಕ್ಷೇತ್ರಜ್ಞ, ಯೋಗಿಗಳು ಇವೆಲ್ಲವನ್ನು ತಿಳಿದುಕೊಂಡು ತಮ್ಮ ಪ್ರಾಣವನ್ನು ನಾಭಿಯಿಂದ ಮೇಲಕ್ಕೆ ತಂದು ಬ್ರಹ್ಮರಂಧ್ರದ ಮೂಲಕ ಶರೀರತ್ಯಾಗ ಮಾಡುತ್ತಾರೆ. ಬ್ರಹ್ಮಜ್ಞಾನಿಗಳು ಕ್ಷೇತ್ರಜ್ಞನಾದ ಭಗವಂತನನ್ನು ಯೋಗಶಕ್ತಿಯಿಂದ ತಿಳಿಯುತ್ತಾರೆ. ಹೀಗೆ ಎಲ್ಲ ಪ್ರಾಣಿಗಳಲ್ಲಿರುವ ಪರಮಾತ್ಮನನ್ನು ಯೋಗಶಕ್ತಿಯಿಂದ ಜ್ಞಾನಿಗಳು ತಿಳಿಯುತ್ತಾರೆ. ಅದಕ್ಕೆ ಬೇಕಾದುದು ಚಿತ್ತನಿಗ್ರಹ

ಚಿತ್ತಪ್ರಸನ್ನತೆಗಳು. ಇಂದ್ರಿಯ ನಿಗ್ರಹದಿಂದ ಇವೇ ಮೊದಲಾದ ವಿಷಯಗಳನ್ನು ಧರ್ಮವ್ಯಾಧನು ಬ್ರಾಹ್ಮಣನಿಗೆ ಬೋಧಿಸಿದನು.

(**ವಿ.ಸೂ.** ಈ ಮೇಲಿನ ವಿಷಯಗಳು ತುಂಬಾ ಜಟಿಲ ಗುರು ಮುಖೇನ ವಿವರಗಳನ್ನು ತಿಳಿಯುವುದು).

ಹೀಗೆ ಶರೀರದಲ್ಲಿ ಪಂಚಪ್ರಾಣಗಳ ಸ್ಥಾನ ಅವುಗಳ ವ್ಯಾಪಾರ ಜೀವ ಪರಮಾತ್ಮರಿಗೂ ಇವುಗಳಿಗೂ ಇರುವ ಸಂಬಂಧ ಇವುಗಳನ್ನು ವಿವರಿಸಿದ ಧರ್ಮವ್ಯಾಧನು ಭಗವಂತನ ಸಾಕ್ಷಾತ್ಕಾರಕ್ಕೆ ಸೂಕ್ಷ್ಮ ಬುದ್ಧಿ ಬೇಕೆಂದು ತಿಳಿಸುತ್ತಾನೆ. ವಿಮರ್ಶ ಮಾಡುವ ಸೂಕ್ಷ್ಮ ದೃಷ್ಟಿ ಬೇಕೆಂದು ತಿಳಿಸುತ್ತಾನೆ. ಪೂರ್ವ ಸಂಚಿತ ಕರ್ಮಗಳ ನಾಶವು ಚಿತ್ತ ಪ್ರಸನ್ನತೆಯಿಂದಾಗುತ್ತದೆ. ಭಗವಂತನಲ್ಲಿ ಪ್ರಸನ್ನತೆಯುಳ್ಳ ಜೀವಿಯು ಮೋಕ್ಷಕ್ಕೆ ಅರ್ಹನಾಗುತ್ತಾನೆ. ಎಂದರೆ ಭಗವಂತನಲ್ಲಿ ನಿರಂತರ ಮನಸ್ಸನ್ನು ಇಟ್ಟು ಧ್ಯಾನದಿಂದ ಮನಃ ಪ್ರಸನ್ನತೆ ಪಡೆಯುತ್ತಾನೆ. ಆಗಲೇ ಅವನಿಗೆ ತೃಪ್ತಿ ವಿಷಯಗಳ ಮಧ್ಯೆ ಇದ್ದರೂ ಆ ವಿಷಯಗಳ ಲಾಭಾಲಾಭಗಳಿಂದ ಅತೃಪ್ತಿಯ ಲವಲೇಶವು ಇರದೆ ಸದಾ ಸಂತೃಪ್ತ ಜೀವಿಯಾಗುತ್ತಾನೆ ಎಂದು ಇದರ ಅಭಿಪ್ರಾಯ ಅಂಥವನಿಗೆ ಸುಖನಿದ್ರೆಯೂ ಸಿಗುತ್ತದೆ. ನಿರ್ವಾತ ಪ್ರದೇಶದಲ್ಲಿರುವ ದೀಪದಂತೆ ನಿಶ್ಚಲನಾಗಿರುತ್ತಾನೆ. ನಿತ್ಯ ಅಲ್ಪಾಹಾರ ಸೇವನೆಯು ಅತಿ ಮುಖ್ಯ. ಆಗ ಅವನಿಗೆ ಭಗವಂತನ ದರ್ಶನವಾಗುತ್ತದೆ. (ಭೌತಿಕ ಶರೀರವಿದ್ದರೂ)

**ಇದೆಲ್ಲವನ್ನು ಹೊಂದಲು ಈ ಕೆಳಗಿನ ಸಾಧನೆ ಅತ್ಯವಶ್ಯ**

೧. ಎಲ್ಲ ಉಪಾಯಗಳಿಂದ ಲೋಭ, ಕ್ರೋಧಗಳನ್ನು ನಿಗ್ರಹಿಸಬೇಕು (ಕಾಮ, ಕ್ರೋಧ ಲೋಭಗಳನ್ನು ನಿಯಂತ್ರಿಸಬೇಕು) ಏಕೆಂದರೆ ಈ ಮೂರೇ ನರಕಕ್ಕೆ ಕಾರಣ.

೨. ಯದ್ಯಪಿ ಸಾಧಕನು ಕೋಪಕ್ಕೆ ಒಳಗಾಗುವ ಸಂದರ್ಭಗಳು ಬರುತ್ತವೆ. ಆ ಕೋಪವನ್ನು ನಿಯಂತ್ರಿಸುವುದರಿಂದ ಅದುವರೆಗೂ ಮಾಡಿದ ತಪಸ್ಸು ನಾಶವಾಗುವುದಿಲ್ಲ. ಇಲ್ಲದಿದ್ದರೆ ಮಾಡಿದ ತಪಸ್ಸು (ಪುಣ್ಯ) ಕೋಪಗೊಳ್ಳುವುದರಿಂದ ನಾಶವಾಗುತ್ತದೆ.

೩. ಅಸೂಯೆ ಪಡದಿರುವುದರಿಂದ ಧರ್ಮ ರಕ್ಷಿಸಿಕೊಳ್ಳಬೇಕು. ನಾವು ಮಾಡಿದ ಧರ್ಮನಾಶ ಪರರ ಬಗೆಗಿನ ಅಸೂಯೆಯಿಂದ ನಾಶವಾಗುತ್ತದೆ.

೪. ನಮಗೆ ಸಮಾಜದಲ್ಲಿ ಆಗುವ ಮಾನಾಪಮಾನಗಳಿಂದ ಸಂಪಾದಿಸಿದ ವಿದ್ಯೆಯನ್ನು ಉಳಿಸಿಕೊಳ್ಳಬೇಕು. ಮಾನಾಪಮಾನಗಳಿಂದ ನಾವು ಹಿಗ್ಗುವುದನ್ನು ಕುಗ್ಗುವುದನ್ನು ತಡೆದುಕೊಳ್ಳಬೇಕು.

೫. ಸ್ವರಕ್ಷಣೆಯನ್ನು ಪ್ರಾಮಾದಿಕ ವರ್ತನೆಗಳಿಂದ ಮಾಡಬೇಕು. (ಉದ್ದೇಶ ಪೂರ್ವಕವಾಗಿ ತಪ್ಪು ತಿಳಿಯುವುದು ಯಾರಿಗೂ ದ್ರೋಹ ಮಾಡದಿರುವುದೇ ಪ್ರಮಾದಿಕ ವರ್ತನೆ)

೬. ಪರರ ಬಗ್ಗೆ ಕ್ರೂರತನದಿಂದ ವರ್ತಿಸದೆ ದಯಾಪೂರ್ಣ ವರ್ತನೆ ಅವಶ್ಯ. ಅದುವೇ ಪರಮಧರ್ಮ

೭. ಕ್ಷಮೆಯೇ ಶ್ರೇಷ್ಠವಾದ (ಆತ್ಮ) ಬಲ

೮. ಭಗವಂತನ ಜ್ಞಾನವೇ ನಿಜವಾದ ಜ್ಞಾನ

೯. ವ್ರತಗಳೆಲ್ಲ 'ಸತ್ಯ' ವ್ರತದ ಹಿಂದೆ ಸಜ್ಜನರ ಹಿತವೇ ನಿಜವಾದ ಸತ್ಯ ಹೊರತು ಯಾಂತ್ರಿಕ ಸತ್ಯವಚನಾದಿಗಳಲ್ಲ. ಇದರರ್ಥ ನಿತ್ಯ ವ್ಯವಹಾರದಲ್ಲಿ ಸತ್ಯ ವಚನಾದಿಗಳು ಬೇಡವೆಂದಲ್ಲ. ಆಪದ್ಧರ್ಮವಿದ್ದಾಗ ಸತ್ಯದ ಬಗ್ಗೆ ವಿಚಾರ ಮಾಡಿ ಅದರಲ್ಲಿ ಸಾಮಾಜಿಕ ಕಳಕಳಿಯೂ ಇರಬೇಕು ಎಂದು ಇದರ ಅಭಿಪ್ರಾಯ.

೧೦. ಯಾರೊಂದಿಗೂ ವೈರ ಭಾವನೆ ಹಾಗೂ ಪ್ರಾಣಿ ಹಿಂಸೆ ಸಲ್ಲದು

೧೧. ನಿಷ್ಕಾಮ ಕರ್ಮ ಸೇವನೆಯೇ ಅತಿಶ್ರೇಷ್ಠ ಕರ್ಮಯೋಗ

೧೨. ಲೌಕಿಕ ಸಂಪತ್ತಿನ ಅಭಿಲಾಷೆ ಇರದಿರುವುದೇ ನಿಜವಾದ ಸಂತೋಷ.

೧೩. ದಾನ ಸ್ವೀಕಾರ ತ್ಯಾಗವೇ (ಪರಿಗ್ರಹ) ಶ್ರೇಷ್ಠ. ಇಂದ್ರಿಯ ನಿಗ್ರಹ, ಪ್ರಾಪಂಚಿಕ ವಿಷಯಗಳಲ್ಲಿ ಅಸಂಗ

೧೪. ಮೇಲಿನವುಗಳಿಂದಲೇ ಬ್ರಹ್ಮವೃತ್ತಿ ಸಾಧ್ಯ ಎಂದರೆ ಬ್ರಹ್ಮನಲ್ಲಿ ಮನಸ್ಸಿಡುವುದು ಸಾಧ್ಯ

೧೫. ನಿತ್ಯ ಜೀವನದಲ್ಲಿನ ಸುಖ ದುಃಖ ತ್ಯಾಗದಿಂದಲೇ ಬ್ರಹ್ಮಪ್ರಾಪ್ತಿ. ಆಗಲೇ ನಿಜಾನಂದಪ್ರಾಪ್ತಿ. ಲೌಕಿಕಾನಂದವನ್ನು ಬಿಟ್ಟಾಗಲೇ ಸ್ವರೂಪಾನಂದ ಪ್ರಾಪ್ತಿ ಎಂದು ಅಭಿಪ್ರಾಯ.

ಇವೇ ಮೊದಲಾದ ಆಧ್ಯಾತ್ಮಿಕ ವಿಷಯಗಳನ್ನು ಧರ್ಮವ್ಯಾಧನು ಬ್ರಾಹ್ಮಣನಿಗೆ ತಿಳಿಸಿದನು.

**ಚಿತ್ತಸ್ಯ ಹಿ ಪ್ರಸಾದೇನ ಹಂತಿ ಕರ್ಮ ಶುಭಾಶುಭಂ ।**
**ಪ್ರಸನ್ನಾತ್ಮಾಽತ್ಮನಿ ಸ್ಥಿತ್ವಾ ಸುಖಮಾನಂತ್ಯಮಶ್ನುತೇ ॥**

**ಲಘ್ವಾಹಾರೋ ವಿಶುದ್ಧಾತ್ಮಾ ಪಶ್ಯನ್ನಾತ್ಮಾನಮಾತ್ಮನಿ ।**
**ಸರ್ವೋಪಾಯೈಸ್ತು ಲೋಭಸ್ಯ ಕ್ರೋಧಸ್ಯ ಚ ವಿನಿಗ್ರಹಃ ।**

ನಿತ್ಯಂ ಕ್ರೋಧಾತ್ತಪೋ ರಕ್ಷೇತ್ ಧರ್ಮಂ ರಕ್ಷೇಚ್ಚ ಮತ್ಸರಾತ್ ।
ವಿದ್ಯಾಂ ಮಾನಾಪಮಾನಾಭ್ಯಾಮಾತ್ಮಾನಂ ತು ಪ್ರಮಾದತಃ ।
ಆನೃಶಂಸ್ಯಂ ಪರೋ ಧರ್ಮಃ ಕ್ಷಮಾ ಚ ಪರಮಂ ಬಲಂ ।
ಆತ್ಮಜ್ಞಾನಂ ಪರಂ ಜ್ಞಾನಂ ಸತ್ಯಂ ವ್ರತಪರಂ ವ್ರತಂ ।
ಸತ್ಯಸ್ಯ ವಚನಂ ಶ್ರೇಯಃ ಸತ್ಯಂ ಜ್ಞಾನಂ ಹಿತಂ ಭವೇತ್ ।
ಯತ್ ಭೂತಹಿತಮತ್ಯಂತಂ ತದ್ವೈ ಸತ್ಯಂ ಪರಂ ಮತಂ ।
ನ ಹಿಂಸ್ಯಾತ್ ಸರ್ವಭೂತಾನಿ....................................... ।
ನೇದಂ ಜೀವೀತಮಾಸಾದ್ಯ ವೈರಂ ಕುರ್ವೀತ ಕೇನಚಿತ್ ।
ಆಕಿಂಚನ್ಯಂ ಸುಸಂತೋಷೋ
ಪರಿಗ್ರಹಂ ಪರಿತ್ಯಜ್ಯ ಭವೇತ್... ಇತ್ಯಾದಿ ॥ ಅಧ್ಯಾಯ ೨೧೩-೨೪-೩೬

## ತಂದೆ ತಾಯಿ ಸೇವಾ ಮಹತ್ತ್ವ

ಹೀಗೆ ಧರ್ಮವ್ಯಾಧನು ಹೇಳಿದ ಮೋಕ್ಷ ಧರ್ಮದ ವಿಷಯಗಳನ್ನು ಕೇಳಿದ **ಕೌಶಿಕ ಬ್ರಾಹ್ಮಣನು 'ನಿನಗೆ ತಿಳಿಯದ ವಿಷಯ ಯಾವುದೇ ಇಲ್ಲವೆಂದು ತೋರುತ್ತದೆ'** ಎಂದು ಉದ್ಗರಿಸಿದ.

'ನ ತೇಽಸ್ತ್ಯವಿದಿತಂ ಕಿಂಚಿತ್ ಧರ್ಮೇಷ್ವಿಹ ಹಿ ದೃಶ್ಯತೇ' ॥ ೨೧೪-೨

ಆಗ ಧರ್ಮವ್ಯಾಧನು 'ನನಗೆ ಈಗ ಬಂದಿರುವ ಸಿದ್ಧಿಗೆ ಕಾರಣವಾದ ಪ್ರತ್ಯಕ್ಷ ಧರ್ಮ ಯಾವುದೆಂದು ತೋರಿಸುವೆ ಏಳು. ನಮ್ಮ ಮನೆಯೊಳಗಿರುವ ತಂದೆ ತಾಯಿಗಳನ್ನು ತೋರಿಸುವೆ' ಎಂದನು.

'ಪ್ರತ್ಯಕ್ಷಂ ಮಮ ಯೋ ಧರ್ಮಸ್ತಂ ಚ ಪಶ್ಯ ದ್ವಿಜೋತ್ತಮ ।
ಯೇನ ಸಿದ್ಧಿರಿಯಂ ಪ್ರಾಪ್ತಾ ಮಯಾ ಬ್ರಾಹ್ಮಣ ಪುಂಗವ ॥
ಉತ್ತಿಷ್ಠ ಭಗವನ್ ಕ್ಷಿಪ್ರಂ ಪ್ರವಿಶ್ಯಾಭ್ಯಂತರಂ ಗೃಹಂ ।
ದ್ರಷ್ಟುಮರ್ಹಸಿ ಧರ್ಮಜ್ಞ ಮಾತರಂ ಪಿತರಂ ಚ ಮೇ' ॥ ೨೧೪-೩,೪

ಹೀಗೆ ನುಡಿದ ವ್ಯಾಧನು ತನ್ನ ತಂದೆ ತಾಯಿಗಳಿಗಾಗಿ ಕಟ್ಟಲಾದ ಸುಂದರ ಸೌಧದಲ್ಲಿರುವ ಸಕಲ ಸೌಲಭ್ಯಗಳಿಂದ ಕೂಡಿದ ದೇವತಾ ಗೃಹದಂತಿರುವ ಮನೆಯಲ್ಲಿರುವ ಅದಾಗಲೇ ಭೋಜನ ಮಾಡಿದ ತಂದೆ ತಾಯಿಗಳನ್ನು ನೋಡಿ ಶಿರಸಾಭಿವಂದನೆ ಮಾಡಿದನು.

'ಸೌಧಂ ಹೃದ್ಯಂ ಚತುಃ ಶಾಲಾಮತೀವ ಚ ಮನೋರಮಮ್ ।
ದೇವತಾಗೃಹಸಂಕಾಶಂ ದೈವತೈಶ್ಚ ಸುಪೂಜಿತಂ ।
ಕೃತಾಹಾರೌ ತು ಸಂತುಷ್ಟಾವುಪವಿಷ್ಟೌ ವರಾಸನೇ ।
ಧರ್ಮವ್ಯಾಧಸ್ತು ತೌ ದೃಷ್ಟ್ವಾ ಪಾದೇಷು ಶಿರಸಾಽಪತತ್'
॥ ೨೧೪- ೫ರಿಂದ ೭

ಆಗ ಆ ವೃದ್ಧ ತಂದೆ ತಾಯಿಗಳು ತಮ್ಮ ಮಗನನ್ನು ಬಾಯಿ ತುಂಬ **'ಧರ್ಮಸ್ತ್ವಾಮಭಿರಕ್ಷತು'** ನೀನು ಆಚರಿಸುವ ಧರ್ಮವು ನಿನ್ನನ್ನು ರಕ್ಷಿಸಲಿ. **'ಸತ್ಪುತ್ರೇಣ ತ್ವಯಾ ಪುತ್ರ ನಿತ್ಯಂ ಕಾಲೇ ಸುಪೂಜಿತೌ'** ನಿನ್ನಂತಹ ಸತ್ಪುತ್ರನಿಂದ ನಾವು ಚೆನ್ನಾಗಿ ಆರೈಕೆ ಮಾಡಲ್ಪಟ್ಟಿದ್ದೇವೆ. ನಿನಗೆ ನಮ್ಮನ್ನು ಬಿಟ್ಟು ಬೇರೆ ದೇವತೆಗಳೇ ಇಲ್ಲ. (ಮಾತೃ ದೇವೋ ಭವ ಪಿತೃ ದೇವೋ ಭವ ಎಂಬ ಅನುಸಂಧಾನವುಳ್ಳವನು ನೀನು) ನಮ್ಮ ಪೂಜೆಯಿಂದ ನಿನ್ನ ತಾತಮುತ್ತಾತರೇ ಮೊದಲಾದ ಪಿತೃಗಳೂ ಪ್ರೀತರಾಗಿದ್ದಾರೆ. ನೀನು ಕಾಯೇನ ವಾಚಾ ಮನಸಾ ಶುದ್ಧನಿದ್ದೀಯೆ. ಪರಶುರಾಮನು ತನ್ನ ತಂದೆ ತಾಯಿಗಳನ್ನು ಸೇವಿಸಿದಂತೆ ನಮ್ಮನ್ನು ಸೇವಿಸುತ್ತಿದ್ದೀಯೆ, ಎಂದರು.

**ನ ತೇಽನ್ಯದ್ದೈವತಂ ಕಿಂಚಿತ್ ದೈವತೇಷ್ವಪಿ ವರ್ತತೇ ।**
**ಪಿತುಃ ಪಿತಾಮಹಾ ಯೇ ಚ ತಥೈವ ಚ ಪ್ರಪಿತಾಮಹಾಃ ।**
**ಪ್ರೀತಾಸ್ತೇ ಸತತಂ ಪುತ್ರ ದಮೇನಾವಾಂ ಚ ಪೂಜಯಾ ।**
**ಜಾಮದಗ್ನ್ಯೇನ ರಾಮೇಣ ಯಥಾ ವೃದ್ಧೌ ಸುಪೂಜಿತೌ ।**
**ತಥಾ ತ್ವಯಾ ಕೃತಂ ಸರ್ವಂ ತದ್ವಿಶಿಷ್ಟಂ ಚ ಪುತ್ರಕ ॥**

**೨೧೪-೧೦ ರಿಂದ ೧೩**

ನಂತರ ವ್ಯಾಧನು ಬ್ರಾಹ್ಮಣನಿಗೆ ತನ್ನ ತಂದೆ ತಾಯಿಯವರನ್ನು ತೋರಿಸಿದನು. ಅವರು ಬ್ರಾಹ್ಮಣನನ್ನು ಸ್ವಾಗತಿಸಿ ಗೌರವಿಸಲು ಬ್ರಾಹ್ಮಣನು ಅವರನ್ನು ಅಭಿನಂದಿಸಿ ಅವರ ಕುಶಲ ವಾರ್ತೆ ಕೇಳಿದನು. ನಂತರ ಧರ್ಮವ್ಯಾಧನು ವಿಪ್ರನನ್ನು ಕುರಿತು ನುಡಿದನು.

ಎಲೈ ಬ್ರಾಹ್ಮಣನೇ! ಇವರೇ ನನ್ನ ಪಿತೃ, ಮಾತೃಗಳು. ನನ್ನ ಪಾಲಿನ ಮಹಾದೇವತೆಗಳು. ದೇವತೆಗಳಿಗೆ ಮಾಡುವ ಪೂಜೆಯನ್ನು ನಾನು ಇವರಿಗೇ ಮಾಡುತ್ತೇನೆ (ಈ ಪ್ರತೀಕಗಳಲ್ಲಿ ದೇವತಾಪೂಜೆ ಮಾಡುತ್ತೇನೆ ಎಂದು ಅರ್ಥ).

ಇವರನ್ನು ಪುಷ್ಪಗಳಿಂದ, ಫಲಗಳಿಂದ ರತ್ನಾದಿ ದ್ರವ್ಯಗಳಿಂದ ಪೂಜಿಸುತ್ತೇನೆ. (ಸಮರ್ಪಿಸುತ್ತೇನೆ). ಇವರಿಗಾಗಿಯೇ ನಾನು, ನನ್ನ ಪತ್ನಿ, ಮಕ್ಕಳು ಎಲ್ಲರೂ ನಿತ್ಯವೂ ಸೇವಿಸುತ್ತೇವೆ. ಇವರಿಗೆ ನಾನೇ ಸ್ವತಃ ಸ್ನಾನ ಮಾಡಿಸುತ್ತೇನೆ. (ಬಹುಶಃ ತಂದೆ ತಾಯಿಗಳು ಆಗ ಬಹಳ ವೃದ್ಧರಾಗಿರಬೇಕು. ಸ್ವಯಂ ಸ್ನಾನ ಮಾಡಲು ಅಸಮರ್ಥರಿರಬೇಕು ಎಂದು ತೋರುತ್ತದೆ). ನಾನೇ ಆಹಾರ ಕೊಡುತ್ತೇನೆ (ಉಣಬಡಿಸುತ್ತೇನೆ). ಅವರಿಗೆ ಅನುಕೂಲವಾಗಿ ಮಾತನಾಡುತ್ತೇನೆ. ಅವರಿಗೆ ಬೇಸರ ಬರಿಸುವ ಮಾತುಗಳನ್ನು ಆಡುವುದಿಲ್ಲ. **ಸಾಧಕ ಪುರುಷನಿಗೆ ಐದು ಗುರುಗಳು ಅವರು ತಂದೆ, ತಾಯಿ, ಅಗ್ನಿ, ಭಗವಂತ ಹಾಗೂ ಪಾಠ ಹೇಳಿದ ಗುರುಗಳು**. ಇವರನ್ನು ಯಾರು ಚೆನ್ನಾಗಿ ಸೇವಿಸುತ್ತಾರೋ ಅವರಲ್ಲಿ ಪಂಚಾಗ್ನಿಗಳು ತೃಪ್ತರಾಗುತ್ತಾರೆ. ತತ್ರಾಪಿ ಗೃಹಸ್ಥನಿಗೆ ಇದುವೇ ನಿಜವಾದ ಧರ್ಮ.

'ಪಿತಾ ಮಾತಾ ಚ ಭಗವನ್ನೇತೌ ಮದ್ದೈವತಂ ಪರಂ ।
ಯದ್ದೈವತೇಭ್ಯಃ ಕರ್ತವ್ಯಂ ತದೇತಾಭ್ಯಾಂ ಕರೋಮ್ಯಹಂ ।
ತ್ರಯಸ್ತ್ರಿಂಶದ್‌ಯಥಾ ದೇವಾ ಸರ್ವೇ ಶಕ್ರ ಪುರೋಗಮಾಃ ।
ಸಂಪೂಜ್ಯಾ ಸರ್ವಲೋಕಸ್ಯ ತಥಾ ವೃದ್ಧಾವಿಮೌ ಮಮ ॥
ಏತೌ ಪುಷ್ಪೈಃ ಫಲೈ ರತ್ನೈಸ್ತೋಷಯಾಮಿ ಸದಾ ದ್ವಿಜ ।
ಏತಾವೇವಾಗ್ನಯೋ ಮಹ್ಯಂ ಯಾನ್ ವದಂತಿ ಮನೀಷಿಣಃ ।
ಯಜ್ಞಾ ವೇದಾಶ್ಚ ಚತ್ವಾರಃ ಸರ್ವಮೇತೌ ಮಮ ದ್ವಿಜ ।
ಏತದರ್ಥಂ ಮಮ ಪ್ರಾಣಾ ಭಾರ್ಯಾ ಪುತ್ರಃ ಸುಹೃಜ್ಜನಃ ।
ಸ ಪುತ್ರದಾರಃ ಶುಶ್ರೂಷಾಂ ನಿತ್ಯಮೇವ ಕರೋಮ್ಯಹಂ ॥
ಪಂಚೈವ ಗುರವೋ ಬ್ರಹ್ಮನ್ ಪುರುಷಸ್ಯ ಬಭೂಷತಃ ।
ಪಿತಾ ಮಾತಾಗ್ನಿರಾತ್ಮಾ ಚ ಗುರುಶ್ಚ ದ್ವಿಜಸತ್ತಮ ॥

೨೧೪ – ೧೮ ರಿಂದ ೨೭.

ಹೀಗೆ ಬ್ರಾಹ್ಮಣನಿಗೆ ತನ್ನ ತಂದೆ ತಾಯಿಗಳನ್ನು ದರ್ಶನ ಮಾಡಿಸಿ ಮತ್ತೆ ನುಡಿದ. ವಿಪ್ರನೇ 'ಮಿಥಿಲೆಗೆ ಹೋಗು ಎಂದು ನಿನಗೆ ಹೇಳಿದ ಆ ಪತಿವ್ರತೆಯ ತಪೋ ಬಲವನ್ನು ನೋಡು. (ನೋಡಿ ತಿಳಿ). ಆಕೆಯ ತಪಸ್ಸಿನ ಹಿನ್ನೆಲೆ ನಿರ್ವ್ಯಾಜ ಪತಿಸೇವೆ. ಆಕೆ ನನ್ನ ಬಳಿಗೆ ಕಳಿಸಿದುದನ್ನು ನೀನು ಪರ್ಯಾಲೋಚನೆ ಮಾಡು.' ಈ ಮಾತನ್ನು ಕೇಳಿದ **ಬ್ರಾಹ್ಮಣನು** ಅದನ್ನು ಮನ್ನಿಸಿ ಆಕೆಯ ತಪೋಬಲ ಸ್ಮರಿಸುತ್ತಾ ವ್ಯಾಧನನ್ನು **'ನೀನು ತುಂಬಾ ಗುಣವಂತ'** ಎಂದು **ಶ್ಲಾಘಿಸಿದನು.**

ಆಗ ವ್ಯಾಧನು ಮತ್ತೆ "ನಿನ್ನ ಮೇಲಿನ ಅನುಗ್ರಹ ಬುದ್ಧಿಯಿಂದ ನಾನು ಇದೆಲ್ಲ ತೋರಿಸಿದೆ. (ನನ್ನ ತಪೋಬಲದ ಹಿನ್ನೆಲೆಯಾದ ತಂದೆ ತಾಯಿಗಳನ್ನು) ನಿನ್ನ ಹಿತಕ್ಕಾಗಿ ನಾನು ಹೇಳುವ ಮಾತನ್ನು ದಯವಿಟ್ಟು ಕೇಳು." **ತ್ವದನುಗೃಹಬುಧ್ಯಾ ತು ವಿಪ್ರೈತದ್ ದರ್ಶಿತಂ ಮಯಾ.**

'ನೀನು ನಿನ್ನ ತಂದೆ ತಾಯಿಗಳನ್ನು ಸೇವಿಸದೆ ತ್ಯಜಿಸಿ ಬಂದಿರುವೆ. ನಿನ್ನ ವಿರಹದ ದುಃಖದಿಂದ ನಿನ್ನ ತಂದೆ ತಾಯಿಗಳು ಕುರುಡರಾಗಿದ್ದಾರೆ. ಅವರೂ ತಪಸ್ವಿಗಳೇ. ಅವರನ್ನು ಸೇವಿಸುವವರು ಯಾರೂ ಇಲ್ಲವಾಗಿದೆ. ಆದ್ದರಿಂದ ಅವರನ್ನು ಸಂತೋಷಗೊಳಿಸಲು ನೀನು ಮೊದಲು ಅವರ ಬಳಿ ಹೋಗಿ ಸೇವಿಸು. ಅವರ ಅಪ್ಪಣೆ ಇಲ್ಲದೆ ನೀನು ವೇದಾಧ್ಯಯನಕ್ಕಾಗಿ ತಪಸ್ಸಿಗೆ ಹೊರಟೆ ಅದೇ ತಪ್ಪು. ನೀನು ತಪಸ್ವಿಯೇ. ಆದರೆ ನಿನ್ನ ಧರ್ಮದ ಆದ್ಯತೆ ತಂದೆ ತಾಯಿಗಳ ಸೇವೆಯೇ ಹೊರತು ತಪಸ್ಸಲ್ಲ. ನಿನ್ನ ಒಳಿತಿಗಾಗಿ ನಾನು ಹೇಳುತ್ತಿದ್ದೇನೆ ಕೂಡಲೇ ಹೊರಡು'.

'ತ್ವಯಾ ವಿನಿಕೃತಾ ಮಾತಾ ಪಿತಾ ಚ ದ್ವಿಜಸತ್ತಮ ।
ಅನಿಸೃಷ್ಟೋಽಸಿ ನಿಷ್ಕ್ರಾಂತೋ ಗೃಹಾತ್ ತಾಭ್ಯಾಮನಿಂದಿತ ॥
ತೌ ಪ್ರಸಾದಯಿತುಂ ಗಚ್ಛ ಮಾ ತ್ವಂ ಧರ್ಮೋಽತ್ಯಗಾದಯಮ್ ॥

ತಪಸ್ವೀ ತ್ವಂ ಮಹಾತ್ಮಾ ಚ ಧರ್ಮೇ ಚ ನಿರತಃ ಸದಾ ॥
ಶಿದ್ದಧಸ್ವ ಮಮ ಬ್ರಹ್ಮನ್ ನಾನ್ಯಥಾ ಕರ್ತುಮರ್ಹಸಿ ।
ಗಮ್ಯತಾಮದ್ಯ ವಿಪ್ರರ್ಷೇ ಶ್ರೇಯಸ್ತೇ ಕಥಯಾಮ್ಯಹಮ್ ॥

೨೧೫– ೭ ರಿಂದ ೧೦

ಇದನ್ನು ಒಪ್ಪಿದ ಬ್ರಾಹ್ಮಣನು ಧರ್ಮವ್ಯಾಧನಿಗೆ ಮಂಗಳವಾಗಲಿ ಎಂದು ಹರಸಿದನು.

ಮತ್ತೆ ಧರ್ಮವ್ಯಾಧನು ಬ್ರಾಹ್ಮಣನ್ನು ಕುರಿತು 'ನೀನು ದೇವತೆಯಂತೆ ಇದ್ದೀಯಾ! ತಂದೆ ತಾಯಿಗಳ ಬಳಿ ಕೂಡಲೇ ಹೋಗು ಅವರನ್ನು ಸೇವಿಸು. ಅದಕ್ಕಿಂತ ಬೇರೆ ಧರ್ಮವಿಲ್ಲವೆಂದನು'

'ದೈವತಪ್ರತಿಮೋ ಹಿ ತ್ವಂ ಯಸ್ತ್ವಂ ಧರ್ಮಮನುವ್ರತಃ ।
ಮಾತಾಪಿತ್ರೋಃ ಸಕಾಶಂ ಹಿ ಗತ್ವಾ ತ್ವಂ ದ್ವಿಜಸತ್ತಮ ।
ಅತಂದ್ರಿತಃ ಕುರು ಕ್ಷಿಪ್ರಂ ಮಾತಾಪಿತ್ರೋರ್ಹಿ ಪೂಜನಂ ।
ಅತಃ ಪರಮಹಂ ಧರ್ಮಂ ನಾನ್ಯಂ ಪಶ್ಯಾಮಿ ಕಂಚನ' । ೨೧೫–೧೨, ೧೩

ಆಗ ಬ್ರಾಹ್ಮಣನು ಮತ್ತೆ ನುಡಿದ ಅದೃಷ್ಟವಶಾತ್ ನಿನ್ನ ಸಂಗಮ ನನಗಾಗಿದೆ. ಧರ್ಮಬಲ್ಲ ನಿನ್ನಂತಹವರು ಸಾವಿರಕ್ಕೊಬ್ಬರೂ ಸಿಗರು. ನರಕದಲ್ಲಿ ಬೀಳಲಿರುವ ನನ್ನನ್ನು ಪಾರು ಮಾಡಿದೆ. ಮೊಮ್ಮಕ್ಕಳಿಂದ (ದೌಹಿತ್ರರಿಂದ) ಯಯಾತಿ ಪಾರಾದಂತೆ ನಿನ್ನ ಮಾತಿನಂತೆ ನಾನು ತಂದೆ ತಾಯಿಗಳ ಸೇವೆ ಮಾಡುತ್ತೇನೆ. ನಿನ್ನನ್ನು ನಾನು ಶೂದ್ರನೆಂದು ಭಾವಿಸೆ. ನಿನಗೆ ಶೂದ್ರ ಜನ್ಮ ಹೇಗೆ ಬಂತು? ದಯವಿಟ್ಟು ಇದಕ್ಕೆ ಕಾರಣ ತಿಳಿಸು ಎಂದನು.

'ಪತಮಾನೋಽದ್ಯ ನರಕೇ ಭವತಾಽಸ್ಮಿ ಸಮುದ್ಧೃತಃ ।
ರಾಜಾ ಯಯಾತಿ ದೌರ್ಹಿತ್ರೈಃ ಪತಿತಸ್ತಾರಿತೋ ಯಥಾ ॥
ಮಾತಾಪಿತೃಭ್ಯಾಂ ಶುಶ್ರೂಷಾಂ ಕರಿಷ್ಯೇ ವಚನಾತ್ತವ ।
ನಾಕೃತಾತ್ಮಾ ವೇದಯತಿ ಧರ್ಮಾಧರ್ಮವಿನಿಶ್ಚಯಂ ।
ನ ತ್ವಾಂ ಶೂದ್ರಮಹಂ ಮನ್ಯೇ ಭವಿತವ್ಯಂ ಹಿ ಕಾರಣಂ ।
ಯೇನ ಕರ್ಮವಿಶೇಷೇಣ ಪ್ರಾಪ್ತೇಯಂ ಶೂದ್ರತಾ ತ್ವಯಾ ।
ಏತದಿಚ್ಛಾಮಿ ವಿಜ್ಞಾತುಂ ತತ್ತ್ವೇನ ಹಿ ಮಹಾಮತೇ' ॥

೨೧೫–೧೬ ರಿಂದ ೨೦

ಅದಕ್ಕೆ ಧರ್ಮವ್ಯಾಧನು ಉತ್ತರಿಸುತ್ತಾ

'ನಾನೂ ಪೂರ್ವಜನ್ಮದಲ್ಲಿ ವೇದ ವೇದಾಂಗ ಪಾರಂಗತನಾದ ಬ್ರಾಹ್ಮಣನಾಗಿದ್ದೆ. ನನ್ನದೇ ದೋಷದಿಂದ ಈ ಸ್ಥಿತಿಗೆ ಬಂದಿದ್ದೇನೆ. ನನಗೊಬ್ಬ ಧನುರ್ವೇದ

ಪಾರಂಗತನಾದ ರಾಜನು ಸ್ನೇಹಿತನಾಗಿದ್ದ. ಆತನ ಸಹವಾಸದಿಂದಾಗಿ ನಾನೂ ಧನುರ್ವಿದ್ಯೆ ಬಲ್ಲವನಾದೆ. ಒಮ್ಮೆ ಬೇಟೆಗಾಗಿ ರಾಜನು, ಮಂತ್ರಿ, ಸೇನೆಗಳೊಂದಿಗೆ ಹೋದಾಗ ನಾನೂ ಅವನೊಡನೆ ಇದ್ದೆ. ರಾಜನು ಬಹಳಷ್ಟು ಮೃಗಗಳನ್ನು ಬೇಟೆಯಾಡುತ್ತಾ ಕೊಂದನು. ನಾನೂ ಬಿಟ್ಟ ಒಂದು ಭಯಂಕರವಾದ ಬಾಣವು ಆಶ್ರಮದ ಋಷಿಯೊಬ್ಬನಿಗೆ ತಗುಲಿ ಅವನು ಕೂಗುತ್ತಾ ಬಿದ್ದನು. ಆ ಬ್ರಾಹ್ಮಣನು 'ನಾನು ಅಪರಾಧಿಯಲ್ಲ. ಆದರೆ ಯಾವ ಪಾಪದಿಂದ ಹೀಗೆ ಹೊಡೆಯಲ್ಪಟ್ಟೆ' ಎಂದ. ನಾನು ಅಲ್ಲಿಗೆ ಹೋಗಿ ಓಡಲು ಬಿದ್ದವನು ಬ್ರಾಹ್ಮಣನೆಂದು ತಿಳಿದು ಮನಸ್ಸಿಗೆ ತುಂಬಾ ವ್ಯಥೆಯಾಯಿತು. ಬಿದ್ದ ಬ್ರಾಹ್ಮಣನು ಭಾರೀ ತಪಸ್ವಿಯಾಗಿದ್ದನು. ತಿಳಿಯದೆ ನನ್ನಿಂದಾಯಿತೆಂದು ನಾನು ನುಡಿದೆ. ದಯಮಾಡಿ ಕ್ಷಮಿಸು ಎಂದೆ. ಆದರೆ ಆ ತಪಸ್ವಿಯು ಕೋಪದಿಂದ 'ಎಲೈ ಕ್ರೂರಿಯೇ ನೀನು ಶೂದ್ರನಾಗುವೆ' ಎಂದು ನನ್ನನ್ನು ಶಪಿಸಿದ.

> **ಅಥ ಕಿಪ್ತಃ ಶರೋ ಘೋರೋ ಮಯಾಪಿ ದ್ವಿಜಸತ್ತಮ ।**
> **ತಾಡಿತಶ್ಚ ಋಷಿಸ್ತೇನ ಶರೇಣಾನತಪರ್ವಣಾ ॥**
>
> **ನಾಪರಾಧ್ಯಾಮಹಂ ಕಿಂಚಿತ್ ಕೇನ ಪಾಪಮಿದಂ ಕೃತಂ ।**
>
> **ಅಕಾರ್ಯಕರಣಾಚ್ಚಾಪಿ ಭೃಶಂ ಮೇ ವ್ಯಥಿತಂ ಮನಃ ।**
> **ಅಜಾನತಾ ಕೃತಮಿದಂ ಮಯೇತ್ಯಹಮಥಾಬ್ರುವಮ್ ।**
>
> **ಕ್ಷಂತುಮರ್ಹಸಿ ಮೇ ಸರ್ವಮಿತಿ ಚೋಕ್ತೋ ಮಯಾ ಮುನಿಃ**
> **ವ್ಯಾಧಸ್ತ್ವಂ ಭವಿತಾ ಕ್ರೂರ ಶೂದ್ರಯೋನಾವಿತಿ ದ್ವಿಜ' ॥**
>
> **೨೧೫– ೨೬ ರಿಂದ ೩೧**

## ಬ್ರಾಹ್ಮಣವ್ಯಾಧ ಸಂವಾದ

ಹೀಗೆ ಋಷಿಯಿಂದ ಶಾಪಗ್ರಸ್ತನಾದ ನಾನು ಋಷಿಯನ್ನು 'ತ್ರಾಹಿ' (ರಕ್ಷಿಸು) ಎಂದು ಬೇಡಿಕೊಂಡೆ. ಅದಕ್ಕೆ ಋಷಿಯು 'ನನ್ನ ಶಾಪ ಸುಳ್ಳಾಗದು. ಅದರೂ ಸ್ವಲ್ಪ ಅನುಗ್ರಹ ಮಾಡುತ್ತೇನೆ. ನೀನು ಶೂದ್ರ ಯೋನಿಯಲ್ಲಿ ಹುಟ್ಟಿದರೂ ಧರ್ಮಜ್ಞನಾಗಿರುತ್ತೀ (ಧರ್ಮಾಧರ್ಮ ವಿವೇಕ ಬಲ್ಲವನಾಗಿರುತ್ತೀ). ಆಗ ನಿನ್ನ ತಂದೆ ತಾಯಿಗಳ ಸೇವೆ ಮಾಡುವೆ. ಅದರಿಂದ ಸಿದ್ಧಿಯನ್ನು ಹಾಗೂ ನಿನ್ನ ಜಾತಿಯಲ್ಲಿ ಗಣ್ಯ (ವಿಶಿಷ್ಟ) ವ್ಯಕ್ತಿಯೆನಿಸುವೆ. ಪೂರ್ವಜನ್ಮದ ಸ್ಮೃತಿಯೂ ಇರುತ್ತದೆ. ನಂತರ ಸ್ವರ್ಗ ಲೋಕಕ್ಕೆ ಹೋಗುವೆ. ಶಾಪಕ್ಷಯವಾದ ಮೇಲೆ ಮತ್ತೆ ದ್ವಿಜನಾಗುವೆ' ಎಂದು ನುಡಿದನು. ನಂತರ ನಾನು ಋಷಿಗೆ ಹೊಡೆದ ಆ ಬಾಣವನ್ನು ದೇಹದಿಂದ ತೆಗೆದು ಆಶ್ರಮಕ್ಕೆ ಕರೆದುಕೊಂಡು ಹೋಗಿ ಉಪಚರಿಸಿದೆ. ಅದರಿಂದ ಆ ಋಷಿಯು ಮರಣ ಹೊಂದಲಿಲ್ಲ.

ನೋಡು ಬ್ರಾಹ್ಮಣ (ಕೌಶಿಕ). ನನ್ನ ಹಿಂದಿನ ವೃತ್ತಾಂತವನ್ನು ಹೇಳಿದ್ದೇನೆ. ನಾನು ಮುಂದೆ ಸ್ವರ್ಗಕ್ಕೆ ಹೋಗುವೆ.

ಇದನ್ನು ಕೇಳಿದ ಬ್ರಾಹ್ಮಣನು, ನೀನು ನಿನ್ನ ಜಾತಿಗೆ ಅನುಗುಣವಾದ ಕ್ರೂರವಾದ ಮಾಂಸ ವ್ಯಾಪಾರ ಕೆಲಸವನ್ನು ನಿನ್ನ ಕರ್ತವ್ಯವೆಂದು ಭಾವಿಸಿ ಮಾಡಿದ್ದೀಯಾ. ನಿನಗೆ ಇದರಿಂದ ಯಾವ ದೋಷವಿಲ್ಲವೆಂದು ನಾನು ನಿಶ್ಚಯವಾಗಿ ತಿಳಿದಿದ್ದೇನೆ. ಹೀಗೆ ನೀನು ಈ ಜನ್ಮದ ತರುವಾಯ ಋಷಿಯು ಹೇಳಿದಂತೆ ಬ್ರಾಹ್ಮಣನಾಗುವೆ. **ನಾನಂತೂ ನಿನ್ನನ್ನು ಬ್ರಾಹ್ಮಣನೆಂದು ಭಾವಿಸಿದ್ದೇನೆ.** ಬ್ರಾಹ್ಮಣನಾಗಿ ಹುಟ್ಟಿಯೂ ನೀಚ ಕಾರ್ಯಗಳಲ್ಲಿ ನಿರತನಾಗಿದ್ದು, **ಡಾಂಭಿಕನಾಗಿರುವವನು ಶೂದ್ರನಿದ್ದಂತೆ. ಶೂದ್ರನಾಗಿ ಹುಟ್ಟಿದರೂ ಸತ್ಯಧರ್ಮರತನಾಗಿರುವವನನ್ನು ಬ್ರಾಹ್ಮಣನೆಂದು ನಾನು ಭಾವಿಸಿದ್ದೇನೆ.** ಹಾಗೆಯೇ ನೀನೂ ಕೂಡಾ ನನ್ನ ದೃಷ್ಟಿಯಿಂದ ಬ್ರಾಹ್ಮಣನೆಂದು ನಂಬಿದ್ದೇನೆ. **(ಬ್ರಾಹ್ಮಣ್ಯವು (ವೃತ್ತ) ಚಾರಿತ್ರ್ಯದಿಂದಲೇ ಹೊರತು ಬರೀ ಜನ್ಮತಃ ಅಲ್ಲ).**

ಕೊನೆಗೆ ವ್ಯಾಧನು ಹೇಳುತ್ತಾನೆ.

'ಮನೋರೋಗವನ್ನು ಪ್ರಜ್ಞೆ ಎಂಬ ಔಷಧಿಯಿಂದ, ಶಾರೀರಿಕ ರೋಗಗಳನ್ನು ಔಷಧಿಗಳಿಂದ (ಸಸ್ಯ ಸಂಬಂಧಿ) ಕಳೆದುಕೊಳ್ಳಬೇಕು. ಆದ್ದರಿಂದ ಜ್ಞಾನಿಯಾದವನು ಬಾಲರಂತೆ ವರ್ತಿಸಬಾರದು. ಜೀವನದಲ್ಲಿ ಸುಖದುಃಖಗಳು ಬಂದೇ ಬರುತ್ತವೆ. ಅವುಗಳನ್ನು ಸಮಾನವಾಗಿ ಸ್ವೀಕರಿಸಿ ದುಃಖ ಬಂದಾಗ ಶೋಕಿಸದೆ, ಸುಖ ಬಂದಾಗ ಹಿಗ್ಗದೇ ಇರುವುದನ್ನು ಅಭ್ಯಾಸ ಮಾಡಬೇಕು. ವಿಷಾದ ಪಡುವವನ ತೇಜಸ್ಸು ನಾಶವಾಗುತ್ತದೆ. ಮುಂದಿನ ಸುಖವನ್ನು ಗಮನಿಸುತ್ತಾ ಈಗಿನ ದುಃಖಗಳನ್ನು ಮರೆಯಬೇಕು. ನಾನು ಕೂಡಾ ಈ ಶರೀರ ತ್ಯಾಗಕ್ಕಾಗಿ ಆ ಕಾಲವನ್ನು ನಿರೀಕ್ಷಿಸುತ್ತಾ ನನ್ನ ಕರ್ತವ್ಯದಲ್ಲಿ ನಿರತನಾಗಿದ್ದೇನೆ' (ಇತ್ಯಾದಿ).

ಆಗ ಬ್ರಾಹ್ಮಣನು ಧರ್ಮವ್ಯಾಧನನ್ನು 'ನೀನು ಮೇಧಾವಿ. ಜ್ಞಾನಿ, ನಿನ್ನ ಬುದ್ಧಿ ಬಲು ವಿಸ್ತಾರವಾದುದು (ಅನೇಕ ವಿಷಯಗಳನ್ನು ತಿಳಿದಿರುವೆ) ನಿನ್ನ ಜಾತಿಯ ಬಗ್ಗೆ ನೀನು ಮಾಡುತ್ತಿರುವ ಕ್ರೂರ ಕರ್ತವ್ಯ (ಮಾಂಸ ಮಾರಾಟ) ದ ಬಗ್ಗೆ ನಾನು ಚಿಂತಿಸುವುದಿಲ್ಲ (ಮೊದಲು ನನಗೆ ಅಸಮಾಧಾನವಿತ್ತು ಈಗ ಇಲ್ಲ). ನೀನು ಜ್ಞಾನದಿಂದ (ಶಾಸ್ತ್ರ – ಪರಮಾತ್ಮ) ತೃಪ್ತನಾಗಿದ್ದೀಯಾ. ಪೂರ್ಣನಾಗಿದ್ದೀಯಾ, ಧರ್ಮಿಷ್ಠನಾಗಿದ್ದೀಯಾ, ನಿನಗೆ ಮಂಗಳವಾಗಲಿ. ನೀನು ಆಚರಿಸಿದ ಧರ್ಮ ನಿನ್ನನ್ನು ರಕ್ಷಿಸಲಿ. ಧರ್ಮ ವಿಷಯದಲ್ಲಿ ಪ್ರಮಾದ ಮಾಡದಿರು. (ತಪ್ಪು) ನೀನು ಸ್ವಯಂ ಧರ್ಮಬಲ್ಲವ ಧಾರ್ಮಿಕ ಮನೋಭಾವವುಳ್ಳವನು'.

ಹೀಗೆ ಹೇಳಲು ಧರ್ಮ ವ್ಯಾಧನು 'ಹಾಗೆ ಆಗಲಿ' ಎನ್ನುತ್ತಾ ಕೈ ಮುಗಿದನು. **ಬ್ರಾಹ್ಮಣನು ಧರ್ಮ ವ್ಯಾಧನಿಗೆ ಪ್ರದಕ್ಷಿಣೆ ಹಾಕಿ ಹೊರಟನು.** ತನ್ನ ದೇಶಕ್ಕೆ ಹೋದ ಬ್ರಾಹ್ಮಣನು ಧರ್ಮವ್ಯಾಧನು ಹೇಳಿದಂತೆ ವೃದ್ಧರಾದ ಮಾತಾಪಿತೃಗಳ ಸೇವೆ ಮಾಡಿ

ಕೃತಕೃತ್ಯನಾದನು.

ಬ್ರಾಹ್ಮನ ನುಡಿದನು –

'ದುಷ್ಕರಂ ಹಿ ಕೃತಂ ಕರ್ಮ ಜಾನತಾ ಜಾತಿಮಾತ್ಮನಃ ।
ಕರ್ಮದೋಷಶ್ಚ ವೈ ವಿದ್ವನ್ನಾತ್ಮ ಜಾತಿ ಕೃತೇನ ತೇ ।

ಕಂಚಿತ್ಕಾಲಮುಷ್ಯತಾಂ ವೈ ತತೋಽಸಿ ಭವಿತಾ ದ್ವಿಜಃ ।
ಸಾಂಪ್ರತಂ ಚ ಮತೋ ಮೇಽಸಿ ಬ್ರಾಹ್ಮಣೋ ನಾತ್ರ ಸಂಶಯಃ ।

ಬ್ರಾಹ್ಮಣಃ ಪತನೀಯೇಷು ವರ್ತಮಾನೋ ವಿಕರ್ಮಸು ।
ದಾಂಭಿಕೋ ದುಷ್ಕೃತಃ ಪ್ರಾಯಃ ಶೂದ್ರೇಣ ಸದೃಶೋ ಭವೇತ್ ।

ಯಸ್ತು ಶೂದ್ರೋ ದಮೇ ಸತ್ಯೇ ಧರ್ಮೇ ಚ ಸತತೋತ್ಥಿತಃ ।
ತಂ ಬ್ರಾಹ್ಮಣಮಹಂ ಮನ್ಯೇ ವೃತ್ತೇನ ಹಿ ಭವೇದ್ ದ್ವಿಜಃ ॥

ಅಸಂತೋಷಪರಾ ಮೂಢಾಃ ಸಂತೋಷಂ ಯಾಂತಿ ಪಂಡಿತಾಃ ।
ಅಸಂತೋಷಸ್ಯ ನಾಸ್ತ್ಯಂತಸ್ತುಷ್ಟಿಸ್ತು ಪರಮಂ ಸುಖಮ್ ॥

ನಾಹಂ ಭವಂತಂ ಶೋಚಾಮಿ ಜ್ಞಾನತೃಪ್ತೋಽಸಿ ಧರ್ಮವಿತ್ ।

ಬಾಢಮಿತ್ಯೇವ ತಂ ವ್ಯಾಧಃ ಕೃತಾಂಜಲಿರುವಾಚ ಹ ।
ಪ್ರದಕ್ಷಿಣಮಥೋ ಕೃತ್ವಾ ಪ್ರಸ್ಥಿತೋ ದ್ವಿಜಸತ್ತಮಃ ॥

ಸ ತು ಗತ್ವಾ ದ್ವಿಜಃ ಸರ್ವಾಂ ಶುಶ್ರೂಷಾಂ ಕೃತವಾಂಸ್ತದಾ ।
ಮಾತಾಪಿತೃಭ್ಯಾಂ ವೃದ್ಧಾಭ್ಯಾಂ ಯಥಾನ್ಯಾಯಂ ಸುಶಂಶಿತಃ' ॥

ಅಧ್ಯಾಯ ೨೧೬–೧೧ ರಿಂದ ೩೩

ಹೀಗೆ ಮಾರ್ಕಂಡೇಯರು ಧರ್ಮರಾಜನಿಗೆ ಪತಿವ್ರತಾಮಹಿಮೆ, ಬ್ರಾಹ್ಮಣನ ಮಹಿಮೆ, ತಂದೆ ತಾಯಿಗಳ ಸೇವಾ ಮಹತ್ತ್ವವನ್ನು ನಿರೂಪಿಸಿದಾಗ ಧರ್ಮರಾಜನು ಧರ್ಮವ್ಯಾಧೋಪ್ಯಾಖ್ಯಾನ ನಿಜಕ್ಕೂ ಅದ್ಭುತ. ನನಗೆ ಸಮಯ ಹೋದುದೇ ತಿಳಿಯಲಿಲ್ಲ. ಇಂತಹ ಉತ್ತಮ ಧರ್ಮವನ್ನು ಕೇಳುತ್ತಾ ಕೇಳುತ್ತಾ ತೃಪ್ತಿಯಾಗುತ್ತಿಲ್ಲ. ಮತ್ತೂ ಕೇಳಬೇಕೆನಿಸುತ್ತದೆ. ಎಂದನು.

## ಸಂದೇಶಗಳು–ವಿವರಣೆಗಳು

ಪತಿವ್ರತೋಪಾಖ್ಯಾನ – ಬ್ರಾಹ್ಮಣವ್ಯಾಧ ಸಂವಾದ ರೂಪ ಕಥಾನಕವು ೧೨ ಅಧ್ಯಾಯಗಳಲ್ಲಿ (೨೦೫–೨೧೬) ಪಸರಿಸಿದೆ. ಈ ಉಪಾಖ್ಯಾನದಲ್ಲಿನ ಪ್ರಮುಖ ಪಾತ್ರಗಳು ೧) ಪತಿವ್ರತಾ ಮಹಿಳೆ, ೨) ಕೌಶಿಕನೆಂಬ ಬ್ರಾಹ್ಮಣ ೩) ಕಾಶಿನಗರದ ಧರ್ಮವ್ಯಾಧ ಹಾಗೂ ೪) ಆತನ ತಂದೆ ತಾಯಿಗಳು.

ಈ ಉಪಾಖ್ಯಾನದ ಸಂದೇಶಗಳನ್ನು ಸಂಕ್ಷಿಪ್ತವಾಗಿ ಹೀಗೆ ಗಮನಿಸಬಹುದು.

೧. ಸ್ತ್ರೀಯರ ಮಹತ್ತ್ವವು ಅವರ ಪಾತಿವ್ರತ್ಯದಲ್ಲಿ ಅಡಗಿದೆ.

೨. ಸೂರ್ಯ, ಚಂದ್ರ, ಪೃಥಿವೀ, ವಾಯು, ಅಗ್ನಿ, ತಂದೆ, ತಾಯಿ, ಗುರುಗಳಂತೆ ಪತಿವ್ರತಾ ಸ್ತ್ರೀಯರು ಜಗತ್ತಿನಲ್ಲಿ ಮಾನ್ಯರು. ಕಾರಣ ಅವರು ಜಿತೇಂದ್ರಿಯರಾಗಿ ಪತಿಯನ್ನೇ ದೇವರಂತೆ ಭಾವಿಸಿ ಸೇವಿಸುತ್ತಾರೆ.

೩. ಕೌಶಿಕ ಬ್ರಾಹ್ಮಣ ವೇದಾವೇದಾಂಗ ವಿದ್ವಾಂಸನಾಗಿದ್ದರೂ ಜಿತೇಂದ್ರಿಯನಾಗಿರಲಿಲ್ಲ. ಕಡು ಕೋಪಿ. ಪರಿಣಾಮ ಧ್ಯಾನಾಸಕ್ತನಾದ ತನ್ನ ಮೇಲೆ ಬಲಾಕ ಪಕ್ಷಿಯು ಮಲ ಸುರಿಸಿದುದನ್ನು ಸಹಿಸದೆ ಕೆಂಗಣ್ಣಿನಿಂದ ಪಕ್ಷಿಯನ್ನು ನೋಡಿದ ಪರಿಣಾಮವಾಗಿ ನಿರಪರಾಧಿ ಆ ಪಕ್ಷಿ ಮರದಿಂದ ಸತ್ತು ಬಿದ್ದಿತು. ಆದ್ದರಿಂದ ಇಂದ್ರಿಯ ನಿಗ್ರಹವಿಲ್ಲದ ವಿದ್ಯೆ ಅಪ್ರಯೋಜಕ. ವಿದ್ಯೆಯ ಫಲ ಜಿತೇಂದ್ರಿಯ ತನವೇ ಹೊರತು ವಿನಾಶಕಾರಿ ಸಮಾಜ ಘಾತುಕ ದೃಷ್ಟಿಯಲ್ಲ.

೪. ಕೌಶಿಕ ಮುಂಗೋಪಿಯಾದರೂ ಅಷ್ಟೇ ವಿವೇಕಿ. ಕಾರಣ ತನ್ನ ಮುಂಗೋಪ ಪ್ರಾಣಿ ಹಿಂಸೆ ಮಾರಣದಲ್ಲಿ ಪರ್ಯವಸಾನವಾಯಿತೆಂಬ ಆತನ ಪಶ್ಚಾತ್ತಾಪ ಒಂದು ಉತ್ತಮ ಬೆಳವಣಿಗೆ ತಪ್ಪು ಮಾನವನ ಸಹಜಧರ್ಮ ಆದರೆ ಅದರ ಅರಿವು ವಿವೇಕಿಯ ಲಕ್ಷಣ.

೫. ಪಶ್ಚಾತ್ತಾಪದಿಂದ ನೊಂದ ಕೌಶಿಕ ಬ್ರಾಹ್ಮಣಿಯ ಮನೆಗೆ ಭಿಕ್ಷೆಗೆ ಹೋಗಿ ಕೇಳಿದ ಭಿಕ್ಷೆ ತರಲು ಹೋದ ಮಹಿಳೆ ಅದೇ ತಾನೇ ಬಂದ ಪತಿಯ ಸೇವೆಯಲ್ಲಿ ನಿರತಳಾಗಿ ಬ್ರಾಹ್ಮಣನಿಗೆ ತಡವಾಗಿ ಭಿಕ್ಷೆ ತಂದಳು. ಇದನ್ನು ಮುಂಗೋಪಿ ಬ್ರಾಹ್ಮಣ ಸಹಿಸದೆ ಪ್ರತಿಭಟಿಸಿದ. ಆದರೆ ಆ ತಾಯಿ (ಬ್ರಾಹ್ಮಣಿ) ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾ ತಾನೇನೂ ಬಲಾಕಪಕ್ಷಿಯಲ್ಲ, ಸಿಟ್ಟನ್ನು ತ್ಯಜಿಸು ಎಂದು ಹೇಳಿದಾಗ ಕೌಶಿಕನಿಗೆ ಆಶ್ಚರ್ಯವಾಯಿತು. ನಿನಗೆ ಹೇಗೆ ನನ್ನ ಬಲೀಕ ಕಥೆ ತಿಳಿಯಿತು ಎಂದಾಗ ಪತಿ ಸೇವೆಯ ಫಲ ಎಂದು ಉತ್ತರಿಸಿ ಕೌಶಿಕನ ಕಣ್ಣನ್ನು ತೆರೆಯಿಸಿ ಹೆಚ್ಚಿನ ಧರ್ಮಸೂಕ್ಷ್ಮಗಳನ್ನು ಮಿಥಿಲೆಯಲ್ಲಿನ ಧರ್ಮವ್ಯಾದನಿಂದ ತಿಳಿದುಕೊ ಎಂದು ಮತ್ತೊಂದು ಅಚ್ಚರಿ ತರಿಸಿದಳು ಕೌಶಿಕನಿಗೆ.

ಬ್ರಾಹ್ಮಣನಿಗೆ ಬಲಾಕ ಪಕ್ಷಿಯನ್ನು ಕೊಂದ ಮೇಲೂ ಕೋಪ ಶಾಶ್ವತವಾಗಿ ಆರಿರಲಿಲ್ಲ. ಕಾರಣ ಆ ದಿಶೆಯಲ್ಲಿ ಆತನ ಪ್ರಯತ್ನವೇ ಇರಲಿಲ್ಲ. ನಮ್ಮ ದೌರ್ಬಲ್ಯ ದೋಷಗಳನ್ನು ತಿಳಿದುಕೊಂಡರೆ ಮಾತ್ರ ಸಾಲದು. ಆ ದೋಷ ಮತ್ತೆ ಮರುಕಳಿಸದಂತೆ 'ಪ್ರಯತ್ನ ಮಾಡಿದಾಗ ಮಾತ್ರ ಜಿತೇಂದ್ರಿಯರಾಗುತ್ತೇವೆ. ಕೌಶಿಕ ಎಡವಿದ್ದು ಅಲ್ಲೇ ಪ್ರಾಯಃ ಬಹಳ ಸಾಧಕರು ಎಡವುವುದು ಅಲ್ಲಿಯೇ ಹಾಗೆಯೇ

ಅಲ್ಲದೆ ಆ ಮಹಿಳೆ ತಾನು ಕಣ್ಣಾರೆ ನೋಡದ ಬಲಾಕ ಪಕ್ಷಿಯ ಮರಣ, ಧರ್ಮ ವ್ಯಾಧನ ಮಹತ್ತ್ವವೆಲ್ಲ ಪತಿ ಸೇವೆಯಿಂದ ತಿಳಿದಳು ಸಂಬಂಧಪಡದ ಕರ್ತವ್ಯ

ನಿರ್ವಹಣೆ ಬರುವ ಫಲ ಮಾತ್ರ ಇನ್ನಾವುದೋ ವಿಷಯದ ಪರಿಜ್ಞಾನ ಇವೆಲ್ಲ ಅತೀಂದ್ರಿಯ ವ್ಯಾಪಾರಗಳು ಸಾಮಾನ್ಯ ಮನುಷ್ಯನಿಗೆ ಎಟುಕದ ವಿಷಯಗಳು

೩. ಕಾಮ ಕ್ರೋಧ ಮೋಹ ಗೆದ್ದವನು ನಿಜವಾದ ಬ್ರಾಹ್ಮಣ, ಸತ್ಯ ನುಡಿಯಲು ಬೇಕು. ಗುರುವನ್ನು ಸಂತೋಷಪಡಿಸಬೇಕು. ನಮಗೆ ಯಾರಾದರೂ ಹಿಂಸಿಸಿದರೂ ಅವರಿಗೆ ಹಿಂಸೆ ನೀಡಬಾರದು. ಜಿತೇಂದ್ರಿಯತ್ವ ಧರ್ಮಪರ ಮನಸ್ಸು, ಸ್ವಾಧಾಯದಲ್ಲಿ ನಿರತ ನಾದವನೇ ದ್ವಿಜ.

೪. ಭಾಗವತ ಧರ್ಮರತನಾದವನೇ ಬ್ರಾಹ್ಮಣ

೫. ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ (ಯಥಾಶಕ್ತಿ) ಮಾಡುವವನೇ ಬ್ರಾಹ್ಮಣ

೬. ಪತಿವ್ರತೆಯು ತನ್ನದೂ ಸ್ವಲ್ಪ ತಪ್ಪಾಯಿತೆಂದು ಹೇಳುವ ಮೂಲಕ ಪತಿಪೂಜೆ / ಅತಿಥಿಪೂಜೆಗಳಲ್ಲಿ ಮೊದಲು ಸ್ಥಾನ ಪತಿ ಪೂಜೆ. ಅತಿಥಿಪೂಜೆ ತಾನು ಮಾಡಬೇಕಿತ್ತಾದರೂ ಹಸಿದು ಬಂದ ಪತಿಯನ್ನು ಸೇವಿಸುವ ಭರದಲ್ಲಿ ಅತಿಥಿಯಾದ ಬ್ರಾಹ್ಮಣನನ್ನು ಮರೆತುದು ತಪ್ಪೆಂದು ಒಪ್ಪುತ್ತಾ ತನ್ನ ದೌರ್ಬಲ್ಯವನ್ನು ಒಪ್ಪುತ್ತಾಳೆ. ಬರೀ ಬೇರೆಯವರ ದೋಷ ಎತ್ತಿ ತೋರುವುದರಲ್ಲಿ ಬುದ್ಧಿಯನ್ನು ಉಪಯೋಗಿಸದೆ ತನ್ನ ದೋಷಗಳ ವಿವೇಕವೂ ಇರಬೇಕು, ಎಂದು ಇದರ ಅಭಿಪ್ರಾಯ.

೭. ತನ್ನ ತಪ್ಪಿನ ಅರಿವಿನ ಜೊತೆಗೆ ತನ್ನನ್ನು ತಾನೇ ನಿಂದಿಸಿದಾಗ ಬರುವ ಪಾಪ ಕಡಿಮೆಯಾಗುತ್ತದೆ.

೮. ಬ್ರಾಹ್ಮಣನು ತನ್ನನ್ನು ನೋಡುವ ಸಲುವಾಗಿ ಕಾಯುತ್ತಿದ್ದಾನೆ ಎಂಬ ಸೂಕ್ಷ್ಮ ಧರ್ಮ ತಿಳಿದು ಸರ್ವವ್ಯಾಧನು ಕೂಡಲೆ ಬಂದು ಬ್ರಾಹ್ಮಣನನ್ನು ಅಭಿವಂದಿಸುತ್ತಾನೆ. ಇದು ವ್ಯಾಧನು ತಾನು ಮಾಂಸ ಮಾರಾಟದಲ್ಲಿ ತುಂಬಾ ನಿರತನಾಗಿದ್ದರೂ ಅತಿಥಿಯನ್ನು ಕಾಯಿಸಬಾರದೆಂಬ ಪ್ರಜ್ಞೆ ಪ್ರತಿಯೊಬ್ಬ ಅಭ್ಯಾಗತನಲ್ಲಿರಬೇಕಾದ ಕರ್ತವ್ಯ. ತನ್ನ ಮಾರಾಟದ ಸಮಯ ಮುಗಿಯುವವರೆಗೂ ಬ್ರಾಹ್ಮಣ ಕಾಯಲಿ ಎನ್ನದೇ ತನ್ನ ವ್ಯವಹಾರಕ್ಕಿಂತ ಅತಿಥಿಗೆ ಗಮನ ಕೊಡುವುದೇ ಧರ್ಮವೆಂದು ಬಗೆದ ಧರ್ಮವ್ಯಾಧನ ಧರ್ಮ (ಪ್ರಜ್ಞೆ ಅನುಕರಣೀಯ)

೯. ಬ್ರಾಹ್ಮಣ ಮಹಿಳೆ (ಪತಿವ್ರತೆ) ನಿನ್ನನ್ನು ಕಳಿಸಿದ್ದಾಳಷ್ಟೆ. ಎಂಬ ವ್ಯಾಧನ ಮಾತು ಬ್ರಾಹ್ಮಣನಿಗೆ ಮತ್ತೊಂದು ಅಚ್ಚರಿಯಾಯಿತು.

೧೦. ವ್ಯಾಧನ ಸ್ವಧರ್ಮಾಚರಣೆಯ ಫಲವಿದು. ಬ್ರಾಹ್ಮಣನನ್ನು ಮಾಂಸ ಮಾರಾಟದ ಅಂಗಡಿಯ ಮುಂದೆ ನಿಲ್ಲಿಸದೆ ತನ್ನ ಮನೆಗೇ ಕರೆದುಕೊಂಡು ಹೋಗುತ್ತಾನೆ. ಬ್ರಾಹ್ಮಣರಿಗೆ ಯೋಗ್ಯಸ್ಥಾನ ಮಾಂಸದ ಪೇಟೆಯಲ್ಲ ಎಂಬ ಆತನ

ಪ್ರಶ್ನೆ ಕೂಡಾ ಅನುಕರಣೀಯ. ಯಾರನ್ನು ಎಲ್ಲಿ ಹೇಗೆ ಮಾತನಾಡಿಸಬೇಕು? ಕರೆದುಕೊಂಡು ಹೋಗಬೇಕೆಂಬ ವಿವೇಕ ಎಲ್ಲರಿಗೂ ಇರಬೇಕು.

೧೧. ತನ್ನ ಮನೆಗೆ ಹೋಗುವಾಗಲೂ ಬ್ರಾಹ್ಮಣ ಮುಂದೆ ತಾನು ಹಿಂದೆಯೇ ಸಾಗಿ ವರ್ಣಾಶ್ರಮ ಧರ್ಮದ ಪಾಲನೆ ಮಾಡಿದ ಧರ್ಮವ್ಯಾಧ ತಾನು ವರ್ಣಾಶ್ರಮ ಪಾಲಕವೆಂದು ತೋರಿಸಿ ಎಲ್ಲರಿಗೂ ಆದರ್ಶನಾಗುತ್ತಾನೆ. **ಅಗ್ರತಸ್ತು ದ್ವಿಜಂ ಕೃತ್ವಾ ಸ ಜಗಾಮ ಗೃಹಂ ಪ್ರತಿ (೨೦೭/೧೭).**

೧೨. ಬ್ರಾಹ್ಮಣನಿಗೆ ವ್ಯಾಧನ ಮಾಂಸ ವ್ಯಾಪಾರ ಕೆಲಸ ರುಚಿಸಲಿಲ್ಲ. ಆದರೆ ವ್ಯಾಧನು ಅದು ತನ್ನ ಕುಲಧರ್ಮವೆಂದು ಸಮರ್ಥಿಸಿಕೊಳ್ಳುತ್ತಾನೆ. ಆದ್ದರಿಂದ ಕುಲೋಚಿತ ಧರ್ಮ ಆಚರಣೆಗೆ ಹೇಸಿಗೆ ಪಟ್ಟುಕೊಳ್ಳದೆ ಹೆಮ್ಮೆ ಪಡಬೇಕು. ಕಾರಣ ಅದು ಬ್ರಹ್ಮ ನಿಯತವಾದುದು. ಅದು ಶಿಷ್ಟರು ನಂಬಿ ಬಾಳಿದ ಮಾರ್ಗ.

೧೩. ಜಗತ್ತಿನಲ್ಲಿ ಹಿಂಸೆ ಇಲ್ಲದ ಯಾವ ಕ್ಷೇತ್ರವೂ ಇಲ್ಲ. ಅದೊಂದು ಜೀವನದ ಅನಿವಾರ್ಯ ಕರ್ಮ. ಯಜ್ಞ ಯಾಗಗಳಲ್ಲಿ ಹಿಂಸೆ ಇದೆ. ನಾವು ತಿನ್ನುವ ಸಸ್ಯಗಳ ಆಹಾರವೂ ಪ್ರಾಣಿಗಳೇ. ಪ್ರಾಣಿಗಳ ಹಿಂಸೆಯಿಲ್ಲದೆ ಯಾವ ಜೀವನವೂ ನಡೆಯದು.

೧೪. ಧರ್ಮವ್ಯಾಧನ ಸಿದ್ಧಿಯ ಹಿಂದೆ ಇದ್ದುದು ವೃದ್ಧರಾದ ಮಾತಾಪಿತೃಸೇವೆ. ಅದರಿಂದ ಹಾಗೂ ಕುಲೋಚಿತವಾದ ಧರ್ಮದಿಂದ ತಾನು ಅನುಭವಿಸದ, ನೋಡದ ವಿಷಯದ ಪರಿಜ್ಞಾನವನ್ನು ಹೊಂದಿದ್ದನು. ಆದ್ದರಿಂದ ಅತೀತ ಅನಾಗತ, ವರ್ತಮಾನ ಹಾಗೂ ಇತರೆ ಅತೀಂದ್ರಿಯ ಧರ್ಮಜ್ಞಾನಕ್ಕೆ ವರ್ಣಾಶ್ರಮಧರ್ಮವಾದ ತಂದೆ ತಾಯಿಗಳ ಸೇವೆ ಮೊದಲಾದವುಗಳೇ ಸಾಧನಗಳು. ಆದ್ದರಿಂದ ಆಚಾರ್ಯರು ಹೇಳಿದಂತೆ **ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಧರ್ಮಃ ತದ್ವಿರುದ್ಧಃ ಸರ್ವೋಽಪ್ಯಧರ್ಮಃ** ಎಂಬುದೇ ಈ ಉಪಾಖ್ಯಾನದ ಸಂದೇಶ (ತಮ್ಮ ತಮ್ಮ ವರ್ಣ ಆಶ್ರಮಗಳಿಗೆ ಶಾಸ್ತ್ರದಲ್ಲಿ ಹೇಳಲ್ಪಟ್ಟ ಕರ್ತವ್ಯವೇ ಧರ್ಮ, ಅದಕ್ಕೆ ವಿರೋಧಿಯಾದುದು ಅಧರ್ಮ).

ಇತ್ಯಾದಿ...

*****

# ರಾಮೋಪಾಖ್ಯಾನಪರ್ವ

## ೫೨. ಶ್ರೀರಾಮೋಪಾಖ್ಯಾನ

ಪಾಂಡವರ ವನವಾಸದ ಮತ್ತೊಂದು ಘಟ್ಟ ಜಯದ್ರಥನಿಂದ ದ್ರೌಪದೀದೇವಿಯನ್ನು ಹರಣ ಮಾಡಿ ನಂತರ ಪಾಂಡವರಿಂದ ಆಕೆಯ ಬಿಡುಗಡೆಯ ಘಟ್ಟ. ಈ ಘಟನೆಯಿಂದ ಸುತ್ತಲೂ ಇದ್ದ ಋಷಿ ಮುನಿಗಳು ಮನನೊಂದರು. ವಿಶೇಷವಾಗಿ ಧರ್ಮರಾಜನು ಬಹಳ ನೊಂದು ಮಾರ್ಕಂಡೇಯರನ್ನು ಕೇಳುತ್ತಾನೆ.

'ಪೂಜ್ಯರೇ – ದ್ರೌಪದೀ ದೇವಿಯು ಅಯೋನಿಜಳು. ಅಗ್ನಿಯಂತೆ ಪರಮ ಪವಿತ್ರಳೇ. ಪಾಂಡುರಾಜನ ಸೊಸೆ. ಧರ್ಮಿಷ್ಠಳು. ಯಾವ ಪಾಪವನ್ನೂ ಮಾಡಿಲ್ಲ. ಸದ್ಧರ್ಮರತಳು. ಅಂತಹವಳನ್ನು ಜಯದ್ರಥನು ಬಲಾತ್ಕಾರದಿಂದ ಅಪಹರಿಸಿದ ಮೂರ್ಖ. ಯದ್ಯಪಿ ಅವನನ್ನು ನಾವು ಸದೆ ಬಡಿದು ದ್ರೌಪದಿಯನ್ನು ವಾಪಸು ಕರೆ ತಂದಿದ್ದೇವೆ. ಆಕೆಗೆ ಇಂತಹ ಪರಿಸ್ಥಿತಿ ಬಂದಿತಲ್ಲಾ! ನಾವು ರಾಜ್ಯ ಕಳೆದುಕೊಂಡು ವನವಾಸ ಮಾಡಬೇಕಾಯಿತು. ನಮ್ಮಂತಹ ಹತಭಾಗ್ಯರನ್ನು ತಾವು ಕೇಳಿದ್ದೀರಾ? ನೋಡಿದ್ದೀರಾ? ಎಂದು. ಇದೆಲ್ಲ ವಿಧಿ ಬರೆದದ್ದು. ಯಾರಿಂದಲೂ ಯಾರನ್ನೂ ಬಿಡದು!'.

> **'ಮನ್ಯೇ ಕಾಲಶ್ಚ ಭಗವಾನ್ ದೈವಂ ಚ ವಿಧಿ ನಿರ್ಮಿತಮ್ ।**
> **ಭವೀತವ್ಯಂಚ ಭೂತಾನಾಂ ಯಸ್ಯ ನಾಸ್ತಿ ವ್ಯತಿಕ್ರಮಃ ॥**
> **ನ ಹಿ ಪಾಪಂ ಕೃತಂ ಕಿಂಚಿತ್ ಕರ್ಮ ವಾ ನಿಂದಿತಂ ಕ್ವಚಿತ್ ।**
> **ದ್ರೌಪದ್ಯಾ ಬ್ರಾಹ್ಮಣೇಷ್ವೇವ ಧರ್ಮಃ ಸುಚರಿತೋ ಮಹಾನ್**
> **ಅಸ್ತಿ ನೂನಂ ಮಯಾ ಕಶ್ಚಿತ್ ಅಲ್ಪಭಾಗ್ಯತರೋ ನರಃ ।**
> **ಭವತಾ ದೃಷ್ಟಪೂರ್ವೋ ವಾ ಶ್ರುತಪೂರ್ವೋಽಪಿ ವಾ ಭವೇತ್' ॥**
> **ಮ.ಭಾ. ವನಪರ್ವ. ೨೭೩–೬, ೮, ೧೨**

ಇದಕ್ಕೆ ಮಾರ್ಕಂಡೇಯರು ಉತ್ತರಿಸುತ್ತಾ 'ರಾಜನ್ ಹಿಂದೆ ಶ್ರೀರಾಮನು ಅಸದೃಶವಾದ ದುಃಖವನ್ನು ಅನುಭವಿಸಿದ. ರಾಕ್ಷಸ ರಾವಣನು ರಾಮನ ಪತ್ನೀ ಜಾನಕಿಯನ್ನು ಮೋಸದಿಂದ ಅಪಹರಿಸಿದ (ಸನ್ಯಾಸಿ ವೇಷದಿಂದ ಬಂದು ಮೋಸ

ಮಾಡಿದ ಎಂದು ಭಾವ). ನಂತರ ರಾಮನು ಸುಗ್ರೀವನ ಬಲವನ್ನು ಆಶ್ರಯಿಸಿ ಲಂಕೆಗೆ ಸೇತು ನಿರ್ಮಾಣ ಮಾಡಿ ಲಂಕೆಯನ್ನು ಸುಟ್ಟು ಸೀತೆಯನ್ನು ವಾಪಸು ಕರೆದು ಕೊಂಡು ಬಂದನು.

**'ಪ್ರಾಪ್ತಮಪ್ರತಿಮಂ ದುಃಖಂ ರಾಮೇಣ ಭರತರ್ಷಭ ।**
**ರಕ್ಷಸಾ ಜಾನಕೀ ತಸ್ಯ ಹೃತಾ ಭಾರ್ಯಾ...........**
**ಆಶ್ರಮಾತ್ ರಾಕ್ಷಸೇಂದ್ರೇಣ ರಾವಣೇನ ದುರಾತ್ಮನಾ**
**ಪ್ರತ್ಯಾಜಹಾರ ತಾಂ ರಾಮಃ ಸುಗ್ರೀವ ಬಲಮಾಶ್ರಿತಃ' ॥**

**ಅ ೨೭೪-೧, ೨, ೩.**

ಇದನ್ನು ಕೇಳಿದ ಯುಧಿಷ್ಠಿರನು (ಏನೂ ತಿಳಿಯದವನಂತೆ) ರಾಮ ರಾವಣರ ಪರಿಚಯವನ್ನು ಮಾಡಿಕೊಡಲು ಪ್ರಾರ್ಥಿಸುತ್ತಾನೆ.

ಅದಕ್ಕೆ ಮಾರ್ಕಂಡೇಯರು, ರಾಜನ್ !

ಹಿಂದೆ ಇಕ್ಷ್ವಾಕುವಂಶದಲ್ಲಿ ಅಜನೆಂಬ ಮಹಾರಾಜನಿದ್ದನು. ಅವನ ಮಗ ದಶರಥ, ಆತನಿಗೆ ಮೂವರು ಪತ್ನಿಯರು ಕೌಸಲ್ಯಾ, ಸುಮಿತ್ರಾ, ಕೈಕೇಯಿ ಎಂದು ಅವರಲ್ಲಿ ಕೌಸಲ್ಯೆಯಲ್ಲಿ ರಾಮ, ಸುಮಿತ್ರೆಯಲ್ಲಿ ಲಕ್ಷ್ಮಣ ಶತೃಘ್ನರು, ಕೈಕೇಯಿಯಲ್ಲಿ ಭರತನೆಂದು ನಾಲ್ವರು ಪುತ್ರರು ಜನಿಸಿದರು. ವಿದೇಹರಾಜನಾದ ಜನಕನಿಗೆ ಜಾನಕೀ ಮಗಳು ಆಕೆಯನ್ನು ರಾಮನು ಮದುವೆಯಾದ. ಆಕೆ ಮಹಿಷಿಯಾದಳು.

ರಾವಣನ ವಂಶ ಪರಿಚಯ ಹೀಗಿದೆ.

ಚತುರ್ಮುಖ ಬ್ರಹ್ಮನ ಮಾನಸಪುತ್ರ ಪುಲಸ್ತ್ಯ. ಅವನ ಮಗ ವೈಶ್ರವಣ –ಕುಬೇರ (ಗೋವಿನಲ್ಲಿ ಜನಿಸಿದವನು). ಕುಬೇರನು ತಂದೆಯಾದ ಪುಲಸ್ತ್ಯರನ್ನು ಬಿಟ್ಟು ತಾತ ಬ್ರಹ್ಮನ ಬಳಿ ಹೋಗಿ ಅಲ್ಲೇ ಇದ್ದ. ಇದರಿಂಬ ಕೋಪಗೊಂಡ ಪುಲಸ್ತ್ಯ ತನ್ನಿಂದ ತಾನೇ ಇನ್ನೊಂದು ರೂಪ ಪಡೆದು ವಿಶ್ರವಸನೆಂದು ಅನಿಸಿಕೊಂಡನು. ವಿಶ್ರವಸನು ಪುಲಸ್ತ್ಯರ ಅರ್ಧದೇಹದಿಂದ ಕೂಡಿದವನಾಗಿ ಜನಿಸಿದ ಬ್ರಾಹ್ಮಣನಾಗಿದ್ದನು. ಆದರೆ ಪಿತಾಮಹನಾದ ಬ್ರಹ್ಮನು ತನ್ನನ್ನು ಆಶ್ರಯಿಸಿದ ಕುಬೇರನ ಮೇಲೆ ಪ್ರಸನ್ನನಾಗಿ ಲೋಕಪಾಲಕನನ್ನಾಗಿ ಮಾಡಿ, ಲಂಕಾಧಿಪತ್ಯ ಹಾಗೂ ಅಮರತ್ವ ಹಾಗೂ ಧನೇಶತ್ವವನ್ನೂ ಅನುಗ್ರಹಿಸಿ ಕಾಮಗಾಮಿಯಾದ ಪುಷ್ಪಕವೆಂಬ ವಿಮಾನವನ್ನು ಕೊಟ್ಟನು. ಯಕ್ಷ ರಾಕ್ಷಸರ ಗಣಗಳಿಗೆ ಅಧಿಪತಿಯನ್ನಾಗಿಯೂ ಮಾಡಿದನು. ರುದ್ರದೇವರ ಸ್ನೇಹವನ್ನು ಕುಬೇರ ಹೊಂದಿದುದಲ್ಲದೆ ನಲಕೂಬರನೆಂಬ ಮಗನನ್ನು ಪಡೆದನು (ಕುಬೇರ)

**ಪಿತಾಮಹಸ್ತು ಪ್ರೀತಾತ್ಮಾ ದದೌ ವೈಶ್ರವಣಸ್ಯ ಹ ।**
**ಅಮರತ್ವಂ ಧನೇಶತ್ವಂ ಲೋಕಪಾಲತ್ವಮೇವ ಚ ॥**
**ಈಶಾನೇನ ತಥಾ ಸಖ್ಯಂ ಪುತ್ರಂ ಚ ನಲಕೂಬರಂ ।**

**ರಾಜಧಾನೀನಿವೇಶಂ ಚ ಲಂಕಾಂ ರಕ್ಷೋಗಣಾನ್ವಿತಾಂ ॥**
**ವಿಮಾನಂ ಪುಷ್ಪಕಂ ನಾಮ ಕಾಮಗಂ ಚ ದದೌ ಪ್ರಭುಃ ॥**

**ಅ. ೨೭೪ ೧೫, ೧೬, ೧೭**

ಪುಲಸ್ತ್ಯನ ಅರ್ಧ ದೇಹಾತ್ಮಕವಾದ ವಿಶ್ರವಸ್, ಕುಬೇರನನ್ನು ಕ್ರೋಧದಿಂದ ಕಾಣುತ್ತಿದ್ದ. ಆದರೆ ಕುಬೇರ ಮಾತ್ರ ತನ್ನ ತಂದೆಯನ್ನು ಹಾಗೆ ನೋಡದೆ ಆತನ ಪ್ರಸನ್ನತೆಗಾಗಿ ಸದಾ ಪ್ರಯತ್ನಿಸುತ್ತಿದ್ದ. ವಿಶ್ರವಸ್‌ನಿಗೆ ಅದಕ್ಕಾಗಿ **ಪುಷ್ಪೋತ್ಕಟಾ ರಾಕಾ, ಮಾಲಿನೀ** ಎಂಬ ಮೂವರು ರಾಕ್ಷಸಿಯರನ್ನು ನಿಯೋಜಿಸಿದ್ದ ಅವರೂ ತುಂಬಾ ಸ್ಪರ್ಧೆಯಿಂದಲೇ ಆತನ ಸೇವೆ ಮಾಡುತ್ತಿದ್ದರು. ಅವರ ಸೇವೆಗೆ ಸಂತೋಷಗೊಂಡ **ವಿಶ್ರವಸ್** ಋಷಿಗಳು ಲೋಕಪಾಲ ಸಮಾನರಾದ ಪುತ್ರರನ್ನು ಅನುಗ್ರಹಿಸಿದರು. ಹೀಗಾಗಿ **ಪುಷ್ಪೋತ್ಕಟೆ**ಯಲ್ಲಿ ಕುಂಭಕರ್ಣ ರಾವಣರು ಜನಿಸಿದರು. **ಮಾಲಿನಿ**ಯಲ್ಲಿ **ವಿಭೀಷಣ**ನು ಜನಿಸಿದನು. '**ರಾಕಾ**'ಳಲ್ಲಿ '**ಖರ** ಹಾಗೂ **ಶೂರ್ಪಣಖಾ**' ಎಂಬ ಮಿಥುನ ಸಂತಾನವಾಯಿತು. ವಿಭೀಷಣನು ರೂಪದಿಂದ ಎಲ್ಲರನ್ನು ಮೀರಿಸಿದ್ದನು. ಧರ್ಮಿಷ್ಠನೂ ಆಗಿದ್ದನು.

ರಾವಣನು ದಶಕಂಠನಾಗಿದ್ದನು. ಎಲ್ಲರಿಗಿಂತ ಬಲವೀರ್ಯ ಪರಾಕ್ರಮಗಳಲ್ಲಿ ಶ್ರೇಷ್ಠನಾಗಿದ್ದನು. ಕುಂಭಕರ್ಣನು ಮಾಯಾವಿಯೂ, ಯುದ್ಧಕುಶಲನೂ, ಭಯಂಕರನೂ ಆಗಿದ್ದ. ಖರನು ಧನುರ್ವಿದ್ಯೆಯಲ್ಲಿ ಪರಾಕ್ರಮಿ, ಬ್ರಾಹ್ಮಣ ದ್ರೋಹಿಯೂ, ಬ್ರಾಹ್ಮಣರನ್ನು ಕೊಂದು ರಕ್ತ ಪಾನರತನಾಗಿದ್ದ. ಶೂರ್ಪಣಖಿಯು ಎಲ್ಲರಿಗೂ (ಸಾಧಕರಿಗೆ) ವಿಘ್ನ ಮಾಡುವವಳೂ, ಭಯಂಕರಳೂ ಆಗಿದ್ದಳು.

**'ವಿಭೀಷಣಸ್ತು ರೂಪೇಣ ಸರ್ವೇಭ್ಯೋಽಭ್ಯಧಿಕೋಽಭವತ್ ।**
**ಸ ಬಭೂವ ಮಹಾಭಾಗೋ ಧರ್ಮಗೋಪ್ತಾ ಕ್ರಿಯಾರತಿಃ' ॥ ೨೭೫-೯**

ಎಲ್ಲರೂ ವೇದಬಲ್ಲವರೂ, ಶೂರರೂ ವ್ರತನಿಷ್ಠರೂ ಆಗಿದ್ದರು. ಗಂಧಮಾದನ ಪರ್ವತದಲ್ಲಿ ವಾಸವಾಗಿದ್ದರು. ಈ ರಾವಣಾದಿಗಳು ತಂದೆಯೊಡನೆ ಸರ್ವಾಲಂಕಾರ ಭೂಷಿತನಾಗಿ ಸಮೃದ್ಧಿಯಿಂದ ಕೂಡಿದ ಕುಬೇರನನ್ನು ನೋಡಿ ರಾವಣಾದಿಗಳಿಗೆ ಅಸೂಯೆಯುಂಟಾಗಿ ತಪಸ್ಸು ಮಾಡಲು ನಿಶ್ಚಯಿಸಿದರು.

ರಾವಣನು ಒಂದು ಸಾವಿರ ವರ್ಷ ಘೋರವಾದ ತಪಸ್ಸನ್ನು ಏಕಪಾದದ ಮೇಲೆ ನಿಂತು (ಬ್ರಹ್ಮನನ್ನು ಕುರಿತು) ಮಾಡಿದನು. ಪಂಚಾಗ್ನಿಗಳ ಮಧ್ಯೆ ಇದ್ದು ವಾಯುಭಕ್ಷನಾಗಿಯೇ ತಪಸ್ಸನ್ನು ಮಾಡಿದ ಕುಂಭಕರ್ಣನೂ ತಲೆಕೆಳಗಾಗಿ, ನಿಯತ ಆಹಾರವುಳ್ಳವನಾಗಿ, ನಿಯತ ವ್ರತದಿಂದ ಸಹಸ್ರವರ್ಷ ತಪಸ್ಸನ್ನು ಮಾಡಿದನು. ವಿಭೀಷಣ ಕೂಡಾ ಒಂದು ತರಗಲೆ ಮಾತ್ರ ತಿನ್ನುತ್ತಾ, ಸದಾ ಮಂತ್ರ ಜಪ ಪರಾಯಣನಾಗಿ ಉಪವಾಸದಿಂದ, ಒಳ್ಳೆಯ ಮನಸ್ಸಿನಿಂದ ಅಷ್ಟೇ ವರ್ಷಕಾಲ ತಪಸ್ಸನ್ನು ಮಾಡಿದನು. ಖರ ಶೂರ್ಪಣಖಿಯರು ಇವರಿಗೆ ಸೇವೆ ಮಾಡುತ್ತಾ ಅಷ್ಟರಿಂದಲೇ ತುಷ್ಟರಾಗಿದ್ದರು.

ಸಾವಿರ ವರ್ಷವಾಗುತ್ತಿರಲು ರಾವಣನು ತನ್ನ ಶಿರಶ್ಛೇದ ಮಾಡಿ ಅಗ್ನಿಯಲ್ಲಿ ಅದನ್ನು ಹೋಮ ಮಾಡಿದನು. ಬ್ರಹ್ಮದೇವರು ಇದರಿಂದ ಸಂತುಷ್ಟರಾಗಿ ಬಂದು ಅವರೆಲ್ಲರನ್ನು ತಪಸ್ಸು ಸಾಕೆಂದು ನಿಲ್ಲಿಸಿ ಪ್ರತ್ಯೇಕವಾಗಿ ಅವರಿಗೆ ವರಗಳನ್ನು ಅನುಗ್ರಹಿಸಿದರು.

ಬ್ರಹ್ಮದೇವರು ರಾವಣನಿಗೆ 'ನಿನ್ನ ತಪಸ್ಸಿನಿಂದ ನನಗೆ ಸಂತೋಷವಾಗಿದೆ. ಅಮರತ್ವವನ್ನು ಬಿಟ್ಟು ನಿನಗೆ ಬೇಕಾದ ವರ ಕೇಳು. ಮಹಾ ಆಶೆಯಿಂದ ನೀನು ನಿನ್ನ ಶಿರಸ್ಸನ್ನು ಅಗ್ನಿಯಲ್ಲಿ ಹಾಕಿದ್ದೀಯಷ್ಟೇ! ಕತ್ತರಿಸಿದ ಶಿರಸ್ಸುಗಳು ಮತ್ತೆ ಬೆಳೆಯಲಿ. ನಿನ್ನ ದೇಹದಲ್ಲಿ ವಿರೂಪತೆ ಕುರೂಪತನ ಹೋಗಲಿ. ಮನಸ್ಸಿಗೆ ಬಂದ ರೂಪ ನಿನಗೆ ಬರಲಿ (ಕಾಮರೂಪಿಯಾಗು). ರಣರಂಗದಲ್ಲಿ ಶತ್ರುಗಳನ್ನು ಗೆಲ್ಲುವೆ' ಎಂದರು. ಅದಕ್ಕೆ ರಾವಣನು 'ನನಗೆ ಗಂಧರ್ವ ದೇವತೆ, ಅಸುರ, ಯಕ್ಷ, ರಾಕ್ಷಸ, ಸರ್ಪ, ಕಿನ್ನರರಿಂದ ನನಗೆ ಪರಾಭವ ಬರದಿರಲಿ' ಎಂದ. ಆಗ ಬ್ರಹ್ಮನು ಮನುಷ್ಯರನ್ನು ಮಾತ್ರ ಬಿಟ್ಟು ನಿನಗೆ ಉಳಿದವರಿಂದ ಭಯವಿಲ್ಲ. ನಿನಗೆ ಮಂಗಳವಾಗಲಿ ಎಂದು ಬ್ರಹ್ಮನು ಹೇಳಲು ಮನುಷ್ಯರನ್ನು ತಿನ್ನುವ ದುರ್ಬುದ್ಧಿಯ ರಾವಣನು ನಕ್ಕು ಮನುಷ್ಯರಿಂದ ಏನಾದೀತು? ಎಂದು ಅವರನ್ನು ತುಚ್ಛವಾಗಿ ಕಂಡ. ನಂತರ ಕುಂಭಕರ್ಣನಿಗೂ ಬೇಕಾದುದನ್ನು ಕೇಳು ಎಂದಾಗ ಅವನು ಅಜ್ಞಾನದಿಂದ ಬುದ್ಧಿಗೆಟ್ಟ ಅವನು '**ಭಾರೀ ನಿದ್ರೆಯನ್ನು**' ಕೇಳಿ ಅದನ್ನೇ ಪಡೆದ. ನಂತರ ಬ್ರಹ್ಮನು ವಿಭೀಷಣನನ್ನು ವರ ಕೇಳೆಂದು ಹೇಳಿದಾಗ ಆತನು 'ಎಂತಹ ಆಪತ್ತೇ ಬರಲಿ, ನನ್ನ ಬುದ್ಧಿ ಅಧರ್ಮದಲ್ಲಿ ಸುಳಿಯದಿರಲಿ. ಇದುವರೆವಿಗೂ ಕಲಿಯದ ಬ್ರಹ್ಮಾಸ್ತ್ರವು ನನಗೆ ಹೊಳೆಯಲಿ' ಎಂದ.

ಆಗ ಬ್ರಹ್ಮನು ರಾಕ್ಷಸ ಯೋನಿಯಲ್ಲಿ ಹುಟ್ಟಿದರೂ ನಿನ್ನ ಬುದ್ಧಿ ಅಧರ್ಮದಲ್ಲಿಲ್ಲ. ಕಾರಣ ನಿನಗೆ ಅಮರತ್ವವನ್ನು ಕೊಡುತ್ತೇನೆ ಎಂದ.

ನಂತರ ಬ್ರಹ್ಮವರ ಪಡೆದ ರಾವಣನು ಧನೇಶ್ವರನಾದ ಕುಬೇರನನ್ನು ಆ ಯುದ್ಧದಲ್ಲಿ ಗೆದ್ದು ಲಂಕೆಯಿಂದ ಓಡಿಸಿದ. ನಂತರ ಕುಬೇರನು ಗಂಧ ಮಾದನ ಪರ್ವತಕ್ಕೆ ಬಂದು ಅಲ್ಲಿ ಯಕ್ಷ ಕಿನ್ನರ ಗಂಧರ್ವರೊಡನೆ ವಾಸವಾಗಿದ್ದ. ರಾವಣನು ಕುಬೇರನ ಪುಷ್ಪಕವನ್ನು ಅಪಹರಿಸಿದ. ಆಗ ಕುಬೇರನು ನಿನ್ನನ್ನು ಯುದ್ಧದಲ್ಲಿ ಕೊಲ್ಲುವವನು ಪುಷ್ಪಕವನ್ನು ಏರುತ್ತಾನೆ. ನನ್ನನ್ನು, ತಂದೆಯನ್ನು ಅಗೌರವದಿಂದ ಕಾಣುವ ನೀನು ಬೇಗನೇ ಗತಿಸುವೆ. (ನಾಶ ಹೊಂದುವೆ)

ವಿಭೀಷಣನು ಸಜ್ಜನರ ಮಾರ್ಗವನ್ನೇ ಅನುಸರಿಸುವವನಾಗಿ ಪರಮೈಶ್ವರ್ಯದಿಂದ ಕೂಡಿದ್ದನು. ಕುಬೇರನು ಅವನಿಗೆ ಯಕ್ಷ, ರಾಕ್ಷಸ, ಸೈನ್ಯದ ಸೇನಾಧಿಪತ್ಯವನ್ನು ಕೊಟ್ಟನು. ಇತ್ತ ರಾಕ್ಷಸರೂ, ಮನುಷ್ಯ ಭಕ್ಷಕರೂ, ಪಿಶಾಚಿಗಳೂ ಎಲ್ಲರೂ ಬಂದು ರಾವಣನನ್ನು ರಾಜನನ್ನಾಗಿ ಅಭಿಷೇಕ ಮಾಡಿದರು (ಕುಬೇರನ ತರುವಾಯ)

ರಾವಣನು ದೇವದೈತ್ಯರನ್ನೆಲ್ಲಾ ಆಕ್ರಮಿಸಿ (ಕಾಮರೂಪಿಯಾಗಿದ್ದು) ಅವರ ರತ್ನಾದಿ ಐಶ್ವರ್ಯವನ್ನು ಅಪಹರಿಸಿದನು. ದೇವತೆಗಳಿಗೆ ಭಯದಾಯಕನಾಗಿರುತ್ತಾ, ಲೋಕಗಳನ್ನು, ಜನರನ್ನೂ ಅಳಿಸುತ್ತಿದ್ದ. ಅಂತೆಯೇ ಅವನನ್ನು ರಾವಣನೆಂದು ಜನ ಕರೆದರು.

'ಬ್ರಹ್ಮಾಣಂ ತೋಷಯಾಮಾಸುರ್ಘೋರೇಣ ತಪಸಾ ತದಾ ।
ಅತಿಷ್ಠದೇಕಪಾದೇನ ಸಹಸ್ರಂ ಪರಿವತ್ಸರಾನ್ । (ದಶಗ್ರೀವಃ) ೨೭೫–೧೫

ಅಧಃಶಾಯೀ ಕುಂಭಕರ್ಣೋ ಯತಾಹಾರೋ ಯತವ್ರತಃ । ೧೭

ವಿಭೀಷಣಃ ಶೀರ್ಣಪರ್ಣಮೇಕಮಭ್ಯಾವಹಾರಯನ್ ।
ಉಪವಾಸರತಿರ್ಧೀಮಾನ್ ಸದಾ ಜಪ್ಯಪರಾಯಣಃ ।
ಪೂರ್ಣೇ ವರ್ಷಸಹಸ್ರೇ ತು ಶಿರಶ್ಛಿತ್ವಾ ದಶಾನನಃ ೨೦

ಜುಹೋತ್ಯಗ್ನೌ ದುರಾಧರ್ಷಃ ತೇನಾತುಷ್ಯಜ್ಜಗತ್ಪ್ರಭುಃ । ೨೦

ಬ್ರಹ್ಮೋವಾಚ

ಪ್ರೀತೋಽಸ್ಮಿ ವೋ ನಿವರ್ತಧ್ವಂ ವರಾನ್ ವೃಣುತ ಪುತ್ರಕಾಃ ।
ಯದ್ ಯದಿಷ್ಟಮೃತೇ ತ್ವೇಕಮಮರತ್ವಂ............................ ॥ ೨೭೫–೨೨

ರಾವಣ ಉವಾಚ

ಗಂಧರ್ವದೇವಾಸುರತೋ ಯಕ್ಷರಾಕ್ಷಸತಸ್ತಥಾ ।
ಸರ್ಪಕಿನ್ನರಭೂತೇಭ್ಯೋ ನ ಮೇ ಭೂಯಾತ್ ಪರಾಭವಃ ॥ ೨೫

ಬ್ರಹ್ಮೋವಾಚ

ಋತೇ ಮನುಷ್ಯಾತ್ ಭದ್ರಂ ತೇ – ೨೬

ಅವಮೇನೇ ಹಿ ದುರ್ಬುದ್ಧಿರ್ಮನುಷ್ಯಾನ್ ಪುರುಷಾದಶಃ (ರಾವಣ) ೨೭

(ಕುಂಭಕರ್ಣ) ಸ ವವ್ರೇ ಮಹತೀನಿದ್ರಾಂ ತಮಸಾ ಗ್ರಸ್ತಚೇತನಃ । ೨೮

ವಿಭೀಷಣ ಉವಾಚ

ಪರಮಾಪದ್ಗತಸ್ಯಾಪಿ ನಾಧರ್ಮೇ ಮೇ ಮತಿರ್ಭವೇತ್ । – ೩೦

ಅಶಿಕ್ಷಿತಂ ಚ ಭಗವನ್ ಬ್ರಹ್ಮಾಸ್ತ್ರಂ ಪ್ರತಿಭಾತು ಮೇ ॥

ಬ್ರಹ್ಮೋವಾಚ

ಯಸ್ಮಾದ್ ರಾಕ್ಷಸಯೋನೌ ತೇ ಜಾತಸ್ಯಾಮಿತ್ರಕರ್ಶನ ।
ನಾಧರ್ಮೇ ಧೀಯತೇ ಬುದ್ಧಿರಮರತ್ವಂ ದದಾಮಿ ತೇ – ೩೧

**ವಿಭೀಷಣಸ್ತು ಧರ್ಮಾತ್ಮಾ ಸತಾಂ ಮಾರ್ಗಮನುಸ್ಮರನ್ ।** ೩೬

**ತಸ್ಮೈ ಸ ಭಗವಾನ್ ತುಷ್ಟೋ ಭ್ರಾತಾ ಭ್ರಾತ್ರೇ ಧನೇಶ್ವರಃ ।** ೩೭

**ಸೈನಾಪತ್ಯಂ ದದೌ ಧೀಮಾನ್ ಯಕ್ಷರಾಕ್ಷಸಸೇನಯೋಃ ।** ೩೭

**ರಾವಯಾಮಾಸ ಲೋಕಾನ್ ಯತ್ ತಸ್ಮಾತ್ ರಾವಣ ಉಚ್ಯತೇ ।**
**ದಶಗ್ರೀವಃ ಕಾಮಬಲೋ ದೇವಾನಾಂ ಭಯಮಾದಧತ್ ॥ ಅ ೨೭೫-೪೦**

ರಾವಣನ ಉಪಟಳದಿಂದ ಬೇಸತ್ತ ಬ್ರಹ್ಮರ್ಷಿಗಳು, ಸಿದ್ಧರು, ದೇವರ್ಷಿಗಳು ಅಗ್ನಿ ದೇವರನ್ನು ಮುಂದಿಟ್ಟುಕೊಂಡು ಬ್ರಹ್ಮದೇವರ ಬಳಿಗೆ ಹೋದರು. ಅಗ್ನಿದೇವರು ಬ್ರಹ್ಮದೇವರಿಗೆ 'ರಾವಣನು ಎಲ್ಲ ಪ್ರಜೆಗಳಿಗೆ ನಿಮ್ಮ ವರದಿಂದ ಅವಧ್ಯನಾಗಿರುವುದರಿಂದ ತೊಂದರೆ ಕೊಡುತ್ತಿದ್ದಾನೆ. ನೀವೇ ನಮ್ಮನ್ನು ರಕ್ಷಿಸಿರಿ ಬೇರೆ ಯಾರೂ ಇಲ್ಲ' ವೆಂದರು.

ಅದಕ್ಕೆ ಬ್ರಹ್ಮದೇವರು

'ದೇವಾಸುರರಿಂದ ಅವನನು ಯುದ್ಧದಲ್ಲಿ ಗೆಲ್ಲಲು ಸಾಧ್ಯವಿಲ್ಲ. ಅದಕ್ಕಾಗಿ ಈಗಾಗಲೇ ವ್ಯವಸ್ಥೆಯಾಗಿದೆ. ವಿಷ್ಣುವು ನನ್ನ ಪ್ರಾರ್ಥನೆಯ ಮೇರೆಗೆ ಮನುಷ್ಯನಾಗಿ ಅವತರಿಸಿದ್ದಾನೆ. ಅವನು ಆ ಕೆಲಸವನ್ನು ಮಾಡುವನು'.

ನಂತರ ಬ್ರಹ್ಮದೇವರು ಅವರೆಲ್ಲರ ಮುಂದೆಯೇ ಇಂದ್ರನಿಗೆ 'ಭೂಲೋಕದಲ್ಲಿ ಎಲ್ಲ ದೇವತೆಗಳೂ ವಾನರಸ್ತ್ರೀಯರಲ್ಲಿ, ಕರಡಿ ಸ್ತ್ರೀಯರಲ್ಲಿ ಹುಟ್ಟಿರಿ'. ಹೇಳಿದನು. ಅಂತೆಯೇ ಎಲ್ಲ ದೇವತೆ, ಗಂಧರ್ವರು, ಸರ್ಪಗಳು ಭೂಮಿಯಲ್ಲಿ ಅವತರಿಸಲು ಮಂತ್ರಾಲೋಚನೆ ಮಾಡಿದರು.

ಇವರೆಲ್ಲರ ಮುಂದೆಯೇ ಬ್ರಹ್ಮನು **'ದುಂದುಭೀ'** ಎಂಬ ಗಂಧರ್ವ ಸ್ತ್ರೀಗೆ ನೀನೂ ಕೂಡಾ ನಿನ್ನ ಕಾರ್ಯ ಸಿದ್ಧಿಗಾಗಿ ಹುಟ್ಟು ಎಂದಳು. ಆಕೆಯೇ **'ಮಂಥರೆ'**ಯಾಗಿ ಕುಬ್ಜ ಸ್ತ್ರೀಯಾಗಿ ಜನಿಸಿ ಅಲ್ಲಲ್ಲಿ ಸಂಚರಿಸುತ್ತಾ ಜನರಲ್ಲಿ ವೈರ ಬಿತ್ತುತ್ತಾ ಇದ್ದು ಕೊನೆಗೆ ದಶರಥನ ಮನೆಯಲ್ಲಿ ಕೈಕೇಯಿ ದೇವಿಗೆ ದಾಸಿಯಾಗಿ ಸೇರಿದಳು. ಅಲ್ಲದೆ ದೇವತೆಗಳು ವಾನರ ಸ್ತ್ರೀಯರಲ್ಲಿ ಅತ್ಯಂತ ಬಲಿಷ್ಠರಾಗಿಯೂ, ಯುದ್ಧವಿಶಾರದರಾಗಿಯೂ, ೧೦೦೦೦ ಆನೆ ಬಲವುಳ್ಳವರಾಗಿಯೂ, ಪರ್ವತ ಶೃಂಗ, ಶಿಲೆಗಳೇ ಅಯುಧಗಳಾಗಿ ಉಳ್ಳ ಕಪಿಗಳಾಗಿಯೂ, ಕರಡಿಗಳಾಗಿಯೂ, ಬೇಕಾದ ಅರಣ್ಯಗಳಲ್ಲಿ ಅಲ್ಲಲ್ಲಿ ಜನಿಸಿ ವಾಸವಾಗಿದ್ದರು.

**ಅಗ್ನಿರುವಾಚ**

**'ಯೋಽಸೌ ವಿಶ್ರವಸಃ ಪುತ್ರೋ ದಶಗ್ರೀವೋ ಮಹಾಬಲಃ ।**
**ಅವಧ್ಯೋ ವರದಾನೇನ ಕೃತೋ ಭಗವತಾ ಪುರಾ ॥**

ಸ ಬಾಧತೇ ಪ್ರಜಾಃ ಸರ್ವಾಃ
ತತೋ ನಸ್ತ್ರಾತು ಭಗವಾನ್ ನಾನ್ಯಸ್ತ್ರಾತಾ ಹಿ ವಿದ್ಯತೇ' ॥

ಬ್ರಹ್ಮೋವಾಚ

'ತದರ್ಥಮವತೀರ್ಣೋऽಸೌ ಮನ್ನಿಯೋಗಾಚ್ಚತುರ್ಭುಜಃ ।
ವಿಷ್ಣುಃ ಪ್ರಹರತಾಂ ಶ್ರೇಷ್ಠಃ ಸ ತತ್ ಕರ್ಮ ಕರಿಷ್ಯತಿ ॥

ತೇಷಾಂ ಸಮಕ್ಷಂ ಗಂಧರ್ವೀಂ ದುಂದುಭೀಂ ನಾಮ ನಾಮತಃ ।
ಶಶಾಸ ವರದೋ ದೇವೋ ಗಚ್ಛ ಕಾರ್ಯಾರ್ಥ ಸಿದ್ಧಯೇ ॥

ಮಂಥರಾ ಮಾನುಷೇ ಲೋಕೇ ಕುಬ್ಜಾ ಸಮಭವತ್ತದಾ ।
ಮಂಥರಾಂ ಬೋಧಯಾಮಾಸ ಯದ್ಯತ್ಕಾರ್ಯಂ ಯಥಾ ಯಥಾ ।

ಇತಶ್ಚೇತಶ್ಚ ಗಚ್ಛಂತೀ ವೈರಸಂಧುಕ್ಷಣೇ ರತಾ' ॥
ಮ.ಭಾ. ವನಪರ್ವ ಅ – ೨೭೬– ೨ ರಿಂದ ೧೬

ಮಹಾಭಾರತದಲ್ಲಿ ಮಂಥರೆಯ ಪೂರ್ವಜನ್ಮ ಗಂಧರ್ವಳೆಂದಿದೆ. ಶ್ರೀಮದಾಚಾರ್ಯರು ಇತರ ಅನೇಕ ಪ್ರಮಾಣಗಳ ಆಧಾರದಿಂದ ಆಕೆ ಅಲಕ್ಷ್ಮೀ (ಕಲಿಪತ್ನಿ) ಎಂದೂ ಆಕೆ ತಪಸ್ಸು ಮಾಡಿ ಅಪ್ಸರೆಯಾಗಿ ನಂತರ ಬ್ರಹ್ಮದೇವರ ಆದೇಶದ ಮೇರೆಗೆ ತನಗೆ ಯೋಗ್ಯ ಸಾಧನೆ ಮಾಡಿಕೊಳ್ಳಲು ರಾಮಪಟ್ಟಾಭಿಷೇಕಕ್ಕೆ ವಿಘ್ನ ಮಾಡಿ ಮುಂದೆ ತಮಸ್ಸಿಗೆ ಹೋಗುತ್ತಾಳೆ ಎಂದು ಮ.ತಾ.ನಿ. ದಲ್ಲಿ ತಿಳಿಸಿದ್ದಾರೆ–ನಿರ್ಣಯಿಸಿದ್ದಾರೆ.(೯–೯೮)

'ಪೂರ್ವಂ ಕ್ಷೀರಾಬ್ಧ ಜಾತಾ ಕಥಮಪಿ ತಪಸೈವಾಪ್ಸರತ್ವಂ ಪ್ರಯಾತಾ
ತಾಂ ನೇತುಂ ತತ್ತಮೋऽಂಧಂ.... ರಾಮಾಭಿಷೇಕಂ ಭೂತ್ವಾ–ದಾಸೀ
ವಿಲುಂಪ ತದಮ ಕೃತವತ್ಯೇವ ಚೈತತ್ಕುಕರ್ಮ' ॥ ಮ.ತಾ.ನಿ. ಅ ೫–೨

ಇತ್ತ ದಶರಥ ಮಹಾರಾಜನು ತನ್ನ ನಾಲ್ಕೂ ಮಕ್ಕಳೊಂದಿಗೆ ಸುಖವಾಗಿದ್ದನಷ್ಟೇ ಅದರಲ್ಲೂ ರಾಮನು ಪ್ರಜೆಗಳನ್ನು ತನ್ನ ಸದ್ಗುಣಗಳಿಂದ ತುಂಬಾ ಸಂತೋಷ ಪಡಿಸುತ್ತಿದ್ದನು. ದಶರಥನು ತಾನು ವೃದ್ಧನಾದೆನೆಂದು ಬಗೆದು ತನ್ನ ಎಲ್ಲ ಧರ್ಮಜ್ಞ ಮಂತ್ರಿಗಳಿಂದ ಹಾಗೂ ಪುರೋಹಿತರೊಡನೆ ಸಮಾಲೋಚನೆ ಮಾಡಿ ರಾಮನನ್ನು ಯುವರಾಜನನ್ನಾಗಿ ಮಾಡಲು ನಿರ್ಧರಿಸಿದ. ಕಾರಣ ರಾಮನು ಸಕಲ ಸಲ್ಲಕ್ಷಣಗಳಿಂದ ಕೂಡಿದವನಾಗಿಯೂ ಧರ್ಮದ ಸರ್ವ ಪುರುಷನಾಗಿಯೂ, ಜಿತೇಂದ್ರಿಯನೂ, ಶತೃಗಳ ದೃಷ್ಟಿಗೂ ಮನೋಹರನಾಗಿಯೂ (ಅಜಾತಶತ್ರು), ದುರ್ಜನರ ನಿಯಂತ್ರಕನೂ, ಧರ್ಮಿಷ್ಠರ ರಕ್ಷಕನೂ, ಯಾರಿಗೂ ಸೋಲದವನೂ, ತಾಯಿ ಕೌಸ್ಯಲೆಯ ಆನಂದ ವರ್ಧಕನೂ, ಇದ್ದನು ಹೀಗೆ ರಾಮನ ಅನೇಕಾನೇಕ ಗುಣಗಳನ್ನು ಮನಗೊಂಡ ರಾಜನು ಇಂದೇ ರಾತ್ರಿ ಪುಷ್ಯ ನಕ್ಷತ್ರವಿದೆ. ನಾಳೆಯೂ

ಇರುತ್ತೆ. ರಾಮನನ್ನು ನಾಳೆಯೇ ಅಭಿಷೇಕಿಸೋಣ. ಅದಕ್ಕೆ ಎಲ್ಲ ಸಿದ್ಧತೆ ಮಾಡಿರಿ' ಎಂದು ಹೇಳಿದಾಗ ಈ ವಿಷಯ ಕೇಳಿದ ಮಂಥರೆಯು ಕೈಕೇಯಿ ಮನಸ್ಸನ್ನು ಕೆಡಿಸಿದಳು.

'ಎಲೈ ಕೈಕೇಯಿ ನಿನ್ನ ದೌರ್ಭಾಗ್ಯವನ್ನು ಇಂದು ರಾಜ ಪ್ರಚುರ ಪಡಿಸಿದ. ನಿನ್ನನ್ನು ಕೋಪಿಸಿಕೊಂಡ ಭಾರೀ ವಿಷ ಸರ್ಪವು ಕಚ್ಚಲಿ. ಕಾರಣ ಕೌಸಲ್ಯೆಯ ಪುತ್ರ ನಾಳೆ ಅಭಿಷಿಕ್ತನಾಗುವನು. ನಿನ್ನ ಮಗನಿಗೆ ಯುವರಾಜನಾಗುವ ಭಾಗ್ಯವಿಲ್ಲವೆಂದ ಮೇಲೆ ನಿನಗಲ್ಲಿಯ ಸೌಭಾಗ್ಯ. ನಿನ್ನ ಅಸ್ತಿತ್ವಕ್ಕೆ ಬರ ಬಡಿದಿದೆ'. ಎಂದಳು ಆಕೆಯ ಮಾತನ್ನು ಕೇಳಿದ ಕೈಕೇಯಿ ಸರ್ವಾಭರಣ ಭೂಷಿತಳಾಗಿ ತನ್ನನ್ನು ಅಲಂಕರಿಸಿಕೊಂಡು ಏಕಾಂತದಲ್ಲಿ ಪತಿಯನ್ನು ಸಂಧಿಸಿ ಪ್ರಣಯವನ್ನು ಬಯಸುವವಳಂತೆ ನಟಿಸುತ್ತಾ

'ಎಲೈ ಸತ್ಯ ಪ್ರತಿಜ್ಞನೇ! (ರಾಜನ್!) ನನಗೆ ನೀನು ಹಿಂದೆ ನೀಡಿದ ೨ ವರಗಳನ್ನು ಕೊಟ್ಟು ಉಪಕರಿಸು' ಎಂದಳು. ಆಕೆಯ ರೂಪ ಲಾವಣ್ಯಕ್ಕೆ ಎಂದೋ ವಶನಾದ ದಶರಥನು ಅದಕ್ಕೆ ಒಪ್ಪಿದನು. ಆಗ ಕೈಕೇಯಿಯು 'ನಾಳೆ ನಿರ್ಧರಿತ ಮುಹೂರ್ತದಲ್ಲಿ ಭರತನಿಗೆ ಅಭಿಷೇಕವಾಗಲಿ. ರಾಮನು ವನಕ್ಕೆ ಹೋಗಲಿ (೧೪ ವರ್ಷ)' ಎಂದಳು. ಈ ಮಾತನ್ನು ಕೇಳಿ ದಿಙ್ಮೂಢನಾದ ರಾಜನು ಏನ್ನೂ ಮಾತನಾಡದೆ ಹೋದನು.

ಹೀಗೆ ಈ ವಿಷಯವನ್ನು ತಿಳಿದ ರಾಮನು, ರಾಜನು ಸತ್ಯವಚನನಾಗಲಿ ಎಂದು ನುಡಿದು, ಸೀತಾ ಲಕ್ಷ್ಮಣರೊಡನೆ ವನಕ್ಕೆ ಹೊರಟೇ ಬಿಟ್ಟನು. ಇತ್ತ ರಾಜ ದಶರಥನು ರಾಮನ ವಿರಹ ತಾಳದೆ ಕೊನೆಯುಸಿರೆಳೆದನು. ನಂತರ ಕೈಕೇಯಿಯು ತನ್ನ (ತೌರಿಗೆ) ಹೋದ ಭರತನನ್ನು ಕರೆಸಿ ರಾಜ್ಯವನ್ನಾಳಲು ಹೇಳಿದಾಗ ಖತಿಗೊಂಡ ಭರತನು "ಅಮ್ಮ ನೀನು ಧನಲೋಭದಿಂದ ಪತಿಯನ್ನು ಕೊಂದು, ಅಕೀರ್ತಿಯನ್ನು ನನಗೆ ಬರುವಂತೆ ಮಾಡಿದೆ, ಎಲೈ ಕ್ರೂರ ತಾಯಿಯೆ! ನೀನೇ ನಿನ್ನ ಆಶೆ ಈಡೇರಿಸಿಕೋ" ಎಂದು ರೋದಿಸಿದನು.

ನಂತರ ತನ್ನ ತಾಯಿ ಸುಮಿತ್ರೆ, ಕೌಸಲ್ಯೆ, ಪುರೋಹಿತರು, ಪ್ರಜೆಗಳೊಂದಿಗೆ ಚತುರಂಗ ಸೈನ್ಯ ಸಮೇತನಾಗಿ ರಾಮನನ್ನು ಮತ್ತೆ ಅಯೋಧ್ಯೆಗೆ ಕರೆತರಲು ತುಂಬಾ ದುಃಖದಿಂದ ಭರತ, ಶತೃಘ್ನರು ಹೊರಟರು. ರಾಮನನ್ನು ಬೇಡಿದರೂ ಆತನೊಪ್ಪದಿದ್ದಾಗ ಅಣ್ಣನ ಪಾದುಕೆಗಳನ್ನು ತಂದು ಅಯೋಧ್ಯೆಯಲ್ಲಿ ವಾಸಿಸದೆ ನಂದಿಗ್ರಾಮದಲ್ಲಿಯೇ ಸಿಂಹಾಸನದ ಮೇಲೆ ರಾಮ ಪಾದುಕೆಗಳನ್ನು ಇಟ್ಟು ರಾಜ್ಯವಾಳಿದನು.

**ಮಂಥರಾ ಉವಾಚ**

**'ಅದ್ಯ ಕೈಕೇಯಿ ದೌರ್ಭಾಗ್ಯಂ ರಾಜ್ಞಾತೇ ಖ್ಯಾಪಿತಂ ಮಹತ್ ।**
**ಆಶೀವಿಷಸ್ತ್ವಾಂ ಸಂಕೃದ್ಧಶ್ಚಂಡೋ ದಶತು ದುರ್ಭಗೇ ॥**

**ಕುತೋ ಹಿ ತವ ಸೌಭಾಗ್ಯಂ ಯಸ್ಯಾಃ ಪುತ್ರೋ ನ ರಾಜ್ಯಭಾಕ್ ॥**

ಕೈಕೇಯಿ ಉವಾಚ

ಭರತಸ್ತದವಾಪ್ನೋತು ವನಂ ಗಚ್ಛತು ರಾಘವಃ' ॥

ವನಪರ್ವ ಅ ೨೭೭ – ೧೭, ೧೮, ೨೬

ಶ್ರೀರಾಮಚಂದ್ರನು ಮತ್ತೆ ತನ್ನ ರಾಜ್ಯದ ಜನರು ಬಂದು ಅಯೋಧ್ಯೆಗೆ ಬರಲು ಒತ್ತಾಯಿಸಬಹುದು ಎಂದು ಶಂಕಿಸಿ ತಾನೇ ಚಿತ್ರಕೂಟ ಪ್ರಾಂತ್ಯದಿಂದ ಮಹಾ ಅರಣ್ಯವನ್ನು ಪ್ರವೇಶಿಸಿ ಅಲ್ಲಿದ್ದ ಶರಭಂಗರನ್ನು ಗೌರವಿಸಿ ದಂಡಕಾರಣ್ಯಕ್ಕೆ ನಡೆದನು. ರಮ್ಯವಾದ ಗೋದಾವರೀ ನದಿಯನ್ನಾಶ್ರಯಿಸಿ ಅಲ್ಲಿಯೇ ವಾಸವಾಗಿದ್ದನು. ಅಲ್ಲಿ ಲಂಕೆಯ ರಾವಣನ ತಂಗಿಯಾದ ಶೂರ್ಪಣಖಿಯು ಅಪ್ರಚೋದಿತಳಾಗಿ ರಾಮನಿಗೆ ತೊಂದರೆ ಕೊಟ್ಟಿದ್ದರಿಂದಾಗಿ ಆಕೆಯೊಡನೆ ವಿರೋಧವುಂಟಾಗಿ ರಾವಣನಿಂದ ಇಡಲ್ಪಟ್ಟ ಖರತ್ರಿಶಿರದೂಷಣ ಮೊದಲಾದ ೧೪೦೦೦ ರಾಕ್ಷಸರು ರಾಮನಿಂದ ಹತರಾದರು. ಶೂರ್ಪಣಖಿಯು ರಾಮನನ್ನು ಮದುವೆಯಾಗೆಂದು ಹಠ ಹಿಡಿದ ಪರಿಣಾಮ ಇಷ್ಟೆಲ್ಲಾ ನಡೆದು ಹೋಯಿತು. ರಾಮನ ಆದೇಶದಿಂದ ಲಕ್ಷ್ಮಣನಿಂದ ಕಿವಿ, ಮೂಗು ಕಳೆದುಕೊಂಡ ಆಕೆಯು ಲಂಕೆಗೆ ಹೋಗಿ ರಾವಣನಿಗೆ ರಾಮನ ವಿರುದ್ಧ ದೂರಿದಳು. ಖರಾದಿ ರಾಕ್ಷಸರ ಸಂಹಾರದಿಂದಾಗಿ ದಂಡಕಾರಣ್ಯ ವಾಸಿಗಳು ಶಾಂತಿ ನೆಮ್ಮದಿಯಿಂದ ಇರುವಂತಾಯಿತು. ರಾಮನ ಸಂಕಲ್ಪವೂ ಅದೇ ಆಗಿತ್ತು.

'ತ್ರಿದಶಮುನಿಕೃತೇಽರಣ್ಯಮೇವಾವಿವೇಶ' ಮತಾನಿ ಅಧ್ಯಾಯ ೫–೩

ರಕ್ಷಾರ್ಥಂ ತಾಪಸಾನಾಂ ತು ರಾಘವೋ ಧರ್ಮವತ್ಸಲಃ ।
ಚತುರ್ದಶಸಹಸ್ರಾಣಿ ಜಘಾನ ಭುವಿ ರಕ್ಷಸಾಮ್ ॥
ಚಕ್ರೇ ಕ್ಷೇಮಂ ಪುನರ್ಧೀಮಾನ್ ಧರ್ಮಾರಣ್ಯಂ ಸ ರಾಘವಃ

ವ.ಪ 277–43, 44

ಹೀಗೆ ಶೂರ್ಪಣಖಿಯ ನಡೆ ಹಾಗೂ ದೂರು ಮುಂದೆ ಸಮಸ್ತ ರಾಕ್ಷಸರ ನಾಶಕ್ಕೆ ಕಾರಣವಾಯಿತು.

'ತೇನೈವ ದುಷ್ಟಚರಿತಾಂ ಹಿ ವಿಕರ್ಣನಾಸಾಂ
ಚಕ್ರೇ ಸಮಸ್ತರಜನೀಚರನಾಶಹೇತೋಃ' ॥ – ಮತಾನಿ ಅ–೫–೨೬

ತಂಗಿಯ ವಿಕೃತ ಮುಖ(ಕಿವಿ, ಮೂಗುಗಳಿಲ್ಲದ ರಕ್ತಸಿಕ್ತವಾದ)ವನ್ನು ನೋಡಿ ರಾವಣ ಕೆರಳಿ ಕೆಂಡವಾದ. ವಿಷಯ ತಿಳಿದುಕೊಂಡು ರಾಮನ ಮೇಲಿನ ಕೋಪ ರಮೆ–ಸೀತೆಯನ್ನು–ಜಗಜ್ಜನನಿಯನ್ನು ಕಾಮಿಸಿ ಹೇಗಾದರೂ ಮಾಡಿ ಹೊಂದಲು ಬಯಸಿದ. ಶೂರ್ಪಣಖಿಯ ದುಃಖ ದುಮ್ಮಾನವನ್ನು ನೋಡಿ ಕ್ರೋಧ ಮೂರ್ಛಿತನಾಗಿ ಆಕೆಯನ್ನು ಸಮಾಧಾನ ಮಾಡಿದ. ಅವನ ಒಳ ವಿಚಾರ ಬೇರೆಯಾಗಿತ್ತು. ಅದಕ್ಕೆ ನಿಮಿತ್ತವನ್ನಾಗಿ ಶೂರ್ಪಣಖಿಯನ್ನು ಬಳಸಿಕೊಂಡ. ತಂಗಿಯನ್ನು ಕುರಿತು

"ಶೂರ್ಪಣಖೀ! ಕೇಳು ನಿನ್ನನ್ನು ಅವಮಾನಿಸಿದ್ದು ನನ್ನನ್ನೇ ಅವಮಾನಿಸಿದಂತೆಯೆ! ಅವನಾರು! ಅವನ ನಡೆ ಹೇಗಿದೆ? ಎಂದರೆ ತಲೆ ದಿಂಬಿನಲ್ಲಿ ಅಗ್ನಿಯನ್ನು ಇಟ್ಟುಕೊಂಡು ನಿಶ್ಚಿಂತವಾಗಿ ಮಲಗಿದ ಮಂದಬುದ್ಧಿಯಂತೆ ಅವನು! ವಿಷ ಸರ್ಪದ ತಲೆಯ ಮೇಲೆ ಕಾಲಿಟ್ಟವನಂತೆ! ಸಿಂಹದ ಕೋರೆ ಹಲ್ಲುಗಳನ್ನು ಎಣಿಸಲು ಹೋದಂತೆ ಇದೆ (ರಾಮನ ಪರಿಸ್ಥಿತಿ)."

ಹೀಗೆ ತಂಗಿಯನ್ನು ಸಮಾಧಾನಗೈದ ರಾವಣನು ನಗರದ ಹೊರಗೆ ಬಂದು ಅಲ್ಲಿಂದ ಗಂಭೀರವಾದ ಸಮುದ್ರವನ್ನು ಆಕಾಶ ಮಾರ್ಗದಲ್ಲಿ ದಾಟಿ ಗೋಕರ್ಣಕ್ಕೆ ಬಂದನು. ಅಲ್ಲಿ ರಾಮಬಾಣ ಭಯದಿಂದ ತಪಸ್ಸನ್ನು ಮಾಡುತ್ತಿದ್ದ ತನ್ನ ಹಿಂದಿನ ಅಮಾತ್ಯನಾದ ಮಾರೀಚನ ಬಳಿಗೆ ಬಂದನು.

ಆಕಾಶಮಾರ್ಗದಿಂದ ಬಂದ ರಾವಣನನ್ನು ನೋಡಿದ ಮಾರೀಚನು ಭ್ರಾಂತನಾದನು. ರಾವಣನನ್ನು ಹಣ್ಣು, ಗೆಡ್ಡೆ, ಗೆಣಸು, ಉದಕಾದಿಗಳಿಂದ ಪೂಜಿಸಿದ. ಕುಶಲವನ್ನು ಕೇಳಿದ.

ಆಗ ರಾವಣನು ರಾಮನು ಶೂರ್ಪಣಖಿಯನ್ನು ಹೇಗೆ ನಡೆಸಿಕೊಂಡ ಎಂಬುದನ್ನು ಸಿಟ್ಟಿನಿಂದ ವಿವರಿಸಿದ ಮಾರೀಚನಿಗೆ. ಅದೆಲ್ಲ ಕೇಳಿದ ಮಾರೀಚ ಹೇಳಿದ.

'ರಾಜನ್! ನಾನು ರಾಮನ ಬಾಣದ ಸವಿಯನ್ನು ಬಲ್ಲೆ. ಆತನ ಪರಾಕ್ರಮವನ್ನು ತಿಳಿದಿದ್ದೇನೆ. ಆತನ ಬಾಣದ ವೇಗವನ್ನು ಯಾರು ತಾನೇ ಸಹಿಸಬಲ್ಲರು? ರಾಮನೊಡನೆ ವಿರೋಧ ವಿನಾಶಕ್ಕೆ ಆಹ್ವಾನ ಕೊಟ್ಟಂತೆ! ನಿನಗೆ ಈ ಸಲಹೆ ಕೊಟ್ಟವರಾರು? ನಾನೀ ತಾಪಸವೃತ್ತಿಯಲ್ಲಿರಲು ಅವನೇ ಕಾರಣ! (ನನ್ನ ಆಟ ಆತನ ಬಳಿ ನಡೆಯದು)

ಈ ಮಾತನ್ನು ಕೇಳಿದ ರಾವಣನು ಮಾರೀಚನನ್ನು ಹೆದರಿಸಿ ನುಡಿದ 'ಮಾರೀಚ! ನನ್ನ ಮಾತನ್ನು ನೀನು ಕೇಳದಿದ್ದರೆ ನಿನಗೆ ಸಾವು ನಿಶ್ಚಯ'!

ರಾವಣನ ಮಾತನ್ನು ಕೇಳಿದ ಮಾರೀಚ ಯೋಚಿಸಿದ; ರಾವಣನ ಮಾತನ್ನು ಕೇಳಿದಲ್ಲಿ ರಾಮನಿಂದ ಮರಣ ನಿಶ್ಚಿತ. ಕೇಳದಿರಲು ರಾವಣನೇ ಕೊಲ್ಲುವನು. ಇವೆರಡರಲ್ಲಿ 'ವಿಶಿಷ್ಟನಾದವನಿಂದಲೇ ಮರಣ ಲೇಸು' ಎಂದು. ಏಕೆಂದರೆ ರಾಮನಿಂದ ಸಾವನ್ನು ಸ್ವಲ್ಪ ಮುಂದೆ ನಿರೀಕ್ಷಿಸಬಹುದು. ಇನ್ನೂ ಸ್ವಲ್ಪ ಹೊತ್ತು ಒಂದೆರಡು ದಿನ ಹೆಚ್ಚು ಬದುಕುವ ಅವಕಾಶ ಇದೆ. ಆದ್ದರಿಂದ ರಾವಣನ ಮಾತನ್ನು ನಡೆಸಲು ಮಾರೀಚ ಮುಂದಾದ.

ಮಹಾಭಾರತದಲ್ಲಿ ಮಾರೀಚನೇ ಒಳ್ಳೆಯವನಂತೆ ತೋರುತ್ತದೆ. ಆದರೆ ಅವನು ಒಳ್ಳೆಯವನಾಗಿದ್ದರೆ ವಿಶ್ವಾಮಿತ್ರರ ಯಜ್ಞಕ್ಕೆ ತೊಂದರೆ ಕೊಡುತ್ತಿರಲಿಲ್ಲ. ಆದ್ದರಿಂದ ಮೇಲಿನ ಅರ್ಥ ಅನಿವಾರ್ಯ. ರಾಮನೊಡನೆ ಸೆಣಸುವುದು ಬೇಡವೆಂಬ ಮಾರೀಚ

ವಾಕ್ಯವೂ ಡಾಂಭಿಕ ಒಳ್ಳೆಯ ತನವೇ ಹೊರತು ನಿಜವಾಗಿಯೂ ಒಳ್ಳೆಯ ತನದ ಮಾತಲ್ಲ. ಮಹಾಭಾರತದಲ್ಲೂ ದ್ರೌಪದೀ ಪರವಾಗಿ ಮಾತನಾಡಿದ ವಿಕರ್ಣನದೂ ಇಂಥದ್ದೇ ಡಂಭಾಚಾರದ ಮಾತಿನಂತಿದೆ ಇದು.

**'ವಿಕರ್ಣಃ ಪಾಪಕೋಽಪಿ ಸನ್**
**ಆಹ ಡಂಬಾರ್ಥಮೇವಾತ್ರ ಧರ್ಮವಿತ್ತ್ವಂ ಪ್ರಕಾಶಯನ್ ।**

**ಅಧರ್ಮ ಏವಾಯಮಿತಿ ಕರ್ಣೋಽಥೈನಮಭರ್ತ್ಸಯತ್'**
**– ಮ.ತಾ.ನಿ.(೨೧/೩೩೬)**

ಆದ್ದರಿಂದ ಮಾರೀಚನ ಮೇಲಿನ ಮಾತುಗಳೂ ವಿಕರ್ಣನ ಮಾತಿನಂತೆಯೇ ಇದೆ.

**'ಮಾರೀಚಶ್ಚಿಂತಯಾಮಾಸ ವಿಶಿಷ್ಟಾನ್ಮರಣಂ ವರಮ್'। ಅ– ೨೭೮–೯**

ಅನಿವಾರ್ಯವಾಗಿ ಮಾರೀಚನು ನಾನು ಯಾವ ಸೇವೆ ಸಹಾಯ ಮಾಡಲಿ ಎಂದ ರಾವಣನಿಗೆ. ಅದಕ್ಕೆ ರಾವಣನು, 'ನೀನು ರತ್ನಗಳಿಂದ ಕೂಡಿದ ಕೋಡುಳ್ಳ' ಶರೀರದ ಕೂದಲುಗಳೂ ಕೂಡ ರತ್ನಮಯವಾಗಿರುವ ಮಾಯಾ ಜಿಂಕೆಯ ವೇಷ ತಾಳಿ ಸೀತೆಯ ಮುಂದೆ ಓಡಾಡಿ ಆಕೆಯನ್ನು ಪ್ರಲೋಭನಗೊಳಿಸು. ಆಗ ಆಕೆ ರಾಮನನ್ನು ಅದನ್ನು ತರಲು ಪ್ರಚೋದಿಸುವಳು. ರಾಮನು ಹೊರ ಹೋಗಲು ಸೀತೆ ನನ್ನ ವಶವಾಗುವಳು. ಆಕೆಯನ್ನು ಅಪಹರಿಸಿಕೊಂಡು ನಾನು (ಲಂಕೆಗೆ) ಹೋಗುವೆ. ರಾಮನು ವಾಪಸು ಬಂದಾಗ ಸೀತೆ ಇರದೆ, ಆಕೆಯ ವಿಯೋಗದಿಂದ ರಾಮನು ವಿನಾಶ ಹೊಂದುವನು. ಇದು ನನ್ನ ಯೋಜನೆ. ನೀನು ಇದಕ್ಕೆ ಸಹಾಯ ಮಾಡು ಎಂದನು.

ನಂತರ ತನ್ನ ಅವಸಾನಾನಂತರ ಮಾಡಬೇಕಾದ ಉದಕ ಕ್ರಿಯೆಗಳೆಲ್ಲವನ್ನು ಮಾಡಿಕೊಂಡು ಮಾಯಾ ಜಿಂಕೆಯಾಗಿ ಮಾರೀಚನು ಸೀತೆಯ ಮುಂದೆ ಓಡಾಡಿದ (ಎಲ್ಲ ಕಾರ್ಯವನ್ನು ಅನಾಯಾಸವಾಗಿ ಮಾಡುವ ರಾಮನ ಆಶ್ರಮದ ಮುಂದೆ): **ಇತ್ಯೇವಮುಕ್ತೋ ಮಾರೀಚಃ ಕೃತ್ವೋದಕಮಥಾತ್ಮನಃ.**

**ರಾವಣಸ್ತು ಯತಿರ್ಭೂತ್ವಾ ಮುಂಡಃ ಕುಂಡೀ ತ್ರಿದಂಡಧೃಕ್ ।**
**ಮೃಗಶ್ಚ ಭೂತ್ವಾ ಮಾರೀಚಸ್ತಂ.................. । ಅ ೨೭೮–೧೬, ೧೭**

ರಾವಣನು ಯತಿ ವೇಷ ಧಾರಣ ಮಾಡಿ ಸಿದ್ಧನಾದ ಮಾಯಾ ಜಿಂಕೆಯೆಂದು ತಿಳಿದಿದ್ದರೂ ಸೀತೆ ದೇವತಾಕಾರ್ಯ ಸಿದ್ಧಿಗೋಸ್ಕರ ರಾಮನನ್ನು ಆ ಜಿಂಕೆ ತರಲು ಪ್ರಚೋದಿಸಿದಳು. ಸೀತೆಯ ರಕ್ಷಣೆಗಾಗಿ ಲಕ್ಷ್ಮಣನನ್ನು ನಿಯೋಜಿಸಿ ರಾಮನು ಧನುರ್ಧಾರಿಯಾಗಿ ಜಿಂಕೆಯನ್ನು ಬೆನ್ನಟ್ಟಿದ. ಅದು ಮಂದವಾಗಿ, ವೇಗವಾಗಿ ಹೋಗುವಂತೆ, ಆಟವಾಡುತ್ತಾ ಹೋಯಿತು. ರಾಮನು ಇದು ಮಾಯಾ

"ಶೂರ್ಪಣಖೀ! ಕೇಳು ನಿನ್ನನ್ನು ಅವಮಾನಿಸಿದ್ದು ನನ್ನನ್ನೇ ಅವಮಾನಿಸಿದಂತೆಯೆ! ಅವನಾರು! ಅವನ ನಡೆ ಹೇಗಿದೆ? ಎಂದರೆ ತಲೆ ದಿಂಬಿನಲ್ಲಿ ಅಗ್ನಿಯನ್ನು ಇಟ್ಟುಕೊಂಡು ನಿಶ್ಚಿಂತವಾಗಿ ಮಲಗಿದ ಮಂದಬುದ್ಧಿಯಂತೆ ಅವನು! ವಿಷ ಸರ್ಪದ ತಲೆಯ ಮೇಲೆ ಕಾಲಿಟ್ಟವನಂತೆ! ಸಿಂಹದ ಕೋರೆ ಹಲ್ಲುಗಳನ್ನು ಎಣಿಸಲು ಹೋದಂತೆ ಇದೆ (ರಾಮನ ಪರಿಸ್ಥಿತಿ)."

ಹೀಗೆ ತಂಗಿಯನ್ನು ಸಮಾಧಾನಗೈದ ರಾವಣನು ನಗರದ ಹೊರಗೆ ಬಂದು ಅಲ್ಲಿಂದ ಗಂಭೀರವಾದ ಸಮುದ್ರವನ್ನು ಆಕಾಶ ಮಾರ್ಗದಲ್ಲಿ ದಾಟಿ ಗೋಕರ್ಣಕ್ಕೆ ಬಂದನು. ಅಲ್ಲಿ ರಾಮಬಾಣ ಭಯದಿಂದ ತಪಸ್ಸನ್ನು ಮಾಡುತ್ತಿದ್ದ ತನ್ನ ಹಿಂದಿನ ಅಮಾತ್ಯನಾದ ಮಾರೀಚನ ಬಳಿಗೆ ಬಂದನು.

ಆಕಾಶಮಾರ್ಗದಿಂದ ಬಂದ ರಾವಣನನ್ನು ನೋಡಿದ ಮಾರೀಚನು ಭ್ರಾಂತನಾದನು. ರಾವಣನನ್ನು ಹಣ್ಣು, ಗೆಡ್ಡೆ, ಗೆಣಸು, ಉದಕಾದಿಗಳಿಂದ ಪೂಜಿಸಿದ. ಕುಶಲವನ್ನು ಕೇಳಿದ.

ಆಗ ರಾವಣನು ರಾಮನು ಶೂರ್ಪಣಖಿಯನ್ನು ಹೇಗೆ ನಡೆಸಿಕೊಂಡ ಎಂಬುದನ್ನು ಸಿಟ್ಟಿನಿಂದ ವಿವರಿಸಿದ ಮಾರೀಚನಿಗೆ. ಅದೆಲ್ಲ ಕೇಳಿದ ಮಾರೀಚ ಹೇಳಿದ.

'ರಾಜನ್'! ನಾನು ರಾಮನ ಬಾಣದ ಸವಿಯನ್ನು ಬಲ್ಲೆ. ಆತನ ಪರಾಕ್ರಮವನ್ನು ತಿಳಿದಿದ್ದೇನೆ. ಆತನ ಬಾಣದ ವೇಗವನ್ನು ಯಾರು ತಾನೇ ಸಹಿಸಬಲ್ಲರು? ರಾಮನೊಡನೆ ವಿರೋಧ ವಿನಾಶಕ್ಕೆ ಆಹ್ವಾನ ಕೊಟ್ಟಂತೆ! ನಿನಗೆ ಈ ಸಲಹೆ ಕೊಟ್ಟವರಾರು? ನಾನೀ ತಾಪಸವೃತ್ತಿಯಲ್ಲಿರಲು ಅವನೇ ಕಾರಣ! (ನನ್ನ ಆಟ ಆತನ ಬಳಿ ನಡೆಯದು)

ಈ ಮಾತನ್ನು ಕೇಳಿದ ರಾವಣನು ಮಾರೀಚನನ್ನು ಹೆದರಿಸಿ ನುಡಿದ 'ಮಾರೀಚ! ನನ್ನ ಮಾತನ್ನು ನೀನು ಕೇಳದಿದ್ದರೆ ನಿನಗೆ ಸಾವು ನಿಶ್ಚಯ'!

ರಾವಣನ ಮಾತನ್ನು ಕೇಳಿದ ಮಾರೀಚ ಯೋಚಿಸಿದ; ರಾವಣನ ಮಾತನ್ನು ಕೇಳಿದಲ್ಲಿ ರಾಮನಿಂದ ಮರಣ ನಿಶ್ಚಿತ. ಕೇಳದಿರಲು ರಾವಣನೇ ಕೊಲ್ಲುವನು. ಇವೆರಡರಲ್ಲಿ 'ವಿಶಿಷ್ಟನಾದವನಿಂದಲೇ ಮರಣ ಲೇಸು' ಎಂದು. ಏಕೆಂದರೆ ರಾಮನಿಂದ ಸಾವನ್ನು ಸ್ವಲ್ಪ ಮುಂದೆ ನಿರೀಕ್ಷಿಸಬಹುದು. ಇನ್ನೂ ಸ್ವಲ್ಪ ಹೊತ್ತು ಒಂದೆರಡು ದಿನ ಹೆಚ್ಚು ಬದುಕುವ ಅವಕಾಶ ಇದೆ. ಆದ್ದರಿಂದ ರಾವಣನ ಮಾತನ್ನು ನಡೆಸಲು ಮಾರೀಚ ಮುಂದಾದ.

ಮಹಾಭಾರತದಲ್ಲಿ ಮಾರೀಚನೇ ಒಳ್ಳೆಯವನಂತೆ ತೋರುತ್ತದೆ. ಆದರೆ ಅವನು ಒಳ್ಳೆಯವನಾಗಿದ್ದರೆ ವಿಶ್ವಾಮಿತ್ರರ ಯಜ್ಞಕ್ಕೆ ತೊಂದರೆ ಕೊಡುತ್ತಿರಲಿಲ್ಲ. ಆದ್ದರಿಂದ ಮೇಲಿನ ಅರ್ಥ ಅನಿವಾರ್ಯ. ರಾಮನೊಡನೆ ಸೆಣಸುವುದು ಬೇಡವೆಂಬ ಮಾರೀಚ

ವಾಕ್ಯವೂ ಡಾಂಭಿಕ ಒಳ್ಳೆಯ ತನವೇ ಹೊರತು ನಿಜವಾಗಿಯೂ ಒಳ್ಳೆಯ ತನದ ಮಾತಲ್ಲ. ಮಹಾಭಾರತದಲ್ಲೂ ದ್ರೌಪದೀ ಪರವಾಗಿ ಮಾತನಾಡಿದ ವಿಕರ್ಣನದೂ ಇಂಥದ್ದೇ ಡಂಭಾಚಾರದ ಮಾತಿನಂತಿದೆ ಇದು.

**'ವಿಕರ್ಣಃ ಪಾಪಕೋऽಪಿ ಸನ್**
**ಆಹ ಡಂಬಾರ್ಥಮೇವಾತ್ರ ಧರ್ಮವಿತ್ತ್ವಂ ಪ್ರಕಾಶಯನ್ ।**

**ಅಧರ್ಮ ಏವಾಯಮಿತಿ ಕರ್ಣೋऽಥೈನಮಭರ್ತ್ಸಯತ್'**

**– ಮ.ತಾ.ನಿ.(೨೧/೩೩೬)**

ಆದ್ದರಿಂದ ಮಾರೀಚನ ಮೇಲಿನ ಮಾತುಗಳೂ ವಿಕರ್ಣನ ಮಾತಿನಂತೆಯೇ ಇದೆ.

**'ಮಾರೀಚಶ್ಚಿಂತಯಾಮಾಸ ವಿಶಿಷ್ಟಾನ್ಮರಣಂ ವರಮ್'। ಅ– ೨೭೮–೯**

ಅನಿವಾರ್ಯವಾಗಿ ಮಾರೀಚನು ನಾನು ಯಾವ ಸೇವೆ ಸಹಾಯ ಮಾಡಲಿ ಎಂದ ರಾವಣನಿಗೆ. ಅದಕ್ಕೆ ರಾವಣನು, 'ನೀನು ರತ್ನಗಳಿಂದ ಕೂಡಿದ ಕೋಡುಳ್ಳ' ಶರೀರದ ಕೂದಲುಗಳೂ ಕೂಡ ರತ್ನಮಯ್ವವಾಗಿರುವ ಮಾಯಾ ಜಿಂಕೆಯ ವೇಷ ತಾಳಿ ಸೀತೆಯ ಮುಂದೆ ಓಡಾಡಿ ಆಕೆಯನ್ನು ಪ್ರಲೋಭನಗೊಳಿಸು. ಆಗ ಆಕೆ ರಾಮನನ್ನು ಅದನ್ನು ತರಲು ಪ್ರಚೋದಿಸುವಳು. ರಾಮನು ಹೊರ ಹೋಗಲು ಸೀತೆ ನನ್ನ ವಶವಾಗುವಳು. ಆಕೆಯನ್ನು ಅಪಹರಿಸಿಕೊಂಡು ನಾನು (ಲಂಕೆಗೆ) ಹೋಗುವೆ. ರಾಮನು ವಾಪಸು ಬಂದಾಗ ಸೀತೆ ಇರದೆ, ಆಕೆಯ ವಿಯೋಗದಿಂದ ರಾಮನು ವಿನಾಶ ಹೊಂದುವನು. ಇದು ನನ್ನ ಯೋಜನೆ. ನೀನು ಇದಕ್ಕೆ ಸಹಾಯ ಮಾಡು ಎಂದನು.

ನಂತರ ತನ್ನ ಅವಸಾನಾನಂತರ ಮಾಡಬೇಕಾದ ಉದಕ ಕ್ರಿಯೆಗಳೆಲ್ಲವನ್ನು ಮಾಡಿಕೊಂಡು ಮಾಯಾ ಜಿಂಕೆಯಾಗಿ ಮಾರೀಚನು ಸೀತೆಯ ಮುಂದೆ ಓಡಾಡಿದ (ಎಲ್ಲ ಕಾರ್ಯವನ್ನು ಅನಾಯಾಸವಾಗಿ ಮಾಡುವ ರಾಮನ ಆಶ್ರಮದ ಮುಂದೆ): **ಇತ್ಯೇವಮುಕ್ತೋ ಮಾರೀಚಃ ಕೃತ್ವೋದಕಮಥಾತ್ಮನಃ.**

**ರಾವಣಸ್ತು ಯತಿರ್ಭೂತ್ವಾ ಮುಂಡಃ ಕುಂಡೀ ತ್ರಿದಂಡಧೃಕ್ ।**
**ಮೃಗಶ್ಚ ಭೂತ್ವಾ ಮಾರೀಚಸ್ತಂ.................. । ಅ ೨೭೮–೧೬, ೧೭**

ರಾವಣನು ಯತಿ ವೇಷ ಧಾರಣ ಮಾಡಿ ಸಿದ್ಧನಾದ ಮಾಯಾ ಜಿಂಕೆಯೆಂದು ತಿಳಿದಿದ್ದರೂ ಸೀತೆ ದೇವತಾಕಾರ್ಯ ಸಿದ್ಧಿಗೋಸ್ಕರ ರಾಮನನ್ನು ಆ ಜಿಂಕೆ ತರಲು ಪ್ರಚೋದಿಸಿದಳು. ಸೀತೆಯ ರಕ್ಷಣೆಗಾಗಿ ಲಕ್ಷ್ಮಣನನ್ನು ನಿಯೋಜಿಸಿ ರಾಮನು ಧನುರ್ಧಾರಿಯಾಗಿ ಜಿಂಕೆಯನ್ನು ಬೆನ್ನಟ್ಟಿದ. ಅದು ಮಂದವಾಗಿ, ವೇಗವಾಗಿ ಹೋಗುವಂತೆ, ಆಟವಾಡುತ್ತಾ ಹೋಯಿತು. ರಾಮನು ಇದು ಮಾಯಾ

ಜಿಂಕೆಯೆಂದು ತಿಳಿದ. ಒಂದು ಅಮೋಘವಾದ ಬಾಣವನ್ನು ಜಿಂಕೆಗೆ ಬಿಟ್ಟ, ಆ ಜಿಂಕೆ 'ಹಾ ರಾಮ!' ಸೀತೆ ಎನ್ನುತ್ತಾ ಬಿದ್ದಿತು.

**............... ರಾಮಸ್ತಂ ಬುಬುಧೇ ತತಃ ।**
**ನಿಶಿಚಾರಂ ವಿದಿತ್ವಾ ತಂ ರಾಘವಃ ಪ್ರತಿಭಾನವಾನ್ ... । – ೨೭೮/೨೧,೨೨**

ಈ ಧ್ವನಿ ಕೇಳಿದ ಸೀತೆ ಲಕ್ಷ್ಮಣನನ್ನು ರಾಮ ರಕ್ಷಣೆಗಾಗಿ ಹೋಗಲು ಒತ್ತಾಯಿಸಿದಳು. ಲಕ್ಷ್ಮಣನ ಮಾತನ್ನು ಕೇಳಲಿಲ್ಲ ಸೀತೆ

**ಸಾ ತಂ ಪರುಷಮಾರಬ್ಧಾ ವಕ್ತುಂ ಸಾಧ್ವೀ ಪತಿವ್ರತಾ ।**
**ರಾಮಂಭರ್ತಾರಮುತ್ಸೃಜ್ಯ ನ ತ್ವಹಂ ತ್ವಾಂ ಕಥಂಚನ ॥ ಅ ೨೭೮–೨೮**

ನೊಂದ ಲಕ್ಷ್ಮಣ ಮುಂದೆ ನಡೆದ.

ಇತ್ತ ಕಪಟ ವೇಷಧಾರಿ ರಾವಣನು ಆಶ್ರಮಕ್ಕೆ ಬಂದ. ಕಪಟ ಎಂದು ಗೊತ್ತಿದ್ದರೂ ಪೂಜ್ಯ ಯತಿ ವೇಷಕ್ಕೆ ಮನ್ನಿಸಿ ಅತಿಥಿ ಪೂಜೆ ಮಾಡಿದಳು ಸೀತೆ. ನಂತರ ರಾವಣನು ತನ್ನ ನಗರಕ್ಕೆ ಪತ್ನಿಯಾಗಿ ಬರಲು ಹೇಳಿದ ಸೀತೆಗೆ.

**ಭಾರ್ಯಾ ಮೇ ಭವ ಮಮ ಸುಶ್ರೋಣಿ ಅ ೨೭೮–೩೬**

[೧]ಸೀತೆ ಪ್ರತಿಭಟಿಸಿದಾಗ, ಆಕೆಯನ್ನು ಬಲಾತ್ಕಾರವಾಗಿ ಎಳೆದುಕೊಂಡು ಹೋದ. ಅವನು ಒಯ್ದದ್ದು ಸೀತಾಕೃತಿ. ಕಾರಣ ನಿಜ ಸೀತೆ ಮರೆಯಾಗಿ ತನ್ನ ಪ್ರತಿಕೃತಿ ಸೃಷ್ಟಿಸಿ ಕೈಲಾಸಕ್ಕೆ ಹೋಗಿ ಅಲ್ಲಿ ಶಿವ ಪಾರ್ವತಿಯರಿಂದ ಪೂಜೆಗೊಂಡಳು.

ಇತ್ತ ಲಕ್ಷ್ಮಣ, ರಾಮನನ್ನು ಇದಿರಾದ ರಾಮನು ಎಲ್ಲ ವಿಷಯವನ್ನು ತಿಳಿದೂ, ಲೋಕದ ಜನರಂತೆ ಸೀತೆಯನ್ನು ಹುಡುಕುವವನಂತೆ ನಟಿಸಿದ

ರಾವಣನು ಸೀತಾಕೃತಿಯನ್ನು ಅಪಹರಿಸಿ ಒಯ್ಯುತ್ತಿರುವಾಗ ಸೀತೆ ತನ್ನ ಕೆಲ ಆಭರಣಗಳನ್ನು, ತನ್ನ ಪೀತಾಂಬರವನ್ನು ಹರಿದು, ಅದರಲ್ಲಿ ಕಟ್ಟಿ ಕೆಳಗೆ ಒಗೆದಳು ಅವು ಸುಗ್ರೀವ, ಆಂಜನೇಯರಿಗೆ ದೊರಕಿತು. ಅವರು ಅದನ್ನು ಭದ್ರವಾಗಿಟ್ಟಿದ್ದರು.

ದಾರಿಯಲ್ಲಿ ರಾವಣನನ್ನು ಪ್ರತಿಭಟಿಸಿದ ಜಟಾಯುವಿನ ಎರಡು ರೆಕ್ಕೆಗಳನ್ನು ತನ್ನ ಖಡ್ಗದಿಂದ ಕತ್ತರಿಸಿದ. ಅದು ಕೆಳಕ್ಕೆ ಬಿದ್ದಿತು. ಸೀತೆಯನ್ನು ಹುಡುಕಿದವನಂತೆ ನಟಿಸುತ್ತಾ ಬಂದ ರಾಮನನ್ನು ನೋಡಿದ ಜಟಾಯು ರಾಮನಿಗೆ ಸನ್ನೆ ಮಾಡಿ ಸೀತಾಪಹರಣವನ್ನು ನಿವೇದಿಸಿ ಕೊನೆಯುಸಿರೆಳೆದ. ರಾಮನು ತನ್ನ ತಂದೆಯ ಸಖನಾದ ಜಟಾಯುವಿಗೆ ತಂದೆಯ ಸ್ಥಾನ ನೀಡಿ ದಹನ ಮಾಡಿ ಅದಕ್ಕೆ ಸದ್ಗತಿಯನ್ನಿತ್ತನು

೧ ಮಹಾಭಾರತದಲ್ಲಿ ಸೀತಾಕೃತಿಯ ಉಲ್ಲೇಖವಿಲ್ಲ. ಬ್ರಹ್ಮವೈವರ್ತ ಮೊದಲಾದ ಪುರಾಣಗಳ ಆಧಾರದ ಮೇಲೆ ಆಚಾರ್ಯರು ನಿರ್ಣಯಿಸಿರುವುದನ್ನು ವ್ಯಾಖ್ಯಾನಕಾರರು ಮ. ತಾ.ನಿ.ವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ.

**ದದರ್ಶ ಗೃಧ್ರಂ....। ಮೃತಂ ತಮದಹತ್ ಸ್ವಗತಿಂ ತಥಾऽದಾತ್ ।**
**ಮತಾನಿ ಅ– ೫–೪೧**

ಸೀತಾಪಹರಣದಿಂದ ಶೋಕಾಕುಲರಾಗಿದ್ದ ರಾಮ ಲಕ್ಷ್ಮಣರು ದಕ್ಷಿಣ ದಿಕ್ಕಿಗೆ ದಂಡಕಾರಣ್ಯದಲ್ಲಿ ಪ್ರಯಾಣಿಸುತ್ತಾ ದಾರಿಯಲ್ಲಿ ಅನೇಕ ಪಾಳು ಬಿದ್ದ ಆಶ್ರಮಗಳನ್ನು, ಅಲ್ಲಿ ಚದುರಿದ ಆಸನಗಳನ್ನೂ ನೀರು ತುಂಬುವ ಒಡೆದ ಕೊಡಗಳನ್ನೂ ನೋಡುತ್ತಾ ಹೋದರು. ಋಷಿಗಳಾರೂ ಇರಲಿಲ್ಲ. ರಾಮ ಲಕ್ಷ್ಮಣರ ಸುತ್ತಲೂ ಪ್ರಾಣಿಗಳ ಘೋರ ನಿನಾದ ಕೇಳಿಸುತ್ತಿತ್ತು. ಸುತ್ತಲೂ ಎಲ್ಲೋ ದಾವಾಗ್ನಿ ಇದ್ದಂತೆ ತೋರುತ್ತಿತ್ತು.

ಅಷ್ಟರಲ್ಲಿ ಒಂದು ಮುಹೂರ್ತದಲ್ಲಿ ಮೇಘ ಪರ್ವತದಂತಿರುವ ನೋಡಲು ಭಯಂಕರನಾದ ಕಬಂಧನೆಂಬ ರಾಕ್ಷಸನನ್ನು ನೋಡಿದರು. ಅವನ ತೋಳುಗಳು ಸಾಲ ವೃಕ್ಷಗಳಂತೆ ನೀಳವಾಗಿದ್ದವು. ಅವನ ಕೈಗಳು ಲಕ್ಷ್ಮಣನನ್ನು ಹಿಡಿದವು.

**'ಅಪಶ್ಯೇತಾಂ ಮುಹೂರ್ತಾಚ್ಚ ಕಬಂಧಂ ಘೋರ ದರ್ಶನಮ್ ।**
**ಮೇಘಪರ್ವತಸಂಕಾಶಂ ಶಾಲಸ್ಕಂಧಂ ಮಹಾಭುಜಮ್ ॥**
**ಯದೃಚ್ಛಯಾऽಥ ತದ್ರಕ್ಷಃ ಕರೇ ಜಗ್ರಾಹ ಲಕ್ಷ್ಮಣಮ್' ॥**

**ವ.ಪ. ಅ ೨೭೯–೨೮,೨೯**

ಕಂಬಂಧನಿಗೆ ತಲೆ ಇರಲಿಲ್ಲ. ಹೊಟ್ಟೆಯಲ್ಲಿ ಅವನ ಮುಖ ಅಡಗಿತ್ತು. ಎದೆಯಲ್ಲಿ ಕಣ್ಣುಗಳಿದ್ದವು. ಅವನು ತನ್ನನ್ನು ಹಿಡಿದುದನ್ನು ನೋಡಿ ಬೆದರಿದ ಲಕ್ಷ್ಮಣನು ರಾಮನಿಗೆ ಹೇಳಿದ. 'ಅಣ್ಣ ನೀನು ರಾಜ್ಯ ಭ್ರಷ್ಟನಾದೆ! ತಂದೆ ತೀರಿಹೋದ. ಇದರ ಜೊತೆಗೆ ಪ್ರಿಯಳಾದ ಸೀತಾಪಹರಣ ಬೇರೆ ಆಯಿತು. ನೀನು ಪುನಃ ರಾಜ್ಯಾಭಿಷಿಕ್ತನಾಗುವುದನ್ನು ನೋಡುವೆನೆಂದು ಭಾವಿಸಿದ ನನ್ನನ್ನು ಈ ರಾಕ್ಷಸನು ತಿನ್ನಲು ಬರುತ್ತಿದ್ದಾನೆ ಎಂದು ಮರುಗಿದ ಲಕ್ಷ್ಮಣ. ಆಗ ರಾಮ 'ವಿಷಾದಿಸಬೇಡ. ನಾನಿರುವಾಗ ನಿನ್ನನ್ನು ಇವನು ಏನೂ ಮಾಡಲಾರ. ಇವನ ಬಲಗೈಯನ್ನು ಕತ್ತರಿಸು. ನಾನು ಎಡಗೈಯನ್ನು ಕತ್ತರಿಸುವೆ', ಎಂದ. ಕೂಡಲೆ ಲಕ್ಷ್ಮಣ ಖಡ್ಗದಿಂದ ತಿನ್ನಲು ಕೈಚಾಚಿದ ಅವನ ಬಲಭುಜವನ್ನೇ ಕತ್ತರಿಸಿದ. ರಾಮನು ಎಡಭುಜ ಕತ್ತರಿಸಿದ. ರಾಕ್ಷಸ ಪ್ರಾಣಬಿಟ್ಟು ಭೂಮಿಯಲ್ಲಿ ಬಿದ್ದ. ಅವನ ದೇಹದಿಂದ ದಿವ್ಯ ಚೇತನ ಬಂದು ಪುರುಷಾಕಾರವಾಗಿ ಆಕಾಶದಲ್ಲಿ ಸೂರ್ಯನಂತೆ ರಾಮ ಲಕ್ಷ್ಮಣರ ಮುಂದೆ ನಿಂತಿತು ರಾಮ ನೀನು ಯಾರೆಂದು ಅವನನ್ನು ಕೇಳಿದ.

**'ತಸ್ಯ ದೇಹಾತ್ ವಿನಿಃಸೃತ್ಯ ಪುರುಷೋ ದಿವ್ಯದರ್ಶನಃ ।**
**ದದೃಶೇ ದಿವಮಾಸ್ಥಾಯ ದಿವಿ ಸೂರ್ಯ ಇವ ಜ್ವಲನ್'॥ ಅ ೨೭೯ – ೪೨**

ಅವನು ಹೇಳಿದ, 'ನಾನು ವಿಶ್ವಾವಸು ಎಂಬ ಗಂಧರ್ವ ಬ್ರಾಹ್ಮಣ ಶಾಪದಿಂದ ರಾಕ್ಷಸ ದೇಹ ಬಂದಿತ್ತು. ನಿನಗಾಗಿ ನಾನು ಹೇಳಬೇಕಾದುದು ಇದೆ. 'ರಾಮ! ಲಂಕಾಧಿವಾಸಿಯಾದ ರಾವಣನು ಸೀತಾಪಹರಣ ಮಾಡಿದ್ದಾನೆ. ನೀನು ದಕ್ಷಿಣಕ್ಕೆ

ಹೋಗು. ದಾರಿಯಲ್ಲಿ ಕಿಷ್ಕಿಂಧೆಯಲ್ಲಿ ಸುಗ್ರೀವನೊಡನೆ ಸಖ್ಯ ಬೆಳೆಸು. ಅವನು ಪಂಪಾ ತೀರದಲ್ಲಿರುವನು. ಋಷ್ಯಮೂಕ ಪರ್ವತದ ಹತ್ತಿರ ಪಂಪಾ ಸರೋವರವಿದೆ. ಸುಗ್ರೀವನಿಗೆ ನಾಲ್ವರು ಸಚಿವರು–ಹನುಮಂತ, ಮೈಂದ, ವಿವಿದ, ಜಾಂಬವಾನ್. ಸುಗ್ರೀವ ವಾಲಿಯ ಸೋದರ. ನಿನ್ನ ದುಃಖವನ್ನು ಸುಗ್ರೀವನಿಗೆ ಹೇಳಿಕೊ. ನೀವಿಬ್ಬರೂ ಸಮಾನ ದುಃಖಿಗಳು. ಅವನು ನಿನಗೆ ಸೀತಾನ್ವೇಷಣೆಗೆ ಸಹಾಯ ಮಾಡುವನು' ಹೀಗೆ ನುಡಿದು ಗಂಧರ್ವನು ಅಲ್ಲಿಯೇ ಅದೃಶ್ಯಯನಾದ. ರಾಮಲಕ್ಷ್ಮಣರು ಇದೆಲ್ಲ ಕೇಳಿ ಆಶ್ಚರ್ಯಗೊಂಡರು. ಕಿಷ್ಕಿಂಧೆಯ ಕಡೆ ನಡೆದರು.

ಸರ್ವಜ್ಞನಾದ ಭಗವಂತನಾದ ರಾಮನು ಸಾಮಾನ್ಯನಂತೆ ಆಶ್ಚರ್ಯಗೊಂಡ. ಸೀತೆಯನ್ನು ಹುಡುಕುವವನಂತೆ ನಟಿಸಿದ. ಸೀತೆಯನ್ನು ನೆನಪಿಸಿಕೊಳ್ಳುತ್ತಾ ವಿಲಾಪ ಮಾಡಿದ. ಸೀತೆಯನ್ನು ಬಿಟ್ಟು ಇರಲಾರೆನೋ ಎನ್ನುವಂತೆ ಮತ್ತೆ ಮತ್ತೆ ದುಃಖಿಸುತ್ತಾ ಪಂಪಾ ಸರೋವರಕ್ಕೆ ಸಮೀಪಿಸಿದನು.

**'ಸೀತಾಹರಣ ದುಃಖಾರ್ತಃ ಪಂಪಾಂ ರಾಮಃ ಸಮಾಸದತ್ ।**
**ವಿಲಲಾಪ ಸ ರಾಜೇಂದ್ರಸ್ತತ್ರ ಕಾಂತಾಮನುಸ್ಮರನ್ ।**
**ಕಾಮಬಾಣಾಭಿಸಂತಪ್ತಃ ಸೌಮಿತ್ರಿಸ್ತಮಥಾಬ್ರವೀತ್ ॥**

**ನ ತ್ವಾಮೇವಂ ವಿಧೋ ಭಾವಃ ಸ್ಪ್ರಷ್ಟುಮರ್ಹತಿ ಮಾನದ ।**
**ಆತ್ಮವಂತಮಿವ ವ್ಯಾಧಿಃ ಪುರುಷಂ ವೃದ್ಧಿಶೀಲಿನಮ್ ।**
**ಪ್ರವೃತ್ತಿರುಪಲಬ್ಧಾ ತೇ ವೈದೇಹ್ಯಾ ರಾವಣಸ್ಯ ಚ ।**
**ಅಭಿಗಚ್ಛಾವ ಸುಗ್ರೀವಂ ಶೈಲಸ್ಥಂ ಹರಿಪುಂಗವಮ್ ।**
**ಮಯಿ ಶಿಷ್ಯೇ ಚ ಭೃತ್ಯೇ ಚ ಸಹಾಯೇ ಚ ಸಮಾಶ್ವಸ' ॥**

**ಅ– ೨೮೦– ೧ ರಿಂದ ೬**

ಆಗ ಸೋದರ ಲಕ್ಷ್ಮಣನು ಅಣ್ಣನನ್ನು ಸಮಾಧಾನ ಮಾಡಿದ. 'ಅಣ್ಣ! ನಿಯತಾಹಾರಾದಿಗಳುಳ್ಳ, ಇಂದ್ರಿಯ ನಿಗ್ರಹವುಳ್ಳವನನ್ನು ರೋಗಗಳು ಬಾಧಿಸದಿರುವಂತೆ; ನಿನ್ನನ್ನು ಈ ಮನೋವ್ಯಾಧಿಗಳು ತೊಂದರೆ ಕೊಡಬಾರದು. ನೀನು ಸಮಚಿತ್ತ. ಹೇಗಿದ್ದರೂ ಸೀತೆ ಎಲ್ಲಿರುವಳೆಂದು ತಿಳಿದಿದೆ. ನಾವು ಸುಗ್ರೀವನ ಬಳಿಗೆ ಹೋಗೋಣ. ನಾನು ನಿನ್ನ ಶಿಷ್ಯ ಹಾಗೂ ಸೇವಕ, ನಿನ್ನ ಸೇವೆಯಲ್ಲಿ ಸದಾ ಇರುವ ನನ್ನನ್ನು ವಿಶ್ವಾಸ ಮಾಡು'.

ಹೀಗೆ ಅನೇಕಾನೇಕ ಸಮಾಧಾನದ ಲಕ್ಷ್ಮಣನ ಮಾತುಗಳಿಂದ ಶಾಂತನಾದ (ಶಾಂತನಂತೆ ನಟಿಸಿದ) ರಾಮನು ಲಕ್ಷ್ಮಣನೊಡನೆ ಋಷ್ಯಮೂಕದೆಡೆಗೆ ಹೊರಟ. ಅಲ್ಲಿ ರಾಮ ಲಕ್ಷ್ಮಣರು ಐವರು ಕಪಿಗಳನ್ನು ಕಂಡರು.

ಸುಗ್ರೀವನು ಬುದ್ಧಿವಂತನಾದ ತನ್ನ ಸಚಿವನಾದ ಹನುಮಂತನನ್ನು ರಾಮನೆಡೆಗೆ ಕಳುಹಿಸಿಕೊಟ್ಟನು. ರಾಮನು ಹನುಮಂತನೊಡನೆ ಮಾತನಾಡಿ ಸುಗ್ರೀವನ ಬಳಿಗೆ ಹೋದನು.

'ಸುಗ್ರೀವಃ ಪ್ರೇಷಯಾಮಾಸ ಸಚಿವಂ ವಾನರಂ ತಯೋಃ ।
ಬುದ್ಧಿಮಂತಂ ಹನೂಮಂತಂ ಹಿಮವಂತಮಿವ ಸ್ಥಿತಮ್ ॥
ತೇನ ಸಂಭಾಷ್ಯ ಪೂರ್ವಂ ತೌ ಸುಗ್ರೀವಮಭಿಜಗ್ಮತುಃ' ॥ ೨೮೦-೧೦, ೧೧

ರಾಮನು ಸುಗ್ರೀವನೊಡನೆ ವಿದ್ಯುಕ್ತನಾಗಿ ಸ್ನೇಹ ಬೆಳೆಸಿದನು. ರಾಮನು ರಾವಣ ಸೀತಾಪಹರಣ ಹಾಗೂ ಆಗಬೇಕಾದ ಸೀತಾನ್ವೇಷಣೆ ಎಲ್ಲವನ್ನೂ ಹೇಳಲು, ಸುಗ್ರೀವಾದಿಗಳು ತಮಗೆ ದೊರೆತ ಬಟ್ಟೆಯನ್ನು (ಅಲ್ಲಿದ್ದ ಸೀತಾಭರಣಗಳನ್ನು) ತೋರಿಸಿದರು. ಆಗ ರಾಮನಿಗೆ ಸುಗ್ರೀವನ ಬಗ್ಗೆ ನಂಬಿಕೆ ಉಂಟಾಯಿತು. ತಾನು ಪ್ರತಿಯಾಗಿ ಕೂಡಲೆ ವಾನರ ರಾಜ್ಯಾದಿಪತಿಯನ್ನಾಗಿ ಸುಗ್ರೀವನನ್ನು ಪಟ್ಟಾಭಿಷೇಕ ಮಾಡಿದನು. ಯುದ್ಧದಲ್ಲಿ ವಾಲಿಯ ಸಂಹಾರ ಮಾಡುವೆನೆಂದೂ ಪ್ರತಿಜ್ಞೆ ಮಾಡಿದ. ಸುಗ್ರೀವನೂ ಸೀತಾನ್ವೇಷಣೆಯ ಕರಾರನನ್ನು ಪ್ರತಿಜ್ಞೆ ಮಾಡಿದರು. ಹೀಗೆ ಪರಸ್ಪರರು ತಮ್ಮ ತಮ್ಮ ಕಾರ್ಯಗಳಿಗೆ ಬದ್ಧತೆಯನ್ನು ಪ್ರದರ್ಶಿಸಿದರು.

'ಸಖ್ಯಂ ವಾನರರಾಜೇನ ಚಕ್ರೇ ರಾಮಸ್ತದಾ ನೃಪ ।
ತದ್ವಾಸೋ ದರ್ಶಯಾಮಾಸುಸ್ತಸ್ಯ ಕಾರ್ಯೇ ನಿವೇದಿತೇ ।
ತತ್ಪ್ರತ್ಯಯಕರಂ ಲಬ್ಧ್ವಾ ಸುಗ್ರೀವಂ ಪ್ಲವಗಾಧಿಪಮ್ ।
ಪೃಥಿವ್ಯಾಂ ವಾನರೈಶ್ವರ್ಯೇ ಸ್ವಯಂ ರಾಮೋಽಭ್ಯಷೇಚಯತ್
ಪ್ರತಿಜಜ್ಞೇ ಚ ಕಾಕುತ್ಸ್ಥಃ ಸಮರೇ ವಾಲಿನೋ ವಧಮ್ ।
ಸುಗ್ರೀವಶ್ಚಾಪಿ ವೈದೇಹ್ಯಾಃ ಪುನರಾನಯನಂ ನೃಪ' ॥ ಅ ೨೮೦-೧೧, ೧೪

ನಂತರ ಸುಗ್ರೀವನು ಕಿಷ್ಕಿಂಧೆಗೆ ಮಹಾಪ್ರವಾಹದಂತೆ ಗರ್ಜಿಸುತ್ತಾ ಬಂದನು. ಇದನ್ನು ವಾಲಿಯು ಸಹಿಸಲಿಲ್ಲ. ಆದರೆ ವಾಲಿಯ ಹೆಂಡತಿ ತಾರೆ ಪತಿಯನ್ನು ತಡೆದು ನುಡಿದಳು.

ಸುಗ್ರೀವನ ನಿನಾದದ ಹಿಂದೆ ಯಾವುದೋ ಅವ್ಯಕ್ತ ಬಲವಿದೆ. ಕಾರಣ ನೀನು ಹೊರ ಹೋಗಬೇಡ. ಆಗ ವಾಲಿಯು 'ಸುಗ್ರೀವನ ಬಲದ ಹಿಂದಿರುವ ಶಕ್ತಿ ಯಾರು? ವಿವೇಚಿಸಿ ಹೇಳು' ಎಂದ. ಆಗ ಆಕೆ ಒಂದು ಮುಹೂರ್ತ ಯೋಚಿಸಿ ಹೇಳಿದಳು.

'ಕಪೀಶ್ವರ! ದಶರಥನ ಮಗ ರಾಮನು ಹೆಂಡತಿಯು ಅಪಹೃತಳಾಗಿದ್ದಾಳೆ. ಸುಗ್ರೀವ ಅವನು ಇಬ್ಬರೂ ಈಗ ಸಮಾನ ಶತ್ರುಗಳುಳ್ಳವರು. ರಾಮನಿಗೆ ರಾವಣ ಸುಗ್ರೀವನಿಗೆ ನೀನು ರಾಮನ ಸೋದರ ಲಕ್ಷ್ಮಣ, ಮಹಾ ಮೇಧಾವಿ. ಅಣ್ಣನ ಕಾರ್ಯಕ್ಕಾಗಿ ಇದ್ದಾನೆ. ಸುಗ್ರೀವನಿಗೆ ನಾಲ್ವರು ಸಚಿವರಿದ್ದಾರೆ ಮೈಂದ, ವಿವಿಧ ಹನುಮಂತ, ಹಾಗೂ ಜಾಂಬುವಂತರು. ಇವರೆಲ್ಲ ಮಹಾಬಲಿಷ್ಠರು ಇವರೆಲ್ಲ ನಿನ್ನ ನಾಶಕ್ಕೆ ಸಮರ್ಥರು ಕಾರಣ ರಾಮನ ಆಶ್ರಯ ಹೊಂದಿದವರಾಗಿದ್ದಾರೆ'.

ತನ್ನ ಹಿತವನ್ನು ನುಡಿದ ತನ್ನವಳ ಮಾತನ್ನು ತಳ್ಳಿ ಹಾಕಿದ ವಾಲಿಯು ಆಕೆಯನ್ನೇ ಶಂಕಿಸಿದ. ಆಕೆ ಸುಗ್ರೀವನಲ್ಲಿ ಅನುರಕ್ತಳಾಗಿರುವಳೆಂದೇ ಶಂಕಿಸಿ, ಸುಗ್ರೀವನೊಡನೆ ಯುದ್ಧಕ್ಕೆ ನಡೆದ.

**'ತಸ್ಯಾಸ್ತದಾಕ್ಷಿಷ್ಯ ವಚೋ ಹಿತಮುಕ್ತಂ ಕಪೀಶ್ವರಃ ।**
**ಪರ್ಯಶಂಕತ ತಾಮೀರ್ಷುಃ ಸುಗ್ರೀವಗತಮಾನಸಾಮ್ ।**
**ತಾರಾಂ ಪರುಷಮುಕ್ತ್ವಾ ತು ನಿರ್ಜಗಾಮ ಗುಹಾಮುಖಾತ್'**

**ಅ ೨೮೦– ೨೫,೨೬.**

ಮಾಲ್ಯವತ್ಪರ್ವತದ ಬಳಿ ಇದ್ದ ಸುಗ್ರೀವನನ್ನು ಕುರಿತು ವಾಲಿ ಹೇಳಿದ.

'ಸುಗ್ರೀವ! ನನ್ನೊಂದಿಗೆ ಅನೇಕ ಬಾರಿ ಯುದ್ಧ ಮಾಡಿ ಸೋತು ಹೋದರೂ ಬದುಕುವ ಆಶೆಯುಳ್ಳ ನೀನು ಮತ್ತೆ ಯುದ್ಧಕ್ಕೆ ಬಂದೆಯಾ! ನಿನ್ನನು ದಾಯಾದಿ, ಜ್ಞಾತಿ, ಸೋದರ, ಎಂದು ನಾನು ಕೊಲ್ಲದೆ ಬಿಟ್ಟೆ. ಮತ್ತೆ ಯುದ್ಧಕ್ಕೆ ಬರಲು ಮರಣವನ್ನಪ್ಪಲು ಏಕೆ ಅಷ್ಟು ಅವಸರ!' ಆಗ ಸುಗ್ರೀವನು 'ರಾಜನ್! ನಿನ್ನಿಂದಾಗಿ ರಾಜ್ಯವನ್ನು ಕಳೆದುಕೊಂಡೆ, ಹೆಂಡತಿಯನ್ನು ಕಳೆದುಕೊಂಡೆ. ನನಗೆ ಬದುಕುವ ಆಶೆಯಿಲ್ಲ, ಅದಕ್ಕೆ ಮತ್ತೆ ನಿನ್ನೊಡನೆ ಕಾದಾಡಿಯೇ ಸಾಯಲು ಬಂದಿದ್ದೇನೆ ನನಗೆ ಜೀವನದಲ್ಲಿ ಜಿಗುಪ್ಸೆ ಬಂದಿದೆ'. ಎಂದು ಮಾರ್ಮಿಕವಾಗಿ ಉತ್ತರಿಸುತ್ತಾ ತನ್ನ ರಕ್ಷಣೆಗೆ ನಿಂತ ರಾಮನನ್ನು ಉಲ್ಲೇಖಿಸದೆ ಹೇಳಿದ. ತನ್ನನ್ನು ಕಾಪಾಡಲು ರಾಮನಿದ್ದಾನೆ. ಈ ಬಾರಿ ನೀನೇನೂ ನನ್ನನ್ನು ಬೆದರಿಸಲಾರೆ ಕೊಲ್ಲಲಾರೆ ಎಂಬ ಧ್ವನಿ ಅದರಲ್ಲಿತ್ತು.

**ವಾಲೀ ಉವಾಚ**

**'ಅಸಕೃತ್ತ್ವಂ ಮಯಾ ಪೂರ್ವಂ ನಿರ್ಜಿತೋ ಜೀವಿತಪ್ರಿಯಃ ।**
**ಮುಕ್ತೋ ಜ್ಞಾತಿರಿತಿ ಜ್ಞಾತ್ವಾ ಕಾ ತ್ವರಾ ಮರಣೇ ಪುನಃ' ॥**

**ಸುಗ್ರೀವ ಉವಾಚ**

**'ಹೃತರಾಜ್ಯಸ್ಯ ಮೇ ರಾಜನ್ ಹೃತದಾರಸ್ಯ ಚ ತ್ವಯಾ ।**
**ಕಿಂ ಮೇ ಜೀವಿತಸಾಮರ್ಥ್ಯಮಿತಿ ವಿದ್ಧಿ ಸಮಾಗತಮ್' ॥**

**ಅ ೨೮೦– ೨೭,೨೮**

ಹೀಗೆ ವಾಗ್ವಾದ ಮಾಡಿ ಇಬ್ಬರೂ ಯುದ್ಧಕ್ಕಿಳಿದರು. ಶಿಲಾ–ತಾಲ–ಶಾಲವೃಕ್ಷಗಳನ್ನು ಪರಸ್ಪರ ಎಸೆದರು ಮುಷ್ಟಿ ಯುದ್ಧ ಮಾಡಿದರು. ಅವರ ಶರೀರಗಳು ರಕ್ತ ಸಿಕ್ತವಾಗಿದ್ದವು. ಕೆಂಪು ಪುಷ್ಪಗಳಿಂದ ಕೂಡಿದ ಕಿಂಶುಕ ವೃಕ್ಷಗಳಂತೆ ಕಾದಾಡುತ್ತಾ ಕಂಗೊಳಿಸಿದರು. ಇಬ್ಬರ ಯುದ್ಧದಲ್ಲಿ ಯಾವ ವ್ಯತ್ಯಾಸ ಕಾಣದಿದ್ದಾಗ (ರಾಮನ ಸೂಚನೆಯಂತೆ) ಹನುಮಂತನು ಸುಗ್ರೀವನ ಕೊರಳಲ್ಲಿ ಒಂದು ಹೂಮಾಲೆಯನ್ನು ಹಾಕಿದ ಸುಗ್ರೀವ ಮಲಯ ಪರ್ವತದಂತೆ ಕಂಡ. ಸುಗ್ರೀವನಾರೆಂದು ರಾಮನಿಗೆ

ಗುರುತು ಸಿಕ್ಕಿತು. ವಾಲಿಯನ್ನು ಗುರಿಯಾಗಿಸಿಕೊಂಡು ರಾಮನು ಧನುಸ್ಸನ್ನು ಸೆಳೆದು ಒಂದು ಬಾಣವನ್ನು ವಾಲಿಯ ಎದೆಗೆ ಹೊಡೆದನು. ಆಗ ವಾಲಿಯ ಹೃದಯ ಸೀಳಿತು. ಮುಖದಿಂದ ರಕ್ತ ಕಾರುತ್ತಾ, ಲಕ್ಷ್ಮಣನೊಡನೆ ಇದ್ದ ರಾಮನನ್ನು ನೋಡುತ್ತಾ, ನಿಂದಿಸುತ್ತಾ ವಾಲಿಯು ಮೂರ್ಛಿತವಾಗಿ ಭೂಮಿಯ ಮೇಲೆ ಬಿದ್ದನು ಮತ್ತು ಮೃತನಾದನು. ಭೂಮಿಯ ಮೇಲೆ ಬಿದ್ದ ವಾಲಿಯನ್ನು ನೋಡಿದ ತಾರೆಯು ದುಃಖತಪ್ತಳಾಗಿ ಶೋಕಿಸಿದಳು. ಸುಗ್ರೀವನು ವಾಲಿಯ ಅಂತ್ಯ ವಿಧಿಗಳೆಲ್ಲವನ್ನೂ ಮಾಡಿದ. ಕಿಷ್ಕಿಂಧೆಗೆ ನಡೆದ. ಚಂದ್ರಮುಖಿ ತಾರೆಯನ್ನು ಪರಿಗ್ರಹಿಸಿದ.

**'ನ ವಿಶೇಷ ಸ್ತಯೋರ್ಯುದ್ಧೇ ಯದಾ ಕಶ್ಚಪ ದೃಶ್ಯತೇ ।**
**ಸುಗ್ರೀವಸ್ಯ ತದಾ ಮಾಲಾಂ ಹನುಮಾನ್ ಕಂಠ ಆಸಜತ್ ।**
**ಕೃತಚಿಹ್ನಂತು ಸುಗ್ರೀವಂ ರಾಮೋ ದೃಷ್ಟ್ವಾ ಮಹಾಧನುಃ ।**
**ವಿಚಕರ್ಷ ಧನುಃಶ್ರೇಷ್ಠಂ ವಾಲಿಮುದ್ದಿಶ್ಯ ಲಕ್ಷ್ಯವತ್ ।**
**ವಿತತ್ರಾಸ ತದಾ ವಾಲೀ ಶರೇಣಾಭಿಹತೋರಸಿ ।**
**ಸಭಿನ್ನಹೃದಯೋ ವಾಲೀ ವಕ್ತ್ರಾತ್ ಶೋಣಿತಮುದ್ವಮನ್ ।**
**ದದರ್ಶಾವಸ್ಥಿತಂ ರಾಮಂ ತತಃ ಸೌಮಿತ್ರಿಣಾ ಸಹ ।**
**ಗರ್ಹಯಿತ್ವಾ ಸ ಕಾಕುತ್ಸ್ಥಂ ಪಪಾತ ಭುವಿ ಮೂರ್ಛಿತಃ ।**
**ತಾರಾ ದದರ್ಶ ತಂ ಭೂಮೌ.........**
**ಹತೇ ವಾಲಿನಿ ಸುಗ್ರೀವಃ ಕಿಷ್ಕಿಂಧಾಂ ಪ್ರತ್ಯಪದ್ಯತ ।**
**ತಾಂ ಚ ತಾರಾಪತಿಮುಖೀಂ ತಾರಾಂ ನಿಪತಿತೇಶ್ವರಾಮ್' ।**

**ಅ ೨೮೦-೩೩ ರಿಂದ ೩೯**

ನಂತರ ಕಿಷ್ಕಿಂದೆಯ ಮಾಲ್ಯವತ್ಪರ್ವತದ ಅಡಿಯಲ್ಲಿ ರಾಮನು ನಾಲ್ಕು ತಿಂಗಳು ಸುಗ್ರೀವನಿಂದ ಸತ್ಕೃತನಾಗಿ ಕಳೆದನು.

ಇತ್ತ ರಾವಣನು ನಂದನೋಪವನ ಸದೃಶವಾದ. ತಪಸ್ವಿಗಳ ಆಶ್ರಮದಂತಿರುವ ಅಶೋಕವನದಲ್ಲಿ ಉಪವಾಸ ತಪಃ ಶೀಲೆಯಾದ ಸದಾ ರಾಮಸ್ಮರಣೆ ತತ್ಪರಳಾದ ತಾಪಸವೇಷಧಾರಿಯಾದ ಸೀತೆಯನ್ನು ಇರಿಸಿದ. ಆಕೆಯ ರಕ್ಷಣೆಗಾಗಿ ರಾಕ್ಷಸಿಯರಿದ್ದರು.

ಪ್ರಾಸ, ಖಡ್ಗ, ಶೂಲ, ಮುದ್ಗರ ಮೊದಲಾದ ಆಯುಧಗಳನ್ನು ಧರಿಸಿದ್ದ ರಾಕ್ಷಸಿಯರಿಗೆ ಎರಡು, ಮೂರು ಕಣ್ಣು, ಹಣೆಯ ಮೇಲೆ ಕಣ್ಣು, ದೀರ್ಘನಾಲಿಗೆಗಳಿದ್ದವು. ಕೆಲವರಿಗೆ ನಾಲಿಗೆಗಳೇ ಇದ್ದಿಲ್ಲ. ಇವರೆಲ್ಲ ಸೀತೆಯನ್ನು ಸುತ್ತುವರೆದು ಹಗಲು ರಾತ್ರಿ ಮಾನಸಿಕ ಹಿಂಸೆ ಕೊಡುತ್ತಿದ್ದರು. ಬೆದರಿಸುತ್ತಿದ್ದರು. ಕ್ರೂರ ಮಾತುಗಳಾಡುತ್ತಿದ್ದರು. ನಮ್ಮ ಸ್ವಾಮಿಯಾದ ರಾವಣನನ್ನು ಅಗೌರವಿಸುವ ಈಕೆಯನ್ನು ತಿನ್ನುವ ಎನ್ನುತ್ತಿದ್ದರು. ಆಗ ಸೀತೆ ನನ್ನನ್ನು ಕೂಡಲೆ ತಿನ್ನಿರಿ ನನಗೆ ಬದುಕುವ ಆಶೆ ಇಲ್ಲ. ರಾಘವನನ್ನು ಬಿಟ್ಟು, ಬೇರಾವ ಪುರುಷರನ್ನು ಬಯಸೆನು.

ನಿರಾಹಾರಳಾಗಿದ್ದೇನೆ. ಇದನ್ನು ತಿಳಿದು ನಿಮಗೆ ತಿಳಿದಂತೆ ಮಾಡಿರಿ ಸೀತೆಯ ಮಾತನ್ನು ಕೇಳುತ್ತಿದ್ದ ರಾಕ್ಷಸಿಯರು ಎಲ್ಲವನ್ನೂ ರಾವಣನಿಗೆ ತಿಳಿಸುತ್ತಿದ್ದರು.

**'ಸೀತಾಂ ನಿವೇಶಯಾಮಾಸ ಭವನೇ ನಂದನೋಪಮೇ ।**
**ಅಶೋಕವನಿಕಾಭ್ಯಾಶೇ........................**
**ಭರ್ತೃಸ್ಮರಣತನ್ವಂಗೀ ತಾಪಸೀ ವೇಷಧಾರಿಣೀ ।**
**ಉಪವಾಸತಪಃಶೀಲಾ ತತ್ರಾಸ ಪೃಥುಲೇಕ್ಷಣಾ' ॥**
**'ಖಾದಾಮ ಪಾಟಯಾಮೈನಾಂ ತಿಲಶಃ ಪ್ರವಿಭಜ್ಯತಾಮ್ ।**
**ಯೇಯಂ ಭರ್ತಾರಮಸ್ಮಾಕಮವಮನ್ಯೇಹ ಜೀವತಿ' ॥**
**'ಆರ್ಯಾಃ ಖಾದತ ಮಾಂ ಶೀಘ್ರಂ ನ ಮೇ ಲೋಭೋಽಸ್ತಿ ಜೀವಿತೇ' ।**
**ನ ತ್ವಮನ್ಯಮಭಿಗಚ್ಛೇಯಂ ಪುಮಾಂಸಂ ರಾಘವಾದೃತೇ ।**
**ಇತಿ ಜಾನೀತ ಸತ್ಯಂ ಮೇ ಕ್ರಿಯತಾಂ ಯದನಂತರಂ ॥ ೨೮೦/೪೨-೫೨**

ಹೀಗೆ ಸೀತೆಗೆ ತೊಂದರೆ ಕೊಟ್ಟು ಆ ರಾಕ್ಷಸಿಯರು ದೂರ ಹೋದ ಮೇಲೆ **ತ್ರಿಜಟೆ** ಎಂಬ ರಾಕ್ಷಸಿಯು ಸೀತೆಯ ಬಳಿ ಬಂದು ಸಮಾಧಾನ ಮಾಡಿದಳು. ಆಕೆ ಧರ್ಮಿಷ್ಠಳೂ, ಒಳ್ಳೆಯ ಮಾತಾಡುವವಳೂ ಆಗಿದ್ದಳು. ಸೀತೆ! ನನ್ನ ಕೆಲ ಮಾತನ್ನು ಕೇಳು. ವಿಶ್ವಾಸ ಮಾಡು. ನೀನು ಭಯವನ್ನು ಬಿಡು. ರಾಮನ ಹಿತವನ್ನೇ ಬಯಸುವ ಅವಿಂಧ್ಯನೆಂಬ ವೃದ್ಧ ರಾಕ್ಷಸನು ನನಗೆ ಹೀಗೆ ಹೇಳಿದ. ನಿನ್ನ ಸಲುವಾಗಿ ಹೇಳುವೆ.

ಸೀತೆ! ನಿನ್ನ ಪತಿ ಕ್ಷೇಮದಿಂದ ಇದ್ದಾನೆ. ವಾನರರಾಜನಾದ ಸುಗ್ರೀವನೊಡನೆ ಸ್ನೇಹ ಮಾಡಿಕೊಂಡಿದ್ದಾನೆ. ಲೋಕ ನಿಂದಿತನಾದ ರಾವಣನಿಂದ ಭಯ ಪಡಬೇಡ. ಅವನಿಗೆ ನಲಕೂಬರರ ಶಾಪದಿಂದ ನೀನು ರಕ್ಷಿತಳು. ಕಾರಣ ಹೆದರದಿರು. ಜಿತೇಂದ್ರಿಯನಲ್ಲ ರಾವಣ. ಅವನು ವಶಳಾಗದ ಸ್ತ್ರೀಯನ್ನು ಮುಟ್ಟಲಾರ. ರಾಮನು ಲಕ್ಷ್ಮಣ ಸುಗ್ರೀವರೊಡಗೂಡಿ ಇಷ್ಟರಲ್ಲಿಯೇ ಬಂದು ನಿನ್ನನ್ನು ಈ ಬಂಧನದಿಂದ ಬಿಡುಗಡೆ ಮಾಡುತ್ತಾನೆ. ನನಗೆ ಹಾಗೆ ಕನಸು ಬಿದ್ದಿದೆ. ಮರಣ ಸೂಚಕ ಚಿಹ್ನೆಗಳನ್ನು ನಾನು ಕನಸಿನಲ್ಲಿ ನೋಡಿದ್ದೇನೆ. ರಾವಣನು ತೈಲಾಭಿಷಿಕ್ತನಾಗಿ ಕೆಸರಿನಲ್ಲಿ ಮುಳುಗಿರುವುದನ್ನು ಕಂಡೆ; ಕತ್ತೆಯ ರಥದಲ್ಲಿ ಕುಳಿತಿರುವುದನ್ನು ನೋಡಿದೆ. ಕುಂಭಕರ್ಣಾದಿಗಳು ತಲೆ ಬೋಳಿಸಿಕೊಂಡು ನರ್ತನ ಮಾಡುವುದನ್ನೂ ನೋಡಿದ್ದೇನೆ ಇವರೆಲ್ಲಾ ದಕ್ಷಿಣ ದಿಕ್ಕಿಗೆ ಹೋಗುವುದನ್ನು ನೋಡಿದೆ. ಆದರೆ ವಿಭೀಷಣ ಮಾತ್ರ ಕಿರೀಟಧಾರಣೆ ಮಾಡಿಕೊಂಡು ಇದ್ದನು. ರಾಮನ ಅಸ್ತ್ರಗಳಿಂದ ಈ ಭೂಮಿಯೆಲ್ಲ ತುಂಬಿ ಹೋಗುತ್ತದೆ. ಲಕ್ಷ್ಮಣನು ಎಲ್ಲ ದಿಕ್ಕುಗಳನ್ನು ಸುಡುವವನಂತೆ ಕಂಡನು. ಸೀತೆ ಬಲು ಬೇಗನೇ ನಿನಗೆ ಮಂಗಳ, ಸಂತೋಷ ಕಾದಿದೆ. ರಾಮನೊಡನೆ ಕೂಡಿ ನೀನು ಸುಖದಿಂದಿರುವೆ. ಇವೇ ಮೊದಲಾದ ಮಾತುಗಳಿಂದ ತ್ರಿಜಟೆಯು ಸೀತೆಯನ್ನು ಸಮಾಧಾನ ಮಾಡಿದಳು.

ಮತ್ತೆ ಹಿಂದೆ ಬಂದ ರಾಕ್ಷಸಿಯರು, ಪಿಶಾಚಿಯರು ಅಶೋಕವನಕ್ಕೆ ಬಂದರು. ಆದರೆ ಸೀತೆ ಮಾತ್ರ ತ್ರಿಜಟೆಯೊಂದಿಗೆ ನಿರ್ವಿಕಾರಳಾಗಿ ಕುಳಿತಿದ್ದಳು.

'ಗತಾಸು ತಾಸು ಸರ್ವಾಸು ತ್ರಿಜಟಾ ನಾಮ ರಾಕ್ಷಸೀ ।
ಸಾಂತ್ವಯಾಮಾಸ ವೈದೇಹೀಂ ಧರ್ಮಜ್ಞಾ ಪ್ರಿಯವಾದಿನೀ ।
ಸೀತೇ ವಕ್ಷ್ಯಾಮಿ ತೇ ಕಿಂಚಿದ್ ವಿಶ್ವಾಸಂ ಕುರು ಮೇ ಸಖಿ ।
ಭಯಂ ತ್ವಂ ತ್ಯಜ ವಾಮೋರು ಶೃಣು ಚೇದಂ ವಚೋ ಮಮ ।
ಅವಿಂಧ್ಯೋ ನಾಮ ಮೇಧಾವೀ ವೃದ್ಧೋ ರಾಕ್ಷಸಪುಂಗವಃ ।
ಸ ರಾಮಸ್ಯ ಹಿತಾನ್ವೇಷೀ ತ್ವದರ್ಥೇ ಹಿ ಸ ಮಾಮವದತ್ ।
ಭರ್ತಾ ತೇ ಕುಶಲೀ ರಾಮೋ ಲಕ್ಷ್ಮಣಾನುಗತೋ ಬಲೀ ।
ಸಖ್ಯಂ ವಾನರರಾಜೇನ.................... ।
ಕೃತವಾನ್ ರಾಘವಃ ಶ್ರೀಮಾನ್ ತ್ವದರ್ಥೇ ಚ ಸಮುದ್ಯತಃ ।
ಮಾ ಚ ತೇಽಸ್ತು ಭಯಂ ಭೀರು ನಲಕೂಬರಶಾಪೇನ ರಕ್ಷಿತಾ ಹ್ಯಸಿ ನಂದಿನಿ ।
ಸೌಮಿತ್ರಿ ಸಹಿತೋ ಧೀಮಾನ್‌ತ್ವಾಂ ಚೇತೋ ಮೋಕ್ಷಯಿಷ್ಯತಿ ।
ಸ್ವಪ್ನಾ ಹಿ ಸುಮಹಾಘೋರಾ ದೃಷ್ಟಾ ಮೇಽನಿಷ್ಟದರ್ಶನಾಃ ।
ತೈಲಾಭಿಷಿಕ್ತೋ ವಿಕಚೋ ಮಜ್ಜನ್ ಪಂಕೇ ದಶಾನನಃ ।
ಕುಂಭಕರ್ಣಾದಯಶ್ಚೇಮೇ ನಗ್ನಾ...... ।
ಗಚ್ಛಂತಿ ದಕ್ಷಿಣಾಮಾಶಾಂ...........।
ರಾಮಸ್ಯಾಸ್ತ್ರೇಣ ಪೃಥಿವೀ ಪರಿಕ್ಷಿಪ್ತಾ ಸಸಾಗರಾ
ಹರ್ಷಮೇಷ್ಯಸಿ ವೈದೇಹಿ ಕ್ಷಿಪ್ರಂ ಭರ್ತ್ರಾ ಸಮನ್ವಿತಾ ।

ಅಧ್ಯಾಯ ೨೮೦ ೫೪ರಿಂದ ೭೨

## ರಾವಣ ಸೀತಾಸಂವಾದ

ನಂತರ ಪತಿವಿರಹದಿಂದ ಶೋಕಾರ್ತಳಾದ, ದೀನಳಾದ, ಮಲಿನ ವಸ್ತ್ರಧರಿಸಿದ, ರೋದಿಸುತ್ತಿದ್ದ, ಪತಿವ್ರತೆಯಾದ, ರಾಕ್ಷಸ ಸ್ತ್ರೀಯರಿಂದ ಸುತ್ತುವರಿಯಲ್ಪಟ್ಟ, ಶಿಲೆಯಲ್ಲಿ ಕುಳಿತಿರುವ ಸೀತೆಯನ್ನು ಕಾಮಬಾಣದಿಂದ ಪೀಡಿತನಾದ ರಾವಣನು ನೋಡಿ ಸಮೀಪಿಸಿದನು. ದಿವ್ಯ ವಸ್ತ್ರಧಾರಿಯಾಗಿ, ವಿಚಿತ್ರ ಹೂವಿನ ಮಾಲೆ ಧರಿಸಿಕೊಂಡು ವಸಂತ ಋತುವಿನಂತೆ ಕಂಗೊಳಿಸುತ್ತ ಮನ್ಮಥಬಾಣ ಪೀಡಿತನಾಗಿ ಬಂದನು. ತನ್ನನ್ನು ಅಂದವಾಗಿ ಸಿಂಗರಿಸಿಕೊಂಡು ಬಂದಿದ್ದರೂ ಆಹ್ಲಾದಕರನಾಗಿರದೆ ಭಯಂಕರನಾಗಿದ್ದನು. ಅಶೋಕವನವನ್ನು ಪ್ರವೇಶಿಸಿದನು. ಘೋರವಾದ ಸ್ಮಶಾನದಲ್ಲಿನ ಚೆನ್ನಾಗಿ ಬೆಳೆದ ಚೈತ್ಯದ್ರುಮದಂತೆ ಅವನ ಸೌಂದರ್ಯವಿದ್ದಿತು. ರೋಹಿಣೀ ನಕ್ಷತ್ರದ ಬಳಿಗೆ ಬಂದ ಶನಿಗ್ರಹದಂತೆ ನಡುಮಧ್ಯಳಾದ ಸೀತೆ ಬಳಿ ಭಯಂಕರನಾದ ರಾವಣನು ಬಂದನು. ಹಾಗೂ ಈ ರೀತಿಯಾಗಿ ಸೀತೆಯನ್ನು ಕುರಿತು ಮಾತನಾಡಿದನು.

"ಸೀತೆ ಸಾಕಿನ್ನು ರಾಮಸೇವೆ, ನನ್ನ ಮೇಲೆ ದಯೆತೋರು ಪ್ರಸನ್ನಳಾಗು. ನೀನು ಅನರ್ಘ್ಯ ವಸ್ತ್ರಾಭರಣಗಳಿಂದ ನಿನ್ನನ್ನು ಸಿಂಗರಿಸಿಕೊಂಡು ನನ್ನನ್ನು ಸೇವಿಸು. ನನ್ನ ಬಳಿ ಇರುವ ಎಲ್ಲ ಸ್ತ್ರೀಯರಿಗೂ ನೀನೇ ಪಟ್ಟದ ಮಹಿಷಿಯಾಗುವೆ. ನನ್ನ ಹತ್ತಿರ ದೇವಕನ್ಯೆಯರು, ದೈತ್ಯ ಕನ್ಯೆಯರೂ ಇದ್ದಾರೆ. ಅವರೆಲ್ಲ ನಿನ್ನನ್ನು ಉಪಚರಿಸುತ್ತಾರೆ. ಅಲ್ಲದೆ ಹದಿನಾಲ್ಕು ಕೋಟಿ ಪಿಶಾಚಿಗಳು, ಇಪ್ಪತ್ತೆಂಟು ಕೋಟಿ ರಾಕ್ಷಸರೂ, ನಲವತ್ತೆರಡು ಕೋಟಿ ಯಕ್ಷರೂ ನನ್ನ ಆಜ್ಞೆಯನ್ನು ಶಿರಸಾವಹಿಸಿರುವರು. ಕೆಲವು ಜನ ಮಾತ್ರ ನನ್ನ ಅಣ್ಣ ಕುಬೇರನನ್ನು ಸೇವಿಸುತ್ತಿದ್ದಾರೆ. ನಾನು ವಿಶ್ರವಸ್ ಋಷಿಗಳ ಮಗನಾಗಿ ಐದನೇ ಲೋಕಪಾಲನಂತಿದ್ದೇನೆ."

ಇಂದ್ರನ ಲೋಕದ ಎಲ್ಲ ಉತ್ಕೃಷ್ಟ ಭಕ್ಷ್ಯಾದಿಗಳು ನಮ್ಮ ಅರಮನೆಯಲ್ಲಿವೆ. ನಿನ್ನ ಇಲ್ಲಿಯವರೆಗಿನ ದುಃಖ ನೀನು ಮನಸ್ಸು ಮಾಡಿದರೆ ಕ್ಷಣಮಾತ್ರದಲ್ಲಿ ದೂರ ಸರಿಯುತ್ತದೆ. ಮಂಡೋದರಿಯಂತೆ ನೀನೂ ಪಟ್ಟ ಮಹಿಷಿಯಾಗುವೆ.

**'ತತಸ್ತಾಂ ಭರ್ತೃಶೋಕಾರ್ತಾಂ ದೀನಾಂ ಮಲಿನವಾಸಸಮ್ ।**
**ರಾವಣೋ ಕಾಮಬಾಣಾರ್ತೋ ದದರ್ಶೋಪಸಸರ್ಪ ಚ ।**
**ಅಜಿತೋಽಶೋಕವನಿಕಾಂ ಯಯೌ ಕಂದರ್ಪಪೀಡಿತಃ ।**
**ದಿವ್ಯಾಂಬರಧರಃ ಶ್ರೀಮಾನ್ ವಸಂತ ಇವ ಮೂರ್ತಿಮಾನ್ ।**
**ಶ್ಮಶಾನಚೈತ್ಯದ್ರುಮವದ್ ಭೂಷಿತೋಽಪಿ ಭಯಂಕರಃ ।**
**ದದೃಶೇ ರೋಹಿಣೀಮೇತ್ಯ ಶನೈಶ್ಚರ ಇವ ಗ್ರಹಃ ।**

**ಸೀತೇ ಪರ್ಯಾಪ್ತಮೇತಾವತ್ ಕೃತೋ ಭರ್ತುರನುಗ್ರಹಃ ।**
**ಪ್ರಸಾದಂ ಕುರು ತನ್ವಂಗಿ ಕ್ರಿಯತಾಂ ಪರಿಕರ್ಮ ತೇ ।**
**ಪುತ್ರೋಽಹಮತಿ ವಿಪ್ರರ್ಷೇಃ ಸಾಕ್ಷಾತ್ ವಿಶ್ರವಸೋ ಸುತಃ ।**
**ಪಂಚಮೋ ಲೋಕಪಾಲಾನಾಮಿತಿ ಮೇ ಪ್ರಥಿತಂ ಯಶಃ ।**
**ಭಾರ್ಯಾ ಮೇ ಭವ ಸುಶ್ರೋಣಿ ಯಥಾ ಮಂದೋದರೀ ತಥಾ' ॥**
**– ವ.ಪ. ಅ–೨೮೧– ೧೦ರಿಂದ೧೬**

ಇದನ್ನು ಕೇಳಿದ ಪತಿದೇವತೆಯಾದ ಸೀತೆ ಹಿಂದೆ ತಿರುಗಿ ತನ್ನ ಮುಂದೆ ತೃಣವೊಂದನ್ನಿಟ್ಟುಕೊಂಡು (ರಾವಣನನ್ನು ತೃಣದಂತೆ ಭಾವಿಸಿ) ಹೀಗೆ ನುಡಿದಳು.

"ನನ್ನ ಪಾಲಿನ ಭಾಗ್ಯದೇವತೆ ರಾಮ. ಅಂತಹ ನಾನು ನಿನ್ನ ಮಾತುಗಳನ್ನು ಕೇಳುತ್ತಾ ವಿಷಾದಿಸುತ್ತೇನೆ. ನಾನು ನಿನ್ನಿಂದ ಅಯೋಗ್ಯ ಮಾತುಗಳನ್ನು ಕೇಳುವಂತಾಗಿದೆ. ನಿನ್ನ ಮನಸ್ಸನ್ನು ನನ್ನಿಂದ ದೂರುಮಾಡಿಕೊ ನಿನಗೆ ಮಂಗಳವಾಗಲಿ. ನಾನು ಪರಸ್ತ್ರೀ. ಖಂಡಿತ ನಿನಗೆ ಲಭ್ಯಳಲ್ಲ. ಒಲ್ಲದವಳನ್ನು ಬಲಾತ್ಕರಿಸುವುದರಿಂದ ನಿನಗೆ ಯಾವ ಸಂತೋಷ ಆದೀತು? ವಿಶ್ರವಸ್ ಋಷಿಗಳು ಬ್ರಹ್ಮಮಾನಸ ಪುತ್ರರು. ಅವರ ಮಗನಾಗಿ ಇಂತಹ ನಿನ್ನ ಬಯಕೆ ಯುಕ್ತವಾಗದು. ನಿನಗೆ ನಾಚಿಕೆಯಾಗದೇ?"

ರಾವಣನು ಈ ನಿಷ್ಠುರ ಮಾತುಗಳನ್ನು ಕೇಳಿಯೂ ಮತ್ತೆ, ಸೀತೆ! ನನ್ನ ಅಂಗಗಳನ್ನು ಕಾಮನು ಸುಟ್ಟು ಹಾಕಲಿ. ನಿನ್ನನ್ನು ಬಲಾತ್ಕಾರ ಪಡಿಸೆನು. ನಮಗೆ ಆಹಾರದಂತಿರುವ ಮನುಷ್ಯ ಮಾತ್ರನಾದ ರಾಮನನ್ನು ನೀನು ಬಯಸುತ್ತಿರುವೆಯಲ್ಲಾ! ನಿನ್ನ ಮೂರ್ಖತನಕ್ಕೆ ಆಶ್ಚರ್ಯವಾಗಿದೆ, ಎನ್ನುತ್ತಾ ತನ್ನ ಅರಮನೆಗೆ ನಡೆದನು. ಇತ್ತ ಸೀತೆಯು ರಾಕ್ಷಸಿಯರಿಂದ ಹಾಗೂ ತ್ರಿಜಟೆಯಿಂದ ಸೇವಿತಳಾಗಿ ಅಲ್ಲಿಯೇ ಇದ್ದಳು.

**'ಇತ್ಯುಕ್ತಾ ತೇನ ವೈದೇಹೀ ಪರಿವೃತ್ಯ ಶುಭಾನನಾ ।**
**ತೃಣಮಂತರತಃ ಕೃತ್ವಾ ತಮುವಾಚ ನಿಶಾಚರಮ್ ।**
**ವಿಷಾದಯುಕ್ತಮೇತತ್ತೇ ಮಯಾ ಶ್ರುತಮಭಾಗ್ಯಯಾ ।**
**ತದ್‌ಭದ್ರಸುಖ ಭದ್ರಂ ತೇ ಮಾನಸಂ ವಿನಿವರ್ತ್ಯತಾಮ್ ।**
**ಧನೇಶ್ವರಂ ವ್ಯಪದಿಶನ್ ಕಥಂತ್ವಿಹ ನ ಲಜ್ಜಸೇ ।**
**ಶ್ರುತ್ವಾ ತದ್ರಾವಣೋ ವಾಕ್ಯಂ ಸೀತಯೋಕ್ತಂ ಸುನಿಷ್ಠುರಮ್ ।**
**ಕಾಮಮಂಗಾನಿ ಮೇ ಸೀತೇ ದುನೋತು ಮಕರಧ್ವಜಃ ।**
**ನ ತ್ವಾಮಕಾಮಾಂ ಸುಶ್ರೋಣೀಂ ಸಮೇಷ್ಯೇ ಚಾರು ಹಾಸಿನೀಮ್ ।**
**ಆಹಾರಭೂತಮಸ್ಮಾಕಂ ರಾಮಮೇವಾನುರುಧ್ಯಸೇ' ॥**

**ಅ ೨೮೧– ೧೭ ರಿಂದ ೩೧**

ಧರ್ಮರಾಜ ಕೇಳು! ಇತ್ತ ರಾಮನು ಚಾತುರ್ಮಾಸ್ಯ ಮುಗಿದರೂ (ಮಳೆಗಾಲ) ಸುಗ್ರೀವನು ನಿಶ್ಚಿಂತನಾಗಿ ತನ್ನಷ್ಟಕ್ಕೆ ತಾನು ವಿಷಯ ಸುಖ ಲೋಲುಪನಾಗಿ ಇರುವುದನ್ನು ನೋಡಿ ಲಕ್ಷ್ಮಣನಿಗೆ ಆದೇಶಿಸಿದ. ಕೃತಘ್ನನಾದ ಸುಗ್ರೀವನ ಬಳಿ ಹೋಗಿ ಅವನ ಚರ್ಯೆ ಗಮನಿಸು. ಅವನ ನಿಜ ಸ್ವಭಾವ ತಿಳಿಯದ ನಾನು ಅವನ ಅಣ್ಣನನ್ನು ಕೊಂದು ಕಪಿರಾಜ್ಯದಲ್ಲಿ ಅಭಿಷೇಕ ಮಾಡಿದೆ. ನಾವು ಮಾಡಿದ ಉಪಕಾರ ಸ್ಮರಣೆಯೇ ಅವನಿಗಿಲ್ಲ. ತನ್ನ ಕರ್ತವ್ಯ ಮರೆತ ಸುಗ್ರೀವನನ್ನು ವಾಲಿಯ ಮಾರ್ಗಕ್ಕೇ ಕಳಿಸಿಬಿಡು. ಒಂದು ವೇಳೆ ಕಾರ್ಯ ಪ್ರವೃತ್ತನಾದರೆ ಅವನೊಡನೆ ಇಲ್ಲಿಗೆ ಬಾ.

ರಾಮಾದೇಶದಂತೆ ಲಕ್ಷ್ಮಣ ಬಿಲ್ಲು ಬಾಣ ಧರಿಸಿಯೇ ಕೋಪದಿಂದ ಸುಗ್ರೀವನ ಬಳಿಗೆ ಬಂದ. ಅವನು ಬಂದೊಡನೆ ಸುಗ್ರೀವ ಎದ್ದು ನಿಂತು ಸತ್ಕಾರ ಮಾಡಿ ಗೌರವಿಸಿ ಹೀಗೆ ನುಡಿದ.

ಲಕ್ಷ್ಮಣ ನಾನು ಕೆಟ್ಟ ಬುದ್ಧಿಯವನೂ ಅಲ್ಲ. ಕೃತಘ್ನನೂ ಅಲ್ಲ. ಸೀತಾನ್ವೇಷಣೆಗೆ ನಾನೀಗಾಗಲೇ ಪ್ರಯತ್ನ ಮಾಡಿದ್ದೇನೆ. ಕಪಿಗಳನ್ನು ಎಲ್ಲ ದಿಕ್ಕುಗಳಿಗೂ ಕಳಿಸಿಯಾಗಿದೆ. ಇನ್ನೈದು ದಿನಗಳಲ್ಲಿ ಸಫಲವಾರ್ತೆ ಬರಲಿದೆ. ಒಂದು ತಿಂಗಳ ಗಡುವು ಕೊಟ್ಟು ವಿವಿಧ ಕಪಿಗಳನ್ನು ವಿವಿಧ ದಿಕ್ಕುಗಳಿಗೆ ಕಳಿಸಿದ್ದೇನೆ. ಇದನ್ನು ಕೇಳಿ ಲಕ್ಷ್ಮಣನು

ಸುಗ್ರೀವನನ್ನು ಅಭಿನಂದಿಸಿ ರಾಮನ ಬಳಿಗೆ ಸುಗ್ರೀವನೊಡನೆ ನಡೆದನು. ಅಂತೆಯೇ ಐದು ದಿನಗಳಲ್ಲಿ ದಕ್ಷಿಣ ಧಿಕ್ಕಿನ ಹೊರತಾಗಿ ಉಳಿದ ದಿಕ್ಕುಗಳಿಗೆ ಹೋದ ಕಪಿಗಳು ವಾಪಸು ಬಂದು ಸೀತೆ ಸಿಗದಿದ್ದುದನ್ನು ನಿವೇದಿಸಿದರು. ಸುಗ್ರೀವನಿಗೆ ರಾಮನಿಗೆ.

ನಂತರ ಎರಡು ತಿಂಗಳ ನಂತರ ದಕ್ಷಿಣ ದಿಕ್ಕಿಗೆ ಹೋದ ಹನುಮಂತ, ಜಾಂಬವಂತ, ಅಂಗದ ಮೊದಲಾದವರ ಗುಂಪು ವಾಪಸು ಬಂದು ಮಧುವನವನ್ನು ಹೊಕ್ಕು ಆನಂದದಿಂದ ಮಧುಪಾನ ಮಾಡಿ ವನವನ್ನು ಕಿತ್ತಾಡಿದರು. ಈ ವಾರ್ತೆಯನ್ನು ವನರಕ್ಷಕರು ಹೇಳಿದರು. ಇದನ್ನು ಕೇಳಿ ದಕ್ಷಿಣ ದಿಕ್ಕಿಗೆ ಹೋದವರು ತಮ್ಮ ಕೆಲಸವನ್ನು ಯಶಸ್ವಿಯಾಗಿ ಮುಗಿಸಿ ಬಂದಿದ್ದಾರೆಂದು ಸುಗ್ರೀವನು ಭಾವಿಸಿದನು. ರಾಮನಿಗೆ ನಿವೇದಿಸಿದನು ಕೂಡಾ. ರಾಮನೂ ಹಾಗೆಯೇ ಊಹಿಸಿದನು.

ಹನುಮಂತ ಅಂಗದಾದಿಗಳು ನಂತರ ರಾಮನೊಡನಿದ್ದ ಸುಗ್ರೀವನ ಬಳಿಗೆ ಬಂದರು. ಅವರೆಲ್ಲ ರಾಮ ಲಕ್ಷ್ಮಣ ಸುಗ್ರೀವರನ್ನು ನಮಿಸಲಾಗಿ ರಾಮನು ಅವರನ್ನು ಕುರಿತು.

'ನಾನು ಪುನಃ ಬದುಕಿರುವಂತೆ ಇರುವ ವಾರ್ತೆ ತಂದಿರುವಿರಷ್ಟೆ! ನಾನು ಬದುಕಿರುವುದು ಮರಣಿಸುವುದು ನಿಮ್ಮ ವಾರ್ತೆಯ ಮೇಲೆ ಅವಲಂಬಿಸಿದೆ. ನಿಮ್ಮ ಕಾರ್ಯ ಪೂರ್ಣ ಸಫಲವಾಯಿತಾ? ನಾನು ಅಯೋಧ್ಯೆಗೆ ಹೋಗಿ ಸೀತೆಯೊಡನೆ ಸಿಂಹಾಸನ ಏರುವೆನಾ? ಸೀತೆಯನ್ನು ಬಿಡುಗಡೆ ಮಾಡಿಸದೆ, ಯುದ್ಧದಲ್ಲಿ ಶತೃಗಳನ್ನು ಸಂಹರಿಸದೆ, ಪತ್ನಿಯನ್ನು ಕಳೆದುಕೊಂಡ ನಾನು ಜೀವಿಸಲು ಇಚ್ಛಿಸುವುದಿಲ್ಲ.

ಈ ಮಾತುಗಳನ್ನು ಕೇಳಿದ ಆಂಜನೇಯನು 'ನಿನಗೆ ಪ್ರಿಯ ಸುದ್ದಿ ಹೇಳುತ್ತೇನೆ. ಜಾನಕಿಯನ್ನು ನಾನು ನೋಡಿದೆ ಎಂದು ಸಂಕ್ಷಿಪ್ತವಾಗಿ ಹೇಳಿದನು. ಮುಂದೆ ಸುಗ್ರೀವನ ಆದೇಶದ ಮೇರೆಗೆ ದಕ್ಷಿಣ ದಿಕ್ಕಿಗೆ ಹೋಗಿ, ದಾರಿಯಲ್ಲಿ ಒಂದು ದೊಡ್ಡ ಗುಹೆಯನ್ನು ಪ್ರವೇಶಿಸಿದೆವು. ತುಂಬಾ ಕಡಿದಾದ ದಾರಿಯನ್ನು ಬಳಸಿ ಮುಂದೆ ಸುರಂಗ ಮಾರ್ಗದಲ್ಲಿ ಅರಮನೆಯನ್ನು ನೋಡಿದೆವು. ಅದು **ಮಯ**ನ ಅರಮನೆ. ಅಲ್ಲಿ **ಪ್ರಭಾವತಿ**ಯೆಂಬ ತಪಸ್ವಿ ನಮಗೆಲ್ಲಾ ಪಾನೀಯಗಳನ್ನು ಕೊಟ್ಟಳು. ಆಗ ನಮಗಾದ ಪ್ರಯಾಣದ ಪ್ರಯಾಸ ಪರಿಹಾರವಾಯಿತು. ನಂತರ ನಾವು ಆಕೆ ಹೇಳಿದ ದಾರಿಯಲ್ಲಿ ನಡೆದು ಸಮುದ್ರದ ಬಳಿಗೆ ಬಂದೆವು. ಅದನ್ನು ನೋಡಿ ನಮಗೆಲ್ಲ ನಿರಾಶೆ ಉಂಟಾಯಿತು. ಸಮುದ್ರ ದಾಟುವಿಕೆ ಅಸಾಧ್ಯವೆಂದು ಭಾವಿಸಿ ಆಮರಣಾಂತ ಉಪವಾಸಕ್ಕೆ ಸಂಕಲ್ಪಿಸಿದೆವು. ನಾವೂ ಮಾತನಾಡುತ್ತಾ ಸೀತಾಪಹರಣ ವಿಷಯ ಪ್ರಸ್ತಾಪಿಸಿದಾಗ ಜಟಾಯುವನ್ನು ಪ್ರಶಂಶಿಸುತ್ತಿದ್ದೆವು. ಅದನ್ನು ಕೇಳಿದ ಗರುಡನಂತೆ ಇದ್ದ ಮಹಾಪಕ್ಷಿ ಸಂಪಾತಿಯನ್ನು ನೋಡಿದೆವು. ಅದು ನಮ್ಮನ್ನು ತಿನ್ನಲೇ ಬಂದುದು ಜಟಾಯುವಿನ ಗುಣಗಾನ ಕೇಳಿ ಕುತೂಹಲದಿಂದ ನೀವು ಯಾರು? ಎಂದು ಕೇಳಿತು. ನಮ್ಮ ಪರಿಚಯ ಹೇಳಿಯಾದ ಮೇಲೆ ಆ ಸಂಪಾತಿಯು ತನ್ನ ಕಥೆ ಹೇಳಿತು. ಸೀತೆಯು ಲಂಕೆಯಲ್ಲಿರುವುದನ್ನು ನೋಡುತ್ತಿರುವುದಾಗಿ ತಿಳಿಸಿತು.

ನಂತರ ನಾವೆಲ್ಲ ಉಪವಾಸ ವಿಚಾರ ಬಿಟ್ಟು ಲಂಕೆಗೆ ಹೋಗುವ ವಿಷಯ ಚರ್ಚಿಸಿದಾಗ ಯಾವ ಕಪಿಗಳೂ ಮುಂದೆ ಬರದಿದ್ದಾಗ ನಾನು ಸಾಗರವನ್ನು ವಾಯುದೇವರ ಅನುಗ್ರಹದಿಂದ ದಾಟಿದೆ. ದಾರಿಯಲ್ಲಿ ಬಂದ ರಾಕ್ಷಸಿಯನ್ನು ಸಂಹರಿಸಿದೆ. ಲಂಕೆ ಪ್ರವೇಶಿಸಿ ಎಲ್ಲೆಡೆ ಹೋದರೂ ಸೀತೆ ಸಿಗದಿದ್ದಾಗ ಲಂಕಾ ನಗರದ ಒಳಗಡೆ ಇರುವ ಅಶೋಕ ವನದಲ್ಲಿ ಸೀತೆಯನ್ನು ನೋಡಿದೆ. ಆಕೆ ಪತಿವ್ರತೆಯಂತಿದ್ದಳು. ಶರೀರವೆಲ್ಲ ಧೂಳಿನಿಂದ ಕೂಡಿತ್ತು. ದೀನೆಯಾಗಿದ್ದಳು. ಮೊದ ಮೊದಲು ನನ್ನನ್ನೂ ಸಂಶಯದಿಂದ ಕಂಡರೂ ನಂತರ ನಾನು 'ರಾಮನ ದೂತ ವಾಯುಪುತ್ರನಾದ ಆಂಜನೇಯ ವಾನರ ನಿನ್ನ ದರ್ಶನಕ್ಕಾಗಿ ಆಕಾಶ ಮಾರ್ಗದಿಂದ ಬಂದಿದ್ದೇನೆ. ರಾಮನು ಕುಶಲಿ. ಲಕ್ಷ್ಮಣನೂ ಕ್ಷೇಮ. ಇವರ ಆಶ್ರಯ ಪಡೆದ ಸುಗ್ರೀವನು ನಿನ್ನ ಕ್ಷೇಮ ವಿಚಾರಿಸಿದ್ದಾನೆ. ವಾನರ ಸೇನೆಯೊಡನೆ ರಾಮನು ಅತಿ ಶೀಘ್ರದಲ್ಲಿ ಇಲ್ಲಿಗೆ ಬರುವನು. ನಿನ್ನನ್ನು ಕರೆದುಕೊಂಡು ಹೋಗುವನು. ನಾನು ರಾಕ್ಷಸನಲ್ಲ. ನನ್ನ ಮೇಲೆ ವಿಶ್ವಾಸ ಮಾಡು ಎಂದಾಗ ಆಕೆ ನಂಬಿದಳು. ನಿನ್ನ ಗುರುತಿನ ಉಂಗುರವನ್ನು ಆಕೆಗೆ ಕೊಟ್ಟೆ. ಸೀತೆಯೂ ತನ್ನಲ್ಲಿದ್ದ ಚೂಡಾಮಣಿಯನ್ನು ನಿನಗೆ ಅರ್ಪಿಸಲು ಕೊಟ್ಟಿದ್ದಾಳೆ ರಾಮ! ಆ ಮಣಿಯನ್ನೇ ನಿತ್ಯವೂ ನೋಡಿಕೊಂಡು ಜೀವ ಹಿಡಿದಿದ್ದಾಳೆ. ನಾನು ಸೀತೆಯನ್ನು ನೋಡಿಕೊಂಡು ಬಂದಿರುವುದನ್ನು ದೃಢೀಕರಿಸಲು ಹಿಂದೆ ನಡೆದ ಕಾಕಾಸುರ ಪ್ರಸಂಗ ನೀನು ತೃಣದಿಂದ ಅವನನ್ನು ಸಂಹರಿಸಿದುದನ್ನು ನೆನಪಿಸಿದ್ದಾಳೆ. ಇದೇ ನಾನು ಆಕೆಯನ್ನು ನೋಡಿದುದಕ್ಕೆ ಸಾಕ್ಷಿ.

ನಂತರ ನಾನು ಸೀತೆಯ ಅನುಜ್ಞೆ ಪಡೆದು ರಾಕ್ಷಸರನ್ನು ಸಂಹರಿಸಿ ಅವರಿಗೆ ಸಿಕ್ಕಿ ಬಿದ್ದಂತೆ ನಟಿಸಿ ನಂತರ ಲಂಕೆಯನ್ನು ಸಂಪೂರ್ಣವಾಗಿ ದಹಿಸಿ ಹೊರಟು ಬಂದೆನು ಎಂದು ಹನುಮಂತನು ರಾಮನಿಗೆ ತನ್ನ ದಕ್ಷಿಣ ದಿಗ್ವಾರ್ತೆಯನ್ನು ವಿವರಿಸಲು ರಾಮನು ಸಂತೋಷಗೊಂಡನು.

**ವಿಶೇಷ ಸೂಚನೆ:** ಮಹಾಭಾರತದಲ್ಲಿ ಬಂದಿರುವ ಈ ಅಧ್ಯಾಯದ ವಿಷಯಗಳು ಇತರ ಗ್ರಂಥಗಳಿಗೆ ಹೋಲಿಸಿದಾಗ ವ್ಯತ್ಯಾಸ ನೋಡುತ್ತೇವೆ. ಯದ್ಯಪಿ ಸುಗ್ರೀವನು ರಾಮನಿಂದ ಎಚ್ಚರಿಕೆ ಪಡೆದ ನಂತರವೇ ಸೀತಾನ್ವೇಷಣೆಗೆ ವಾನರರನ್ನು ಕಳಿಸಿದ್ದು. ಆದರೆ ಇಲ್ಲಿ ಮೊದಲೇ ಕಳಿಸಿದ್ದನು ಎಂದಿದೆ. ರಾಮನಿಗೆ ಅದು ಗೊತ್ತಿರಲಿಲ್ಲ ಎಂಬಂತೆ ಇಲ್ಲಿಯ ನಿರೂಪಣೆ ಇದೆ. **ಇದೆಲ್ಲ ಕಾಲವ್ಯತ್ಯಾಸಕ್ಕೆ ಉದಾಹರಣೆಯಾಗಿದೆ.**

**'ಗಚ್ಛ ಲಕ್ಷ್ಮಣ ಜಾನೀಹಿ ಕಿಷ್ಕಿಂಧಾಯಾಂ ಕಪೀಶ್ವರಮ್ ।**
**ಪ್ರಮತ್ತಂ ಗ್ರಾಮ್ಯಧರ್ಮೇಷು ಕೃತಘ್ನಂ ಸ್ವಾರ್ಥಪಂಡಿತಮ್ ॥**
**ಅಸೌ ಮನ್ಯೇ ನ ಜಾನೀತೇ ಸಮಯಪ್ರತಿಪಾಲನಮ್ ।**
**ಯದಿತಾವದನುದ್ಯುಕ್ತಃ ಶೇತೇ ಕಾಮಸುಖಾತ್ಮಕಃ ।**
**ನೇತವ್ಯೋ ವಾಲಿಯಾರ್ಗೇಣ ಸರ್ವಭೂತಗತಿಂ ತ್ವಯಾ ।**
**ಅಥಾಪಿ ಘಟತೇಽಸ್ಮಾಕಮರ್ಥೇ ವಾನರ ಪುಂಗವಃ ।**
**ತಮಾದಾಯೈವ ಕಾಕುತ್ಸ್ಥ ತ್ವರಾವಾನ್ ಭವ ಮಾ ಚಿರಮ್ ।**

ಸುಗ್ರೀವ ಉವಾಚ

ನಾಸ್ಮಿ ಲಕ್ಷ್ಮಣ ದುರ್ಮೇಧಾ ನಾಕೃತಘ್ನೋ ನ ನಿರ್ಘೃಣಃ ।
ದಿಶಃ ಪ್ರಸ್ಥಾಪಿತಾಃ ಸರ್ವೇ ವಿನೀತಾ ಹರಯೋ ಮಯಾ ।
ಸರ್ವೇಷಾಂ ಚ ಕೃತಃ ಕಾಲೋ ಮಾಸೇನಾಗಮನಂ ಪುನಃ ।
ಸಮಾಸಃ ಪಂಚರಾತ್ರೇಣ ಪೂರ್ಣೋ ಭವಿತುಮರ್ಹತಿ ।
ತತಃ ಶ್ರೋಷ್ಯಸಿ ರಾಮೇಣ ಸಹಿತಃ ಸುಮಹತ್ಪ್ರಿಯಮ್ ।
ಇತ್ಯುಕ್ತೋ ಲಕ್ಷ್ಮಣಸ್ತೇನ ವಾನರೇಂದ್ರೇಣ ಧೀಮತಾ ।
ತ್ಯಕ್ತ್ವಾ ರೋಷಮದೀನಾತ್ಮಾ ಸುಗ್ರೀವಂ ಪ್ರತ್ಯಪೂಜಯತ್ ।
ಇತ್ಯೇವಂ ವಾನರೇಂದ್ರಾ ಸ್ತೇ ಸಮಾಜಗ್ಮುಃ ಸಹಸ್ರಶಃ ।
ದಿಶಸ್ತಿಸ್ರೋ ವಿಚಿತ್ಯಾಥ ನ ತು ಯೇ ದಕ್ಷಿಣಾಂ ಗತಾಃ ।
ದ್ವಿಮಾಸೋಪರಮೇ ಕಾಲೇ ವ್ಯತೀತೇ ಪ್ಲವಗಾಸ್ತತಃ ।
ತೇಷಾಮಪನಯಂ ಶ್ರುತ್ವಾ ಮೇನೇ ಸ ಕೃತಕೃತ್ಯತಾಮ್ ।
ಹನುಮತ್ಪ್ರಮುಖಾಸ್ತೇತು ವಾನರಾಃ ಪೂರ್ಣ ಮಾನಸಾಃ ।
ಪ್ರಣೇಮುರ್ವಿಧಿವತ್ ರಾಮಂ ಸುಗ್ರೀವಂ ಲಕ್ಷ್ಮಣಂ ತಥಾ ।
ಇತ್ಯುಕ್ತವಚನಂ ರಾಮಂ ಪ್ರತ್ಯುವಾಚಾನಿಲಾತ್ಮಜಃ ।
ಪ್ರಿಯಮಾಖ್ಯಾಮಿ ತೇ ರಾಮ ದೃಷ್ಟಾ ಸಾ ಜಾನಕೀ ಮಯಾ ॥

ಹನುಮಾನ್ ಉವಾಚ ಸೀತಾಂಪ್ರತಿ

ಪ್ರತ್ಯಯಂ ಕುರು ಮೇ ದೇವಿ ವಾನರೋಽಸ್ಮಿ ನ ರಾಕ್ಷಸಃ ।
ಸೀತೇ ರಾಮಸ್ಯ ದೂತೋಽಹಂ ವಾನರೋ ಮಾರುತಾತ್ಮಜಃ ॥

– ವ.ಪ.ಅ. ೧೮೨– ೫ ರಿಂದ ೬೬

ಹನುಮಂತನು ಹೇಳಿದ ಸೀತಾನ್ವೇಷಣೆಯ ವಾರ್ತೆಯನ್ನು ಕೇಳಿ ರಾಮನು ಅಲ್ಲಿಯೇ ಇರುತ್ತಿರಲು ಸುಗ್ರೀವನ ಆಜ್ಞೆಯ ಮೇರೆಗೆ (ಕಿಷ್ಕಿಂಧೆಗೆ) ವಾನರರು ಬಂದರು. ಅವು ಹೀಗಿವೆ.

### ಕಪಿ ವೀರರು ತಂದ ಇತರೆ ಕಪಿಗಳ ವಿವರಗಳು

೧. ವಾಲಿಯ ಮಾವ ಸುಷೇಣ ೧೦೦೦ ಕೋಟಿ
೨. ಗಜ–ಗವಯರು ೨೦೦ ಕೋಟಿ
೩. ಗವಾಕ್ಷ ೬೦೦೦೦ ಕೋಟಿ
೪. ಗಂಧಮಾದನ ೧೦೦೦೦ ಕೋಟಿ
೫. ಪನಸ ೫೭ ಕೋಟಿ
೬. ದಧಿ ಮುಖ ಮಹಾಸೈನ್ಯ
೭. ಜಾಂಬವಂತ ಒಂದು ಲಕ್ಷ ಕೋಟಿ ಕರಡಿಗಳು (?)

ಅಲ್ಲದೆ ಇನ್ನೂ ಅನೇಕ ಕಪಿಗಳು ತಮ್ಮೊಂದಿಗೆ ರಾಮ ಸೇವೆಗಾಗಿ ತಮ್ಮ ಅನುಯಾಯಿಗಳೊಂದಿಗೆ ಕುಣಿಯುತ್ತ ಕುಪ್ಪಳಿಸುತ್ತಾ ಬಂದು ಮಹಾ ಸಮುದ್ರದಂತೆ ಭಯಂಕರವಾಗಿ ಅವರು ತೋರಿದರು. ಕಪಿಗಳಲ್ಲಿ ಕೆಲವು ಪರ್ವತ ಶಿಖರಗಳಂತೆ ಬಹು ಎತ್ತರವಾಗಿಯೂ, ಮತ್ತೆ ಕೆಲವು ಕಾಡುಕೋಣಗಳಂತೆಯೂ, ಕೆಂಪು ಮುಖದವೂ, ಕಪ್ಪು ಮುಖದವೂ ಆಗಿದ್ದು ಭೂಮಿಯಲ್ಲಿ ಧೂಳನ್ನು ಪಸರಿಸುತ್ತಾ ತಮ್ಮ ಸ್ವಭಾವದಂತೆ ತಂಡೋಪತಂಡದಲ್ಲಿ ಬಂದು ಸೇರಿದವು.

ನಂತರ ಸುಗ್ರೀವನೊಡನೆ ಶ್ರೀರಾಮನು ಶುಭ ಮುಹೂರ್ತದಂದು ಲಂಕೆಯೆಡೆಗೆ ಪಯಣಿಸಿದ. ಹನುಮಂತನು ರಾಮ ಸೈನ್ಯದ ಮಂಚೂಣಿಯಲ್ಲಿದ್ದನ್ನು ಸೇನೆಯ ಹಿಂಭಾಗದಲ್ಲಿದ್ದು ಲಕ್ಷ್ಮಣನು ಸೇನೆಯ್ನು ಕಾಯುತ್ತಿದ್ದನು. ರಾಮಲಕ್ಷ್ಮಣರು ಸೂರ್ಯ ಚಂದ್ರರಂತೆ ಇದ್ದರು. ಸೈನ್ಯವು ಮಧ್ಯೆ ಮಧ್ಯೆ ಕಂದ ಮೂಲ ಫಲ-ಮಧುಗಳಿಂದ ನೀರುಗಳಿರುವ ಪ್ರದೇಶಗಳಲ್ಲಿ ವಿಶ್ರಮಿಸುತ್ತಾ ದಕ್ಷಿಣದ ವಿಶಾಲ ಸಮುದ್ರದ ತಟವನ್ನು ಸೇರಿತು. ರಾಮಸೈನ್ಯವೇ ಮತ್ತೊಂದು ಸಾಗರದಂತೆ ಕಾಣುತ್ತಿತ್ತು.

ಆಗ ರಾಮನು ಸುಗ್ರೀವನನ್ನು ಕುರಿತು ಈ ಅಪಾರವಾದ ದಕ್ಷಿಣ ಸಮುದ್ರವನ್ನು ದಾಟುವ ಬಗೆ ಹೇಗೆಂದು ಕೇಳಿದನು. ನಮ್ಮ ಸೈನ್ಯವೂ ಅಪಾರ, ಸಮುದ್ರವೂ ಅಪಾರ. ಆಗ ಅನೇಕ ವಾನರ ಶ್ರೇಷ್ಠರು ಒಂದೇ ಧ್ವನಿಯಲ್ಲಿ 'ನಾವು ಈ ಸಮುದ್ರವನ್ನು ದಾಟಲು ಸಮರ್ಥರಿದ್ದೇವೆ ಎಂದರು. ಆದರೆ ಇದನ್ನು ಎಲ್ಲರೂ ಒಪ್ಪದಿದ್ದಾಗ ಕೆಲವು ಕಪಿಗಳ ದೋಣಿ, ತೆಪ್ಪ, ದೊಡ್ಡ ಹಡಗುಗಳನ್ನು ತಯಾರಿಸಿ ದಾಟೋಣ ಎಂದರು. ರಾಮನು ಇವ್ಯಾವನ್ನು ಒಪ್ಪಲಿಲ್ಲ. ಕಾರಣ ಸಲಹೆಗಳು ಕಾರ್ಯ ಸಾಧ್ಯವಲ್ಲ ಎಂದನು.

ಸಮುದ್ರ ರಾಜನನ್ನೇ ದಾಟಲು ಉಪಾಯ ಕೇಳುತ್ತೇನೆ ಎಂದು ಹೇಳಿದ ರಾಮನು ದರ್ಭಶಯನನಾಗಿ ಸಮುದ್ರಾಭಿಮುಖವಾಗಿ ಮಲಗಿದನು. ಆಗ ಕನಸಿನಲ್ಲಿ ಬಂದ ಸಮುದ್ರ ರಾಜನು ರಾಮನನ್ನು ಬೇಡುತ್ತಾ ನುಡಿದ ರಾಜನ್!! ನಾನು ನಿನಗಾಗಿ ಏನು ಮಾಡಲಿ! ನಾನೂ ನಿನ್ನ ಇಕ್ಷ್ವಾಕುವಂಶದವನೇ. ಆಗ ರಾಮನು 'ನಾನು ಕಪಿಗಳೊಡನೆ ಲಂಕೆಗೆ ಹೋಗಿ ರಾವಣನನ್ನು ಸಂಹರಿಸ ಬೇಕಾಗಿದೆ. ಕಾರಣ ನನಗೆ ದಾರಿಕೊಡು, ಅಂದನು. ಕೊಡದಿದ್ದರೆ ನಾನು ಮಹಾಮಂತ್ರಾಸ್ತ್ರಗಳಿಂದ ನಿನ್ನನ್ನು ಒಣಗಿಸಿ ಬಿಡುತ್ತೇನೆಂದನು.

ಆಗ ಸಮುದ್ರ ರಾಜನು ನಿನ್ನ ಕಾರ್ಯಕ್ಕೆ ನಾನು ವಿಘ್ನ ಮಾಡುವುದಿಲ್ಲ. ಆದರೆ ಒಂದು ಮಾತು. ನಾನೇನಾದರೂ ನಿನಗೆ ದಾರಿ ಕೊಟ್ಟರೆ ಉಳಿದ ರಾಜರೂ ಹೀಗೆಯೇ ನನಗೆ ಆಜ್ಞೆ ಮಾಡುತ್ತಾರೆ. ಕಾರಣ ನೀನು ನಿನ್ನ ಕಪಿಗಳಲ್ಲಿ ಒಬ್ಬನಾದ ನಲನ ಮೂಲಕ ಸೇತುವೆ ಕಟ್ಟಿಸು ನನ್ನ ಮೇಲೆ ತನ್ನ ಕೈಯಿಂದ ಮರ, ಹುಲ್ಲು, ಕಲ್ಲು, ಶಿಲೆ, ಬೆಟ್ಟಗಳನ್ನು ಹಾಕಲಿ ನಾನು ಅವನ್ನು ಹಾಗೆಯೇ ಹಿಡಿಯುತ್ತೇನೆ. ಅದು ಸೇತುವೆಯಾಗುತ್ತದೆ. ನನ್ನ ಮೇಲೆ ಹಾಕಿದ ಪದಾರ್ಥಗಳು ಮುಳುಗುವುದಿಲ್ಲ. ಹೀಗೆ ಹೇಳಿ ಸಮುದ್ರರಾಜನು ಅದೃಶ್ಯನಾದನು.

ರಾಮನು ಅದರಂತೆ ನಲನಿಗೆ ಆದೇಶ ನೀಡಿದ. ನಲ ಒಪ್ಪಿದ. ನಲನಿಂದ ೧೦ ಯೋಜನ ಅಗಲ ೧೦೦ ಯೋಜನ ಉದ್ದದ ಸೇತುವೆಯು ಸಮುದ್ರದ ಮೇಲೆ ನಿರ್ಮಿತವಾಯಿತು. ಅದೇ **ನಲಸೇತು** ಎಂದು ಪ್ರಸಿದ್ಧವಾಗಿದೆ. ಅದರ ಅವಶೇಷವು ಇಂದಿಗೂ ಹಾಗೆಯೇ ಇದೆ.

ಆ ಹೊತ್ತಿಗೆ ರಾವಣನ ಕಿರಿಯ ಸೋದರ **ವಿಭೀಷಣ** ತನ್ನ ನಾಲ್ವರು ಅಮಾತ್ಯರೊಡನೆ ರಾಮನ ಬಳಿಗೆ **ಶರಣು ಬಂದ**. ಆದರೆ ಸುಗ್ರೀವನು ಅವನನ್ನು ರಾವಣನ ಗೂಢಚಾರಿ ಎಂದು ಭಾವಿಸಿದ. ರಾಮನು ವಿಭೀಷಣನ ಸ್ವಭಾವ, ನಡತೆಗಳನ್ನು ಪರೀಕ್ಷಿಸಿ ಅವನನ್ನು ಸ್ವೀಕರಿಸಿದನಲ್ಲದೆ ಅಲ್ಲಿಯೇ ಸಮುದ್ರದ ದಂಡೆಯಲ್ಲಿಯೇ ಲಂಕೆಯ ರಾಜನನ್ನಾಗಿ ಅಭಿಷೇಕ ಮಾಡಿದ. ತನ್ನ ಪರಿವಾರದವನನ್ನಾಗಿ ಮಾಡಿಕೊಂಡ. ಲಕ್ಷ್ಮಣನಿಗೂ ಆತನ ಪರಿಚಯ ಮಾಡಿಕೊಟ್ಟನು. ನಂತರ ವಿಭೀಷಣನ ಸಲಹೆಯಂತೆ ಲಂಕೆಯನ್ನು ಸೇತುವೆಯ ಮೂಲಕ ಒಂದು ತಿಂಗಳಲ್ಲಿ ರಾಮನ ಸೇನೆ ದಾಟಿತು. ಲಂಕೆಯ ಸುತ್ತಲೂ ಇರುವ ಸುಂದರ ಉದ್ಯಾನವನಗಳನ್ನು ಕಪಿಗಳು ರಾಮನ ಆದೇಶದ ಮೇರೆಗೆ ಧ್ವಂಸ ಮಾಡಿದರು. ಈ ಮಧ್ಯೆ ರಾಮನ ಸೈನ್ಯದ ಮಾಹಿತಿಗಾಗಿ ರಾವಣನ ಮಂತ್ರಿಗಳಾದ ಶುಕಸಾರಣರು ವೇಷಾಂತರದಿಂದ ಬಂದು ನೋಡುತ್ತಿರಲು ವಿಭೀಷಣನು ರಾಮನ ಮುಂದೆ ಅವರನ್ನು ಹಿಡಿದು ಕೊಟ್ಟನು. ಆದರೆ ರಾಮನು ಅವರನ್ನು ಶಿಕ್ಷಿಸದೆ ತನ್ನ ಸೈನ್ಯದ ಪರಿಚಯವನ್ನೇ ಮಾಡಿಸಿಕೊಟ್ಟನು.

ನಂತರ ರಾಮನು ಕೊನೆಯ ಪ್ರಯತ್ನವಾಗಿ ಅಂಗದನನ್ನು ತನ್ನ ರಾಯಭಾರಿಯಾಗಿ ರಾವಣನ ಬಳಿಗೆ ಕಳುಹಿಸಿದನು.

ಸ ವಾನರಮಹಾಸೈನ್ಯಃ ಪೂರ್ಣಸಾಗರಸನ್ನಿಭಃ ।
ತಿಥೌ ಪ್ರಶಸ್ತೇ ನಕ್ಷತ್ರೇ ಮುಹೂರ್ತೇ ಚಾಭಿಪೂಜಿತೇ ।
ಪ್ರಯಮೌ ರಾಘವಃ ಶ್ರೀಮಾನ್ ಸುಗ್ರೀವಸಹಿತಸ್ತದಾ ।
ಮುಖಮಾಸೀತ್ತು ಸೈನ್ಯಸ್ಯ ಹನುಮಾನ್ ಮಾರುತಾತ್ಮಜಃ ।
ಜಘನಂ ಪಾಲಯಾಮಾಸ ಸೌಮಿತ್ರಿರಕುತೋಭಯಃ ।
ತತ್ರಾನ್ಯೇ ವ್ಯಾಹರಂತಿ ಸ್ಮ ವಾನರಾ ಬಹುಮಾನಿನಃ ।
ಸಮರ್ಥಾ ಲಂಘನೇ ಸಿಂಧೋರ್ನತು ತತ್ ಕೃತ್ಸ್ನಕಾರಕಮ್ ।
ನೇತಿ ರಾಮಸ್ತು ತಾನ್ ಸರ್ವಾನ್ ಸಾಂತ್ವಯನ್ ಪ್ರತ್ಯಭಾಷತ ।
ಅಹಂತ್ವಿಮಂ ಜಲನಿಧಿಂ ಸಮಾರಪ್ಸ್ಯಾಮ್ಯುಪಾಯತಃ ।
ಪ್ರತಿಶೇಷ್ಯಾಮ್ಯುಪವಸನ್ ದರ್ಶಯಿಷ್ಯತಿ ಮಾಂ ತತಃ ।
ಇತ್ಯುಕ್ತ್ವಾ ಸಹ ಸೌಮಿತ್ರಿರುಪಸ್ಪೃಶ್ಯಾಥ ರಾಘವಃ ।
ಪ್ರತಿಶಿಶ್ಯೇ ಜಲನಿಧಿಂ ವಿಧಿವತ್ ಕುಶಸಂಸ್ತರೇ ।
ಸಾಗರಸ್ತು ತತಃ ಸ್ವಪ್ನೇ ದರ್ಶಯಾಮಾಸ ರಾಘವಮ್ ।
ಬ್ರೂಹಿ ಕಿಂ ತೇ ಕರೋಮ್ಯತ್ರ ಸಾಹಾಯ್ಯಂ ಪುರುಷರ್ಷಭ ।

ಐಕ್ಷ್ವಾಕೋ ಹ್ಯಸ್ಮಿ ತೇ ಜ್ಞಾತಿರಿತಿ ರಾಮಸ್ತಮಬ್ರವೀತ್ ।
ಮಾರ್ಗಮಿಚ್ಛಾಮಿ ಸೈನ್ಯಸ್ಯ ದತ್ತಂ ನದನದೀಪತೇ ।
ಯೇನ ಗತ್ವಾ ದಶಗ್ರೀವಂ ಹನ್ಯಾಂ ಪೌಲಸ್ತ್ಯ ಪಾಂಸನಂ ।
ಯದ್ಯೇವಂ ಯಾಚತೋ ಮಾರ್ಗಂ ನ ಪ್ರದಾಸ್ಯತಿ ಮೇ ಭವಾನ್ ।
ಶರೈಸ್ತ್ವಾಂ ಶೋಷಯಿಷ್ಯಾಮಿ ದಿವ್ಯಾಸ್ತ್ರಪ್ರತಿಮಂತ್ರಿತೈಃ ।
ಯದಿ ದಾಸ್ಯಾಮಿ ತೇ ಮಾರ್ಗಂ.................... ।
ಅನ್ಯೇಽಪ್ಯಾಜ್ಞಾಪಯಿಷ್ಯಂತಿ ಮಾಮೇವಂ ಧನುಷೋ ಬಲಾತ್ ।
ಅಸ್ತಿ ತ್ವತ್ರ ನಲೋ ನಾಮ ವಾನರಃ ಶಿಲ್ಪಿಸಮ್ಮತಃ ।
ತ್ವಷ್ಟುರ್ದೇವಸ್ಯ ತನಯೋ ಬಲವಾನ್ ವಿಶ್ವಕರ್ಮಣಃ ।
ಸ ಯತ್ ಕಾಷ್ಠಂ ತೃಣಂ ವಾಪಿ ಶಿಲಾಂ ವಾ ಕ್ಷೇಪ್ಸ್ಯತೇ ಮಯಿ ।
ಸರ್ವಂ ತದ್ ಧಾರಯಿಷ್ಯಾಮಿ ಸ ತೇ ಸೇತುರ್ಭವಿಷ್ಯತಿ ।
ತೇನೋಪಾಯೇನ ಕಾಕುತ್ಸ್ಥಃ ಸೇತುಬಂಧಮಕಾರಯತ್ ।
ದಶಯೋಜನವಿಸ್ತಾರಮಾಯತಂ ಶತಯೋಜನಮ್ ।
ನಲಸೇತುರಿತಿ ಖ್ಯಾತೋ ಯೋಽದ್ಯಾಪಿ ಪ್ರಥಿತೋ ಭುವಿ । ವ.ಪ.ಅ. ೨೮೩

ಶ್ರೀರಾಮನು ತನ್ನ ಸೈನ್ಯಕ್ಕೆ ಬೇಕಾದ ಅನ್ನೋದಕ, ಕಂದಮೂಲ ಫಲಗಳು ಸಿಗುವ ಕಡೆ ಸೈನ್ಯವನ್ನು ಜಮಾಯಿಸಿ ರಕ್ಷಿಸಿದನು. ರಾವಣನಂತೂ ತನ್ನದೇ ನಗರವನ್ನು ಸುತ್ತಲೂ ವಿವಿಧ ಯುದ್ಧದ ಯಂತ್ರೋಪಕರಣಗಳನ್ನೂ, ನೀರು ತುಂಬಿದ ಕಂದಕಗಳಿಂದಲೂ, ಕಂದಕಗಳಲ್ಲಿ ಅಪಾಯಕಾರಿ ಮೊಸಳೆ ತಿಮಿಂಗಲಗಳಿಂದ ಕೂಡಿದ ಪ್ರಕಾರಗಳಿಂದಲೂ ರಕ್ಷಿಸಿದ್ದನು. ಅಲ್ಲದೆ ಎಲ್ಲ ಮಹಾದ್ವಾರಗಳಲ್ಲಿ ಕಲ್ಲಿನ ರಾಶಿ, ಮರದ ದಿಮ್ಮಿಗಳನ್ನು ಇರಿಸಿದ್ದನು. ಚದುರಂಗ ಸೈನ್ಯದ ಕಾವಲೂ ಇದ್ದಿತು. ಅವರಲ್ಲಿ ಹಲವರು ಮಡಕೆಗಳಲ್ಲಿ ವಿಷಸರ್ಪಗಳನ್ನು ಇಟ್ಟುಕೊಂಡಿದ್ದರು. ನೂರಾರು ಯೋಧರನ್ನು ಏಕ ಕಾಲದಲ್ಲಿ ಕೊಲ್ಲುವ ಶತಘ್ನೀ ಎಂಬ ಯಂತ್ರಗಳಿದ್ದವು.

ಹೀಗೆ ಸಕಲ ರೀತಿಯಲ್ಲಿ ರಕ್ಷಿಸುತ್ತಿದ್ದ ನಗರದ ಅರಮನೆಯನ್ನು ಅಂಗದನು ಪ್ರವೇಶಿಸಿ ತಾನು ರಾಮನ ರಾಯಭಾರಿಯಾಗಿ ಬಂದಿರುವುದನ್ನು ರಾವಣನಿಗೆ ತಿಳಿಸಿದನು. ರಾವಣನಿಗೆ ಸೂಕ್ತವಾಗಿ ಅಭಿನಂದಿಸಿ ರಾಮನ ಸಂದೇಶವನ್ನು ಗಂಭೀರವಾಗಿ ಭಯವಿಲ್ಲದೆ ಹೇಳಿದನು. ಮೇಘಮಾಲೆಗಳಿಂದ ಶೋಭಿಸುವ ಸೂರ್ಯನಂತೆ ಅಂಗದನು ಕಂಗೊಳಿಸಿದನು.

'ಅನ್ಯಾಯದಲ್ಲಿ ಸಕ್ತನಾದ ರಾಜನನ್ನು ಅನುಸರಿಸುವ ಆತನ ಪ್ರಜೆಗಳು, ನಗರಗಳು, ದೇಶಗಳು ನಾಶವಾಗುತ್ತವೆ. ಅಜಿತೇಂದ್ರಿಯ ರಾಜರ ರಾಜ್ಯಗಳು ಕ್ರಮೇಣ ವಿನಾಶ ಹೊಂದುತ್ತವೆ. ಸೀತೆಯನ್ನು ಬಲಾತ್ಕಾರವಾಗಿ ಅಪಹರಿಸಿ ಅಪರಾಧ ಮಾಡಿರುವವನು ನೀನೊಬ್ಬನೆ ಆದರೂ ಅದರ ಫಲವನ್ನು ನಿರಪರಾಧಿಗಳಾದ ನಾಗರಿಕರು ಅನುಭವಿಸಬೇಕಾಗುತ್ತದೆ. ನೀನೀಗಾಗಲೇ ಋಷಿ ಮುನಿಗಳಿಗೆ ವಿನಾಕಾರಣ ಹಿಂಸಿಸಿ

ಕೊಂದಿದ್ದೀ. ದೇವತೆಗಳನ್ನು ಅವಮಾನಿಸಿದ್ದಿ. ಪರಸ್ತ್ರೀಯರನ್ನೂ ಅಪಹರಿಸಿದ್ದಿ. ನಿನ್ನ ಪೌರುಷ ನನ್ನ ಮೇಲೆ ತೋರಿಸು. ಮನುಷ್ಯರನ್ನು ಕೀಳಾಗಿ ಭಾವಿಸದೆ ನನ್ನ ಧನುರ್ವೀರ್ಯವನ್ನು ನೋಡು. ಜಾನಕಿಯನ್ನು ಕೂಡಲೆ ತಂದೊಪ್ಪಿಸು. ಇಲ್ಲದಿದ್ದರೆ ನನ್ನ ಅಸ್ತ್ರಗಳಿಂದ ಭೂಮಿಯನ್ನು ರಾಕ್ಷಸರೇ ಇಲ್ಲದಂತೆ ಮಾಡುವೆ' ಎಂದು ಅಂಗದನು ನುಡಿದನು. ಅಂಗದನ ಮಾತು ರಾವಣನಿಗೆ ಹಿಡಿಸದೆ ಕ್ರುದ್ಧನಾದ.

**ಅಕೃತಾತ್ಮಾನಮಾಸಾದ್ಯ ರಾಜಾನಮನಯೇ ರತಮ್ ।**
**ವಿನಶ್ಯಂತ್ಯನಯಾವಿಷ್ಟಾ ದೇಶಾಶ್ಚ ನಗರಾಣಿ ಚ ।**
**ತ್ವಯೈಕೇನಾಪರಾದ್ಧಂ ಮೇ ಸೀತಾಮಾಹರತಾ ಬಲಾತ್ ।**
**ವಧಾಯಾನಕರಾದ್ಧಾನಾಮನ್ಯೇಷಾಂ ತದ್ ಭವಿಷ್ಯತಿ ।**
**ಮುಚ್ಯತಾಂ ಜಾನಕೀ ಸೀತಾ ನ ಮೇ ಮೋಕ್ಷ್ಯಸಿ ಕರ್ಹಿಚಿತ್ ।**
**ಅರಾಕ್ಷಸಮಿಮಂ ಲೋಕಂ ಕರ್ತಾಸ್ಮಿ ನಿಶಿತೈ: ಶರೈಃ ॥**
**ಶ್ರುತ್ವಾ ನ ಮಮೃಷೇ ರಾಜಾ ರಾವಣಃ ಕ್ರೋಧಮೂರ್ಛಿತಃ ।**
**– ವನಪರ್ವ ಅ –೨೮೪– ೧೧ ರಿಂದ ೧೭**

ರಾವಣನ ಇಂಗಿತದ ಮೇರೆಗೆ ನಾಲ್ವರು ರಾಕ್ಷಸರು ಅಂಗದನನ್ನು ಹಿಡಿದರು ಆದರೆ ಅಂಗದನು ಅವರೆಲ್ಲರೊಂದಿಗೆ ಮೇಲೆ ಹಾರಿ ಅವರನ್ನು ಕೆಳಗೆ ಚೆಲ್ಲಲಾಗಿ ಅವರೆಲ್ಲ ಭೂಮಿಯಲ್ಲಿ ಬಿದ್ದು ಹತರಾದರು. ಅಂಗದನು ಆಕಾಶದಿಂದಲೇ ನೇರವಾಗಿ ರಾಮನಿದ್ದಲ್ಲಿಗೆ ಹಾರಿ ನಡೆದುದೆಲ್ಲವನ್ನು ರಾಮನಿಗೆ ನಿವೇದಿಸಿ ವಿಶ್ರಮಿಸಿದನು. ರಾಮನು ಸಂತೋಷಗೊಂಡನು.

ನಂತರ ರಾಮಾಜ್ಞೆಯ ಮೇರೆಗೆ ವಾನರರು ಲಂಕೆಯ ಕೋಟೆಯನ್ನು ಭೇದಿಸಿದರು. ಲಕ್ಷ್ಮಣನು ವಿಭೀಷಣ ಹಾಗೂ ಜಾಂಬವಂತರ ನೆರವಿನಿಂದ ಲಂಕೆಯ ದಕ್ಷಿಣಕ್ಕೆ ಲಗ್ಗೆಯಿಟ್ಟು ಒಳಗೆ ನುಗ್ಗಿದನು. ವಾನರಸೇನೆಯ ಹಿಂದೆ ಕೋಟ್ಯಾನುಕೋಟಿ ಕರಡಿ ಸೈನ್ಯವೂ ಲಂಕೆಯ ಮೇಲೆ ಧಾಳಿ ನಡೆಸಿತು ಲಂಕೆಯ ಎಲ್ಲ ರಕ್ಷಣಾ ಸಿದ್ಧತೆಗಳನ್ನು ಹೀಗೆ ವಾನರರು ನಾಶ ಮಾಡಹತ್ತಲು ಕಾಯುತ್ತಿದ್ದ ರಾಕ್ಷಸರೆಲ್ಲ ಪಲಾಯನಗೈದರು. ಕೂಡಲೆ ರಾವಣನು ಪರಿಸ್ಥಿತಿಯನ್ನು ತನ್ನ ಹತೋಟಿಗೆ ತೆಗೆದುಕೊಂಡು ಕಾಮರೂಪಿಗಳಾದ ರಾಕ್ಷಸರನ್ನು ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಯುದ್ಧಕ್ಕೆ ಕಳಿಸಿದನು. ಅವರ ಪ್ರತಿದಾಳಿ ವಾನರರಿಗೆ ಎದುರಿಸಲು ಆಗಲಿಲ್ಲ. ಆದರೂ ವಾನರರು ರಾಕ್ಷಸರ ಮೇಲೆ ಸ್ತಂಭಗಳನ್ನು, ತೋರಣಗಳನ್ನು ರಭಸದಿಂದ ಎಸೆಯಲು ರಾಕ್ಷಸರು ಸಂಹಾರ ಹೊಂದಿದರು. ಪರಸ್ಪರರೊಡನೆ ಕೇಶಾಕೇಶಯುದ್ಧ ನಡೆಯಿತು. ರಾಮನು ರಾಕ್ಷಸರ ಮೇಲೆ ಬಾಣಗಳ ಸಮೂಹವನ್ನೇ ಸುರಿಸುತ್ತಾ ಸಾವಿರಾರು ರಾಕ್ಷಸರನ್ನು ಕೊಂದನು. ಲಕ್ಷ್ಮಣನು ಕೋಟೆಯ ಮೇಲಿದ್ದ ರಾಕ್ಷಸರನ್ನು ಸಂಹರಿಸಿದನು.

ನಂತರ ರಾವಣನ ಸೈನ್ಯದ ರಾಕ್ಷಸರು ವೇಷ ಬದಲಾಯಿಸಿಕೊಂಡು ರಾಮನ ಸೈನ್ಯ ಸೇರಿಕೊಂಡರು. ಅವರು ಪರ್ವಣ ಪತನ, ಜಂಭ, ಖರ, ಕ್ರೋಧವಶ,

ಹರಿ, ಪ್ರರುಜ, ಅರುಜ, ಪ್ರಘಸ ಮೊದಲಾದವರು. ಇದನ್ನು ಗ್ರಹಿಸಿದ ವಿಭೀಷಣನು ತನ್ನ ಶಕ್ತಿಯಿಂದ ಅವರ ಶಕ್ತಿಯನ್ನು ನಿಸ್ತೇಜಗೊಳಿಸಿ ಎಲ್ಲರೂ ಕಾಣುವಂತೆ ಮಾಡಿದನು. ಆಗ ವಾನರರೆಲ್ಲ ಅವರೆಲ್ಲರನ್ನು ಕೊಂದರು. ಆಗ ರಾವಣನು ತಾನೇ ಚತುರಂಗ ಸೈನ್ಯದೊಡನೆ ಯುದ್ಧಕ್ಕೆ ಬಂದನು. ರಾವಣನು **'ಔಶನಸ'** ವೆಂಬ ವ್ಯೂಹ ರಚಿಸಿದನು. ಅದಕ್ಕೆ ಪ್ರತಿಯಾಗಿ ರಾಮನು **'ಬಾರ್ಹಸ್ಪತ್ಯ'** ವ್ಯೂಹ ರಚಿಸಿ ಯುದ್ಧ ಮಾಡಲಾರಂಭಿಸಿದನು. ರಾವಣ ರಾಮರೊಡನೆ ನಡೆದ ಯುದ್ಧದ ಜೊತೆಗೆ ಲಕ್ಷ್ಮಣ ಇಂದ್ರಜಿತ್‌ನಿಗೂ, ಸುಗ್ರೀವ ವಿರೂಪಾಕ್ಷ ಮಧ್ಯೆಯೂ, ತಾರ–ನಿಖರ್ವಟ, ನಲ–ತುಂಡ ಹೀಗೆ ಕಪಿಗಳಿಗೂ ರಾಕ್ಷಸರಿಗೂ ಯುದ್ಧ ನಡೆದು ತಮ್ಮ ತಮ್ಮ ಶಕ್ತಿ ಪ್ರದರ್ಶಿಸುತ್ತಿದ್ದರು. ರಾಮ ರಾವಣರ ಯುದ್ಧವು ಘನ ಘೋರವಾಗಿತ್ತು.

**ವಿಭೀಷಣ**ನನ್ನು **ಪ್ರಹಸ್ತ**ನು ರಭಸದಿಂದ ಗದೆಯಿಂದ ಹೊಡೆಯಲು, ವಿಭೀಷಣನು ಶತಘಂಟಾ ಎಂಬ ಶಕ್ತ್ಯಾಯುಧದಿಂದ ಹೊಡೆದು ಅವನ ಕತ್ತನ್ನು ಕತ್ತರಿಸಿ ಕೊಂದನು. ಆಗ ಧೂಮ್ರಾಕ್ಷನೆಂಬ ರಾಕ್ಷಸನು ಕಪಿಗಳ ಮೇಲೆ ದಾಳಿ ಮಾಡಲು ಕಪಿಗಳು ಪಲಾಯನ ಮಾಡಿದರೂ **ಹನುಮಂತನು** ಅವರನ್ನು ಹುರಿದುಂಬಿಸಿ **ಧೂಮ್ರಾಕ್ಷ**ನನ್ನು ಸಂಹರಿಸಿ ಅವನ ಕುದುರೆ, ರಥಗಳನ್ನು ಚೂರು ಚೂರು ಮಾಡಿದನು. ಆಗ ಕಪಿಗಳಿಗೆ ಪುನರ್ಜನ್ಮ ಬಂದುವಾಗಿ ಅಳಿದುಳಿದ ರಾಕ್ಷಸರನ್ನು ಕೊಲ್ಲಲು, ಅವರಲ್ಲೂ ಉಳಿದವರು ರಾವಣನಿಗೆ ಎಲ್ಲವನ್ನೂ ಹೇಳಿದರು.

ಆಗ ರಾವಣನು ಬಹು ಕಷ್ಟಪಟ್ಟು ಮಲಗಿದ ಕುಂಭಕರ್ಣನನ್ನು ಎಬ್ಬಿಸಿ ತಾನು ರಾಮನೆಂಬ ಮಾನವನಿಂದ ಆಕ್ರಮಿಸಲ್ಪಟ್ಟ ವಿಚಾರ ಹೇಳಿ ಯುದ್ಧಕ್ಕೆ ಕಳಿಸಿದನು. ತಾನು ಸೀತಾಪಹರಣ ಮಾಡಿದುದನ್ನು ತನ್ನ ಸೋದರನಿಗೆ ಹೇಳಿದನು ಅವನೊಡನೆ **'ದೂಷಣ'** ನ ಅನುಯಾಯಿಗಳಾದ **'ವಜ್ರವೇಗ'** ಹಾಗೂ **'ಪ್ರಮಾಥಿ'**ಗಳನ್ನೂ ಕಳಿಸಿದನು. ಹೀಗೆ ಕುಂಭಕರ್ಣನು ಕೆಲ ಅನುಯಾಯಿಗಳೊಡನೆ ರಾಮನೊಡನೆ ನೇರವಾಗಿ ಯುದ್ಧ ಮಾಡಲು ಹೊರಟನು. ದಾರಿಯಲ್ಲಿ ಲಕ್ಷ್ಮಣನನ್ನು, ಸಾವಿರಾರು ವಾನರ ಪ್ರಮುಖರನ್ನು ಲೆಕ್ಕಿಸದೆ ಹೋದಾಗ ವಾನರರು ಅವನನ್ನು ಸುತ್ತುಗಟ್ಟಿ ತಮ್ಮ ಅಸಾಧಾರಣ ಉಗುರುಗಳಿಂದ ಪರಚಿದರು, ಹಲ್ಲುಗಳಿಂದ ಕಡಿದರು. ಆಯುಧಗಳಿಂದ ಹೊಡೆದರು. ಆದರೆ ಅದರಿಂದ ಅವನಿಗೆ ಏನೂ ಆಗಲಿಲ್ಲ. ಅವನು ವಾನರರನ್ನು ತಿನ್ನುತ್ತಾ ಹೊರಟನು. ಆಗ ಸುಗ್ರೀವನು ಎದುರಾಗಿ ಸಾಲವೃಕ್ಷವನ್ನು ಕುಂಭಕರ್ಣನಿಗೆ ಎಸೆಯಲಾಗಿ ಅದೇ ನುಚ್ಚು ನೂರಾಯಿತು. ಕುಂಭಕರ್ಣನು ಕಂಪಿಸಲೂ ಇಲ್ಲ. ಅಲ್ಲದೆ ಸುಗ್ರೀವನನ್ನೇ ತನ್ನ ತೋಳುಗಳಿಂದ ಹಿಡಿದುಕೊಂಡನು. ಆಗ **ಲಕ್ಷ್ಮಣನು ಕುಂಭಕರ್ಣನ** ಮುಂದೆ ಬಂದು ಅವನ ಎದೆಗೆ ದಿವ್ಯ ಬಾಣದಿಂದ ಹೊಡೆಯಲು ಅದು ಅವನಿಗೆ ತಾಗಿ ಮತ್ತೆ ಹೊರಬಂದು ಭೂಮಿಯಲ್ಲಿ ನೆಟ್ಟಿತು. ರಾಕ್ಷಸನಿಗೆ ಏನೂ ಆಗಲಿಲ್ಲ. ಬಂಧಿಸಲಾಗದೆ ಸುಗ್ರೀವನನ್ನು ರಾಕ್ಷಸನು ಬಿಟ್ಟನು. ಲಕ್ಷ್ಮಣನ ಮೇಲೆ ಭಾರಿ ಬಂಡೆಯನ್ನು ಎಸೆಯಲು ಹೋದನು. ಲಕ್ಷ್ಮಣನು ಅವನ ತೋಳುಗಳನ್ನು ಕತ್ತರಿಸಲು ಅವನಿಗೆ ನಾಲ್ಕು ತೋಳುಗಳು ಚಿಗಿದವು ಲಕ್ಷ್ಮಣನು

ಅವನ ನಾಲ್ಕು ಕೈಗಳನ್ನು ತುಂಡರಿಸಿದರೂ ಮತ್ತೆ ಪರ್ವತದಂತೆ ಬೆಳೆದವು. ಒಂದು ತಲೆಯ ಬದಲಾಗಿ ನೂರಾರು ತಲೆಗಳು ಹುಟ್ಟಿದವು. **ಆಗ ಅವನನ್ನು ಬ್ರಹ್ಮಾಸ್ತ್ರದಿಂದ** ಸಂಹರಿಸಲು ನಿಶ್ಚಯಿಸಿದ ಲಕ್ಷ್ಮಣನು ಅದನ್ನು ಪ್ರಯೋಗಿಸಲು ಅವನು ನೂರಾರು **ಶಾಖೆಗಳುಳ್ಳ** ವೃಕ್ಷವು ಬೀಳುವಂತೆ **ಕೆಳಗುರುಳಿ ಸತ್ತನು. ಅದನ್ನು ಗಮನಿಸಿದ ರಾಕ್ಷಸರು ಓಡಿ ರಾವಣನಿಗೆ ತಿಳಿಸಿದರು**. ನಂತರ ಲಕ್ಷ್ಮಣನಿಗೂ ವಜ್ರನಿಗೂ–ಪ್ರಮಾಥಿಗೂ ಭಾರಿ ಯುದ್ಧ ನಡೆದ ನಂತರ ಹನುಮಂತನಿಂದ ವಜ್ರವೇಗನೂ, ನೀಲನಿಂದ ಪ್ರಮಾಥಿಯೂ ಹತರಾದರು (ವಿ.ಸೂ.: ಪು. ಉಪಾಖ್ಯಾನದ ಕೊನೆಗೆ ನೋಡಿರಿ).

ಕುಂಭಕರ್ಣನು ಮರಣ ಹೊಂದಿದ ವಾರ್ತೆ ಕೇಳಿದ ರಾವಣನು ಇಂದ್ರಜಿತ್‌ನನ್ನು (ಮಗನನ್ನು) ಕರೆಯಿಸಿ ಅವನನ್ನು 'ಇಂದ್ರನನ್ನೇ ಗೆದ್ದ ನಿನಗೆ ಹುಲು ಮಾನವ ರಾಮ ಏನು ಲೆಕ್ಕ'? ಇತ್ಯಾದಿಯಾಗಿ ಹುರಿದುಂಬಿಸಿ ರಾಮನನ್ನು ಸಂಹರಿಸಲು ಕಳಿಸಿದನು. ಅವನು ಲಕ್ಷ್ಮಣನನ್ನು ಯುದ್ಧಕ್ಕೆ ಆಹ್ವಾನಿಸಿದನು. ಇಂದ್ರಜಿತ್ ಲಕ್ಷ್ಮಣರ ಮಧ್ಯೆ ಬಹು ಹೊತ್ತು ಯುದ್ಧ ನಡೆಯಿತು. ಇಂದ್ರಜಿತ್ **ತೋಮರಾಯುಧ**ಗಳನ್ನು ಬಿಡಲು ಲಕ್ಷ್ಮಣನು ತನ್ನ ನಿಶಿತಬಾಣಗಳಿಂದ ಅವುಗಳನ್ನು ಕತ್ತರಿಸಿದನು. ಅಂಗದನು ಇಂದ್ರಜಿತ್‌ನ ಮೇಲೆಸೆದ ವೃಕ್ಷದಿಂದಲೂ ಅವನು ಭ್ರಾಂತನಾಗಲಿಲ್ಲ. ಅವನ ಮೇಲೆ ಪ್ರಾಸವೆಂಬ ಆಯುಧವನ್ನು ಎಸೆಯಲು ಉದ್ಯುಕ್ತನಾದಾಗ ಲಕ್ಷ್ಮಣನು ಅದನ್ನು ಕತ್ತರಿಸಿದನು. ಅಂಗದನ ಮೇಲೆ ಗದೆ ಎಸೆದ. ಅಂಗದ ಅದಕ್ಕೆ ಹೆದರದೆ ಭಾರಿ ಸಾಲವೃಕ್ಷವನ್ನೆಸೆದ. ಅದರಿಂದ ಇಂದ್ರಜಿತ್‌ನ ರಥ, ಸಾರಥಿ, ಕುದುರೆಗಳು ಧ್ವಂಸವಾದವು. ಆಗ ಇಂದ್ರಜಿತ್ ಮಾಯವಾಗಿ ಮಾಯಾಯುದ್ಧ ಆರಂಭಿಸಿದ. ರಾಮನು ಆಗ ತನ್ನ ಸೇನೆಯನ್ನು ರಕ್ಷಿಸುತ್ತಿದ್ದ. ಇಂದ್ರಜಿತ್ ಅದೃಶ್ಯನಾಗಿ ಎಲ್ಲ ದಿಕ್ಕುಗಳಿಂದ ಪ್ರಯೋಗಿಸಿದ ಅಸ್ತ್ರಗಳಿಗೆ ರಾಮ ಲಕ್ಷ್ಮಣರು ಪ್ರತ್ಯಸ್ತ್ರ ಪ್ರಯೋಗಿಸಿ ನಿರಸನಗೊಳಿಸುತ್ತಿದ್ದರು. ರಾಕ್ಷಸನ ಬಾಣಗಳಿಂದ ಪೀಡಿತರಾಗಿ ರಾಮ ಲಕ್ಷ್ಮಣರು ಮೂರ್ಛಿತರಾಗಿ ನೆಲದ ಮೇಲೆ ಆಕಾಶದಿಂದ ಕೆಳಗೆ ಬಿದ್ದ ಸೂರ್ಯಚಂದ್ರರಂತೆ ಬಿದ್ದರು. ಆಗ ಸುಗ್ರೀವಾದಿ ಕಪಿಗಳೆಲ್ಲರೂ ರಾಮ ಲಕ್ಷ್ಮಣರನ್ನು ಸುತ್ತುವರಿದರು. ಆಗ ವಿಭೀಷಣನು 'ಪ್ರಜ್ಞಾ' ಎಂಬ ಅಸ್ತ್ರ ಪ್ರಯೋಗಿಸಿ ಅವರಿಗೆ ಎಚ್ಚರ ಬರುವಂತೆ ಮಾಡಿದನು. ಸುಗ್ರೀವನು ಅವರ ಮೇಲೆ ಚುಚ್ಚಿಕೊಂಡಿದ್ದ ಬಾಣಗಳೆಲ್ಲವನ್ನು ತೆಗೆದು ಯಾತನೆಯಾಗದಂತೆ ನೋಡಿಕೊಂಡನು. ಸುಷೇಣ (ವೈದ್ಯಕಪಿ) ನ ಸಲಹೆಯಂತೆ 'ವಿಶಲ್ಯಾ' ಮೂಲಿಕೆಯಿಂದ ಚುಚ್ಚಲ್ಪಟ್ಟ ಬಾಣಗಳನ್ನು ತೆಗೆಯಲಾಗಿತ್ತು. ಆಯಾಸ ಪರಿಹಾರವಾಯಿತು. ಅಲ್ಲದೆ ವಿಭೀಷಣನು ಕುಬೇರ ಕಳಿಸಿದ ಮಂತ್ರಪೂತ ಕಲಶದ ಪುಣ್ಯ ತೀರ್ಥವನ್ನು ಕಣ್ಣಿಗೆ ಲೇಪಿಸಲು ಕೊಟ್ಟನು. ರಾಮನು ತಾನೂ ಲೇಪಿಸಿಕೊಂಡು ಲಕ್ಷ್ಮಣನಿಗೂ, ಇತರ ಕಪಿಗಳಿಗೂ ಕೊಟ್ಟಾಗ ಎಲ್ಲರೂ ನೋಡಲು ಅಸಾಧ್ಯವಾದ ಅದೃಶ್ಯ ವಸ್ತುಗಳನ್ನು ನೋಡಲು ಸಮರ್ಥರಾದರು.

ಇಂದ್ರಜಿತ್ ತನ್ನ ಗೆಲುವನ್ನು ರಾವಣನಿಗೆ ಹೇಳಿ ಮತ್ತೆ ಯುದ್ಧಕ್ಕೆ ಬಂದನು. ಅಂದು ಎಂದಿನಂತೆ ನಿತ್ಯಾಹ್ನಿಕ ಮಾಡಿ ಬರದೆ ಹಾಗೆ ಬಂದನು. ಇದನ್ನರಿತ

ವಿಭೀಷಣನು ಇಂದ್ರಜಿತ್ ಸಂಹಾರಕ್ಕೆ ಇದು ಸೂಕ್ತ ಕಾಲವೆಂದು ಭಾವಿಸಿ ಲಕ್ಷ್ಮಣನಿಗೆ ಹೇಳಲು, ಇಂದ್ರಜಿತ್‌ನ ಮೇಲೆ ಬಾಣಗಳ ಮಳೆಗರೆದನು. ಇಬ್ಬರ ಮಧ್ಯೆ ಭಾರಿ ಯುದ್ಧವಾಯಿತು. ನಂತರ ಲಕ್ಷ್ಮಣನು ಒಂದು ಬಾಣದಿಂದ ಇಂದ್ರಜಿತ್‌ರ ಧನುಸ್ಸನ್ನು ಹಿಡಿದ ಬಾಹುವನ್ನು ಕತ್ತರಿಸಿ, ಎರಡನೆ ಬಾಣದಿಂದ ಬಾಣಗಳನ್ನು ಹೂಡಲು ಹೋದ ಬಾಣವನ್ನು ಕಡಿದು ಹಾಕಿದನು. ಮೂರನೇ ಬಾಣದಿಂದ ಕರ್ಣಕುಂಡಲಗಳನ್ನು ಧರಿಸಿದ ಶಿರಸ್ಸನ್ನು ಕತ್ತರಿಸಿದನು. ಆದರೂ ಬಾಹು, ಶಿರಸ್ಸು ರಹಿತವಾದ ಮುಂಡ ನೋಡಲು ಭಯಂಕರವಾಗಿತ್ತು. ಹೀಗೆ ಇಂದ್ರಜಿತ್ ಸಂಹಾರವಾಯಿತು. ತನ್ನ ಅತ್ಯಾಪ್ತ ಪುತ್ರನ ಮರಣದಿಂದ ಶೋಕಾಕುಲನಾದ ರಾವಣನು ಸೀತೆಯ ಸಂಹಾರಕ್ಕೆ ಧಾವಿಸಲು (ರಾವಣನ ಪರಿವಾರದ) ಅವಿಂಧ್ಯನು ಸ್ತ್ರೀಹತ್ಯೆಯು ಸೂಕ್ತವಲ್ಲವೆಂದು ಯುಕ್ತಿಗಳಿಂದ ತಡೆದು ನಿಲ್ಲಿಸಿದನು. ಆಗ ರಾವಣನು ರಾಮನೊಡನೆ ಯುದ್ಧಕ್ಕೆ ತೆರಳಿದನು.

ತತಃ ಪ್ರಹಸ್ತಃ ಸಹಸಾ ಸಮಭ್ಯೇತ್ಯ ವಿಭೀಷಣಮ್ ।
ಗದಯಾ ತಾಡಯಾಮಾಸ........... ।
ತತಃ ಪ್ರಗೃಹ್ಯ ವಿಪುಲಾಂ ಶತಘಂಟಾಂ ವಿಭೀಷಣಃ ।
ಅನುಮಂತ್ರ್ಯ ಮಹಾಶಕ್ತಿಂ ಚಿಕ್ಷೇಪಾಸ್ಯ ಶಿರಃ ಪ್ರತಿ
ತಂ ದೃಷ್ಟ್ವಾ ನಿಹತಂ ಸಂಖ್ಯೇ ಪ್ರಹಸ್ತಂ ಕ್ಷಣದಾಚರಮ್
ವನಪರ್ವ ೨೮೬- ೧ ರಿಂದ ೫

'ತತೋಽಬ್ರವೀತ್ ದಶಗ್ರೀವಃ ಕುಂಭಕರ್ಣಂ ಮಹಾಬಲಮ್ ।
ಧನ್ಯೋಽಸಿ ಯಸ್ಯ ತೇ ನಿದ್ರಾ ಕುಂಭಕರ್ಣೋಽಯಮೀದೃಶೀ ।
ವ.ಪ. ೨೮೬-೨೨
ತಂ ಬ್ರಹ್ಮಾಸ್ತ್ರೇಣ ಸೌಮಿತ್ರಿರ್ದದಾರಾದ್ರಿಚಯೋಪಮ್ ।
ಸ ಪಪಾತ ಮಹಾವೀರ್ಯೋ... ।
ಗತಾಸುಂ ಪತಿತಂ ಭೂಮೌ..... ।' ವ.ಪ. ೨೮೭-೧೮ ರಿಂದ ೨೦

'ಸ ಭೃಶಂ ತಾಡಯಾಮಾಸ ರಾವಣಿರ್ಮಾಯಯಾಽಽವೃತಃ ।
ತೌ ಶರೈರಾಚಿತೌ ವೀರೌ ಭ್ರಾತರೌ ರಾಮಲಕ್ಷ್ಮಣೌ ।
ಪೇತತುರ್ಗಗನಾತ್ ಭೂಮಿಂ ಸೂರ್ಯಾಚಂದ್ರಮಸಾವಿವ ।'
ವ.ಪ. ೨೮೮-೨೬

'ತತಸ್ತಂ ದೇಶಮಾಗಮ್ಯ ಕೃತಕರ್ಮಾ ವಿಭೀಷಣಃ ।
ಬೋಧಯಾಮಾಸ ತೌ ವೀರೌ ಪ್ರಜ್ಞಾಸ್ತ್ರೇಣ ಪ್ರಬೋಧಿತೌ ॥
ಇದಮಂಭಃ ಕುಬೇರಸ್ತೇ ಮಹಾರಾಜಃ ಪ್ರಯಚ್ಛತಿ ।
ಅಂತರ್ಹಿತಾನಾಂ ಭೂತಾನಾಂ ದರ್ಶನಾರ್ಥಂ ಪರಂತಪ ।
ಕ್ಷಣೇನಾತೀಂದ್ರಿಯಾಣ್ಯೇಷಾಂ ಚಕ್ಷೂಂಷ್ಯಾಸನ್ ಯುಧಿಷ್ಠಿರ ॥'
ವ.ಪ. ೨೮೯- ೫ ರಿಂದ ೧೪

'ಸೌಮಿತ್ರಿಶರಸಂಸ್ಪರ್ಶಾತ್ ರಾವಣಿಃ ಕ್ರೋಧಮೂರ್ಛಿತಃ ।
ತಸ್ಯಾಸೂನ್ ಪಾವಕಸ್ಪರ್ಶೈಃ ಸೌಮಿತ್ರಿಃ ಪತ್ರಿಭಿಸ್ತ್ರಿಭಿಃ
ಯಥಾ ನಿರಹರದ್ವೀರಃ

ತಂ ಹತ್ವಾ...
ಸ ಪುತ್ರಂ ನಿಹತಂ ಜ್ಞಾತ್ವಾ ತ್ರಾಸಾತ್ ಸಂಭ್ರಾಂತಮಾನಸಃ ।
ರಾವಣಃ ಶೋಕಮೋಹಾರ್ತೋ ವೈದೇಹೀಂ ಹಂತುಮುದ್ಯತಃ ॥
ತಂ ದೃಷ್ಟ್ವಾ ತಸ್ಯ ದುರ್ಬುದ್ಧೇರವಿಂಧ್ಯಃ ಪಾಪನಿಶ್ಚಯಮ್ ।
ಶಮಯಾಮಾಸ ಸಂಕ್ರುದ್ಧಂ ಶ್ರೂಯತಾಂ ಯೇನ ಹೇತುನಾ ।
ಏವಂ ಬಹುವಿಧೈರ್ವಾಕ್ಯೈಃರವಿಂಧ್ಯೋ ರಾವಣಂ ತದಾ
ಕ್ರುದ್ಧಂ ಸಂಶಮಯಾಮಾಸ ಜಗೃಹೇ ಚ ಸ ತದ್ವಚಃ' ।

ವ.ಪ. ೨೮೯– ೨೦ರಿಂದ೩೨

'ಅಭಿದುದ್ರಾವ ರಾಮಂ ಸ ಯೋಧಯನ್ ಹರಿಯೂಥಪಾನ್' ॥

ಅ. ೨೯೦–೨

ಆಗ ರಾಮನೆಡೆಗೆ ಹೋಗುತ್ತಿದ್ದ ರಾವಣನನ್ನು ಕಪಿನಾಯಕರು ಎದುರಿಸಿದರು. ಅವರಿಂದ ರಾವಣನ ಮುಂದೆಯೇ ಅವನ ಸೈನ್ಯ ನಾಶವಾಗಹತ್ತಿತು. ಆಗ ರಾವಣನು ಮಾಯಾ ಯುದ್ಧ ಮಾಡಲುಪಕ್ರಮಿಸಿದನು. ಅವನ ಶರೀರದಿಂದ ರಾಕ್ಷಸ ಯೋಧರು ಬರುತ್ತಿರಲು ರಾಮನು ಎಲ್ಲರನ್ನು ದಿವ್ಯಾಸ್ತ್ರಗಳಿಂದ ಸಂಹರಿಸಿದನು. ಮತ್ತೆ ರಾವಣನು ರಾಮ ಲಕ್ಷ್ಮಣ ರೂಪಿಗಳಾದ ರಾಕ್ಷಸರನ್ನು ತನ್ನ ಶರೀರದಿಂದ ಸೃಷ್ಟಿಸಿದನು. ಅವರು ರಾಮನೆಡೆಗೆ ನುಗ್ಗಿದರು. ಕಪಿಗಳಿಗೆ ಗೊಂದಲವುಂಟಾಯಿತು. ಲಕ್ಷ್ಮಣನು ರಾಮನಿಗೆ

'ಜಹೀಮಾನ್ ರಾಕ್ಷಸಾನ್ ಪಾಪಾನ್ ಆತ್ಮನಃ ಪ್ರತಿರೂಪವಾನ್' ।

೨೯೦–೧೧

ರಾಮನು ರಾಮ ಲಕ್ಷ್ಮಣ ರೂಪಿಗಳಾದ ರಾಕ್ಷಸರನ್ನು ಕೂಡಲೆ ಸಂಹರಿಸಿದನು.

ಜಘಾನ ರಾಮಸ್ತಾಂಶ್ಚಾನ್ಯಾನಾತ್ಮನಃ ಪ್ರತಿರೂಪಕಾನ್ । ೨೯೦/೧೧

ಅದೇ ಹೊತ್ತಿಗೆ ಇಂದ್ರನು ತನ್ನ ರಥ ಸಾರಥಿಗಳನ್ನು ರಾಮನ ಸೇವೆಗೆ ಕಳಿಸಿದನು. ರಾಮನು ಇದೂ ರಾವಣನ ಮಾಯೆಯೋ ಏನೋ ಎಂದು ಮನುಷ್ಯರಂತೆ ಭ್ರಾಂತಿಗೊಂಡವನಂತೆ ನಟಿಸಿದನು. ಆದರೆ ವಿಭೀಷಣನು ರಾಮನ ಇಂಗಿತವನ್ನರಿತು ಇದು ರಾವಣನ ಮಾಯೆಯಲ್ಲವೆಂದೂ ನಿಶ್ಚಯವಾಗಿ ಮಾತಲಿಯೇ ಬಂದಿರುವುದಾಗಿ ತಿಳಿಸಿದನು. ನಂತರ ರಾಮ ರಾವಣರಿಗೆ ಘೋರಯುದ್ಧ ಆರಂಭವಾಯಿತು. ಆ ಯುದ್ಧ ಹೋಲಿಕೆಯಿಲ್ಲದ ಯುದ್ಧವಾಗಿತ್ತು.

'ಅಲಬ್ಧೋಪಮಮನ್ಯತ್ರ, ತಯೋರೇವ ತಥಾಭವತ್' । ೨೯೦–೨೦

ರಾವಣನು ರಾಮನ ಮೇಲೆ ಮಹಾಘೋರವಾದ ಶಕ್ತ್ಯಾಯುಧವನ್ನೂ, ನಿಶಿತ ಬಾಣಗಳನ್ನೂ, ವಿವಿಧ ಭುಶುಂಡಿ, ಶೂಲ, ಮುಸಲ, ಪರಶ್ವಧ, ಆಯುಧಗಳನ್ನು ಅನವರತವಾಗಿ ರಾಮನ ಮೇಲೆ ಹಾಗೂ ಕಪಿಗಳ ಮೇಲೆ ಸುರಿಸಲು ರಾಮನು ಎಲ್ಲವನ್ನೂ ನಿವಾರಿಸಿದನು. ಕಪಿಗಳು ಆ ಆಯುಧಗಳ ಪ್ರಭಾವಕ್ಕೆ ಬೆದರಿ ದಿಕ್ಕೆಟ್ಟು ಓಡಿದರು. ನಂತರ ರಾವಣನು ಬಾಣವೊಂದಕ್ಕೆ ಬ್ರಹ್ಮಾಸ್ತ್ರ ಅಭಿಮಂತ್ರಿಸಿ ಪ್ರಯೋಗಿಸಿದಾಗ ರಾವಣನ ಅಶ್ವರಥ ಸಾರಥಿ ಸಮೇತ ರಾವಣನನ್ನು ಸುಟ್ಟಿತು. ರಥದ ಸುತ್ತಲೂ ಬೆಂಕಿ ಹತ್ತಿಕೊಂಡು ಉರಿಯಲಾರಂಭಿಸಿತು. ಇದನ್ನು ನೋಡಿದ ದೇವ ಗಂಧರ್ವರು ಋಷಿಗಳು ಆನಂದಭರಿತರಾದರು. ರಾವಣನ ಶರೀರ ಭಸ್ಮವಾಗಿ ಬೂದಿಯೂ ಉಳಿಯಲಿಲ್ಲ. ರಾವಣನು ನಾಮಾವಶೇಷನಾದ

ಎಲೈ ಧರ್ಮರಾಜನೇ! ಶ್ರೀರಾಮನು ರಾವಣಾದ್ಯಸುರರನ್ನು ಸಂಹರಿಸಿ ಸಂತೋಷಪಟ್ಟನು. ದೇವತೆಗಳೆಲ್ಲ ಜಯ ಜಯ ಕಾರ ಮಾಡಿದರು. ಸ್ತುತಿಸಿದರು. ಗಂಧರ್ವರು ಪುಷ್ಪವೃಷ್ಟಿಗೈದರು. ನಂತರ ತಮ್ಮ ತಮ್ಮ ಲೋಕಗಳಿಗೆ ತೆರಳಿದರು. ಆಗ ಇಡೀ ಆಕಾಶ ದೇವತೆಗಳಿಂದ ವಿಜೃಂಬಿಸಿತು.

ಅದೇ ಸಮಯದಲ್ಲಿ ಶ್ರೀರಾಮನು ವಿಭೀಷಣನಿಗೆ ಲಂಕೆಯನ್ನು ಒಪ್ಪಿಸಿದನು. ಮತ್ತೆ ಅಭಿಷೇಕ ಮಾಡಿದನು. ಆಗಲೇ ರಾವಣನ ಅಮಾತ್ಯನೂ, ವೃದ್ಧನೂ, ಬಹು ವಿವೇಕಿಯೂ ಆದ **ಅವಿಂಧ್ಯನು** ವಿಭೀಷಣನೊಡನೆ ಸೀತೆಯನ್ನು ಕರೆದುಕೊಂಡು ಬಂದು ರಾಮನಿಗೆ ಸ್ವೀಕರಿಸಲು ಕೋರಿದನು.

**'ಪ್ರತೀಚ್ಛ ದೇವೀಂ ಸದ್ವೃತ್ತಾಂ ಮಹಾತ್ಮನ್ ಜಾನಕೀಮಿತಿ'** ॥ ೨೯೧-೭

ಶ್ರೀರಾಮನು ಶೋಕಾಭಿತಪ್ತಳಾದ ಸೀತೆಯನ್ನು ನೋಡಿದನು. ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಅವಳ ಶರೀರವೆಲ್ಲ ಧೂಳಿ ಧೂಸರವಾಗಿತ್ತು. ವಸ್ತ್ರ ಮಾಸಿತ್ತು. ಅಂತಹ ದುರವಸ್ಥೆಯಲ್ಲಿದ್ದ ಸೀತೆಯನ್ನು ನೋಡಿ ರಾಮನು ಹೇಳಿದನು.

'ವೈದೇಹಿ, ನೀನೀಗ ರಾವಣನ ಬಂಧನದಿಂದ ಮುಕ್ತಳಾಗಿದ್ದೀಯ. ನೀನು ಇಚ್ಛೆ ಬಂದಲ್ಲಿಗೆ ಹೋಗು. ನಾನು ಪತಿ ನನ್ನ ಕರ್ತವ್ಯ ಮಾಡಿದ್ದೇನೆ. ಮುಪ್ಪಿರುವವರೆಗೂ ನೀನು ರಾಕ್ಷಸನ ಬಂಧನದಲ್ಲಿರಬಾರದೆಂದು ರಾವಣನನ್ನು ಕೊಂದೆ. ನನಗೆ ಧರ್ಮ ತಿಳಿದಿದೆ. ಪರಹಸ್ತಗತಳಾದ ನಿನ್ನನ್ನು ಒಂದು ಮುಹೂರ್ತವು ನಾನಿಟ್ಟುಕೊಳ್ಳಲಾರೆ. ನಾಯಿ ನೆಕ್ಕಿದ ಹವಿಸ್ಸಿನಂತೆ ಪರಗೃಹದಲ್ಲಿದ್ದ ನಿನ್ನೊಡನೆ ನಾನು ಇರಲಾರೆ'.

**ಗಚ್ಛ ವೈದೇಹಿ ಮುಕ್ತಾ ತ್ವಂ** ೨೯೧/೧೦
**ಮಾಮಾಸಾದ್ಯ ಪತಿಂ ಭದ್ರೇ ಸತ್ಯಂ ರಾಕ್ಷಸವೇಶ್ಮನಿ ।**
**ಜರಾಂ ವ್ರಜೇಥಾ ಇತಿ ಮೇ ನಿಹತೋಽಸೌ ನಿಶಾಚರಃ ॥** ೨೯೧/೧೧
**ಪರಹಸ್ತಗತಾಂ ನಾರೀಂ ಮುಹೂರ್ತಮಪಿ ಧಾರಯೇತ್ ।** ೨೯೧/೧೨
**ಸುವೃತ್ತಾಮಸುವೃತ್ತಾಂ ವಾಪ್ಯಹಂ ತ್ವಾಮದ್ಯ ಮೈಥಿಲಿ ।**
**ನೋತ್ಸಹೇ ಪರಿಭೋಗಾಯ ಶ್ವಾವಲೀಢಂ ಹವಿರ್ಯಥಾ ॥** ೨೯೧/೧೩

ರಾಮನ ಕಠೋರ ಮಾತುಗಳನ್ನು ಕೇಳಿ ಸೀತೆ ಕುಸಿದುಬಿದ್ದಳು. ಆಕೆಯ ಮುಖಲಾವಣ್ಯ ಮತ್ತೂ ಕುಂಧಿ ಹೋಯಿತು. ಲಕ್ಷ್ಮಣ ಸುಗ್ರೀವಾದಿಗಳು ಮುಂದೇನನ್ನೂ ಮಾಡಲು ತೋಚದಾದರು, ಶೂನ್ಯ ಚಿತ್ತರಾದರು.

ಆಗ ಚತುರ್ಮುಖ ಬ್ರಹ್ಮದೇವ, ಇಂದ್ರಾದಿ ದಿಕ್ಪಾಲಕರು ರಾಮನ ತಂದೆ ದಶರಥ ಮಹಾರಾಜ, ಎಲ್ಲರೂ ಆಕಾಶದಲ್ಲಿ ಕಾಣಿಸಿಕೊಂಡರು. ಆಗ ಸೀತೆಯು 'ರಾಜಪುತ್ರನೇ! ನಿನ್ನ ಮಾತು ಕಠಿಣವಾದರೂ ತಪ್ಪೆನ್ನಲಾರೆ. ನೀನೆಲ್ಲವನ್ನೂ ಬಲ್ಲೆ, ಆದರೂ ನನ್ನ ಮಾತನ್ನು ಕೇಳು. 'ನಾನೇನಾದರೂ ತಪ್ಪು ಮಾಡಿದ್ದರೆ ವಾಯು, ಅಗ್ನಿ, ಜಲ, ಪೃಥಿವೀ ಆಕಾಶ ಎಲ್ಲ ಪಂಚಭೂತಾಭಿಮಾನಿಗಳು ನನ್ನ ಶರೀರ ಬಿಟ್ಟು ಹೋಗಲಿ (ನಾನು ಸಾಯಲಿ). ನಿನ್ನನ್ನು ಹೊರತು ನಾನು ಬೇರಾರನ್ನೂ ಸ್ವಪ್ನದಲ್ಲೂ ಬಯಸಿಲ್ಲ. ದೇವತೆಗಳಿಂದ ಇದನ್ನು ತಿಳಿದು ನೀನೇ ನನ್ನ ಪತಿಯಾಗು'

**'ರಾಜಪುತ್ರ ನ ತೇ ದೋಷಂ ಕರೋಮಿ ವಿದಿತಾ ಹಿ ತೇ । ೨೨**
**ಅಂತಶ್ಚರತಿ ಭೂತಾನಾಂ ಮಾತರಿಶ್ವಾ ಸದಾಗತಿಃ ।**
**ಸ ಮೇ ವಿಮುಂಚತು ಪ್ರಾಣಾನ್ ಯದಿ ಪಾಪಂ ಚರಾಮ್ಯಹಂ । ೨೩**
**ಅಗ್ನಿರಾಪಸ್ತಥಾಕಾಶಂ ಪೃಥಿವೀ ವಾಯುರೇವ ಚ ।**
**ವಿಮುಂಚಂತು ಮಮ ಪ್ರಾಣಾನ್ ಯದಿ ಪಾಪಂ ಚರಾಮ್ಯಹಂ ॥ ೨೪**
**ಯಥಾಹಂ ತ್ವದೃತೇ ವೀರ ನಾನ್ಯಂ ಸ್ವಪ್ನೇಽಪ್ಯಚಿಂತಯಮ್ ।**
**ತಥಾ ಮೇ ದೇವ ನಿರ್ದಿಷ್ಟಸ್ತ್ವಮೇವ ಹಿ ಪತಿರ್ಭವ ॥ ೨೫**

ಅಂತೆಯೇ ವಾಯ್ವಾದಿ ಎಲ್ಲ ಪಂಚಭೂತಾಭಿಮಾನಿಗಳೂ ಸೀತೆಯನ್ನು ಕಳಂಕರಹಿತಳೂ, ಪಾಪರಹಿತಳೂ, ಅತ್ಯಂತ ಶುದ್ಧಳೆಂದೇ ರಾಮನಿಗೆ ಅರುಹಿ ಆಕೆಯನ್ನು ಸ್ವೀಕರಿಸಲು ಬಿನ್ನವಿಸಿದರು.

**ವಾಯುರುವಾಚ**

**ಅಪಾಪಾ ಮೈಥಿಲೀ ರಾಜನ್ ಸಂಗಚ್ಛ ಸಹ ಭಾರ್ಯಯಾ' । ೨೭**

**ಅಗ್ನಿರುವಾಚ– ಮೈಥಿಲೀ ನಾಪರಾಧ್ಯತಿ । ೨೮**

**ವರುಣಉವಾಚ– ಮೈಥಿಲೀ ಪ್ರತಿಗೃಹ್ಯತಾಂ । ೨೯**

ಚತುರ್ಮುಖ ಬ್ರಹ್ಮನೆಂದನು 'ನನ್ನ ವರದಿಂದ ರಾವಣನು ಉದ್ಧತನಾಗಿ ಕುಕೃತ್ಯ ಎಸಗಿದ. ರಾವಣನನ್ನು ಸಂಹರಿಸಿ ಉಪಕರಿಸಿದ್ದೀ. ಸೀತೆಯನ್ನು ರಾವಣನು ಮುಟ್ಟಲೇ ಇಲ್ಲ. ನಲಕೂಬರನು ಕೊಟ್ಟ ಶಾಪದಿಂದ ರಾವಣನು ಆಕೆಯನ್ನು ಸ್ಪರ್ಶಿಸದಂತೆ ರಕ್ಷಿಸಿದ್ದೇನೆ. ಆದ್ದರಿಂದ ಆಕೆಯನ್ನು ಸ್ವೀಕರಿಸು ಎಂದನು.

ದಶರಥ ರಾಜನೂ ಕೂಡಾ ಸೀತೆಯನ್ನು ಸ್ವೀಕರಿಸಿ ರಾಜ್ಯವನ್ನು ಧರ್ಮದಿಂದ ಪರಿಪಾಲಿಸೆಂದನು. ಆಗ ರಾಮನು –

'ಗಮಿಷ್ಯಾಮಿ ಪುರೀಂ ರಮ್ಯಾಮಯೋಧ್ಯಾಂ ಶಾಸನಾತ್ತವ । ೩೭

ಎಂದು ಹೇಳಿ ಸೀತೆಯನ್ನು ಆನಂದ ಬಾಷ್ಪಗಳೊಡನೆ ಸ್ವೀಕರಿಸಿ ನಡೆದನು. ಅವಿಂಧನಿಗೆ ಆತನು ಇಚ್ಛಿಸಿದ ವರವನ್ನಿತ್ತು ಗೌರವಿಸಿದನು. ತನ್ನ ಪರವಾಗಿ ಸೇವೆ ಸಲ್ಲಿಸಿದ ತ್ರಿಜಟೆಗೂ ರಾಮನು ಧನಕನಕಾದಿಗಳನ್ನು ಕೊಟ್ಟು ಗೌರವಿಸಿದನು.

ಆಗ ಬ್ರಹ್ಮನು ರಾಮನಿಗೆ ಬೇಕಾದ ವರಗಳನ್ನು ಬೇಡೆನ್ನಲು ರಾಮನು 'ಮನಸ್ಸು ಯಾವಾಗಲೂ ಧರ್ಮದಲ್ಲಿಯೇ ಇರಬೇಕು. ಶತ್ರುಗಳಿಂದ ಪರಾಜಯ ಬರಬಾರದು. ಯುದ್ಧದಲ್ಲಿ ಮಡಿದ ಕಪಿಗಳು ಬದುಕಬೇಕು' ಎಂದು ವರ ಬೇಡಿದನು. ಬ್ರಹ್ಮನು ತಥಾಸ್ತು ಎಂದನು.

'ವವ್ರೇ ರಾಮಃ ಸ್ಥಿತಿಂ ಧರ್ಮೇ ಶತ್ರುಭಿಶ್ಚಾಪರಾಜಯಂ ।
ರಾಕ್ಷಸೈರ್ನಿಹತಾನಾಂ ಚ ವಾನರಾಣಾಂ ಸಮುದ್ಭವಂ ॥ ೪೨

ಆಗಲೇ ಸೀತೆಯೂ ಅಪಾರ ಸೇವೆ ಮಾಡಿದ ಹನುಮಂತನಿಗೆ

'ಈ ಭೂಮಿಯಲ್ಲಿ ರಾಮನ ಕೀರ್ತಿ ಇರುವವರೆಗೆ ನೀನು ಭೂಮಿಯಲ್ಲಿರುವೆ ದೇವಲೋಕದಲ್ಲಿ ಪಡೆಯಬಹುದಾದ ಎಲ್ಲ ಸುಖ ಭೋಗಗಳು ನನ್ನ ವರದಿಂದ ಲಭ್ಯವಾಗುತ್ತವೆ' ಎಂದು ವರವಿತ್ತಳು.

'ರಾಮಕೀರ್ತ್ಯಾ ಸಮಂ ಪುತ್ರ ಜೀವಿತಂ ತೇ ಭವಿಷ್ಯತಿ ।
ದಿವ್ಯಾಸ್ತ್ವಾಮುಪಭೋಗಾಶ್ಚ ಮತ್ಪ್ರಸಾದಕೃತಾಃ ಸದಾ ॥ ೪೫

ಹೀಗೆ ಎಲ್ಲರೂ ಸಂತೋಷ ಪಡುತ್ತಿರಲು ಇಂದ್ರಾದಿ ದೇವತೆಗಳು ರಾಮನನ್ನು ಅಭಿವಂದಿಸಿ ಅದೃಶ್ಯರಾದರು. ಇಂದ್ರ ಸಾರಥಿಯಾದ ಮಾತಲಿಯೂ ರಾಮನನ್ನು ಅಭಿನಂದಿಸಿ ರಾಮನ ಅಪ್ಪಣೆ ಸ್ವೀಕರಿಸಿ ಸ್ವರ್ಗಕ್ಕೆ ನಡೆದನು.

ಇತ್ತ ಶ್ರೀರಾಮನು ಲಕ್ಷ್ಮಣ, ಸುಗ್ರೀವಾದಿಗಳೊಂದಿಗೆ ವಿಭೀಷಣನ ಪುಷ್ಪಕ ವಿಮಾನ ಏರಿ ಸಮುದ್ರ ದಾಟಿ ಸಮುದ್ರ ರಾಜನು ಪ್ರಾರ್ಥಿಸಿದ ಸ್ಥಳಕ್ಕೆ ಆಗಮಿಸಿದರು, ಅಲ್ಲಿ ತಾತ್ಕಾಲಿಕವಾಗಿ ಬಿಡಾರ ಮಾಡಿಕೊಂಡು ಎಲ್ಲ ವಾನರರನ್ನು ಕರೆಸಿ ಅವರಿಗೆಲ್ಲಾ ಸೂಕ್ತ ಪುರಸ್ಕಾರಗಳನ್ನು ನೀಡಿದನು. ಅವರೆಲ್ಲ ತಮ್ಮ ತಮ್ಮ ಸ್ಥಳಗಳಿಗೆ ಹೊರಟರು. ನಂತರ ಪ್ರಯಾಣ ಮುಂದುವರಿಸಿದ ರಾಮನು ಕಿಷ್ಕಿಂಧಾ ಮಾರ್ಗವಾಗಿ ಹೊರಟನು. ಅಲ್ಲಿ ಅಂಗದನಿಗೆ ಯೌವರಾಜ್ಯದಲ್ಲಿ ಅಭಿಷೇಕ ಮಾಡಿದನು. ನಂತರ ಅಯೋಧ್ಯೆಗೆ ಪ್ರಯಾಣ ಬೆಳೆಸಿದ. ಆಗ ಹನುಮಂತನನ್ನು ಕಳುಹಿಸಿ ಭರತನ ಮನಸ್ಥಿತಿ ಅರಿತನು. ಎಂದರೆ ಹದಿನಾಲ್ಕು ವರ್ಷ ರಾಜ್ಯವಾಳಿದ ಭರತನ ಮನಸ್ಸಿನಲ್ಲಿ ಏನಾದರೂ ಪರಿವರ್ತನೆ ಆಗಿದೆಯೇ? ಎಂದು ತಿಳಿಯಲು ಹನುಮಂತನನ್ನು ಕಳುಹಿಸಿದನು.

ಭರತನಲ್ಲಿ ಅಂತಹ ಯಾವ ದುರಾಶೆಗಳೂ ಇರಲಿಲ್ಲ. ಆತನು ಸಿಂಹಾಸನವನ್ನು ಏರಿರಲಿಲ್ಲ. ರಾಮನ ಪಾದುಕೆಗಳನ್ನು ಇಟ್ಟುಕೊಂಡೇ ನಾರುವಸ್ತ್ರ ಧರಿಸಿದ್ದ.

ಶರೀರವೆಲ್ಲಾ ಧೂಳಿನಿಂದ ಕೂಡಿದ ಭರತನನ್ನು ನೋಡಿ ರಾಮನು ಆ ಸೋದರನ ಭಕ್ತಿಪರವಶತೆಯನ್ನು ಮನಗಂಡು ಅವನನ್ನು ಆಲಂಗಿಸಿಕೊಂಡು ಅವನಿಂದ ಮತ್ತೆ ರಾಜ್ಯ ಪಡೆದು ಸುಖವಾಗಿದ್ದನು. ಭರತನು ರಾಜ್ಯವೆಲ್ಲವನ್ನೂ ಅಣ್ಣನಿಗೆ ಒಪ್ಪಿಸಿದ. ಸಕಲ ಸಂಭಾರಗಳೊಡನೆ ರಾಮನ ಪಟ್ಟಾಭಿಷೇಕ ನಡೆಯಿತು.

ನಂತರ ಶ್ರೀರಾಮನು, ವಿಭೀಷಣ, ಸುಗ್ರೀವರನ್ನು ಯಥೋಚಿತವಾಗಿ ಸತ್ಕರಿಸಿದನು. ಅವರು ತುಂಬುಹೃದಯದಿಂದ ತಮ್ಮ ರಾಜ್ಯಗಳಿಗೆ ನಡೆದರು. ರಾಮನೂ ಹೃದಯಭಾರದಿಂದಲೇ ಅವರನ್ನು ಬೀಳ್ಕೊಟ್ಟನು. ಪುಷ್ಪಕ ವಿಮಾನವನ್ನು ಶ್ರೀರಾಮನು ವಿಭೀಷಣನಿಗೆ ಹಿಂದಿರುಗಿಸಿದನು.

ರಾಮರಾಜ್ಯ ಸಂಪತ್‌ಸಮೃದ್ಧಿಯಾಗಿತ್ತು. ರಾಮನು ಗೋಮತೀ ತೀರದ ಜಾರುಥಿ ಎಂಬ ಸ್ಥಳದಲ್ಲಿ ತ್ರಿಗುಣ ದಕ್ಷಿಣಾಕವಾದ ಹತ್ತು ಅಶ್ವಮೇಧ ಯಾಗಗಳನ್ನು ಮಾಡಿದನು. 'ಯಥೇಚ್ಛ ಭೋಜನ ಮಾಡಿರಿ' ಎಂಬುದು ರಾಮನ ಘೋಷಣೆಯಾಗಿತ್ತು.

**ಪುಷ್ಪಕಂ ಚ ವಿಮಾನಂ ತತ್ ಪೂಜಯಿತ್ವಾ ಸ ರಾಘವಃ।**
**ಪ್ರಾದಾದ್ ವೈಶ್ರವಣಾಯೈವ ಪ್ರೀತ್ಯಾ ಸ ರಘುನಂದನಃ।**
**ತತೋ ದೇವರ್ಷಿಸಹಿತಃ ಸರಿತಂ ಗೋಮತೀಮನು।**
**ದಶಾಶ್ವಮೇಧಾನಾಜಹ್ರೇ ಜಾರೂಥ್ಯಾನ್ ಸ ನಿರರ್ಗಲಾನ್ ॥ ೨೯೧-೬೯,೭೦**

## ಸಂದೇಶಗಳು-ವಿವರಣೆಗಳು

ಶ್ರೀರಾಮೋಪಾಖ್ಯಾನವನ್ನು ಕುರಿತು ಮಹಾಭಾರತದ ವನಪರ್ವದಲ್ಲಿ ಅಧ್ಯಾಯ ೨೭೩ ರಿಂದ ೨೯೨ಗಳವರೆಗೆ ವೇದವ್ಯಾಸ ದೇವರು, ಮಾರ್ಕಂಡೇಯ ಮುನಿಗಳಿಂದ ಧರ್ಮರಾಜನಿಗೆ ಹೇಳಿಸಿದ್ದಾರೆ. ಒಟ್ಟು ೨೦ ಅಧ್ಯಾಯಗಳಲ್ಲಿ. ಮೊದಲ ೨೭೩ನೇ ಹಾಗೂ ಕೊನೆಯ ೨೯೨ನೇ ಅಧ್ಯಾಯಗಳು ಉಪಕ್ರಮ ಹಾಗೂ ಉಪಸಂಹಾರ ಸ್ವರೂಪಗಳಾಗಿದ್ದು, ಧರ್ಮರಾಜನ ಭಾವನೆಗಳನ್ನು ಈ ಉಪಾಖ್ಯಾನವನ್ನು ಕೇಳುವ ಮುನ್ನ ಹಾಗೂ ನಂತರದಲ್ಲಿ ನೋಡಬಹುದು.

ತುಂಬಿದ ಕುರುಸಭೆಯಲ್ಲಿ ದ್ರೌಪದಿಗಾದ ಅವಮಾನ, ನಂತರ ವನದಲ್ಲಿದ್ದಾಗ ಮತ್ತೆ ಜಯದ್ರಥನು ಬಂದು ದ್ರೌಪದಿಯನ್ನು ಅಪಹರಿಸಿದ ಪ್ರಸಂಗಗಳು, ಸೌಮ್ಯನಾದ ಧರ್ಮರಾಜನನ್ನು ತುಂಬಾ ನೋಯಿಸಿದ್ದವು. ಅದಕ್ಕಾಗಿ ತನಗಿಂತಲೂ ಬೇರೆ ಯಾವ ಪುರುಷನು ಹಿಂದೆ ನೊಂದಿದ್ದನೆ? ದುಃಖಕ್ಕೆ ಈಡಾಗಿದ್ದನೆ? ಎಂಬುದನ್ನು ಮಾರ್ಕಂಡೇಯರಿಗೆ ಕೇಳಿದಾಗ ಹೇಳಿದ ಉಪಾಖ್ಯಾನವೇ ರಾಮೋಪಾಖ್ಯಾನ. ಧರ್ಮರಾಜನನ್ನು ಸಮಾಧಾನ ಮಾಡಿಸಲು ಹೇಳಿದ ಕಥೆ ಇದು.

ಸ್ವಯಂ ಭಗವಂತನಾದ ನಾರಾಯಣನೇ ರಾಮನಾಗಿ ಅವತರಿಸಿ ಮನುಷ್ಯರಂತೆ ವರ್ತಿಸಿ, ತಂದೆಯು, ಕೈಕೇಯಿಗೆ ಕೊಟ್ಟ ಮಾತನ್ನು ನಡೆಸುವ ನಿಮಿತ್ತದಿಂದ, ವನಕ್ಕೆ ಹೋಗಿ ಅಲ್ಲೂ ರಾವಣನಿಂದ ಸೀತಾಪಹರಣ ನಡೆದುದನ್ನು ಹೇಗೆ ಸಹಿಸಿಕೊಂಡ? ಅದಕ್ಕಾಗಿ ಒಬ್ಬ ಚಕ್ರವರ್ತಿಯಾಗಿ, ಸಾಮಾನ್ಯ ಮನುಷ್ಯನಂತೆ ಹೇಗೆ

ವರ್ತಿಸಿದ? ತನ್ನ ದೈವೀ ಸಂಪತ್ತನ್ನು ಅನಿವಾರ್ಯವಾದಾಗ ಮಾತ್ರ ಪ್ರದರ್ಶಿಸಿದ ರೀತಿ, ರಾಜನೀತಿಜ್ಞನಾಗಿ ಸುಗ್ರೀವನೊಂದಿಗೆ ಸ್ನೇಹ ಬೆಳೆಸಿ, ಆ ಸುಗ್ರೀವನ ಮೇಲೆ ಕಾರುಣ್ಯದಿಂದ ಅವನ ಅಣ್ಣನನ್ನು ಸಂಹರಿಸಿ, ಸುಗ್ರೀವನಿಂದ ಸೀತಾನ್ವೇಷಣೆಗಾಗಿ ಮಾತನ್ನು ತೆಗೆದುಕೊಂಡು, ಅದನ್ನು ಪರಿಪಾಲಿಸುವಂತೆ ಮಾಡಲು ಸುಗ್ರೀವನೊಡನೆ ವರ್ತಿಸಿದ ರೀತಿ–ಹೀಗೆ ನೂರಾರು ಮಾನವೀಯ ಮೌಲ್ಯಗಳನ್ನು ನಾವು ರಾಮಾಯಣದಲ್ಲಿ ಕಾಣಬಹುದು.

ಮಹಾಭಾರತದಲ್ಲಿ ಬಂದಿರುವ ರಾಮಾಯಣ ತೀರಾ ಸಂಕ್ಷೇಪ. ವಿಸ್ತಾರವಾದ ರಾಮಾಯಣ ನಮಗೆ ಸಿಗುವುದು ಸದ್ಯಕ್ಕೆ ವಾಲ್ಮೀಕಿ ರಾಮಾಯಣದಲ್ಲಿ ಮಾತ್ರ. ಯದ್ಯಪಿ ಆಚಾರ್ಯರು ಪ್ರಾಯಃ ಎಲ್ಲಾ ಪುರಾಣಗಳಲ್ಲಿ ರಾಮಾಯಣ ಕಥೆ ಬಂದಿರುವುದನ್ನು ಗುರುತಿಸಿದ್ದಾರೆ. ಪದ್ಮಪುರಾಣವು, ವಿಶೇಷವಾಗಿ ರಾಮಕಥೆಯನ್ನು ತಿಳಿಸುತ್ತದೆ. ಅಗ್ನಿ, ಪದ್ಮ, ಸ್ಕಂದ, ಬ್ರಹ್ಮ, ಕೂರ್ಮ, ಗರುಡ, ಬ್ರಹ್ಮವೈವರ್ತ ಮೊದಲಾದ ೧೪ ಪುರಾಣಗಳಲ್ಲಿ ರಾಮಾಯಣದ ಚರಿತ್ರೆ ಬಂದಿದೆ.

ರಾಮಾವತಾರದ ಉದ್ದೇಶ್ಯ ತ್ರೇತೆಯಲ್ಲಿ ಧರ್ಮಕ್ಕೆ ಅಡ್ಡಿಯಾದ, ಪುಲಸ್ತ್ಯರ ಸಂತತಿಯಲ್ಲಿ ಜನಿಸಿದವರೂ, ಬ್ರಹ್ಮನ ಮೊಮ್ಮಕ್ಕಳೂ ಆದ ರಾವಣಕುಂಭಕರ್ಣಾದಿಗಳ ಉಪಟಳ ಶಮನಗೊಳಿಸುವುದು. ಅಂತೆಯೇ ಅವರ ನಾಶಕ್ಕಾಗಿ ನಾರಾಯಣನ ಅವತಾರ–ರಾಮನಾಗಿ. ದಶರಥನ ಮಗನಾಗಿ ಅವತರಿಸಿದ್ದು–ಇವು ಮಹಾಭಾರತದ ವನಪರ್ವದ ೨೭೪, ೨೭೫ ಅಧ್ಯಾಯಗಳಲ್ಲಿ ಬಂದಿವೆ. ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ ಭಗವಂತನು ಮಾನವನಾಗಿಯೂ, ಬ್ರಹ್ಮದೇವರ ಮನವಿಯಂತೆ, ದೇವತೆಗಳೊಂದಿಗೆ (ಕಪಿಗಳಾಗಿ ಅವತರಿಸಿದ) ಅವತರಿಸಿ ಅವರನ್ನೂ, ಮೋಕ್ಷಸಾಧನೆಯನ್ನು ಮಾಡುತ್ತಿದ್ದ ಅಗಸ್ತ್ಯರು, ಶರಭಂಗರು ಮೊದಲಾದ ಋಷಿಗಳ ರಕ್ಷಣೆಗಾಗಿ ಅವತರಿಸಿದನು. (ತ್ರಿದಶಮುನಿಕೃತೇಽರಣ್ಯಮೇವಾವಿವೇಶ. ಮ.ತಾ.ನಿ. ಅ.೫)

೨. ದಶರಥನ ಪುತ್ರಕಾಮೇಷ್ಟಿ ಯಾಗದ ಫಲವಾಗಿ ವಿಷ್ಣು, ಶೇಷ, ಮನ್ಮಥ, ಅನಿರುದ್ಧರು ರಾಮ, ಲಕ್ಷ್ಮಣ, ಭರತ, ಶತ್ರುಘ್ನರಾಗಿ ಅವತರಿಸಿದ್ದರೂ, ರಾಮನು ಸಾಕ್ಷಾತ್ ನಾರಾಯಣ. ಉಳಿದವರೆಲ್ಲರೂ ಜೀವರೇ ಹೊರತು ವಿಷ್ಣುಸ್ವರೂಪರಲ್ಲ. ಆದರೆ ಅವರಲ್ಲಿ (ಲಕ್ಷ್ಮಣ, ಭರತ, ಶತ್ರುಘ್ನ) ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧರೂಪಿ ಭಗವಂತನ ಆವೇಶಗಳಾಗಿದ್ದವು.

೩. ನಾಲ್ವರು ಮಕ್ಕಳೂ ಆದರ್ಶ ಸಹೋದರರಾಗಿದ್ದರು. ರಾಮನೇ ಉಳಿದವರಿಗೆ ಅಚ್ಚುಮೆಚ್ಚಿನ ಸಹೋದರನಾಗಿದ್ದನು. ಒಂದು ಕುಟುಂಬದಲ್ಲಿ ಸಹೋದರ ಸಹೋದರಿಯರು ಹೇಗೆ ಅನ್ಯೋನ್ಯವಾಗಿ ಬದುಕಬೇಕೆಂದು ರಾಮಾಯಣ ತಿಳಿಸುತ್ತದೆ. ಸಹೋದರರಿಗೆ ಸೂಕ್ತ ಸ್ಥಾನ ಕೊಟ್ಟಿದ್ದ ರಾಮನು, ಅವರಿಂದ ಯೋಗ್ಯ ಸಾಧನೆ ಮಾಡಿಸಿದ. ಅದರಲ್ಲಿ ಲಕ್ಷ್ಮಣನದು ಸೇವಾರೂಪ ಕೈಂಕರ್ಯ. ಭರತನದು ಭಕ್ತಿಭರಿತ

ಸರ್ವಸಂಗ ಪರಿತ್ಯಾಗ. ಭರತನು ಸ್ವಯಂ ಮನ್ಮಥ. ಆದರೆ ಮನಸ್ಸಿಗೆ ಸ್ವಾತಂತ್ರ್ಯ ಕೊಡದೆ, ಮನಸ್ಸನ್ನು ರಾಮನಲ್ಲಿಯೇ ನೆಟ್ಟಿದ್ದ! **'ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ'** ಎಂಬ 'ಗೀತೆಯ ಮಾತಿಗೆ ರಾಮನ ಸಹೋದರರು ಅತ್ಯಂತ ಉತ್ಕೃಷ್ಟ ಉದಾಹರಣೆಯಾಗಿದ್ದಾರೆ. ರಾಮನು ತಂದೆಗಾಗಿ, ಆತನ ಕೀರ್ತಿಗಾಗಿ ತನಗೆ ಬಂದ ರಾಜ್ಯ ಸಂಪತ್ತನ್ನು ತ್ಯಾಗ ಮಾಡಿದ ಆದರ್ಶ ಪಿತೃಭಕ್ತನಾಗಿದ್ದ.

೪. ರಾಮನ ಮನೆಯಲ್ಲಿಯೇ, ರಾಜನಿಗೆ, ಯುವರಾಜನಿಗೆ, ಮಹಾರಾಣಿಯರಿಗೆ ದ್ರೋಹ ಬಗೆದ ಮಂಥರೆ ಕಲಿಪತ್ನಿ. ದೇವರ ಮನೆಯಲ್ಲಿಯೇ ದೇವಸ್ಥಾನದಲ್ಲಿಯೇ ಕಲಿಪತ್ನಿಯರಿರುತ್ತಾರೆ. ಅವರನ್ನು ನೋಡಲು, ಹುಡುಕಲು ಎಲ್ಲೂ ಹೋಗಬೇಕಿಲ್ಲ ಎನ್ನಲು ಮಂಥರೆ ಉದಾಹರಣೆಯಾಗಿದ್ದಳು. ಆಕೆ ದಶರಥನ ಹೆಂಡತಿಯ ಮನಸ್ಸನ್ನು ಕೆಡಿಸಿದಳು. ಅವಳೊಂದಿಗೆ ನಿಕೃತಿ ಮತ್ತೊಬ್ಬ ದೈತ್ಯಳೂ ಮನಸ್ಸನ್ನು ಕೆಡಿಸಿದ್ದಳೆಂದು ಆಚಾರ್ಯರು ಸಂಶೋಧಿಸಿದ್ದಾರೆ. ಮಹಾಭಾರತದ ವನಪರ್ವದ ೨೭೬ನೇ ಅಧ್ಯಾಯದಲ್ಲಿ ಮಂಥರೆಯು ದುಂದುಭಿ ಎಂಬ ಗಂಧರ್ವಳೆಂದು ಗುರುತಿಸಿದೆ. ಆಚಾರ್ಯರು ಇನ್ನೂ ಹೆಚ್ಚಿನ ಮಾಹಿತಿಯನ್ನು ತಿಳಿಸಿದ್ದಾರೆ. ಆಕೆಯು ಅಮೃತ ಮಂಥನದಲ್ಲಿ ಹುಟ್ಟಿ, ಮುಂದೆ ಬ್ರಹ್ಮದೇವರ ವರದಿಂದ ರಾಮಾಭಿಷೇಕಕ್ಕೆ ವಿಘ್ನವಾದಳೆಂದೂ ಆಚಾರ್ಯರು ತಿಳಿಸಿದ್ದಾರೆ. ಮಹಾಭಾರತವೂ ಸೂಕ್ಷ್ಮವಾಗಿ ತಿಳಿಸಿದೆ. ಆದ್ದರಿಂದ ಮನೆಯಲ್ಲಿನ ಧರ್ಮವಿರೋಧಿ ಶಕ್ತಿಗಳ ಬಗ್ಗೆ (ಅವರು ಅಂತಃಶತ್ರುಗಳು) ತುಂಬಾ ಎಚ್ಚರದಿಂದ ದೂರವಿರಬೇಕು.

೫. ಮೇಲ್ನೋಟಕ್ಕೆ ರಾಮನು ಬಲಿಪಶು. ಆದರೆ ರಾಮನ ಉದ್ದೇಶವಿದ್ದುದೇ ಅರಣ್ಯಕ್ಕೆ ಹೋಗಿ ರಾಕ್ಷಸರ ಸಂಹಾರ ಮಾಡುವುದು. ಅದನ್ನು ತಾಟಕಾವಧೆ, ಸುಬಾಹು ವಧೆ, ಮಾರೀಚನನ್ನು ದೂರ ಓಡಿಸುವ ಮೂಲಕ ಬಲಕಾರ್ಯ ತೋರಿಸಿದ ರಾಮನು, ಅರಣ್ಯಕ್ಕೆ ಹೋಗಲು ದುಃಖಿಸಲಿಲ್ಲ. ಸ್ಥಿತಪ್ರಜ್ಞನೊಬ್ಬ ನಿರ್ವಿಕಾರಿಯಾಗಿರಲು ಸಾಧ್ಯವಿರುವಾಗ ಅದನ್ನು ಕರುಣಿಸುವ ದೇವರು ನಿರ್ವಿಕಾರನಿರನೇ? ಬ್ರಹ್ಮಾಂಡಪತಿಗೆ ಅಯೋಧ್ಯಾಧಿಪತ್ಯ ತಪ್ಪಿದ್ದು ನಷ್ಟವೇ?

೬. ಸೀತೆ ಆದರ್ಶ ಮಹಿಳೆಯಾಗಿ ರಾಮನನ್ನು ಅನುಸರಿಸಿದರೆ, ಲಕ್ಷ್ಮಣ ಸೇವೆಗಾಗಿಯೇ ಅವತರಿಸಿದ್ದರಿಂದ ರಾಮನನ್ನೇ ಬೆನ್ನುಹತ್ತಿದ. ಅದನ್ನು ಸುಮಿತ್ರೆ ಅನುಮೋದಿಸಿ ಆದರ್ಶ ಮಾತೆಯಾದಳು.

೭. ರಾಮಕೃಷ್ಣಾದಿ ಅವತಾರಗಳು ಬಲ ಕಾರ್ಯಪ್ರದರ್ಶನಕ್ಕಾಗಿ. ದೈತ್ಯರ ಸಂಹಾರಕ್ಕಾಗಿ. ಅಂತೆಯೇ ರಾಮನು ಅರಣ್ಯದಲ್ಲಿದ್ದಾಗ, ಶೂರ್ಪಣಖಿ ಪ್ರಸಂಗವನ್ನು ನಿಮಿತ್ತವಾಗಿ, ಖರದೂಷಣ ಮೊದಲಾದ ೧೪೦೦೦ ರಾಕ್ಷಸರನ್ನೂ, ಸುಬಾಹುವನ್ನೂ ಸಂಹರಿಸಿ, ಮಾರೀಚನಿಗೆ ತನ್ನ ಬಾಣದ ರುಚಿ ತೋರಿಸಿ ಸಮುದ್ರಕ್ಕೆ ಎಸೆದ. ಅದು ರಾವಣನ ಸಾವಿಗೆ ಪ್ರಥಮ ಎಚ್ಚರಿಕೆ ಗಂಟೆಯಾಗಿ ಪರಿಣಮಿಸಿತು. ರಾವಣನ ಲಕ್ಷಾವಧಿ ಕೋಟಿ ರಾಕ್ಷಸರು ಹತರಾದರು.

೮. ರಾಮನ ಅರಣ್ಯ ಪ್ರಸ್ಥಾನ ತಿಳಿದ ಭರತ ಅದಕ್ಕೆ ಕಾರಣಳಾದ ತನ್ನ ತಾಯಿಯನ್ನು ಅಭಿನಂದಿಸದೆ ಧಿಕ್ಕರಿಸಿ ರಾಮನನ್ನೇ ಶರಣು ಹೋಗುತ್ತಾನೆ. ತಾಯಿಯ ಅಧಿಕಾರದಾಹ ಮಗನನ್ನೂ ಕಾಡಲಿಲ್ಲ. ಆದರೆ ರಾಮನು ಮುಂದಿಟ್ಟ ಹೆಜ್ಜೆ ಹಿಂದೆ ಇಡದೆ ಭರತನಿಗೆ ರಾಜ್ಯ ನಿರ್ವಹಿಸಲು ಉಪದೇಶಿಸಿ ಅವನ ಕೋರಿಕೆ ಮೇರೆಗೆ ತನ್ನ ಪಾದುಕೆಗಳನ್ನು ಕೊಡುತ್ತಾನೆ. ಭರತನು, ರಾಮನು ಬರುವವರೆಗೆ ಪಾದುಕೆಗಳನ್ನು ಸಿಂಹಾಸನದಲ್ಲಿರಿಸಿ, ಅಯೋಧ್ಯೆಯ ಹೊರವಲಯದ ನಂದಿಗ್ರಾಮದಲ್ಲಿದ್ದು ಜಟಾಜೂಟನಾಗಿ ಸಂನ್ಯಾಸಿಯಂತಿದ್ದು ರಾಜ್ಯ ನಿರ್ವಹಿಸಿದ. **'ತೇನ ತ್ಯಕ್ತೇನ ಭುಂಜೀಥಾಃ'** ಎಂಬ ಆರ್ಷ ಆದೇಶ ಇಲ್ಲಿದೆ (ಈಶಾ.ಉಪ).

೯. ಶೂರ್ಪಣಖಿಯು ಸ್ವಯಂ ವಿಧವೆ. ರಾಮನನ್ನು ಮೋಹಿಸಿ, ಅಯೋಗ್ಯವನ್ನು ಬಯಸಿ ಇದ್ದ ಅವಯವಗಳನ್ನೂ ಕಳೆದುಕೊಳ್ಳುತ್ತಾಳೆ. ಇಡೀ ರಾವಣನ ವಂಶ ನಾಶಕ್ಕೆ ಕಾರಣಳಾಗುತ್ತಾಳೆ. ದೇವರನ್ನು ಪತಿಯಾಗಿಸಿಕೊಳ್ಳುವ ಭಾಗ್ಯ ಲಕ್ಷ್ಮೀದೇವಿಗೆ ಮಾತ್ರ. ಉಳಿದ ದೇವಸ್ತ್ರೀಯರಿಗೂ ಇಲ್ಲದಿರುವಾಗ, ಶೂರ್ಪಣಖಿಗೆ ಹೇಗೆ ತಾನೇ ಸಿಕ್ಕೀತು? **'ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ'** ಎಂಬ ಪುರಾಣದ ಮಾತು ಇಲ್ಲಿ ಸತ್ಯವಾಗಿ ತೋರಿದೆ.

೧೦. ರಾವಣನು ತನ್ನ ತಂಗಿಯ ಬಗೆಗಿನ ದುಷ್ಟ ವ್ಯಾಮೋಹ, ರಾಮಸೀತೆಯರ ದ್ವೇಷದಲ್ಲಿ ಪರ್ಯಾವಸಾನವಾಗಿ, ಮಾರೀಚನನ್ನು ಪುಸಲಾಯಿಸಿ, ಅವನನ್ನು ಕೊಲ್ಲಿಸಲು ಕಾರಣನಾಗುತ್ತಾನೆ. ಪರಸ್ತ್ರೀ, ಋಷಿಸ್ತ್ರೀ, ದೇವಸ್ತ್ರೀ, ಅದರಲ್ಲೂ ಮಹಾಲಕ್ಷ್ಮಿಯನ್ನು ತನ್ನವಳನ್ನಾಗಿ ಬಯಸಿದ ಪರಿಣಾಮ, ತನ್ನ ಕುಲನಾಶಕ್ಕೆ ಕಾರಣವಾದೀತೆಂದು ತಿಳಿದೂ ತಿಳಿದೂ ರಾವಣ ಯತಿವೇಷ ಧರಿಸಿ ಸೀತೆಯನ್ನು ಅಪಹರಿಸಿದ. ತಾನೂ ನಾಶನಾಗಿ, ತನ್ನ ಕುಲವನ್ನೂ ನಾಶ ಮಾಡಿದ. ಇಂತಹ ಮಹಾ ಅತ್ಯಾಚಾರಕ್ಕೆ ಪ್ರಯತ್ನಿಸುದುದಕ್ಕೆ ಫಲ ಏನು? ಎಂಬುದು ಕಲಿಯುಗದಲ್ಲಿ ಇಂದಿಗೂ ಪ್ರಸ್ತುತವಾಗಿದೆ.

> **'ಪರದಾರಾದ್ಯಶಿಃ ಪ್ರೋಕ್ತಃ....... ಕಿಮು ವಿಷ್ಣೋಃ**
> **ತತೋ ಯೋಷಿತ್ ಸಂಗಸ್ಯ ವ್ಯತ್ಯಯಸ್ಥಿತೇಃ ।**
> **ನ ಸಮಂ ಪಾತಕಂ ಕ್ವಾಪಿ.. ತಸ್ಮಾತ್ತಂ ದೂರತಸ್ತ್ಯಜೇತ್ ॥**
> **ಅಧೋಽಧೋ ದುಃಖಬಹುಲಂ ವಿಷ್ಣುದಾರಾಭಿಮರ್ಶನಾತ್ ॥**
> **ಇತಿ ಧರ್ಮತತ್ತ್ವೇ (ಭಾಗ.ತಾ. XI-೧೪-೨೯, ೩೯)**

ಆದ್ದರಿಂದಲೇ 'ರಾವಣವತ್ ನ ವರ್ತಿತವ್ಯಂ, ರಾಮವತ್ ವರ್ತಿತವ್ಯಂ' ಎಂಬ ಸಂಸ್ಕೃತದ ನಾಣ್ಣುಡಿ – ರಾವಣನಂತೆ ನಡೆಯದಿರು, ರಾಮನಂತೆ ವರ್ತಿಸು' ಎಂಬುದು ಸರ್ವಕಾಲಕ್ಕೂ ಮಾನ್ಯವಾದುದು.

೧೧. ರಾಮನು ಸೀತೆಯನ್ನು ಅಪಹರಿಸಲಿಲ್ಲ. ಆಕೆಯಂತಿದ್ದ–ಸೀತೆಯೇ ಸೃಷ್ಟಿಮಾಡಿದ, ಇಂದ್ರನು ಇರುವ, ಸೀತಾಸನ್ನಿಧಾನವಿರುವ ಒಂದು ಆಕೃತಿಯನ್ನು

ಮಾತ್ರ ಅಪಹರಿಸಿದನೇ ಹೊರತು ನಿಜವಾದ ಸೀತೆಯನ್ನಲ್ಲ ಎಂಬುದು ಬ್ರಹ್ಮವೈವರ್ತ, ಮುಂತಾದ ಪುರಾಣಗಳಲ್ಲಿ ಬಂದಿದೆ. ಅದನ್ನು ಆಚಾರ್ಯರು ನಿರ್ಣಯಿಸಿ ತಿಳಿಸಿದ್ದಾರೆ. ಭಾರತದಲ್ಲಿ ಲೋಕದರ್ಶನ ಭಾಷೆಯಲ್ಲಿದೆ. ಆದ್ದರಿಂದ ಈ ವಿಷಯದ ಸೂಕ್ಷ್ಮತೆ ನಮಗೆ ತಿಳಿಯದು (ಭಾರತದಲ್ಲಿ ಗೊತ್ತಾಗುವುದಿಲ್ಲ).

೧೨. ರಾವಣನಿಗೆ ಜಟಾಯು ಪಕ್ಷಿ ಪ್ರತಿರೋಧ ಒಡ್ಡಿದ. ಸಾಧ್ಯವಾಗದೆ ಮಡಿದ. ಅದಕ್ಕೂ ಮುನ್ನ ತನ್ನ ಬಳಿಗೆ ಬಂದ ರಾಮನಿಗೆ ರಾವಣನು ಮಾಡಿದ ಅನ್ಯಾಯ ತಿಳಿಸಿ ಸೀತೆಯು ಎಲ್ಲಿದ್ದಾಳೆಂದೂ ತಿಳಿಸಿ, ತನ್ನ ಕರ್ತವ್ಯ ಮಾಡಿದ. ನಮ್ಮ ಕಣ್ಣಮುಂದೇ ಅನ್ಯಾಯ, ಅತ್ಯಾಚಾರ ನಡೆಯುತ್ತಿದ್ದಾಗ, ಮೂಕಪ್ರೇಕ್ಷಕರಾಗದೆ, ಯಥಾಶಕ್ತಿ ಪ್ರತಿಭಟಿಸಬೇಕೆಂಬ ನೀತಿ ಇಲ್ಲಿದೆ. ಅದು ಈಗಿನ ಕಲಿಯುಗದಲ್ಲಿ ಕಾಣಸಿಗದಿರುವುದು, ಅತ್ಯಾಚಾರಿಗೆ ಅನ್ಯಾಯ ಎಸಗಲು ಅನುಕೂಲವಾಗುತ್ತಿದೆ. ಜಟಾಯುವಿನ ಈ ಸೇವೆಗೆ ರಾಮನು ಮೆಚ್ಚಿ ಆತನಿಗೆ ಪಿತೃಕ್ರಿಯೆ ನಿರ್ವಹಿಸಿ ತಾನೇ ದಹನ ಮಾಡಿ ಸದ್ಗತಿ ಕರುಣಿಸಿದ. ಎಲ್ಲಿಯ ರಾಮ! ಎಲ್ಲಿಯ ಪಕ್ಷಿ! ಭಗವಂತನಿಗೆ ಎಲ್ಲ ಭಕ್ತರೂ ಒಂದೇ. ಅವರು ಮಾಡಿದ ಸೇವೆಯ ಅನಂತಪಟ್ಟು ಫಲ ಕೊಡುವುದು ಆತನ ಸ್ವಭಾವ. '**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ**'ದ ಉದಾಹರಣೆ ಇದು (ಗೀತಾ–೨/೪೭).

೧೩. ರಾಮ ಲಕ್ಷ್ಮಣರನ್ನು ತಿನ್ನಲು ಬಂದ ಕಬಂಧನನ್ನೂ ರಾಮನು ಅನುಗ್ರಹಿಸಿದ. ಆತನ ಶಾಪವಿಮೋಚನೆ ಮಾಡಿದ. ರಾಕ್ಷಸಜನ್ಮದಲ್ಲಿದ್ದರೂ ಅವರ ನಿಜವಾದ ಸ್ವಭಾವಕ್ಕೆ ಭಗವಂತನದು ನಿಸ್ಸೀಮ ಅನುಗ್ರಹ.

೧೪. ಸುಗ್ರೀವನು ರಾಮನಿಂದ ಉಪಕೃತನಾಗಿ ಕಪಿರಾಜನಾದ. ಆದರೆ ರಾಮನ ಉಪಕಾರ ಒಂದು ಕ್ಷಣ ಮರೆತ. ಆದರೆ ರಾಮನು, ಲಕ್ಷ್ಮಣ, ಹನುಮಂತರ ಮೂಲಕ ಎಚ್ಚರಿಸಿ ಅನುಗ್ರಹಿಸಿದ. ಈ ವಿಷಯ ಮಹಾಭಾರತದಲ್ಲಿಲ್ಲ. ಇಲ್ಲಿ ಸುಗ್ರೀವನು ಸೀತಾನ್ವೇಷಣೆಗಾಗಿ ಈಗಾಗಲೇ ಕಪಿಗಳನ್ನೆ ಕಳುಹಿಸಿರುವನೆಂದು ಲಕ್ಷ್ಮಣನಿಗೆ ತಿಳಿಸುತ್ತಾನೆ. ಬಹುಶಃ ಹನುಮಂತನಿಂದ ಪ್ರೇರಿತನಾಗಿ ಕಳುಹಿಸಿರುವನೆಂದು ಭಾವಿಸಬಹುದು. ಹೀಗೆ '**ಕಾಲವ್ಯತ್ಯಾಸ**'ಕ್ಕೆ ಇದು ಉದಾಹರಣೆಯಾಗಬಹುದು. **ಅಥವಾ ಈ ಪಾಠದ ಪ್ರಾಮಾಣಿಕತೆ ವಿಚಾರಣೀಯ ಎಂದು ಅನಿಸುತ್ತದೆ.**

೧೫. ಸೀತಾನ್ವೇಷಣೆಗಾಗಿ ಹೋದ ಹನುಮಂತನ ತಂಡ ಮಾತ್ರ ಯಶಸ್ವಿಯಾಗಿ ಹಿಂದಿರುಗಿ ಬಂದಿತು. '**ದೃಷ್ಟಾ ಸೀತಾ ಮಯಾ**' ಎಂಬ ಚುಟುಕಾದ ಅರ್ಥಪೂರ್ಣವಾದ ಹನುಮಂತನ ಮಾತು ರಾಮನನ್ನು ಸಂತೋಷಪಡಿಸಿತು. ಮಹತ್ಕಾರ್ಯ ಮಾಡಿ ಅದನ್ನು ಹೇಗೆ ನಿರೂಪಿಸುವುದೆಂದು ಹನುಮಂತನಿಂದ ತಿಳಿಯಬೇಕು. ಅನಂತ ವೇದಾಂತ ಶಾಸ್ತ್ರ ನಿರ್ಣಯ ಮಾಡಿದ ಆಚಾರ್ಯರು ಕೇವಲ ೩೨ ಶ್ಲೋಕಗಳಲ್ಲಿ ಅಣು ಭಾಷ್ಯ ರಚಿಸಿದಂತೆ ಇಡೀ ಸೀತಾನ್ವೇಷಣೆಯ ಫಲಶ್ರುತಿಯನ್ನು ಕೇವಲ ಮೂರು ಶಬ್ದಗಳಿಂದ ಹೇಳಿದ್ದು ಆಶ್ಚರ್ಯವೇನಲ್ಲ!!

(ವಾದಿರಾಜರು ಇದನ್ನು ಯುಕ್ತಿಯಲ್ಲಿಕೆಯ ಗುಣ ಸೌರದ ಆರಂಭದಲ್ಲಿಯೇ ಹೀಗೆ ನಿರೂಪಿಸಿದ್ದಾರೆ.

**ಚಿತ್ರಂ ಚೈತ್ರ ಭವಚ್ಚರಿತ್ರಮಧುನಾ ಯದ್ವೇದವಾರ್ಧಿಂ ತರನ್**
**ನಿತ್ಯಂ ಕೋಟಿ ಸಹಸ್ರಯೋಜನಮಪಿ ತ್ವಂ ರಾಜವದ್ ರಾಜಸೇ ॥**

ಅನಂತ ಸಾಧಕ ಜೀವರಿದ್ದಾರೆ ಅವರಲ್ಲಿ ಅತ್ಯುತ್ತಮ ಜೀವಿ ಹನುಮಂತ ಎಂಬ ಸಂದೇಶ ಇಲ್ಲಿದೆ.

೧೬. ಸೀತಾ ಮಾತೆಗೆ ರಾಮನ ಮಾತುಗಳನ್ನು ಮುಟ್ಟಿಸಿ ಸೀತಾಪಹರಣದ ಭಾವಿ ಫಲಿತಾಂಶದ ರುಚಿಯನ್ನು ರಾವಣನಿಗೆ ತೋರಿಸಿ, ಲಂಕೆ ದಹಿಸಿ, ಅಕ್ಷಕುಮಾರಾದಿಗಳನ್ನು ಸಂಹರಿಸಿದ ಹನುಮಂತನ ಸಾಹಸಗಾಥೆ ದೇವರ ಸೇವೆಯನ್ನು ಹೇಗೆ ಮಾಡಬೇಕೆಂಬುದಕ್ಕೆ ಅತ್ಯುತ್ತಮ ಉದಾಹರಣೆ.

೧೭. ಸೀತೆಗೆ ರಾವಣನ ಲಂಕೆಯಲ್ಲಿ ಬೆಂಬಲ ಕೊಟ್ಟವರು ಒಬ್ಬ **ಅವಿಂಧ್ಯನೆಂಬ ವೃದ್ಧ ರಾಕ್ಷಸ** ಹಾಗೂ **ಒಬ್ಬ ಮಹಿಳಾ ರಾಕ್ಷಸಿ ತ್ರಿಜಟೆ** (ಅಧ್ಯಾಯ ೨೮೧) ಹೀಗೆ ಸಚ್ಚಾರಿತ್ರ್ಯವಿದ್ದೆಡೆ ಬೆಂಬಲ ಇದ್ದೇ ಇರುತ್ತದೆ, ಅದು ಎಷ್ಟೇ ಅಲ್ಪವಾದರೂ. ಅಂತೆಯೇ ಇವರನ್ನು ರಾಮ ಸೀತೆಯರು ಸನ್ಮಾನಿಸುತ್ತಾರೆ. ಮುಂದೆ ತ್ರಿಜಟೆ ಕೃಷ್ಣನ ಸಹೋದರಿಯಾಗಿ ಸುಭದ್ರೆಯಾಗಿ ಅವತರಿಸುತ್ತಾಳೆ. ದೇವರ ಸೇವೆ ಎಂದೂ ವ್ಯರ್ಥವಾಗದು.

೧೮. ಭಗವಂತನ ಪತ್ನಿಯನ್ನು ಕಾಮಿಸಿದ ಅಣ್ಣನ ನಡೆ, ತಮ್ಮನಾದ ವಿಭೀಷಣನಿಗೆ ಸರಿ ಎನಿಸಲಿಲ್ಲ. ಸಾಕಷ್ಟು ಉಪದೇಶ ಮಾಡಿದ. ಕೇಳದಿದ್ದಾಗ ಅಣ್ಣನನ್ನೇ ತ್ಯಾಗ ಮಾಡಿ ಅಂತಹ ಪರಪತ್ನಿ ಕಾಮುಕನನ್ನು ತ್ಯಾಗ ಮಾಡುವುದೇ ಧರ್ಮವೆಂದು ಭಾವಿಸಿದ ನಿಜವಾದ ಅಣ್ಣನಾದ ರಾಮನನ್ನೇ (ಸಕಲ ಲೋಕಕ್ಕೂ ಅಣ್ಣನಾದ ಭ್ರಾತೃವಾದ) ಶರಣು ಹೊಂದಿದ. ಇದನ್ನು ಅರ್ಥ ಮಾಡಿಕೊಳ್ಳದ ಕಪಿಗಳು ಶರಣು ಹೊಕ್ಕರೂ ಬೇಡವೆಂದರು. ಸರ್ವಜ್ಞನಾದ ಹನುಮಂತನ ಅಭಿಪ್ರಾಯದಂತೆ ರಾಮನು ವಿಭೀಷಣನನ್ನು ತನ್ನ ಭಕ್ತನನ್ನಾಗಿ ಸ್ವೀಕರಿಸಿ ಲಂಕಾಧಿಪತ್ಯವನ್ನೂ ಮೊದಲೇ ಕೊಟ್ಟ. ಆಮೇಲೆಯೂ ಅಭಿಷೇಕ ಮಾಡಿದ. ಆದ್ದರಿಂದ ರಾವಣನಂಥ ಅಧರ್ಮಿ ಅಣ್ಣನನ್ನು ತ್ಯಾಗ ಮಾಡಿದರೆ ತಪ್ಪೇನಿಲ್ಲ. ಆದರೆ ರಾಮನನ್ನು ಮಾತ್ರ ಎಂದೂ ಬಿಡಬಾರದು.

೧೯. ರಾಮನು ನಲ ಎಂಬ ಕಪಿಯ ಮೂಲಕ ಸೇತುವೆ ನಿರ್ಮಿಸಿ ನಲನಿಗೆ ಕೀರ್ತಿ ಕೊಟ್ಟ. ಆ ಸೇತುವೆ ನಲ ಸೇತುವೆಯಾಯಿತು. ರಾಮ ಸೇತುವಾಗಿ ಸಕಲ ಪಾಪಹರವಾಯಿತು. ರಾಮನು ಅಂಗದನ ಮೂಲಕ ರಾವಣನಿಗೆ ಅಂತಿಮವಾಗಿ ಸೀತೆಯನ್ನು ವಾಪಸ್ಸು ಕಳಿಸಲು ದೌತ್ಯ ಮಾಡಿಸಿದ ರಾಜನೀತಿಜ್ಞನಾದ. ಆದರೆ ಪರಸೊತ್ತಿನಲ್ಲಿಯೇ ರತನಾದ ರಾವಣ ಅದರಿಂದ ಏನೂ ಕಲಿಯದೆ ಹಠಮಾರಿತನದಿಂದ ಯುದ್ಧಕ್ಕೆ ಬಂದ. ತಾನೂ ಸೇರಿ ಎಲ್ಲಾ ಬಂಧುಗಳೊಡನೆ ಹತನಾಗಿ ದುಷ್ಟಕಾಮನೆಯ ಫಲ ಏನೆಂದು ಜಗತ್ತಿಗೆ ತೋರಿಸಿಕೊಟ್ಟ. ರಾಮ

ರಾವಣರ ಯುದ್ಧದ ವರ್ಣನೆ ಮಹಾಭಾರತದಲ್ಲಿ ಸಂಕ್ಷಿಪ್ತವಾಗಿದೆ. ರಾಮರಾವಣರ ಯುದ್ಧಕ್ಕೆ ಬೇರೆ ಹೋಲಿಕೆ ಇಲ್ಲ ಎಂದು ವಾಲ್ಮೀಕಿ ರಾಮಾಯಣ ಹೇಳುತ್ತೆ.

**'ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ'** ಎಂದು.

**ಮಹಾಭಾರತವೂ ಹಾಗೆಯೇ ಹೇಳುತ್ತದೆ.**

**'ಅಲಬ್ಧೋಪಮಮನ್ಯತ್ರ ತಯೋರೇವ ತಥಾಭವತ್'** (ಅ. ೨೯೦-೨೦)

ಕುಂಭಕರ್ಣನನ್ನು ಲಕ್ಷ್ಮಣ ಕೊಂದನೆಂಬ **ವ್ಯತ್ಯಾಸ** ಇಲ್ಲಿದೆ. ಇದು ಪುರುಷ ವ್ಯತ್ಯಾಸಕ್ಕೆ ಉದಾಹರಣೆ **ಅಥವಾ ಸರಿಯಾದ ಭಾರತ ಪಾಠ ನಷ್ಟವಾಗಿದೆ** ಎಂದೂ ಹೇಳಬಹುದು. ಭಾರತದಲ್ಲಿನ ರಾಮಾಯಣದಲ್ಲಿ ಇನ್ನೂ ಅನೇಕ ರೀತಿಯಲ್ಲಿ ಕಥಾವ್ಯತ್ಯಾಸಗಳಿವೆ. ಅವುಗಳ ಅಧ್ಯಯನ ಪ್ರತ್ಯೇಕವಾಗಿಯೇ ಮಾಡಬೇಕು. ಆದರೆ ಇವೆಲ್ಲವುಗಳು ನಿರ್ಣಯ ಆಚಾರ್ಯರ ಮಹಾಭಾರತತಾತ್ಪರ್ಯನಿರ್ಣಯವೇ ಎಂಬುದನ್ನು ಮರೆಯಬಾರದು. ಸಾವಿರಾರು ಶ್ಲೋಕಗಳ ಯುದ್ಧಕಾಂಡ ಭಾರತದಲ್ಲಿ ಕೇವಲ ಸುಮಾರು ೨೦೦ ಶ್ಲೋಕಗಳಲ್ಲಿ ವ್ಯಾಸರು ಸಂಗ್ರಹಿಸಿಕೊಟ್ಟಿದ್ದಾರೆ. ವ್ಯಾಸರು ಸಂಕ್ಷೇಪದಲ್ಲಿಯೂ ಪೂರ್ಣರು.

೨೦. ಭಾಗವತ, ಬ್ರಹ್ಮ, ಕುಮಾರ, ಅಗ್ನಿ, ಪದ್ಮ, ಗರುಡ ಸ್ಕಂದ ಮೊದಲಾದ ಪುರಾಣಗಳಲ್ಲಿಯೂ ರಾಮಾಯಣದ ಕಥೆ ಬಂದಿದೆ. ಅವೆಲ್ಲರ ವ್ಯಾಪ್ತಿ ಬಗ್ಗೆ ಪ್ರತ್ಯೇಕ ಲೇಖನವೇ ಬೇಕಾಗುತ್ತದೆ.

ಶ್ರೀಮದಾಚಾರ್ಯರು ತಾತ್ಪರ್ಯ ನಿರ್ಣಯದಲ್ಲಿ ಮೂಲ ರಾಮಾಯಣ ಹಾಗೂ ಎಲ್ಲ ಪುರಾಣಗಳು, ವೇದ, ಭಾರತಾದಿಗಳನ್ನು ಆಧರಿಸಿ ೬೫೭ ಶ್ಲೋಕಗಳಲ್ಲಿ ಅಧ್ಯಾಯ ೩ ರ ಕೊನೆಯಿಂದ ೯ ಅಧ್ಯಾಯದವರೆಗೆ ರಾಮಾಯಣದ ಕೆನೆಕೆನೆ ಪದರುಗಳನ್ನು ಸಂಗ್ರಹಿಸಿ ರಾಮಾಯಣದ ಪೂರ್ಣಚಿತ್ರಣ ಕೊಟ್ಟಿದ್ದಾರೆ. ಅದರಲ್ಲಿ ಇಲ್ಲದ್ದು ಏನೂ ಇಲ್ಲ. ಪೂರ್ಣಪ್ರಜ್ಞರಿಂದ, ಪೂರ್ಣನಾದ ರಾಮ ಚರಿತೆಯ ಅನಂತ ಪ್ರಮೇಯಗಳು ನಿರೂಪಿತವಾಗಿವೆ. ಅದನ್ನು ತಿಳಿಯುವ ಮನಸ್ಸು ನೋಡುವ ಕಣ್ಣುಗಳನ್ನು ಅವರೇ ಅನುಗ್ರಹಿಸಬೇಕು.

೨೧ ರಾವಣನ ಹನನಾಂತರ ಸೀತಾಪರೀಕ್ಷೆಯೆಂಬ ಮತ್ತೊಂದು ವಿಶಿಷ್ಟ ಕಾರ್ಯದಿಂದ ಸೀತೆಯನ್ನು ಪರಿಶುದ್ಧಳೆಂದು ತೋರಿಸಿ, ದೇವತೆಗಳಿಂದ ಮನ್ನಿಸಿ, ದಶರಥನಿಂದಲೂ ಅನುಮತಿ ಪಡೆದು, ಶ್ರೀರಾಮನು ಪುಷ್ಪಕ ವಿಮಾನದಿಂದ ಕಿಷ್ಕಿಂಧೆ ಮೂಲಕ ಕಪಿಗಳನ್ನು ಅಲ್ಲಿಯೇ ಸಮ್ಮಾನಿಸಿ, ಬೀಳ್ಕೊಟ್ಟು, ಅಯೋಧ್ಯೆಗೆ ಬಂದು, ವಿನೀತ ಸಹೋದರ ಭರತನಿಂದ ರಾಜ್ಯವನ್ನು ಪಡೆದು ೧೧೦೦೦ ವರ್ಷಗಳವರೆಗೆ ಸುಖೀ ರಾಜ್ಯವನ್ನು ಕೊಟ್ಟ ಕೀರ್ತಿ ರಾಮನದು. ಆದ್ದರಿಂದ ಇಂದಿಗೂ ರಾಮರಾಜ್ಯದ ಕನಸನ್ನು ನಮ್ಮ ರಾಜಕಾರಣಿಗಳು ಕಾಣುತ್ತಿದ್ದಾರೆ. ರಾಮನ ಆದರ್ಶ ಪರಿಪಾಲಿಸದೆ ಅದು ಅಸಾಧ್ಯವೆಂದು ಅವರು ಅರಿತಿಲ್ಲವೆಂಬುದು ದುರಂತ. ಆದ್ದರಿಂದ ಭ್ರಷ್ಟಾಚಾರ ಅತ್ಯಾಚಾರಗಳು ತಾಂಡವವಾಡುತ್ತಿವೆ.

ಅಯೋಧ್ಯೆಗೆ ಬಂದ ರಾಮನು ಕೌಸಲ್ಯ ಸುಮಿತ್ರಾ ಕೈಕೇಯಿಯರನ್ನು ವಂದಿಸಿ ಸಹೋದರರಿಂದ ವಂದಿಸಿಕೊಂಡು ರಾಜ್ಯಾಭಿಷಿಕ್ತನಾಗಿ ಪ್ರಪಂಚವನ್ನೇ ಆಳುತ್ತಾನೆ. ೧೦ ಅಶ್ವಮೇಧಯಾಗ ಮಾಡುತ್ತಾನೆ. ಹನುಮಂತನ ಸೇವೆಯನ್ನು, ಸುಗ್ರೀವನ ಸೇವೆಯನ್ನು ಸ್ಮರಿಸಿ ಅವರನ್ನು ಸತ್ಕರಿಸಿ ವಿಭೀಷಣನಿಗೆ ಆತನ ಪುಷ್ಪಕವನ್ನು ವಾಪಸು ಕೊಟ್ಟು ಅಭಿನಂದಿಸುತ್ತಾನೆ. ಸುಗ್ರೀವ ಮೊದಲು ಉಪಕಾರ ಮರೆತ. ಆದರೆ ರಾಮನು ಎಲ್ಲ ಕಪಿಗಳ ಸೇವೆಯನ್ನು ಸ್ಮರಿಸಿ, ಅವರಿಗೆ ಸೂಕ್ತ ಬಹುಮಾನ ನೀಡಿ, ಹನುಮಂತನನ್ನು ವಿಶೇಷವಾಗಿ ಸತ್ಕರಿಸಿ, ಬ್ರಹ್ಮ ಪದವಿಯನ್ನೇ ಕೊಟ್ಟ. ಹೀಗೆ ರಾಮನು ಕೃತಜ್ಞತೆ ಎಂಬ ಗುಣದಲ್ಲೂ ಪೂರ್ಣತೆಯನ್ನು ಮೆರೆದಿದ್ದಾನೆ. ಅದು ಎಲ್ಲರಿಗೂ ದಾರಿದೀಪ–ಮಾರ್ಗದರ್ಶಿ.

ಹೀಗೆ ರಾಮಾಯಣದಲ್ಲಿ ರಾಮನು ಸೀತೆಯನ್ನು ಕಳೆದುಕೊಂಡಂತೆ ಜಗತ್ತಿಗೆ ತೋರಿಸಿ, ಅಂತಹ ಪ್ರಸಂಗದಲ್ಲಿ ಹೇಗೆ ವರ್ತಿಸಬೇಕೆಂದು ತೋರಿಸಿದ ಆದರ್ಶ ಪುರುಷ, ಮರ್ಯಾದಾಪುರುಷೋತ್ತಮ ಎಂದು ಮಾರ್ಕಂಡೇಯರು ಧರ್ಮರಾಜನಿಗೆ ಬೋಧಿಸಿ, ಧೈರ್ಯ ತುಂಬುತ್ತಾರೆ. ರಾಮನಿಗೆ ಕಪಿಗಳು ಸೇವೆ ಮಾಡಿದರು. ಧರ್ಮರಾಜನಿಗೂ ಭೀಮಾರ್ಜುನರಂತಹ ಸಹೋದರರೂ ಮತ್ತು ಪ್ರಪಂಚದಲ್ಲಿ ನೂರಾರು ರಾಜರೂ ಇದ್ದಾರೆ. ಅವರೆಲ್ಲ ಧರ್ಮರಾಜನ ಬೆಂಬಲಕ್ಕೆ ನಿಂತರು. ಹಾಗೆಯೇ ನಮಗೂ ಯಾರೂ ಸಹಾಯ ಮಾಡುವವರಿಲ್ಲವೆಂದು ಭಯಪಡದೆ ರಾಮನನ್ನು, ಹನುಮಂತಾದಿ ಆತನ ಕಪಿ ಪರಿವಾರ ದೇವತೆಗಳನ್ನು ಸ್ಮರಿಸಿ ಮುಂದುವರಿದರೆ ಕಳೆದುಕೊಂಡ ಜ್ಞಾನ ರೂಪ ಸೀತೆ ಎಲ್ಲರಿಗೂ ಸಿಗುವುದು ಖಚಿತ. ಇಂತಹ ರಾಮಾಯಣ, ರಾಮ, ಸೀತೆ, ಹನುಮದಾದಿ ಭಕ್ತರು ಎಲ್ಲರಿಗೂ ಆದರ್ಶ.

ಇತ್ಯಾದಿ ಇತ್ಯಾದಿ ಸಂದೇಶಗಳು ಇವೆ.

**'ರಾಮರಾಮೇತಿ ರಾಮೇತಿ ರಮೇ ರಾಮೇ ಮನೋರಮೇ ।**
**ಸಹಸ್ರನಾಮ ತತ್ತುಲ್ಯಂ ರಾಮ ನಾಮವರಾನನೇ' ॥** **ಪದ್ಮಪುರಾಣ**

ವಿ.ಸೂ.: ತತ್ತ್ವಸಂಶೋಧನಸಂಸತ್ ಪಲಿಮಾರುಮಠ, ಉಡುಪಿ ಇವರಿಂದ ಪ್ರಕಾಶಿತ ಮಹಾಭಾರತ ವನಪರ್ವ ಭಾಗ–೩ ಅಧ್ಯಾಯ ೨೭೩ ಶ್ಲೋಕ ೧೩ಕ್ಕೆ ಲಕ್ಷಾಲಂಕಾರ ಹೀಗಿದೆ.

'ಸೋಽಭಿಪತ್ಯ ಮಹಾವೇಗಂ' ಇತ್ಯತ್ರ ಕುಂಭವತ್ ಕರ್ಣೌ ಯಸ್ಯೇತಿ ವ್ಯುತ್ಪತ್ತ್ಯಾ ಕುಂಬಕರ್ಣಪದೇನ ಅತಿಕಾಯಃ ಕಥ್ಯತೇ । ಅತ ಏವ 'ಬೃಹತ್ತನುಃ ಕುಂಭವದೇವಕರ್ಣೌ ಅಸ್ಯೇತ್ಯತೋ ನಾಮ ಚ ಕುಂಭಕರ್ಣ' ಇತ್ಯಾಹುಃ । (ಮ.ತಾ.ನಿ. ೮\೫೬) । ರಾಮಂ ವಿನಾ ಲಕ್ಷ್ಮಣಸ್ಯ ಘಾತಕತ್ವಾಯೋಗಾತ್ ಅಯಮೇವಾರ್ಥಃ । ಕುಂಭಕರ್ಣ ಪದಪ್ರಯೋಗಸ್ತು ರಾಮೇಣ ಕುಂಭಕರ್ಣವಧೋಽಪಿ ಕೃತ ಇತಿ ಸೂಚಯಿತುಮ್ ।

•••••

# ಪತಿವ್ರತಾಮಾಹಾತ್ಮ್ಯಪರ್ವ

## ೫೩. ಸಾವಿತ್ರೀ ಉಪಾಖ್ಯಾನ

ರಾಮೋಪಾಖ್ಯಾನವನ್ನು ಕೇಳಿದ ಯುಧಿಷ್ಠಿರನು ದುಃಖವನ್ನು ದೈನ್ಯತೆಯನ್ನು ಬಿಟ್ಟವನಾಗಿ ಮತ್ತೆ ಮಾರ್ಕಂಡೇಯರನ್ನು ಕುರಿತು ಹೀಗೆ ನುಡಿದ.

'ಮುನಿಗಳೇ! ನಾನು ರಾಜ್ಯ ಕಳೆದುಕೊಂಡದಕ್ಕಾಗಿ ಮತ್ತು ರಾಜಕುಮಾರರಂತೆ ಇರಬೇಕಾದ ಸೋದರರ ಈ ಪರಿಸ್ಥಿತಿಗಾಗಿ ದುಃಖಪಡುವುದಿಲ್ಲ. [೧]ದುಷ್ಟರಾದ ದುರ್ಯೋಧನ ದುಶಾಸನಾದಿ ದುರಾತ್ಮರಿಂದ ದ್ಯೂತದಲ್ಲಿ ವನದಲ್ಲಿ ಜಯದ್ರಥನಿಂದ ಕ್ಲೇಶಕ್ಕೊಳಗಾದ ದ್ರುಪದ ಮಹಾರಾಜನ ಕುವರಿಯಾದ ದ್ರೌಪದಿಯ ಬಗ್ಗೆ ನನಗೆ ಬಹಳ ದುಃಖವಾಗುತ್ತದೆ. ವಸ್ತು ಸ್ಥಿತಿಯನ್ನು ಗಮನಿಸಿದಾಗ ನಾವೆಲ್ಲ ಕೃಷ್ಣೆಯಿಂದ (ದ್ರೌಪದಿಯಿಂದ) ರಕ್ಷಿಸಲ್ಪಟ್ಟಿದ್ದೇವೆ. ಈ ಹಿನ್ನೆಲೆಯಲ್ಲಿ ಇಂತಹ ಮಹಾಭಾಗ್ಯವಂತಳಾದ ದ್ರೌಪದಿಯಂಥ ಪತಿವ್ರತಾ ಸ್ತ್ರೀಯನ್ನು ತಾವು ನೋಡಿದ್ದೀರಾ ಕೇಳಿದ್ದೀರಾ?

ಅದಕ್ಕೆ ಮಾರ್ಕಂಡೇಯರು ರಾಜಕುವರಿಯಾದ ಕುಲಸ್ತ್ರೀಯರಲ್ಲಿ ಮಹಾಭಾಗ್ಯವಂತಳೆಂಬ ಸ್ಥಾನವನ್ನು ಸಾವಿತ್ರಿ ಹೇಗೆ ಪಡೆದಳೆಂಬುದನ್ನು ಕೇಳು, ಮಹಾರಾಜ, ಎಂದು ಉತ್ತರಿಸಿ ಆ ಮಹಾತ್ಮಳ ಚರಿತ್ರೆಯನ್ನು ಹೇಳಲಾರಂಭಿಸಿದರು.

[೨]ಮದ್ರದೇಶದಲ್ಲಿ ಪರಮಧಾರ್ಮಿಕನಾದ, ಮಹಾತ್ಮನಾದ, ಜಿತೇಂದ್ರಿಯನಾದ, ಯಜ್ಞಶೀಲನಾದ, ಪ್ರಜಾನುರಾಗಿಯಾದ, ಬ್ರಾಹ್ಮಣವತ್ಸಲನಾದ, ದಾನಶೀಲನಾದ, ಸರ್ವಭೂತ ಹಿತವನ್ನು ಬಯಸುವ (ಪ್ರಜೆಗಳು, ಪಶುಪಕ್ಷಿ ಎಲ್ಲ ಪ್ರಾಣಿಗಳು), ಕ್ಷಮಾಶೀಲನಾದ, **ಅಶ್ವಪತಿ** ಎಂಬ ರಾಜನಿದ್ದನು. ಆತನು ವಯಸ್ಸಾದರೂ ಸಂತಾನ ಹೀನನಾಗಿದ್ದನು. ಅಂತೆಯೇ ದುಃಖಿತನಾದನು. ಅದಕ್ಕೋಸ್ಕರ ತೀವ್ರವಾದ ವ್ರತೋಪಾವಾಸಗಳನ್ನು ಆರಂಭಿಸಿದನು. ಕನಿಷ್ಠ ಆಹಾರ ಸೇವನೆ, ಭಗವಂತನಲ್ಲಿಯೇ

---

೧ ನಾತ್ಮಾನಮನುಶೋಚಾಮಿ ನೇಮಾನ್ ಭ್ರಾತ್ರ್ಯಾನ್ ಮಹಾಮುನೇ ।
ದ್ಯೂತೇ ದುರಾತ್ಮಭಿಃ ಕ್ಲಿಷ್ಟಾ ಕೃಷ್ಣಯಾ ತಾರಿತಾವಯಮ್ ।
ಜಯದ್ರಥೇನ ಚ ಪುನಃ । – ವನಪರ್ವ (೨೯೩/೧,೨)

೨ ಆಸೀನ್ಮದ್ರೇಷು ಧರ್ಮಾತ್ಮಾ... ಬ್ರಹ್ಮಣ್ಯಶ್ಚ ಮಹಾತ್ಮಾ ಚ ಸತ್ಯಸಂಧೋ ಜಿತೇಂದ್ರಿಯಃ । ೫
ಪಾರ್ಥಿವೋಽಶ್ವಪತಿರ್ನಾಮ... ಕ್ಷಮಾವಾನನಪತ್ಯಶ್ಚ । ೬

ಮನಸ್ಸು ಮೊದಲಾಗಿ ಎಲ್ಲ ಇಂದ್ರಿಯಗಳನ್ನು ಇಟ್ಟು ಸ್ತ್ರೀಭೋಗವನ್ನು ತ್ಯಜಿಸಿ, [೧]ನಿತ್ಯವೂ ಗಾಯತ್ರೀ ಮಂತ್ರದಿಂದ ಹೋಮ ಮಾಡುತ್ತಿದ್ದನು. ಆ ನಂತರವೇ ಮಿತಾಹಾರ ಸೇವಿಸುತ್ತಿದ್ದನು. [೨](ದಿನದ ಆರನೇ ಭಾಗದಲ್ಲಿ) ಹೀಗೆ ೧೮ ವರ್ಷ ಹೋಮಾದಿಗಳನ್ನು ಮಾಡಿದ ಮೇಲೆ ಸಾವಿತ್ರೀ ದೇವಿಯು (ಬ್ರಹ್ಮಪತ್ನಿ) ಸಂತುಷ್ಟಳಾಗಿ ರಾಜನಿಗೆ ಹೋಮಕುಂಡದಿಂದ ಪ್ರತ್ಯಕ್ಷಳಾಗಿ ರಾಜನನ್ನು ಕುರಿತು

'ರಾಜನ್ ನಿನ್ನ ಶುದ್ಧವಾದ ಇಂದ್ರಿಯ ನಿಗ್ರಹದಿಂದ ಕೂಡಿದ, ಪೂರ್ಣಭಕ್ತಿಯಿಂದ ಕೂಡಿದ ಈ ವ್ರತಾನುಷ್ಠಾನದಿಂದ ಸಂತುಷ್ಟಳಾಗಿದ್ದೇನೆ. ಧರ್ಮಾವಿರುದ್ಧವಾದ ಅಪೇಕ್ಷಿತವಾದ ವರವನ್ನು ಕೇಳು' ಎಂದು ನುಡಿದಳು.

ಆಗ ರಾಜನು 'ಎಲೈ ದೇವಿಯೆ! ನಾನು ಸಂತಾನಕ್ಕಾಗಿ ಈ ವ್ರತವನ್ನು ಆರಂಭಿಸಿದ್ದೇನೆ. ನನ್ನ ಕುಲ ಬೆಳಗಿಸುವ ಬಹಳ ಪುತ್ರ ಸಂತಾನ ಬೇಕು. ಒಂದು ವೇಳೆ ನೀನು ನನ್ನ ತಪಸ್ಸಿಗೆ ಒಲಿದೆಯಾಗಿದ್ದರೆ ಬಹು ಪುತ್ರ ಸಂತಾನ ರೂಪ ವರವನ್ನು ನೀಡು. ಅದೇ ಮುಖ್ಯ ಧರ್ಮವೆಂದು ಬ್ರಾಹ್ಮಣರು ಹೇಳುತ್ತಾರೆ' ಎಂದು ಬೇಡಿದನು.

ಅದಕ್ಕೆ ಸಾವಿತ್ರೀ ದೇವಿಯು 'ನಿನ್ನ ಅಭಿಪ್ರಾಯವೇನೆಂದು ನನಗೆ ಮೊದಲೇ ತಿಳಿದು ಬ್ರಹ್ಮದೇವರಿಗೆ ನಾನು ತಿಳಿಸಿದ್ದೆ. ಅದಕ್ಕೆ ಬ್ರಹ್ಮದೇವರು ನಿನಗೆ ಮಹಾತೇಜಸ್ವಿಯಾದ ಒಬ್ಬ ಮಗಳು ಆಗುವಳೆಂದು ಹೇಳಿದ್ದಾರೆ. ಇದಕ್ಕೆ ವ್ಯತಿರಿಕ್ತವಾಗಿ ನೀನು ಮತ್ತೇನನ್ನೂ ಹೇಳಕೂಡದು'. ಎಂದಳು. ರಾಜನು ಹಾಗೆಯೇ ಆಗಲೆಂದು ಆ ವರಾನುಗ್ರಹವನ್ನು ಸ್ವೀಕರಿಸಿದನು. ಸಾವಿತ್ರೀ ದೇವಿಯು ಹೀಗೆ ವರವನ್ನಿತ್ತು ತನ್ನ ಲೋಕಕ್ಕೆ ಹೋಗಲು ರಾಜನು ತನ್ನ ಅರಮನೆಗೆ ಹಿಂದಿರುಗಿ ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತಿದ್ದನು.

ಸ್ವಲ್ಪಕಾಲದ ನಂತರ ರಾಜನ ಧರ್ಮಿಷ್ಠಳಾದ ಹಿರಿಯ ಪತ್ನಿ (ಮಾಲವ ದೇಶದ ರಾಜನ ಮಗಳು) ಗರ್ಭವತಿಯಾದಳು. ಶುಕ್ಲ ಪಕ್ಷದ ಚಂದ್ರನಂತೆ ಗರ್ಭ ವೃದ್ಧಿಯಾಗಿ ಸೂಕ್ತ ಕಾಲದಲ್ಲಿ ಒಂದು ಹೆಣ್ಣು ಮಗುವನ್ನು ಆಕೆ ಪಡೆದಳು. ರಾಜನು [೩]ಸಾವಿತ್ರೀ

---

೧ ಅನಪತ್ಯೋತ್ಪಾದನಾರ್ಥಂ ಚ ತೀವ್ರನಿಯಮಮಾಸ್ಥಿತಃ ।
ಹುತ್ವಾ ಶತಸಹಸ್ರಂ ಚ ಸಾವಿತ್ರ್ಯಾ ರಾಜಸತ್ತಮಃ ॥ ೮
೨ ಷಷ್ಠೇ ಷಷ್ಠೇ ತದಾ ಕಾಲೇ ಬಭೂವ ಮಿತಭೋಜನಃ । ೯
ಪೂರ್ಣೇ ತ್ವಷ್ಟಾದಶೇ ವರ್ಷೇ ಸಾವಿತ್ರೀ ತುಷ್ಟಿಮಭ್ಯಗಾತ್ ॥ ೧೦
ಅಗ್ನಿಹೋತ್ರಾತ್ ಸಮುತ್ಥಾಯ.. ಜ್ಞಾತ್ವಾಪುತ್ರಾರ್ಥಮುಕ್ತೋ ವೈ ಭಗವಾಂಸ್ತೇ ಪಿತಾಮಹಃ ।
೧೧-೧೬
ಕನ್ಯಾ ತೇಜಸ್ವಿನೀ ಸೌಮ್ಯ ಕ್ಷಿಪ್ರಮೇವಭವಿಷ್ಯತಿ । – (೨೯೩/೮-೯,೧೭)
೩ ಸಾವಿತ್ರ್ಯಾ ಪ್ರೀತಯೇ ದತ್ತಾ ಸಾವಿತ್ರ್ಯಾ ಹುತಯಾ ಹ್ಯಪಿ ।
ಸಾವಿತ್ರೀತ್ಯೇವ ನಾಮಾಸ್ಯಾಶ್ಚಕ್ರುರ್ವಿಪ್ರಾಸ್ತಥಾ । –೨೯೩/೨೪
ನ ಕಶ್ಚಿತ್ ವರಯಾಮಾಸ ತೇಜಸಾ ಪ್ರತಿವಾರಿತಃ । ೨೯೩/೨೭

ಹೋಮದಿಂದ ಪ್ರೀತಳಾದ ಸಾವಿತ್ರೀ ದೇವಿಯ ಅನುಗ್ರಹದಿಂದ ಜನಿಸಿದ ಆ ಮಗುವಿಗೆ **ಸಾವಿತ್ರೀ** ಎಂದೇ ಬ್ರಾಹ್ಮಣರಿಂದ ನಾಮಕರಣ ಮಾಡಿಸಿದನು. ಆ ಮಗು ಲಕ್ಷ್ಮೀಯಂತೆ ಅರಮನೆಯಲ್ಲಿ ವೃದ್ಧಿ ಹೊಂದಿತು. ಮುಂದೆ ಯೌವ್ವನ ಸಂಪನ್ನಳೂ ಆದಳು. ಚಿನ್ನದ ಪುತ್ಥಳಿಯಂತೆ ಕಂಗೊಳಿಸುತ್ತಿದ್ದ ಆಕೆಯನ್ನು ನೋಡಿದ ಜನರು ದೇವಕನ್ಯೆ ಎಂದೇ ಭಾವಿಸಿದರು. ಕಮಲದ ಪತ್ರದಂತೆ ವಿಶಾಲವಾದ ಕಣ್ಣುಳ್ಳ, ತನ್ನ ತೇಜಸ್ಸಿಂದ ಬೆಳಗುತ್ತಿದ್ದ ಈ ಸಾವಿತ್ರಿಯನ್ನು ಯಾವ ರಾಜಕುಮಾರನೂ ಬೇಡಲು ಬರಲಿಲ್ಲ. ಆಕೆಯ ತೇಜಸ್ಸನ್ನು ನೋಡಿ ತಾವು ಆಕೆಯನ್ನು ಮದುವೆಯಾಗಲು ಅನರ್ಹರೆಂದೇ ಭಾವಿಸಿದ್ದರು.

ಹೀಗಿರುತ್ತಿರುವಾಗ ಒಂದು ಪರ್ವಕಾಲದಲ್ಲಿ ತಲೆ ಸ್ನಾನ (ಶಿರಸ್ನಾನ) ಮಾಡಿ, ಉಪವಾಸ ಮಾಡಿ, ಬ್ರಾಹ್ಮಣರ ಮೂಲಕ ದೇವತಾ ಹೋಮಾದಿಗಳನ್ನು ಮಾಡಿಸಿದಳು. ನಂತರ ತಾನು ಸೇವಿಸಿದ ದೇವತಾನುಗ್ರಹದಿಂದ ಕೂಡಿದ ಪ್ರಸಾದವನ್ನು ತೆಗೆದುಕೊಂಡು ಲಕ್ಷ್ಮಿಯಂತೆ ಕಾಣುತ್ತಿದ್ದ ಸಾವಿತ್ರಿಯ ತಂದೆಯ ಬಳಿಗೆ ಹೋಗಿ ಪಾದಗಳಿಗೆ ನಮಸ್ಕರಿಸಿ, ಪ್ರಸಾದವನ್ನು ಕೊಟ್ಟು ಕೈಮುಗಿದು ನಿಂತಳು. ದೇವತೆಯಂತೆ ರೂಪವುಳ್ಳ, ಯೌವನಸಂಪನ್ನಳಾದ ಮಗಳನ್ನು ನೋಡಿ ಯಾವ ರಾಜಕುಮಾರನೂ ಮಗಳನ್ನು ಕೇಳಲು ಬರದಿರುವುದನ್ನು ನೆನೆಯುತ್ತಾ ಬಹಳ ದುಃಖಿತನಾಗಿ ಹೀಗೆ ನುಡಿದನು.

[೧]'ಮಗಳೇ ನಿನ್ನ ವಿವಾಹ ಕಾಲ ಬಂದಿದೆ. ಆದರೆ ಯಾರೂ ನಿನ್ನನ್ನು ವರಿಸಲು ಮುಂದೆ ಬರುತ್ತಿಲ್ಲ. ಆದ್ದರಿಂದ ನೀನೇ ನಿನಗೆ ಸೂಕ್ತನಾದ ವರವನ್ನು ಆರಿಸಿಕೊಂಡು ಬಾ ನೀನು ವರಿಸುವ ವರನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡುವೆ'.

[೨]ಯೌವನಸ್ಥಳಾದ ಮಗಳನ್ನು ಮದುವೆ ಮಾಡದ ತಂದೆ, ಋತು ಕಾಲದಲ್ಲಿ ಸಮಾಗಮ ಮಾಡದ ಪತಿ, ವಿಧವೆಯಾದ ತಾಯಿಯನ್ನು ರಕ್ಷಿಸದ ಮಗ ಇವರೆಲ್ಲ ನಿಂದೆಗೆ ಗುರಿಯಾಗುತ್ತಾರೆ. ಆದ್ದರಿಂದ ನಿನ್ನನ್ನು ಸೂಕ್ತ ವರನಿಗೆ ವಿವಾಹ ಮಾಡದ ನಾನು ನಿಂದಿತನಾಗದಂತೆ ನೀನೇ ನಿನ್ನ ಪತಿಯನ್ನು ಹುಡುಕು. ನಾನು ದೋಷಿಯಾಗಬಾರದು.

---

೧ ಪುತ್ರೀ ಪ್ರದಾನಕಾಲಸ್ತೇ ನ ಚ ಕಶ್ಚಿತ್ ವೃಣೋತಿ ಮಾಮ್ ।
ಸ್ವಯಮನ್ವಿಚ್ಛ ಭರ್ತಾರಂ ಗುಣೈಃ ಸದೃಶಮಾತ್ಮನಃ ॥ – (೨೯೩/೨೪,೩೨)

೨ ಅಪ್ರದಾತಾ ಪಿತಾ ವಾಚ್ಯೋ ವಾಚ್ಯಶ್ಚಾನುಪಯನ್ ಪತಿಃ ।
ಮೃತೇರ್ಭರ್ತರಿ ಪುತ್ರಶ್ಚ ವಾಚ್ಯೋ ಮಾತುರರಕ್ಷಿತಾ ।
ದೇವತಾನಾಂ ಯಥಾವಾಚ್ಯೋ ನ ಭವೇಯಂ ತಥಾ ಕುರು ॥ – (೨೯೬/೩೬)
ಅಪ್ರದಾತಾ ಪಿತಾ ವಾಚ್ಯಃ ಇತ್ಯತ್ರ ವಾಚ್ಯಃ ನಿಂದ್ಯಃ ।
ಪಿತುಃ ಅನು ಅನಂತರಂ ಅಂಗೀಕೃತಭಾರ್ಯಾಯಾಮುದಾಸೀನಃ ॥
– ಲಕ್ಷಾಲಂಕಾರ(ಭಾಗ.೧; ಪು. ೩೩೦)

ಹೀಗೆ ಹೇಳಿ ರಾಜನು ಮಗಳೊಡನೆ ವೃದ್ಧ ಮಂತ್ರಿಗಳನ್ನು ಕಳಿಸಲು ಆಕೆ ತಂದೆಯನ್ನು ನಮಿಸಿ, ನಾಚಿಕೆಯಿಂದಲೇ ಹೊರಟಳು. ರಾಜರ್ಷಿಗಳ ರಮ್ಯವಾದ ತಪೋವನಗಳಿಗೆ ಹೋಗುತ್ತಾ ಅಲ್ಲಿದ್ದ ವೃದ್ಧರನ್ನು ನಮಸ್ಕರಿಸುತ್ತಾ ಪುಣ್ಯ ತೀರ್ಥಗಳನ್ನು ಸಂದರ್ಶಿಸುತ್ತಾ, ಅಲ್ಲಿ ಬ್ರಾಹ್ಮಣರಿಗೆ ಧನದಾನ ಮಾಡುತ್ತಾ ಸಂಚರಿಸಿದಳು.

ಇತ್ತ ಮದ್ರರಾಜನ ಅರಮನೆಗೆ ಕೆಲ ದಿನಗಳ ನಂತರ ನಾರದರು ಬಂದು ಮಾತನಾಡುತ್ತಿರುವಾಗ ಸಾವಿತ್ರಿಯು ತೀರ್ಥ ಕ್ಷೇತ್ರಗಳಿಗೆ ಹೋಗಿ ವಾಪಸು ಬಂದು ನಾರದರಿಂದ ಕೂಡಿದ ತಂದೆಯನ್ನು, ನಾರದರನ್ನೂ ಶಿರಸಾ ಅವರ ಪಾದಗಳಿಗೆ ವಂದಿಸಿದಳು.

ಆಗ ನಾರದರು ರಾಜನನ್ನು ನಿನ್ನ ಮಗಳು ಎಲ್ಲಿಂದ ಬಂದಳು. ಪ್ರೌಢೆಯಾದ ಈಕೆಯ ವಿವಾಹವನ್ನು ಏಕೆ ಮಾಡಿಲ್ಲ? ಎಂದು ಕೇಳಿದರು.

ಅದಕ್ಕೆ ರಾಜನು ಇದಕ್ಕೋಸ್ಕರವೇ ವರಾನ್ವೇಷಣೆಗಾಗಿಯೇ ಮಗಳನ್ನು ಕಳಿಸಿದ್ದೆ. ಮಗಳೇ ನೀನು ಯಾರನ್ನು ವರಿಸಿ ಬಂದೆ? ಈ ವಿಷಯವನ್ನು ವಿಸ್ತಾರವಾಗಿ ಹೇಳು ಎಂದನು.

ಅದಕ್ಕೆ ಸಾವಿತ್ರಿಯು '**ಶಾಲ್ವ** ದೇಶದ ರಾಜ **ದ್ಯುಮತ್ಸೇನ** ತುಂಬಾ ಧರ್ಮಾತ್ಮ. ಆತನು ದುರ್ದೈವ ವಶಾತ್ ಅಂಧನಾದನು. ಆತನ ಮಗನು ಬಾಲಕ [1]ಹೀಗಿರುವಾಗ ರಾಜನ ಹಿಂದಿನ ಶತ್ರುವೊಬ್ಬನು **ಪ್ರಧಾನಿಯೇ ದ್ಯುಮತ್ಸೇನ** ರಾಜ್ಯವನ್ನು ದಂಡೆತ್ತಿ ಬಂದು ಅಪಹರಿಸಿದ. ಪರಿಣಾಮವಾಗಿ ದ್ಯುಮತ್ಸೇನ ಪತೀ ಪುತ್ರ ಸಮೇತನಾಗಿ ಅರಣ್ಯ ಸೇರಿ ಅಲ್ಲಿಯೇ ತಪಸ್ಸನ್ನು ಮಾಡುತ್ತಿದ್ದಾನೆ. ಅವನ ಮಗನೇ **ಸತ್ಯವಾನ್** ನನಗೆ ಅನುರೂಪ ವರವೆಂದು ನಾನು ಮನಸಾ ವರಿಸಿದ್ದೇನೆ ಎಂದು ಹೇಳಿದಳು.

ಆಗ ನಾರದರು [2]ಅಯ್ಯೋ! ಗುಣವಂತನಾದ ಸತ್ಯವಾನ್‌ನನ್ನು ವರಿಸಿ ಸಾವಿತ್ರಿಯು ತಿಳಿಯದೆ ದೊಡ್ಡ ತಪ್ಪನ್ನೇ ಎಸಗಿದ್ದಾಳೆ. ಸತ್ಯವಾನ್‌ನ ತಂದೆ ಸತ್ಯವನ್ನೇ ನುಡಿಯುತ್ತಾನೆ. ತಾಯಿಯೂ ಹಾಗೆಯೇ. ಆದ್ದರಿಂದ ಮಗನಿಗೂ ಬ್ರಾಹ್ಮಣರು ಸತ್ಯವಂತನೆಂದೇ ನಾಮಕರಣ ಮಾಡಿದ್ದಾರೆ. ಸತ್ಯವಾನ್ ಬಾಲಕನಾಗಿದ್ದಾಗ ಕುದುರೆಗಳನ್ನು ಬಹಳವಾಗಿ ಪ್ರೀತಿಸುತ್ತಿದ್ದ ಮಣ್ಣಿನ ಕುದುರೆಗಳನ್ನು ಮಾಡುತ್ತಿದ್ದ. ಚಿತ್ರಗಳಲ್ಲಿಯೂ ಕುದುರೆಗಳನ್ನು ಬರೆಯುತ್ತಿದ್ದ ಆದ್ದರಿಂದ ಸತ್ಯವಾನ್‌ನನ್ನು **ಚಿತ್ರಾಶ್ವ** ಎಂದೂ ಕರೆಯುತ್ತಿದ್ದರು ಎಂದರು.

---

೧ ಸಾಮಂತೇನ (ಸಾಮಿಪ್ಯೇನ) ಹೃತಂ ರಾಜ್ಯಂ ಛಿದ್ರೇಽಸ್ಮಿನ್ ಪೂರ್ವವೈರಿಣಾ । ಸಾಮಂತೇನ ಹೃತಮಿತ್ಯತ, ಸಾಮಂತಃ ಪ್ರಧಾನೀ । ಛಿದ್ರಂ ಅಂಧತ್ವಂ ಪೂರ್ವವೈರಂ ಜನ್ಮಾಂತರವೈರಂ ವಾ ಚಕ್ಷುಷಿ ಸತಿ ಗೃಹೀತದಂಡಾದಿವೈರಂ ವಾ ।

೨ ಅಹೋ ಬತ ಮಹತ್ಪಾಪಂ ಸಾವಿತ್ರ್ಯಾ ನೃಪತೇ ಕೃತಮ್ ।
ಅಜಾನಂತ್ಯಾ ಯದನಯಾ ಗುಣವಾನ್ ಸತ್ಯವಾನ್ ವೃತಃ ॥ – (೨೯೪/೧೧)

ಆಗ ರಾಜನು ಕೇಳಿದನು, ನೃಪಾತ್ಮಜನಾದ ಸತ್ಯವಾನ್ ಈಗಲೂ ತೇಜಸ್ವಿಯೇ? ಬುದ್ಧಿವಂತನೇ? ಕ್ಷಮಾವಂತನೇ? ತಂದೆಯಲ್ಲಿ ಪ್ರೀತಿಯುಳ್ಳವನೇ ಅದಕ್ಕೆ ನಾರದರು 'ಸತ್ಯವಾನ್ ಸೂರ್ಯನಂತೆ, ಬುದ್ಧಿಯಲ್ಲಿ ಬೃಹಸ್ಪತಿ, ಶೂರನೂ ಹಾಗೂ ಕ್ಷಮಾವಂತನೂ ಆಗಿದ್ದಾನೆ'. ಎಂದರು.

ಮತ್ತೆ ರಾಜನು ರಾಜಪುತ್ರನು ಬ್ರಾಹ್ಮಣರಲ್ಲಿ ಗೌರವವುಳ್ಳವನೇ? ರೂಪವಂತನೇ? ಉದಾರಿಯೇ? ದಾನಶೀಲನೇ? ಪ್ರಿಯದರ್ಶನನೇ? ಎಂದನು ಅದಕ್ಕೆ ನಾರದರು 'ಸತ್ಯವಾನನು ಸತ್ಕರ್ಮಾನುಷ್ಠಾನದಲ್ಲಿ ತನ್ನ ಯೋಗ್ಯತೆಯಿಂದ'. ದಾನ ಮಾಡುವಲ್ಲಿ [1]ರಂತಿ ದೇವನಿಗೆ ಸಮನೂ ಸತ್ಯವಚನದಲ್ಲಿ ಶಿಬಿಯಂತೆಯೂ, ಯಯಾತಿಯಂತೆ ಉದಾರಿಯೂ, ಚಂದ್ರನಂತೆ ಆಹ್ಲಾದಕರ ರೂಪವುಳ್ಳವನೂ, ರೂಪದಲ್ಲಿ ಅಶ್ವಿನೀ ದೇವತೆಗಳಂತೆಯೂ, ಇಂದ್ರಿಯ ನಿಗ್ರಹವುಳ್ಳವನೂ, ಮೃದುಸ್ವಭಾವದವನೂ, ಶೂರನೂ, ಸ್ನೇಹಶೀಲನೂ, ಅಸೂಯಾರಹಿತನೂ, ಕಾಂತಿಮಂತನೂ, ಸದಾ ತ್ರಿಕರಣಶುದ್ಧಿಯುಳ್ಳವನೂ, ಮುಂತಾದ ಗುಣವುಳ್ಳವನೆಂದು ತಪಸ್ವಿಗಳು ಹೇಳುತ್ತಾರೆ' ಎಂದರು.

ಆಗ ರಾಜನು ಗುಣಗಳಲ್ಲದೇ ಸತ್ಯವಾನ್ ನ ದೋಷಗಳನ್ನು ಹೇಳಿರೆಂದು ಕೇಳಿದಾಗ ನಾರದರು ರಾಜನ್, ಅವನಲ್ಲಿ ಒಂದೇ ಒಂದು ದೋಷವು ಇದೆ. ಅದು ಎಲ್ಲ ಗುಣಗಳನ್ನು ಮೀರಿ ನಿಂತಿದೆ. [2]ಅವನು ಅಲ್ಪಾಯು. ಇಂದಿನಿಂದ ಅವನ ಆಯುಷ್ಯ ಒಂದೇ ವರ್ಷ. ನಂತರ ಅವನು ದೇಹ ಬಿಡುತ್ತಾನೆ. (ಸಾಯುತ್ತಾನೆ) ಎಂದರು.

ಇದನ್ನು ಕೇಳಿದ ಕೂಡಲೆ ರಾಜನು ಸಾವಿತ್ರಿಗೆ 'ಹೋಗು ಮಗಳೇ ಬೇರೊಬ್ಬ ವರನನ್ನು ಹುಡುಕಿ ತಾ. ಸತ್ಯವಂತನ ಒಂದೇ ದೋಷ ಎಲ್ಲ ಗುಣಗಳನ್ನು ನುಂಗುತ್ತಿದೆ' ಎಂದನು.

ಆಗ ಸಾವಿತ್ರಿಯು [3]ಮೇಲಿನಿಂದ ಕೆಳಗೆ ಬೀಳುವ ನೀರಿನ ಧಾರೆಯು ಒಮ್ಮೆ ಮಾತ್ರ (ಬಿದ್ದ ಮೇಲೆ ಮೇಲೆ ಆ ನೀರು ಮೇಲೆ ಹೋಗದು.) ಕನ್ಯಾದಾನವು ಒಮ್ಮೆಯೇ ನಡೆಯುವಂತಹುದು. (ಹಲವಾರು ಬಾರಿ ವಿವಾಹ ಮಾಡಲು ಆಗದು) ಯಾವುದೇ ವಸ್ತುವಿನ ದಾನವೂ ಒಮ್ಮೆ ಮಾತು ಕೊಟ್ಟ ಮೇಲೆ ಮುಗಿಯಿತು. ಹೀಗೆ ಇವೆಲ್ಲ ಒಮ್ಮೆ ಆಗುವಂತಹವು. ಪದೇ ಪದೇ ಬದಲಿಸುವುದು ಅನುಚಿತ– ಅಧರ್ಮ.

---

೧ ಸಾಂಕೃತೇ ರಂತಿದೇವಸ್ಯೇತ್ಯತ್ರ ಸಮ್ಯಕ್ಕೃತಿ ಸಂಕೃತಿಃ । ಸಂಕೃತಿ ಸಂಬಂಧೀ ಸಾಂಕೃತಿಃ । ತಸ್ಯ (ಲಕ್ಷಾಲಂಕಾರ.೧, ಪು. ೩೩೦)

೨ ಏಕೋ ದೋಷೋಽಸ್ತಿ ನಾನ್ಯೋಽಸ್ಯ ಸೋಽದ್ಯ ಪ್ರಭೃತಿ ಸತ್ಯವಾನ್ ।
ಸಂವತ್ಸರೇಣ ಕ್ಷೀಣಾಯುರ್ದೇಹನ್ಯಾಸಂ ಕರಿಷ್ಯತಿ ।
ಸಕೃದಂಭೋ ನಿಪತತಿ ಸಕೃತ್ಕನ್ಯಾ ಪ್ರದೀಯತೇ ॥ ಸಕೃದಾಹ ದದಾನೀತಿ ।

೩ ತೀಣ್ಯೇತಾನಿ ಸಕೃತ್ಸಕೃತ್ । – (೨೯೪/೨೩,೨೪)

[೧]ದೀರ್ಘಾಯುವಿರಲಿ, ಅಲ್ಪಾಯುವಿರಲಿ, ಸದ್ಗುಣಿ ಅಥವಾ ದುರ್ಗುಣಿ ಇರಲಿ, ನಾನು ಆತನನ್ನು ಪತಿಯೆಂದು ವರಿಸಿಯಾದ ಮೇಲೆ ಬೇರೆಯವರನ್ನು ವರಿಸೆ'. [೨](ಯಾವುದೇ ಕಾರ್ಯವು) ಮೊದಲು ಮನಸ್ಸಿನಿಂದ ನಿಶ್ಚಯಿಸಲ್ಪಡುತ್ತದೆ. ನಂತರ ಅದನ್ನೇ ಹೇಳುತ್ತಾರೆ. ಆಮೇಲೆ ಅದರ ಕಾರ್ಯಾಚರಣೆ ಮಾತ್ರ ಬಾಕಿಯೇ (ಹೊರತು ಮನಸ್ಸಿನಿಂದ ಸಂಕಲ್ಪಸಿದುದನ್ನು ಬದಲಾಯಿಸುವುದಲ್ಲ) (ನಾನು ಈಗಾಗಲೇ ಸತ್ಯವಾನ್‌ನನ್ನು ಪತಿಯೆಂದು ಮನಸಾ ವರಿಸಿ ತಮಗೆ ಹೇಳಿಯಾಗಿದೆ. ಉಳಿದುದು ವೈವಾಹಿಕ ಪ್ರಕ್ರಿಯೆ ಮಾತ್ರ) ಇದಕ್ಕೆ ನನ್ನ ಮನಸ್ಸೇ (ಸಾಕ್ಷಿ) ಪ್ರಮಾಣವಾಗಿದೆ.

[೩]ಸಾವಿತ್ರಿಯ ದೃಢ ನಿರ್ಧಾರದ ಮಾತನ್ನು ಆಲಿಸಿದ ನಾರದರು ನಿನ್ನ ಮಗಳ ವಿವಾಹವನ್ನು ಆಕೆಯ ಮನಸ್ಸಿನಂತೆ ನಡೆಸುವುದೇ ಸೂಕ್ತವೆನಿಸುತ್ತದೆ. ಎಂದರು. ರಾಜನಾದರೋ ಸಾವಿತ್ರಿಯ ದೃಢ ನಿರ್ಧಾರ, ಪೂಜ್ಯರಾದ ತಮ್ಮ ಆದೇಶಗಳನ್ನು ನಾನು ಪಾಲಿಸುತ್ತೇನೆ. ತಾವು ಎಷ್ಟೆಂದರೂ ನಮಗೆ ಗುರುಗಳೆಂದನು.

[೪]ಸಾವಿತ್ರಿಯ ವಿವಾಹವು ನಿರ್ವಿಘ್ನವಾಗಿ ನೆರವೇರಲಿ ನಿಮಗೆ ಮಂಗಳವಾಗಲಿ. ನಾನು ಹೋಗಿ ಬರುವೆ ಎಂದು ಸ್ವರ್ಗಕ್ಕೆ ಅಲ್ಲಿಂದಲೇ ಆಕಾಶ ಮೂಲಕ ತೆರಳಿದರು. ರಾಜನು ವಿವಾಹಕ್ಕೆ ಸಿದ್ಧತೆಯನ್ನು ಮಾಡಲು ಉದ್ಯುಕ್ತನಾದನು.

**ಅಶ್ವಪತಿರಾಜನು** ಸಾವಿತ್ರೀ ವಿವಾಹಕ್ಕೋಸ್ಕರ ವಿವಾಹ ಸಮಾರಂಭಕ್ಕಾಗಿ ಎಲ್ಲ ದ್ರವ್ಯಗಳನ್ನು ಸಿದ್ಧಗೊಳಿಸಿ, ವೃದ್ಧ ಬ್ರಾಹ್ಮಣರು, ಋತ್ವಿಜರು, ಪರೋಹಿತರೊಡನೆ ಒಂದು ಶುಭ ದಿನದಂದು ಸಾವಿತ್ರಿಯೊಡನೆ ಯಾನದಿಂದ **ಮೇಧಾರಣ್ಯಕ್ಕೆ** ಹೋಗಿ ಅಲ್ಲಿದ್ದ ದ್ಯುಮತ್ಸೇನರಾಜರ್ಷಿಯ ಆಶ್ರಮಕ್ಕೆ ನಡೆಯುತ್ತಲೇ ಹೋದನು. ಶಾಲವೃಕ್ಷವನ್ನು ಆಶ್ರಯಿಸಿ ದರ್ಭಾಸನದ ಮೇಲೆ ಕುಳಿತಿದ್ದ ಅಂಧರಾಜನನ್ನು ಅಶ್ವಪತಿಯು ನೋಡಿದನು. ದ್ಯುಮತ್ಸೇನನು ಬಂದ ಅತಿಥಿ ರಾಜನನ್ನು ಯಥೋಚಿತ ಸತ್ಕರಿಸಿದನು. ಬಂದ ಕಾರಣವನ್ನು ಕೇಳಿದನು. ಆಗ ಅಶ್ವಪತಿಯು ತನ್ನ ಮಗಳಾದ ಸಾವಿತ್ರಿಯನ್ನು ಸತ್ಯವಾನ್‌ನಿಗೆ ವಿವಾಹ ವಿಧಿಯಿಂದ ಪ್ರದಾನ ಮಾಡುವ ಅಭಿಲಾಷೆಯನ್ನು ನಿವೇದಿಸುತ್ತಾ ಸೊಸೆಯನ್ನಾಗಿ ಸ್ವೀಕರಿಸಲು ಕೋರಿದನು.

ಆಗ ದ್ಯುಮತ್ಸೇನನು ನಾವು ರಾಜ್ಯ ಭ್ರಷ್ಟರಾಗಿ ವನವಾಸದಲ್ಲಿದ್ದೇವೆ. ತಪಸ್ವಿಗಳಂತೆ ಬದುಕುವ ನಮ್ಮ ಆಶ್ರಮದಲ್ಲಿ ರಾಜಕುವರಿಯಾದ ನಿನ್ನ ಮಗಳು ಹೇಗೆ ತಾನೇ

---

೧ ದೀರ್ಘಾಯುರಥವಾಲ್ಪಾಯುಃ ಸಗುಣೋ ನಿರ್ಗುಣೋಽಪಿ ವಾ ।
ಸಕೃದ್ವೃತೋ ಮಯಾ ಭರ್ತಾ ನ ದ್ವಿತೀಯಂ ವೃಣೋಮ್ಯಹಮ್ ॥ – (೨೯೪/೨೭)

೨ ಮನಸಾ ನಿಶ್ಚಯಂ ಕೃತ್ವಾ ತತೋ ವಾಚಾಭಿಧೀಯತೇ ।
ಕ್ರಿಯತೇ ಕರ್ಮಣಾ ಪಶ್ಚಾತ್ ಪ್ರಮಾಣಂ ಮೇ ಮನಸ್ತತ ॥ – ೨೮

೩ ಪ್ರದಾನಮೇವ ತಸ್ಮಾನ್ಮೇ ರೋಚತೇ ದುಹಿತುಸ್ತವ ॥ – ೩೦

೪ ಅವಿಘ್ನಮಸ್ತು ಸಾವಿತ್ರ್ಯಾಃ ಪ್ರದಾನೇ ದುಹಿತುಸ್ತವ ।
ಸಾಧಯಿಷ್ಯಾಮ್ಯಹಂ ತಾವತ್ ಸರ್ವೇಷಾಂ ಭದ್ರಮಸ್ತು ವಃ ॥ – ೩೨

ವಾಸವಾಗಿರುವಳು? ಅದಕ್ಕೆ ಅಶ್ವಪತಿಯು ಸುಖದುಃಖಗಳು ಶಾಶ್ವತವಲ್ಲವೆಂದು ನಾನು ಹಾಗೂ ನನ್ನ ಮಗಳು ಅರಿತೇ ಈ ನಿಶ್ಚಯ ಮಾಡಿದ್ದೇವೆ. ನಮ್ಮ ಆಶೆಯನ್ನು ನೀವು ನಿರಾಕರಿಸಬೇಡಿ. ನಾನು ನಮಸ್ಕರಿಸಿ ಬೇಡುತ್ತೇನೆ. ನಮ್ಮ ಮಾತನ್ನು ತಿರಸ್ಕರಿಸಬೇಡಿ. ನಾವಿಬ್ಬರೂ ಪರಸ್ಪರ ಸಂಬಂಧಕ್ಕೆ ಯೋಗ್ಯರಾಗಿಯೇ ಇದ್ದೇವೆ. ನನ್ನ ಮಗಳನ್ನು ಸತ್ಯವಾನನ ಪತ್ನಿಯಾಗಿ ನಿನ್ನ ಸೊಸೆಯಾಗಿಯೂ ಸ್ವೀಕರಿಸುವುದು ಉಚಿತವೇ ಆಗಿದೆ.

ಇದಕ್ಕೆ ದ್ಯುಮತ್ಸೇನನು ನಾನು ಈ ಸಂಬಂಧವನ್ನು ಈ ಹಿಂದೆಯೇ ಬಯಸಿದ್ದೆ. ಆದರೆ ರಾಜ್ಯಭ್ರಷ್ಟನಾದ್ದರಿಂದ ಆ ವಿಚಾರ ಬಿಟ್ಟಿದ್ದೆ. ಈಗ ನೀನಾಗಿಯೇ ಅತಿಥಿಯಾಗಿ ಬಂದಿರುವೆ. ನಿನ್ನ ಇಚ್ಛೆಯಂತೆಯೇ ಆಗಲಿ ಎಂದನು.

ನಂತರ ಸುತ್ತಮುತ್ತಲ ಆಶ್ರಯ ವಾಸಿ ದ್ವಿಜರ ಸಮಕ್ಷಮ ಯಥಾವಿಧಿ ಇಬ್ಬರೂ ರಾಜರು ವಿವಾಹವನ್ನು ನೆರವೇರಿಸಿದರು. ಅಶ್ವಪತಿಯು ಮಗಳಿಗೆ ಯಥೋಚಿತವಾಗಿ ವಸ್ತ್ರದ್ರವ್ಯ ಉಡುಗೊರೆಗಳನ್ನು ಕೊಟ್ಟು ತನ್ನ ರಾಜ್ಯಕ್ಕೆ ತೆರಳಿದನು. ಸತ್ಯವಾನ್ ಸಾವಿತ್ರೀ ದಂಪತಿಗಳು ಪರಸ್ಪರ ಕೃತಾರ್ಥತಾ ಮನೋಭಾವದಿಂದ ಸಂತೋಷ ಹೊಂದಿದರು. ತಂದೆ ತನ್ನ ರಾಜ್ಯಕ್ಕೆ ವಾಪಸು ಹೋಗುತ್ತಿರಲು ಸಾವಿತ್ರಿಯು ಎಲ್ಲ ಆಭರಣಗಳನ್ನು ತೆಗೆದು ಕಾಷಾಯವರ್ಣದ ನಾರುಮಡಿಯನ್ನುಟ್ಟಳು. ಅತ್ತೆಯನ್ನು ಶಾರೀರಿಕ ಸೇವೆಯಿಂದಲೂ, ಮಾವನನ್ನು ದೇವತಾಭಾವ ಸತ್ಕಾರದಿಂದಲೂ, ಗಂಡನನ್ನು ಪ್ರಿಯ ಮಧುರ ಮಾತುಗಳಿಂದಲೂ, ರಹಸ್ಯದಲ್ಲಿಯೂ ಯೋಗ್ಯವಾಗಿ ಉಪಚರಿಸುತ್ತಿದ್ದಳು. ಎಲ್ಲ ಆಶ್ರಮವಾಸಿಗಳೊಡನೆ ಗೌರವದಿಂದ ವರ್ತಿಸುತ್ತಾ ಎಲ್ಲರ ಅಭಿಮಾನಕ್ಕೆ ಪಾತ್ರಳಾಗಿದ್ದಳು. ನಾರದರ ಮಾತು ಮಾತ್ರ ಆಕೆಯ ಮನಸ್ಸಿನಲ್ಲಿ ಹಗಲಿರುಳು ಕೊರೆಯುತ್ತಿತ್ತು. ಆದರೂ ಆ ಕೊರಗು ಯಾರಿಗೂ ತಿಳಿಯದಂತೆ ಎಲ್ಲರೊಂದಿಗೆ ವರ್ತಿಸುತ್ತಿದ್ದಳು.

## ಅತ್ತೆ ಮಾವಂದಿರ ಅನುಮತಿ ಪಡೆದು ಸಾವಿತ್ರಿಯು ವನಕ್ಕೆ ಹೋದುದು

ಎಲೈ ಧರ್ಮರಾಜನೇ! ಸತ್ಯವಾನ್ ಸಾವಿತ್ರೀ ದಂಪತಿಗಳು ತಮ್ಮ ದಾಂಪತ್ಯ ಜೀವನದ ಪ್ರಥಮ ವರ್ಷದ ಕೆಲವು ತಿಂಗಳುಗಳನ್ನು ಸುಖವಾಗಿ ಕಳೆದರು. ನಾರದರು ಹೇಳಿದ ಸತ್ಯವಾನನ ಮರಣ ಕಾಲವನ್ನು ಸಾವಿತ್ರಿಯು ನಿತ್ಯವೂ ಎಣಿಕೆ ಮಾಡುತ್ತಿದ್ದಳು. ಇನ್ನು ನಾಲ್ಕು ದಿನ ಮಾತ್ರ ಉಳಿದಿತ್ತು. ಆ ದಿನ ಬಂದ ಕೂಡಲು ಇನ್ನು ನನ್ನ ಪತಿಯ ಮರಣ ಕಾಲ ಸಮೀಪಿಸಿತೆಂದು ಬಗೆದ [೧]ಸಾವಿತ್ರಿಯು ತ್ರಿರಾತ್ರವೆಂಬ ಮೂರು ದಿನ ಉಪವಾಸ ವ್ರತವನ್ನು ಮರ (ವೃಕ್ಷ) ದಂತೆ ನಿಂತೇ ಆರಂಭಿಸಿದಳು. ಇದನ್ನು ಕೇಳಿದ ಮಾವ ದ್ಯುಮತ್ಸೇನನು ತುಂಬಾ ದುಃಖಿತನಾಗಿ ನುಡಿದ. ಅಶ್ವಪತಿರಾಜನ ಮಗಳೇ! ಅತ್ಯಂತ ಕಠಿಣವಾದ ಈ ಮೂರು ದಿನ ಉಪವಾಸ ವ್ರತವನ್ನು ಆರಂಭಿಸಿದ್ದೀಯೆ! ಅದಕ್ಕೆ ಸಾವಿತ್ರಿಯು

೧ ಚತುರ್ಥೇಽಹನಿ ಮರ್ತವ್ಯಂ ಇತಿ ಸಾ ಚಿಂತ್ಯ ಭಾಮಿನೀ ।
ವ್ರತಂ ತ್ರಿರಾತ್ರಮುದ್ದಿಶ್ಯ ದಿವಾರಾತ್ರಂ ಸ್ಥಿತಾಭವತ್ ॥ – (೨೯೬/೩)

[1]'ಅಪ್ಪ! ನನ್ನ ವ್ರತದ ಬಗ್ಗೆ ನೀನು ದುಃಖಿಸಬೇಡ ಇದನ್ನು ನಾನು ಮುಗಿಸುತ್ತೇನೆ. ಇದನ್ನು ಒಂದು ನಿರ್ದಿಷ್ಟ ಗುರಿಗೋಸ್ಕರ ಸಾಧಿಸಲು ಆರಂಭಿಸಿದ್ದು ದೃಢ ನಿಶ್ಚಯವೇ ಇದಕ್ಕೆ ಕಾರಣವಾಗಿದೆ' ಎಂದಳು ಸಾವಿತ್ರಿಯ ದೃಢವಾದ ನಿಲುವನ್ನು ಮಾವ ಮೆಚ್ಚಿದ. [2]ನಾನು ಇದನ್ನು ನಿಲ್ಲಿಸು ಎಂದು ಹೇಳಲಾರೆ. ಹೇಳಬಾರದು ಕೂಡಾ. ವ್ರತವನ್ನು ಪೂರ್ಣಗೊಳಿಸು ಎಂದು ನನ್ನ ಸ್ಥಾನದಲ್ಲಿದ್ದು ಹೇಳುವುದು ಸರಿ ಎಂದನು

ಅದರಂತೆ ಸಾವಿತ್ರೀ ಮೂರೂ ದಿನ ಉಪವಾಸ ಮುಗಿಸಿದಳು. ನಾಳೆ ತನ್ನ ಪತಿಯ ಮರಣ ಸನ್ನಿಹಿತವಾದುದರ ಪ್ರಜ್ಞೆ ಕಾಡುತ್ತಿತ್ತು. ನಾಲ್ಕನೇ ದಿನ ಬೆಳಿಗ್ಗೆ ಉದಯವಾಗಿ ಸೂರ್ಯ ಮೇಲ ಬಂದಿದ್ದ. ಅಂದು ಸಾವಿತ್ರಿ ಸ್ನಾನ ಮಾಡಿ ಶುಚಿಸ್ಮಿತಳಾಗಿ ಜ್ವಲಿಸುವ ಅಗ್ನಿಯಲ್ಲಿ ಹೋಮ ಮಾಡಿ ಆಶ್ರಮವಾಸಿ ಬ್ರಾಹ್ಮಣರನ್ನು ಅತ್ತೆ ಮಾವಂದಿರನ್ನು ನಮಿಸಿ ಅವರಿಂದ **ದೀರ್ಘ ಸುಮಂಗಲೀ ಭವ** ಎಂಬ ಆಶೀರ್ವಾದವನ್ನು ಪಡೆದಳು. ತಾನು ಪಡೆದ ಆಶೀರ್ವಾದ ಸತ್ಯವಾಗಲಿ ಎಂದು ಮನಸಾ ಚಿಂತಿಸುತ್ತಾ ಧ್ಯಾನಮಗ್ನಳಾದಳು. ನಾರದರು ಹೇಳಿದ ತನ್ನ ಪತಿಯ ಮರಣ ಕಾಲ ಮುಹೂರ್ತವನ್ನು ಮಾತ್ರ ದುಃಖದಿಂದ ಎದುರು ನೋಡುತ್ತಿದ್ದಳು. ಆಗ ಅತ್ತೆ ಮಾವಂದಿರು ಸಾವಿತ್ರಿಗೆ 'ನಿನ್ನ ಮನಸ್ಸಿನಂತೆ ವ್ರತಾನುಷ್ಠಾನ ಮುಗಿಯಿತು. ಇನ್ನು ಪಾರಣ ಮಾಡು, ಆಹಾರ ಸೇವಿಸು' ಎಂದರು. ಆಗ ಸಾವಿತ್ರಿಯು ಇಂದು ಸೂರ್ಯಾಸ್ತದ ನಂತರ ಆಹಾರ ಸೇವಿಸಲು ಸಂಕಲ್ಪಿಸಿದ್ದೇನೆ. ಆದ್ದರಿಂದ ಹಾಗೆಯೇ ಮಾಡುತ್ತೇನೆ ಎಂದಳು.

ಅದೇ ಹೊತ್ತಿಗೆ ಸತ್ಯವಾನ್ ಹೆಗಲಿಗೆ ಕೊಡಲಿಯನ್ನು ಹೊತ್ತು ವನಕ್ಕೆ ಹೋಗಲು ಉದ್ಯುಕ್ತನಾದಾಗ ಸಾವಿತ್ರಿಯು

'ನೀವು ಒಬ್ಬರೇ ಹೋಗಬೇಡಿ. ನಾನು ನಿಮ್ಮನ್ನು ಬಿಟ್ಟಿರಲಾರೆ. ನಾನೂ ನಿಮ್ಮೊಡನೆ ಬರುವೆ ಎಂದಳು'. ಆಗ ಸತ್ಯವಾನನು 'ಪ್ರಿಯೆ! ನೀನೆಂದೂ ವನಕ್ಕೆ ಹೋಗಿಲ್ಲ. ದಾರಿ ಕಷ್ಟಕರವಾಗಿದೆ. ಸಾಲದ್ದಕ್ಕೆ ನೀನು ವ್ರತೋಪವಾಸದಿಂದ ಕೃಶಳಾಗಿದ್ದೀ, ಕಾರಣ ನನ್ನೊಡನೆ ಹೇಗೆ ತಾನೇ ಬರುವೆ?' ಎಂದನು. ಆಗ ಸಾವಿತ್ರಿಯು 'ಉಪವಾಸದಿಂದ ನನಗೆ ಯಾವುದೇ ಆಯಾಸವಾಗಿಲ್ಲ. ನಿಮ್ಮೊಡನೆ ಬರಲು ಉತ್ಸುಕಳಾಗಿದ್ದೇನೆ. ದಯಮಾಡಿ ಬೇಡವೆನ್ನ ಬೇಡಿ' ಎಂದಳು. ಸತ್ಯವಾನನು ಆಕೆಯ ಉತ್ಸಾಹಕ್ಕೆ ಬೇಡ ಎನ್ನದೆ ತಂದೆ ತಾಯಿಗಳ ಅನುಮತಿ ಪಡೆಯಲು ಹೇಳಿದಾಗ ಸಾವಿತ್ರಿಯು ಅತ್ತೆಮಾವರಿಗೆ ನಮಿಸಿ 'ನನ್ನ ಪತಿಯು ವನಕ್ಕೆ ಸಮಿತ್ ದರ್ಭ, ಹಣ್ಣುಗಳನ್ನು ಅಗ್ನಿ ಹೋತ್ರಕ್ಕೋಸ್ಕರ ತರಲು ಹೋಗುತ್ತಿದ್ದಾರೆ. ನಾನು ಎಂದೂ ಪತಿಯೊಡನೆ

---

೧ ವ್ಯವಸಾಯಂ ಕೃತಂ ಹೀದಂ ವ್ಯವಸಾಯಶ್ಚ ಕಾರಣಮ್ । – (೨೯೬/೭)
೨ ವ್ರತಂ ಭಿಂಧೀತಿ ವಕ್ತುಂ ತ್ವಾಂ ನಾಸ್ಮಿ ಶಕ್ತಃ ಕಥಂಚನ ।
ಪಾರಯಸ್ವೇತಿ ವಚನಂ ಯುಕ್ತಮಸ್ಮದ್ವಿಧೋ ವದೇತ್ ॥ – (೨೯೬/೭)

ಹೋಗಿಲ್ಲ. ಅವರ ವಿರಹವನ್ನು ಇಂದು ನಾನು ತಡೆಯಲಾರೆ ಅರಣ್ಯದ ಗಿಡಮರಗಳ ಸೌಂದರ್ಯವನ್ನು ಸವಿಯಲು ಇಚ್ಚಿಸುತ್ತೇನೆ ದಯಮಾಡಿ ನನಗೆ ಅನುಮತಿ ನೀಡಿರಿ ಎಂದು ಕೋರಿದಳು.

ಆಗ ಅತ್ತೆ ಮಾವಂದಿರು[೧] ಆಕೆಯ ಮಾತಿನಲ್ಲಿನ ಸತ್ಯವನ್ನು ಗಮನಿಸಿ 'ಪತಿಯ ಸಂಗಡ ಹೋಗು. ಆದರೆ ಯಾವುದೇ ಪ್ರಮಾದ ಆಗದಂತೆ ಸತ್ಯವಾನನ ಕರ್ತವ್ಯಗಳಿಗೆ ಚ್ಯುತಿ ತರದಂತೆ ನಿನ್ನ ನಡೆ ಇರಲಿ' ಎಂಬ ಎಚ್ಚರಿಕೆಯೊಂದಿಗೆ ಅನುಮತಿ ನೀಡಿದರು. ಅತ್ತೆ ಮಾವಂದಿರಿಂದ ಅನುಮತಿ ಪಡೆದ ಸಾವಿತ್ರಿಯು ಗಂಡನೊಡನೆ ವನಕ್ಕೆ ಮೇಲ್ನೋಟಕ್ಕೆ ನಗುತ್ತಾ ಹೃದಯದಲ್ಲಿ ಮಾತ್ರ ದುಃಖ ತುಂಬಿಕೊಂಡೇ ಹೊರಟಳು. ದಾರಿಯಲ್ಲಿ ನದ ನದಿ ಹಾಗೂ ಚಿತ್ರವಿಚಿತ್ರವಾದ ವನಗಳನ್ನು, ಬೆಟ್ಟ ಗುಡ್ಡಗಳನ್ನು ಪತಿಯು ಸಾವಿತ್ರಿಗೆ ತೋರಿಸುತ್ತಾ ಹೋಗುತ್ತಿದ್ದ. [೨]ಆಕೆ ಮಾತ್ರ ನೋಡಲು ಹಸನ್ಮುಖಿಯಾಗಿದ್ದಳು. ಆದರೆ ಸತ್ಯವಾನ್‌ನ ಮುಖದಲ್ಲಿ, ನಡೆನುಡಿಗಳಲ್ಲಿ ಏನಾದರೂ ವ್ಯತ್ಯಾಸ ವಿಕಾರಗಳಾಗುತ್ತವೆಯೇ ಎಂದು ನಾರದರ ಮಾತುಗಳನ್ನು ನೆನಪಿಸಿಕೊಳ್ಳುತ್ತಾ ದುಗುಡದಿಂದಲೇ, ಗಂಡನ ಮರಣ ಇನ್ನೇನು ಬಂದೇ ಬಿಟ್ಟಿತೆಂದು ದುಃಖಿಸುತ್ತಾ, ಎರಡು ಮನಸ್ಸಿನಿಂದ ಮರಣ ಕಾಲವನ್ನು ಪ್ರತೀಕ್ಷೆ ಮಾಡುತ್ತಾ ಹೋಗುತ್ತಿದ್ದಳು.

ಸಾವಿತ್ರಿಯ ಸಹಾಯದೊಂದಿಗೆ ಸತ್ಯವಾನ್ ಕಾಡಿನಲ್ಲಿ ಹಣ್ಣು ಹಂಪಲುಗಳನ್ನು ಕಿತ್ತಿ ತಂದ. ನಂತರ ಕಟ್ಟಿಗೆಗಳನ್ನು ಕಡಿದು ಕಠಿಣವಾದ ಆ ಕೆಲಸವನ್ನೂ ಪೂರೈಸಿದ. ಕಟ್ಟಿಗೆಗಳನ್ನು ಕಡಿಯವಾಗ ಮೈ ಬೆವರಿತು. ತಲೆಶೂಲಿಯೂ ಆರಂಭವಾಯಿತು. ಅದನ್ನು ತಡೆಯದಾಗದೆ ಸಾವಿತ್ರಿ ಬಳಿಗೆ ಬಂದು "(ಕಟ್ಟಿಗೆ ಕಡಿದ)ಶ್ರಮದಿಂದ ತಲೆ ನೋವಾಗಿದೆ. ಮೈಕೈ ನೋವು ಹಾಗೂ ಹೃದಯದ ಬಡಿತ ತೀವ್ರವಾಗುತ್ತಿದೆ. ಸಾವಿತ್ರಿ ಶರೀರಾಯಾಸವಾಗಿದೆ. ಶೂಲಗಳಿಂಡ ತಲೆಗೆ ಹೊಡೆದಂತಾಗುತ್ತಿದೆ ಎಂದು ಅನಿಸುತ್ತಿದೆ, ನಿಲ್ಲಲೂ ಆಗುತ್ತಿಲ್ಲ, ಮಲಗಬೇಕೆನ್ನಿಸುತ್ತಿದೆ" ಎಂದಾಗ, ಸಾವಿತ್ರಿ ಪತಿಯ ಹತ್ತಿರ ಬಂದು ತನ್ನ ತೊಡೆಯ ಮೇಲೆ ಗಂಡನ ತಲೆಯನ್ನಿರಿಸಿಕೊಂಡು ನೆಲದ ಮೇಲೆ ಕುಳಿತಳು.

ನಂತರ ನಾರದರ ಮಾತನ್ನು ಸ್ಮರಿಸುತ್ತಾ ಗಂಡನ ಮರಣದಿನ–ಮುಹೂರ್ತ–ಕ್ಷಣದ ಸಮಯವನ್ನು ಚಿಂತಿಸುತ್ತಿದ್ದಳು. ಆ ಸಮಯಕ್ಕೆ ಸರಿಯಾಗಿ ಕೆಂಪು ವಸ್ತ್ರ ಧರಿಸಿದ, ಸೂರ್ಯನಂತಹ ತೇಜಸ್ಸುಳ್ಳ, ಕಿರೀಟ ಧರಿಸಿದ, ಕಪ್ಪುಬಣ್ಣದ, ಕೆಂಪು

---

೧ ಯತಃ ಪ್ರಭೃತಿ ಸಾವಿತ್ರೀ ಪಿತ್ರಾ ದತ್ತಾ ಸ್ನುಷಾ ಮಮ ।
ನಾನಯಾಭ್ಯರ್ಥನಾಯುಕ್ತಮುಕ್ತ ಪೂರ್ವಂಸ್ಮರಾಮ್ಯಹಂ ।
ಅಪ್ರಮಾದಶ್ಚ ಕರ್ತವ್ಯಃ ಪುತ್ರಿ ಸತ್ಯವತಃ ಪಥಿ ॥ – (೨೯೬–೨೭.೨೮)

೨ ನಿರೀಕ್ಷಮಾಣಾ ಭರ್ತಾರಂ ಸರ್ವಾವಸ್ಥಮನಿಂದಿತಾ ।
ಮೃತಮೇವ ಹಿ ಭರ್ತಾರಂ ಕಾಲೇ ಮುನಿವಚಃ ಸ್ಮರನ್ ।
ದ್ವಿಧೇವ ಹೃದಯಂ ಕೃತ್ವಾ ತಂ ಚ ಕಾಲಮಮೇಕ್ಷತೀ ॥ – (೨೯೬/೩೨.೩೩)

ಕಣ್ಣಿನ, ಕೈಯಲ್ಲಿ ಪಾಶ ಹಿಡಿದ, ಭಯ ಹುಟ್ಟಿಸುವ ಮಹಾಶರೀರಪುರುಷನನ್ನು ಸತ್ಯವಾನನ ಪಕ್ಕದಲ್ಲಿ ನಿಂತಿರುವುದನ್ನು ನೋಡಿದಳು. ಕೂಡಲೇ ಗಂಡನ ತಲೆಯನ್ನು ಮೆಲ್ಲಗೆ ಕೆಳಗಿಟ್ಟು ಎದ್ದು ನಿಂತು ಕೈ ಮುಗಿದಳು. ಮನಸ್ಸಿನಿಂದ ದುಃಖಿಸುತ್ತಾ ಆರ್ತಳಾದ ಸಾವಿತ್ರಿಯು, ಅಮಾನುಷವಾದ ಈ ಶರೀರ ನೋಡಿ ನೀವು ದೇವತೆ ಎಂದು ಭಾವಿಸಿ ದೇವೇಶನೇ! ನೀನಾರು? ಏನು ಮಾಡಲು ಇಲ್ಲಿಗೆ ಬಂದಿರುವೆ' ಎಂದು ಸಾವಿತ್ರಿಯು ಆ ವ್ಯಕ್ತಿಯನ್ನು ಕೇಳಲು, ಅವನು –

[೧]'ಸಾವಿತ್ರಿ! ನೀನು ಪತಿವ್ರತೆ ಇದ್ದೀಯಾ! ತಪಸ್ವಿಯೂ ಹೌದು. ಆದ್ದರಿಂದ ನಿನಗೆ ನಾನು ತಿಳಿಸುವೆ. ನಾನು ಯಮದೇವತೆ. ನಿನ್ನ ಪತಿಯ ಆಯುಷ್ಯ ಮುಗಿದಿದೆ. ಅವನನ್ನು ಪಾಶದಿಂದ ಕಟ್ಟಿ ಕರೆದುಕೊಂಡು ಹೋಗಲು ಬಂದಿರುವೆ' ಎಂದನು. ಅದಕ್ಕೆ ಸಾವಿತ್ರಿಯು 'ಮನುಷ್ಯರನ್ನು ಯಮದೂತರೇ ಬಂದು ಕರೆದುಕೊಂಡು ಹೋಗುತ್ತಾರೆಂದು ಕೇಳಿದ್ದೇನೆ. ನೀವು ಸ್ವತಃ ಏಕೆ ಬಂದಿರಿ? ಎಂದಳು. ಆಗ ಯಮನು [೨]'ನಿನ್ನ ಪತಿ ಸತ್ಯವಾನ್ ಧರ್ಮಿಷ್ಠ, ರೂಪವಂತ, ಗುಣಗಳಿಂದ ಸಮುದ್ರದಂತಿರುವ; ನನ್ನ ದೂತರು ಬಂದು ಕರೆದುಕೊಂಡು ಹೋಗಲು ಯೋಗ್ಯವಲ್ಲ. ಕಾರಣ ನಾನೇ ಬಂದಿದ್ದೇನೆ' ಎಂದನು.

ಹೀಗೆ ಹೇಳಿ ಸತ್ಯವಾನ್‌ನ ಶರೀರದಿಂದ ಆತನ ಪ್ರಾಣ ಅಂಗುಷ್ಠ ಗಾತ್ರ ಪುರುಷನನ್ನು ಬಲಾತ್ಕಾರವಾಗಿ ಎಳೆದನು. ಆಗ [೩]ಸತ್ಯವಂತನ ಉಸಿರಾಟ ನಿಂತಿತು. ಶರೀರ ತೇಜೋ ವಿಹೀನವಾಗಿ, ಅಂಗಾಗಗಳ ಚಟುವಟಿಕೆಗಳು ನಿಂತುಹೋಗಿ ನೋಡಲು ಚೆನ್ನಾಗಿ ಕಾಣದಾದನು (ಅಪ್ರಿಯದರ್ಶನ) ಮುಖದ ಕಳೆಯು ಹೋಯಿತು).

[೪]ದುಃಖದಿಂದ ಆರ್ತಳಾದ ಸಾವಿತ್ರಿಯು ಇಲ್ಲಿಯವರೆಗೆ ಮಾಡಿದ ವ್ರತದಿಂದ ಸಿದ್ಧಿ ಪಡೆದುದರಿಂದ ಯಮನ ಹಿಂದೆಯೇ ಹೊರಟಳು. ಸಾವಿತ್ರಿ ತನ್ನ ಹಿಂದೆ ಬರುತ್ತಿದ್ದುದ್ದನ್ನು ನೋಡಿದ ಯಮನು 'ಸಾವಿತ್ರಿ ವಾಪಸು ಹೋಗು ಗಂಡನ ಉತ್ತರ ಕ್ರಿಯೆಗಳನ್ನು ಮಾಡು. ಪತಿಯ ಮರಣದ ಪರ್ಯಂತ ನೀನು ಈಗಾಗಲೇ ಸೇವೆ ಮಾಡಿ ಋಣ ಮುಕ್ತಳಾಗಿದ್ದೀಯಾ. ನನ್ನ ಜೊತೆಗೆ ಎಲ್ಲಿಯವರೆಗೆ ಬರಬೇಕೋ ಅಲ್ಲಿಯವರೆಗೆ ಬಂದಿದ್ದೀಯಾ. ಸಾಕಿನ್ನು ಹೊರಡು'. ಎಂದನು.

---

೧ ಪತಿವ್ರತಾಸಿ ಸಾವಿತ್ರಿ ತಥೈವ ಚ ತಪೋಽನ್ವಿತಾ । – ೨೯೭/೧೨

೨ ಅಯಂ ಚ ಧರ್ಮಸಂಯುಕ್ತೋ ರೂಪವಾನ್ ಗುಣಸಾಗರಃ ।
ನಾರ್ಹೋಮತ್ಪುರುಷೈರ್ನೇತುಮತೋಽಸ್ಮಿ ಸ್ವಯಮಾಗತಃ ॥ – ೧೨-೧೬

೩ ಅಂಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್ ।
ನಿರ್ವಿಚೇಷ್ಟಂ ಶರೀರಂ ತದ್ ಬಭೂವಾಪ್ರಿಯದರ್ಶನಮ್ ॥ – ೧೮

೪ ಸಾವಿತ್ರೀ ಚೈವ ದುಃಖಾರ್ತಾ ಯಮಮೇವಾನ್ವಗಚ್ಛತ ।
ನಿಯಮವ್ರತಸಂಸಿದ್ಧಾ ಮಹಾಭಾಗಂ ಪತಿವ್ರತಾ ॥ – ೧೯

ಆಗ ಸಾಧ್ವಿ ಸಾವಿತ್ರಿಯು ಹೀಗೆ ಉತ್ತರಿಸಿದಳು.

[೧]'ನನ್ನ ಪತಿಯು ಎಲ್ಲಿಗೆ ಒಯ್ಯಲ್ಪಡುತ್ತಾನೋ, ಅಥವಾ ಆತನೇ ಎಲ್ಲಿಗೆ ಹೋಗುತ್ತಾನೋ ನಾನೂ ಅವನೊಡನೆ ಹೋಗುವುದೇ ಸನಾತನ ಧರ್ಮ. ತಪಸ್ಸಿನಿಂದ, ಗುರುಭಕ್ತಿಯಿಂದ (ತಂದೆ ತಾಯಿ-ಅತ್ತೆಮಾವ), ಗಂಡನ ಮೇಲೆ ಇರುವ ಸ್ನೇಹ ಭಕ್ತಿಯಿಂದ ಹಾಗೂ ಎಲ್ಲಕ್ಕಿಂತ ಹೆಚ್ಚಾಗಿ ನಿನ್ನ ಅನುಗ್ರಹದಿಂದ ನನಗೆ ನಿನ್ನೊಡನೆ ಬರಲು ಯಾವ ಅಡ್ಡಿಯೂ ಇಲ್ಲ.

ಪೂಜ್ಯರೇ!. 'ಯಾರೊಡನೆಯಾಗಲೀ [೨]ಏಳು ಹೆಜ್ಜೆ ನಡೆದಲ್ಲಿ ಅವನು ಮಿತ್ರನಾಗುತ್ತಾನೆ. ನಿಮ್ಮೊಡನೆ ಹಲವು ಹೆಜ್ಜೆ ಬಂದಿರುವ ನೀವು ನನಗೆ ಮಿತ್ರರಾಗಿದ್ದೀರಿ. ಆ ಕಾರಣ ಒಂದು ಮಾತನ್ನೂ ಹೇಳುವೆ ದಯವಿಟ್ಟು ಕೇಳಿರಿ'.

[೩]ಜಿತೇಂದ್ರಿಯರಲ್ಲದವರು ವನದಲ್ಲಿ ಸಂಚರಿಸಲಾರರು. ಇಂದ್ರಿಯ ನಿಗ್ರಹವುಳ್ಳವರು ಧರ್ಮ, ವಾಸ, ಪರಿಶ್ರಮಗಳ ಬಗ್ಗೆ ಉದಾಹರಿಸುತ್ತಾರೆ. ಆದ್ದರಿಂದ ಧರ್ಮವೇ ಪ್ರಧಾನ. ಸಜ್ಜನರ ಅಭಿಪ್ರಾಯದಲ್ಲಿ ಆ ಧರ್ಮವನ್ನು ಬಲ್ಲವರು. ಧರ್ಮವೇ ಪ್ರಧಾನವೆನ್ನುವರು. ಧರ್ಮಶಬ್ದ ವಾಚ್ಯನಾದ ನಾರಾಯಣನನ್ನೇ ಸರ್ವೋತ್ತಮನೆನ್ನುವರು. ಅವನನ್ನು ಬಿಟ್ಟು ಎರಡನೇ, ಮೂರನೇ ಪದಾರ್ಥಗಳನ್ನು ಆದ್ದರಿಂದಲೇ ಬಯಸಬಾರದು. ಸಾವಿತ್ರಿಯ ಧರ್ಮಯುಕ್ತ ಮಾತನ್ನು ಕೇಳಿ ಸಂತುಷ್ಟನಾದ ಯಮನು-

[೪]"ನಿನ್ನ ಮಾತುಗಳು ಉದಾತ್ತಾದಿ ಸ್ವರಗಳಿಂದ ಕೂಡಿಯೂ, ಸ್ವರವ್ಯಂಜನಗಳಿಂದ ಕೂಡಿದುದೂ ಯುಕ್ತಿಯುಕ್ತವಾಗಿಯೂ ಇವೆ. ಆದ್ದರಿಂದ ನಿನಗೆ ಒಂದು ವರವ **ಕೊಡುವೆ ನಿನ್ನ ಪತಿಯ ಪ್ರಾಣವನ್ನು ಬಿಟ್ಟು ಒಂದು ವರವನ್ನು ಕೇಳು"** ಎಂದನು ಅದಕ್ಕೆ ಸಾವಿತ್ರಿಯು 'ನನ್ನ ಮಾವನು ರಾಜ್ಯ ಕಳೆದುಕೊಂಡು ವನವಾಸ ಮಾಡುತ್ತಿದ್ದಾನೆ. ಅಂಧನಾಗಿದ್ದಾನೆ. ತಮ್ಮ ಅನುಗ್ರಹದಿಂದ ಬಲಿಷ್ಠನೂ, ಸೂರ್ಯನಂತೆ ತೇಜಸ್ಸುಳ್ಳವನಾಗಲಿ' ಎಂದಳು. ಅದಕ್ಕೆ ಯಮನು 'ಹಾಗೆಯೇ ಆಗಲಿ. ನೀನು ಈಗಾಗಲೇ ಬಹಳ ದೂರ ಬಂದಿರುವೆ. ಶ್ರಮವಾಗುತ್ತದೆ. ವಾಪಸು ಹೋಗೆಂದನು'.

---

೧ ಯತ್ರ ಮೇ ನೀಯತೇ ಭರ್ತಾ ಸ್ವಯಂ ವಾ ಯತ್ರ ಗಚ್ಛತಿ ।
ಮಯಾ ಚ ತತ್ರ ಗಂತವ್ಯಂ ಏಷ ಧರ್ಮಃ ಸನಾತನಃ ॥ – ೨೯೭/೨೧

೨ ಪ್ರಾಹುಃ ಸಪ್ತಪದಾ ಮೈತ್ರಂ ಬುಧಾಸ್ತತ್ವಾರ್ಥದರ್ಶಿನಃ । – ೨೩

೩ ನಾನಾತ್ಮವಂತಸ್ತು ವನೇ ಚರಂತಿ ವಿಜ್ಞಾನತೋ ಧರ್ಮಮುದಾಹರಂತಿ ।
ತಸ್ಮಾತ್ ಸಂತೋ ಧರ್ಮಮಾಹುಃ ಪ್ರಧಾನಮ್ ॥ – ೨೯೭/೨೪

೪ ನಿವರ್ತ ತುಷ್ಟೋಽಸ್ಮಿ ತವಾನಯಾ ಗಿರಾ ಸ್ವರಾಕ್ಷರ ವ್ಯಂಜನ ಹೇತುಯುಕ್ತಯಾ ।
ವರಂ ವೃಣೇಷ್ವೇಹ ವಿನಾಸ್ಯ ಜೀವಿತಂ .... । – ೨೯೭/೨೬

[೧]ಮತ್ತೆ ಸಾವಿತ್ರಿಯು 'ಪತಿಯ ಸಮೀಪವಿರುವ ನನಗೆ ಶ್ರಮವೆಲ್ಲಿಯದು. ಎಲ್ಲಿ ಗಂಡನೋ ಅಲ್ಲಿಯೇ ನನ್ನ ಗಮನ; ನನ್ನ ಮಾತನ್ನು ಕೇಳು ಸತ್ಪುರುಷರೊಡನೆ ಒಮ್ಮೆ ಸಮಾಗಮವಾದರೂ ಅದು ಶ್ರೇಷ್ಠ. ಸತ್ಪುರುಷರ ಸಂಗ ಎಂದೂ ನಿಷ್ಫಲವಾಗದು. ಆದ್ದರಿಂದ ಸತ್ಪುರುಷರ ಸಹವಾಸ ಯಾವಾಗಲೂ ಮಾಡಬೇಕು.

ಆಗ ಯಮ ದೇವರು [೨]'ನಿನ್ನ ಮಾತುಗಳು ಸಜ್ಜನರ ಮನಸ್ಸಿಗೆ ಆನಂದ-ದಾಯಕವಾಗಿವೆ. ನಿನ್ನ ಪತಿಯ ಪ್ರಾಣವೊಂದನ್ನು ಬಿಟ್ಟು ಎರಡನೇ ವರವನ್ನು ಕೇಳು' ಎಂದರು.

ಅದಕ್ಕೆ ಸಾವಿತ್ರಿಯು 'ನನ್ನ ಮಾವನ ರಾಜ್ಯವು ಅಪಹೃತವಾಗಿದೆ. ಅದು ಮತ್ತೆ ಸಿಗಲಿ. ಆತನು ತನ್ನ ಧರ್ಮವನ್ನು ಎಂದೂ ಬಿಡದಿರಲಿ' ಇದೇ ನಾನು ಬಯಸುವ **ಎರಡನೇ ವರವೆಂ**ದಾಗ ಯಮನು ಅದನ್ನು ಅನುಗ್ರಹಿಸಿ 'ನಿನಗೆ ಶ್ರಮವಾಗುವುದು ಬೇಡ ಹಿಂದಿರುಗು' ಎಂದನು. ಆದರೆ ಸಾವಿತ್ರಿಯು

[೩]ನೀನು ಪ್ರಪಂಚದ ಎಲ್ಲ ಪ್ರಜೆಗಳನ್ನು ನಿಯಂತ್ರಿಸುತ್ತಾ ಅವರ ಆಯುಷ್ಯಕ್ಕೆ ಅನುಗುಣವಾಗಿ ಅದು ಮುಗಿದ ಮೇಲೆ ಸ್ವಕರ್ತವ್ಯವೆಂದು ಭಾವಿಸಿ ಬೇರಾವ ಫಲ ಬಯಸಲ್ಪಡದೆ ಯಮಲೋಕಕ್ಕೆ ಒಯ್ಯುವೇ. ಆದ್ದರಿಂದ ನಿನ್ನನ್ನು ಯಮನೆನ್ನುವರು. ಇನ್ನೊಂದು ಮಾತನ್ನು ಹೇಳುವೆ ಕೇಳು. ಮಾತು, ಕೃತಿ, ಮನಸ್ಸುಗಳಿಂದ ಯಾರಿಗೂ ದ್ರೋಹ ಬಗೆಯದಿರುವುದು, ಸಜ್ಜನರಿಗೆ ಅನುಗ್ರಹ, ದಾನ ಇವೆಲ್ಲ ಮಾಡುವುದು ಸನಾತನ ಧರ್ಮ. ಈ ಲೋಕದಲ್ಲಿ ಪ್ರಾಯಃ ಮನುಷ್ಯರೆಲ್ಲ ಬಲಹೀನರು. ಸಜ್ಜನರು ಮಾತ್ರ ಯಾಚಿಸುವ ಶತ್ರುಗಳಿಗೂ ದಯಾಭಿಕ್ಷೆ ನೀಡುತ್ತಾರೆ. (ಹೀಗಿರುವಾಗ ನನಗೆ ನೀನು ಅನುಗ್ರಹ ಮಾಡುವುದಿಲ್ಲವೇ? ಎಂದು ಭಾವ) ಎಂದು ನುಡಿದಳು.

---

೧ ಶ್ರಮಃ ಕುತೋ ಭರ್ತೃಸಮೀಪತೋ ಹಿ ಮೇ
ಯತೋ ಹಿ ಭರ್ತಾ ಮಮ ಸಾ ಗತಿರ್ಧ್ರುವಾ ।
ಸತಾಂ ಸಕೃತ್ಸಂಗತಮೀಪ್ಸಿತಂ ಪರಂ
ತತಃ ಪರಂ ಮಿತ್ರಮಿತಿ ಪ್ರಚಕ್ಷತೇ ।
ನ ಚಾಫಲಂ ಸತ್ಪುರುಷೇಣ ಸಂಗತಮ್ ।
ತತಃ ಸತಾಂ ಸನ್ನಿವಸೇತ್ ಸಮಾಗಮೇ ॥ – ೩೦

೨ ಮನೋಽನುಕೂಲಂ ಬುಧಬುದ್ಧಿವರ್ಧನಂ
ತ್ವಯಾ ಯದುಕ್ತಂ ವಚನಂ ಹಿತಾಶ್ರಯಮ್ ।
ವಿನಾಪುನಃ ಸತ್ಯವತೋಽಸ್ಯ ಜೀವಿತಂ
ವರಂ ದ್ವಿತೀಯಂ ವರಯಸ್ವ ಭಾಮಿನಿ ॥ –೩೧

೩ ಪ್ರಜಾಸ್ತ್ವಯೈತಾ ನಿಯಮೇನ ಸಂಯತಾ
ನಿಯಮ್ಯ ಚೈತಾ ನಯಸೇ ನಿಕಾಮಯಾ ।
ತತೋ ಯಮತ್ವಂ ತವ ದೇವ ವಿಶ್ರುತಮ್ । – ೨೯೭/೩೪
ಅದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾ ಗಿರಾ ।
ಅನುಗ್ರಹಶ್ಚ ದಾನಂ ಚ ಸತಾಂ ಧರ್ಮಃ ಸನಾತನಃ ।
ಸಂತಸ್ತ್ವೇವಾಪ್ಯಮಿತ್ರೇಷು ದಯಾಂ ಪ್ರಾಪ್ತೇಷು ಕುರ್ವತೇ ॥ – ೨೯೭/೩೫,೩೬

[1]ಆಗ ಯಮನು 'ಬಾಯಾರಿಕೆಯಾದವನಿಗೆ ನೀರು ಸಿಕ್ಕಂತೆ ನಿನ್ನ ಮಾತು ಇದೆ. ಆದ್ದರಿಂದ ನಿನ್ನ ಗಂಡನ ಪ್ರಾಣವನ್ನು ಬಿಟ್ಟು ಇನ್ನೊಂದು ವರವನ್ನು ಬೇಡೆಂದನು'. ಸ್ವಾಮಿ 'ನನ್ನ ತಂದೆಗೆ ಗಂಡು ಮಕ್ಕಳಿಲ್ಲ. ಆತನಿಗೆ ನೂರು ಗಂಡು ಮಕ್ಕಳಾಗುವಂತೆ ಮೂರನೇ ವರವನ್ನು ಅನುಗ್ರಹಿಸು' ಎಂದಳು ಸಾವಿತ್ರಿ. ಆಗ ಯಮನು ನಿನ್ನ ತಂದೆಗೆ ಕುಲ ವೃದ್ಧಿ ಮಾಡುವ ನೂರು ಗಂಡು ಸಂತಾನವಾಗಲಿ ಎಂದು ಮೂರನೇ ವರ ನೀಡಿ 'ಸಾವಿತ್ರಿ ನೀನು ಬಹುದೂರ ಬಂದಿದ್ದೀಯಾ! ಇನ್ನು ಹೊರಡು ಎಂದನು.

ಮತ್ತೆ ಸಾವಿತ್ರಿಯು 'ಗಂಡನ ಸಾನ್ನಿಧ್ಯದಲ್ಲಿರುವಾಗ ಎಲ್ಲಿಯ ದೂರದ ಮಾತು! ನನ್ನ ಮನಸ್ಸಿಗೆ ಇನ್ನೂ ದೂರ ಹೋಗಲು ಉತ್ಸುಕತೆ ಇದೆ. ನನ್ನ ಮತ್ತೊಂದು ಮಾತನ್ನು ಆಲಿಸು'.

[2]"ನೀನು ವಿವಸ್ವಾನ್ ಸೂರ್ಯನ ಮಗನಾದ್ದರಿಂದ ನಿನ್ನನ್ನು ವೈವಸ್ವತ ಎನ್ನುತ್ತಾರೆ. ನಿನ್ನ ಅನುಗ್ರಹದಿಂದ ಪ್ರಜೆಗಳೆಲ್ಲ ಧರ್ಮದಂತೆ ನಡೆಯುತ್ತಾರೆ. ಆದ್ದರಿಂದ ನಿನ್ನನ್ನು ಧರ್ಮರಾಜ ಎನ್ನುತ್ತಾರೆ. "ಸತ್ಪುರುಷರಲ್ಲಿರುವ ವಿಶ್ವಾಸ (ಅನೇಕವೇಳೆ) ತನ್ನಲ್ಲಿಯೇ ಇರುವುದಿಲ್ಲ. ಆದ್ದರಿಂದ ಸತ್ಪುರುಷರೊಡನೆ ಎಲ್ಲರೂ ಸ್ನೇಹ ಬಯಸುತ್ತಾರೆ. ಎಲ್ಲ ಭೂತಗಳಲ್ಲಿ ಸೌಹಾರ್ದ ತೋರುವುದರಿಂದ ವಿಶ್ವಾಸ ಉಂಟಾಗುತ್ತದೆ. ಆದ್ದರಿಂದ ಎಲ್ಲರೂ ಸತ್ಪುರುಷರಲ್ಲಿ ವಿಶ್ವಾಸ ಮಾಡುತ್ತಾರೆ.

ಈ ಮಾತನ್ನು ಕೇಳಿದ ಯಮನು ಸಾವಿತ್ರಿಗೆ 'ನೀನು ಹೇಳಿದಂತಹ ಮಾತನ್ನು ನಾನು ಮತ್ತ್ಯಾರಿಂದಲೂ ಕೇಳಿಲ್ಲ. ಇದರಿಂದ ಸಂತುಷ್ಟನಾಗಿದ್ದೇನೆ. ೪ನೇ ಮತ್ತೊಂದು ವರವನ್ನು ಕೇಳು. ನಿನ್ನ ಪತಿಯ ಜೀವಿತವನ್ನು ಮಾತ್ರ ಕೇಳಬೇಡ' ಎಂದನು.

ಆಗ ಸಾವಿತ್ರಿಯು 'ನಾನು ಸತ್ಯವಂತನಿಂದ ನಮ್ಮ ಕುಲಾಭಿವೃದ್ಧಿಗೋಸ್ಕರ ಬಲವೀರ್ಯಶಾಲಿಗಳಾದ **ನೂರು ಮಕ್ಕಳನ್ನು ನಾಲ್ಕನೇ** ವರವಾಗಿ ನಿನ್ನನ್ನು ಪ್ರಾರ್ಥಿಸುತ್ತೇನೆ' ಎಂದಳು:

---

೧ ಪಿಪಾಸಿತಸ್ಯೇವ ಭವೇದ್ ಯಥಾ ಪಯ-
ಸ್ತಥಾ ತ್ವಯಾ ವಾಕ್ಯಮಿದಂ ಸಮೀರಿತಮ್ । – ೨೯೭/೩೭

೨ ನ ದೂರಮೇತನ್ಮಮ ಭರ್ತೃಸನ್ನಿಧೌ ಮನೋ ಹಿ ಮೇ ದೂರತರಂ ಪ್ರಧಾವತಿ । – ೨೯೭/೪೦

ಸಮೇನ ಧರ್ಮೇಣ ಚರಂತಿ ತಾಃ ಪ್ರಜಾ ಸ್ತತಸ್ತವೇಹೇಶ್ವರ ಧರ್ಮರಾಜತಾ । – ೨೯೭/೪೧

ಆತ್ಮನ್ಯಪಿ ನ ವಿಶ್ವಾಸಸ್ತಥಾ ಭವತಿ ಸತ್ಸು ಯಃ ।
ತಸ್ಮಾತ್ಸತ್ಸು ವಿಶೇಷೇಣ ಸರ್ವಃ ಪ್ರಣಯಮಿಚ್ಛತಿ ॥ – ೪೨
ಸೌಹೃದಾತ್ ಸರ್ವಭೂತಾನಾಂ ವಿಶ್ವಾಸೋ ನಾಮ ಜಾಯತೇ ।
ತಸ್ಮಾತ್ ಸತ್ಸು ವಿಶೇಷೇಣ ವಿಶ್ವಾಸಂ ಕುರುತೇ ಜನಃ ॥ – ೨೯೭/೪೩

೩ ಉದಾಹೃತಂ ತೇ ವಚನಂ ಯದಂಗನೇ
ಶುಭೇ ನ ತಾದೃಕ್ ತ್ವದೃತೇ ಶ್ರುತಂ ಮಯಾ । – ೨೯೭/೪೪

**ಮಮಾತ್ಮಜಂ ಸತ್ಯವತಸ್ತಥೌರಸಂ ಭವೇದುಭಾಭ್ಯಾಮಿಹ ಯತ್ ಕುಲೋದ್ವಹಮ್ ।**
**ಶತಂ ಸುತಾನಾಂ ಬಲವೀರ್ಯಶಾಲಿನಾಮಿದಂ ಚತುರ್ಥಂ ವರಯಾಮಿ ತೇ ವರಂ ॥**
**– ೨೯೭/೪೫**

[1]ಅದಕ್ಕೆ ಯಮದೇವರು 'ಮಗಳೇ ನಿನಗೆ ಪ್ರೀತಿಕರವಾದ ಬಲ ವೀರ್ಯಶಾಲಿಗಳಾದ **ನೂರು ಜನ** ಮಕ್ಕಳು ಹುಟ್ಟುವರು. ನಿನಗೆ ಬಹಳ ಶ್ರಮವಾಗದಿರಲಿ. ಬಹಳ ದೂರ ಬಂದಿದ್ದೀಯಾ! ಇನ್ನು ಹೊರಡು ಎಂದರು.

[2]ಆ ಮಾತನ್ನು ಕೇಳಿದ ಸಾವಿತ್ರಿ ಮತ್ತೆ ಯಮ ದೇವರಿಗೆ ಹೀಗೆ ನಿವೇದಿಸಿದಳು. 'ಧರ್ಮರಾಜನೇ! ಸಜ್ಜನರು ಯಾವಾಗಲೂ ಶಾಶ್ವತಧರ್ಮಲ್ಲಿಯೇ (ವೈದಿಕ ನಡೆನುಡಿಗಳಲ್ಲಿಯೇ) ಇರುತ್ತಾರೆ. ಹಾಗಾಗಿ ಅವರು ಶಿಥಿಲ (ದುರ್ಬಲ) ರಾಗುವುದಿಲ್ಲ. ವ್ಯಥೆ ಪಡುವುದಿಲ್ಲ. ಸಜ್ಜನರ ಸಂಗಮ ನಿಷ್ಫಲವಾಗದು. ಸತ್ಪುರುಷರಿಂದ ಸತ್ಪುರುಷರಿಗೆ ಭಯವೂ ಇಲ್ಲ'

[3]'ಸಜ್ಜನರು ತಮ್ಮ ತಪಸ್ಸಿನಿಂದಲೇ ಸೂರ್ಯ, ಭೂಮಿಗಳನ್ನು ಧರಿಸುತ್ತಾರೆ. ಅವರು ಭೂತ ಭವಿಷ್ಯದ್ವರ್ತಮಾನ ಕಾಲಗಳಿಗೆ ಕಾರಣರೂ ಆಗುತ್ತಾರೆ. ಸಜ್ಜನರ ಮಧ್ಯೆ ಇದ್ದರೆ ಸಜ್ಜನರಿಗೆ ಯಾವ ಕೊಂಕೂ ಇಲ್ಲ'. ಇದು ಸನಾತನಿಗಳಿಂದ (ಆರ್ಯರಿಂದ) ಅನುಸರಿಸಿದ ಮಾರ್ಗವೆಂದು ತಿಳಿದು ಸಜ್ಜನರು ಯಾವ ಪ್ರತಿ ಫಲಾಪೇಕ್ಷೆ ಇಲ್ಲದೆ ಪರೋಪಕಾರಕ್ಕಾಗಿ ಜೀವಿಸುತ್ತಾರೆ. 'ಸಜ್ಜನರ [4]ಅನುಗ್ರಹ ಎಂದೂ ವ್ಯರ್ಥವಾಗದು. ಅರ್ಥ ಮಾನಗಳೂ ನಷ್ಟವಾಗುವುದಿಲ್ಲ. ಆದ್ದರಿಂದ ಅವರು ಯಾವಾಗಲೂ ಲೋಕ ರಕ್ಷಕರೂ ಆಗಿರುತ್ತಾರೆ'.

ಇದನ್ನು ಕೇಳಿದ ಯಮನು [5]ಎಲೈ ಪತಿವ್ರತೆಯೇ 'ನೀನು ಹೇಗೆ ಹೇಗೆ ಧರ್ಮಸಮ್ಮತವಾದ ಮನಸ್ಸಿಗೆ ಸುಖಕರವಾದ, ಅರ್ಥಪೂರ್ಣವಾದ ಒಳ್ಳೆಯ ಮಾತುಗಳನ್ನು ಆಡುತ್ತಿದ್ದೀಯೇ ಹಾಗೆ ಹಾಗೆ ನಿನ್ನಲ್ಲಿ ನನಗೆ ತುಂಬಾ ಆದರ

---

೧ ಶತಂ ಸುತಾನಾಂ ಬಲವೀರ್ಯಶಾಲಿನಾಂ ಭವಿಷ್ಯತಿ ಪ್ರೀತಿಕರಂ ತವಾಬಲೇ ।
– ೨೯೭/೪೪-೪೬

೨ ಸತಾಂ ಸದಾ ಶಾಶ್ವತಧರ್ಮವೃತ್ತಿಃ ಸತಾಂ ಸದ್ಭಿರ್ನಾಫಲಃ ಸಂಗಮೋಽಸ್ತಿ ।
ಸದ್ಭ್ಯೋ ಭಯಂ ನಾನುವರ್ತಂತಿ ಸಂತಃ ............................ ॥ – -೨೯೭/೪೭

೩ ಸಂತೋ ಹಿ ಸತ್ಯೇನ ನಯಂತಿ ಸೂರ್ಯಂ ಸಂತೋ ಭೂಮಿಂ ತಪಸಾ ಧಾರಯಂತಿ ।
ಸಂತೋ ಗತಿರ್ಭೂತ ಭವಸ್ಯ ರಾಜನ್ ಸತಾಂ ಮಧ್ಯೇ ನಾವಸೀದಂತಿ ಸಂತಃ ॥
– ೨೯೭/೪೮

೪ ನ ಚ ಪ್ರಸಾದಃ ಸತ್ಪುರುಷೇಷು ಮೋಘೋ ತಸ್ಮಾತ್ಸಂತೋ ರಕ್ಷಿತಾರೋ ಭವಂತಿ ॥ ೫೦

೫ ಯಥಾ ಯಥಾ ಭಾಷಸಿ ಧರ್ಮಸಂಹಿತಂ
ಮನೋಽನುಕೂಲಂ ಸುಪದಂ ಮಹಾರ್ಥವತ್ ।
ತಥಾ ತಥಾ ಮೇ ತ್ವಯಿ ಭಕ್ತಿರುತ್ತಮಾ
ವರಂ ವೃಣೀಷ್ವಾಪ್ರತಿಮಂ ಪತಿವ್ರತೇ ॥ –೫೧

ಹುಟ್ಟುತ್ತದೆ. ಆದ್ದರಿಂದ ನೀನು ಮತ್ತೊಂದು ಅಪ್ರತಿಮ (ಅಸದೃಶವಾದ) ವರವನ್ನು ಕೇಳು' ಎಂದು ನುಡಿದನು..

ನನ್ನ ಪತಿ ಸತ್ಯವಾನನು ಬದುಕಲಿ. ಪತಿಯಿಲ್ಲದ ನಾನು ಬದುಕಿದ್ದರೂ ಸತ್ತಂತೆಯೇ ಸರಿ. ಗಂಡನಿಲ್ಲದ ಸುಖ ಬಯಸೆ. ಆತನಿಲ್ಲದ ಸ್ವರ್ಗ, ಸಂಪತ್ತು ನನಗೆ ಬೇಡ. ಅವನಿಲ್ಲದಿರಲು ನನಗೆ ಬದುಕೂ ಬೇಡ. ತಾವೇ ನನಗೆ ನೂರು ಪುತ್ರರು ಆಗಲೆಂದು ವರವನ್ನು ನೀಡಿದ್ದೀರಿ. ಪತಿಯಿಲ್ಲದೆ ಹೇಗೆ ಪುತ್ರರನ್ನು ಪಡೆಯಲಿ? ಆದ್ದರಿಂದ ಸತ್ಯವಂತನು ಬದುಕಲಿ. ನಿಮ್ಮ ಮಾತೂ ಸತ್ಯವಾಗಲಿ' ಎಂದು ಮಾತನಾಡಿದಾಗ ಆಕೆಯ ಧರ್ಮ ಸಮ್ಮತವಾದ ಮಾತುಗಳಿಂದ ಬಹಳ ಸಂತುಷ್ಟನಾಗಿ ಯಮ ದೇವರು [೧]'ಎಲೈ ಸಾವಿತ್ರಿ! ತೌರು ಹಾಗೂ ಪತಿಗಳ ಎರಡೂ ಕುಲಗಳನ್ನೂ ಆನಂದಿಸುವವಳೇ! ನಿನ್ನ ಪತಿಯ ಪ್ರಾಣಗಳನ್ನು ಬಿಟ್ಟಿದ್ದೇನೆ. ಇವನು ಮುಂದೆ ಸಕಲ ಪುರುಷಾರ್ಥಗಳನ್ನು ಹೊಂದಿ **ನಾನೂರು ವರ್ಷ** ನಿನ್ನೊಡನೆ ಬಾಳುತ್ತಾನೆ. ಅನೇಕ ಯಜ್ಞಗಳನ್ನು ಮಾಡಿ ಲೋಕದಲ್ಲಿ ಖ್ಯಾತಿಗಳಿಸುತ್ತಾನೆ. ನಿನ್ನಲ್ಲಿ **ನೂರು ಮಕ್ಕಳನ್ನು** ಪಡೆದು, ಅವರೂ ಮುಂದೆ ಪುತ್ರ ಪೌತ್ರರನ್ನು ಹೊಂದುತ್ತಾರೆ. ಅವರೆಲ್ಲ ನಿನ್ನ ಹೆಸರಿನಿಂದಲೇ ('**ಸಾವಿತ್ರೇಯ**'ರೆಂದು) ಪ್ರಸಿದ್ಧಿ ಹೊಂದುತ್ತಾರೆ. ನಿನ್ನ ತಂದೆಗೆ ನಿನ್ನ ತಾಯಿಯಾದ ಮಾಲವಿಯಲ್ಲಿ ನೂರು ಪುತ್ರರೂ ಜನಿಸಿ ಮಾಲವರೆಂದು ದೇವತೆಗಳಂತೆ ಪ್ರಸಿದ್ಧರಾಗುವರಲ್ಲದೆ ಅವರಿಗೂ ಪುತ್ರ ಪೌತ್ರರಾಗುತ್ತಾರೆ' ಹೀಗೆ ಆಕೆಗೆ ವರವನ್ನು ಕೊಟ್ಟು ಯಮನು ತನ್ನ ಲೋಕಕ್ಕೆ ನಡೆದನು. ಸಾವಿತ್ರಿಯೂ ತನ್ನ ಗಂಡನ ಶವವಿದ್ದೆಡೆಗೆ ನಡೆದಳು. ಅಲ್ಲಿದ್ದ ಶವದ ಬಳಿಗೆ ಹೋಗಿ ಕುಳಿತು ತನ್ನ ಗಂಡನ ತಲೆಯನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡಳು. ಸತ್ಯವಂತನಿಗೆ ಕೆಲವೇ ಕ್ಷಣಗಳಲ್ಲಿ ಎಚ್ಚರವಾಯಿತು. ಪ್ರವಾಸಕ್ಕೆ ಹೋಗಿ ಬಂದವನಂತೆ ಪ್ರೇಮಪೂರ್ಣ ದೃಷ್ಟಿಯನ್ನು ಮತ್ತೆ ಮತ್ತೆ ಬೀರುತ್ತಾ ಸಾವಿತ್ರಿಯನ್ನು ಕುರಿತು ಹೀಗೆ ನುಡಿದ.

'ನಾನು ಬಹಳ ಹೊತ್ತು ಮಲಗಿದೆನಲ್ಲ. ನೀನೇಕೆ ಎಬ್ಬಿಸಲಿಲ್ಲ. ನನ್ನನ್ನು ಸೆಳೆದ ಪುರುಷ ಯಾರು?' ಅದಕ್ಕೆ ಸಾವಿತ್ರಿಯು ನೀವು ಬಹುಕಾಲ ನನ್ನ ತೊಡೆ ಮೇಲೆ ಮಲಗಿದ್ದಿರಿ. ಈಗ ನಿಮಗೆ ನಿದ್ದೆ ಮುಗಿದು ಶ್ರಮ ಕಳೆದುಕೊಂಡಿರುವಿರಿ. ಸಾಧ್ಯವಾದರೆ ಏಳಿರಿ. ಗಾಢವಾದ ಕತ್ತಲು ಆವರಿಸಿದೆ. ನಿಮ್ಮನ್ನು ಸೆಳೆದುಕೊಂಡು ಹೋದವರು ಸಾಕ್ಷಾತ್ ಜೀವರನ್ನು (ಪ್ರಜೆಗಳನ್ನು) ನಿಯಂತ್ರಿಸುವ ಪೂಜ್ಯನಾದ ಯಮದೇವ'.

೧ ತಥೇತ್ಯುಕ್ತ್ವಾ ತು ತಂ ಪಾಶಂ ಮುಕ್ತ್ವಾ ವೈವಸ್ವತೋ ಯಮಃ । –೫೫
ಚತುರ್ವರ್ಷಶತಾಯುಶ್ಚ ತ್ವಯಾ ಸಾರ್ಧಮವಾಪ್ಸ್ಯತಿ ॥
ತ್ವಯಿ ಪುತ್ರಶತಂ ಚೈವ ಸತ್ಯವಾನ್ ಜನಯಿಷ್ಯತಿ ।
ಖ್ಯಾತಾಸ್ತ್ವನ್ನಾಮಧೇಯಾಶ್ಚ ಭವಿಷ್ಯಂತೀಹ ಶಾಶ್ವತಾಃ ॥
ಪಿತುಶ್ಚತೇ ಪುತ್ರಶತಂ ಭವಿತಾ ತವ ಮಾತರಿ ।
ಮಾಲವ್ಯಾಂ ಮಾಲವಾ ನಾಮ ಕ್ಷತ್ರಿಯಾಸ್ತ್ರಿದಶೋಪಮಾಃ ॥ – ೨೯೭/೫೫–೬೦

ಎಂದಳು. ನಂತರ ಸುಖವಾಗಿ ನಿದ್ರೆ ಹೋದವನಂತೆ ಸತ್ಯವಂತನು ಎದ್ದನು. ಎಲ್ಲ ದಿಕ್ಕುಗಳನ್ನೂ ನೋಡಿ ಹೀಗೆ ಹೇಳಿದ.

'ನಾನು ಕಾಡಿನಲ್ಲಿ ಹಣ್ಣು ಹಂಪಲುಗಳನ್ನು ಕೊಯ್ದು, ಕಟ್ಟಿಗೆಗಳನ್ನು ಕಡಿಯುವಾಗ ನನಗೆ ಅಸಾಧ್ಯವಾದ ತಲೆನೋವಾಗಿ ನಿನ್ನ ತೊಡೆಯ ಮೇಲೆ ಮಲಗಿದೆ. ಆಗ ಒಬ್ಬ ದೇವ ಪುರುಷನಂತಿದ್ದವನನ್ನು ನೋಡಿದೆ. ನಿದ್ದೆ ಹೋದೆ. ನಂತರ ಏನಾಯ್ತೋ ನೆನಪಿಲ್ಲ. ಅದೆಲ್ಲ ಕನಸೋ ಗೊತ್ತಾಗುತ್ತಿಲ್ಲ. ಆಮೇಲೆ ನಡೆದುದನ್ನು ಹೇಳಲು ಇಚ್ಛಿಸಿದರೆ ಹೇಳು'.

ಆಗ ಸಾವಿತ್ರಿಯು 'ಈಗ ತುಂಬಾ ರಾತ್ರಿಯಾಗಿದೆ. ನಿಶಾಚರರು ಸಂಚರಿಸುತ್ತಿದ್ದಾರೆ. ಬೆಳಗಾಗಲಿ. ನಾಳೆ ಎಲ್ಲ ಹೇಳುತ್ತೇನೆ. ಏಳಿ, ಏಳಿ. ಎಲ್ಲೆಡೆ ಘೋರವಾದ ಪ್ರಾಣಿಗಳ, ಮರದ ಎಲೆಗಳ ಶಬ್ದ ಕೇಳುತ್ತಿದೆ. ಭಯಂಕರವಾದ ನರಿಗಳ ಕೂಗು ಕೇಳಿಸುತ್ತಿದೆ ನಮ್ಮ ಮನಸ್ಸು ನಡುಗುತ್ತಿದೆ'. ಎಂದಳು. ಆಗ ಸತ್ಯವಾನ್‌ನು 'ಈ ವನ ಭಯಂಕರವಾಗಿದೆ. ದಾರಿಯೂ ಕಾಣುತ್ತಿಲ್ಲ ನೀನೂ ನಿಶ್ಶಕ್ತಳಾಗಿದ್ದೀಯಾ. ಇಲ್ಲಿಂದ ಹೊರಡುವುದೂ ಅಷ್ಟೇ ಕಷ್ಟ'. ಎಂದನು ಆಗ ಸಾವಿತ್ರಿಯು

'ಈ ಕಾಡಿನಲ್ಲಿ ನೋಡು! ಅಲ್ಲೊಂದು ಒಣಗಿದ ಮರ ಕಾಡ್ಗಿಚ್ಚಿನಿಂದ ಉರಿದು ಹೋಗುತ್ತಿದೆ. ಅದರ ಬೆಳಕು ಅಲ್ಲಲ್ಲಿ ಕಾಣಿಸುತ್ತಿದೆ. ಆ ಬೆಂಕಿಯನ್ನು ತಂದು ಇಲ್ಲಿರುವ ಒಣಗಿದ ಕಟ್ಟಿಗೆಗೆ ಹಚ್ಚುತ್ತೇನೆ. ಆ ಬೆಳಕಿನಲ್ಲಿ ದಾರಿ ನೋಡಿಕೊಂಡು ಹೋಗುವುದಾದಲ್ಲಿ ಹೋಗೋಣ. ನಿನಗಾಗದಿದ್ದಲ್ಲಿ ಬೆಳಗಾದ ಮೇಲೆ ಹೋಗೋಣ ಎಂದಳು.

ಆಗ ಸತ್ಯವಾನನು [1]ನಾನು ಆರೋಗ್ಯವಾಗಿದ್ದೇನೆ. ತಂದೆ ತಾಯಿಗಳನ್ನು ಆದಷ್ಟು ಬೇಗನೇ ನಿನ್ನ ಸಹಾಯದಿಂದ ನೋಡಲು ತವಕಿಸುತ್ತಿದ್ದೇನೆ. ಅವರು ನನ್ನನ್ನು ಎಂದೂ ಬಿಟ್ಟು ಇಲ್ಲ. ರಾತ್ರಿಯಂತೂ ಎಂದೂ ನಾನು ಅವರನ್ನು ಬಿಟ್ಟು ಎಲ್ಲೂ ಹೋಗಿಲ್ಲ. ಅವರು ಈಗಾಗಲೇ ತುಂಬಾ ದುಃಖಿಸುತ್ತಿರುತ್ತಾರೆ. ತಾಯಿ ತಂದೆ ಇಬ್ಬರೂ ವೃದ್ಧರು. ತಂದೆ ಅಂಧ ಬೇರೆ. ಅವರನ್ನು ನೋಡದೆ ಬದುಕಲಾರೆ ಅವರ ಪ್ರೀತಿಗಾಗಿ ನಾನು ಬದುಕಿರಬೇಕಾಗಿದೆ. ಹೀಗೆ ಪಿತೃಭಕ್ತನಾದ ಸತ್ಯವಾನನು ದುಃಖಿಸುತ್ತಾ ಅಳಲಾರಂಭಿಸಿದಾಗ ಸಾವಿತ್ರಿಯು ಗಂಡನ ಕಣ್ಣೀರನ್ನು ಒರೆಸುತ್ತಾ

'ನನ್ನ ತಪಸ್ಸೇನಾದರೂ ಇದ್ದಲ್ಲಿ ನಾನು ದಾನ ಮಾಡಿದ ಫಲವಿದ್ದಲ್ಲಿ ಹೋಮ ಹವನಾದಿಗಳನ್ನು ಮಾಡಿದ ಫಲಗಳು ಇದ್ದಲ್ಲಿ ನನ್ನ ಅತ್ತೆ ಮಾವಂದಿರಿಗೆ ನನ್ನ ಪತಿಗೂ ಈ ರಾತ್ರಿ ಶುಭದಾಯಕವಾಗಲಿ[2]. ನಾನು ಎಂದೂ ಹಾಸ್ಯಕ್ಕಾಗಿಯಾದರೂ

---

೧ ಮಾತಾಪಿತೃಭ್ಯಾಮಿಚ್ಛಾಮಿ ಸಂಗಮಂ ತ್ವತ್ಪ್ರಸಾದಜಮ್ ॥ – ೨೯೭/೮೨

೨ ಕಾಮಯೇ ದರ್ಶನಂ ಪಿತ್ರೋರ್ಯಾಹಿ ಸಾವಿತ್ರಿ ಮಾ ಚಿರಮ್ । – ೨೨೭/೧೦೦
ಪುರಾ ಮಾತುಃ ಪಿತುರ್ವಾಪಿ ಯದಿ ಪಶ್ಯಾಮಿ ವಿಪ್ರಿಯಂ ।
ನ ಜೀವಿಷ್ಯೇ ವರಾರೋಹೇ ಸತ್ಯೇನಾತ್ಮಾನಮಾಲಭೇ ॥ –೨೯೭/೧೦೧

ಸುಳ್ಳು ಹೇಳಿದ್ದು ನೆನಪಿಲ್ಲ. ಈ ನನ್ನ ಸತ್ಯನಿಷ್ಠೆಯಿಂದಲಾದರು ಅತ್ತೆ ಮಾವಂದಿರು ಸುಖವಾಗಿರಲಿ' ಎಂದಳು. ಮತ್ತೆ 'ಸತ್ಯವಾನನು ತವಕದಿಂದ ತಂದೆ ತಾಯಿಗಳನ್ನು ನೋಡದೆ ನನಗೆ ಮನಸ್ತೃಪ್ತಿ ಇಲ್ಲ. ನನ್ನಿಂದಾಗಿ ಅವರಿಗೆ ಯಾವುದೇ ಅಪಾಯವು ಆದಲ್ಲಿ ನಾನು ಖಂಡಿತವಾಗಿಯೂ ಬದುಕಿರಲಾರೆ. ನನ್ನ ಬಗ್ಗೆ ನಿನಗೆ ಪ್ರೀತಿ, ಧರ್ಮಬುದ್ಧಿ ಇದ್ದಲ್ಲಿ ನಾವು ಇಲ್ಲಿರದೆ ಕೂಡಲೆ ನಮ್ಮ ಆಶ್ರಮದ ಕಡೆ ಹೋಗೋಣ. ತಂದೆ ತಾಯಿಗಳನ್ನು ನೋಡೋಣ. ಇಲ್ಲಿ ಈ ರಾತ್ರಿ ಕಳೆಯುವುದು ಬೇಡ ಎಂದನು.

ಆ ಮಾತುಗಳನ್ನು ಕೇಳಿದ ಸಾವಿತ್ರಿಯು ಬಿಚ್ಚಿಹೋದ ಕೂದಲುಗಳನ್ನು ಸರಿ ಮಾಡಿಕೊಂಡು ತನ್ನ ಎರಡೂ ಬಾಹುಗಳಿಂದ ಗಂಡನ ಎರಡೂ ಕಂಕುಳಗಳನ್ನು ಎತ್ತಿ ಹಿಡಿದು ಮೇಲೆ ಎಬ್ಬಿಸಿದಳು. ಗಂಡನಿಗೆ ನೀವು ಈಗಾಗಲೇ ಸಂಗ್ರಹಿಸಿದ ಹಣ್ಣಿನ ಬುಟ್ಟಿಯನ್ನು ನಾಳೆ ತರಬಹುದು. ಕೊಡಲಿಯನ್ನು ಮಾತ್ರ ನಾನೇ ತರುತ್ತೇನೆ ಎಂದಳು. ಹಣ್ಣಿನ ಬುಟ್ಟಿಯನ್ನು ಮರದ ರೆಂಬೆಗೆ ತೂಗು ಹಾಕಿ ಗಂಡನನ್ನು ಸಮೀಪಿಸಿದಳು. ತನ್ನ ಪತಿಯ ಎಡಗೈಯನ್ನು ಬೆನ್ನಿನ ಹಿಂಭಾಗದಿಂದ ತನ್ನ ಎಡ ಹೆಗಲ ಮೇಲಿರಿಸಿ ತನ್ನ ಬಲಗೈಯಿಂದ ಗಂಡನನ್ನು ತಬ್ಬಿಕೊಂಡು ಗಂಡನೊಡನೆ ಆಶ್ರಮಾಭಿಮುಖವಾಗಿ ಗಜಗಮನೆಯಾಗಿ ಗಂಭೀರವಾಗಿ ನಡೆಯುತ್ತ ಹೊರಟಳು.

ನಂತರ ಸತ್ಯವಾನನು 'ನನಗೆ ಅಭ್ಯಾಸ ಬಲದಿಂದ ಕಾಡಿನ ದಾರಿಗಳು ಗೊತ್ತಿವೆ. ಮೇಲಾಗಿ ಚಂದ್ರೋದಯವೂ ಆಗಿದೆ. ಆ ಬೆಳದಿಂಗಳ ಬೆಳಕಿನಿಂದಲೂ ನಾವು ಬಂದ ದಾರಿಯಿಂದಲೇ ಹೋಗೋಣ. ರಾತ್ರಿಯಾದರೂ ಹಾದಿ ತಪ್ಪದು. ಮುಂದೆ ನೋಡು ದಾರಿ ಎರಡಾಗಿದೆ. ನಾವು ಉತ್ತರದ ಕಡೆ ಹೋಗೋಣ ನಾನೀಗ ಆರೋಗ್ಯ ಪೂರ್ಣನಾಗಿದ್ದೇನೆ. ಬಲಿಷ್ಠನೂ ಆಗಿದ್ದೇನೆ. ತಂದೆ ತಾಯಿಗಳನ್ನು ನೋಡುವ ತವಕ ಕ್ಷಣಕ್ಷಣಕ್ಕೂ ಹೆಚ್ಚುತ್ತಿದೆ' ಎನ್ನುತ್ತಾ ಆಶ್ರಮದೆಡೆಗೆ ನಡೆದರು.

**ದ್ಯುಮತ್ಸೇನ ದಂಪತಿಗಳ ಚಿಂತೆ – ಸತ್ಯವಾನ್ ಸಾವಿತ್ರೀ ದಂಪತಿಗಳ ಆಗಮನ.**

ಇತ್ತ ಅಂಧರಾಜ ದ್ಯುಮತ್ಸೇನನಿಗೆ ಇದ್ದಕ್ಕಿದ್ದಂತೆ ದೃಷ್ಟಿ ಬಂದು ಎಲ್ಲವನ್ನೂ ನೋಡುವಂತಾದನು. ಕೂಡಲೆ ಆತನು ರಾಣಿಯೊಂದಿಗೆ ಸುತ್ತ ಮುತ್ತಲಿನ ಎಲ್ಲ ಆಶ್ರಮಗಳಿಗೆ ಹೋಗಿ ಸತ್ಯವಾನ್ ದಂಪತಿಗಳನ್ನು ಹುಡುಕಿದರೂ ಸಿಗದಿದ್ದಾಗ ತುಂಬಾ ದುಃಖಿತನಾದನು. ಎಲ್ಲ ಆಶ್ರಮಗಳನ್ನು ನದಿಗಳನ್ನು, ವನಗಳನ್ನು, ಸರೋವರಗಳನ್ನೂ ರಾತ್ರಿ ಎಲ್ಲ ಹುಡುಕಿ ಹುಡುಕಿ ನಿರ್ವಿಣ್ಣರಾದರು. ಯಾವುದೇ ಶಬ್ದ ಕೇಳಿದರೂ ಮಗ ಸೊಸೆ ಬಂದರೆಂಬ ಭ್ರಾಂತಿಗೆ ಒಳಗಾಗುತ್ತಿದ್ದರು. ಮುಳ್ಳು ಕಲ್ಲುಗಳೆನ್ನದೆ ಓಡಾಡಿ ರಾಜ ದಂಪತಿಗಳ ಪಾದಗಳೆಲ್ಲ ರಕ್ತ ಸಿಕ್ತವಾದವು. ಇದನ್ನು ನೋಡಿದ ಆಶ್ರಮವಾಸಿಗಳು ಕಷ್ಟಪಟ್ಟು, ಅವರನ್ನು ಆಶ್ರಮಕ್ಕೆ ಕರೆತಂದು ಅನೇಕ

---

ಯದಿ ಧರ್ಮೇ ಚ ತೇ ಬುದ್ಧಿರ್ಮಾಂ ಚೇತ್ ಜೀವಂತಮಿಚ್ಛಸಿ ।
ಮಮ ಪ್ರಿಯಂ ವಾ ಕರ್ತವ್ಯಂ ಗಚ್ಛಾವಾಶ್ರಮಮಂತಿಕಾತ್ ॥ –೨೯೭/೧೦೩

ಪೂರ್ವಕಥೆಗಳನ್ನು ಹೇಳಿ ಸಮಾಧಾನ ಪಡಿಸಿದರೂ ಅವರಿಗೆ ನೆಮ್ಮದಿ ಸಿಗಲಿಲ್ಲ. ಮಗನ ಹಿಂದಿನ ಚರಿತ್ರೆಗಳನ್ನು ಸಾವಿತ್ರಿಯ ವ್ರತನಿಷ್ಠೆಯನ್ನು ಸ್ಮರಿಸುತ್ತಾ ಹಾ ಪುತ್ರ, ಹಾ ಸಾಧ್ವಿ ಸಾವಿತ್ರಿ! ಎಲ್ಲಿದ್ದೀರಿ ಎನ್ನುತ್ತಾ ಅಳ ಹತ್ತಿದರು.

ಹೀಗೆ ರಾಜದಂಪತಿಗಳ ದುಃಖವನ್ನು ನೋಡಿ ಸುವರ್ಚಾ, [೧]ಗೌತಮ, [೨]ಭಾರದ್ವಾಜ, ದಾಲ್ಭ್ಯ, ಆಪಸ್ತಂಬ, ಧೌಮ್ಯ, ಮುಂತಾದ ಮಹರ್ಷಿಗಳೂ ಹಾಗೂ ಇತರ ಋಷಿಗಳೂ, ಬ್ರಾಹ್ಮಣರೂ ಎಲ್ಲರೂ ಒಕ್ಕೊರಲಿನಿಂದ ಸತ್ಯವಾನ್, ಸತ್ಯನಿಷ್ಠ, ಸಾವಿತ್ರಿ, ಪತಿವ್ರತೆಯರಾಗಿದ್ದು ನಾವೆಲ್ಲರೂ ಅವರಿಗೆ ದೀರ್ಘ ಸೌಮಂಗಲ್ಯ, ಅವೈಧವ್ಯ ರೂಪ ಆಶೀರ್ವಾದ ಮಾಡಿದ್ದೇವೆ. ಆದ್ದರಿಂದ ಅವರು ಇಷ್ಟರಲ್ಲಿಯೇ ಕ್ಷೇಮದಿಂದ ವಾಪಸು ಬರುತ್ತಾರೆ ಹೆದರಬೇಡಿ ಎಂದು ಧೈರ್ಯ ತುಂಬಿದರು. ಹೀಗೆ ಎಲ್ಲರೂ ಮಾತನಾಡುತ್ತಿರುವಾಗಲೇ ಸಾವಿತ್ರೀ ಗಂಡನೊಡನೆ ರಾತ್ರಿಯೇ ತಮ್ಮ ಆಶ್ರಮ ಪ್ರವೇಶಿಸಿದರು. [೩]ಆಗ ಬ್ರಾಹ್ಮಣರು [೪]"ರಾಜನ್ ನಿನಗೆ ಈಗ ಪುತ್ರ ಸಮಾಗಮ, ಅಂಧತ್ವ ನಿವಾರಣೆಯಾಗಿ ಕಣ್ಣು ಬಂದಿರುವುದು ಹಾಗೂ ಸಾವಿತ್ರಿಯ ಆಗಮನ – ಹೀಗೆ ಮೂರು ಲಾಭಗಳಾಗಿವೆ. ನಾವು ಇದಕ್ಕಿಂತ ಹೆಚ್ಚಿನ ವೃದ್ಧಿಯನ್ನು ನಿನಗೆ ಹರಸುತ್ತೇವೆ. ನಿನಗೆ ಇನ್ನೂ ಹೆಚ್ಚಿನ ಅಭಿವೃದ್ಧಿ ಈ ಕೂಡಲೆ ಆಗಲಿದೆ' ಹೀಗೆ ಹೇಳುತ್ತಾ ಬ್ರಾಹ್ಮಣರು ಅಗ್ನಿ ಪ್ರತಿಷ್ಠಾಪಿಸಿ ದ್ಯುಮತ್ಸೇನನ ಬಳಿ ಆಸೀನರಾದರು. ಎಲ್ಲ ಋಷಿಗಳು ಸತ್ಯವಾನ್ ದಂಪತಿಗಳಿಗೆ ಇಷ್ಟು ರಾತ್ರಿ ತಡವಾಗಿ ಬರಲು

---

೧ ಗೌತಮ ಉವಾಚ –
ವೇದಾಃಸಾಂಗಾ ಮಯಾಧೀತಾಸ್ತಪೋ ಮೇ ಸಂಚಿತಂ ಮಹತ್ ।
ಅನೇನ ತಪಸಾ ವೇದ್ಮಿ ಸರ್ವಂ ಪರಚಿಕೀರ್ಷಿತಮ್ ॥
ಸತ್ಯಮೇತನ್ನಿಬೋಧಧ್ವಂ ಧ್ರಿಯತೇ ಸತ್ಯವಾನಿತಿ ॥ – ೨೯೮/೧೧–೧೩

೨ ಯಥಾಸ್ಯ ಭಾರ್ಯಾ ಸಾವಿತ್ರೀ ತಪಸಾ ಚ ದಮೇನ ಚ ।
ಆಚಾರ್ಯೇಣ ಚ ಸಂಯುಕ್ತಾ ತಥಾ ಜೀವತಿ ಸತ್ಯವಾನ್ ॥

೩ ತತೋ ಮುಹೂರ್ತಾತ್ ಸಾವಿತ್ರೀ ಭರ್ತ್ರಾ ಸತ್ಯವತಾ ಸಹ ।
ಆಜಗಾಮಾಶ್ರಮಂ ರಾತ್ರೌ ಪ್ರಹೃಷ್ಟಾ ಪ್ರವಿವೇಶ ಹ ॥ – ೨೯೮/೨೧

೪ ಬ್ರಾಹ್ಮಣಾ ಊಚುಃ –
ಸಮಾಗಮೇನ ಪುತ್ರಸ್ಯ ಸಾವಿತ್ರ್ಯಾ ದರ್ಶನೇನ ಚ ।
ಚಕ್ಷುಷಶ್ಚಾತ್ಮನೋ ಲಾಭಾತ್ ತ್ರಿಭಿರ್ದಿಷ್ಟ್ಯಾ ವಿವರ್ಧಸೇ ॥ – ೨೩
ಭೂಯೋ ಭೂಯೋ ಸಮೃದ್ಧಿಸ್ತೇ ಕ್ಷಿಪ್ರಮೇವ ಭವಿಷ್ಯತಿ ॥ – ೨೪
ಸುಪ್ತಂ ಚೈನಂ ಯಮಃ ಸಾಕ್ಷಾತ್ ಉಪಾಗಚ್ಛತ್ ಸಕಿಂಕರಃ ॥ – ೩೮
ಅಸ್ತೌಷಂ ತಮಹಂ ದೇವಂ ಸತ್ಯೇನ ವಚಸಾ ವಿಭುಮ್ ।
ಪಂಚ ವೈ ತೇನ ಮೇ ದತ್ತಾ ವರಾಃ ಶೃಣುತ ತಾನ್ ಮಮ ॥ – ೩೯
ಚಕ್ಷುಷೀ ಚ ಸ್ವರಾಜ್ಯಂ ಚ ದ್ವೌ ವರೌ ಶ್ವಶುರಸ್ಯ ಮೇ ।
ಲಬ್ಧಂ ಪಿತುಃ ಪುತ್ರಶತಂ ಪುತ್ರಾಣಾಂ ಚಾತ್ಮನಃ ಶತಮ್ ॥ – ೪೦
ಚತುರ್ವರ್ಷಶತಾಯುರ್ಮೇ ಭರ್ತಾ ಲಬ್ಧಶ್ಚ ಸತ್ಯವಾನ್ ।
ಭರ್ತುರ್ಹಿ ಜೀವಿತಾರ್ಥಂ ತು ಮಯಾ ಚೀರ್ಣಂತ್ವಿದಂ ವ್ರತಮ್ ॥ – ೪೧

ಕಾರಣವೇನು? ನಿನ್ನ ತಂದೆ, ತಾಯಿಗಳಗೆ ಬಹಳ ದುಃಖವಾಯಿತು. ಈ ಬಗ್ಗೆ ತಿಳಿಸು ಎಂದರು. ಆಗ ಸತ್ಯವಾನನು ತಾನು ಸಮಿತ್ತು, ದರ್ಭೆ, ಫಲಾಹರಣಕ್ಕೆ ಹೋಗಿ ತಾನು ಎಲ್ಲವನ್ನೂ ಸಂಗ್ರಹಿಸಿದ್ದು, ತನಗೆ ಶಿರೋವೇದನೆ ಆದುದು ನಂತರ ಸಾವಿತ್ರಿಯ ತೊಡೆಯ ಮೇಲೆ ಮಲಗಿದ್ದು ನಂತರ ಗಾಢನಿದ್ರೆ ಬಂದುದರಿಂದ ಹಾಗೂ ನಿಮಗ್ಯಾರಿಗೂ ದುಃಖವಾಗಬಾರದೆಂದು ಹೀಗೆ ತಡವಾಯಿತೆಂದು ತನ್ನ ಅನುಭವವನ್ನು ಹೇಳಿದನು.

ಆಗ ಗೌತಮರು ಅಕಸ್ಮಾತ್ತಾಗಿ, ದ್ಯುಮತ್ಸೇನಗೆ ಕಣ್ಣು ಬಂದುದು ಹೇಗೆ? ನಿನಗೆ ಗೊತ್ತಿಲ್ಲವಷ್ಟೇ? ಹಾಗಾದರೆ ಸಾವಿತ್ರೀ ನೀನು ಸಾವಿತ್ರಿಯಂತೆ ತೇಜಸ್ವಿಯಾಗಿದ್ದೀ. ಆದ್ದರಿಂದ ಈ ಸತ್ಯ ರಹಸ್ಯವನ್ನು ನೀನೇ ಹೇಳು ಎಂದಾಗ ಆಕೆ ತನ್ನ ಪತಿಗೆ ಬಂದ ಮೃತ್ಯು, ಅದನ್ನು ತಾನು ಎದುರಿಸಿ ಐದು ವರಗಳನ್ನು ಯಮನಿಂದ ಸಂಪಾದಿಸಿದ ಬಗ್ಗೆ ಹೇಳಿದಳು. ಹೀಗೆ ವ್ಯಸನ ಸಾಗರದಲ್ಲಿ ಮುಳುಗಿದ ದ್ಯುಮತ್ಸೇನನ ವಂಶವು ಪತಿವ್ರತೆಯೂ, ಸತ್ಕುಲ ಪ್ರಸೂತೆಯೂ ಆದ ಸಾವಿತ್ರಿಯಿಂದಾಗಿ ಪುನರಜ್ಜೀವನವಾದುದನ್ನು ಎಲ್ಲ ಋಷಿಗಳು ಪ್ರಶಂಸಿಸಿ ತಮ್ಮ ಆಶ್ರಮಗಳಿಗೆ ಹೋದರು.

## ದ್ಯುಮತ್ಸೇನನಿಗೆ ಮತ್ತೆ ರಾಜ್ಯಪ್ರಾಪ್ತಿ – ಸಾವಿತ್ರೀ ಸಂತಾನ

ಆ ರಾತ್ರಿ ಹೀಗೆ ಸಂತೋಷವಾಗಿ ಕಳೆದು ಬೆಳಗಾಗಲು ಪ್ರಾತರಾಹ್ನಿಕಗಳನ್ನು ಮುಗಿಸಿಕೊಂಡು ತಪೋಧನರಾದ ಆಶ್ರಮವಾಸಿಗಳೆಲ್ಲರೂ ದ್ಯುಮತ್ಸೇನನ ಆಶ್ರಮಕ್ಕೆ ಬಂದು ಸಾವಿತ್ರಿಯ ಮಹಾಭಾಗ್ಯವನ್ನು ಮತ್ತೆ ಮತ್ತೆ ಹೇಳಿದರೂ ತೃಪ್ತಿಯಾಗಲಿಲ್ಲ. ಹೀಗೆ ಆಶ್ರಯದಲ್ಲಿ ಮಾತನಾಡುತ್ತಿರುವಾಗಲೇ ದ್ಯುಮತ್ಸೇನನ ರಾಜ್ಯವಾದ ಶಾಲ್ವ ರಾಜ್ಯದಿಂದ ಭಾರೀ ಜನರ ಗುಂಪೊಂದು ದ್ಯುಮತ್ಸೇನನ ಬಳಿಗೆ ಬಂದು

**ತತಃ ಪ್ರಕೃತಯಃ ಸರ್ವಾಃ ಶಾಲ್ವೇಭ್ಯೋಽಭ್ಯಾಗತಾ ನೃಪ ।**
**ಆಚಖ್ಯುರ್ನಿಹತಂ ಚೈವ ಸ್ವೇನಾಮಾತ್ಯೇನ ತಂ ದ್ವಿಷಂ ।**
**ತಂ ಮಂತ್ರಿಣಾ ಹತಂ ಶ್ರುತ್ವಾ ಸಸಹಾಯಂ ಸಬಾಂಧವಂ ।**
**ಸಚಕ್ಷುರ್ವಾಪ್ಯಚಕ್ಷುರ್ವಾ ಸ ನೋ ರಾಜಾ ಭವತ್ವಿತಿ । ೨೯೯– ೩ ರಿಂದ ೮**

'ರಾಜನ್'! ನಿನ್ನನ್ನು ಪದಚ್ಯುತಿ ಮಾಡಿದ ನಿನ್ನ ದ್ವೇಷಿಯು ಅವನ ಮಂತ್ರಿಗಳಿಂದಲೇ ಹತನಾಗಿದ್ದಾನೆ. ಅವನ ಬಂಧು ಬಾಂಧವರೂ ಹತರಾಗಿದ್ದಾರೆ. ಅಷ್ಟೇ ಅಲ್ಲ ನಮ್ಮ ರಾಜ್ಯದ ಎಲ್ಲ ನಾಗರೀಕರು ನೀನೇ ರಾಜ್ಯನಾಗಬೇಕು. ನೀನು ಅಂಧನಾಗಿದ್ದರೂ ಸರಿ ಇಲ್ಲದಿದ್ದರೂ ಸರಿ. ಅದೃಷ್ಟವಶಾತ್ ಕಣ್ಣು ಬಂದಿವೆ. ನಮಗೆ ತುಂಬ ಆನಂದವಾಗಿದೆ. ಕಾರಣ ನೀನು ಸಪರಿವಾರವಾಗಿ ಬಂದು ರಾಜ್ಯವನ್ನು ಸ್ವೀಕರಿಸಿ ನಮ್ಮನ್ನು ಆಳಬೇಕು. ನಾವು ಚದುರಂಗ ಬಲ ಸಮೇತವಾಗಿ ನಿನ್ನನ್ನು ಕರೆದುಕೊಂಡು ಹೋಗಲು ಬಂದಿದ್ದೇವೆ ಎಂದು ಭಕ್ತಿಯಿಂದ ಶಿರಬಾಗಿ ಪ್ರಾರ್ಥಿಸಿದರು.

ಆಗ ರಾಜನು ಆಶ್ರಮದ ಎಲ್ಲ ವೃದ್ಧ ಬ್ರಾಹ್ಮಣರನ್ನು, ಋಷಿಗಳನ್ನು ನಮಿಸಿ, ಗೌರವಿಸಿ, ಪೂಜಿಸಿ ಅವರ ಅಪ್ಪಣೆ ಪಡೆದು ಬಂದ ಪ್ರಜೆಗಳೊಡನೆ ಶಾಲ್ವ ರಾಜ್ಯಕ್ಕೆ ಹೊರಟನು. ಅವನನ್ನು ಎಲ್ಲರೂ ಮತ್ತೆ ಪಟ್ಟಾಭಿಷೇಕ ಮಾಡಿ ರಾಜನನ್ನಾಗಿ ಸ್ವೀಕರಿಸಿದರು. ಸತ್ಯವಾನ್‌ನನ್ನು ಯುವರಾಜನನ್ನಾಗಿಯೂ ಅಭಿಷೇಕಿಸಿದರು.

[೧]ಮುಂದೆ ಕಾಲಗತಿಸುತ್ತಿರಲು ಸಾವಿತ್ರಿಯು ನೂರು ಪುತ್ರರನ್ನು ಪಡೆದಳು ಆಕೆಯ ತಂದೆಯೂ ನೂರು ಪುತ್ರರನ್ನು ಪಡೆದನು. ಹೀಗೆ ಸಾವಿತ್ರಿಯ ಪುಣ್ಯದಿಂದ ಆಕೆಯ ತಂದೆ, ಮಾವ ಹಾಗೂ ಆಕೆಯ [೨]ಮೂರೂ ವಂಶಗಳು ಸಮೃದ್ಧಿಯನ್ನು ಹೊಂದಿದವು.

ಈ ರೀತಿ ಮಾರ್ಕಂಡೇಯರು ಧರ್ಮರಾಜನಿಗೆ ಪತಿವ್ರತೆಯಾದ ಸಾವಿತ್ರಿಯ ಕಥೆಯನ್ನು ವಿಸ್ತಾರವಾಗಿ ನಿರೂಪಿಸುತ್ತಾ ಧರ್ಮರಾಜ! ಹೀಗೆಯೇ ಮಂಗಳೆಯಾದ ಶೀಲ ಸಂಪನ್ನಳಾದ ದ್ರೌಪದಿಯೂ ಕೂಡಾ ನಿಮ್ಮೆಲ್ಲರನ್ನು ಎಲ್ಲ ಆಪತ್ತುಗಳಿಂದ ಸಾವಿತ್ರಿಯಂತೆ ದಾಟಿಸುತ್ತಾಳೆ. ಯೋಚಿಸಬೇಡ ಎಂದು ಹೇಳಿದರು.

ಇದನ್ನು ಕೇಳಿದ ಧರ್ಮರಾಜನು ದುಃಖರಹಿತನಾಗಿ, ವ್ಯಸನದಿಂದ ಮುಕ್ತನಾಗಿ ಕಾಮ್ಯಕವನದಲ್ಲಿ ವಾಸವಾಗಿದ್ದನು.

ಈ ಸಾವಿತ್ರೀ ಉಪಾಖ್ಯಾನವನ್ನು ಯಾರು ಭಕ್ತಿಯಿಂದ ಕೇಳುವರೋ ಅವರು ಸುಖಿಗಳಾಗಿ ಎಲ್ಲ ಸಿದ್ಧಿಗಳನ್ನೂ ಹೊಂದುವರಲ್ಲದೆ ಯಾವ ದುಃಖವನ್ನು ಹೊಂದುವುದಿಲ್ಲವೆಂದು ವೈಶಂಪಾಯನರು ಜನಮೇಜಯನಿಗೆ ಉಪದೇಶಿಸಿದರು.

## ಸಾವಿತ್ರೀವ್ರತದ ಕೆಲವು ವಿಶೇಷಗಳು

೧) ಸಾವಿತ್ರೀ ಉಪಾಖ್ಯಾನವು ಮಹಾಭಾರತದ ವನಪರ್ವದಲ್ಲಿ ಅಲ್ಲದೆ ಭವಿಷ್ಯೋತ್ತರ ಪುರಾಣದ ಜ್ಯೇಷ್ಠ ಮಾಸ ಮಹಾತ್ಮದಲ್ಲಿ ಅಧ್ಯಾಯ ೨೨ರಿಂದ ೨೭ರವರೆಗೆ ವರ್ಣಿತವಾಗಿದೆ. ಈ ಪುರಾಣದಲ್ಲಿ ೨೨ನೇ ಅಧ್ಯಾಯದಲ್ಲಿ ವ್ರತಾಚರಣೆಯ

---

೧ ತತಃ ಕಾಲೇನ ಮಹತಾ ಸಾವಿತ್ರ್ಯಾ ಕೀರ್ತಿವರ್ಧನಮ್ ।
ತದ್ವೈ ಪುತ್ರಶತಂ ಜಜ್ಞೇ ಶೂರಾಣಾಮನಿವರ್ತಿನಾಮ್ ॥ – ೨೯೯/೧೨
ಭ್ರಾತ್ರೃಣಾಂ ಸೋದರಾಣಾಂ ಚ ತಥೈವಾಸ್ಯಾಭವಚ್ಛತಮ್ ।
ಮದ್ರಾಧಿಪಸ್ಯಾಶ್ವಪಪತೇರ್ಮಾಲವ್ಯಾಂ ಸುಮಹದ್ಬಲಮ್ ॥ – ೧೩
ಏವಮಾತ್ಮಾ ಪಿತಾ ಮಾತಾ ಶ್ವಶ್ರೂಃ ಶ್ವಶುರ ಏವ ಚ ।
ಭರ್ತುಃ ಕುಲಂ ಚ ಸಾವಿತ್ರ್ಯಾ ಸರ್ವಂ ಕೃಚ್ಛ್ರಾತ್ ಸಮುದ್ಧೃತಮ್ ॥ – ೧೪
ತಥೈವೈಷಾ ಹಿ ಕಲ್ಯಾಣೀ ದ್ರೌಪದೀ ಶೀಲಸಂಮತಾ ।
ತಾರಯಿಷ್ಯತಿ ವಃ ಸರ್ವಾನ್ ಸಾವಿತ್ರೀವ ಕುಲಾಂಗನಾ ॥ – ೧೫

೨ ಕನ್ಯೋದಿತಾ ಬತ ಕುಲದ್ವಯತಾರಿಣೀತಿ । – ಮ.ತಾ.ನಿ.(೧೯/೭೬
ಸಖಾ ಹ ಜಾಯಾ ಕೃಪಣಂ ಹ ದುಹಿತಾ ಜ್ಯೋತಿರ್ಹ ಪುತ್ರಃ ।
– ಐತರೇಯಬ್ರಾಹ್ಮಣ(೭/೧೩/೧೮)

ವಿವರಗಳಿವೆ. ಉಳಿದ ಅಧ್ಯಾಯಗಳಲ್ಲಿ ಸಾವಿತ್ರಿಯ ಕಥೆಯು ಮಹಾಭಾರತದಲ್ಲಿ ಹೇಳಿದಂತೆಯೇ ಇದ್ದು ಅನೇಕ ಶ್ಲೋಕಗಳು ಭಾರತದಲ್ಲಿದ್ದಂತೆಯೇ ಇವೆ.

೨) ಸ್ಮೃತಿಮುಕ್ತಾವಲಿಯಲ್ಲಿ ಸಾವಿತ್ರೀವ್ರತದ ಉಲ್ಲೇಖವಿದೆ.

ಅ) **ಪೂರ್ವವಿದ್ಧಾ ನ ಕರ್ತವ್ಯಾ ಅಮಾವಾಸ್ಯಾ ಚ ಪೂರ್ಣಿಮಾ । ವರ್ಜಯಿತ್ವಾ ಮುನಿಶ್ರೇಷ್ಠ ಸಾವಿತ್ರೀ ವ್ರತಮುತ್ತಮಂ ॥** ಇತಿ ಬ್ರಹ್ಮವೈವರ್ತೇ ಸಾವಿತ್ರೀ ವ್ರತದಲ್ಲಿ ಮಾತ್ರ ಪೂರ್ವವೇಧವುಳ್ಳ ಅಮಾವಾಸ್ಯಾ - ಹುಣ್ಣಿಮೆ ತಿಥಿಯನ್ನು ಸ್ವೀಕರಿಸಬೇಕು.

ಆ) ಯದಾ ಚತುರ್ದಶೀ ಅಷ್ಟಾದಶನಾಡೀ ಭವತಿ, ಸದಾ ಸಾವಿತ್ರೀ ವ್ರತಮಪಿ ಪೂರ್ವವಿದ್ಧಾಯಾಂ ಪರಿತ್ಯಾಜ್ಯಂ । 'ಭೂತಾಷ್ಟಾದಶ ನಾಡೀಭಿಃ ದೂಷಯತ್ಯುತ್ತರಾಂ ತಿಥಿಂ । ಇತಿ ಸ್ಮರಣಾತ್ ।

'ಯಾವಾಗ ಚತುರ್ದಶಿಯು ಹದಿನೆಂಟು ನಾಡೀ ಪರ್ಯಂತವಾಗಿ ಇರುತ್ತದೆಯೋ ಪೂರ್ವ ವಿದ್ಧವಾದ ಈ ಹುಣ್ಣಿಮೆ ತಿಥಿಯಲ್ಲಿ ಸಾವಿತ್ರೀ ವ್ರತವನ್ನು ಮಾಡಬಾರದು'. ಸ್ಮೃತಿ ಮುಕ್ತಾವಲೀ ಕಾಲನಿರ್ಣಯ (ಪುಟ - ೧೨೫, ೧೨೬)

### ಸಂದೇಶಗಳು-ವಿವರಣೆಗಳು

೧. ಧರ್ಮರಾಜನ ಸುಪ್ತ ಪಶ್ಚಾತ್ತಾಪ ಮತ್ತು ಶೋಕ ಪ್ರಜ್ಞೆ ಬಡಿದೆಬ್ಬಿಸಿದ ಪರಿಣಾಮವಾಗಿ ಈ ಉಪಾಖ್ಯಾನವನ್ನು ಮಾರ್ಕಂಡೇಯ ಋಷಿಗಳು ಉಪದೇಶಿಸುವಂತಾಗಿದೆ.

೨. ವಿಶೇಷವಾಗಿ ಹೆಂಡತಿಯಿಂದ ತಮ್ಮ ಕುಟುಂಬವೇ ದುಃಖಗಳಿಂದ ಪಾರಾಗಿದೆ ಎಂದು ಧರ್ಮರಾಜನ ಪ್ರಾಂಜಲ ಒಪ್ಪಿಗೆ ವಸ್ತು ನಿಷ್ಠ ವಿಚಾರಕ್ಕೆ ಉದಾಹರಣೆಯಾಗಿದೆ. ಅರ್ವಾಚೀನ ಉದಾಹರಣೆಯಾಗಿ ಪುರಂದರ ದಾಸರು ಇದ್ದು ಹೆಂಡತಿ ಸಂತತಿ ಸಾವಿರವಾಗಲಿ ಇತ್ಯಾದಿಯಾಗಿ ಪತ್ನಿಯನ್ನು ಕೊಂಡಾಡಿದುದನ್ನು ನೋಡುತ್ತೇವೆ.

೩. ಸಂತಾನ ಪ್ರಾಪ್ತಿಗಾಗಿ ಸಾವಿತ್ರೀ ಹೋಮ ಅದಕ್ಕಾಗಿ ರಾಜನು ಜಿತೇಂದ್ರಿಯನಾಗಿ ಪರಿಮಿತಾಹಾರ ಸೇವಿಸುತ್ತಾ ೧೮ ವರ್ಷ ಮಾಡಿದ ತಪಸ್ಸು ಆತನಿಗೆ ಸಾವಿತ್ರೀ ಒಲಿದು ಶ್ರೇಷ್ಠ ಕನ್ಯಾ ಸಂತಾನ ಪ್ರಾಪ್ತಿಗೆ ಕಾರಣವಾಯಿತು. ಕಾರಣ ಯೋಗ್ಯ ಸಂತಾನಕ್ಕಾಗಿ ಸಾವಿತ್ರೀ ಉಪಾಸನೆಯನ್ನು ಮಾಡುವುದು.

೪. ಅಶ್ವಪತಿ ಬಯಸಿದ್ದು ಪುತ್ರ ಸಂತಾನ, ದೊರಕಿದ್ದು ಕನ್ಯಾ ಸಂತಾನ. ಅದನ್ನು ಸಾವಿತ್ರೀಯ ಅಣತಿಯಂತೆ ಸ್ವೀಕರಿಸಿದ. ದೇವರು ಕೊಟ್ಟುದುದನ್ನು ಆದರದಿಂದ ಸ್ವೀಕರಿಸುವುದು ಶ್ರೇಯಸ್ಸಿಗೆ ಕಾರಣವಾಗುತ್ತದೆ.

೫. ಕನ್ಯೆಯರು ಹೇಗೆ ಬದುಕಬೇಕು ಎಂಬುದಕ್ಕೆ ಸಾವಿತ್ರಿಯ ತಪೋ ಜೀವನವೇ ಸಾಕ್ಷಿ. ಆದ್ದರಿಂದ ಕನ್ಯೆಯರೂ ಕೂಡಾ ಧಾರ್ಮಿಕ ಜೀವನ ನಡೆಸಬೇಕು.

೬. ತನ್ನ ವಿವಾಹದ ಕಾಲ ಬಂದಿತೆಂದು ತಿಳಿಸಲು ಸಾವಿತ್ರಿಯು ಕೃತಾಂಜಲಿಯಿಂದ ತಂದೆಗೆ ನಮಸ್ಕರಿಸುತ್ತಾಳೆ. ತಂದೆಯನ್ನು ಯಾರೂ ಕನ್ಯೆಗಾಗಿ ಪ್ರಾರ್ಥಿಸದಿದ್ದಾಗ ತಂದೆ ಮಗಳಿಗೆ ವರಾನ್ವೇಷಣೆಗೆ ಅನುಮತಿ ನೀಡುತ್ತಾನೆ. ಕನ್ಯೆ ತಾನೇ ವರಾನ್ವೇಷಣೆ ಮಾಡುವುದೆಂದರೆ ತನ್ನ ಮನೆಯ ಹಿರಿಯರೊಡನೆ ಯೋಗ್ಯ ಕುಟುಂಬಗಳಿರುವ ಸ್ಥಳಗಳಿಗೆ ಹೋಗಿ ತನ್ನ ಕುಲಕ್ಕೆ ಯೋಗ್ಯ ವರನನ್ನು ಹುಡುಕುವುದೇ ಹೊರತು ಕಂಡ ಕಂಡ ವರನ್ನು ಪ್ರೀತಿಸುವುದಲ್ಲ.

೭. (೧) ತನ್ನ ಮಗಳಿಗೆ ಸೂಕ್ತ ವರನನ್ನು ಹುಡುಕುವುದು ತಂದೆಯ ಕರ್ತವ್ಯ. ಇಲ್ಲದಿದ್ದರೆ ಸಮಾಜದಲ್ಲಿ ನಿಂದ್ಯನಾಗುತ್ತಾನೆ. (ಅಪ್ರದಾತಾ ಪಿತಾ ವಾಚ್ಯಃ) (೨) ಪತ್ನಿಯ ಋತುಕಾಲದಲ್ಲಿ ಪತಿಯು ಆಕೆಯೊಡನೆ ಸಂಗಮ ಮಾಡುವುದೂ ಕರ್ತವ್ಯ. (೩) ತಂದೆ ಮರಣದ ನಂತರ ತಾಯಿಯ ಸಂರಕ್ಷಣಾ ಭಾರ ಮಕ್ಕಳ ಮೇಲೆ ಇರುತ್ತದೆ.

೮. ಮನಸಾ ಒಪ್ಪಿದ ವರನನ್ನು ಮತ್ತೆ ಮತ್ತೆ ಬದಲಾಯಿಸುವುದು ಅಧರ್ಮ. ವರನ ಭವಿಷ್ಯದಲ್ಲಿ ಎಷ್ಟೇ ಕರಾಳ ದಿನಗಳು ಬಂದರೂ ಅವನೊಡನೆ ಜೀವನ ನಡೆಸುವುದು ವಿವಾಹವಾದ ಮಹಿಳೆಯ ಕರ್ತವ್ಯ ಅದನ್ನು ತಪಸ್ಸೆಂದು ಭಾವಿಸಿ ಜೀವನ ನಡೆಸಿದಲ್ಲಿ ಯಶಸ್ಸು ಖಚಿತ.

೯. ಸಾವಿತ್ರಿಯ ವರನ ಆಯ್ಕೆಯಲ್ಲಿ ದೋಷವಿತ್ತು. ನಾರದರು ಹೇಳಿಯೇ ಬಿಟ್ಟರು. ಸತ್ಯ ಮುಚ್ಚಿಡಬಾರದು.

೧೦. ಸತ್ಯವಂತನ ಗುಣಗಳೂ ಆತನನ್ನು ಭವಿಷ್ಯ ದುಃಖದಿಂದ ಪಾರು ಮಾಡಿದ್ದ ಕಾರಣ ವರನಲ್ಲಿ ಸದ್ಗುಣಗಳೂ ಅತ್ಯವಶ್ಯ ಅವುಗಳಲ್ಲಿ ತಂದೆ ತಾಯಿಗಳ ಸೇವಾ ಭಾವನೆ ಸಕಾಲ ಸೇವೆ ಅವನನ್ನು ಆಪತ್ತುಗಳಿಂದ ಪಾರು ಮಾಡುವಲ್ಲಿ ಪಾತ್ರ ವಹಿಸುತ್ತದೆ.

೧೧. ನಾರದರ ಆಶೀರ್ವಾದವೂ ಸಾವಿತ್ರಿಗೆ ಅನುಕೂಲವಾಯಿತು. ಕಾರಣ ವಿವಾಹ ಪೂರ್ವದಲ್ಲಿ ಹಿರಿಯರ ಆಶೀರ್ವಾದಗಳು ಜೀವನದ ಸಮಸ್ಯೆಗಳಿಗೆ ಪರಿಹಾರ ನೀಡುತ್ತವೆ.

೧೨. ಮಗಳ ಆಶಯವನ್ನು ಗೌರವಿಸಿದ ಅಶ್ವಪತಿಯೂ ಮೆಚ್ಚಬಹುದಾದ ತಂದೆ.

೧೩. ವಿವಾಹದ ನಂತರ ಸಾವಿತ್ರಿಯ ಜೀವನ ಗಂಡ, ಅತ್ತೆ, ಮಾವ, ಆಶ್ರಮ ವಾಸಿಗಳ ಜೀವನದಂತೆಯೇ ಇತ್ತು. ಗಂಡನ ಮನೆಯ ಪರಿಸರಕ್ಕೆ ಅನುಗುಣವಾಗಿ ಹೆಂಡತಿಯಾದವಳು ಜೀವಿಸಬೇಕು. ತೌರಿನ ಐಶ್ವರ್ಯ ಭ್ರಮೆಯಲ್ಲಿರಬಾರದು. ಆದ್ದರಿಂದಲೇ ಸಾವಿತ್ರಿಯು ಎಲ್ಲ ವಸ್ತ್ರಾಭರಣಗಳನ್ನು ತ್ಯಜಿಸಿ ನಾರು ಮಡಿಯುಟ್ಟು ಋಷಿ ಜೀವನ ನಡೆಸಿದಳು.

೧೪. ದ್ಯುಮತ್ಸೇನನೂ ಅಷ್ಟೇ ಪ್ರಾಮಾಣಿಕ. ತನ್ನ ಪರಿಸ್ಥಿತಿಯ ಅರಿವಿದ್ದು ಮತ್ತೊಬ್ಬ ರಾಜನನ್ನು, ಆತನ ಮಗಳನ್ನು ಆಶ್ರಮ ಜೀವನಕ್ಕೆ ಒತ್ತಾಯ ಮಾಡಲಿಲ್ಲ. ಆಯ್ಕೆಯನ್ನು ಅವರಿಗೆ ಬಿಟ್ಟನು. ವಿವಾಹ ಪೂರ್ವದಲ್ಲಿ ಬೀಗರು ಹೇಗೆ ವರ್ತಿಸಬೇಕೆಂದು ಇದು ತಿಳಿಸುತ್ತದೆ. ಯಾವುದನ್ನು ಯಾರೂ ಮುಚ್ಚಿಡಬಾರದು.

೧೫. ಸಾವಿತ್ರಿಗೆ ತನ್ನ ಗಂಡನ ಆಯುಷ್ಯದ ಪರಿಜ್ಞಾನ ಮೊದಲೇ ಇತ್ತು. ಅದಕ್ಕಾಗಿ ಮೊದಲಿನಿಂದಲೂ ರಹಸ್ಯವಾಗಿಯೇ ಗಂಡನ ಹಿತಕ್ಕಾಗಿ ಗಂಡನ ಸೇವೆ, ಅತ್ತೆ ಮಾವಂದಿರ ಸೇವೆ ಹಾಗೂ ಆಶ್ರಮವಾಸಿಗಳ ಸೇವೆ ಮಾಡುತ್ತಾ ಅವರ ಮನ್ನಣೆಗೆ ಪಾತ್ರಳಾಗಿದ್ದಳು. ಆದ್ದರಿಂದ ಪ್ರತಿಯೊಬ್ಬ ವಿವಾಹಿತ ಮಹಿಳೆಯೂ ಕೂಡಾ ತನ್ನ ಮನೆಯ ಹಿರಿಯರ ಗಂಡನ ಸೇವೆಯೊಂದಿಗೆ ಪರಿಸರದಲ್ಲಿ ಸಜ್ಜನರ ಸೇವೆ ಮಾಡುವುದರಿಂದ ತನಗೂ, ತನ್ನ ಕುಟುಂಬದ ಹಿತವನ್ನು ಕಾಪಾಡಿಕೊಳ್ಳಬಹುದು.

೧೬. ತನ್ನ ಪತಿಯ ಸಾವು ಸಮೀಪಿಸಿದಾಗ ತೀವ್ರ ವ್ರತ – ನಿಷ್ಠೆಯಿಂದ ಉಪವಾಸವನ್ನು ವ್ರತ ಕೈಕೊಳ್ಳುತ್ತಾಳೆ. ಹಾಗೆಯೇ ಪ್ರತಿ ವಿವಾಹಿತ ಮಹಿಳೆಯೂ ಕೂಡಾ ಗಂಡನ ಒಳಿತಿಗಾಗಿ ಯಾವುದಾದರೊಂದು ಕೈಲಾದ ವ್ರತ ಮಾಡುವುದು ಸೂಕ್ತ. ಸಾವಿತ್ರಿ ತಾನು ಮಾಡುತ್ತಿದ್ದ ವ್ರತದ ಕಾರಣ ಯಾರಿಗೂ ಹೇಳಿರಲಿಲ್ಲ.

೧೭. ಸೊಸೆಯು ಮಾಡುವ ವ್ರತಕ್ಕೆ ಗಂಡ, ಅತ್ತೆ ಮಾವಂದಿರು ಪ್ರೋತ್ಸಾಹ ಕೊಡುವುದು ಉಚಿತ. ಆದರೆ ಆಕೆಯ ಸ್ವಾಸ್ಥ್ಯದ ಬಗ್ಗೆ ಕಾಳಜಿ ಕೂಡಾ ಅಷ್ಟೇ ಅವಶ್ಯ. ಅದನ್ನು ಸಾವಿತ್ರಿ ಗಂಡ, ಅತ್ತೆ ಮಾವ ತೋರಿಸುತ್ತಾರೆ.

೧೮. ತಾನು ಉಪವಾಸ ಪರಳಾಗಿದ್ದರೂ ಗಂಡನೊಡನೆ ಅಷ್ಟೇ ಉತ್ಸಾಹದಿಂದ ವನಕ್ಕೆ ತೆರಳುತ್ತಾಳೆ. ಗಂಡನೊಡನೆ ಇರಲು ತನಗಾಗುತ್ತಿರುವ ಯಾವುದೇ ವೇದನೆಗಳು ಅಡ್ಡಿ ಬರಬಾರದು ಅದೇ ನಿಜವಾದ ತಪಸ್ಸು. ತಾನು ಉಪವಾಸವಿದ್ದರೂ ಗಂಡನೊಡನೆ ನಗುನಗುತ್ತಾ ಇರುವುದೇ ನಿಜವಾದ ಪಾತಿವ್ರತ್ಯ – ಜೀವನ.

೧೯. ಸಾವಿತ್ರಿಯ ಪಾತಿವ್ರತ್ಯ ಯಮನ ದರ್ಶನಕ್ಕೆ ಕಾರಣವಾಯಿತು. ನಮ್ಮ ವ್ರತ ನಿಯಮಾನುಷ್ಠಾನಗಳು ಎಂದೂ ನಿಷ್ಫಲವಾಗುವುದಿಲ್ಲ. ದೇವತೆಗಳು ಅನುಗ್ರಹ ಮಾಡುತ್ತಾರೆ.

೨೦. ಸಾವಿತ್ರಿಯ ಮಾತುಗಳು ಯಮನ ಮನಸ್ಸನ್ನು ಗೆದ್ದವು. ಆದ್ದರಿಂದ ಮಹಿಳೆಯರೂ ಧರ್ಮದಂತೆ ಮಾತಾಡುವುದನ್ನು ಕಲಿಯಬೇಕು. ವಿಹಿತ ರೀತಿಯಲ್ಲಿ ಶಾಸ್ತ್ರದ ತಿಳುವಳಿಕೆ ದೇವತಾನುಗ್ರಹಕ್ಕೆ ಕಾರಣವಾಗುತ್ತದೆ.

೨೧. ಸಾವಿತ್ರಿ ಮಾತುಗಳು ಮಧುರವಾಗಿದ್ದವು ವಿನಯದಿಂದ ಕೂಡಿದ್ದವು ಯುಕ್ತಿಯುಕ್ತವಾಗಿದ್ದವು. ಆದ್ದರಿಂದ ಹಿರಿಯರೊಡನೆ ಮಾತನಾಡುವ ಶಾಸ್ತ್ರೀಯ ಕಲೆಯನ್ನು ರೂಢಿಸಿಕೊಂಡರೆ ಅವರ ಅನುಗ್ರಹ ಅಸಾಧ್ಯವಲ್ಲ.

೨೨. ಯಮಾನುಗ್ರಹದಿಂದ ಸಾವಿತ್ರಿ ವೈಧವ್ಯದಿಂದ ದೂರವಾಗಿ ಗಂಡ ದೀರ್ಘಾಯುವಾದ. ನೂರು ಮಕ್ಕಳು ಜನಿಸಿದರು. ಆದ್ದರಿಂದ ನಿತ್ಯವೂ ಪ್ರತಿಯೊಬ್ಬ ಮಹಿಳೆ ಯಮ ಸ್ತೋತ್ರ ಹಾಗೂ ಇತರೆ ದೇವ ಗುರುಸ್ತೋತ್ರ ಪಠಿಸಬೇಕು. ಅದರಿಂದ ತನಗೆ ಮಾಂಗಲ್ಯ ಭಾಗ್ಯ ಸೌಭಾಗ್ಯ ಸಿಗುತ್ತದೆ.

೨೩. ಸಾವಿತ್ರಿಯ ಗುಣ ಮೊದಲು ಗಂಡನ ಮನೆಯ ಯೋಗಕ್ಷೇಮ ನಂತರ ತನ್ನ ಮಾವನಿಗೆ ಕಣ್ಣು, ನಂತರ ರಾಜ್ಯ ಪ್ರಾಪ್ತಿ, ತಂದೆಗೆ ನೂರು ಜನ ಪುತ್ರ ಪ್ರಾಪ್ತಿ ವರ ಹಾಗೂ ತನಗೂ ಕೊನೆಗೆ ನೂರು ಜನ ಮಕ್ಕಳನ್ನು ಪಡೆಯುವ ವರ ಹೀಗೆ ೫ ವರಗಳನ್ನು ಯಮನಿಂದ ಪಡೆದು ದೇವತಾನುಗ್ರಹ ಪಡೆದಳು. ಆದ್ದರಿಂದ ವಿವಾಹಿತರು ಆದ್ಯತೆ ಮೊದಲು ಅತ್ತೆಮನೆ, ನಂತರ ತೌರುಮನೆಯ ಯೋಗಕ್ಷೇಮವಾಗಿರಬೇಕು. ಹೀಗಾದಲ್ಲಿ ತನ್ನ ಸೌಭಾಗ್ಯ ಪ್ರಾಪ್ತಿ ಮೊದಲಾದವು ತಾನೇ ತಾನಾಗಿ ಬರುತ್ತವೆ.

೨೪. ಸಾವಿತ್ರಿಯ ಜೀವನ ರೀತಿ, ಆಕೆಗೆ ತನ್ನ ಹಡೆದವರ, ಅತ್ತೆ ಮನೆಯಲ್ಲಿ ಹಾಗೂ ಗಂಡ, ನೆರೆ ಹೊರೆಯವರು ಎಲ್ಲರಿಗೂ ಮಾದರಿಯಾಯಿತು ಹಾಗೆ ಎಲ್ಲರೂ ಬಾಳಬೇಕು. ಆದ್ದರಿಂದ ಒಬ್ಬ ವಿವಾಹಿತ ಮಹಿಳೆ ಸಾವಿತ್ರಿಯಂತಿದ್ದರೆ ಏನು ಸಿಗದು? ಯಾರಿಗೆ ಸಿಗದು? ಎಲ್ಲ ಸತ್ಫಲಗಳು ಎಲ್ಲರಿಗೂ ಸಿಗುತ್ತವೆ. ಹೀಗಾಗಿ ಸ್ತ್ರೀಯ ಬದುಕು ಧಾರ್ಮಿಕವಾಗಿರಲಿ. ಆಗ ಸಮಾಜದಲ್ಲಿ ಯಾವುದೇ ತರಹದ ಶೋಷಣೆಗೆ ಅವಕಾಶವಿರುವುದಿಲ್ಲ.

ಇತ್ಯಾದಿ .....

*****

# ಉದ್ಯೋಗಪರ್ವ

## ಸೇನೋದ್ಯೋಗಪರ್ವ

## ೫೪. ಇಂದ್ರವಿಜಯ

ಶ್ರೀಮನ್ನಾರಾಯಣನ ಅನುಗ್ರಹದಿದ ಪಾಂಡವರು ೧೨ ವರ್ಷ ವನವಾಸ ಹಾಗೂ ವಿರಾಟ ನಗರದಲ್ಲಿ ಒಂದು ವರ್ಷ ಅಜ್ಞಾತ ವಾಸವನ್ನು ಕಳೆದ ನಂತರ ತಮ್ಮ ಪಾಲಿನ ರಾಜ್ಯವನ್ನು ಕನಿಷ್ಟ ೫ ಹಳ್ಳಿ, ೧ ಹಳ್ಳಿಯನ್ನೂ ದುರ್ಯೋಧನನಿಂದ ಪಡೆಯಲಿಲ್ಲವಾಗಿ ಯುದ್ಧದಿಂದಲೇ ದುರ್ಯೋಧನನ್ನು ಸಂಹರಿಸಿ ತಮ್ಮ ಪಾಲಿನ ರಾಜ್ಯವನ್ನು ಪಡೆಯಲು ಉದ್ಯುಕ್ತರಾಗಿ ಸೇನಾ ಸಂಗ್ರಹ ಮಾಡಿದರು. ಅತ್ತ ದುರ್ಯೋಧನನೂ ಮಾಡಿದನು. ಪಾಂಡವರನ್ನು ಭೇಟಿಯಾಗಿ ಅವರಿಗೆ ಸಹಾಯ ಮಾಡಲು ಹೊರಟ ಶಲ್ಯ ರಾಜನಿಗೆ ದಾರಿಯಲ್ಲಿ ಪುಷ್ಕಲ ರಾಜೋಪಚಾರ ಮಾಡಿ ದುರ್ಯೋಧನನು ತನ್ನೆಡೆಗೆ ಸೆಳೆದುಕೊಂಡನು. ಶಲ್ಯನ ಯೋಜನೆ-ಯೋಚನೆ ವಿಫಲವಾಯಿತು.

ನಂತರ ಶಲ್ಯನು ದುರ್ಯೋಧನನಿಗೆ ಹೇಳಿ ಪಾಂಡವರ ಶಿಬಿರಕ್ಕೆ ಬಂದನು. ನಡೆದುದನ್ನು ಹೇಳಿದಾಗ ಧರ್ಮರಾಜನು ತನಗೆ ಯುದ್ಧ ಸಹಾಯ ಮಾಡಲು ಆಗದಿದ್ದರೂ ಕರ್ಣ ಸಾರಥಿಯಾದಾಗ ಅವನ ತೇಜೋ ಭಂಗ ಮಾಡುವ ಮೂಲಕ ಅವನನ್ನು ಅರ್ಜುನನು ಸಂಹಾರ ಮಾಡಲು ಸಹಾಯ ಮಾಡಲು ಕೋರಿದನು. ಶಲ್ಯನನ್ನು. ಆಗಲಿ ಎಂದ ಶಲ್ಯನು ಕರ್ಣನ ಸಾರಥ್ಯ ಮಾಡುವುದಲ್ಲದೆ ಅವನ ತೇಜೋ ಭಂಗ ಮಾಡುತ್ತೇನೆ. ಇನ್ನೇನಾದರೂ ಸಹಾಯವನ್ನು ಮಾಡಲು ಸಿದ್ಧನೆಂದು ನುಡಿಯುತ್ತಾ ಕರ್ಣನ ದೋಷವನ್ನು ತೆರೆದಿಟ್ಟನು. ನೋಡು ಧರ್ಮರಾಜ! ಕರ್ಣನು ತನ್ನನ್ನು ಕೃಷ್ಣನಿಗೆ ಸಮನೆಂದು ಭ್ರಮಿಸಿದ್ದಾನೆ. ಆದ್ದರಿಂದ ಅವನ ಸಂಹಾರಕ್ಕಾಗಿ ನಾನು ಎಲ್ಲ ಸಹಾಯ ಮಾಡುವೆನೆನ್ನುತ್ತಾನೆ. ಅಮಾಯಕ ಧರ್ಮರಾಜನು ಕರ್ಣನ ತೇಜೋವಧೆ, ಯದ್ಯಪಿ ನಿನ್ನ ಕರ್ತವ್ಯವಲ್ಲ; ಆದರೂ ಮಾಡಲು ಬೇಡುತ್ತೇನೆ ಎಂದಾಗ ಶಲ್ಯನು ಒಪ್ಪಿ ಧರ್ಮರಾಜನನ್ನು ಸಾಂತ್ವನ ಗೊಳಿಸುತ್ತಾನೆ.

ರಾಜ! ಹಿಂದೆ ದೇವಾನು ದೇವತೆಗಳು ಸಹ ಮಹಾದುಃಖ ಅನುಭವಿಸಿದ್ದಾರೆ. ನೀನು ರಾಜ್ಯ ಕಳೆದುಕೊಂಡೆ. ದ್ರೌಪದಿ ಮಾನಭಂಗಕ್ಕೆ ದುರ್ಯೋಧನಾದಿಗಳು

ಪ್ರಯತ್ನಿಸಿ ನಿನಗೆ ದುಃಖ ಕೊಟ್ಟರು. ಕೀಚಕ, ಜಟಾಸುರ, ಜಯದ್ರಥ ಇವರೆಲ್ಲ ನಿಮಗೆ ತೊಂದರೆ ಕೊಟ್ಟದ್ದು ಬಲ್ಲೆ. ವಿಧಿ ಬರಹ ಯಾರನ್ನೂ ಬಿಡದು. ನಿಮಗೆ ಆದ ದುಃಖದ ಬಗ್ಗೆ ಕೋಪಿಸಿಕೊಳ್ಳಬೇಡ. ನೀವು ಅನುಭವಿಸಿದ ದುಃಖ ಮುಂದೆ ಮಹಾ ಸುಖಕ್ಕೆ ಕಾರಣವಾಗುತ್ತದೆ. ಚಿಂತಿಸಬೇಡ ಹಿಂದೆ ಶಚೀ ಸಹಿತನಾದ ಇಂದ್ರನೂ ಸಹ ಭಾರಿ ದುಃಖ ಅನುಭವಿಸಿದ, ಎಂದಾಗ ಧರ್ಮರಾಜನು ಇಂದ್ರನು ಅನುಭವಿಸಿದ, ಎಂದಾಗ ಧರ್ಮರಾಜನು ಇಂದ್ರನು ಅನುಭವಿಸಿದ ದುಃಖಕ್ಕೆ ಕಾರಣವಾದ ಚರಿತ್ರೆಯನ್ನು ಹೇಳೆಂದನು. ಆಗ ಶಲ್ಯರಾಜನು ಇಂದ್ರನು ತ್ರಿಶಿರಸ ಹಾಗೂ ವೃತ್ರಾಸುರರನ್ನು ಸಂಹರಿಸಿ ಬ್ರಹ್ಮ ಹತ್ಯಾಗ್ರಸ್ತನಾಗಿ ಹೇಗೆ ದುಃಖಿಸಿದ ಎಂಬುದನ್ನು ಹೇಳಲಾರಂಭಿಸಿದನು.

**ಯುಧಿಷ್ಠಿರ ಉವಾಚ**

**'ಕರ್ಣಸ್ಯ ಭವತಾ ಕಾರ್ಯಂ ಸಾರಥ್ಯಂ ನಾತ್ರ ಸಂಶಯ: ।**
**ತೇಜೋವಧಶ್ಚ ತೇ ಕಾರ್ಯಃ ಸಾರಥೇಸ್ಮಜ್ಜಯಾವಹಃ ।**
**ಅಕರ್ತವ್ಯಮಪಿ ಹ್ಯೇತತ್ ಕರ್ತುಮರ್ಹಸಿ ಮಾತುಲ' ॥**

**ಶಲ್ಯ ಉವಾಚ**

**'ಅಹಂ ತಸ್ಯ ಭವಿಷ್ಯಾಮಿ ಸಂಗ್ರಾಮೇ ಸಾರಥಿರ್ಧ್ರುವಮ್ ।**
**ವಾಸುದೇವೇನ ಹಿ ಸಮಂ ನಿತ್ಯಂ ಮಾಂ ಸ ಹಿ ಮನ್ಯತೇ ॥**
**ತಸ್ಯಾಹಂ ಕುರುಶಾರ್ದೂಲ ಪ್ರತೀಪಮಹಿತಂ ವಚಃ ।**
**ಯಥಾ ಸ ಹೃತದರ್ಪಶ್ಚ ಹೃತತೇಜಾಶ್ಚ ಪಾಂಡವ ।**
**ಭವಿಷ್ಯತಿ ಸುಖಂ ಹಂತುಂ ಸತ್ಯಮೇತದ್ಬ್ರವೀಮಿ ತೇ ।**
**ಯಚ್ಚಾನ್ಯದಪಿ ಶಕ್ಷ್ಯಾಮಿ ತತ್ ಕರಿಷ್ಯಾಮಿ ತೇ ಪ್ರಿಯಮ್ ॥**
**ಯಚ್ಚ ದುಃಖಂ ತ್ವಯಾ ಪ್ರಾಪ್ತಂ ದ್ಯೂತೇ ವೈ ಕೃಷ್ಣಯಾ ಸಹ ।**
**ಪರುಷಾಣಿ ಚ ವಾಕ್ಯಾನಿ ಸೂತಪುತ್ರಕೃತಾನಿ ವೈ ।**
**ಜಟಾಸುರಾತ್ ಪರಿಕ್ಲೇಶ ಕೀಚಕಾಚ್ಚ ಮಹಾದ್ಯುತೇ ।**
**ಸರ್ವಂ ದುಃಖಮಿದಂ ವೀರ ಸುಖೋದರ್ಕಂ ಭವಿಷ್ಯತಿ ।**
**ನಾತ್ರ ಮನ್ಯುಸ್ತ್ವಯಾ ಕಾರ್ಯೋ ವಿಧಿರ್ಹಿ ಬಲವತ್ತರಃ ।**
**ದುಃಖಾನಿ ಚ ಮಹಾತ್ಮಾನಃ ಪ್ರಾಪ್ನುವಂತಿ ಯುಧಿಷ್ಠಿರ ।**
**ದೇವೈರಪಿ ಹಿ ದುಃಖಾನಿ ಪ್ರಾಪ್ತಾನಿ ಜಗತೀಪತೇ ।**
**ಇಂದ್ರೇಣ ಶ್ರೂಯತೇ ರಾಜನ್ ಸಭಾರ್ಯೇಣ ಮಹಾತ್ಮನಾ ।**
**ಅನುಭೂತಂ ಮಹದ್ದುಃಖಂ ದೇವರಾಜೇನ ಭಾರತ ॥**

**ಉದ್ಯೋಗಪರ್ವ ಅಧ್ಯಾಯ ೮–೪೩ ರಿಂದ ೫೪**

ಆಗ ಧರ್ಮರಾಜನು ಇಂದ್ರನು ಅನುಭವಿಸಿದ ಘೋರವಾದ ದುಃಖದ ವಿವರವನ್ನು ಕೇಳಿದನು. ಅದಕ್ಕೆ ಶಲ್ಯನು,

[1]ರಾಜನ್! ತ್ವಷ್ಟ್ರು ಎಂಬ ದೇವಶ್ರೇಷ್ಠನಾದ ಮಹಾ ತಪಸ್ವಿಯಾದ ಪ್ರಜಾಪತಿಗೆ (ಶುಕ್ರಾಚಾರ್ಯರ ಮಗ ಮತ್ತು ದ್ವಾದಶ ಆದಿತ್ಯರಲ್ಲಿ ಒಬ್ಬ) ಇಂದ್ರನ ಮೇಲಿನ ದ್ರೋಹ ಬುದ್ಧಿಯಿಂದ ಮೂರು ತಲೆಗಳಿರುವ (ಸೂರ್ಯ ಚಂದ್ರಾಗ್ನಿಗಳಂತೆ ಪ್ರಜ್ವಲಿಸುವ) ಮೂರು ಮುಖಗಳಿದ್ದವು. ಅವನ ಹೆಸರು ವಿಶ್ವರೂಪ ಎಂದು. ಇಂದ್ರ ದೇವರ ಸ್ಥಾನವನ್ನು ಬಯಸುತ್ತಿದ್ದ ಆತನು ತನ್ನ ಒಂದು ಮುಖದಿಂದ ವೇದಾಧ್ಯಯನವನ್ನು ಮಾಡುತ್ತಾ ಎರಡನೇ ಮುಖದಿಂದ ಸುರಾಪಾನವನ್ನು ಮಾಡುತ್ತಾ, ಮೂರನೇ ಮುಖದಿಂದ ಎಲ್ಲ ದಿಕ್ಕುಗಳನ್ನು ಪಾನ ಮಾಡುವವನೋ ಏನೋ ಎಂಬಂತೆ ನೋಡುತ್ತಿದ್ದನು. ಅಲ್ಲದೆ ವಿಶ್ವರೂಪನು ಮಹಾ ತಪಸ್ವಿಯೂ, ಜಿತೇಂದ್ರಿಯನೂ ಆಗಿದ್ದನು. ಯಾವಾಗಲೂ ಕಠಿಣತಪವನ್ನು ಮಾಡುತ್ತಿದ್ದನು. ಇದರಿಂದ ಇಂದ್ರನಿಗೆ ಸಹಜವಾಗಿಯೇ ಆತಂಕವುಂಟಾಗಿ ಅವನ ತಪೋ ಭಂಗಕ್ಕಾಗಿ ಕೆಲವು ಅಪ್ಸರೆಯರನ್ನು ನಿಯೋಜಿಸಿದನು. ಅವರು ತಮ್ಮ ಎಲ್ಲ ಹಾವಭಾವ, ಸೌಂದರ್ಯ ಪ್ರದರ್ಶನಗಳನ್ನು ತುಂಬಾ ಕುಶಲತೆಯಿಂದ ಮಾಡಿದರೂ ವಿಶ್ವರೂಪನ ತಪೋಭಂಗವನ್ನು ಮಾಡದವರಾಗಿ ತಿರುಗಿ ಇಂದ್ರ ದೇವರಿಗೆ ತಮ್ಮ ಅಸಹಾಯಕತೆಯನ್ನು ತೋಡಿಕೊಂಡರು. ಇಂದ್ರನು ಅದನ್ನು ಒಪ್ಪಿ ಅಪ್ಸರೆಯರಿಗೆ ಸೂಕ್ತವಾಗಿ ಗೌರವಿಸಿ ಕಳಿಸಿದನು.

[2]ಆದರೆ ಇಂದ್ರನ ಆತಂಕ (ವಿಶ್ವರೂಪನ ತಪೋಭಂಗವಾಗಲಿಲ್ಲವೆಂಬ ಭಯ) ತಾನು ಇಂದ್ರ ಪದವನ್ನು ಎಲ್ಲಿ ಕಳೆದುಕೊಂಡು ಬಿಡುವೆನೋ ಎಂಬ ಭಯದಿಂದ ಅವನನ್ನು ವಜ್ರಾಯುಧದಿಂದ ಸಂಹರಿಸಲು ನಿರ್ಧರಿಸಿ ತಪವಗೈಯುತ್ತಿದ್ದ ತ್ರಿಶಿರಸಿನ ಮೇಲೆ ವಜ್ರಾಯಧ ಪ್ರಯೋಗಿಸಿದ ಪರಿಣಾಮವಾಗಿ ಪರ್ವತದ ಶಿಖರವು ಕೆಳಗೆ ಬೀಳುವಂತೆ ಭೂಮಿಯ ಮೇಲೆ ಹತನಾಗಿ ಬಿದ್ದನು. ತನ್ನ ಶತೃ ವಿಶ್ವರೂಪನು ತನಗಿಂತ ದುರ್ಬಲನಾಗಿದ್ದರೂ (ಶತ್ರು ದುರ್ಬಲನಾದರೂ) ಉದಾಸೀನ ಮಾಡಬಾರದೆಂಬ ರಾಜ್ಯಶಾಸ್ತ್ರ ನೀತಿಯಿಂದ ಇಂದ್ರ ಹಾಗೆ ಮಾಡಿದನು.

'ಶತ್ರುಃ ಪ್ರವೃದ್ಧೋ ನೋಪೇಕ್ಷ್ಯೋ ದುರ್ಬಲೋಪಿ ಬಲೀಯಸಾ ।
ಶಾಸ್ತ್ರಬುಧ್ಯಾ ವಿನಿಶ್ಚಿತ್ಯ ಕೃತ್ವಾ ಬುದ್ಧಿಂ ವಧೇ ದೃಢಾಂ' ॥ ೯-೨೨

'ಸ ಪಪಾತ ಹತಸ್ತೇನ ವಜ್ರೇಣ ದೃಢಮಾಹತಃ ।
ಪರ್ವತಸ್ಯೇವ ಶಿಖರಂ ಪ್ರಣುನ್ನಂ ಮೇದಿನೀತಲೇ' ॥ ೯-೨೪

---

೧ ಭಾಗವತ ಷಷ್ಠಸ್ಕಂಧದಲ್ಲಿಯೂ ಈ ಕಥೆ ಬಂದಿದೆ. ಸ್ಕ. ೬; ಅ. ೬ರಿಂದ ೧೭ ಇಲ್ಲಿ ನಹುಷ ಚರಿತ್ರ ೧೩ನೆ ಅಧ್ಯಾಯದಲ್ಲಿ ಬಂದಿದೆ. ಭಾರತದ ಆದಿ, ಸಭಾ, ವಿರಾಟಪರ್ವಗಳಲ್ಲಿಯೂ, ದೇವೀಭಾಗವತದಲ್ಲಿಯೂ, ವಾಯು ಮತ್ತು ಬ್ರಹ್ಮಪುರಾಣಗಳಲ್ಲೂ ನಹುಷಚರಿತ್ರೆ, ವೃತ್ರಾಸುರಚರಿತ್ರೆ ಮೊದಲಾದವುಗಳು ಬಂದಿವೆ.

೨ ಉದ್ಯೋಗಪರ್ವ ಅಧ್ಯಾಯ ೯ - ೩-೧೯; ಅಧ್ಯಾಯ ೯- ೨೦,೨೧.

[1]ಹೀಗೆ ಶತ್ರು ಸಂಹೃತನಾದರೂ ಇಂದ್ರನಿಗೆ ಅವನು ಬದುಕಿದವನಂತೆಯೇ ತೇಜಸ್ವಿಯಾಗಿಯೇ ಕಂಡನು. ಅದರಿಂದ ಇಂದ್ರನಿಗೆ ಸಮಾಧಾನವಾಗಲಿಲ್ಲ. ಮತ್ತಷ್ಟು ಹೆದರಿದನು. ಆಗ ತ್ರಿಶಿರಸಿನ ಶವ ಬಿದ್ದ ಅರಣ್ಯದೆಡೆ ಕೊಡಲಿಯನ್ನು ಹಿಡಿದುಕೊಂಡು [2]ತಕ್ಷನು (ವಿಶ್ವಕರ್ಮನು) ಬಂದನು. ಇಂದ್ರನು ಅವನನ್ನು ಕುರಿತು ನಿನ್ನ ಕೊಡಲಿಯಿಂದ ಈ ಶವದ ಮೂರೂ ತಲೆಗಳನ್ನು ಕತ್ತರಿಸು ಎಂದು ಹೇಳಿದನು ಅದಕ್ಕೆ ಆ ಬಡಗಿಯು (ತಕ್ಷನು) ಇವನು (ಶವರೂಪದ) ಭಾರಿ ಹೆಗಲುಳ್ಳವನು. ಅವನ ರುಂಡ ಮುಂಡಗಳನ್ನು ಕತ್ತರಿಸಿ ಬೇರ್ಪಡಿಸಲು ಈ ಕೊಡಲಿಯಿಂದ ಅಸಾಧ್ಯ. ಅಲ್ಲದೆ ಇಂತಹ ಕೆಟ್ಟ ಕೆಲಸವನ್ನು ನಾ ಮಾಡಲಾರೆ ಎಂದನು. ಆಗ ಇಂದ್ರನು ನನ್ನ ಅನುಗ್ರಹದಿಂದ ನಿನ್ನ ಕೊಡಲಿ ವಜ್ರದಂತಾಗುತ್ತದೆ. ಹೆದರ ಬೇಡ ಮುಂದುವರೆಯೆಂದಾಗ ತಕ್ಷನು ಇಂತಹ ಘೋರವಾದ ಕೆಲಸ ಮಾಡುತ್ತಿರುವ ನೀನಾರು? ಎಂದು ಕೇಳಿದನು. ಅದಕ್ಕೆ ಇಂದ್ರನು ನಾನು ಇಂದ್ರ ದೇವರಾಜ. ಹೆಚ್ಚು ವಿಚಾರ ಮಾಡದೆ ಶಿರಸ್ಸುಗಳನ್ನು ಕತ್ತರಿಸು ಎಂದಾಗ ತಕ್ಷನು [3]ಇಂತಹ ಕ್ರೂರ ಕೆಲಸ ಮಾಡಲು ನಿನಗೆ ನಾಚಿಕೆಯಾಗದೆ? ಋಷಿ ಪುತ್ರನಾದ ಇವನನ್ನು ಕೊಂದು ಬ್ರಹ್ಮಹತ್ಯೆಯನ್ನು ಮಾಡಿದ ಭಯವೂ ಇಲ್ಲವೆ? ಎಂದು ಕೇಳಿದನು. ಆಗ ಇಂದ್ರನು ಇವನು ನನ್ನ ಶತ್ರು. ಬ್ರಹ್ಮ ಹತ್ಯೆ ದೋಷ ಬಂದಿದ್ದರೂ ನಾನು ನಂತರ ಆ ಪಾಪ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತೇನೆ. ಇವನಿಂದ ನನಗೆ ಭಯವಿನ್ನೂ ಹೋಗಿಲ್ಲ. ಕಾರಣ ಕೂಡಲೆ ಇವನ ಕತ್ತುಗಳನ್ನು ಕತ್ತರಿಸು. ನಿನಗೆ ಅನುಗ್ರಹ ಮಾಡುವೆ. ಇನ್ನು ಮೇಲೆ ಮನುಷ್ಯರು ಯಜ್ಞ ಮಾಡುವಾಗ ಯಜ್ಞ ಪಶುವಿನ ಶಿರಸ್ಸನ್ನು ನಿನಗೆ ಹವಿರ್ಭಾಗವಾಗಿ ಕೊಡುವಂತೆ ವರ ನೀಡುತ್ತೇನೆ. ಆದ್ದರಿಂದ ನನಗೆ ಪ್ರಿಯವಾದ ಈ ಕಾರ್ಯವನ್ನು ಮಾಡು ಎಂದನು.

**'ಶಿರಃ ಪಶೋಸ್ತೇ ದಾಸ್ಯಂತಿ ಭಾಗಂ ಯಜ್ಞೇಷು ಮಾನವಾಃ ।**
**ಏಷ ತೇಽನುಗ್ರಹಸ್ತಕ್ಷನ್ ಕ್ಷಿಪ್ರಂ ಕುರು ಮಮ ಪ್ರಿಯಮ್' ॥**

ಹೀಗೆ ಇಂದ್ರನ ಮಾತಿನಂತೆ ತಕ್ಷನು ತ್ರಿಶಿರಸ-ಶವದ ಶಿರಸ್ಸುಗಳನ್ನು ತನ್ನ ಕೊಡಲಿಯಿಂದ ಕತ್ತರಿಸಲು ಕಪಿಂಜಲ, ತಿತ್ತಿರ ಹಾಗೂ ಕಲವಿಂಕ ಎಂಬ ಮೂರು ಜಾತಿಯ ಪಕ್ಷಿಗಳು ಹೊರ ಬಂದವು.

**'ಶಿರಾಂಸ್ಯಥ ತ್ರಿಶಿರಸಃ ಕುಠಾರೇಣಾಚ್ಛಿನತ್ ತದಾ ।**
**ನಿಕೃತ್ತೇಷು ತತಸ್ತೇಷು ನಿಷ್ಕ್ರಾಮನ್ನಂಡಜಾಸ್ತ್ವಥ ।**
**ಕಂಪಿಂಜಲಾಸ್ತಿತ್ತಿರಾಶ್ಚ ಕಲವಿಂಕಾಶ್ಚ ಸರ್ವಶಃ' ॥** **೯-೩೮,೩೯**

---

೧ ಅಧ್ಯಾಯ ೯/೩೦ ರಿಂದ ೩೪

೨ "ತಕ್ಷಾ ವಿಶ್ವಕರ್ಮಾ" ಎಂದು ಶ್ರೀವಾದಿರಾಜರು ಲಕ್ಷಾಲಂಕಾರದಲ್ಲಿ ಅರ್ಥ ಬರೆದಿದ್ದಾರೆ. (ಸೋದೆಮಠ ಪ್ರಕಾಶನ: ಲಕ್ಷಾಲಂಕಾರ ಭಾಗ - ೧, ಪುಟ. ೩೬೯)

೩ ಕ್ರೂರೇಣ ನಾಪತ್ರಪಸೇ ಕಥಂ ಶಕ್ರೇಹ ಕರ್ಮಣಾ ।
ಋಷಿ ಪುತ್ರಮಿಮಂ ಹತ್ವಾ ಬ್ರಹ್ಮಹತ್ಯಾ ಭಯಂ ನ ತೇ ॥ - ೯/೩೪

ವೇದಾಧ್ಯಯನ ಹಾಗೂ ಸೋಮಪಾನ ಮಾಡುತ್ತಿದ್ದ ಮುಖದಿಂದ ಜಾತಕ ಪಕ್ಷಿಗಳೂ (ಕಪಿಂಜಲ), ಅಗ್ನಿಯಂತಿದ್ದ ಮುಖದಿಂದ ತಿತ್ತಿರ ಪಕ್ಷಿಗಳೂ (ಕೆಂಡನುಂಗ ಪಕ್ಷಿಗಳೂ), ಸುರಾಪಾನ ಮಾಡುತ್ತಿದ್ದ ಮೂರನೇ ಮುಖದಿಂದ ಗುಬ್ಬಿ ಹಾಗೂ ಗಿಡುಗಗಳು ಹೊರಬಂದವು. (ಅಧ್ಯಾಯ ೯-೪೦ರಿಂದ೪೨) ನಂತರ ಇಂದ್ರಾನುಗ್ರಹ ಪಡೆದ ತಕ್ಷನೂ ಸಂತೋಷದಿಂದ ತನ್ನ ಮನೆಗೆ ತೆರಳಿದನು. ಇದರಿಂದ ಇಂದ್ರನೂ ತಾನು ಕೃತಾರ್ಥನಾದೆನೆಂದು ಭಾವಿಸಿ ಸ್ವರ್ಗಕ್ಕೆ ತೆರಳಿದನು.

ಇಂದ್ರನು ತ್ರಿಶಿರಸ್ಸನ್ನು ಸಂಹರಿಸಿದುದನ್ನು ಕೇಳಿದ ಪ್ರಜಾಪತಿಯು ಕೆಂಡಾಮಂಡಲ ಕೋಪಗೊಂಡು ಹೀಗೆ ನುಡಿದನು. 'ನನ್ನ ಮಗ ತ್ರಿಶಿರಸ್ ಜಿತೇಂದ್ರಿಯನಿದ್ದ. ನಿತ್ಯ ತಪೋನಿರತನಾಗಿದ್ದು ಯಾವ ಅಪರಾಧದಿಂದ ಇಂದ್ರನು ನನ್ನ ಮಗನನ್ನು ಕೊಂದನು? ಮಗ ನಿರಪರಾಧಿ. ಆದ್ದರಿಂದ ನಾನೀಗ ಇಂದ್ರನನ್ನು ಸಂಹರಿಸುವ 'ಪುತ್ರ' ನನ್ನು ಹುಟ್ಟಿಸುತ್ತೇನೆ. [೧]ನನ್ನ ತಪೋಬಲವನ್ನು ಲೋಕಗಳು ನೋಡಲ್ಲಿ ಪಾಪಿಯಾದ ಇಂದ್ರನೂ ನನ್ನ ತಪೋವೀರ್ಯವನ್ನು ನೋಡಲಿ' ಎಂದೆನ್ನುತ್ತಾ ಭಾರೀ ಕೋಪದಿಂದ ಅಗ್ನಿಯಲಿ ಹೋಮಿಸಿ 'ವೃತ್ರ' ನನ್ನು ಪಡೆದು ಹೀಗೆ ನುಡಿದನು.

**'ಇಂದ್ರಶತ್ರೋ ವಿವರ್ಧಸ್ವ ಪ್ರಭಾವಾತ್ ತಪಸೋ ಮಮ'** ।

ಎಲೈ ಇಂದ್ರನ ಶತ್ರುವೇ! ನೀನು ನನ್ನ ತಪಃ ಪ್ರಭಾವದಿಂದ ಬೆಳೆ' ಎಂದಾಗ ಅವನು ಸೂರ್ಯಾಗ್ನಿಯಂತೆ ತೇಜಸ್ಸುಳ್ಳವನಾಗಿ ಆಕಾಶವನ್ನು ಆಕ್ರಮಿಸಿ 'ಏನು ಮಾಡಲಿ' ಎಂದ. ಆಗ ತ್ವಷ್ಟ್ರುವು 'ಇಂದ್ರನನ್ನು ಕೊಲ್ಲು' ಎಂದ ಕೂಡಲೆ ವೃತ್ರನು ಸ್ವರ್ಗಕ್ಕೆ ತೆರಳಿದ. ಆಗ ಇಂದ್ರ ವೃತ್ರರ ನಡುವೆ ಘನಘೋರ ಯುದ್ಧವಾಯಿತು. ಇಂದ್ರನನ್ನು ತನ್ನೆರಡು ಬಾಹುಗಳಿಂದ ತಬ್ಬಿ, ದೊಡ್ಡ ಬಾಯಿಯಲ್ಲಿ ಹಾಕಿಕೊಂಡು ನುಂಗಿಯೇ ಬಿಟ್ಟನು. ಆಗ ದೇವತೆಗಳೆಲ್ಲ ಕ್ಷೋಭೆಗೊಂಡರು. ಅವರೆಲ್ಲ ವೃತ್ರ ನಾಶಕ್ಕಾಗಿ **'ಜೃಂಭಿಕಾ'** ಎನ್ನುವವಳನ್ನು, ತಮ್ಮ ಶಕ್ತಿಗಳೆನ್ನೆಲ್ಲ ಶೇಖರಿಸಿ ಸೃಷ್ಟಿಸಿದರು. ವೃತ್ರನ ಮುಂದೆ ಆಕೆಯನ್ನು ಕಳಿಸಿದರು. ಆಕೆಯ ಪ್ರಭಾವದಿಂದ ವೃತ್ರ ಆಕಳಿಸಿದ ಕೂಡಲೆ ಇಂದ್ರನು ವೃತ್ರನ ಉದರದಿಂದ ತನ್ನ ರೂಪವನ್ನು ಸಂಕುಚಿತಗೊಳಿಸಿ ಹೊರಗೆ ಬಂದನು. ಅಂದಿನಿಂದ ಈ ಜೃಂಬಿಕೆಯೇ ಸಕಲ ಲೋಕಗಳನ್ನು ಆವರಿಸಿದಳು.

ಮತ್ತೆ ವೃತ್ರಾಸುರನಿಗೂ, ಇಂದ್ರನ ನೇತೃತ್ವದಲ್ಲಿನ ದೇವತೆಗಳ ಮಧ್ಯೆ ಘೋರಯುದ್ಧ ಬಹುಕಾಲ ನಡೆಯಿತು. ಆದರೆ ವೃತ್ರನ ಶಕ್ತಿ ಮಾತ್ರ ಕುಂದದೆ ವೃದ್ಧಿಯಾಗುತ್ತಿತ್ತು. ಹೀಗಾಗಿ ಇಂದ್ರನು ಯುದ್ಧದಿಂದ ಹಿಮ್ಮೆಟ್ಟಲು ಖಿನ್ನರಾದ ದೇವತೆಗಳು ಇಂದ್ರನ ಬಳಿಗೆ ಬಂದು ಋಷಿಗಳೊಡನೆ ಮುಂದೇನು ಮಾಡಬೇಕೆಂದು

೧ ತಸ್ಮಾತ್ ಶಕ್ರ ವಿನಾಶಾಯ ವೃತ್ರ(ಪುತ್ರ)ಮುತ್ಪಾದಯಾಮ್ಯಹಮ್ ।
"ಪುತ್ರಮುತ್ಪಾದಯಾಮ್ಯಹಂ" ಎನ್ನುವುದೇ ಸರಿಯಾದ ಪಾಠವೆನ್ನಿಸುತ್ತದೆ.

ಯೋಚಿಸತೊಡಗಿದರು. ಎಲ್ಲರೂ ವೃತ್ರಾಸುರ ಸಂಹಾರೇಚ್ಛುಗಳಾಗಿ ಮನಸಾ ವಿಷ್ಣುವನ್ನು ಮಂದರ ಪರ್ವತದ ಶಿಖರದ ಕಡೆಗೆ ಹೋಗಿ ಧ್ಯಾನ ಮಾಡಿದರು.

'ಜಗ್ಮುಃ ಸರ್ವೇ ಮಹಾತ್ಮಾನಂ ಮನೋಭಿರ್ವಿಷ್ಣುಮವ್ಯಯಮ್ ।
ಉಪವಿಷ್ಟಾ ಮಂದರಾಗ್ರೇ ಸರ್ವೇ ವೃತ್ರ ವಧೇಪ್ಸವಃ' ॥ ೯–೫೯

ಮಂದರ ಪರ್ವತಾಗ್ರದಲ್ಲಿ ನೆರೆದ ದೇವತೆಗಳನ್ನು ಕುರಿತು ಇಂದ್ರ ಹೀಗೆ ನುಡಿದನು. 'ಎಲೈ ದೇವತೆಗಳೇ! ವೃತ್ತಾಸುರನು ನಾಶ ರಹಿತವಾದ ಈ ವಿಶ್ವವೆಲ್ಲವನ್ನು ವ್ಯಾಪಿಸಿ ಬಿಟ್ಟಿದ್ದಾನೆ. ಅವನ ಸಂಹಾರ ಮಾಡಲು ಯಾರೂ ಇಲ್ಲದಂತಾಗಿದೆ. ಯಾವ ಆಯುಧವೂ ಇಲ್ಲವೆಂದೆನಿಸುತ್ತದೆ. ಹಿಂದೆ ನಾನು ಅವನನ್ನು ಗೆಲ್ಲಲು ಸಮರ್ಥನಾಗಿದ್ದರೂ ಈಗ ಅವನೊಡನೆ ಸೆಣೆಸುವುದು ಅಸಾಧ್ಯವೆನಿಸುತ್ತದೆ. ಅವನು ತೇಜಸ್ವಿಯೂ ಮಹಾ ಸಮರ್ಥನೂ ಆಗಿರುವಾಗ ನಿಮಗೆ ನಾನು ಹೇಗೆ ಶುಭವನ್ನುಂಟು ಮಾಡಲಿ. ಆದ್ದರಿಂದ ನಾವು ವಿಷ್ಣುವಿಗೆ ಶರಣು ಹೊಂದಿ ವೃತ್ತಾಸುರನ ವಧೋಪಾಯವನ್ನು ತಿಳಿಯೋಣ'.

ಹೀಗೆ ನುಡಿದ ಇಂದ್ರನ ಮಾತಿನಂತೆ ಋಷಿ ಮುನಿಗಳು ಎಲ್ಲ ದೇವತೆಗಳು ಇಂದ್ರನೊಂದಿಗೆ ವಿಷ್ಣುವನ್ನು ಶರಣು ಹೊಕ್ಕು ಹೀಗೆ ಪ್ರಾರ್ಥಿಸಿದರು.

'ಹಿಂದೆ ಮೂರು ಲೋಕಗಳನ್ನು ಮೂರು ಪಾದಗಳಿಂದ ವ್ಯಾಪಿಸಿದ ಮಹಾತ್ಮ ನೀನು. ಮೋಹಿನೀ ರೂಪದಿಂದ ದೈತ್ಯರನ್ನು ವಂಚಿಸಿ ದೇವತೆಗಳಿಗೆ ಅಮೃತ ಹಂಚಿದೆ. ಬಲಿ ಬಂಧನ ಮಾಡಿದವನೂ ನೀನೇ. ನೀನೇ ಎಲ್ಲ ಲೋಕದ ಜನರಿಂದ ನಮಸ್ಕೃತ. ನೀನೇ ನಮಗೆ ಗತಿದಾಯಕ. ವಾಸ್ತವವಾಗಿ ನೀನೇ ಸಕಲ ಲೋಕವನ್ನು ವ್ಯಾಪಿಸಿದವನು. ಈಗ ಮೂರು ಲೋಕಗಳನ್ನು ವ್ಯಾಪಿಸಿದ್ದಾನೆ ವೃತ್ರಾಸುರ. ಅವನಿಂದ ನಮ್ಮನ್ನು ರಕ್ಷಿಸು'.

ಋಷಿ ಮುನಿ ದೇವತೆಗಳನ್ನು ಈ ರೀತಿ ದೇವತೆಗಳು ವಿಷ್ಣುವನ್ನು ಪ್ರಾರ್ಥಿಸಲು ವಿಷ್ಣು ಋಷಿ ದೇವತೆಗಳನ್ನು ಕುರಿತು,

'ನೀವು ಕೂಡಲೆ ವೃತ್ರಾಸುರನ ಬಳಿಗೆ ಹೋಗಿ ಸಾಮೋಪಾಯದಿಂದ ಇಂದ್ರ ಹಾಗೂ ವೃತ್ರಾಸುರ ಮಧ್ಯೆ ಸಂಧಿಯನ್ನು ಏರ್ಪಡಿಸಿರಿ. ಆಗಲೇ ಅವನನ್ನು ಜಯಿಸಲು ಸಾಧ್ಯ. ನಾನು ಇಂದ್ರನ ವಜ್ರಾಯುಧದಲ್ಲಿ ಅದೃಶ್ಯನಾಗಿ ಪ್ರವೇಶಿಸಿ ವೃತ್ತಾಸುರನನ್ನು ಸಂಹಾರ ಮಾಡಲು ಸಹಾಯ ಮಾಡುತ್ತೇನೆ.

ಅಂತೆಯೇ ಇಂದ್ರನೊಡನೆ ಎಲ್ಲ ಋಷಿ ಮುನಿ ದೇವತೆಗಳು ವೃತ್ರಾಸುರನ ಬಳಿಗೆ ಹೊರಟರು. ಅಲ್ಲಿ ಅವರೆಲ್ಲ ಹತ್ತೂ ದಿಕ್ಕುಗಳನ್ನು ತನ್ನ ತೇಜಸ್ಸಿನಿಂದ ಬೆಳಗುತ್ತಿದ್ದ ಹಾಗೂ ಸೂರ್ಯ ಚಂದ್ರಾದಿ ಮೂರೂ ಲೋಕಗಳನ್ನು ನುಂಗುವವನಂತಿದ್ದ ವೃತ್ರಾಸುರನನ್ನು ದೇವತೆಗಳು ನೋಡಿ ಅವನನ್ನು ಕುರಿತು ಹೀಗೆ ಮಾತನಾಡಿದರು.

'ಗೆಲ್ಲಲಶಕ್ಯನಾದ ವೃತ್ರನೇ! ದಯವಿಟ್ಟು ಕೇಳು! ನಿನ್ನಿಂದ ಈ ಜಗತ್ತೆಲ್ಲ ವ್ಯಾಪ್ತವಾಗಿದೆ. ನೀನು ಹಾಗೂ ಇಂದ್ರ ಬಹಳ ಕಾಲದಿಂದ ಹೋರಾಡುತ್ತಿದ್ದರೂ ನೀನು ವಾಸವನನ್ನು ಗೆಲ್ಲಲು ಆಗುತ್ತಿಲ್ಲ. ಕಾಲ ವ್ಯರ್ಥವಾಗಿ ಹೋಗುತ್ತಿದೆ. ಮೂರೂ ಲೋಕದ ಪ್ರಜೆಗಳಿಗೆ ತೊಂದರೆಯಾಗುತ್ತಿದೆ. ಆದ್ದರಿಂದ ನಿಮ್ಮಿಬ್ಬರ ಮಧ್ಯೆ ಶಾಶ್ವತ ಸ್ನೇಹ ಮಾಡಿಕೊಳ್ಳುವುದು ಉಚಿತ. ಇದರಿಂದ ನಿನಗೂ ಸುಖ ಮುಂದೆ ಇಂದ್ರಲೋಕವನ್ನೂ ಹೊಂದುವೆ'.

ಈ ಮಾತುಗಳನ್ನು ಕೇಳಿದ ವೃತ್ರಾಸುರನು ಈ ಬಗ್ಗೆ ನನ್ನ ಅಭಿಪ್ರಾಯ ಹೀಗಿದೆ ಎಂದನು.

'ನಾನು ಹಾಗೂ ಇಂದ್ರ ಇಬ್ಬರೂ ಮಹಾ ಪರಾಕ್ರಮಿಗಳೂ ತೇಜಸ್ವಿಗಳು ನಮ್ಮಿಬ್ಬರ ನಡುವೆ ಸ್ನೇಹ ಹೇಗೆ ತಾನೆ ಆದೀತು?' ಅದಕ್ಕೆ ಋಷಿಗಳು

'ಸಜ್ಜನರ ಸ್ನೇಹ ಒಮ್ಮೆ ಯಾವಾಗಲಾದರೂ ದೊರೆಯುತ್ತದೆ. ಆಗಲೇ ಸ್ನೇಹ ಮಾಡಬೇಕು. ಅದನ್ನು ಅತಿಕ್ರಮಣ ಮಾಡಬಾರದು. ಮುಂದೆ ಆಗುವುದನ್ನು ತಪ್ಪಿಸಲಾಗುವುದಿಲ್ಲ. ಆಗೇ ಆಗುತ್ತದೆ. ಆದ್ದರಿಂದ ಸಿಕ್ಕ ಅವಕಾಶ ಕಳೆದುಕೊಳ್ಳಬಾರದು. ಇಂದ್ರನು ಸಜ್ಜನಸಮ್ಮತ ಮಹಾತ್ಮರಿಗೂ ಆಶ್ರಯದಾತ. ಸತ್ಯವಾದಿ ನಿಂದಾರ್ಹನಲ್ಲ. ಸೂಕ್ಷ್ಮ ಬುದ್ಧಿಯೂ ಆಗಿದ್ದಾನೆ. ಆದ್ದರಿಂದ ಅವನೊಡನೆ ಶಾಶ್ವತ ಸ್ನೇಹಕ್ಕೆ ಒಪ್ಪುವುದು ಯೋಗ್ಯ. ಈ ಸಲಹೆಗೆ ವಿರುದ್ಧವಾಗಿ ಯೋಚಿಸಬೇಡ'.

ವೃತ್ರಾಸುರ ಉವಾಚ

'ಸಂಧಿಃ ಕಥಂ ವೈ ಭವಿತಾ ಮಮ ಶಕ್ರಸ್ಯ ಚೋಭಯೋಃ ।
ತೇಜಸೋರ್ಹಿ ದ್ವಯೋರ್ದೇವಾಃ ಸಖ್ಯಂ ವೈ ಭವಿತಾ ಕಥಂ' ॥

ಋಷಯಃ ಊಚುಃ

'ಸಕೃತ್ಸತಾಂ ಸಂಗತಂ ಲಿಪ್ಸಿತವ್ಯಂ
ತತಃ ಪರಂ ಭವಿತಾ ಭವ್ಯಮೇವ
ನಾತಿಕ್ರಮೇತ್ಸತ್ಪುರುಷೇಣ ಸಂಗತಂ
ತಸ್ಮಾತ್ಸತಾಂ ಸಂಗತಂ ಲಿಪ್ಸಿತವ್ಯಂ ॥ ೧೦-೨೩

ಇಂದ್ರಃ ಸತಾಂ ಸಮ್ಮತಶ್ಚ ನಿವಾಸಶ್ಚ ಮಹಾತ್ಮನಾಂ ।
ಸತ್ಯವಾದೀ ಹ್ಯನಿಂದ್ಯಶ್ಚ ಧರ್ಮವಿತ್ ಸೂಕ್ಷ್ಮನಿಶ್ಚಯಃ ॥ ೨೫

ತೇನ ತೇ ಸಹ ಶಕ್ರೇಣ ಸಂಧಿರ್ಭವತು ನಿತ್ಯದಾ ।
ಏವಂ ವಿಶ್ವಾಸಮಾಗಚ್ಛ ಮಾ ತೇಽಭೂದ್ಬುದ್ಧಿರನ್ಯಥಾ' ॥ ೨೬

ಋಷಿಗಳ ಮಾತನ್ನು ಕೇಳಿದ ವೃತ್ರಾಸುರನು

'ಪೂಜ್ಯರೇ ತಾವು ನನಗೆ ಮಾನ್ಯರೇ ಸರಿ. ಆದರೂ ನನ್ನ ಈ ಮಾತುಗಳನ್ನು ದೇವತೆಗಳು ನಡೆಸಿಕೊಟ್ಟಲ್ಲಿ, ನಮ್ಮಿಬ್ಬರ ಮಧ್ಯೆ ಅವಶ್ಯ ಸಂಧಿಯಾಗಲಿ. ನನ್ನನ್ನು ದೇವತೆಗಳಿಂದ ಕೂಡಿದ ಇಂದ್ರನು 'ಒಣಗಿದ ವಸ್ತುಗಳಿಂದಾಗಲೀ, ಹಸಿ ಪದಾರ್ಥದಿಂದಾಗಲೀ, ಕಲ್ಲಿನಿಂದಾಗಲೀ, ಮರದಿಂದಾಗಲೀ, ಶಸ್ತ್ರಾಸ್ತ್ರಗಳಿಂದಾಗಲೀ ಹಗಲು, ರಾತ್ರಿಗಳಲ್ಲಾಗಲೀ' ವಧೆ ಮಾಡಬಾರದು. ಈ ನಿಬಂಧನೆಗಳನ್ನು ಒಪ್ಪಿದಲ್ಲಿ ನಾನು ಇಂದ್ರನೊಡನೆ ಶಾಶ್ವತ ಮೈತ್ರಿಗೆ ಸಿದ್ಧ' ಎಂದನು.

ಋಷಿಗಳು ವೃತ್ರಾಸುರನ ನಿಬಂಧನೆಗಳನ್ನು ಒಪ್ಪಿದರು. ವೃತ್ರಾಸುರ ಸಂತುಷ್ಟನಾದನು. ಇಂದ್ರನೂ ಈ ಸಂಧಿಯಿಂದ ಸಂತುಷ್ಟನಾದರೂ ಶತ್ರುವಿನ ವಧೋಪಾಯವನ್ನು ಸದಾ ಚಿಂತಿಸುತ್ತಿಲೇ ಇದ್ದನು.

ಹೀಗಿರುವಾಗ ಒಮ್ಮೆ ಸಮುದ್ರ ತೀರದಲ್ಲಿ ವೃತ್ರಾಸುರನು ಸೂರ್ಯ ಸಂಧ್ಯಾ ಸಮಯದಲ್ಲಿ ನೋಡಿದನು. ಅದು ಅತ್ಯಂತ ದಾರುಣ ಮುಹೂರ್ತವೂ ಆಗಿತ್ತು. ಇದೇ ವೃತ್ರನ ವಧೆಗೆ ಸುಸಮಯವೆಂದು ಭಾವಿಸಿ ವಿಷ್ಣುವನ್ನು ಸ್ಮರಿಸಿದನು. ಅದೇ ಸಮಯದಲ್ಲಿ ಸಮುದ್ರದ ದಡದಲ್ಲಿ ಪರ್ವತ ಸದೃಶವಾದ ನೊರೆಯನ್ನು ನೋಡಿ ಇದರಿಂದ ವೃತ್ರನ ಸಂಹಾರ ಮಾಡಿದಲ್ಲಿ ಸಂಧಿಯ ನಿಯಮಗಳಿಗೆ ಚ್ಯುತಿ ಬಾರದೆಂದು ಭಾವಿಸಿದನು.

**'ಸಂಧ್ಯಾಕಾಲ ಉಪಾವೃತ್ತೇ ಮುಹೂರ್ತೇ ಚಾತಿದಾರುಣೇ ।**
**ತತಃ ಸಂಚಿಂತ್ಯ ಭಗವಾನ್ ವರದಾನಂ ಮಹಾತ್ಮನಃ ॥** ೩೪

**'ಸಂಧ್ಯೇಯಂ ವರ್ತತೇ ರೌದ್ರಾ ನ ರಾತ್ರಿರ್ದಿವಸಂ ನ ಚ ।**
**ವೃತ್ರಶ್ಚಾವಶ್ಯವಧ್ಯೋಽಯಂ ಮಮ ಸರ್ವಹರೋ ರಿಪುಃ ॥** ೩೫

**ನಾಯಂ ಶುಷ್ಕೋ ನ ಚಾರ್ದ್ರೋಽಯಂ ನ ಚ ಶಸ್ತ್ರಮಿದಂ ತಥಾ ।**
**ಏವಂ ಕ್ಷೇಪ್ಸ್ಯಾಮಿ ವೃತ್ರಸ್ಯ ಕ್ಷಣಾದೇವ ನಶಿಶ್ಯತಿ' ॥** ೩೬

ಸಮುದ್ರದ ಈ ನೊರೆ ಒಣಗಿದ್ದೂ ಅಲ್ಲ – ಹಸಿಯೂ ಅಲ್ಲ – ಕಲ್ಲೂ ಅಲ್ಲ – ಮರವೂ ಅಲ್ಲ – ಅಸ್ತ್ರ ಶಸ್ತ್ರವಂತೂ ಅಲ್ಲವೇ ಅಲ್ಲ. ಇದನ್ನೇ ಇವನ ಮೇಲೆ ಪ್ರಯೋಗಿಸಿ ವೃತ್ರನನ್ನು ಸಂಹರಿಸುವುದಾಗಿ ಯೋಚಿಸಿ ವಜ್ರಾಯುಧ ಸಹಿತವಾದ ನೊರೆಯನ್ನು ವೃತ್ರಾಸುರನ ಮೇಲೆ ಪ್ರಯೋಗಿಸಿದಾಗ ವಿಷ್ಣುವು ಆ ನೊರೆಯಲ್ಲಿ ಹೊಕ್ಕು ತನ್ನ ತೇಜಸ್ಸನ್ನು ಪ್ರವಹಿಸಿದಾಗ ವೃತ್ರಾಸುರ ಹತನಾದನು.

**'ಸವಜ್ರಂ ಅಥ ಫೇನಂ ತಂ ಕ್ಷಿಪ್ರಂ ವೃತ್ರೇ ನಿಸೃಷ್ಟವಾನ್ ।**
**ಪ್ರವಿಶ್ಯ ಫೇನಂ ತಂ ವಿಷ್ಣುರಥ ವೃತ್ರಂ ವ್ಯನಾಶಯತ್' ॥** ೩೯

ವೃತ್ರನು ಸಂಹಾರವಾಗುತ್ತಿರಲು ವಾಯುವು ಮಂಗಳಕರವಾಗಿ ಬೀಸಿತು. ಶುಭ ಶಕುನಗಳಾದವು. ಸಕಲ ಪ್ರಜೆಗಳು ಇಂದ್ರನಿಗೆ ನಮಿಸಿದರು. ಇಂದ್ರನು ವಿಷ್ಣುವನ್ನು

ಪೂಜಿಸಿದನು. ಆದರೂ ಇಂದ್ರನಿಗೆ ಮಾತ್ರ ಸಮಾಧಾನವಾಗಲಿಲ್ಲ. ನಿಬಂಧನೆಯನ್ನು ಕೊಂಚ ಉಲ್ಲಂಘಿಸಿದೆನೆಂಬ ಹಾಗೂ ಮೊದಲೇ ಇದ್ದ ಬ್ರಹ್ಮಹತ್ಯಾ ಭಯದಿಂದ ತನ್ನ ದೋಷಗಳಿಂದ ಎಚ್ಚರತಪ್ಪಿ ತೇಜೋ ವಿಹೀನನಾಗಿ ಸ್ಥಿರವಾಗಿರಲು ಸಾಧ್ಯವಾಗದೆ ಮನಃಕ್ಲೇಶಗ್ರಸ್ತನಾಗಿ ಯಾರಿಗೂ ತೋರದೆ ನೀರಿನಲ್ಲಿ ಅವಿತುಕೊಂಡನು.

ಇದರ ಪರಿಣಾಮವಾಗಿ ತ್ರಿಲೋಕಗಳು ಮತ್ತೆ ಅನಾಥವಾದವು. ನದಿಗಳು ಪ್ರವಹಿಸಲಿಲ್ಲ. ಬತ್ತಿ ಹೋದವು. ಅನಾವೃಷ್ಟಿ ಉಂಟಾಯಿತು ಪ್ರಾಣಿಗಳು ಕ್ಷೋಭೆಗೊಂಡವು. ದೇವರಾಜನಿಲ್ಲದೆ ದೇವತೆಗಳು, ಋಷಿಗಳು ಭಯಕ್ಕೆ ತುತ್ತಾದರು. ಇಂದ್ರನ ಸ್ಥಾನ ಶೂನ್ಯವಾಗಿ ವಿನಾಯಕವಾಯಿತು. ಇಂದ್ರನ ಸ್ಥಾನವನ್ನು ಭರ್ತಿ ಮಾಡಲು ದೇವರ್ಷಿಗಳಲ್ಲಿ ಯಾರೂ ಇಷ್ಟಪಡಲಿಲ್ಲ.

**'ತತೋ ಹತೇ ಮಹಾವೀರ್ಯೇ ವೃತ್ರೇ ದೇವಭಯಂಕರೇ । ೧೦-೪೩**

**ಅನೃತೇನಾಭಿಭೂತೋಽಭೂಚ್ಛಕ್ರಃ ಪರಮದುರ್ಮನಾಃ ।**
**ತ್ರೈಶೀರ್ಷಯಾಭಿಭೂತಶ್ಚ ಸ ಪೂರ್ವಂ ಬ್ರಹ್ಮಹತ್ಯಯಾ ॥ ೪೪**

**ಸೋಽಂತಮಾಶ್ರಿತ್ಯ ಲೋಕಾನಾಂ ನಷ್ಟಸಂಜ್ಞೋ ವಿಚೇತನಃ । ೪೫**

**ಅರಾಜಕಂ ಜಗತ್ಸರ್ವಂ ಅಭಿಭೂತಮುಪದ್ರವಃ ।**
**ತತೋ ಭೀತಾಽಭವನ್ ದೇವಾಃ ಕೋ ನೋ ರಾಜಾ ಭವೇದಿತಿ' ॥೧೦-೪೯**

ವೃತ್ತಾಸುರನ ಸಂಹಾರದಿಂದ ಇಂದ್ರ ತೇಜೋವಿಹೀನನಾಗಿ ಕಳೆಗುಂದಿದ. ಅಮರಾವತಿ ತ್ಯಾಗ ಮಾಡಿ ಎಲ್ಲೋ ನೀರಿನಲ್ಲಿ (ಮಾನಸ ಸರೋವರದ ಕಮಲನಾಳದಲ್ಲಿ) ಅವಿತುಕೊಂಡ. ಹೀಗೆ ಸ್ವರ್ಗಕ್ಕೆ ರಾಜನಿಲ್ಲದೆ ಅರಾಜಕತೆ ಉಂಟಾಗಲು ದೇವತೆಗಳು ಋಷಿಗಳು ಸೇರಿ ಭೂಲೋಕದಲ್ಲಿನ ಚಂದ್ರವಂಶದ ನಹುಷನನ್ನು ಇಂದ್ರ ಪದವಿಯಲ್ಲಿ ಅಭಿಷೇಕಿಸಲು ನಿರ್ಧರಿಸಿದರು. ರಾಜನನ್ನು ಕಂಡು

**'ರಾಜಾ ನೋ ಭವ ಪಾರ್ಥಿವ'** ಎಲೈ ರಾಜನೇ ನೀನು ನಮಗೆಲ್ಲ ರಾಜನಾಗು ಎಂದು ಕೋರಿದರು. ಆಗ ನಹುಷನು 'ನಾನು ಮನುಷ್ಯ – ದುರ್ಬಲ – ನಿಮ್ಮನ್ನು ಪರಿಪಾಲಿಸಲು ಸಮರ್ಥನಲ್ಲ. ಇಂದ್ರನೇ ನಿತ್ಯದಲ್ಲಿ ಬಲಿಷ್ಠ ಅವನೇ ಯೋಗ್ಯ' ಎಂದನು.

**'ದುರ್ಬಲೋಽಹಂ ನ ಮೇ ಶಕ್ತಿರ್ಭವತಾಂ ಪರಿಪಾಲನೇ' ।**
**ಉದ್ಯೋಗ ಪರ್ವ ಅ ೧೧-೪**

ದೇವರ್ಷಿಗಳು ಅದಕ್ಕೆ 'ಹಾಗಿದ್ದರೆ ನಮ್ಮ ತಪಸ್ಸನ್ನು ನಾವು ಧಾರೆಯೆರೆಯುತ್ತೇವೆ. ಅದರಿಂದ ಸ್ವರ್ಗವನ್ನು ಆಳು' ಎಂದು ಹೇಳಿ ನಹುಷನನ್ನು ಸ್ವರ್ಗಾಧಿಪತಿಯಾಗಿ ಅಭಿಷೇಕ ಮಾಡಿದರು.

'ಅಸ್ಮಾಕಂ ತಪಸಾ ಯುಕ್ತಃ ಪಾಹಿ ರಾಜ್ಯಂ ತ್ರಿವಿಷ್ಟಪೇ' । ೧೧-೬

'ದೇವ ಗಂಧರ್ವಯಕ್ಷಾಣಾಂ ಋಷೀಣಾಂ ರಕ್ಷಸಾಂ ತಥಾ ।
ಪಿತೃಗಂಧರ್ವಭೂತಾನಾಂ ಚಕ್ಷುರ್ವಿಷಯವರ್ತಿನಾಮ್ ।
ತೇಜ ಆದಾಸ್ಯಸೇ ಪಶ್ಯನ್ ಬಲವಾಂಶ್ಚ ಭವಿಷ್ಯಸಿ' ॥ ೧೧-೭

'ಅಲ್ಲದೆ ರಾಜನೇ । ನಿನ್ನ ಎದುರಿಗೆ ದೇವ, ಗಂಧರ್ವ, ಯಕ್ಷ, ಋಷಿ, ರಾಕ್ಷಸ, ಪಿತೃದೇವತೆಗಳು ಯಾರೇ ಬರಲಿ ಅವರನ್ನು ನೋಡಿದೊಡನೆ ಅವರ ಬಲ ತೇಜಸ್ಸನ್ನು ಪಡೆದು ಬಲಿಷ್ಠನಾಗುವೆ. ಆದ್ದರಿಂದ ನೀನು ಯಾವಾಗಲೂ ಧರ್ಮಿಷ್ಠನಾಗಿ ದೇವರ್ಷಿಗಳನ್ನು ಪಾಲಿಸು' ಎಂದರು.

'ಧರ್ಮಂ ಪುರಸ್ಕೃತ್ಯ ಸದಾ ಸರ್ವಲೋಕಾಧಿಪೋ ಭವ' । ೧೧-೮

ಹೀಗೆ ನಹುಷನು ಇಂದ್ರ ಪದವಿಯಲ್ಲಿ ಕುಳಿತುಕೊಂಡು ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನು. ಸ್ವರ್ಗಾಧಿಪನಾಗಿ ಭೋಗಿಸಬೇಕಾದ ಎಲ್ಲ ಸುಖಗಳನ್ನು ಹೊಂದುತ್ತಾ ಆನಂದದಿಂದ ಇದ್ದನು. ಎಲ್ಲ ದೇವರ್ಷಿಗಳು ವಸಂತಾದಿ ಋತುಗಳು ಅವನ ಅನುಚರರಾಗಿದ್ದರು.

ಹೀಗೆ ಅಪ್ಸರಾದಿಗಳಿಂದ ಕೂಡಿಕೊಂಡು ಸುಖವಾಗಿರಲು ನಹುಷನಿಗೆ ಅಧಿಕಾರದ ದರ್ಪದಿಂದ ದುರ್ಬುದ್ಧಿ ಬಂದಿತು. ಪರಿಣಾಮವಾಗಿ ನಿಜವಾದ ಇಂದ್ರನಿದ್ದನಷ್ಟೇ! ಆತನ ಹೆಂಡತಿಯಾದ ಶಚೀದೇವಿಯೂ ತನ್ನನು ಪತಿಯಾಗಿ ಸೇವಿಸಬೇಕೆಂದು ಬಯಸಿದ. ಅದನ್ನು ನಿರ್ಲಜ್ಜನಾಗಿ ದೇವ ಸಭೆಯಲ್ಲಿ ಅಂದೂ ಬಿಟ್ಟನು.

'ಇಂದ್ರನ ಮಹಾರಾಣಿಯು ನನ್ನನ್ನು ಏಕೆ ಸೇವಿಸುತ್ತಿಲ್ಲ. ನಾನು ಇಂದ್ರ ದೇವತೆಗಳ ಲೋಕಗಳ ಒಡೆಯ. ಕಾರಣ ಶಚಿಯು ಕೂಡಲೆ ನನ್ನ ಅರಮನೆಗೆ ಬರಲಿ'.

'ಇಂದ್ರಸ್ಯ ಮಹಿಷೀ ದೇವೀ ಕಸ್ಮಾನ್ಮಾಂ ನೋಪತಿಷ್ಠತಿ
ಅಹಮಿಂದ್ರೋಽಸ್ಮಿ ದೇವಾನಾಂ ಲೋಕಾನಾಂ ಚ ತಥೇಶ್ವರಃ ।
ಆಗಚ್ಛತು ಶಚೀ ಮಹ್ಯಂ ಕ್ಷಿಪ್ರಮದ್ಯ ನಿವೇಶನಮ್' । ೧೧-೧೮

ಈ ಸುದ್ದಿ ಶಚೀಗೆ ಹೋಗಲು ಆಕೆ ಹೆದರಿ ದೇವಗುರುಗಳಾದ ಬೃಹಸ್ಪತ್ಯಾಚಾರ್ಯರ ಬಳಿಗೆ ತನ್ನ ಪಾತಿವ್ರತ್ಯ ರಕ್ಷಣೆಗೆ ಮೊರೆ ಹೋದಳು.

ರಕ್ಷ ಮಾಂ ನಹುಷಾದ್ಬ್ರಹ್ಮನ್ ತ್ವಾಮಸ್ಮಿ ಶರಣಂ ಗತಾ ।
ಉಕ್ತವಾನಸಿ ಮಾಂ ಪೂರ್ವಮೃತಾಂ ತಾಂ ಕುರು ವೈ ಗಿರಮ್ ।
ಅವೈಧವ್ಯೇನ ಯುಕ್ತಾಂ ಚಾಪ್ಯೇಕಪತ್ನೀಂ ಪತಿವ್ರತಾಂ ।
೧೧-೨೦ ರಿಂದ ೨೨

ಇದಕ್ಕೆ ಆಚಾರ್ಯರು ಅಭಯ ನೀಡಿದರು.

'ನ ಭೇತವ್ಯಂ ಚ ನಹುಷಾತ್ಸತ್ಯಮೇತದ್ಬ್ರವೀಮಿ ತೇ ।
ಸಮಾನಯಿಷ್ಯೇ ಶಕ್ರೇಣ ನ ಚಿರಾದ್ಭವತೀಮಹಮ್ ॥ ೧೧-೨೫

ಈ ವಿಷಯವು ನಹುಷನ ಕಿವಿಗೆ ಬಿದ್ದು ಅತ್ಯಂತ ಕುಪಿತನಾದನು.

ಇದನ್ನು ತಿಳಿದ ದೇವರ್ಷಿಗಳು ನಹುಷನನ್ನು ಕಂಡು 'ಎಲೈ ದೇವರಾಜನೇ ಕೋಪವನ್ನು ಬಿಡು. ನಿನ್ನಂತಹವರು ಅಲ್ಪ ವಿಷಯದಲ್ಲಿ ಕೋಪಗೊಳ್ಳುವುದಿಲ್ಲ. ಶಚೀದೇವಿ ಪರ ಪುರುಷ ಪತ್ನಿ ಪರಸತಿಯನ್ನು ನೋಡುವುದು ಸ್ಪರ್ಶಿಸುವುದು ಮಹಾಪಾಪಕ್ಕೆ ಕಾರಣವಾಗುತ್ತದೆ. ನೀನು ದೇವರಾಜ. ನೀನು ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸು' ಎಂದು ವಿನಂತಿಸಿದರು.

'ಜಹಿ ಕ್ರೋಧಮಿಮಂ ಸಾಧೋ ನ ಕುಪ್ಯಂತಿ ಭವದ್ವಿಧಾಃ ।
ಪರಸ್ಯ ಪತ್ನೀ ಸಾ ದೇವೀ ಪ್ರಸೀದಸ್ವ ಸುರೇಶ್ವರ ।
ನಿವರ್ತಯ ಮನಃ ಪಾಪಾತ್ಪರದಾರಾಭಿಮರ್ಶನಾತ್ ।
ದೇವರಾಜೋಽಸಿ ಭದ್ರಂ ತೇ ಪ್ರಜಾಧರ್ಮೇಣ ಪಾಲಯ' । -೧೨/೩,೪

ಇಂತಹ ಹಿತ ನುಡಿಗಳು ನುಹುಷನ ಮೇಲೆ ಯಾವುದೇ ಸತ್ಪರಿಣಾಮ ಬೀರಲಿಲ್ಲ. ಕಾಮ ಮೋಹಿತನಾದ ನಹುಷ ಇಂದ್ರನನ್ನೇ ಆಕ್ಷೇಪಿಸಿದ ದೇವತೆಗಳನ್ನು ನಿಂದಿಸಿದ. 'ಹಿಂದೆ ಇದೇ ಇಂದ್ರ ಗೌತಮರ ಪತ್ನಿ ಅಹಲ್ಯೆಯನ್ನು ಪತಿ ಗೌತಮ ಬದುಕಿರುವಾಗಲೇ ಬಲಾತ್ಕಾರ ಮಾಡಿದಾಗ ನೀವ್ಯಾರೂ ಆತನನ್ನು ಆಕ್ಷೇಪಿಸಲಿಲ್ಲ. ಅಲ್ಲದೇ ಇನ್ನೂ ಅನೇಕ ಕ್ರೌರ್ಯ ಕಾರ್ಯಗಳನ್ನು ಮಾಡಿದ್ದಾನೆ. ಅವುಗಳನ್ನು ನೀವು ತಡೆಯಲಿಲ್ಲವೇಕೆ? ಆದ್ದರಿಂದ ಶಚೀದೇವಿಯು ನನ್ನನ್ನು ಈ ಕೂಡಲೇ ಸೇವಿಸಲಿ. ಇದರಿಂದ ನಿಮಗೂ ಕಲ್ಯಾಣ'.

'ಅಹಲ್ಯಾ ಧರ್ಷಿತಾ ಪೂರ್ವಂ ಋಷಿಪತ್ನೀ ಯಶಸ್ವಿನೀ ।
ಜೀವತೋ ಭರ್ತುರಿಂದ್ರೇಣ ಸ ವಃ ಕಿಂ ನ ನಿವಾರಿತಃ' ॥ ೧೨-೬

ಆಗ ದೇವತೆಗಳು ನಿರುಪಾಯರಾಗಿ ಶಚೀದೇವಿಯನ್ನು ಕರೆತರುತ್ತೇವೆ. ನಿನ್ನಿಚ್ಛೆಯಂತೆ ಮಾಡು ಎಂದು ಹೇಳಿ ದೇವ ಗುರುಗಳ ಬಳಿಗೆ ಹೋಗಿ ಶಚೀದೇವಿಯು ನಹುಷನನ್ನು ವರಿಸಲಿ, ಸೇವಿಸಲಿ. ನಹುಷನು ಇಂದ್ರನಿಗಿಂತ ಶ್ರೇಷ್ಠವೆಂದು ಬೃಹಸ್ಪತ್ಯಾಚಾರ್ಯರಿಗೆ ಹೇಳಲು ಶಚೀದೇವಿಯು ಆಚಾರ್ಯರನ್ನು ಈ ಪ್ರಸಂಗದಿಂದ ರಕ್ಷಿಸಲು ಮತ್ತೆ ಪ್ರಾರ್ಥಿಸಿದಳು.

'ಇಂದ್ರಾಣೀಮಾನಯಿಷ್ಯಾಮೋ ಯಥೇಚ್ಛಸಿ ತಥಾ ಕುರು' ।

'ಇತ್ಯುಕ್ತ್ವಾ ತಂ ತದಾ ದೇವಾ ಋಷಿಭಿಃ ಸಹ ಭಾರತ ।
ಜಗ್ಮುರ್ಬೃಹಸ್ಪತಿಂ ವಕ್ತುಮಿಂದ್ರಾಣೀಂ ಚಾಶುಭಂ ವಚಃ ।
ಪ್ರಸಾದಯಂತಿ ಚೇಂದ್ರಾಣೀ ನಹುಷಾಯ ಪ್ರದೀಯತಾಂ ।
ಇಂದ್ರಾದ್ ವಿಶಿಷ್ಟೋ ನಹುಷೋ ದೇವರಾಜೋ ಮಹಾದ್ಯುತಿಃ ।

ವೃಣೋತ್ವಿಮಾಂ ವರಾರೋಹಾ ಭರ್ತೃತ್ವೇ ವರವರ್ಣಿನೀ ।
ಏವಮುಕ್ತಾ ತು ಸಾ ದೇವೀ ಬೃಹಸ್ಪತಿಮಿದಂ ವಚಃ ।
ನಾಹಮಿಚ್ಛಾಮಿ ನಹುಷಂ ಪತಿಂ ದೇವರ್ಷಿಸತ್ತಮ ।
ಶರಣಾಗತಾಸ್ಮಿ ತೇ ಬ್ರಹ್ಮನ್ ತ್ರಾಯಸ್ವ ಮಹತೋ ಭಯಾತ್ ॥

೧೨-೧೦ ರಿಂದ ೧೫

ಆಗ ಬೃಹಸ್ಪತ್ಯಾಚಾರ್ಯರು ಶರಣಾಗತಳಾದ ಶಚೀದೇವಿಯನ್ನು ರಕ್ಷಿಸದೆ ಇರಲಾರೆ. ಆಕೆ ಧರ್ಮಜ್ಞಳು, ಸತ್ಯಶೀಲಳು. ನಾನು ಅಕಾರ್ಯ ಮಾಡಲಾರೆ. ನೀವು ಹೋಗಿ ಇನ್ನು. ಶರಣಾಗತರ ರಕ್ಷಣೆಯ ಬಗ್ಗೆ ಬ್ರಹ್ಮನ ಮಾತುಗಳನ್ನು ಕೇಳಿರಿ, ಎಂದು ದೇವತೆಗಳಿಗೆ ಹೇಳಿದರು.

'ಬೆದರಿ ಬೆಂಡಾಗಿ ನಡುಗುತ್ತಾ ಶರಣಾಗತನಾಗಿ ಬಂದವನನ್ನು ಯಾರು ಶತ್ರುವಿಗೆ ಕೊಡುತ್ತಾರೋ ಅವನು ಬಿತ್ತುವ ಬೀಜ ಅಂಕುರಿಸುವುದಿಲ್ಲ. ಅವನ ಕ್ಷೇತ್ರಕ್ಕೆ ಇಂದ್ರನು ಮಳೆಗರೆಯುವುದಿಲ್ಲ'. 'ಅವನು ಸೇವಿಸುವ ಆಹಾರ ವ್ಯರ್ಥವಾಗುತ್ತದೆ. ಅವನ ಕಾರ್ಯಗಳೆಲ್ಲ ವ್ಯರ್ಥವಾಗುತ್ತವೆ. ದೇವತೆಗಳು ಅವನು ಕೊಡುವ ಹವಿಸ್ಸನ್ನು ಸ್ವೀಕರಿಸುವುದಿಲ್ಲ'. 'ಅವನ ಮಕ್ಕಳು ಅಪಮೃತ್ಯುವಿಗೆ ಒಳಗಾಗುತ್ತಾರೆ. ಅವನ ಪಿತೃಗಳಿಗೆ ನರಕವಾಗುತ್ತದೆ. ಇಂದ್ರಾದಿ ದೇವತೆಗಳು ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸುತ್ತಾರೆ'. ಆದ್ದರಿಂದ ಶಚೀದೇವಿಯನ್ನು ನಾನು ನಹುಷನಿಗೆ ಒಪ್ಪಿಸುವುದಿಲ್ಲ. ಆಕೆಗೆ ಅಭಯ ನೀಡುತ್ತೇನೆ.

'ಭೀತಂ ಪ್ರಪನ್ನಂ ಪ್ರದದಾತಿ ಶತ್ರವೇ
ನ ಸ ತ್ರಾತಾರಂ ಲಭತೇ ಪ್ರಾಣಮಿಚ್ಛನ್'
'ನ ತಸ್ಯ ಹವ್ಯಂ ಪ್ರತಿಗೃಹ್ಣಂತಿ ದೇವಾಃ' ।
'ಸೇಂದ್ರಾ ದೇವಾ ಪ್ರಹರಂತ್ಯಸ್ಯ ವಜ್ರಮ್' । ೧೨-೧೯,೨೦,೨೧

ಹೀಗೆ ದೇವತೆಗಳನ್ನು ಕುರಿತು ಬೃಹಸ್ಪತಿಗಳು ಹೇಳಿದಾಗ, ಅವರು ಆಚಾರ್ಯರನ್ನು

'ಹಾಗಿದ್ದರೆ ನೀವೇ ಯಾರಿಗೂ ಅಪಾಯವಾಗದಂತಹ ಉಪಾಯವನ್ನು ಸೂಚಿಸಿ' ಎಂದರು.

ಆಗ ಆಚಾರ್ಯರು 'ಶಚೀದೇವಿಯು ಇಂದ್ರನ ಬಳಿಗೆ ಹೋಗಿ ಆತನನ್ನು ಪತಿಯನ್ನಾಗಿ ಒಪ್ಪಲು ಕಾಲಾವಕಾಶವನ್ನು ಯಾಚಿಸಲಿ', ಎಂದರು.

ದೇವತೆಗಳೇ ನೋಡಿರಿ 'ಕಾಲವು ತನ್ನ ಗರ್ಭದಲ್ಲಿ ಅನೇಕ ವಿಘ್ನಗಳನ್ನು ಇಟ್ಟುಕೊಂಡಿರುತ್ತದೆ. ಈಗ ನಹುಷನು ಬಲು ಗರ್ವಿಷ್ಠನಾಗಿದ್ದಾನೆ. ನಿಮ್ಮೆಲ್ಲರ ಬಲದಿಂದ ದರ್ಪ ಬಂದಿದೆ. ಕಾರಣ ಸದ್ಯ ಅವನನ್ನು ನಿಯಂತ್ರಿಸುವುದು ಕಷ್ಟ. ಸ್ವಲ್ಪಕಾಲ ಕಾಯೋಣ ಎಂದರು. ದೇವತೆಗಳು ಒಪ್ಪಿದರು.

ನಂತರ ಶಚೀದೇವಿಯು ಇಂದ್ರನ ಬಳಿಗೆ ಹೋಗಲು, ದೇವತೆಗಳು ಸೂಚಿಸಿದರು.

**'ಏಕಪತ್ನ್ಯಸಿ ಸತ್ಯಾ ಚ ಗಚ್ಛಸ್ವ ನಹುಷಂ ಪ್ರತಿ ।**
**ಕ್ಷಿಪ್ರಂ ತ್ವಾಂ ಅಭಿಕಾಮಶ್ಚ ವಿನಶಿಷ್ಯತಿ ಪಾಪಕೃತ್ ।**
**ನಹುಷೋ ದೇವಿ ಶಕ್ರಶ್ಚ ಸುರೈಶ್ವರ್ಯಮವಾಪ್ಸ್ಯತಿ । ೧೨-೨೯,೩೦**

ಎಲೈ ಶಚೀದೇವಿಯೇ! 'ನೀನು ನಹುಷನ ಬಳಿ ಹೋಗು. ನಿನ್ನನ್ನು ಕಾಮಿಸುತ್ತಿರುವ ಪಾಪಿಯಾದ ನಹುಷನು ಬಹುಬೇಗ ನಾಶ ಹೊಂದುವನು. ನಿನ್ನ ಪತಿ ಇಂದ್ರನು ಸುರ ಸಂಪತ್ತನ್ನು ಮತ್ತೆ ಹೊಂದುವನು'. ನಂತರ ಶಚೀದೇವಿಯು ನಹುಷನ ಬಳಿಗೆ ಹೊಗಿ ಆತನನ್ನು ಪತಿಯಾಗಿ ಸ್ವೀಕರಿಸುವ ಮುನ್ನ ತನ್ನ ಪತಿ ಇಂದ್ರನ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಹಾಗೂ ನಿನ್ನ ಪತ್ನಿಯಾಗಲು ನನಗೆ ಸ್ವಲ್ಪ ಕಾಲಾವಕಾಶವನ್ನು ಕೊಡಲು ಪ್ರಾರ್ಥಿಸಿದಳು. ನಹುಷನು ಆಕೆ ಮಾತನ್ನು ನಂಬಿ ಕಾಲಾವಕಾಶವನ್ನು ಕೊಟ್ಟನು. ಆಕೆ ಮತ್ತೆ ಗುರುಗಳ ಮನೆಗೆ ಬಂದು ನಡೆದುದನ್ನು ನಿವೇದಿಸಿದಳು.

ಶಚೀದೇವಿಯ ಅಪೇಕ್ಷೆಯ ಮೇರೆಗೆ ಅಗ್ನ್ಯಾದಿ ದೇವತೆಗಳು ಇಂದ್ರನನ್ನು ಹುಡುಕಲು ಪರಸ್ಪರ ವಿಚಾರ ವಿನಿಮಯ ಮಾಡಿದರೂ ಏನನ್ನೂ ನಿರ್ಧರಿಸದೆ ವಿಷ್ಣುವನ್ನು ಕಂಡು ಪ್ರಾರ್ಥಿಸಿ ಇಂದ್ರನನ್ನು ಬ್ರಹ್ಮಹತ್ಯಾ ದೋಷದಿಂದ ಪಾರು ಮಾಡುವ ಬಗ್ಗೆ ವಿಚಾರ ಮಾಡಿದರು. ಆಗ ವಿಷ್ಣುವು ಇಂದ್ರನು ನನ್ನನ್ನು ಉದ್ದೇಶಿಸಿ ಯಜ್ಞ ಮಾಡಲಿ ನಾನು ಇಂದ್ರನನ್ನು ಪವಿತ್ರನನ್ನಾಗಿ ಮಾಡುತ್ತೇನೆ. ನಂತರ ಆತನಿಗೆ ಇಂದ್ರ ಪದವಿ ಮತ್ತೆ ದೊರೆಯುತ್ತದೆ. ದುರ್ಬುದ್ಧಿ ನಹುಷನು ತನ್ನ ಪಾಪದಿಂದಲೇ ನಾಶ ಹೊಂದುತ್ತಾನೆ. ಅದಕ್ಕಾಗಿ ಸ್ವಲ್ಪಕಾಲ ಕಾಯಿರಿ ಎಂದನು.

ನಂತರ ದೇವರ್ಷಿಗಳು ಇಂದ್ರನು ಅವಿತುಕೊಂಡ ಸ್ಥಳಕ್ಕೆ ಹೋಗಿ ಆತನಿಂದ ಅಶ್ವಮೇಧಯಾಗ ಮಾಡಿಸಿದರು. ಆತನನ್ನು ಆವರಿಸಿದ ಬ್ರಹ್ಮಹತ್ಯಾ ದೋಷವನ್ನು ವೃಕ್ಷ, ನದಿ, ಪರ್ವತ, ಪೃಥ್ವೀ ಹಾಗೂ ಸ್ತ್ರೀಯರಿಗೆ ಹಂಚಿಕೆ ಮಾಡಿದರು.

ಇತ್ತ ನಹುಷನು ಇಂದ್ರನು ತನ್ನ ಸ್ಥಾನವನ್ನು ಎಲ್ಲಿ ಆಕ್ರಮಿಸಿ ಬಿಡುವನೋ ಎಂದು ಹೆದರಿ ಬಿಟ್ಟನು. ಶಚೀದೇವಿಯು ಇಂದ್ರ ದೇವರನ್ನು ಶೋಕಾರ್ತಳಾಗಿ

'ಇಂದ್ರನೇ! ನಾನೇನಾದರೂ ಸತ್ಪಾತ್ರರಿಗೆ ದಾನ ಮಾಡಿದ್ದಲ್ಲಿ, ಹೋಮಾದಿಗಳಿಂದ ಯಜ್ಞೇಶ್ವರನನ್ನು ತೃಪ್ತಿ ಪಡಿಸಿದ್ದರೆ, ಗುರು ಹಿರಿಯರನ್ನು ಸೇವಿಸಿದ್ದರೆ ನನ್ನ ಪಾತಿವ್ರತ್ಯ ಸ್ಥಿರವಾಗಿ ಉಳಿಯಲಿ' ಎಂದು ಗದ್ಗದಿತ ಧ್ವನಿಯಿಂದ ನುಡಿದಳು.

**'ಯದಿ ದತ್ತಂ ಯದಿ ಹುತಂ ಗುರವಸ್ತೋಷಿತಾ ಯದಿ ।**
**ಏಕಭರ್ತೃತ್ವಮೇವಾಸ್ತು ಸತ್ಯಂ ಯದ್ಯಸ್ತಿ ವಾ ಮಯಿ' ॥ ೧೩-೨೪**

**ವೃಣೋತ್ವಿಮಾಂ ವರಾರೋಹಾ ಭರ್ತೃತ್ವೇ ವರವರ್ಣಿನೀ ।**
**ಏವಮುಕ್ತಾ ತು ಸಾ ದೇವೀ ಬೃಹಸ್ಪತಿಮಿದಂ ವಚಃ ।**
**ನಾಹಮಿಚ್ಛಾಮಿ ನಹುಷಂ ಪತಿಂ ದೇವರ್ಷಿಸತ್ತಮ ।**
**ಶರಣಾಗತಾಸ್ಮಿ ತೇ ಬ್ರಹ್ಮನ್ ತ್ರಾಯಸ್ವ ಮಹತೋ ಭಯಾತ್ ॥**

**೧೨-೧೦ ರಿಂದ ೧೫**

ಆಗ ಬೃಹಸ್ಪತ್ಯಾಚಾರ್ಯರು ಶರಣಾಗತಳಾದ ಶಚೀದೇವಿಯನ್ನು ರಕ್ಷಿಸದೆ ಇರಲಾರೆ. ಆಕೆ ಧರ್ಮಜ್ಞಳು, ಸತ್ಯಶೀಲಳು. ನಾನು ಅಕಾರ್ಯ ಮಾಡಲಾರೆ. ನೀವು ಹೋಗಿ ಇನ್ನು. ಶರಣಾಗತರ ರಕ್ಷಣೆಯ ಬಗ್ಗೆ ಬ್ರಹ್ಮನ ಮಾತುಗಳನ್ನು ಕೇಳಿರಿ, ಎಂದು ದೇವತೆಗಳಿಗೆ ಹೇಳಿದರು.

'ಬೆದರಿ ಬೆಂಡಾಗಿ ನಡುಗುತ್ತಾ ಶರಣಾಗತನಾಗಿ ಬಂದವನನ್ನು ಯಾರು ಶತ್ರುವಿಗೆ ಕೊಡುತ್ತಾರೋ ಅವನು ಬಿತ್ತುವ ಬೀಜ ಅಂಕುರಿಸುವುದಿಲ್ಲ. ಅವನ ಕ್ಷೇತ್ರಕ್ಕೆ ಇಂದ್ರನು ಮಳೆಗರೆಯುವುದಿಲ್ಲ'. 'ಅವನು ಸೇವಿಸುವ ಆಹಾರ ವ್ಯರ್ಥವಾಗುತ್ತದೆ. ಅವನ ಕಾರ್ಯಗಳೆಲ್ಲ ವ್ಯರ್ಥವಾಗುತ್ತವೆ. ದೇವತೆಗಳು ಅವನು ಕೊಡುವ ಹವಿಸ್ಸನ್ನು ಸ್ವೀಕರಿಸುವುದಿಲ್ಲ'. 'ಅವನ ಮಕ್ಕಳು ಅಪಮೃತ್ಯುವಿಗೆ ಒಳಗಾಗುತ್ತಾರೆ. ಅವನ ಪಿತೃಗಳಿಗೆ ನರಕವಾಗುತ್ತದೆ. ಇಂದ್ರಾದಿ ದೇವತೆಗಳು ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸುತ್ತಾರೆ'. ಆದ್ದರಿಂದ ಶಚೀದೇವಿಯನ್ನು ನಾನು ನಹುಷನಿಗೆ ಒಪ್ಪಿಸುವುದಿಲ್ಲ. ಆಕೆಗೆ ಅಭಯ ನೀಡುತ್ತೇನೆ.

**'ಭೀತಂ ಪ್ರಪನ್ನಂ ಪ್ರದದಾತಿ ಶತ್ರವೇ**
**ನ ಸ ತ್ರಾತಾರಂ ಲಭತೇ ಪ್ರಾಣಮಿಚ್ಛನ್'**
**'ನ ತಸ್ಯ ಹವ್ಯಂ ಪ್ರತಿಗೃಹ್ಣಂತಿ ದೇವಾಃ' ।**
**'ಸೇಂದ್ರಾ ದೇವಾ ಪ್ರಹರಂತ್ಯಸ್ಯ ವಜ್ರಮ್' ।** **೧೨-೧೯,೨೦,೨೧**

ಹೀಗೆ ದೇವತೆಗಳನ್ನು ಕುರಿತು ಬೃಹಸ್ಪತಿಗಳು ಹೇಳಿದಾಗ, ಅವರು ಆಚಾರ್ಯರನ್ನು

'ಹಾಗಿದ್ದರೆ ನೀವೇ ಯಾರಿಗೂ ಅಪಾಯವಾಗದಂತಹ ಉಪಾಯವನ್ನು ಸೂಚಿಸಿ' ಎಂದರು.

ಆಗ ಆಚಾರ್ಯರು 'ಶಚೀದೇವಿಯು ಇಂದ್ರನ ಬಳಿಗೆ ಹೋಗಿ ಆತನನ್ನು ಪತಿಯನ್ನಾಗಿ ಒಪ್ಪಲು ಕಾಲಾವಕಾಶವನ್ನು ಯಾಚಿಸಲಿ', ಎಂದರು.

ದೇವತೆಗಳೇ ನೋಡಿರಿ 'ಕಾಲವು ತನ್ನ ಗರ್ಭದಲ್ಲಿ ಅನೇಕ ವಿಘ್ನಗಳನ್ನು ಇಟ್ಟುಕೊಂಡಿರುತ್ತದೆ. ಈಗ ನಹುಷನು ಬಲು ಗರ್ವಿಷ್ಠನಾಗಿದ್ದಾನೆ. ನಿಮ್ಮೆಲ್ಲರ ಬಲದಿಂದ ದರ್ಪ ಬಂದಿದೆ. ಕಾರಣ ಸದ್ಯ ಅವನನ್ನು ನಿಯಂತ್ರಿಸುವುದು ಕಷ್ಟ. ಸ್ವಲ್ಪಕಾಲ ಕಾಯೋಣ ಎಂದರು. ದೇವತೆಗಳು ಒಪ್ಪಿದರು.

ನಂತರ ಶಚೀದೇವಿಯು ಇಂದ್ರನ ಬಳಿಗೆ ಹೋಗಲು, ದೇವತೆಗಳು ಸೂಚಿಸಿದರು.

**'ಏಕಪತ್ನ್ಯಸಿ ಸತ್ಯಾ ಚ ಗಚ್ಛಸ್ವ ನಹುಷಂ ಪ್ರತಿ ।**
**ಕ್ಷಿಪ್ರಂ ತ್ವಾಂ ಅಭಿಕಾಮಶ್ಚ ವಿನಶಿಷ್ಯತಿ ಪಾಪಕೃತ್ ।**
**ನಹುಷೋ ದೇವಿ ಶಕ್ರಶ್ಚ ಸುರೈಶ್ವರ್ಯಮವಾಪ್ಸ್ಯತಿ । ೧೨-೨೯,೩೦**

ಎಲೈ ಶಚೀದೇವಿಯೇ! 'ನೀನು ನಹುಷನ ಬಳಿ ಹೋಗು. ನಿನ್ನನ್ನು ಕಾಮಿಸುತ್ತಿರುವ ಪಾಪಿಯಾದ ನಹುಷನು ಬಹುಬೇಗ ನಾಶ ಹೊಂದುವನು. ನಿನ್ನ ಪತಿ ಇಂದ್ರನು ಸುರ ಸಂಪತ್ತನ್ನು ಮತ್ತೆ ಹೊಂದುವನು'. ನಂತರ ಶಚೀದೇವಿಯು ನಹುಷನ ಬಳಿಗೆ ಹೊಗಿ ಆತನನ್ನು ಪತಿಯಾಗಿ ಸ್ವೀಕರಿಸುವ ಮುನ್ನ ತನ್ನ ಪತಿ ಇಂದ್ರನ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಹಾಗೂ ನಿನ್ನ ಪತ್ನಿಯಾಗಲು ನನಗೆ ಸ್ವಲ್ಪ ಕಾಲಾವಕಾಶವನ್ನು ಕೊಡಲು ಪ್ರಾರ್ಥಿಸಿದಳು. ನಹುಷನು ಆಕೆ ಮಾತನ್ನು ನಂಬಿ ಕಾಲಾವಕಾಶವನ್ನು ಕೊಟ್ಟನು. ಆಕೆ ಮತ್ತೆ ಗುರುಗಳ ಮನೆಗೆ ಬಂದು ನಡೆದುದನ್ನು ನಿವೇದಿಸಿದಳು.

ಶಚೀದೇವಿಯ ಅಪೇಕ್ಷೆಯ ಮೇರೆಗೆ ಅಗ್ನ್ಯಾದಿ ದೇವತೆಗಳು ಇಂದ್ರನನ್ನು ಹುಡುಕಲು ಪರಸ್ಪರ ವಿಚಾರ ವಿನಿಮಯ ಮಾಡಿದರೂ ಏನನ್ನೂ ನಿರ್ಧರಿಸದೆ ವಿಷ್ಣುವನ್ನು ಕಂಡು ಪ್ರಾರ್ಥಿಸಿ ಇಂದ್ರನನ್ನು ಬ್ರಹ್ಮಹತ್ಯಾ ದೋಷದಿಂದ ಪಾರು ಮಾಡುವ ಬಗ್ಗೆ ವಿಚಾರ ಮಾಡಿದರು. ಆಗ ವಿಷ್ಣುವು ಇಂದ್ರನು ನನ್ನನ್ನು ಉದ್ದೇಶಿಸಿ ಯಜ್ಞ ಮಾಡಲಿ ನಾನು ಇಂದ್ರನನ್ನು ಪವಿತ್ರನನ್ನಾಗಿ ಮಾಡುತ್ತೇನೆ. ನಂತರ ಆತನಿಗೆ ಇಂದ್ರ ಪದವಿ ಮತ್ತೆ ದೊರೆಯುತ್ತದೆ. ದುರ್ಬುದ್ಧಿ ನಹುಷನು ತನ್ನ ಪಾಪದಿಂದಲೇ ನಾಶ ಹೊಂದುತ್ತಾನೆ. ಅದಕ್ಕಾಗಿ ಸ್ವಲ್ಪಕಾಲ ಕಾಯಿರಿ ಎಂದನು.

ನಂತರ ದೇವರ್ಷಿಗಳು ಇಂದ್ರನು ಅವಿತುಕೊಂಡ ಸ್ಥಳಕ್ಕೆ ಹೋಗಿ ಆತನಿಂದ ಅಶ್ವಮೇಧಯಾಗ ಮಾಡಿಸಿದರು. ಆತನನ್ನು ಆವರಿಸಿದ ಬ್ರಹ್ಮಹತ್ಯಾ ದೋಷವನ್ನು ವೃಕ್ಷ, ನದಿ, ಪರ್ವತ, ಪೃಥ್ವೀ ಹಾಗೂ ಸ್ತ್ರೀಯರಿಗೆ ಹಂಚಿಕೆ ಮಾಡಿದರು.

ಇತ್ತ ನಹುಷನು ಇಂದ್ರನು ತನ್ನ ಸ್ಥಾನವನ್ನು ಎಲ್ಲಿ ಆಕ್ರಮಿಸಿ ಬಿಡುವನೋ ಎಂದು ಹೆದರಿ ಬಿಟ್ಟನು. ಶಚೀದೇವಿಯು ಇಂದ್ರ ದೇವರನ್ನು ಶೋಕಾರ್ತಳಾಗಿ

'ಇಂದ್ರನೇ! ನಾನೇನಾದರೂ ಸತ್ಪಾತ್ರರಿಗೆ ದಾನ ಮಾಡಿದ್ದಲ್ಲಿ, ಹೋಮಾದಿಗಳಿಂದ ಯಜ್ಞೇಶ್ವರನನ್ನು ತೃಪ್ತಿ ಪಡಿಸಿದ್ದರೆ, ಗುರು ಹಿರಿಯರನ್ನು ಸೇವಿಸಿದ್ದರೆ ನನ್ನ ಪಾತಿವ್ರತ್ಯ ಸ್ಥಿರವಾಗಿ ಉಳಿಯಲಿ' ಎಂದು ಗದ್ಗದಿತ ಧ್ವನಿಯಿಂದ ನುಡಿದಳು.

**'ಯದಿ ದತ್ತಂ ಯದಿ ಹುತಂ ಗುರವಸ್ತೋಷಿತಾ ಯದಿ ।**
**ಏಕಭರ್ತೃತ್ವಮೇವಾಸ್ತು ಸತ್ಯಂ ಯದ್ಯಸ್ತಿ ವಾ ಮಯಿ' ॥ ೧೩-೨೪**

ಅಲ್ಲದೆ ಶಚಿದೇವಿಯು ರಾತ್ರ್ಯಭಿಮಾನಿ ದೇವತೆಯನ್ನು (ದುರ್ಗಾ) ಭಕ್ತಿಯಿಂದ ಆರಾಧಿಸಿದಳು. (ಉಪಶ್ರುತಿ ,ಎಂಬ)

**'ಯತ್ರಾಸ್ತೇ ದೇವರಾಜೋಽಸೌ ತಂ ದೇಶಂ ದರ್ಶಯಸ್ವ ಮೇ ।**
**ಇತ್ಯಾಹೋಪಶ್ರುತಿಂ ದೇವೀಂ ಸತ್ಯಂ ಸತ್ಯೇನ ದೃಶ್ಯತೇ' ॥ ೧೩-೨೭**

'ಎಲೈ ರಾತ್ರಿ ದೇವಿಯೆ ನನ್ನ ಪತಿ ಇಂದ್ರ ಎಲ್ಲಿರುವನು? ನನಗೆ ಉಪಶ್ರುತಿ ದೇವಿಯನ್ನು (ಆತನನ್ನು) ತೋರಿಸು. ಸತ್ಯದಿಂದಲೇ ಸತ್ಯ ದರ್ಶನ ಆಗಬೇಕು. ದಯವಿಟ್ಟು ನೀನು ಅವನಿರುವ ಪ್ರದೇಶವನ್ನು ತೋರಿಸು' ಎಂದು ಶಚೀದೇವಿ ಪೂಜಿಸಿದಳು.

ಶಚೀ ದೇವಿಯ ಪ್ರಾರ್ಥನೆಯ ಮೇರೆಗೆ ರಾತ್ರಿ ಅಭಿಮಾನಿ ದೇವತೆ ದುರ್ಗೆಯು (ಉಪಶ್ರುತಿಯು) ಶಚೀದೇವಿಯ ಸಮೀಪಕ್ಕೆ ಬಂದಳು. ಆಗ ಶಚೀದೇವಿಯು ಆಕೆಯನ್ನು ಪೂಜಿಸಿ 'ನೀನಾರು' ಎಂದು ಕೇಳಿದಳು. ಅದಕ್ಕೆ ಉಪಶ್ರುತಿಯು 'ನಾನು ಉಪಶ್ರುತಿ' ನಿನ್ನ ಸತ್ಯತನದಿಂದ ಪಾತಿವ್ರತ್ಯದಿಂದ ಯಮ ನಿಯಮಾದಿಗಳಿಂದಾಗಿ ನಿನಗೆ ನಿನ್ನ ಪತಿಯಾದ ಇಂದ್ರನನ್ನು ತೋರಿಸುತ್ತೇನೆ. ಕೂಡಲೆ ನನ್ನನ್ನು ಹಿಂಬಾಲಿಸು ಎಂದಳು. ಇಂದ್ರಾಣಿಯು ಹಾಗೆಯೇ ಉಪಶ್ರುತಿಯನ್ನು ಅನಸರಿಸಿ ನಡೆದಳು.

**'ಅಥೈನಾಂ ರೂಪಿಣೀಂ ಸಾಧ್ವೀಂ ಉಪಾತಿಷ್ಠದುಪಶ್ರುತಿ': ।**
**ಇಂದ್ರಾಣೀ ಸಂಪ್ರಹೃಷ್ಟಾತ್ಮಾ ಸಂಪೂಜ್ಯೈನಾಮಥಾಬ್ರವೀತ್ ।**
**ಇಚ್ಛಾಮಿ ತ್ವಾಮಹಂ ಜ್ಞಾತುಂ ಕಾ ತ್ವಂ ಬ್ರೂಹಿ ವರಾನನೇ' ॥**

**ಉಪಶ್ರುತಿರುವಾಚ**

**'ಉಪಶ್ರುತಿರಹಂ ದೇವೀ ತವಾಂತಿಕಮುಪಾಗತಾ ।**
**ದರ್ಶನಂ ಚೈವ ಸಂಪ್ರಾಪ್ತಾ ತವ ಸತ್ಯೇನ ಭಾವಿನಿ ॥**
**ಪತಿವ್ರತಾ ಚ ಯುಕ್ತಾ ಚ ಯಮೇನ ನಿಯಮೇನ ಚ ।**
**ದರ್ಶಯಿಷ್ಯಾಮಿ ತೇ ಶಕ್ರಂ ದೇವಂ ವೃತ್ರನಿಷೂದನಂ ॥**
**ಕ್ಷಿಪ್ರಂ ಅನ್ವೇಹಿ ಭದ್ರಂ ತೇ ದ್ರಕ್ಷ್ಯಸೇ ಸುರಸತ್ತಮಮ್' ।**

**(ಅಧ್ಯಾಯ ೧೪- ೧ರಿಂದ ೫)**

ರಾತ್ರಿ ದೇವತೆಯಾದ ದುರ್ಗೆಯು ಶಚೀದೇವಿಯನ್ನು ತನ್ನೊಡನೆ ಕರೆದುಕೊಂಡು ದೇವಾರಣ್ಯ, ಅನೇಕ ಪರ್ವತ, ಹಿಮಾಲಯವನ್ನು ದಾಟಿ ಅದರ ಉತ್ತರದ ಸಮುದ್ರದ ಮಧ್ಯದಲ್ಲಿನ ಮಹಾದ್ವೀಪಕ್ಕೆ ಬಂದರು. ಅಲ್ಲೊಂದು ನೂರು ಯೋಜನ ಉದ್ದ ಅಗಲವಾದ ಸರೋವರದಲ್ಲಿ ಐದು ಬಣ್ಣದ ಕಮಲಗಳನ್ನೂ, ಅಲ್ಲಿನ ರಸಾಸ್ವಾದ ಮಾಡುವ ಸಹಸ್ರಾರು ಷಟ್ಪದಿ (ಕೀಟ) ಗಳನ್ನೂ, ಸಹಸ್ರಾರು ಕಮಲ ಪುಷ್ಪಗಳನ್ನು ನೋಡಿದರು. ಆ ಸರೋವರದ ಮಧ್ಯದಲ್ಲಿ ಒಂದು ದೊಡ್ಡ ಕಮಲವಿತ್ತು. ಅದರ ಮೇಲೆ ಬಿಳಿದಾದ ನಾಳ ತೂರಿಕೊಂಡು ಇಬ್ಬರೂ ಒಳಗೆ ಹೋಗಿ ಅಲ್ಲಿ ಸೂಕ್ಷ್ಮ

ರೂಪಧರಿಸಿಕೊಂಡಿದ್ದ ಶಕ್ರನನ್ನು ನೋಡಲು ಇವರೂ ಸೂಕ್ಷ್ಮ ರೂಪ ಧರಿಸಿದರು. ಇಂದ್ರನನ್ನು ನೋಡಿ ಶಚೀದೇವಿಯು ಸ್ತೋತ್ರ ಮಾಡಿ ನಹುಷನಿಂದ ಆಗುತ್ತಿರುವ ಅನ್ಯಾಯಗಳನ್ನು ವಿವರಿಸಿ ಅವನನ್ನು ಆದಷ್ಟು ಬೇಗನೇ ಸಂಹರಿಸಿ ತನ್ನನ್ನು ಕಾಪಾಡಲು ಬೇಡಿಕೊಂಡಳು. ನಂತರ ತೇಜಸ್ವಿಯಾಗಿ ಇಂದ್ರ ಪದವಿಯನ್ನು ಸ್ವೀಕರಿಸಿ ಮೂರ್ಲೋಕವನ್ನು ಆಳಲು ಯಾಚಿಸಿದಳು.

**'ತತಃ ಸಾ ಕಥಯಾಮಾಸ ನಹುಷಸ್ಯ ವಿಚೇಷ್ಟಿತಮ್ ।**
**ಇಂದ್ರತ್ವಂ ತ್ರಿಷು ಲೋಕೇಷು ಪ್ರಾಪ್ಯ ವೀರ್ಯಸಮನ್ವಿತಃ ।**
**ದರ್ಪಾವಿಷ್ಟಶ್ಚ ದುಷ್ಟಾತ್ಮಾ ಮಾಮುವಾಚ ಶತಕ್ರತೋ ।**
**ಉಪತಿಷ್ಠೇತಿ ಸಕ್ರೂರಃ ಕಾಲಂ ಚ ಕೃತವಾನ್ ಮಮ ।**
**ಯದಿ ನ ತ್ರಾಸ್ಯಸಿ ವಿಭೋ ಕರಿಷ್ಯತಿ ಸ ಮಾಂ ವಶೇ ।**
**ಜಹಿ ರೌದ್ರಂ ಮಹಾಬಾಹೋ ನಹುಷಂ ಪಾಪನಿಶ್ಚಯಮ್ ॥**
**ತೇಜಃ ಸಮಾಪ್ನುಹಿ ವಿಭೋ ದೇವರಾಜ್ಯಂ ಪ್ರಶಾಧಿ ಚ' ॥**

**(ಅ ೧೪ – ೧೪ ರಿಂದ ೧೮)**

## ಸಪ್ತರ್ಷಿ ವಾಹನವೇರಿ ಬರಲು ಇಂದ್ರನ ಸೂಚನೆ

ಇಂದ್ರಾಣಿಯ ಕೋರಿಕೆಯನ್ನು ಆಲಿಸಿದ ಶಕ್ರನು ತನ್ನ ಪತ್ನಿಗೆ 'ನಹುಷನ ವಿರುದ್ಧ ಬಲಾತ್ಕಾರ ಮಾಡಿ ಗೆಲ್ಲಲು ಇದು ಸಕಾಲವಲ್ಲ. ಕಾರಣ ದೇವರ್ಷ್ಯಾದಿಗಳ ಬಲದಿಂದ ನಹುಷ ಕೊಬ್ಬಿದ್ದಾನೆ. ಈಗ ಬೇರೊಂದು ಉಪಾಯದಿಂದ ಆತನನ್ನು ನಿಗ್ರಹಿಸುವುದು ಉಚಿತ. ಅದಕ್ಕಾಗಿ ನೀನು ಆತನ ಬಳಿಗೆ ಹೋಗಿ "ಸಪ್ತರ್ಷಿಗಳನ್ನೇ ವಾಹಕರನ್ನಾಗಿ ಮಾಡಿಕೊಂಡು ನನ್ನ ಬಳಿಗೆ ಬಂದರೆ ವಶಳಾಗುವೆ" ಎಂದು ಹೇಳು 'ಈ ರಹಸ್ಯವನ್ನು ಯಾರಿಗೂ ತಿಳಿಸದಿರು' ಎಂದು ಹೇಳಲು ಶಚೀದೇವಿಯು ನಹುಷನ ಬಳಿಗೆ ಹೋಗಿ ಹಾಗೆಯೇ ನಿವೇದಿಸಿದಂತೆ ಹೇಳಲು ನಹುಷನು ಕೂಡಲೆ ಉಬ್ಬಿ[೧], 'ಭಾಮಿನಿ ನಿನ್ನ ವಿಚಾರ ಉತ್ತಮವಾದುದು. ಹಾಗೂ ನನಗೆ ಅದೇನೂ ಕಷ್ಟಕರವಲ್ಲ. ಕಾರಣ ನಾನು ಹಿಂದೆ ಮುಂದೆ ಈಗ ನನ್ನ ಸಮಾನರಾದ ತಪಸ್ವಿಗಳಿಲ್ಲ. ನಾನು ಮುನಿದರೆ ಜಗತ್ತೇ ಇಲ್ಲವಾದೀತು. ಎಲ್ಲ ಜಗತ್ತೂ ನನ್ನ ಮೇಲೆಯೇ ನಿಂತಿದೆ. ನಾನು ತ್ರಿಲೋಕದೊಡೆಯ. ನಾನು ಮುನಿದರೆ ದೇವಗಂಧರ್ವ ಕಿನ್ನರೋರಗ ರಾಕ್ಷಸರ್ಯಾರೂ ನನ್ನನ್ನು ಎದುರಿಸಲು ಅಸಮರ್ಥರು. ನಾನು ಯಾರ್‍ಯಾರನ್ನು ನೋಡುವೆನೋ ಅವರ ತೇಜಸ್ಸು ನನ್ನ ಪಾಲಾಗುತ್ತದೆ. ಆದ್ದರಿಂದ ಸಪ್ತರ್ಷಿಗಳೂ ಶಿಬಿಕೆಯಲ್ಲಿ ಕುಳಿತ ನನ್ನನ್ನು ಹೊರುತ್ತಾರೆ ಇತ್ಯಾದಿಯಾಗಿ ನಾಚಿಕೆಯಿಲ್ಲದೆ ತನ್ನದಲ್ಲದ ಗುಣಗಳನ್ನು ಕೊಚ್ಚಿಕೊಂಡನು. ನನ್ನ ಮಹಿಮೆಯನ್ನು ನೀನೇ ನೋಡುವೆ ಎಂದನು.

**ಶಕ್ರ ಉವಾಚ (ಶಚೀಂಪ್ರತಿ)**
**'ಗತ್ವಾ ನಹುಷಮೇಕಾಂತೇ ಬ್ರವೀಹಿ ಚ ಸುಮಧ್ಯಮೇ ।**
**ಋಷಿಯಾನೇನ ದಿವ್ಯೇನ ಮಾಮುಪೈಹಿ ಜಗತ್ಪತೇ ।** **– ೧೫/೩,೪**

---

೧ ದರ್ಪಾದ್ಯೈಚ್ಛತ್ ಶಚೀಮಪಿ ।– ಮ.ತಾ.ನಿ.(೨೨/೩೪೫)

ಏವಂ ತವ ವಶೇ ಪ್ರೀತಾ ಭವಿಷ್ಯಾಮೀತಿ ತಂ ವದ' ॥

ಇಂದ್ರಾಣೀ ಉವಾಚ (ನಹುಷಂ ಪ್ರತಿ)

'ಇಂದ್ರಸ್ಯ ವಾಜಿನೋ ವಾಹಾ ಹಸ್ತಿನೋಽಥ ರಥಾಸ್ತಥಾ ।
ಇಚ್ಛಾಮ್ಯಹಮಥಾಪೂರ್ವಂ ವಾಹನಂ ತೇ ಸುರಾಧಿಪ ।
ಯನ್ನ ವಿಷ್ಣೋರ್ನ ರುದ್ರಸ್ಯ ನಾಸುರಾಣಾಂ ನ ರಕ್ಷಸಾಂ ।
ವಹಂತು ತ್ವಾಂ ಮಹಾಭಾಗಾ ಋಷಯಃ ಸುಗತಾ ವಿಭೋ' ॥
– ೧೫/೧೧–೧೩

ನಹುಷ ಉವಾಚ (ಶಚೀಂ ಪ್ರತಿ)

'ಅಪೂರ್ವಂ ವಾಹನಮಿದಂ
ಅಹಂ ತಪಸ್ವೀ ಬಲವಾನ್ ಭೂತಭವ್ಯ ಭವತ್ಪ್ರಭುಃ ।
ಮಯಿ ಕ್ರುದ್ಧೇ ಜಗನ್ನಸ್ಯಾನ್ಮಯಿ ಸರ್ವಂ ಪ್ರತಿಷ್ಠಿತಂ ।
ನ ಮೇ ಕ್ರುದ್ಧಸ್ಯ ಪರ್ಯಾಪ್ತಾಃ ಸರ್ವೇ ಲೋಕಾಃ ಶುಚಿಸ್ಮಿತೇ ।
ಸಪ್ತರ್ಷಯೋ ಮಾಂ ವಕ್ಷ್ಯಂತಿ ಸರ್ವೇ ಬ್ರಹ್ಮರ್ಷಯಸ್ತಥಾ ।
ಪಶ್ಯ ಮಾಹಾತ್ಮ್ಯಯೋಗಂ ಮೇ ಋದ್ಧಿಂ ಚ ವರವರ್ಣಿನಿ' ॥
(ಅ ೧೫–೧೧ ರಿಂದ ೨೦)

ಹೀಗೆ ನುಡಿದ ನಹುಷನು ಸಪ್ತರ್ಷಿಗಳಿಗೆ ತನ್ನನ್ನು ಹೊತ್ತುಕೊಂಡು ಶಚೀದೇವಿಯ ಅರಮನೆಗೆ ಹೋಗಲು ಬಲದರ್ಪ ಕಾಮಮೋಹಿತನಾಗಿ ಬ್ರಾಹ್ಮಣ ದ್ರೋಹಿಯಾದವನಾಗಿ ಆಜ್ಞಾಪಿಸಿದನು.

ನಂತರ ನಹುಷನಿಂದ ಬೀಳ್ಕೊಟ್ಟ ಶಚಿಯು ನೇರವಾಗಿ ಬೃಹಸ್ಪತ್ಯಾಚಾರ್ಯರ ಬಳಿಗೆ ಬಂದು 'ಗುರುಗಳೇ ನಹುಷನು ನನಗೆ ಕೊಟ್ಟಿರುವ ಕಾಲ ತುಂಬಾ ಅಲ್ಪ. ಆದ್ದರಿಂದ ಆದಷ್ಟು ಬೇಗನೇ ಇಂದ್ರನನ್ನು (ನನ್ನ ಪತಿಯನ್ನು ಹುಡುಕಿಸಿಕೊಟ್ಟು ತಮ್ಮ ಭಕ್ತಳಾದ ನನ್ನ ಮೇಲೆ ದಯೆ ತೋರಿರಿ ಎಂದು ಬೇಡಿದಳು. ಹಾಗೆಯೇ ಆಗಲಿ ಎಂದರು, ಗುರುಗಳು.

'ಭಕ್ತೆ, ದುಷ್ಟನಾದ ನಹುಷನಿಂದ ಹೆದರಬೇಡ. ಆ ನರಾಧಮನು ಇನ್ನು ಬಹುಕಾಲ ಇರನು. ತನ್ನ ವಾಹಕರನ್ನಾಗಿ ನೇಮಿಸಿರುವ ಋಷಿಗಳಿಂದಲೇ ಅವನ ನಾಶ ಸಮೀಪಿಸಿದೆ. ಇಂದ್ರನನ್ನು ಹುಡುಕಿಸುತ್ತೇನೆ. ನಹುಷನ ನಾಶಕ್ಕಾಗಿ ಯಾಗ ಒಂದನ್ನು ಮಾಡುತ್ತೇನೆ' ಎಂದು ನುಡಿದು ವಿದ್ಯುಕ್ತವಾಗಿ ಅಗ್ನಿಯಲ್ಲಿ ಹೋಮಿಸಲು ಅಗ್ನಿಯು ಪ್ರತ್ಯಕ್ಷನಾದನು. ಗುರುಗಳು ಅಗ್ನಿಯನ್ನು ಇಂದ್ರನನ್ನು ಹುಡುಕಲು ಆದೇಶಿಸಿದರು. ಅಗ್ನಿಯು ಅದ್ಭುತವಾದ ಸ್ತ್ರೀ ವೇಷವನ್ನು ಹಾಕಿಕೊಂಡು (ನಿಜ ರೂಪದಲ್ಲಿ ಹೋಗುವುದು ಸರಿಯಲ್ಲ ಗೂಢಚಾರಿಯಾಗಲು ಮಾರುವೇಷವೇ

ಸೂಕ್ತ) ಭೂಮಿ, ಪರ್ವತ, ಆಕಾಶಾದಿಗಳನ್ನು ನಿಮಿಷ ಮಾತ್ರದಲ್ಲಿ ಸಂಚರಿಸಿ ಇಂದ್ರನನ್ನು ಕಾಣದೆ ಗುರುಗಳಿಗೆ ಬಂದು ತಿಳಿಸಿದನು. ಜಲಮೂಲಗಳು ಮಾತ್ರ ಉಳಿದಿವೆ. (ಅಗ್ನಿ, ನೀರುಗಳ ಪರಸ್ಪರ ವಿರುದ್ಧವೆಂಬ ಸಾಮಾನ್ಯ ನಿಯಮ) ನೀರು ನನ್ನ ಉಗಮ ಸ್ಥಾನವಾದರೂ ಅದನ್ನು ಪ್ರವೇಶಿಸಿದರೆ ನನ್ನ ಶಕ್ತಿನಾಶವಾಗುತ್ತದೆ ಎಂದನು.

**ಬೃಹಸ್ಪತಿರುವಾಚ – ಶಚೀಂಪ್ರತಿ**

**'ನ ಭೇತವ್ಯಂ ತ್ವಯಾ ದೇವಿ ನಹುಷಾತ್ ದುಷ್ಟಚೇತಸಃ ।**
**ನ ಹ್ಯೇಷ ಸ್ಥಾಸ್ಯತಿ ಚಿರಂ ಗತ ಏಷ ನರಾಧಮಃ ।**
**ಅಧರ್ಮಜ್ಞೋ ಮಹರ್ಷೀಣಾಂ ವಾಹನಾಚ್ಚ ತತಃ ಶುಭೇ ।**
**ಇಷ್ಟಿಂ ಚಾಪಿ ಕರಿಷ್ಯಾಮಿ ವಿನಾಶಾಯಾಸ್ಯ ದುರ್ಮತೇಃ' ॥**

**ಅಗ್ನಿರುವಾಚ – ಬೃಹಸ್ಪತಿಂ ಪ್ರತಿ**

**'ನಾಪಃ ಪ್ರವೇಷ್ಟುಂ ಶಕ್ಷ್ಯಾಮಿ ಕ್ಷಯೋ ಮೇಽತ್ರ ಭವಿಷ್ಯತಿ ।**
**ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಂ ಅಶ್ಮನೋ ಲೋಹಮುತ್ಥಿತಂ ।**
**ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ' ॥**

**(ಅ ೧೫-೩೩,೩೪)**

'ಜಲದಿಂದ ಅಗ್ನಿ, ಬ್ರಾಹ್ಮಣರಿಂದ ಕ್ಷತ್ರಿಯರು, ಕಲ್ಲಿನಿಂದ ಲೋಹಗಳು ಜನಿಸಿದರೂ ಉಗಮಸ್ಥಾನಗಳಾದರೂ ತಮ್ಮ ಮೂಲ ಸ್ಥಾನಗಳಲ್ಲಿ ಉತ್ಪನ್ನ ವಸ್ತುಗಳು ಶಾಂತವಾಗುತ್ತವೆ. ಪ್ರಭಾವವನ್ನು ಕಳೆದುಕೊಳ್ಳುತ್ತವೆ. ಆದ್ದರಿಂದ ನಾನು ಜಲದಿಂದ ಉತ್ಪನ್ನನಾಗಿದ್ದರೂ ಜಲದಲ್ಲಿ ನಾನು ಪ್ರಭಾವ ಬೀರಲಾರೆ ಶಾಂತನಾಗುವೆ', ಎಂದನು ಅಗ್ನಿ – ಬೃಹಸ್ಪತಿಗೆ.

ಆಗ ಬೃಹಸ್ಪತಿಯು ಅಗ್ನಿಯನ್ನು ಕುರಿತು 'ನೀನು ಎಲ್ಲ ದೇವತೆಗಳ ಮುಖ (ಎಲ್ಲರಿಗೂ ಹವಿಸ್ಸನ್ನು ಮುಟ್ಟಿಸುವವನು), ಎಲ್ಲ ಭೂತಗಳ ಅಂತರ್ಯಾಮಿ, ವ್ಯಾಪಾರಗಳ (ಚೇಷ್ಟೆಗಳ) ಸಾಕ್ಷಿಯಾಗಿರುವೆ ಯಾರಿಗೂ ತಿಳಿಯದಂತೆ ಸಂಚರಿಸುವೆ. ನಿನ್ನನ್ನು ಜ್ಞಾನಿಗಳು ಸರ್ವೋತ್ತಮನೆಂದೂ, ನಿನ್ನನ್ನು ಮೂರು ವಿಧವಾಗಿರುವನೆಂದೂ ಕರೆಯುವರು.

"ನೀನು ಜಗತ್ತನ್ನು ಉದಾಸೀನನಾಗಿ ನೋಡಿದರೆ ಜಗತ್ತು ನಾಶವಾದಂತೆ, ನಿನ್ನನ್ನು ಆರಾಧಿಸುವ ವಿಪ್ರರು-ಜ್ಞಾನಿಗಳು ಪರಮಗತಿಯನ್ನು ಪತ್ನಿಯರಿಂದ ಪುತ್ರರಿಂದ ಕೂಡಿಕೊಂಡು ಹೋಗುವರು. ನಿನ್ನಲ್ಲಿಯೇ ನೀರು ಮೊದಲಾದ ಸಕಲ ಭೂತಗಳೂ ಇವೆ. ಆದ್ದರಿಂದ ನಿನಗೆ ಜಲಪ್ರವೇಶದಿಂದ ಯಾವ ಬಾಧೆಯೂ ಇಲ್ಲ. ನಿನ್ನನ್ನು ಬ್ರಾಹ್ಮ ಮಂತ್ರಗಳಿಂದ ಬೆಳೆಸುವೆ." ಎಂಬ ಅಂತರ್ಯಾಮಿ ವಿವಕ್ಷಾದಿಂದ ಕೂಡಿದ

ಸ್ತೋತ್ರಗಳನ್ನು ಮಾಡಲು ಅಗ್ನಿಯು ಸಮುದ್ರಾದಿ ಜಲಮೂಲಗಳನ್ನು ಪ್ರವೇಶಿಸಿ ಇಂದ್ರನಿರುವ ಸ್ಥಳವನ್ನು ಪ್ರವೇಶಿಸಿದನು.

**ಬೃಹಸ್ಪತಿ ನುಡಿದನು (ಅಗ್ನಿಗೆ)**

**'ತ್ವಮಗ್ನೇ ಸರ್ವದೇವಾನಾಂ ಮುಖಂ ತ್ವಮಸಿ ಹವ್ಯಾವಾಟ್ ।**
**ತ್ವಮಂತಃ ಸರ್ವಭೂತಾನಾಂ ಗೂಢಶ್ಚರಸಿ ಸಾಕ್ಷಿವತ್ ।**

**ತ್ವಯಾ ತ್ಯಕ್ತಂ ಜಗಚ್ಚೇದಂ ಸದ್ಯೋ ನಶ್ಯೇದ್ಧುತಾಶನ ।**
**ಕೃತ್ವಾ ತುಭ್ಯಂ ನಮೋ ವಿಪ್ರಾಃ ಸ್ವಕರ್ಮವಿಜಿತಾಂ ಗತಿಮ್ ।**
**ಅಹಂ ತ್ವಾಂ ವರ್ಧಯಿಷ್ಯಾಮಿ ಬ್ರಾಹ್ಮೈರ್ಮಂತ್ರೈಃ ಸನಾತನೈಃ ।**
**ಏವಂ ಸ್ತುತೋ ಹವ್ಯವಾಟ್**
**ಪ್ರವಿಶ್ಯಾಪಸ್ತತೋ ವಹ್ನಿಃ ಸಸಮುದ್ರಾ ಸಪಲ್ಲವಾಃ ।**
**ಆಸಸಾದ ಸರಸ್ತಚ್ಚ ಗೂಢೋ ಯತ್ರ ಶತಕ್ರತುಃ ॥** ಅ ೧೬–೧ ರಿಂದ ೧೦

ಸಮುದ್ರದಲ್ಲಿನ ಕಮಲದ ನಾಳದಲ್ಲಿ ಸೂಕ್ಷ್ಮ ರೂಪದಿಂದ ಅವಿತುಕೊಂಡು (ತಪಸ್ಸನ್ನು ಮಾಡುತ್ತಿದ್ದ) ಇಂದ್ರನನ್ನು ಅಗ್ನಿಯ ಕಂಡನು. ಆಗಲೇ ಬೃಹಸ್ಪತ್ಯಾಚಾರ್ಯರೂ ದೇವಗಂಧರ್ವಾದಿಗಳಿಂದ ಕೂಡಿಕೊಂಡು ಅಲ್ಲಿಗೆ ಬಂದು ಇಂದ್ರನನ್ನು ಆತನ ಹಿಂದಿನ ಮಹಿಮಾ ಚರಿತ್ರೆಗಳಿಂದ ಸ್ತೋತ್ರ ಮಾಡಿದಾಗ ಶಕ್ರನ ಬಲವು ಮೆಲ್ಲಗೆ ವೃದ್ಧಿಗೊಂಡು ಗುರುಗಳನ್ನು ಕುರಿತು ಹೀಗೆ ನುಡಿದನು.

'ಲೋಕನಾಶಗೈದ ಮಹಾಕಾಯನಾದ ವೃತ್ತಾಸುರನು ನನ್ನಿಂದ ಹತನಾದ ಮೇಲೆ ಮತ್ತೇನು ಉಳಿದಿದೆ? ಎಂದು ಆಗ ಬೃಹಸ್ಪತಿ ಗುರುಗಳು 'ನಮ್ಮೆಲ್ಲರನ್ನು ದೇವರ್ಷಿಗಳ ಬಲದಿಂದ ಸೊಕ್ಕಿದ ನಹುಷನು ಬಾಧಿಸುತ್ತಿದ್ದಾನೆ' ಎಂದರು. (ಎಲ್ಲ ಗೊತ್ತಿದ್ದರೂ ಕೇಳಿದನು).

ಆಗ ಗುರುಗಳು ನಹುಷನು ದೇವೇಂದ್ರ ಪದವಿಗೆ ಬಂದ ಹಿನ್ನೆಲೆಯನ್ನೆಲ್ಲ ವಿವರಿಸಿ ದೇವರ್ಷಿಗಳೆಲ್ಲ ತಮ್ಮ ಬಲಗಳನ್ನು ಕಳೆದುಕೊಂಡು ಅಸಹಾಯಕರಾಗಿದ್ದಾರೆ ಎಂದರು. ಆಗಲೇ ಕುಬೇರ, ಯಮ, ಚಂದ್ರ, ವರುಣ ಮೊದಲಾದ ಲೋಕಪಾಲಕರೂ ಬಂದು ಇಂದ್ರನನ್ನು ಕುರಿತು 'ಅದೃಷ್ಟವಶಾತ್ ನಿನ್ನ ಅನುಗ್ರಹದಿಂದ ವೃತ್ತ ಸಂಹಾರವಾಯಿತು. ಈಗ ನಮ್ಮ ಬಲದಿಂದಲೇ ಸೊಕ್ಕಿ ನಹುಷನು ನಮಗೆ ಭಯಂಕರನಾಗಿದ್ದಾನೆ. ಅವನ ದರ್ಶನವೂ ನಮಗೆ ಭಯಾವಹವಾಗಿದೆ. ಒಂದು ವೇಳೆ ನೀನು ಅವನನ್ನು ಪರಾಭವಗೊಳಿಸಿದಲ್ಲಿ ನಾವೂ ಇನ್ನು ಮುಂದೆ ಯಜ್ಞದಲ್ಲಿ ಹವಿರ್ಭಾಗಿಗಳಾಗುತ್ತೇವೆ'. ಎಂದರು. ಆಗ ಇಂದ್ರನು 'ನೀವೆಲ್ಲ ನಿಮ್ಮ ನಿಮ್ಮ ಸ್ಥಾನಗಳಲ್ಲಿ ಪಟ್ಟಾಭಿಷಿಕ್ತರಾಗಿರಿ'. ನಾವೆಲ್ಲ ಸೇರಿ ನಹುಷನನ್ನು ಜಯಿಸೋಣ' ಎಂದನು. 'ಇಂದ್ರನೇ! ನನಗೂ ಯಜ್ಞದ ಹವಿರ್ಭಾಗವನ್ನು ದಯವಿಟ್ಟು ಕೊಂಡು. ನಹುಷನನ್ನು ಗೆಲ್ಲಲು ನಿನಗೆ ಸಹಾಯ ಮಾಡುವೆ' ಎಂದು ಅಗ್ನಿಯು ನುಡಿದನು. ಆಗ ಇಂದ್ರನು 'ನಮ್ಮಿಬ್ಬರಿಗೆ

ಒಂದೇ ಮಂತ್ರದಿಂದ. ಹವಿರ್ಭಾಗವನ್ನು ಜ್ಞಾನಿಗಳು ಮಹಾಯಜ್ಞದಲ್ಲಿ ನೀಡುತ್ತಾರೆ ಎಂದನು.

ಹೀಗೆ ವರ ನೀಡಲು ಸಮರ್ಥನಾದ ಇಂದ್ರನು ಚೆನ್ನಾಗಿ ವಿಚಾರ ಮಾಡಿ ಯಕ್ಷರಾಜನನ್ನಾಗಿ ಕುಬೇರನನ್ನು ಪಿತೃ ಪತಿಯನ್ನಾಗಿ ಯಮನನ್ನು, ಜಲಪತಿಯನ್ನಾಗಿ ವರುಣನನ್ನು ಮಾಡಿದನು.

**'ದೇವಾ ಭೀತಾಃ ಸಕ್ರಮಕಾಮಯಂತ**
**ತ್ವಂ ನೋ ರಾಜಾ ಭವ ಭುವನಸ್ಯ ಗೋಪ್ತಾ ।**
**ದೇವಾಶ್ಚ ಸರ್ವೇ ನಹುಷಂ ಭೃಶಾರ್ತಾ**
**ನ ಪಶ್ಯಂತೇ ಗೂಢರೂಪಾಶ್ಚರಂತಃ' ॥** **೧೬-೨೩ ರಿಂದ ೨೬**
**'ತ್ವ ಚೇದ್ರಾಜಾನಂ ನಹುಷಂ ಪರಾಜಯೇಃ**
**ತತೋ ವಯಂ ಭಾಗಮರ್ಹಾಮ ಶಕ್ರ ।**
**ತಮಾಹ ಶಕ್ರೋ (ಅಗ್ನಿಂ) ಭವಿತಾಗ್ನೇ ತವಾಪಿ**
**ಚೇಂದ್ರಾಗ್ನ್ಯೋರ್ವೈ ಭಾಗ ಏಕೋ ಮಹಾಕ್ರತೌ' ॥** **೧೬-೨೧, ೩೨**

ಅಗಸ್ತ್ಯರಿಂದ ಇಂದ್ರನಿಗೆ ನಹುಷ ಪತನ ವೃತ್ತಾಂತ ನಿವೇದನೆ

ಹೀಗೆ ದೇವತೆಗಳೊಂದಿಗೆ ನಹುಷನ ವಧೋಪಾಯವನ್ನು ಸಮಾಲೋಚನೆ ಮಾಡುತ್ತಿರಲು ತಪಸ್ವಿಗಳಾದ ಅಗಸ್ತ್ಯರು ಅಲ್ಲಿಗೆ ಬಂದು ಇಂದ್ರನನ್ನು ಕುರಿತು 'ದೈವಾನುಗ್ರಹದಿಂದ ನೀನು ದಿನೇ ದಿನೇ ವೃದ್ಧಿ ಹೊಂದುತ್ತಿರುವೆ. ವಿಶ್ವರೂಪ, ವೃತ್ತಾಸುರರು ಈಗಾಗಲೇ ಹತರಾದರು. ಮತ್ತೆ ಈಗ ನಹುಷನೂ ಇಂದ್ರ ಪದದಿಂದ ಭ್ರಷ್ಟನಾದನು!! ಅದೃಷ್ಟ ವಶದಿಂದಲೇ ನಾನು ಇಂದು ನಿನ್ನನ್ನು ನೋಡುತ್ತಿರುವೆ' !

ಆಗ ಇಂದ್ರನು ಮುದಗೊಂಡು ಅಗಸ್ತ್ಯರಿಗೆ ಅರ್ಘ್ಯಾದ್ಯುಪಚಾರಗಳನ್ನು ಮಾಡಿ ನಹುಷನು ಹೇಗೆ ಇಂದ್ರ ಪದದಿಂದ ಭ್ರಷ್ಟನಾದನು? ಎಂದು ಕೇಳಿದನು.

**'ಪರಿಭ್ರಷ್ಟಃ ಕಥಂ ಸ್ವರ್ಗಾನ್ನಹುಷಃ ಪಾಪನಿಶ್ಚಯಃ' । – ೧೭/೬**

ಆಗ ಅಗಸ್ತ್ಯರು ನುಡಿದರು

ನಹುಷ ಸ್ವರ್ಗಚ್ಯುತನಾಗಲು ಅವನಿಗೆ ಲಭಿಸಿದ ಬಲ–ದರ್ಪವೇ ಕಾರಣ. ನಹುಷನು ಸಪ್ತರ್ಷಿಗಳನ್ನು ಬ್ರಹ್ಮರ್ಷಿಗಳನ್ನು ತನ್ನ ಶಿಬಿಕೆಯ ವಾಹಕರನ್ನಾಗಿಸಿದನಷ್ಟೆ. ಅವರು ಆ ಕೆಲಸದಲ್ಲಿ ತುಂಬಾ ಶ್ರಾಂತರಾದರು. ಅವನ ನಡೆಯಿಂದ ಬೇಸರಗೊಂಡಿದ್ದರು. ಒಮ್ಮೆ ಶಿಬಿಕೆಯನ್ನು ಹೊತ್ತು ಹೋಗುವಾಗ ಈ ಪ್ರಶ್ನೆ ಕೇಳಿದರು.

ಹಸುಗಳನ್ನು ಸಂಪ್ರೋಕ್ಷಿಸಲು ವೇದದಲ್ಲಿ ಹೇಳಿರುವ ಮಂತ್ರಗಳು ನಿನಗೆ ಪ್ರಮಾಣವೇ ಅಲ್ಲವೇ? (ಶ್ರೌತಯಾಗದ ಮಂತ್ರಗಳು) ಈ ಬಗ್ಗೆ ಲಕ್ಷಾಲಂಕಾರದಲ್ಲಿ ನಿರೂಪಿತ ಭಾರತದ ಈ ಶ್ಲೋಕಾರ್ಥವನ್ನು ಲೇಖನದ ಕೊನೆಗೆ ನೀಡಲಾಗಿದೆ).

ಆಗ ನಹುಷನು ಪ್ರಮಾಣವಲ್ಲವೆಂದ. ಆಗ ಪಲ್ಲಕ್ಕಿ ಹೊತ್ತ ಋಷಿಗಳೆಲ್ಲ ನಮಗೆ ಈ ಮಂತ್ರಗಳು ಪ್ರಮಾಣಗಳೇ ಈ ಬಗ್ಗೆ ಮುನಿಗಳೊಂದಿಗೆ ವಿವಾದ ಮಾಡುತ್ತ ನಹುಷನು, ನನ್ನ ಶಿರಸ್ಸನ್ನು ತನ್ನ ಪಾದದಿಂದ ಸ್ಪರ್ಶಿಸಿದ (ಒದ್ದ) (ಯಾವ ಋಷಿಗಳ ಪಾದಧೂಳು ಸರ್ವರಿಗೂ ಶಿರೋಧಾರ್ಯವೋ ಅಂತಹ ಶಿರಸ್ಸನ್ನು ನಹುಷನು ಧಿಕ್ಕಾರದಿಂದ ತನ್ನ ಪಾದದಿಂದ ಬಲದರ್ಪಗರ್ವಿತನಾದ್ದರಿಂದ ಒದ್ದನೆಂದು ಭಾವ). ಅದರಿಂದ ಕುಪಿತನಾದ ನಾನು ನಹುಷನಿಗೆ ಹೀಗೆ ಹೇಳಿದೆ.

"ನಿನ್ನ ಕಾಲುಗಳಿಂದ ನನ್ನ ಶಿರಸ್ಸನ್ನು ಸ್ಪರ್ಶಿಸಿದ್ದರಿಂದ ಹಾಗೂ ಬ್ರಹ್ಮರ್ಷಿಗಳನ್ನು ನಿನ್ನ ವಾಹಕರನ್ನಾಗಿಸಿದ್ದರಿಂದ ನಿಸ್ತೇಜನಾಗಿದ್ದೀ. ಸಂಪದ್ವಿಹೀನನಾಗಿದ್ದೀ. ಆದ್ದರಿಂದ ಸ್ವರ್ಗಚ್ಯುತನಾಗಿ ಪುಣ್ಯವನ್ನು ಕಳೆದುಕೊಂಡು ಭೂಮಿಯ ಮೇಲೆ (ಬಿದ್ದು) ಹತ್ತು ಸಾವಿರ ವರ್ಷಗಳವರೆಗೆ ಮಹಾಸರ್ಪನಾಗಿ ಸಂಚರಿಸುವೆ. ನಂತರ ಮತ್ತೆ ಸ್ವರ್ಗಕ್ಕೆ ಹೋಗುವೆ." ಹೀಗೆ ದುರಾತ್ಮನಾದ ನಹುಷನು ದೇವರಾಜ್ಯದಿಂದ ಭ್ರಷ್ಟನಾಗಿ ಭೂಮಿಯ ಮೇಲೆ ಬಿದ್ದನು.

ಹಾಗೆಯೇ ಇಂದ್ರನೇ ನೀನು ಅದೃಷ್ಟವಶಾತ್ ವರ್ಧಿಸುತ್ತಿರುವೆ. ಬ್ರಾಹ್ಮಣ ಕಂಟಕನಾದ ನಹುಷನು ಹತ (ಪ್ರಾಯ) ನಾದನು. ಆದ್ದರಿಂದ ನೀನು ಸ್ವರ್ಗಕ್ಕೆ ಬಾ ಜಿತೇಂದ್ರಿಯನಾಗಿ, ಜಿತಶತೃವಾಗಿ, ಮಹರ್ಷಿಗಳಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ಮೂರೂ ಲೋಕಗಳನ್ನು, ಶಚೀಪತಿಯೇ! ಪಾಲಿಸು! (ಅನುಗ್ರಹಿಸು) ಎಂದರು. ನಂತರ ಮಹರ್ಷಿ ಗಣಗಳಿಂದ, ಅಪ್ಸರೆಯರಿಂದ ಕೂಡಿದ ದೇವತೆಗಳು, ಪಿತೃಗಳು, ಯಕ್ಷರು, ಕಿನ್ನರರು, ಸರ್ಪಗಳು, ರಾಕ್ಷಸರು, ಗಂಧರ್ವರು, ದೇವ ಕನ್ಯೆಯರು ನದೀ ಸಮುದ್ರಾಭಿಮಾನಿ ದೇವತೆಗಳು ಪರ್ವತಾಭಿಮಾನಿ ದೇವತೆಗಳು ಇಂದ್ರನ ಬಳಿಗೆ ಬಂದು 'ದೈವೇಚ್ಛೆಯಿಂದ ನೀನು ವೃದ್ಧಿ ಹೊಂದಿರುವೆ. ಪಾಪಿಯಾದ ನಹುಷನು ಜ್ಞಾನಿಯಾದ ಅಗಸ್ತ್ಯರಿಂದ ಹತನಾದ. ಪಾಪ ಕರ್ಮರತನಾದ ನಹುಷನು ಭೂಮಿಯಲ್ಲಿ ಸರ್ಪನಾಗಿ ಬಿದ್ದನು ಎಂದರು.

**ದೇವರ್ಷಯೋ ಮಹಾಭಾಗಾಸ್ತಥಾ ಬ್ರಹ್ಮರ್ಷಯೋಽಮಲಾಃ ।**
**ಪಪ್ರಚ್ಛುರ್ನಹುಷಂ ದೇವಂ ಸಂಶಯಂ ಜಯತಾಂ ವರ ।**
**ಯ ಇಮೇ ಬ್ರಹ್ಮಣಾ ಪ್ರೋಕ್ತಾಃ ಮಂತ್ರಾ ವೈ ಪ್ರೋಕ್ಷಣೇ ಗವಾಂ ।**
**ಏತೇ ಪ್ರಮಾಣಂ ಭವತ ಉತಾಹೋ ನೇತಿ ವಾಸವ ।**
**ನಹುಷೋ ನೇತಿ ತಾನಾಹ ತಮಸಾ ಮೂಢಚೇತನಃ ॥** – ೧೭/೮–೧೦

**ಅಗಸ್ತ್ಯ ಉವಾಚ**

**'ಯಸ್ಮಾ ತ್ ಪೂರ್ವೈಃ ಕೃತಂ ರಾಜನ್ ಬ್ರಹ್ಮರ್ಷಿಭಿರನುಷ್ಠಿತಂ ।**
**ಅದುಷ್ಟಂ ದೂಷಯಸಿ ಮೇ ಯಚ್ಚ ಮೂರ್ಧ್ನಿ ಅಸ್ಪೃಶಃ ಪದಾ ।**
**ಯಚ್ಚಾಪಿ ತ್ವಮೃಷೀನ್ ಮೂಢ ಬ್ರಹ್ಮಕಲ್ಪಾನ್ ದುರಾಸದಾನ್ ।**

ವಾಹಾನ್ ಕೃತ್ವಾ ವಾಹಯಸಿ ತೇನ ಸ್ವರ್ಗಾದ್ಧತಪ್ರಭಃ ।
ಧ್ವಂಸ್ತಪಾಪ ಪರಿಭ್ರಷ್ಟಃ ಕ್ಷೀಣಪುಣ್ಯೋ ಮಹೀತಲೇ ।
ದಶವರ್ಷ ಸಹಸ್ರಾಣಿ ಸರ್ಪರೂಪಧರೋ ಮಹಾನ್ ।
ವಿಚರಿಷ್ಯಸಿ ಪೂರ್ಣೇಷು ಪುನಃ ಸ್ವರ್ಗಮವಾಪ್ಸ್ಯಸಿ ॥ (ಅ ೧೭/೧೪-೧೭)

ನಂತರ ಇಂದ್ರನು ಐರಾವತವನ್ನೇರಿ ಗಂಧರ್ವಾದಿ ಗಣಗಳಿಂದ ಸ್ತೋತ್ರ ಮಾಡಿಸಿಕೊಳ್ಳುತ್ತಾ ಸ್ವರ್ಗಕ್ಕೆ ಹೋಗಿ ಎಲ್ಲ ದೇವತೆಗಳಿಂದ ಪೂಜೆಗೊಳ್ಳುತ್ತಾ ಸ್ವರ್ಗಾಧಿಪತಿಯಾಗಿ ಮೂರು ಲೋಕಗಳನ್ನು ಆಳಿದ ಎಂದು ಶಲ್ಯರಾಜನು ಧರ್ಮರಾಜನಿಗೆ ಈ ಉಪಾಖ್ಯಾನವನ್ನು ಹೇಳಿದನು.

ಎಲೈ ಧರ್ಮರಾಜನೇ! ಹೀಗೆ ಇಂದ್ರನೂ ತನ್ನ ಪತ್ನಿಯೊಡನೆ ದುಃಖ ಅನುಭವಿಸಿದ. ಶತ್ರು ಸಂಹಾರಕ್ಕಾಗಿ ಅಜ್ಞಾತವಾಸ ಮಾಡಿದ. ಆದ್ದರಿಂದ ನೀನು ಕೂಡಾ ವನದಲ್ಲಿ ಕ್ಲೇಶ ಅನುಭವಿಸಿದುದಕ್ಕೆ ಕೋಪಿಸಿಕೊಳ್ಳಬೇಡ. ನೀನು ಮುಂದೆ ದ್ರೌಪದೀ ಹಾಗೂ ನಿನ್ನ ಸೋದರರೊಡನೆ ಕೌರವರನ್ನು ಸಂಹರಿಸಿ ರಾಜ್ಯ ಹೊಂದುವೆ. ನಿನ್ನ ಕರ್ಣ ದುರ್ಯೋಧನಾದಿ ಶತ್ರುಗಳು ನಾಶ ಹೊಂದುವರು.

ವೇದ ಸಮಾನವಾದ ಈ ಶಕ್ರ ವಿಜಯ ಉಪಾಖ್ಯಾನವನ್ನು ಜಯ ಬಯಸುವವರು ಅವಶ್ಯವಾಗಿ ಕೇಳಬೇಕು.

'ಏವಂ ದುಃಖಮನುಪ್ರಾಪ್ತಮಿಂದ್ರೇಣ ಸಹ ಭಾರ್ಯಯಾ ।
ಅಜ್ಞಾತವಾಸಶ್ಚ ಕೃತಃ ಶತ್ರೂಣಾಂ ವಧಕಾಂಕ್ಷಯಾ ।
ನಾತ್ರ ಮನ್ಯುಸ್ತ್ವಯಾ ಕಾರ್ಯೋ ಯತ್ಕ್ಲಿಷ್ಟೋಽಸಿ ಮಹಾವನೇ ।
ದ್ರೌಪದ್ಯಾ ಸಹ ರಾಜೇಂದ್ರ ಭ್ರಾತೃಭಿಶ್ಚ ಮಹಾತ್ಮಭಿಃ ।
ಏವಂ ತ್ವಮಪಿ ರಾಜೇಂದ್ರ ರಾಜ್ಯಂ ಪ್ರಾಪ್ಸ್ಯಸಿ ಭಾರತ ।
ವೃತ್ರಂ ಹತ್ವಾ ಯಥಾಪ್ರಾಪ್ತಃ ಶಕ್ರಃ ಕೌರವನಂದನ ।
ದುರಾಚಾರಶ್ಚ ನಹುಷೋ ಬ್ರಹ್ಮದ್ವಿಟ್ ಪಾಪಚೇತನಃ ।
ಅಗಸ್ತ್ಯ ಶಾಪಾಭಿಹತೋ ವಿನಷ್ಟಃ ಶಾಶ್ವತೀಃ ಸಮಾಃ ।
ಏವಂ ತವ ದುರಾತ್ಮಾನಃ ಶತ್ರವಃ ಶತ್ರುಸೂದನ ।
ಕ್ಷಿಪ್ರಂ ನಾಶಂ ಗಮಿಷ್ಯಂತಿ ಕರ್ಣದುರ್ಯೋಧನಾದಯಃ ।
ತತಃ ಸಾಗರಪರ್ಯಂತಾಂ ಭೋಕ್ಷ್ಯಸೇ ಮೇದಿನೀಮಿಮಾಂ ।
ಭ್ರಾತೃಭಿಃ ಸಹಿತೋ ವೀರ ದ್ರೌಪದ್ಯಾ ಚ ಸಹಾನಯಾ ।
ಉಪಾಖ್ಯಾನಮಿದಂ ಶಕ್ರವಿಜಯಂ ವೇದ ಸಮ್ಮಿತಂ ।
ರಾಜ್ಞಾ ವ್ಯೂಢೇಷ್ವನೀಕೇಷು ಶ್ರೋತವ್ಯಂ ಜಯಮಿಚ್ಛತಾ' ॥
(ಅ ೧೮ – ೧೦ ರಿಂದ ೧೭)

'ಆಖ್ಯಾನಮಿಂದ್ರ ವಿಜಯಂ ಯ ಇದಂ ನಿಯತಃ ಪಠೇತ್ ।
ಧೂತಪಾಪ್ಮಾ ಜಿತಸ್ವರ್ಗಃ ಪರತ್ರೇಹ ಚ ಮೋದತೇ ॥

**ಸರ್ವತ್ರ ಜಯಮಾಪ್ನೋತಿ ನ ಕದಾಚಿತ್ ಪರಾಜಯಮ್'** ॥

(ಅ ೧೮-೧೯, ೨೦)

## ಸಂದೇಶಗಳು–ವಿವರಣೆಗಳು

ಶಲ್ಯ ರಾಜನನ್ನು ತನ್ನ ಕುಟಿಲ ರಾಜನೀತಿಯಿಂದ ಆದರಾತಿಥ್ಯಗಳನ್ನು ಪರೋಕ್ಷವಾಗಿ ಮಾಡಿ ಆತನನ್ನು ತನ್ನೆಡೆಗೆ ಸೆಳೆದುಕೊಂಡ ದುರ್ಯೋಧನನ ನಡೆ ೮ನೇ ಅಧ್ಯಾಯದಲ್ಲಿ ವರ್ಣಿತವಾಗಿದೆ. ಆಗ ಶಲ್ಯನು ಧರ್ಯೋಧನನಿಗೆ ವಶನಾದರೂ ಮಾನಸಿಕವಾಗಿ ಪಾಂಡವರ ಪಕ್ಷಪಾತಿಯೇ ಆಗಿದ್ದ. ಪಾಂಡವರ ಮಾಹಾತ್ಮೆ, ಪ್ರಾಮಾಣಿಕತೆ ಆತನಿಗೆ ಗೊತ್ತಿತ್ತು. ಧರ್ಮರಾಜನನ್ನು ನಂತರ ಕಂಡ ಶಲ್ಯನು ದೇವತೆಗಳೂ ಅನೇಕ ವೇಳೆ ವಿಧಿ ಬರಹಕ್ಕೆ ಅನುಗುಣವಾಗಿ ದುಃಖಪಟ್ಟುದುದನ್ನು ವಿವರಿಸಿ ಅದನ್ನು ಸಂತೋಷದಿಂದ ಸ್ವೀಕರಿಸಿ ಮುಂದೆ ಬರುವ ಸುಖವನ್ನು ಎದುರು ನೋಡಬೇಕೆಂದು ಸಮಾಧಾನ ಮಾಡುತ್ತಾನೆ.

**'ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ'** ಎಂಬ ಗೀತೆಯ(೨/೩೮) ಸಂದೇಶ ಇಡೀ ಘಟ್ಟದ ತಾತ್ಪರ್ಯವಾಗಿದೆ. ಅದಕ್ಕಾಗಿ ನಿರೂಪಿಸಿದ ಇಂದ್ರನಿಂದ ನಡೆದ ತ್ರಿಶಿರಸನ ಸಂಹಾರ, ವೃತ್ರಾಸುರ ಸಂಹಾರ, ನಹುಷನ ಚರಿತ್ರೆ ಆತನ ದರ್ಪಪೂರ್ಣ ದೇವಲೋಕದ ಆಡಳಿತದ ಪರಿಣಾಮಗಳಲ್ಲಿನ ಸಂದೇಶಗಳನ್ನು ಸ್ವಲ್ಪ ನೋಡಬಹುದು.

ಈ ಚರಿತ್ರೆ ನಹುಷನ ಹಾಗೂ ಪಾಂಡವರಿಗೆ ಸಂಬಂಧಸಿದಂತೆ ಮಹಾಭಾರತದ ಅರಣ್ಯ ಪರ್ವದ ಅಜಗರಪರ್ವದಲ್ಲಿ ಅಧ್ಯಾಯ ೧೭೬–೧೮೧ರಲ್ಲಿ ನಹುಷನಿಗೆ ಆಜಗರ ಸರ್ಪಜನ್ಮ ವೃತ್ತಾಂತ ಹಾಗೂ ಭೀಮನನ್ನು ಅಜಗರ ಹಿಡಿದರೂ ಆತನ ಪ್ರಶ್ನೆಗಳಿಗೆ ಭೀಮ ಉತ್ತರಿಸದಿರುವ ಹಾಗೂ ಧರ್ಮರಾಜನು ಉತ್ತರಿಸಿದ ವಿಷಯಗಳು ಬಂದಿವೆ.

ಭಾಗವತದ ೬ನೇ ಸ್ಕಂಧದಲ್ಲಿ ಅಧ್ಯಾಯ ೬ ರಿಂದ ೧೭ರವರೆಗೆ ಉದ್ಯೋಗಪರ್ವದಲ್ಲಿ ಬಂದಂತೆ ತುಂಬಾ ವಿಸ್ತಾರವಾಗಿ ಬಂದಿದೆ. **'ನಾರಾಯಣವರ್ಮ'** ಸ್ತೋತ್ರ ವಜ್ರಾಯುಧ ತಯಾರಿಸಿದ ವಿಚಾರಗಳೆಲ್ಲ ಬಂದಿವೆ. ವೃತ್ರಾಸುರ ಪೂರ್ವ ವೃತ್ತಾಂತದೊಡನೆ ಈ ಚರಿತ್ರೆ ಮುಗಿಯುತ್ತದೆ. ವಿವರಗಳನ್ನು ಭಾಗವತದಲ್ಲಿಯೇ ನೋಡಬೇಕು. ಪ್ರಕೃತ ಉದ್ಯೋಗಪರ್ವದ ಕಥಾ ಭಾಗದ ಸಂದೇಶಗಳನ್ನು ಮಾತ್ರ ನೋಡುವ.

೧. ವಿಧಿ ಲಿಖಿತವನ್ನು ಎಲ್ಲರೂ ಅನುಭವಿಸಬೇಕು. ಇಂದ್ರಾದಿ ದೇವತೆಗಳೂ ಅನುಭವಿಸಿದ್ದಾರೆ. ಅದನ್ನು ಯಾರಿಂದಲೂ ತಪ್ಪಿಸಲಾಗದು. ತನಗೆ ಬಂದ ದುಃಖಕ್ಕಾಗಿ ಯಾರ ಬಗ್ಗೆಯೂ ಕೋಪಗೊಳ್ಳುವುದು ತರವಲ್ಲ. (ಉದ್ಯೋಗಪರ್ವ ಅ ೮–೪೩ರಿಂದ ೫೪) ದುಃಖಗಳು ಬಂದರೂ ಮುಂದೆ ಸುಖದ ಕಾಲವೂ ಬಂದೇ ಬರುತ್ತದೆ, ಯೋಗ್ಯರಿಗೆ.

'ನಾತ್ರ ಮನ್ಯುಸ್ತ್ವಯಾ ಕಾರ್ಯಃ ವಿಧಿರ್ಹಿ ಬಲವತ್ತರಃ' ।
'ಸರ್ವಂ ದುಃಖಮಿದಂ ವೀರ ಸುಖೋದರ್ಕಂ ಭವಿಷ್ಯತಿ' ।

೨. ಇಂದ್ರನ ಸ್ಥಾನವನ್ನು ಬಯಸಿದ ವಿಶ್ವರೂಪಾಚಾರ್ಯರು ತಮ್ಮ ಶಿರಸ್ಸುಗಳನ್ನು ಕಳೆದುಕೊಂಡರು. ತನ್ನ ಯೋಗ್ಯತೆಗೆ ಮೀರಿದುದನ್ನು ಬಯಸಿದಲ್ಲಿ ಅಧಃಪತನ ನಿಶ್ಚಿತ.

'ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ' ॥ಮ.ತಾ.ನಿ ೧೮-೯೫

೩. ಇಂದ್ರನಿಗಿಂತ ವಿಶ್ವರೂಪ (ತ್ರಿಶಿರಸನು) ಯೋಗ್ಯತೆಯಲ್ಲಿ ಕಡಿಮೆ ಆದರೂ ಇಂದ್ರನು ತನ್ನ ಪದವಿಯನ್ನು ಬಯಸುತ್ತಿದ್ದ ದುರ್ಬಲ ಶತ್ರುವನ್ನೂ ಉದಾಸೀನ ಮಾಡದೆ ವಜ್ರಾಯುಧದಿಂದ ಸಂಹರಿಸಿದ ಶತ್ರುವಿನ ದೌರ್ಬಲ್ಯವನ್ನು ಎಂದೂ ಉದಾಸೀನ ಮಾಡಬಾರದು (ಅ. ೯-೨೨)

'ಶತ್ರುಃ ಪ್ರವೃದ್ಧೋ ನೋಪೇಕ್ಷ್ಯೋ ದುರ್ಬಲೋಽಪಿ ಬಲೀಯಸಾ' ।

೪. ಶತ್ರು ಸಂಹಾರದ ನಂತರವೂ ಇಂದ್ರನಿಗೆ ಸಮಾಧಾನ ಸಿಗಲಿಲ್ಲ. ಕಾರಣ ಶತ್ರು ಬ್ರಾಹ್ಮಣ. ಬ್ರಹ್ಮಹತ್ಯಾ ಶಂಕಾಭಯ. ಆದ್ದರಿಂದಲೇ ಇಂದ್ರನಿಂದ ಪ್ರಲೋಭನೆಗೆ ಒಳಗಾದರೂ ತಕ್ಷ (ಬಡಗಿ) ವಿಶ್ವರೂಪನು ಸತ್ತ ಮೂರು ಶಿರಸ್ಸುಗಳನ್ನು ಮತ್ತೆ ತುಂಡರಿಸಲು ಇಚ್ಛಿಸಲಿಲ್ಲ. ಕಾರಣ ಅವನು ಋಷಿ ಪುತ್ರ. ಆದರೆ ಮುಂದೆ ಇಂದ್ರ ನೀಡಿದ ವರಕ್ಕೆ ಮರುಳಾಗಿ ತಕ್ಷನೂ ಹತನಾದ ವಿಶ್ವರೂಪನ ಶಿರಸ್ಸುಗಳನ್ನು ಕತ್ತರಿಸಿದ. ಪ್ರಲೋಭನೆಗೆ ಒಳಗಾಗದವರು ಜಗತ್ತಿನಲ್ಲಿ ಸಿಗರು. ಎಲ್ಲವೂ ಹರಿಚಿತ್ತ (ಯಜ್ಞ-ಪಶುವಿನ ಶಿರಸ್ಸನ್ನು ತಕ್ಷನಿಗೆ ಹವಿರ್ಭಾಗವಾಗಿ ಸಿಗಲೆಂಬ ವರ ಪ್ರಲೋಭನೆ)

೫. ಇಂದ್ರನಿಂದ ಬ್ರಹ್ಮಹತ್ಯೆ ಮಾಡಿದ್ದು ಯೋಗ್ಯ. ಆದರೂ ಲೋಕ ದೃಷ್ಟಿಯಲ್ಲಿ ಬ್ರಹ್ಮಹತ್ಯೆ ಇಂದ್ರನಿಗೆ ಮಾನಸಿಕ ಬಾಧೆ ತಪ್ಪಲಿಲ್ಲ. ಆದರೆ ಭಗವಂತ ಇಂದ್ರಾದಿ ದೇವತೆಗಳ ಪ್ರಾರ್ಥನೆಗೆ ಮನ್ನಿಸಿ ಆತನ ರಕ್ಷಣೆಗೆ ನಿಂತ. ಸದುದ್ದೇಶ್ಯದ ಬ್ರಹ್ಮ ಹತ್ಯೆಯಿಂದ ದೇವರೂ ತನ್ನ ಭಕ್ತರನ್ನು ಕೈ ಬಿಡನು.

೬. ಯದ್ಯಪಿ ವೃತ್ರಾಸುರ-ಇಂದ್ರರು ಶತ್ರುಪ್ರಾಯರಾದರೂ ಋಷಿಗಳ ಅಣತಿ ಮೇರೆಗೆ ವೃತ್ರಾಸುರನು ಇಂದ್ರನೊಡನೆ ಮೈತ್ರಿಗೆ ಸಿದ್ಧನಾಗುತ್ತಾನೆ. ಕಾರಣ ಇಂದ್ರನಿಂದಲೇ ತನ್ನ ವಧೆ ನಿಶ್ಚಿತವೆಂದು ಗೊತ್ತಿತ್ತು. ಆದ್ದರಿಂದ ಕೆಲವು ನಿಬಂಧನೆಗೊಳಪಟ್ಟು ಮೈತ್ರಿಗೆ ಒಪ್ಪುತ್ತಾನೆ. ಆದ್ದರಿಂದ ಸಜ್ಜನ ಸಮ್ಮತರೊಡನೆ ಎಂದೂ ಶಾಶ್ವತ ಶತ್ರುಭಾವ ಸಲ್ಲದು.

೭. ಇಂದ್ರ ವೃತ್ರಾಸುರನೊಡನೆ ಮೈತ್ರಿ ಮಾಡಿಕೊಂಡರೂ ಸಮಯ ಸಾಧಿಸಿ ವೃತ್ರಾಸುರನನ್ನು ವಿಷ್ಣುವಿನ ವಜ್ರಾಯಧದ ಸನ್ನಿಧಾನದಿಂದಾಗಿ ಅದನ್ನು ಪ್ರಯೋಗಿಸಿ ಸಂಹರಿಸುತ್ತಾನೆ. ದೈವ ಬಲವಿದ್ದಲ್ಲಿ ಎಂತಹ ಶತ್ರುವನ್ನೂ ಸಂಹರಿಸಬಹುದು.

ಸರ್ವತ್ರ ಜಯಮಾಪ್ನೋತಿ ನ ಕದಾಚಿತ್ ಪರಾಜಯಮ್' ॥
(ಅ ೧೮-೧೯, ೨೦)

## ಸಂದೇಶಗಳು-ವಿವರಣೆಗಳು

ಶಲ್ಯ ರಾಜನನ್ನು ತನ್ನ ಕುಟಿಲ ರಾಜನೀತಿಯಿಂದ ಆದರಾತಿಥ್ಯಗಳನ್ನು ಪರೋಕ್ಷವಾಗಿ ಮಾಡಿ ಆತನನ್ನು ತನ್ನೆಡೆಗೆ ಸೆಳೆದುಕೊಂಡ ದುರ್ಯೋಧನನ ನಡೆ ೮ನೇ ಅಧ್ಯಾಯದಲ್ಲಿ ವರ್ಣಿತವಾಗಿದೆ. ಆಗ ಶಲ್ಯನು ಧುರ್ಯೋಧನನಿಗೆ ವಶನಾದರೂ ಮಾನಸಿಕವಾಗಿ ಪಾಂಡವರ ಪಕ್ಷಪಾತಿಯೇ ಆಗಿದ್ದ. ಪಾಂಡವರ ಮಾಹಾತ್ಮೆ, ಪ್ರಾಮಾಣಿಕತೆ ಆತನಿಗೆ ಗೊತ್ತಿತ್ತು. ಧರ್ಮರಾಜನನ್ನು ನಂತರ ಕಂಡ ಶಲ್ಯನು ದೇವತೆಗಳೂ ಅನೇಕ ವೇಳೆ ವಿಧಿ ಬರಹಕ್ಕೆ ಅನುಗುಣವಾಗಿ ದುಃಖಪಟ್ಟುದುದನ್ನು ವಿವರಿಸಿ ಅದನ್ನು ಸಂತೋಷದಿಂದ ಸ್ವೀಕರಿಸಿ ಮುಂದೆ ಬರುವ ಸುಖವನ್ನು ಎದುರು ನೋಡಬೇಕೆಂದು ಸಮಾಧಾನ ಮಾಡುತ್ತಾನೆ.

**'ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ'** ಎಂಬ ಗೀತೆಯ(೨/೩೮) ಸಂದೇಶ ಇಡೀ ಘಟ್ಟದ ತಾತ್ಪರ್ಯವಾಗಿದೆ. ಅದಕ್ಕಾಗಿ ನಿರೂಪಿಸಿದ ಇಂದ್ರನಿಂದ ನಡೆದ ತ್ರಿಶಿರಸನ ಸಂಹಾರ, ವೃತ್ರಾಸುರ ಸಂಹಾರ, ನಹುಷನ ಚರಿತ್ರೆ ಆತನ ದರ್ಪಪೂರ್ಣ ದೇವಲೋಕದ ಆಡಳಿತದ ಪರಿಣಾಮಗಳಲ್ಲಿನ ಸಂದೇಶಗಳನ್ನು ಸ್ವಲ್ಪ ನೋಡಬಹುದು.

ಈ ಚರಿತ್ರೆ ನಹುಷನ ಹಾಗೂ ಪಾಂಡವರಿಗೆ ಸಂಬಂಧಸಿದಂತೆ ಮಹಾಭಾರತದ ಅರಣ್ಯ ಪರ್ವದ ಅಜಗರಪರ್ವದಲ್ಲಿ ಅಧ್ಯಾಯ ೧೭೬-೧೮೧ರಲ್ಲಿ ನಹುಷನಿಗೆ ಆಜಗರ ಸರ್ಪಜನ್ಮ ವೃತ್ತಾಂತ ಹಾಗೂ ಭೀಮನನ್ನು ಅಜಗರ ಹಿಡಿದರೂ ಆತನ ಪ್ರಶ್ನೆಗಳಿಗೆ ಭೀಮ ಉತ್ತರಿಸದಿರುವ ಹಾಗೂ ಧರ್ಮರಾಜನು ಉತ್ತರಿಸಿದ ವಿಷಯಗಳು ಬಂದಿವೆ.

ಭಾಗವತದ ೬ನೇ ಸ್ಕಂಧದಲ್ಲಿ ಅಧ್ಯಾಯ ೬ ರಿಂದ ೧೭ರವರೆಗೆ ಉದ್ಯೋಗಪರ್ವದಲ್ಲಿ ಬಂದಂತೆ ತುಂಬಾ ವಿಸ್ತಾರವಾಗಿ ಬಂದಿದೆ. **'ನಾರಾಯಣವರ್ಮ'** ಸ್ತೋತ್ರ ವಜ್ರಾಯುಧ ತಯಾರಿಸಿದ ವಿಚಾರಗಳೆಲ್ಲ ಬಂದಿವೆ. ವೃತ್ರಾಸುರ ಪೂರ್ವ ವೃತ್ತಾಂತದೊಡನೆ ಈ ಚರಿತ್ರೆ ಮುಗಿಯುತ್ತದೆ. ವಿವರಗಳನ್ನು ಭಾಗವತದಲ್ಲಿಯೇ ನೋಡಬೇಕು. ಪ್ರಕೃತ ಉದ್ಯೋಗಪರ್ವದ ಕಥಾ ಭಾಗದ ಸಂದೇಶಗಳನ್ನು ಮಾತ್ರ ನೋಡುವ.

೧. ವಿಧಿ ಲಿಖಿತವನ್ನು ಎಲ್ಲರೂ ಅನುಭವಿಸಬೇಕು. ಇಂದ್ರಾದಿ ದೇವತೆಗಳೂ ಅನುಭವಿಸಿದ್ದಾರೆ. ಅದನ್ನು ಯಾರಿಂದಲೂ ತಪ್ಪಿಸಲಾಗದು. ತನಗೆ ಬಂದ ದುಃಖಕ್ಕಾಗಿ ಯಾರ ಬಗ್ಗೆಯೂ ಕೋಪಗೊಳ್ಳುವುದು ತರವಲ್ಲ. (ಉದ್ಯೋಗಪರ್ವ ಅ ೮-೪೩ರಿಂದ ೫೪) ದುಃಖಗಳು ಬಂದರೂ ಮುಂದೆ ಸುಖದ ಕಾಲವೂ ಬಂದೇ ಬರುತ್ತದೆ, ಯೋಗ್ಯರಿಗೆ.

'ನಾತ್ರ ಮನ್ಯುಸ್ತ್ವಯಾ ಕಾರ್ಯಃ ವಿಧಿರ್ಹಿ ಬಲವತ್ತರಃ' ।
'ಸರ್ವಂ ದುಃಖಮಿದಂ ವೀರ ಸುಖೋದರ್ಕಂ ಭವಿಷ್ಯತಿ' ।

೨. ಇಂದ್ರನ ಸ್ಥಾನವನ್ನು ಬಯಸಿದ ವಿಶ್ವರೂಪಾಚಾರ್ಯರು ತಮ್ಮ ಶಿರಸ್ಸುಗಳನ್ನು ಕಳೆದುಕೊಂಡರು. ತನ್ನ ಯೋಗ್ಯತೆಗೆ ಮೀರಿದುದನ್ನು ಬಯಸಿದಲ್ಲಿ ಅಧಃಪತನ ನಿಶ್ಚಿತ.

'ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ' ॥ಮ.ತಾ.ನಿ ೧-೯೫

೩. ಇಂದ್ರನಿಗಿಂತ ವಿಶ್ವರೂಪ (ತ್ರಿಶಿರಸನು) ಯೋಗ್ಯತೆಯಲ್ಲಿ ಕಡಿಮೆ ಆದರೂ ಇಂದ್ರನು ತನ್ನ ಪದವಿಯನ್ನು ಬಯಸುತ್ತಿದ್ದ ದುರ್ಬಲ ಶತ್ರುವನ್ನೂ ಉದಾಸೀನ ಮಾಡದೆ ವಜ್ರಾಯುಧದಿಂದ ಸಂಹರಿಸಿದ ಶತ್ರುವಿನ ದೌರ್ಬಲ್ಯವನ್ನು ಎಂದೂ ಉದಾಸೀನ ಮಾಡಬಾರದು (ಅ. ೯-೨೨)

'ಶತ್ರುಃ ಪ್ರವೃದ್ಧೋ ನೋಪೇಕ್ಷ್ಯೋ ದುರ್ಬಲೋಽಪಿ ಬಲೀಯಸಾ' ।

೪. ಶತ್ರು ಸಂಹಾರದ ನಂತರವೂ ಇಂದ್ರನಿಗೆ ಸಮಾಧಾನ ಸಿಗಲಿಲ್ಲ. ಕಾರಣ ಶತ್ರು ಬ್ರಾಹ್ಮಣ. ಬ್ರಹ್ಮಹತ್ಯಾ ಶಂಕಾಭಯ. ಆದ್ದರಿಂದಲೇ ಇಂದ್ರನಿಂದ ಪ್ರಲೋಭನೆಗೆ ಒಳಗಾದರೂ ತಕ್ಷ (ಬಡಗಿ) ವಿಶ್ವರೂಪನು ಸತ್ತ ಮೂರು ಶಿರಸ್ಸುಗಳನ್ನು ಮತ್ತೆ ತುಂಡರಿಸಲು ಇಚ್ಚಿಸಲಿಲ್ಲ. ಕಾರಣ ಅವನು ಋಷಿ ಪುತ್ರ. ಆದರೆ ಮುಂದೆ ಇಂದ್ರ ನೀಡಿದ ವರಕ್ಕೆ ಮರುಳಾಗಿ ತಕ್ಷನೂ ಹತನಾದ ವಿಶ್ವರೂಪನ ಶಿರಸ್ಸುಗಳನ್ನು ಕತ್ತರಿಸಿದ. ಪ್ರಲೋಭನೆಗೆ ಒಳಗಾಗದವರು ಜಗತ್ತಿನಲ್ಲಿ ಸಿಗರು. ಎಲ್ಲವೂ ಹರಿಚಿತ್ತ (ಯಜ್ಞ-ಪಶುವಿನ ಶಿರಸ್ಸನ್ನು ತಕ್ಷನಿಗೆ ಹವಿರ್ಭಾಗವಾಗಿ ಸಿಗಲೆಂಬ ವರ ಪ್ರಲೋಭನೆ)

೫. ಇಂದ್ರನಿಂದ ಬ್ರಹ್ಮಹತ್ಯೆ ಮಾಡಿದ್ದು ಯೋಗ್ಯ. ಆದರೂ ಲೋಕ ದೃಷ್ಟಿಯಲ್ಲಿ ಬ್ರಹ್ಮಹತ್ಯೆ ಇಂದ್ರನಿಗೆ ಮಾನಸಿಕ ಬಾಧೆ ತಪ್ಪಲಿಲ್ಲ. ಆದರೆ ಭಗವಂತ ಇಂದ್ರಾದಿ ದೇವತೆಗಳ ಪ್ರಾರ್ಥನೆಗೆ ಮನ್ನಿಸಿ ಆತನ ರಕ್ಷಣೆಗೆ ನಿಂತ. ಸದುದ್ದೇಶ್ಯದ ಬ್ರಹ್ಮ ಹತ್ಯೆಯಿಂದ ದೇವರೂ ತನ್ನ ಭಕ್ತರನ್ನು ಕೈ ಬಿಡನು.

೬. ಯದ್ಯಪಿ ವೃತ್ರಾಸುರ-ಇಂದ್ರರು ಶತ್ರುಪ್ರಾಯರಾದರೂ ಋಷಿಗಳ ಅಣತಿ ಮೇರೆಗೆ ವೃತ್ರಾಸುರನು ಇಂದ್ರನೊಡನೆ ಮೈತ್ರಿಗೆ ಸಿದ್ಧನಾಗುತ್ತಾನೆ. ಕಾರಣ ಇಂದ್ರನಿಂದಲೇ ತನ್ನ ವಧೆ ನಿಶ್ಚಿತವೆಂದು ಗೊತ್ತಿತ್ತು. ಆದ್ದರಿಂದ ಕೆಲವು ನಿಬಂಧನೆಗೊಳಪಟ್ಟು ಮೈತ್ರಿಗೆ ಒಪ್ಪುತ್ತಾನೆ. ಆದ್ದರಿಂದ ಸಜ್ಜನ ಸಮ್ಮತರೊಡನೆ ಎಂದೂ ಶಾಶ್ವತ ಶತ್ರುಭಾವ ಸಲ್ಲದು.

೭. ಇಂದ್ರ ವೃತ್ರಾಸುರನೊಡನೆ ಮೈತ್ರಿ ಮಾಡಿಕೊಂಡರೂ ಸಮಯ ಸಾಧಿಸಿ ವೃತ್ರಾಸುರನನ್ನು ವಿಷ್ಣುವಿನ ವಜ್ರಾಯುಧದ ಸನ್ನಿಧಾನದಿಂದಾಗಿ ಅದನ್ನು ಪ್ರಯೋಗಿಸಿ ಸಂಹರಿಸುತ್ತಾನೆ. ದೈವ ಬಲವಿದ್ದಲ್ಲಿ ಎಂತಹ ಶತ್ರುವನ್ನೂ ಸಂಹರಿಸಬಹುದು.

ವೃತ್ರಾಸುರನು ಯೋಗ್ಯಜೀವಿ. ಆದ್ದರಿಂದ ಆತನನ್ನು ಇಂದ್ರನು ತುಂಬಾ ಎಚ್ಚರಿಕೆಯಿಂದ ಸಂಹರಿಸಿದ. ವೈಷ್ಣವರನ್ನು ಯೋಗ್ಯ ಉಪಾಯದಿಂದ ಸಂಹರಿಸಬೇಕು.

೮. ವೈಷ್ಣವರ ಸಂಹಾರವು ಇಂದ್ರನನ್ನು ಕಳೆಗುಂದಿಸಿತು. ಹೀಗಾಗಿ ತನ್ನ ರಾಜ್ಯತ್ಯಾಗ ಮಾಡಬೇಕಾಗಿ ಎಲ್ಲೋ ಅಡಗಿ ಆ ಪಾಪ ನಾಶಕ್ಕಾಗಿ (ಪರಿಹಾರಕ್ಕಾಗಿ) ತಪಸ್ಸನ್ನು ಮಾಡಬೇಕಾಯಿತು. (ಲೋಕ ದೃಷ್ಟಿಯಿಂದ ಅನಿವಾರ್ಯ).

೯. ತ್ರೈಲೋಕ್ಯಾಧಿಪತ್ಯಕ್ಕೆ ಅಗಾಧವಾದ ಅಧ್ಯಾತ್ಮಿಕ ತಪಸ್ಸು ಬೇಕು. ಖಾಲಿಯಾದ ಇಂದ್ರಪದವಿಗೆ ನಹುಷನನ್ನು ಎಲ್ಲ ದೇವರ್ಷಿ ಗಂಧರ್ವರು ತಮ್ಮ ತಪಸ್ಸನ್ನು ಧಾರೆಯೆರೆದು ಕರೆತಂದರು.

೧೦. ಇಂದ್ರ ಲೋಕಾಧಿಪತ್ಯ ಆಡಳಿತಕ್ಕೆ ಧರ್ಮವೇ ಮೂಲಾಧಾರ. ಸ್ಥಾನ ಹೇಗೆ ಮುಖ್ಯವೋ ಅದರ ನಿರ್ವಹಣೆಗೆ ಯೋಗ್ಯ ಧರ್ಮಾಚರಣೆಯೂ ಬೇಕೇ ಬೇಕು.

**'ಧರ್ಮಂ ಪುರಸ್ಕೃತ್ಯ ಸದಾ ಸರ್ವಲೋಕಾಧಿಪೋ ಭವ' । ೧೧-೮**

೧೧. ನಹುಷನಿಗೆ ಅಧಿಕಾರದ ಮದ ನೆತ್ತಿಗೇರಿ ಅಯೋಗ್ಯಕಾಮನೆ ಮಾಡಿದ. ಇಂದ್ರ ಪತ್ನಿಯಾದ ಶಚೀದೇವಿಯನ್ನೇ ಬಯಸಿದ. **'ಅಯೋಗ್ಯೇಚ್ಛೆ ಅಧಃಪತನಕ್ಕೆ ನಾಂದಿಯಾಯಿತು'**. ಆ ಇಚ್ಛೆಯೊಂದಿಗೆ ದರ್ಪಪೂರ್ಣ ಆಡಳಿತ ಆರಂಭವಾಯಿತು. ಸಪ್ತರ್ಷಿಗಳಂತಹ ಬ್ರಹ್ಮರ್ಷಿಗಳನ್ನು ತನ್ನ ವಾಹನದ ವಾಹಕರನ್ನಾಗಿಯೂ ಮಾಡಿಬಿಟ್ಟ.

ಕಾಮ-ಕ್ರೋಧ ಸಂಮೋಹಃ ಸ್ಮೃತಿ ವಿಭ್ರಮಗಳು ಕ್ರಮೇಣ ಅವನನ್ನು ಹಾಳು ಮಾಡಿದವು. (ಗೀತೆ ಅಧ್ಯಾಯ ೨- ೬೨, ೬೩)

ಪರಪತ್ನಿ ಇಚ್ಛೆ ಮಹಾಪಾಪಕರವೆಂಬ ಸಾಮಾನ್ಯ ನೈತಿಕ ಮೌಲ್ಯಗಳೂ ಇಂದ್ರಪದವಿಗೇರಿದ ನಹುಷನ ಮನಸ್ಸಿಗೆ ತೋಚಲಿಲ್ಲ.

೧೨. ಹೀಗಾಗಿ ದುಷ್ಟ ಬುದ್ಧಿಗೆ ದಾಸನಾದ ನಹುಷನು 'ಇಂದ್ರನು ಅಹಲ್ಯೆಯನ್ನು ದೂಷಿಸಲಿಲ್ಲವೇ'? ಎಂಬ ಕುತರ್ಕವನ್ನೂ ಮಾಡದೇ ಬಿಡಲಿಲ್ಲ (ವಿತಂಡ ಕಥೆ) ಪರಸ್ತ್ರೀಗಮನ ಮಾಡಕೂಡದೆಂಬುದೇ ಮೊದಲಾದ ವೇದವೂ ನಹುಷನ ಪಾಲಿಗೆ ಪ್ರಮಾಣವಾಗಲಿಲ್ಲ.

೧೩. ದರ್ಪದ ಪರಾಕಾಷ್ಠೆ ಬ್ರಹ್ಮರ್ಷಿಗಳನ್ನು ತನ್ನ ವಾಹಕರನ್ನಾಗಿ ಮಾಡಿಕೊಂಡುದ್ದಲ್ಲದೆ, ತನ್ನನ್ನು ಪ್ರಶ್ನಿಸಿದ ಅಗಸ್ತ್ಯರ ತಲೆಯನ್ನೇ ತನ್ನ ಪಾದದಿಂದ ಒದ್ದು ಬಿಡುತ್ತಾನೆ. **ಕಾರಣ ದರ್ಪಕೂಡದು.** ಅದು ತುಂಬಾ ಹಾನಿಕರ. **ಪರಿಣಾಮ ೧೦೦೦೦ ವರ್ಷಗಳವರೆಗೆ ಅಜಗರ ಸರ್ಪನಾಗಿ ಭೂಮಿಗೆ ಬೀಳುತ್ತಾನೆ.**

೧೪. ಶಚೀದೇವಿಗೆ ಬಂದ ಆಪತ್ತನ್ನು ಪರಿಹರಿಸಲು ಗುರುಗಳಾದ ಬೃಹಸ್ಪತ್ಯಾಚಾರ್ಯರು ಹಾಗೂ ಅಗ್ನ್ಯಾದಿ ದೇವತೆಗಳು ಒಂದಾಗಿ ಇಂದ್ರಾನ್ವೇಷಣೆಗೆ ತೊಡಗುತ್ತಾರೆ. ಇಂದ್ರನಿಗೂ ಸೂಕ್ತ ಸಲಹೆಗಳನ್ನು ಕೊಡುತ್ತಾರೆ. ಆದ್ದರಿಂದ ಇಂದ್ರನಂತೆ ಬ್ರಹ್ಮಹತ್ಯಾ ಪರಿಹಾರಕ್ಕಾಗಿ ದೀರ್ಘತಪಸ್ಸನ್ನು ಬೃಹತೀಸಹಸ್ರ ಹೋಮಾನುಸಂಧಾನಾದಿಗಳನ್ನು ಪಾಪ ಪರಿಹಾರಕ್ಕಾಗಿ ಪ್ರಯತ್ನಿಸಬೇಕು ಶಚೀದೇವಿಯಂತೆ ಗುರುಗಳನ್ನು ಶರಣು ಹೋಗಬೇಕು. ವಾಸ್ತವವಾಗಿ ಇಂದ್ರನು ವೃತ್ರಾಸುರ ವಧೆಯಿಂದ ಮಹಾತ್ಮನೇ ಆದ ಎಂದು ಶ್ರುತಿ ಇದೆ. ವಿವರಗಳಿಗೆ ಮ. ತಾ.ನಿ ೨೨-೩೪೦ ರಿಂದ ೩೭೮

೧೫. ಈ ಪ್ರಸಂಗದಲ್ಲಿ ರಾತ್ರಿದೇವತೆಯಾದ ದುರ್ಗೆಯ ಶರಣು ಹೋಗಬೇಕು.

೧೬. ಮಹಾಭಾರತದಲ್ಲಿ (ಉದ್ಯೋಗಪರ್ವದ ಈ ಭಾಗದಲ್ಲಿ) ಬಂದಿರುವ ಅಗ್ನಿಸ್ತೋತ್ರವು ಅಂತರ್ಯಾಮಿಯಾದ ಅಗ್ನಿಶಬ್ದವಾಚ್ಯ ನಾದ ನಾರಾಯಣ ಸ್ತೋತ್ರವಾಗಿದೆ.

ಈ ಎಲ್ಲ ಭಾಗವನ್ನು ಆಚಾರ್ಯರು ತಾತ್ಪರ್ಯ ನಿರ್ಣಯದಲ್ಲಿ **'ದರ್ಪಾದ್ಯೈಚ್ಛತ್ ಶಚೀಮಪಿ'** ಎಂದು ನಹುಷನ ಬಗ್ಗೆ ತಿಳಿಸಿದ್ದಾರೆ ದರ್ಪ ಏನೆಲ್ಲ ಮಾಡುತ್ತದೆ. ಆದ್ದರಿಂದ ದರ್ಪವನ್ನು ನಮ್ಮ ಜೀವನದಲ್ಲಿ ಹತ್ತಿಕ್ಕಬೇಕು. ಕಾರಣ ಅದು ತಾಮಸಗುಣ. ಅರ್ಜುನನು ಕೃಷ್ಣ ಬಲರಾಮಾದಿಗಳ ಬಗ್ಗೆ ಹೀಗೆ ವರ್ತಿಸಿದಾಗ್ಯೂ ಕೃಷ್ಣನೂ ಆತನಿಗೆ ಸೂಕ್ತವಾಗಿ ಉಪದೇಶಿಸಿ ತನ್ನ ಮಹಿಮೆಯನ್ನು ತೋರಿಸಿ **(ವಿಪ್ರಶಿಶುರಕ್ಷಣೆಯ ವಿಷಯದಲ್ಲಿ)** ಉಪದೇಶಿಸುತ್ತಾನೆ.

**'ತಸ್ಮಾನ್ನ ವಿಸ್ಮಯಃ ಕಾರ್ಯಃ ನ ದರ್ಪಶ್ಚ ತ್ವಯಾಽನಘ'** ।

**– ಮ.ತಾ.ನಿ. ೨೧-೫೨**

ಭಾಗವತದಲ್ಲಿ ಈ ಪ್ರಸಂಗವು ದಶಮ ಸ್ಕಂಧದಲ್ಲಿ ಬಂದಿದೆ(ಅರ್ಜುನನ ದರ್ಪ).

**'ನಾಹಂ ಸಂಕರ್ಷಣೋ ಬ್ರಹ್ಮನ್ನ ಕೃಷ್ಣಃ ಕಾರ್ಷ್ಣಿರೇವಚ'** ।

**(ಅರ್ಜುನನ ದರ್ಪೋಕ್ತಿ)**

೧೭. ಎಚ್ಚರ ತಪ್ಪಿದ ಸಾಧಕನು ತನ್ನಲ್ಲಿಲ್ಲದ ಗುಣಗಳನ್ನು ಆರೋಪಿಸಿಕೊಂಡು ತನ್ನ ಸಮನಾರೂ ಇಲ್ಲವೆಂಬ ಭ್ರಮೆಗೊಳಗಾಗುತ್ತಾನೆ. ಈ ದುರಹಂಕಾರದಿಂದಾಗಿ ದೇವಗುರುಗಳನ್ನು ರಾಜರನ್ನೂ ಲೆಕ್ಕಿಸುವುದಿಲ್ಲ. ಅದೇ ದರ್ಪ

**'ದಂಭೋ ದರ್ಪೋಽಭಿಮಾನಶ್ಚ'** (ಗೀತೆ ೧೬-೪) ಎಂಬಲ್ಲಿ ದರ್ಪ ಶಬ್ದಕ್ಕೆ ಆಚಾರ್ಯರು ಹೀಗೆ ಅರ್ಥೈಸಿದ್ದಾರೆ.

'ರಾಜಾದೇಸ್ತು ಮದಾದ್ಭೀತೇರದೃಷ್ಟಿರ್ದರ್ಪ ಉಚ್ಯತೇ' ।
'ಅಭಿಧಾನೇ' ಗೀ. ಭಾ. ೧೬-೪

'ಅಹಂಕಾರದಿಂದಾಗಿ ಯಾರಿಗೂ ಹೆದರದಿರುವುದೇ ದರ್ಪ' (ಸೊಕ್ಕು, ಕೊಬ್ಬು, ಗರ್ವ) ಇದು ತಾಮಸಗುಣ ಇದನ್ನು ತನ್ನಲ್ಲಿ ಬೆಳೆಯುವುದನ್ನು ಬಿಡದೆ ನಿಯಂತ್ರಿಸಿದಾಗಲೇ ಸಾಧನೆಯಲ್ಲಿ ಉತ್ಕರ್ಷ ಸಾಧ್ಯವಾಗುತ್ತದೆ. ಹಾಗೆ ಸ್ವನಿಯಂತ್ರಣವಿಲ್ಲದಿದ್ದಲ್ಲಿ ತನ್ನ ಅಧಃಪತನಕ್ಕೆ ತಾನೇ ಕಾರಣನಾಗುತ್ತಾನೆ. ನಹುಷಾದಿಗಳೇ ಅದಕ್ಕೆ ಉದಾಹರಣೆ. ಅವರು ತಮ್ಮ ದೋಷವನ್ನು ಮುಂದೆ ತಿಳಿದು ಸರಿಪಡಿಸಿಕೊಂಡರು. ದುರ್ಯೋಧನಾದಿಗಳೂ ಹಾಗೆ ಪಶ್ಚಾತ್ತಾಪ ಪಡದೆ ಹಾಳಾದರು. ನಾವು ನಮ್ಮ ಜೀವನದಲ್ಲಿ ಸಾತ್ವಿಕ ಗುಣಗಳ ಅಭಿವೃದ್ಧಿಗಾಗಿ ಪ್ರಯತ್ನಿಸಬೇಕು. ತಮೋಗುಣಗಳನ್ನು ನಿಯಂತ್ರಿಸಬೇಕೆಂದು ಈ ಉಪಾಖ್ಯಾನದ ತಾತ್ಪರ್ಯವಾಗಿದೆ.

ಫ್ರಾನ್ಸ್ ದೇಶದಲ್ಲಿದ್ದ ದರ್ಪಿಷ್ಠ ಪ್ರಭುಗಳೆಂದು ಪ್ರಸಿದ್ಧ ರಾಜರು ನಾಶ ಹೊಂದಿದರೆಂಬುದು ಇತ್ತೀಚಿನ ಇತಿಹಾಸ (ಸದ್ದಾಂಹುಸೇನ್, ಲಾಡೆನ್, ವೀರಪ್ಪನ್ ಮೊದಲಾದವರು ಕೂಡಾ).

ವಿ.ಸೂ. ಈ ವಿಷಯದಲ್ಲಿ ಹೆಚ್ಚಿನ ವಿವರಗಳಿಗೆ ಅವಕಾಶವಿದೆ. ಇತ್ಯಾದಿ...

******

# ಪ್ರಜಾಗರಪರ್ವ

## ೫೫. ವಿರೋಚನ – ಸುಧನ್ವ ಸಂವಾದ

ಧರ್ಮ ಅರ್ಥ ಸಹಿತವಾದ ವಿದುರನ ಉಪದೇಶದ ಮಾತುಗಳನ್ನು ಕೇಳುತ್ತಿದ್ದ ಧೃತರಾಷ್ಟ್ರನು ಮತ್ತೆ ಮತ್ತೆ ಕೇಳಲು ಇಚ್ಛಿಸಿದಾಗ ವಿದುರನು ಪ್ರಪಂಚದ ಎಲ್ಲ ಪ್ರಾಣಿಗಳ ಬಗ್ಗೆ ನಿಷ್ಕಪಟದಿಂದ ಪ್ರಾಮಾಣಿಕವಾಗಿ ವರ್ತಿಸು. ನಿನ್ನ ಮಕ್ಕಳನ್ನು ಹೇಗೆ ಪ್ರೀತಿಸುವೆಯೋ ಹಾಗೆಯೇ ಪಾಂಡವರನ್ನೂ ಪ್ರಾಮಾಣಿಕವಾಗಿ ಪ್ರೀತಿಸು. ಕಪಟಬುದ್ಧಿ ಇರದಿರಲಿ. ಈ ಬಗ್ಗೆ ಹಿಂದೆ **ಕೇಶಿನೀ** ಎಂಬ ಕನ್ಯೆಯ ಸ್ವಯಂವರ ನಡೆದಾಗ ಆಕೆಯು ಕೇಳಿದ ಪ್ರಶ್ನೆ ಅದಕ್ಕೆ ದೈತ್ಯ ಯುವಕ ವಿರೋಚನನ ಉತ್ತರಗಳುಳ್ಳ ಹಾಗೂ ವಿರೋಚನ ಹಾಗೂ ಸುಧನ್ವ ಎಂಬ ಬ್ರಾಹ್ಮಣನ ಸಂವಾದ ರೂಪ ಹಿಂದಿನ ಕಥೆಯನ್ನು ಹೇಳುತ್ತೇನೆ – ಕೇಳು ಎಂದು ವಿದುರ ಹೇಳಿದಾಗ ಅದನ್ನು ಧೃತರಾಷ್ಟ್ರ ಕೇಳುತ್ತಾನೆ. ಅದು ಹೀಗಿದೆ.

ಹಿಂದೆ ಕೇಶಿನೀ ಎಂಬ ಕನ್ಯೆಯ ಸ್ವಯಂವರ ಏರ್ಪಾಡಾಗಿತ್ತು. ಆ ಸ್ವಯಂವರಕ್ಕೆ ದೈತ್ಯನಾದ ವಿರೋಚನನೂ ಆಕೆಯನ್ನು ಹೊಂದಲಿಚ್ಛಿಸಿ ಬಂದನು. ಆಗ ಆಕೆಯು ವಿರೋಚನನನ್ನು ಕುರಿತು 'ವಿರೋಚನನೇ ಬ್ರಾಹ್ಮಣರು ಶ್ರೇಷ್ಠರೋ ದೈತ್ಯರು ಶ್ರೇಷ್ಠರೋ? ಒಂದು ವೇಳೆ ಬ್ರಾಹ್ಮಣರು ಶ್ರೇಷ್ಠರಲ್ಲವೆಂದಾದರೆ ಸುಧನ್ವ ಬ್ರಾಹ್ಮಣನು ನಿನ್ನೊಡನೆ ಮಂಚದಲ್ಲಿ ಏಕೆ ಕುಳಿತುಕೊಳ್ಳುತ್ತಿಲ್ಲ? ಎಂದು ಕೇಳಿದಳು.

**ಕೇಶಿನ್ಯುವಾಚ–**

**'ಕಿಂ ಬ್ರಾಹ್ಮಣಾಃ ಸ್ವಿತ್ ಶ್ರೇಯಾಂಸೋ ದಿತಿಜಾಃ ಸ್ವಿದ್ವಿರೋಚನ ।**
**ಅಥ ಕೇನ ಸ್ವಪರ್ಯಂಕಂ ಸುಧನ್ವಾ ನಾಧಿರೋಹತಿ' ॥**

**ಉದ್ಯೋಗ ಪರ್ವ– ಅ ೩೫–೮**

ಇದಕ್ಕೆ ವಿರೋಚನ ಹೀಗೆ ಉತ್ತರಿಸಿದ

'ಕೇಶಿನಿ! ದೈತ್ಯರಾದ ನಾವು ಬ್ರಹ್ಮ ಪುತ್ರರು ಶ್ರೇಷ್ಠರು. ಈ ಲೋಕಗಳೆಲ್ಲ ನಮ್ಮವೇ! (ನಮಗಾಗಿಯೇ ಇವೆ). (ಹೀಗಿರುವಾಗ) ದೇವತೆಗಳಾರು? ಬ್ರಾಹ್ಮಣರು ಯಾರು? (ಅವರು ಹೇಗೆ ತಾನೇ ನಮಗಿಂತ ಉತ್ತಮರಾದರು?)'

ಆಗ ಕೇಶಿನಿಯು ನಿನ್ನ ಅಭಿಪ್ರಾಯವಾಯಿತು. ನಾಳೆ ಬೆಳಿಗ್ಗೆ ಸುಧನ್ವ ಇಲ್ಲಿಗೆ ಬರುವನು. ನಾನು ನಿಮ್ಮಿಬ್ಬರನ್ನು ನೋಡುವೆ (ಪರೀಕ್ಷಿಸುವೆ) ಎಂದಳು. ಅದಕ್ಕೆ

ವಿರೋಚನು ಒಪ್ಪಿದ. ಬೆಳಗಾಯಿತು. ಸುಧನ್ವನು ವಿರೋಚನ ಕೇಶಿನಿಯು ಇದ್ದಲ್ಲಿಗೆ ಬಂದನು. ಕೂಡಲೆ ಕೇಶನಿಯು ಸುಧನ್ವನಿಗೆ ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿದಳು. ವಿರೋಚನನು ತಾನು ಕುಳಿತಿದ್ದ ಸಿಂಹಾಸನದಲ್ಲಿ ತನ್ನೊಡನೆ ಕುಳಿತುಕೊಳ್ಳಲು ಸುಧನ್ವನಿಗೆ ಹೇಳಿದ. ಆದರೆ ಸುಧನ್ವನು ನಾನು ನಿನ್ನೊಡನೆ ಈ ಸುವರ್ಣ ಸಿಂಹಾಸನದಲ್ಲಿ ಕುಳಿತುಕೊಳ್ಳಲಾರೆ. ಆದರೆ ನಿನಗೆ ಗೌರವಿಸಲು ಅದನ್ನು ಸ್ಪರ್ಶ ಮಾಡುತ್ತೇನೆ ಎಂದನು. ಆಗ ವಿರೋಚನು 'ನಿನಗೆ ಕೂಡಲು ಅರ್ಹವಾದ ಆಸನಗಳು ಮಣೆ, ದರ್ಭಾಸನ, ಚಾಪೆ ಅಥವಾ ಕೃಷ್ಣಾಜನಗಳೇ ಹೊರತು ನನ್ನೊಡನೆ ಸಮಾನವಾಗಿ ಸಿಂಹಾಸನದಲ್ಲಿ ಕುಳಿತುಕೊಳ್ಳಲು ನಿನಗೆ ಅರ್ಹತೆ ಇಲ್ಲ' ಎಂದು ಬಿಟ್ಟನು.

'ತವಾರ್ಹತೇ ತು ಫಲಕಂ ಕೂರ್ಚಂ ವಾಪ್ಯಥವಾ ಬೃಸೀ ।
ಸುಧನ್ವನ್ ನ ತ್ವಮರ್ಹೋऽಸಿ ಮಯಾ ಸಹ ಸಮಾಸನಮ್' ॥ ೩೫-೧೫

ಅದಕ್ಕೆ ಸುಧನ್ವನು

'ತಂದೆ ಮಗ, ಇಬ್ಬರು ಬ್ರಾಹ್ಮಣರು, ಕ್ಷತ್ರಿಯರು, ವೃದ್ಧರು, ವೈಶ್ಯರು, ಶೂದ್ರರು ಒಂದೇ ಆಸನದಲ್ಲಿ ಕುಳಿತುಕೊಳ್ಳಬಹುದು. ಆದರೆ ನಿನ್ನ ತಂದೆಯು ಉಚ್ಚ ಸಿಂಹಾಸನದಲ್ಲಿ ಕುಳಿತಿದ್ದೂ ಕೃಷ್ಣಾಜಿನದ ಮೇಲೆ ಕುಳಿತುಕೊಳ್ಳುವ ನನ್ನ ಬಳಿಗೆ ಬಂದು ನೆಲದಲ್ಲಿ ನಿಂತೇ ನನ್ನನ್ನು ಸೇವೆ ಮಾಡಬೇಕು. ನೀನಿನ್ನೂ ಬಾಲಕ ನಿನ್ನನ್ನು ನಿನ್ನ ತಂದೆ ತಾಯಿಗಳು ಸುಖವಾಗಿ ಬೆಳೆಸಿರುವುದರಿಂದ ನಿನಗೆ ಧರ್ಮಾರ್ಥಗಳ ಬಗ್ಗೆ ತಿಳುವಳಿಕೆಯಿಲ್ಲ'.

ಇದನ್ನು ಒಪ್ಪದ ವಿರೋಚನ ಈ ವಿಷಯದ ಬಗ್ಗೆ ದೈತ್ಯರ ಬಳಿ ಇರುವ ಹಿರಣ್ಯ, ಗೋಧನ, ಅಶ್ವಧನ ಅಲ್ಲದೆ ನನ್ನ ಪ್ರಾಣಗಳನ್ನು ಪಣವಾಗಿಡುವೆ ಈ ಬಗ್ಗೆ ಯಾರು ತಿಳಿದಿರುತ್ತಾರೋ ಅವರ ಬಳಿಗೆ ಹೋಗಿ ನಿರ್ಧರಿಸೋಣ ಎಂದನು. ಅದಕ್ಕೆ ಸುಧನ್ವನು ಹಿರಣ್ಯ, ಅಶ್ವಾದಿಗಳು ನಿನಗೇ ಇರಲಿ. ನಮ್ಮಿಬ್ಬರ ಪ್ರಾಣಗಳನ್ನು ಪಣವಾಗಿಟ್ಟು ಯಾರನ್ನು ಪ್ರಶ್ನಿಸೋಣ? ಎಂದನು ಅದಕ್ಕೆ ವಿರೋಚನನು ನಾನಂತೂ ದೇವತೆಗಳನ್ನಾಗಲೀ, ಮನುಷ್ಯರನ್ನಾಗಲೀ ಕೇಳಲಾರೆ ಎಂದ. (ಅವರು ನನಗಿಂತ ಉತ್ತಮರಲ್ಲವಾದ್ದರಿಂದ ಅದಕ್ಕೆ ಸುಧನ್ವನು ಹಾಗಾದರೆ ನಿನ್ನ ತಂದೆಯ ಬಳಿಗೇ ಹೋಗೋಣ. ಆತನು ಪುತ್ರ ವ್ಯಾಮೋಹಕ್ಕೊಳಗಾಗದೆ ಸುಳ್ಳನ್ನೂ ಹೇಳನು. ಸತ್ಯವನ್ನೇ ಹೇಳುತ್ತಾನೆ. ಎಂದನು. ಹೀಗೆ ಇಬ್ಬರೂ ಒಪ್ಪಿ ಪ್ರಹ್ಲಾದರ ಬಳಿಗೆ ಹೋದರು ಅವರನ್ನು ನೋಡಿದ ಪ್ರಹ್ಲಾದನು ಇವರು ಹೀಗೆ ಜೊತೆಯಾಗಿ ಇರುವುದನ್ನು ನಾನು ಹಿಂದೆ ಎಂದೂ ನೋಡಿಯೇ ಇಲ್ಲ, ಇಬ್ಬರೂ ಕೋಪಗೊಂಡ ವಿಷಸರ್ಪಗಳಂತಿದ್ದಾರೆ. ಹೀಗೆ ಯೋಚಿಸಿದ ಪ್ರಹ್ಲಾದ ವಿರೋಚನನನ್ನು ನೀವಿಬ್ಬರೂ ಎಂದೂ ಒಟ್ಟಿಗೆ ಇದ್ದವರಲ್ಲ. ನಿಮ್ಮ ಈಗಿನ ಸಖ್ಯಕ್ಕೆ ಕಾರಣವೇನು? ಎಂದು ಕೇಳಿದ.

ಅದಕ್ಕೆ ವಿರೋಚನನು ನನಗೆ ಸುಧನ್ವನೊಡನೆ ಯಾವುದೇ ಮೈತ್ರಿ ಇಲ್ಲ. ನಾವಿಬ್ಬರೂ ನಮ್ಮ ಪ್ರಾಣವನ್ನು ಪಣವಾಗಿಟ್ಟು ನಿನ್ನನ್ನು ತೀರ್ಪು ನೀಡಲು ಕೇಳಲು ಬಂದಿದ್ದೇನೆ. ಸುಳ್ಳು ಹೇಳಬೇಡ ಎಂದ. ಆಗ ಪ್ರಹ್ಲಾದನು ಸುಧನ್ವನಿಗೆ 'ಉದಕ, ಮತ್ತು ಮಧುಪರ್ಕವನ್ನು ಸುಧನ್ವನಿಗೋಸ್ಕರ ತರಲು ಸೇವಕರಿಗೆ ಹೇಳಿ ಎಲೈ ಬ್ರಾಹ್ಮಣನೇ ನಿನಗೆ ದಾನ ಮಾಡಲು ಬಿಳಿ ಹಾಗೂ ದೊಡ್ಡ ಹಸು ಸಿದ್ಧವಾಗಿದೆ' ಎಂದನು. ಆಗ ಸುಧನ್ವನು ನನಗೆ ಈಗಾಗಲೇ ದಾರಿಯಲ್ಲಿಯೇ ನೀರು ಮತ್ತು ಮಧುಪರ್ಕಗಳನ್ನು ದಾರಿಯಲ್ಲಿಯೇ ಕೊಡಲಾಗಿದೆ. ನಾನು ಕೇಳುವ ಪ್ರಶ್ನೆಗೆ ನಿರ್ದುಷ್ಟ, ಸತ್ಯವಾದ ಉತ್ತರ ಹೇಳು ಎಂದನು. ಪ್ರಶ್ನೆ ಏನೆಂದರೆ ಬ್ರಾಹ್ಮಣರು ಶ್ರೇಷ್ಠರೋ–ವಿರೋಚನನು ಶ್ರೇಷ್ಠನೋ? ಆಗ ಪ್ರಹ್ಲಾದನು 'ಬ್ರಾಹ್ಮಣನೇ ನನಗೊಬ್ಬನೇ ಮಗ. ನೀನು ಸಾಕ್ಷಾತ್ತಾಗಿ ನನ್ನ ಬಳಿ ಬಂದಿರುವೆ. ನಿಮ್ಮ ವಿವಾದ ವಿಷಯದಲ್ಲಿ ನನ್ನಂತಹವನು ಹೇಗೆ ತಾನೇ ಉತ್ತರಿಸಲು ಸಾಧ್ಯ?' ಎಂದನು. ಆಗ ಸುಧನ್ವನು 'ನಿನ್ನ ಮಗನಿಗೆ ರಾಜ್ಯ, ಇತರೆ ಎಲ್ಲ ಐಶ್ವರ್ಯ ಕೊಡು ಆದರೆ ವಿವಾದವುಳ್ಳ ನಮಗೆ ಮಾತ್ರ ಸರಿಯಾದ ಉತ್ತರ ನೀಡು'. ಆಗ ಪ್ರಹ್ಲಾದನು ಬ್ರಾಹ್ಮಣನೇ! ನಿನಗೆ ನನ್ನೊದೊಂದು ಪ್ರಶ್ನೆ. ಅದಕ್ಕೆ ಉತ್ತರಿಸಿದ ನಂತರ ತೀರ್ಪು ಕೊಡುವೆ. ತೀರ್ಪುಗಾರನು ಸತ್ಯವನ್ನಾಗಲೀ, ಅಸತ್ಯವನ್ನಾಗಲೀ, ಹೇಳದಿದ್ದರೆ ಅಥವಾ ಅನ್ಯಾಯವಾದ ತೀರ್ಪಿತ್ತರೆ ಅವನಿಗೆ ಆಗುವ ದುಃಖವೇನು?

**'ಅಥ ಯೋ ನೈವ ಪ್ರಬ್ರೂಯಾತ್ ಸತ್ಯಂ ವಾ ಯದಿ ವಾನೃತಂ ।**
**ಏತತ್ ಸುಧನ್ವನ್ ಪೃಚ್ಛಾಮಿ ದುರ್ವಿವಕ್ತಾ ಸ್ಮ ಕಿಂ ವಸೇತ್'** ॥

ಈ ಪ್ರಶ್ನೆಗೆ ಸುಧನ್ವನು ಹೀಗೆ ಉತ್ತರಿಸಿದನು.

೧. ತನ್ನ ಗಂಡನು ಸವತಿಯೊಡನೆ ಇರುವುದನ್ನು ನೋಡಿದ ಸಾಧ್ವಿಗೆ

೨. ಪಗಡೆಯಾಟದಲ್ಲಿ ಸರ್ವಸ್ವವನ್ನು ಕಳೆದುಕೊಂಡವನು

೩. ಅಶಕ್ಯವಾದ ಹೊರೆಯನ್ನು ಹೊತ್ತವನು

ಮೇಲಿನವರಿಗೆ ಆಗುವ ಸಂಕಟವನ್ನು ಅನ್ಯಾಯವಾಗಿ ತೀರ್ಪು ಕೊಡುವವನು ಹೊಂದುತ್ತಾನೆ.

**'ಯಾಂ ರಾತ್ರಿಂ ಅಧಿವಿನ್ನಾಸ್ತ್ರೀ ಯಾಂ ಚೈವಾಕ್ಷಪರಾಜಿತಃ ।**
**ಯಾಂ ಚ ಭಾರಾಭಿತಪ್ತಾಂಗೋ ದುರ್ವಿವಕ್ತಾ ಸ್ಮ ತಾಂ ವಸೇತ್** ॥ ೩೫–೩೧

'ಊರಿನಲ್ಲೂ ರಕ್ಷಣೆ ಸಿಗದೆ ನಗರದಿಂದ ಹೊರ ಹೊರಟು ಅಲ್ಲೂ ಅನ್ನಾಹಾರ ಉದಕಗಳಿಲ್ಲದೆ ದುಃಖಿಸುವವನಿಗೆ ಶತ್ರುಗಳ ಕಾಟದಿಂದ ಆಗುವ ದುಃಖವನ್ನು ಸುಳ್ಳು ಸಾಕ್ಷಿ ಹೇಳುವವನು ಹೊಂದುತ್ತಾನೆ'.

**'ನಗರೇ ಪ್ರತಿರುದ್ಧಃಸನ್ ಬಹಿರ್ದ್ವಾರೇ ಬುಭುಕ್ಷಿತಃ ।**
**ಅಮಿತ್ರಾನ್ ಭೂಯಸಃ ಪಶ್ಯೇದ್ಯಃ ಸಾಕ್ಷ್ಯಮನೃತಂ ವದೇತ್'** ॥ ೩೫–೩೨

ಹೀಗೆ ಸುಧನ್ವನ ಮಾತನ್ನು ಕೇಳಿದೊಡನೆ ಪ್ರಹ್ಲಾದನು ತನ್ನ ತೀರ್ಪನಿತ್ತನು.

**'ಮತ್ತಃ ಶ್ರೇಯಾನ್ ಅಂಗಿರಾ ವೈ ಸುಧನ್ವಾ ತ್ವದ್ವಿರೋಚನ ।**
**ಮಾತಾಸ್ಯ ಶ್ರೇಯಸೀ ಮಾತುಃ ತಸ್ಮಾತ್ತ್ವಂ ತೇನ ವೈ ಜಿತಃ' ॥ ೩೫-೩೫**

**'ವಿರೋಚನ ಸುಧನ್ವಾಽಯಂ ಪ್ರಾಣಾನಾಮೀಶ್ವರಸ್ತವ ।**
**ಸುಧನ್ವನ್ ಪುನರಿಚ್ಛಾಮಿ ತ್ವಯಾ ದತ್ತಂ ವಿರೋಚನಂ' ॥ ೩೫-೩೬**

'ಎಲೈ ವಿರೋಚನ! ಸುಧನ್ವನ ತಂದೆ ಅಂಗಿರಸನು ನನಗಿಂತ ಉತ್ತಮ. ನಿನಗಿಂತ ಸುಧನ್ವನು ಉತ್ತಮ. ನಿನ್ನ ತಾಯಿಗಿಂತ ಸುಧನ್ವನ ತಾಯಿ ಶ್ರೇಷ್ಠಳು. ಈ ಕಾರಣದಿಂದ ನೀನು ಸುಧನ್ವನಿಂದ ಜಯಿಸಲ್ಪಟ್ಟಿದ್ದೆ'.

'ಎಲೈ ವಿರೋಚನ ಸುಧನ್ವನು ನಿನ್ನ ಪ್ರಾಣಗಳ ಒಡೆಯನಾಗಿದ್ದಾನೆ' ಹೀಗೆ ಹೇಳುತ್ತಾ ಪ್ರಹ್ಲಾದನು ಸುಧನ್ವನನ್ನು ಕುರಿತು 'ಎಲೈ ಸುಧನ್ವನೇ! ದಯವಿಟ್ಟು ವಿರೋಚನನನ್ನು ನನಗೆ ದಾನವಾಗಿ ಕೊಡು. ಅದನ್ನು ನಾನು ಇಚ್ಛಿಸುತ್ತೇನೆ'.

ಇದನ್ನು ಕೇಳಿದ ಸುಧನ್ವನು 'ಮಗನ ವ್ಯಾಮೋಹದಿಂದ ನೀನು ಸುಳ್ಳು ಹೇಳಲಿಲ್ಲ. ಆದ್ದರಿಂದ ನಿನ್ನ ಮಗನನ್ನು ನಿನಗೆ ಬಿಟ್ಟಿದ್ದೇನೆ. ಆತನ ಪ್ರಾಣ ನನಗೆ ಬೇಡ' (ಅದರಿಂದ ನನಗಾವ ಪ್ರಯೋಜನವೂ ಇಲ್ಲ) 'ಆದರೆ ಪ್ರಹ್ಲಾದನೇ! ನಿನ್ನ ಮಗ ವಿರೋಚನನು ಕೇಶಿನಿಯ ಎದುರೇ ನನ್ನ ಪಾದ ಪ್ರಕ್ಷಾಲನೆಯನ್ನು ಮಾಡಬೇಕು. ಇದು ನನ್ನ ಬೇಡಿಕೆ'. ಆಗ ಪ್ರಹ್ಲಾದನು ಹಾಗೆಯೇ ಆಗಲಿ ಎಂದನು.

ಈ ಕಥೆಯನ್ನು ಧೃತರಾಷ್ಟ್ರನಿಗೆ ವಿದುರನು ಹೇಳಿ 'ನೀನೂ ಕೂಡಾ ಪುತ್ರರ ಸಲುವಾಗಿ ಪಾಂಡವರಿಗೆ ಅನ್ಯಾಯ ಮಾಡಬೇಡ' ಎಂದನು.

### ಸಂದೇಶಗಳು-ವಿವರಣೆಗಳು

೧. ಪ್ರತಿಯೊಬ್ಬರು ಧರ್ಮಶಾಸ್ತ್ರದ ವಿಧಿವಿಧಾನಗಳನ್ನು ತಿಳಿದುಕೊಂಡು ನಡೆಯಬೇಕು. ಬಂಧುಗಳೆಂಬ ಒಂದೇ ಕಾರಣಕ್ಕಾಗಿ ಅವರು ಮಾಡಿದುದನ್ನು ಧೃತರಾಷ್ಟ್ರನಂತೆ ಬೆಂಬಲ ನೀಡಬಾರದು. ಇದರಿಂದ ವಂಶ ನಿರ್ವಂಶವಾಗಬಹುದು. ಧೃತರಾಷ್ಟ್ರನ ನಡೆಯಿಂದ ಚಂದ್ರವಂಶದ ರಾಜರೆಲ್ಲರೂ ಆಗ ನಾಶ ಹೊಂದಿದರು.

೨. ದೈತ್ಯರಿಗಿಂತ ಬ್ರಾಹ್ಮಣ ಶ್ರೇಷ್ಠ.

೩. ಬ್ರಾಹ್ಮಣನು ಎಲ್ಲ ವರ್ಗಗಳಿಗಿಂತಲೂ ಶ್ರೇಷ್ಠನು. ವಿದುರನೀತಿಯ ಈ ಮಾತು ಸರ್ವ ಜೀವರಿಗೂ ಅನ್ವಯಿಸುತ್ತದೆ.

೪. ಸುಳ್ಳು ಸಾಕ್ಷಿ ಹೇಳುವವನು - ಅನ್ಯಾಯದ ತೀರ್ಪನ್ನು (ಶಾಸ್ತ್ರ ವಿರುದ್ಧ) ನೀಡುವವನು ಸರ್ವ ನಾಶ ಹೊಂದುವನು.

**'ಸಪುತ್ರಪಿತೃಬಾಂಧವೋ ವಿನಾಶ ಮಾಶುಯಾಸ್ಯಸಿ' ।** (ಮ.ತಾ.ನಿ.ಅ - ೭)

'ತಸ್ಮಾದ್ರಾಜೇಂದ್ರ ಭೂಮ್ಯರ್ಥೇ ನಾನೃತಂ ವಕ್ತುಮರ್ಹಸಿ ।
ಮಾಗಮಃ ಸಸುತಾಮಾತ್ಯೋ ನಾಶಂ ಪುತ್ರಾರ್ಥಮಬ್ರುವನ್' ॥ – ೩೫/೩೯

ನ್ಯಾಯ ಕೇಳಿದ ದ್ರೌಪದಿಗೆ ಕೆಲವೊಮ್ಮೆ ಉತ್ತರವನ್ನೂ ಕೊಡದ ಭೀಷ್ಮಾದಿಗಳು, ತಪ್ಪು ಉತ್ತರವನ್ನು ಕೊಟ್ಟ ಧೃತರಾಷ್ಟ್ರನೂ ದಂಡಾರ್ಹರಾದರು.

**ಹೆಚ್ಚುವರಿ ಮಾಹಿತಿ:** ಇದೇ ಕಥೆ ಸಭಾ ಪರ್ವದ ಅರವತ್ತೆಂಟನೇ ಅಧ್ಯಾಯದಲ್ಲೂ ಹೆಚ್ಚು ಕಡಿಮೆ ಹೀಗೆಯೇ ಬಂದಿದ್ದು, ಅಲ್ಲಿ ಕಶ್ಯಪರು ಪ್ರಹ್ಲಾದನಿಗೆ ಉಪದೇಶಿಸಿದ್ದಾರೆ. ಇಲ್ಲಿ ಪ್ರಹ್ಲಾದರು ಸುಧನ್ವ ಬ್ರಾಹ್ಮಣನಿಗೆ ಉತ್ತರಿಸಿದ್ದಾರೆ. ಸಭಾ ಪರ್ವದಲ್ಲಿ ಅನ್ಯಾಯದ ಘಟನೆಯನ್ನು ನೋಡಿದ ಸಾಕ್ಷಿಯು ಹೇಗೆ ವರ್ತಿಸಬೇಕೆಂದು ತಿಳಿಸಲಾಗಿದೆ. ಸಾಕ್ಷಿಯು ಪ್ರಾಮಾಣಿಕವಾಗಿ ವರ್ತಿಸಬೇಕು ಎಂಬುದು ತಿರುಳು. ಯಾರೂ ಸುಳ್ಳು ಹೇಳಬಾರದು.

*****

# ಭಗವದ್‌ಧ್ಯಾನಪರ್ವ

## ೫೬. ದಂಭೋದ್ಭವೋಪಾಖ್ಯಾನ

ಪಾಂಡವರ ರಾಯಭಾರಿಯಾಗಿ ಚಂದ್ರವಂಶದ ಹಿತವನ್ನು ಮನಸ್ಸಿನಲ್ಲಿಟ್ಟುಕೊಂಡು ಶ್ರೀಕೃಷ್ಣನು ಕುರು ಸಭೆಗೆ ಆಗಮಿಸಿ, ದುರ್ಯೋಧನನ ನಡೆಯನ್ನು ಸಕಲ ಸಭಾ ಸದರ ಸಮ್ಮುಖದಲ್ಲಿ ಬಿಚ್ಚಿಟ್ಟು ಅದು ಹೇಗೆ ಕುರುಕುಲಕ್ಕೆ ಮಾರಕವಾಗಿದೆ ಎಂದು ಧಾರ್ಮಿಕವಾಗಿಯೂ, ಮಾರ್ಮಿಕವಾಗಿಯೂ ವಿವರಿಸಿದ ಹಿತನುಡಿಗಳನ್ನು ಕೇಳಿದ ಎಲ್ಲರೂ ಮಂತ್ರ ಮುಗ್ಧರಾಗಿ ಪ್ರತಿಯಾಗಿ ಏನನ್ನೂ ಮಾತನಾಡದಾದರು.

ಆಗ ಪರಶುರಾಮ ದೇವರು ತಮ್ಮ ಅಭಿಪ್ರಾಯಗಳನ್ನು ತಿಳಿಸಿ ಅದು ಸೂಕ್ತವಾಗಿದ್ದಲ್ಲಿ ಸ್ವೀಕರಿಸಲು ತಿಳಿಸಿದರು. ಅದಕ್ಕಾಗಿ ಹಿಂದೆ ನಡೆದ ದಂಭೋದ್ಭವ ರಾಜನ ವೃತ್ತಾಂತವನ್ನು ಧೃತರಾಷ್ಟ್ರನ ಗಮನಕ್ಕೆ ತಂದರು.

ಹಿಂದೆ ದಂಭೋದ್ಭವನೆಂಬ ಸಾರ್ವಭೌಮ ರಾಜನಿದ್ದನು (ಚಕ್ರವರ್ತಿ) ಅವನಿಗೊಂದು ಗೀಳು ನಿತ್ಯವೂ ಬೆಳಿಗ್ಗೆ ಬ್ರಾಹ್ಮಣರನ್ನೂ, ಕ್ಷತ್ರಿಯರನ್ನೂ, ನನ್ನಂತಹ ಅಥವಾ ನನಗಿಂತ ಉತ್ತಮ ಯುದ್ಧಪಟು ಯಾರಾದರೂ ಇದ್ದಾರೆಯೇ? ಅವನು ಶೂದ್ರ, ವೈಶ್ಯ, ಕ್ಷತ್ರಿಯ, ಬ್ರಾಹ್ಮಣ ಯಾರೇ ಶಸ್ತ್ರಧಾರಿಯಾಗಿರಲಿ? ಹೀಗೆ ಕೇಳುವುದೂ ವಿನಯದಿಂದಲ್ಲ. ದರ್ಪದಿಂದಲೇ ಕೇಳುತ್ತಿದ್ದ. ಎಂದರೆ ನನ್ನ ಸಮಾನ ಯಾರೂ ಇಲ್ಲ ಎಂದೇ ಭ್ರಮಿಸಿ ಕೇಳುತ್ತಿದ್ದ. ಕೇಳುತ್ತಾ ಜಗತ್ತೆಲ್ಲ ಸುತ್ತುತ್ತಿದ್ದ.

ಆತ್ಮ ಪ್ರಶಂಸಾಪರನಾದ ಇವನನ್ನು ಭಯರಹಿತರೂ, ವಿದ್ಯಾವಿಚಕ್ಷಣರೂ ಆದ ಅನೇಕ ಬ್ರಾಹ್ಮಣರು ಅವನ ದರ್ಪವನ್ನು ಅಲ್ಲಗಳೆದು ಬುದ್ಧಿ ಹೇಳುತ್ತಿದ್ದರೂ ದಂಭೋದ್ಭವ ಮಾತ್ರ ಆ ರೀತಿ ಪ್ರಶ್ನಿಸುವುದನ್ನು ಮಾತ್ರ ಬಿಡಲಿಲ್ಲ. ಹೀಗೆ ತನ್ನ ಇತಿ ಮಿತಿಗಳನ್ನು ಅರಿಯದ ದಂಭೋದ್ಭವನನ್ನು ಕುರಿತು ಬ್ರಾಹ್ಮಣರು ಕ್ರೋಧತಪ್ತರಾಗಿ, 'ಯುದ್ಧದಲ್ಲಿ ಅನೇಕ ಮಹಾವೀರರನ್ನು ಗೆದ್ದ ಇಬ್ಬರು ಮಹಾಪುರುಷರಿದ್ದಾರೆ. ಅವರಿಗೆ ನೀನು ಸಮನಲ್ಲ' ಎಂದರು. ಅದಕ್ಕೆ ರಾಜನು ಅವರಾರು? ಅವರ ಹೆಸರೇನು? ಎಲ್ಲಿರುವರು ಎಂದು ಕೇಳಿದನು? ಬ್ರಾಹ್ಮಣರು ಉತ್ತರಿಸುತ್ತಾ

'ನರನಾರಾಯಣರೆಂಬ ತಪಸ್ವಿಗಳು ಈ ಮಾನುಷ ಲೋಕದಲ್ಲಿ ಗಂಧ ಮಾದನ ಪರ್ವತ ಪ್ರದೇಶದಲ್ಲಿರುವವರೆಂದು ಕೇಳಿದ್ದೇವೆ, ಅವರು ಅಲ್ಲಿ ಯಾವಾಗಲೂ ತಪೋನಿರತರಾಗಿರುತ್ತಾರೆ' ಅವರೊಡನೆ ಯುದ್ಧ ಮಾಡು ಎಂದರು.

**ದಂಭೋದ್ಭವನ ಮಾತು**

**'ಅಸ್ತಿ ಕಶ್ಚಿತ್ ವಿಶಿಷ್ಟೋ ವಾ ಮದ್ವಿಧೋ ವಾ ಭವೇದ್ಯುಧಿ ।**
**ಶೂದ್ರೋ ವೈಶ್ಯಃ ಕ್ಷತ್ರಿಯೋ ವಾ ಬ್ರಾಹ್ಮಣೋವಾಽಪಿ ಶಸ್ತ್ರಭೃತ್' ॥ ೯೬-೭**

ಬ್ರಾಹ್ಮಣರ ಉತ್ತರ

'ನರೋ ನಾರಾಯಣಶ್ಚೈವ ತಾಪಸಾವಿತಿ ನಃ ಶ್ರುತಮ್ ।
ಆಯಾತೌ ಮಾನುಷೇ ಲೋಕೇ ತಾಭ್ಯಾಂ ಯುಧ್ಯಸ್ವ ಪಾರ್ಥಿವ' ॥
'ತಪೋ ಘೋರಮನಿರ್ದೇಶ್ಯಂ ತಪ್ಯೇತೇ ಗಂಧಮಾಧನೇ' । ೯೬-೧೪.೧೫

ಇದನ್ನು ಕೇಳಿದ ರಾಜನು ಸಹಿಸದವನಾಗಿ, ಚತುರಂಗ ಸಮೇತನಾಗಿ ನರ ನಾರಾಯಣ ಆಶ್ರಮಕ್ಕೆ ಯುದ್ಧಕ್ಕೆ ಹೊರಟೇ ಬಿಟ್ಟ. ಅವರು ನೋಡಲು ಬಳಲಿದಂತೆ ಕಾಣುತ್ತಿದ್ದರು. ರಾಜನು ಅವರಿಗೆ ನಮಿಸಿದ. ಯೋಗಕ್ಷೇಮ ವಿಚಾರಿಸಿದ. ಅವರೂ ರಾಜನನ್ನು ಅರ್ಘ್ಯಾದಿಗಳಿಂದ ಅತಿಥಿ ಪೂಜೆ ಮಾಡಿ 'ನಾವೇನು ನಿನಗಾಗಿ ಮಾಡೋಣ' ಎಂದರು

'ಕಿಂ ಕಾರ್ಯಂ ಕ್ರಿಯತಾಂ' ॥ ೯೬-೨೦

ಅದಕ್ಕೆ ರಾಜನು 'ನಾನು ಈ ಜಗವೆಲ್ಲ ಗೆದ್ದು ಶತ್ರುಗಳನ್ನು ಸಂಹರಿಸಿದ್ದೇನೆ. ನೀವು ಮಹಾ ಶೂರರು-ವೀರರು ಎಂದು ಕೇಳಿದ್ದೇನೆ. ಕಾರಣ ನಿಮ್ಮೊಂದಿಗೆ ಯುದ್ಧವನ್ನು ಬಯಸಿ ಬಂದಿದ್ದೇನೆ. ಆದ್ದರಿಂದ ಯುದ್ಧಾತಿಥ್ಯವನ್ನು ನನಗೆ ಕೊಡಬೇಕು' ಎಂದನು.

'ಬಾಹುಭ್ಯಾಂ ಮೇ ಜಿತಾ ಭೂಮಿರ್ನಿಹತಾಃ ಸರ್ವಶತ್ರವ: ।
ಭವದ್ಭ್ಯಾಂ ಯುದ್ಧಮಾಕಂಕ್ಷನ್ ಉಪಯಾತೋಽಸ್ಮಿ ಪರ್ವತಂ ।
ಆತಿಥ್ಯಂ ದೀಯತಾಮೇತತ್ ಕಾಂಕ್ಷಿತಂ ಮೇ ಚಿರಂ ಪ್ರತಿ' ॥ ೯೬-೨೧,೨೨

ಇದಕ್ಕೆ ನರ ನಾರಾಯಣರು

'ನಮ್ಮೀ ಆಶ್ರಮ ಕ್ರೋಧ ಲೋಭಗಳಿಂದ ದೂರ ಇಂಥಲ್ಲಿ ಯುದ್ಧವೇಕೆ? ಕುಟಿಲಬುದ್ಧಿಗಳಿಗೆ ಇಲ್ಲ ಇಲ್ಲಿ ಆಶ್ರಯ. ಕಾರಣ ಭೂಮಿಯಲ್ಲಿ ಬೇಕಾದಷ್ಟು ಕ್ಷತ್ರಿಯರಿದ್ದಾರೆ. ಅವರೊಡನೆ ಯುದ್ಧ ಬಯಸಿ ಹೋಗೆಂದರು'

'ಅಪೇತಕ್ರೋಧಲೋಭೋಽಯಮಾಶ್ರಮೋ ರಾಜಸತ್ತಮ ।
ನಹ್ಯಸ್ಮಿನ್ನಾಶ್ರಮೇ ಯುದ್ಧಂ ಕುತಃ ಶಸ್ತ್ರಂ ಕುತೋಽನೃಜುಃ' ॥ ೯೬-೨೩

ಯುದ್ಧ ದುರ್ಮದಾಂಧನಾದ ದಂಭೋದ್ಭವನಿಗೆ ಈ ಮಾತುಗಳು ಹಿಡಿಸಲಿಲ್ಲ. ಪದೇ ಪದೇ ತನ್ನೊಡನೆ ಯುದ್ಧ ಮಾಡಬೇಕೆಂದು ನರನಾರಾಯಣರನ್ನು ಪೀಡಿಸಿದ.

ಆಗ ನರನು ಒಂದು ಮುಷ್ಟಿ ಮೌಂಜಿ ಹುಲ್ಲನ್ನು ಕೈಯಲ್ಲಿ ಹಿಡಿದುಕೊಂಡು ರಾಜನನ್ನು ಕುರಿತು

'ನಿನ್ನ ಪರಾಕ್ರಮ ತೋರಿಸು. ಎಲ್ಲ ಶಸ್ತ್ರಗಳನ್ನು ಸೈನ್ಯವನ್ನು ನನ್ನ ಮೇಲೆ ಪ್ರಯೋಗಿಸು' ಎಂದನು. ಆಗ ರಾಜನು ನರನನ್ನು ಸೈನ್ಯ ಸಮೇತನಾಗಿ ಬಾಣಗಳ ಮಳೆಯಿಂದ ಮುಚ್ಚಿ ಕಾಣದಂತೆ ಮಾಡಿದನು. ಆದರೆ ನರನು ರಾಜನ ಎಲ್ಲ ಅಸ್ತ್ರಗಳನ್ನು ತನ್ನ ತೃಣಗಳಿಂದಲೇ ನಿರಾಕರಣಮಾಡಿ ಐಷಿ ಶಸ್ತ್ರವನ್ನು ಬಿಟ್ಟನು.

ಪರಿಣಾಮವಾಗಿ ಸೈನಿಕರ ಕಣ್ಣು ಕಿವಿಗಳೆಲ್ಲ ಮುಚ್ಚಿ ಹೋದವು. ಆಕಾಶವೆಲ್ಲ ತೃಣಾಸ್ತ್ರದಿಂದ ಬೆಳ್ಳಗಾಯಿತು. ಭೀತನಾದ ರಾಜನು ನರನಿಗೆ ಶರಣಾಗಿ ತನಗೆ ಮಂಗಳವನ್ನು ಅಭಯವನ್ನು ಕೋರಿದನು.

**'ಕದರ್ಥೀಕೃತ್ಯ ಸಮುನಿರಿಷೀಕಾಭಿಃ ಸಮಾರ್ಪಯತ್ ।**
**ತತೋಽಸ್ಮೈ ಪ್ರಾಸೃಜದ್ ಘೋರಮೈಷೀಕಮಪರಾಜಿತಃ' ॥**
**'ತೇಷಾಮಕ್ಷೀಣಿ ಕರ್ಣಾಂಶ್ಚ ನಾಸಿಕಾಶ್ಚೈವ ಮಾಯಯಾ' ।**
**'ಪಾದಯೋರ್ನ್ಯಪತದ್ ರಾಜಾ ಸ್ವಸ್ತಿ ಮೇಽಸ್ತ್ವಿತಿ ಚಾಬ್ರವೀತ್' ॥**
**ತಮಬ್ರವೀತ್ ನರೋ ರಾಜನ್ ಶರಣ್ಯಃ ಶರಣೈಷಿಣಮ್ ॥**

### ಶರಣಾದ ರಾಜನಿಗೆ ನರನ ಉಪದೇಶ

'ಬ್ರಾಹ್ಮಣ ರಕ್ಷಕನಾಗು, ಧರ್ಮಪರನಾಗು, ಕ್ಷತ್ರಿಯ ಧರ್ಮವನ್ನು ಅನುಸರಿಸು. ಆದರೆ ಸ್ವಧರ್ಮ ವಿರುದ್ಧವಾಗಿ ಯೋಚಿಸಬೇಡ. ದರ್ಪ ಬಿಡು. ನಿನಗಿಂತ ಬಲಿಷ್ಠರನ್ನಾಗಲೀ, ದುರ್ಬಲರನ್ನಾಗಲೀ ವಿನಾಕಾರಣ ತಿರಸ್ಕರಿಸಬೇಡ. ವಿನಯ ಶಾಲಿಯಾಗು. ಲೋಕಗೆಲ್ಲು. ಅಹಂಕಾರಿಯಾಗಬೇಡ. ಮನೋನಿಗ್ರಹವಿರಲಿ. ಜಿತೇಂದ್ರಿಯನಾಗು. ತಾಳ್ಮೆ, ಕ್ಷಮೆ ಗುಣಗಳು ಇರಲಿ. ಹೀಗಿದ್ದು ಪ್ರಜೆಗಳನ್ನು ರಕ್ಷಿಸು. ಬೇರೆಯವರ ಬಲಾಬಲ ತಿಳಿಯದೇ ದಂಡಧಾರಿಯಾಗಬೇಡ ಮತ್ತೆ ಹೀಗೆ ಮಾಡಬೇಡ' ಎಂದು ಮುಂತಾಗಿ ಉಪದೇಶಿಸಿದನು.

**ಬ್ರಹ್ಮಣ್ಯೋ ಭವ ಧರ್ಮಾತ್ಮಾ ಕ್ಷತ್ರಧರ್ಮಮನುಸ್ಮರನ್ ।**
**ಮಾ ಚ ದರ್ಪಸಮಾವಿಷ್ಟಃ ಕ್ಷೇಪ್ಸೀಃ ಕಾಂಶ್ಚಿತ್ ಕದಾಚನ ।**
**ಅಲ್ಪೀಯಾಂಸಂ ವಿಶಿಷ್ಟಂ ವಾ' ಕೃತಪ್ರಜ್ಞೋ ವೀತಲೋಭೋ**
**ನಿರಹಂಕಾರ ಆತ್ಮವಾನ್ ।**
**ದಾಂತಃ ಕ್ಷಾಂತೋ ಮೃದುಃ ಸೌಮ್ಯಃ ಪ್ರಜಾಃ ಪಾಲಯ ಪಾರ್ಥಿವ' ।**
**೯೬-೩೪ ರಿಂದ ೩೮**

ಹೀಗೆ ಉಪದೇಶ ಹೊಂದಿದ ದಂಭೋದ್ಭವನು ನರನಾರಾಯಣರ ಪಾದಗಳಿಗೆ ನಮಿಸಿ ತನ್ನ ನಗರಕ್ಕೆ ಹಿಂತಿರುಗಿ ನರನು ಹೇಳಿದಂತೆ ದುರಹಂಕಾರವನ್ನು ಬಿಟ್ಟು ಧಾರ್ಮಿಕವಾಗಿದ್ದುಕೊಂಡು ಪ್ರಜಾಪಾಲನೆ ಮಾಡಿದನು.

ಈ ರೀತಿಯಾಗಿ ನರನ ಮಹಿಮೆ ಕೇಳಿದ್ದೇವೆ. ಇನ್ನು ನಾರಾಯಣನಂತೂ ನರನಿಗಿಂತ ಬಹುಗುಣಗಳಿಂದ ಶ್ರೇಷ್ಠ. **'ತತೋ ಗುಣೈಃ ಸುಬಹುಭಿಃ ಶ್ರೇಷ್ಠೋ ನಾರಾಯಣೋಽಭವತ್'** ಆ ನರನೇ ಇಲ್ಲಿ ಅರ್ಜುನ. ನಾರಾಯಣನೇ ಶ್ರೀಕೃಷ್ಣ. ನರಾವಿಷ್ಟನಾದ ಅರ್ಜುನನ್ನೇ ಎದುರಿಸಲು ದುರ್ಯೋಧನನಿಗೂ ಅಸಾಧ್ಯ. ನಾರಾಯಣ ನ ಬಲವಿರುವ ಅರ್ಜುನನನ್ನು ಹೇಗೆ ತಾನೇ ಜಯಿಸಲು ಸಾಧ್ಯ? ಆದ್ದರಿಂದ ಎಲೈ ಧೃತರಾಷ್ಟ್ರ! ಇಲ್ಲಿಗೆ ಬಂದು ಉಪದೇಶಿಸಿದ ಕೃಷ್ಣನ ಉಪದೇಶಾಮೃತದಂತೆ ನೀನು ನಡೆ. ಯುದ್ಧಕ್ಕೆ ಪ್ರೋತ್ಸಾಹಿಸದಂತೆ ನಿನ್ನ ಮಗನನ್ನು

ದುರ್ಯೋಧನನನ್ನು ತಡೆ ಎಂದು ಪರಶುರಾಮ ದೇವರು ದಂಭೋದ್ಭವನ ಚರಿತ್ರೆಯನ್ನು ಉದಾಹರಿಸಿ ಉಪದೇಶಿಸುತ್ತಾರೆ.

## ಸಂದೇಶಗಳು–ವಿವರಣೆಗಳು

೧. ಹೆಸರೇ ದಂಭೋದ್ಭವ ಹಾಗೆಯೇ ನಡೆದ. ಮಾತನಾಡುತ್ತಿದ್ದ. ಆದರೆ ಹಾಗೆ ನಡೆಯಕೂಡದೆಂದು ಬ್ರಾಹ್ಮಣರು ಖಂಡಿಸುತ್ತಿದ್ದರು. ಆದ್ದರಿಂದ ದಂಭದ ನಡೆ ದರ್ಪದ ಕಾರ್ಯ ಸರ್ವಥಾ ಎಂಥ ಬಲಿಷ್ಠನಾಗಿದ್ದರೂ ಜಗತ್ತಿನಲ್ಲಿ ನಡೆಯದು.

೨. ತನ್ನನ್ನು ತಾನೇ ಪ್ರಶಂಸಿಸಿ ಕೊಂಡ ಮಟ್ಟಿಗೆ ಜಗತ್ತಿನಲ್ಲಿ ತನ್ನನ್ನು ಮೀರಿರುವವರು ಯಾರೂ ಇರರೆಂಬುದು ಭ್ರಾಂತಿಯೇ ಸರಿ. ಜೀವರಲ್ಲಿಯೂ ತನ್ನನ್ನು ಮೀರಿರುವರು ಇದ್ದೇ ಇರುತ್ತಾರೆ. ಅವರು ಬೆಳಕಿಗೆ ಬಂದಿರದಿರಬಹುದು. ಸೂಕ್ತಕಾಲದಲ್ಲಿ ಅವರ ಮಹಿಮೆಯೂ ಗೊತ್ತಾಗಿಯೇ ತೀರುತ್ತದೆ. ನರನೇ ಇದಕ್ಕೆ ಸಾಕ್ಷಿ.

೩. ಜೀವರಲ್ಲಿಯೇ ತನ್ನನ್ನು ಮೀರಿರುವವರು ಇರುವಾಗ ಜೀವೋತ್ತಮನು ಇರುತ್ತಾನೆ. ಆತನನ್ನು ಮೀರಿರುವ ಪುರುಷೋತ್ತಮನೂ ಇದ್ದೇ ಇದ್ದಾನೆಂದು ಕೂಡಾ ಈ ಉಪಾಖ್ಯಾನ ಸಂದೇಶ ನೀಡುತ್ತದೆ.

ಜೀವರು – ಎಲ್ಲರೂ, ಜೀವರಲ್ಲಿ – ಶೇಷ–ನರನು ಶ್ರೇಷ್ಠನು, ಜೀವಘನ–ವಾಯುದೇವರು, ಜೀವವಿಲಕ್ಷಣನಾಗಿ–ಉತ್ತಮನಾಗಿ–ಪುರುಷೋತ್ತಮ, ನಾರಾಯಣ ತತ್ತ್ವ–ಸರ್ವೋತ್ತಮತತ್ತ್ವ ಜ್ಞಾನ ಸಂದೇಶವು ಇದರ ತತ್ತ್ವ

೪. ಅದಕ್ಕಾಗಿ ಸ್ವಧರ್ಮಾಚರಣೆ – ವಿನಯ ಗುಣಭೂಷಿತನಾಗಿರಬೇಕು.

**'ಕುರುಭುಂಕ್ಷ್ವ ಚ ಕರ್ಮ ನಿಜಂ ನಿಯತಂ ಹರಿಪಾದವಿನಮ್ರಧಿಯಾ ಸತತಂ'** ಎಂಬ ಆದೇಶ ದ್ವಾದಶ ಸ್ತೋತ್ರದಲ್ಲಿರುವುದನ್ನು ನರನು ದಂಭೋದ್ಭವನಿಗೆ ಉಪದೇಶಿಸಿದ್ದಾನೆ, ಎನ್ನಬಹುದು.

೫. 'ತಸ್ಮಾನ್ನ ವಿಸ್ಮಯಃ ಕಾರ್ಯಃ ದರ್ಪಶ್ಚ ತ್ವಯಾನಘ' ಎಂಬ ಮ.ತಾ.ನಿ ಯಲ್ಲಿನ ಮಾತು ನಹುಷನೂ ದರ್ಪ ಮಾಡಿ ಅಜಗರನಾಗಿ ಬಿದ್ದುದೂ ಇಲ್ಲಿ ಸ್ಮರಣಾರ್ಹವಾಗಿವೆ. **ಈ ಅಧ್ಯಾಯದಲ್ಲಿ ಇನ್ನೂ ಕೆಲವು ಶ್ಲೋಕಗಳು (೪೨ ರಿಂದ ೪೫)** ತುಂಬಾ ವಿಚಾರಣೀಯವಾಗಿವೆ. ಕೂಟ ಶ್ಲೋಕಗಳಂತೆ ಕಾಣುತ್ತದೆ. (೪೨ನೇದು) ಈ ಬಗ್ಗೆ ಹೆಚ್ಚಿನ ಅಧ್ಯಯನ ಅವಶ್ಯಕ.

೬. ದಂಭೋದ್ಭವ ತನ್ನ ತಪ್ಪನ್ನು ಅರಿತು ತಿದ್ದಿಕೊಂಡ. ಆದರೆ ದುರ್ಯೋಧನ ತಿದ್ದಿಕೊಳ್ಳದೆ ತಾನು ಹಾಳಾದ, ವಂಶವನ್ನು ಹಾಳುಗೈದ.

*****

# ೫೭. ಮಾತಲಿ ಉಪಾಖ್ಯಾನ

ಪಾಂಡವರೊಡನೆ ಸಂಧಿಯನ್ನು ಮಾಡಿಕೊಂಡು ತಾನು ಹಾಗೂ ಪಾಂಡವರು ಇಬ್ಬರೂ ಭೂಮಿಯನ್ನು ಆಳಲಿ. ಯುದ್ಧ ಬೇಡ. ನಾನೇ ಮಹಾಬಲವಂತವೆಂಬ ದುರಭಿಮಾನ-ಗರ್ವ ಬೇಡ ಎಂದು ಕಣ್ವ ಋಷಿಗಳು ದುರ್ಯೋಧನನಿಗೆ ಉಪದೇಶಿಸಿದರು. ಬಲಿಷ್ಠರಿಗಿಂತಲೂ ಬಲಿಷ್ಠರಾದವರೂ ಅನೇಕರು ಜಗತ್ತಿನಲ್ಲಿರುತ್ತಾರೆ. ಬರೀ ಸೈನ್ಯ ಸಂಖ್ಯೆಯಿಂದ ಬಲಿಷ್ಠತನ ನಿರ್ಧಾರವಾಗದು. ದೇವತೆಗಳ ಮಧ್ಯೆಯೂ ಪಾಂಡವರು ಮಹಾ ಪರಾಕ್ರಮಿಗಳು ಅವರ ಮುಂದೆ ನಿನ್ನ ಪರಾಕ್ರಮ ನಡೆಯದು.

'ಬಲವಾನಹಮಿತ್ಯೇವ ನ ಮಂತವ್ಯಂ ಸುಯೋಧನ ।
ಬಲವಂತೋ ಬಲಿಭ್ಯೋ ಹಿ ದೃಶ್ಯಂತೇ ಪುರುಷರ್ಷಭ ॥
ನ ಬಲಂ ಬಲಿನಾಂ ಮಧ್ಯೇ ಬಲಂ ಭವತಿ ಕೌರವ ।
ಬಲವಂತೋ ಹಿ ತೇ ಸರ್ವೇ ಪಾಂಡವಾ ದೇವವಿಕ್ರಮಾಃ' ॥

ಅ ೯೭-೯, ೧೦

ಈ ಬಗ್ಗೆ ಮಾತಲಿಯ ಉದಾಹರಣೆ ಇದೆ. ಅದನ್ನು ಕೇಳೆಂದು ಕಣ್ವರು ದುರ್ಯೋಧನನಿಗೆ ಹೇಳುತ್ತಾರೆ.

ಮಾತಲಿ ದೇವೇಂದ್ರನ ಸಾರಥಿ. ಮಾತಲಿಗೆ ಒಬ್ಬ ರೂಪಸೀ ಕನ್ಯೆ ಮಹಾರೂಪವತಿ. ಹೆಸರು ಗುಣಕೇಶಿ. ವಿವಾಹದ ವಯಸ್ಸಿಗೆ ಬಂದ ಮಗಳ ಬಗ್ಗೆ ಮಾತಲಿ ತನ್ನ ಪತ್ನಿಯೊಡನೆ ಬಹು ಚಿಂತಿಸಿದ, ಒಳ್ಳೆಯ ವರ ಹೇಗೆ ಸಿಕ್ಕಾನೆಂದು? ಮಗಳು ಮಹಾರೂಪವತಿಯಾದರೂ ಚಿಂತೆ. ಇಲ್ಲದಿದ್ದರೂ ಚಿಂತೆ. ಮಹಾರೂಪವತಿಯಾದರೆ ತಂದೆ, ತಾಯಿ ಹಾಗೂ ಕೊಟ್ಟ ಕುಲ (ವರ) ಹೀಗೆ ಮೂವರಿಗೂ ಆಕೆ ಒಳ್ಳೆಯವಳಾಗಿ ಬದುಕುವ ಬಗ್ಗೆ ಚಿಂತೆ ತಪ್ಪಿದ್ದಲ್ಲ. ರೂಪವಿಲ್ಲದಿದ್ದರೆ ವರ ಹೇಗೆ ಸಿಕ್ಕಾನು? ಎಂಬ ಚಿಂತೆ.

'ಮಾತುಃ ಕುಲಂ ಪಿತೃಕುಲಂ ಯತ್ರ ಚೈವ ಪ್ರದೀಯತೇ ।
ಕುಲತ್ರಯಂ ಸಂಶಯಿತಂ ಕುರುತೇ ಕನ್ಯಕಾ ಸತಾಮ್' ॥ ೯೭-೧೬

ಮಾತಲಿ ತನ್ನ ಪತ್ನಿಗೆ (ಸುಧರ್ಮೆಗೆ) ಹೇಳಿದ. ನಾನು ಸುರ-ನರಲೋಕ ಹೀಗೆ ಎರಡೂ ಲೋಕಗಳಲ್ಲಿ ಹುಡುಕಿದರೂ ನನ್ನ ಮಗಳಿಗೆ ಅನುರೂಪ ವರ ಸಿಗುತ್ತಿಲ್ಲ. ಕೊನೆಗೆ ಉಳಿದ ನಾಗಲೋಕಕ್ಕೆ ಹೋಗಿ ಪ್ರಯತ್ನಿಸುವ ಎಂದು ನುಡಿದು ಭೂಲೋಕವನ್ನು ಪ್ರವೇಶಿಸಿದನು. ಆಗ ಮಾತಲಿಗೆ ನಾರದರ ದರ್ಶನವಾಯಿತು. ಅವರು ಮಾತಲಿಯನ್ನು ತಾವೇ ಮೊದಲು ಮಾತನಾಡಿಸಿ ಆತನ ಸಂಚಾರದ ಉದ್ದೇಶವನ್ನು ಕೇಳಿ ತಿಳಿದುಕೊಂಡರು. ಅದಕ್ಕೆ ನಾರದರು ಸರಿ, ನಾನೂ ನಿನ್ನೊಡನೆ ಬರುತ್ತೇನೆ. ನಾನು ದೇವಲೋಕದಿಂದ ವರುಣನ ದರ್ಶನಕ್ಕೆ ಹೋಗುತ್ತಿದ್ದೇನೆ.

ಅಲ್ಲಿಂದ ಪಾತಾಳ, ನಾಗಲೋಕಗಳಿಗೂ ಹೋಗೋಣ. ಅಲ್ಲಿ ಎಲ್ಲೆಯಾದರೂ ನಿನ್ನ ಮಗಳಿಗೆ ಸೂಕ್ತ ವರ ಸಿಗುವ ಬಗ್ಗೆ ಪ್ರಯತ್ನಿಸೋಣ ಎಂದರು.

ನಂತರ ಇಬ್ಬರೂ ವರುಣನನ್ನು ಸಂದರ್ಶಿಸಿದರು. ಆತನು ಮಾತಲಿಗೆ ದೇವೇಂದ್ರನಿಗೆ ಯೋಗ್ಯವಾದ ಆತಿಥ್ಯವನ್ನೂ, ನಾರದರಿಗೆ ದೇವರ್ಷಿಯೋಗ್ಯ ಸತ್ಕಾರವನ್ನೂ ಮಾಡಿದನು. ವರುಣನ ಅನುಮತಿ ಪಡೆದು ನಾಗಲೋಕವನ್ನು ಸಂಚರಿಸಲು ಆರಂಭಿಸಿದರು. ಮುಂದೆ ಸಾಗಿ ದಾರಿಯಲ್ಲಿ ವರುಣನ ಮಗ ಪುಷ್ಕರನನ್ನು ಆತನ ಪತ್ನಿಯಾದ ಸೋಮಪುತ್ರಿ ಜ್ಯೋತ್ಸ್ನಾಕಾಲೀ ಅಲ್ಲದೆ ವರುಣಲೋಕದ ಅನೇಕ ಆಶ್ಚರ್ಯ ವಸ್ತುಗಳನ್ನು ನೋಡುತ್ತಾ ನಡೆದರು. ನಂತರ ನಾರದರು ಮಾತಲಿಗೆ ಪಾತಾಳಲೋಕದರ್ಶನ ಮಾಡಿಸಿ ಅಲ್ಲಿನ ವಿಶೇಷವಾದ ಧೂಮರಹಿತವಾದ ಅಗ್ನಿ ವಿಷ್ಣುವಿನ ಸುದರ್ಶನಚಕ್ರವು ಯಾವಾಗಲೂ ಧರಿಸಲ್ಪಟ್ಟಿರುವುದನ್ನು ತೋರಿಸಿದರು. ದೇವತೆಗಳು ಹಿಂದೆ ಕುಡಿದು ಉಳಿದ ಅಮೃತವನ್ನು ಚಂದ್ರನನ್ನು ನೋಡಿದರು. ಚಂದ್ರನಡಿ ಹದಿನಾರು ಕಲೆಗಳ ಏರಿಳಿತಗಳನ್ನು ಈ ವಿಭಾಗದಲ್ಲಿ ವರ್ಣಿಸಲಾಗಿದೆ. ರುದ್ರದೇವರು ಇಲ್ಲಿ ವಾಸವಾಗಿರುವ ಭೂತಪತಿಯೆಂಬ ನಾಮದಿಂದ ಉತ್ತಮ ತಪಸ್ಸನ್ನು ಮಾಡುತ್ತಿರುತ್ತಾರೆ. ಇಲ್ಲಿ ಗೋವ್ರತ ಮಾಡುವ ಬ್ರಾಹ್ಮಣರು ಇದ್ದಾರೆ. ಅಲ್ಲದೆ ಸುಪ್ರತೀಕನ ವಂಶದ ನಾಗರಾಜನಾದ ಐರಾವಣ, ವಾಮನ, ಕುಮುದ, ಅಂಜನ ಎಂಬ ಶ್ರೇಷ್ಠ ಆನೆಗಳಿವೆ. ಇವರಲ್ಲಿ ವರನನ್ನು ವಿಚಾರಿಸು ಎಂದಾಗ ಮಾತಲಿಯ ಇವರಾರೂ ನನ್ನ ಮಗಳಿಗೆ ಸೂಕ್ತ ವರಗಳಲ್ಲ ಎಂದನು.

ನಾರದರು ಮಾತಲಿಗೆ ತೋರಿಸಿದ ಭೂಮಿಯ ಕೆಳಗಿನ ಲೋಕಗಳಲ್ಲಿನ ಆಶ್ಚರ್ಯಗಳಲ್ಲಿ ಇಲ್ಲಿ ಅತ್ಯಲ್ಪ ಉಲ್ಲೇಖಿಸಿದೆ. ವಿವರಗಳಿಗೆ ಮೂಲಭಾರತ ನೋಡಬೇಕು.

ನಂತರ ಹಿರಣ್ಯಪುರವೆಂಬ ಪ್ರಖ್ಯಾತ ಪಟ್ಟಣದಲ್ಲಿರುವ ದೈತ್ಯ ದಾನವರ ಬಗ್ಗೆ ವಿವರವಾಗಿ ಹೇಳಲು ಮಾತಲಿಯು ಇವರು ದೇವತೆಗಳ ಶತ್ರುಗಳಾದ್ದರಿಂದ ಇವರು ನನಗೆ ಬೇಡವೆಂದ.

**'ದೇವರ್ಷೇ ನೈವ ಮೇ ಕಾರ್ಯಂ ವಿಪ್ರಿಯಂ ತ್ರಿದಿವೌಕಸಾಂ' ॥ ೧೦೦-೧೭**

ಆ ಮೇಲೆ ಗರುಡ ಲೋಕದಲ್ಲಿರುವ ಗರುಡ ಸಂತತಿಯನ್ನೆಲ್ಲಾ ತೋರಿಸುತ್ತಾ ನುಡಿದರು. ಇಲ್ಲಿಯವರೆಲ್ಲ ಕ್ಷತ್ರಿಯಜಾತಿಯ ಪಕ್ಷಿಗಳು. ಹಾವುಗಳೇ ಇವರ ಆಹಾರ. ಇವರೆಲ್ಲ ವಿಷ್ಣು ಪಾರ್ಷದರು (ಸೇವಕರು). ಇವರ ಹೃದಯದಲ್ಲಿ ಸದಾ ವಿಷ್ಣುವಿನ ಚಿಂತೆ-ಧ್ಯಾನ ಅವನೇ ಇವರಿಗೆ ಆಶ್ರಯ 'ಸುವರ್ಣ ಚೂಡ, ವಿಶಾಲಾಕ್ಷ, ವೈನತೇಯ, ವಾಮನ, ಸುಮುಖ, ಚಿತ್ರಕೇತು, ವಿಷ್ಣುಧರ್ಮಾ, ಕುಮಾರ ಮೊದಲಾದ ಅನೇಕರು ಗರುಡನ ಸಂತತಿಯವರು. ಇವರಲ್ಲಿ ಯಾರನ್ನಾದರೂ ನೀನು ನಿನ್ನ ಮಗಳಿಗೆ ಆಯ್ಕೆ ಮಾಡಿಕೊ' ಇವರ್ಯಾರೂ ಬೇಡವಾದರೆ ಮುಂದೆ ರಸಾತಲಕ್ಕೆ ಹೋಗೋಣ

ಎನ್ನುತ್ತಾ ಅಲ್ಲಿಗೆ ಹೋದರು. ಇಲ್ಲಿಯೇ ಗೋಮಾತೆ ಸುರಭಿ ಇದ್ದಾಳೆ. ಈ ಸುರಭಿಯು ಸುಧಾಹಾರಿಗಳಿಗೆ ಸುಧಾರೂಪಹಾಲನ್ನೂ ಸ್ವಧಾಹಾರಿಗಳಾದ ಪಿತೃಗಳಿಗೆ ಸ್ವಧಾರೂಪ ಹಾಲನ್ನೂ, ಅಮೃತಾಂಧಸರಾದ ದೇವತೆಗಳಿಗೆ ಅಮೃತ ರೂಪವಾದ ಹಾಲನ್ನು ಕೊಡುತ್ತಾಳೆ.

**'ಸುಧಾಹಾರೇಷು ಚ ಸುಧಾಂ ಸ್ವಧಾಭೋಜಿಷು ಚ ಸ್ವಧಾಂ ।**
**ಅಮೃತಂ ಚಾಮೃತೇಶೇಷು ಸುರಭೀ ಕ್ಷರತೇ ಪಯಃ' ॥** ಅ – ೧೦೨–೧೩

ಈ ರಸಾತಲದಲ್ಲಿ ಸಿಗುವ ಸುಖ, ಸ್ವರ್ಗ, ನಾಗಲೋಕ, ವ್ಯೋಮಯಾನಗಳಲ್ಲಿ ಎಲ್ಲೂ ಸಿಗದು.

**'ನ ನಾಗಲೋಕೇ ನ ಸ್ವರ್ಗೇ ನ ವಿಮಾನೇ ತ್ರಿವಿಷ್ಟಪೇ ।**
**ಪರಿವಾಸಃ ಸುಖಸ್ತಾದೃಕ್ ರಸಾತಲ ತಲೇ ಯಥಾ' ॥** ೧೦೨–೧೪

ನಂತರ ನಾರದರೂ ನಾಗಲೋಕದ ಭೋಗವತೀ ಪಟ್ಟಣವನ್ನು ತೋರಿಸಿದರು. ಇದು ಅಮರಾವತಿಗಿಂತ ಕಡಿಮೆಯಲ್ಲ. ಇಲ್ಲಿ ಶೇಷ ವಾಸುಕಿ ಮೊದಲಾದ ನಾಗರು ಇದ್ದಾರೆ. ಇವರ ವಂಶ ತುಂಬಾ ದೊಡ್ಡದು. ನೂರಾರು ಪ್ರಸಿದ್ಧ ನಾಗರಿದ್ದಾರೆ (ಅ ೧೦೩–೯ರಿಂದ೧೬. ಶ್ಲೋಕಗಳಲ್ಲಿ ನಾಮಗಳಿವೆ) ಇವರೆಲ್ಲ ಕಶ್ಯಪರಿಂದ ಕದ್ರೂ ದೇವಿಯಲ್ಲಿ ಜನಿಸಿದವರು ಅವರ ವಂಶ ತುಂಬಾ ವಿಸ್ತಾರವಾದುದು. ಶೇಷನಾಗ ಭೂಮಿಯನ್ನೇ ತನ್ನ ತಪೋಬಲದಿಂದ ತನ್ನ ಶಿರಸ್ಸಿನಲ್ಲಿ ಧರಿಸಿದ್ದಾನೆ. (ಸಾಸಿವೆ ಕಾಳಿನಂತೆ) ಇವುಗಳಲ್ಲಿ ಕೆಲವಕ್ಕೆ ೨,೫,೭,೧೦,೧೦೦,೧೦೦೦ (ಸಾವಿರಾರು) ಹೆಡೆಗಳಿವೆ. ಅವೆಲ್ಲ ವೈವಿಧ್ಯಪೂರ್ಣವಾಗಿವೆ. ಇವರನ್ನೆಲ್ಲಾ ನೋಡುತ್ತಾ ಇರುವಾಗ ಮಾತಲಿಯ ಕಣ್ಣಿಗೆ ಒಬ್ಬನಾಗ ತುಂಬಾ ಆಕರ್ಷಕನಾಗಿ ಕಂಡ ಅವನನ್ನು ನಾರದರ ಬಳಿ ವಿಚಾರಿಸಿದ. ಅವನ ವಿವರಗಳನ್ನು ಕೇಳಿದ. ಈ ನಾಗನು ನನ್ನ ಮಗಳಿಗೆ ಯೋಗ್ಯನೆಂದು ನಾನು ಒಪ್ಪಿದ್ದೇನೆ ಎಂಬ. ಅವನೇ 'ಸುಮುಖ' (ನೆಂಬನಾಗ).

ನಾರದರು ಅವನನ್ನು ಪರಿಚಯಿಸಿದರು. ಇವನು (**ಸುಮುಖ**) **ಐರಾವತ ಕುಲದಲ್ಲಿ ಜನಿಸಿದವನು. ಆರ್ಯಕನ ಮೊಮ್ಮಗ** (ವಾಮನನೆಂಬುವನ ಮಗಳ ಮಗ). ಇವನ ತಂದೆ **ಚಿಕುರ**. ಇವನನ್ನು ಗರುಡನು ಕೆಲ ದಿನಗಳ ಹಿಂದೆ ತಿಂದು ಬಿಟ್ಟನು. ಹೀಗಾಗಿ ಸುಮುಖ ತಂದೆಯಿಲ್ಲದವನು. ಹೀಗೆ ಹೇಳಿದರೂ ಮಾತಲಿಯು (ಸುಮುಖನನ್ನೇ ತನ್ನ ಅಳಿಯನನ್ನಾಗಿ ಮಾಡಿಕೊಳ್ಳಲು ತನ್ನ ನಿರ್ಧಾರವನ್ನು ಪುನರುಚ್ಚರಿಸಿದ.

**'ಏಷ ಮೇ ರುಚಿತಸ್ತಾತ ಜಾಮಾತಾ ಭುಜಗೋತ್ತಮಃ ।**
**ಕ್ರಿಯತಾಮತ್ರ ಯತ್ನೋ ವೈ ಪ್ರೀತಿ–ಮಾನಸ್ಮ್ಯನೇನ ವೈ ॥**
**ಅಸ್ಮೈ ನಾಗಾಯ ವೈ ದಾತುಂ ಪ್ರಿಯಂ ದುಹಿತರಂ ಮುನೇ ॥**
ಅ. ೧೦ ೩ – **೨೫, ೨೬**

ಮಾತಲಿಯ ಅಭಿಪ್ರಾಯದ ಮೇರೆಗೆ ನಾರದರು ಆರ್ಯಕನ ಬಳಿ ಸಾರಿ ಹೀಗೆ ನುಡಿದರು.

'ಆರ್ಯಕ! ನನ್ನ ಜೊತೆಗೆ ಬಂದಿರುವ ಈ ಮಾತಲಿ ದೇವೇಂದ್ರನ ಪ್ರೀತಿಯ ಸ್ನೇಹಿತನೂ, ಸಾರಥಿಯೂ ಆಗಿದ್ದಾನೆ. ಶುದ್ಧಾಂತಃ ಕರಣನೂ, ಮಹಾತೇಜಸ್ವಿಯೂ, ಮಂತ್ರಿಯೂ, ಸುಶೀಲನೂ ಆಗಿದ್ದಾನೆ. ಇಂದ್ರನ ಪ್ರತಿ ಯುದ್ಧದಲ್ಲಿಯೂ ಈತ ಇದ್ದೇ ಇರುತ್ತಾನೆ. ಪ್ರಭಾವ, ಪರಾಕ್ರಮಗಳಲ್ಲಿ ಇಂದ್ರನಿಗಿಂತ ತುಸು ಕಡಿಮೆಯಾದರೂ ಇಂದ್ರನ ಸಾವಿರ ಕುದುರೆಗಳಿಂದ ಕೂಡಿದ ರಥವನ್ನು ಮನಸ್ಸಿನಿಂದಲೇ ನಿಯಂತ್ರಿಸುವಷ್ಟು ಜಾಣ್ಮೆ ಇವನದು. ಈತನು ಅಶ್ವಗಳಿಂದ ಗೆದ್ದ ಶತ್ರುಗಳನ್ನು ಭುಜಗಳಿಂದ ದೇವೇಂದ್ರನು ಪರಾಭವಗೊಳಿಸುತ್ತಾನೆ.

ಇವನಿಗೆ ಅತ್ಯಂತ ಚೆಲುವೆಯಾದ **'ಗುಣಕೇಶಿ'** ಎಂಬ ಮಗಳಿದ್ದಾಳೆ. ಆಕೆಗೆ ಸೂಕ್ತ ವರವನ್ನು ಅನ್ವೇಷಿಸಿದರೂ ಮೂರು ಲೋಕಗಳಲ್ಲೂ ಸಿಕ್ಕಿಲ್ಲ. ನಿನ್ನ ಪೌತ್ರ **ಸುಮುಖ**ನನ್ನು ಈಗ ಮಾತಲಿ ನೋಡಿದ್ದು ಆತನನ್ನು ತನ್ನ ಮಗಳಿಗೆ ಅಳಿಯನನ್ನಾಗಿಸಿಕೊಳ್ಳಲು ಇಷ್ಟ ಪಟ್ಟಿದ್ದಾನೆ. ನಿನಗೆ ಈ ಸಂಬಂಧ ಒಪ್ಪಿಗೆಯಾಗಿದ್ದಲ್ಲಿ ನಿನ್ನ ಸಮ್ಮತಿಯನ್ನು ನೀಡು. ಈ ಕನ್ಯೆ ಇಂದ್ರನಿಗೆ ಶಚಿಯಂತೆ, ವಿಷ್ಣುವಿಗೆ ಲಕ್ಷ್ಮಿಯಂತೆ ನಿನ್ನ ಮನೆಗೂ ಬೆಳಕಾಗಲಿ. ಯದ್ಯಪಿ ಸುಮುಖನಿಗೆ ತಂದೆಯಿಲ್ಲ. ಈ ದೋಷವನ್ನು ಪರಿಗಣಿಸದೆ ಐರಾವತನ ಕುಲದವರೆಂಬ ಹೆಗ್ಗಳಿಕೆ, ಸುಮುಖನ ಶೀಲ ಗುಣೌದಾರ್ಯಗಳನ್ನು ನೋಡಿ ಮಾತಲಿಯು ನಿರ್ಧಾರಕ್ಕೆ ಬಂದಿದ್ದಾನೆ. ತಾನೇ ತನ್ನ ಮಗಳನ್ನು ನಿನ್ನ ಮೊಮ್ಮಗನಿಗೆ ಕೊಡಲು ಬಂದಿದ್ದಾನೆ. ಆದ್ದರಿಂದ ಈ ಪ್ರಸ್ತಾವನೆಯನ್ನು ಒಪ್ಪುವುದು ಉಚಿತ'.

ಈ ಮಾತುಗಳನ್ನು ಕೇಳಿದ ಆರ್ಯಕನು ಮಗನನ್ನು ಕಳೆದುಕೊಂಡ ನಾನು ನನ್ನ ಮೊಮ್ಮಗನಿಗಾಗಿ ಈ ಕನ್ಯೆಯನ್ನು ಹೇಗೆ ಒಪ್ಪಲಿ? ಯಾರು ತಾನೇ ಶಕ್ರನ ಸ್ನೇಹಿತನ ಸಂಬಂಧವನ್ನು ಬಯಸರು? ಯಾವ ಗರುಡನು ನನ್ನ ಮಗನಾದ **'ಚಿಕುರ'** ನನ್ನು ಕೊಂದು ಹೋಗಿದ್ದಾನೆಯೋ ಅದೇ ಗರುಡನು ಇನ್ನೊಂದು ತಿಂಗಳಲ್ಲಿ ನನ್ನ ಮೊಮ್ಮಗನಾದ ಸುಮುಖನನ್ನೂ ಕೊಲ್ಲುವುದಕ್ಕಾಗಿ (ಆಹಾರಕ್ಕಾಗಿ) ಹೇಳಿಯೇ ಹೋಗಿರುವಾಗ ನಾನು ಸುಮುಖನ ವಿವಾಹವನ್ನು ಹೇಗೆ ತಾನೇ ಮಾಡಲಿ? ನನಗೆ ಮಾತಲಿಯು ಮಾನ್ಯನೇ!

**ನಾರದ ಉವಾಚ**

**ಸುತೋಽಯಂ ಮಾತಲಿರ್ನಾಮ ಶಕ್ರಸ್ಯ ದಯಿತಃ ಸುಹೃತ್ ।**
**ಶುಚಿಃ ಶೀಲಗುಣೋಪೇತಸ್ತೇಜಸ್ವೀ ವೀರ್ಯವಾನ್ ಬಲೀ ॥**
**ಅಲ್ಪಾಂತರಪ್ರಭಾವಶ್ಚ ವಾಸವೇನ ರಣೇ ರಣೇ ।**
**ಅಯಂ ಹರಿ ಸಹಸ್ರೇಣ ಯುಕ್ತಂ ಚೈತ್ರಂ ರಥೋತ್ತಮಮ್ ।**
**ದೇವಾಸುರೇಷು ಯುದ್ಧೇಷು ಮನಸೈವ ನಿಯಚ್ಛತಿ ॥**
**ಅಸ್ಯ ಕನ್ಯಾ ವರಾರೋಹಾ ರೂಪೇಣಾ ಸದೃಶೀ ಭುವಿ ।...**
**ಗುಣಕೇಶೀತಿವಿಶ್ರುತಾ..... ಯದಿ ತೇ ರೋಚತೇ ಸಮ್ಯಗ್...**

ಕ್ರಿಯತಾಮಾರ್ಯಕ ಕ್ಷಿಪ್ರಂ ಬುದ್ಧಿಂ ಕನ್ಯಾಂ ಪರಿಗ್ರಹೇ ॥
ಯಥಾ ವಿಷ್ಣುಕುಲೇ ಲಕ್ಷ್ಮೀಃ ಯಥಾ ಸ್ವಾಹಾ ವಿಭಾವಸೋಃ ।
ಪೌತ್ರಸ್ಯಾರ್ಥೇ ಭವಾಂಸ್ತಸ್ಮಾತ್ ಗುಣಕೇಶೀಂ ಪ್ರತೀಚ್ಛತು ॥
ಪಿತೃಹೀನಮಪಿಹ್ಯೇನಂ ಗುಣತೋ ವರಯಾಮಹೇ ।
ಬಹುಮಾನಾಚ್ಚ ಭವತಃ ತಥೈವೈರಾವತಸ್ಯ ಚ ॥
ಅಭಿಗಮ್ಯ ಸ್ವಯಂ ಕನ್ಯಾಂ ಅಯಂ ದಾತುಂ ಸಮುದ್ಯತಃ' ॥
ಅ. ೧೦೪ – ೧ ರಿಂದ ೧೧

ಆರ್ಯಕ ಉವಾಚ

'ವ್ರಿಯಮಾಣೇ ತಥಾ ಪೌತ್ರೇ ಪುತ್ರೇ ಚ ನಿಧನಂ ಗತೇ ।
ಕಥಮಿಚ್ಛಾಮಿ ದೇವರ್ಷೇ ಗುಣಕೇಶೀಂ ಸ್ನುಷಾಂ ಪ್ರತಿ ॥
ಸಖಾ ಶಕ್ರಸ್ಯ ಸಂಯುಕ್ತಃ ಕಸ್ಯಾಯಂ ನೇಪ್ಸಿತೋ ಭವೇತ್ ।
ಮಾಸೇನಾನ್ಯೇನ ಸುಮುಖಂ ಭಕ್ಷಯಿಷ್ಯ ಇತಿ ಪ್ರಭೋ ।
ತೇನ ಹರ್ಷಃ ಪ್ರಣಷ್ಟೋ ಮೇ ಸುಪರ್ಣವಚನೇನ ವೈ' ॥
ಅ ೧೦೪ – ೧೩ ರಿಂದ ೧೭

ಆರ್ಯಕನ ಅಭಿಮತವನ್ನು ಆಲಿಸಿದ ಮಾತಲಿಯು 'ಆರ್ಯಕ! ನಿನ್ನ ಮೊಮ್ಮಗನನ್ನು ಅಳಿಯನನ್ನಾಗಿ ವರಿಸಿದ್ದಾಗಿದೆ. ಈ ಬಗ್ಗೆ (ನಿನ್ನ ಸಮಸ್ಯೆಯ) ನೀನು ನಿನ್ನ ಮೊಮ್ಮಗ ನಮ್ಮೊಡನೆ (ನಾರದ ಹಾಗೂ ನಾನು) ಬರಲಿ ಹಾಗೂ ನಾವು ಇಂದ್ರನನ್ನು ನೋಡೋಣ. ನಾನು ಗರುಡನ ಕಾರ್ಯವಾಗದಂತಾಗಲು ಪ್ರಯತ್ನಿಸುತ್ತೇನೆ. ನಿನ್ನ ಮಗನ ಉಳಿದ ಆಯುಷ್ಯದ ಬಗ್ಗೆಯೂ ತಿಳಿಯುತ್ತೇನೆ. ಆದ್ದರಿಂದ ಸುಮುಖನು ನಮ್ಮೊಡನೆ ಇಂದ್ರನ ದರ್ಶನಕ್ಕಾಗಿ ಬರಲಿ. ನಿನಗೆ ಮಂಗಳವಾಗಲಿ. ಎಂದು ನುಡಿದನು. ನಂತರ ನಾರದ, ಮಾತಲಿ, ಆರ್ಯಕ ಎಲ್ಲರೂ ಸುಮುಖನನ್ನು ಕರೆದುಕೊಂಡು ಮಹಾತೇಜಸ್ವಿಯಾದ ಇಂದ್ರನ ಬಳಿಗೆ ಸಾರಿದರು. ದೈವವಶಾತ್ ಅಲ್ಲಿ ವಿಷ್ಣುವೂ ಅಲ್ಲಿಯೇ ಚತುರ್ಭುಜನಾಗಿ ಆಸೀನನಾಗಿದ್ದನು. (ಇಂದ್ರನೊಡನೆ) ಆಗ ನಾರದರು ಮಾತಲಿಯು ತನ್ನ ಮಗಳಿಗೆ ಸೂಕ್ತ ವರನಿಗಾಗಿ ಮಾಡಿದ ಪ್ರಯತ್ನವೆಲ್ಲವನ್ನು ಇಂದ್ರೋಪೇಂದ್ರರಿಗೆ ಅರುಹಿದರು.

'ಆಗ ವಿಷ್ಣುವು ಇಂದ್ರನಿಗೆ ಹೀಗೆ ಹೇಳಿದ (ಆದೇಶಿಸಿದ). 'ಈ ಸುಮುಖನಿಗೆ ಅಮೃತವನ್ನು ಕೊಟ್ಟು ದೇವತೆಗಳಿಗೆ ಸಮಾನನನ್ನಾಗಿ ಮಾಡು. ನಿನ್ನ ಅನುಗ್ರಹದಿಂದ ಮಾತಲಿ, ನಾರದ ಹಾಗೂ ಸುಮುಖರು ತಮ್ಮ ಅಭೀಪ್ಸೆಗಳನ್ನು ಪಡೆಯಲಿ'.

ನಂತರ ಇಂದ್ರನು ಗರುಡನ ಪರಾಕ್ರಮವನ್ನು ನೆನಪಿಸಿಕೊಂಡ (ಆದಿ ಪರ್ವದಲ್ಲಿ ಆತನ ಅವತಾರದ ನಂತರ ಅಮೃತವನ್ನು ಒಯ್ದ ಪ್ರಸಂಗಾದಿಗಳನ್ನು ಆ.ಪ. ಅ – ೩೨ ರಿಂದ ೩೪)

ವಿಷ್ಣುವಿಗೆ 'ನೀನೇ ಇದನ್ನು ಕೊಡು' (ಅಮೃತವನ್ನು ಸುಮುಖನಿಗೆ ಇತ್ಯಾದಿ) ಆಗ ವಿಷ್ಣುವು ಇಂದ್ರನಿಗೆ

'ಚರಾಚರ ಲೋಕಗಳಿಗೆ ನೀನು ಒಡೆಯನಲ್ಲವೇ! ನೀನು ಕೊಟ್ಟುದುದನ್ನು ಕೊಡದಿರುವುದನ್ನು ಯಾರು ಪ್ರಶ್ನಿಸಲಾರರು. ತಾನೇ!'

ಈ ಮಾತನ್ನು ಕೇಳಿದ ಇಂದ್ರನು ಸುಮುಖನಿಗೆ ದೀರ್ಘಾಯುಷ್ಯವನ್ನು ಕೊಟ್ಟನು. ಅಮೃತವನ್ನು ಮಾತ್ರ ಕೊಡಲಿಲ್ಲ. ಹೀಗೆ ಇಂದ್ರನಿಂದ ವರ ಪಡೆದ ಸುಮುಖ ನಿಜಕ್ಕೂ ಸುಮುಖನಾದ (ಪ್ರಸನ್ನನಾದ ಬಾಡಿದ ಮುಖ ಅರಳಿತು. ಗರುಡನ ಭಯ ತಪ್ಪಿತೆಂದು ಭಾವ) ನಂತರ ಮಾತಲಿಯ ಕನ್ಯೆಯಾದ ಗುಣ ಕೇಶಿಯನ್ನು ವಿವಾಹವಾಗಿ ತನ್ನ ಮನೆಗೆ (ನಾಗಲೋಕಕ್ಕೆ) ಹೊರಟನು. ನಾರದ, ಆರ್ಯಕರು ತಮ್ಮ ಕಾರ್ಯ ಮುಗಿಸಿಕೊಂಡು ಇಂದ್ರನನ್ನು ಅಭಿವಂದಿಸಿ ಹೊರಟರು.

**ಮಾತಲಿರುವಾಚ**

**'ಸುಮುಖಶ್ಚ ಮಯಾ ಸಾರ್ಧಂ ದೇವೇಶಮಭಿಗಚ್ಛತು' ।**

**ವಿಷ್ಣುರುವಾಚ:**

**'ಅಮೃತಂ ದೀಯತಾಮಸ್ಮೈ ಕ್ರಿಯತಾಮಮರೈಃ ಸಮಃ ।**
**ಮಾತಲಿರ್ನಾರದಶ್ಚೈವ ಸುಮುಖಶ್ಚೈವ ವಾಸವ ।**
**ಲಭಂತಾಂ ಭವತಃ ಕಾಮಾತ್ ಕಾಮಮೇತಂ ಯಥೇಪ್ಸಿತಂ' ॥**

**ಅ – ೧೦೪ ೨೧, ೨೪, ೨೫**

**'ಪುರಂದರೋಽಥ ಸಂಚಿಂತ್ಯ ವೈನತೇಯ ಪರಾಕ್ರಮಮ್ ।**
**ವಿಷ್ಣುಮೇವಾಬ್ರವೀದೇನಂ ಭವಾನೇವ ದದಾತ್ವಿತಿ' ॥**

**ವಿಷ್ಣುರುವಾಚ**

**'ಈಶಸ್ತ್ವಂ ಸರ್ವಲೋಕಾನಾಂ ಚರಾಣಾಮಚರಾಶ್ಚಯೇ ।**
**ತ್ವಯಾದತ್ತಮದತ್ತಂ ಕಃ ಕರ್ತುಮುತ್ಸಹತೇ ವಿಭೋ ॥**
**ಪ್ರಾದಾತ್‌ಶಕ್ರಸ್ತತಸ್ತಸ್ಮೈ ಪನ್ನಗಾಯಾಯುರುತ್ತಮ್ ।**
**ನತ್ವೇನಮಮೃತಪ್ರಾಶಂ ಚಕಾರ ಬಲವೃತ್ರಹಾ ॥**
**ಲಬ್ಧ್ವಾ ವರಂ ತು ಸುಮುಖಃ ಸುಮುಖಃ ಸಂಬಭೂವ ಹ ।**
**ಕೃತದಾರೋ ಯಥಾಕಾಮಂ ಜಗಾಮ ಚ ಗೃಹಾನ್ ಪ್ರತಿ' ॥**

**ಅ – ೧೦೪ – ೨೬ ರಿಂದ ೩೦**

ಮಹಾ ಬಲಿಷ್ಠನಾದ ಗರುಡನು, ಇಂದ್ರನು ಸುಮುಖ ನಾಗನಿಗೆ ದೀರ್ಘಾಯುಷ್ಯವನ್ನು ಕೊಟ್ಟ ಎಲ್ಲ ವೃತ್ತಾಂತವನ್ನು ಕೇಳಿದ. ತುಂಬಾ ಕೋಪಬಂತು.

ಕೂಡಲೆ ತನ್ನ ಸಹಜ ಮಹಾವೇಗದಿಂದ ಇಂದ್ರನ ಬಳಿಗೆ ಮೂರು ಲೋಕಗಳನ್ನು ನಡುಗಿಸುತ್ತಾ ದಂಡಿಸಲು ಬಂದೇ ಬಿಟ್ಟ.

ಗರುಡನೆಂದನು (ಇಂದ್ರನಿಗೆ)

'ಮಾನ್ಯನೇ! ನನ್ನನ್ನು ಅನಾದರಿಸಿ ನನ್ನ ವೃತ್ತಿಗೆ ಭಂಗ ತಂದೆಯಲ್ಲಾ! ಏಕೆ? ಇದಕ್ಕೂ ಮೊದಲು ನೀನೇ ನನಗೆ ಸ್ವೇಚ್ಛಾಹಾರಿಯಾಗಿರು ಎಂದು ಹೇಳಿ ಈಗ ಏಕೆ ಆ ನಿಲುವನ್ನು ಬದಲಿಸಿದಿ? ಇದು ಸರಿಯೆ? ಎಲ್ಲ ಪ್ರಾಣಿಗಳಿಗೂ ಭಗವಂತನೇ ಇಂಥಿಂಥ ಆಹಾರವೆಂದು ಗೊತ್ತು ಮಾಡಿರುವಾಗ ನನ್ನ ಆಹಾರಕ್ಕೆ ಪ್ರತಿಬಂಧಿಸಿರುವುದು ಸರಿಯೆ? ನಾನಾಗಲೇ ನನ್ನ ಮುಂದಿನ ಆಹಾರ **'ಸುಮುಖ'** **'ನಾಗ'** ಎಂದು ಹೇಳಿ ಬಿಟ್ಟಿದ್ದೆ (ಸಂಬಂಧಿಸಿದವರಿಗೆ) ಆ ನಾಗನಿಂದ ನನ್ನ ಇಡೀ ಸಂಸಾರ (ಪಕ್ಷಿ ಸಂಕುಲ) ದ ಆಹಾರದಿಂದ ವಂಚಿತವಾಯಿತು'.

'ಹೀಗಿರುವಾಗ ನಾನು ಮತ್ತಾರನ್ನೂ (ಬೇರೆ ನಾಗನನ್ನು) ಆಹಾರವಾಗಿ ಸ್ವೀಕರಿಸೆ. (ಹಿಂಸಿಸಲಾರೆ). ಆದ್ದರಿಂದ ನನಗಿರುವ ಒಂದೇ ಪರಿಹಾರ ನಾನು ನನ್ನ ಪರಿವಾರದೊಡನೆ ಪ್ರಾಣ ಬಿಡುವುದು. ಆಗ ನೀನೊಬ್ಬನೇ ಸುಖವಾಗಿರು. ತ್ರಿಲೋಕೇಶ್ವರನಾದರೂ ನಾನು ಮತ್ತೊಬ್ಬರ ಸೇವಕನಾದೆನಲ್ಲ! ನೀನು 'ವಿಷ್ಣು ಹೇಳಿದಂತೆ ನಾನು ಮಾಡಿದ್ದೇನೆಂದು ಹೇಳಬಹುದು'. ಆದರೆ ತ್ರಿಲೋಕಾಡಳಿತ ನಿನ್ನಲ್ಲಿರುವಾಗ ವಿಷ್ಣು ನಿನ್ನನ್ನು ಹೇಗೆ ತಾನೆ ನನ್ನ ವಿಷಯದಲ್ಲಿ ನಿರ್ಬಂಧಿಸಿಯಾನು? ಅಂತಿಮನಿರ್ಣಯ ನಿನ್ನದಾಗಿರುವಾಗ ವಿಷ್ಣುಪ್ರವೇಶ ಹೇಗೆ ಸಹ್ಯ? ಹೀಗಾಗಿ ನನ್ನನ್ನು ಅನಾದರಿಸಿದ್ದು ಸರಿಯಲ್ಲ. ನನ್ನ ಹಾಗೂ ನಿನ್ನ ತಂದೆ ಕಶ್ಯಪರೇ ನಮ್ಮಿಬ್ಬರ ತಾಯಿ. ದಕ್ಷನ ಪುತ್ರಿಯರೇ ಪರಾಕ್ರಮದ ವಿಷಯ ತೆಗೆದುಕೊಂಡರೆ ನನಗೂ ಎಲ್ಲ ಲೋಕಗಳನ್ನು ಧರಿಸುವ ಸಾಮರ್ಥ್ಯವಿದೆ. ವಿಶ್ವದ ಎಲ್ಲ ಪ್ರಾಣಿಗಳ ಬಲವನ್ನು ಮೀರಿಸುವ ಬಲ ನನಗೂ ಇದೆ. ಹಿಂದೆ ದೈತ್ಯ ದಾನವರ ಯುದ್ಧದಲ್ಲಿ ನಾನು **ಶ್ರುತಶ್ರೀ, ಶ್ರುತಸೇನ, ವಿವಸ್ವಾನ್, ರೋಚನಾಮುಖ ಕಾಲಕಾಕ್ಷ** ಮೊದಲಾದ ದೈತ್ಯರನ್ನು ಸಂಹರಿಸಿದ್ದೇನೆ.

ನಾನಿಷ್ಟು ಬಲಿಷ್ಠನಾಗಿದ್ದೂ ನಿನ್ನ ಸಹೋದರ (ತಮ್ಮನ) ರಥಧ್ವಜದಲ್ಲಿದ್ದೇನೆ ಅವನನ್ನು ಸೇವಿಸುತ್ತೇನೆ. (ವಾಮನನನ್ನು) ಅವನಿಗೆ ವಾಹನವೂ ಆಗಿದ್ದೇನೆ. ಹೀಗಿದ್ದೂ ನನಗೆ ಅವಮಾನಿಸಿದ್ದು ಸರಿಯೆ ಇಂದ್ರ!

'ವಿಷ್ಣುವಿನ ಮಹಾಭಾರವನ್ನು ಹೊರುವ, ಹೊತ್ತು ಹಾರುವವರು ನನ್ನನ್ನು ಬಿಟ್ಟರೆ ಯಾರಿರುತ್ತಾರೆ? ಹೀಗಾಗಿ ನನಗಿಂತ ಬಲಿಷ್ಠರು ಮತ್ತಾರು ಇದ್ದಾರೆ? ಬಲದಲ್ಲಿ ನಾನು ಎಲ್ಲರನ್ನು ಮೀರಿಸಿದ್ದರೂ ನಾನು ವಿಷ್ಣುವನ್ನು ಆತನ ಬಂಧುಗಳೊಡನೆ ಭೃತ್ಯನಂತೆ ಹೊರುತ್ತೇನಲ್ಲವೇ? ಇಷ್ಟು ನಾನು ಸೇವೆ ಮಾಡಿದರೂ ನನ್ನ ಅನ್ನಕ್ಕೇನೇ ಕನ್ನ ಹಾಕಿದೆಯಲ್ಲ! ನಿನ್ನಿಂದ ಹಾಗೂ ವಿಷ್ಣುವಿನಿಂದಾಗಿ ನನಗೆ ಅಗೌರವವುಂಟಾಗಿದೆ. ಅದಿತಿಯಲ್ಲಿ ಹುಟ್ಟಿದವರಲ್ಲಿ ನೀನೇ ಮಹಾಪರಾಕ್ರಮಿಯಷ್ಟೇ. ಅಂತಹ ನಿನ್ನನ್ನು

ನಾನು ನನ್ನ ರೆಕ್ಕೆಯ ಒಂದು ತುದಿಯಿಂದ ಎತ್ತ ಬಲ್ಲೆ (ಹೊರಬಲ್ಲೆ). (ಅದಿತಿಯ ಮಗನಾದ ವಾಮನನನ್ನೂ ಗರುಡನು ಪರೋಕ್ಷವಾಗಿ ಇಲ್ಲಿ ಇಂದ್ರನಂತೆಯೇ ತನಗಿಂತ ದುರ್ಬಲನೆಂಬ ಧ್ವನಿ ಇಲ್ಲಿದೆ). ಹೀಗಾಗಿ ಯಾರು ಬಲಿಷ್ಠರು ಎಂದು ನೀನೆ ಸಾವಧಾನವಾಗಿ ವಿಮರ್ಶಿಸು.

'ಪಕ್ಷವಾತೇನ ಮಹತಾ ರುಧ್ವಾ ತ್ರಿಭುವನಂ ಖಗಃ ।
ಸುಪರ್ಣಃ ಪರಮಕ್ರುದ್ಧೋ ವಾಸವಂ ಸಮುಪಾದ್ರವತ್' ॥ ೧೦೫-೨

ಭಗವನ್ ಕಿಮವಜ್ಞಾನಾತ್ ವೃತ್ತಿಃ ಪ್ರತಿಹತಾ ಮಮ ।
ಕಾಮಕಾರವರಂ ದತ್ತ್ವಾ ಪುನಶ್ಚಾಲಿತವಾನಸಿ ॥ ೧೦೫-೩

ನಿಸರ್ಗಾತ್ ಸರ್ವಭೂತಾನಾಂ ಸರ್ವಭೂತೇಶ್ವರೇಣ ಮೇ ।
ಆಹಾರೋ ವಿಹಿತೋ ಧಾತ್ರಾ ಕಿಮರ್ಥಂ ವಾರ್ಯತೇ ತ್ವಯಾ ॥

ವೃತಶ್ಚೈವ ಮಹಾನಾಗಃ ಸ್ಥಾಪಿತಃ ಸಮಯಶ್ಚ ಮೇ ।
ಅನೇನ ಚ ಮಯಾ ದೇವ ಭರ್ತವ್ಯಃ ಪ್ರಸವೋ ಮಹಾನ್ ॥

ಸೋಽಹಂ ಪ್ರಾಣಾನ್ ವಿಮೋಕ್ಷ್ಯಾಮಿ ತಥಾ ಪರಿಜನೋ ಮಮ ।
ಯೇ ಚ ಭೃತ್ಯಾ ಮಮ ಗೃಹೇ ಪ್ರೀತಿಮಾನ್ ಭವ ವಾಸವ ॥

ತ್ವಯಿ ತಿಷ್ಠತಿ ದೇವೇಶ ನ ವಿಷ್ಣುಃ ಕಾರಣಂ ಮಮ ।
ತ್ರೈಲೋಕ್ಯರಾಜ ರಾಜ್ಯಂ ಹಿ ತ್ವಯಿ ವಾಸವ ಶಾಶ್ವತಮ್ ॥

ಅಹಮಪ್ಯುತ್ಸಹೇ ಲೋಕಾನ್ ಸಮಂತಾತ್ ವೋಢುಮಂಜಸಾ ।
ಅಸಹ್ಯಂ ಸರ್ವಭೂತಾನಾಂ ಮಮಾಪಿ ವಿಪುಲಂ ಬಲಂ ॥

ಯತ್ತು ಧ್ವಜಸ್ಥಾನಗತೋ ಯತ್ನಾತ್ ಪರಿಚರಾಮ್ಯಹಂ ।
ವಹಾಮಿ ಚೈವಾನುಜಂ ತೇ ತೇನ ಮಾಮವಮನ್ಯಸೇ ॥

ಕೋಽನ್ಯೋ ಭಾರಸಹೋ ಹ್ಯಸ್ತಿ ಕೋಽನ್ಯೋಽಸ್ತಿ ಬಲವತ್ತರಃ ।
ತೇನ ಮೇ ಗೌರವಂ ನಷ್ಟಂ ತ್ವತ್ತಶ್ಚಾಸ್ಮಾಚ್ಚ ವಾಸವ ॥
ವಿಮೃಶ್ಯ ತ್ವಂ ಶನೈಸ್ತಾತ ಕೋಽನ್ವತ್ರ ಬಲವಾನಿತಿ ॥

(೧೦೫-೨ ರಿಂದ ೧೭)

ಗರುಡನ ಈ ಪರಿಯ ದುರಹಂಕಾರದ ಮಾತುಗಳನ್ನು ಕೇಳಿ ಚಕ್ರಧಾರಿಯಾದ ವಿಷ್ಣು (ವಾಮನ ರೂಪಿ) ಇಂದ್ರನಿಗೆ ಉತ್ತರಿಸಿದ. ಎಲೈ ಅಂಡಜನೇ! (ಗರುಡನೇ)! ವಾಸ್ತವವಾಗಿ ನೀನು ದುರ್ಬಲನಾಗಿದ್ದರೂ ಮಹಾಬಲಿಷ್ಠನೆಂದು ಭ್ರಮಿಸಿದ್ದೀಯಾ. ಮೂರೂ ಲೋಕಗಳೂ ಸೇರಿ ಬಂದರೂ ನನ್ನ ಶರೀರವನ್ನು ಯಾರೂ ಧರಿಸಲಾರರು. ನನ್ನನ್ನೇ ನಾನು ನಿನ್ನ ಸಮೇತವಾಗಿ ವಸ್ತುತಃ ಧರಿಸುತ್ತೇನೆ(ತ್ರಿದ್ದೇನೆ). ನಿನಗೆ ಸಂಶಯವಿದ್ದಲ್ಲಿ ನನ್ನ ಈ ಬಲ ಬಾಹುವನ್ನು ಧಾರಣ ಮಾಡು. ಆಗ ನಿನ್ನ ಆತ್ಮ ಪ್ರಶಂಸೆಗೆ ಅರ್ಥವಿದ್ದೀತು! ಹೀಗೆ ಹೇಳಿದ ವಿಷ್ಣು ತನ್ನ ಬಲ ಬಾಹುವನ್ನು ಗರುಡನ

ಹೆಗಲ ಮೇಲಿಟ್ಟನು. ತಕ್ಷಣವೇ ಗರುಡನು ಆ ಭಾರ ತಾಳದೆ ದುಃಖಿತನಾಗಿ ಎಚ್ಚರ ತಪ್ಪಿ ಬಿದ್ದನು. ವಿಷ್ಣುವಿನ ಒಂದು ಭುಜದ ಭಾರ ಸಪ್ತ ಪರ್ವತಗಳಿಂದ ಸಹಿತವಾದ ಪೂರ್ಣ ಭೂಮಿ ಭಾರದಂತಾಯಿತು ಗರುಡನಿಗೆ. ಆದರೆ ದಯಾಮಯನಾದ ವಿಷ್ಣುವು ಗರುಡನನ್ನು ಅದಕ್ಕಿಂತ ಹೆಚ್ಚು ಪೀಡಿಸಲಿಲ್ಲ – ಪೀಡಿಸಿದ್ದರೆ ಗರುಡನು ಉಳಿಯುತ್ತಿರಲಿಲ್ಲ. ಗರುಡನು ಮೂಗಿನಿಂದ ಉಸಿರಾಡಲು ಅಶಕ್ತನಾಗಿ ಬಾಯಿಂದ ಉಸಿರಾಡುತ್ತಾ ಜರ್ಜರಿತನಾದ. ತನ್ನ ಭುಜದ ಮೇಲಿಟ್ಟ ರೆಕ್ಕೆಗಳನ್ನೇ ಕೆಳಗೆ ಹಾಕಿಬಿಟ್ಟನು. ನಂತರ ಗರುಡನು ವಿಷ್ಣುವನ್ನು ಶಿರಸಾ ಪ್ರಣಾಮ ಮಾಡಿ ದೀನನಾಗಿ 'ಭಗವನ್ ಸಮಸ್ತ ಲೋಕಸಾರವಾದ ನಿನ್ನ ಶರೀರದ ಒಂದೇ ಭಾಗದಿಂದ ನಾನು ಪಿಷ್ಟದಂತಾಗಿದ್ದೇನೆ. ಅಲ್ಪನಾದ ನನ್ನನ್ನು ಕ್ಷಮಿಸು. ನಿನ್ನ ಮಹಾಬಲದ ಅರಿವು ನನಗಿದ್ದಿಲ್ಲ. ಆದ್ದರಿಂದಲೇ ನನ್ನ ಸಮನಾರು ಎಂಬ ಭ್ರಮೆಯಲ್ಲಿದ್ದೆ'. ಗರುಡನ ಪ್ರಾರ್ಥನೆಯನ್ನು ಮನ್ನಿಸಿದ ವಿಷ್ಣುವು 'ಮತ್ತೆ ಹೀಗೆ ಮಾಡದಿರು ಎಂದು ಸ್ನೇಹದಿಂದಲೇ ಅನುಗ್ರಹಿಸಿದನು ಮತ್ತು ಭಗವಂತನು ತನ್ನ ಪಾದಾಂಗುಷ್ಠದಿಂದ 'ಸುಮುಖನಾಗ'ನನ್ನು ಗರುಡನ ಎದೆಗೆ ಎಸೆದನು. (ಇವನನ್ನು ನೀನು ಮುಂದೆ ರಕ್ಷಿಸುತ್ತಿರು ಎಂಬ ಸಂದೇಶದೊಂದಿಗೆ ಇಟ್ಟನು). ಅಂದಿನಿಂದ ಗರುಡನು ಈ ಸರ್ಪದೊಡನೇ ಇರುತ್ತಾನೆ.

ಹೀಗೆ ಗರುಡನು ವಿಷ್ಣು ಬಲದಿಂದ ತನ್ನ ಗರ್ವವನ್ನು ಕಳೆದುಕೊಂಡವನಾಗಿ ನಾನೇ ಬಲಿಷ್ಠನೆಂಬ ಅಹಂಕಾರವನ್ನು ತೊರೆದನು.

ಈ ಕಥೆಯನ್ನು ನಿರೂಪಿಸಿದ ಕಣ್ವರು ದುರ್ಯೋಧನನಿಗೆ ನೀನು ಕೂಡಾ ಮಹಾ ಬಲಿಷ್ಠನೆಂಬ ಭ್ರಮೆಯಲ್ಲಿದ್ದೀಯಾ! ಪಾಂಡವರು ಹಾಗೂ ಕೃಷ್ಣರ ಮುಂದೆ ನೀನೇನೂ ಬಲಿಷ್ಠನೇ ಅಲ್ಲ. ಅವರೊಡನೆ ಹೇಗೆ ತಾನೆ ಯುದ್ಧ ಮಾಡುವೆ. ಆದ್ದರಿಂದ ಅವರೊಡನೆ ಶತ್ರುತ್ವ ತೊರೆದು ಮೈತ್ರಿ ಬೆಳೆಸಿ ಕುರು ಕುಲ ರಕ್ಷಕನಾಗು ಎಂದರು. ಆದರೆ ದುರ್ಯೋಧನನು ಮಾತ್ರ ಅವರ ಮಾತುಗಳನ್ನು ತಿರಸ್ಕರಿಸಿ ತನ್ನ ತೊಡೆಯನ್ನು ತಟ್ಟುತ್ತಾ ಉದ್ಧಟತನದಿಂದ ಉತ್ತರಿಸಿದನು.

**ವಿಷ್ಣುರುವಾಚ – ಗರುಡಂ ಪ್ರತಿ**

**'ಗರುತ್ಮನ್ ಮನ್ಯಸೇಽಽತ್ಮಾನಂ ಬಲವಂತಂ ಸುದುರ್ಬಲಂ ।**
**ಅಲಮಸ್ಮತ್ಸಮಕ್ಷಂ ತೇ ಸ್ತೋತುಮಾತ್ಮಾನಮಂಡಜ ॥**
**ತ್ರೈಲೋಕ್ಯಮಪಿ ಮೇ ಕೃತ್ಸ್ನಮಶಕ್ತಂ ದೇಹಧಾರಣೇ ।**
**ಅಹಮೇವಾತ್ಮನಾಽಽತ್ಮಾನಂ ವಹಾಮಿ ತ್ವಾಂ ಚ ಧಾರಯೇ ॥**
**ಇಮಂ ತಾವನ್ಮಮೈಕಂ ತ್ವಂ ಬಾಹುಂ ಸವ್ಯೇತರಂ ವಹ ।**
**ಯದ್ಯೇನಂ ಧಾರಯಸ್ಯೇಕಂ ಸಫಲಂ ತೇ ವಿಕತ್ಥಿತಂ ॥**
**ತತಃ ಸಭಗವಾಂಸ್ತಸ್ಯ ಸ್ಕಂಧೇ ಬಾಹುಂ ಸಮಾಸಜತ್ ।**
**ನಿಪಪಾತ ಸ ಭಾರಾರ್ತೋ ವಿಹ್ವಲೋ ನಷ್ಟಚೇತನಃ ॥**

ವ್ಯಾತ್ತಾಸ್ಯಃ ಸ್ರಸ್ತಕಾಯಶ್ಚ ವಿಚೇತಾ ವಿಹ್ವಲಃ ಖಗಃ ।
ಮುಮೋಚ ಪತ್ರಾಣಿ ತದಾ ಗುರುಭಾರ ಪ್ರಪೀಡಿತಃ ।
ಸ ವಿಷ್ಣುಂ ವಿಹ್ವಲೋ ದೀನಃ ಕಿಂಚಿದ್ವಚನಮಬ್ರವೀತ್ ।
ಭಗವನ್ ಲೋಕಸಾರಸ್ಯ ಸದೃಶೇನ ವಪುಷ್ಮತಾ ।
ಭುಜೇನ ಸ್ವೈರಮುಕ್ತೇನ ನಿಷ್ಪಿಷ್ಟೋಽಸ್ಮಿ ಮಹೀತಲೇ ।
ಕ್ಷಂತು ಮರ್ಹಸಿ ಮೇ ದೇವ ವಿಹ್ವಲಸ್ಯಾಲ್ಪಚೇತಸಃ ।
ನ ಹಿ ಜ್ಞಾತಂ ಬಲಂ ದೇವ ಮಯಾ ತೇ ಪರಮಂ ವಿಭೋ ।
ತತಶ್ಚಕ್ರೇ ಸ ಭಗವಾನ್ ಪ್ರಸಾದಂ ವೈ ಗರುತ್ಮತಃ ।
ಮೈವಂ ಭೂಯ ಇತಿ ಸ್ನೇಹಾತ್ ತದಾ ಚೈನಮುವಾಚ ಹ ।
ಪಾದಾಂಗುಷ್ಠೇನ ಚಿಕ್ಷೇಪ ಸುಮುಖಂ ಗರುಡೋರಸಿ ।
ತತಃ ಪ್ರಭೃತಿ ರಾಜೇಂದ್ರ ಸಹ ಸರ್ಪೇಣ ವರ್ತತೇ ॥
ಏವಂ ವಿಷ್ಣುಬಲಾಕ್ರಾಂತೋ ಗರ್ವನಾಶಮುಪಾಗತಃ ।
ಗರುಡೋ ಬಲವಾನ್ ರಾಜನ್ ವೈನತೈಯೋ ಮಹಾಯಶಾಃ' ॥

(೧೦೫ – ೧೯ ರಿಂದ ೩೨)

## ಸಂದೇಶಗಳು–ವಿವರಣೆಗಳು

ಮಾತಲಿ ಉಪಾಖ್ಯಾನದಲ್ಲಿ ಮಾತಲಿ–ಆತನ ಪತ್ನಿ–ಮಗಳು–ನಾರದರು–ನಾಗಲೋಕದ ನಾಗರು – ಇಂದ್ರ, ಉಪೇಂದ್ರ ಇವರೇ ಮೊದಲಾದ ಮಹಾನುಭಾವರ ಪಾತ್ರಗಳಿವೆ. ಮಾತಲಿಯ ಮಗಳು ಗುಣಕೇಶಿ ತುಂಬಾ ರೂಪಸಿ. ಆಕೆಗೆ ವರ ದೇವ ಭೂಲೋಕಗಳಲ್ಲಿ ಸಿಗಲೇ ಇಲ್ಲ. ಚಿಂತಾಕ್ರಾಂತನಾದ ಮಾತಲಿ ತನ್ನ ಪತ್ನಿಯೊಡನೆ ಚರ್ಚಿಸಿ ಏನೇ ಆಗಲೀ ಎಲ್ಲೇ ಆಗಲೀ ಸೂಕ್ತ ವರ ಹುಡುಕಬೇಕೆಂಬ ನಿರ್ಧಾರದೊಡನೆ ಭೋಲೋಕಕ್ಕೆ ಬಂದಾಗ ದಾರಿಯಲ್ಲಿ ನಾರದರು ಸಿಗುತ್ತಾರೆ. ಅವರು ಮಾತಲಿಯ ಸಂಚಾರದ ನಿಮಿತ್ತ ಕೇಳಿದಾಗ ಮಾತಲಿ ತನ್ನ ಉದ್ದೇಶ್ಯ ಹೇಳುತ್ತಾನೆ. ನಾರದರು ತಾವು ವರುಣ ಲೋಕಕ್ಕೆ ಹೋಗುತ್ತಿರುವುದಾಗಿಯೂ ತನ್ನೊಡನೆ ಬಂದಲ್ಲಿ ಅಲ್ಲೆಲ್ಲಾದರೂ ವರಾನ್ವೇಷಣೆ ಮಾಡಬಹುದೆಂಬ ಆಶೆ ಹಚ್ಚುತ್ತಾರೆ. ಹೀಗೆ ಆರಂಭವಾಗುತ್ತದೆ ಉಪಾಖ್ಯಾನ.

೧) ಮಾತಲಿಯ ಪ್ರಾಮಾಣಿಕ ಪ್ರಯತ್ನಕ್ಕೆ ನಾರದರ ಆಕಸ್ಮಿಕ ಸುಯೋಗ ಮುಂದೆ ವರಾನ್ವೇಷಣೆಗೆ ನಾಂದಿ ಹಾಡಿತು. ಆದ್ದರಿಂದ ಯಾವುದೇ ಕೆಲಸಕ್ಕಾದರೂ ಸೂಕ್ತ ಪ್ರಯತ್ನ ಅವಶ್ಯ ಹಾಗೆಯೇ ವರಾನ್ವೇಷಣೆಗೂ ಸೂಕ್ತ ಪ್ರಯತ್ನ ಮಾಡುತ್ತಾನೆ ಮಾತಲಿ ನಾರದರ ಮಾರ್ಗದರ್ಶನದಲ್ಲಿ **'ಪ್ರಯತ್ನಮೇಕಮಗ್ರತೋ ನಿಧಾಯ ಭೂತಿಮಾಪ್ನುಮಃ' । ಮ.ತಾ.ನಿ. ೨೧–೯೮ ಎಂಬ ಮಾತಿಗೆ ಉದಾಹರಣೆ ಇದಾಗಿದೆ.**

೨) ಮಕ್ಕಳನ್ನು ಹೊಂದುವುದು ಅವರಿಗೆ ಸೂಕ್ತ ಜೀವನದ ಗತಿಯನ್ನು ದೊರಕಿಸಿಕೊಡುವುದೂ ತಂದೆ ತಾಯಿಗಳ ಕರ್ತವ್ಯ. ಆ ಬಗ್ಗೆ ತೀವ್ರ ಕಾಳಜಿಯುಕ್ತ

ಪ್ರಯತ್ನ ಮಾತಲಿಯಲ್ಲಿ ನೋಡುತ್ತೇವೆ. ತಂದೆ ತಾಯಿಗಳು ಹೇಗಿರಬೇಕೆಂದು ಮಾತಲಿಯ ನಡೆ ತಿಳಿಸುತ್ತದೆ.

೩) ಮಗಳು ಸೂರೂಪಿಯಾದರೂ ಮದುವೆ ಸುಲಭವಲ್ಲ. ಮಗಳ ಭವಿಷ್ಯವು ಹೆತ್ತ ತಾಯಿ ತಂದೆ ಹಾಗೂ ಗಂಡನ ಮನೆ ಹೀಗೆ ಮೂರು ಕುಲಗಳ ಭವಿಷ್ಯವೂ ಕೂಡಾ ಕನ್ಯೆಯ ಮೇಲೆ ನಿಂತಿರುತ್ತದೆ. ಕಾರಣ ತಂದೆ ತಾಯಿಗಳ ಜವಾಬ್ದಾರಿ ಕೇವಲ ಮದುವೆ ಮಾಡಿ ಮುಗಿಸುವುದಲ್ಲ. ಕೊಟ್ಟ ಮನೆ ಹಾಗೂ ಯಾರ ಮನೆಯಿಂದ ಬಂದಿದ್ದಾಳೋ ಅವರೆಲ್ಲರ ಕುಲಗಳಿಗೆ ಒಳ್ಳೆಯ ಹೆಸರು ತರುವಂತಿರಬೇಕು ಎನ್ನುತ್ತದೆ ಭಾರತ. ಇಲ್ಲದಿದ್ದರೆ ಮೂರು ಕುಲಕ್ಕೂ ಆಕೆ ಹೊರೆ.

**'ಮಾತುಃ ಕುಲಂ ಪಿತೃಕುಲಂ ಯತ್ರ ಚೈವ ಪ್ರದೀಯತೇ ।**
**ಕುಲತ್ರಯಂ ಸಂಶಯಿತಂ ಕುರುತೇ ಕನ್ಯಕಾ ಸತಾಂ' ॥**

**ಉ.ಪ. ಅ ೯೭-೧೬**

ಶ್ರೀಮದಾಚಾರ್ಯರು **'ಕನ್ಯೋದಿತಾ ಬತ ಕುಲದ್ವಯತಾರಿಣೀ'** ಎಂದು ತಾತ್ಪರ್ಯ ನಿರ್ಣಯದಲ್ಲಿ ನಿರ್ಣಯಿಸಿದ್ದಾರೆ, ಶ್ರುತಿಯನ್ನು ಅನುಸರಿಸಿ ಹೆತ್ತ ಕುಲ ಒಂದು ಎಂದು ಭಾವಿಸಿ ಗಂಡನ ಮನೆ ಮತ್ತೊಂದು ಎಂದು ಭಾವಿಸಿ ಎರಡು ಕುಲ ಎಂದು ಇಲ್ಲಿಯ ಅಭಿಪ್ರಾಯ.

೪) ಮಾತಲಿಯ ವರಾನ್ವೇಷಣೆಯ ಮುನ್ನ ಕುಲದೇವತೆಯನ್ನು ನಮಿಸಿ ಪ್ರದಕ್ಷಿಣೆ ಮಾಡಿ ಹೋದನೆಂದಿದೆ. ಇಂತಹ ಸಂದರ್ಭದಲ್ಲಿ ಎಲ್ಲಕ್ಕೂ ಮೊದಲು ಕುಲದೈವತಾನುಗ್ರಹ ಅತಿ ಮುಖ್ಯ. ಎಂದು ತಿಳಿದು ನಡೆಯಬೇಕು. ಅದನ್ನು ಉದಾಸೀನ ಮಾಡಬಾರದು.

೫) ನಾರದರು ವರುಣಲೋಕ, ಪಾತಾಲಲೋಕ, ಹಿರಣ್ಯಪುರ, ಗರುಡಲೋಕ ರಸಾತಲಗಳಿಗೆ ಕರೆದುಕೊಂಡು ಹೋಗಿ ಅಲ್ಲಿಯ ದೇವ ದಾನವ, ಪಕ್ಷ್ಯಾದಿಗಳನ್ನು ತೋರಿಸಿದರೂ ಮಾತಲಿಗೆ ಯಾರೂ ಒಪ್ಪಿಗೆಯಾಗಲಿಲ್ಲ. ನಾರದರು ಯಾರನ್ನೂ ಮದುವೆಗೆ ಒಪ್ಪಲು ಒತ್ತಾಯ ಪಡಿಸದೆ ಆದರ್ಶ ಮಧ್ಯವರ್ತಿಗಳಾಗಿ ಮೆರೆದಿದ್ದಾರೆ. ಮಧ್ಯವರ್ತಿಗಳು ನಾರದರಂತೆ ಇರಬೇಕು. ವರ-ಕನ್ಯಾ ಯಾವ ಪಕ್ಷಕ್ಕೂ ಒತ್ತಾಯಾದಿಗಳನ್ನು ಮಾಡದೆ ಇಬ್ಬರ ಅಭಿಪ್ರಾಯಗಳನ್ನು ಅರ್ಥಮಾಡಿಕೊಂಡು ವರ್ತಿಸಬೇಕು. ನಾರದರು ಹಾಗೆಯೇ ಇದ್ದರು.

೬) ಮಾತಲಿಯು ದಾನವರನ್ನು ವರತ್ವೇನ ಕಾಣಲಿಲ್ಲ. ಏಕೆಂದರೆ ತಾನು ದೇವ ಸಂತತಿಯವನು. ದಾನವರಿಗೂ ದೇವತೆಗಳಿಗೂ ಯಾವಾಗಲೂ ವೈರ ಕಾರಣ ಭಾವೀ ತಾಪ-ತೊಂದರೆಗಳನ್ನು ನೋಡಿ ಆ ಉಸಾಬರಿಗೆ ಹೋಗದೆ ಬೇಡವೆನ್ನುತ್ತಾನೆ. ಇದೊಂದು ತರಹ ಮತ್ಸದ್ದಿತನವೇ ಸರಿ.

೭) ನಾಗಲೋಕದಲ್ಲಿ ಮಾತ್ರ ಮಾತಲಿಯು ನಾರದರು ತೋರಿಸಿದ ಐರಾವತ ಕುಲದಲ್ಲಿ ಜನಿಸಿದ ಆರ್ಯಕನ ಮಗಳ ಮಗನಾದ 'ಸುಮುಖ' ಎಂಬ ನಾಗನನ್ನು

ತನ್ನ ಅಳಿಯನನ್ನಾಗಿ ಸ್ವೀಕರಿಸಿ ಬಿಡುತ್ತಾನೆ. ಮಾತಲಿಯ ಸಾಕ್ಷಿಯ ನಿರ್ಧಾರ ಹಾಗಿತ್ತೇನೋ! ಆತನ ನಿರ್ಧಾರವೇ ಅಂತಿಮ. ಆದರೆ ಅವನನ್ನು ಗರುಡನು ಮುಂದಿನ ತಿಂಗಳು ತಿನ್ನುತ್ತಾನೆಂಬ ಭಯವಿದ್ದರೂ ಒಪ್ಪುತ್ತಾನೆ. ಹಾಗೆಯೇ ಮಾತುಕತೆ ಮಾಡಿ ಒಪ್ಪಿಸುತ್ತಾನೆ. ಇಲ್ಲಿಯೂ ಮಾತಲಿಯ ಧೈರ್ಯ, ಮುತ್ಸದ್ದಿತನ ಮೆಚ್ಚಬೇಕು. ಆತನಿಗಿರುವ ಧೈರ್ಯ ಇಂದ್ರನ ಅನುಗ್ರಹ ಸಿಕ್ಕೇ ಸಿಗುತ್ತದೆಂದು. ತನ್ನ ಸ್ವಾಮಿಯ ಅನುಗ್ರಹದ ಮೇಲಿನ ನಂಬಿಕೆ ಹಾಗೆ ಮಾಡಿಸಿರಬೇಕು. ಆದ್ದರಿಂದ ನಮ್ಮ ಹಿರಿಯರ ಮೇಲೆ ನಂಬಿಕೆ ವಿಶ್ವಾಸ ನಮ್ಮನ್ನು ಕಾಪಾಡುತ್ತದೆ.

೮) ಇಂದ್ರಾನುಗ್ರಹಕ್ಕಾಗಿ ತಾನು ಭಾವಿ ಅಳಿಯ ಸುಮುಖ ನಾಗ, ನಾರದರು ಸೇರಿ ಇಂದ್ರನನ್ನು ಭೇಟಿಯಾಗಿ ವಿಜ್ಞಾಪಿಸಲು ಅಲ್ಲಿಯೆ ಇದ್ದ ವಿಷ್ಣುವು (ಉಪೇಂದ್ರನು) ಇಂದ್ರನಿಗೆ ಅಮೃತ ಕೊಡಲು ಆಜ್ಞಾಪಿಸುತ್ತಾನೆ. (ಮಾತಲಿಯ ಭಾವಿ ಅಳಿಯಗೆ) ವಿಜ್ಞಾಪಿಸಿದ್ದು ಇಂದ್ರಗೆ ವರಕೊಟ್ಟದ್ದು ಸಾಕ್ಷಾತ್ ಭಗವಂತ. ಹೀಗೆ ಮಾತಲಿಯ ದೈವ ಬಲ ಹೇಳತೀರದು!! ದೈವಬಲ ಇದ್ದವಗೆ ಯಾವುದೇ ವಿಘ್ನಗಳು ಬರುವುದಿಲ್ಲ ಎನ್ನಲು ಮಾತಲಿಯೇ ಸಾಕ್ಷಿ. ಆತನ ನಡೆಯೇ ಸಾಕ್ಷಿ.

೯) ವಿಷ್ಣು ಹೇಳಿದ್ದು ಅಮೃತ ಕೊಡಲು ಆದರೆ ಇಂದ್ರನು ಅದನ್ನು ಕೊಡದೆ ದೀರ್ಘಾಯುಷ್ಯ ಕೊಟ್ಟನು. ಕಾರಣ ಅಮೃತವು ದೇವತೆಗಳಿಗೆ ಮಾತ್ರ ಮೀಸಲು. ನಾಗಾದಿಗಳಿಗೆ ಅಲ್ಲ. ಸಾಲದ್ದಕ್ಕೆ ಗರುಡನ ಭಯ. ಕಾರಣ ಇಂದ್ರನಿಗಿಂತ ಗರುಡ ಉತ್ತಮನಷ್ಟೇ! (ಉದಂಕನಿಗೂ ಇಂದ್ರ ಅಮೃತ ಕೊಡಲಿಲ್ಲ).

೧೦) ತನ್ನ ಆಹಾರ 'ಸುಮುಖ' ನಿಗೆ ದೀರ್ಘಾಯುಷ್ಯ ಹಾಗೂ ಗುಣಕೇಶಿಯೊಡನೆ ಮದುವೆ ವಿಷಯವು ಗರುಡನನ್ನು ಕೆರಳಿಸಿತು. ಆತನು ಇಂದ್ರನಿಗೆ ಪ್ರತಿಭಟಿಸಿದ. ಜೊತೆಗೆ ಅಲ್ಲಿಯೇ ಇದ್ದ ವಿಷ್ಣುವನ್ನು ಸೇರಿಸಿ ತನಗೆ ಬಲದಲ್ಲಿ ಯಾರೂ ಸಮಾನರು ಇಲ್ಲವೆಂದು ಜಂಭ ಕೊಚ್ಚಿಕೊಂಡ! ವಿಷ್ಣುವು ಇದನ್ನು ಗರುಡನಿಗೆ ತನ್ನ ದಕ್ಷಿಣ ಬಾಹುವನ್ನು ಎತ್ತಲು ಹೇಳಿದಾಗ ಅದಾಗದೇ ಗರುಡ ಸೋತು ಸುಣ್ಣಾದ. ತನ್ನ ಬಲವೇ ಬಲವೆಂಬ ಭ್ರಮೆಯಿಂದ ಹೊರಬಂದು ಕ್ಷಮೆ ಕೇಳಿದ ಗರುಡ. ಇಂದ್ರನಿಗಿಂತಲೂ ಉತ್ತಮನಾದರೂ ವಿಷ್ಣುವಿನೊಡನೆ ಪೈಪೋಟಿಗಿಳಿದು ಸೋಲನ್ನುಂಡ. ಗರುಡನು ತನ್ನ ಭಾಗವತ ಧರ್ಮಚ್ಯುತನಾದುದನ್ನು ಹೀಗೆ ತೋರಿಸಿಕೊಳ್ಳುತ್ತಾನೆ. ಗರುಡನು ಭಾಗವತೋತ್ತಮನಾದರೂ ಈ ಪ್ರಸಂಗದ್ದಲ್ಲಿ ವಿಷ್ಣು ದ್ರೋಹ, ಭಾಗವತನಾದ ಇಂದ್ರನನ್ನೂ ಅವಮಾನಿಸಿ ವಿಷ್ಣು ಭಕ್ತ ದ್ರೋಹ ಕಟ್ಟಿ ಕೊಳ್ಳುತ್ತಾನೆ. ಆದರೆ ಕೂಡಲೆ ತನ್ನ ತಪ್ಪನ್ನು ತಿಳಿದು ಕ್ಷಮೆ ಬೇಡುತ್ತಾನೆ, ವಿಷ್ಣುವನ್ನು ಕುರಿತು. ಗರುಡನ ಪ್ರಸಂಗ ಇಲ್ಲಿ ಬಂದಿದೆ. ಶೇಷನು ವಾಯುದ್ರೋಹ ಮಾಡಿದ್ದು ಭವಿಷ್ಯೋತ್ತರ ಪುರಾಣದಲ್ಲೂ, ರುದ್ರಾದಿಗಳ ಈ ತರಹದ ವರ್ತನೆಗಳು ರಾಮಾಯಣ, ಮಹಾಭಾರತ ಭಾಗವತಾದಿಗಳಲ್ಲಿ ಅನೇಕ ಕಡೆ ಬಂದಿವೆ. ಆದ್ದರಿಂದ ಭಗವದ್ಭಕ್ತಿ, ಭಾಗವತರೊಡನೆಯೂ ಯೋಗ್ಯ ಆದರ ಇದ್ದರೆ ಮಾತ್ರ ಸಾಧನೆ ಉತ್ತಮವಾಗುತ್ತದೆ. ಇಲ್ಲದಿದ್ದರೆ ತಾತ್ಕಾಲಿಕ ಹಿನ್ನಡೆ ಆಗುತ್ತದೆ. ಗರುಡನಂತೆ ಈ ದೇವತೆಗಳ ಹಿನ್ನಡೆ

ತೀರ ತಾತ್ಕಾಲಿಕ. ಮನುಷ್ಯಾದಿಗಳ ವರ್ತನೆ ಜನ್ಮ ಜನ್ಮಾಂತರಗಳಲ್ಲಿ ಪ್ರಾಯಃ ಪದೇ ಪದೇ ಇರುತ್ತವೆ. ಆದ್ದರಿಂದ ಭಗವಂತನಲ್ಲಿ ಭಗವಂತನ ಭಕ್ತರಲ್ಲಿ ಎಂದೂ ದ್ರೋಹ ಮಾಡಬಾರದು.

೧೧) ಗರುಡನು ತಾನು ತಿನ್ನಲು ನಿರ್ಧರಿಸಿದ ನಾಗ-ಸುಮುಖ ಆದರೆ ಹರಿ ಚಿತ್ತ ಬೇರೆಯೇ ಆಗಿತ್ತು. ಅವನಿಗೆ ದೀರ್ಘಾಯುಷ್ಯ ಕೊಡಿಸಿದ ವಿಷ್ಣು. ಗುಣಕೇಶಿಯೊಡನೆ ಮದುವೆಯನ್ನು ಮಾಡಿಸಿದ್ದಲ್ಲದೆ, ಸುಮುಖನನ್ನು ಇನ್ನು ಮುಂದೆ ನಿನ್ನೊಡನೆ ಹೊತ್ತುಕೊಂಡು ಸಂಚರಿಸೆಂದು ವಿಷ್ಣುವು ಸುಮುಖನನ್ನು ಗರುಡನ ಎದೆಗೆ ಎಸೆದ. ಗರುಡನು ತನ್ನ ಆಹಾರವನ್ನು ಜನ್ಮಾವಧಿ ಕಾಯುವ ಹೊಣೆಯೂ ಬಿತ್ತು.

'ಹರಿಚಿತ್ತ ಸತ್ಯ. ನರಚಿತ್ತಕ್ಕೆ ಬಂದುದು ಲವಲೇಶ ನಡೆಯದು' ಎಂಬುದೂ ಅಷ್ಟೇ ಸತ್ಯ.

'ಸತ್ಯ ಸಂಕಲ್ಪತೋ ವಿಷ್ಣುಃ ನಾನ್ಯಥಾತು ಕರಿಷ್ಯತಿ' । ಮ.ತಾ.ನಿ. ೧-೯೬

'ಕೇಳಾವನಪೇಕ್ಷೆಗೆ ಮಿಕ್ಕವರಿಲ್ಲ' ಎನ್ನುತ್ತಾರೆ ಗುರುರಾಜರು. ಹೀಗಿರುವಾಗ ಮನುಷ್ಯರ ಸಂಕಲ್ಪಗಳ ಕತೆ ವ್ಯಥೆಗಳೇ ಸರಿ. ಯಾರನ್ನೋ ದೂರವಿರಿಸಲು ಪ್ರಯತ್ನಿಸುತ್ತಾ ದ್ವೇಷಿಸುವ ಹುಲುಮಾನವ ಅವರಡಿಗೇ ಬೀಳಬೇಕಾದ ಸಂದರ್ಭಗಳು ಮನುಷ್ಯರಲ್ಲಿ ಹೇಳಬೇಕೆ? ಆದ್ದರಿಂದ ನಾನು ನಾನು ನನ್ನ ಬಲವೇ ಬಲ, ನನ್ನ ಸಮಾನರಾರು? 'ಕೋಽನ್ಯೋಽಸ್ತಿ ಸದೃಶೋಮಯಾ' ಎನ್ನುವವರು ಇದರಿಂದ ತುಂಬಾ ಕಲಿಯಬೇಕು. ಎಲ್ಲರ ಬಲಗಳಿಗೂ ಬಲ ಶ್ರೀಹರಿ ಹೊರತು ಬೇರಾರೂ ಅಲ್ಲ.

**'ಬಲವಂತೋ ಬಲಿಭ್ಯೋ ಹಿ ದೃಶ್ಯಂತೇ ಪುರುಷರ್ಷಭ'.** ೯೭-೯ ಎನ್ನುವುದು ಸಾರ್ವಕಾಲಿಕ ಸತ್ಯ. ಇದನ್ನು ಅರಿಯದೆ ಯಾರ ಮಾತನ್ನು ಕೇಳದ ದುರ್ಯೋಧನ ಬಿದ್ದ. ಪಾಂಡವರು ಏಳುತ್ತಾರೆ - ಎಂದರು ಕಣ್ವರು ದುರ್ಯೋಧನನಿಗೆ. ಅವನು ಮಾತ್ರ ಮತ್ತಷ್ಟು ಉನ್ಮತ್ತನಾಗಿ ತನ್ನ ತೊಡೆಗಳನ್ನು ತಟ್ಟಿ ಮುಂದೆ ಭೀಮನಿಂದ ತೊಡೆ ಮುರಿಸಿಕೊಂಡ ಎನ್ನುವುದು ಇತಿಹಾಸ.

*****

# ೫೮. ಗಾಲವಚರಿತೆ

ಜನಮೇಜಯನು ಇಲ್ಲಿಯವರೆಗಿನ ಕುರು ಪಾಂಡವ ಕಥೆಯನ್ನು ಕೇಳಿ ದುರ್ಯೋಧನನ ನಡೆಯಲ್ಲಿ ಇಷ್ಟು ಕಂಡಿದ್ದ 'ಅನರ್ಥಕಾರಿ ಕೆಲಸಗಳನ್ನು ಮಾಡುವವನು, ಪರರ ಸ್ವತ್ತಿಗೆ ಆಸೆ ಪಡುವವನು, ಬಂಧುಗಳ ಹಿತೈಷಿಗಳ ಶೋಕವನ್ನು ಹೆಚ್ಚಿಸುವವನು, ಸತ್ತರೂ ಚಿಂತೆಯಿಲ್ಲ ಪರರ ಸ್ವತ್ತನ್ನು ಅಪಹರಿಸಬೇಕೆಂಬ ಹಠಮಾರಿತನ ಇತ್ಯಾದಿ'. ಆದ್ದರಿಂದಲೇ ಇವನನ್ನು ಅವನ ಬಂಧುಗಳು ಏಕೆ ಇಂತಹ ದುಷ್ಟ ವಿಚಾರಗಳಿಂದ ತಡೆಯಲಿಲ್ಲ? ಎಂದು ಕೇಳಿದ ಜನಮೇಜಯ. ಅದಕ್ಕೆ ವೈಶಂಪಾಯನರು, ರಾಜನ್! ಭೀಷ್ಮ ನಾರದಾದಿಗಳ ಹಿತನುಡಿಗಳು ಫಲಕಾರಿಯಾಗಲಿಲ್ಲ, ಎಂದು ತಿಳಿಸುತ್ತಾ ನಾರದರು ದುರ್ಯೋಧನನಿಗೆ ಈ ಸಂಬಂಧಿಯಾಗಿ ಗಾಲವ ಚರಿತೆಯನ್ನು ಉದಾಹರಿಸುತ್ತಾರೆ. ಇಲ್ಲಿ ವ್ಯತ್ಯಾಸವಿಷ್ಟೆ. ಗಾಲವರು ಸಜ್ಜನರು. ದುರ್ಯೋಧನ ಹಾಗಿದ್ದಿಲ್ಲ. ಹಠಮಾತ್ರ ಇಬ್ಬರಲ್ಲೂ ಸಮಾನ. ಸಜ್ಜನರ ಹಠ ಸತ್ಫಲಕ್ಕೆ ಕಾರಣವಾಯಿತು. ದುರ್ಜನ-ದುರ್ಯೋಧನನ ಹಠ ಸ್ವಾತ್ಮ ನಾಶಕ್ಕೆ ಕಾರಣವಾಗುತ್ತದೆ.

ನಾರದರು ಹೇಳಿದ ಗಾಲವರ ಚರಿತೆ ಹೀಗಿದೆ.

ಸರ್ಪರ್ಷಿಗಳಲ್ಲಿ ವಿಶ್ವಾಮಿತ್ರ ವಸಿಷ್ಠರು ಪ್ರಸಿದ್ಧರೇ. ವಿಶ್ವಾಮಿತ್ರರಿಗೆ ವಸಿಷ್ಠರ ಮೇಲೆ ಮೇರೆ ಮೀರಿದ ಕೋಪತಾಪ-ಪೈಪೋಟಿ ತಿಳಿದ ವಿಷಯವೇ. ಒಮ್ಮೆ ಭಾರೀ ತಪಸ್ಸನ್ನು ಮಾಡುತ್ತಿದ್ದ ವಿಶ್ವಾಮಿತ್ರರ ಆಶ್ರಮಕ್ಕೆ, ಅವರನ್ನು ಪರೀಕ್ಷಿಸಲು ಯಮ ಧರ್ಮನು ವಸಿಷ್ಠರ ವೇಷ ಧರಿಸಿ ಬಂದನು. ವಿಶ್ವಾಮಿತ್ರರಿಗೆ ಆಶ್ಚರ್ಯ. ಆದರೆ ಬಂದ ಅತಿಥಿಗೆ ಉಪಚರಿಸಲು ಪರಮಾನ್ನದ ಚರುವನ್ನು ತಯಾರಿಸುವ ಅವರಸರದಲ್ಲಿದ್ದಾಗ ಸುತ್ತ ಮುತ್ತಲ ಆಶ್ರಮ ವಾಸಿಗಳು ವಸಿಷ್ಠರನ್ನು ಅರ್ಘ್ಯಾದಿಗಳಿಂದ ಉಪಚರಿಸಿ ಭೋಜನ ಮಾಡಿಸಿಬಿಟ್ಟರು. ಇತ್ತ ವಿಶ್ವಾಮಿತ್ರರು ಪರಮಾನ್ನ ಭೋಜನ ಮಾಡಿಸಿ ಶ್ರದ್ಧಾ ಗೌರವದಿಂದ ಅದನ್ನು ಹೊತ್ತುಕೊಂಡು ಬಂದರು. ವಸಿಷ್ಠರಿಗೆ ಬಡಿಸ ಬಯಸಿದಾಗ ಅವರು ನನ್ನ ಭೋಜನ ಆಗಿ ಹೋಗಿದೆ. ಮತ್ತೆ ಬರುತ್ತೇನೆ ಎಂದು ಹೇಳಿ ಹೋಗಿಯೇ ಬಿಟ್ಟರು.

ನಿರುಪಾಯರಾದ ವಿಶ್ವಾಮಿತ್ರರು ನಿಂತಲ್ಲಿಯೇ ಚರುವನ್ನು ಹೊತ್ತುಕೊಂಡು ನಿಂತೇ ಇದ್ದರು (ಮೋಟು ಮರದಂತೆ) ಹೀಗೆ ನಿಂತಂತೆಯೇ ನೂರು ವರ್ಷ ಕಳೆದು ಹೋಯಿತು. ವಸಿಷ್ಠರು ಅಲ್ಲಿಯವರೆಗೆ ಬರಲಿಲ್ಲ. ಆ ಸಮಯದಲ್ಲಿ ವಿಶ್ವಾಮಿತ್ರರ ಹಿತೈಷಿ ಹಾಗೂ ಶಿಷ್ಯನಾದ ಗಾಲವ ಋಷಿಗಳು ವಿಶ್ವಾಮಿತ್ರರಿಗೆ ಸಕಲ ವಿಧ ಸೇವೆ ಮಾಡಿ ಗುರೂಪಸತ್ತಿ ಮಾಡಿದರು.

ನೂರು ವರ್ಷಗಳಾಗಿದ್ದರೂ ವಿಶ್ವಾಮಿತ್ರರ ತಲೆಯ ಮೇಲಿನ ಚರು ಬಿಸಿ ಬಿಸಿಯಾಗಿಯೇ ಇತ್ತು. ಆಗ ಮತ್ತೆ ವಸಿಷ್ಠ ವೇಷಧಾರಿ ಯಮ ಬಂದನು. ವಿಶ್ವಾಮಿತ್ರನು

ಕೂಡಲೆ ಗೌರವದಿಂದ ಅವರಿಗೆ ಭೋಜನ ಮಾಡಿಸಲು ಅವರು ಪ್ರೀತೋSಸ್ಮಿ ವಿಪ್ರರ್ಷೇ! ಎಂದು ಹೇಳಿ ಹೊರಟು ಹೋದರು (ವಸಿಷ್ಠ ವೇಷಧಾರಿ)

**(ದುರ್ಯೋಧನನ ಸ್ವಭಾವ ಜನಮೇಜಯನ ಮಾತುಗಳಲ್ಲಿ)**

**'..................... ಪರಾರ್ಥೇ ಲೋಭಮೋಹಿತಂ ।**
**............................ ಮರಣೇ ಕೃತನಿಶ್ಚಯಂ ।**
**ಜ್ಞಾತೀನಾಂ ದುಃಖ ಕರ್ತಾರಂ ಬಂಧೂನಾಂ ಶೋಕವರ್ಧನಂ ।**
**ಕಥಂ ನೈವ ವಿಮಾರ್ಗಸ್ಥಂ ವಾರಯಂತೀಹ ಬಾಂಧವಾಃ ।**
**ಸೌಹೃದಾದ್ವಾ ಸುಹೃತ್‌ಸ್ನಿಗ್ಧೋ ಭಗವಾನ್‌ವಾ ಪಿತಾಮಹಃ' ॥**
**(ಉದ್ಯೋಗ ಪರ್ವ ೧೦೬-೧, ೨, ೩)**

**'ನ ಕರ್ತವ್ಯಶ್ಚ ನಿರ್ಬಂಧೋ ನಿರ್ಬಂಧೋ ಹಿ ಸುದಾರುಣಃ' । ೧೦೬-೬**

ವಿಶ್ವಾಮಿತ್ರರ ಅತಿಥಿ ಪೂಜೆಯ ನಿಷ್ಠೆ:-

**'ಭಕ್ತಂ ಪ್ರಗೃಹ್ಯ ಮೂರ್ಧ್ನಾ ವೈ ಬಾಹುಭ್ಯಾಂ ಸಂಶಿತವ್ರತಃ ।**
**ಸ್ಥಿತಃ ಸ್ಥಾಣುರಿವಾಭ್ಯಾಶೇ ನಿಶ್ಚೇಷ್ಟೋ ಮಾರುತಾಶನಃ' ॥ (೧೦೬-೧೩)**

ಗಾಲವರ ಸೇವೆ

**'ಗೌರವಾದ್ ಬಹುಮಾನಾಚ್ಚ ಹಾರ್ದೇನ ಪ್ರಿಯಕಾಮ್ಯಯಾ' ।**

ವಸಿಷ್ಠ ವೇಷದ ಯಮನಿಂದ ಆತಿಥ್ಯ ಸ್ವೀಕಾರ ಚರು ಬಿಸಿಬಿಸಿಯಾಗಿಯೇ ಇತ್ತು

**'ಅಥ ವರ್ಷಶತೇ ಪೂರ್ಣೇ ಧರ್ಮೋ ಪುನರುಪಾಗಮತ್ ।**
**ಪ್ರತಿಗೃಹ್ಯ ತತೋ ಧರ್ಮಃ ತಥೈವೋಷ್ಣಂ-ತಥಾ ನವಮ್ ।**
**ಭುಕ್ತ್ವಾ ಪ್ರೀತೋSಸ್ಮಿ ವಿಪ್ರರ್ಷೇ..................' (ಅ ೧೦೬- ೧೪, ೧೫, ೧೭.)**

ಇಷ್ಟು ಹೊತ್ತಿಗೆ ಅದೃಷ್ಟವಶಾತ್ ವಿಶ್ವಾಮಿತ್ರರು ತಮ್ಮ ಕ್ಷಾತ್ರ ಸ್ವಭಾವವನ್ನು ತ್ಯಜಿಸಿದವರಾಗಿ ಬ್ರಾಹ್ಮಣ ಸ್ವಭಾವದವರಾಗಿದ್ದರು. ವಸಿಷ್ಠರ ಮಾತಿನಿಂದ ಸಂತುಷ್ಟರಾಗಿದ್ದರು - ವಿಶ್ವಾಮಿತ್ರರು

**'ಕ್ಷತ್ರ ಭಾವಾದಪಗತೋ ಬ್ರಾಹ್ಮಣತ್ವಮುಪಾಗತಃ ।**
**ಧರ್ಮಸ್ಯ ವಚನಾತ್ ಪ್ರೀತೋ ವಿಶ್ವಾಮಿತ್ರಸ್ತದಾಭವತ್' ॥ ಅ ೧೦೬-೧೮**

ಇಷ್ಟು ವರ್ಷ ಅನ್ಯಾದೃಶ ಸೇವೆ ಮಾಡಿದ ಗಾಲವರ ಬಗ್ಗೆ ವಿಶ್ವಾಮಿತ್ರರು ತುಂಬಾ ಸಂತುಷ್ಟರಾಗಿ 'ಗಾಲವ ನಿನ್ನ ಸೇವೆಯಿಂದ ಮೆಚ್ಚುಗೆಯಾಗಿದೆ. ನೀನು ನನ್ನ ಅನುಜ್ಞೆಯಿಂದ ಎಲ್ಲಾದರೂ ಹೋಗು ವತ್ಸ' ಎಂದರು.

ಶಿಷ್ಯ ಗಾಲವರಿಗೆ ತುಂಬಾ ಖುಷಿಯಾಯಿತು. ಗುರುಗಳಿಗೆ ದಕ್ಷಿಣೆಯನ್ನು ಕೊಡಬೇಕೆಂಬ ಹಂಬಲದಿಂದ 'ನಾನೇನು ಗುರುದಕ್ಷಿಣೆ ತಮಗೆ ಕೊಡಲಿ' ಎಂದ.

ಕಾರಣ ದಕ್ಷಿಣೆಯಿಲ್ಲದೆ ಮಾಡಿದ ಸೇವೆ ಸಫಲವಾಗದೆಂದು ಶಾಸ್ತ್ರ. ಅದರಿಂದಲೇ ಮುಂದೆ ಸ್ವರ್ಗ ಮೋಕ್ಷಗಳು. ಆದ್ದರಿಂದ ಯಾವ ದಕ್ಷಿಣೆ ಕೊಡಲಿ ಎಂದು ಮತ್ತೆ ಮತ್ತೆ ಬೇಡಿದ. ವಿಶ್ವಾಮಿತ್ರರು ಮಾತ್ರ ಅದೇನೂ ಬೇಡ. ನಿನ್ನ ಸೇವೆಯೇ ದಕ್ಷಿಣೆ. ಮತ್ತೇನನ್ನೂ ಬೇಡ ಎಂದರೂ. ಮತ್ತೆ ಮತ್ತೆ 'ಕಿಂದದಾನಿ' ಎಂದು ಒತ್ತಾಯಿಸಿದಾಗ ವಿಶ್ವಾ ಮಿತ್ರರಿಗೆ ಬೇಸರವಾಗಿ ಕೋಪದಿಂದ ಹಾಗಿದ್ದಲ್ಲಿ

**'ಏಕತಃ ಶ್ಯಾಮಕರ್ಣಾನಾಂ ಹಯಾನಾಂ ಚಂದ್ರ ವರ್ಚಸಾಂ ।**
**ಅಷ್ಟೌ ಶತಾನಿ ಮೇ ದೇಹಿ ಗಚ್ಛ ಗಾಲವ ಮಾ ಚಿರಂ' ॥** ಎಂದರು.

**(ಅ- ೧೦೬-೨೭)**

'ನೀನು ನನಗೆ ಎಂಟುನೂರು ಕುದುರೆಗಳನ್ನು ಕೂಡಲೆ ತಂದುಕೊಡ ಬೇಕು. ಅವು ಚಂದ್ರನಂತೆ ಬೆಳ್ಳಗೂ ಆದರೆ ಒಂದು ಕಿವಿ ಮಾತ್ರ ಕಪ್ಪಗಿರಬೇಕು. ಬೇಗ ಹೋಗು ನಿಧಾನಿಸಬೇಡ' ಎಂದರು.

ಹೀಗೆ ಗುರುಗಳು ದಕ್ಷಿಣೆ ಕೊಡಬೇಕೆಂದು ಹೇಳಿದಾಗ ಗಾಲವನಿಗೆ ಎದೆ ಕಂಪಿಸಿತು. ತೋಚಲಿಲ್ಲ ಮುಂದೇನೆಂದು ಆಹಾರ ನಿದ್ರೆ ಬಿಟ್ಟ. ದುಃಖದಿಂದ ಬಳಲಿ ಬೆಂಡಾದ. ನಾನು ಇಂತಹ ೮೦೦ ಕುದುರೆಗಳನ್ನು ಹೇಗೆ ಎಲ್ಲಿಂದ ತರಲು ಸಾಧ್ಯ! ನನ್ನಲ್ಲಿ ಯಾವ ಸಂಪನ್ಮೂಲಗಳೂ ಇಲ್ಲ. ಆದ್ದರಿಂದ ಪ್ರತಿಜ್ಞೆ ಪೂರೈಸದೆ ಗುರುಗಳ ಬಳಿಗೆ ಹೋಗಲಾರೆ. ಗುರು ಋಣ ಹೇಗೆ ತೀರಿಸಲಿ? ಇಂತಹ ಬದುಕಿಗಿಂತ ಪ್ರಾಣ ತ್ಯಾಗವೇ ಮೇಲೆಂದು ಭಾವಿಸಿದ ಗಾಲವ. ಗುರುದಕ್ಷಿಣೆ ಕೊಡುವೆನೆಂದು ಪ್ರತಿಜ್ಞೆ ಮಾಡಿದವನ ಹಿಂದೆ ಮಾಡಿದ ಎಲ್ಲ ಇಷ್ಟಾಪೂರ್ತ ನಾಶವಾಗುತ್ತವೆ. **ನಾನು ಕೃತಘ್ನನಾದೆ. ಅಂತಹ ನನಗೆ ಎಲ್ಲಿಯ ಸ್ಥಾನ-ಮಾನ, ಸುಖ. ನಾನು ಯಾರ ವಿಶ್ವಾಸಕ್ಕೂ ಅರ್ಹನಲ್ಲ. ಕೃತಘ್ನನಿಗೆ ಪ್ರಾಯಶ್ಚಿತ್ತವೇ** ಇಲ್ಲ. ಎಂದು ಮರುಗಿದ.

**'ನಾಸ್ತೇ ನ ಶೇತೇ ನಾಹಾರಂ ಕುರುತೇ ಗಾಲವಸ್ತದಾ ।**
**ತ್ವಗಸ್ಥಿಭೂತೋ ಹರಿಣಶ್ಚಿಂತಾಶೋಕಪರಾಯಣಃ ।...**
**ಗತ್ವಾಽಽತ್ಮಾನಂ ವಿಮುಂ ಚಾಮಿ ಕಿಂ ಫಲಂ ಜೀವಿತೇನ ಮೇ ॥**
**ಪ್ರತಿಕರ್ತುಮಶಕ್ತಸ್ಯ ಜೀವಿತಾನ್ಮರಣಂ ವರಂ ।**
**ಪ್ರತಿಶ್ರುತ್ಯ ಕರಿಷ್ಯೇತಿ ಕರ್ತವ್ಯಂ ತದಕುರ್ವತಃ ।**
**ಕುತಃ ಕೃತಘ್ನಸ್ಯ ಯಶಃ ಕುತಃ ಸ್ಥಾನಂ ಕುತಃ ಸುಖಂ ।**
**ಅಶ್ರದ್ಧೇಯಃ ಕೃತಘ್ನೋ ಹಿ ಕೃತಘ್ನೇ ನಾಸ್ತಿ ನಿಷ್ಕೃತಿಃ' ॥**

ಅ ೧೦೭- ೧ ರಿಂದ ೧೦

ಆದ್ದರಿಂದ ಗುರುಕಾರ್ಯ ಮಾಡುವೆನೆಂದು ಹೇಳಿ ಮಾಡದ ನಾನು ಪ್ರಯತ್ನಪೂರ್ವಕ-ವಾಗಿ ಪ್ರಾಣತ್ಯಾಗ ಮಾಡುವೆ.

ಹಿಗೆ ಯೋಚಿಸುತ್ತಾ ಮತ್ತೆ ಪ್ರಾಣತ್ಯಾಗ ಬದಲಾಗಿ ದೇವಾಧಿದೇವನಾದ ತ್ರಿಭುವನೇಶ್ವರನಾದ ಕೃಷ್ಣನನ್ನು ಪ್ರಾರ್ಥಿಸಬಹುದಲ್ಲವೇ? ಬೇರೆ ಯಾರನ್ನೂ ನಾನು

ಯಾಚಿಸಲಾರೆ. ಎಂದೂ ನಾನೂ ಯಾರನ್ನೂ ಯಾಚಿಸಿಲ್ಲ. ಯಜ್ಞದ ವೇಳೆ ಆದರೆ ನಾನು ಎಲ್ಲ ದೇವತೆಗಳ ಗೌರವಕ್ಕೆ ಪಾತ್ರನಾಗಿದ್ದೇನೆ. ಆದ್ದರಿಂದ ದೇವ ಶ್ರೇಷ್ಠನಾದ ಗತಿ ಪ್ರದರಲ್ಲಿ ಶ್ರೇಷ್ಠನಾದ ವಿಷ್ಣುವನ್ನೇ ಶರಣು ಹೋಗುತ್ತೇನೆ. ಯೋಗಿ ಶ್ರೇಷ್ಠನಾದ ಕೃಷ್ಣನನ್ನು ನೋಡ ಬಯಸುವೆ. ಹೀಗೆ ಯೋಚಿಸುತ್ತಿರಲಾಗಿ ಗಾಳವರ ಗೆಳೆಯನಾದ ಗರುಡನು ಗಾಳವರಿಗೆ ಹಿತವನ್ನು ಬಯಸುವವನಾಗಿ ಪ್ರತ್ಯಕ್ಷನಾದನು. ಮತ್ತು ಹೀಗೆ ನುಡಿದನು.

'ಗಾಲವ, ನೀನೆನ್ನ ಅತ್ಯಂತ ಪ್ರೀತಿಯ ಸ್ನೇಹಿತ. ನನ್ನಲ್ಲೀಗ ಬೇಕಾದಷ್ಟು ಐಶ್ವರ್ಯವಿದೆ. ನಿನ್ನ ಬಗ್ಗೆ ವಿಷ್ಣುವಿಗೆ ನಿವೇದಿಸಿದ್ದೇನೆ. ವಿಷ್ಣು ಕೂಡ ನನ್ನ ಪ್ರಾರ್ಥನೆ ಅಂಗೀಕರಿಸಿದ್ದಾನೆ. ನನಗೆ ಐಶ್ವರ್ಯವಿರುತ್ತಿರಲು ನಿನ್ನನ್ನು ಎಲ್ಲಾದರೂ ಸರಿ ಕರೆದುಕೊಂಡು ಹೋಗಿ ನಿನಗೆ ನೆರವಾಗಲು ನನ್ನ ಕರ್ತವ್ಯ ಮಾಡುತ್ತೇನೆ. ಬೇಗ ಏಳು ನಿನ್ನ ಇಚ್ಛೆ ಈಡೇರಿದರೆ ಸಾಕು'.

**'ಅರ್ಥಿತಾ ನ ಮಯಾ ಕಾಚಿತ್ ಕೃತಪೂರ್ವಾ ದಿವೌಕಸಾಂ ।**
**ಮಾನಯಂತಿ ಚ ಮಾಂ ಸರ್ವೇ ತ್ರಿದಶಾ ಯಜ್ಞಸಂಸ್ತರೇ ॥**
**ಅಹಂ ತು ವಿಬುಧಶ್ರೇಷ್ಠಂ ದೇವಂ ತ್ರಿಭುವನೇಶ್ವರಂ ।**
**ವಿಷ್ಣುಂ ಗಚ್ಛಾಮ್ಯಹಂ ಕೃಷ್ಣಂ ಗತಿಂ ಗತಿಮತಾಂ ವರಂ ॥**
**ಪ್ರಣತೋ ದ್ರಷ್ಟುಮಿಚ್ಛಾಮಿ ಕೃಷ್ಣಂ ಯೋಗಿನಮವ್ಯಯಂ ।**
**ಏವಮುಕ್ತೇ ಸಖಾ ತಸ್ಯ ಗರುಡೋ ವಿನತಾತ್ಮಜಃ ।**
**ದರ್ಶಯಾಮಾಸ ತಂ ಪ್ರಾಹ ಸಂಹೃಷ್ಟಃ ಪ್ರಿಯ ಕಾಮ್ಯಯಾ ॥**
**ವಿಭವಶ್ಚಾಸ್ಮಿ ಮೇ ವಿಪ್ರ ವಾಸವಾವರಜೋ ದ್ವಿಜ ।**
**ಪೂರ್ವ ಮುಕ್ತಸ್ತ್ವದರ್ಥಂ ಚ ಕೃತಃ ಕಾಮಶ್ಚ ತೇನ ಮೇ ॥**
**ಸ ಭವಾನೇತು ಗಚ್ಛಾವ ನಯಿಷ್ಯೇ ತ್ವಾಂ ಯಥಾ ಸುಖಂ ।**
**ದೇಶಂ ಪಾರಂ ಪೃಥಿವ್ಯಾ ವಾ ಗಚ್ಛ ಗಾಲವ ಮಾ ಚಿರಂ' ॥**

**ಅ ೧೦೭-೧೩ ರಿಂದ ೧೯**

ಸುಪರ್ಣನು ಮುಂದುವರಿದು ನುಡಿದನು ಗಾಲವಗೆ –

ಅಜ್ಞಾತಯೋನಿಯಾದ (ಯಾರ ಕಾರಣವು ಯಾರಿಗೂ ತಿಳಿದಿಲ್ಲವೋ ಅವನು ಕಾರಣ ಅವನಿಗೆ ಯಾರೂ ಜನಕರೂ-ಕಾರಣರೂ ಇಲ್ಲವೇ ಇಲ್ಲ ಆದ್ದರಿಂದ ರಮಾದಿ ಎಲ್ಲ ದೇವತೆಗಳಿಗೂ ಕಾರಣ ವಿಷ್ಣು. ಅವನಿಗೆ ಮಾತ್ರ ಯಾರೂ ಜನಕರಿಲ್ಲ). ವಿಷ್ಣುವಿನಿಂದ ನಾನು ಆಜ್ಞಪ್ತನಾಗಿದ್ದೇನೆ. ನಿನಗೆ ಸಹಾಯ ಮಾಡಲು. ನಿನ್ನನ್ನು ಯಾವ ದಿಕ್ಕಿಗೆ ಕರೆದೊಯ್ಯಲಿ. ಎಲ್ಲಿ ನಿನ್ನ ಕೆಲಸವಾಗುತ್ತೋ ಅಲ್ಲಿಗೆ ಹೋಗೋಣ. ನಿನಗೆ ಪೂರ್ವಾದಿ ದಿಕ್ಕುಗಳ ಪರಿಚಯ ಮಾಡಿಕೊಡುತ್ತೇನೆ. ಮೊದಲು ಪೂರ್ವ ದಿಕ್ಕನ್ನು ಪರಿಚಯಿಸುತ್ತೇನೆ.

**ಪೂರ್ವದ ಮಹಿಮೆಗಳು** – ಪೂರ್ವ ದಿಕ್ಕಿನಲ್ಲಿ ೧) ಸೂರ್ಯನು ಮೊದಲು ಉದಯಿಸುವ ದಿಕ್ಕು ೨) ಪ್ರಾತಃ ಸಂಧ್ಯೆಯಲ್ಲಿ ಸಾಧ್ಯರು ತಪಸ್ಸು ಮಾಡುವರು

೩) ಜಗತ್ತೆಲ್ಲ ವ್ಯಾಪ್ತವಾಗಿದೆ ಪೂರ್ವದಿಂದ ೪) ಗಾಯತ್ರೀ ಮಂತ್ರಾನುಷ್ಠಾನ ನಡೆಯುವುದು. ೫) ದಕ್ಷನ ಮಕ್ಕಳು ಅದಿತಿಯೇ ಮೊದಲಾದವರಿಂದ ಪ್ರಜೋತ್ಪಾದನೆಯಾದುದು ಇಲ್ಲಿಯೇ. ವೃದ್ಧಿ ಹೊಂದಿದ್ದು ಇಲ್ಲಿಯೇ. ೬) ದೇವತೆಗಳ ಸಾಮ್ರಾಜ್ಯ ಲಕ್ಷ್ಮೀ ಸ್ಥಾನ ೭)ದೇವತೆಗಳ ತಪೋಸ್ಥಾನ ೮) ದೇವತಾ ಕಾರ್ಯಗಳನ್ನು ಮಾಡಬೇಕಾದ ಸ್ಥಾನ ೯) ಬ್ರಹ್ಮನಿಂದ ಎಲ್ಲ ವೇದಗಳ ಉಚ್ಚಾರಣೆಯಾದುದು ೧೦) ಸಾವಿತ್ರೀ ಮಂತ್ರೋಪದೇಶವಾದ ಸ್ಥಳ ೧೧) ಸೂರ್ಯನು ಯಾಜ್ಞವಲ್ಕ್ಯರಿಗೆ ಯಜುರ್ವೇದ ಮಂತ್ರಗಳನ್ನು ಕೊಟ್ಟ ಸ್ಥಳ ೧೨) ದೇವತೆಗಳು ಸೋಮಪಾನ ಮಾಡಿದ್ದು ೧೩) ವಸಿಷ್ಠರು ಜನಿಸಿದ್ದು, ನಿಧನರಾದದ್ದು (ನಿಮಿಯಿಂದ) ಸಪ್ತರ್ಷಿಗಳಲ್ಲಿ ಒಬ್ಬರಾದುದು; ೧೪) ಓಂಕಾರದ ಸ್ವರಗಳ ಆವಿರ್ಭಾವ, ೧೫) ಮುನಿಗಳು ಹವಿರ್ಧೂಮಪಾನ ಮಾಡುವುದು ೧೬) ಮೂರು ಲೋಕಗಳಿಗೂ ಸ್ವರ್ಗಕ್ಕೂ, ಸುಖಕ್ಕೂ ಹೆಬ್ಬಾಗಿಲು. ಇತ್ಯಾದಿ ಮಹಿಮೆಯುಳ್ಳದ್ದು ಪೂರ್ವದಿಕ್ಕು. ಗಾಲವ! ನೀನು ಇಷ್ಟ ಪಟ್ಟರೆ ಈ ದಿಕ್ಕನ್ನು ಪ್ರವೇಶಿಸೋಣ.

**'ಅನುಶಿಷ್ಟೋಽಸ್ಮಿ ದೇವೇನ ಗಾಲವಾಜ್ಞಾತಯೋನಿನಾ ।**
**ಬ್ರೂಹಿ ಕಾಮಂ ತು ಕಾಂ ಯಾಮಿ ದ್ರಷ್ಟುಂ ಪ್ರಥಮತೋ ದಿಶಂ ॥**
**ಸವಿತಾ ಯತ್ರ ಸಂಧ್ಯಾಯಾಂ ಸಾಧ್ಯಾನಾಂ ವರ್ತತೇ ತಪಃ ।**
**ಯಸ್ಯಾಂ ದಿಶಿ ಪ್ರವೃದ್ಧಾಶ್ಚ ಕಶ್ಯಪಸ್ಯಾತ್ಮಸಂಭವಾಃ ॥**
**ಏತತ್ ದ್ವಾರಂ ತ್ರಿಲೋಕಸ್ಯ ಸ್ವರ್ಗಸ್ಯ ಚ ಸುಖಸ್ಯ ಚ' ॥**

ಅ– ೧೦೮–೧ ರಿಂದ ೧೮

## ಗರುಡನಿಂದ ದಕ್ಷಿಣ ದಿಕ್ಕಿನ ವರ್ಣನೆ

ಗಾಲವ! ಹಿಂದೆ ಸೂರ್ಯನು ಶ್ರೌತ ವಿಧಿಗೆ ಅನುಗುಣವಾಗಿ ಆಚಾರ್ಯ ಕಶ್ಯಪರಿಗೆ ದಾನವಾಗಿ ಕೊಟ್ಟ ದಿಕ್ಕೇ ದಕ್ಷಿಣ. ಯಜ್ಞದ ದಕ್ಷಿಣೆ ರೂಪದಲ್ಲಿ ದಾನ ಮಾಡಿದ್ದರಿಂದ ಈ ದಿಕ್ಕಿಗೆ ದಕ್ಷಿಣಾ ಎಂಬ ಹೆಸರು ಬಂದಿತು.

**'ಇಯಂ ವಿವಸ್ವತಾ ಪೂರ್ವಂ ಶ್ರೌತೇನ ವಿಧಿನಾ ಕಿಲ ।**
**ಗುರವೇ ದಕ್ಷಿಣಾ ದತ್ತಾ ದಕ್ಷಿಣೇತ್ಯುಚ್ಯತೇ ಚ ದಿಕ್' ॥** ೧೦೯–೧

ದಕ್ಷಿಣದ ಹಿರಿಮೆ

೧) ಮೂರು ಲೋಕಗಳ ಪಿತೃದೇವತೆಗಳು (ಊಷ್ಮಪಾನ ಮಾಡುವ ಶಾಖ ಉಷ್ಣ–ಅಗ್ನಿ) ಇರುವುದು ಇಲ್ಲಿಯೇ ೨) ಊಷ್ಮಪರೆಂಬ ಪಿತೃಗಳು ಇಲ್ಲಿರುತ್ತಾರೆ ೩) ವಿಶ್ವೇ ದೇವತೆಗಳು ಪೂಜಿತರಾಗಿ ಪಿತೃಗಳಿಗೆ ಸಮಾನ ಭಾಗ ಪಡೆಯುತ್ತಾರೆ. ೪) ಧರ್ಮದೇವತೆಯ ಎರಡನೇ ಬಾಗಿಲು ೫) ಪ್ರಾಣಿಗಳ ಆಯ ಪ್ರಮಾಣ ನಿರ್ಧಾರವಾಗುತ್ತದೆ. ೬) ಚಿತ್ರ ಗುಪ್ತರಿಂದ ಲೆಕ್ಕಾಚಾರವಾಗುತ್ತದೆ. ಕರ್ಮಾಕರ್ಮಗಳ ಫಲಾಶ್ರಮ ಇಲ್ಲೇ ೭) ಮರಣಾ ನಂತರ ಪ್ರಾಣಿಗಳು ಹೋಗುವುದು ೮) ರೈವತ ರಾಜ ಹಿಂದೆ ಸಾಮಗಾನ ಕೇಳಿ ಕಾಲದ ಪರಿವೆಯಿಲ್ಲದೇ ಹೋದುದು ಇದೇ ದಿಕ್ಕಿನಲ್ಲಿ

೯) ರಾವಣ ವರ ಪಡೆದುದು ೧೦) ವೈತರಣೀ ನದಿ ಇರುವುದು ೧೧) ನಾನು ಹಿಂದೆ ನನ್ನ ಆಹಾರ ಪಡೆದುದು ಇದೇ ದಿಕ್ಕಿನಲ್ಲಿ (ಒಂದು ದೊಡ್ಡ ಆನೆ-ಆಮೆಗಳನ್ನು) ೧೨) ಪ್ರಾಣಿಗಳ ಮರಣಾ ನಂತರದ ಪ್ರಯಾಣದ ಮಧ್ಯೆ ದಟ್ಟವಾದ ಕತ್ತಲು ಇರುತ್ತದೆ. ಇತ್ಯಾದಿ.

ಈ ದಿಕ್ಕಿಗೆ ಹೋದರೆ ನಿನ್ನ ಕೆಲಸವಾಗುವುದಾದಲ್ಲಿ ಹೋಗೋಣ

**'ಅತ್ರ ಲೋಕತ್ರಯಸ್ಯಾಸ್ಯ ಪಿತೃಪಕ್ಷಃ ಪ್ರತಿಷ್ಠಿತಃ ।**
**ಅತ್ರ ವಿಶ್ವೇ ಸದಾ ದೇವಾಃ ಪಿತೃಭಿಃ ಸಾರ್ಧಮಾಸತೇ ।**
**ಏತದ್ ದ್ವಿತೀಯಂ ದೇವಸ್ಯ ದ್ವಾರಮಾಚಕ್ಷತೇ ದ್ವಿಜ ।**
**ಅತ್ರ ಧರ್ಮಶ್ಚ ಸತ್ಯಂ ಚ ಕರ್ಮ ಚಾತ್ರ ನಿಗದ್ಯತೇ ।**
**ಅತ್ರ ಸಾಮಾನಿ ಗಾಥಾಭಿಃ ಶ್ರುತ್ವಾ ಗೀತಾನಿ ರೈವತಃ ।**
**ರಾವಣೇನ ತಪಶ್ಚೀರ್ತ್ವಾ ಸುರೇಭ್ಯೋಽಮರತಾ ವೃತಾ ।**
**ಅತ್ರ ವೈತರಣೀ ನಾಮ ನದೀ ವಿತರಣೈರ್ವೃತಾ ।**
**ಅತ್ರ ಗತ್ವಾ ಸುಖಸ್ಯಾಂತಂ ದುಃಖಸ್ಯಾಂತಂ ಪ್ರಪದ್ಯತೇ ।**
**ಅತ್ರಾಹಂ ಗಾಲವ ಪುರಾ ಕ್ಷುಧಾರ್ತಃ ಪರಿಚಿಂತಯನ್ ।**
**ಲಬ್ಧವಾನ್ ಯುಧ್ಯಮಾನೌ ದ್ವೌ ಬೃಹಂತೌ ಗಜಗಚ್ಛಪೌ' ॥**

**ಅ ೧೦೯- ೧ ರಿಂದ ೨೧**

**ಗರುಡನಿಂದ ಪಶ್ಚಿಮ ದಿಗ್ವರ್ಣನೆ**

ಗಾಲವರ ಮೌನವನ್ನು ತಿಳಿದ ಗರುಡನು ಪಶ್ಚಿಮ ದಿಙ್ಮಹಿಮೆಯನ್ನು ವರ್ಣಿಸಿದನು. ಗಾಲವ! ಗೆಳೆಯನೇ!

೧) ಇದು ವರುಣನ ಅತ್ಯಂತ ಪ್ರೀತಿಯ ದಿಕ್ಕು ಆತನ ಉಗಮ ಹಾಗೂ ಆಶ್ರಯ ಸ್ಥಾನ ೨) ಇಲ್ಲಿಯೇ ಸೂರ್ಯ ತನ್ನ ಕಿರಣಗಳನ್ನು ವಿಸರ್ಜಿಸುತ್ತಾನೆ. ಆದ್ದರಿಂದ ಪಶ್ಚಿಮಾ ಎಂದು ಹೆಸರು ೩) ಕಶ್ಯಪರು ಜಲಚರಗಳ ಆಧಿಪತ್ಯ – ನೀರಿನ ರಕ್ಷಣೆಗಾಗಿ ವರುಣನನ್ನು ಒಡೆಯನನ್ನಾಗಿ ಮಾಡಿದರು ೪) ಚಂದ್ರೋದಯ ಇಲ್ಲಿ ಆಗುತ್ತದೆ. ವರುಣನ ಸಮೀಪದಲ್ಲಿದ್ದು ಆರು ವಿಧ ರಸಗಳನ್ನು ಪಾನ ಮಾಡಿ ತಾರುಣ್ಯ ಪಡೆದು ಇಲ್ಲಿ ಉದಯಿಸುತ್ತಾನೆ. ೫) ವಾಯು ಹಾಗೂ ದೈತ್ಯರಿಗೂ ಹಿಂದೆ ಯುದ್ಧವಾಗಿ ದೈತ್ಯರು ಸೋತದ್ದು ಇಲ್ಲೇ ೬) ಹಗಲು ನಿದ್ರಿಸುತ್ತಿದ್ದ ಗರ್ಭಿಣಿಯಾದ ದಿತಿಯನ್ನು ಇಂದ್ರ ಪ್ರವೇಶಿಸಿ ಗರ್ಭವನ್ನು ತುಂಡರಿಸಿದಾಗ ಮರುದ್ಗಣ ಹುಟ್ಟಿದ್ದುದು ಇಲ್ಲೇ ೭) ಮಂದರ ಪರ್ವತದ ಬೇರು ಭಾಗವಿರುವುದು ಇಲ್ಲೇ ೮) ರಾಹುವಿನ ಮುಂಡ ಈ ಸಮುದ್ರ ಮಧ್ಯದಲ್ಲಿ ಇರುವುದು. ೯) ಹರಿಮೇಧ ಋಷಿಯ ಮಗಳು ಧ್ವಜವತಿ ಸೂರ್ಯನ ಆದೇಶದ ಮೇರೆಗೆ ಇಲ್ಲಿಯೇ ನಿಂತಿದ್ದಾಳೆ. ೧೦) ಇಲ್ಲಿಯೇ ಎಲ್ಲ ನಕ್ಷತ್ರಗಳು ಸೂರ್ಯ ಮಂಡಲ ಪ್ರವೇಶಿಸುತ್ತವೆ ೧೧) ಅನಂತನ ನಿವಾಸ ೧೨) ವಿಷ್ಣುವಿನ ಸ್ಥಾನ ವಾಯುವಿನ ಸ್ಥಾನವೂ ಇಲ್ಲಿಯೇ ಕಶ್ಯಪರ ಆಶ್ರಯವೂ ಇಲ್ಲಿಯೇ.

ಗಾಲವ – ನಿನ್ನ ಅಪೇಕ್ಷೆಯಿದ್ದಲ್ಲಿ ಈ ದಿಕ್ಕಿಗೆ ಹೋಗೋಣವೇ

**'ಇಯಂದಿಕ್ ದಯಿತಾ ರಾಜ್ಞೋ ವರುಣಸ್ಯ ತು ಗೋಪತೇಃ ।**
**ಅತ್ರ ಪಶ್ಚಾದಹಃ ಸೂರ್ಯೋ ವಿಸರ್ಜಯತಿ ಗಾಃ ಸ್ವಯಂ ॥**
**ಯಾದಸಾಮತ್ರ ರಾಜ್ಯೇನ ಸಲಿಲಸ್ಯ ಚ ಗುಪ್ತಯೇ ।**
**ಕಶ್ಯಪೋ ಭಗವಾನ್ ದೇವೋ ವರುಣಂ ಸ್ಮಾಭ್ಯಷೇಚಯತ್ ।**
**ಅತ್ರ ದೇವೀಂ ದಿತಿಂ ಸುಪ್ತಾಂ ಆತ್ಮ ಪ್ರಸವಧಾರಿಣೀಂ ।**
**ವಿಗರ್ಭಾಮಕರೋತ್ ಶಕ್ರೋ ಯತ್ರ ಜಾತೋ ಮರುದ್ಗಣಃ ॥**
**ಅತ್ರ ಜ್ಯೋತೀಂಷಿ ಸರ್ವಾಣಿ ವಿಶಂತ್ಯಾದೀತ್ಯ ಮಂಡಲಂ ।**
**ಅನಾದಿ ನಿಧನಸ್ಯಾತ್ರ ವಿಷ್ಣೋಃ ಸ್ಥಾನಮನುತ್ತಮಮ್ ।**
**ಅತ್ರಾನಲಸಖಸ್ಯಾಪಿ ಪವನಸ್ಯ ನಿವೇಶನಂ । ಇತ್ಯಾದಿ** –ಅ ೧೧೦/೧–೨೦

## ಗರುಡನಿಂದ ಉತ್ತರ ದಿಕ್ಕಿನ ವರ್ಣನೆ

ತನ್ನೆಡೆಗೆ ಬರುವವರನ್ನು ಪಾಪಗಳಿಂದ ಮುಕ್ತರನ್ನಾಗಿಸುವದರಿಂದ ಹಾಗೂ ಮೋಕ್ಷ ಸುಖವನ್ನು ಅನುಭವಿಸುವುದರಿಂದ ಆ ಕಾರಣದಿಂದಾಗಿ ಅಂತಹ ಉತ್ತಾರಣ ಬಲದಿಂದಾಗಿ ಈ ದಿಕ್ಕನ್ನು ಉತ್ತರಾ ಎಂದು ಕರೆಯುತ್ತಾರೆ.

(ಉತ್ತರಾಶಾಂ ವಿಶೋಕಾಂ – ಮ.ತಾ.ನಿ. ಅ ೯)

**'ಯಸ್ಮಾದುತ್ತಾರ್ಯತೇ ಪಾಪಾತ್ ಯಸ್ಮಾನ್ನಿಃಶ್ರೇಯಸೋಽಶ್ನುತೇ ।**
**ಅಸ್ಮಾದುತ್ತಾರಣಬಲಾದುತ್ತರೇತ್ಯುಚ್ಯತೇ ದ್ವಿಜ ॥ '** ೧೧–೧

ಇದರ ಹಲವು ಮಹಿಮೆಗಳು ಹೀಗಿವೆ (೧) ಇದು ಸುವರ್ಣದ ಸ್ಥಾನ – ಪೂರ್ವ ಪಶ್ಚಿಮಗಳ ಮಧ್ಯಭಾಗ ಇಲ್ಲಿ ಕ್ರೂರಿ, ಅಜಿತೇಂದ್ರಿಯ, ಅಧರ್ಮಿ ವಾಸಿಸನು. (೨) ಇಲ್ಲಿ ಬದರೀಕಾಶ್ರಮವಿದೆ. ಇಲ್ಲಿ ನರ ನಾರಾಯಣರು ಬ್ರಹ್ಮನೂ ಇದ್ದಾರೆ. (೩) ಹಿಮವತ್ಪೃಷ್ಠದಲ್ಲಿ ಮಹೇಶ್ವರನು ಪಾರ್ವತೀ ಸಮೇತ ಕೈಲಾಸ ಪರ್ವತದಲ್ಲಿ ನೆಲೆಸಿರುವನು. (೪) ಈ ದಿಕ್ಕಿನಲ್ಲಿ ಗಗನದಿಂದ ಬಿದ್ದ ಗಂಗೆಯನ್ನು ಮಹೇಶ್ವರ ತನ್ನ ಜಟೆಯಲ್ಲಿ ಧರಿಸಿ ನಂತರ ಭೂಲೋಕಕ್ಕೆ ಹರಿಸಿದನು (೫) ಇಲ್ಲಿಯೇ ಕುಬೇರನು ರಾಕ್ಷಸ ಯಕ್ಷ ಗಂಧರ್ವ ರಾಜನಾಗಿ ಅಭಿಷೇಕವಾದುದು (೬) ರಾಕ್ಷಸರಿಂದ ರಕ್ಷಿತವಾದ ಸೌಗಂಧಿಕವನವು ಇಲ್ಲಿಯೇ (೭) ಗಂಗಾ ಮಹಾದ್ವಾರವನ್ನು ಧಾಮವೆನ್ನುತ್ತಾರೆ. (೮) ಇಲ್ಲಿಯ ಮುನಿಗಳ ತಪಸ್ಸು ಮೊದಲಾದ ಯಾವ ವಿವರಗಳೂ ನರ ನಾರಾಯಣರನ್ನು ಹೊರತು ಪಡಿಸಿ ಯಾರಿಗೂ ತಿಳಿಯದು (೯) ಇಲ್ಲಿ ಜಾಂಬೂನದ ಸರೋವರವಿದೆ. (೧೦) ತ್ರಿವಿಕ್ರಮನ ಮೊದಲ ಪಾದ ಇಲ್ಲಿಯೇ (ವಿಷ್ಣುಪಾದ) (೧೧) ಮರುತ್ತ ರಾಜನು ಯಜ್ಞದಿಂದ ತೃಪ್ತಿ ಪಡಿಸಿದ್ದು ಇಲ್ಲಿಯೇ ಇತ್ಯಾದಿ.

**'ಮಾರ್ಗ: ಪಶ್ಚಿಮ ಪೂರ್ವಾಭ್ಯಾಂ ದಿಗ್ಭ್ಯಾಂ ವೈ ಮಧ್ಯಮಃ ಸ್ಮೃತಃ ।**
**ಅತ್ರ ನಾರಾಯಣಃ ಕೃಷ್ಣೋ ಜಿಷ್ಣುಶ್ಚೈವ ನರೋತ್ತಮಃ ।**

ಬದರ್ಯಾಮಾಶ್ರಮೇ ಪದೇ ತಥಾ ಬ್ರಹ್ಮಾ ಚ ಶಾಶ್ವತಃ ॥
ಅತ್ರ............... ಧನದೋಽಪ್ಯಭಿಷೇಚಿತಃ ।
ಅತ್ರ ಗಂಗಾಮಹಾದ್ವಾರಂ ರಕ್ಷಂತಿ ದ್ವಿಜಸತ್ತಮ ।
ಅತ್ರ ವಿಷ್ಣುಪದಂ ನಾಮ ಕ್ರಮತಾ ವಿಷ್ಣುನಾ ಕೃತಂ ॥
ಉತ್ತರೇತಿ ಪರಿಖ್ಯಾತಾ ಸರ್ವಕರ್ಮಸು ಚೋತ್ತರಾ ।
ಏವಮೇಷಾ ದ್ವಿಜಶ್ರೇಷ್ಠ ಗುಣೈರನ್ಯೈರ್ದಿಗುತ್ತರಾ' ॥ ಇತ್ಯಾದಿ

– ಅ ೧೧೧– ೧೧ರಿಂದ ೨೮

ಗರುಡನಂತಹ ಗೆಳೆಯ ಗಾಲವನಿಗೆ ಸಿಕ್ಕಿದ್ದು ದೈವೀ ಕೃಪೆಯಿಂದ. ಆದ್ದರಿಂದಲೇ ಗರುಡ ನಿನ್ನ ಕೆಲಸದ ಸಿದ್ಧಿಗಾಗಿ ಇಡೀ ಪೃಥ್ವಿಯನ್ನೇ ತೋರಿಸುತ್ತೇನೆ. ಕರೆದುಕೊಂಡು ಹೋಗುವೆ. ನನ್ನ ಹೆಗಲ ಮೇಲೆ ಏರು ಎಂದ. ಆಗ ಗಾಲವ 'ಹಾಗಿದ್ದರೆ ನನ್ನನ್ನು ಯಾವ ದಿಕ್ಕಿನಲ್ಲಿ ಧರ್ಮದ ಎರಡು ಕಣ್ಣುಗಳಿರುವ (ಸೂರ್ಯ ಚಂದ್ರರು... ಇದ್ದಾರೋ) ಆ ಪೂರ್ವದಿಕ್ಕಿಗೆ ಕರೆದುಕೊಂಡು ಹೋಗು ಎಂದು ಹೇಳಿದ ಹೆಗಲೇರಿದ. ಅಲ್ಲಿ ಸತ್ಯಧರ್ಮ ದೇವತೆಗಳ ಸನ್ನಿಧಾನಗಳಿವೆಯಷ್ಟೇ. ಅವರನ್ನು ನೋಡಬಯಸಿದ್ದೇನೆಂದ' ಗರುಡನು ಗೆಳೆಯನನ್ನು ಕೂರಿಸಿಕೊಂಡು ವೇಗವಾಗಿ ಹಾರಿದ.

ಆಗ ಗಾಲವ ನುಡಿದ. ಹಾರುವ ನೀನು ಸೂರ್ಯನಂತೆ ಕಾಣುತ್ತಿರುವೆ. ನಿನ್ನ ವೇಗದ ಚಂಡಮಾರುತದಿಂದ ದಾರಿಯಲ್ಲಿನ ವೃಕ್ಷಗಳೂ, ಜಲಚರಗಳೂ, ಆಕಾಶದೆಡೆಗೆ ಸೆಳೆಯಲ್ಪಟ್ಟಂತೆ ತೋರುತ್ತಿವೆ. ಭೂ ಜಲಚರಗಳೆಲ್ಲ ನಿನ್ನ ವೇಗದಿಂದ ಪೀಡಿಸಲ್ಪಟ್ಟಂತೆ ತೋರುತ್ತಿವೆ. ನನ್ನ ಪರಿಸ್ಥಿತಿಯಂತೂ ಚಿಂತಾಜನಕ. ಕಿವಿಗಳು ಕಿವುಡಾಗಿವೆ. ನಾನೆಲ್ಲಿಗೆ ಹೋಗುತ್ತಿದ್ದೇನೆಂದೇ ತಿಳಿಯದಾಗಿದೆ. ನಾನು ಬದುಕುವುದೂ ದುಸ್ತರ. ಸತ್ತರೆ ನಿನಗೆ ಬ್ರಹ್ಮಾಹತ್ಯಾದೋಷ ಬಂದೀತು. ಕಾರಣ ಬೇಗನೇ ವೇಗ ಕಡಿಮೆ ಮಾಡಿ ಅಗ್ನಿಯ ಉಪಶಮನ ಮಾಡು. ನಿನ್ನ ಪ್ರಕಾಶವನ್ನು ನೋಡಲಾರೆ. ನೀನು ಚಂದ್ರನಂತೆ ತಂಪಾಗು'.

'ನಾನು ನನ್ನ ಗುರುಗಳಿಗೆ ಕೊಡಬೇಕಾದ ೮೦೦ ಕುದುರೆಗಳ ಕಾರ್ಯ ಫಲಪ್ರದವಾಗುವುದು ಹೇಗೆಂದು ತೋರದಾಗಿದೆ. ನಾನು ಬದುಕುವುದೇ ಕಷ್ಟವಾಗುತ್ತಿದೆ. ನನ್ನ ಬಳಿ ಧನವಿಲ್ಲ. ಅಪಾರ ಧನಿಯಾದ ಸ್ನೇಹಿತನೂ ನನಗಿಲ್ಲ'. ಎಂದು ಗಾಲವ ಕರುಣೆಯಿಂದ ಮರುಗಿದ.

ಆಗ ಗರುಡನು, ಗಾಲವನಿಗೆ 'ಆತ್ಮ ಹತ್ಯೆ ವಿಚಾರ ಮಾಡುವ ನೀನು ನಿಜವಾಗಿಯೂ ಬುದ್ಧಿವಂತನಲ್ಲ. ಮೃತ್ಯುವು ತಾನಾಗಿ ಬರುವುದಿಲ್ಲ. ಅದು ಕಾಲ ಸ್ವರೂಪಿಯಾದ ಪರಮೇಶ್ವರನೇ. ಗುರುದಕ್ಷಿಣೆ ವಿಚಾರ ನನಗೆ ನೀನು ಈ ಮೊದಲೇ ಏಕೆ ಹೇಳಲಿಲ್ಲ? ಅದು ಕಷ್ಟಕರವಾದುದೇನೂ ಅಲ್ಲ. ಅದಕ್ಕೂ ಉಪಾಯವಿದೆ. ಸದ್ಯ ಮುಂದೆ ಕಾಣುವ ಋಷಭ ಪರ್ವತವು ಸಮುದ್ರದ ದಂಡೆಯ ಮೇಲಿದೆ. ಅಲ್ಲಿ ಸ್ವಲ್ಪ ವಿಶ್ರಮಿಸಿ, ಊಟ ಮಾಡಿ ನಂತರ ಹಿಂದಿರುಗುವ ಆತಂಕ ಬೇಡ' ಎಂದನು.

ಗಾಲವ ಉವಾಚ

'ನಯ ಮಾಂ ತಾರ್ಕ್ಷ್ಯ ಪೂರ್ವೇಣ ಯತ್ರ ಧರ್ಮಸ್ಯ ಚಕ್ಷುಷೀ ।
ಅತ್ರ ಸತ್ಯಂ ಚ ಧರ್ಮಶ್ಚ ತ್ವಯಾ ಸಮ್ಯಕ್ ಪ್ರಕೀರ್ತಿತಃ' ॥ ೧೧೨-೧, ೩

ಕ್ರಮಮಾಣಸ್ಯ ತೇ ರೂಪಂ ದೃಶ್ಯತೇ ಪನ್ನಗಾಶನ ।
ಭಾಸ್ಕರಸ್ಯೇವ ಪೂರ್ವಾಹ್ನೇ ಸಹಸ್ರಾಂಶೋರ್ವಿವಸ್ವತಃ ॥
ಪಕ್ಷವಾತ ಪ್ರಣುನ್ನಾನಾಂ ವೃಕ್ಷಾಣಾಂ ಅನುಗಾಮಿನಾಂ ।
ಸಸಾಗರವನಾಮುರ್ವೀಂ ಸಶೈಲ ವನಕಾನನಾಂ ।
ಆಕರ್ಷನ್ನಿವ ಚಾಭಾಸಿ........................................ ।
ಮಹಾರ್ಣವಸ್ಯ ಚ ರವೈಃ ಶ್ರೋತ್ರೇ ಮೇ ಬಧಿರೇ ಕೃತೇ ।
ನ ಶೃಣೋಮಿ ನ ಪಶ್ಯಾಮಿ ನಾತ್ಮನೋ ವೇದ್ಮಿ ಕಾರಣಂ ।
ಶನೈಃ ಸ ತು ಭವಾನ್ ಯಾತು ................................।
ನ ದೃಶ್ಯತೇ ರವಿಸ್ತಾತ ನ ದಿಶೋ ನ ಚ ಖಂ ಖಗ ।
ಸನ್ನಿವರ್ತ ಮಹಾಭಾಗ ನ ವೇಗಂ ವಿಷಹಾಮಿ ತೇ ।
ತತೋಽಯಂ ಜೀವಿತ ತ್ಯಾಗೇ ದೃಷ್ಟೋ ಮಾರ್ಗೋ ಮಯಾಽಽತ್ಮನಃ।
ನೈವ ಮೇಽಸ್ತಿ ಧನಂ ಕಿಂಚಿನ್ನ ಧನೇನಾನ್ವಿತಃ ಸುಹೃತ್' ॥

ಗರುಡ ಉವಾಚ

'ನಾತಿ ಪ್ರಜ್ಞೋಽಸಿ ವಿಪ್ರರ್ಷೇ ಯೋಽಽತ್ಮಾನಂ ತ್ಯಕ್ತುಮಿಚ್ಛಸಿ ।
ನ ಚಾಪಿ ಕೃತ್ರಿಮಃ ಕಾಲಃ ಕಾಲೋ ಹಿ ಪರಮೇಶ್ವರಃ ।
ಕಿಮಹಂ ಪೂರ್ವಮೇವೇಹ ಭವತಾ ನಾಭಿ ಚೋದಿತಃ ।
ಉಪಾಯೋಽತ್ರ ಮಹಾನಸ್ತಿ ಯೇನೈತದುಪಪದ್ಯತೇ' ॥ ಇತ್ಯಾದಿ
೧೧೨ - ೧೮ಂದ೨೨

ನಾರದರು ಗಾಲವ ಚರಿತೆಯನ್ನು ಮುಂದುವರೆಸುತ್ತಾ ದುರ್ಯೋಧನನಿಗೆ ಹೇಳಿದರು. ನಂತರ ಗರುಡ ಹಾಗೂ ಗಾಲವರು (ಇಬ್ಬರು ದ್ವಿಜರು-ದ್ವಿಜ ಶಬ್ದಕ್ಕೆ ಪಕ್ಷಿ ಹಾಗೂ ಬ್ರಾಹ್ಮಣ ಎಂದು ಅರ್ಥಗಳಿವೆ) ಋಷಭ ಪರ್ವತದಲ್ಲಿಳಿದು ಅಲ್ಲಿದ್ದ **'ಶಾಂಡಿಲೀ'** ಎಂಬ ತಪಸ್ವಿನಿಯಾದ ಬ್ರಾಹ್ಮಣ ಸ್ತ್ರೀಯನ್ನು ಕಂಡರು. ಗರುಡ ಆಕೆಯನ್ನು ಅಭಿವಂದಿಸಿದ. ಗಾಲವನು ಆಕೆಯನ್ನು ಸತ್ಕರಿಸಿದ. ಶಾಂಡಿಲಿಯು ಅವರನ್ನು ಆಸನ ನೀಡಿ ಸ್ವಾಗತಿಸಿದಳು. ಅಲ್ಲದೆ ಅವರಿಗೆ ವೈಶ್ವ ದೇವಾದಿ ಸಂಸ್ಕೃತ ಅನ್ನವನ್ನು ನೀಡಿದಳು. ಅವರು ಅದನ್ನುಂಡು ತೃಪ್ತರಾದರು. ನಂತರ ಭೂಮಿಯ ಮೇಲೆ ಅವರು ಹಾಗೆಯೇ ಮಲಗಿದರು. ನಂತರ ಮರು ಪ್ರಯಾಣದ ಸಲುವಾಗಿ ಎಚ್ಚೆತ್ತ ಗರುಡನು ತನ್ನ ಶರೀರದಿಂದ ರೆಕ್ಕೆಗಳು ಕಳಚಿರುವುದನ್ನು ಗಮನಿಸಿದ. ತಾನು ಆಗ ಮುಖ ಹಾಗೂ ಪಾದಗಳಿಂದ ಮಾತ್ರ ಕೂಡಿದ್ದು ಮಾಂಸದ ಮುದ್ದೆಯಾಗಿ ಗೋಚರಿಸಿದ. ಆಗ ಗಾಲವನೂ ಎದ್ದು ಗರುಡನ ಈ ದುಸ್ಥಿತಿಗೆ ಮರುಗಿ ಮುಂದೆ

ನಮ್ಮ ಪ್ರಯಾಣದ ಗತಿ ಏನೆಂದ? ಗರುಡನನ್ನು ಪ್ರಶ್ನಿಸಲಾಗಿ, ಗರುಡನು ನಾನು ಈ ತಪಸ್ವಿನಿಯ ಬಗ್ಗೆ, ಈಕೆಯನ್ನು ಬ್ರಹ್ಮ, ರುದ್ರ, ವಿಷ್ಣು, ಯಜ್ಞ ಯಾಗಗಳು ನಡೆಯುವ ಕಡೆಗೆ ಕರೆದೊಯ್ಯ ಬೇಕೆಂದು ಚಿಂತಿಸಿದೆ. ಆಕೆ ಅಂತಹ ಉತ್ತಮ ಸ್ಥಳದಲ್ಲಿರಲು ಯೋಗ್ಯ ಎಂದು ಭಾವಿಸಿದ್ದೇ ಯೋಚಿಸಿದ್ದೇ ತಪ್ಪಾಯಿತೇನೋ? ಆದ್ದರಿಂದ ಆಕೆಯನ್ನು ಕ್ಷಮೆ ಯಾಚಿಸುವೆ ಎಂದನು.

**'ಇಮಾಂ ಸಿದ್ಧಾಮಿತೋ ನೇತುಂ ತತ್ರ ಯತ್ರ ಪ್ರಜಾಪತಿಃ ।**
**ಯತ್ರ ದೇವೋ ಮಹಾದೇವೋ ಯತ್ರ ವಿಷ್ಣುಃ ಸನಾತನಃ...... ॥**
**ಮಯ್ಯೈತನ್ನಾಮ ಪ್ರಧ್ಯಾತಂ ಮನಸಾ ಶೋಚತಾ ಕಿಲ....... ।**
**ಸುಕೃತಂ ದುಷ್ಕೃತಂ ವಾ ತ್ವಂ ಮಾಹಾತ್ಮ್ಯಾತ್ ಕ್ಷಂತುಮರ್ಹಸಿ'**

**೧೧೩– ೮ ರಿಂದ ೧೩**

ಗರುಡನ ಮಾತಿಗೆ ಸಂತುಷ್ಟಳಾದ ಶಾಂಡಿಲಿಯು 'ಗರುಡ ಭಯಪಡಬೇಡ. ನೀನು ಮತ್ತೆ ಸುಂದರ ರೆಕ್ಕೆಗಳನ್ನು ಹೊಂದುವೆ ಎಂದಳು. ನಾನು ನಿನ್ನಿಂದ ನಿಂದಿತಳಾಗಿದ್ದೇನೆ. ಅದನ್ನು ನಾನೆಂದೂ ಕ್ಷಮಿಸೆ ಏಕೆಂದರೆ ನಾನು ಸದಾಚಾರ ಉಳ್ಳ ಸಿದ್ಧ ಪುರುಷಳು ಸದಾಚಾರ ಸತ್ಫಲ ನೀಡುತ್ತದೆ. ಧರ್ಮಾರ್ಥಗಳನ್ನು ಕೊಡುತ್ತದೆ. ಮನುಷ್ಯರ ಅವಲಕ್ಷಣಗಳನ್ನು ನಾಶ ಮಾಡುತ್ತದೆ. ಎಂದೂ ಸ್ತ್ರೀಯರು ನಿಂದ್ಯರಲ್ಲ. ಇದನ್ನು ನೀನು ತಿಳಿದುಕೋ.' ಹಾಗಿದ್ದರೂ ನೀನು ಎಂದಿನಂತೆ ಬಲವೀರ್ಯ ಸಂಪನ್ನನಾಗುವೆ. ರೆಕ್ಕೆಗಳು ಮತ್ತೆ ಬರುತ್ತವೆ ಎಂದಳು. ಕೂಡಲೆ ಗರುಡನಿಗೆ ಮೊದಲಿನಂತೆ ಸುಂದರ ರೆಕ್ಕೆಗಳು ಬಂದವು. ಶಾಂಡಿಲಿಯ ಅನುಮತಿ ಪಡೆದು ಗಾಲವ ಹಾಗೂ ಗರುಡರು ಮುಂದೆ ನಡೆದರು. ಆದರೆ ಬೇಕಾದ ಕುದುರೆಗಳು ಮಾತ್ರ ಸಿಗಲಿಲ್ಲ.

ಅದೇ ಸಂದರ್ಭದಲ್ಲಿ ವಿಶ್ವಾ ಮಿತ್ರರು ಮಾರ್ಗದಲ್ಲಿ ಇವರನ್ನು ನೋಡಿ ಗರುಡನ ಎದುರೇ ಗಾಲವನನ್ನು ಕುರಿತು ಹೇಳಿದರು. 'ಗಾಲವ ನೀನೇ ಗುರುದಕ್ಷಿಣೆ ಕೊಡುವ ಬಗ್ಗೆ ಪ್ರತಿಜ್ಞೆಗೈದೆ. ಇದುವರೆಗೂ ಕೊಟ್ಟಿಲ್ಲ. ನಾನು ಬಹಳ ಕಾಲ ಕಾಯಲಾರೆ ಆದಷ್ಟು ಬೇಗ ಗುರುದಕ್ಷಿಣೆಯನ್ನು ತಂದೊಪ್ಪಿಸು. ಆ ಬಗ್ಗೆ ವಿಚಾರ ಮಾಡು' ಎಂದರು.

ಇದನ್ನು ಕೇಳಿದ ಗಾಲವನು ದುಃಖತಪ್ತನಾದ. ಅವನನ್ನು ಗರುಡನು ಸಮಾಧಾನ ಮಾಡಿ 'ನೀನು ಗುರುದಕ್ಷಿಣೆ ಕೊಡದೆ ನಿಶ್ಚಿಂತನಾಗಿರಲು ಸಾಧ್ಯವಿಲ್ಲ'. ಎಂದನು.

**'ನಾದತ್ತ್ವಾ ಗುರವೇ ಶಕ್ಯಂ ಕೃತ್ಸ್ನಮರ್ಥಂ ತ್ವಯಾऽऽಸಿತುಂ' ॥**

**ಅ ೧೧೩ – ೨೩**

ಗರುಡನು ಗಾಲವನಿಗೆ 'ಗಾಲವ ಧನವಿಲ್ಲದೆ ಗುರುದಕ್ಷಿಣೆ ಕೊಡಲು ಸಾಧ್ಯವಿಲ್ಲ. ಧನ ಸಂಪಾದನೆಯೂ ಅಷ್ಟು ಸುಖಕರವಲ್ಲ. ಯೋಗ್ಯ ರಾಜರನ್ನು ಧನ ಪಡೆಯಲು

ಪ್ರಾರ್ಥಿಸಬೇಕು. ಚಂದ್ರವಂಶದ ರಾಜ ಯಯಾತಿ ಇದ್ದಾನೆ. ಅವನು ನಹುಷನ ಪುತ್ರ ಸತ್ಯವಂತ, ಪರಾಕ್ರಮಿ, ಅವನು ನನ್ನ ಸ್ನೇಹಿತ ನಾನು ಹಾಗೂ ನೀನು ಇಬ್ಬರೂ ಆತನನ್ನು ಪ್ರಾರ್ಥಿಸಿದರೆ ಆತನು ಧನ ದಾನ ಮಾಡುತ್ತಾನೆ. ಅವನು ಕುಬೇರನಂತೆ ಮಹಾ ಶ್ರೀಮಂತ. ದಾನ ಪಡೆದು ಗುರು ದಕ್ಷಿಣೆ ಋಣ ತೀರಿಸು' ಎಂದನು.

ಹೀಗೆ ಇಬ್ಬರೂ ಯೋಚಿಸಿ ಪ್ರತಿಷ್ಠಾನಪುರದಲ್ಲಿದ್ದ ಯಯಾತಿಯ ಬಳಿಗೆ ಗರುಡ ಗಾಲವರು ಬಂದರು. ಅವರನ್ನು ರಾಜನು ಯಥೋಚಿತವಾಗಿ ಸತ್ಕರಿಸಿದ. ಆಗಮನದ ಕಾರಣವನ್ನೂ ಕೇಳಿದ. ಅದಕ್ಕೆ ಗರುಡನು,

ಎಲೈ ಯಯಾತಿಯೇ! ಈ ಗಾಲವನು ವಿಶ್ವಾಮಿತ್ರರಲ್ಲಿ ೧೦೦೦೦ ವರ್ಷ ಶಿಷ್ಯತ್ವ ವಹಿಸಿದ ನಂತರ ತಮಗೆ ಗುರುದಕ್ಷಿಣೆ ಏನನ್ನು ಕೊಡಲಿ ಎಂದು ಮತ್ತೆ ಮತ್ತೆ ಕೇಳಿದಾಗ ವಿಶ್ವಾಮಿತ್ರರು,

**'ಏಕತಃ ಶ್ಯಾಮವರ್ಣಾನಾಂ ಶುಭ್ರಾಣಾಂ ಶುದ್ಧಜನ್ಮನಾಂ ।**
**ಅಷ್ಟೌ ಶತಾನಿ ಮೇ ದೇಹಿ ಹಯಾನಾಂ ಚಂದ್ರವರ್ಚಸಾಂ ।**
**ಗುರ್ವರ್ಥೋ್ಽ ದೀಯತಾಮೇಷ ಯದಿ ಗಾಲವ ಮನ್ಯಸೇ' ॥ ಅ ೧೧೪-೧೪**

'ಒಳ್ಳೆಯ ಜಾತಿಯಲ್ಲಿ ಜನಿಸಿದ ಎಂಟು ನೂರು ಕುದುರೆಗಳನ್ನು ಗುರು ದಕ್ಷಿಣೆಯಾಗಿ ಕೊಡುವುದು. ಅವುಗಳ ಒಂದು ಕಿವಿ ಮಾತ್ರ ಕಪ್ಪು ವರ್ಣದ್ದಾಗಿರಬೇಕು. ಚಂದ್ರನಂತೆ ಶುಭ್ರವರ್ಣವಿರಬೇಕು' ಎಂದು ಕೋಪದಿಂದಲೇ ಹೇಳಿದ್ದರು.

ಗಾಲವರು ಇಷ್ಟು ಕಷ್ಟಕರವಾದ ಕೆಲಸವನ್ನು ಎಣಿಸಿರಲಿಲ್ಲ, ಕಾರಣ ಇಂತಹ ಕುದುರೆಗಳು ಸಿಗುವುದು ಅತ್ಯಂತ ದುರ್ಲಭ. ಆದ ಕಾರಣ ನಿನ್ನನ್ನು ಶರಣು ಹೊಂದಿರುವ ಗಾಲವನಿಗೆ ಈ ಬಹು ಮೌಲ್ಯದ ಕುದುರೆಗಳನ್ನು ಕೊಟ್ಟು ಗುರು ದಕ್ಷಿಣೆಯ ಸಮಸ್ಯೆಯನ್ನು ಪರಿಹರಿಸು ಎಂದು ಗರುಡನು ರಾಜನಿಗೆ ಪ್ರಾರ್ಥಿಸಿದ. ಗುರುದಕ್ಷಿಣೆ ನೀಡಿ ಗಾಲವರು ತಪಸ್ಸಿಗೆ ಹೋಗುವರು. ಆ ತಪಸ್ಸಿನ ಫಲ ನಿನಗೂ ಸಿಗುತ್ತದೆ. ಕುದುರೆಯ ಮೇಲೆ ಎಷ್ಟು ಕೂದಲುಗಳಿರುತ್ತವೆಯೋ ಅಷ್ಟು ಸಂಖ್ಯೆಯ ಕುದುರೆಗಳು ದಾನ ಮಾಡಿದವರಿಗೆ ಪರಲೋಕದಲ್ಲೂ ಸಿಗುತ್ತವೆ. ಗಾಲವರು ಸತ್ಪಾತ್ರರು. ನೀನು ದಾನಿ, ಅಷ್ಟೇ ಯೋಗ್ಯ. ಹೀಗೆ ದಾತೃ-ಪ್ರತಿ ಗೃಹೀತೃ(ದಾನಸ್ವೀಕರಿಸುವವನು) ಇಬ್ಬರೂ ಸತ್ಕುಲ ಪ್ರಸೂತರೂ ಉತ್ತಮರಾಗಿದ್ದೀರಿ. ನೀವಿಬ್ಬರೂ ಶಂಖ ಕ್ಷೀರದಂತೆ ಇದ್ದೀರಿ ಎಂದು ಉಪಮಾನ ನೀಡಬಹುದು ಎಂದು ಗರುಡನು ಯಯಾತಿಗೆ ಗಾಲವರಿಗೆ ದಾನ ಮಾಡಬೇಕೆಂದು ಬಲವಾಗಿ ಪ್ರತಿಪಾದಿಸಿದನು.

**'ಅಶಕ್ಯಃ ಪ್ರತಿಕರ್ತುಂ ತದ್ ಭವಂತಂ ಶರಣಂ ಗತಃ ।**
**ಪ್ರತಿಗೃಹ್ಯ ನರವ್ಯಾಘ್ರ ತ್ವತ್ತೋ ಭಿಕ್ಷಾಂ ಗತವ್ಯಥಃ ।**
**ಕೃತ್ವಾಪವರ್ಗಂ ಗುರವೇ ಚರಿಷ್ಯತಿ ಮಹತ್ ತಪಃ ।**
**ಸ್ವೇನ ರಾಜರ್ಷಿ ತಪಸಾ ಪೂರ್ಣಂ ತ್ವಾಂ ಪೂರಯಿಷ್ಯತಿ ।**

ಯಾವಂತಿ ರೋಮಾಣಿ ಹಯೇ ಭವಂತೀಹ ನರೇಶ್ವರ ।
ತಾವಂತೋ ವಾಜಿನೋ ಲೋಕಾನ್ ಪ್ರಾಪ್ನುವಂತಿ ಮಹೀಪತೇ ।
ಪಾತ್ರಂ ಪ್ರತಿಗ್ರಹಸ್ಯಾಯಂ ದಾತುಂ ಪಾತ್ರಂ ತಥಾ ಭವಾನ್ ।
ಶಂಖೇ ಕ್ಷೀರಮಿವಾಸಿಕ್ತಂ ಭವತ್ವೇತತ್ ತಥೋಪಮಮ್' ।

೧೧೪- ೧೬ ರಿಂದ ೨೦

ಗರುಡನ ಈ ಸತ್ಯ ವಚನಗಳನ್ನು ಕೇಳಿ ವಿಮರ್ಶಿಸಿ ಯಯಾತಿ ನುಡಿದನು. 'ರಾಜನು ತನ್ನ ಗೆಳೆಯ ಗರುಡನನ್ನು ಗಾಲವ-ದ್ವಿಜಶ್ರೇಷ್ಠನನ್ನು ನೋಡಿ, ತನ್ನ ಮಿತ್ರನ ಈ ಪ್ರಸ್ತಾವವನ್ನು ಸೂಕ್ತವಾದ ಭಿಕ್ಷೆಯನ್ನು ಮನಸಾ ಅಭಿನಂದಿಸಿದನು. ಸೂರ್ಯವಂಶದ ಅನೇಕ ಉತ್ತಮ ರಾಜರು ಇರುವಾಗಲೂ ನನ್ನಲ್ಲಿಗೆ ಇವರು ಬಂದಿದ್ದಾರೆ ನನ್ನ ಜನ್ಮ ಸಾರ್ಥಕವಾಯಿತು. ಕುಲ ಪಾವನವಾಯಿತು. ಆದರೆ ನೀವು ತಿಳಿದಂತೆ ನಾನು ಈಗ ಧನಿಕನಲ್ಲ. ನನ್ನ ಅಪಾರ ಐಶ್ವರ್ಯ ಕ್ಷೀಣಿಸಿ ಹೋಗಿದೆ. ಆದರೆ ನಿನ್ನ ಆಗಮನವನ್ನು ನಾನು ನಿರರ್ಥಕಗೊಳಿಸೆನು. ನಿಮ್ಮ ಆಶೆ ಪೂರ್ಣ ಗೊಳಿಸುವ ರೀತಿಯಲ್ಲಿ ನಾನೊಂದು ವಸ್ತುವನ್ನು ಕೊಡುತ್ತೇನೆ. ಕೊಡದಿದ್ದರೆ ಯಾಚಿಸಲು ಬಂದವನ ಆಶೆಯನ್ನು ಈಡೇರಿಸದಿದ್ದರೆ ನಿರಾಶೆಯನ್ನುಂಟು ಮಾಡುವವನ ಕುಲವೇ ಸುಟ್ಟು ಹೋಗುತ್ತದೆ. ಅವನ ಪುತ್ರ ಪೌತ್ರರೂ ನಾಶವಾಗುತ್ತಾರೆ.

ಈ ಹಿನ್ನೆಲೆಯಲ್ಲಿ ನನಗಿರುವ ಅನುಪಮ ರೂಪಸಿಯಾದ ಒಬ್ಬಳು ಮಗಳನ್ನು ದಾನವಾಗಿ ಕೊಡುವೆ. ಆಕೆಗೆ ನಾಲ್ಕು ವಂಶಗಳ ಸಂಸ್ಥಾಪಕಳಾಗುವ ಯೋಗ್ಯತೆ ಇದೆ. ಅವಳನ್ನು ಸುರಾಸುರರು-ಮನುಷ್ಯರೂ ಬಯಸುವವರಿದ್ದಾರೆ. ರಾಜ್ಯವನ್ನೇ ಶುಲ್ಕವನ್ನಾಗಿ ಕೊಟ್ಟು ಆಕೆಯನ್ನು ಸ್ವೀಕರಿಸುವವರಿದ್ದಾರೆ. ಇನ್ನು ಕೇವಲ ೮೦೦ ಅಶ್ವಗಳಿಗೆ ಯಾರು ತಾನೇ ಆಕೆಯನ್ನು ಶುಲ್ಕಕ್ಕಾಗಿ ಕೊಡಲು ಸಿಗಲಿಕ್ಕಿಲ್ಲ ಆದ್ದರಿಂದ ಆಕೆಯನ್ನು ಸ್ವೀಕರಿಸಿ ನಿಮ್ಮ ಅಭೀಷ್ಟವನ್ನು ಹೊಂದಿ ಎಂದು ತನ್ನ ಮಗಳಾದ ಮಾಧವಿಯನ್ನು ಗಾಲವನಿಗೆ ಕೊಟ್ಟನು. ನಾನೂ ಈಕೆಯಿಂದಾಗಿ ಮಾತಾಮಹನಾಗುವ ಭಾಗ್ಯ ದೊರಕುತ್ತದೆ ಎಂದಾಗ ಗಾಲವನು ಮಾಧವಿಯನ್ನು ಸ್ವೀಕರಿಸಿದನು. ಗರುಡನು ಗಾಲವನಿಗೆ ನೆರವಾಗಿ ನಿನ್ನ ಕೆಲಸವಾಗಿದೆ. ನಾನಿನ್ನು ಬರುತ್ತೇನೆ ಎಂದು ತೆರಳಿದನು.

## ಯಯಾತಿರುವಾಚ

'ಅದ್ಯ ಮೇ ಸಫಲಂ ಜನ್ಮ ತಾರಿತಂ ಚಾದ್ಯ ಮೇ ಕುಲಂ ।
ನ ಚ ಶಕ್ತೋಽಸ್ಮಿ ತೇ ಕರ್ತುಂ ಮೋಘಮಾಗಮನಂ ಖಗ ।
ತತ್ತು ದಾಸ್ಯಾಮಿ ಯತ್ಕಾರ್ಯಮಿದಂ ಸಂಪಾದಯಿಷ್ಯತಿ ।
ಹತಾಶೋ ಹ್ಯಕೃತಾರ್ಥಃ ಸನ್ ಹತಃ ಸಂಭಾವಿತೋ ನರಃ ।
ಹಿನಸ್ತಿ ತಸ್ಯಪುತ್ರಾಂಶ್ಚ ಪೌತ್ರಾಂಶ್ಚಾ ಕುರ್ವತೋ ಹಿ ತಂ ।
ತಸ್ಮಾಚ್ಚತುರ್ಣಾಂ ವಂಶಾನಾಂ ಸ್ಥಾಪಯಿತ್ರೀ ಸುತಾ ಮಮ ।

ಇಯಂ ಸುರಸುತ ಪ್ರಖ್ಯಾ ಸರ್ವ ಧರ್ಮೋಪಚಾಯಿನೀ ।
ಸದಾ ದೇವಮನುಷ್ಯಾಣಾಮಸುರಾಣಾಂ ಚ ಗಾಲವ ।
ಕಾಂಕ್ಷತೋ ರೂಪತೋ ಬಾಲಾ ಸುತಾ ಮೇ ಪ್ರತಿಗೃಹ್ಯತಾಂ ।
ಅಸ್ಯಾಃ ಶುಲ್ಕಂ ಪ್ರದಾಸ್ಯಂತಿ ನೃಪಾ ರಾಜ್ಯಮಪಿ ಧ್ರುವಂ ।
ಕಿಂ ಪುನಃ ಶ್ಯಾಮಕರ್ಣಾನಾಂ ಹಯಾನಾಂ ದ್ವೇ ಚತುಃ ಶತೇ ।
ಅಹಂ ದೌಹಿತ್ರವಾನ್ ಸ್ಯಾಂ ವೈ ವರ ಏಷ ಮಮ ಪ್ರಭೋ' ॥

ಅ ೧೧೫- ೫ ರಿಂದ ೧೪

ನಂತರ ಗಾಲವರು ಮಾಧವಿಯೊಡನೆ ಯಾವ ರಾಜನಿಗೆ ಈಕೆಯನ್ನು ಶುಲ್ಕವನ್ನಾಗಿ ನನಗೆ ಬೇಕಾಗಿರುವ ೮೦೦ ಕುದುರೆಗಳಿಗಾಗ ಕೊಡಲಿ ಎಂದು ಯೋಚಿಸಿ **ಇಕ್ಷ್ವಾಕು** ರಾಜನಾದ ಪ್ರಜೇಚ್ಛುವಾದ **ಹರ್ಯಶ್ವನ** ಬಳಿಗೆ ಹೋಗಿ ತನ್ನ ಅಭಿಪ್ರಾಯವನ್ನು ಹೇಳಿದ. 'ರಾಜನ್ ಇವಳು ನನ್ನ ಕುಮಾರಿ ಸಂತಾನದಿಂದ ವಂಶಾಭಿವೃದ್ಧಿಯನ್ನು ಈಕೆಯಲ್ಲಿ ನೀನು ಹೊಂದಬಹುದು. ಕನ್ಯಾ ಶುಲ್ಕ ಹೇಳುವೆ. ಯೋಚಿಸಿ ಈಕೆಯನ್ನು ಪತ್ನಿಯಾಗಿ ಸ್ವೀಕರಿಸಲು ನಿರ್ಧರಿಸು' ಎಂದನು ಗಾಲವ.

'ಕನ್ಯೇಯಂ ಮಮ ರಾಜೇಂದ್ರ ಪ್ರಸವೈಃ ಕುಲವರ್ಧಿನೀ ।
ಇಯಂ ಶುಲ್ಕೇನ ಭಾರ್ಯಾರ್ಥಂ ಹರ್ಯಶ್ವ ಪ್ರತಿಗೃಹ್ಯತಾಂ ।
ಶುಲ್ಕಂ ತೇ ಕೀರ್ತಯಿಷ್ಯಾಮಿ ತಚ್ಛ್ರುತ್ವಾ ಸಂಪ್ರಧಾರ್ಯತಾಂ' ॥

೧೧೫/೨೦,೨೧

ಹರ್ಯಸ್ವ ರಾಜನು ಗಾಲವನು ಕನ್ಯಾ ಶುಲ್ಕವನ್ನು ಪ್ರಸ್ತಾಪ ಮಾಡುವ ಮುನ್ನವೇ ಮಾಧವಿಯ ರೂಪಗುಣ ಲಕ್ಷಣಗಳನ್ನು ಕಣ್ಣಾರೆ ಕಂಡು ತನ್ನ ಮನದಿಂಗಿತವಾದ ಸಂತತಿಗೆ ಕಾರಣಳಾದ ಕನ್ಯೆ ದೊರಕಿದಳೆಂಬ ಭಾವನೆಯಿಂದ ತೃಪ್ತಿ ಹೊಂದಿದಂತಹ ದೀರ್ಘ ನಿಶ್ವಾಸವನ್ನು ಬಿಟ್ಟವನಾಗಿ ಗಾಲವನಿಗೆ ಹೀಗೆ ನುಡಿದನು.

ಗಾಲವ! ನಿನ್ನ ಕುಮಾರಿಗೆ ಉತ್ತಮ ಕನ್ಯೆಯಲ್ಲಿರಬೇಕಾದ ಯಾವ ಆರು ಅಂಗಗಳು ಉನ್ನತವಾಗಿರಬೇಕೋ, ಐದು ಸೂಕ್ಷ್ಮವಾಗಿರಬೇಕೋ, ಮೂರು ಗಂಭೀರವಾಗಿರ (ಆಳ-ತಗ್ಗು) ಬೇಕೋ, ಐದು ಅಂಗಗಳು ಕೆಂಪು ಬಣ್ಣದಿಂದ ಕೂಡಿರಬೇಕೋ, ಹಾಗೆಯೇ ಇವೆ. ಅಲ್ಲದೆ ದೇವಾಸುರ ಗಂಧರ್ವರಿಗೂ ದರ್ಶನೀಯಳಾಗಿದ್ದಾಳೆ. ಬಹಳ ಲಕ್ಷಣ (ಉತ್ತಮ) ಗಳಿಂದ ಕೂಡಿದ್ದಾಳೆ ಮತ್ತು ಬಹು ಸಂತಾನ ಪಡೆಯುವ ಸಾಮರ್ಥ್ಯ ಹೊಂದಿದ್ದಾಳೆ. ಭೂಮಂಡಲಕ್ಕೆ ಚಕ್ರವರ್ತಿಯಾಗುವ ಮಗನನ್ನು ಪ್ರಸವಿಸಲು ಸಮರ್ಥಳಿದ್ದಾಳೆ. ನೀನು ನನ್ನ ಐಶ್ವರ್ಯದ ಇತಿಮಿತಿಯನ್ನು ತಿಳಿದುಕೊಂಡು ಕನ್ಯಾ ಶುಲ್ಕವನ್ನು ತಿಳಿಸು.

ಆಗ ಗಾಲವನು ಹಿಂದೆ ತಿಳಿಸಿದಂತೆ ಒಂದು ಕಿವಿ ಕಪ್ಪು ಬಣ್ಣವಿರುವ, ಚಂದ್ರನಂತೆ ಬೆಳ್ಳಗಿರುವ, ದಷ್ಟಪುಷ್ಟವಾದ, ಒಳ್ಳೆಯ ಜಾತಿಗೆ ಸೇರಿದ ೮೦೦ ಕುದುರೆಗಳನ್ನು

ಕನ್ಯಾ ಶುಲ್ಕವಾಗಿ ಕೊಟ್ಟಲ್ಲಿ ಮಾಧವಿಯನ್ನು ಸ್ವೀಕರಿಸು. ಅವಳು ನಿನ್ನ ಸತ್ಸಂತಾನಕ್ಕೆ ಶುಭಪ್ರದ ತಾಯಿಯಾಗುತ್ತಾಳೆ. ಅಗ್ನಿಗಳಿಗೆ ಅರಣಿಯಂತೆ ತೇಜಸ್ವಿಗಳಾದ ಪುತ್ರರು ಜನಿಸುವರು ಎಂದನು.

ಆಗ ರಾಜನು ನನ್ನಲ್ಲಿ ೮೦೦ ಅಶ್ವಗಳಿಲ್ಲ. ಕೇವಲ ೨೦೦ ಮಾತ್ರ ಇವೆ. ಆದ್ದರಿಂದ ಒಂದೇ ಒಂದು ಸಂತಾನ ಪಡೆಯುವ ನನ್ನ ಆಶೆಯನ್ನು ಪೂರ್ಣ ಮಾಡು.

ಇದನ್ನು ಕೇಳಿದ ಆ ಕನ್ಯೆ ಮಾಧವಿಯು 'ನನಗೆ ಒಬ್ಬ ಬ್ರಹ್ಮವಾದಿಯು ಹಿಂದೆಯೇ ಒಂದು ವರವನ್ನು ಕೊಟ್ಟಿದ್ದಾನೆ. ನೀನು ಮಗುವೊಂದನ್ನು ಪ್ರಸವಿಸಿದ ಮೇಲೆ ಮತ್ತೆ ಕನ್ಯೆಯೇ ಆಗುತ್ತೀಯಾ. ಆದ್ದರಿಂದ ನನ್ನನ್ನು ನಾಲ್ಕು ರಾಜರಿಗೆ ೨೦೦ ಕುದುರೆಗಳ ಕನ್ಯಾ ಶುಲ್ಕದೊಂದಿಗೆ ಕೊಟ್ಟರೂ ಗುರುದಕ್ಷಿಣೆ ಪೂರ್ಣವಾಗುತ್ತದೆ. ಆದ್ದರಿಂದ ನನ್ನನ್ನು ನಾಲ್ಕು ರಾಜರಿಗೆ ಕೊಡಬಹುದು. ಇದರ ಮೇಲೆ ನಿನಗೆ ಸರಿ ಕಂಡಂತೆ ಮಾಡು ಎಂದಳು.

ನಂತರ ಗಾಲವನು ಹರ್ಯಸ್ವನಿಗೆ ನೀನು ನಾಲ್ಕನೇ ಒಂದು ಭಾಗ ಶುಲ್ಕ ಕೊಟ್ಟು ಈಕೆಯಲ್ಲಿ ಒಬ್ಬ ಮಗನನ್ನು ಪಡೆಯಬಹುದು ಎಂದು ಹೇಳಿದ. ಹರ್ಯಸ್ವನು ಅದರಂತೆ ಆಕೆಯನ್ನು ಸ್ವೀಕರಿಸಿ ಉಚಿತ ದೇಶ ಕಾಲಗಳಲ್ಲಿ ತನ್ನ ಅಭಿಲಾಷೆಯಂತೆ ಒಬ್ಬ ಮಗನನ್ನು ಪಡೆದನು ಅವನೇ '**ವಸುಮನಸ್**' (ಸಕಾರಾಂತ ಪುಲ್ಲಿಂಗ ಶಬ್ದ)

ಆಮೇಲೆ ಗಾಲವನು ಬಂದು ತನ್ನ ಮಗಳನ್ನು ವಾಪಸು ಕಳಿಸಲು ರಾಜನನ್ನು ಕೋರಲು ಸತ್ಯ ವಚನನಾದ ರಾಜನು ಮತ್ತೆ ಕನ್ಯೆಯಾದ ಮಾಧವಿಯನ್ನು ಗಾಲವನೊಂದಿಗೆ ಕಳಿಸಿದನು.

**'ಉನ್ನತೇಷೂನ್ನತಾ ಷಟ್ಸು ಸೂಕ್ಷ್ಮಾ ಸೂಕ್ಷ್ಮೇಷು ಪಂಚಸು ।**
**ಗಂಭೀರಾ ತ್ರಿಷು ಗಂಭೀರೇಷ್ವಿಯಂ ರಕ್ತಾ ಚ ಪಂಚಸು ॥** ೧೧೬-೨

**'ಸಮರ್ಥೇಯಂ ಜನಯಿತುಂ ಚಕ್ರವರ್ತಿನಮಾತ್ಮಜಂ ।**
**ಬ್ರೂಹಿ ಶುಲ್ಕಂ ದ್ವಿಜಶ್ರೇಷ್ಠ ಸಮೀಕ್ಷ್ಯ ವೈಭವಂ ಮಮ ॥** – ೪

**'ದ್ವೇ ಮೇ ಶತೇ ಸಂನಿಹಿತೇ ಹಯಾನಾಂ ಯದ್ವಿಧಾಸ್ತವ ।**
**ಏಷ್ಟವ್ಯಾಃ ಶತಶಸ್ತ್ವನ್ಯೇ ಚರಂತಿ ಮಮ ವಾಜಿನಃ ॥** – ೮

**ಸೋಽಹಮೇಕಂ ಅಪತ್ಯಂ ವೈ ಜನಯಿಷ್ಯಾಮಿ ಗಾಲವ ।**
**ಅಸ್ಯಾಮೇತಂ ಭವಾನ್ ಕಾಮಂ ಸಂಪಾದಯತು ಮೇ ವರಂ ॥** – ೯

**ಮಾಧವಿರುವಾಚ**

**'ಮಮ ದತ್ತೋ ವರಃ ಕಶ್ಚಿತ್ ಕೇನಚಿತ್ ಬ್ರಹ್ಮವಾದಿನಾ ।**
**ಪ್ರಸೂತ್ಯಂತೇ ಪ್ರಸೂತ್ಯಂತೇ ಕನ್ಯೈವ ತ್ವಂ ಭವಿಷ್ಯಸಿ ।**
**ಸ ತ್ವಂ ದದಸ್ವ ಮಾಂ ರಾಜ್ಞೇ ಪ್ರತಿಗೃಹ್ಯ ಹಯೋತ್ತಮಾನ್ ।**

ನೃಪೇಭ್ಯೋ ಹಿ ಚತುರ್ಭ್ಯಸ್ತೇ ಪೂರ್ಣಾನ್ಯಷ್ಟೌ ಶತಾನಿ ಮೇ ॥
ಭವಿಷ್ಯಂತಿ ತಥಾ ಪುತ್ರಾ ಮಮ ಚತ್ವಾರ ಏವ ಚ ।
ಕ್ರಿಯತಾಮುಪಸಂಹಾರೋ ಗುರ್ವರ್ಥಂ ದ್ವಿಜಸತ್ತಮ ॥
ಏಷಾ ತಾವನ್ಮಮ ಪ್ರಜ್ಞಾ ಯಥಾ ವಾ ಮನ್ಯಸೇ ದ್ವಿಜ ॥
೧೧೬ – ೧೦ ರಿಂದ ೧೩

ಹರ್ಯಸ್ವಃ ಸತ್ಯವಚನೇ ಸ್ಥಿತಃ ಸ್ಥಿತ್ವಾ ಚ ಪೌರುಷೇ ।
ದುರ್ಲಭತ್ವಾತ್ ಹಯಾನಾಂ ಚ ಪ್ರದದೌ ಮಾಧವೀಂ ಪುನಃ ॥ ೧೧೬–೨೦

ನಂತರ ಗಾಲವನು ಮಾಧವಿಯೊಡನೆ **ಕಾಶೀ** ರಾಜನಾದ ಭೀಮಸೇನನ ಮಗನಾದ **ದಿವೋದಾಸನ** ಬಳಿಗೆ ಹೋಗಿ ಕನ್ಯಾ ಶುಲ್ಕವನ್ನು ಕೊಟ್ಟು ಮಾಧವಿಯನ್ನು ಪರಿಗ್ರಹಿಸಲು ಪ್ರಚೋದಿಸಿದನು. ದಿವೋದಾಸನು ಧಾರ್ಮಿಕನೂ, ಇಂದ್ರಿಯ ನಿಗ್ರಹವಂತನೂ, ಸತ್ಯವ್ರತನೂ ಆಗಿದ್ದನು. ಆತನು ನನಗೆ ಈ ವಿಷಯ ತಿಳಿದು ಬಂದಿದೆ. ಅನೇಕ ರಾಜರಿರಲು ನನ್ನ ಬಳಿಗೆ ಬಂದಿರುವೆ. ನನಗೂ ಒಬ್ಬ ಪುತ್ರನನ್ನು ಇವಳಲ್ಲಿ ಪಡೆಯುವ ಮಹದಾಶೆ ಇದೆ ಎಂದು ಹೇಳಿ ಕನ್ಯಾ ಶುಲ್ಕವನ್ನು ಕೊಟ್ಟು ಮಾಧವಿಯನ್ನು ಪರಿಗ್ರಹಿಸಿ ಆಕೆಯೊಡನೆ ಸುಖಭೋಗಗಳನ್ನು ಅನುಭವಿಸಿದನಲ್ಲದೆ **'ಪ್ರತರ್ದನ'** ಎಂಬ ಪುತ್ರನನ್ನು ಪಡೆದನು.

ರಾಜನು ಮಾಧವಿಯೊಡನೆ ಹೇಗೆ ಸಂತೋಷವಾಗಿದ್ದ ಎಂಬ ಬಗ್ಗೆ ವ್ಯಾಸರು ಪ್ರಸಿದ್ಧ ಹಿಂದಿನ ಹಲವು ರಾಜರು ಚಕ್ರವರ್ತಿಗಳ ಅವರ ಪತ್ನಿಯರ ೪೩ (ದಂಪತಿಗಳ) ಹೆಸರನ್ನು ಉಲ್ಲೇಖಿಸಿದ್ದಾರೆ. ಅವರು ಯಾರೆಂದರೆ (೧) ಸ್ವಾಹಾ–ಅಗ್ನಿ (೨) ಶಚೀ– ಇಂದ್ರ (೩) ಚಂದ್ರ–ರೋಹಿಣೀ (೪) ಶ್ಯಾಮಲಾ–ಯಮ (೫) ವರುಣ–ಗಂಗಾ (೬) ರುದ್ರ–ರುದ್ರಾಣೀ (೭) ಕುಬೇರ–ಋದ್ಧಿ (೮) ನಾರಾಯಣ–ಲಕ್ಷ್ಮೀ ಇತ್ಯಾದಿ(**ಈ ಉಪಮೆಗಳಲ್ಲಿ ಹೆಚ್ಚಿನವು ಉಚ್ಚೋಪಮೆಗಳೇ**).

ನಂತರ ದಿವೋದಾಸನ ಬಳಿಗೆ ಬಂದ ಗಾಲವನು ತನ್ನ ಕನ್ಯೆಯಾದ ಮಾಧವಿಯನ್ನು ವಾಪಸು ಪಡೆದು ಮತ್ತೊಬ್ಬ ರಾಜನ ಬಳಿಗೆ ಹೊರಟನು.

ಮಹಾವೀರ್ಯೋ ಮಹೀಪಾಲ ಕಾಶೀನಾಮೀಶ್ವರಃ ಪ್ರಭುಃ ।
ದಿವೋದಾಸ ಇತಿಖ್ಯಾತೋ ಭೈಮಸೇನಿಃ ನರಾಧಿಪಃ ॥
ಧಾರ್ಮಿಕಃ ಸಂಯಮೇ ಯುಕ್ತಃ ಸತ್ಯೇ ಚೈವ ಜನೇಶ್ವರಃ ।
ತಮುಪಾಗಮ್ಯ ಸಮುನಿರ್ನ್ಯಾಯತಸ್ತೇನ ಸತ್ಕೃತಃ ।
ಗಾಲವ ಪ್ರಸವಸ್ಯಾರ್ಥೇ ತಂ ನೃಪಂ ಪ್ರತ್ಯಚೋದಯತ್ ॥

ದಿವೋದಾಸ ಉವಾಚ

ಸ ಏವ ವಿಭವೋಽಸ್ಮಾಕಮಶ್ವಾನಾಮಪಿ ಗಾಲವ ।
ಅಹಮಪ್ಯೇಕಮೇವಾಸ್ಯಾಂ ಜನಯಿಷ್ಯಾಮಿ ಪಾರ್ಥಿವಂ ॥
ತಥೇತ್ಯುಕ್ತ್ವಾ ದ್ವಿಜಶ್ರೇಷ್ಠಃ ಪ್ರಾದಾತ್ ಕನ್ಯಾಂ ಮಹೀಪತೇಃ ।

ರೇಮೇ ಸ ತಸ್ಯಾಂ ರಾಜರ್ಷಿಃ ಪ್ರಭಾವತ್ಯಾಂ ಯಥಾ ರವಿಃ ।
ಸ್ವಾಹಾಯಾಂ ಚ ಯಥಾವಹ್ನಿಃ ಯಥಾ ಶಚ್ಯಾಂ ಚ ವಾಸವಃ ।
ಯಥಾ ನಾರಾಯಣೋ ಲಕ್ಷ್ಮ್ಯಾಂ ಜಾಹ್ನವ್ಯಾಂ ಚ ಯಥೋದಧಿಃ ॥
ವೈದೇಹ್ಯಾಂ ಚ ಯಥಾ ರಾಮೋ ರುಗ್ಮಿಣ್ಯಾಂ ಚ ಜನಾರ್ದನಃ ।
ದಿವೋದಾಸೋಽಥ ಧರ್ಮಾತ್ಮಾ ಸಮಯೇ ಗಾಲವಸ್ಯ ತಾಂ ।
ಕನ್ಯಾಂ ನಿರ್ಯಾತಯಾಮಾಸ ಸ್ಥಿತಃ ಸತ್ಯೇ ಮಹೀಪತಿಃ ॥

ಅ ೧೧೭- ೧ ರಿಂದ ೨೧

ದಿವೋದಾಸನಿಂದ ತನ್ನ ಕನ್ಯೆಯನ್ನು ವಾಪಸ್ಸು ಪಡೆದ ಗಾಲವನು **ಭೋಜರಾಜ್ಯದ** ರಾಜನಾದ **ಉಶೀನರ ರಾಜ ನಗರಿಗೆ** ಮಾಧವಿಯೊಡನೆ ಹೊರಟನು. ಹಿಂದಿನಂತೆ ಈ ಸಾರಿಯೂ ಆಕೆ ಮತ್ತೆ ಕನ್ಯಾವಸ್ಥೆಯನ್ನು ಹೊಂದಿದ್ದಳು ಬ್ರಹ್ಮವಾದಿಯ ವರದಾನದಿಂದಾಗಿ. ಗಾಲವನು ಉಶೀನರ ರಾಜನಿಗೆ "ರಾಜನ್! ನಿನಗೆ ಪುತ್ರ ಸಂತಾನವಿಲ್ಲವೆಂದು ಕೇಳಿದ್ದೇನೆ. ನೀನು ನನ್ನವಳಾದ ಈ ಕನ್ಯೆ ಮಾಧವಿಯನ್ನು ಸ್ವೀಕರಿಸಿ ನನ್ನ ಅಪೇಕ್ಷೆಯಾದ ೪೦೦ ಸೂಕ್ತ ಅಶ್ವಗಳನ್ನು ಕನ್ಯಾ ಶುಲ್ಕವಾಗಿ ಕೊಟ್ಟು ಎರಡು ಮಕ್ಕಳನ್ನು ಪಡೆಯಬಹುದು. ನನಗೆ ಗುರುದಕ್ಷಿಣೆ ಕೊಡುವ ಆತಂಕವಿದೆ- ಆತುರವಿದೆ. ಅದಕ್ಕಾಗಿ ಈ ಬೇಡಿಕೆ ಇಟ್ಟಿದ್ದೇನೆ. ಬೇರಾವ ಸ್ವಾರ್ಥ ಬುದ್ಧಿ ಇಲ್ಲ. ನೀನು ಇವಳಲ್ಲಿ ಪಡೆಯುವ ಸತ್ಸಂತಾನ(ಪುತ್ರರಿಂದ) ನಿನಗೆ ಪುತ್ ಎಂಬ ನರಕದ ಭಯವಿಲ್ಲ. ಮಕ್ಕಳಿಲ್ಲದವರಿಗೆ ಆ ಭಯವಿರುವುದು ನಿನಗೆ ತಿಳಿಯದ್ದೇನಲ್ಲ. ನಿನಗೆ ಚಂದ್ರ ಸೂರ್ಯ ಸದೃಶ ಸಂತಾನವಾಗುತ್ತದೆ" ಎಂದನು.

ಗಾಲವನ ಮಾತನ್ನು ಕೇಳಿದ ಉಶೀನರನು 'ಗಾಲವ ನೀನು ಹೇಳಿದುದೆಲ್ಲ ಯಥಾರ್ಥವೇ ಸರಿ. ಆದರೆ ನನ್ನ ವಿಧಿ ಹಾಗಿಲ್ಲ. ನನ್ನ ಬಳಿ ನೀನು ತಿಳಿಸಿದ ೪೦೦ ಕುದುರೆಗಳಿಲ್ಲ, ಕೇವಲ ೨೦೦ ಮಾತ್ರ ಇವೆ. ಉಳಿದ ೨೦೦ ಅಶ್ವಗಳ ಬದಲಾಗಿ ಅವುಗಳ ಮೌಲ್ಯವನ್ನು ಕೊಡಬಹುದು. ಆದರೆ ನನ್ನ ಐಶ್ವರ್ಯವನ್ನು ಕೇವಲ ನನ್ನ ಸ್ವಾರ್ಥಕ್ಕಾಗಿ ಭೋಗಕ್ಕಾಗಿ ಉಪಯೋಗಿಸಲಾರೆ. ಅದು ಅಧರ್ಮ ಹಾಗೆ ಸ್ವಾರ್ಥ ಪರವಾಗಿ ಭೋಗಕ್ಕಾಗಿ ರಾಜ್ಯೈಶ್ವರ್ಯವನ್ನು ಪ್ರಜೈಶ್ವರ್ಯವನ್ನು ಬಳಸುವವನು ಧರ್ಮ ಹಾಗೂ ಯಶಸ್ಸು ಕೀರ್ತಿಗಳಿಂದ ವಂಚಿತನಾಗುತ್ತಾನೆ. ನನಗೆ ಅಂತಹ ಭೋಗ- ಸಂತಾನ ಬೇಡ. ನಾನು ಒಬ್ಬ ಸುತನನ್ನು ಈ ಮಾಧವಿ-ಕನ್ಯೆಯಿಂದ ಪಡೆದು ಆಕೆಯನ್ನು ಹಿಂದಿರುಗಿಸುತ್ತೇನೆ ಎಂದನು.

'ಇಯಂ ಕನ್ಯಾ ಸುತೌ ದ್ವೌ ತೇ ಜನಯಿಷ್ಯತಿ ಪಾರ್ಥಿವ ।
ಸೋಮಾರ್ಕಪ್ರತಿಸಂಕಾಶೌ ಜನಯಿತ್ವಾ ಸುತೌ ನೃಪ
ಶುಲ್ಕಂತು ಸರ್ವಧರ್ಮಜ್ಞ ಹಯಾನಾಂ ಚಂದ್ರವರ್ಚಸಾಂ ।
ಏಕತಃ ಶ್ಯಾಮಕರ್ಣಾನಾಂ ದೇಯಂ ಮಹ್ಯಂ ಚತುಃಶತಮ್ ॥
ನ ಪುತ್ರಫಲಭೋಕ್ತಾ ಹಿ ರಾಜರ್ಷೇ ಪಾತ್ಯತೇ ದಿವಃ ।
ನ ಯಾತಿ ನರಕಂ ಘೋರಂ ಯಥಾ ಗಚ್ಛಂತ್ಯನಾತ್ಮಜಾಃ ॥

ವಿಧಿಸ್ತು ಬಲವಾನ್ ಬ್ರಹ್ಮನ್ ಪ್ರವಣಂ ಹಿ ಮನೋ ಮಮ ।
ಶತೇದ್ವೇ ತು ಮಮಾಶ್ವಾನಾಂ ಈದೃಶಾನಾಂ ದ್ವಿಜೋತ್ತಮ ।
ಪೌರಜಾನಪದಾರ್ಥಂ ತು ಮಮಾರ್ಥೋ ನಾತ್ಮಭೋಗತಃ ।
ನ ಸ ಧರ್ಮೇಣ ಧರ್ಮಾತ್ಮನ್ ಯುಜ್ಯತೇ ಯಶಸಾ ನ ಚ ।
ಕುಮಾರೀಂ ದೇವಗರ್ಭಾಭಾಮೇಕಪುತ್ರಭವಾಯ ಮೇ ।

ಅಧ್ಯಾಯ ೧೧೮ – ೩ ರಿಂದ ೧೫

ನಂತರ ಗಾಲವನು ರಾಜನ ಮಾತನ್ನು ಮನ್ನಿಸಿ ಮಾಧವಿಯನ್ನು ಉಶೀನರ ರಾಜನಿಗೆ ಒಪ್ಪಿಸಿ ವನಕ್ಕೆ (ತಪಸ್ಸಿಗಾಗಿ) ನಡೆದನು.

ರಾಜನು ಮಾಧವಿಯೊಂದಿಗೆ ಪರ್ವತ, ನದಿ, ರಮಣೀಯವಾದ ಉದ್ಯಾನ, ಅರಮನೆಯ ಶಿಖರಗಳಲ್ಲಿ, ವಿಮಾನಗಳಲ್ಲಿ ವಿಹರಿಸುತ್ತಾ ಕಾಲಾನುಕ್ರಮದಲ್ಲಿ ಆಕೆಯಲ್ಲಿ ಬಾಲ ಸೂರ್ಯನಂತಹ ಮಗನನ್ನು ಪಡೆದನು. ಅವನೇ **ಶಿಬಿ** ಚಕ್ರವರ್ತಿಯೆಂದು ಮುಂದೆ ಪ್ರಸಿದ್ಧನಾದನು.

ಮಗ ಹುಟ್ಟಿದ ವಾರ್ತೆ ಕೇಳಿದ ಗಾಲವನು ರಾಜನ ಬಳಿಗೆ ಬಂದು ಮಾಧವಿಯನ್ನು ವಾಪಸ್ಸು ಪಡೆದು ಮುಂದೆ ಹೋಗುತ್ತಿದ್ದಾಗ ದಾರಿಯಲ್ಲಿ ಗರುಡನ ಭೇಟಿಯಾಯಿತು. ಗಾಲವನನ್ನು ನೋಡಿದ ಗರುಡನು 'ಗಾಲವ ನೀನು ತುಂಬಾ ಅದೃಷ್ಟವಂತ ನೀನು ಕೃತಾರ್ಥನಾದೆ ಎಂದೆನಿಸುತ್ತದೆ ಎಂದನು. ಆಗ ಗಾಲವನು ಇಲ್ಲ ಗೆಳೆಯನೇ! ನಾನಿನ್ನೂ ನಾಲ್ಕನೇ ಒಂದು ಭಾಗ ಗುರುದಕ್ಷಿಣೆಗಾಗಿ ಪ್ರಯತ್ನಿಸಬೇಕಾಗಿದೆ. ನನ್ನ ಗುರುದಕ್ಷಿಣಾ ಋಣ ತೀರಿಲ್ಲ ಎಂದನು. ಅದಕ್ಕೆ ಗರುಡನು ಈ ಬಗ್ಗೆ ನೀನು ಪ್ರಯತ್ನಿಸುವುದೇನೂ ಇಲ್ಲ. ಕಾರಣ ಹಿಂದೆ ಕನ್ಯಾ ಕುಬ್ಬದ ರಾಜನಾದ ಗಾಧಿಯ ಬಳಿಗೆ ಋಚೀಕ ಮುನಿಗಳು ಬಂದು ಗಾಧಿಯ ಮಗಳಾದ ಸತ್ಯವತಿಯನ್ನು ತಮಗೆ ಪತ್ನಿಯಾಗಿ ಧಾರೆಯೆರೆಯಲು ಕೋರಿದರು ಆಗ ಗಾಧಿ ಮಹಾರಾಜನು ಋಚೀಕರಿಗೆ ಒಂದು ಕಿವಿಯು ಕಪ್ಪು ಬಣ್ಣವಿರುವ ಚಂದ್ರನಂತೆ ಬೆಳಗಿರುವ ಒಂದು ಸಾವಿರ ಕುದುರೆಗಳನ್ನು ಕನ್ಯಾ ಶುಲ್ಕವನ್ನು ಕೊಟ್ಟು ತನ್ನ ಮಗಳನ್ನು ಪರಿಗ್ರಹಿಸಬಹುದೆಂದು ಹೇಳಿದನು.

ಆಗ ಋಚೀಕರು ವರುಣನ ಬಳಿಗೆ ಹೋಗಿ ಅವನಿಂದ ಅಶ್ವತೀರ್ಥದ ಮೂಲಕ ೧೦೦೦ ಅಂತಹ ಕುದುರೆಗಳನ್ನು ಪಡೆದು ಗಾಧಿಗೆ ಕೊಟ್ಟು ಸತ್ಯವತೀ ದೇವಿಯನ್ನು ಪತ್ನಿಯನ್ನಾಗಿ ಪರಿಗ್ರಹಿಸಿದನು. ನಂತರ ಗಾಧಿಯು ಪುಂಡರೀಕ ಯಾಗವನ್ನು ಮಾಡಿ ಆ ೧೦೦೦ ಕುದುರೆಗಳನ್ನು ಬ್ರಾಹ್ಮಣರಿಗೆ ದಾನ ಮಾಡಿಬಿಟ್ಟನು. ಅದೇ ಸಂದರ್ಭದಲ್ಲಿ ಮೂವರು ರಾಜರು ದಾನ ಪಡೆದ ಆ ಬ್ರಾಹ್ಮಣರಿಂದ ಸೂಕ್ತ ಹಣ ಕೊಟ್ಟು ತಲಾ ೨೦೦ ರಂತೆ ೬೦೦ ಕುದುರೆಗಳನ್ನು ಕೊಂಡು ಕೊಂಡರು. ಉಳಿದ ೪೦೦ ಕುದುರೆಗಳು ಬ್ರಾಹ್ಮಣರು ತಮ್ಮ ಊರಿಗೆ ತರುವಾಗ ದಾರಿಯಲ್ಲಿ ಬಂದ **ವಿತಸ್ತಾ** ನದಿಯ ಪ್ರವಾಹದಿಂದಾಗಿ ನೀರಿನಲ್ಲಿ ಕೊಚ್ಚಿ ಹೋದವು. ಹೀಗಾಗಿ ಪ್ರಪಂಚದಲ್ಲಿರುವುದೇ ೬೦೦ ಕುದುರೆಗಳು ಅವನ್ನೋ ನೀನು ಈಗಾಗಲೇ ಪಡೆದಾಗಿದೆ. ಉಳಿದ ೨೦೦ ಸಿಗಲು ಸಾಧ್ಯವೇ ಇಲ್ಲ. ಕಾರಣ ನೀನು ೬೦೦ ಕುದುರೆಗಳನ್ನು ವಿಶ್ವಾಮಿತ್ರರಿಗೆ ಒಪ್ಪಿಸಿ

ಅದೇ ಶುಲ್ಕಕ್ಕಾಗಿ ಒಂದು ಸಂತಾನಕ್ಕಾಗಿ ಮಾಧವಿಯನ್ನು ಒಪ್ಪಿಸು. ನಿನ್ನ ಗುರುದಕ್ಷಿಣೆ ಋಣ ತೀರುತ್ತದೆ. ನಂತರ ಸುಖವಾಗಿ ತಪಸ್ಸಿಗೆ ವನಕ್ಕೆ ಹೋಗಬಹುದು ಎಂದನು. ಗರುಡನ ಮಾತಿನಂತೆ ಆತನೊಡನೆ ವಿಶ್ವಾಮಿತ್ರನ ಬಳಿಗೆ ೬೦೦ ಅಶ್ವಗಳೊಂದಿಗೆ ಹೋಗಿ ಎಲ್ಲವನ್ನೂ ಬಿನ್ನವಿಸಿದನು. ಅದಕ್ಕೆ ವಿಶ್ವಾಮಿತ್ರರು ಗಾಲವ ನೀನು ಮೊದಲೇ ಈ ಮಾಧವಿಯನ್ನು ಒಪ್ಪಿಸಿದ್ದರೆ ನನಗೇ ನಾಲ್ಕು ಮಕ್ಕಳಾಗುತ್ತಿದ್ದರಲ್ಲ! ಆದರೂ ನಿನ್ನ ಅಪೇಕ್ಷೆಯಂತೆ ಇನ್ನೂ ನೀನು ಕೊಡ ಬೇಕಾಗಿರುವ ೨೦೦ ಕುದುರೆಗಳ ಬದಲಾಗಿ ಕನ್ಯಾ ಶುಲ್ಕವೆಂದು ಭಾವಿಸಿ ಈಕೆಯನ್ನು ಕೇವಲ ಒಂದೇ ಸಂತಾನಕ್ಕಾಗಿ ಸ್ವೀಕರಿಸುತ್ತೇನೆ ಎಂದು ನುಡಿದು ಮಾಧವಿಯನ್ನು ಸ್ವೀಕರಿಸಿದನು. ನೀನು ತಂದಿರುವ ೬೦೦ ಕುದುರೆಗಳು ನನ್ನ ಆಶ್ರಯದಲ್ಲಿ ಸಂಚರಿಸಲಿ ಎಂದನು.

ಮಾಧವಿಯೊಡನೆ ವಿಹರಿಸುತ್ತಾ ಕ್ರಮೇಣ ಆಕೆಯಲ್ಲಿ ಒಬ್ಬ ಮಗನು ಪಡೆದನು ಅವನೇ **ಅಷ್ಟಕ**. ಆ ಮಗನಿಗೆ ವಿಶ್ವಾಮಿತ್ರರು ೬೦೦ ಅಶ್ವಗಳನ್ನು ಕೊಟ್ಟು ತಾವು ಮಾಧವಿಯನ್ನು ಗಾಲವನಿಗೆ ಒಪ್ಪಿಸಿ ವಿಶ್ವಾಮಿತ್ರರು ವನಕ್ಕೆ ತಪಸ್ಸಿಗೆ ತೆರಳಿದರು.

ಗಾಲವನೂ ಕೂಡಾ ಗುರುದಕ್ಷಿಣೆಯನ್ನು ಕೊಟ್ಟು ತನ್ನ ಋಣದಿಂದ ಮುಕ್ತನಾಗಿ ಮಾಧವಿಗೆ ಹೀಗೆಂದನು. 'ಮಾಧವಿ! ನಿನ್ನಲ್ಲಿ ಒಬ್ಬ ದಾನ ಪತಿ (ರಾಜ), ಮತ್ತೊಬ್ಬ ಶೂರರಾಜ, ಸತ್ಯ ಧರ್ಮರತನಾದ ಮೂರನೇ ಹಾಗೂ ನಾಲ್ಕನೇಯವನು ಯಜ್ಞಶೀಲನಾದ ನಾಲ್ಕು ಜನರು ಪುತ್ರರು ಜನಿಸಿದರು. ಅವರೆಲ್ಲ ರಾಜಕುಮಾರರು. ನಿಮ್ಮ ತಂದೆ ಇಂತಹ ಮಕ್ಕಳಿಂದ ನರಕದಿಂದ ಪಾರಾಗಿದ್ದಾರೆ. ನಾನು ಗುರುದಕ್ಷಿಣೆ ಋಣದಿಂದ ಪಾರಾದೆ. ಹೀಗೆ ಹೇಳಿದ ಗಾಲವನು, ಯಯಾತಿಯ ಬಳಿಗೆ ಹೋಗಿ ಆತನಿಗೆ ಆತನ ಮಗಳಾದ ಮಾಧವಿಯನ್ನು ಒಪ್ಪಿಸಿ ತಾನು ತಪಸ್ಸಿಗೆ ವನಕ್ಕೆ ತೆರಳಿದನು.

**'ಏಕತಃಶ್ಯಾಮಕರ್ಣಾನಾಂ ಹಯಾನಾಂ ಚಂದ್ರವರ್ಚಸಾಂ।**
**ಭಗವನ್ ದೀಯತಾಂ ಮಹ್ಯಂ ಸಹಸ್ರಮಿತಿ ಗಾಲವ ।**
**ಜಾತೋ ದಾನಪತಿಃ ಪುತ್ರಸ್ತ್ವಯಾ ಶೂರಸ್ತಥಾಪರಃ ।**
**ಸತ್ಯಧರ್ಮರತಶ್ಚಾನ್ಯೋ ಯಜ್ವಾ ಚಾಪಿ ತಥಾಪರಃ ॥ ೧೧೯-೨೨**
**......ತಾರಿತಸ್ತೇ ತಥಾ ಸುತೈಃ ।**
**ಚತ್ವಾರಶ್ಚೈವ ರಾಜಾನಸ್ತಥಾ ಚಾಹಂ ಸುಮಧ್ಯಮೇ ॥ ೧೧೯-೨೩**

ಗಾಲವರು ಮಾಧವಿಯನ್ನು ಯಯಾತಿಗೆ ಒಪ್ಪಿಸಿದರು. ನಾಲ್ಕು ಮಕ್ಕಳ ತಾಯಿಯಾದ ಮಾಧವಿಯು ಹಿಂದೆ ಬ್ರಹ್ಮವಾದಿಯ ಅನುಗ್ರಹದಿಂದ ಕನ್ಯೆಯಾಗಿಯೇ ಇದ್ದಳು. ಆದ್ದರಿಂದ ಯಯಾತಿಯು ಆಕೆಯ ವಿವಾಹಕ್ಕಾಗಿ ಸ್ವಯಂವರವನ್ನು ಏರ್ಪಡಿಸಿದನು-ಗಂಗಾಯಮುನೆಯರ ಸಂಗಮದ ತನ್ನ ಆಶ್ರಮದಲ್ಲಿ. ಆಕೆಯ ಸೋದರರಾದ ಪುರು ಹಾಗೂ ಯದುಗಳು ಆಕೆಯನ್ನು ವರಿಸಲು ಬಂದ ನಾಗ, ಯಕ್ಷ, ಮನುಷ್ಯ, ಗಂಧರ್ವ ಮೃಗ, ಪಕ್ಷಿಗಳು ಹಾಗೂ ಅರಣ್ಯ ವಾಸಿಗಳಾದ ಎಲ್ಲ ಪ್ರಾಣಿಗಳಿಗೆ ಪರಿಚಯ ಮಾಡಿಸಿದರು. ರಥದಲ್ಲಿ ಸಿಂಗಾರ ಮಾಡಿಕೊಂಡು ಸ್ವಯಂವರ ಮಾಲೆಯನ್ನು ಹಿಡಿದು ತನ್ನನ್ನು ವರಿಸಲು ಬಂದ ಎಲ್ಲರನ್ನು ನೋಡುತ್ತಾ ಹೊರಟ

ಮಾಧವಿಯು ಬಂದ ಯಾರನ್ನೂ ರಾಜರೇ ಮೊದಲಾದ ವರರನ್ನು ವರಿಸದೆ ಆ ತಪೋವನವನ್ನೇ ತನ್ನ ಪತಿಯನ್ನಾಗಿ ವರಿಸಿದಳು!!

**'ಸತು ರಾಜಾ ಪುನಸ್ತಸ್ಯಾಃ ಕರ್ತುಕಾಮಃ ಸ್ವಯಂವರಮ್ ।**
**ಉಪಗಮ್ಯಾಶ್ರಮಪದಂ ಗಂಗಾಯಮುನಸಂಗಮೇ ॥**
**ಗೃಹೀತಮಾಲ್ಯದಾಮಾಂ ತಾಂ ರಥಮಾರೋಪ್ಯ ಮಾಧವೀಮ್ ।**
**ನಾಗಯಕ್ಷ ಮನುಷ್ಯಾಣಾಂ ಗಂಧರ್ವ.....।**
**ಋಷಿಭಿಃ ಬ್ರಹ್ಮಕಲ್ಪೈಶ್ಚ ಸಮಂತಾದಾವೃತಂ ವನಮ್ ।**
**ವರಾನುತ್ಕ್ರಮ್ಯ ಸರ್ವಾಂಸ್ತಾನ್ ವರಂ ವೃತವತೀ ವನಮ್ ॥**

ನಂತರ ರಥದಿಂದ ಇಳಿದು ಬಂಧುಗಳನ್ನು ನಮಸ್ಕರಿಸಿ ಆ ಪುಣ್ಯ ವನದಲ್ಲಿಯೇ ಇದ್ದು ಉಪವಾಸ, ವಿವಿಧ ದೀಕ್ಷಾ ನಿಯಮಗಳಿಂದ ತಪಸ್ಸನ್ನು ಮಾಡುತ್ತಾ ವನದಲ್ಲಿ ಸ್ವೇಚ್ಛೆಯಿಂದ ಸಂಚರಿಸಿದಳು. ಅವಳ ಆಹಾರ ಗರಿಕೆಯ ಎಳೆ ಚಿಗುರು ಹುಲ್ಲೇ ಆಗಿತ್ತು. ಪವಿತ್ರ ತೀರ್ಥ, ನದೀ ನೀರನ್ನು ಕುಡಿಯುತ್ತಾ, ಹುಲಿ ಮೊದಲಾದ ದುಷ್ಟ ಮೃಗಗಳ ಭಯವಿಲ್ಲದೆ ಹೆಣ್ಣು ಜಿಂಕೆಯಂತೆ ಸಂಚರಿಸುತ್ತಿದ್ದಳು. ಅಖಂಡ ಬ್ರಹ್ಮಚರ್ಯ ಆಕೆಯ ಜೀವನ ವಿಧಾನವಾಗಿತ್ತು.

**ಉಪಗಮ್ಯವನಂ ಪುಣ್ಯಂ ತಪಸ್ತೇಪೇ ಯಯಾತಿಜಾ ।**
**.............................. ಬಭೂವ ಮೃಗಚಾರಿಣೀ ॥**

ಇತ್ತ ಯಯಾತಿ ಮಹಾರಾಜನು ತನ್ನ ಹಿಂದಿನ ರಾಜರಂತೆ ಅನೇಕ ಸಹಸ್ರ ವರ್ಷಗಳವರೆಗೆ ರಾಜ್ಯಭಾರ ಮಾಡಿ ದಿವಂಗತನಾದನು. ಆ ಹೊತ್ತಿಗೆ ಆತನ ಮಕ್ಕಳಾದ ಪುರು-ಯದುಗಳು ಪ್ರವರ್ಧಮಾನರಾಗಿದ್ದರು. ಅವರ ಪುಣ್ಯ ಕರ್ಮಗಳಿಂದಾಗಿ ಭೂಲೋಕದಲ್ಲಿ ಹಾಗೂ ಸ್ವರ್ಗಲೋಕದಲ್ಲಿ ಯಯಾತಿಯು ಯಶೋವಂತನಾದನು[೧].

---

೧ ಯಯಾತಿರಪಿ ಪೂರ್ವೇಷಾಂ ರಾಜ್ಞಾ ವೃತ್ತಮನುಷ್ಠಿತಃ ।
............ಯಯಾತಿಃ ಸ್ವರ್ಗಮಾಸ್ಥಿತಃ ॥
ಮಹರ್ಷಿಕಲ್ಪೋ ನರಪತಿಃ ಸ್ವರ್ಣಾಗ್ರ್ಯಫಲಭುಗ್ ವಿಭುಃ ।
ಅವಮೇನೇ ನರಾನ್ ಸರ್ವಾನ್ ದೇವಾನೃಷಿಗಣಾಂಸ್ತಥಾ ॥
ಯಯಾತಿಃ ಮೂಢವಿಜ್ಞಾನೋ ವಿಸ್ಮಯಾವಿಷ್ಟಚೇತನಃ' । ಅ ೧೨೦ - ೧-೧೬
'ಅಥ ಪ್ರಚಲಿತಃಸ್ಥಾನಾತ್ ಆಸನಾಚ್ಚ ಪರಿಚ್ಯುತಃ । ಅ ೧೨೧-೧
.........ಕಿಂ ಮಯಾ ಮನಸಾ ಧ್ಯಾತಂ ಅಶುಭಂ ಧರ್ಮದೂಷಣಂ ।
ಅತೀವ ಮದಮತ್ತಸ್ತ್ವಂ ನ ಕಂಚಿತ್‌ನಾವಮನ್ಯಸೇ ।
ಮಾನೇನ ಭ್ರಷ್ಟಃ ಸ್ವರ್ಗಸ್ತೇ ದೇವರಾಜಸ್ಯ ಶಾಸನಾತ್ ।
ಪತಸ್ವೇತಿ ತಮಬ್ರವೀತ್ ।
ಪತೇಯಂ ಸತ್ಸ್ವಿತಿ ವಚಸ್ತ್ರಿರುಕ್ತ್ವಾ ನಹುಷಾತ್ಮಜಃ ।
ಏತಸ್ಮಿನ್ನೇವ ಕಾಲೇತು ನೈಮಿಷೇ... ।
ಚತುರೋಽಪಶ್ಯತ ನೃಪಸ್ತೇಷಾಂ ಮಧ್ಯೇ ಪಪಾತ ಹ ।

ಅಲ್ಲಿ ರಾಜನು ಸಹಸ್ರಾರು ವರ್ಷ ಸ್ವರ್ಗ ಲೋಕದ ಗರಿಷ್ಠ ಫಲವನ್ನು ಭೋಗಿಸುತ್ತಾ ಕಾಲ ಕಳೆದ. ಕ್ರಮೇಣ ತಾನು ತನ್ನ ಪುಣ್ಯಗಳಿಂದಾಗಿ ಸ್ವರ್ಗಕ್ಕೆ ಬಂದೆನೆಂದು ಮರೆತು ಸ್ವರ್ಗದಲ್ಲಿದ್ದ ರಾಜರ್ಷಿಗಳನ್ನು, ನರರನ್ನು, ದೇವ, ಋಷಿ ಗಣಗಳನ್ನು ಅಗೌರವದಿಂದ ಕಾಣಲು ಆರಂಭಿಸಿದನು. ಅವರನ್ನು ನಿಂದಿಸಲಾರಂಭಿಸಿದನು. ಕಾರಣ ದುರಭಿಮಾನಿಯಾಗಿ ಗರ್ವಿಷ್ಠನಾಗಿದ್ದನು. ಇದರ ಪರಿಣಾಮವಾಗಿ ಅಲ್ಲಿಯ ರಾಜ–ಋಷಿ–ದೇವಾದಿಗಳು–ನರರು ಇವನನ್ನು ಮರೆತು ಇವನೇಕೆ ಇಲ್ಲಿಗೆ ಬಂದ? ಯಾರನ್ನು ಕೇಳಿ ಬಂದ? ಎಂಬುದಾಗಿ ಪ್ರಶ್ನಿಸುತ್ತಾ ಧಿಕ್ಕಾರ ಗೈಯಲು ಆರಂಭಿಸಿದರು. ಯಯಾತಿ ಯಾರ ಮಗ? ಇಲ್ಲಿಗೆ ಹೇಗೆ ಬಂದ? ಎಂಬ ಜಿಜ್ಞಾಸೆ ಆರಂಭವಾಗಿ ದೇವೇಂದ್ರನವರೆಗೆ ಆ ಯಯಾತಿಯ ನಡತೆಯ ಬಗ್ಗೆ ದೂರುಗಳು ಹೋಗಲಾಗಿ ಇಂದ್ರನು ತನ್ನ ದೂತನೊಡನೆ ಯಯಾತಿಯನ್ನು ಸ್ವರ್ಗದಿಂದ ಚ್ಯುತನಾಗು ಎಂಬ ಸಂದೇಶ ಕಳಿಸಿದ ಅದರ ಫಲವಾಗಿ ಯಯಾತಿ ಭೂಮಿಯ ಮೇಲೆ ಬೀಳಲಾರಂಭಿಸಿದಾಗ, ಅವನಿಗೆ ಶೋಕಾಗ್ನಿಯಿಂದ ದಹಿಸಲಾರಂಭಿಸಿದ ಸ್ಮರಣಶಕ್ತಿ ಹೋಯಿತು. ಧರಿಸಿದ ಆಭರಣಗಳು ಕಳಚಿಬಿದ್ದವು. ಅಂಗಾಂಗಗಳು ಶಿಥಿಲವಾದವು. ಅವನ ಸುತ್ತಲೂ ಕತ್ತಲು ಕವಿಯಿತು. ಭೂಮಿಯೇ ರಭಸದಿಂದ ಬೀಳಲಾರಂಭಿಸಲಾಗಿ ಅವನಿಗೆ ತಾನು **'ಸತ್ಸು ಪತೇಯಂ'** ಸಜ್ಜನರ ಮಧ್ಯೆ ನಾನು ಬೀಳಲಿ' ಎಂಬ ಆಶೆಯುಂಟಾಯಿತು. ತಾನು ಸ್ವರ್ಗಚ್ಯುತನಾದ ಬಗ್ಗೆ ಪಶ್ಚಾತ್ತಾಪ ಉಂಟಾಗಿ ನನಗೆ ಈ ಗತಿ ಏಕೆ ಬಂತೆಂದು ಆತ್ಮ ವಿಮರ್ಶೆ ಮಾಡಿಕೊಂಡ. ಸಜ್ಜನರ ಮಧ್ಯೆ ಬೀಳಬೇಕೆಂಬ ಅವನ ಆಶೆಗೆ ಅದೃಷ್ಟ ಕೂಡಿ ಬಂದಿತೇನೋ? ಅವನು ನೈಮಿಷಾರಣ್ಯದಲ್ಲಿ ಯಜ್ಞ ನಿರತವಾದ **ಪ್ರತರ್ದನ, ವಸುಮನ, ಶಿಬಿ** ಹಾಗೂ **ಅಷ್ಟಕ**ರೆಂಬ ರಾಜೋತ್ತಮರ ಮಧ್ಯೆ ಬಿದ್ದನು. ಅವರು ವಾಜಪೇಯ ಯಜ್ಞದಿಂದ ಇಂದ್ರನನ್ನು (ಸುರೇಶ್ವರ) ತೃಪ್ತಿ ಪಡಿಸಿದ್ದರು. ಆ ಯಾಗದ ಧೂಮ ಸ್ವರ್ಗ ದ್ವಾರವನ್ನು ತಲುಪಿತ್ತು. ಯಯಾತಿಯು ಅದನ್ನು ಆಘ್ರಾಣಿಸುತ್ತಾ ರಾಜ ಸಿಂಹಾಗ್ನಿಗಳ ಮಧ್ಯೆ ಬಿದ್ದನು. ಆ ರಾಜಕುಮಾರರು ಯಯಾತಿಯನ್ನು 'ನೀನಾರು? ಯಾರ ಬಂಧು ನೀನು? ನಿನ್ನ ಕುಲ ಯಾವುದು? ನಿನ್ನ ಊರಾವುದು? ನೀನು ದೇವನೋ? ಗಂಧರ್ವನೋ? ಅಥವಾ ದಿವ್ಯ ರೂಪ ತಳೆದ ರಾಕ್ಷಸನೋ? ನೀನು ಮನುಷ್ಯನಲ್ಲ ಅಂತಹ ರೂಪವಿಲ್ಲ. ಬಂದ ಕಾರಣವೇನು?' ಎಂದು ಕೇಳಿದರು. ಆಗ ಯಯಾತಿಯು **'ನಾನು ಯಯಾತಿ ರಾಜರ್ಷಿ ಕ್ಷೀಣ ಪುಣ್ಯನಾದ್ದರಿಂದ ಸ್ವರ್ಗಚ್ಯುತನಾಗಿದ್ದೇನೆ. ಸಜ್ಜನರ ಮಧ್ಯೆ ಬೀಳಬೇಕೆಂಬ ನನ್ನ ಬಯಕೆ ಈಡೇರಲು ನಿಮ್ಮ ಮಧ್ಯೆ ಬಿದ್ದಿದ್ದೇನೆ'** ಎಂದ.

---

ವಾಜಪೇಯೇನಯಜ್ಞೇನ ತರ್ಪಯಂತಿ ಸುರೇಶ್ವರಮ್ ।
ರಾಜಾನ ಊಚುಃ
ಸತ್ಯಮೇತತ್ ಭವತು ತೇ ಕಾಂಕ್ಷಿತಂ ಪುರುಷರ್ಷಭ ।
ಸರ್ವೇಷಾಂ ನಃ ಕ್ರತುಫಲಂ ಧರ್ಮಶ್ಚ ಪ್ರತಿಗೃಹ್ಯತಾಮ್ ॥

ಆಗ ರಾಜಕುಮಾರರು ನುಡಿದರು

'ನಿನ್ನ ಮಾತು ಸತ್ಯವಾಗಲಿ, ನಾವು ಮಾಡಿದ ಈ ಯಜ್ಞಫಲ ಮತ್ತು ಆ ಪುಣ್ಯವನ್ನು ಸ್ವೀಕರಿಸು'. ಅದಕ್ಕೆ ಯಯಾತಿಯು ನಾನು ಕ್ಷತ್ರಿಯ ಬ್ರಾಹ್ಮಣನಲ್ಲ. ಆದ್ದರಿಂದ ದಾನ ಸ್ವೀಕರಿಸೆ ಎಂದ. ಬೇರೆಯವರ ಪುಣ್ಯಕ್ಕಾಗಿ ನನ್ನ ಬುದ್ಧಿ ಓಡದು. ನಾನು ದಾತೃವೇ ಹೊರತು ಪ್ರತಿಗ್ರಹೇಚ್ಛುವಲ್ಲ (ಸ್ವೀಕರಿಸುವವನಲ್ಲ) ಎಂದನು.[೧]

ಇದೇ ಸಮಯಕ್ಕೆ ಸರಿಯಾಗಿ ಮಾಧವಿಯ ಮೃಗಚರ್ಯಾ ಕ್ರಮದಲ್ಲಿ (ಜಿಂಕೆಯಂತೆ ಹಾರುತ್ತಾ ಕುಣಿಯುತ್ತಾ) ಬಂದಳು. ಆಕೆಯನ್ನು ನೋಡಿದ ರಾಜಕುಮಾರರು ನಮಸ್ಕರಿಸಿ ಅಮ್ಮ ಏಕೆ ಬಂದೆ? ನಾವು ನಿನ್ನ ಮಕ್ಕಳಲ್ಲವೆ? ನಿನ್ನ ಆದೇಶವೇನೆಂದು ಕೇಳಿದರು. ಆಗ ಮಾಧವಿಯು ನಾಲ್ಕು ಮಕ್ಕಳ ತಲೆಯನ್ನು ಮುಟ್ಟಿ, ತನ್ನ ತಂದೆ ಯಯಾತಿಗೆ ಇವರು ನನ್ನ ಮಕ್ಕಳು. ಇವರು ನಿನ್ನನ್ನು ಉದ್ಧರಿಸುತ್ತಾರೆ. ಇದು ವೇದೋಕ್ತವೂ ಹೌದು. ನಾನು ನಿನ್ನ ಮಗಳು ಮಾಧವಿ. ವನದಲ್ಲಿ ಮೃಗದಂತೆ ಸಂಚರಿಸುವವಳು. ನನ್ನ ಧರ್ಮ ಸಂಗ್ರಹದಲ್ಲಿಯೂ ನಿನಗೆ ಅರ್ಧ ನೀಡುತ್ತೇನೆ. ಯಾವ ರೀತಿಯಾಗಿ ಎಲ್ಲ ಮನುಷ್ಯರು ತಮ್ಮ ಮಕ್ಕಳು ಮಾಡುವ ಪುಣ್ಯದಲ್ಲಿ ಭಾಗಿಗಳೋ, ಅವರು ಮಗಳ ಮಕ್ಕಳಿಂದಲೂ ಫಲವನ್ನು ಇಚ್ಚಿಸುತ್ತಾರೆ. ಪುತ್ರ ಹಾಗೂ ದೌಹಿತ್ರ, ಹೀಗೆ ಎರಡೂ ವಂಶ ಕುಡಿಗಳಿಂದ ಪಿತೃವಿಗೆ ಪುಣ್ಯ ಪ್ರಾಪ್ತಿಯಾಗುತ್ತದೆ ಎಂದು ನುಡಿಯಲು ನಾಲ್ವರೂ ಮಕ್ಕಳು ತಮ್ಮ ತಾತಗೆ ನಮಸ್ಕರಿಸಿ ನಿನಗೆ ಮತ್ತೆ ಸ್ವರ್ಗ ಪ್ರಾಪ್ತಿಯಾಗಲೆಂಬ ಆಶಯದಿಂದ ನುಡಿದರು. ಆಗಲೇ **ಗಾಲವರೂ** ಬಂದು **ಯಯಾತಿಗೆ** ತಮ್ಮ ತಪಸ್ಸಿನ **ಎಂಟನೇ** ಒಂದು ಭಾಗವನ್ನು ಸ್ವರ್ಗ ಪ್ರಾಪ್ತಿಗಾಗಿ ಧಾರೆ ಎರೆದರು.

ಯಯಾತಿಯು ಹೀಗೆ ತನ್ನ ಮಗಳು, ಮೊಮ್ಮಕ್ಕಳು ಹಾಗೂ ಗಾಲವರಂತಹ ಮಹರ್ಷಿಯಿಂದ (ಇಂತಹ ಸ್ವಕೀಯ ಸಜ್ಜನರಿಂದ ನಿರ್ವಿವಾದಿತರಾದ) ಗುರುತಿಸಲ್ಪಡುತ್ತಿರಲು, **ಭೂಸ್ಪರ್ಶ ಮಾಡದೇನೇ** ಸ್ವರ್ಗವನ್ನು ಏರಲು ಉದ್ಯುಕ್ತನಾದನು. (ತನ್ನ ಬಂಧು ಬಾಂಧವರ ಪುಣ್ಯ ವಿಶೇಷದಿಂದ, ಗಾಲವರಂತಹ ಸತ್ಪುರುಷರ ಪುಣ್ಯ ಪ್ರಭಾವದಿಂದ) ಆಗ ಯಯಾತಿಯು ದಿವ್ಯ ಶರೀರ ಧಾರಿಯಾಗಿಯೂ, ದಿವ್ಯ ಮಾಲ್ಯಾಂಬರ ಧಾರಿಯೂ ಹಿಂದಿನ ಚಿಂತೆಗಳೆಲ್ಲವನ್ನೂ ಕಳೆದುಕೊಂಡಿದ್ದನು. ಆಗ ಆತನ ನಾಲ್ವರೂ ಮೊಮ್ಮಕ್ಕಳೂ ಒಬ್ಬಬ್ಬರೂ ಪ್ರತ್ಯೇಕವಾಗಿ ಯಯಾತಿಗೆ

---

೧ ಯಯಾತಿರುವಾಚ
ನಾಹಂ ಪ್ರತಿಗ್ರಹಧನೋ ಬ್ರಾಹ್ಮಣಃ ಕ್ಷತ್ರಿಯೋಽಹ್ಯಹಮ್ ।
ಮಾಧವೀ ಉವಾಚ
ಇಮೇ ತ್ವಾಂ ತಾರಯಿಷ್ಯಂತಿ....।
ಮಯಾಪ್ಯುಪಚಿತೋ ಧರ್ಮಃ ತತೋಽರ್ಧಂ ಪ್ರತಿಗೃಹ್ಯತಾಮ್ ।
ಗಾಲವ ಉವಾಚ
ತಪಸೋ ಮೇಽಷ್ಟಭಾಗೇನ ಸ್ವರ್ಗಮಾರೋಹತಾಂ ಭವಾನ್ ॥ ಅ ೧೨೧ – ೧-೨೮

ತಮ್ಮ ತಮ್ಮ ವಿವಿಧ ಪುಣ್ಯ ಕರ್ಮಗಳಿಂದ ಸಂಪಾದಿತವಾದ ಪುಣ್ಯಗಳೆಲ್ಲವನ್ನು ಧಾರೆಯೆರೆಯುತ್ತಾ ಹೀಗೆ ನುಡಿದರು.

**ವಸುಮನಸ ನುಡಿದುದು**

**ಪ್ರಾಪ್ತವಾನಸ್ಮಿ ಯಲ್ಲೋಕೇ ಸರ್ವವರ್ಣೇಷ್ವಗರ್ಹಯಾ ।**
**ತದಪ್ಯಥ ಚ ದಾಸ್ಯಾಮಿ ತೇನ ಸಂಯುಜ್ಯತಾಂ ಭವನ್ ॥**
**ಯತ್ಫಲಂ ದಾನಶೀಲಸ್ಯ ಕ್ಷಮಾಶೀಲಸ್ಯ ಯತ್ಫಲಮ್ ।**
**ಯಚ್ಚ ಮೇ ಫಲಮಾಧಾನೇ ತೇನ ಸಂಯುಜ್ಯತಾಂ ಭವಾನ್' ॥**
॥ ೧೨೨-೪,೫ ॥

ಯಾವುದೇ ವರ್ಣ (ಬ್ರಾಹ್ಮಣಾದಿ) ದವರನ್ನು ನಾನು ಎಂದೂ ನಿಂದಿಸದಿರುವುದರಿಂದ ಬಂದ ಪುಣ್ಯ ನಿನಗೆ ಹೋಗಲಿ; ನಾನು ಮಾಡಿದ ದಾನದಿಂದ ಬಂದ ಪುಣ್ಯ ಅಪರಾಧಿಗಳನ್ನು ಕ್ಷಮಿಸಿದ್ದರಿಂದ ಬಂದ ಪುಣ್ಯ(ಕ್ಷಮಾಯೋಗ್ಯರನ್ನು) ವೆಲ್ಲವನ್ನು ನಿನಗೆ ಅರ್ಪಿಸುತ್ತೇನೆ.

**ಕ್ಷತ್ರಿಯ ಶ್ರೇಷ್ಠನಾದ ಪ್ರತರ್ದನ ನುಡಿದ**

**ಯಥಾ ಧರ್ಮರತಿರ್ನಿತ್ಯಂ ನಿತ್ಯಂ ಯುದ್ಧ ಪರಾಯಣಃ ।**
**ಪ್ರಾಪ್ತವಾನಸ್ಮಿ ಯಲ್ಲೋಕೇ ಕ್ಷತ್ರ ವಂಶೋದ್ಭವಂ ಯಶಃ ।**
**ವೀರಶಬ್ದ ಫಲಂಚೈವ ತೇನ ಸಂಯುಜ್ಯತಾಂ ಭವಾನ್' ॥** ೧೨೨-೬,೭

ನಾನು ಕ್ಷತ್ರಿಯ ವರ್ಣಕ್ಕನುಸಾರಿಯಾಗಿ ಶತ್ರುಗಳೊಡನೆ ಧರ್ಮಯುದ್ಧ ಮಾಡಿ ವೀರನಾಗಿ ಅದಕ್ಕೆ ಬರಬಹುದಾದ ಪುಣ್ಯ ಸಂಪಾದಿಸಿದ್ದೇನೆ. ಆ ಫಲ ನಿನಗೆ ಸಮರ್ಪಿತವಾಗಲಿ. ವೀರ ಶಬ್ದದಿಂದ ಕ್ಷತ್ರಿಯರಲ್ಲಿ ವಾಯು ದೇವರೇ ನಿಂತು ಕ್ಷಾತ್ರಧರ್ಮ ನಡೆಸಿಕೊಡುತ್ತಾರೆ. ನಾರಾಯಣದ್ರೋಹಿ ಬಂಧಿಗಳನ್ನು ನಿಗ್ರಹಿಸಿದ ಪುಣ್ಯವನ್ನು ಪ್ರತರ್ದನ ತಾತನಿಗೆ ದಾನ ಮಾಡಿದ.[೧]

**ಉಶೀನರನಿಗೆ ಜನಿಸಿದ ಶಿಬಿಯು ಮಧುರ ಸ್ವರದಿಂದ ನುಡಿದ**

**'ಯಥಾ ಬಾಲೇಷು ನಾರೀಷು......**
**ಸಂಗರೇಷು ನಿಪಾತೇಷು ತಥಾ ತದ್ವ್ಯಸನೇಷು ಚ ।**
**ಅನೃತಂ ನೋಕ್ತಪೂರ್ವಂ ಮೇ ತೇನ ಸತ್ಯೇನ ಖಂ ವ್ರಜ ॥**
**ಯಥಾ ಪ್ರಾಣಾಂಶ್ಚ ರಾಜ್ಯಂ ಚ ರಾಜನ್ ಕಾಮಸುಖಾನಿ ಚ ।**
**ತ್ಯಜೇಯಂ ನ ಪುನಃ ಸತ್ಯಂ ತೇನ ಸತ್ಯೇನ ಖಂ ವ್ರಜ ॥**
**ಯಥಾ ಸತ್ಯೇನ ಮೇ ಧರ್ಮೇ ಯಥಾ ಸತ್ಯೇನ ಪಾವಕಃ ।**
**ಪ್ರೀತಃ ಶತಕ್ರತುಶ್ಚೈವ ತೇನ ಸತ್ಯೇನ ಖಂ ವ್ರಜ' ॥** ೧೨೨-೯,೧೦,೧೧

---

೧ ಕ್ಷತ್ರಿಯಾಣಾಂ ವಿಶೇಷತೋऽಪಿ ಪರಮಧರ್ಮಂ ನಾರಾಯಣದ್ವಿಟ್ ತದನುಬಂಧಿನಿಗ್ರಹಂ ..... – ಗೀತಾತಾತ್ಪರ್ಯ ಉಪೋದ್ಘಾತದಲ್ಲಿ

ರಾಜನ್! ನಾನು ಸ್ತ್ರೀಯರ, ಬಾಲಕರ ವಿಷಯದಲ್ಲಾಗಲೀ, ಹಾಸ್ಯಕ್ಕಾಗಿಯಾಗಲೀ, ಯುದ್ಧಾದಿಗಳಲ್ಲಾಗಲೀ, ಆಪತ್‌ನಲ್ಲಾಗಲೀ ಸುಳ್ಳು ಹೇಳಿಲ್ಲ. ನಾನು ಪ್ರಾಣ ಬಿಟ್ಟೇನು! ರಾಜ್ಯ ಸುಖಾದಿಗಳನ್ನು ಬಿಟ್ಟೇನು! ಸತ್ಯ ಬಿಟ್ಟಿಲ್ಲ ನನ್ನ ಸತ್ಯ ನಿಷ್ಠೆಯಿಂದ ಇಂದ್ರಾಗ್ನಿ ದೇವತೆಗಳು ಸಂತೋಷಗೊಂಡಿದ್ದಾರೆ. ಹೀಗೆ ಸತ್ಯ ಧರ್ಮಗಳಿಂದ ಅರ್ಜಿತ ಪುಣ್ಯದಿಂದ ನೀನು ಸ್ವರ್ಗಕ್ಕೆ ಹೋಗು! (ಎಂದರೆ ನನ್ನ ಜೀವಮಾನದಲ್ಲಿ ಸತ್ಯ ಧರ್ಮಗಳಿಂದ ಹೊಂದಿದ ಪುಣ್ಯವೆಲ್ಲವನ್ನೂ ನಿನಗೆ ಧಾರೆಯೆರೆದಿದ್ದೇನೆ)

ನಂತರ ಕೊನೆ ಮೊಮ್ಮಗ (ವಿಶ್ವಾಮಿತ್ರನ ಮಗ) ಅಷ್ಟಕ ನುಡಿದನು

**ಶತಶಃ ಪುಂಡರೀಕಾ ಮೇ ಗೋಸವಾಶ್ಚರಿತಾಃ ಪ್ರಭೋ ।**
**ಕ್ರತವೋ ವಾಜಪೇಯಾಶ್ಚ ತೇಷಾಂ ಫಲಮವಾಪ್ನುಹಿ ॥**

ತಾತ ಮಹಾರಾಜ ನಾನು ನೂರಾರು ಪುಂಡರೀಕ ಯಾಗಗಳನ್ನು ಗೋಸವ (ಪಶುಯಾಗ) ಹಾಗೂ ವಾಜಪೇಯ ಯಾಗಗಳನ್ನು ಮಾಡಿದ್ದೇನೆ. ಆ ಫಲಗಳನ್ನು ನೀನು ಹೊಂದು. ನನ್ನಲ್ಲಿದ್ದ ಎಲ್ಲ ರತ್ನ, ಧನಕನಕಾದಿಗಳನ್ನು ಯಜ್ಞ ಯಾಗಗಳಿಗೇ ಉಪಯೋಗಿಸಿದ್ದೇನೆ. ಇದು ಸತ್ಯ. ಇಂತಹ ಸತ್ಯದಿಂದ ಸಂಪಾದಿಸಿದ ಪುಣ್ಯಗಳಿಂದ ನೀನು ಸ್ವರ್ಗಕ್ಕೆ ಹೋಗು'

ಹೀಗೆ ನಾಲ್ವರೂ ಮೊಮ್ಮಕ್ಕಳೂ ಹೇಳುತ್ತಿದ್ದಂತೆ ತಾತ–ಯಯಾತಿ ರಾಜ ಸ್ವರ್ಗದೆಡೆ ಮೇಲೆ ಹೋಗುತ್ತಿದ್ದನು. ಹೀಗೆ ಮಗಳು, ಮೊಮ್ಮಕ್ಕಳು ಮಹರ್ಷಿ ಗಾಲವರಿಂದಾಗಿ ಸ್ವರ್ಗಭ್ರಷ್ಟನಾದ ಯಯಾತಿ ಮತ್ತೆ ಸ್ವರ್ಗಕ್ಕೆ ಮರಳಿದ. ಯಯಾತಿಯನ್ನು ಹೀಗೆ ದಾಟಿಸಿದರು. ನಂತರ ಆ ಮೊಮ್ಮಕ್ಕಳು ಹೀಗೆ ಹೇಳಿದರು!

'ರಾಜನ್! ನಾವೆಲ್ಲ ರಾಜಧರ್ಮ ಗುಣೋಪೇತರಾಗಿದ್ದೇವೆ. ಅಲ್ಲದೆ ಇತರ ಸರ್ವ ವರ್ಣಿಗಳಿಗೆ ಇರಬೇಕಾದ ಗುಣವುಳ್ಳವರೂ ಆಗಿದ್ದೇವೆ. ನಾವೆಲ್ಲ ನಿನ್ನ ಮೊಮ್ಮಕ್ಕಳು (ಮಗಳ ಮಕ್ಕಳು) ನೀನು ಸ್ವರ್ಗಕ್ಕೆ ಹೋಗು'.

ಹೀಗೆ ಯಾಯತಿ ರಾಜನು ತನ್ನ ಮೊಮ್ಮಕ್ಕಳ ಅನುಜ್ಞೆ ಪಡೆದು ಸ್ವರ್ಗಕ್ಕೆ ನಡೆದನು. ಸ್ವರ್ಗಕ್ಕೆ ಹೋಗುತ್ತಲೇ ಅವನ ಮೇಲೆ ಸುಗಂಧ ಪುಷ್ಪವೃಷ್ಟಿಯಾಯಿತು. ಪರಿಮಳೋಪೇತವಾದ ವಾಯುವಿನ ಸ್ಪರ್ಶವಾಯಿತು. ಮೊಮ್ಮಕ್ಕಳ ಪುಣ್ಯಗಳಿಂದ ಪ್ರಾಪ್ತವಾದ ಸ್ಥಿರವಾದ ಸ್ಥಾನವನ್ನು ಹೊಂದಿ ಮಹಾತೇಜಸ್ಸಿನಿಂದ ಪ್ರಕಾಶಿಸಿದನು. ಗಂಧರ್ವಪ್ಸರೆಯರು ಯಯಾತಿಯ ಗುಣಗಾನ ಮಾಡಿದರು. ನರ್ತನ ಮಾಡಿದರು. ಸ್ವರ್ಗದಲ್ಲಿ ದುಂದುಭಿ ಧ್ವನಿಗಳಿಂದ ಸ್ವೀಕರಿಸಲ್ಪಟ್ಟನು, ಮರೆಮಾಚಲ್ಪಟ್ಟ (ದೇವತೆಗಳಿಂದ ಋಷಿಗಳಿಂದ) ಯಯಾತಿಯು ಅವರಿಂದ ಮತ್ತೆ ಪರಿಗೃಹೀತನಾದ ಸ್ತೋತ್ರ ಮಾಡಲ್ಪಟ್ಟ ಅರ್ಘ್ಯಾದಿಗಳಿಂದ ಸತ್ಕರಿಸಲ್ಪಟ್ಟನು.

ಹೀಗೆ ಶಾಂತ ಮನಸ್ಕನಾದ ಯಯಾತಿಯನ್ನು ಸಮಾಧಾನ ಪಡಿಸಲೋ ಏನೋ ಎಂಬಂತೆ ಚತುರ್ಮುಖ ಬ್ರಹ್ಮ (ಪಿತಾಮಹ) ದರ್ಶನ ನೀಡಿ ಹೀಗೆ ನುಡಿದ.

'ಚತುಷ್ಪಾದಸ್ತ್ವಯಾ ಧರ್ಮಶ್ಚಿತೋ ಲೋಕ್ಯೇನ ಕರ್ಮಣಾ । .....
ಪುನಸ್ತ್ವಯ್ಯೈವ ರಾಜರ್ಷೇ ಸುಕೃತೇನ ವಿಘಾತಿತಮ್ ॥
ಆವೃತಂ ತಮಸಾ ಚೇತಃ ಸರ್ವೇಷಾಂ ಸ್ವರ್ಗವಾಸಿನಾಮ್ ॥
ಯೇ ನ ತ್ವಾಂ ನಾಭಿಜಾನಂತಿ ತತೋಽಜ್ಞಾತೋಽಸಿ ಪಾತಿತಃ ।
ಪ್ರೀತ್ಯೈವ ಚಾಸಿ ದೌಹಿತ್ರೈಃ ತಾರಿತಸ್ತ್ವಮಿಹಾಗತಃ ॥
ಸ್ಥಾನಂ ಚ ಪ್ರತಿಪನ್ನೋಽಸಿ ಕರ್ಮಣಾ ಸ್ವೇನ ನಿರ್ಜಿತಮ್ ।
ಅಚಲಂ ಶಾಶ್ವತಂ ಪುಣ್ಯಮುತ್ತಮಮ್ ಧ್ರುವಮವ್ಯಯಮ್' ॥

॥ ೧೨೩-೭ರಿಂದ೧೦ ॥

'ನೀನು ಹಿಂದೆ ನಾಲ್ಕು ಪಾದ ಧರ್ಮ ಆಚರಿಸಿ ಧರ್ಮ-ಪುಣ್ಯ ಸಂಗ್ರಹಿಸಿದ್ದೆ ಆದ್ದರಿಂದ ನೀನು ಸ್ವರ್ಗಕ್ಕೆ ಹೋಗಿದ್ದೆ. ಆದರೆ ನೀನೇ ನಿನ್ನ ಸುಕೃತ ಹಾಳು ಮಾಡಿಕೊಂಡೆ ಪುನಃ ನಿನ್ನ ದೌಹಿತ್ರರ ಪುಣ್ಯದಿಂದ ಮತ್ತೆ ಇಲ್ಲಿಗೆ ಬರಲು ಸಾಧ್ಯವಾಗಿದೆ. ಈ ಸ್ಥಾನ ಅಚಲವೂ, ಶಾಶ್ವತವೂ ಉತ್ತಮೋತ್ತಮವೂ, ನಾಶರಹಿತವೂ ಆಗಿದೆ.

ಆಗ ಯಯಾತಿಯು ಪಿತಾಮಹ ಬ್ರಹ್ಮನಿಗೆ ಹೀಗೆ ಪ್ರಶ್ನಿಸಿದನು.

'ನಾನು ಸಾವಿರಾರು ವರ್ಷ ಪರ್ಯಂತ ಅನೇಕ ಯಜ್ಞಯಾಗ, ದಾನಾದಿಗಳಿಂದ ಪ್ರಜಾಪಾಲನೆಯಿಂದ ಹೊಂದಿದ ಸ್ವರ್ಗದಿಂದ ಅತ್ಯಂತ ಅಲ್ಪ ಕಾಲದಲ್ಲಿಯೇ ಹೇಗೆ ಏಕೆ ಚ್ಯುತನಾದೆ? ಆ ಪುಣ್ಯವೆಲ್ಲ ಹೇಗೆ ನಾಶವಾಯಿತು? ದಯವಿಟ್ಟು ನನ್ನ ಈ ಸಂಶಯವನ್ನು ಪರಿಹರಿಸು'.

ಅದಕ್ಕೆ ಪಿತಾಮಹನು ಉತ್ತರಿಸಿದನು.

'ರಾಜನ್ ನೀನು ಅಂತಹ ಪುಣ್ಯ ಕಳೆದ್ರುಕೊಳ್ಳಲು ನಿನ್ನ ದುರಭಿಮಾನ ದರ್ಪ, ಗರ್ವವೇ ಕಾರಣ ಆದ್ದರಿಂದ ಸ್ವರ್ಗ ವಾಸಿಗಳಿಂದ ಧಿಕ್ಕರಿಸಲ್ಪಟ್ಟೆ, ಸ್ವರ್ಗದಿಂದಲೂ ಭೂಮಿಗೆ ತಳ್ಳಲ್ಪಟ್ಟೆ॥ ಶಾಶ್ವತಲೋಕಗಳು ದುರಭಿಮಾನದಿಂದ, ಬಲದಿಂದ, ಹಿಂಸಾದಿಗಳಿಂದ ಸಿಗುವುದಿಲ್ಲ. **ಆದ್ದರಿಂದ ಅಧಮರನ್ನಾಗಲೀ, ಮಧ್ಯಮರನ್ನಾಗಲೀ ಉತ್ತಮರನ್ನಾಗಲೀ ಅವಮಾನ ಮಾಡಬಾರದು'**

ಬಹುವರ್ಷಸಹಸ್ರಾಂತಂ ಪ್ರಜಾಪಾಲನವರ್ಧಿತಮ್ । ಫಲಂ ।
ತದನೇನೈವ ದೋಷೇಣ ಕ್ಷೀಣಂ ಯೇನಾಸಿ ಪಾತಿತಃ ।
ಅಭಿಮಾನೇನ ರಾಜೇಂದ್ರ ಧಿಕ್ಕೃತಃ ಸ್ವರ್ಗವಾಸಿಭಿಃ ॥ ೧೨೩-೧೫
'ನಾವಮಾನ್ಯಾಸ್ತ್ವಯಾ ರಾಜನ್ ಅಧಮೋತ್ಕೃಷ್ಟ ಮಧ್ಯಮಾಃ ।
ನ ಹಿ ಮಾನಪ್ರದಗ್ಧಾನಾಂ ಕಶ್ಚಿದಸ್ತಿ ಶಮಃ ಕ್ವಚಿತ್' ॥ ೧೨೩-೧೭

ಆದ್ದರಿಂದ ರಾಜನ್! ನೀನು (ಎಂದೂ) (ನಿನಗಿಂತ) ಅಧಮರನ್ನಾಗಲೀ ಮಧ್ಯಮರನ್ನಾಗಲೀ (ಸಮಾನ ಸ್ಕಂದರನ್ನಾಗಲೀ) ಉತ್ತಮರನ್ನಾಗಲೀ ಅವಮಾನ

ಮಾಡಬೇಡ'. ದುರಭಿಮಾನವೆಂಬ ಅಗ್ನಿ ಜ್ವಾಲೆಗೆ ಸಿಕ್ಕು ಸುಡಲ್ಪಡುತ್ತಿರುವವರಿಗೆ ಉಪಶಮನವು ಯಾವಾಗಲೂ ಯಾವ ಉಪಾಯದಿಂದಲೂ ಅಸಾಧ್ಯವೇ ಸರಿ.

ಹೀಗೆ ಹೇಳುತ್ತಾ ಚತುರ್ಮುಖ ಬ್ರಹ್ಮನು **'ಈ ಉಪಾಖ್ಯಾನವನ್ನು ಹೇಳುವವರು ಹಾಗೂ ಕೇಳುವವರು ಎಂತಹ ಆಪತ್ತಿಗೆ ಒಳಗಾದರೂ ಅದರಿಂದ ಪಾರಾಗುತ್ತಾರೆ. ಇದರಲ್ಲಿ ಯಾವ ಸಂಶಯವಿಲ್ಲ'** ಎಂದನು[೧].

ನಾರದರು ಈ ಉಪಾಖ್ಯಾನವನ್ನು ಹೇಳಿ ಮಾನಧನನಾದ ದುರ್ಯೋಧನನಿಗೂ ದುರಾಗ್ರಹಬಿಡು. ಹಿರಿಯರನ್ನು ನಿರ್ಬಂಧಕ್ಕೆ ಒಳಪಡಿಸಬೇಡ. ಪಾಂಡವರೊಂದಿಗೆ ಸಂಧಿ ಮಾಡಿಕೊ. ಎಂದು ಮುಂತಾಗಿ ಉಪದೇಶ ನೀಡಿದರು[೨].

## ಸಂದೇಶಗಳು–ವಿವರಣೆಗಳು

ಇಲ್ಲಿ ಗಾಲವ ಎಂಬ ವಿಶ್ವಾಮಿತ್ರ ಋಷಿಗಳ ಶಿಷ್ಯನು ವಿಶ್ವಾಮಿತ್ರರಲ್ಲಿ ವೇದ ಶಾಸ್ತ್ರಾಧ್ಯಯನ, ಗುರುಸೇವೆಯನ್ನು ವಿಶೇಷವಾಗಿ ಪ್ರಾಮಾಣಿಕವಾಗಿ ಮಾಡಿದ್ದನಷ್ಟೆ. ಅದರಿಂದ ಗುರುಗಳಾದ ವಿಶ್ವಾಮಿತ್ರರು ಸಂಪ್ರೀತರಾಗಿದ್ದರು ಎಂಬುದು ಈ ಚರಿತ್ರೆಯಿಂದ ವಿದಿತ. ಅದರಲ್ಲೂ ವಿಶ್ವಾಮಿತ್ರರನ್ನು ಪರೀಕ್ಷಿಸಲು ಯಮದೇವರು ವಸಿಷ್ಠರ ವೇಷದಲ್ಲಿ ಬಂದಾಗ ವಿಶ್ವಾಮಿತ್ರರು ತುಂಬಾ ಸಂತೋಷದಿಂದ ಅವರ ಸಲುವಾಗಿ ಪರಮಾನ್ನದ ಚರುವನ್ನು ಸಿದ್ಧ ಪಡಿಸಿದರು. ಆದರೆ ಬಂದ ಅತಿಥಿಗಳನ್ನು ಶಿಷ್ಟಾಚಾರದ ಪ್ರಕಾರ ಮೊದಲು ಕರೆದು ಅರ್ಘ್ಯ ಪಾದ್ಯಾದಿಗಳನ್ನು ಕೊಡದೆ ಇದ್ದಾಗ ಅವರು ತಮ್ಮನ್ನು ಕರೆದ ಇತರ ಋಷಿಗಳ ಆತಿಥ್ಯ ಸ್ವೀಕರಿಸಿದ್ದರು. ಆದರೆ ವಸಿಷ್ಠರು ಆಮೇಲೆ ಬರುವುದಾಗಿ ಹೋದವರು ೧೦೦ ವರ್ಷಗಳ ನಂತರ ಬಂದರು. ಅಲ್ಲಿಯವರೆಗೆ ಈ ವಿಶ್ವಾಮಿತ್ರರು ತಾವು ಸಿದ್ಧ ಪಡಿಸಿದ ಚರುವನ್ನು ತಮ್ಮ ತಲೆಯ ಮೇಲೆ ಇಟ್ಟುಕೊಂಡು ಕಾಯುತ್ತಿದ್ದರೆಂದೂ ಆಗ ಅವರ ಸೇವೆಯನ್ನು ವಿಶಿಷ್ಟ ರೀತಿಯಲ್ಲಿ ಗಾಲವ ಮುನಿ–(ಶಿಷ್ಯನು) ಮಾಡಿದ. ಇಲ್ಲಿ ಗಮನಿಸಬೇಕಾದ ಅಂಶಗಳು ಹೀಗಿವೆ.

೧) ಬಂದ ಅತಿಥಿಗೆ ಮೊದಲು ಮಾಡಬೇಕಾದ ಆವಾಹನ – ಅರ್ಘ್ಯ ಪಾದ್ಯಾದಿಗಳನ್ನು ಕೊಟ್ಟು ಉಪಚರಿಸಿ ನಂತರ ಭೋಜನಕ್ಕೂ ಆಹ್ವಾನಿಸಿ ಅದಕ್ಕೆ ಸಿದ್ಧತೆ ಮಾಡಬೇಕು.

---

೧ ಪತನಾರೋಹಣಮಿದಂ ಕಥಯಿಷ್ಯಂತಿ ಯೇ ನರಾಃ ।
ವಿಷಮಾಣ್ಯ ಪಿತೇ ಪ್ರಾಪ್ತಾಸ್ತರಿಷ್ಯಂತಿ ನ ಸಂಶಯಃ ॥ – ೧೨೩/೧೮

೨ ಶ್ರೋತವ್ಯಂ ಹಿತಕಾಮಾನಾಂ ಸುಹೃದಾಂ ಹಿತಮಿಚ್ಛತಾಮ್ ।
ನ ಕರ್ತವ್ಯೋ ಹಿ ನಿರ್ಬಂಧೋ ನಿರ್ಬಂಧೋ ಹಿ ಕ್ಷಯೋದಯಃ ॥
ತಸ್ಮಾತ್ತ್ವಮಪಿ ಗಾಂಧಾರೇ ಮಾನಂ ಕ್ರೋಧಂ ಚ ವರ್ಜಯ ।
ಸಂಧತ್ಸ್ವ ಪಾಂಡವೈರ್ವೀರ ಸಂರಂಭಂ ತ್ಯಜ ಪಾರ್ಥಿವ ॥ – ೧೨೩/೨೦,೨೧

೨) ವಿಶ್ವಾಮಿತ್ರರು ಅದನ್ನು ಮಾಡದೇ ಇದ್ದರೂ ಮುಂದೆ ಅತಿಥಿ ಬರುವವರೆಗೂ ಕಾದರು ಅದು ಗುಣವೇ. **ಅತಿಥಿ ಸಲುವಾಗಿ ಕಾಯುವ ಗುಣ ತುಂಬಾ ಶ್ಲಾಘನೀಯ**

೩) ಈ ಮಧ್ಯೆ ಗಾಲವ, ಗುರುಗಳನ್ನು ತಾನು ಗುರುದಕ್ಷಿಣೆ ಏನು ಕೊಡಬೇಕೆಂದು ಮತ್ತೆ ಮತ್ತೆ ಕೇಳಿದ. ವಿಶ್ವಾಮಿತ್ರರು ಬೇಡ ಬೇಡ ಎಂದು ಹೇಳಿದರೂ ಕೇಳದೆ ತಾನು ವಿದ್ಯಾಸಿದ್ಧಿಗೋಸುಗ ಗುರುದಕ್ಷಿಣೆಯನ್ನು ಕೊಡಲೇಬೇಕೆಂದು ಆಗ್ರಹ ಪಡಿಸಿದ. ಇದು ಗುರುಗಳನ್ನು ಕೆರಳಿಸಿತು. ಕೋಪದಿಂದ ೮೦೦ ವಿಶಿಷ್ಟ ಕುದುರೆಗಳನ್ನು ತಂದು ಕೂಡಲೆ ಕೊಡಲು ಆದೇಶ ನೀಡಿದರು.

ಗುರುಗಳ ಪ್ರಸನ್ನತೆಯು ಮುಖ್ಯವೆಂದು ಭಾವಿಸದೆ ಯಾಂತ್ರಿಕವಾಗಿ ಗುರುದಕ್ಷಿಣೆ ಕೊಡುತ್ತೇನೆಂಬ ಗಾಲವನ ವರ್ತನೆ ಒಂದು ರೀತಿಯ ನಿರ್ಬಂಧಕ್ಕೆ ಕಾರಣವಾಯಿತು. ಅದು ಮಾಡಬಾರದಿತ್ತು. ಹಾಗೆ **ಗುರುಹಿರಿಯರನ್ನು ನಿರ್ಬಂಧಿಸುವುದು ಸೂಕ್ತವಲ್ಲವೆಂದು ಈ ಉಪಾಖ್ಯಾನದ ಮುಖ್ಯ ಸಂದೇಶ.**

೩) ವಿಶಿಷ್ಟ ಗುರು ದಕ್ಷಿಣೆ ಸಮರ್ಪಿಸಲು ತನಗೆ ಆಗದೆಂಬ ಅರಿವು ಗಾಲವನಿಗೆ ನಂತರ ಆಯಿತು. ತಾನು ಪ್ರಾಣ ಬಿಡುವುದೇ ಉಚಿತವೆಂದೇ ಭಾವಿಸಿದ. ಇದೊಂದು ತರಹದ ಹತಾಶೆಯ ಮನೋಭಾವನೆ. ಆದರೆ ಇಲ್ಲಿ ಗುರುದಕ್ಷಿಣೆಯ ಮಹತ್ತ್ವ, ಕೊಡದಿದ್ದರೆ ಪ್ರತಿಜ್ಞೆಯನ್ನು ಪೂರೈಸದಿದ್ದುದಕ್ಕೆ ಗಾಲವನಿಗಾದ ಪ್ರಾಯಶ್ಚಿತ್ತ ಮೆಚ್ಚ ತಕ್ಕದ್ದು. ತನ್ನ ಯೋಗ್ಯತೆ ಮೀರಿ ಚಿಂತಿಸುವುದು ಎಷ್ಟು ಅನುಚಿತವೋ ಆಗದಿದ್ದಾಗ ಪ್ರಾಯಶ್ಚಿತ್ತವೂ ಒಳ್ಳೆಯದೇ. ಅತಿ ಉತ್ಸಾಹ ಒಳ್ಳೆಯದಲ್ಲ. ಅತ್ಯುತ್ಸಾಹ ಅತಿ ದುಃಖಕ್ಕೆ ಕಾರಣವಾಗುತ್ತದೆ. ರಾಹು ಅಮೃತ ಪಡೆಯಲು ಹೋಗಿ ಶಿರಸ್ಸನ್ನೇ ಕಳೆದುಕೊಂಡನು.

**ಉತ್ಸಾಹಯುಕ್ತಸ್ಯ ಚ ತತ್ಪ್ರತೀಪಂ ಭವೇದ್ಧಿ ರಾಹೋರಿವ ದುಃಖರೂಪಂ ।**
**ಮ.ತಾ.ನಿ. ೧೦-೩೫**

೪) ಗುರುದಕ್ಷಿಣೆ ಕೊಡದಿದ್ದರೆ ತಾನು ಮಹಾಕೃತಘ್ನನಾಗಿ ಬಿಡುತ್ತೇನೆ. ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲವೆಂಬ ಗಾಲವನ ಮಾತುಗಳು ತುಂಬಾ ಆದರ್ಶ-ಆದರ್ಶ ಶಿಷ್ಯನ ಹೃದಯಾಂತರಾಳದ ಮಾತುಗಳೂ ನಿಜ.

**'ಕುತಃ ಕೃತಘ್ನಸ್ಯ ಯಶಃ ಕುತಃ ಸ್ಥಾನಂ ಕುತಃ ಸುಖಂ ।**
**ಅಶ್ರದ್ಧೇಯಃ ಕೃತಘ್ನೋಹಿ ಕೃತಘ್ನೇ ನಾಸ್ತಿ ನಿಷ್ಕೃತಿಃ ॥** ಅ ೧೦೭-೧೦

೫) ವಿಶ್ವಾಮಿತ್ರರು ತಯಾರಿಸಿದ ಚರು ೧೦೦ ವರ್ಷಗಳಾದರೂ ಹಳಸಲಿಲ್ಲ, ಕೊಳೆಯಲಿಲ್ಲ. ಅವರ ತಲೆಯ ಮೇಲಿದ್ದುದು ಹಾಗೆಯೇ ಬಿಸಿಯಾಗಿತ್ತು. ಶುದ್ಧವಾಗಿತ್ತು. ಇದೇ ತಪಸ್ಸಿನ ಫಲ ತಪಸ್ಸಿನಿಂದ ಎಲ್ಲ ಫಲಗಳ ಸಿದ್ಧಿ.

**ಸರ್ವೇ ಹಿ ಪುರುಷಾರ್ಥಾಃ ಸ್ಯುಃ ಜ್ಞಾನಾದೇವ ನ ಸಂಶಯಃ ।**
**ಅಣುಭಾಷ್ಯ ಅ ೩**

ಇದೆಲ್ಲವನ್ನು ಭೌತಿಕ ನಿಯಮಗಳು ವಿವರಿಸಲಾರವು. ಇದರ ಹಿನ್ನೆಲೆ ಎಲ್ಲ ದೇವರ ಲೀಲೆ ಅಚಿಂತ್ಯ ಶಕ್ತಿ ದೇವರದೇ.

೬) ಅವಿಚ್ಛಿನ್ನವಾದ ಸೇವೆಯೇ ಗುರುದಕ್ಷಿಣೆ ಎಂದು ಗಾಲವರಿಗೆ ಹೊಳೆಯಲಿಲ್ಲ. ಆದ್ದರಿಂದಲೇ ಗುರುದಕ್ಷಿಣೆ ಸ್ವೀಕರಿಸಲು ಆಗ್ರಹಿಸಿ ದುಃಖಿಸಿದರು.

೭) ಪ್ರತಿಜ್ಞೆ ಮಾಡಿ ಅದನ್ನು ನಡೆಸದಿದ್ದಲ್ಲಿ ಹಿಂದೆ ಮಾಡಿದ ಇಷ್ಟಾ ಪೂರ್ತಗಳೆಲ್ಲ ನಾಶವಾಗುತ್ತವೆ.

೮) ಪ್ರಾಮಾಣಿಕ ಭಾವನೆಗಳಿಗೆ ದೇವರು ಸಹಾಯ ಮಾಡುತ್ತಾನೆ. ಅಂತೆಯೇ ಗರುಡದೇವ ಗಾಲವನ ಸಹಾಯಕ್ಕೆ ತಾನೇ ಬಂದ (ಗರುಡ ಗಾಲವನ ಸ್ನೇಹಿತ) ಅಲ್ಲದೆ ಒಳ್ಳೆಯ ವಿಚಾರಗಳೂ ದೇವತೆಗಳಿಂದ ಬರುತ್ತವೆ.

**ನ ದೇವಾ ಯಷ್ಟಿಮಾದಾಯ ರಕ್ಷಂತಿ ಪಶುಪಾಲವತ್**
**ಯಂ ತು ರಕ್ಷಿತುಮಿಚ್ಛಂತಿ ಬುಧ್ಯಾ ಸಂಯೋಜಯಂತಿ ತಂ ॥ ಮನುಸ್ಮೃತಿ**

ಇಲ್ಲಿ ಗರುಡ ತಾನೇ ಸಹಾಯ ಮಾಡಲು ಬಂದ

೯) ಗರುಡ ಬಂದಾಗ ತನ್ನ ಸಮಸ್ಯೆ ಹೇಳಲಿಲ್ಲ. ಗಾಲವ ಹೇಳಬೇಕಿತ್ತು. ನಿನಗೆ ಸಹಾಯ ಮಾಡುವೆ ಎಂದು ಗಾಲವನನ್ನು ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳಿಗೆ ಕರೆದುಕೊಂಡು ಹೋದ ಗರುಡನೂ ಗಾಲವನನ್ನು ಏಕೆಂದು ಕೇಳಲಿಲ್ಲ. ಗಾಲವನು ತಾನೇ ತನಗೇನು ಬೇಕೆಂದು ಮೊದಲು ಹೇಳಲಿಲ್ಲ. ಆದ್ದರಿಂದ **ನಮಗೆ ಸಹಾಯ ಮಾಡಲು ಬರುವವರಿಗೆ ನಾವೇ ಮೊದಲು ನಮ್ಮ ಸಮಸ್ಯೆಯ ಬಗ್ಗೆ ಅರುಹಬೇಕು-ಬೇಡಬೇಕು.**

೧೦) ಅದಕ್ಕೂ ಮೊದಲು ಗಾಲವನ ಸಾತ್ತ್ವಿಕ ಭಾವನೆ "ನನ್ನ ಸಮಸ್ಯೆಯ ಪರಿಹಾರಕ್ಕಾಗಿ ಕೃಷ್ಣನನ್ನು ಶರಣು ಹೊಂದುವ" ಎಂದು. ಇದು ಸಮಸ್ಯೆಯ ಪರಿಹಾರಕ್ಕೆ ಇರುವ ಅತ್ಯುತ್ತಮ ಉಪಾಯ. ಆದ್ದರಿಂದ ಗರುಡನನ್ನು ದೇವರು ಕಳಿಸಿಕೊಟ್ಟ. ಗಾಲವನ ಸಹಾಯಕ್ಕಾಗಿ

೧೧) ಗರುಡ ಶಾಂಡಿಲಿ ತಪಸ್ವಿನಿಯನ್ನು ಎತ್ತಿಕೊಂಡು ಹೋಗಿ ಈಗಿರುವ ಸ್ಥಾನಕ್ಕಿಂತ ಉತ್ತಮ ಸ್ಥಾನದಲ್ಲಿರಿಸಬೇಕೆಂಬ ಭಾವನೆ ಸಾತ್ವಿಕವಾಗಿತ್ತು. ಆದರೆ ಅದನ್ನು ಗರುಡನು ಆಕೆಯೊಡನೆ ಚರ್ಚಿಸದೆ ಹಾಗೆ ವಿಚಾರಿಸಿದ್ದರಿಂದಲೇ ಏನೋ ಶಾಂಡಿಲಿ ಕುಪಿತಳಾದಳು. ಪರಿಣಾಮ ಗರುಡ ತನ್ನ ರೆಕ್ಕೆಗಳನ್ನು ಕಳೆದುಕೊಂಡ. ಮಾಂಸದ ಮುದ್ದೆಯಂತಾದ. **ಪರಸ್ತ್ರೀಯರ ಬಗ್ಗೆ ಚಿಂತನೆಯೂ ಅಪಾಯಕಾರಿ. ಇನ್ನು ಅವರ ಬಗ್ಗೆ ದುಶ್ಚಿಂತನೆ ದುರುದ್ದೇಶ್ಯದ ಚಿಂತನೆಯಂತೂ ನರಕಾದ್ಯನರ್ಥಕ್ಕೆ ಕಾರಣ.**

೧೨) ಶಾಂಡಿಲಿ ಕೋಪಗೊಂಡರೂ ಮತ್ತೆ ಕ್ಷಮಿಸಿ ಗರುಡನನ್ನು ಮೊದಲಿನಂತೆ ಮಾಡುತ್ತಾಳೆ- ತನ್ನ ತಪಸ್ಸು ಕ್ಷಮಾ ಗುಣಗಳಿಂದ **ತಪಸ್ವಿಗಳು ವಜ್ರದಂತೆ ಕಠೋರ ಹೃದಯದವರಾಗಿಯೂ ಕುಸುಮದಂತೆ ಮೃದುವಾಗಿಯೂ ವರ್ತಿಸುತ್ತಾರೆ.**

೧೩) ಗರುಡನು ಯಯಾತಿ ರಾಜನ ಬಳಿಗೆ ಗಾಲವರನ್ನು ಕರೆದುಕೊಂಡು ಹೋಗಿ ಗಾಲವನ ಸಮಸ್ಯೆ ತಿಳಿಸಿ ಸಹಾಯ ಮಾಡಲು ಕೋರುತ್ತಾನೆ. ದೇವತೆಳು ಹೇಗೆ ಸಹಾಯ ಮಾಡುತ್ತಾರೆನ್ನಲು ಇದೇ ಸಾಕ್ಷಿ. ಗರುಡನಂತಹ ಗೆಳೆಯ ಗಾಲವರಂತಹ ಪ್ರಾಮಾಣಿಕರಿಗೆ ಸಿಕ್ಕೇ ಸಿಗುತ್ತಾನೆ. ಯಯಾತಿಯನ್ನು ಧನ ಕೇಳುತ್ತಾನೆ. ಆದರೆ ಧನದ ಬದಲಾಗಿ ತನ್ನ ಅಪೂರ್ವ ಸುಂದರಿಯಾದ ಮಾಧವಿಯೆಂಬ ಮಗಳನ್ನು ಕೊಟ್ಟು ಈಕೆಯಲ್ಲಿ ಯೋಗ್ಯ ರಾಜರಿಂದ ಸಂತಾನ ಪಡೆದು ಗುರುದಕ್ಷಿಣೆ ರೂಪದಲ್ಲಿ ಕುದುರೆಗಳನ್ನು ಹೊಂದಲು ಯಯಾತಿಯು ಮುಂದೆ ಮಾರ್ಗದರ್ಶನ ಮಾಡುತ್ತಾನೆ.

೧೪) ಇದುವೇ ದೈವೀ ಸಹಾಯಗಳ ಪರಿ. ಹೇಗೆಂದು ಯಾರಿಗೂ ಗೊತ್ತಿರುವುದಿಲ್ಲ.

| ಗಾಲವನು ಕಂಡ ರಾಜರು | ಮಾಧವಿಯಲ್ಲಿ ಪಡೆದ ಮಗ | ಪಡೆದ ಕುದುರೆಗಳು |
|---|---|---|
| ಹರ್ಯಶ್ವ–ಇಕ್ಷಾಕು ವಂಶದವ | ವಸುಮನ | ೨೦೦ |
| ದಿವೋದಾಸ–ಕಾಶಿರಾಜ | ಪ್ರತರ್ದನ | ೨೦೦ |
| ಉಶೀನರ–ಭೋಜರಾಜ | ಶಿಬಿ | ೨೦೦ |
| ವಿಶ್ವಾಮಿತ್ರರು(ಗುರುಗಳು) | ಅಷ್ಟಕ | ಕುದುರೆಗಳ ಬದಲಾಗಿ ಮಾಧವಿಯಲ್ಲಿ ಪುತ್ರ |

ಮೇಲ್ಕಂಡ ರಾಜ್ಯರಿಗೆ ಸತ್ಸಂತಾನವಿರಲಿಲ್ಲ. ತಾನಾಗಿ ಬಂದ ಗಾಲವರಿಂದ ಮಾಧವಿಯನ್ನು ಕೇವಲ ಸತ್ಸಂತಾನಾಪೇಕ್ಷಿಗಳ್ಳಾಗಿ ಆಕೆಯಲ್ಲಿ ನಾಲ್ಕು ಪುತ್ರರನ್ನು ಪಡೆದ ಮೂವರು ರಾಜರು ಮಾಧವಿಯನ್ನು ಕೇವಲ ಭೋಗಕ್ಕಾಗಿ ಉಪಯೋಗಿಸಲಿಲ್ಲ. ಆಗಿನ ಕಾಲದ ರಾಜರು, ಜನರು ಭೋಗದ ಜೀವನ ನಡೆಸದೆ ಕೇವಲ ಧಾರ್ಮಿಕರಾಗಿ ಬಾಳುತ್ತಿದ್ದರು. ಆದ್ದರಿಂದ ದೈವಾಯತ್ತವಾಗಿ ಬಂದ ಪದಾರ್ಥಗಳನ್ನು ಆ ಉದ್ದೇಶ ಪೂರ್ತಿಗಾಗಿ ಬಳಸಬೇಕೇ ಹೊರತು ಕಾಮೋಪಭೋಗಕ್ಕಾಗಿ ಎಂದೂ ಉಪಯೋಗಿಸಬಾರದು ಎಂದು ತಿಳಿದಿದ್ದರು.

೧೫) ಮಾಧವಿಯು ಯಾವುದೋ ಒಬ್ಬ ಬ್ರಹ್ಮವಾದಿಯ ವರಪ್ರಸಾದದಿಂದ ನಾಲ್ವರು ಮಕ್ಕಳನ್ನು ಪಡೆದರೂ ಕನ್ಯಾವಸ್ಥಾವನ್ನೇ ಪಡೆದಳು. ಪ್ರತಿ ರಾಜರೊಡನೆ ರಮಿಸಿ ಪುತ್ರನನ್ನು ಪಡೆದ ಮೇಲೆ ಗಾಲವರು ಆಕೆಯನ್ನು ಮತ್ತೊಬ್ಬ ರಾಜನ ಬಳಿಗೆ ಹೋದಾಗ ಆಕೆ ಸ್ವಾಭಾವಿಕವಾಗಿ ಕನ್ಯೆಯಾಗಿಯೇ ಇದ್ದಳು. ಇದು ಕೂಡಾ ಆ ಬ್ರಹ್ಮವಾದಿಯ ತಪಸ್ಸಿನ ಫಲ ಮತ್ತು ಆ ತಪಸ್ಸನ್ನು ಸ್ವೀಕರಿಸಲು ಮಾಧವಿಗೆ ಇದ್ದ ಸತ್ಪಾತ್ರತೆ. ಆದ್ದರಿಂದ ಆಕೆ ಕನ್ಯೆಯೇ ಆದಳು.

ಹೀಗೆ ಯಯಾತಿಯ ರಾಜನ ಮಗಳೇ ೪ ರಾಜರ್ಷಿಗಳೊಡನೆ ದಾಂಪತ್ಯ ಜೀವನ ನಡೆಸಿಯೂ ಮತ್ತೆ ಕನ್ಯೆಯಾಗಿಯೇ ಇದ್ದಳೆಂದಾಗ ದ್ರೌಪದಿಯು ಐವರು ಪತಿಯರೊಡನೆ ಇದ್ದು ಪ್ರತಿವಾಸರ (ಪ್ರತಿದಿನವೂ) ಕನ್ಯೆಯಾಗಿಯೇ ಇರುತ್ತಿದ್ದಳೆಂಬುದು ಏನಾಶ್ಚರ್ಯ! ಬ್ರಹ್ಮವಾದಿಗೆ ಆತರಹದ ತಪಸ್ಸಿದ್ಧಿ ಇರುವಾಗ ಬ್ರಹ್ಮವಾದಿಗಳಿಗೆಲ್ಲಾ ಜಗಜ್ಜನನಿಯಾದ ಜೀವೋತ್ತಮಳಾದ ದ್ರೌಪದಿಗೆ ನಿತ್ಯ ಕನ್ಯಾವಸ್ಥೆ. ಮುಂದೆ ಪ್ರತಿವರ್ಷಕ್ಕೊಮ್ಮೆ ಕನ್ಯಾವಸ್ಥಾ ಬಂದುದೇನು ಆಶ್ಚರ್ಯ. ಈ ಬಗ್ಗೆ ವಿಪರೀತ ಕಲ್ಪನೆಯು ಸ್ವೋತ್ತಮದ್ರೋಹ ಮತ್ತು ಅದೇ ಅಂಧಂತಮಸ್ಸಿಗೆ ಕಾರಣವಾಗುವುದರಲ್ಲಿ ಸಂಶಯವಿಲ್ಲ.

೧೬) ಯಯಾತಿ ವಯೋಧರ್ಮರೀತ್ಯಾ ದೇಹತ್ಯಾಗ ಮಾಡಿ ಸ್ವರ್ಗಕ್ಕೆ ಹೋಗಿ ಎಷ್ಟೋ ಕಾಲ ಸುಖವಾಗಿದ್ದ. ಆ ಮಧ್ಯೆ ತನ್ನ ಸಮರಾರೆಂಬ ಗರ್ವಕ್ಕೆ ಒಳಗಾಗಿ ಸ್ವರ್ಗದಿಂದ ದೂಡಲ್ಪಟ್ಟನಷ್ಟೇ. ನಹುಷನಂತೆ ದರ್ಪದಿಂದ ಹಾಳಾದ. ಆದ್ದರಿಂದ ಎಲ್ಲಿಯೇ ಹೋದರೂ ಅಲ್ಲಿಯ ಜನರೊಡನೆ ವಿನಯಾದಿಗಳಿಂದ ಇರಬೇಕು. ಇಲ್ಲದಿದ್ದರೆ ಅಧಃಪತನ ಖಚಿತ.

**ತಸ್ಮಾನ್ನವಿಸ್ಮಯಃ ಕಾರ್ಯಃ ನ ದರ್ಪಶ್ಚ ತ್ವಯಾನಘ ॥ ಮ.ತಾ.ನಿ ೨೧-೫೨**

೧೭) ಯಯಾತಿಯ ಮಗಳು ಮಾಧವಿ ಆಕೆ ಮಹಾ ಗುಣವಂತೆ ಆಕೆಯಲ್ಲಿ ನಾಲ್ಕು ರಾಜರ್ಷಿಗಳಿಂದ ಜನಿಸಿದ ನಾಲ್ವರು ಪುತ್ರರೂ ಧರ್ಮಿಷ್ಠರು ತಪಸ್ವಿಗಳು ದಾನಶೀಲರಾಗಿದ್ದರು. ಯಯಾತಿ ಸ್ವರ್ಗದಿಂದ ಈ ಮೊಮ್ಮಕ್ಕಳ ಮಧ್ಯೆ ಬಿದ್ದ ಆತನ ಸಂಕಲ್ಪದಂತೆ. ಆಗಲೇ ಮಾಧವಿಯೂ ಅಲ್ಲಿಗೆ ಬಂದಳು. ತಾತ ಯಯಾತಿಯನ್ನು ನೋಡಿದಳು. ಮೊಮ್ಮಕ್ಕಳ ಹಾಗೂ ತನ್ನ ಸಂಚಿತ ಪುಣ್ಯವನ್ನು ತಂದೆಗೆ ಧಾರೆಯೆರೆದಳು. ಹೀಗಾಗಿ ಯಯಾತಿ ಮತ್ತೆ ಸ್ವರ್ಗಕ್ಕೆ ಏರಿದ.

ಆದ್ದರಿಂದ ಸತ್ಸಾಂತನವಿದ್ದರೆ ಹಿರಿಯರಿಗೆ ಸದ್ಗತಿ ಶತಃಸಿದ್ಧ. ಪುತ್ರರಿಂದ ಮಾತ್ರ ಸದ್ಗತಿ ಎಂಬುದು ತಪ್ಪು. ಯಯಾತಿಯ ಮಗಳು ಮಾಧವಿ, ಮೊಮ್ಮಕ್ಕಳು ಪ್ರತರ್ದನ, ಶಿಬಿ ಮೊದಲಾದವರು ದೌಹಿತ್ರ ಸಂತಾನದಿಂದಲೂ ಹಿರಿಯರಿಗೆಲ್ಲಾ ಸದ್ಗತಿ ಉಂಟು. ಪಾಂಡುರಾಜ ತನ್ನ ಪುತ್ರ ಸಂತಾನದಿಂದ (ಧಮರಾಜ, ಭೀಮ, ಅರ್ಜುನ, ನಕುಲ, ಸಹದೇವ) ಸದ್ಗತಿ ಪಡೆದ. ಯಯಾತಿ ತನ್ನ ಮಗಳ ಪುಣ್ಯದಿಂದ ಹಾಗೂ ಮಗಳ ಮಕ್ಕಳಿಂದ ಸದ್ಗತಿ ಹೊಂದಿದ ಎಂಬ ಸಂದೇಶ ಇಲ್ಲಿದೆ. **ಆದ್ದರಿಂದ ಮಗಳನ್ನು ಆಕೆಯ ಮಕ್ಕಳನ್ನು ಚೆನ್ನಾಗಿ ಧಾರ್ಮಿಕರನ್ನಾಗಿಸುವ ಹೊಣೆ ತಂದೆಯ ಮೇಲಿದೆ.**

ಹೀಗೆ ಗಾಲವ ವಿಶ್ವಾಮಿತ್ರರಿಗೆ ೮೦೦ ವಿಶಿಷ್ಟ ಕುದುರೆಗಳನ್ನು ಕೊಟ್ಟು ಗುರು ಕೃಪೆಗೆ ಪಾತ್ರನಾದ. ಆತನ ನಿರ್ಬಂಧ ಸಾತ್ವಿಕವಾಗಿತ್ತು. ಯದ್ಯಪಿ ಗುರುದಕ್ಷಿಣೆ ಪಡೆಯಲು ಬಹಳ ಕಷ್ಟ ಪಟ್ಟ.

ಧುರ್ಯೋಧನ ಗುರುಗಳಿಗೆ ವಿಧೇಯನಾಗಿಯೂ ಇರಲಿಲ್ಲ. ಆದರೆ ದುರ್ಯೋಧನ ತನ್ನ ತಂದೆ-ತಾಯಿ ಭೀಷ್ಮಾದಿಗಳನ್ನು ತಾಮಸ ನಿರ್ಬಂಧಕ್ಕೆ

ಒಳಪಡಿಸಿ ತಾನೂ ಹಾಳಾದ. ಅವರಿಗೂ ಅಪಕೀರ್ತ್ಯಾದಿಗಳನ್ನು ಹೊಂದುವಂತೆ ಮಾಡಿ ಹಾಳಾದ. ಯೋಗ್ಯ ಗುರುದಕ್ಷಿಣೆಯನ್ನೂ ಕೊಡಲಿಲ್ಲ. ಪಾಂಡವರು ಮಾತ್ರ ಸೂಕ್ತ ಗುರುದಕ್ಷಿಣೆ ಕೊಟ್ಟು ಧನ್ಯರಾದರು.

ಶ್ರೀ ಕೃಷ್ಣನು ಕೌರವರ ಸಭೆಗೆ ಹೋಗಿ ಧೃತರಾಷ್ಟ್ರ ಗಾಂಧಾರಿಯರಿಗೆ ಹಾಗೂ ವಿಶೇಷವಾಗಿ ದುರ್ಯೋಧನನಿಗೆ ಪಾಂಡವರ ಪಾಲಿನ ರಾಜ್ಯವನ್ನು ಕೊಟ್ಟು ಮುಂದಾಗಲಿರುವ ಹತ್ಯಾಕಾಂಡವನ್ನು ತಪ್ಪಿಸಲು ಉಪದೇಶ ಮಾಡಿದನು. ಆದರೆ ಅವ್ಯಾವುದೂ ಪ್ರಯೋಜನಕ್ಕೆ ಬರಲಿಲ್ಲ. ದುರ್ಯೋಧನನು ಶ್ರೀಕೃಷ್ಣನನ್ನೇ ಬಂಧಿಸಲು ಪ್ರಯತ್ನಿಸಿದ್ದನ್ನು ಹಾಗೂ ನಡೆದ ಎಲ್ಲ ವಿಷಯವನ್ನು ಕುಂತೀ ದೇವಿಗೆ ಕೃಷ್ಣನು ತಿಳಿಸಿದ. ಮನುಷ್ಯನಾಗಿ ಅವತರಿಸಿದ ಕೃಷ್ಣನು ಕುಂತಿಗೆ ನಮಸ್ಕರಿಸಿ ಧರ್ಮರಾಜನಿಗೆ ತಾಯಿಯ ಸಂದೇಶವನ್ನು ಕೇಳಿದನು. ಕೃಷ್ಣನ ಅಪೇಕ್ಷೆಯ ಮೇರೆಗೆ ಕುಂತಿಯು ಧರ್ಮರಾಜನಿಗೆ ಬ್ರಾಹ್ಮಣನಂತೆ ವರ್ತಿಸದೆ ಕ್ಷತ್ರಿಯನಂತೆ ವರ್ತಿಸಲು ಉಪದೇಶಿಸುತ್ತಾಳೆ. ಅದೇ ಸಂದರ್ಭದಲ್ಲಿ ಮುಚುಕುಂದ ರಾಜನ ಹಾಗೂ ವಿದುಲೋಪಾಖ್ಯಾನಗಳನ್ನು ಕುಂತಿಯು ಧರ್ಮರಾಜನಿಗೆ ನೆನಪಿಸುವ ಮೂಲಕ ಕ್ಷತ್ರಿಯ ರಾಜನ ಧರ್ಮಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂದು ಸೂಚಿಸುತ್ತಾಳೆ. ಮುಚುಕುಂದನ ಬಗ್ಗೆ ಕೇವಲ ನಾಲ್ಕು ಶ್ಲೋಕಗಳು ಬಂದಿವೆ. (ಅ. ೧೩೨ – ೮ ರಿಂದ ೧೧) ವಿದುಲೋಪಾಖ್ಯಾನವು ಐದು ಅಧ್ಯಾಯಗಳಲ್ಲಿ ಬಂದಿವೆ. ಒಟ್ಟಾರೆ ಕ್ಷಾತ್ರ ಧರ್ಮದ ಕೆಚ್ಚನ್ನು ಕುಂತಿಯು ತನ್ನ ಮಗನಿಗೆ ತುಂಬುತ್ತಾಳೆ. (ಅ. ೧೩೩ ರಿಂದ ೧೩೭ರವರೆಗೆ)

*****

## ೫೯. ಮುಚುಕುಂದನ ಪ್ರಸಂಗ

ಮುಚುಕುಂದನ ವಿಷಯದಲ್ಲಿ ಹಿಂದೆ ಕುಬೇರನು ತುಂಬಾ ಸಂತುಷ್ಟನಾಗಿ ಈ ಭೂಮಂಡಲವನ್ನೇ ಕೊಟ್ಟನು. ಆದರೆ ಮುಚುಕುಂದನು ಅದನ್ನು ನಯವಾಗಿ ಬೇಡವೆಂದನು. ಕಾರಣ ಇನ್ನೂ ಆಶ್ಚರ್ಯಕರ. 'ನನ್ನ ಬಾಹು ಬಲದಿಂದ ಸಂಪಾದಿಸಿದ ಭೂಮಿಯನ್ನು ಮಾತ್ರ ಉಪಭೋಗಿಸಲು ಇಚ್ಛಿಸುತ್ತೇನೆ'. ಈ ಮಾತನ್ನು ಕೇಳಿದ ಕುಬೇರನು ಆಶ್ಚರ್ಯಗೊಂಡ ನಂತರ ಮುಚುಕುಂದನು ತನ್ನ ಬಾಹುಬಲದಿಂದಲೇ ಇಡೀ ಭೂಮಿಯನ್ನು ಗೆದ್ದು ಆಳಿದನು.

**'ಬಾಹುವೀರ್ಯಾರ್ಜಿತಂ ರಾಜ್ಯಮಶ್ನೀಯಾಮಿತಿ ಕಾಮಯೇ'** । ೧೩೨-೧೦

ಮುಂದೆ ಕುಂತಿಯು ಕ್ಷತ್ರಿಯನ ಮುಖ್ಯ ಧರ್ಮಗಳನ್ನು ಧರ್ಮರಾಜನಿಗೆ ಸಂದೇಶ ರೂಪದಲ್ಲಿ ತಿಳಿಸುತ್ತಾಳೆ.

೧) ಪ್ರಜಾಪಾಲನೆ ಕ್ಷತ್ರಿಯನ ಆದ್ಯ ಕರ್ತವ್ಯ (ಪ್ರಜೆಗಳು ಆಚರಿಸುವ ಧರ್ಮದ ಕಾಲು ಭಾಗ ಪುಣ್ಯ ರಾಜನಿಗೆ ಹೋಗುತ್ತದೆ. (೧೩೨-೧೨)

೨) ರಾಜನು ದುಷ್ಟ ಶಿಕ್ಷಣ ಶಿಷ್ಟ ಪಾಲನೆಯನ್ನು ಚೆನ್ನಾಗಿ ಅನುಸರಿಸಿದಲ್ಲಿ ಅವನಿಗೆ ದೇವತ್ವವೇ ಬರುತ್ತದೆ. (ಸ್ವರ್ಗದಲ್ಲಿ ದೇವತೆಗಳಂತೆ ಸುಖವಾಗಿರುತ್ತಾನೆ) ಇಲ್ಲದಿದ್ದರೆ ನರಕಕ್ಕೆ ಹೋಗುತ್ತಾನೆ. (೧೩೨-೧೩)

೩) ರಾಜನಿಗೆ ಹೇಳಲ್ಪಟ್ಟ ಸಾಮದಾನ ಭೇದ ದಂಡೋಪಾಯಗಳಲ್ಲಿ ದಂಡವೇ ಪ್ರಧಾನ ದಂಡನೀತಿಯನ್ನು ಯೋಗ್ಯ ರೀತಿಯಲ್ಲಿ ಅನುಷ್ಠಾನಕ್ಕೆ ತಂದರೆ ಆಗ ಕೃತಯುಗ ಆರಂಭವಾಗುತ್ತದೆ. (೧೩೨-೧೫)

೪) ರಾಜ್ಯದಲ್ಲಿ ಆಗುವ ಏರುಪೇರುಗಳಿಗೆ ಕಾಲವು ಕಾರಣವೇ? ರಾಜನು ಕಾರಣನೇ? ಈ ವಿಷಯದಲ್ಲಿ ರಾಜನೇ ಕಾಲಕ್ಕೆ ಕಾರಣ. (೧೩೨-೧೬)

೫) ರಾಜ್ಯವನ್ನು ಕೃತಾದಿಚತುರ್ಯುಗವನ್ನಾಗಿ ಮಾಡುವ ಸಾಮರ್ಥ್ಯ ರಾಜನಿಗೇ ಇದೆ ರಾಜನು ತನ್ನ ರಾಜ್ಯವನ್ನು ಕೃತಯುಗವನ್ನಾಗಿಯಾದರೂ ಮಾಡಬಹುದು. ಕಲಿಯುಗವನ್ನಾಗಿಯಾದರೂ ಮಾಡಬಹುದು (೧೩೨-೧೭) ಹೀಗೆ ಮಾಡುವ

ರಾಜನಿಗೆ ಅತ್ಯಂತ ಸುಖದಿಂದ ಕೂಡಿದ ಸುಖವೂ ಅಥವಾ ಅತ್ಯಂತ ಪಾಪಿಯಾಗಿ ಇಹ ಪರಗಳೆಲ್ಲವನ್ನು ಕಳೆದುಕೊಳ್ಳುತ್ತಾನೆ. (೧೩೨-೧೮,೧೯)

೬) ನೋಡು ಧರ್ಮರಾಜ ನಿನ್ನ ತಂದೆ ಪಾಂಡು, ತಾತ ಮೊದಲಾದ ಹಿರಿಯರು ರಾಜಧರ್ಮದ ಕಡೆ ಗಮನವಿಟ್ಟಿದ್ದರು. ಈಗ ನೀನು ರಾಜ್ಯಭಿಕ್ಷೆಯಂತಹ ಅತ್ಯಂತ ಕೀಳು ನೀತಿಯನ್ನು ಅನುಸರಿಸುತ್ತಿದ್ದೀ. (೧೩೨-೨೩)

೭) ನಾನು ನಿನ್ನಿಂದ ನಿತ್ಯವೂ ಯಜ್ಞ-ದಾನ, ತಪಸ್ಸು, ಶೌರ್ಯ, ಪ್ರಜ್ಞೆ, ಸಂತಾನ ಮಹಾತ್ಮ್ಯ, ಓಜಸ್ಸು ನಿರೀಕ್ಷಿಸುತ್ತೇನೆ. ಪಿತೃಗಳು ದೇವತೆಗಳು ತಮ್ಮ ಸಂತತಿಯಿಂದ ದಾನಶೀಲತೆ, ಅಧ್ಯಯನ, ಯಜ್ಞಶೀಲತೆ, ಪ್ರಜಾಪರಿಪಾಲನೆಗಳನ್ನು ಬಯಸುತ್ತಾರೆ. ಅದನ್ನೇ ನೀನು ಮಾಡಲು ಒಲ್ಲೆ ಎನ್ನುತ್ತಿದ್ದೀಯಾ (೧೩೨-೨೫,೨೬)

೮) ಬ್ರಾಹ್ಮಣನು ಭಿಕ್ಷಾಚಾರದಿಂದ, ಕ್ಷತ್ರಿಯನು ಪ್ರಜಾಪರಿಪಾಲನೆ, ವೈಶ್ಯನು ಧನಸಂಪಾದನೆ, ಶೂದ್ರನು ಈ ಮೂವರ ಸೇವೆಯನ್ನು ಮಾಡುವುದೇ ಅವರವರ ಧರ್ಮ.

**'ಬ್ರಾಹ್ಮಣಃ ಪ್ರಚರೇತ್ ಭೈಕ್ಷ್ಯಂ(ಕ್ಷಂ) ಕ್ಷತ್ರಿಯಃ ಪರಿಪಾಲಯೇತ್ ।**
**ವೈಶ್ಯೋ ಧನಾರ್ಜನಂ ಕುರ್ಯಾತ್ ಶೂದ್ರಃ ಪರಿಚರೇಚ್ಚ ತಾನ್ ॥**
**ಭೈಕ್ಷ್ಯಂ(ಕ್ಷಂ) ವಿಪ್ರತಿಷಿದ್ಧಂ ತೇ ಕೃಷಿರ್ನೈವೋಪಪದ್ಯತೇ ।**
**ಕ್ಷತಿಯೋಽಸಿ ಕ್ಷತ್ರತ್ರಾತಾ ಬಾಹುವೀರ್ಯೋಪಜೀವಿತಾ ॥ ೧೩೨-೩೦,೩೧)**

೯) ಪಿತ್ರಾರ್ಜಿತ ನಿನ್ನ ರಾಜ್ಯವು ನಿನ್ನ ಕೈತಪ್ಪಿ ಹೋಗಿದೆ. ಅದನ್ನು ಸಾಮ, ದಾನ, ಭೇದ, ದಂಡ ಯಾವುದಾದರಿಂದಲೂ ಸಂಪಾದಿಸು. ನಿನ್ನಂತ ಪುತ್ರನನ್ನು ಹಡೆದು ನಾನು ಹೀಗೆ ಬಂಧು ಹೀನನಾಗಿ ಬೇರೆಯವರು ಹಾಕುವ ಕೂಳಿಗೆ ನಿರೀಕ್ಷೆ ಮಾಡಬೇಕೆ? ಆದ್ದರಿಂದ ರಾಜಧರ್ಮದಿಂದ್ಲೆ ಯುದ್ಧ ಮಾಡಿ ರಾಜ್ಯ ಸಂಪಾದಿಸು ನಿನ್ನ ಪಿತೃಗಳು ನರಕದಲ್ಲಿ ಬೀಳದಿರಲಿ.

**ಇತೋ ದುಃಖತರಂ ಕಿಂ ನು ಯದಹಂ ಹೀನಬಾಂಧವಾ ।**
**ಪರಪಿಂಡಮುದೀಕ್ಷೇ ವೈ ತ್ವಾಂ ಸೂತ್ವಾಮಿತ್ರನಂದನ ॥ ೧೩೨-೩೩**

*****

# ೬೦. ವಿದುಲೋಪಾಖ್ಯಾನ

ಧರ್ಮರಾಜನಿಗೆ ಕ್ಷತ್ರಿಯ ಧರ್ಮವನ್ನು ಗಂಭೀರವಾಗಿ, ಆಚರಿಸಲು ಸಂದೇಶವನ್ನು ಕೃಷ್ಣನ ಮೂಲಕ ಕಳಿಸುವ ಉದ್ದೇಶ್ಯದಿಂದ ಹಿಂದೆ ನಡೆದ ಇತಿಹಾಸವನ್ನು ಕುಂತಿಯು ಕೃಷ್ಣನಿಗೆ ಧರ್ಮರಾಜನಿಗೆ ತಿಳಿಸಲು ಹೇಳುತ್ತಾಳೆ. ಅದರ ಸಾರ ಹೀಗಿದೆ.

ಸಿಂಧು ಒಂದು ನದಿ. ಜೇಲಂ ಕೂಡಾ ಈಗ ಪ್ರಸಿದ್ಧವಾದ ಒಂದು ನದಿ. ಇವೆರಡು ನದಿಗಳ ನಡುವಿನ ದೇಶ ಸೌವೀರ. ಸಿಂಧು, ಸೌವೀರ ದೇಶದ ಸಮೀಪದ ಮತ್ತೊಂದು ದೇಶ. ಸಿಂಧು ದೇಶದ ರಾಜ ವೃದ್ಧಕ್ಷತ್ರ, ಜಯದ್ರಥರು (ಮಹಾಭಾರತದಲ್ಲಿ).

ಹಿಂದೆ ಸೌವೀರ ದೇಶದ ರಾಜನ ಮಗನಾದ ಸಂಜಯನು ಆಗಿನ ಸಿಂಧೂ ರಾಜನಿಂದ ಸೋತು ಮನೆಗೆ ಓಡಿ ಬಂದು ಮಲಗಿದ ಅಧೀರನಾದ. ಯುದ್ಧ ಮುಂದುವರಿಸುವಲ್ಲಿ ವಿಫಲನಾದ ಮಗನನ್ನು ತಾಯಿ ವಿದುಲಾ ಎಚ್ಚರಿಸಿ, ಧೈರ್ಯ ತುಂಬಿ ಕರ್ತವ್ಯ ವಿಮುಖನಾದವನನ್ನು ಮತ್ತೆ ಕರ್ತವ್ಯ ಸುಮುಖನನ್ನಾಗಿ ಮಾಡಿದ ಧೀರೋಧಾತ್ತಳಾಗಿ ಮಹಾಭಾರತದಲ್ಲಿ ವರ್ಣಿತಳಾಗಿದ್ದಾಳೆ. ಆಕೆ ಕೀರ್ತಿವಂತಳೂ, ದುಷ್ವರ ಬಗ್ಗೆ ಕೋಪಿಷ್ಠಳೂ, ಸತ್ಕುಲದಲ್ಲಿ ಜನಿಸಿದವಳೂ, ಜಿತೇಂದ್ರಿಯಳೂ, ಕ್ಷತ್ರಧರ್ಮರತಳೂ, ಮುಂದಾಲೋಚನೆಯುಳ್ಳವಳೂ, ಆ ಕಾಲದ ರಾಜರ ಸಭೆಗಳಲ್ಲಿ ಪ್ರಖ್ಯಾತಳೂ ಮತ್ತು ಬಹುಶ್ರುತ ಪಾಂಡಿತ್ಯವುಳ್ಳವಳೂ ಆಗಿದ್ದಳು.

**'ಯಶಶ್ವಿನೀ ಮನ್ಯುಮತೀ ಕುಲೇ ಜಾತಾ ವಿಭಾವರೀ ।**
**ಕ್ಷತ್ರಧರ್ಮರತಾ ದಾಂತಾ ವಿದುಲಾ ಧೀರ್ಘದರ್ಶಿನೀ ।**
**ವಿಶ್ರುತಾ ರಾಜಸಂಸತ್ಸು ಶ್ರುತವಾಕ್ಯಾ ಬಹುಶ್ರುತಾ ।**
**ವಿದುಲಾ ನಾಮ ರಾಜನ್ಯಾ ಜಗರ್ಹೇ ಪುತ್ರ ಮೌರಸಂ ।**
**ನಿರ್ಜಿತಂ ಸಿಂಧುರಾಜೇನ ಶಯಾನಂ ದೀನಚೇತಸಮ್' ।**

**(ಅ ೧೩೩–೨,೩,೪)**

ವಿದುಲೆಯು ಮಗನನ್ನು ಬಡಿದೆಬ್ಬಿಸಿದ ಮಾತುಗಳಲ್ಲಿ ಕೆಲವನ್ನು ನೋಡುವ

1) ನೀನು ಶತ್ರುಗಳನ್ನು ಸಂತಸ ಪಡಿಸುವೆ. ನನಗಲ್ಲ. ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದರೂ ನನ್ನ (ತಾಯಿಯ) ಹಾಗೂ ನಿನ್ನ ತಂದೆಯ ಮಗನೆಂದು ಹೇಳಲಾರೆ. ಎಲ್ಲಿಂದ ಬಂದೆಯೋ ತಿಳಿಯದು (133–5)

2) ಶತ್ರುಗಳ ಬಗ್ಗೆ ನಿನಗೆ ಕೋಪವೇ ಇಲ್ಲವಲ್ಲ. ನೀನು ಕ್ಷತ್ರಿಯರ ಮಧ್ಯೆ ಲೆಕ್ಕದಲ್ಲಿಯೇ ಇಲ್ಲವಲ್ಲ. ನೀನೊಬ್ಬ ನಪುಂಸಕನಂತೆ ಇದ್ದೀಯಾ (6)
3) ಆದರೆ ನೀನು ಸಾಮಾನ್ಯನಲ್ಲ. ನಿನ್ನನ್ನು ನೀನು ಅವಮಾನಿಸಬೇಡ. ಮುಂದೆ ಚಕ್ರವರ್ತಿಯಾಗುವವನು. ಧೀರಸಂಕಲ್ಪ ಮಾಡು ಹೆದರಬೇಡ. (7)
4) ಎಲೆ ಹೇಡಿ! ಎದ್ದೇಳು. ಮಲಗಬೇಡ. ಶತ್ರುಗಳಿಗೆ ಆನಂದದಾಯಕನಾಗಿ ಬಂಧುಗಳಿಗೆ ಶೋಕ ಜನಕನಾಗಬೇಡ (8)
5) ನಿನ್ನ ಭುಜಬಲ ಪರಾಕ್ರಮದಿಂದ ನೀನು ಲೋಕವಿಖ್ಯಾತನಾಗು. ನಿನ್ನನ್ನು ಅಧಮ–ಮಧ್ಯಮನಾಗಿ ಸಾಮಾನ್ಯ ವ್ಯಕ್ತಿಯೆಂದು ಭಾವಿಸಬೇಡ (13)
6) ಒಣಗಿದ ತುಂಬೇ ಗಿಡದ ಕಡ್ಡಿಯಂತೆ ಒಂದು ಮುಹೂರ್ತವಾದರೂ ಪ್ರಜ್ವಲಿಸು. ಶೂರನಾಗಿ ವರ್ತಿಸು. ಬಹಳ ಹೊತ್ತು ತನ್ನಲ್ಲಿ ಅಗ್ನಿ ಇಟ್ಟು ಬರೀ ಹೊಗೆ ಸುರಿಸುವುದಕ್ಕಿಂತ ಕ್ಷಣ ಮಾತ್ರವಾದರೂ ಭಗ್ಗನೆ ಉರಿದು ಆರಿ ಹೋದರೂ ಸರಿ, ರಾಜವಂಶದಲ್ಲಿ ಮೃದು ಸ್ವಭಾವದ ಹೇಡಿಯಾದ ಕತ್ತೆಯು ಹುಟ್ಟದಿರಲಿ. (ಜಾತಿಯ ಕುದುರೆಯೇ ಹುಟ್ಟಲಿ) (14,15)
7) ಪಂಡಿತನು ಅಭೀಷ್ಟ ಸಿದ್ದಿಯಾಗಲೀ, ಬಿಡಲಿ ಸುಮ್ಮನೆ ಕೂಡದೆ ಮುಂದು ವರಿಯುತ್ತಾನೆ. ಕರ್ತವ್ಯ ಮಾಡುತ್ತಾನೆ. ಪ್ರಾಣವನ್ನೇ ಧನವೆಂದು ಭಾವಿಸಿ ಪ್ರಾಣ ಹೋಗುವುದೆಂದು ಹೆದರುವುದಿಲ್ಲ (17)
8) ಮಗನೇ! ಕ್ಷತ್ರಿಯ ಧರ್ಮವನ್ನು ಮುಂದೆ ಮಾಡಿಕೊಂಡು ಪರಾಕ್ರಮ ಪ್ರದರ್ಶನ ಮಾಡು. ಇದನ್ನು ಬಿಟ್ಟು ಏಕೆ ಜೀವಿಸುತ್ತೀಯಾ? (18) ನೀನು ಹೀಗೆ ಮಲಗುವುದರಿಂದ ನಿನ್ನ ಲೋಕೋಪಯೋಗಿ (ಇಷ್ಟ ಯಜ್ಞ–ಪೂರ್ತ–ಕೆರೆ ಕಟ್ಟೆ ಛತ್ರ ಮೊದಲಾದವುಗಳ ನಿರ್ಮಾಣ) ಎಲ್ಲ ನಾಶವಾಯಿತಲ್ಲ! ನಿನ್ನ ಸುಖದ ಮೂಲವಾದ ರಾಜ್ಯವೂ ಹೋಯಿತಲ್ಲ! ಹೀಗಿದ್ದರೂ ಹೇಗೆ ಏಕೆ ಜೀವಿಸಲು ಇಚ್ಛಿಸುವೆ (19)
9) ನೀನು ಯುದ್ಧ ಮಾಡುತ್ತಾ ಸೋಲಬಹುದು ಪಾತವಾದರೂ ನೀನು ಶತೃವನ್ನು ಸೆಳೆದು ಕೊಂಡೇ ಬಾಳಬೇಕೇ ಹೊರತು ನೀನೊಬ್ಬನೇ ಬೀಳಬಾರದು.
10) ಯಾವನ ಸಾಹಸ ಕರ್ತವ್ಯ ಗಾಥೆಯನ್ನು ಮನುಷ್ಯರು ಗಾನ ಮಾಡುವುದಿಲ್ಲವೋ ಅವನು ಕೇವಲ ಪ್ರಜಾಭಿವೃದ್ಧಿಗೆ ಮಾತ್ರ ಲಾಯಕ್ಕು ಹೊರತು ಅವನು ಪುರುಷನೂ ಅಲ್ಲ ಸ್ತ್ರೀಯೂ ಅಲ್ಲ (22)
11) ನಮ್ಮ ಕುಲ ಪಾಂಸನನಾದ ನೀನು ಪುತ್ರನೆಂಬ ಕಲಿಯೇ ಸರಿ (29)
12) ನಿನ್ನಂತಹ ಶತ್ರುಗಳ ಬಗ್ಗೆ ಕೋಪರಹಿತನಾದ, ಉತ್ಸಾಹ ರಹಿತನಾದ, ನಿರ್ವೀರ್ಯನಾದ, ಶತ್ರುಗಳಿಗೆ ಆನಂದ ಕೊಡುವವನನ್ನು ಯಾವ ಸಾಧ್ವಿಯೂ ಹಡೆಯದಿರಲಿ (30)

13) ಮಗು, ಹೊಗೆಯಂತೆ ಆಗಬೇಡ. ಅಗ್ನಿಯಂತೆ ಶತ್ರುಗಳ ಮೇಲೇರಿ ಒಂದು ಮುಹೂರ್ತವಾದರೂ ಅವರನ್ನು ಸುಡುವ ಪ್ರಯತ್ನಮಾಡು (31)

14) ಅಲ್ಪ ತೃಪ್ತಿ, ಅಯೋಗ್ಯರ ಮೇಲೆ ದಯೆ, ನಿರುದ್ಯೋಗತನ, ಭಯಗಳು ಇರುವ ಸಂಪತ್ತನ್ನು ನಾಶ ಮಾಡುತ್ತವೆ. ಆದ್ದರಿಂದ ಇವೆಲ್ಲವನ್ನು ನಿನ್ನ ಮನಸ್ಸಿನಿಂದ ಕಿತ್ತು ಹಾಕಿ ಮತ್ತೆ ರಾಜ್ಯವನ್ನು ಸಂಪಾದಿಸು (33,34)

15) ಶತ್ರುಗಳನ್ನೆದುರಿಸುವವನೇ ಪುರುಷ. ಇಲ್ಲದಿದ್ದರೆ ಅವನು ಸ್ತ್ರೀಯೇ ಸರಿ (35)

16) ಯಾವ ರಾಜನು ಸಂಪತ್ತಿನ ಪ್ರಾಪ್ತಿಗಾಗಿ ತನ್ನ ಪ್ರಿಯ ಹಾಗೂ ಸುಖವನ್ನು ತ್ಯಜಿಸಿ ಅನ್ವೇಷಣೆ ಮಾಡುತ್ತಾನೋ ಅವನು ತನ್ನ ಅಮಾತ್ಯರಿಗೆ ಸಂತೋಷವುಂಟು ಮಾಡುತ್ತಾನೆ. ಪ್ರಜೆಗಳೂ ಸುಖವನ್ನನುಭವಿಸುತ್ತಾರೆ.

ಈ ಮಾತುಗಳನ್ನು ಕೇಳಿ ಸಂಜಯ ಹೇಳಿದ

ಅಮ್ಮ! ನಾನು ಮೊದಲು ಉಳಿಯಬೇಕಲ್ಲವೇ! ಶತ್ರುಗಳನ್ನು ಸೋಲಿಸಲು ಹೋಗಿ ನಾನೇ ಪ್ರಾಣ ತೊರೆದರೆ ನಿನಗೆ ಸುಖವಾಗುತ್ತಾ? ನಾನೇ ಇಲ್ಲದಿರಲು ನಿನಗೆ ಆಭರಣಗಳೇಕೆ? ಸುಖವೇಕೆ? ಎಂದಾಗ (೩೯) ವಿದುಲಾದೇವಿಯು

17) ದೀರ್ಘಸೂತ್ರ (ತಕ್ಷಣ ಕಾರ್ಯ ಪ್ರವೃತ್ತನಾಗದವನು) ಸೋಮಾರಿಗಳಿಗೆ ಆಗುವ ಲೋಕಗಳು ಶತೃಗಳಿಗೆ ಆಗಲಿ. ಕೀರ್ತಿಶಾಲಿಗಳಿಗೆ ಪುಣ್ಯಶಾಲಿಗಳಿಗೆ ಆಗುವ ಲೋಕಗಳು ನಮ್ಮ ಹಿತೈಷಿಗಳಿಗೆ ಆಗಲಿ. (ನೀನು ಸೋಮಾರಿಯಾಗದೆ ಕೂಡಲೆ ಕಾರ್ಯ ಪ್ರವೃತ್ತನಾಗೆಂದು ಅಭಿಪ್ರಾಯ)

18) ನೀನು ದೀನ-ದುರ್ಬಲರಂತೆ ಪರಾವಲಂಬಿಯಾಗಬೇಡ ಪರಾನ್ನದಿಂದ ಜೀವಿಸಬೇಡ (40,41)

19) ಆದರೆ ನಿನ್ನನ್ನೇ ಬ್ರಾಹ್ಮಣರೂ ಸಜ್ಜನರೂ ಅವಲಂಬಿಸಲಿ (42) ಫಲಾಪೇಕ್ಷಿಗಳು ವೃಕ್ಷಗಳಿಗೆ ಹೋಗಿ ಫಲ ಪಡೆಯುವಂತೆ ನಿನ್ನನ್ನು ಇತರರು ಅವಲಂಬಿಸಲಿ (43)

20) ಇಂದ್ರನ ಪರಾಕ್ರಮವನ್ನು ಆಶ್ರಯಿಸಿ ದೇವತೆಗಳಿರುವಂತೆ ಶೂರನಾದ ರಾಜನ ಆಶ್ರಯವನ್ನು ಪ್ರಜೆಗಳೂ, ಬಂಧುಗಳು ಆಶ್ರಯಿಸಿ ಸುಖವಾಗಿರುತ್ತಾರೆ. (20) ಯಾವ ಮನುಷ್ಯನು ತನ್ನ ಬಾಹು ಬಲವನ್ನಾಶ್ರಯಿಸಿ ಜೀವನ ನಡೆಸುತ್ತಾನೋ ಅವನು ಲೋಕದಲ್ಲಿ ಇಲ್ಲಿ ಸತ್ಕೀರ್ತಿ ಪರಲೋಕದಲ್ಲಿ ಸದ್ಗತಿಯನ್ನು ಹೊಂದುತ್ತಾನೆ (45)

ಆದ್ದರಿಂದ ನೀನೂ ಯೋಗ್ಯ ಮಾನವರಾಜ. ಇಂದ್ರನಂತೆ ನಿನ್ನ ಪರಾಕ್ರಮದಿಂದ ಶತೃಗಳನ್ನು ಜಯಿಸಿ, ನೀನೇ ಎಲ್ಲರಿಗೂ ಆಶ್ರಯದಾತನಾಗಿರು. ಹೊರತು ನೀನು ಯಾರನ್ನೂ ಆಶ್ರಯಿಸಿ ಕ್ಷತ್ರಿಯಾಭಾಸನಾಗಬೇಡ.

ವಿದುಲೋವಾಚ

'ನ ಮಯಾ ತ್ವಂ ನ ಪಿತ್ರಾ ಚ ಜಾತಃ ಕ್ವಾಭ್ಯಾಗತೋ ಹ್ಯಸಿ । ೧೩೩-೫
ನಿರ್ಮನ್ಯುಶ್ಚಾಪ್ಯಸಂಖ್ಯೇಯಃ ಪುರುಷಃ ಕ್ಲೀಬಸಾಧನಃ । ೬
ಮಾತ್ಮಾನಮವಮನ್ಯಸ್ವ...... । ೭
ಉತ್ತಿಷ್ಠ ಹೇ ಕಾ ಪುರುಷ ಮಾ ಶೇಷ್ವೈವಂ ಪರಾಜಿತಃ ।
ಅಮಿತ್ರಾನ್ನಂದಯನ್ಸರ್ವಾನ್ನಿರ್ಮಾನೋ ಬಂಧುಶೋಕದಃ ॥ ೮
ಮುಹೂರ್ತಂ ಜ್ವಲಿತಂ ಶ್ರೇಯೋ ನ ಚ ಧೂಮಾಯಿತಂ ಚಿರಂ । ೧೫
ಉದ್ಭಾವಯಸ್ವ ವೀರ್ಯಂ ವಾ ತಾಂ ವಾಗಚ್ಛ ಧ್ರುವಾಂ ಗತಿಂ । ೧೮
ಶತ್ರುರ್ನಿಮಜ್ಜತಾ ಗ್ರಾಹ್ಯೋ ಜಂಘಾಯಾಂ ಪ್ರಪತಿಷ್ಯತಾ । ೨೦
ಯಸ್ಯ ವೃತ್ತಂ ನ ಜಲ್ಪಂತಿ ಮಾನವಾ ಮಹದದ್ಭುತಂ ।
ರಾಶಿ ವರ್ಧನಮಾತ್ರಂ ಸ ನೈವ ಸ್ತ್ರೀ ನ ಪುನಃ ಪುಮಾನ್ ॥ ೨೨
ಕಲಿಂ ಪುತ್ರಪ್ರವಾದೇನ ಸಂಜಯ ತ್ವಾಮಜೀಜನಮ್ ॥ ೨೯
ನಿರಮರ್ಷಂ ನಿರುತ್ಸಾಹಂ ನಿರ್ವೀರ್ಯಂ ಅರಿನಂದನಮ್ ।
ಮಾ ಸ್ಮ ಸೀಮಂತಿನೀ ಕಾಚಿತ್ ಜನಯೇತ್ಪುತ್ರಮೀದೃಶಮ್ ॥ ೩೦
ಜ್ವಲ ಮೂರ್ಧನ್ಯಮಿತ್ರಾಣಾಂ ಮುಹೂರ್ತಮಪಿ ವಾ ಕ್ಷಣಂ । ೩೧
ಪರಂ ವಿಷಹತೇ ಯಸ್ಮಾತ್ ತಸ್ಮಾತ್ಪುರುಷ ಉಚ್ಯತೇ । ೩೫

ಸಂಜಯ ಉವಾಚ

ಕಿಂ ನು ತೇ ಮಾಮಪಶ್ಯಂತ್ಯಾಃ ಪೃಥಿವ್ಯಾ ಅಪಿ ಸರ್ವಯಾ ।
ಕಿಮಾಭರಣ ಕೃತ್ಯಂ ತೇ ಕಿಂ ಭೋಗೈರ್ಜೀವಿತೇನ ವಾ ॥ ೩೯

ವಿದುಲೋವಾಚ

ಭೃತ್ಯೈರ್ವಿಹೀಯಮಾನಾನಾಂ ಪರಪಿಂಡೋಪಜೀವಿನಾಂ ।
ಕೃಪಣಾನಾಂ ಅಸತ್ವಾನಾಂ ಮಾ ವೃತ್ತಿಮನುವರ್ತಿಥಾಃ ॥ ೧೩೩/೪೧
ಸ್ವಬಾಹುಬಲ ಮಾಶ್ರಿತ್ಯ ಯೋಽಭ್ಯುಜ್ಜೀವತಿ ಮಾನವಃ ।
ಸ ಲೋಕೇ ಲಭತೇ ಕೀರ್ತಿಂ ಪರತ್ರ ಚ ಶುಭಾಂ ಗತಿಂ ॥ ೧೩೩/೪೫

ತಾಯಿ ವಿದುಲೆ ಮತ್ತೆ ಮಗನನ್ನು ಹುರಿದುಂಬಿಸಿ

೧) ಯಾವ ಕ್ಷತ್ರಿಯನು ತನ್ನ ಇರುವಿಕೆಗಾಗಿ ಪರಾಕ್ರಮ ತೋರಿಸುವುದಿಲ್ಲವೋ ಅವನು ಕಳ್ಳನೆಂದೇ ಜನ ಭಾವಿಸುತ್ತಾರೆ.

ಯೋ ಹಿ ತೇಜೋ ಯಥಾಶಕ್ತಿ ನ ದರ್ಶಯತಿ ವಿಕ್ರಮಾತ್ ।
ಕ್ಷತ್ರಿಯೋ ವಿಜಯಾಕಾಂಕ್ಷೀ ಸ್ತೇನ ಇತ್ಯೇವ ತಂ ವಿದುಃ ॥ ೧೩೪-೨

೨) ಮಗನೇ ನೀನು ಸಿಂಧು ರಾಜನಿಂದ ಸೋತಿದ್ದರೂ ಅವನ ಬಗ್ಗೆ ಅಸಮಾಧಾನವಿರುವ ಪ್ರಜೆಗಳು ಇರಬಹುದು. ಇತರೆ ರಾಜರೂ ನಿನಗೆ ಸಹಾಯ

ಮಾಡಲು ಸಿದ್ಧರಾಗಿರಬಹುದು. ಸಿಂಧು ರಾಜನೊಡನೆ ಶತ್ರುತ್ವವನ್ನು ಹೊಂದಲೂ ಸಿದ್ಧರಿರಬಹುದು. ಆದ್ದರಿಂದ ಅಂತಹ ರಾಜ ಹಾಗೂ ಜನರೊಡನೆ ನೀನು ಸ್ನೇಹ ಬೆಳೆಸು. ಈಗಿನಂತೆ ನೀನಿರದೆ ನಿನ್ನ ಪೌರುಷ ಪ್ರದರ್ಶನದ ಬಗ್ಗೆ ಅವರಿಗೆ ವಿಶ್ವಾಸ ಬರುವಂತೆ ವರ್ತಿಸು. ಆಗ ನಿನಗೆ ಅವರೆಲ್ಲ ಸಹಾಯ ಮಾಡಿ ಸಿಂಧು ರಾಜನನ್ನು ಹಣಿಯಲು ಸಹಾಯ ಮಾಡುತ್ತಾರೆ. ಸಿಂಧೂ ರಾಜನೇನೂ ಅಜರಾಮರನಲ್ಲವಲ್ಲ. ಅವನೂ ಒಂದಲ್ಲ ಒಂದು ದಿನ ಸಾಯಲೇಬೇಕಲ್ಲ. ನೀನಿನ್ನೂ ಯುವಕ. ೧೩೪ – ೩ರಿಂದ ೬

೩) ನಿನಗೆ ನಾವು ಸಂಜಯವೆಂದು ಹೆಸರಿಟ್ಟಿದ್ದೇವೆ. ಅದನ್ನು ಸಾರ್ಥಕಪಡಿಸಿಕೊ. ವ್ಯರ್ಥನಾಮನಾಗದಿರು.

**ಸಂಜಯೋ ನಾಮತಶ್ಚ ತ್ವಂ ನ ಚ ಪಶ್ಯಾಮಿ ತತ್ತ್ವಯಿ ।**
**ಅನ್ವರ್ಥನಾಮಾ ಭವ ಮೇ ಪುತ್ರ ಮಾ ವ್ಯರ್ಥನಾಮಕಃ ॥ ೧೩೪–೭**

೪) ಶಂಬರನ ನೀತಿ ಪ್ರಕಾರ ಬೆಳಗಿನ ಭೋಜನಕ್ಕೂ ಗತಿ ಇರದ ಅವಸ್ಥೆ ನಿಜವಾಗಿಯೂ ಅತ್ಯಂತ ಪಾಪಿಗಳ ಅವಸ್ಥೆಯೇ ಸರಿ. ಪತಿ–ಪುತ್ರ ವಧೆಗಿಂತಲೂ ಅತ್ಯಂತ ದುಃಖದಾಯಕವಾದ ಸ್ಥಿತಿ ಎಂದರೆ ದಾರಿದ್ರ್ಯ ಅದಕ್ಕಿಂತಲೂ ಮರಣವೇ ಲೇಸು.

**'ದಾರಿದ್ರ್ಯಮಿತಿ ಯತ್ಪ್ರೋಕ್ತಂ ಪರ್ಯಾಯಮರಣಂ ಹಿತತ್' । ೧೩೪–೧೩**

೫) ಮಗನೇ! ನಾನು ಸತ್ಕುಲ–ವಿಖ್ಯಾತ ಕುಲ ಪ್ರಸೂತಳಾಗಿ ಹಂಸ ಪಕ್ಷಿಯಂತೆ ಒಂದು ಸರೋವರದಿಂದ ಇನ್ನೊಂದು ಸರೋವರಕ್ಕೆ ಬಂದಿದ್ದೇನೆ (ಪತಿಯ ರಾಜಕುಲ) ಇಲ್ಲಿ ನಾನು ಚಕ್ರವರ್ತಿನಿ. ನನ್ನ ಗಂಡನ ಪ್ರೇಮ ಪಾತ್ರಳು. ಸಂಪತ್ಸಮೃದ್ಧಿಯಲ್ಲಿ ಬೆಳೆದವಳು. ಆದರೆ ನಿನ್ನಂಥ ಹೇಡಿ ಪುತ್ರನಿಂದಾಗಿ ನಾನೀಗ ದಾರಿದ್ರ್ಯ–ದುಃಖಾವಸ್ಥೆಗೆ ಬಂದಿರುವುದು ನನಗೂ ನಮ್ಮನ್ನು ನಂಬಿದ ಬಂಧುವರ್ಗ, ಭೃತ್ಯವರ್ಗ, ಬ್ರಾಹ್ಮಣಾದಿಗಳು ಹೀಗೆ ಇವರಿಗೆಲ್ಲ ಆಶ್ರಯಿಗಳಾಗದೆ ಅವರೆಲ್ಲ ನಮ್ಮನ್ನು ತ್ಯಜಿಸಿ ಹೋಗುವುದರಲ್ಲಿದ್ದಾರೆ. ಹೀಗಾಗಿ ನೀನು ಜೀವಿಸಿದ್ದು ಫಲವೇನು? ನೀನು ಮೊದಲು ಹೀಗಿದ್ದಿಲ್ಲವಲ್ಲ! (೧೩೪ – ೧೪ ರಿಂದ ೧೮)

೬) ಯಾಚಕ ಬ್ರಾಹ್ಮಣನಿಗೆ ಇಲ್ಲ ಎಂದು ಹೇಳಿದಲ್ಲಿ ನನ್ನ ಹೃದಯ ಸೀಳಿ ಹೋಗುತ್ತದೆ. ನಾನಾಗಲೀ, ನಿನ್ನ ತಂದೆಯಾಗಲೀ ಹೀಗೆ ಎಂದೂ ಯಾರಿಗೂ ಇಲ್ಲ ಎಂದು ಹೇಳೇ ಇಲ್ಲ. ನಾವು ತೀರವಿಲ್ಲದ ದುಃಖ ಸಮುದ್ರದಲ್ಲಿದ್ದೇವೆ. ಆದ್ದರಿಂದ ನೀನು ನಮಗೆ ಸಮುದ್ರತೀರವಿರುವ ನೌಕೆಯಾಗು.

**'ನೇತಿ ಚೇದ್ಬ್ರಾಹ್ಮಣಂ ಬ್ರೂಯಾಂ ದೀರ್ಯೇತ ಹೃದಯಂ ಮಮ ।**
**ನ ಹ್ಯಹಂ ನ ಚ ಮೇ ಭರ್ತಾ ನೇತಿ ಬ್ರಾಹ್ಮಣಮುಕ್ತವಾನ್ ॥**
**ಅಪಾರೇ ಭವ ನಃ ಪಾರಮಪ್ಲವೇ ಭವ ನಃ ಪ್ಲವಃ ।**
**ಕುರುಷ್ವ ಸ್ಥಾನಮಸ್ಥಾನೇ ಮೃತಾನ್ ಸಂಜೀವಯಸ್ವ ನಃ ॥ ೧೩೪ – ೧೯,೨೧**

೭) ಯುದ್ಧವೆನ್ನುವುದು ಸ್ವರ್ಗಕ್ಕೆ ದ್ವಾರದಂತೆ – ಅಮೃತದಂತಹ ರಾಜ್ಯ ಪ್ರಾಪಕವೂ ಹೌದು. ಯುದ್ಧವೊಂದೇ ಈಗಿರುವ ದಾರಿ. ಆದ್ದರಿಂದ ಶತ್ರುಗಳ ಮೇಲೆ ಧಗಧಗಿಸುವ ಕೊಳ್ಳಿಯಂತೆ ಬೀಳು, ಮಗನೇ!

**ಸ್ವರ್ಗದ್ವಾರೋಪಮಂ ರಾಜ್ಯಮಥವಾಪ್ಯಮೃತೋಪಮಮ್ ।**
**ಯುದ್ಧಮೇಕಾಯನಂ ಮತ್ವಾ ಪತೋಲ್ಮುಕ ಇವಾರಿಷು ॥ ೨೯**

೮) ನಿನ್ನನ್ನು ನೋಡಿ ಶತ್ರುಗಳು ಖುಷಿ ಪಡುತ್ತಿದ್ದಾರೆ. ನಾವು ಶೋಕಿಸುತ್ತಿದ್ದೇವೆ. ಇಂತಹ ನಿನ್ನನ್ನು ನಾನು ನೋಡಲಾರೆ. ನೀನು ಸೌವೀರ ಕನ್ಯೆಯೊಡನೆ (ನಿನ್ನ ಪತ್ನಿ) ಸುಖ ಸಂಪತ್ತಿನಿಂದಿರು. ನೀನಿನ್ನೂ ಯುವಕ-ಕರ್ತವ್ಯ ವಿಮುಖನಾಗದೆ ಸುಮುಖನಾಗು. ಸತ್ಕುಲ ಪ್ರಸೂತ ಕ್ಷತ್ರಿಯನೆಂದೂ ತಲೆ ತಗ್ಗಿಸಬಾರದು. ಶರಣಾಗತನಾಗಬಾರದು. ಅಕಾಲದಲ್ಲಿ ಸತ್ತರೂ ಶತ್ರುವಿನ ಮುಂದೆ ಶರಣಾಗಬಾರದು. ಮನಸ್ವಿಯಾದ ಕ್ಷತ್ರಿಯನು ಮದಿಸಿದ ಆನೆಯಂತಿರಬೇಕು – ನಿರ್ಭಯವಾಗಿ ಸಂಚರಿಸಬೇಕು. ಬ್ರಾಹ್ಮಣರಿಗೆ-ಧರ್ಮಕ್ಕೆ ಮಾತ್ರ ನತ ಮಸ್ತಕನಾಗಿರಬೇಕು.

**'ಯೋ ವೈ ಕಶ್ಚಿದಿಹಾಜಾತಃ ಕ್ಷತ್ರಿಯಃ ಕ್ಷತ್ರಕರ್ಮವಿತ್ ।**
**ಭಯಾದ್ವೃತ್ತಿ ಸಮೀಕ್ಷೋವಾ ನ ನಮೇದಿಹ ಕಸ್ಯಚಿತ್' ॥**
**ಮಾತಂಗೋ ಮತ್ತ ಇವ ಚ ಪರೀಯಾತ್ಸುಮಹಾಮನಾಃ ।**
**ಬ್ರಾಹ್ಮಣೇಭ್ಯೋ ನಮೇನ್ನಿತ್ಯಂ ಧರ್ಮಾಯೈವ ಚ ಸಂಜಯ' ॥**
**೧೩೪-೩೦ ರಿಂದ ೪೧**

ಎಲ್ಲಕ್ಕೂ ಹೆಚ್ಚಾಗಿ ನೀನು 'ನಿನಗೆ ಯಾರದೇ ಸಹಾಯವಿರಲಿ – ಇಲ್ಲದಿರಲಿ – ಬದುಕಿರುವವರೆಗೂ ನಾಲ್ಕೂ ವರ್ಣಗಳು ಅವರ ವರ್ಣಾಶ್ರಮ ಧರ್ಮಗಳಲ್ಲಿರುವಂತೆ ನೋಡುವುದು, ಪಾಪಿಗಳನ್ನು ದಂಡಿಸುತ್ತಾ ರಾಜ್ಯ ಪರಿಪಾಲನೆ ಮಾಡಬೇಕು.

**'ನಿಯಚ್ಛನ್ ಇತರಾನ್‌ವರ್ಣಾನ್ ವಿನಿಘ್ನನ್ ಸರ್ವ ದುಷ್ಕೃತಃ ।**
**ಸಹಾಯೋಽಸಹಾಯೋ ವಾ ಯಾವಜ್ಜೀವಂ ತಥಾ ಭವೇತ್ ॥ ೧೩೪-೪೧**

ತಾಯಿಯ ಮಾತನ್ನು ಕೇಳಿದ ಸಂಜಯನು

೧) ಅಮ್ಮ! ನಿನ್ನ ಹೃದಯವು ಕಬ್ಬಿಣದಿಂದ ಮಾಡಿದಂತೆ ತೋರುತ್ತಿದೆ. ತಾಯಿಯಾಗಿದ್ದು ಹೀಗೆ ನನ್ನನ್ನು ಯುದ್ಧಕ್ಕೆ ಹೋಗಿ-ಸತ್ತರೂ ಚಿಂತೆಯಿಲ್ಲ- ಯುದ್ಧ ಮಾಡೆಂದು ಹೇಳುತ್ತಿದ್ದೀಯಲ್ಲ. ಮತ್ತೊಬ್ಬರ ಮಕ್ಕಳನ್ನು ಕಳಿಸುವಂತಿದೆ ನಿನ್ನ ನಡೆ. ನಾನಿರುವುದು ನಿನಗೆ ಒಬ್ಬನೇ ಮಗ. ಹೀಗಿದ್ದೂ ನನ್ನನ್ನು ಕಳಿಸಲು ಸಿದ್ಧಳಾಗಿದ್ದೀ. ನಾನು ಒಂದು ವೇಳೆ ಸತ್ತರೆ ನಿನಗೆ ಆಗುವ ಲಾಭ, ಭೋಗಗಳಾದರೂ ಏನು? ನನ್ನ ಜೀವಿತಕ್ಕಿಂತಲೂ ಮಿಗಿಲಾದುದೇ ಈ ಕ್ಷತ್ರಿಯ ಧರ್ಮಗಳು ನನಗೆ ಈ ಧರ್ಮಗಳು ಆಶ್ಚರ್ಯಕರವಾಗಿ ಕಾಣುತ್ತಿವೆ! . ನೀನು ಎಂತಹ ನಿಷ್ಕರುಣಿ! ಕಟುಕಳು

ಅದಕ್ಕೆ ವಿದುಲೆ ಉತ್ತರಿಸಿದಳು–

**'ಕೃಷ್ಣಾಯಸಸ್ಯೇವ ಚ ತೇ ಸಂಹತ್ಯ ಹೃದಯಂ ಕೃತಮ್ ।**
**ಮಮ ಮಾತಸ್ತ್ವಕರುಣೇ ವೀರಪ್ರಜ್ಞೇ ಹ್ಯಮರ್ಷಣೇ' ॥** ೧೩೫/೧

ಮಗನೇ! ನಿಜ. ನೀನೇ ಸತ್ತ ಮೇಲೆ ನನಗೂ ಜೀವಿತವೂ ಬೇಕಾಗಿಲ್ಲ. ಆದಾಗ್ಯೂ ನಾವು ಕ್ಷತ್ರಿಯರು. ನಮ್ಮ ಧರ್ಮ ರಕ್ಷಣೆಯ ಪರಿಣಾಮ ಏನೇ ಆಗಲೀ, ಅದು ನಮ್ಮ ಕರ್ತವ್ಯ. ಆದ್ದರಿಂದ ಧರ್ಮಾರ್ಥಗಳಿಗೆ ಅನುಗುಣವಾಗಿಯೇ ನಾವು ಇರಬೇಕು.

**ವಿದುಲ ಉವಾಚ**

**ಸದ್ಭಿರ್ವಿಗರ್ಹಿತಂ ಮಾರ್ಗಂ ತ್ಯಜ ಮೂರ್ಖನಿಷೇವಿತಂ ।**
**ಯುದ್ಧಾಯ ಕ್ಷತ್ರಿಯಃ ಸೃಷ್ಟಃ ಸಂಜಯೇಹ ಜಯಾಯ ಚ ।** ೧೩
**ಜಯನ್ ವಾ ವಧ್ಯಮಾನೋ ವಾ ಪ್ರಾಪ್ನೋತೀಂದ್ರಸಲೋಕತಾಂ ॥** ೧೪

ಯುದ್ಧಕ್ಕೋಸ್ಕರ ಕ್ಷತ್ರಿಯನ ಸೃಷ್ಟಿಯಾಗಿದೆ. ಧರ್ಮಯುದ್ಧ ಮಾಡುವುದು ಜಯಗಳಿಸುವುದು ಇವೇ ಕ್ಷತ್ರಿಯನ ಕರ್ತವ್ಯ–ಧರ್ಮ. ಯುದ್ಧದಲ್ಲಿ ಸಂಹೃತನಾದರೂ ಇಂದ್ರಲೋಕ ಹೊಂದುತ್ತಾನೆ.

೩) ಅದಕ್ಕೆ ಸಂಜಯನು ಮತ್ತೆ

**'ನೇಯಂ ಮತಿ–ಸ್ತ್ವಯಾ ವಾಚ್ಯಾ ಮಾತಃ ಪುತ್ರೇ ವಿಶೇಷತಃ ।**
**ಕಾರುಣ್ಯಮೇವಾತ್ರ ಪಶ್ಯ ಭೂತ್ವೇಹ ಜಡಮೂಕವತ್' ॥** ೧೩೫–೧೯

ಅಮ್ಮ ಜಡನಂತೆ ಮೂಕನಂತೆ ಇರುವ ದುಃಖದಲ್ಲಿರುವ ನಿನ್ನ ಮಗನ ಬಗ್ಗೆ ಇಷ್ಟು ಕಠೋರವಾಗಿರಬಾರದು. ಅದರಲ್ಲೂ ಮಗನ ಬಗ್ಗೆ ಕಾರುಣ್ಯ ಬುದ್ಧಿ ತೋರಿಸು!

೪) ಪುನಃ ತಾಯಿ ಉತ್ತರಿಸುತ್ತಾ

ನಿಜ ತಾಯಿ ಮಗನ ಬಗ್ಗೆ ಕಾರುಣ್ಯ ತೋರಿಸುವುದು ಸರಿಯೇ. ಹಾಗೆ ತಾಯಿಯ ಕರ್ತವ್ಯ ಬೋಧಿಸುವ ಮುನ್ನ ನೀನೂ ನಿನ್ನ ಕರ್ತವ್ಯ ಮಾಡಬೇಕಲ್ಲವೇ? ನೀನು ಯಾವಾಗ ಸೈಂಧವರನ್ನು ಸಂಹರಿಸಿ ವಿಜಯಗಳಿಸಿ ಬರುವೆಯೋ ಆಗ ನಾನು ನಿನ್ನನ್ನು ಕಾರುಣ್ಯದಿಂದ ನೋಡುತ್ತೇನೆ.

**'ಅಥ ತ್ವಾಂ ಪೂಜಯಿಷ್ಯಾಮಿ ಹತ್ವಾ ವೈ ಸರ್ವ ಸೈಂಧವಾನ್ ।**
**ಅಹಂ ಪಶ್ಯಾಮಿ ವಿಜಯಂ ಕೃಚ್ಛ್ರಭಾವೀತಮೇವ ತೇ' ॥** – ೨೧

೫) ಅದಕ್ಕೆ ಸಂಜಯನು ತನ್ನ ಸ್ಥಿತಿ ವಿವರಿಸಿದನು

ಅಮ್ಮ! ನಾನು ಏಕಾಕಿ! ಸಹಾಯಕರಿಲ್ಲ. ಯುದ್ಧ ಸಾಮಗ್ರಿಗಳಿಲ್ಲ. ಹೀಗಿರುವಾಗ ಎಲ್ಲಿಯ ಜಯ? ನನ್ನ ಪರಿಸ್ಥಿತಿಯನ್ನು ನಾನು ವಿಮರ್ಶಿಸಿದ್ದೇನೆ. ಅಂತೆಯೇ

ದುರ್ಮನಸ್ಸು ಸ್ವರ್ಗದಿಂದ ಹಿಂದೇಟು ಹಾಕುವಂತೆ ನಾನೂ ರಾಜ್ಯ ಪ್ರಾಪ್ತಿಯ ಆಶೆಯಿಂದ ಹಿಂಜರಿದ್ದೇನೆ. ಕಾರಣ ನೀನೇ ಇದಕ್ಕೆಲ್ಲಾ ಉಪಾಯಗಳನ್ನು ಹೇಳು. ನೀನು ಮಹಾಬುದ್ಧಿವಂತಳು.

**'ಅಕೋಶಸ್ಯಾಸಹಾಯಸ್ಯ ಕುತಸ್ಸಿದ್ಧಿರ್ಜಯೋ ಮಮ ।**
**ಈದೃಶಂ ಭವತೀ ಕಂಚಿದುಪಾಯಮನುಪಶ್ಯತಿ ॥**
**ತನ್ಮೇ ಪರಿಣತಪ್ರಜ್ಞೇ ಸಮ್ಯಕ್ ಪ್ರಬ್ರೂಹಿ ಪೃಚ್ಛತೇ ।**
**ಕರಿಷ್ಯಾಮಿ ಹಿ ತತ್ಸರ್ವಂ ಯಥಾವದನುಶಾಸನಮ್' ॥೧೩೫–೨೨ರಿಂದ ೨೪**

೬) ಆಗ ವಿದುಲೆ ಮಗನನ್ನು ಕುರಿತು ನುಡಿಯುತ್ತಾಳೆ ಮಗನೇ! ಹಿಂದೆ ಇದ್ದ ಸಂಪತ್ತಿಲ್ಲ ಹೋದ ಮಾತ್ರಕ್ಕೆ ತನ್ನನು ತಾನು ಅವಮಾನ ಮಾಡಿಕೊಳ್ಳಬಾರದು. ಕಾರಣ ಸಂಪತ್ತು ಬರುತ್ತವೆ ಹೋಗುತ್ತವೆ. ಅಶಕ್ಯತನ, ಅಸಹನೆ, ಕೋಪಗಳಿಗೆ ಬುದ್ಧಿ ಕೊಟ್ಟು ಕಾರ್ಯಗಳನ್ನು ಬಿಡಬಾರದು. ಕಾರ್ಯಗಳ ಫಲಾಫಲಗಳು ಅನಿತ್ಯಗಳೇ ಅಂದಮಾತ್ರಕ್ಕೆ ಕರ್ತವ್ಯ ಬಿಡದೆ ಮತ್ತೆ ಮತ್ತೆ ಮಾಡಿ ಯಶಸ್ಸನ್ನು ಗಳಿಸಬೇಕು. ನಾನು ಆರಂಭಿಸುವ ಕಾರ್ಯ ಸಿದ್ಧಿಸುತ್ತದೆ ಎಂದು ಭಾವಿಸಿಯೇ ಕಾರ್ಯಕ್ಕೆ ಸಿದ್ಧನಾಗಬೇಕು. ಎಚ್ಚರಿಕೆಯಿಂದ ಆ ಕರ್ತವ್ಯ ಕರ್ಮಗಳಲ್ಲಿ ತಾನು ತೊಡಗಬೇಕು.

**'ಪುತ್ರ ನಾತ್ಮಾವಮಂತವ್ಯಃ ಪೂರ್ವಾಭಿರಸಮೃದ್ಧಿಭಿಃ ।**
**ಅಭೂತ್ವಾ ಹಿ ಭವಂತ್ಯರ್ಥಾ ಭೂತ್ವಾ ನಶ್ಯಂತಿ ಚಾಪರೇ।**
**ಉತ್ಥಾತವ್ಯಂ ಜಾಗೃತವ್ಯಂ ಯೋಕ್ತವ್ಯಂ ಭೂತಿಕರ್ಮಸು ।**
**ಭವಿಷ್ಯತೀತ್ಯೇವ ಮನಃ ಕೃತ್ವಾ ಸತತಮವ್ಯಥೈಃ ॥ – ೧೩೫/೨೫–೨೯**

೭) ಕಾರ್ಯಸಿದ್ಧಿಯಾಗುವುದು ಹೀಗೆ ದೇವ ಬ್ರಾಹ್ಮಣರ ಯಥಾಶಕ್ತಿಪೂಜೆ–ಸತ್ಕಾರಗಳಿಂದ ನಾನು ಹೇಳಬೇಕಾದುದನ್ನು ಹೇಳಿದ್ದೇನೆ. ನೀನು ಸಮರ್ಥನೇ ಇದ್ದೀಯಾ! ಮಾಡಬೇಕಾದ ಇನ್ನೊಂದು ಕೆಲಸವೇನೆಂದರೆ ಸಿಂಧುರಾಜನಿಂದಾಗಿ ಕೋಪಗೊಂಡವರೂ ಸರ್ವಸ್ವವನ್ನೂ ಕಳೆದುಕೊಂಡವರೂ, ತಮ್ಮ ಬಗ್ಗೆ ದರ್ಪಿಷ್ಠರೂ ಅವನಿಂದ ಅವಮಾನಿತರೂ, ಸಿಂಧು ರಾಜನೊಡನೆ ಸ್ಪರ್ಧೆಗಿಳಿಯ ಬಯಸುವವರೂ, ಇವರೆಲ್ಲರನ್ನೂ ನೀನು ಸಂಧಿಸಿ ಅವರೊಡನೆ ಸಾಮ, ಭೇದ, ದಾನ ಉಪಾಯಗಳಿಂದ ನಿನ್ನ ಕಡೆ ಸೆಳೆದುಕೊ. ಆಗಲೇ ನೀನು ಬಿರುಗಾಳಿಯ ಮೋಡಗಳನ್ನು ಚದುರಿಸುವಂತೆ ಶತ್ರು ಸೈನ್ಯವನ್ನು ಚದುರಿಸಬಲ್ಲೆ. ಅವರಿಗೆ ಸೂಕ್ತ ಸ್ಥಾನ ಮಾನ ನೀಡು. ನಿತ್ಯ ಸಂಧ್ಯಾದಿ ಕರ್ತವ್ಯಗಳನ್ನು ನಿರ್ವಹಿಸು. ಅವರೊಡನೆ ಒಳ್ಳೆಯ ಮಾತುಗಳನ್ನಾಡು. ಆಗ ಅವರು ನಿನ್ನ ಪಕ್ಷ ವಹಿಸುವವರಲ್ಲದೆ ನಿನಗೇ ನಾಯಕ ಪಟ್ಟವನ್ನೂ ನೀಡುವರು.

**'ಮಂಗಲಾನಿ ಪುರಸ್ಕೃತ್ಯ ಬ್ರಾಹ್ಮಣಾಂಶ್ಚೇಶ್ವರೈಃ ಸಹ ।**
**ಪ್ರಾಜ್ಞಸ್ಯ ನೃಪತೇರಾಶು ವೃದ್ಧಿರ್ಭವತಿ ಪುತ್ರಕ ।**
**ಅಭಿವರ್ತತಿ ಲಕ್ಷ್ಮೀಸ್ತಂ ಪ್ರಾಚೀಮಿವ ದಿವಾಕರಃ' ॥ ೩೦, ೩೧**

'ಕ್ರುದ್ಧಾನ್ ಲುಬ್ಧಾನ್ ಪರಿಕ್ಷೀಣಾನ್ ಅವಲಿಪ್ತಾನ್ ವಿಮಾನಿತಾನ್ ।
ಸ್ಪರ್ಧಿನಶ್ಚೈವ ಯೇ ಕೇಚಿತ್ ತಾನ್ ಯುಕ್ತ ಉಪಧಾರಯ ।
ಏತೇನ ತ್ವಂ ಪ್ರಕಾರೇಣ ಮಹತೋ ಭೇತ್ಸ್ಯಸೇ ಗಣಾನ್ ।
ಮಹಾವೇಗ ಇವೋದ್ಭೂತೋ ಮಾತರಿಶ್ವಾ ಬಲಾಹತಾನ್ ॥
ತೇಷಾಮಗ್ರಪ್ರದಾಯೀ ಸ್ಯಾಃ ಕಲ್ಯೋತ್ಥಾಯೀ ಪ್ರಿಯಂವದಃ ॥
ತೇ ತ್ವಾಂ ಪ್ರಿಯಂ ಕರಿಷ್ಯಂತಿ ಪುರೋಧಾಸ್ಯಂತಿ ಚ ಧ್ರುವಮ್ ॥

೮) ನಿನ್ನ ಯುದ್ಧ ಸನ್ನದ್ಧತೆಯನ್ನು ಶತ್ರು ತಿಳಿದಾಗ ಮನೆಯನ್ನು ಸೇರಿದ ಸರ್ಪ ಹೆದರುವಂತೆ ಬೆದರಿ ಬೆಂಡಾಗುತ್ತಾನೆ. ಹಾಗೆ ನೀನು ಯುದ್ಧದ ಸಿದ್ಧತೆಯನ್ನು ಪ್ರಾಣದ ಹಂಗನ್ನು ತೊರೆದು ಮಾಡಿಕೊ. ತನ್ನ ಶತ್ರುವು ತನ್ನ ವಶನಾಗಲಾರನೆಂದು ಭಾವಿಸಿದಾಗ ಅವನೊಡನೆ ನೀನು ಸಾಮದಾನೋಪಾಯಗಳಿಂದ ಸಂಧಾನಕ್ಕೆ ಪ್ರಯತ್ನಿಸು. ಅವಕಾಶ ಕೊಡು. ಅದು ಆಗದಿದ್ದಾಗ ದಂಡಕ್ಕೆ ಸಿದ್ಧನಾಗು. ಆಗ ಶತ್ರುವು ನಿನ್ನ ವಶನಾಗುತ್ತಾನೆ. ಅವನು ಸಂಧಾನಕ್ಕೆ ಒಪ್ಪಿದರೆ ನಿನಗೆ ಮುಂದಿನ ಕೆಲಸಗಳಿಗೆ ಅವಕಾಶವೂ ಸಿಕ್ಕು ಧನ ಸಂಪಾದನೆಗೆ ಮಾರ್ಗವಾಗುತ್ತದೆ. ಧನವಿದ್ದಾಗಲೇ ಮಿತ್ರರು ಸೇವಿಸುತ್ತಾರೆ–ಆಶ್ರಯಿಸುತ್ತಾರೆ ತಾನೇ! ಧನವೇ ಇಲ್ಲದಿರೆ ಯಾರೂ ವಿಶ್ವಾಸ ಮಾಡುವುದಿಲ್ಲ. ಕಂಡೊಡನೆ ಉದಾಸೀನ ಮಾಡುತ್ತಾರೆ.

'ನಿರ್ವಾದಾಸ್ಪದಂ ಲಬ್ಧ್ವಾ ಧನವೃದ್ಧಿಃ ಭವಿಷ್ಯತಿ ।
ಧನವಂತಂ ಹಿ ಮಿತ್ರಾಣಿ ಭಜಂತೇ ಚಾಶ್ರಯಂತಿ ಚ' ॥ ೩೮

ಆದ್ದರಿಂದ ಶತ್ರುವಿನ ಶತ್ರುವಿನೊಡನೆ ಸ್ನೇಹ ಮಾಡಿ ಅವನ ಸಹಾಯದಿಂದ ಕಳೆದುಕೊಂಡ ರಾಜ್ಯವನ್ನು ನೀನು ಮತ್ತೆ ಹೊಂದಬಲ್ಲೆ.

'ಶತ್ರುಂ ಕೃತ್ವಾ ಯಃ ಸಹಾಯಂ ವಿಶ್ವಾಸಮುಪಗಚ್ಛತಿ ।
ಸ ನಃ ಸಂಭಾವ್ಯ ಮೇವೈತತ್ ಯದ್ರಾಜ್ಯಂ ಪ್ರಾಪ್ನುಯಾದಿತಿ' ॥ ೧೩೫–೪೦

ತಾಯಿ ವಿದುಲಾದೇವಿ ಮುಂದುವರೆದು ಮಗ ಸಂಜಯನಿಗೆ ಕರ್ತವ್ಯಪ್ರಜ್ಞೆಯನ್ನು ಹುರಿದುಂಬಿಸುತ್ತಾಳೆ –

೧. ರಾಜನು ಎಂದೂ ಎಂತಹ ಆಪತ್ತಿಗೆ ಸಿಲುಕಿದರೂ ಹೆದರಬಾರದು. ಹೆದರಿದರೂ ಅದು ಯಾರಿಗೂ ತೋರದಂತಿರಬೇಕು. ರಾಜನೇ ಹೆದರಿದರೆ ಆತನ ಅಮಾತ್ಯಾದಿಗಳು–ಸೇನಾಧಿಪತಿಗಳು ಹೆದರುವರು.

೨. ಅಂತಹ ಪ್ರಸಂಗದಲ್ಲಿ ರಾಜನ ಪರಿವಾರದವರಲ್ಲಿ ಕೆಲವರು ಶತ್ರುಗಳನ್ನು ಆಶ್ರಯಿಸುತ್ತಾರೆ. ತನ್ನ ರಾಜನನ್ನೇ ಬಿಟ್ಟು ಹೋಗುತ್ತಾರೆ. ಹಿಂದೆ ಅವಮಾನಿತರಾದ ಕೆಲವರು ತಮ್ಮ ರಾಜನನ್ನು ಅಪಹರಿಸಲಿಚ್ಛಿಸುತ್ತಾರೆ. ಅತ್ಯಂತ ನಿಷ್ಠರಾದವರು ಮಾತ್ರ ಎಂದಿನಂತೆ ತಮ್ಮ ರಾಜನ ಒಳಿತಿಗಾಗಿ ಸೇವಿಸುತ್ತಿರುತ್ತಾರೆ. ಅವರು ರಕ್ತಬಾಂಧವರಂತೆ ರಾಜನು ಆಪತ್ತಿಗೊಳಗಾದಾಗ ಪರಿತಪಿಸುತ್ತಾರೆ. ಅಂತಹವರನ್ನು ನೀನು ಗುರುತಿಸಿ

ಆದರಿಸಿದ್ದೀಯಾ ಇಲ್ಲಿಯವರೆಗೆ. ಅಂತಹ ದೇಶ-ರಾಜಾಭಿಮನಿಗಳಿಂದ ದೂರವಾಗ-ಬೇಡ. ಅವರು ನಿನ್ನಿಂದ ದೂರವಾಗದಿರಲಿ.

ಇಷ್ಟೆಲ್ಲ ಹೇಳಿರುವುದು, ಸಂಜಯ ನಿನಗೆ ಧೈರ್ಯ ತುಂಬಲು. ಆದ್ದರಿಂದ ನಾನು ಹೇಳಿದ್ದು ಉಚಿತವೆನ್ನಿಸಿದಲ್ಲಿ ನಿನ್ನ ಶಾಂತಮುದ್ರೆಯನ್ನು ತ್ಯಜಿಸಿ ಶತ್ರುಗಳ ಬಗ್ಗೆ ಉಗ್ರನಾಗು[೧]. ಶತ್ರುವಿಜಯಕ್ಕೆ ನಮಗೆಲ್ಲಿದೆ ದ್ರವ್ಯ, ಸಂಪತ್ತೆಂದು ನೀನು ಕೇಳಿದೆ. ಆ ಬಗ್ಗೆ ಹೇಳುತ್ತೇನೆ – ಕೇಳು. ನಮ್ಮಲ್ಲಿ ಕೋಶವು ಸಾಕಷ್ಟಿದೆ. ನನಗೆ ಮಾತ್ರ ಗೊತ್ತು – ನಿನಗೆ ಗೊತ್ತಿಲ್ಲ. ಅದನ್ನು ಕೊಡುತ್ತೇನೆ. ನಿನಗೆ ಬೇಕಾದ ಹಿತೈಷಿಗಳು – ನಮ್ಮ ಸುಖದುಃಖದಲ್ಲಿ ಭಾಗಿಗಳೂ – ಯುದ್ಧದಿಂದ ಪಲಾಯನ ಮಾಡದವರು ನೂರಾರು ಜನರಿದ್ದಾರೆ. ಅವರನ್ನು ಕೂಡಿಸು. ಅಂತಹವರ ಸಹಾಯವಿದ್ದರೆ ಎಂತಹ ಕಠಿಣ ಕಾರ್ಯವೂ ಸಾಧ್ಯವೇ ಸರಿ[೨].

ಸಂಜಯನು ಹೀಗೆ ತಾಯಿಯ ಮಾತುಗಳನ್ನು ಕೇಳಿ "ಇಂತಹ ನಿನ್ನ ಹೃದಯಪೂರ್ಣವಾದ ಮಾತುಗಳಿಂದ ಯಾರಿಗೆ ತಾನೇ ಅಜ್ಞಾನ ಹೋಗದು? ನಿನ್ನ ಹಿಂದಿನ, ಮುಂದಿನ ಕಾಲಜ್ಞಾನ ದರ್ಶನವು ನನಗೆ ನೀರಿನಲ್ಲಿ ಭಾರ ಎತ್ತಿದಂತೆ ಸುಲಭವಾಗಿದೆ. ನಿನ್ನಿಂದ ಪೂರ್ಣಮಾರ್ಗದರ್ಶನ ಹೊಂದಲು ನಾನು ಬೇಕಂತಲೇ ನಿನಗೆ ವಿರುದ್ಧವಾಗಿ ಮಾತನಾಡುವಂತೆ ವರ್ತಿಸಿದೆ. ನಾನು ಅತಿಕಡಿಮೆ ಪ್ರತಿಕ್ರಿಯೆ ನೀಡಿದೆ. ಅಮೃತ ಸದೃಶವಾದ ನಿನ್ನ ಮಾತುಗಳು ಮತ್ತೆ ಮತ್ತೆ ಕೇಳಲು ಹಾಗೆ ಸುಮ್ಮನಿದ್ದೆ. ಈಗ ನಾನು ಶತ್ರುನಾಶಕ್ಕಾಗಿ ನಮ್ಮ ವಿಜಯಕ್ಕೆ ಪ್ರಯತ್ನಿಸುತ್ತೇನೆ ಎಂದನು[೩].

ನಂತರ ಸಂಜಯನು ತನ್ನ ಶತ್ರುಗಳೊಡನೆ ಯುದ್ಧ ಮಾಡಿ ಕಳೆದುಹೋದ ರಾಜ್ಯವನ್ನು ಪಡೆದು ವಿಜಯಸಂಪಾದಿಸಿದನು.

---

೧ ನೈವ ರಾಜ್ಞಾ ದರಃ ಕಾರ್ಯೋ ಜಾತು ಕಸ್ಯಾಂಚಿದಾಪದಿ ।
ಅಥ ಚೇದಪಿ ದೀರ್ಣಃ ಸ್ಯಾನ್ನೈವ ವರ್ತೇತ ದೀರ್ಣವತ್ ॥ ೧೩೬/೧
ಶತ್ರ್ಯನೇಕೇ ಪ್ರಪದ್ಯಂತೇ ಪ್ರಜಹತ್ಯಪರೇ ಪುನಃ ।
ಅನ್ಯೇ ತು ಪ್ರಜಿಹೀರ್ಷಂತಿ ಯೇ ಪುರಸ್ತಾದ್ ವಿಮಾನಿತಾಃ ।
ಯ ಏವಾತ್ಯಂತಸುಹೃದಃ ತ ಏವಂ ಪರ್ಯುಪಾಸತೇ ॥
ಮಾ ದೀದರಸ್ತ್ವಂ ಸುಹೃದೋ ಮಾ ತ್ವಾಂ ದೀರ್ಣಂ ಪ್ರಹಾಸಿಷುಃ ॥ ೧೩೬/೩,೪,೭
೨ ಅಸ್ತಿ ನಃ ಕೋಶನಿಚಯೋ ಮಹಾನವಿದಿತಸ್ತವ ।
ತದಹಂ ವೇದ ನಾನ್ಯಸ್ತಮುಪಸಂಪಾದಯಾಮಿ ತೇ ॥ ೧೩೬/೧೦
ಸಂತಿ ನೈಕ ಶತಾ ಭೂಯಃ ಸುಹೃದಸ್ತವ ಸಂಜಯ ।...
ತಾದೃಶಾ ಹಿ ಸಹಾಯಾಶ್ಚೇತ್ ಪುರುಷಸ್ಯ ಬುಭೂಷತಃ ।
ಇಷ್ಟಂ ನ ದುಷ್ಕರಂ ಕಿಂಚಿತ್ ಸಚಿವೈಃ ಶತ್ರುಕರ್ಶನ ॥ ೧೩೬/೧೧,೧೨
೩ ಅಹಂ ಹಿ ವಚನಂ ತ್ವತ್ತಃ ಶುಶ್ರೂಷುರಪರಾಪರಮ್ ।
ಕಿಂಚಿತ್ ಕಿಂಚಿತ್ ಪ್ರತಿವದನ್ ತೂಷ್ಣೀಮಾಸಂ ಮುಹುರ್ಮುಹುಃ ॥
ಅತೃಪ್ಯನ್ನಮೃತಸ್ಯೇವ ಕೃಚ್ಛ್ರಾತ್ ಲಬ್ಧಸ್ಯ ಬಾಂಧವಾತ್ ।
ಉದ್ಯಚ್ಛಾಮ್ಯೇಷ ಶತ್ರೂಣಾಂ ನಿಯಮಾರ್ಥಂ ಜಯಾಯ ಚ ॥ ೧೩೬/**

**ಇತಿ ಶ್ರುತ್ವಾ ವಚೋ ಮಾತುः ಸಂಜಯಃ ಶತ್ರುಭಿಃ ಸಹ ।**
**ಕೃತವಾನ್ ಸಂಯುಗಂ ಕೃಷ್ಣ ಜಯಂ ಚ ಪ್ರಾಪ್ತವಾನ್ ಧ್ರುವಮ್ ॥೧೩೬/****

ಇಂತಹ ಇತಿಹಾಸವನ್ನು ಮಂತ್ರಿಯಾದವನು ಭಯಗ್ರಸ್ತನಾದ ಕರ್ತವ್ಯದಿಂದ ಹಿಮ್ಮೆಟ್ಟಿದ ರಾಜನಿಗೆ ತಿಳಿಸಿ ರಾಜನ ತೇಜೋವೃದ್ಧಿಗೆ ಹರಿಕಾರನಾಗಬೇಕು.

ಈ ಇತಿಹಾಸಕ್ಕೆ **"ಜಯ"** ಎಂದು ಹೆಸರು. ೧) ಶತ್ರುಜಯಾಕಾಂಕ್ಷಿಯು ಕೇಳಿದರೆ, ಶತ್ರುಗಳನ್ನು ಮರ್ದಿಸಿ ಜಯಶಾಲಿಯಾಗುತ್ತಾನೆ. ಇದನ್ನು ಕೇಳುವ ೨) ಗರ್ಭಿಣಿಯರು ವೀರಪುತ್ರನನ್ನು, ೩) ಗರ್ಭಿಣಿ ಬ್ರಾಹ್ಮಣ ಸ್ತ್ರೀಯು ಕೇಳಿದರೆ, ವಿದ್ಯಾ, ತಪಃ, ದಮಃಶೂರನಾದ ತಪಸ್ವಿಯಾದ ಪುತ್ರನನ್ನು ಪಡೆಯುತ್ತಾಳೆ. ೪) ಕ್ಷತ್ರಿಯಸ್ತ್ರೀಯು ಕಾಂತಿಯುಕ್ತನಾದ, ಬಲಿಷ್ಠನಾದ, ಮಹಾರಥನಾದ, ಧೈರ್ಯಶಾಲಿಯಾದ, ಧರ್ಮರಕ್ಷಕನಾದ, ದುಷ್ಟರನ್ನು ನಿಗ್ರಹಿಸುವ ಪುತ್ರನನ್ನು ಪ್ರಸವಿಸುತ್ತಾಳೆ[೧].

ಹೀಗೆ ಕುಂತಿಯು ಕೃಷ್ಣನ ಮೂಲಕ ಪಾಂಡವರಿಗೆ ವೀರಸಂದೇಶ ಕಳುಹಿಸಿದಳು.

## ಸಂದೇಶಗಳು–ವಿವರಣೆಗಳು

೧. ವಿದುಲೋಪಾಖ್ಯಾನ ಒಂದು ಪುಟ್ಟ ಭಗವದ್ಗೀತೆ. ಕೃಷ್ಣ ಅರ್ಜುನನಿಗೆ ಉಪದೇಶಿಸುವ ಗೀತೆಯ ಸಂದೇಶ ಕುಂತಿಯು ಮೊದಲೇ ಪಾಂಡವರಿಗೆ ಕೃಷ್ಣನ ಮೂಲಕವೇ ರವಾನೆಯಾಯಿತು (ಕಳಿಸಲ್ಪಟ್ಟಿತು). ಯುದ್ಧದಿಂದ ಹಿಮ್ಮೆಟ್ಟದೆ ಕರ್ತವ್ಯಪ್ರಜ್ಞೆ ಮೂಡಿಸುವ ಚರಿತೆ ಇದು.

೨. ಕೃಷ್ಣನೇ ಹೇಳಿದಂತೆ[೨], ಆಗಿನ ಕಾಲದಲ್ಲಿ ಆಗಲೆ ಕುಂತಿಯೇ ಮೊದಲಾದವರಿಗೆ ಕ್ಷತ್ರಧರ್ಮಾದಿಗಳು ತಿಳಿದಿದ್ದವು. ಅದರ ಸಾರದ ಅರಿವು ಇತ್ತು. ವಿದುಲೆಗೂ ಇತ್ತು. ಆದ್ದರಿಂದ ಪರಂಪರೆಯಿಂದ ಬಂದ ಕರ್ತವ್ಯಪ್ರಜ್ಞೆಯ ಸಂದೇಶ ಹೊರಬಂದಿತು. ಇಲ್ಲಿ ವಿದುಲಾದೇವಿ ಭಾರತದಲ್ಲಿ ಅರ್ಜುನ – ಕ್ಷತ್ರಿಯರ ಉಪದೇಶದಂತೆ ನಡೆದು ಉದ್ಧೃತರಾದರು. ಜಯಶಾಲಿಗಳಾದರು.

---

೧ ಜಯೋ ನಾಮೇತಿ ಹಾಸೋಽಯಂ ಶ್ರೋತವ್ಯೋ ವಿಜಿಗೀಷುಣಾಮ್ ।
ಅಭೀಕ್ಷ್ಣಂ ಗರ್ಭಿಣೀ ಶ್ರುತ್ವಾ ಧ್ರುವಂ ವೀರಂ ಪ್ರಜಾಪತೇ ॥
ವಿದ್ಯಾಶೂರಂ ತಪಃಶೂರಂ ದಮಶೂರಂ ತಪಸ್ವಿನಮ್ ।
ಬ್ರಾಹ್ಮ್ಯಾ ಶ್ರಿಯಾ ದೀಪ್ಯಮಾನಂ ಸಾಧುವಾದೇನ ಸಮ್ಮತಮ್ ॥
ಧೃತಿಮಂತಮನಾಧೃಷ್ಯಂ ಜೇತಾರಂ ಅಪರಾಜಿತಮ್ ।
ನಿಯತಾರಮಸಾಧೂನಾಂ ಗೋಪ್ತಾರಂ ಧರ್ಮಚಾರಿಣಾಮ್ ॥
ಈದೃಶಂ ಕ್ಷತ್ರಿಯಾ ಸೂತೇ ವೀರಂ ಸತ್ಯಪರಾಕ್ರಮಮ್ ॥ –೧೩೬/೧೮–೨೨

೨ ಏವಂ ಪರಂ ಪರಾಪ್ರಾಪ್ತಮಿದಂ ರಾಜರ್ಷಯೋ ವಿದುः ।

ಆದ್ದರಿಂದ ಎಲ್ಲರೂ ತಮ್ಮ ತಮ್ಮ ವರ್ಣಾಶ್ರಮಧರ್ಮ ಬಿಡಬಾರದೆಂಬುದು ಸಂದೇಶ. ಬ್ರಾಹ್ಮಣ ವೇದ್ಯಾಧ್ಯಯನ, ಉಪನಯನ ಮೊದಲಾದ ಷಟ್ಕ್ರಿಯಾಸಂಪನ್ನನಾಗಲೇಬೇಕು. (ಯಜನ-ಯಾಜನ, ದಾನ-ಪರಿಗ್ರಹ, ಅಧ್ಯಯನ-ಅಧ್ಯಾಪನ ರೂಪ ಷಟ್ಕ್ರಿಯಾ)

೩. ಸ್ತ್ರೀಯರೂ ಶಾಸ್ತ್ರಜ್ಞಾನ ಸಂಪನ್ನರಾಗಬೇಕು (ವಿಹಿತ ರೀತಿಯಲ್ಲಿ). ಆಗಲೆ ಮನೆಯಲ್ಲಿ ಮಕ್ಕಳೇ ಮೊದಲಾದವರಿಗೆ, ಕೆಲವೊಮ್ಮೆ ಪತಿಗೂ ಕೂಡಾ (ದ್ರೌಪದಿ ಧರ್ಮರಾಜನಿಗೆ ಹೇಳಿದಂತೆ) ತಿಳುವಳಿಕೆ ನೀಡಬಹುದು. ಇಲ್ಲಿ ತಂದೆ ನಿಧನವಾಗಿದ್ದಾನೆ. ತಾಯಿ ವಿದುಲೆಯಿಂದಲೇ ಕುಟುಂಬದ, ರಾಜ್ಯದ ಉದ್ಧಾರವಾಯಿತು.

**೪. ವಿದುಲೆ ಮಹಾ ಮುತ್ಸದ್ದಿ. ಅಂತೆಯೇ ರಾಜ(ಗಂಡ)ನಿರುವಾಗಲೇ ಸಾಕಷ್ಟು ಐಶ್ವರ್ಯವನ್ನು ಕೂಡಿಟ್ಟು, ಆಪತ್ತಿಗೆ ಈಗ ನೆರವಾದಳು. ಆದ್ದರಿಂದ ಪ್ರತಿಯೊಬ್ಬ ಮಹಿಳೆ ತನ್ನ ಕುಟುಂಬದ ಒಳಿತಿಗಾಗಿ ಯಾರಿಗೂ ಗೊತ್ತಾಗದಂತೆ ಹಣ, ದ್ರವ್ಯ, ಕೂಡಿಡುವುದು ಕುಟುಂಬದ ಆಪತ್ತಿಗೆ ಒಳಗಾದಾಗ ಸಹಾಯವಾಗುತ್ತದೆ.**

೫. ಶತ್ರುಗಳೊಡನೆ, ಮಿತ್ರರೊಡನೆ, ಆಪ್ತರೊಡನೆ ಹೇಗೆ ಇರಬೇಕೆಂಬ ವಿದುಲೋಪದೇಶ ರಾಜ್ಯಪಾಲನೆಯ ಸೂತ್ರಗಳೇ ಆಗಿವೆ. ಇದರಿಂದ ಮಹಿಳೆಯರ ರಾಜಕೀಯ ಪಾಲುಗಾರಿಕೆ ತಿಳಿಯುತ್ತದೆ.

೬. ನಿತ್ಯ ಜೀವನನಿರ್ವಹಣೆ ಕುಟುಂಬ, ರಾಜ್ಯದ ಆಡಳಿತದ ಚುಕ್ಕಾಣಿಗಳನ್ನು ಮಹಿಳೆಯರು ಹೇಗೆ ನಿಭಾಯಿಸಬೇಕೆಂಬ ಉಪದೇಶಗಳು ಸಾರ್ವಕಾಲಿಕವಾಗಿವೆ. ಕುಟುಂಬದ, ರಾಜ್ಯದ, ಆಡಳಿತಗಾರರಿಗೆಲ್ಲ ಮಾರ್ಗದರ್ಶಕವಾಗಿವೆ.

ಇತ್ಯಾದಿ..

*****

# ಅಂಬೋಪಾಖ್ಯಾನಪರ್ವ

## ೬೧. ಅಂಬೋಪಾಖ್ಯಾನ

| ಸಂ. | ಪ್ರಕಾಶಕರು | ಪರ್ವ | ಉಪಪರ್ವ | ಅಧ್ಯಾಯ | ಶ್ಲೋಕಗಳು | ಪುಟ |
|---|---|---|---|---|---|---|
| ೧ | ಗೀತಾಪ್ರೆಸ್ ಗೋರಖಪುರ್ | ಆದಿ | ಸಂಭವಪರ್ವ | ೧೦೨- | ೭೩ | ೧೩೯-೧೪೧ |
| | | ಉದ್ಯೋಗ | ಅಂಬೋಪಾಖ್ಯಾನ | ೧೭೩-೧೯೨ | ೭೦೧ | ೨೭೨-೨೯೩ |
| ೨ | ಟಿ.ಆರ್. ಕೃಷ್ಣಾಚಾರ್ಯ ಕುಂಭಕೋಣಂ | ಆದಿ | ಸಂಭವಪರ್ವ | ೧೦೯ | ೯೯ | ೧೯೫-೧೯೮ |
| | | ಉದ್ಯೋಗ | ಅಂಬೋಪಾಖ್ಯಾನ | ೧೭೩-೧೯೨ | ೭೦೫ | ೨೫೭-೨೮೪ |
| ೩ | ಭಂಡಾರಕರ್ ಪ್ರಾಚ್ಯ ಸಂಶೋಧನ ಸಂಸ್ಥೆ, ಪುಣೆ | ಆದಿ | ಸಂಭವಪರ್ವ | ೯೬ | ೫೯ | ೧೪೪-೧೪೬ |
| | | ಉದ್ಯೋಗ | ಅಂಬೋಪಾಖ್ಯಾನ | ೧೭೦-೧೯೩ | ೬೭೩ | ೧೦೯೮-೧೧೨೫ |
| ೪ | ತತ್ತ್ವಸಂಶೋಧನ ಸಂಸತ್, ಪಲಿಮಾರು ಮಠ, ಉಡುಪಿ | ಆದಿ | ಸಂಭವಪರ್ವ | ೧೦೧-೧೦೨ | ೧೦೧+೩೧ =೧೩೨ | ೧೩೧ - ೧೪೯ |
| | | ಉದ್ಯೋಗ | ಅಂಬೋಪಾಖ್ಯಾನ | ೧೭೧-೧೯೪ | ೭೮೦ | ೪೭೯-೫೫೭ |
| ೫ | ಮಹಾಭಾರತ ತಾತ್ಪರ್ಯ ನಿರ್ಣಯ | ಆದಿ | ಅಂಬೋಪಾಖ್ಯಾನ | ೧೧ | ೨೨-೩೬ = ೧೫ ೮೭-೧೨೩ = ೩೭ ಒಟ್ಟು ೫೨ | ೧೦೨ ೧೨೯ |

| | ಕನಿಷ್ಠ | ಗರಿಷ್ಠ |
|---|---|---|
| ಆದಿಪರ್ವ ಉಪಾಖ್ಯಾನ ಶ್ಲೋಕಸಂಖ್ಯೆ - | ೫೯ | - ೩೨ |
| ಉದ್ಯೋಗಪರ್ವ ಉಪಾಖ್ಯಾನ ಶ್ಲೋಕಸಂಖ್ಯೆ- | ೬೭೩ | - ೭೮೦ |

ವಿ.ಸೂ.- ಮೇಲಿನ ನಾಲ್ಕು ಪ್ರಕಾಶನಗಳಲ್ಲಿ ಪ್ರಕೃತ ಉಪಾಖ್ಯಾನವು ಎರಡು ಪರ್ವಗಳಲ್ಲಿ ಕಂಡಿದೆ. ವಿಷಯಗಳಲ್ಲಿ ಅಲ್ಪಸ್ವಲ್ಪ ಪುನರುಕ್ತಿ ಹಾಗೂ ಹೆಚ್ಚುವರಿ ವಿಷಯಗಳೂ ಇವೆ. ಉದ್ಯೋಗಪರ್ವದಲ್ಲಿ ಭೀಷ್ಮರೇ ಹೇಳಿದ್ದು ಈ ಉಪಾಖ್ಯಾನ. ಆದಿಪರ್ವದಲ್ಲಿ ವೈಶಂಪಾಯನರು ಜನಮೇಜಯಗೆ ಹೇಳಿದ್ದು. ಈ ಕಥೆ ಆದಿಪರ್ವದಲ್ಲಿ ೫೯ ರಿಂದ ೧೩೨ ಶ್ಲೋಕಗಳಲ್ಲೂ ಉದ್ಯೋಗಪರ್ವದಲ್ಲಿ ೬೭೩-೭೮೦ ಶ್ಲೋಕಗಳಲ್ಲೂ ವಿವಿಧ ಪ್ರಕಾಶನಗಳಲ್ಲಿ ಬಂದಿದೆ. ಮೂಲ ಶ್ಲೋಕಗಳು ಯಾವುವು ಎಂಬುದು ಕಗ್ಗಂಟೆನ್ನಲು ಬೇರೆ ಪ್ರಮಾಣ ಬೇಕಿಲ್ಲ. ಆದ್ದರಿಂದಲೇ ಆಚಾರ್ಯರು ಮಹಾಭಾರತದಲ್ಲಿ ಪ್ರಕ್ಷಿಪ್ತಾದಿಗಳು ಇವೆ ಎಂದು ಹೇಳಿದ್ದು ಅಚ್ಚರಿ ಏನಲ್ಲ. ಈ ವಿಶೇಷ ಸೂಚನೆ ಸಮಗ್ರ ಭಾರತಕ್ಕೆ ಅನ್ವಯಿಸುತ್ತದೆ. ಪಾಠಗಳಲ್ಲಿ, ಶ್ಲೋಕಗಳಲ್ಲಿ ಏಕತೆ ಇಲ್ಲವೆನ್ನಲು ಬೇರೆ ಯಾವ ಆಧಾರವೂ ಬೇಕಿಲ್ಲ. ಕೆಲವು ಪ್ರಕಾಶನಗಳಲ್ಲಿ ಎರಡೇ ಪಾದಗಳನ್ನು ಒಂದು ಶ್ಲೋಕವಾಗಿ ವ್ಯವಹರಿಸಿದ್ದೂ ಉಂಟು. ಪ್ರಾಯಃ ನಾಲ್ಕು ಪಾದಗಳ ಶ್ಲೋಕಗಳೇ ಹೆಚ್ಚು. ಆದ್ದರಿಂದ ಶ್ಲೋಕ ಸಂಖ್ಯೆಯಲ್ಲಿ ವ್ಯತ್ಯಾಸವಿದೆ. ಉಡುಪಿ ಪ್ರಕಾಶನದಲ್ಲಿ ಅಧ್ಯಾಯಸಂಖ್ಯೆ ಜಾಸ್ತಿ ಕಾಣುತ್ತದೆ. ಅದಕ್ಕೆ ಕಾರಣ ಒಂದೇ ಅಧ್ಯಾಯ ಎರಡಾಗಿ ವಿಭಾಗಿಸಲ್ಪಟ್ಟಿದ್ದೂ ಇದೆ.

೨. ಶ್ರೀಮದಾಚಾರ್ಯರು ಈ ಉಪಾಖ್ಯಾನವನ್ನು ಕೇವಲ ೩೭ ಶ್ಲೋಕಗಳಲ್ಲಿ ಸಂಗ್ರಹಿಸಿದ್ದಾರೆ. ಅದರಲ್ಲಿ ನಿರ್ಣಯಾಂಶವೂ ಸೇರಿದೆ. ಇದು ಆಚಾರ್ಯರ ಸಂಗ್ರಹ ಕೌಶಲಕ್ಕೆ ಉದಾಹರಣೆ. ಇದೇ ರೀತಿ ಎಲ್ಲೆಡೆ ನಿರ್ಣಯದಲ್ಲಿ ಕಾಣಬಹುದು.

೩. ಉದ್ಯೋಗಪರ್ವದಲ್ಲಿ ಇದನ್ನು (ಕಥೆ) ಉಪಾಖ್ಯಾನವಾಗಿ ಪರಿಗಣಿಸಲಾಗಿದೆ. ಆದಿಪರ್ವದಲ್ಲಿ ಅದು ಮೂಲಕಥೆಯ ಭಾಗವೇ ಆಗಿದೆ.

೪. ಈ ಉಪಾಖ್ಯಾನದ ನಿರ್ಣಯಾಂಶಗಳನ್ನೊಳಗೊಂಡ ಮ.ತಾ.ನಿ.ದ ಶ್ಲೋಕಗಳು:

ಭೀಷ್ಮಾಯ ತು ಯಶೋ ದಾತುಂ ಯುಯುಧೇ ತೇನ ಭಾರ್ಗವಃ । -೧೧/೯೨
ಅನಂತಶಕ್ತಿರಪಿ ಸನ್ ನ ಭೀಷ್ಮಂ ನಿಜಘಾನ ಸಃ ।
ನಚಾಂ ಗ್ರಾಹಯಾಮಾಸ ಭೀಷ್ಮಕಾರುಣ್ಯ ಯಂತ್ರಿತಃ ॥ -೧೧/೯೩
ಭೀಷ್ಮಃ ಸ್ವಭಕ್ತಂ ಯಶಸಾಭಿ ಪೂರಯನ್ ವಿಮೋಹಯನ್ನ ಸುರಾಂಶ್ಚೈವ ರಾಮಃ ।
ಜಿತ್ವೈವ ಭೀಷ್ಮಂ ನ ಜಘಾನ ದೇವೋ ವಾಚಂ ಚ ಸತ್ಯಾಮಕರೋತ್ಸ ತಸ್ಯ ॥
-೧೧/೯೫

ವಿದ್ಧವನ್ಮುಗ್ಧವಚ್ಚೈವ ಕೇಶವೋ ವೇದನಾರ್ತವತ್ ।
ದರ್ಶಯನ್ನಪಿ ಮೋಹಾಯ ನೈವ ವಿಷ್ಣುಸ್ತಥಾ ಭವೇತ್ ॥ -೧೧/೯೬
ಏವಮಾದಿ ಪುರಾಣೋಕ್ತ ವಾಕ್ಯಾದ್ರಾಮಃ ಸದಾ ಜಯೀ ।
ಯಶೋ ಭೀಷ್ಮಾಯ ದತ್ವಾತು ಸೋಽಂಬಾಂ ಚ ಶರಣಾಗತಾಮ್ ॥
ಉನ್ಮುಚ್ಯ ಭರ್ತೃದ್ವೇಷೋತ್ಥ ಪಾಪಾತ್ ತೇನಾಶ್ವಯೋಜಯತ್ ॥
-೧೧/೯೭,೯೮

# ಅಂಬೋಪಾಖ್ಯಾನ

ಕುರುಪಾಂಡವರ ಯುದ್ಧ ನಿರ್ಣಯವಾಗಿ ಪಾಂಡವರ ಪಕ್ಷದಲ್ಲಿ ಮಹಾರಥ, ಅತಿರಥ, ರಥ, ಅರ್ಧರಥ, ರಥ, ಯೂಥಪಯೂಥಪರು ಯಾರ್ಯಾರೆಂದು ಭೀಷ್ಮರು ಹೇಳಿ ತಮ್ಮ ಗೆಲ್ಲುವಸಾಮರ್ಥ್ಯ (ಗೆಲ್ಲುವ) ಮೊದಲಾವುಗಳನ್ನುಮತ್ತು ವಿಶೇಷವಾಗಿ ತಾವು ಸೋಮಕರನ್ನು ಪಾಂಡವರೊಂದಿಗೆ ಸಂಹರಿಸುವುದಾಗಿ ಹೇಳುತ್ತಾರೆ. ಆದರೆ ಯುದ್ಧ ಮಾಡಲು ಬರುವ ಶಿಖಂಡಿಯನ್ನು ಮಾತ್ರ ಕೊಲ್ಲುವುದಿಲ್ಲ ಎಂದು ಹೇಳಿದಾಗ ದುರ್ಯೋಧನನು ಶಿಖಂಡಿಯು [೧]ಆತತಾಯಿ ಆದರೂ ಅವನನ್ನು ಕೊಲ್ಲುವುದಿಲ್ಲ ಎಂದು ಪ್ರಶ್ನಿಸಿದಾಗ, ಭೀಷ್ಮರು ಆ ಕಥೆಯನ್ನು ದುರ್ಯೋಧನನಿಗೆ ಅವನೊಟ್ಟಿಗೆ ಇದ್ದ ಎಲ್ಲ ರಾಜರಿಗೂ ಹೇಳುತ್ತಾರೆ.

'ಹಿಂದೆ ಧರ್ಮಾತ್ಮನಾದ ಶಂತನು ಸ್ವೇಚ್ಛಾಮರಣದಿಂದ ದೇಹಬಿಟ್ಟನಂತರ ನನ್ನ ಸಹೋದರನಾದ ಚಿತ್ರಾಂಗದನನ್ನು ಮಹಾರಾಜನನ್ನಾಗಿ ಅಭಿಷೇಕ ಮಾಡಿದೆ. ಆತನು ಚಿತ್ರಾಂಗದ ಗಂಧರ್ವನೊಡನೆ ಯುದ್ಧಮಾಡಿ ಮರಣಹೊಂದಲು, ಇನ್ನೊಬ್ಬ ತಮ್ಮನಾದ ವಿಚಿತ್ರವೀರ್ಯನನ್ನು ತಾಯಿ ಸತ್ಯವತಿಯ ಅಭಿಪ್ರಾಯದ ಮೇರೆಗೆ ರಾಜನನ್ನಾಗಿ ಮಾಡಿದೆ. ಅವನು ಚಿಕ್ಕವನಾದ್ದರಿಂದ ಎಲ್ಲ ರಾಜಕಾರ್ಯಗಳಿಗೆ ನನ್ನನ್ನೇ ಅವಲಂಬಿಸಿದ್ದ. ಅವನು ವಿವಾಹಯೋಗ್ಯನಾಗುತ್ತಿರಲು ಅವನಿಗೆ ಕನ್ಯೆಯನ್ನು ತರಲು ಯೋಚಿಸಿ, ಕಾಶೀರಾಜನು ತನ್ನ ಮೂವರು ಕನ್ಯೆಯರಿಗೆ ಸ್ವಯಂವರ ಏರ್ಪಡಿಸಿದ್ದು ತಿಳಿಯಿತು. ಆ ಕುವರಿಯರು ಅಪ್ಸರೆಯರಂತೆ ರೂಪಸಿಯರಾಗಿದ್ದರು. [೨]ಭೂಮಂಡಲದ ರಾಜರೆಲ್ಲರೂ ಅದಕ್ಕೆ ಬಂದಾಗ ನಾನು ಏಕಾಂಗಿಯಾಗಿ ರಥಾರೂಢನಾಗಿ ವಿಚಿತ್ರವೀರ್ಯನ ಸಲುವಾಗಿ ಕಾಶೀರಾಜನಲ್ಲಿಗೆ

---

೧ ಬೆಂಕಿ ಹಚ್ಚಿ, ವಿಷಹಾಕಿ, ಶಸ್ತ್ರಪಾಣಿಯಾಗಿ, ಧನಾಪಹರಣ, ಆಸ್ತಿ ಲಪಟಾಯಿಸುವುದು, ಪರಪತ್ನಿ ಅಪಹರಣ ಮಾಡುವವನು, ಕೊಲ್ಲುವವನು ಆತತಾಯಿ. ಇವ್ಯಾವನ್ನೂ ಮಾಡದ ನಿರಪರಾಧಿ ಯಾದ ಶಿಖಂಡಿಯನ್ನು ಆತತಾಯಿ ಎಂದು ಸ್ವಯಂ ಇವೆಲ್ಲವನ್ನು ಮಾಡಿದ ದುರ್ಯೋಧನ ಆಪಾದಿಸುತ್ತಿರುವುದು ಅದೂ ಭೀಷ್ಮರಂತಹ ಕುಲವೃದ್ಧರಾದ ಪಿತಾಮಹರ ಮುಂದೆ ಎಂತಹ ದುಷ್ಟತನ! - ಭೀಷ್ಮಪರ್ವ(೧೦೭-೧೧೦)

ದುರ್ಯೋಧನ ಉವಾಚ -

ಕಿಮರ್ಥಂ ಭರತಶ್ರೇಷ್ಠ ನೈವಹನ್ಯಾಃ ಶಿಖಂಡಿನಮ್ ।

ಉದ್ಯತೇ ಷುಮಥೋ ದೃಷ್ಟ್ವಾ ಸಮರೇಷು ಆತತಾಯಿನಮ್ ॥ - ಉ.ಪ.(೧೭೩/೧

೨ .......... ಕಾಶಿಕೋಸಲಾಃ । ವಂಗಾಃ ಪುಂಡ್ರಾಃ ಕಲಿಂಗಾಶ್ಚ ತೇ ಜಗ್ಮುಸ್ತಾಂ ಪುರೀಂ ಪ್ರತಿ ।

ಹೋದೆ. ಸ್ವಯಂವರದಲ್ಲಿ ಕನ್ಯೆಯರು ಬಂದ ರಾಜಕುಮಾರರನ್ನು ನೋಡುತ್ತಾ ಮುಂದೆ ನಡೆಯುತ್ತಿರಲು ವೃದ್ಧನಾದ ನನ್ನನ್ನು ನೋಡಿ ಉದ್ವಿಗ್ನರಾಗಿ ಹಿಂದೆ ಸರಿದರು. [೧]ಬಂದ ರಾಜರು ಈ ಮುದುಕ ಭೀಷ್ಮ ಬ್ರಹ್ಮಚಾರಿ ಎಂದು ಪ್ರಸಿದ್ಧಿ ಪಡೆದು ನಾಚಿಗೆಗೆಟ್ಟು ಬಂದಿದ್ದಾನಲ್ಲ ಎಂದು ಜರಿದರು, ನಕ್ಕರು. ಆದರೆ ಭೀಷ್ಮರು ಇದನ್ನು ಲೆಕ್ಕಿಸಲಿಲ್ಲ. ಕಾರಣ ಅವರು ತಮ್ಮ ಸಲುವಾಗಿ ಬಂದಿದ್ದಲ್ಲವಷ್ಟೇ? ಅಂತೆಯೇ ರಾಜರ ಮೂದಲಿಕೆಗಳಿಂದ ಕೃದ್ಧರಾದ ಭೀಷ್ಮರು ಸ್ವಯಂವರ ಸಭೆಯಲ್ಲಿ ಘೋಷಿಸಿದರು.

[೨]"ನೀವೆಲ್ಲರೂ ನೋಡುತ್ತಿರುವಂತೆಯೇ ಈ ಭೀಷ್ಮನು ಸ್ವಯಂವರದ ಕನ್ಯೆಯರನ್ನು ಅಪಹರಣ ಮಾಡುತ್ತಾನೆ. ನಿಮಗೆ ಸಾಮರ್ಥ್ಯವಿದ್ದಲ್ಲಿ ನನ್ನೊಡನೆ ಯುದ್ಧಮಾಡಿ ಕನ್ಯೆಯರನ್ನು ಬಿಡಿಸಿಕೊಳ್ಳಿ. ಅಲ್ಲದೆ ಕನ್ಯಾಪಹರಣ ಕ್ಷತ್ರಿಯರಿಗೆ ದೋಷವೂ ಅಲ್ಲ. ಶಾಸ್ತ್ರೀಯ ವಿವಾಹಪದ್ಧತಿಗಳು ಬ್ರಾಹ್ಮ, ಆರ್ಷ, ಆಸುರ, ರಾಕ್ಷಸ, ಸ್ವಯಂವರ, ಗಾಂಧರ್ವ, ಪೈಶಾಚ, ಪ್ರಾಜಾಪತ್ಯ ಮತ್ತು ದೈವ. ಬಲಪ್ರಯೋಗ ಮಾಡಿ ಅಪಹರಣ ಮಾಡುವುದು ಶ್ರೇಷ್ಠವೆಂದು ಧರ್ಮಿಷ್ಠರು ಹೇಳುತ್ತಾರೆ" ಎನ್ನುತ್ತಾ ಕನ್ಯೆಯರನ್ನು ರಥವೇರಲು ಹೇಳಿ ರಾಜಸಭೆಯಿಂದ ಹೊರಟೇಬಿಟ್ಟರು. ಈ ಕನ್ಯೆಯರೆಲ್ಲ ವೀರ್ಯಶುಲ್ಕ ಎಂದು ಭಾವಿಸಿದ್ದೇನೆ. ಇದನ್ನು ನೋಡಿ ಕೆರಳಿ ಕೆಂಡಾದ ರಾಜರೆಲ್ಲ ಯುದ್ಧ ಸನ್ನದ್ಧರಾಗಿ ಭೀಷ್ಮರ ಮೇಲೆ ಯುದ್ಧ ಸಾರಿದರು.

ಹೇ ದುರ್ಯೋಧನ! ನಾನು ನನ್ನೊಡನೆ ಸೆಣಸಾಡಲು ಬಂದ ರಾಜರನ್ನೆಲ್ಲ ಸೋಲಿಸಿದೆ. ನನ್ನ ಒಬ್ಬನ ಮೇಲೆ ಹತ್ತು ಸಾವಿರ ಬಾಣಗಳನ್ನು ಬಿಟ್ಟರೂ, ಅವರು ನನ್ನ ಬಳಿ ಬರುವ ಮುನ್ನವೇ ಅವುಗಳನ್ನು ಕತ್ತರಿಸಿದೆ. ಪರ್ವತವನ್ನು ಸುತ್ತುವರಿದ ಮೋಡಗಳಂತೆ ನನ್ನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರೂ ನಾನೇ ಅವರನ್ನು ಮೂರು ಮೂರು ಬಾಣಗಳಿಂದ ಸದೆಬಡಿದೆ. ಆ ಹೊತ್ತಿಗೆ ಸಾಲ್ವದೇಶದ ರಾಜ ಬ್ರಹ್ಮದತ್ತನು ನನ್ನೊಡನೆ ಯುದ್ಧಕ್ಕೆ ಬಂದ. [೩]ಸ್ತ್ರೀಕಾಮ ಎಂದು ನನ್ನ ಮೂದಲಿಸಿದ. ನಾನು ಮತ್ತೆ ಅವನೊಡನೆ ಯುದ್ಧಮಾಡಲು ರಥವನ್ನು ಹಿಂದಿರುಗಿಸಿ ಅವನ ರಥದ ಕುದುರೆಗಳನ್ನು, ಸಾರಥಿಯನ್ನು ಕೊಂದೆ. ಸಾಲ್ವನು ರಥ, ಸಾರಥಿ ಹಾಗೂ

---

೧ ಏಕಾಕಿನಂ ತದಾ ಭೀಷ್ಮಂ ವೃದ್ಧಂ ..... ।
ಸೋದ್ವೇಗಾ ಇವ ತಂ ದೃಷ್ಟ್ವಾ ಕನ್ಯಾಃ ಪರಮ ಶೋಭನಾಃ।
ಅಪಕ್ರಾಮಂತ ತಾಃ ಸರ್ವಾಃ ವೃದ್ಧ ಇತ್ಯೇವ ಚಿಂತಯಾ।
ಕಿಂ ಕಾರಣ ಮಿಹಾಯಾತೋ ನಿರ್ಲಜ್ಜೋ ............ ।
ಬ್ರಹ್ಮಚಾರೀತಿ ಭೀಷ್ಮೋ ಹಿ ವೃಥೈವ ಪ್ರಥಿತೋ ಭುವಿ।
..... ಇತ್ಯೇವಂ ಪ್ರಬ್ರುವಂತಸ್ತೇ ಹಸಂತಿ ಸ್ಮ ನೃಪೋತ್ತಮಾಃ॥ - ಆದಿಪರ್ವ(೧೦೧/೬-೧೧)

೨ 'ರಥಮಾರೋಪ್ಯ ತಾಃ ಕನ್ಯಾಃ ಭೀಷ್ಮೋ ಭೀಮಪರಾಕ್ರಮಃ।
.... ಸಂಪ್ರಮಥ್ಯ ಹೃತಾಮಾಹುಃ ಜ್ಯಾಯಸೀಂ ಧರ್ಮಚಾರಿಣಃ॥...
ಸ್ಥಿತೋಽಪಿ ಪೃಥಿವೀಪಾಲಾ ಯುದ್ಧಾಯ ಕೃತನಿಶ್ಚಯಃ॥ - ಮ.ಭಾ.ಆ.ಪ.(೧೦೧/೧೧-೧೯)

೩. 'ಸ್ತ್ರೀಕಾಮ ತಿಷ್ಠ ತಿಷ್ಠೇತಿ ಸಾಲ್ವಶ್ಚಾಹ ಸ ಪಾರ್ಥಿವಃ।' - ಆದಿಪರ್ವ (೧೦೧/೩೩)

ಕುದುರೆಗಳನ್ನು ಕಳೆದುಕೊಂಡವನಾಗಿ ತನ್ನ ಬಿಲ್ಲನ್ನೂ ಭೂಮಿಯ ಮೇಲೆಸೆದು ತಲೆತಗ್ಗಿಸಿ ನಿಂತನು.

ಹೀಗೆ ಸಾಲ್ವನನ್ನು ಸೋಲಿಸಿ (ಕೊಲ್ಲದೆ) ನಾನು ಹಸ್ತಿನಾವತಿಗೆ ಬಂದು ತಾಯಿ ಸತ್ಯವತಿಗೆ ಎಲ್ಲ ಅರುಹಿದೆ. ನಾನು ಕರೆತಂದ ಕನ್ಯೆಯರಿಗೆ ಯಾವ ರೀತಿಯಾಗಿಯೂ ಘಾಸಿಯಾಗದಂತೆ ನೋಡಿಕೊಂಡೆ. ಅವರನ್ನು [೧]ಧಾರ್ಮಿಕ ಪುರುಷನೊಬ್ಬ ಸೊಸೆಯನ್ನು ಕರೆದುಕೊಂಡು ಬರುವಂತೆ, ಅಣ್ಣಂದಿರು ಸೋದರಿಯನ್ನು, ತಂದೆಯು ಹೆಣ್ಣುಮಕ್ಕಳನ್ನು ಕರೆದು ತರುವಂತೆ, ಮನೆಗೆ ತಂದು ವಿಚಿತ್ರವೀರ್ಯನಿಗೆ ಕೊಟ್ಟೆನು. ಮುಂದೆ ವಿವಾಹವಿಧಿಗಾಗಿ ತಾಯಿಗೆ ಹೇಳಲು ಮುಂದುವರಿದಾಗ ಹಿರಿಯಕನ್ಯೆ ಅಂಬಾ ಬ್ರಾಹ್ಮಣರ-ಪ್ರಜೆಗಳ ಸಭೆಯಲ್ಲಿ ಹೀಗೆ ನುಡಿದಳು. [೨]'ಎಲೈ ಭೀಷ್ಮನೇ! ನಾನು ಮೊದಲೇ ಸಾಲ್ವರಾಜನನ್ನು ಪತಿಯಾಗಿ ವರಿಸಿದ್ದೆ. ಸಾಲ್ವನೂ ಒಪ್ಪಿದ್ದ. ನನ್ನ ತಂದೆಗೆ ಇದು ತಿಳಿದಿಲ್ಲ. ಸ್ವಯಂವರದಲ್ಲಿ ನಾನು ಸಾಲ್ವನಿಗೆ ಹಾರ ಹಾಕಬೇಕಿತ್ತು. ಆದ್ದರಿಂದ ಬೇರೆಯವರನ್ನು ಬಯಸಿದ ಕನ್ಯೆಯನ್ನು ರಾಜಧರ್ಮವನ್ನು ಅತಿಕ್ರಮಿಸಿ ಹೇಗೆ ತಾನೇ ನಿನ್ನ ಮನೆಯಲ್ಲಿ ಇರಿಸಿಕೊಳ್ಳುವೆ? ಆದ್ದರಿಂದ ನೀನು ಈ ಬಗ್ಗೆ ವಿಚಾರಮಾಡಿ ಸೂಕ್ತ ಕಂಡುದುದನ್ನು ಮಾಡು. ಕಾರಣ ನನಗೆ ಅಲ್ಲಿಗೆ ಹೋಗಲು ಅಪ್ಪಣೆ ಕೊಡು; ಕೃಪೆ ಮಾಡು. ನೀನು ಸತ್ಯವಂತನಷ್ಟೇ?'

ಹೀಗೆ ಅಂಬಾ(ದೇವಿಯ) ಆಶಯದ ಮೇರೆಗೆ ಭೀಷ್ಮರು ತಮ್ಮ ತಾಯಿ ಸತ್ಯವತೀದೇವಿ, ಸೋದರ ವಿಚಿತ್ರವೀರ್ಯ, ಮಂತ್ರಿ, ಪುರೋಹಿತರೊಂದಿಗೆ ಚರ್ಚಿಸಿ ಆಕೆಯನ್ನು ಸಾಲ್ವರಾಜನ ಬಳಿಗೆ ಹೋಗಲು ಸಮ್ಮತಿಸಿ, ಆಕೆಯೊಡನೆ ವೃದ್ಧಬ್ರಾಹ್ಮಣರು ಹಾಗೂ ಆಕೆಯ ದಾದಿ(ಸ್ನೇಹಿತೆ)ಯನ್ನೂ ರಕ್ಷಣೆಗಾಗಿ ಕಳಿಸಿದರು. ಕಳುಹಿಸುವಾಗ ಭೀಷ್ಮರು ಅಂಬೆಗೆ [೩]'ಎಲೈ

---

೧ ತಾಃ ಸ್ನುಷಾ ಚ ಧರ್ಮಾತ್ಮಾ ಭಗಿನೀರನುಜಾ ಇವ।
ಪಿತಾ ಯಥಾ ಚ ದುಹಿತ್ರ್ಯಃ ಪ್ರಗೃಹ್ಯ ಪ್ರಯಯೌ ಕುರೂನ್ ॥ - ಆದಿಪರ್ವ(೧೦೧/೫೯)

೨ ಮಯಾ ಸಾಲ್ವಪತಿಃ ಪೂರ್ವಂ ಮನಸಾಽಭಿವೃತೋ ವರಃ।
ತೇನ ಚಾಪಿ ವೃತಾ ಪೂರ್ವಂ ರಹಸ್ಯವಿದಿತೇ ಪಿತಃ॥
(ತೇನ ಚಾಸ್ಮಿ ವೃತಾ ಪೂರ್ವಂ ಏಷ ಕಾಮಶ್ಚ ಮೇ ಪಿತುಃ॥) ಪಾಠಾಂತರ
ಕಥಂ ಮಾಮನ್ಯಕಾಮಾಂ ತ್ವಂ ರಾಜಧರ್ಮಮತೀತ್ಯವೈ।
ವಾಸಯೇಥಾ ಗೃಹೇ ಭೀಷ್ಮ......................... ।
ಸ ಮಾಂ ಪ್ರತೀಕ್ಷತೇ ವ್ಯೋಢುಂ ಸಾಲ್ವರಾಜೋ ವಿಶಾಂ ಪತೇ।
...... ಕೃಪಾಂ ಕುರು ಮಹಾಬಾಹೋ ಮಯಿ............... ।
ತ್ವಂ ಹಿ ಸತ್ಯವ್ರತೋ ವೀರಃ.......................... । - ಉದ್ಯೋಗಪರ್ವ(೧೭೨/೬-೧೦)

೩ ವಿಸೃಷ್ಟಾಽಹ್ಯಸಿ ಗಚ್ಛತ್ವಂ ಯಥಾಕಾಮಮನಿಂದಿತೇ।
ಅನ್ಯಭಾವಗತಂ ಚಾಪಿ ಕೋ ನಾರೀಂ ವಾಸಯೇದ್ ಗೃಹೇ॥
............. ಅನ್ಯಕಾಮೋಽಸಿ ಗಮ್ಯತಾಮ್ ॥

ನಿರ್ದೋಷಿಯೇ ನಾನು ನಿನ್ನನ್ನು ಬಿಡುಗಡೆ ಮಾಡಿದ್ದೇನೆ. ನೀನು ಇಷ್ಟಬಂದಲ್ಲಿಗೆ ಹೋಗು. ಮತ್ತೊಬ್ಬರನ್ನು ಪ್ರೀತಿಸುವ ಮಹಿಳೆಯನ್ನು ಯಾರು ತಾನೇ ತನ್ನ ಮನೆಯಲ್ಲಿಟ್ಟುಕೊಳ್ಳಲು ಬಯಸುತ್ತಾರೆ? ನಿನಗೆ ಬೇರೆಯವನಲ್ಲಿ ಪ್ರೀತಿ ಇದೆ. ಆದ್ದರಿಂದ ಹೊರಡಬಹುದು. ನಾನೂ ಸಹ ಊರ್ಧ್ವರೇತಸ್ಕ (ದೃಢವಾದ ಬ್ರಹ್ಮಚಾರಿ) ವಿವಾಹದ ವಿಷಯದಿಂದ ದೂರವಿದ್ದೇನೆ (ನಿವೃತ್ತನಾಗಿದ್ದೇನೆ). ಕಾರಣ ನಮ್ಮಿಬ್ಬರ ಮಧ್ಯವೂ ಯಾವ ಸಂಬಂಧವೂ ಆಗದು' ಎಂದು ಹೇಳಿದೆ.

[೧]..... ನಂತರ ಸಾಲ್ವರಾಜನ ಬಳಿಗೆ ಹೋದ ಅಂಬಾ 'ಸದಾ ನಿನ್ನ ಹಿತದಲ್ಲಿಯೇ ಪ್ರೀತಿ ಕಂಡ, ನಿನ್ನನ್ನು ಮನಸಾ ಪ್ರೀತಿಸಿದ. ನನ್ನನ್ನೂ ಹಾಗೆಯೇ ಪ್ರೀತಿಸಿದ, ನಿನ್ನ ಬಳಿಗೆ ಬಂದ ನನ್ನನ್ನು ಪತ್ನಿಯಾಗಿ ಸ್ವೀಕರಿಸು' ಎಂದು ರಾಜನನ್ನು ಬೇಡಿಕೊಂಡಳು. ಆದರೆ ರಾಜನು 'ಬೇರೆಯವರು ಸ್ಪರ್ಶಿಸಿದ ನಿನ್ನನ್ನು ನಾನು ಪತ್ನಿಯಾಗಿ ಸ್ವೀಕರಿಸೆ' ಎಂದು ತಿರಸ್ಕರಿಸಿದನು. ಆದಕ್ಕೆ ಕಾಮಪೀಡಿತಳಾದ ಅಂಬೆ 'ಹಾಗೆ ಅನ್ನಬೇಡ. ಭೀಷ್ಮರು ಎಲ್ಲ ರಾಜರನ್ನು ಗೆದ್ದು ಓಡಿಸಿ, ಅಳುತ್ತಿದ್ದ ನನ್ನನ್ನು ಬಲಾತ್ಕಾರದಿಂದ ಕರೆದುಕೊಂಡು ಹೋಗಿದ್ದಾರೆ. ಅವರಾದರೂ ತನ್ನ ಸಲುವಾಗಿ ಕರೆದುಕೊಂಡು ಹೋಗದೇ ತನ್ನ ಸೋದರನ ಸಲುವಾಗಿ ಕರೆದುಕೊಂಡು ಹೋಗಿದ್ದಾರೆ. ನಾನು ನಿರಪರಾಧಿ. ಅವರಿಂದ ಅನುಮತಿ ಪಡೆದೇ ನಾನು ನಿನ್ನಲ್ಲಿಗೆ ಬಂದಿದ್ದೇನೆ. ನಾನು ನಿನ್ನನ್ನು ಬಿಟ್ಟು ಬೇರಾರನ್ನೂ ಬಯಸಿಲ್ಲ. ಪ್ರಮಾಣಮಾಡಿ ಹೇಳುತ್ತೇನೆ' ಎಂದಳು.

ಆದರೂ ಸಾಲ್ವನ ಮನ ಕರಗಲಿಲ್ಲ. ಆಕೆ ಎಷ್ಟೇ ಬೇಡಿದರೂ ನಂಬದೇ ಭೀಷ್ಮರ ಭಯದಿಂದ ತ್ಯಜಿಸಿದ. ಅಂಬೆ ಅಳುತ್ತಾ, ಗೋಳಾಡುತ್ತಾ ಹೆಣ್ಣು ಜಿಂಕೆಯಂತೆ ಹೋದಳು. ಮತ್ತೇ ಭೀಷ್ಮರ ಬಳಿಗೆ ಬಂದು ತನ್ನನ್ನು ಸ್ವಯಂವರದಲ್ಲಿ ಬಲಾತ್ಕಾರದಿಂದ ಅಪಹಾರಮಾಡಿದ್ದೀಯಾ. ಕ್ಷತ್ರಿಯ ಧರ್ಮರೀತ್ಯಾ ನೀನು ನನ್ನ ಪತಿ. ಆದ್ದರಿಂದ ಸ್ವೀಕರಿಸೆಂದು ಹೇಳಿದಳು.

ಆದರೆ ಭೀಷ್ಮರು ನಾನು ಅಖಂಡ ಬ್ರಹ್ಮಚರ್ಯವ್ರತದಲ್ಲಿದ್ದೇನೆ ಎಂದರು. ಆಕೆ ನೀನು ನನ್ನನ್ನು ಗೆದ್ದು ತಂದೀಯಾ. ಆದ್ದರಿಂದ ಅದಕ್ಕೆ ಸೂಕ್ತವಾಗಿ ನಡೆ ಎಂದಳು. ಅದಕ್ಕೆ ಅವರು ನಾನು ವಿವಾಹದಿಂದ ದೂರವಾಗಿದ್ದೇನೆ. ಹಾಗೆ ಎಂದೋ ಪ್ರತಿಜ್ಞೆ ಮಾಡಿರುವೆ. ನೀನು

---

ಅಹಮಪ್ಯೂರ್ಧ್ವರೇತಾ ವೈ ನಿವೃತ್ತೋ ದಾರಕರ್ಮಣಿ ।
ನ ಸಂಬಂಧಸ್ತದಾವಾಭ್ಯಾಂ ಭವಿತಾ ವೈ ಕಥಂಚನ ॥ - ಆದಿಪರ್ವ(೧೦೧/೭೩-೭೪)

೧ ಭಜಸ್ವ ಮಾಂ ಸಾಲ್ವಪತೇ ಭಕ್ತಾಂ ಬಾಲಾಮನಾಗಸೀಮ್ ।
ಭಕ್ತಾನಾಂ ಹಿ ಪರಿತ್ಯಾಗೋ ನ ಧರ್ಮೇಷು ಪ್ರಶಸ್ಯತೇ ॥
ನಾಶ್ರದ್ಧಧತ್ ಸಾಲ್ವಪತಿಃ ಕನ್ಯಾಯಾಂ.................. ।
... ಬಿಭೇಮ ಭೀಷ್ಮಾತ್ ಸುಶ್ರೋಣಿ ತ್ವಂ ಚ ಭೀಷ್ಮಪರಿಗ್ರಹಃ ॥
- ಉದ್ಯೋಗಪರ್ವ(೧೭೩/೧೭,೨೯)

ಮತ್ತೊಬ್ಬನನ್ನು ಪ್ರೀತಿಸಿರುವುದನ್ನು ಏಕೆ ಹೇಳಿದೆ? ಆದ್ದರಿಂದ ನಾನು ಮದುವೆಯಾಗಲಾರೆ. ನನ್ನ ತಮ್ಮನಿಗೂ ಮಾಡಲಾರೆ. ನಿನಗೆ ಎಲ್ಲಿಗೆ ಬೇಕೋ ಅಲ್ಲಿಗೆ ಹೋಗಬಹುದು ಎಂದರು.

ನಂತರ ಸಾಲ್ವನ ಬಳಿಗೆ ಮತ್ತೆ ಹೋಗಿ ಕೇಳಲು, ಆತನು ಬೇರೆಯವರು ಗೆದ್ದ ಕನ್ಯೆಯನ್ನು ಸ್ವೀಕರಿಸೆ ಎಂದು ನಿರಾಕರಿಸಿದ. ಮತ್ತೆ ಭೀಷ್ಮರ ಬಳಿಗೆ ಬಂದು ಬೇಡಿದಲಾಗ ಅವರು ತಮ್ಮ ಬ್ರಹ್ಮಚರ್ಯ ನಿಯಮವನ್ನೇ ಮುಂದೊಡ್ಡಿದರು.

[೧]ಹೀಗೆ ಅಂಬೆ ಸಾಲ್ವ, ಭೀಷ್ಮರನ್ನು ಮತ್ತೆ ಮತ್ತೆ ಕಂಡು ಮನಸ್ಸಿನಲ್ಲಿ ತಪಿಸುತ್ತಾ ಆರು ವರ್ಷ ಪದೇ ಪದೇ ವಿಫಲ ಪ್ರಯತ್ನ ಮಾಡಿದಳು. ನಂತರ ಹನ್ನೆರಡುವರ್ಷಗಳ ಕಾಲ ಹಿಮಾಲಯದ ಹತ್ತಿರದ ಬಾಹುದಾ ನದಿಯ ಸಮೀಪ ಘೋರ ತಪಸ್ಸನ್ನು ಮಾಡಲು ದೇವತೆಗಳೆಲ್ಲ ನಡುಗಿದರು. ಆಕೆಯ ತೀವ್ರ ತಪಸ್ಸಿಗೆ ಪ್ರಸನ್ನನಾದ ಶಿವನು ([೨]ಅನಂತಸೇನ ಕುಮಾರ) ದರ್ಶನಕೊಟ್ಟು, ಅನುಗ್ರಹದಿಂದ ಬಂದು ಹೂಮಾಲೆಯನ್ನು ಕೊಟ್ಟನು. 'ಈ ಮಾಲೆಯು ನಿನ್ನ ಶೋಕಪರಿಹಾರಕ, ಎಂದರೆ ಈ ಮಾಲೆಯನ್ನು ಧರಿಸುವ ಪುರುಷನು ಭೀಷ್ಮರ ನಿಧನಕ್ಕೆ ಕಾರಣವಾಗುತ್ತಾನೆ' ಎಂದು.

[೩]ಹೀಗೆ ಅಂಬೆಯು ರುದ್ರದೇವರನ್ನು ಒಲಿಸಿ ಭೀಷ್ಮಸಂಹಾರ ಮಾಡುವ ಪುರುಷನನ್ನು ಹುಡುಕುತ್ತಾ ಹೊರಟಳು. ಹೋದಲ್ಲೆಲ್ಲ ಭೀಷ್ಮರನ್ನು ಅಪರಾಧಿಯಂತೆ ಬಿಂಬಿಸಿದಳು. ಹೇಗೆಂದರೆ 'ಭೀಷ್ಮರು ನಾನು ಮೊದಲೇ ಒಬ್ಬರನ್ನು ಪ್ರೀತಿಸಿದ್ದೇ ಎಂದು ಹೇಳಿದುದನ್ನೇ ನೆಪಮಾಡಿ ಮದುವೆಯಾಗೆಂದು ಅವಿವೇಕಿಯಂತೆ ಸ್ವೀಕರಿಸುತ್ತಿಲ್ಲ. ಹೀಗಾಗಿ ನಾನು ಪತಿನಿಹೀನಳಾಗಿ, ಒಬ್ಬ ಸ್ತ್ರೀಯ ಕಾಮ, ಆಶೆಗಳಿಂದ ವಂಚಿತಳಾಗಿದ್ದೇನೆ. ಇದಕ್ಕೆ ಈ ಭೀಷ್ಮರೇ

---

೧ ಅಂಬಾ ಭೀಷ್ಮಂ ಪುನಃ ಸಾಲ್ವಂ ಭೀಷ್ಮಂ ಸಾಲ್ವಂ ಪುನಃ ಪುನಃ।
ಏವಮನ್ವಗಮದ್ ಭೀಷ್ಮಂ ಷಟ್‌ಸಮಾಃ ಪುಷ್ಕರೇಕ್ಷಣಾ ॥
ಅಶ್ರಂಭಃ ಭೂಮಿಮುಕ್ಷಂತೀ ತಪಂತೀ ಚ ಮನಸ್ವಿನೀ।
ತತೋಽನ್ಯಾ ದ್ವಾದಶಸಮಾ ಬಾಹುದಾಮಭಿತೋ ನದೀಮ್।
ಪಾರ್ಶ್ವೇ ಹಿಮವತೋ ರಮ್ಯೇ ತಮೋಘೋರಂ ಸಮಾದದೇ ॥
ಅನಂತಸೇನೋ ಭಗವಾನ್ ಕುಮಾರಃ ...................... ।
ಮಾನಯನ್ ರಾಜಪುತ್ರೀಂ ತಾಂ ದದೌ ತಸ್ಯೈ ಶುಭಾಂ ಸ್ರಜಮ್ ॥
ಏತಾಂ ಚೈವ ಮಯಾ ದತ್ತಾಂ ಯೋ ಮಾಂ ಧಾರಯಿಷ್ಯತಿ।
ಸೋಽಸ್ಯ ಭೀಷ್ಮಸ್ಯ ನಿಧನೇ ಕಾರಣಂ ವೈ ಭವಿಷ್ಯತಿ ॥ - ಆದಿಪರ್ವ(೧೦೧/೮೭,೮೮,೯೧,೯೩)

೨ ಅನಂತಸೇನೋ ಭಗವಾನ್ ಇತ್ಯತ್ರ ಅನಂತಾ ಅಪರಿಮಿತಾ ಸೇನಾ ಪಿಶಾಚಾದಿ ಸೇನಾಯಸ್ಯ ಸಃ ಅನಂತಸೇನಃ । 'ಕುಮಾರೋ ನೀಲಲೋಹಿತಃ' ಇತಿ ವಚನಾತ್ ಕುತ್ಸಿತೋ ಮಾರಃ ಯೇನೇತಿ ವ್ಯುತ್ಪತ್ತ್ಯಾ ಚ ಕುಮಾರಃ ಶಿವಃ।

೩ ಆದಿಪರ್ವ (೧೦೨/೩,೧೧,೧೨,೧೪)
ಆದಿಪರ್ವ (೧೦೨/೧೯-೨೯)

ಕಾರಣ. ಆದ್ದರಿಂದ ರುದ್ರದೇವರು ಕೊಟ್ಟ ಈ ಮಾಲೆಯನ್ನು ಯಾರು ಧರಿಸುವಿರೋ, ಅವರೇ ಭೀಷ್ಮಸಂಹಾರಕರು.' ಹೀಗೆ ಹೇಳುತ್ತಾ ಐದು ವರ್ಷಗಳವರೆಗೆ ಕ್ಷತ್ರಿಯರೆಲ್ಲರನ್ನು ಬೇಡುತ್ತಾ ಹೋದರೂ ಯಾವ ರಾಜನೂ ಆ ಮಾಲೆಯನ್ನು ಅಸ್ತ್ರಶಸ್ತ್ರಪ್ರತಾಪಿಯಾದ ಭೀಷ್ಮರ ಭಯದಿಂದ ಸ್ವೀಕರಿಸಲಿಲ್ಲ.

ನಂತರ ಯಜ್ಞದೇವ (ಪಾಂಚಾಲ)ನನ್ನು ಕಂಡು ನೀನಾದರೂ ನನ್ನ ಕೈಹಿಡಿ. ನಾನು ಎಲ್ಲ ಧರ್ಮ, ರತಿಸುಖ, ಇಹಪರಲೋಕ, ಕೀರ್ತಿ, ಅವುಗಳಿಗೆ ಕಾರಣ ಹಾಗೂ ಫಲಗಳನ್ನು ಭೀಷ್ಮನಾಶಮಾಡಿದ್ದಾನೆ. ನನ್ನ ಈ ಕಿರುಚಾಟ ಸಫಲವಾಗುತ್ತಿಲ್ಲ. ಇಲ್ಲಿ ಯಾರೂ ಕ್ಷತ್ರಿಯರೇ ಇಲ್ಲವೇ? ಇಕ್ಷ್ವಾಕು ವಂಶದವರಾಗಲಿ, ನನ್ನನ್ನು ಮೇಲೆತ್ತುತ್ತಿಲ್ಲ. ನೀನಾದರೂ ಎತ್ತುವೆಯಾ? ಎಂದು ಅಂಗಲಾಚಲಾಗಿ ಸೋಮಕರಾಜನು ಭೀಷ್ಮರನ್ನು ಹೊರತುಪಡಿಸಿ, ಬೇರೆ ಯಾರೇ ರಾಜರಿಂದ ನಿನ್ನ ಭಯ ತೊಲಗಿಸಬಲ್ಲೆ. ಮಹಾಸ್ತ್ರಪ್ರಹರಣಶಾಲಿಯಾದ ಭೀಷ್ಮನಿಂದ ರಕ್ಷಿಸಲಾರೆ. ಆದ್ದರಿಂದ ಮಂಗಲೇ ನೀನು ಹೊರಟುಹೋಗು ಎಂದ.

ಆಗ ರಾಜದ್ವಾರದಲ್ಲಿಯೇ ಆ ಮಾಲೆಯನ್ನು ಇಟ್ಟು ಓಡಿಹೋದಳು. ದ್ರುಪದನು ಆಕೆಯನ್ನು ಬೆನ್ನುಹತ್ತಿ ಆ ಮಾಲೆಯನ್ನು ತೆಗೆದುಕೊಂಡು ಹೋಗು. ನನಗೂ ಭೀಷ್ಮರಿಗೂ ವೈರವನ್ನು ಉಂಟುಮಾಡಬೇಡ. ಇದು ಮನುಷ್ಯರನ್ನೂ ಮೀರಿದ ಕೆಲಸವೆಂದ. ಓಡುತ್ತಾ ಹೋದ ಅಂಬೆ ಬರಲಿಲ್ಲ. ದ್ರುಪದ ಆ ಮಾಲೆಯನ್ನು ಕೆಲಕಾಲ ರಕ್ಷಿಸಿದ. ನಂತರ ಧೈರ್ಯ ತಂದುಕೊಂಡು ಉಪೇಕ್ಷೆ ಮಾಡಿದ.

ಮುಂದೆ ದ್ರುಪದನ ಮಗಳಾದ ಶಿಖಂಡಿಯು ಆ ಮಾಲೆಯನ್ನು ಹಾಕಿಕೊಂಡಳು. ಇದನ್ನು ನೋಡಿದ ದ್ರುಪದ ಆಕೆಯನ್ನು ತೊರೆದನು.

ನಂತರ ಶಿಖಂಡಿಯು ಗಂಗಾದ್ವಾರದಲ್ಲಿ ತಪಸ್ಸನ್ನು ಮಾಡುತ್ತಿದ್ದ ಋಚೀಕರ ಪ್ರಸನ್ನತೆಗಾಗಿ ಅಲ್ಲಿಗೆ ಹೋದಳು. ಆಕೆಯ ಸೇವೆಯಿಂದ ಸಂತುಷ್ಟರಾದ ಋಚೀಕರು ಆಕೆಗೆ ನಿನಗೆ ಗಂಗಾದ್ವಾರದಲ್ಲಿ ಸದ್ಯದಲ್ಲಿ ನಿನ್ನ ಇಷ್ಟಸಿದ್ಧಿ(ವಿಭಜನ)ವಾಗುತ್ತದೆ. ಅಲ್ಲಿಗೆ ಬರುವ ಗಂಧರ್ವರಾಜ ಆ ಕೆಲಸ ಮಾಡುತ್ತಾನೆ. ಆತನನ್ನು ಸೇವಿಸಿ ಸಂತೋಷಪಡಿಸಲು ಪ್ರಯತ್ನಿಸು ಎಂದರು. ನಾನು ಕಾರ್ಯದಲ್ಲಿ ಸಹಾಯ ಮಾಡುವೆ ಎಂದರು.

ಮುಂದೆ ಗಂಗಾದ್ವಾರದಲ್ಲಿ ಗಂಧರ್ವರಲ್ಲಿ ವಿಭಜನೆ ಉಂಟಾಯಿತು. ಅವರಿಬ್ಬರಲ್ಲಿ ಒಬ್ಬರು ತುಂಬುರು.

ಅವರಲ್ಲಿ ತುಂಬುರು ಶಿಖಂಡಿಗೆ ತನ್ನ ಪುರುಷತ್ವ ಕೊಟ್ಟು ತಾನು ಆಕೆಯ ಸ್ತ್ರೀತ್ವವನ್ನು ಹೊಂದಿದನು. ಅದು ಆತನ ಇಚ್ಛೆಯೂ ಆಗಿತ್ತು. ಇಬ್ಬರೂ ಶರೀರದ ವಿನಿಮಯಕ್ಕಾಗಿ ಒಪ್ಪಂದ ಮಾಡಿಕೊಂಡರು. ಅದರಂತೆ ಶಿಖಂಡಿ ಪುರುಷನಾಗಿ ಮುಂದೆ ಬುದ್ಬುದಕ ಎಂಬ ಪಟ್ಟಣಕ್ಕೆ ಹೋಗಿ ಅಸ್ತ್ರವಿದ್ಯೆ ಕಲಿತನು. ಆ ಗಂಧರ್ವನು ಸ್ತ್ರೀರೂಪ ಸ್ವೀಕರಿಸಿ, ಅಲ್ಲಿಂದ ಹೊರಟನು.

ಪುರುಷನಾಗಿ ಬಂದ ಶಿಖಂಡಿಯು ತಂದೆ ದ್ರುಪದನಿಗೆ ನಮಿಸಿ, ಭೀಷ್ಮರ ಭಯಬೇಡವೆಂದು ಧೈರ್ಯ ತುಂಬಿದನು.

ಉದ್ಯೋಗಪರ್ವದಲ್ಲಿ ಭೀಷ್ಮರು ಅಂಬೆಯ ವೃತ್ತಾಂತವನ್ನು ತುಂಬಾ ವಿಸ್ತಾರವಾಗಿ ವರ್ಣಿಸಿದ್ದಾರೆ.

ಸಾಲ್ವನಿಂದ ಪರಿತ್ಯಕ್ತಳಾದ ಅಂಬಾದೇವಿಯು ತನ್ನನ್ನು ತಂದೆಯು ಮತ್ತೆ ಸ್ವೀಕರಿಸಲಿಕ್ಕಿಲ್ಲ, ಅವಮಾನ ಮಾಡುವನೆಂಬ ಭಯ ಆಕೆಗೆ ಆವರಿಸಿತು. ಭೀಷ್ಮರಂತೂ ಆಗಲೇ ಸಾಧ್ಯವಿಲ್ಲವೆಂದು ಹೇಳಿದ್ದಾರೆ. ಹೀಗಾಗಿ ಅಂಬೆಯು ತನ್ನನ್ನು ನಿಂದಿಸಿಕೊಳ್ಳುತ್ತಾ ಹೀಗೆ ಅಂದುಕೊಂಡಳು. 'ಭೀಷ್ಮರು ನನ್ನನ್ನು ಕರೆದುಕೊಂಡು ಹೋಗುವಾಗಲೇ ದಾರಿಯಲ್ಲಿಯೇ ರಥದಿಂದ ಇಳಿಯದೇ ತಪ್ಪು ಮಾಡಿದೆ. ಅದರ ಫಲ ಈಗ ಅನುಭವಕ್ಕೆ ಬಂದಿದೆ. ಹಾಗೆ ಬಂದಿದ್ದರೆ ಸಾಲ್ವ ನನ್ನನ್ನು ಸ್ವೀಕರಿಸುತ್ತಿದ್ದನೇನೋ? ಎಂಬ ಭಾವನೆ, ಭ್ರಮೆ ಆಕೆಗೆ. ಆದ್ದರಿಂದ ಭೀಷ್ಮರಿಗೆ, ವೀರ್ಯಶುಲ್ಕವೆಂದು ಮಾರಾಟಕ್ಕಿಟ್ಟ ತಂದೆಗೆ ತಿರಸ್ಕರಿಸಿದ ಸಾಲ್ವಗೆ ಮತ್ತು ಈ ಆಪತ್ತನ್ನು ತಂದ ಬ್ರಹ್ಮನಿಗೂ ಧಿಕ್ಕಾರವೆಂದು ನೊಂದು ನುಡಿದಳು[೧].'

ನನ್ನ ದುಃಖಕ್ಕೆ ಕಾರಣ ಭೀಷ್ಮನೇ. ಅವನ ವಿರುದ್ಧ ತಪಸ್ಸಿನಿಂದಲೋ, ಯುದ್ಧದಿಂದಲೋ ಸೇಡನ್ನು ತೀರಿಸಬೇಕು. ಹೀಗೆ ವಿಚಾರ ಮಾಡುತ್ತಾ ನಗರದ ಹೊರಗೆ(ಸಾಲ್ವನ) ಇದ್ದ ತಪಸ್ವಿಗಳ ಆಶ್ರಮಕ್ಕೆ ಹೋದಳು. ಆಗಲೇ ರಾತ್ರಿಯಾಗಿತ್ತು. ಆ ತಾಪಸರು ಈಕೆಯನ್ನು ಸತ್ಕರಿಸಲು ರಾತ್ರಿ ಕಳೆಯಿತು. ಆಗ ಅವರಿಗೆ ತನ್ನ ವಿಸ್ತಾರವಾದ ಎಲ್ಲ ಕಥೆಯನ್ನು ನಿವೇದಿಸಿಕೊಂಡಳು. ಅವರಲ್ಲೊಬ್ಬ ತಪಸ್ವಿ ಶೈಖಾವತ್ಯ. ಆಶ್ರಮವಾಸಿಗಳು ನಿನಗೇನು ಮಾಡಲು ಸಾಧ್ಯ? ಎಂದ. ಅದಕ್ಕೆ ಆಕೆ ನನಗೆ ಅನುಗ್ರಹಿಸಿ, ನಾನು ಸನ್ಯಾಸಿಯಾಗಿ ತಪಸ್ಸನು ಮಾಡುವೆ. ನಾನು ಎಲ್ಲೂ ವಾಪಸಾಗೆ. ನಾನು ಎಲ್ಲ ಬಂಧುಬಾಂಧವರಿಂದ ನಿರಾಕರಿಸಲ್ಪಟ್ಟವಳು. ಕೊನೆಗೆ ಎಲ್ಲ ತಾಪಸರೂ ಸೇರಿ ಈ ಮಹಿಳೆಗೆ ಸಹಾಯ ಮಾಡಲು ಯೋಚಿಸಿ ಕೆಲವರು ಸಾಲ್ವನ ಬಳಿಗೆ, ಕೆಲವರು ತಂದೆಯ ಮನೆಗೆ ಹೋಗೆಂದು ಹೇಳಿದರೂ ಆಕೆ ಒಪ್ಪಲಿಲ್ಲ. ಅದೇ ಹೊತ್ತಿಗೆ ಆಶ್ರಮಕ್ಕೆ ರಾಜರ್ಷಿಯಾದ ಹೋತ್ರವಾಹನನು ಬಂದನು. ಆತನನ್ನು ಎಲ್ಲರೂ ಸ್ವಾಗತಿಸಿ, ಅರ್ಘ್ಯಾದಿಗಳಿಂದ ಉಪಚರಿಸಿದರು. ಆತನಿಗೆ ಎಲ್ಲ ತಾಪಸರು ಅಂಬೆಯ ಕಥೆಯನ್ನೆಲ್ಲ ಹೇಳಿದರು. ಹೋತ್ರವಾಹನನಿಗೆ ಬಹಳ ದುಃಖವಾಯಿತು. ಆತ ಅಂಬೆಯ ತಾಯಿಯ ತಂದೆಯೇ (ಮಾತಾಮಹ) ಆಗಿದ್ದ. ಹೀಗಾಗಿ ಅಂಬೆಯನ್ನು ತನ್ನ ತೊಡೆಯ ಮೇಲೆ

೧ ಧಿಗ್ ಭೀಷ್ಮಂ ಧಿಕ್ ಚ ಮೇ ಮಂದಂ ಪಿತರಂ ಮೂಢಚೇತಸಮ್ ।
ಯೇನಾಹಂ ವೀರ್ಯಶುಲ್ಕೇತಿ ಪಣ್ಯಸ್ತ್ರೀವತ್ ಪ್ರವೇಶಿತಾ ॥
ದಿಜ್ ಮಾಂ ಧಿಕ್ ಸಾಲ್ವರಾಜಾನಂ ಧಿಗ್ ಧಾತಾರಮಥಾಪಿ ವಾ ।
ಯೇಷಾಂ ದುರ್ನೀತ ಭಾವೇನ ಪ್ರಾಪ್ತಾऽಸ್ಮ್ಯಾ ಪದಮುತ್ತಮಾಮ್ ॥
- ಉದ್ಯೋಗಪರ್ವ(೧೭೪/೮,೯)

ಮಲಗಿಸಿಕೊಂಡು ಸಮಾಧಾನ ಹೇಳಿದ. ನೀನು ಎಲ್ಲೂ ಹೋಗದೇ ಜಮದಗ್ನಿ ಸುತರಾದ ಪರಶುರಾಮರ ಬಳಿ ಹೋಗು. ಅವರು ನಿನ್ನ ಸಮಸ್ಯೆಗೆ ಪರಿಹಾರ ಕೊಡುವರು ಎಂದರು. ಭೀಷ್ಮರಿಗೆ ಹೇಳಿ ನಿನ್ನನ್ನು ಸ್ವೀಕರಿಸುವಂತೆ ಮಾಡುತ್ತಾರೆ. ಇಲ್ಲದಿದ್ದಲ್ಲಿ ಯುದ್ಧ ಮಾಡಿ ಅವರನ್ನು ಕೊಂದೇ ಬಿಡುತ್ತಾರೆ. ರಾಮನು ಮಹೇಂದ್ರಪರ್ವತದಲ್ಲಿರುತ್ತಾನೆ. ಅಲ್ಲಿ ಋಷಿ, ಗಂಧರ್ವರು ಇರುತ್ತಾರೆ. ಅಲ್ಲಿಗೆ ಹೋಗು, ನನ್ನ ಹೆಸರಿನ ಉಲ್ಲೇಖ ಮಾಡು. ರಾಮ ನಿನ್ನನ್ನು ಅನುಗ್ರಹಿಸುತ್ತಾನೆ ಎಂದನು ಹೋತ್ರವಾಹನ.

ಆಗಲೇ ಪರಶುರಾಮನ ಅನುಚರನಾದ ಅಕೃತವ್ರಣನು ಆಶ್ರಮಕ್ಕೆ ಬಂದು ರಾಮದೇವರು ನಿನ್ನನ್ನು ನೋಡಲು ಇಂದು ಬೆಳಿಗ್ಗೆ ಅಥವಾ ನಾಳೆ ಬರುತ್ತಾರೆ ಎಂದನು. ಅಕೃತವ್ರಣನಿಗೆ ಹೋತ್ರವಾಹನ ಅಂಬೆಯ ಎಲ್ಲ ವಿಷಯ ಹೇಳಿ, ನೀನು ಏನನನ್ನು ನಿರೀಕ್ಷಿಸುತ್ತೀ ಎಂದನು. ಅದಕ್ಕೆ ಅಂಬೆಯು ಹೇಗಾದರೂ ಸರಿ ಎಂದಳು (ಭೀಷ್ಮ ಅಥವಾದ ಸಾಲ್ವ ಇವರಿಬ್ಬರಿಗೂ ಯೋಗ್ಯವಾದುದು). ಅದಕ್ಕೆ ಅಕೃತವ್ರಣನು ಭೀಷ್ಮನು ನಿನ್ನನ್ನು ಕರೆತರದಿದ್ದರೆ ಸಾಲ್ವ ಒಪ್ಪುತ್ತಿದ್ದ. ಈಗ ಭೀಷ್ಮನನ್ನೇ ಸ್ವೀಕರಿಸಲು ಒತ್ತಾಯಿಸಬೇಕೆನ್ನಲು ಅಂಬೆಯು ಕೂಡಾ ನನಗೂ ಭೀಷ್ಮನಿಗೆ ಸೇಡು ತೀರಿಸಬೇಕೆಂಬುದು ನನ್ನ ಆಶೆ. ನನ್ನ ದುಃಖಕ್ಕೆ ಮೂಲ ಭೀಷ್ಮ ಆದ್ದರಿಂದ ಆ ಭೀಷ್ಮನನ್ನೇ ಕೊಲ್ಲಿಸುವ ಆಸೆ ನನ್ನದು ಎಂದಳು. ಹೀಗೆ ರಾತ್ರಿ ಕಳೆಯಿತು. ಬೆಳಿಗ್ಗೆ ಪರಶುರಾಮ ಈ ತಪಸ್ವಿಗಳ ಆಶ್ರಮಕ್ಕೆ ಬಂದನು. ಎಲ್ಲರೂ ಸತ್ಕರಿಸಿದರು (ಮಧುಪರ್ಕದಿಂದ).

ನಂತರ ಅಂಬೆಯ ಪರಿಸ್ಥಿತಿಯ ಪ್ರಸ್ತಾಪವಾಯಿತು. ರಾಮನಿಗೆ ಎಲ್ಲರೂ ತಿಳಿಸಿದರು. ಅಂಬೆಯೂ ಪರಶುರಾಮರಿಗೆ ಸಾಲ್ವ ನನ್ನ ಶೀಲ ಶಂಕಿಸಿದ. ಬಲಾತ್ಕಾರದಿಂದ ನನ್ನನ್ನು ಕರೆದುಕೊಂಡು ಹೋದ ಭೀಷ್ಮನೇ ನನ್ನ ದುಃಖಕ್ಕೆ ಮೂಲಕಾರಣ. ಅವನನ್ನು ಸಂಹರಿಸಲು ಪ್ರಾರ್ಥಿಸಿದಳು ಅಂಬೆ.

ಅದಕ್ಕೆ ಪರಶುರಾಮದೇವರು ನಾನು ಬ್ರಾಹ್ಮಣರ ಸಲುವಾಗಿ ಶಸ್ತ್ರ ಹಿಡಿಯುವೆ. ಅದನ್ನು ಬಿಟ್ಟು ನಾನು ಬೇರೆ ಕಾರಣಕ್ಕಾಗಿ ಶಸ್ತ್ರ ಹಿಡಿಯೆ. ನಾನು ಅವರಿಗೆ ಆದೇಶ ಮಾಡುವೆ. ಅವರು ನನ್ನ ಮಾತು ಕೇಳುವರು ದುಃಖಿಸಬೇಡ. ಆದರೆ ಅಂಬೆ ತನ್ನ ನಿಲುವನ್ನು ಸಡಿಲಿಸಲಿಲ್ಲ[೧].

---

೧ ಪರಶುರಾಮ

ಪ್ರೇಷಯಿಷ್ಯಾಮಿ ಭೀಷ್ಮಾಯ ಕುರುಶ್ರೇಷ್ಠಾಯ ಭಾಮಿನಿ।
ಕರಿಷ್ಯತಿ ವಚೋ ಮಹ್ಯಂ ಶ್ರುತ್ವಾ ಧರ್ಮಂ ನರಾಧಿಪಃ॥
ನ ಚೇತ್ ಕರಿಷ್ಯತಿ ವಚೋ ಮಯೋಕ್ತಂ ಜಾಹ್ನವೀ ಸುತಃ।
ಧಕ್ಷ್ಯಾಮ್ಯೇನಂ ರಣೇ ಭದ್ರೇ ಸಾಮಾತ್ಯಂ ಶಸ್ತ್ರತೇಜಸಾ॥
ಅಥವಾ ತೇ ಮತಿಸ್ತತ್ರ ರಾಜಪುತ್ರೀ ನ ವರ್ತತೇ।
ಯಾವತ್ ಸಾಲ್ವಪತಿಂ ವೀರಂ ಯೋಜಯಾಮ್ಯತ್ರ ಕರ್ಮಣಿ॥

- ಉದ್ಯೋಗಪರ್ವ(೧೭೭/೩೨-೩೪)

ಅಂಬೆಯ ಮಾತಿಗೆ ದನಿಗೂಡಿಸಿದ ಅಕೃತವ್ರಣನು, ಆಕೆಯ ಇಚ್ಛೆಯನ್ನು ಈಡೇರಿಸಲು ಪ್ರಾರ್ಥಿಸಿದನು. ಕಾರಣ ಆಕೆಯು ನಿನಗೆ ಶರಣಾಗತಳಾಗಿದ್ದಾಳೆ. ನಿನ್ನ ಪ್ರತಿಜ್ಞೆ ಶರಣರ ರಕ್ಷಣೆಯಲ್ಲವೇ?[೧] ಹೀಗೆ ಅನೇಕರಿಂದ ವಿಚಾರಮಾಡಿ ಮಾರನೇದಿನ ಬೆಳಿಗ್ಗೆ ಪ್ರಾತಃ ಕರ್ಮಗಳನ್ನು ಮುಗಿಸಿ ರಾಮದೇವರು ತಪಸ್ವಿಗಳೊಡನೆ, ಅಂಬೆಯೊಡನೆ ಭೀಷ್ಮನ ಸಂಹಾರಕ್ಕಾಗಿ ಕುರುಕ್ಷೇತ್ರಕ್ಕೆ ಬಂದರು.

ನಂತರ ಭೀಷ್ಮರಿಗೆ ಪರಶುರಾಮದೇವರು ಯುದ್ಧಾಹ್ವಾನಕ್ಕೆ ಸಂದೇಶ ಕಳಿಸಿದರು. ಭೀಷ್ಮರು ಬಂದು ಗುರುಗಳಾದ ರಾಮದೇವರನ್ನು ಸತ್ಕರಿಸಿ ವಂದಿಸಿದರು. ಅಂಬೆಗೆ ಆದ ಅನ್ಯಾಯವನ್ನು ಮನವರಿಕೆ ಮಾಡಿದಾಗ ಭೀಷ್ಮರು ಒಪ್ಪಲಿಲ್ಲ, ತಮ್ಮ ಅಭಿಪ್ರಾಯವನ್ನು ಪುನರುಚ್ಚರಿಸಿದರು. ಗುರುಗಳಾದ ಪರಶುರಾಮ ಒಪ್ಪದೆ ಯುದ್ಧಕ್ಕೆ ಸಿದ್ಧನಾಗೆಂದು ಆದೇಶಿಸಿದಾಗ, ಭೀಷ್ಮರು ಅದಕ್ಕೂ ಒಪ್ಪಿದರು[೨].

'.... ಗುರುವೂ ಸಹ ಕಾರ್ಯಾಕಾರ್ಯಗಳನ್ನು ತಿಳಿಯದೇ ಅಹಂಕಾರದಿಂದ ದುರ್ಮಾರ್ಗವನ್ನು ಹಿಡಿದರೆ, ಅವನಿಗೂ ಶಾಸನವನ್ನು ಮಾಡಬೇಕಾಗುತ್ತದೆ ಎಂಬ ಮಹಾತ್ಮನಾದ ಮರುತ್ತನು ಮಹಾಯುದ್ಧದಲ್ಲಿ ಹಾಡಿದ ಶ್ಲೋಕವೊಂದು ಪುರಾಣದಲ್ಲಿ ಕೇಳಿಬರುತ್ತದೆ[೩].

---

ಅಂಬಾ –
ಜಹಿ ಭೀಷ್ಮಂ ರಣೇ ವೀರ ಮಮ ಚೇದಿಚ್ಛಸಿ ಪ್ರಿಯಮ್ ।
ಪ್ರತಿಶ್ರುತಂ ಚ ಯದಿದಂ ತತ್ಸತ್ಯಂ ಕರ್ತುಮರ್ಹಸಿ ॥ – ಉದ್ಯೋಗಪರ್ವ(೧೭೮/೭)

೧ ಶರಣಂ ಹಿ ಪಪನ್ನಾನಾಂ ಭೀತಾನಾಂ ಜೀವಿತಾರ್ಥಿನಾಮ್ ।
ನ ಶಕ್ಷ್ಯಾಮಿ ಪರಿತ್ಯಾಗಂ ಕರ್ತುಂ ಜೀವನ್ ಕಥಂಚನ ॥ – ಉದ್ಯೋಗಪರ್ವ(೧೭೮/೧೫)

೨ ನ ಭಯಾನ್ನಾಪ್ಯನುಕ್ರೋಶಾನ್ನ ಲೋಭಾನ್ನಾರ್ಥಕಾಮ್ಯಯಾ ।
ಕ್ಷಾತ್ರಂ ಧರ್ಮಮಹಂ ಜಹ್ಯಾಮಿತಿ ಮೇ ವ್ರತಮಾಹಿತಮ್ ॥
ಗುರುತ್ವಂ ತ್ವಯಿ ಸಂಪ್ರೇಕ್ಷ್ಯ ಜಾಮದಗ್ನ್ಯ ಪುರಾತನಮ್ ।
ಪ್ರಸಾದಯೇ ತ್ವಾಂ ಭಗವನ್ ತ್ಯಕ್ತೈಷಾ ತು ಪುರಾ ಮಯಾ ॥
ಪ್ರಸೀದ ಮಾ ವಾ ಯದ್ವಾ ತೇ ಕಾರ್ಯಂ ತತ್ಕುರು ಮಾಚಿರಮ್ ।
ಅಯಂ ಚಾಪಿ ವಿಶುದ್ಧಾತ್ಮನ್ ಪುರಾಣೇ ಶ್ರೂಯತೇ ವಿಭೋ ॥
ಮರುತ್ತೇನ ಮಹಾಯುದ್ಧೇ ಗೀತಃ ಶ್ಲೋಕೋ ಮಹಾತ್ಮನಾ ।
ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ॥
ಉತ್ಪಥಂ ಪ್ರತಿಪನ್ನಸ್ಯ ಕಾರ್ಯಂ ಭವತಿ ಶಾಸನಮ್ । – ೧೭೮/೪೪-೪೮

೩ ಉದ್ಯತೇಷುಂ ರಣೇ ದೃಷ್ಟ್ವಾ ಬ್ರಾಹ್ಮಣಂ ಕ್ಷತ್ರ ಬಂಧುವತ್ ।
ಯೋ ಹನ್ಯಾತ್ ಸಮರೇ ಕ್ರುದ್ಧಂ ಯುಧ್ಯಂತಮಪಲಾಯಿನಮ್ ।
ಬ್ರಹ್ಮಹತ್ಯಾ ನ ತಸ್ಯ ಸ್ಯಾತ್ ಇತಿ ಧರ್ಮೇಷು ನಿಶ್ಚಯಃ ॥ – ಉದ್ಯೋಗಪರ್ವ(೧೭೯/೩೦,೩೧)
ಯಚ್ಚಾಪಿ ಕತ್ಥಸೇ ರಾಮ ಬಹುಶಃ ಪರಿಷತ್ಸು ವೈ ।

ಮಲಗಿಸಿಕೊಂಡು ಸಮಾಧಾನ ಹೇಳಿದ. ನೀನು ಎಲ್ಲೂ ಹೋಗದೇ ಜಮದಗ್ನಿ ಸುತರಾದ ಪರಶುರಾಮರ ಬಳಿ ಹೋಗು. ಅವರು ನಿನ್ನ ಸಮಸ್ಯೆಗೆ ಪರಿಹಾರ ಕೊಡುವರು ಎಂದರು. ಭೀಷ್ಮರಿಗೆ ಹೇಳಿ ನಿನ್ನನ್ನು ಸ್ವೀಕರಿಸುವಂತೆ ಮಾಡುತ್ತಾರೆ. ಇಲ್ಲದಿದ್ದಲ್ಲಿ ಯುದ್ಧ ಮಾಡಿ ಅವರನ್ನು ಕೊಂದೇ ಬಿಡುತ್ತಾರೆ. ರಾಮನು ಮಹೇಂದ್ರಪರ್ವತದಲ್ಲಿರುತ್ತಾನೆ. ಅಲ್ಲಿ ಋಷಿ, ಗಂಧರ್ವರು ಇರುತ್ತಾರೆ. ಅಲ್ಲಿಗೆ ಹೋಗು, ನನ್ನ ಹೆಸರಿನ ಉಲ್ಲೇಖ ಮಾಡು. ರಾಮ ನಿನ್ನನ್ನು ಅನುಗ್ರಹಿಸುತ್ತಾನೆ ಎಂದನು ಹೋತ್ರವಾಹನ.

ಆಗಲೇ ಪರಶುರಾಮನ ಅನುಚರನಾದ ಅಕೃತವ್ರಣನು ಆಶ್ರಮಕ್ಕೆ ಬಂದು ರಾಮದೇವರು ನಿನ್ನನ್ನು ನೋಡಲು ಇಂದು ಬೆಳಿಗ್ಗೆ ಅಥವಾ ನಾಳೆ ಬರುತ್ತಾರೆ ಎಂದನು. ಅಕೃತವ್ರಣನಿಗೆ ಹೋತ್ರವಾಹನ ಅಂಬೆಯ ಎಲ್ಲ ವಿಷಯ ಹೇಳಿ, ನೀನು ಏನನನ್ನು ನಿರೀಕ್ಷಿಸುತ್ತೀ ಎಂದನು. ಅದಕ್ಕೆ ಅಂಬೆಯು ಹೇಗಾದರೂ ಸರಿ ಎಂದಳು (ಭೀಷ್ಮ ಅಥವಾದ ಸಾಲ್ವ ಇವರಿಬ್ಬರಿಗೂ ಯೋಗ್ಯವಾದುದು). ಅದಕ್ಕೆ ಅಕೃತವ್ರಣನು ಭೀಷ್ಮನು ನಿನ್ನನ್ನು ಕರೆತರದಿದ್ದರೆ ಸಾಲ್ವ ಒಪ್ಪುತ್ತಿದ್ದ. ಈಗ ಭೀಷ್ಮನನ್ನೇ ಸ್ವೀಕರಿಸಲು ಒತ್ತಾಯಿಸಬೇಕೆನ್ನಲು ಅಂಬೆಯು ಕೂಡಾ ನನಗೂ ಭೀಷ್ಮನಿಗೆ ಸೇಡು ತೀರಿಸಬೇಕೆಂಬುದು ನನ್ನ ಆಶೆ. ನನ್ನ ದುಃಖಕ್ಕೆ ಮೂಲ ಭೀಷ್ಮ ಆದ್ದರಿಂದ ಆ ಭೀಷ್ಮನನ್ನೇ ಕೊಲ್ಲಿಸುವ ಆಸೆ ನನ್ನದು ಎಂದಳು. ಹೀಗೆ ರಾತ್ರಿ ಕಳೆಯಿತು. ಬೆಳಿಗ್ಗೆ ಪರಶುರಾಮ ಈ ತಪಸ್ವಿಗಳ ಆಶ್ರಮಕ್ಕೆ ಬಂದನು. ಎಲ್ಲರೂ ಸತ್ಕರಿಸಿದರು (ಮಧುಪರ್ಕದಿಂದ).

ನಂತರ ಅಂಬೆಯ ಪರಿಸ್ಥಿತಿಯ ಪ್ರಸ್ತಾಪವಾಯಿತು. ರಾಮನಿಗೆ ಎಲ್ಲರೂ ತಿಳಿಸಿದರು. ಅಂಬೆಯೂ ಪರಶುರಾಮರಿಗೆ ಸಾಲ್ವ ನನ್ನ ಶೀಲ ಶಂಕಿಸಿದ. ಬಲಾತ್ಕಾರದಿಂದ ನನ್ನನ್ನು ಕರೆದುಕೊಂಡು ಹೋದ ಭೀಷ್ಮನೇ ನನ್ನ ದುಃಖಕ್ಕೆ ಮೂಲಕಾರಣ. ಅವನನ್ನು ಸಂಹರಿಸಲು ಪ್ರಾರ್ಥಿಸಿದಳು ಅಂಬೆ.

ಅದಕ್ಕೆ ಪರಶುರಾಮದೇವರು ನಾನು ಬ್ರಾಹ್ಮಣರ ಸಲುವಾಗಿ ಶಸ್ತ್ರ ಹಿಡಿಯುವೆ. ಅದನ್ನು ಬಿಟ್ಟು ನಾನು ಬೇರೆ ಕಾರಣಕ್ಕಾಗಿ ಶಸ್ತ್ರ ಹಿಡಿಯೆ. ನಾನು ಅವರಿಗೆ ಆದೇಶ ಮಾಡುವೆ. ಅವರು ನನ್ನ ಮಾತು ಕೇಳುವರು ದುಃಖಿಸಬೇಡ. ಆದರೆ ಅಂಬೆ ತನ್ನ ನಿಲುವನ್ನು ಸಡಿಲಿಸಲಿಲ್ಲ[೧].

---

೧ ಪರಶುರಾಮ

ಪ್ರೇಷಯಿಷ್ಯಾಮಿ ಭೀಷ್ಮಾಯ ಕುರುಶ್ರೇಷ್ಠಾಯ ಭಾಮಿನಿ।
ಕರಿಷ್ಯತಿ ವಚೋ ಮಹ್ಯಂ ಶ್ರುತ್ವಾ ಧರ್ಮಂ ನರಾಧಿಪಃ॥
ನ ಚೇತ್ ಕರಿಷ್ಯತಿ ವಚೋ ಮಯೋಕ್ತಂ ಜಾಹ್ನವೀ ಸುತಃ।
ಧಕ್ಷ್ಯಾಮ್ಯೇನಂ ರಣೇ ಭದ್ರೇ ಸಾಮಾತ್ಯಂ ಶಸ್ತ್ರತೇಜಸಾ॥
ಅಥವಾ ತೇ ಮತಿಸ್ತತ್ರ ರಾಜಪುತ್ರೀ ನ ವರ್ತತೇ।
ಯಾವತ್ ಸಾಲ್ವಪತಿಂ ವೀರಂ ಯೋಜಯಾಮ್ಯತ್ರ ಕರ್ಮಣಿ॥

- ಉದ್ಯೋಗಪರ್ವ(೧೭೭/೩೨-೩೪)

ಅಂಬೆಯ ಮಾತಿಗೆ ದನಿಗೂಡಿಸಿದ ಅಕೃತವ್ರಣನು, ಆಕೆಯ ಇಚ್ಛೆಯನ್ನು ಈಡೇರಿಸಲು ಪ್ರಾರ್ಥಿಸಿದನು. ಕಾರಣ ಆಕೆಯು ನಿನಗೆ ಶರಣಾಗತಳಾಗಿದ್ದಾಳೆ. ನಿನ್ನ ಪ್ರತಿಜ್ಞೆ ಶರಣರ ರಕ್ಷಣೆಯಲ್ಲವೇ?[೧] ಹೀಗೆ ಅನೇಕರಿಂದ ವಿಚಾರಮಾಡಿ ಮಾರನೇದಿನ ಬೆಳಿಗ್ಗೆ ಪ್ರಾತಃ ಕರ್ಮಗಳನ್ನು ಮುಗಿಸಿ ರಾಮದೇವರು ತಪಸ್ವಿಗಳೊಡನೆ, ಅಂಬೆಯೊಡನೆ ಭೀಷ್ಮನ ಸಂಹಾರಕ್ಕಾಗಿ ಕುರುಕ್ಷೇತ್ರಕ್ಕೆ ಬಂದರು.

ನಂತರ ಭೀಷ್ಮರಿಗೆ ಪರಶುರಾಮದೇವರು ಯುದ್ಧಾಹ್ವಾನಕ್ಕೆ ಸಂದೇಶ ಕಳಿಸಿದರು. ಭೀಷ್ಮರು ಬಂದು ಗುರುಗಳಾದ ರಾಮದೇವರನ್ನು ಸತ್ಕರಿಸಿ ವಂದಿಸಿದರು. ಅಂಬೆಗೆ ಆದ ಅನ್ಯಾಯವನ್ನು ಮನವರಿಕೆ ಮಾಡಿದಾಗ ಭೀಷ್ಮರು ಒಪ್ಪಲಿಲ್ಲ, ತಮ್ಮ ಅಭಿಪ್ರಾಯವನ್ನು ಪುನರುಚ್ಚರಿಸಿದರು. ಗುರುಗಳಾದ ಪರಶುರಾಮ ಒಪ್ಪದೆ ಯುದ್ಧಕ್ಕೆ ಸಿದ್ಧನಾಗೆಂದು ಆದೇಶಿಸಿದಾಗ, ಭೀಷ್ಮರು ಅದಕ್ಕೂ ಒಪ್ಪಿದರು[೨].

'.... ಗುರುವೂ ಸಹ ಕಾರ್ಯಾಕಾರ್ಯಗಳನ್ನು ತಿಳಿಯದೇ ಅಹಂಕಾರದಿಂದ ದುರ್ಮಾರ್ಗವನ್ನು ಹಿಡಿದರೆ, ಅವನಿಗೂ ಶಾಸನವನ್ನು ಮಾಡಬೇಕಾಗುತ್ತದೆ ಎಂಬ ಮಹಾತ್ಮನಾದ ಮರುತ್ತನು ಮಹಾಯುದ್ಧದಲ್ಲಿ ಹಾಡಿದ ಶ್ಲೋಕವೊಂದು ಪುರಾಣದಲ್ಲಿ ಕೇಳಿಬರುತ್ತದೆ[೩].

---

ಅಂಬಾ –
ಜಹಿ ಭೀಷ್ಮಂ ರಣೇ ವೀರ ಮಮ ಚೇದಿಚ್ಛಸಿ ಪ್ರಿಯಮ್ ।
ಪ್ರತಿಶ್ರುತಂ ಚ ಯದಿದಂ ತತ್ಸತ್ಯಂ ಕರ್ತುಮರ್ಹಸಿ ॥ – ಉದ್ಯೋಗಪರ್ವ(೧೭೮/೭)

೧ ಶರಣಂ ಹಿ ಪಪನ್ನಾನಾಂ ಭೀತಾನಾಂ ಜೀವಿತಾರ್ಥಿನಾಮ್ ।
ನ ಶಕ್ಷ್ಯಾಮಿ ಪರಿತ್ಯಾಗಂ ಕರ್ತುಂ ಜೀವನ್ ಕಥಂಚನ ॥ – ಉದ್ಯೋಗಪರ್ವ(೧೭೮/೧೫)

೨ ನ ಭಯಾನ್ನಾಪ್ಯನುಕ್ರೋಶಾನ್ನ ಲೋಭಾನ್ನಾರ್ಥಕಾಮ್ಯಯಾ ।
ಕ್ಷಾತ್ರಂ ಧರ್ಮಮಹಂ ಜಹ್ಯಾಮಿತಿ ಮೇ ವ್ರತಮಾಹಿತಮ್ ॥
ಗುರುತ್ವಂ ತ್ವಯಿ ಸಂಪ್ರೇಕ್ಷ್ಯ ಜಾಮದಗ್ನ್ಯ ಪುರಾತನಮ್ ।
ಪ್ರಸಾದಯೇ ತ್ವಾಂ ಭಗವನ್ ತ್ಯಕ್ತೈಷಾ ತು ಪುರಾ ಮಯಾ ॥
ಪ್ರಸೀದ ಮಾ ವಾ ಯದ್ವಾ ತೇ ಕಾರ್ಯಂ ತತ್ಕುರು ಮಾಚಿರಮ್ ।
ಅಯಂ ಚಾಪಿ ವಿಶುದ್ಧಾತ್ಮನ್ ಪುರಾಣೇ ಶ್ರೂಯತೇ ವಿಭೋ ॥
ಮರುತ್ತೇನ ಮಹಾಯುದ್ಧೇ ಗೀತಃ ಶ್ಲೋಕೋ ಮಹಾತ್ಮನಾ ।
ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ॥
ಉತ್ಪಥಂ ಪ್ರತಿಪನ್ನಸ್ಯ ಕಾರ್ಯಂ ಭವತಿ ಶಾಸನಮ್ । – ೧೭೮/೪೪-೪೯

೩ ಉದ್ಯತೇಷುಂ ರಣೇ ದೃಷ್ಟ್ವಾ ಬ್ರಾಹ್ಮಣಂ ಕ್ಷತ್ರ ಬಂಧುವತ್ ।
ಯೋ ಹನ್ಯಾತ್ ಸಮರೇ ಕ್ರುದ್ಧಂ ಯುಧ್ಯಂತಮಪಲಾಯಿನಮ್ ।
ಬ್ರಹ್ಮಹತ್ಯಾ ನ ತಸ್ಯ ಸ್ಯಾತ್ ಇತಿ ಧರ್ಮೇಷು ನಿಶ್ಚಯಃ ॥ – ಉದ್ಯೋಗಪರ್ವ(೧೭೯/೩೦,೩೧)
ಯಚ್ಚಾಪಿ ಕತ್ಥಸೇ ರಾಮ ಬಹುಶಃ ಪರಿಷತ್ಸು ವೈ ।

ಪರಶುರಾಮರೇ! ನೀವು ಹೋದಲ್ಲೆಲ್ಲ ಸಭೆಗಳಲ್ಲಿ ಬಾರಿ ಬಾರಿ ನಾನೊಬ್ಬನೇ ಎಲ್ಲ ಕ್ಷತ್ರಿಯರನ್ನು ಲೋಕದಲ್ಲಿ ಸಂಹರಿಸಿದೆ ಎಂದು ಕೊಚ್ಚಿಕೊಳ್ಳುವಿರಿ ಅಲ್ಲವೇ? ಈ ವಿಷಯದಲ್ಲಿ ಸ್ವಲ್ಪ ಕೇಳಿ. ಆಗ ಭೀಷ್ಮ ಜನಿಸಿರಲಿಲ್ಲ. ನನ್ನಂತಹ ಕ್ಷತ್ರಿಯನೂ ಹುಟ್ಟಿರಲಿಲ್ಲ. ಯುದ್ಧದಲ್ಲಿ ನಿಮ್ಮ ದರ್ಪ, ಆಶೆಗಳನ್ನು ನಾಶ ಮಾಡುವ ಸಾಮರ್ಥ್ಯವುಳ್ಳ ಶತ್ರುಂಜಯನಾದ ಭೀಷ್ಮ- ನಾನು ಹುಟ್ಟಿದ್ದೇನೆ. ಈಗ ತಿಳಿಯಿರಿ- ನಿನ್ನ ಯುದ್ಧ ದರ್ಪವನ್ನು ನಾಶಮಾಡುವೆ: **ವ್ಯಪನೇಷ್ಯಾಮಿ ತೇ ದರ್ಪಂ ಯುದ್ಧೇ ರಾಮ ನ ಸಂಶಯಃ ॥** - ಉದ್ಯೋಗ(೧೭೮/೪೨-೪೫)

ಯಾರು ಯುದ್ಧದಲ್ಲಿ ಕ್ಷತ್ರಿಯನಂತೆ ಬಾಣ ಹಿಡಿದಿರುವ ಬ್ರಾಹ್ಮಣನನ್ನು ನೋಡಿ ಯುದ್ಧದಲ್ಲಿ ಪಲಾಯನ ಮಾಡದಿರುವ ಕ್ರುದ್ಧನಾದ ಅವನನ್ನು ಕೊಲ್ಲುವನೋ, ಅವನಿಗೆ ಬ್ರಹ್ಮಹತ್ಯಾ ದೋಷ ಬರುವುದಿಲ್ಲ ಎಂದು ಶಾಸ್ತ್ರಗಳ ನಿರ್ಣಯ.

ದುರ್ಯೋಧನ! ಹೀಗೆ ಪರಸ್ಪರ ನಾನು ಮತ್ತು ಪರಶುರಾಮ ಮಾತನಾಡಿದೆವು. ಅವರು ಯುದ್ಧಕ್ಕೆ ಆಹ್ವಾನಿಸಿದರು. ಅವರು ತಮ್ಮ ಶಿಷ್ಯ ಹಾಗೂ ಅಂಬೆಯೊಡನೆ ಕುರುಕ್ಷೇತ್ರಕ್ಕೆ ಹೋದರು. ನಾನು ನನ್ನ ತಾಯಿ ಸತ್ಯವತೀದೇವಿಗೆ ನಮಸ್ಕರಿಸಿ ಬ್ರಾಹ್ಮಣರ ಆಶೀರ್ವಾದ ಹಾಗೂ ಸ್ವಸ್ತಿವಾಚನ ಮಾಡಿಸಿಕೊಂಡು, ಧನುರ್ಧಾರಿಯಾಗಿ ಕುರುಕ್ಷೇತ್ರಕ್ಕೆ ಹೋದೆ. ಶಂಖಧ್ವನಿಗೈದೆ. ಅಲ್ಲಿ ನೆರೆದ ತಪಸ್ವಿಗಳೊಡನೆ ಇಂದ್ರಾದಿದೇವತೆಗಳೂ ಈ ಯುದ್ಧಕ್ಕೆ ಸಾಕ್ಷಿಯಾದರು.

ಆಗ ನನ್ನ ತಾಯಿ ಗಂಗೆ ದೇಹ ಸ್ವೀಕರಿಸಿ ನನ್ನನ್ನು ಕುರಿತು 'ಏನಿದು! ಬ್ರಾಹ್ಮಣನು, ಗುರುವೂ ಆದ ಪರಶುರಾಮರೊಡನೆ ಯುದ್ಧಕ್ಕಿಳಿದಿದ್ದಿ. ನಾನು ಅವರನ್ನು ಬೇಡವೆಂದು ಬೇಡುತ್ತೇನೆ' ಎಂದು ನನ್ನನ್ನು ನಿಂದಿಸಿದಳು, ಹೆದರಿಸಿದಳು. ನಾನು ಈ ಯುದ್ಧದ ಹಿನ್ನೆಲೆಯನ್ನೆಲ್ಲ ವಿವರಿಸಿದೆ. ಗಂಗೆ ರಾಮನ ಬಳಿ ಹೋಗಿ[೧], ಶಿಷ್ಯನಾದ ಭೀಷ್ಮನೊಡನೆ ಯದ್ಧ ಮಾಡಬೇಡವೆಂದು ಕ್ಷಮಾಪೂರ್ವಕವಾಗಿ ಬೇಡಿಕೊಂಡಳು. ಅವರು ಭೀಷ್ಮನಿಗೇನೇ ತಿಳಿಹೇಳು ಎಂದು ಗಂಗೆಗೆ ಹೇಳಿದರು. ನನಗೂ ತಿಳಿಹೇಳಿದ ತಾಯಿಯ ಮಾತನ್ನು ನಾನು ಕೆಂಗಣ್ಣಿನಿಂದ ಒಪ್ಪಲಿಲ್ಲ.

ಹೀಗೆ ನಾನು ಮತ್ತು ಗುರುಗಳಾದ ಪರಶುರಾಮರು ಯುದ್ಧಕ್ಕೆ ನಿಂತೆವು. ಅದಕ್ಕೂ ಮೊದಲು ನಾನು ಪರಶುರಾಮರ ಬಳಿಗೆ ಹೋಗಿ ನಮಸ್ಕರಿಸಿ 'ನನಗೆ ಜಯವಾಗಲಿ' ಎಂದು ಆಶೀರ್ವದಿಸಿ ಎಂದು ಬೇಡಿದೆ. ಅದಕ್ಕೆ ಪರಶುರಾಮದೇವರು 'ನೀನು ಹೀಗೆ ಬರದಿದ್ದಿದ್ದಲ್ಲಿ

---

ನಿರ್ಜಿತಾಃ ಕ್ಷತ್ರಿಯಾ ಲೋಕೇ ಮಯೈಕೈನೇತಿ ತಚ್ಛೃಣು ॥
ನ ತದಾ ಜಾತವಾನ್ ಭೀಷ್ಮಃ ಕ್ಷತ್ರಿಯೋಽಪಿ ಹಿ ಮದ್ವಿಧಃ ।
ಯಸ್ತೇ ಯುದ್ಧಗತಂ ದರ್ಪಂ ಕಾಮಂ ಚ ವ್ಯಪನಾಶಯೇತ್ ।
ಸೋಽಹಂ ಜಾತೋ ಮಹಾಬಾಹೋ ಭೀಷ್ಮಃ ಪರಪುರಂಜಯಃ ॥ -೧೭೮/೪೨-೪೫

೧ ಭೀಷ್ಮೇಣ ಸ ಹ ಮಾ ಯೋತ್ಸೀಃ ಶಿಷ್ಯೇಣೇತಿ

ಶಪಿಸುತ್ತಿದ್ದೆ. ಧೈರ್ಯವಾಗಿ ಯುದ್ಧಮಾಡು ನಿನಗೆ ಜಯವಾಗಲಿ ಎಂದು ಆಶೀರ್ವದಿಸಿದರು. ನಿನ್ನ ನಡೆಯಿಂದ ಸಂತೋಷವಾಗಿದೆ. ಹೋಗಿ ಯುದ್ಧ ಮಾಡೆಂದರು.

ರಣರಂಗಕ್ಕೆ ಭೀಷ್ಮರು ರಥಾರೂಢರಾಗಿ ಬಂದಿದ್ದರು. ಗುರುವಾದ ಪರಶುರಾಮದೇವರಿಗೆ ರಥವಿರಲಿಲ್ಲ. ರಥವೇರಿ ಯುದ್ಧಕ್ಕೆ ಬರಲು ನಾನು ರಾಮದೇವರಿಗೆ ಹೇಳಲು ಅವರು 'ಭೂಮಿಯೆ ನನಗೆ ರಥ, ವೇದಗಳೇ ನನಗೆ ಅಶ್ವದಂತಿರುವ ವಾಹನಗಳು, ವಾಯುದೇವನೇ ಸಾರಥಿ (ಸೂತ), ವೇದಮಾತೆ (ಗಾಯತ್ರಿ)ಯೇ ನನಗೆ ಕವಚ' ಇವರಿಂದ ರಕ್ಷಣೆ ಇರುವ ನಾನು ಯುದ್ಧ ಮಾಡುವೆ ಎಂದರು. ನಂತರ ಅವರು ತಮ್ಮ ಮನಸ್ಸಿನಿಂದ ಸೃಷ್ಟಿಯಾದ ರಥವೇರಿ ಬಂದುದನ್ನು ನೋಡಿದೆ.

ಈ ಪ್ರಕಾರ ಸಿದ್ಧತೆ ಮಾಡಿಕೊಂಡ ನಮ್ಮ ಮಧ್ಯ ಪ್ರತಿನಿತ್ಯ ಘನಘೋರ ಯುದ್ಧ ನಡೆಯಿತು. ಗುರುಗಳ ಮೇಲೆ ಅಸ್ತ್ರ-ಶಸ್ತ್ರ-ಬಾಣಗಳ ಸುರಿಮಳೆ ಮಾಡಿದೆ. ಅವರೂ ನನ್ನ ಮೇಲೆ ಹಾಗೆಯೇ ಮಾಡಿದರು. ಮಧ್ಯಮಧ್ಯ ನನ್ನ ನಡೆ ನನಗೇ ಅಸಹ್ಯ ತರಿಸಿತು. ಪ್ರತಿನಿತ್ಯ ಯುದ್ಧಾರಂಭ ಮಾಡಿದಾಗಲೂ ನಾನು ಅವರಿಗೆ ನಮಿಸದೇ ಇರುತ್ತಿರಲಿಲ್ಲ. ನನ್ನ ಎಲ್ಲ ಅಸ್ತ್ರಗಳಿಗೂ ಪ್ರತ್ಯಸ್ತ್ರ ಬಿಟ್ಟು ನಿರಾಕರಿಸುತ್ತಿದ್ದ ರಾಮದೇವರ ಬಗ್ಗೆ ನನಗೆ ಒಂದೆಡೆ ಗೆಲ್ಲುವ ಆಶೆ, ಇನ್ನೊಂದೆಡೆ ಹಠ ಕಾಡಿದವು. ಒಮ್ಮೆ ರಾಮದೇವರೇ ನನ್ನ ಬಾಣಾಘಾತಕ್ಕೆ ಭೂಮಿಯ ಮೇಲೆ ಬಿದ್ದರು. ಆಗ ಎಲ್ಲ ಪ್ರೇಕ್ಷಕರು ರಾಮನೆಡೆಗೆ ಧಾವಿಸಿ ಅವರನ್ನು ಆಲಿಂಗಿಸಿ, ಹಸ್ತತಲದಿಂದ ತಣ್ಣೀರು ಹಾಕಿ ಸಮಾಧಾನ ಗೈದರು. ಮತ್ತೆ ಭಯಂಕರ ನಡೆದ ಯುದ್ಧದಲ್ಲಿ ರಾಮದೇವರು ನನ್ನ ಮೇಲೆ ನೂರು, ಸಾವಿರ, ದಶಸಾವಿರ, ಲಕ್ಷ, ಖರ್ವ, ನಿಖರ್ವ ಸಂಖ್ಯೆಯ ಬಾಣಗಳನ್ನು ಸುರಿಸಿದರು. ನಾನು ಅವರ ಬಾಣಗಳನ್ನು ಬಾಣಗಳಿಂದಲೇ ಕತ್ತರಿಸಿದೆ. ನನ್ನ ಮೇಲೆ ಶಕ್ತ್ಯಾಯುಧ ಪ್ರಯೋಗಿಸಿದರು. ನಾನು ಅದನ್ನು ಮೂರು ಬಾಣಗಳಿಂದ ಬೀಳಿಸಿದೆ. ನನ್ನ ಮೇಲೆ ಮತ್ತೆ ದ್ವಾದಶಶಕ್ತಿಗಳನ್ನು ಬಿಡಲು ನಾನು ವ್ಯಥೆಗೊಂಡೆ. ಹೀಗೆ ಪರಸ್ಪರ ಶಸ್ತ್ರಾಸ್ತ್ರ ಪ್ರಯೋಗಗಳಿಂದ ಇಬ್ಬರೂ ಘಾಸಿಗೊಂಡೆವು. ಅವರು ಬೂಸಿದ ಬಾಣಗಳಿಂದ ನನ್ನ ಸಾರಥಿ ಮೂರ್ಛಿತನಾದ. ನಾನೂ ಒಮ್ಮೆ ಭೂಮಿಯ ಮೇಲೆ ಬೀಳುತ್ತಿದ್ದಾಗ ಅಂತರಿಕ್ಷದಲ್ಲಿದ್ದ ೮ ಋಷಿಗಳು ನನ್ನನ್ನು ಎತ್ತಿ ಹಿಡಿದು ರಕ್ಷಿಸಿ, ಹೆದರಬೇಡವೆಂದು ಧೈರ್ಯ ತುಂಬಿದರು. ಒಂದು ರಾತ್ರಿ ದಿವ್ಯಪುರುಷರು ಬಂದು ನನಗೆ ಸ್ವಾಪನಾಸ್ತ್ರದ ಸ್ಮರಣೆ ಮಾಡಿಸಿ ಅದನ್ನು ಪರಶುರಾಮರ ಮೇಲೆ ಪ್ರಯೋಗಿಸಲು, ಅವರು ನಿದ್ರೆಗೆ ಜಾರುವರು, ಸಾಯುವುದಿಲ್ಲ, ಆ ಅಸ್ತ್ರ ಅವರಿಗೂ ತಿಳಿಯದು ಎಂದೆಲ್ಲ ಹೇಳಿದರು[೧].

---

೧ ಇದಮಸ್ತ್ರಂ ಸುದಯಿತಂ ಪ್ರತ್ಯಭಿಜ್ಞಾಸ್ಯತೇ ಭವಾನ್ ।....
ಪ್ರಾಜಾಪತ್ಯಂ ವಿಶ್ವಕೃತಂ ಸುಸ್ವಾಪಂ ನಾಮ ಭಾರತ ॥
ನಹೀ ದಂ ವೇದ ರಾಮೋಽಪಿ .... ।
ನ ಚ ರಾಮಃ ಕ್ಷಯಂ ಗಂತಾ ತೇನಾಸ್ತ್ರೇಣ ...... ।

ಹೀಗೆ ಹೇಳಿ ಆ ಬ್ರಾಹ್ಮಣರು ಮರೆಯಾದರು. ಬೆಳಿಗ್ಗೆ ಮತ್ತೆ ಯುದ್ಧಾರಂಭವಾಯಿತು. ಪರಸ್ಪರ ಘಾಸಿಗೊಂಡೆವು ಅವರು ಬ್ರಹ್ಮಾಸ್ತ್ರ ಬಿಟ್ಟರು. ನಾನೂ ಬ್ರಹ್ಮಾಸ್ತ್ರ ಪ್ರಯೋಗಿಸಿದೆ. ಅವು ಆಕಾಶದಲ್ಲಿಯೇ ಕೂಡಿದವು. ಭೂಲೋಕದ ಪ್ರಾಣಿಗಳಿಗೆ ದುಃಖವಾಯಿತು. ದೇವಾದಿಗಳಿಗೆ ಸಂತಾಪವಾಯಿತು. ಆಗ ಬ್ರಹ್ಮವಾದಿಗಳು ರಾತ್ರಿ ಹೇಳಿದಂತೆ **ಪ್ರಸ್ವಾಪಾಸ್ತ್ರ** ನೆನಪಿಸಿಕೊಂಡೆ. ಆಗ ನಾರದರು ಬಂದು ಅದನ್ನು ಪ್ರಯೋಗಿಸಬೇಡವೆಂದರು ಕಾರಣ –

**ರಾಮಸ್ತಪಸ್ವೀ ಬ್ರಹ್ಮಣ್ಯೋ ಬ್ರಾಹ್ಮಣಶ್ಚ ಗುರುಶ್ಚ ತೇ।**
**ತಸ್ಯಾವಮಾನಂ ಕೌರವ್ಯ ಮಾ ಸ್ಮ ಕಾರ್ಷೀಃ ಕಥಂಚನ ॥** – ೧೮೭/೪

'ರಾಮನು ತಪಸ್ವೀ, ಬ್ರಾಹ್ಮಣವತ್ಸಲ, ನಿನಗೆ ಗುರು, ಆತನನ್ನು ಅವಮಾನಿಸಬೇಡ.

ಆಗ ನಾನು ಆಕಾಶದಲ್ಲಿದ್ದ ಬ್ರಹ್ಮವಾದಿಗಳ ಕಡೆ ನೋಡಿದೆ. ಅವರು ನಾರದರು ಹೇಳಿದಂತೆ ಮಾಡೆಂದರು. ಅದೇ ಶ್ರೇಯಸ್ಸಿಗೆ ಸಾಧನ. ನಂತರ ಪ್ರಸ್ವಾಪಾಸ್ತ್ರ ಉಪಸಂಹಾರ ಮಾಡಿ ಬ್ರಹ್ಮಾಸ್ತ್ರ ಹೂಡಿದೆ. ಅದನ್ನು ನೋಡಿದ ಗುರುಗಳು ಇದ್ದಕ್ಕಿದ್ದಂತೆ – 'ಭೀಷ್ಮರಿಂದ ಮಂದಬುದ್ಧಿಯಾದ ನಾನು ಪರಾಜಿತನಾಗಿದ್ದೇನೆ' ಎಂದರು[೧]. ಆಗಲೇ ಜಮದಗ್ನಿಗಳು, ಋಚೀಕರು ಹಾಗೂ ಇತರೇ ಋಷಿಗಳು ಪರಶುರಾಮದೇವರನ್ನು ಸುತ್ತುವರಿದು ಸಮಾಧಾನ ಮಾಡುತ್ತಾ [೨]"ವಿಶೇಷವಾಗಿ ಕ್ಷತ್ರಿಯರಾದ ಭೀಷ್ಮರೊಡನೆ ಯುದ್ಧ ಮಾಡುವ ಸಾಹಸವನ್ನು ಇನ್ನೆಂದೂ ಮಾಡದಿರು. ಕ್ಷತ್ರಿಯನದು ಯುದ್ಧವೇ ಸ್ವಧರ್ಮ. ಬ್ರಾಹ್ಮಣರದು ಸ್ವಾಧ್ಯಾಯ (ವೇದಾಧ್ಯಯನ) ಹಾಗೂ ವ್ರತಾನುಷ್ಠಾನಗಳು'

ಹೀಗೆ ಭೀಷ್ಮರನ್ನೂ ಎಲ್ಲರೂ ತಡೆದರು[೩]. ಗುರುವಾದ ರಾಮನೊಡನೆ ಯುದ್ಧ ಮಾಡಬೇಡ. ರಾಮನನ್ನು ಯುದ್ಧದಲ್ಲಿ ಗೆಲ್ಲುವುದು ನ್ಯಾಯವಲ್ಲ (ಉಚಿತವಲ್ಲ – ಕಾರಣ ಸಾಧ್ಯವೂ ಅಲ್ಲ ಎಂದು ಭಾವ). ಬ್ರಾಹ್ಮಣರಾದ ಪರಶುರಾಮಗೆ ಗೌರವಿಸು.

---

ಸ್ವಪ್ಸ್ಯತೇ ಜಾಮದಗ್ನ್ಯೋಽಸೌ ....।
ಪ್ರಸುಪ್ತಂ ವಾ ಮೃತಂ ವೇತಿ ತುಲ್ಯಂ ಮನ್ಯಾಮಹೇ ವಯಮ್ ॥
– ಉದ್ಯೋಗಪರ್ವ (೧೮೫/೧೧-೧೮)

೧ ಜಿತೋಽಸ್ಮಿ ಭೀಷ್ಮೇಣ ಸುಮಂದ ಬುದ್ಧಿಃ (೧೮೭/೮)

೨ ಮಾಸ್ಮೈವಂ ಸಾಹಸಂ ತಾತ ಪುನಃ ಕಾರ್ಷೀಃ ಕಥಂಚನ।
ಭೀಷ್ಮೇಣ ಸಂಯುಗಂ ಗಂತುಂ ಕ್ಷತ್ರಿಯೇಣ ವಿಶೇಷತಃ ॥
ಕ್ಷತ್ರಿಯಸ್ಯ ತು ಧರ್ಮೋಽಯಂ ಯದ್ ಯುದ್ಧಂ ಭೃಗುನಂದನ।
ಸ್ವಾಧ್ಯಾಯೇ ವ್ರತಚರ್ಯಾ ಚ ಬ್ರಾಹ್ಮಣಾನಾಂ ಪರಂ ಧನಮ್ ॥
– ಉದ್ಯೋಗಪರ್ವ(೧೮೭/೧೦,೧೧)

೩ ರಾಮೇಣ ಸಹ ಮಾ ಯೋತ್ಸೀರ್ಗುರುಣೇತಿ ಪುನಃ ಪುನಃ।
ನ ಹಿ ರಾಮೋ ರಣೇ ಜೇತುಂ ತ್ವಯಾ ನ್ಯಾಯ್ಯಃ ಕುರೂದ್ವಹ ॥

ನಾವು ನಿನಗೆ ಗುರುಗಳು ಕಾರಣ ತಡೆಯುತ್ತಿದ್ದೇವೆ ಎಂದರು ಬ್ರಹ್ಮವಾದಿಗಳು- ದೇವತೆಗಳು- ಋಷಿಗಳು.

ಪರಶುರಾಮರು ಭೀಷ್ಮನನ್ನು ಯುದ್ಧದಿಂದ ನಿವರ್ತಿಸಲು ದೇವರ್ಷಿಗಳಿಗೆ ಹೇಳಿದರು. ಭೀಷ್ಮರು ಕ್ಷಾತ್ರಧರ್ಮ ಬಿಡಲು ಒಪ್ಪಲಿಲ್ಲ. ಆಗ ನಾರದಾದಿ ಮುನಿಗಳು, ನನ್ನ ತಾಯಿ ಭಾಗೀರಥಿ ರಣಮಧ್ಯ ಪ್ರವೇಶಿಸಿದರು (ನಮ್ಮ ಮಧ್ಯ). ಅವರೆಲ್ಲ ರಾಮದೇವರನ್ನು ಕುರಿತು [೧]'ಎಲೈ ಭಾರ್ಗವನೇ! ಬ್ರಾಹ್ಮಣರ ಹೃದಯ ಬೆಣ್ಣೆಯಂತಹುದು. ಆದ್ದರಿಂದ ಯುದ್ಧ ನಿಲ್ಲಿಸು. ನಿನ್ನಿಂದ ಭೀಷ್ಮ ಅವಧ್ಯ. ಭೀಷ್ಮರಿಂದ ನೀವೂ ಅವಧ್ಯ' ಎಂದರು. ಆಗಲೇ ಬ್ರಹ್ಮವಾದಿಗಳು ನನಗೆ [೨]'ಭೀಷ್ಮನೇ ಗುರುವಾದ ರಾಮನಿಗೆ ಶರಣಾಗು. ಲೋಕಹಿತವನ್ನು ಮಾಡು' ಎಂದಾಗ ನಾನು ಅವರ ಮಾತನ್ನು ಮನ್ನಿಸಿ, ರಾಮನಿಗೆ ವಂದಿಸಿದೆ. ರಾಮದೇವರು ನನ್ನನ್ನು ಕುರಿತು [೩]'ಈ ಲೋಕದಲ್ಲಿ ನಿನಗೆ ಸಮನಾದ ಕ್ಷತ್ರಿಯರಿಲ್ಲ. ಈ ಯುದ್ಧದಲ್ಲಿ ನಾನು ನಿನ್ನನ್ನು ಕುರಿತು ಸಂತೋಷ ಹೊಂದಿದ್ದೇನೆ, ನೀನಿನ್ನು ಹೋಗು' ಎಂದರು.

ನಂತರ ರಾಮದೇವರು ಅಂಬೆಯನ್ನು ಕರೆದು 'ನೋಡು ಮಗಳೇ! ನನ್ನ ಕೈಲಾದಷ್ಟು ಭೀಷ್ಮನನ್ನು ಗೆಲ್ಲಲು ಪ್ರಯತ್ನಿಸಿದೆ. ಆದರೆ ನನಗೆ ಆತನನ್ನು ಗೆಲ್ಲಲು, ಕೊಲ್ಲಲು ಸಾಧ್ಯವಾಗಲಿಲ್ಲ. ಇದೇ ನನ್ನ ಗರಿಷ್ಠ ಶಕ್ತಿ. ನಿನಗೆ ಬೇರೆ ಇನ್ನೇನು ಮಾಡಲಿ. ನಿನಗೆ ಇಷ್ಟ ಬಂದಲ್ಲಿ ಹೋಗು. ಭೀಷ್ಮನನ್ನೇ ಶರಣಾಗು' ಎಂದರು. ಅಂಬೆಗಯೂ ಸಹ ರಾಮದೇವರಿಗೆ 'ನೀವು ಹೇಳಿದ್ದು ನಿಜಕ್ಕೂ ಸತ್ಯ. ಭೀಷ್ಮ ದೇವತೆಗಳಿಂದಲೂ ಅಜೇಯ. ನೀವಾದರೂ ನಿಮ್ಮ ಶಕ್ತಿಮೀರಿ ನನ್ನ ಕಾರ್ಯ ಮಾಡಿದಿರಿ. ಆದರೂ ಭೀಷ್ಮರನ್ನು ಸೋಲಿಸಲು ಸಾಧ್ಯವಾಗಲಿಲ್ಲ. ಆದರೆ ನಾನು ಮಾತ್ರ ಮತ್ತೆ ಭೀಷ್ಮರ ಬಳಿಗೆ ಹೋಗುವುದಿಲ್ಲ. ನಾನೇ ಸ್ವತಃ ಭೀಷ್ಮನನ್ನು ನಾಶ ಮಾಡುವ ಸ್ಥಳಕ್ಕೆ ಹೋಗುವೆ'[೪] ಎಂದಳು.

---

೧ ನವನೀತಂ ಹಿ ಹೃದಯಂ ವಿಪ್ರಾಣಾಂ ಶಾಮ್ಯ ಭಾರ್ಗವ।
ರಾಮ ರಾಮ ನಿವರ್ತಸ್ವ ಯುದ್ಧಾದಸ್ಮಾತ್ ದ್ವಿಜೋತ್ತಮ॥
ಅವಧ್ಯೋಹಿ ತ್ವಯಾ ಭೀಷ್ಮಸ್ತ್ವಂ ಚ ಭೀಷ್ಮಸ್ಯ ಭಾರ್ಗವ॥ -ಉದ್ಯೋಗಪರ್ವ(೧೮೭/೩೪,೩೪)

೨ ಪ್ರೈಹಿ ರಾಮಂ ಮಹಾಬಾಹೋ ಗುರುಂ ಲೋಕಹಿತಂ ಕುರು। -ಉದ್ಯೋಗಪರ್ವ(೧೮೭/೩೯)

೩ ತ್ವತ್ಸಮೋ ನಾಸ್ತಿ ಲೋಕೇऽಸ್ಮಿನ್ ಕ್ಷತ್ರಿಯಃ ಪೃಥಿವೀ ಚರಃ।
ಗಮ್ಯತಾಂ ಭೀಷ್ಮ ಯುದ್ಧೇऽಸ್ಮಿನ್ ತೋಷಿತೋऽಹಂ ಭೃಶಂ ತ್ವಯಾ॥

೪ ಅಜೇಯೋ ಯುಧಿ ಭೀಷ್ಮೋऽಯಮಪಿ ದೇವೈ ರುದಾರಧೀಃ।
ಯಥಾಶಕ್ತಿ ಯಥೋತ್ಸಾಹಂ ಮಮ ಕಾರ್ಯ ಕೃತಂ ತ್ವಯಾ।
ನ ಚಾಹಮೇನಂ ಯಾಸ್ಯಾಮಿ ಪುನರ್ಭೀಷ್ಮಂ ಕಥಂಚನ।
ಸಂಗರೇ ಪಾತಯಿಷ್ಯಾಮಿ ಸ್ವಯಮೇವ ಭೃಗೂದ್ವಹ॥ - ಉದ್ಯೋಗಪರ್ವ(೧೮೮/೬-೧೦)

ನಂತರ ಪರಶುರಾಮದೇವರು ತಮ್ಮ ಶಿಷ್ಯಾದಿಗಳೊಂದಿಗೆ ಹೊರಡಲು, ನನ್ನ ವಧೆಯನ್ನೇ ಚಿಂತಿಸುತ್ತಾ ಅಂಬೆಯೂ ಹೊರಟಳು. ನಾನು ಈ ವಾರ್ತೆಯನ್ನು ಸತ್ಯವತೀದೇವಿಗೆ ಹೇಳಿದೆ. ಆಕೆ ನನ್ನನ್ನು ಅಭಿನಂದಿಸಿದಳು.

ನಾನು ಅಂಬೆಯ ಮುಂದಿನ ನಡೆಯನ್ನು ತಿಳಿಯಲು ಗೂಢಚಾರರನ್ನು ನೇಮಿಸಿದ್ದೆ. ಅವರೆಲ್ಲ ಆಕೆಯ ವೃತ್ತಾಂತವೆಲ್ಲವನ್ನು ನನ್ನ ಗಮನಕ್ಕೆ ತರುತ್ತಿದ್ದರು. ನನಗೂ ಬಹಳ ವ್ಯಥೆಯಾಯಿತು. ನಾರದರಿಗೆ ಹಾಗೂ ವ್ಯಾಸರಿಗೆ ಇದೆಲ್ಲ ತಿಳಿಸಿದೆ. ಅವರು ಅಂಬೆ ಬಗ್ಗೆ ವಿಷಾದಿಸಬೇಡ. ಪುರುಷಪ್ರಯತ್ನ ದೈವಸಂಕಲ್ಪವನ್ನು ಎಂದೂ ಹಿಮ್ಮೆಟ್ಟದು ಎಂದು ಸಮಾಧಾನ ಹೇಳಿದರು[೧].

ನಂತರ ಅಂಬೆಯು ಯಮುನಾತೀರದಲ್ಲಿನ ಆಶ್ರಮ ಪ್ರವೇಶಿಸಿ ಅಮಾನುಷ ತಪಸ್ಸನ್ನು ಮೊದಲು ಆರು ತಿಂಗಳು ವಾಯುಭಕ್ಷಳಾಗಿ (ಕೇವಲ ಗಾಳಿ ಸೇವನೆ), ನಂತರ ಒಂದುವರ್ಷ ನಿರಾಹಾರಳಾಗಿ ಯಮುನಾನದಿಯಲ್ಲಿ ನಿಂತು (ಉಪವಾಸ), ನಂತರ ಒಂದುವರ್ಷ ಪಾದಾಂಗುಷ್ಠದ ಮೇಲೆ ನಿಂತು ಉದುರಿದ ಎಲೆಗಳನ್ನು ಸೇವಿಸಿ ಹೀಗೆ ಹನ್ನೆರಡು ವರ್ಷ ಕಠೋರ ತಪಸ್ಸನ್ನು ಆಚರಿಸಿದಳು. ಆಕೆಯ ತಂದೆ, ಬಂಧುಗಳು ಯಾರು ಬಂದು ಹೇಳಿದರೂ ನಿಲ್ಲಿಸಲಿಲ್ಲ. ನಂತರ ವತ್ಸನೆಂಬ ಋಷ್ಯಾಶ್ರಮಕ್ಕೆ ಮುಂದೆ ನಂದಾಶ್ರಮವೇ ಮೊದಲಾದ ಅನೇಕ ಆಶ್ರಮ ಹಾಗೂ ಪ್ರಯಾಗಾದಿ ತೀರ್ಥಕ್ಷೇತ್ರಗಳಲ್ಲಿ ಸ್ನಾನಾದಿಗಳನ್ನು ಮಾಡುತ್ತಾ ಘೋರತಪಸ್ಸನ್ನು ಮಾಡುತ್ತಾ ಇರುವಾಗ, ಗಂಗೆಯು ಬಂದು ಏಕೆ ಈ ತಪಸ್ಸೆಂದಳು. ಭೀಷ್ಮರ ವಿನಾಶಕ್ಕಾಗಿ ಎಂದು ಹೇಳಿ, ಈ ತಪಸ್ಸು ಫಲಿಸಲಿ ಎಂದು ಬೇಡಿದಳು. ಆದರೆ ಗಂಗೆಯು ನಿನ್ನ ಈ ಕೆಟ್ಟ ತಪಸ್ಸು ಫಲ ಕೊಡದೆಂದಳು. ನೀನು ವ್ರತಸ್ಥಳಾಗಿ ಶರೀರ ಬಿಟ್ಟಲ್ಲಿ ಮಳೆಗಾಲದ ಕೆಸರಿನಿಂದ ಕೂಡಿದ ನೀರಿರುವ ವಕ್ರ ನದಿಯಾಗುವೆ. ಘೋರವಾದ ಮೊಸಳೆಗಳು ಮೊದಲಾದ ಪ್ರಾಣಿಗಳು ಇರುವ ನದಿಯಾಗುವೆ ಎಂದು ಹೇಳಿ ಗಂಗೆ ಹೋದಳು. ಮತ್ತೆ ಅಂಬೆಯು ೮-೧೦ ತಿಂಗಳಿಗೊಮ್ಮೆ ನೀರನ್ನೂ ಕುಡಿಯದೆ ತಪವ ಗೈದಳು. ಹೀಗೆ ಆ ವತ್ಸಭೂಮಿಯಲ್ಲಿ ಸಂಚರಿಸುತ್ತಾ ಕಾಲ ಕಳೆದು ತನ್ನ ತಪಸ್ಸಿನಿಂದಲೂ, ತನ್ನ ದೇಹಾರ್ಧ ಅಂಶದಿಂದಲೂ ವಕ್ರಗತಿಯ ನದಿಯಾದಳು. ಅರ್ಧದೇಹದಿಂದ ಕನ್ಯೆಯಾಗಿಯೂ ಇದ್ದಳು.

ಆಕೆಯ ತಪಸ್ಸಿನ ಉದ್ದೇಶವನ್ನು ಕೇಳಿ ತಿಳಿದ ತಪಸ್ವಿಗಳಿಗೂ ಆಕೆಯನ್ನು ಅಂತಹ ತಪಸ್ಸಿನಿಂದ ನಿವೃತ್ತಳನ್ನಾಗಿ ಮಾಡಲು ಸಾಧ್ಯವಾಗಲಿಲ್ಲ. ಮುಂದೆ ಆಕೆಗೆ ರುದ್ರದೇವರು ದರ್ಶನ ಕೊಟ್ಟು ನೀನು ಭೀಷ್ಮನನ್ನು ಕೊಲ್ಲುವೆ ಎಂದು ವರ ನೀಡಿದರು. ನನಗೆ ಈ ಸ್ತ್ರೀಭಾವವು(ಸ್ತ್ರೀಯಾಗಿರುವಿಕೆಯು) ಸಾಕಾಗಿದೆ. ಆದ್ದರಿಂದ ನಿನ್ನ ಮಾತು ಸತ್ಯವಾಗಲು

೧ ನ ವಿಷಾದಸ್ತ್ವಯಾ ಕಾರ್ಯೋ ಭೀಷ್ಮ ಕಾಶಿಸುತಾಂ ಪ್ರತಿ।
ದೈವಂ ಪುರುಷಕಾರೇಣ ಕೋ ನಿವರ್ತಿತುಮುತ್ಸಹೇತ್ ॥ - ಉದ್ಯೋಗಪರ್ವ(೧೮೮/೧೬-೧೯)

ನಾನು ಭೀಷ್ಮನನ್ನು ಯುದ್ಧದಲ್ಲಿ ಹೇಗೆ ಕೊಲ್ಲುವೆನೋ, ಹಾಗೆ ಮಾಡು[೧]" ಎಂದಳು. ಅದಕ್ಕೆ ರುದ್ರದೇವರು '[೨]ಎಲೈ ಮಂಗಳೇ! ನನ್ನ ಮಾತು ಸುಳ್ಳಾಗದು. ನೀನು ಪುರುಷತ್ವವನ್ನು ಹೊಂದಿ ಭೀಷ್ಮನನ್ನು ಯುದ್ಧದಲ್ಲಿ ಕೊಲ್ಲುವೆ. ದ್ರುಪದನ ವಂಶದಲ್ಲಿ (ಸ್ತ್ರೀಯಾಗಿ) ಜನಿಸಿ, ಮಹಾರಥನೆಂದು ಪ್ರಸಿದ್ಧಿ ಹೊಂದಿ, ಪುರುಷನಾಗಿ ಬದಲಾಗುವೆ. ನಾನು ಹೇಳಿದಂತೆಯೇ ಎಲ್ಲವೂ ಆಗುತ್ತದೆ.'

ಹೀಗೆ ವರನೀಡಿದ ರುದ್ರದೇವರು ಬ್ರಾಹ್ಮಣರ ಮುಂದೆಯೇ ಅಂತರ್ಧಾನನಾದ. ಕೋಪದಿಂದಲೇ ಕಾಶಿಕನ್ಯೆಯು ಚಿತೆಯನ್ನು ಸಿದ್ಧಪಡಿಸಿ, ಯಮುನಾತೀರದಲ್ಲಿ ಅಗ್ನಿಪ್ರವೇಶ ಮಾಡಿದಳು.

ಇದೇ ಕಾಲದಲ್ಲಿ ದ್ರುಪದನು ರುದ್ರದೇವರನ್ನು ಕುರಿತು ಪುತ್ರಾರ್ಥಿಯಾಗಿ ತಪಸ್ಸನ್ನು ಮಾಡಲು ರುದ್ರದೇವರು ನಿನಗೆ ಹೆಣ್ಣುಮಗು ಜನಿಸುವುದು. ಅದೇ ಮುಂದೆ ಮಗನಾಗಿ ಪರಿವರ್ತನೆಯಾಗುತ್ತದೆ. ಇದು ವ್ಯತ್ಯಾಸವಾಗದೆಂದು, ಇದು ಭಗವದಿಚ್ಛೆ ಎಂದು ಹೇಳಿ ಅದೃಶ್ಯರಾದರು. ಮುಂದೆ ಯೋಗ್ಯಕಾಲದಲ್ಲಿ ದ್ರುಪದನಿಂದ ಗರ್ಭಧಾರಣೆಯನ್ನು ಹೊಂದಿದ ಆತನ ಪತ್ನಿಯು ಹೆಣ್ಣು ಮಗುವನ್ನು ಹಡೆದಳು. ಆದರೆ ರಾಣಿಯು ಗಂಡು ಮಗುವೆಂದೇ ಪ್ರಸಿದ್ಧಿಮಾಡಿದಳು. ಹೀಗೆ ಹೆಣ್ಣುಶಿಶುವಿಗೆ ದ್ರುಪದರಾಜನು ಗಂಡು ಮಗುವಿಗೆ ಮಾಡುವಂತೆ ಸಂಸ್ಕಾರಗಳನ್ನು ಮಾಡಿದನು. ಈ ವಿಷಯ ದ್ರುಪದ ದಂಪತಿಗಳ ಹೊರತಾಗಿ ಯಾರಿಗೂ ಗೊತ್ತಾಗದಂತೆ ಎಚ್ಚರಿಕೆಯಿಂದ ನೋಡಿಕೊಂಡರು. ಆದರೆ ದುರ್ಯೋಧನನ ಗೂಢಚಾರರು ಹಾಗೂ ನಾರದರು ಹೇಳಿದ ಮಾತಿನಿಂದಲೂ, ದೇವವಾಕ್ಯದಿಂದಲೂ ನನಗೆ ಈ ವಿಷಯ ತಿಳಿದಿತ್ತು. ಇದೆಲ್ಲ ಅಂಬೆಯ ತಪಸ್ಸಿನ ನಿಜವಾದ ವಿಷಯ.

ದ್ರುಪದರಾಜ ತನ್ನ ಮಗಳಿಗೆ ಪುರುಷಯೋಗ್ಯ ಶಿಕ್ಷಣವನ್ನು ಕೊಡಿಸಿದನು. ಅಲ್ಲದೆ ಶಸ್ತ್ರಾಸ್ತ್ರವಿದ್ಯೆಯನ್ನು ದ್ರೋಣರಿಂದ ಕೊಡಿಸಿದನು. ನಂತರ ದ್ರುಪದಪತ್ನಿಯು ತನ್ನ ಮಗಳಿಗೆ

---

೧ ಯಥಾ ಸ ಸತ್ಯೋ ಭವತಿ ತಥಾ ಕುರು ವೃಷಧ್ವಜ ।
ಯಥಾ ಹನ್ಯಾಂ ಸಮಾಗಮ್ಯ ಭೀಷ್ಮಂ ಶಾಂತನವಂ ಯುಧಿ ॥ - ಉದ್ಯೋಗಪರ್ವ(೧೮೯/೧೩)

೨ ನ ಮೇ ವಾಗನೃತಂ ಪ್ರಾಹ ಸತ್ಯಂ ಭದ್ರೇ ಭವಿಷ್ಯತಿ ।
ಹನಿಷ್ಯತಿ ರಣೇ ಭೀಷ್ಮಂ ಪುರುಷತ್ವಂ ಚ ಲಪ್ಸ್ಯತೇ ॥
ಸ್ಮರಿಷ್ಯಸಿ ಚ ತತ್ಸರ್ವಂ ದೇಹಮನ್ಯಂ ಗತಾ ಸತೀ ।
ದ್ರುಪದಸ್ಯ ಕುಲೇ ಜಾತಾ ಭವಿಷ್ಯತಿ ಮಹಾರಥಃ ॥
ಶೀಘ್ರಾಸ್ತ್ರಶ್ಚಿತ್ರಯೋಧೀ ಚ ಭವಿಷ್ಯಸಿ ಸುಸಮ್ಮತಃ ।
ಯಥೋಕ್ತಮೇವ ಕಲ್ಯಾಣಿ ಸರ್ವಮೇತತ್ ಭವಿಷ್ಯತಿ ॥
ಭವಿಷ್ಯಸಿ ಪುಮಾನ್ ಪಶ್ಚಾತ್ ಕಸ್ಮಾಚ್ಚಿತ್ ಕಾಲಪರ್ಯಯಾತ್ ।
- ಉದ್ಯೋಗಪರ್ವ(೧೮೯/೧೪-೧೮)

(ಮಗನವೇಷದ) ವಿವಾಹ ಮಾಡಲು ಕನ್ಯೆಗಾಗಿ ಪ್ರಯತ್ನಿಸಲು ಪತಿಯನ್ನು ಒತ್ತಾಯಿಸಿ, ಕೊನೆಗೆ ದಶಾರ್ಣಾಧಿಪತಿ (ದಶಾರ್ಣದೇಶದ) ರಾಜಕುವರಿಯೊಂದಿಗೆ ಮದುವೆಯನ್ನು ಮಾಡಿಬಿಟ್ಟರು. ಏಕೆಂದರೆ ರುದ್ರದೇವರ ಮಾತು ಸುಳ್ಳಾಗದು ಎಂಬ ದೃಢವಿಶ್ವಾಸದಿಂದ. ದಶಾಣಕಾಧಿಪತಿಯಾದ ಹಿರಣ್ಯನಾಭನಿಗೆ ಕೆಲವೇ ದಿನಗಳಲ್ಲಿ ತನ್ನ ಅಳಿಯ ಸ್ತ್ರೀ ಎಂದು ತಿಳಿದು ಕೋಪಾವಿಷ್ಟನಾಗಿ ದ್ರುಪದನಿಗೆ ಕ್ರೂರ ಸಂದೇಶ ಕಳುಹಿಸಿದನು. 'ನೀನು ಮಾಡಿದ ಮೋಸಕ್ಕಾಗಿ ನಿನ್ನನ್ನು ನಿನ್ನ ಮಗಳನ್ನು ನಿನ್ನ ಅಮಾತ್ಯಾದಿಗಳನ್ನು ಸಂಹರಿಸುವೆ' ಎಂದು.

ದ್ರುಪದ ತಬ್ಬಿಬ್ಬಾದ, ಹೆದರಿದ. ಹೆಂಡತಿಯೊಂದಿಗೆ ದುಃಖ ಹಂಚಿಕೊಂಡ. ಇದನ್ನೆಲ್ಲ ಗಮನಿಸುತ್ತಿದ್ದ ಶಿಖಂಡಿನೀ (ಮಗಳು–ಮಗನರೂಪದ ಮಗಳು)ತನ್ನಿಂದಾಗಿ ತಂದೆ, ತಾಯಿ, ರಾಜ್ಯಕ್ಕೆ ಸಂಕಟ ಬಂದಿತೆಂದು ನಾಚಿಕೊಂಡು, ಹೆದರಿ, ಪ್ರಾಣತ್ಯಾಗಕ್ಕಾಗಿ ನಿರ್ಧರಿಸಿ, ಮನೆಬಿಟ್ಟು ಐಶ್ವರ್ಯಸಂಪನ್ನನಾದ ಸ್ಥೂಣಾಕರ್ಣನಿಂದ ರಕ್ಷಿತವಾದ ವನಕ್ಕೆ ಹೋದಳು. ಆತನ ಮುಂದೆ ತನ್ನ ದುಃಖ ತೋಡಿಕೊಂಡಳು. ಆ ಯಕ್ಷನು ಮನಕರಗಿ ದೈವಪ್ರೇರಿತನಾಗಿ ತನ್ನ ಪುರುಷದೇಹವನ್ನು ಶಿಖಂಡಿಗೆ ಕೊಡುವುದಾಗಿ ಆಕೆಯ ಸ್ತ್ರೀಶರೀರವನ್ನು ತಾತ್ಕಾಲಿಕವಾಗಿ ಸ್ವೀಕರಿಸಲು ಒಪ್ಪಿ ತನ್ನ ಪುಂಶರೀರ ದಾನ ಮಾಡಿದನು[೧]. ಆ ಶರೀರ ಪ್ರವೇಶಿಸಿದ ಶಿಖಂಡಿನೀ – ಶಿಖಂಡಿ ಪುರುಷನಾದ. ತನ್ನ ರಾಜ್ಯಕ್ಕೆ ತೆರಳಿ ತಂದೆ ತಾಯಿಗಳಿಗೆ ಎಲ್ಲವನ್ನು ಹೇಳಲು, ಅವರು ತುಂಬಾ ಆನಂದಪಟ್ಟರು. ಸಮಸ್ಯೆ ಬಗೆಹರಿಯಿತೆಂದು.

ಹೀಗೆ ವಾಪಸು ಬಂದ ಶಿಖಂಡಿಯನ್ನು ಅವನ ಮಾವ ಹಿರಣ್ಯನಾಭ ಸಾಮೋಪಾಯ–ಗಳಿಂದ ಪರೀಕ್ಷಿಸಿ, ಪುರುಷತ್ವವನ್ನು ನಿಶ್ಚಯಿಸಿಕೊಂಡು ಸಮಾಧಾನಪಟ್ಟ ಹೀಗೆ ದ್ರುಪದದಂಪತಿಗಳ ಸಮಸ್ಯೆ ಪರಿಹಾರ ಕಂಡಿತು.

ಇತ್ತ ನರವಾಹನನಾದ ಯಕ್ಷರಾಜನಾದ ಕುಬೇರನು ಸ್ಥೂಣಾಕರ್ಣನ ಮನೆಗೆ ಬಂದಾಗ ಅವನು ಕುಬೇರನ ದರ್ಶನಕ್ಕೆ ಬರಲಿಲ್ಲ, ಸತ್ಕರಿಸಲಿಲ್ಲ, ಕಾರಣ ಸ್ತ್ರೀವೇಷ ಹೊಂದಿದ್ದರಿಂದ. ಯಕ್ಷನ ಸೇವಕರು ಇರುವ ವಿಷಯ ತಿಳಿಸಿದರೂ, ಕುಬೇರ ಸಮಾಧಾನಗೊಳ್ಳಲಿಲ್ಲ, ಕುಬೇರನ ಆಜ್ಞೆಯ ಮೇರೆಗೆ ಬಂದ ಸ್ಥೂಣಾಕರ್ಣನ ಸ್ತ್ರೀತ್ವವನ್ನು ನೋಡಿ, ಇವನ ಈ

---

೧ ಸ್ಥೂಣಾಕರ್ಣಃ –
ಸ್ವಂ ತೇ ಪುಂಸ್ತ್ವಂ ಪ್ರದಾಸ್ಯಾಮಿ ಸ್ತ್ರೀತ್ವಂ ಧಾರಯಿತಾಽಸ್ಮಿ ತೇ।
ಕಂಚಿತ್ಕಾಲಂ ತು ತೇ ದಾಸ್ಯೇ ಪುಂಲಿಂಗಂ ಸ್ವಮಿದಂ ತವ॥
ಪ್ರಭುಃ ಸಂಕಲ್ಪಸಿದ್ಧೋಽಸ್ಮಿ ಕಾಮರೂಪೀ ವಿಹಂಗಮಃ।
ಮತ್ಪ್ರಸಾದಾತ್ ಪುರಂ ಚೈವ ತ್ರಾಹಿ ಬಂಧೂಂಶ್ಚ ಕೇವಲಮ್ ॥ – ಉದ್ಯೋಗಪರ್ವ(೧೯೪/೪–೬)
ಶಿಖಂಡೀ –
ಪ್ರತಿದಾಸ್ಯಾಮಿ ಭಗವನ್ ಪುಲ್ಲಿಂಗಂ ತವ ಸುವ್ರತ।
ಕಿಂಚಿತ್ಕಾಲಾಂತರಂ ಸ್ತ್ರೀತ್ವಂ ಧಾರಯಸ್ವ ನಿಶಾಚರ॥ – ಉದ್ಯೋಗಪರ್ವ(೧೯೪/೮)

ಸ್ತ್ರೀತ್ವ ಹೀಗೆಯೇ ಮುಂದುವರೆಯಲಿ ಎಂದು ಶಪಿಸಿದನು. ಆಗ ಯಕ್ಷರೆಲ್ಲರೂ ವಿಶಾಪ ನೀಡಲು ಪ್ರಾರ್ಥಿಸಿದಾಗ, ಕುಬೇರನು ಶಿಖಂಡಿಯು ಮುಂದೆ ಯುದ್ಧದಲ್ಲಿ ಹತನಾದಾಗ ಸ್ಥೂಣಾಕರ್ಣನು ತನ್ನ ಮೂಲ ಪುಂ ರೂಪ ಪಡೆಯುವನೆಂದು ಹೇಳುತ್ತಾ ಧೈರ್ಯ ತುಂಬಿ ಉದ್ವೇಗರಹಿತನಾಗಿರಲು ಸ್ಥೂಣಾಕರ್ಣನಿಗೆ ಹೇಳಿದನು.

ಅತ್ತ ತನ್ನ ಮಾವನ ವಿಪತ್ತಿನಿಂದ ಪಾರಾದ ಶಿಖಂಡಿಯು ಸ್ಥೂಣಾಕರ್ಣನಿಗೆ ತನ್ನ ಪುಂಸ್ತ್ವ ವಾಪಸು ಕೊಡಲು ಬಂದಾಗ ಸ್ಥೂಣಾಕರ್ಣನು ಕುಬೇರನ ಶಾಪ, ವಿಶಾಪ ತಿಳಿಸಿ, ನಿನ್ನ ಇಷ್ಟದಂತೆ ಹೋಗಿ ಸುಖವಾಗಿರಲು ತಿಳಿಸಿದನು. ಇದರಿಂದ ಹರ್ಷಗೊಂಡ ಶಿಖಂಡಿಯು ವಾಪಸು ಹೋಗಿ ಬಂಧು-ಬಾಂಧವರೊಂದಿಗೆ ಸುಖವಾಗಿದ್ದನು. ಅದಕ್ಕಾಗಿ ದೇವತಾರಾಧನಾದಿಗಳನ್ನು ಮಾಡಿದನು.

ಮುಂದೆ ದ್ರುಪದನು ತನ್ನ ಮಗನನ್ನು ದ್ರೋಣರ ಬಳಿಗೆ ಕಳಿಸಿಕೊಟ್ಟು ಶಸ್ತ್ರಾಸ್ತ್ರವಿದ್ಯೆಗಳನ್ನು ಕೊಡಿಸಿದನು. ಎಲೈ ದುರ್ಯೋಧನನೇ! ನಿಮ್ಮೊಡನೆ ಧೃಷ್ಟದ್ಯುಮ್ನಾದಿಗಳೊಂದಿಗೆ ಶಿಖಂಡಿಯೂ ಧನುರ್ವೇದಾದಿಗಳನ್ನು ಪಡೆದ. ಈ ಎಲ್ಲ ವಿಷಯಗಳು ನನಗೆ ನನ್ನ ಗೂಢಚಾರರಿಂದ ತಿಳಿದಿದೆ. ರಾಜನ್! ದ್ರುಪದನ ಮಗಳು ಶಿಖಂಡಿನೀ ಪುರುಷತ್ವವನ್ನು ಪಡೆದು ಶಿಖಂಡಿಯಾದ ಕಥೆ ಹೀಗಿದೆ. ಆದ್ದರಿಂದ ಧನುರ್ಧಾರಿಯಾಗಿ ಶಿಖಂಡಿ ಯುದ್ಧಕ್ಕೆ ಬಂದರೆ ನಾನು ಅವನನ್ನು ನೋಡುವುದಿಲ್ಲ, ಅವನನ್ನು ಹೊಡೆಯುವುದೂ ಇಲ್ಲ[೧].

ಹೀಗೆ ಅಂಬೋಪಾಖ್ಯಾನವು ಭೀಷ್ಮರಿಂದಲೇ ಹೇಳಲ್ಪಟ್ಟ ತಮ್ಮ ಹಾಗೂ ತಾವು ತಿರಸ್ಕರಿಸಿದ ತಮ್ಮ ಮೂಲರೂಪದ ನಿಯತಪತ್ನಿಯ ಸಂಕ್ಷಿಪ್ತ ಕಥೆಯಾಗಿದೆ.

ಈ ಕಥೆಯು ಮಹಾಭಾರತದ ಆದಿಪರ್ವದ ಸಂಭವಉಪಪರ್ವದಲ್ಲಿ ಸಂಕ್ಷೇಪ-ವಾಗಿಯೂ, ಉದ್ಯೋಗಪರ್ವದಲ್ಲಿ ವಿಸ್ತೃತವಾಗಿಯೂ ಬಂದಿದೆ ಎನ್ನುವುದು ವಿಶೇಷ. ಆದಿಪರ್ವದಲ್ಲಿ ಬಂದ ಈ ಕಥೆಯ ವ್ಯಾಪ್ತಿಯು ವಿವಿಧ ಪ್ರಕಾಶನಗಳಲ್ಲಿ ಬೇರೆ ಬೇರೆಯಾಗಿದೆ. ಇದನ್ನು ಪಟ್ಟಿ ರೂಪದಲ್ಲಿ ಕೊಡಲಾಗಿದೆ.

---

೧ ಮಮ ತ್ವೇತಚ್ಚರಾಸ್ತಾತ ಯಥಾವತ್ ಪ್ರತ್ಯವೇದಯನ್ ।
ಜಡಾಂಧ ಬಧಿರಾಕಾರಾ ಯೇ ಮುಕ್ತಾ ದ್ರುಪದೇ ಮಯಾ ॥
ಏವಮೇವ ಮಹಾರಾಜ ಸ್ತ್ರೀಪುಮಾನ್ ದ್ರುಪದಾತ್ಮಜಃ ।
ಸ ಸಂಭೂತಃ ಕುರುಶ್ರೇಷ್ಠ ಶಿಖಂಡೀ ರಥಿಸತ್ತಮಃ ॥
ನಾಹಮೇನಂ ಧನುಷ್ಪಾಣಿಂ ಯುಯುತ್ಸುಂ ಸಮುಪಸ್ಥಿತಮ್ ।
ಮುಹೂರ್ತಮಪಿ ಪಶ್ಯೇಯಂ ಪ್ರಹರೇಯಂ ನ ಚಾಪ್ಯುತ ॥
ವ್ರತಮೇತನ್ಮಮ ಸದಾ ಪೃಥಿವ್ಯಾಮಪಿ ವಿಶ್ರುತಮ್ ॥ -ಉದ್ಯೋಗಪರ್ವ(೧೯೪/೬೮-೭೨)
ಅತೋ ನೈವಂ ಹನಿಷ್ಯಾಮಿ ಸಮರೇಷ್ವಾತತಾಯಿನಮ್ ॥ - ೧೯೪/೭೬

ಶ್ರೀಮದಾಚಾರ್ಯರು ಈ ಉಪಾಖ್ಯಾನದ ತಿರುಳನ್ನು ಮಹಾಭಾರತತಾತ್ಪರ್ಯ-ನಿರ್ಣಯದ ೧೧ನೇ ಅಧ್ಯಾಯದಲ್ಲಿ ೫೨ ಶ್ಲೋಕಗಳಲ್ಲಿ ಸಂಗ್ರಹಿಸಿಕೊಟ್ಟು ಅನುಗ್ರಹಿಸಿದ್ದಾರೆ. ವಿವರಗಳಿಗೆ ನಾವು ಮೂಲಭಾರತವನ್ನು ನೋಡಬೇಕಾಗುತ್ತದೆ. ಆಚಾರ್ಯರ ಸಂಗ್ರಹಕೌಶಲ ಅತ್ಯಂತ ಮನನೀಯ, ಅಪೂರ್ವ.

## ಸಂದೇಶಗಳು - ವಿವರಣೆಗಳು

ಅಂಬೋಪಾಖ್ಯಾನವು ಅಷ್ಟವಸುಗಳಲ್ಲಿ ಒಬ್ಬರಾದ ದ್ಯು ಎಂಬ ವಸು ಹಾಗೂ ಆತನ ಹೆಂಡತಿ **ವರಾಂಗಿ**, ಇವರು ತಮ್ಮ ಮೂಲರೂಪದಲ್ಲಿದ್ದಾಗ ನಡೆದ ಒಂದು ಚಿಕ್ಕ ಘಟನೆಯು ಭೂಲೋಕದಲ್ಲಿ ಮುಂದುವರಿಯಲು ಕಾರಣವಾಗಿ, ಅನೇಕ ನಡೆನುಡಿಗಳ ಬಗ್ಗೆ ಮಾರ್ಗದರ್ಶಕವಾಗಿದೆ. ವರಾಂಗಿಯು ದೇವಲೋಕದಲ್ಲಿನ ವಸಿಷ್ಠರ ನಂದಿನಿ ಎಂಬ ಧೇನು(ಹಸು)ವನ್ನು ಅಪೇಕ್ಷೆ ಪಟ್ಟು ಅದನ್ನು ಬಂಧಿಸಿ ತಂದುಕೊಡಲು ಪ್ರಚೋದಿಸಿದಳು. ಪತಿ ದ್ಯು ತಾನು ಹಾಗೂ ಇತರ ಏಳು ವಸುಗಳೊಡನೆ ಧೇನುವನ್ನು ಬಂಧಿಸಿ ವಸಿಷ್ಠರ ಅಂತರ್ಯಾಮಿ ಬ್ರಹ್ಮದೇವರ ಆಗ್ರಹಕ್ಕೆ ಗುರಿಯಾಗಿ, ಶಾಪಗ್ರಸ್ತನಾದ. ಉಳಿದ ವಸುಗಳೂ ಆದರು ಎಂಬುದು ಭಾರತದ ಆದಿಪರ್ವದಲ್ಲಿ ಬಂದ ಕಥೆ (ಅಧ್ಯಾಯ-೯೭).

೧. ಹೆಂಡತಿಯ ಬೇಡಿಕೆಯ ಪರಿಣಾಮ ಲೆಕ್ಕಿಸದೆ ಕಾರ್ಯಾಚರಣೆ ಮಾಡಿದ ಫಲವಾಗಿ ಮನುಷ್ಯನಾಗುವ ಶಾಪ ಬಂತು. ಮುಖ್ಯ ತಪ್ಪು ಮಾಡಿದ್ದು ಪತ್ನಿ. ಗಂಡನನ್ನು ಅಧರ್ಮಮಾರ್ಗದಲ್ಲಿ ಕಳ್ಳತನ (ಚೌರ್ಯ-ಗೋಚೌರ್ಯ) ಮಾಡಲು ಪ್ರೇರೇಪಿಸಿದ್ದು. ಆದ್ದರಿಂದ **ಹೆಂಡತಿ ಬೇಡಿದ್ದೆಲ್ಲವನ್ನು ಯಾಂತ್ರಿಕವಾಗಿ ಪೂರೈಸುವುದು ಅಧರ್ಮಕ್ಕೆ ಕಾರಣವಾಗುತ್ತದೆ. ದೊಡ್ಡವರ ದ್ರೋಹಕ್ಕೆ ಕಾರಣವಾಗುತ್ತದೆ. ಅದು ಕೂಡದು.**

೨. ಇತರ ವಸುಗಳು ಅದಕ್ಕೆ ಸಹಕರಿಸಿದ್ದೂ ತಪ್ಪು. **ಸ್ನೇಹಿತರು ಮಾಡುವ ಅಪರಾಧದಲ್ಲಿ ಭಾಗಿಯಾಗಬಾರದು.** ಅದರ ಪರಿಣಾಮ ವಸುಗಳೆಲ್ಲ ಮನುಷ್ಯರಾಗಿ ಹುಟ್ಟಬೇಕಾಯಿತು.

೩.. ಪ್ರಧಾನ ಅಪರಾಧಿ ದ್ಯುವಸುವಿಗೆ ಎಂಟೂ ವಸುಗಳ ಜನ್ಮ-ಮರಣಗಳ ನೋವು ಅನುಭವಿಸಬೇಕಾಯಿತು. **ಅಪರಾಧಕ್ಕೆ ತಕ್ಕಂತೆ ಶಿಕ್ಷೆ ಇದ್ದೇ ಇರುತ್ತದೆ.**

೪. ವರಾಂಗಿಯದು ಅಧರ್ಮಪ್ರೇರಣೆ. ಪರಿಣಾಮ ಮನುಷ್ಯಜನ್ಮದಲ್ಲಿ ಪತಿಯಿಂದ ವಿಯೋಗ. ಆತನೊಡನೆ ವಿವಾದ, ದ್ವೇಷ, ಮರಣಕ್ಕೆ ಕಾರಣವಾಗುವ ಸಾಧನೆಗೆ ಕಾರಣ. ಇದೆಲ್ಲ ಅಧರ್ಮ ಪ್ರೇರಣೆಯಿಂದ ಆಯಿತು. **ಅಧರ್ಮ ಪ್ರೇರಣೆಯ ಪರಿಣಾಮದ ಬಗ್ಗೆ ಎಲ್ಲರಿಗೂ ಎಚ್ಚರಿಕೆ ಇರಬೇಕು. ತನ್ನ ನಿಯತ ಪತ್ನಿ/ಪತಿಯರ ಮಧ್ಯೆ ದ್ವೇಷಕ್ಕೆ ಕಾರಣವಾಯಿತು.**

೫. ಅಂಬೆಯಾಗಿ ವರಾಂಗಿಯ ಅವತಾರ. ಎಲ್ಲ ದೇವತೆಗಳು ಭಗವತ್‌ಸೇವೆಗಾಗಿ ಅವತರಿಸಿದರೆ ಅಂಬೆಯದು ಕೇವಲ ಪತಿದ್ರೋಹದಲ್ಲಿ ಪರ್ಯವಸಾನವಾಯಿತು.

೬. ನಿಯತಪತಿಯನ್ನು ಬಿಟ್ಟು ಸಾಲ್ವನಂಥ **ದೈತ್ಯನನ್ನು ಪತಿಯಾಗಬಯಸುವ** ಮತ್ತೊಂದು ಪಾಪ ಮಾಡಿದಳು ಅಂಬೆ. **ಇದು ಅಧರ್ಮಪ್ರಚೋದನೆಯ ಮತ್ತೊಂದು ಪರಿಣಾಮ ಮಹಾದುರಂತ.**

೭. ವೃದ್ಧರಾದ ಭೀಷ್ಮರನ್ನು **ತಪ್ಪಾಗಿ ತಿಳಿದು ಅವರಲ್ಲಿ ದ್ವೇಷದ ಅಂಕುರಕ್ಕೆ ತಾನೇ ಕಾರಣವಾದಳು.** ಏಕೆಂದರೆ, ಭೀಷ್ಮರು ಸ್ವಯಂವರಕ್ಕೆ ಬಂದುದು ತನ್ನ ಸೋದರನ ಸಲುವಾಗಿ. ಇದು ಅಂಬೆಗೆ ಗೊತ್ತಾಗಿತ್ತು.

೮. ಕನ್ಯಾಪಹಾರ ವಿವಾಹದ ಪ್ರಕಾರಗಳಲ್ಲಿ ಒಂದು. ಅದು ಪ್ರಚಲಿತವಾಗಿತ್ತು ಆಗ. ಅದನ್ನೇ ನೆಪಮಾಡಿ ಭೀಷ್ಮರನ್ನು ಮದುವೆ ಮಾಡಿಕೊಳ್ಳಲು ಸಲ್ಲದ ಒತ್ತಾಯ.

**ಇವೆಲ್ಲ ತಪ್ಪು ತಿಳುವಳಿಕೆ (ಮಿಥ್ಯಾಜ್ಞಾನ) ಯಿಂದ ಆದ ಅನರ್ಥಗಳು.**

೯. ತಾನು ದೇವತೆಯಾಗಿದ್ದರೂ, ಅಧರ್ಮ ಪ್ರೇರಕಳಾಗಿ ತನ್ನತನವನ್ನೇ ಮರೆಮಾಚಿ ಕೊಂಡಳು. ಆದ್ದರಿಂದಲೇ ಸಾಲ್ವನನ್ನು ಪ್ರೀತಿಸಿ ಮತ್ತೆ ಮತ್ತೆ ಹೋಗಿ ಬೇಡಿ ಬಂದು ಪಾಪದ ಸರಮಾಲೆ ಮಾಡಿಕೊಂಡಳು.

೧೦ ಭೀಷ್ಮರು ಎಷ್ಟೇ ಹೇಳಿದರೂ (ಆಜನ್ಮ ಬ್ರಹ್ಮಚಾರಿ) ಎಂದು ಒಪ್ಪದೆ ಅವರನ್ನು ಪೀಡಿಸಿದ್ದು ಸ್ವೋತ್ತಮ ಅಪರಾಧದಲ್ಲಿ ಪರಿಣಮಿಸಿತು.

೧೧. ಪರಶುರಾಮದೇವರನ್ನೂ ಬಿಡದೆ ಮಾತಿನಲ್ಲಿ ಸಿಕ್ಕಿಸಲು ಪ್ರಯತ್ನಿಸಿದ್ದು ಅಧರ್ಮ ಬುದ್ಧಿಯ ಫಲ. ಆದರೆ ಭಗವಂತನ ಮಾಯೆ ಯಾರನ್ನೂ ಬಂಧಿಸದೇ ಬಿಡದು. ನನ್ನ ಕೈಲಾಗಲಿಲ್ಲ ಎಂದು ರಾಮ ಹೇಳಿದರೆ ಒಪ್ಪೇ ಬಿಡುತ್ತಾಳೆ. **ಭಗವಂತನಿಗೆ ಎಲ್ಲಿಯ ಅಶಕ್ಯಾದಿಗಳು.**

೧೨. ಭೀಷ್ಮರು ನೂರಾರು ವರ್ಷ ಪರಶುರಾಮದೇವರಲ್ಲಿ ಓದಿದರೂ ಶಿಷ್ಯನ ಕರ್ತವ್ಯವನ್ನೇ ಮರೆತು, ಅವರ ಆದೇಶ ಪಾಲಿಸಲಿಲ್ಲ. ಶಿಷ್ಯರ ನಿಜವಾದ ಧರ್ಮ ಗುರ್ವಾಜ್ಞೆಯನ್ನು ಪಾಲಿಸುವುದು. **ಗುರ್ವಾಜ್ಞೆಗಿಂತ ಅವರ ಬ್ರಹ್ಮಚರ್ಯವೇ ಭೀಷ್ಮರಿಗೆ ಮಿಗಿಲಾಯಿತು.**

೧೩. ಭೀಷ್ಮರು ಗುರುಗಳಾದ ಪರಶುರಾಮದೇವರ ಬಗ್ಗೆ ಆಡಿದ ಮಾತುಗಳು ಆಶ್ಚರ್ಯವುಂಟು ಮಾಡುತ್ತವೆ. ಇವರು ಶಿಷ್ಯರಾ? ಎಂಬ ಸಂದೇಹ ಬರುತ್ತದೆ. ಗುರುಗಳು ಇಲ್ಲಿ ದೇವರೇ. ಭೀಷ್ಮರ ಪಾಲಿಗೆ ಕಾರ್ಯಾಕಾರ್ಯ ವಿವೇಕವಿಲ್ಲದವರಾಗಿದ್ದಾರೆ. ಅವರನ್ನು ಶಾಸನಕ್ಕೆ, ಶಿಕ್ಷೆಗೆ ಒಳಪಡಿಸಲು ಭೀಷ್ಮರು ನಿರ್ಧರಿಸುವುದು ತುಂಬಾ ಆತ್ಮಘಾತಕವಾದ.

ಹಾಗೆಂದು ಮಾಡಕೂಡದು. **ಗುರುಗಳು ಹೇಗೇ ಇದ್ದರೂ ಮಾನ್ಯರು. ಅವರೇ ತಪ್ಪು ಮಾಡಿದ್ದರೂ ಶಾಸನ ಮಾಡುವಂತಹ ಕೆಟ್ಟ ನಿರ್ಧಾರ ತೆಗೆದುಕೊಳ್ಳುವುದು ಆತ್ಮಘಾತಕ.**

೧೪. ಅಂಬೆ ಯಾರ ಮಾತನ್ನೂ ಕೇಳಲಿಲ್ಲ. ತನ್ನ ಹಠ ಬಿಡಲಿಲ್ಲ. **ತನ್ನ ತಂದೆಗೂ ಎಲ್ಲ ಹೇಳಿ ತನ್ನ ಸಮಸ್ಯೆ ಬಗೆಹರಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ಹಾಗೆ ಪ್ರಯತ್ನ ಮಾಡಬಹುದಿತ್ತು.**

೧೫. ಅಂಬೆ ತಾನೇ ತಪ್ಪು ಮಾಡಿ, ಅದನ್ನು ಭೀಷ್ಮರ ಮೇಲೆ ಹಾಕಿ, ಅವರ ಮರಣಕ್ಕಾಗಿ ಅನೇಕ ವರ್ಷ ತಪಸ್ಸು ಮಾಡಿದ್ದು ಪತಿದ್ರೋಹ, ಸ್ವೋತ್ತಮದ್ರೋಹದ ಪರಾಕಾಷ್ಠೆ ಆಕೆಯದೂ ಅವಿವೇಕದ ಪರಮಾವಧಿ ಎನ್ನದೇ ವಿಧಿಯಿಲ್ಲ. **ಪತಿಯನ್ನು ದೇವರೆಂಬುದಾಗಿ ಭಾವಿಸುವುದೆಲ್ಲಿ? ಆತನನ್ನು ಸಂಹಾರ ಮಾಡುವ ಪ್ರಯತ್ನ ಮಾಡುವುದೆಲ್ಲಿ?**

೧೬. ದ್ರುಪದ ದಂಪತಿಗಳಿಗೆ ತನ್ನಿಂದ ಕಂಟಕ ಬಂತೆಂದು ಅಂಬೆ ಮನೆಬಿಟ್ಟು ಹೋದುದು, ಸ್ಥೂಣಾಕರ್ಣನಿಂದ ಶರೀರ ವಿನಿಮಯ ಮಾಡಿಕೊಂಡು ಬಂದುದು ಶ್ಲಾಘನೀಯ. **ತಂದೆ ತಾಯಿಗಳಿಗೆ ತೊಂದರೆಯಾದಾಗ ಮಕ್ಕಳು ತಮ್ಮ ಕೈಲಾದ ಪ್ರಯತ್ನ ಮಾಡುವುದು ನ್ಯಾಯೋಚಿತ ಹಾಗೂ ಧಾರ್ಮಿಕ ಕೂಡಾ.**

೧೭. ದ್ರುಪದ ದಂಪತಿಗಳು ತಮಗೆ ಹೆಣ್ಣುಮಗಳು ಹುಟ್ಟಿದರೂ ರುದ್ರದೇವರ ವರವನ್ನು ನಂಬಿದ್ದು ತುಂಬಾ ಪ್ರಶಂಸನೀಯ. **ದೇವತೆಗಳ ಮಾತು ಎಂದೂ ತಪ್ಪಾಗದು.** ಅವರನ್ನು **ನಂಬುವುದು** ಎಲ್ಲರ ಕರ್ತವ್ಯ; ವಿಶೇಷವಾಗಿ ವರ ಪಡೆದವರು.

೧೮. ತಾನು ಎಷ್ಟೇ ಧರ್ಮಿಷ್ಠನಾಗಿದ್ದರೂ ತನ್ನ ಸಂಹಾರಕ್ಕಾಗಿ ಪ್ರಯತ್ನಿಸುತ್ತಿದ್ದ ಅಂಬೆಯ ಬಗ್ಗೆ ಭೀಷ್ಮರಿಗೆ ವ್ಯಥೆ ಸ್ವಾಭಾವಿಕ. **ಸಾತ್ವಿಕರು ಧರ್ಮ ಎಂದೂ ಬಿಡಬಾರದು.** ಭೀಷ್ಮರು ಧರ್ಮ ಬಿಡಲಿಲ್ಲ.

೧೯. ಅವರದು ಒಂದೆಡೆ ಅಖಂಡ ಬ್ರಹ್ಮಚರ್ಯವ್ರತ, ಇನ್ನೊಂದೆಡೆ ಕ್ಷಾತ್ರಧರ್ಮವ್ರತ. ಎರಡೂ ಸರಿಯೇ. ಆದರೆ ಭಗವಂತನ ಆದೇಶಕ್ಕೆ ಬೆಲೆ ಕೊಡದೆ ಕ್ಷತ್ರಧರ್ಮವೇ ಮುಖ್ಯವೆಂದು ಬಗೆದದ್ದು ಸರಿಯಲ್ಲ. ಭೀಮನಿಗೆ ವ್ಯಾಸರು ಹಿಡಂಬಿಯನ್ನು ವಿವಾಹವಾಗೆನ್ನಲು ಕೂಡಲೇ ಮದುವೆಯಾದರು. **ಭಗವದಾಜ್ಞೆಗೆ ಭೀಮನದು ಆದ್ಯತೆ, ಉಳಿದೆಲ್ಲ ಗೌಣ.**

೨೦. ಭೀಷ್ಮರು ತ್ಯಾಗಿಗಳು. ಮೊದಲು ತಂದೆಯ ವಿವಾಹಕ್ಕಾಗಿ ತಮ್ಮ ವಿವಾಹಾದಿಗಳನ್ನು ರಾಜ್ಯವನ್ನೂ ತ್ಯಾಗ ಮಾಡಿದರು. ನಂತರ ಚಿತ್ರಾಂಗದ, ವಿಚಿತ್ರವೀರ್ಯರ ಸಲುವಾಗಿ ರಾಜ್ಯದ ಎಲ್ಲ ಜವಾಬ್ದಾರಿ ವಹಿಸಿದ್ದರು. ಅಧಿಕಾರ, ಐಶ್ವರ್ಯಭೋಗಗಳನ್ನು ಎಂದೂ ಬಯಸಲಿಲ್ಲ. ವಿಚಿತ್ರವೀರ್ಯ ಮರಣಹೊಂದಿದ ಮೇಲೂ ರಾಜನಾಗ ಬಯಸಲಿಲ್ಲ, ವಿವಾಹವಾಗಲಿಲ್ಲ, ತಾಯಿಸೇವೆ, ರಾಜ್ಯಸೇವೆ ಬಿಡಲಿಲ್ಲ. ಹೀಗೆ **ಭೀಷ್ಮರದು ತ್ಯಾಗಮಯಿ ಜೀವನ. ಹಾಗೆಯೇ ಎಲ್ಲರಿಗೂ ತ್ಯಾಗದ ಸಂದೇಶ ಭೀಷ್ಮರದು.**

೨೧. ಅತೀಭೋಗದಿಂದ ವಿಚಿತ್ರವೀರ್ಯ ಕ್ಷಯರೋಗದಿಂದ ಮರಣಹೊಂದಿದ. ಜೀವನದುದ್ದಕ್ಕೂ ತ್ಯಾಗದಿಂದ ಭೀಷ್ಮರು ಶರಪಂಜರದಲ್ಲಿದ್ದರೂ ಶಾಸ್ತ್ರ-ಉಪದೇಶದ ಅವಕಾಶ ಪಡೆದರು. ಕೃಷ್ಣನಿಂದ ತ್ಯಾಗದಿಂದಲೇ ಶಾಂತಿ, ನೆಮ್ಮದಿ, ದೇವರ ಅನುಗ್ರಹ.

೨೨. ಬರೀ ಶಾಸ್ತ್ರಾಧ್ಯಯನ ಮಾಡಿದ ಮಟ್ಟಿಗೆ ಅದನ್ನು ಆಚರಿಸುತ್ತಾರೆ ಎಂದೇನಿಲ್ಲ. ಭಗವದ್ಭಕ್ತಿಯ ಪಾರಮ್ಯವನ್ನೂ ನಿರೀಕ್ಷಿಸುವಂತಿಲ್ಲ. ಭೀಷ್ಮರು ನೂರಾರುವರ್ಷ ಅಧ್ಯಯನವನ್ನು ಪರಶುರಾಮರಲ್ಲಿಯೇ ಮಾಡಿದರೂ, ಅವರಿಗೂ, ಕೃಷ್ಣನ ಮಾತಿಗೆ ಬೆಲೆ ಕೊಡಲಿಲ್ಲ. **ಅನೇಕ ವೇಳೆ ಆದ್ದರಿಂದ ಶಾಸ್ತ್ರಾಧ್ಯಯನದ ಅವಧಿಗಿಂತ ಅದೆಷ್ಟು ಆಚರಣೆಗೆ ಬಂದಿದೆ ಎನ್ನುವುದು ಮುಖ್ಯ.**

೨೩. ಗುರುಗಳು ತಪ್ಪು ಮಾಡಿದಾಗಲೂ ಅವರನ್ನು ದೈಹಿಕವಲಿಗಿ ದಂಡಿಸುವುದು ಮಹಾಪರಾಧ. ಅಂತಹ ಪ್ರಸಂಗದಲ್ಲಿ ಅಂತಹ ದುಷ್ಟಗುರುಗಳಿಂದ ದೂರವಿರುವುದೇ ಲೇಸು ಎಂದು ತೋರುತ್ತದೆ. ಆದರೆ ಅವರ ನಿಲುವುಗಳನ್ನು ಕೇವಲ ಮಾತಿನಿಂದ ವಿರೋಧಿಸುವ ಅವಕಾಶವನ್ನು ಧರ್ಮರಾಜನ ಬಗ್ಗೆ ಭೀಮನು ತೋರಿಸಿದುದ್ದನ್ನು ನಿರ್ಣಯದಲ್ಲಿ ವನಪರ್ವದ ದ್ಯೂತಪ್ರಸಂಗದಲ್ಲಿ ನೋಡಬಹುದು[೧].

ಧರ್ಮರಾಜನನ್ನು ಕೇವಲ ಮಾತಿನಿಂದ ವಿರೋಧಿಸಿ ಮುಂದೆ ಉಪದೇಶವನ್ನು ಮಾಡುತ್ತಾನೆ ತಮ್ಮನಾದ ಭೀಮ.

ದ್ಯೂತಮಾಡಿ ರಾಜ್ಯ, ಕೋಶ, ಮಾನ ಎಲ್ಲವನ್ನೂ ಕಳೆದುಕೊಂಡ ಧರ್ಮರಾಜನನ್ನು ಕ್ಷತ್ರಿಧರ್ಮಪರಿಪಾಲನೆಕ್ಷತ್ರಿಯನಾದಧರ್ಮರಾಜನಿಗೆವಿಹಿತವೆಂದುಭೀಮ-ದ್ರೌಪದಿಯರು ಪ್ರತಿಪಾದಿಸಿ ಅಣ್ಣನಿಗೆ ತಮ್ಮನಾದ ಭೀಮನು ಪ್ರತಿಪಾದಿಸಿದ್ದೂ ಪತ್ನಿಯಾದ ದ್ರೌಪದಿಯು ಹೇಳಿದ್ದೂ **ಹಿರಿಯರು ಮಾಡಿದ ತಪ್ಪುಗಳನ್ನು ಅವರ ಗಮನಕ್ಕೆ ತರುವ ಮಟ್ಟಿಗೆ. ಆದರಿಂದ ಕಾರ್ಯವಾಗುವ ಭರವಸೆ ಸಿಗುವಂತೆ ಕಿರಿಯರು ಮಾಡಬೇಕು ಎಂಬ ಸಂದೇಶ ಇಲ್ಲಿದೆ.**

೨೪. ಭೀಷ್ಮರಾಗುವ ಮೊದಲು ದೇವವ್ರತನು ಪರಶುರಾಮರಲ್ಲಿ ಒಟ್ಟಾರೆ ೪೨೫ ವರ್ಷಗಳ ಕಾಲ ತತ್ತ್ವಶ್ರವಣ ಹಾಗೂ ಶಾಸ್ತ್ರಾಧ್ಯಯನವನ್ನು ಮಾಡಿ, ಅವರ ಅನುಗ್ರಹ ಪಡೆದಿದ್ದನು. ಪರಶುರಾಮರು ದೇವರೆಂಬ ಕಲ್ಪನೆ ಭೀಷ್ಮರಿಗೆ ಇದ್ದೇ ಇತ್ತು. ಅವರ ಆಧ್ಯಾತ್ಮಿಕ ಸಂಬಂಧ ತುಂಬಾ ಆಳವಾಗಿಯೇ ಇತ್ತು. ಭೀಷ್ಮರು ಯುದ್ಧಕ್ಕೆ ಆಹ್ವಾನಿಸಿದರೂ, ಪರಶುರಾಮರು ಒಪ್ಪಿ ಯುದ್ಧ ಮಾಡಿಯೂ ಅನುಗ್ರಹ ಮಾಡಿದರು. ತುಂಬಾ ಸಂತೋಷಪಟ್ಟರು. '**ಶಿಷ್ಯಾದಿಚ್ಛೇತ್ ಪರಾಜಯಂ**' ಎಂಬ ನಾಣ್ಣುಡಿಯನ್ನು ಇಲ್ಲಿ ಮೂರ್ತಿವತ್ತಾಗಿ ನೋಡಬಹುದು. ತನ್ನ ಶಿಷ್ಯ ತನ್ನನ್ನು ಎಂದೂ ಮೀರಿಸಬಾರದೆಂದು ಎಂದೂ ಪರಶುರಾಮರು ಬಯಸಲಿಲ್ಲ.

---

೧ ಉತ್ತಮೇ ವಚಸಾ ಶಿಕ್ಷಾ ಮಧ್ಯಮೇಽರ್ಥಾಪಹಾರಣಮ್ ।
ಅಧಮೇ ದೇಹದಂಡಶ್ಚ ತಸ್ಮಾದ್ವಾಚ್ಯೋ ಯುಧಿಷ್ಠಿರಃ ॥ - ಮ.ತಾ.ನಿ.(೨೧/೩೩೫,೩೩೬)

ತಾನೇ ಸೋತಂತೆ ಜಗತ್ತಿಗೆ ತೋರಿದ ಪರಶುರಾಮರ ಮಾಯೆ (ದೇವಮಾಯೆ) ಯಾರಿಗೂ ತಿಳಿಯದು. ತನ್ನ ಶಿಷ್ಯನು ತಾನು ಕಲಿಸಿದ ವಿದ್ಯೆಯನ್ನು ಪೂರ್ಣವಾಗಿ ತನ್ನ ಮೇಲೆ ಪ್ರಯೋಗಿಸಿದ ಏಕಮೇವ ದಾಖಲೆ ಇದು. ಜಗತ್ತಿಗೆ ಇದೊಂದು ದೊಡ್ಡ ನೀತಿ. ಗುರುಸ್ಥಾನದಂತಹ ಉನ್ನತಸ್ಥಾನದಲ್ಲಿರುವವರು ತಮ್ಮ ಸೇವಕರನ್ನು, ಶಿಷ್ಯರನ್ನು, ನೌಕರರನ್ನು ಹೇಗೆ ನಡೆಸಿಕೊಳ್ಳಬೇಕೆಂಬ ಬಗ್ಗೆ ಇದೊಂದು ದೊಡ್ಡ ಪಾಠ. ಭೀಷ್ಮರದೂ ಸೀಮಿತ ದೃಷ್ಟಿಯಲ್ಲಿ ನಿಸ್ವಾರ್ಥ ಜೀವನ. ಅಖಂಡ ಬ್ರಹ್ಮಚರ್ಯೆಯ ಸಾಧನೆಗಾಗಿ ದೇವರ ವಿರೋಧವನ್ನೂ ಕಟ್ಟಿ ಕೊಂಡರು. ಅಂಬೆಯಂತೆ ಅವರಿಗೆ ದ್ವೇಷಭಾವನೆ ಇರಲಿಲ್ಲ (ತನ್ನ ನಿಯತ ಪತ್ನಿಯ ಬಗ್ಗೆ). ಆದರೆ ಆಕೆ ಮೂಲರೂಪದಲ್ಲೂ ಗಂಡನನ್ನು ಹಾದಿ ತಪ್ಪಿಸಿದಳು. ಅವತಾರರೂಪದಲ್ಲೂ ಪತಿಯ ದ್ವೇಷ ಕಟ್ಟಿಕೊಂಡು ಸಾಧಿಸಿದಳು.

ಪರಶುರಾಮರಲ್ಲಿ ಕಾಣುವುದು ಭೀಷ್ಮರ ಬಗ್ಗೆ, ಶಿಷ್ಯನ ಬಗ್ಗೆ ಮಹಾಕಾರುಣ್ಯ. '**ನ ಚಾಂಬಾ ಗ್ರಾಹಯಾಮಾಸ ಭೀಷ್ಮಕಾರುಣ್ಯ ಯಂತ್ರಿತಃ**'. ಅಲ್ಲದೆ ಶಿಷ್ಯನು ಗುರುವನ್ನು ಗೆದ್ದ ಸೋಲಿಸಿದ ಎಂಬ ಮಹಾಕೀರ್ತಿಯನ್ನೂ ಕರುಣಿಸಿದ ಕಾರುಣ್ಯಪೂರ್ಣ ಮಹಾವಾತ್ಸಲ್ಯಮೂರ್ತಿ ಪರಶುರಾಮ. ತಾನು ಅನಂತಶಕ್ತಿವುಳ್ಳವನಾಗಿದ್ದರೂ ಭೀಷ್ಮನನ್ನು ಸೋಲಿಸಲಿಲ್ಲ. ಅಂಬೆಗೂ ಮುಂದೆ ಪತಿಯೋಗ ಕೊಡಿಸಿದ. ಪರಶುರಾಮರು ತಮ್ಮ ಈ ಕೃತಿಯಿಂದ ಒಂದೆಡೆ ಭೀಷ್ಮರಿಗೆ ಕೀರ್ತಿಕೊಟ್ಟು ಅಸುರರಿಗೆ ಮೋಹಗೊಳಿಸಿದ. ಅಂಬೆಗೂ ಮೋಹಗೊಳಿಸಿದ ಪರಶುರಾಮರು ಅಸಮರ್ಥರೆಂಬ ಭ್ರಾಂತಿ ಹುಟ್ಟಿಸಿದ. ಆದರೆ ಆಕೆಯು ಮಾಡಿದ ಪತಿದ್ವೇಷದಿಂದ ಬಂದ ಪಾಪವನ್ನು ಕಳೆಯದೆ ಬಿಡಲಿಲ್ಲ. ಆಕೆಯನ್ನು ಅನುಗ್ರಹಿಸಿದ. **ಭಗವಂತನ ಒಂದೇ ನಡೆ ಅನೇಕ ಪ್ರಮೇಯಗಳನ್ನು ತಿಳಿಸುತ್ತದೆ.**



# ದ್ರೋಣಪರ್ವ

## ಅಭಿಮನ್ಯುವಧಪರ್ವ

### ೬೨. ಅಕಂಪನೋಪಾಖ್ಯಾನ

ಏಕಾಂಗಿಯಾದ ಅಭಿಮನ್ಯುವನ್ನು ಕೌರವರು ವಿಶೇಷವಾಗಿ ದ್ರೋಣ, ಕರ್ಣ, ಕೃಪ, ಅಶ್ವತ್ಥಾಮ, ಶಲ್ಯ, ದುರ್ಯೋಧನ ಮೊದಲಾದ ಮಹಾರಥರು ಸೇರಿ ಸಂಹರಿಸಿದರು. ಕೊನೆಯ ಹಂತದಲ್ಲಿ ದುಃಶಾಸನನ ಮಗ ಹಾಗೂ ಅಭಿಮನ್ಯು ಪರಸ್ಪರ ಗದಾ ಪ್ರಹಾರ ಮಾಡಿಕೊಂಡ ಗದಾಭಿಘಾತದಿಂದ ಭೂಮಿಯ ಮೇಲೆ ಬಿದ್ದು ಪ್ರಾಣತ್ಯಾಗ ಮಾಡಿದರು. ಇದನ್ನು ಕೇಳಿ, ನೋಡಿದ ಧರ್ಮರಾಜನು ಪಲಾಯನ ಮಾಡುತ್ತಿದ್ದ ತನ್ನ ಸೈನ್ಯವನ್ನು ಸಮಾಧಾನ ಮಾಡಿದನಾದರೂ, ತಾನು ಮಾತ್ರ ತನ್ನ ಸೋದರ ಅರ್ಜುನನ ಕುಮಾರನ ವಧೆಯಿಂದ ತುಂಬಾ ದುಃಖದಿಂದ –

' ಈ ವಿಷಯವನ್ನು ಅರ್ಜುನನಿಗೆ ನಾನು ಹೇಗೆ ಹೇಳಲಿ? ತನ್ನ ಮಗನನ್ನು ಕಳೆದುಕೊಂಡ ಸುಭದ್ರಾರ್ಜುನರಿಗೆ ಹೇಗೆ ಸಮಾಧಾನ ಮಾಡಲಿ? ನನ್ನ ಜಯವನ್ನು ಬಯಸಿ ಸ್ವಾರ್ಥಕ್ಕಾಗಿ ಅಭಿಮನ್ಯುವನ್ನು ತಳ್ಳಿದೆ. ಯಾವ ಬಾಲಕನನ್ನು ನಾವಿನ್ನೂ ಭಕ್ಷ್ಯ, ಭೋಜ್ಯ, ವಸ್ತ್ರ ವಿಭೂಷಣ, ಆಭರಣಾದಿಗಳಿಂದ ಪುರಸ್ಕರಿಸಿ ಬೆಳಸಬೇಕಿತ್ತೋ ಅಂತಹ ಬಾಲಕನಾದ , ಯುದ್ಧದಲ್ಲಿ ಪ್ರೌಢಿಮೆ ಇಲ್ಲದ ಅಭಿಮನ್ಯುವನ್ನು ಕೊಲ್ಲಿಸಿದೆನಲ್ಲ' ಎಂದು ಮುಂತಾಗಿ ಶೋಕಿಸುತ್ತಾ, ಇಂತಹ ನನಗೆ ಮುಂದೆ ಬರಬಹುದಾದ ಜಯವಾಗಲಿ, ರಾಜ್ಯವಾಗಲಿ, ದೇವತ್ವ, ಸಾಲೋಕ್ಯಾದಿಗಳಾವುವು ಸಂತೋಷ ಕೊಡಲಾರವು ಎಂದು ವಿಲಾಪ ಮಾಡುತ್ತಿರಲು ಶ್ರೀವೇದವ್ಯಾಸರು ಅಲ್ಲಿ ಪ್ರಾದುರ್ಭೂತರಾದರು.

ಅವರನ್ನು ಯಥೋಚಿತವಾಗಿ ಸತ್ಕರಿಸಿ, ಬಾಲಕನೂ, ಆದರೂ ಬಾಲಕರನ್ನೂ ಮೀರಿದ ಬುದ್ಧಿಯುಳ್ಳ ಅಭಿಮನ್ಯುವು ಹತನಾದ ವಿಷಯವನ್ನು ಯುದ್ಧಕ್ಕಾಗಿ ತಮಗೊಂದು ದ್ವಾರವನ್ನು (ಸೈನ್ಯದಲ್ಲಿ) ಮಾಡಿಕೊಡಲು ಹೇಳಿದೆ. ಆದರೆ ಸೈಂಧವನಿಂದ ತಡೆಯಲ್ಪಟ್ಟ ನಾನು ವ್ಯೂಹ ಪ್ರವೇಶಿಸದೆ ಈಗ ಅಭಿಮನ್ಯುವಿನ ಸಂಹಾರದಿಂದ ಬಹಳ ಸಂತಾಪವನ್ನು ಹೊಂದಿರುವೆ

ಎಂದು ದುಃಖ ತೋಡಿಕೊಂಡನು ಧರ್ಮರಾಜ. ಆಗ ವ್ಯಾಸರು ಧರ್ಮರಾಜನನ್ನು ಹೀಗೆ ಸಮಾಧಾನ ಮಾಡಿದರು. '

ಮಹಾಪ್ರಾಜ್ಞನಾದ ಧರ್ಮರಾಜನೇ! ಅಭಿಮನ್ಯುವು ಸಂಗ್ರಾಮದಲ್ಲಿ ಅನೇಕ ಶತ್ರುಗಳನ್ನು ಸಂಹರಿಸಿದ್ದಾನೆ. ತನ್ನ ವಯಸ್ಸಿಗೆ ಮೀರಿದ ಪರಾಕ್ರಮ ಮೆರೆದಿದ್ದಾನೆ. ರಣರಂಗದಲ್ಲಿಯೇ ಹತನಾಗಿ ಸ್ವರ್ಗ ಸೇರಿದ್ದಾನೆ. ಹೀಗಿರುವಾಗ ನಿನ್ನಂಥವರು ಇಂತಹ ಅನಿವಾರ್ಯವಾದ ವ್ಯಸನಪ್ರಸಂಗಗಳಲ್ಲಿ ವ್ಯಾಮೋಹಕ್ಕೆ ಒಳಗಾಗದೆ ಸ್ಥಿತಪ್ರಜ್ಞತೆಯನ್ನು ಮೆರೆಯಬೇಕು. ಸಾವು ಯಾರನ್ನೂ ಬಿಡದು. ಇದು ಸನಾತನ, ಶಾಶ್ವತ ಸತ್ಯ. ದೇವದಾನವಗಂಧರ್ವರೂ ಮೃತ್ಯುವನ್ನು ಹೊಂದುತ್ತಾರೆ. ಹೀಗಿರುವಾಗ ಮನುಷ್ಯರ ಪಾಡೇನು? ವೀರಕ್ಷತ್ರಿಯನಾಗಿ ಯುದ್ಧದಲ್ಲಿ ಮಡಿದ ಅಭಿಮನ್ಯುವಿನ ಬಗ್ಗೆ ಶೋಕಿಸಬೇಡ' ಎಂದು ಹೇಳಿದರು[೧].

ಇದಕ್ಕೆ ಧರ್ಮರಾಜನು 'ತಾತ! ಈ ಯುದ್ಧಭೂಮಿಯಲ್ಲಿ ಮೃತರೆಂದು ಮಲಗಿದವರಿವರೆಲ್ಲ ಮಹಾಪ್ರತಾಪಶಾಲಿಗಳು. ದಶಸಹಸ್ರ ಆನೆಬಲವುಳ್ಳವರು. ತಾವು ಗೆಲ್ಲಲೇ ಬೇಕೆಂಬ ಬಯಕೆಯಿಂದ ಬಂದವರಾದರೂ, ಆಯುಷ್ಯ ಕಳೆದುಕೊಂಡು ಮೃತರಾಗಿ ಮಲಗಿದ್ದಾರೆ. ಈ ವಿಷಯದಲ್ಲಿ ನನ್ನ ಸಂಶಯವೇನೆಂದರೆ, **ಮೃತರು** ಎಂಬ ಹೆಸರು ಇವರಿಗೆ ಹೇಗೆ ತಾನೇ ಬರುತ್ತದೆ? ಮೃತ್ಯು ಯಾರಿಗೆ? ಮೃತ್ಯು ಯಾವ ಕಾರಣಕ್ಕಾಗಿ ಈ ಪ್ರಜೆಗಳನ್ನು ಕರೆದುಕೊಂಡು ಹೋಗುತ್ತಾನೆ? ದಯವಿಟ್ಟು ಹೇಳಿ' ಎಂದನು[೨].

ಇದಕ್ಕೆ ವ್ಯಾಸರು, **ನಾರದರು ಅಕಂಪನ** ರಾಜನಿಗೆ ಹೇಳಿದ ಇತಿಹಾಸವನ್ನು ಹೇಳಿದರು.

'ನೋಡು ಧರ್ಮರಾಜ! **ಇದೊಂದು ನಡೆದ ಘಟನೆ. ಇದರ ಶ್ರವಣದಿಂದ ಆಯುಷ್ಯವೃದ್ಧಿ, ಶೋಕಪರಿಹಾರ, ಧರ್ಮ** ಹಾಗೂ **ಬಲಪ್ರಾಪ್ತಿ, ಶತ್ರುನಾಶ, ಮಾಂಗಲ್ಯಪ್ರದ** ಹೀಗೆ ಇದು **ತುಂಬಾ ಪವಿತ್ರವಾದುದು**. ಈ ಕಥೆಯಲ್ಲಿ ಬರುವ ಅಕಂಪನನೂ ಪುತ್ರ ಮರಣದಿಂದ ದುಃಖಿತಪ್ತನಾಗಿದ್ದ. ನೀನೂ ಸ್ನೇಹಬಂಧನದಿಂದ ಉಂಟಾಗುವ ದುಃಖದಿಂದ ದೂರಾಗುವೆ (ಇದರ ಶ್ರವಣದಿಂದ). ಆ ಮೃತ್ಯುವಿನ ಉತ್ಪತ್ತಿಯ ಬಗ್ಗೆ ಹೇಳುತ್ತೇನೆ, ಈ

---

೧ ಯುಧಿಷ್ಠಿರ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ।
ವ್ಯಸನೇಷು ನ ಮುಹ್ಯಂತಿ ತ್ವಾದೃಶಾಃ ಪುರುಷರ್ಷಭ॥
ಸ್ವರ್ಗಮೇಷ ಗತಃ ಶೂರಃ ಶತ್ರೂನ್ ಹತ್ವಾ ರಣೇ ಬಹೂನ್।
ಅಬಾಲಸದೃಶಂ ಕರ್ಮ ಕೃತ್ವಾ ವೈ ಪುರುಷರ್ಷಭಃ॥
ಅನತಿಕ್ರಮಣೀಯೋ ಹಿ ವಿಧಿರೇಷ ಸನಾತನಃ।
ದೇವದಾನವಗಂಧರ್ವಾ ಮೃತ್ಯುಂ ಗಚ್ಛಂತಿ ಭಾರತ॥ - ದ್ರೋಣಪರ್ವ(೪೯/೧೦-೧೨)

೨ ತತ್ರ ಮೇ ಸಂಶಯಃ ಪ್ರಾಪ್ತಿಃ ಕುತಃ ಸಂಜ್ಞಾ ಮೃತಾ ಇತಿ।
ಕಸ್ಯ ಮೃತ್ಯುಃ ಕುತೋ ಮೃತ್ಯುಃ ಕೇನ ಮೃತ್ಯುರಿಮಾಃ ಪ್ರಜಾಃ॥
ಹರತ್ಯಮರಸಂಕಾಶ ತನ್ಮೇ ಬ್ರೂಹಿ ಪಿತಾಮಹ॥ - ದ್ರೋಣಪರ್ವ(೪೯/೧೯)

ಕಥೆಯ ಮೂಲಕ. ಈ ಕಥೆಯನ್ನು ನಿತ್ಯವೂ ಬೆಳಿಗ್ಗೆ, ಆಯುಷ್ಮಂತನಾದ ಪುತ್ರನನ್ನು, ರಾಜ್ಯ ಸಂಪತ್ತನ್ನು ಬಯಸುವವನು ಕೇಳಬೇಕು.

ಹಿಂದೆ **ಕೃತಯುಗದಲ್ಲಿ ಅಕಂಪನ**ನೆಂಬ ನೃಪನಿದ್ದನು. ಅವನು ಒಮ್ಮೆ ತನ್ನ ಶತ್ರುಗಳೊಡನೆ ಯುದ್ಧಮಾಡುತ್ತಾ ಅವರಿಂದ ಸೆರೆ ಹಿಡಿಯಲ್ಪಟ್ಟನು. ಅಕಂಪನ ಅವನ ಪುತ್ರ. ನಾರಾಯಣನಿಗೆ ಸದೃಶವಾದ ಕಾಂತಿಯುಳ್ಳವನು, ಅಸ್ತ್ರಶಸ್ತ್ರವೇತ್ತನೂ, ಮೇಧಾವಿಯೂ, ಇಂದ್ರನಿಗೆ ಬಲದಲ್ಲಿ ಸಮನಾಗಿಯೂ ಇದ್ದ ಅವನ ಹೆಸರು **ಹರಿ**. ಇವನು ಆ ಯುದ್ಧದಲ್ಲಿ ಶತ್ರುಗಳೊಡನೆ ತನ್ನ ಅಸ್ತ್ರಶಸ್ತ್ರಕೌಶಲ್ಯಗಳನ್ನು ತೋರಿಸುತ್ತಾ ಶತ್ರುಸೈನ್ಯವನ್ನು ಅವರಲ್ಲಿದ್ದ ಪದಾತಿ, ರಥ, ಗಜಾಶ್ವಗಳನ್ನು ಒಬ್ಬನೆ ಮರ್ದಿಸಿದನು. ಶತ್ರುಗಳ ಮಹಾಬಲವನ್ನು ನಾಶಮಾಡಿದನಾದರೂ ತಾನು ಕೊನೆಗೆ ಶುತ್ರುಗಳ ವಶನಾಗಿಬಿಟ್ಟ ಆ ಮೊದಲೇ ತನ್ನ ತಂದೆಯು ಶತ್ರುವಶನಾದುದನ್ನು, ಅಸಹಾಯಕ ಸ್ಥಿತಿಯಲ್ಲಿರುವುದನ್ನೂ ನೋಡಿ ಶತ್ರುಗಳ ಮಧ್ಯ ಏಕಾಂಗಿಯಾಗಿ ನುಗ್ಗಿ ಸಹಸ್ರಾರು ರಥಿಕರನ್ನು ಸಂಹರಿಸಿ, ತನ್ನ ತಂದೆಯನ್ನು ಶತ್ರುಗಳಿಂದ ಬಿಡಗಡೆಮಾಡಿಸಿ ಶತ್ರುಗಳ ಮಧ್ಯ ತಾನೊಬ್ಬನೇ ಯುದ್ಧ ಮಾಡುತ್ತಿರುವಾಗ ಅನೇಕ ರಥಿಗಳು ಅವನನ್ನು ಸುತ್ತುವರಿದು ಕೊಂದರು. ಹೀಗೆ ಅತ್ಯಂತ ಅಸಾಧ್ಯವಾದ ಯುದ್ಧವನ್ನು ಏಕಾಂಗಿಯಾಗಿ ಮಾಡಿ ಮಡಿದ ಮಗನನ್ನು ನೋಡಿ ಅಕಂಪನನು ಕ್ರುದ್ಧನಾಗಿ ಯುದ್ಧದಿಂದ ಹಿಂದಿರುಗಿ ಬಂದು ಮಗನ ಉತ್ತರಕ್ರಿಯೆಗಳನ್ನು ಮಾಡಿದನು. ಹಗಲೂ, ರಾತ್ರಿ ಮಗನ ಮರಣ ಅವನನ್ನು ಬಾಧಿಸಿತು. ಅವನ ವ್ಯಸನವನ್ನು ಜ್ಞಾನಿಗಳಾದ ನಾರದರು ತಿಳಿದು ಬಂದರು.

ಬಂದ ನಾರದರನ್ನು ಯಥೋಚಿತವಾಗಿ ಸತ್ಕರಿಸಿ ಅಕಂಪನನು ಮಡಿದ ಮಗನ ವೃತ್ತಾಂತವನ್ನು ಹೇಳಿ ಹೀಗೆ ಪ್ರಶ್ನಿಸಿದ. 'ಪ್ರಾಣಿಗಳು ಮೃತರಾಗುವರೆಂದು ಕೇಳಿದ್ದೇವೆ. (ಮೃತ್ಯುವು ಪ್ರಾಣಿಗಳನ್ನು ಮುತ್ತುತ್ತದೆ). ಬಲಿಷ್ಠವಾದ ಆ ಮೃತ್ಯು ಯಾರು? ಯಾವುದು? ಅದರ ಸ್ವರೂಪವೇನು? (ಅದರ ಪರಾಕ್ರಮ, ಬಲ, ಪೌರುಷಗಳೇನು?) ಇದನ್ನು ತಿಳಿಯಲಿಚ್ಛಿಸುತ್ತೇನೆ. ದಯವಿಟ್ಟು ಹೇಳಿರಿ'.

**ಕ ಏಷ ಬಲವಾನ್ ಮೃತ್ಯುಃ ಕಿಂ ವೀರ್ಯಬಲಪೌರುಷಃ। - ೪೯/೪೩**

ಆಗ ನಾರದರು ಅಕಂಪನನನ್ನು ಸಮಾಧಾನಿಸುವ ವಿಸ್ತಾರವಾದ ಆಖ್ಯಾನವನ್ನು ಹೇಳಿದರು.

'ರಾಜನ್! ಪಿತಾಮಹ ಚತುರ್ಮುಖಬ್ರಹ್ಮನು ಪ್ರಜೆಗಳನ್ನು ಸೃಷ್ಟಿ ಮಾಡಿದನಷ್ಟೇ. ಪ್ರಪಂಚದಲ್ಲಿ ಸೃಷ್ಟಿ ಅವ್ಯಾಹತವಾಗಿ ಬೆಳೆಯುತ್ತಾ ಹೋಯಿತು, ಹೊರತು ಅವುಗಳಿಗೆ ಕೊನೆ ಕಾಣಲಿಲ್ಲ (ನಾಶ). ಇದರಿಂದ ಚಿಂತಾಕ್ರಾಂತನಾದ ಬ್ರಹ್ಮನಿಗೆ ರೋಷವುಂಟಾದಾಗ ಅವನ ಮುಖದಿಂದ ಅಗ್ನಿ ಉತ್ಪನ್ನವಾಗಿ ಎಲ್ಲ ದಿಕ್ಕುಗಳ ದೇಶಗಳೂ ಅಗ್ನಿಯಿಂದ ಆವೃತವಾಯಿತು. ಆಗ ಭೂಮಿ ಸ್ವರ್ಗ ಲೋಕಗಳೆಲ್ಲ ಅಗ್ನಿಜ್ವಾಲೆಯಿಂದ ಆವೃತವಾಯಿತು. ಚರಾಚರಜಗತ್ತೆಲ್ಲ

ಅಗ್ನಿಗೆ ಆಹುತಿಯಾಯಿತು. ಇದನ್ನು ಕಂಡ ಶಿವನು ಬ್ರಹ್ಮನಿಗೆ ಶರಣಾಗಿ ಜಗದ್ಧಿತಕ್ಕಾಗಿ ನೀವೇ ಸೃಷ್ಟಿಮಾಡಿದ ಜಗತ್ತು ನಿನ್ನ ಕೋಪಾಗ್ನಿಯಿಂದ ನಾಶವಾಗುತ್ತಿದೆ. ಅದರಿಂದ ಪ್ರಜೆಗಳ ಬಗ್ಗೆ ನಿನ್ನ ಕರುಣೆಯಿಂದ ಅವರನ್ನು ಕೊಲ್ಲಬೇಡವೆಂದು ಬೇಡುವೆ ಎಂದ. ಅದಕ್ಕೆ ಬ್ರಹ್ಮದೇವನು ನನಗೇನೂ ಆ ಉದ್ದೇಶವಿಲ್ಲ. ಭೂದೇವಿಯ ಪ್ರೇರಣೆಯಿಂದ ನನಗೆ ಕೋಪ ಉಂಟಾಯಿತು ಎಂದ. ನಂತರ ಬ್ರಹ್ಮದೇವನು ತನ್ನ ಕೋಪಾಗ್ನಿಯನ್ನು ತನ್ನಲ್ಲಿಯೇ ವಾಪಸು ಪಡೆದ. ಜಗತ್ತಿಗೆ ಪ್ರವೃತ್ತಿ ಹಾಗೂ ನಿವೃತ್ತಿ ಮಾರ್ಗಗಳನ್ನು (ಸಕಾಮ-ನಿಷ್ಕಾಮ ಕರ್ಮಗಳನ್ನು) ಉಪದೇಶಿಸಿದನು.

ಹೀಗೆ ಒಂದು ಕಡೆ ಅಗ್ನಿ ಶಮನವಾದರೂ, ಬ್ರಹ್ಮನ ಸರ್ವಾವಯವಗಳಿಂದ (ಇಂದ್ರಿಯ) ಒಬ್ಬ ಸ್ತ್ರೀಯು ಉದಿಸಿದಳು. ದಕ್ಷಿಣದಿಕ್ಕನ್ನು ಆಶ್ರಯಿಸಿದಳು. ಆಕೆಯನ್ನು ಬ್ರಹ್ಮನು ಮೃತ್ಯುವೇ ಎಂದು ಸಂಬೋಧಿಸಿ, ಈ ಪ್ರಜೆಗಳೆಲ್ಲರನ್ನೂ ಸಂಹಾರ ಮಾಡೆಂದನು. ಜಗದ ಸಂಹಾರವನ್ನು ಯೋಚಿಸಿದ ನನ್ನಿಂದ ನೀನು ಹುಟ್ಟಿದ್ದೀ. ಆದ್ದರಿಂದ ನೀನು ಚರಾಚರಪ್ರಪಂಚವನ್ನು ಅಜ್ಞಾನಿ, ಸುಜ್ಞಾನಿಗಳೆಲ್ಲರನ್ನೂ ಸಂಹರಿಸು ಎಂದು ಹೇಳಿದನು[೧].

---

೧ ಪ್ರಜಾಃ ಸೃಷ್ಟ್ವಾ ಮಹಾರಾಜ ಪ್ರಜಾಸರ್ಗೇ ಪಿತಾಮಹಃ।
ಅಸಂಹರತಂ ಮಹಾತೇಜಾ ದೃಷ್ಟ್ವಾ ಜಗದಿದಂ ಪ್ರಭುಃ॥
ಚಿಂತಯನ್ ನಾಸಸಾದೈವ ಸಂಹಾರಂ ವಸುಧಾಧಿಪ।
ತಸ್ಯ ರೋಷಾನ್ಮಹಾರಾಜ ಮುಖೇಭ್ಯೋಽಗ್ನಿರಜಾಯತ॥
ಚರಾಚರ ಜಗತ್ ಸರ್ವಂ ದದಾಹ ಭಗವಾನ್ ಪ್ರಭುಃ।
ತತೋ ಹರೋ ಜಟೀ ಸ್ಥಾಣುರ್ನಿಶಾಚರಪತಿಃ ಶಿವಃ॥
ಜಗಾಮ ಶರಣಂ ದೇವಂ ಬ್ರಹ್ಮಾಣಂ ಪರವೀರಹನ್॥ - ದ್ರೋಣಪರ್ವ(೪೯/೪೬-೫೧)
ಬ್ರಹ್ಮ ಉವಾಚ-
ಪೃಥಿವ್ಯಾ ಹಿತಕಾಮಾತ್ತು ತತೋ ಮಾಂ ಮೃತ್ಯುರಾವಿಶತ್।
ಇಯಂ ಸನ್ನಾ ಸದಾದೇವೀ ಭಾರಾರ್ತಾ ಮಾಮ ಚೂಚುದತ್॥
ಸಂಹಾರಾರ್ಥಂ ಮಹಾದೇವಃ ..................
ಸ್ಥಾಣುರುವಾಚ -
ಮಾ ಪ್ರಜಾಃ ಸ್ಥಾವರಾಶ್ಚೈವ ಜಂಗಮಾಶ್ಚ ವ್ಯನೀನಶಃ।
ತವ ಪ್ರಸಾದಾತ್ ................
ಮಾ ವಿನಶ್ಯೇತ್ ಜಗನ್ನಾಥ ಜಗತ್ ಸ್ಥಾವರ ಜಂಗಮಮ್।
ತತೋಽಗ್ನಿಮುಪಸಂಹೃತ್ಯ ಭಗವಾನ್ ಲೋಕಸಮ್ಮತಃ॥
ಪ್ರವೃತ್ತಿಂ ಚ ನಿವೃತ್ತಿಂ ಚ ಕಲ್ಪಯಾಮಾಸ ವೈ ಪ್ರಭುಃ।
......
ಪ್ರಾದುರ್ಬಭೂವ ವಿಶ್ವೇಭ್ಯಃ ಖೇಭ್ಯೋ ನಾರೀ ಮಹಾಮನಾಃ।
ತಾಂ ತು ತತ್ರ ತದಾ ದೇವೀಂ ಬ್ರಹ್ಮಾ.............

ಈ ಮಾತನ್ನು ಕೇಳಿದ ಅಬಲೆಯಾದ ಮೃತ್ಯುದೇವತೆ ತುಂಬಾ ಯೋಚಿಸಿದಳು. ಆಕೆಯ ಕಣ್ಣುಗಳಿಂದ ನೀರಿನ ಹನಿಗಳು ಹೊರಬರಲು, ಬ್ರಹ್ಮದೇವನು ಸಮಸ್ತ ಭೂತಹಿತಕ್ಕಾಗಿ ಅವನ್ನು ತನ್ನ ಕೈಯಲ್ಲಿ ಹಿಡಿದು ಆಕೆಯನ್ನು ಸಮಾಧಾನ ಮಾಡಿದನು.

ನಂತರ ಆಕೆ ತನ್ನ ದುಃಖವನ್ನು ತಡೆದುಕೊಂಡು ಹೀಗೆ ನುಡಿದಳು. 'ನಿನ್ನಿಂದ ಜನಿಸಿದ ನಾನು ಏನೂ ತಿಳಿಯದ ಮೂಢಳಂತೆ ಹೇಗೆ ತಾನೇ ನಿನ್ನ ಸೃಷ್ಟಿಯನ್ನು ಕೊಲ್ಲಲಿ. ಕೊಂದಾಗ ಉಳಿದ ಬಂಧುಬಾಂಧವರು ಮೃತರನ್ನು ನೆನಪಿಸಿಕೊಳ್ಳುತ್ತಿರುತ್ತಾರೆ. ಅವರ ದುಃಖದ ಕಣ್ಣೀರಿಗೆ ನಾನು ಹೆದರುತ್ತಿದ್ದೇನೆ. ಆದ್ದರಿಂದ ಇದರ ಪರಿಹಾರಕ್ಕಾಗಿ ನಿನ್ನನ್ನೇ ಶರಣು ಹೊಂದಿದ್ದೇನೆ. ನಿನ್ನ ಅನುಗ್ರಹದಿಂದ ನನ್ನ ಈ ಆಸೆ ಪೂರೈಸು. ನಿನ್ನನ್ನು ಕುರಿತು **ಧೇನುಕಾಶ್ರಮ**ದಲ್ಲಿ ತಪಸ್ಸನ್ನು ಮಾಡಲು ಅನುಮತಿ ಕೊಡು. ಜೀವರು ಅಳುತ್ತಿರಲು ಅವರಿಗೆ ಪ್ರಿಯರಾದ ಪ್ರಾಣಗಳನ್ನು ಹೇಗೆ ಅಪಹರಿಸಲಿ? ಇದು ಅಧರ್ಮ, ಇದರಿಂದ ನನ್ನನ್ನು ರಕ್ಷಿಸು.'

ಆಗ ಬ್ರಹ್ಮನು 'ಎಲೈ ಮೃತ್ಯುವೇ! ನಿನ್ನನ್ನು ಪ್ರಜಾಸಂಹಾರಕ್ಕಾಗಿ ನಿಯೋಜಿಸಲು ಇಚ್ಛಿಸಿದ್ದೇನೆ. ಅದು ಆಗಲೇಬೇಕು. ಅನ್ಯಥಾ ಸಾಧ್ಯವಿಲ್ಲ. ಕಾರಣ ನನ್ನ ಮಾತನ್ನು ನಡೆಸು ಎಂದನು. ಹೀಗೆ ಹೇಳಿದರೂ ಆ ಮೃತ್ಯು ಬ್ರಹ್ಮನ ಮಾತಿಗೆ ಮತ್ತೆ ತಲೆ ತಗ್ಗಿಸಿದಳು. ಪ್ರಜಾಸಂಹಾರಕಾರ್ಯದಲ್ಲಿ ಬುದ್ಧಿ ಹಾಕದೆ ಮೌನ ಧರಿಸಿದಳು. ಬ್ರಹ್ಮನೂ ಸುಮ್ಮನಾದ. ಆಗ ಲೋಕಗಳೆಲ್ಲ ಮೊದಲಿನಂತೆ ಪ್ರವೃತ್ತ ನಿವೃತ್ತ ಕರ್ಮಗಳಲ್ಲಿ ನಿರತವಾದವು. ಇತ್ತ ಮೃತ್ಯು ಧೇನುಕರ ಆಶ್ರಮಕ್ಕೆ ಬಂದು ಘನಘೋರ ತಪಸ್ಸನ್ನು ಆಚರಿಸಿದಳು.

ಆಕೆಯು ಮಾಡಿದ ತಪಸ್ಸಿನ ಪರಿಮಾಣ (ಕಾಲದ) ಹೀಗಿದೆ:

೧. ಒಂದು ಕಾಲಿನ ಮೇಲೆ ನಿಂತು - ೧೬ ಪದ್ಮವರ್ಷ; ೨. ಪ್ರಜೆಗಳಿಗೆ ಅಭಯ ಬಯಸಿ - ೫ ಪದ್ಮವರ್ಷ; ೩. ಒಂದೇ ಪಾದದ ಮೇಲೆ ನಿಂತು ೭,೬,೭,೫ ಪದ್ಮವರ್ಷ; ೪. ನಂತರ ಮೃಗಗಳ ಜೊತೆಗೆ ೧೦೦೦ ಸಾವಿರ ವರ್ಷ ಸಂಚಾರ ಮಾಡಿದಳು; ೫. ಗಂಗೆಯಲ್ಲಿ ನಿಂತು ೮೦೦೦ಪದ್ಮವರ್ಷ ವಾಸ; ೬. ಕೌಶಿಕೀ ನದಿಯಲ್ಲಿ ವಾಯು, ಜಲ ಭಕ್ಷಳಾಗಿ; ೭. ಪಂಚಗಂಗಾಕ್ಷೇತ್ರದಲ್ಲಿ ; ೮. ಕಾಶೀಕ್ಷೇತ್ರ; ೯. ವೈತರಣಿಗಳಲ್ಲಿ; ಮಹಾಮೇರುವಿನಲ್ಲಿ ಕೇವಲ ಪ್ರಾಣಾಯಾಮದಿಂದ ಕಲ್ಲಿನಂತೆ ನಿಂತು ತಪಸ್ಸು ೧೧. ಹಿಮಾಲಯದ ಶಿಖರದಲ್ಲಿ ಪಾದಾಂಗುಷ್ಠದ ಮೇಲೆ ನಿಂತು (ಹೆಬ್ಬೆರಳಿನ ಮೇಲೆ) ನಿಖರ್ವವರ್ಷಗಳವರೆಗೆ ನಿಂತಳು (ತಪಸ್ಸನ್ನು ಮಾಡಿದಳು); ೧೨ ಪುಷ್ಕರ; ೧೩. ಗೋಕರ್ಣ; ೧೪. ನೈಮಿಶಾರಣ್ಯ; ೧೫. ಮಲಯಪರ್ವತಗಳಲ್ಲಿ ತನ್ನ ಮನಸ್ಸಿಗೆ ಪ್ರಿಯವಾದ ನಿಯಮಗಳಿಂದ (ವಿಹಿತವಾದ) ದೇಹ ಶೋಷಣೆ ಮಾಡಿಕೊಂಡಳು.

---

ಮೃತ್ಯೋ ಇತಿ ಮಹೀಪಾಲ ಜಹಿ ಚೇಮಾಃ ಪ್ರಜಾ ಇತಿ।
ಮಮ ತ್ವಂ ಹಿ ನಿಯೋಗೇನ ತತ್ರ ಶ್ರೇಯೋ ಹ್ಯವಾಪ್ಸ್ಯಸಿ॥

ಅಗ್ನಿಗೆ ಆಹುತಿಯಾಯಿತು. ಇದನ್ನು ಕಂಡ ಶಿವನು ಬ್ರಹ್ಮನಿಗೆ ಶರಣಾಗಿ ಜಗದ್ಧಿತಕ್ಕಾಗಿ ನೀವೇ ಸೃಷ್ಟಿಮಾಡಿದ ಜಗತ್ತು ನಿನ್ನ ಕೋಪಾಗ್ನಿಯಿಂದ ನಾಶವಾಗುತ್ತಿದೆ. ಅದರಿಂದ ಪ್ರಜೆಗಳ ಬಗ್ಗೆ ನಿನ್ನ ಕರುಣೆಯಿಂದ ಅವರನ್ನು ಕೊಲ್ಲಬೇಡವೆಂದು ಬೇಡುವೆ ಎಂದ. ಅದಕ್ಕೆ ಬ್ರಹ್ಮದೇವನು ನನಗೇನೂ ಆ ಉದ್ದೇಶವಿಲ್ಲ. ಭೂದೇವಿಯ ಪ್ರೇರಣೆಯಿಂದ ನನಗೆ ಕೋಪ ಉಂಟಾಯಿತು ಎಂದ. ನಂತರ ಬ್ರಹ್ಮದೇವನು ತನ್ನ ಕೋಪಾಗ್ನಿಯನ್ನು ತನ್ನಲ್ಲಿಯೇ ವಾಪಸು ಪಡೆದ. ಜಗತ್ತಿಗೆ ಪ್ರವೃತ್ತಿ ಹಾಗೂ ನಿವೃತ್ತಿ ಮಾರ್ಗಗಳನ್ನು (ಸಕಾಮ-ನಿಷ್ಕಾಮ ಕರ್ಮಗಳನ್ನು) ಉಪದೇಶಿಸಿದನು.

ಹೀಗೆ ಒಂದು ಕಡೆ ಅಗ್ನಿ ಶಮನವಾದರೂ, ಬ್ರಹ್ಮನ ಸರ್ವಾವಯವಗಳಿಂದ (ಇಂದ್ರಿಯ) ಒಬ್ಬ ಸ್ತ್ರೀಯು ಉದಿಸಿದಳು. ದಕ್ಷಿಣದಿಕ್ಕನ್ನು ಆಶ್ರಯಿಸಿದಳು. ಆಕೆಯನ್ನು ಬ್ರಹ್ಮನು ಮೃತ್ಯುವೇ ಎಂದು ಸಂಬೋಧಿಸಿ, ಈ ಪ್ರಜೆಗಳೆಲ್ಲರನ್ನೂ ಸಂಹಾರ ಮಾಡೆಂದನು. ಜಗದ ಸಂಹಾರವನ್ನು ಯೋಚಿಸಿದ ನನ್ನಿಂದ ನೀನು ಹುಟ್ಟಿದ್ದೀ. ಆದ್ದರಿಂದ ನೀನು ಚರಾಚರಪ್ರಪಂಚವನ್ನು ಅಜ್ಞಾನಿ, ಸುಜ್ಞಾನಿಗಳೆಲ್ಲರನ್ನೂ ಸಂಹರಿಸು ಎಂದು ಹೇಳಿದನು[೧].

---

೧ ಪ್ರಜಾಃ ಸೃಷ್ಟ್ವಾ ಮಹಾರಾಜ ಪ್ರಜಾಸರ್ಗೇ ಪಿತಾಮಹಃ।
ಅಸಂಹರತಂ ಮಹಾತೇಜಾ ದೃಷ್ಟ್ವಾ ಜಗದಿದಂ ಪ್ರಭುಃ॥
ಚಿಂತಯನ್ ನಾಸಸಾದ್ಯೈವ ಸಂಹಾರಂ ವಸುಧಾಧಿಪ।
ತಸ್ಯ ರೋಷಾನ್ಮಹಾರಾಜ ಮುಖೇಭ್ಯೋಽಗ್ನಿರಜಾಯತ॥
ಚರಾಚರ ಜಗತ್ ಸರ್ವಂ ದದಾಹ ಭಗವಾನ್ ಪ್ರಭುಃ।
ತತೋ ಹರೋ ಜಟೀ ಸ್ಥಾಣುರ್ನಿಶಾಚರಪತಿಃ ಶಿವಃ॥
ಜಗಾಮ ಶರಣಂ ದೇವಂ ಬ್ರಹ್ಮಾಣಂ ಪರವೀರಹನ್॥ - ದ್ರೋಣಪರ್ವ(೪೯/೪೬-೫೧)
ಬ್ರಹ್ಮ ಉವಾಚ-
ಪೃಥಿವ್ಯಾ ಹಿತಕಾಮಾತ್ತು ತತೋ ಮಾಂ ಮೃತ್ಯುರಾವಿಶತ್।
ಇಯಂ ಸನ್ನಾ ಸದಾದೇವೀ ಭಾರಾರ್ತಾ ಮಾಮ ಚೂಚುದತ್॥
ಸಂಹಾರಾರ್ಥಂ ಮಹಾದೇವಃ .................
ಸ್ಥಾಣುರುವಾಚ -
ಮಾ ಪ್ರಜಾಃ ಸ್ಥಾವರಾಶ್ಚೈವ ಜಂಗಮಾಶ್ಚ ವ್ಯನೀನಶಃ।
ತವ ಪ್ರಸಾದಾತ್ ................
ಮಾ ವಿನಶ್ಯೇತ್ ಜಗನ್ನಾಥ ಜಗತ್ ಸ್ಥಾವರ ಜಂಗಮಮ್।
ತತೋಽಗ್ನಿಮುಪಸಂಹೃತ್ಯ ಭಗವಾನ್ ಲೋಕಸಮ್ಮತಃ॥
ಪ್ರವೃತ್ತಿಂ ಚ ನಿವೃತ್ತಿಂ ಚ ಕಲ್ಪಯಾಮಾಸ ವೈ ಪ್ರಭುಃ।
......
ಪ್ರಾದುರ್ಬಭೂವ ವಿಶ್ವೇಭ್ಯಃ ಖೇಭ್ಯೋ ನಾರೀ ಮಹಾಮನಾಃ।
ತಾಂ ತು ತತ್ರ ತದಾ ದೇವೀಂ ಬ್ರಹ್ಮಾ............

ಈ ಮಾತನ್ನು ಕೇಳಿದ ಅಬಲೆಯಾದ ಮೃತ್ಯುದೇವತೆ ತುಂಬಾ ಯೋಚಿಸಿದಳು. ಆಕೆಯ ಕಣ್ಣುಗಳಿಂದ ನೀರಿನ ಹನಿಗಳು ಹೊರಬರಲು, ಬ್ರಹ್ಮದೇವನು ಸಮಸ್ತ ಭೂತಹಿತಕ್ಕಾಗಿ ಅವನ್ನು ತನ್ನ ಕೈಯಲ್ಲಿ ಹಿಡಿದು ಆಕೆಯನ್ನು ಸಮಾಧಾನ ಮಾಡಿದನು.

ನಂತರ ಆಕೆ ತನ್ನ ದುಃಖವನ್ನು ತಡೆದುಕೊಂಡು ಹೀಗೆ ನುಡಿದಳು. 'ನಿನ್ನಿಂದ ಜನಿಸಿದ ನಾನು ಏನೂ ತಿಳಿಯದ ಮೂಢಳಂತೆ ಹೇಗೆ ತಾನೇ ನಿನ್ನ ಸೃಷ್ಟಿಯನ್ನು ಕೊಲ್ಲಲಿ. ಕೊಂದಾಗ ಉಳಿದ ಬಂಧುಬಾಂಧವರು ಮೃತರನ್ನು ನೆನಪಿಸಿಕೊಳ್ಳುತ್ತಿರುತ್ತಾರೆ. ಅವರ ದುಃಖದ ಕಣ್ಣೀರಿಗೆ ನಾನು ಹೆದರುತ್ತಿದ್ದೇನೆ. ಆದ್ದರಿಂದ ಇದರ ಪರಿಹಾರಕ್ಕಾಗಿ ನಿನ್ನನ್ನೇ ಶರಣು ಹೊಂದಿದ್ದೇನೆ. ನಿನ್ನ ಅನುಗ್ರಹದಿಂದ ನನ್ನ ಈ ಆಸೆ ಪೂರೈಸು. ನಿನ್ನನ್ನು ಕುರಿತು **ಧೇನುಕಾಶ್ರಮದಲ್ಲಿ** ತಪಸ್ಸನ್ನು ಮಾಡಲು ಅನುಮತಿ ಕೊಡು. ಜೀವರು ಅಳುತ್ತಿರಲು ಅವರಿಗೆ ಪ್ರಿಯರಾದ ಪ್ರಾಣಗಳನ್ನು ಹೇಗೆ ಅಪಹರಿಸಲಿ? ಇದು ಅಧರ್ಮ, ಇದರಿಂದ ನನ್ನನ್ನು ರಕ್ಷಿಸು.'

ಆಗ ಬ್ರಹ್ಮನು 'ಎಲೈ ಮೃತ್ಯುವೇ! ನಿನ್ನನ್ನು ಪ್ರಜಾಸಂಹಾರಕ್ಕಾಗಿ ನಿಯೋಜಿಸಲು ಇಚ್ಛಿಸಿದ್ದೇನೆ. ಅದು ಆಗಲೇಬೇಕು. ಅನ್ಯಥಾ ಸಾಧ್ಯವಿಲ್ಲ. ಕಾರಣ ನನ್ನ ಮಾತನ್ನು ನಡೆಸು ಎಂದನು. ಹೀಗೆ ಹೇಳಿದರೂ ಆ ಮೃತ್ಯು ಬ್ರಹ್ಮನ ಮಾತಿಗೆ ಮತ್ತೆ ತಲೆ ತಗ್ಗಿಸಿದಳು. ಪ್ರಜಾಸಂಹಾರಕಾರ್ಯದಲ್ಲಿ ಬುದ್ಧಿ ಹಾಕದೆ ಮೌನ ಧರಿಸಿದಳು. ಬ್ರಹ್ಮನೂ ಸುಮ್ಮನಾದ. ಆಗ ಲೋಕಗಳೆಲ್ಲ ಮೊದಲಿನಂತೆ ಪ್ರವೃತ್ತ ನಿವೃತ್ತ ಕರ್ಮಗಳಲ್ಲಿ ನಿರತವಾದವು. ಇತ್ತ ಮೃತ್ಯು ಧೇನುಕರ ಆಶ್ರಮಕ್ಕೆ ಬಂದು ಘನಘೋರ ತಪಸ್ಸನ್ನು ಆಚರಿಸಿದಳು.

ಆಕೆಯು ಮಾಡಿದ ತಪಸ್ಸಿನ ಪರಿಮಾಣ (ಕಾಲದ) ಹೀಗಿದೆ:

೧. ಒಂದು ಕಾಲಿನ ಮೇಲೆ ನಿಂತು – ೧೬ ಪದ್ಮವರ್ಷ; ೨. ಪ್ರಜೆಗಳಿಗೆ ಅಭಯ ಬಯಸಿ – ೫ ಪದ್ಮವರ್ಷ; ೩. ಒಂದೇ ಪಾದದ ಮೇಲೆ ನಿಂತು ೭,೬,೭,೫ ಪದ್ಮವರ್ಷ; ೪. ನಂತರ ಮೃಗಗಳ ಜೊತೆಗೆ ೧೦೦೦ ಸಾವಿರ ವರ್ಷ ಸಂಚಾರ ಮಾಡಿದಳು; ೫. ಗಂಗೆಯಲ್ಲಿ ನಿಂತು ೮೦೦೦ಪದ್ಮವರ್ಷ ವಾಸ; ೬. ಕೌಶಿಕೀ ನದಿಯಲ್ಲಿ ವಾಯು, ಜಲ ಭಕ್ಷಳಾಗಿ; ೭. ಪಂಚಗಂಗಾಕ್ಷೇತ್ರದಲ್ಲಿ ; ೮. ಕಾಶೀಕ್ಷೇತ್ರ; ೯. ವೈತರಣಿಗಳಲ್ಲಿ; ಮಹಾಮೇರುವಿನಲ್ಲಿ ಕೇವಲ ಪ್ರಾಣಾಯಾಮದಿಂದ ಕಲ್ಲಿನಂತೆ ನಿಂತು ತಪಸ್ಸು; ೧೧. ಹಿಮಾಲಯದ ಶಿಖರದಲ್ಲಿ ಪಾದಾಂಗುಷ್ಠದ ಮೇಲೆ ನಿಂತು (ಹೆಬ್ಬೆರಳಿನ ಮೇಲೆ) ನಿಖರ್ವವರ್ಷಗಳವರೆಗೆ ನಿಂತಳು (ತಪಸ್ಸನ್ನು ಮಾಡಿದಳು); ೧೨ ಪುಷ್ಕರ; ೧೩. ಗೋಕರ್ಣ; ೧೪. ನೈಮಿಶಾರಣ್ಯ; ೧೫. ಮಲಯಪರ್ವತಗಳಲ್ಲಿ ತನ್ನ ಮನಸ್ಸಿಗೆ ಪ್ರಿಯವಾದ ನಿಯಮಗಳಿಂದ (ವಿಹಿತವಾದ) ದೇಹ ಶೋಷಣೆ ಮಾಡಿಕೊಂಡಳು.

---

ಮೃತ್ಯೋ ಇತಿ ಮಹೀಪಾಲ ಜಹಿ ಚೇಮಾಃ ಪ್ರಜಾ ಇತಿ।
ಮಮ ತ್ವಂ ಹಿ ನಿಯೋಗೇನ ತತ್ರ ಶ್ರೇಯೋ ಹ್ಯವಾಪ್ಸ್ಯಸಿ॥

ಹೀಗೆ ಮೃತ್ಯುವಿನ ತಪಸ್ಸಿನಿಂದ ಪ್ರೀತನಾದ ಬ್ರಹ್ಮದರ್ಶನ ಕೊಟ್ಟು ತಪಸ್ಸಿನ ಕಾರಣವನ್ನು ಕೇಳಿದಾಗ ಆಕೆಯು 'ನಾನು ದುಃಖಿಗಳಾದ ಪ್ರಜೆಗಳನ್ನು ಸಂಹರಿಸಲಾರೆ. ನನಗೆ ಅದು ಅಧರ್ಮವೆನಿಸುತ್ತದೆ. ಆ ಭಯದಿಂದ ಭೀತಳಾಗಿದ್ದೇನೆ. ನಾನು ನಿರಪರಾಧಿ. ನೀನೇ ನನಗೆ ಗತಿ, ಶಾಶ್ವತವರವನ್ನು ಕೊಡು' ಎಂದಳು (ಎಂದರೆ ನನ್ನನ್ನು ಪ್ರಜಾಸಂಹಾರಕಾರ್ಯಕ್ಕೆ ನಿಯೋಜಿಸಬೇಡ).

ಆದರೆ ಬ್ರಹ್ಮನು ಒಪ್ಪಲಿಲ್ಲ. 'ಇದು ಅಧರ್ಮವಾಗದು. ನನ್ನ ಮಾತು ಸುಳ್ಳಾಗದು[೧]. ನಿನಗೆ ಸಹಾಯಕರಾಗಿ ರುದ್ರ, ಕಾಲ, ಯಮ, ವ್ಯಾಧಿಗಳು ಇರುತ್ತವೆ. ನಿನಗೆ ಯಾವ ಭಯವೂ ಇಲ್ಲ.' ಇದನ್ನು ಒಪ್ಪಿದ ಮೃತ್ಯುದೇವತೆಯು ಹಾಗಿದ್ದರೆ, 'ಲೋಭ, ಕ್ರೋದ, ಅಸೂಯೆ, ಮಾತ್ಸರ್ಯ, ಮೋಹ, ದ್ರೋಹ ಇವು ಜೀವರಿಗೆ ಅಪ್ರಿಯ ಮಾಡುವ ದೋಷಗಳು. ಇವೇ ಅವರ ದೇಹಗಳನ್ನು ನಾಶ ಮಾಡಲಿ' ಎಂದು ವರ ಬೇಡಲು ಬ್ರಹ್ಮನು 'ಹಾಗೇ ಆಗಲಿ' ಎಂದು ಅಭಯಕೊಟ್ಟ. 'ನಿನ್ನ ಕಣ್ಣೀರಿನ ಬಿಂದುಗಳು ಆಯುಷ್ಯ ಮುಗಿದ ಪ್ರಾಣಿಗಳನ್ನು ಕೊಲ್ಲುತ್ತವೆ. ಅವೇ ಪ್ರಾಣಿದೇಹಗಳ ರೋಗಗಳು ವ್ಯಾಧಿಗಳು[೨] ನೀನು ಕಾಮ, ಕ್ರೋಧಗಳನ್ನು ತ್ಯಜಿಸಿ ಪ್ರಾಣಿಗಳ ಸಂಹಾರ ಮಾಡು (ನಿನಗೆ ಸಂಹಾರಕಾರ್ಯದಲ್ಲಿ ಆಸಕ್ತಿ ಇರದಿರಲಿ). ಆಗ ನಿನಗೆ ಪಾಪ ಲೇಪವಾಗದು.'

ನಂತರ ಮೃತ್ಯುಸಂಜ್ಞೆ(ಮೃತ್ಯು ಎಂಬ ಹೆಸರು)ಯ ಆ ದೇವತೆ ಬ್ರಹ್ಮದೇವರ ಶಾಪಕ್ಕೆ ಹೆದರಿ 'ಆಗಲಿ' ಎಂದು ಹೇಳಿ ಪ್ರಾಣಿಗಳ ದೇಹಾಂತ್ಯದಲ್ಲಿ ಸಂಹಾರ ಮಾಡುತ್ತಾಳೆ (ತಾನು ಕಾಮಕ್ರೋಧಾದಿಗಳನ್ನು ಬಿಟ್ಟು). ಸರ್ವ ಪ್ರಾಣಿಗಳ ಪ್ರಾಣಗಳು ಮರಣವಾದ ಮೇಲೆ ಬೇರೆ ಲೋಕಗಳಿಗೆ ಹೋಗಿ ಮತ್ತೇ ಜೀವಿಯು ಜನ್ಮ ಪಡೆದಾಗ ವಾಪಸು ಬರುತ್ತವೆ. ಈ ಎಲ್ಲ ಪ್ರಾಣಿಗಳಿಗೆ ವಾಯುದೇವರು ವ್ಯಾಪಾರಪ್ರೇರಕರು, ಮಾಡಿಸುವವರು. ಮರಣವೆಂದರೆ ಪ್ರಾಣದೇವನ ಇಲ್ಲದಿರುವಿಕೆಯೇ ಕಾರಣ. ದೇಹ ಪಾತವಾದಾಗಲೂ ಮತ್ತೆ ಬರದಿದ್ದರೆ(ಪುನಃ ದೇಹ ಬರದಿರುವಿಕೆಯೇ) ಮೋಕ್ಷವೆನ್ನಿಸುತ್ತದೆ. ಹೀಗಾಗಿ ವಾಯುದೇವರೇ ದೇವತಾಶ್ರೇಷ್ಠರು. ಅವರು ಪ್ರಾಣಿಗಳಿಗೂ ಪ್ರಾಣಪ್ರದರು[೩].

---

೧ ಅಧರ್ಮೋ ನಾಸ್ತಿ ತೇ ಮೃತ್ಯೋ ಸಂಹರತ್ಯಾ ಇಮಾಃ ಪ್ರಜಾಃ ।
ಮಯಾ ಚೋಕ್ತಂ ಮೃಷಾ ಭದ್ರೇ ಭವಿತಾ ನ ಕಥಂಚನ ॥ - ದ್ರೋಣಪರ್ವ(೫೧/೩೦)

೨ ಮೃತ್ಯುಸ್ತೇಷಾಂ ವ್ಯಾಧಯಸ್ತತ್ಪ್ರಸೂತಾಃ ।
ವ್ಯಾಧೀ ರೋಗೈರ್ಯುಜ್ಯತೇ ಯೇ ನ ದೇಹಃ ॥ - ದ್ರೋಣಪರ್ವ(೫೧/೪೩)

೩. ವಾಯುರ್ದೇವೋ ಭೀಮನಾದೋ ಮಹೌಜಾಃ
ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ ।
ಅನಾವೃತ್ತಿರ್ದೇಹಿನಾಂ ದೇಹಪಾತೇ
ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ ॥ - ದ್ರೋಣಪರ್ವ (೫೧/೪೬)

ಆದ್ದರಿಂದ ಅಕಂಪನನೇ ನಿನ್ನ ಪುತ್ರ ಸ್ವರ್ಗ ಸೇರಿದ್ದಾನೆ. ಚಿಂತಿಸಬೇಡ. ಅಲ್ಲಿ ಅವನು ಸಂತೋಷವಾಗಿದ್ದಾನೆ. ದೇಹಗಳಿಗೆ ಮಾತ್ರ ನಾಶ, ಆತ್ಮಸಿಗೆ ನಾಶವಿಲ್ಲ. ಆದ್ದರಿಂದ ಮೃತರನ್ನು ಕುರಿತು ಜ್ಞಾನಿಗಳು ಶೋಕಿಸುವುದಿಲ್ಲ.

ಹೀಗೆ ನಾರದರಿಂದ ಉಪದೇಶ ಹೊಂದಿದ ಅಕಂಪನನು ತನ್ನ ಸಂಶಯಗಳನ್ನು ಕಳೆದುಕೊಂಡ. ವ್ಯಾಸರು ಧರ್ಮರಾಜನಿಗೂ ಅಭಿಮನ್ಯುವಿನ ಬಗ್ಗೆ ಹೇಳುತ್ತಾ, ಅಭಿಮನ್ಯು ಕೂಡಾ ಕ್ಷತ್ರಿಯಯೊಗ್ಯ ಮಹಾಯುದ್ಧ ಮಾಡಿ ಗದಾದಿ ಆಯುಧಗಳಿಂದ ಹೊಡೆದು, ಹೊಡೆಸಿಕೊಂಡು ದೇಹರಹಿತನಾಗಿ ಚಂದ್ರನ ಮಗನಾದ್ದರಿಂದ ಚಂದ್ರನ ಲೋಕಕ್ಕೆ ಹೋಗಿದ್ದಾನೆ. ಆದ್ದರಿಂದ ಶೋಕಿಸಬೇಡ ಎಂದರು.

## ಸಂದೇಶಗಳು-ವಿವರಣೆಗಳು

೧. ಅಕಂಪನೋಪಾಖ್ಯಾನದಲ್ಲಿ ಮೃತ್ಯು, ಮರಣ, ಮೊದಲಾದ ತಾತ್ತ್ವಿಕ ವಿಚಾರಗಳಿವೆ. ಮೃತ್ಯು ಒಂದು ಅನಿವಾರ್ಯ ಜೀವನ ಚಕ್ರ – ಹುಟ್ಟಿನಂತೆ.

೨. ಬ್ರಹ್ಮದೇವರ ಮಾನಸಸೃಷ್ಟಿ ಮೃತ್ಯು, ಒಬ್ಬ ದೇವತೆ. ಬ್ರಹ್ಮದೇವರ ಪ್ರತಿ ಅವಯವದಿಂದ ರುದ್ರೇಂದ್ರಾದಿಗಳು ಜನಿಸಿದಂತೆ ಬ್ರಹ್ಮದೇವರು ತಾವು ಸೃಷ್ಟಿಸಿದ ಪ್ರಜೆಗಳು ಮರಣಿಸದೇ ಹಾಗೆಯೇ ಇದ್ದುದು ಭೂದೇವಿಗೂ ಭಾರವಾಯಿತೆಂಬ ಕಲ್ಪನೆ ಇಲ್ಲಿದೆ. ಇಲ್ಲಿ ಭಾರವೆನ್ನುವುದು ಭೌತಿಕವಾಗಿರಲಾರದು. ಅಂತೂ ಭೂದೇವಿಯ ಪ್ರಾರ್ಥನೆಯ ಮೇರೆಗೆ ಬ್ರಹ್ಮನ ರೋಷಾಗ್ನಿ ಚರಾಚರಜಗತ್ತನ್ನು ದಹಿಸಿದುದನ್ನು ನೋಡಿ ರುದ್ರದೇವರೂ ಕಾರುಣ್ಯದಿಂದ ಬ್ರಹ್ಮದೇವರನ್ನು ಜಗತ್ತನ್ನು ಸಂಹರಿಸದಿರಲು ಕೋರತ್ತಾರೆ ಎಂದು ಸಂಹಿತೆಯಲ್ಲಿದೆ. ಅಂತೂ ಜಗತ್ತಿನ ಚಕ್ರದ ಸುತ್ತುವಿಕೆಗಾಗಿ (Cycling of World) ಕೇಳುತ್ತಾರೆ ಎನಿಸುತ್ತದೆ.

೩. ಕೊನೆಗೆ ಬ್ರಹ್ಮದೇವರ ಸರ್ವಾವಯವಗಳಿಂದ ಮೃತ್ಯು ದೇವತೆಯ (ಸ್ತ್ರೀ) ಆವಿರ್ಭಾವ. ಆಕೆಗೂ ಬ್ರಹ್ಮನು ಸಂಹಾರಕಾರ್ಯ ನಿರ್ವಹಿಸಲು ಆದೇಶಿಸಿದರೂ ಆಕೆ ಒಪ್ಪಲಿಲ್ಲವೆಂಬ ಆಶ್ಚರ್ಯಕರ ಪ್ರತಿಕ್ರಿಯೆ ನೋಡುತ್ತೇವೆ. ಬಹುಶಃ ದೇವತೆಗಳೂ ಕೂಡಾ ನಾಶಾತ್ಮಕಕಾರ್ಯ ಮಾಡಲು ಒಪ್ಪಲಿಲ್ಲವೆಂಬ ದೈವೀ ಗುಣ ಕಾಣುತ್ತದೆ. 'ಜಗತಃ ಕ್ಷಯಕಾರಿಣಃ' ಇದು ತಾಮಸ ಗುಣ. ಸೃಷ್ಟಿಸ್ಥಿತಿಗಳು ದೈವೀಗುಣ, ಅಭಿವೃದ್ಧಿ ದೈವೀಗುಣ, ನಾಶಮಾಡುವುದು ಆಸುರೀಗುಣ. ಪ್ರಾಯಃ ಈ ಕಾರಣದಿಂದಲೇ ಆ ಸ್ತ್ರೀಯು ಒಪ್ಪಲಿಲ್ಲ. ಭಯಂಕರ ತಪಸ್ಸನ್ನು ಮಾಡಿ, ತನ್ನ ನಿಯೋಜಿತ ಕರ್ತವ್ಯವನ್ನು ಬೇಡೆಂದರೂ ಬ್ರಹ್ಮದೇವರು ಆಕೆಗೆ ಅಧರ್ಮ, ಪಾಪಲೇಪ ಆಗದೆಂದಾಗಲೇ ಕರ್ತವ್ಯ ಒಪ್ಪುತ್ತಾಳೆ. ನಾಶ ಮಾಡುವಾಗಲೂ ಕರ್ತವ್ಯಭಾವನೆ ಇರಲಿ ಎಂಬ ಭಾವ ಇಲ್ಲಿದೆ. ಸಂಹಾರಕಾರ್ಯಕ್ಕೆ ನಿಯೋಜಿತ ವ್ಯಕ್ತಿಗಳಿದ್ದಾರೆ. ಅವರೇ ಆ ಕರ್ತವ್ಯ ಮಾಡಬೇಕು. ಬೇರೆ ಯಾರೂ ಅದನ್ನು ಮಾಡುವಂತಿಲ್ಲ. ಆದ್ದರಿಂದ ಫಲ ಕೊಡಲು ಎಲ್ಲರಿಗೂ ಅಧಿಕಾರವಿಲ್ಲ. ತತ್ರಾಪಿ ಸಂಹಾರದಂಥ ಕ್ರೂರ ಕೆಲಸ.

೪. ಈ ಸಂಹಾರಕಾರ್ಯಕ್ಕೆ ಮೃತ್ಯು ದೇವತೆಗೆ ರುದ್ರ, ಯಮ ಹಾಗೂ ವ್ಯಾಧಿಗಳು ಸಹಾಯಕರೆಂಬ ಅಭಿಪ್ರಾಯ ಸಂಹಿತೆಯಲ್ಲಿದೆ. ಮೃತ್ಯುದೇವತೆ ಎಂದರೆ ಯಾರು? ನಾಮಾದಿಗಳು ಹೇಳಲ್ಪಟ್ಟಿಲ್ಲ. ವ್ಯಾಧಿಗಳು ಎಂದರೆ ಆಯುಷ್ಯ ಮುಗಿದ ಮೇಲೆ ದೇಹಕ್ಕೆ ತಗಲುವ ರೋಗರುಜಿನಗಳೇ ಮರಣಕ್ಕೆ ಕಾರಣವಾಗುತ್ತವೆ ಎಂಬ ಭಾವ ಇಲ್ಲಿದೆ. ಇದು ಸ್ವಾಭಾವಿಕವೂ ಹೌದು. ಆರೋಗ್ಯ ಚೆನ್ನಾಗಿದ್ದಾಗ ಪ್ರಾಯಃ ಮೃತ್ಯು ಬರದು. ಅದು ಬರುವುದೇ ವಯಸ್ಸಾದ ಮೇಲೆ. ವ್ಯಾಧಿಗಳು ಅಂತೂ ಒಂದು ನಿಮಿತ್ತ. ಹೀಗಾಗಿ ಮೃತ್ಯುದೇವತೆಗೆ ವ್ಯಾಧಿನಿಮಿತ್ತವಾಗಿ ರೋಗಗಳು ಬಂದಾಗ ಜೀವರನ್ನು ಸಾಯಿಸುವ ಕಾರ್ಯ ಕರ್ತವ್ಯ ಎನ್ನುವುದು ಒಂದು ಮುಖ. ಆಯುಷ್ಯ ಮುಗಿದ ಮೇಲೆ ಅನಾಯಾಸವಾಗಿ ಮರಣಹೊಂದುವ ಜೀವರನ್ನೂ ಇದೇ ದೇವತೆ ಸಂಬಂಧಿಸಿದ ಲೋಕಕ್ಕೆ ಕರೆದುಕೊಂಡು ಹೋಗುತ್ತಾಳೆ. ಇಲ್ಲಿ ಮರಣ ಸಂದರ್ಭದಲ್ಲಿ ದೇಹ ಅವಯವಗಳು, ಇಂದ್ರಿಯಗಳು(ಪ್ರಾಣ) ದೇಹದಿಂದ ಹೊರಗೆ ಬೇರೆ ಬೇರೆ ಲೋಕಕ್ಕೆ ಹೋಗಿ ಬರುವ ವಿಷಯ ಸೂಕ್ಷ್ಮವಾಗಿ ಬಂದಿದೆ. ಮುಖ್ಯಪ್ರಾಣನಿಗೆ ಹಾಗೂ ಜೀವರ ಹೋಗುವಿಕೆ ಬರುವಿಕೆ ಬಗೆಗಿನ ಒಂದು ಪ್ರಚಲಿತ ಶ್ಲೋಕ ವೈಷ್ಣವ ಪಾಠದಲ್ಲಿದೆ. ಉಳಿದ ಪ್ರಕಾಶನಗಳಲ್ಲಿ ಒಂದು ಪಾದ ಮಾತ್ರ ಇದೆ.

**ವಾಯುರ್ಭೀಮೋ ಭೀಮನಾದೋ ಮಹೌಜಾಃ**
**ಸರ್ವೇಷಾಂ ಚ ಪ್ರಾಣಿನಾಂ ಪ್ರಾಣ ಭೂತಃ ।**
**ಅನಾವೃತ್ತಿಃ ದೇಹಿನಾಂ ದೇಹಪಾತೇ**
**ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ ॥ - ದ್ರೋಣಪರ್ವ(೫೧/೪೬)**

ಇಲ್ಲಿ ವಾಯುದೇವರು ಎಲ್ಲ ಇಂದ್ರಿಯಾಭಿಮಾನಿಗಳಿಗಿಂತ ಉತ್ತಮರೆಂಬ ಭಾವ ನಿಚ್ಚಳವಾಗಿದೆ. ಉಳಿದ ಪಾಠಗಳಲ್ಲಿ ಇಷ್ಟು ಸ್ಪಷ್ಟವಾಗಿಲ್ಲ.

೫. ರಾಮಾಯಣದಲ್ಲಿ ಬರುವ ಅಕಂಪನ ರಾಕ್ಷಸ ಹನುಮಂತನಿಂದ ಹತನಾಗುತ್ತಾನೆ. ಇಲ್ಲಿಯ ಅಕಂಪನ ರಾಜ ಒಬ್ಬ ಜೀವ, ಶತ್ರುಗಳಿಂದ ಸೆರೆಸಿಕ್ಕು ಕಂಪಿಸುತ್ತಾನೆ, ಹೆದರುತ್ತಾನೆ. ವಾಯುದೇವರು ನಿಜವಾಗಿಯೂ ಅಕಂಪನರು. ಅವರಿಗೆ ಯಾರ ಭಯವಿಲ್ಲ. ಪರಮಾತ್ಮನನ್ನು ಪರಮಮುಖ್ಯ ವೃತ್ತಿಯಿಂದ ಅಕಂಪನ. ಏಕೆಂದರೆ ನಿರ್ಭಯನಾದ್ದರಿಂದ:

**ಅನೇಜತ್ ನಿರ್ಭಯತ್ವಾತ್ । - ಈಶಾವಾಸ್ಯಭಾಷ್ಯ ।**

# ಪ್ರತಿಜ್ಞಾಪರ್ವ

## ೬೩. ಷೋಡಶರಾಜೋಪಾಖ್ಯಾನ

### ೧. ಮರುತ್ತರಾಜನ ಕಥೆ

ಮೃತ್ಯುವಿನ ಉತ್ಪತ್ತ್ಯಾದಿಗಳನ್ನು ಕೇಳಿದ ಧರ್ಮರಾಜನು ವ್ಯಾಸರನ್ನು ಪ್ರಸನ್ನೀಕರಿಸಿ ಹಿಂದೆ ಇದ್ದ ಇಂದ್ರಸದೃಶ ಪರಾಕ್ರಮಿಗಳಾದ, ಪುಣ್ಯವಂತರಾದ ರಾಜರ್ಷಿಗಳು ಹೇಗೆ ಮೃತ್ಯುವಿನಿಂದ ಹತರಾಗಿದ್ದಾರೆ? ಅವರ ಮಹಾಕಾರ್ಯಗಳನ್ನು, ಅವರು ಕೊಟ್ಟ ದಕ್ಷಿಣಾದಿಗಳನ್ನು ತಿಳಿಸಲು ಪ್ರಾರ್ಥಿಸಿದನು.

ಅದಕ್ಕೆ ವ್ಯಾಸರು ಯಜ್ಞ, ಯಾಗ, ತಪಸ್ಸು, ಕ್ಷಮಾದಿಗುಣ, ವೇದವಿದ್ಯಾಪಾರಂಗತರಾಗುವಿಕೆ, ಸತ್ಪುತ್ರವಂತರು – ಇವರೆಲ್ಲರ ಸಾಧನೆಗಿಂತ ಯುದ್ಧದಲ್ಲಿ ಮಡಿದವರಿಗೆ ಸಿಗುವ ಲೋಕವು ಅತಿಶ್ರೇಷ್ಠ. ಹಾಗೆಯೇ ಅಭಿಮನ್ಯುವು ಕೂಡಾ ಅತ್ಯಂತ ಪುಣ್ಯಲೋಕವನ್ನೇ ಹೊಂದಿದ್ದಾನೆ. ಎಲ್ಲ ರಾಜಶ್ರೇಷ್ಠರು ಮಾಡಿದ ಯಜ್ಞಫಲಕ್ಕಿಂತ ಯುದ್ಧದಲ್ಲಿ ದೇಹತ್ಯಾಗ ಮಾಡಿದವರೇ ಅತ್ಯುತ್ತಮ ಲೋಕಕ್ಕೆ ಹೋಗುತ್ತಾರೆ.

ಆಗ ಧರ್ಮರಾಜನು 'ಒಳ್ಳೆಯ ರಾಜರು ಮಾಡಿದ ಯಜ್ಞ, ಕೊಟ್ಟ ದಕ್ಷಿಣೆ-ದಾನಗಳ ವಿವರ ಹೇಳಿರಿ ಎಂದಾಗ ವ್ಯಾಸರು **ಹದಿನಾರು ರಾಜರ ಉಪಾಖ್ಯಾನವನ್ನು** ಹೇಳಲಾರಂಭಿಸಿದರು.

'ಧರ್ಮರಾಜ! ಹಿಂದೆ **ಶೈಬ್ಯರಾಜನಿಗೆ ಸೃಂಜಯನೆಂಬ** ಪುತ್ರನಿದ್ದ. ಅವನ ಸ್ನೇಹಿತರು **ಪರ್ವತ ಋಷಿಗಳು** ಹಾಗೂ **ದೇವರ್ಷಿ ನಾರದರು**. ಇವರಿಬ್ಬರು ಒಮ್ಮೆ ಸೃಂಜಯನ ಅರಮನೆಗೆ ಬಂದಾಗ ಅವರನ್ನು ರಾಜನು ಸೂಕ್ತ ಉಪಚಾರ ಮಾಡಿದ, ಕೆಲವು ಕಾಲ ಅವರು ಅಲ್ಲೇ ಇದ್ದರು. ಒಮ್ಮೆ ಈ ಮೂವರೂ ಕುಳಿತಾಗ ಸೃಂಜಯನ ರೂಪವತಿಯಾದ ಮಗಳು ಬಂದು ತಂದೆಯನ್ನು ನಮಸ್ಕರಿಸಿದಳು. ಸರ್ವಲಕ್ಷಣಸಂಪನ್ನಳಾದ ಈಕೆ ಲಕ್ಷ್ಮೀರೂಪಗಳಾದ ಹ್ರೀ, ಶ್ರೀ, ಕೀರ್ತಿ, ಧೃತಿ, ಸಿದ್ಧಿಯೋ, ಅಥವಾ ಚಂದ್ರನ ಪ್ರಭೆಯೋ? ಅಥವಾ ಉಷೆಯಾ? ಸೂರ್ಯಪ್ರಭೆಯಾ? ಎಂದು ನಾರದರು ಕೇಳಿದರು. ಅದಕ್ಕೆ ರಾಜನು ಇವಳು ತನ್ನ ಮಗಳೆಂದೂ, ವರಾಕಾಂಕ್ಷಿ ಎಂದೂ ಉತ್ತರಿಸಲು, ನಾರದರು ಇವಳನ್ನು ತಮಗೆ ಧರ್ಮಪತ್ನಿಯಾಗಿ ಧಾರೆಯೆರೆದರೆ ನಿನಗೆ ಶ್ರೇಯಸ್ಸಾಗುತ್ತದೆ ಎಂದು ನುಡಿದರು. ರಾಜನು ಆಯಿತು ಎಂದೇ ಬಿಟ್ಟ.

ಇದನ್ನು ಕೇಳಿದ ಪರ್ವತ ಋಷಿಗಳು ನಾನು ಮನಸಾ ವರಿಸಿದ ಕನ್ಯೆಯನ್ನು ನೀನೆ ಏಕೆ ವರಿಸಿದೆ ಎಂದು ನಾರದರನ್ನು ಆಕ್ಷೇಪಿಸಿ, 'ನನ್ನನ್ನು ಬಿಟ್ಟು ಒಬ್ಬನೇ ನೀನು ಸ್ವರ್ಗಕ್ಕೆ ಹೋಗಲಾರೆ' ಎಂದು ಶಪಿಸಿದರು.

[1]ಇದನ್ನು ಕೇಳಿದ ನಾರದರು ನೀನು ಮನಸಾ ವರಿಸಿದ ಮಾತ್ರಕ್ಕೆ ಯಾವ ಕನ್ಯೆಯೂ ಪತ್ನಿಯಾಗಲಾರಳು. ವಿವಾಹ ಪ್ರಕ್ರಿಯೆಯು ವಧೂವರರ ಮನೋ, ವಾಕ್, ಬುದ್ಧಿಗಳ ಐಕ್ಯತೆ(ಒಂದೇ ಆಗಿರುವುದು), ಸಂಭಾಷಣೆ, ಕನ್ಯಾದಾನಪ್ರತಿಜ್ಞೆ(ಪಿತೃವಿನಿಂದ), ಧಾರೋದಕ ಪೂರ್ವಕವಾಗಿ ದಾನ, ಅಗ್ನಿಸಾಕ್ಷಿಯಾಗಿ ಪಾಣಿಗ್ರಹಣ, ವೇದಮಂತ್ರೋಚ್ಚಾರಣೆಗಳು - ಇವುಗಳನ್ನು ಒಳಗೊಂಡಿದೆ. ಇವುಗಳಲ್ಲಿ ನೀನು ಯಾವುದನ್ನೂ ಪಾಲಿಸಿಲ್ಲ. ನನಗಾದರೂ ಸೃಂಜಯನು ವಾಗ್ದಾನ ಮಾಡಿದ್ದಾನೆ. ಹೀಗಾಗಿ ನಿನ್ನ ಕಲುಷಿತ ಮನಸ್ಸಿನಿಂದ ನನಗೆ ಶಾಪ ಕೊಟ್ಟಿದ್ದೀಯ. ಆದ್ದರಿಂದ ನೀನೂ ಕೂಡಾ ನನ್ನನ್ನು ಬಿಟ್ಟು ಸ್ವರ್ಗಕ್ಕೆ ಹೋಗಲಾರೆ ಎಂದು ನಾರದರು ಶಾಪ ಕೊಟ್ಟರು.

ಇದರಿಂದ ವಿಚಲಿತನಾದ ರಾಜನು ಇಬ್ಬರನ್ನೂ ಸಮಾಧಾನ ಮಾಡಿ ಸತ್ಕರಿಸಿದನು. ಅವರು ಮತ್ತೆ ಅರಮನೆಯಲ್ಲಿಯೇ ವಾಸ ಮಾಡಿದರು.

ಈ ಮಧ್ಯೆ ಸೃಂಜಯನು ಸತ್ಪುತ್ರಪ್ರಾಪ್ತಿಗಾಗಿ ಬ್ರಾಹ್ಮಣರನ್ನು ಸ್ನಾನ, ವಸ್ತ್ರ ಭೋಜನಾದಿ-ಗಳಿಂದ ಸತ್ಕರಿಸುತ್ತಿದ್ದನು. ಅವರೆಲ್ಲ ಬಂದು ನಾರದರಿಗೆ ತಾವು ಸಂತುಷ್ಟರಾಗಿದ್ದಾಗಿಯೂ, ರಾಜನಿಗೆ ಸತ್ಪುತ್ರವರವನ್ನು ಅನುಗ್ರಹಿಸಲು ಬೇಡಿಕೊಂಡರು. ನಾರದರು ಒಪ್ಪಿ ರಾಜನಿಗೆ ಎಂತಹ ಪುತ್ರ ಬೇಕೆಂದು ಕೇಳಿದರು. ಅದಕ್ಕೆ ರಾಜನು ಗುಣವಂತನಾದ, ಜೀವನದಲ್ಲಿ ಯಶಸ್ವಿಯಾದ, ಕೀರ್ತಿವಂತನಾದ, ದರ್ಶನೀಯನಾದ ಪುತ್ರನು ಬೇಕು. ಅವನ ಮಲಮೂತ್ರ, ಬೆವರು ಎಲ್ಲವೂ ಸುವರ್ಣಮಯವಾಗಿರಬೇಕೆಂದು ಬೇಡಿದ[2]. ನಾರದರು ತಥಾಸ್ತು ಎಂದರು. ಅಂತಹ ಮಗನೇ ಜನಿಸಿದ. ಅವರ ಅನುಗ್ರಹದಿಂದ ಅವನ ಕಣ್ಣೀರು, ಮಲಮೂತ್ರ, ಬೆವರು, ಪ್ರಾಯಃ ಮುಟ್ಟಿದ್ದೆಲ್ಲ ಚಿನ್ನವಾಗುತ್ತಿತ್ತು. ರಾಜನು ಇದರ ಸದ್ವಿನಿಯೋಗ ಮಾಡಿ ರಾಜ್ಯವನ್ನು ಪ್ರಜೆಗಳಿಗೆ ಬೇಕಾದುದೆಲ್ಲವನ್ನೂ ಸವರ್ಣಮಯವನ್ನಾಗಿ ಮಾಡಿಸಿಕೊಂಡ. ಮನೆ, ಕೋಟೆ,

---

೧ ಮನೋವಾಗ್ಬುದ್ಧಿಸಂಭಾಷಾಃ ಸತ್ಯಂ ತೋಯಮಥಾಗ್ನಯಃ।
ಪಾಣಿಗ್ರಹಣಮಂತ್ರಾಶ್ಚ ಪ್ರಥಿತಂ ದಾರಲಕ್ಷಣಮ್ ॥
ನ ತ್ವೇಷಾಂ ನಿಶ್ಚಿತಾ ನಿಷ್ಠಾ ತ್ವಯಾ ಸಾ ಮನಸಾ ಸ್ಮೃತಾ ॥ - ದ್ರೋಣಪರ್ವ(೫೨/೨೧,೨೨)

೨ ತಸ್ಮಿನ್ ವರಪ್ರಸಾದೇನ ಪ್ರವೃದ್ಧಸ್ತ್ವಮಿತ್ರೈರ್ಧನೈಃ।
ಕಾರಯಾಮಾಸ ನೃಪತಿಃ ಸೌವರ್ಣಂ ಸರ್ವಮೀಪ್ಸಿತಮ್ ॥
ಗೃಹಪ್ರಾಕಾರ ದುರ್ಗಾಣಿ ಬ್ರಾಹ್ಮಣಾವಸಥಾನ್ಯಪಿ।
ತಸ್ಯ ಸ್ಮ ರಾಜಸ್ತದ್ ವೇಶ್ಮ ಬಾಹ್ಯಾಶಾಭ್ಯಾಂತರಾಶ್ಚಯೇ ॥
ಸರ್ವಂ ತತ್ಕಾಂಚನಮಯಂ ಕಾಲೇನ ಪರಿವರ್ಧಿತಮ್ ॥ - ದ್ರೋಣಪರ್ವ(೫೨/೩೨-೩೪)

ಕೊತ್ತಲಗಳು, ಬ್ರಾಹ್ಮಣರ ಗೃಹಗಳು, ಶಯ್ಯಾಸನಗಳು, ವಾಹನ, ಅಡುಗೆ ಪಾತ್ರೆ, ರಾಜನ ಮನೆಯ ಹೊರಗೆ, ಒಳಗೆ ಎಲ್ಲಿ ನೋಡಿದರಲ್ಲಿ ಸುವರ್ಣಮಯವಾಗಿತ್ತು.

ಇದನ್ನು ಕೇಳಿ ನೋಡಿ, ತಿಳಿದ ಕಳ್ಳರು ದುರಾಶೆಯಿಂದ ರಾಜನಿಗೆ ತೊಂದರೆ ಕೊಡಲಾರಂಭಿಸಿ ಕೊನೆಗೆ ಐಶ್ವರ್ಯದ ಮೂಲ ರಾಜಕುಮಾರನನ್ನೇ ಅಪಹರಿಸಿ, ತಾವು ದುರಾಶೆಗೆ ಬಿದ್ದು ಅವನನ್ನು ಸಂಹರಿಸಿದರೂ, ಅವರಿಗೆ ಏನೂ ಸಿಗದೇ ನಿರಾಶೆ ಹೊಂದಿದರು. ಕೊನೆಗೆ ತಾವೂ ಪರಸ್ಪರ ಹೊಡೆದಾಡಿ ಸತ್ತರು.

ಇಷ್ಟೆಲ್ಲ ಆದುದು ರಾಜನಿಗೆ (ಸೃಂಜಯ) ತುಂಬಾ ಸಂಕಟವಾಗಿ ದುಃಖಪಡುತ್ತಿರುವುದನ್ನು ತಿಳಿದ ನಾರದರು ಬಂದು 'ರಾಜನ್! ಶೋಕಿಸಬೇಡ. ಸತ್ತವರು ವಾಪಸ್ಸು ಬರುವುದಿಲ್ಲ. ಬುದ್ಧಿಯ ವೈಕ್ಲವ್ಯವನ್ನು ಬಿಡು. ಪುತ್ರವ್ಯಾಮೋಹ ಬಿಡು. ನೀನು ಜ್ಞಾನವೃದ್ಧನೆಂದು ನಾನು ಭಾವಿಸಿದ್ದೇನೆ. ಆದ್ದರಿಂದ ವಾಸ್ತವವನ್ನು ಅರಿತು ದುಃಖಪಡಬೇಡ' ಎಂದರು. 'ನಿನ್ನ ಮನೆಯಲ್ಲಿ ಬ್ರಹ್ಮವಾದಿಗಳಾದ ನಾವಿದ್ದೇವೆ. ಆದರೂ ನಿನಗೆ ಬ್ರಹ್ಮಜ್ಞಾನದ ಅರಿವಾಗದಿರುವುದು ಸೋಜಿಗ. ನೀನೂ ಇಂದಲ್ಲ ನಾಳೆ ನಿನ್ನ ಬಯಕೆಗಳು ಈಡೇರದೆ ಮೃತನಾಗುವೆ.

ಪ್ರಪಂಚದಲ್ಲಿ ಯಾರೂ ಮೃತರಾಗದೆ ಇಲ್ಲ. ಹಿಂದೆ **ಅವಿಕ್ಷಿತ್** ರಾಜನ ಮಗನಾದ ಮರುತ್ತನೂ ಮೃತನಾದ. **ಸಂವರ್ತ ಋಷಿಗಳು** ಬೃಹಸ್ಪತ್ಯಾಚಾರ್ಯರ ಮೇಲಿನ ಸ್ಪರ್ಧೆಯಿಂದ ಭಾರೀ ಯಾಗ ಮಾಡಿಸಿದ್ದರು ಮರುತ್ತನಿಗೆ. ಆದರೂ, ಅವನು ಮೃತಿ ಹೊಂದಿದನು. ಮರುತ್ತ ರಾಜನ ಯಜ್ಞದ ಮಹತಿಯನ್ನು ಕೇಳು.

೧. ರಾಜನಿಗೆ ಸ್ವಯಂ ರುದ್ರದೇವರು ಹಿಮವತ್ಪರ್ವತದ ತಪ್ಪಲಿನಲ್ಲಿದ್ದ ಚಿನ್ನವನ್ನೇ ಕೊಟ್ಟರು.

೨. ಇಂದ್ರಾದಿದೇವತೆಗಳು, ಬೃಹಸ್ಪತಿಗಳು, ಯಜ್ಞದ ಸಲಕರಣೆಗಳನ್ನು ತಾವೇ ಹೊತ್ತರು.

೩. ಯಜ್ಞಶಾಲೆ ಸುವರ್ಣಮಯವಾಗಿತ್ತು. ಬ್ರಾಹ್ಮಣರಿಗೆ ಬೇಕಾದ ಅನ್ನ, ಅಶನ, ಭಕ್ಷ್ಯ, ಭೋಜ್ಯ, ಪಾನಗಳು ಸಮೃದ್ಧವಾಗಿದ್ದವು.

೪. ವೇದಪಾರಂಗತರು ಬಯಸಿದ ವಸ್ತ್ರಾಭರಣಾದಿಗಳು ಇದ್ದವು.

೫. ಮರುದ್ದೇವತೆಗಳು ಭೋಜನ ಬಡಿಸುತ್ತಿದ್ದರು. ಅಗ್ನಿಯು ಅಡುಗೆ ಮಾಡುತ್ತಿದ್ದ ವಿಶ್ವೇದೇವತೆಗಳು ಸಭಾಸದರಾಗಿದ್ದರು[೧].

---

೧ ಮರುತಃ ಪರಿವೇಷ್ಟಾರಃ ಮರುತ್ತಸ್ಯಾ ವಸನ್ ಗೃಹೇ ।
ಆವಿಕ್ಷಿತಸ್ಯ ಕ್ಷತ್ತಾಽಗ್ನಿರ್ವಿಶ್ವೇದೇವಾಃ ಸಭಾಸದಃ ॥ – ದ್ರೋಣಪರ್ವ(೫೨/೫೩)

೬. ಆತನ ಯಜ್ಞಾಹುತಿಗಳಿಂದ ತೃಪ್ತರಾದ ದೇವತೆಗಳು ಈತನ ರಾಜ್ಯವನ್ನು ಸಸ್ಯ-ಶ್ಯಾಮಲೆಯನ್ನಾಗಿ ಮಾಡಿದ್ದರು.

೭. ರಾಜನು ದೇವಋಷಿ, ಪಿತೃಋಣಗಳನ್ನು ದಾನಾದಿಗಳಿಂದ ತೀರಿಸಿ ಋಣಮುಕ್ತ-ನಾದನು.

೮. ಬ್ರಾಹ್ಮಣರಿಗೆ ಇಷ್ಟವಾದ ಶಯ್ಯಾಸನ, ಯಾನ, ಸುವರ್ಣರಾಶಿಗಳನ್ನೇ ಕೊಟ್ಟನು. ಅವರಿಗೆ ಒಯ್ಯಲು ಅಸಾಧ್ಯವಾಯಿತು.

೯. ಇಂದ್ರನೊಡನೆ ಸ್ಪರ್ಧೆ ಮಾಡುತ್ತಾ, ಪ್ರಜೆಗಳನ್ನು ಪಾಲನ ಮಾಡಿದ. ಪ್ರಜೆಗಳಿಗೆ ಸಿಗದಿದ್ದುದು ಯಾವುದೂ ಇರಲಿಲ್ಲ. ಇಂದ್ರನ ಅನುಗ್ರಹವನ್ನು ಸಂಪಾದಿಸಿದ್ದ[1].

೧೦. ಪೂರ್ಣ ಯೌವನದಿಂದ ಸಾಮಂತರಾಜರು, ಅಮಾತ್ಯರು, ಪತ್ನಿಪುತ್ರ ಪರಿವಾರ ಸಮೇತವಾಗಿ ೧೦೦೦ ವರ್ಷ ರಾಜ್ಯವಾಳಿ ಕೊನೆಗೆ ಅಕ್ಷಯವಾದ ಲೋಕಗಳನ್ನೇ ಹೊಂದಿದನು. ಆದರೂ ಆತನಿಗೂ ಮೃತ್ಯುವು ತಪ್ಪಲಿಲ್ಲ.

ನೋಡು ಸೃಂಜಯ ನೀನು ಹಾಗೂ ನಿನ್ನ ಪುತ್ರನಿಗಿಂತ ಮರುತ್ತರಾಜ ನಾಲ್ಕು ಪಟ್ಟು ಶ್ರೇಷ್ಠನಾಗಿದ್ದ ಪುಣ್ಯತಮನಾಗಿದ್ದ. ಯಾವ ಸಾಧನೆಗೈಯದೇ ಇದ್ದ ನಿನ್ನ ಮಗನ ಬಗ್ಗೆ ಏಕೆ ಶೋಕ? ಎಂತಹವರಿಗೂ ಮರಣ ತಪ್ಪಿದ್ದಲ್ಲ.

*****

## ಷೋಡಶರಾಜೋಪಾಖ್ಯಾನ

### ೨. ಸುಹೋತ್ರನ ಕಥೆ

ಸೃಂಜಯನಿಗೆ ಮತ್ತಷ್ಟು ವಿಶ್ವಾಸಬರಲು **ಸುಹೋತ್ರ**ನೆಂಬ ಜಗದೇಕವೀರನಾದ, ಶತ್ರುಗಳಿಂದ ಪ್ರತಿಭಟಿಸಲು ಅಸಾಧ್ಯನಾದ, ಶತ್ರುಗಳನ್ನು ಮರ್ದಿಸುವ ರಾಜನೂ ಮೃತನಾದನೆಂದು ಹೇಳಲು ಉಪಕ್ರಮಿಸಿದರು.

ಸುಹೋತ್ರನ ಜೀವನಗಾಥೆ ಹೀಗಿತ್ತು :

೧. ರಾಜ್ಯವನ್ನು ಧರ್ಮದಿಂದಲೇ ಹೊಂದಿ (ಸಂಪಾದಿಸಿ), ಬ್ರಾಹ್ಮಣರನ್ನು ಸತ್ಕರಿಸಿ, ಅವರಿಂದ ತನ್ನ ಶ್ರೇಯೋಮಾರ್ಗವನ್ನು ತಿಳಿದು ನಡೆಯುತ್ತಿದ್ದ.

---

೧ ಸ್ಪರ್ಧಮಾನಃ ಸ ಶಕ್ರೇಣ ಪ್ರಜಾಃ ಕೃತ್ವಾ ನಿರಾಮಯಾಃ।
ಶ್ರದ್ಧಯಾ ನಿರ್ಜಿತಾನ್ ಲೋಕಾನ್ ಗತಃ ಕಾಮದುಹೋಽಕ್ಷಯಾನ್ ॥
ಯೌವನೇನ ಸಹಸ್ರಾಬ್ದಂ ಮರುತ್ತೋ ರಾಜ್ಯಮನ್ವಶಾತ್ ॥ - ದ್ರೋಣಪರ್ವ(೫೨/೫೭,೫೮)

೨. ಪ್ರಜಾಪಾಲನೆ, ದಾನ, ದರ್ಮ, ಯಜ್ಞಶೀಲತೆ, ಶತ್ರುರಾಜರನ್ನು ಜಯಿಸುವುದು ಇವನ್ನೇ ಧರ್ಮ್ಯ(ವೆಂದು) ಭಾವಿಸಿ ಧಾರ್ಮಿಕವಾಗಿಯೇ ಧನವನ್ನು ಪಡೆಯಲು ಬಯಸಿದ[1].

೩. ದೇವತೆಗಳನ್ನು ಶಾಸ್ತ್ರೋಕ್ತ ವಿಧಿಯಿಂದ ಆರಾಧಿಸಿದ, ಶತ್ರುಗಳನ್ನು ತನ್ನ ಅಸ್ತ್ರಾದಿಗಳಿಂದ ಜಯಿಸಿದ, ಪ್ರಜೆಗಳನ್ನು ಸಂತೋಷಪಡಿಸಿ, ರಾಜನೆನಿಸಿದ (ಅನ್ವರ್ಥಕವಾಗಿ): **ಪ್ರಜಾನಾಂ ರಂಜನಾದ್ರಾಜಾ...**

೪. ರಾಜ್ಯವನ್ನು ಮ್ಲೇಚ್ಚ ಹಾಗೂ ಕಳ್ಳಕಾಕರಿಂದ ದೂರಮಾಡಿ ಆಳಿದ.

೫. ದೇವತೆಗಳು ಸಂತೃಪ್ತರಾಗಿದ್ದರು, ಇವನ ಆಳ್ವಿಕೆಯಲ್ಲಿ. ಹೀಗಾಗಿ ಪರ್ಜನ್ಯನು ಚಿನ್ನದ ಮಳೆ ಸುರಿಸಿದ, ಪ್ರತಿವರ್ಷ. ಇದರಿಂದ ನದಿಗಳು ಸುವರ್ಣದಿಂದ ಕೂಡಿದ್ದವು. ಸ್ವರ್ಣವಾಹಿನಿಗಳಾಗಿದ್ದವು. ಅಲ್ಲದೆ ಪರ್ಜನ್ಯನು ಬಂಗಾರದ ಆಮೆ, ಚೇಳುಗಳನ್ನೂ, ವಿವಿಧ ಜಾತಿಯ ಮೀನುಗಳನ್ನು ಮಳೆಗರೆಯುತ್ತಿದ್ದನು. ಆ ಕಾಲದ ಬಾವಿಗಳೂ ಅಗಾಧವಾದ ಸುವರ್ಣದಿಂದತುಂಬಿರುತ್ತಿದ್ದವು. ಇದನ್ನುನೋಡಿದನಾಗರಿಕರು ಆಶ್ಚರ್ಯಚಕಿತರಾಗಿದ್ದರು. ಬಾವಿಗಳಲ್ಲಿ ನೂರಾರು, ಸಾವಿರಾರು ಸುವರ್ಣದಮೀನು, ಕೂರ್ಮಗಳಿರುತ್ತಿದ್ದವು. ರಾಜ್ಯ ಹಿರಣ್ಮಯವಾದಾಗ ರಾಜನು [2]ಕುರುಜಾಂಗಲದಲ್ಲಿ ಯಜ್ಞಗಳನ್ನು ಮಾಡಿ ಅಖಂಡ ಸುವರ್ಣದಾನ ಮಾಡಿದನು. ೧೦೦೦ ಅಶ್ವಮೇಧ, ೧೦೦ ರಾಜಸೂಯಯಾಗಗಳನ್ನು ಮಾಡಿ ಕ್ಷತ್ರಿಯೋಚಿತವಾಗಿ ಮಾಡಿದ. ನಿತ್ಯನೈಮಿತ್ತಿಕ ಯಜ್ಞಗಳನ್ನು ಮಾಡಿ ಕೊನೆಗೆ ಬಯಸಿದ ಗತಿ ಹೊಂದಿದ(ಮೃತನಾದ). ಹೀಗೆ ನಿನಗಿಂತಲೂ ನಾಲ್ಕು ಪಟ್ಟು ಉತ್ತಮನೇ ಮೃತನಾದ. ನಿನ್ನ ಮಗನ ಮರಣದ ಬಗ್ಗೆ ಏಕೆ ದುಃಖಿಸುತ್ತೀ ಎಂದರು ನಾರದರು.

*****

## ಷೋಡಶರಾಜೋಪಾಖ್ಯಾನ

### ೩. ಅಂಗರಾಜನ ಚರಿತ್ರೆ

'ರಾಜನ್ ಪುರುವಂಶದಲ್ಲಿ ಬಂದ **ಅಂಗರಾಜನೂ** ಮೃತನಾದನೆಂದು ಕೇಳಿದ್ದೇವೆ. ಅವನ ಹಿರಿತನವನ್ನಾದರೂ ಕೇಳಿ ನಿನ್ನ ಪುತ್ರ ಶೋಕವನ್ನು ಮರೆಯಾಗಿಸು' ಎಂದರು ನಾರದರು.

---

೧ ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ । - ಗೀತಾ
ಧರ್ಮೇಣೇಜ್ಯಾಸಾಧನಾನಿ ಸಾಧಯಿತ್ವಾ ವಿಧಾನತಃ ॥ - ಸದಾಚಾರಸ್ಮೃತಿ

೨ ಕುರುಜಾಂಗಲ - ಕುರುದೇಶ ಮತ್ತು ಜಾಂಗಲದೇಶ; ಕುರುಕ್ಷೇತ್ರ.
ತಸ್ಯ ನಾಮ್ನಾऽಭಿವಿಖ್ಯಾತಂ ಪೃಥಿವ್ಯಾಂ ಕುರುಜಾಂಗಲಮ್ ।
ಕುರುಕ್ಷೇತ್ರಂ ಸ ತಪಸಾ ಪುಣ್ಯಂ ಚಕ್ರೇ ಮಹಾತಪಃ ॥ - ಮ.ಭಾ.ಆ.ಪ.(೧೦೧/೩೮)

ಅಂಗರಾಜನು -

೧. ಸಹಸ್ರಾರು ಅಶ್ವಮೇಧಯಾಗಗಳನ್ನು ಮಾಡಿ ಅದಕ್ಕೋಸ್ಕರ ಸಹಸ್ರಾರು ಬಿಳಿ ಕುದುರೆಗಳನ್ನು ಸಂಚರಿಸಲು ಬಿಟ್ಟಿದ್ದನು (ಶತ್ರುರಾಜರು ಅವನ್ನು ಬಂಧಿಸಿ ಯುದ್ಧ ಮಾಡಬಹುದೆಂದು ಸೂಚಿಸಲು. ಸಾಮಾನ್ಯವಾಗಿ ಒಂದು ಅಶ್ವಮೇಧಯಾಗ ಮಾಡುತ್ತಿರುತ್ತಾರೆ ರಾಜರು. ಇವನೋ ಸಹಸ್ರಾರು ಮಾಡಿದ).

೨. ಈ ಯಜ್ಞದಲ್ಲಿ ಜ್ಞಾನಕಾರ್ಯದ ಅಂಗವಾಗಿ ಅಸಂಖ್ಯಾತ ವೇದಾಂಗ (ಶಿಕ್ಷಾ ವ್ಯಾಕರಣ, ಮೀಮಾಂಸಾ ಇತ್ಯಾದಿ) ವಿದ್ವಾಂಸರು ಭಾಗವಹಿಸಿದ್ದರು. ಎಲ್ಲ ದೇವತೆಗಳೂ ಬಂದಿದ್ದರು. ವೇದವಿದ್ಯಾವ್ರತಸ್ನಾತರಾದವರು (ಪಾರಂಗತರು), ಸಮಾಜದ ಎಲ್ಲ ಸ್ತರದ ವಿಚಕ್ಷಣರು ಬಂದಿದ್ದರು. ಅವರೆಲ್ಲರೂ ರಾಜನಿಂದ ಅತ್ಯಂತ ಸತ್ಕೃತರಾಗಿದ್ದರು. ಭೂರಿದಕ್ಷಿಣೆಗಳನ್ನು ಪಡೆದಿದ್ದರು[೧].

೩. ಸಾಲಂಕೃತ ಸುಸಜ್ಜಿತವಾದ ೧೦೦೦೦ ಆನೆಗಳನ್ನು ದಾನ ಮಾಡಿದನು.

೪. ೧೦ ಲಕ್ಷ ಸಾಲಂಕೃತ ಕನ್ಯಾದಾನ ಮಾಡಿದ. ಪ್ರತಿಯೊಬ್ಬರಿಗೂ ೪ ಕುದುರೆ ಹೂಡಿದ ರಥ, ಗೃಹ, ಕ್ಷೇತ್ರ, ಗೋ, ಧನ ದಾನ ಮಾಡಿದನು.

೫. ಸುವರ್ಣಾಲಂಕೃತವಾದ೧೦ ಲಕ್ಷ ವೃಷಭ(ಎತ್ತು)ಗಳನ್ನುಸುವರ್ಣಶೃಂಗ(ಕೋಡು), ಬೆಳ್ಳಿಯ ಗೊರಸು ಮತ್ತು ಕರುಸಹಿತ ೧೦೦೦ ಗೋದಾನ ಮತ್ತು ಕಂಚಿನಪಾತ್ರೆಯೊಡನೆ ಮಾಡಿದ್ದನು.

೬. ವಿವಿಧ ರತ್ನರಾಶಿಗಳನ್ನು, ಅನ್ನಪರ್ವತಗಳನ್ನು, ದಾಸದಾಸಿಯರನ್ನು, ಒಂಟೆ, ಆಡು, ಕುರಿಗಳನ್ನು ಅಸಂಖ್ಯವಾಗಿ ದಾನ ಮಾಡಿದನು.

೭. ಪುರಾಣಜ್ಞರು ಅಂಗರಾಜನ ಯಜ್ಞದ ಬಗ್ಗೆ ಹಾಡಿಹೊಗಳುತ್ತಿದ್ದರು. ಆ ಯಾಗದಲ್ಲಿ ಇಂದ್ರನು ಸೋಮರಸದಿಂದ, ದೇವ, ಮನುಷ್ಯ, ಗಂಧರ್ವರು ದಕ್ಷಿಣೆಗಳಿಂದ, ಬ್ರಾಹ್ಮಣರು ದಕ್ಷಿಣೆಗಳಿಂದ ತೃಪ್ತರಾದರು. ಅವನು ಮಾಡಿದ ಪ್ರತಿಯಜ್ಞವು ಒಂದಕ್ಕಿಂತಲೂ ಒಂದು ಮೀರುತ್ತಿತ್ತು.

ಇಂತಹ ಅಂಗರಾಜನೂ ಮೃತನಾದ. ಅವನು ನಿನಗಿಂತ ಉತ್ತಮವಾಗಿ ಬದುಕಿದ. ಯಜ್ಞಮಾಡದ, ದಕ್ಷಿಣೆ ಕೊಡದ ನಿನ್ನ ಮಗನ ಬಗ್ಗೆ ಏಕೆ ಶೋಕಿಸುತ್ತೀ? ಎಂದು ಸಮಾಧಾನ ಪಡಿಸಿದರು ನಾರದರು.

***

---

೧ ಯಃ ಸಹಸ್ರಂ ಸಹಸ್ರಾಣಾಂ ಶ್ವೇತಾನಶ್ವಾನವಾಸೃಜತ್ ।
ತಸ್ಯಾಶ್ವಮೇಧೇ ರಾಜರ್ಷೇಃ ಸರ್ವೇ ದೇವಾ ಸಮಾಯಯುಃ ॥
ಶಿಕ್ಷಾಕ್ಷರವಿದಿಜ್ಞಾನಾಂ ನಾಸೀತ್ ಸಂಖ್ಯಾ ವಿಪಶ್ಚಿತಾಮ್ ॥

## ಷೋಡಶರಾಜೋಪಾಖ್ಯಾನ

### ೩. ಶಿಬಿಯ ಚರಿತ್ರೆ

ಸೃಂಜಯನೇ! ಶಿಬಿ ಚಕ್ರವರ್ತಿಯ ಮಹತಿಯನ್ನಾದರೂ ಕೇಳಿ ಪುತ್ರ ದುಃಖ ಮರೆ.

೧. ಶಿಬಿಯು ಚಂದ್ರವಂಶದಲ್ಲಿ ಬಂದ ಪುರೂರವ, ಯಯಾತಿಯ ವಂಶದ ಉಶೀನರ ರಾಜನ ಮಗ. ರಾಜರ್ಷಿಯಾಗಿ ಕೀರ್ತಿವಂತನಾದ. ಇಂದ್ರಾಗ್ನಿಯರಿಂದ ಪರೀಕ್ಷಿಸಲ್ಪಟ್ಟು ಅವರ ಅನುಗ್ರಹವನ್ನು ಸಂಪಾದಿಸಿದ ಚಕ್ರವರ್ತಿಯೇ ಶಿಬಿ.

೧. ತನ್ನ ರಥ ಧ್ವನಿಯಿಂದ ಪ್ರತಿಧ್ವನಿಸುತ್ತಾ ಸಪ್ತಪರ್ವತ, ದ್ವೀಪ, ಸಮುದ್ರಗಳಿಂದ ಕೂಡಿದ ಸಮಸ್ತ ಭೂಮಂಡಲವನ್ನು ಗೆದ್ದು ಭುಮಿಯನ್ನೇ ಚರ್ಮದಂತೆ ಸುತ್ತಿದ್ದನಂತೆ. ಅಂದರೆ ಏಕಚಕ್ರಾಧಿಪತಿಯಾಗಿದ್ದ. ಸಮಕಾಲೀನ ರಾಜರಿಂದ ಮಾನ್ಯನಾಗಿದ್ದ. ಅಶ್ವಮೇಧಗಳನ್ನು ಮಾಡಿದ್ದ.

೩. ಅವನು ಕೊಟ್ಟ ಸಹಸ್ರಾರುಕೋಟಿ ದಕ್ಷಿಣೆಗಳನ್ನು (ಪ್ರಾಯಃ ಬ್ರಾಹ್ಮಣರು ಒಯ್ಯದೆ) ಗಂಗೆಯಲ್ಲಿ ಎಸೆದಿದ್ದುದರಿಂಧ ಗಂಗಾಪ್ರವಾಹಕ್ಕೆ ತಡೆಯಾಯಿತಂತೆ.

೪. ಅವನು ಮಾಡಿದ ದಾನ, ಮಳೆಯ ಹನಿಗಳನ್ನೂ, ಆಕಾಶದಲ್ಲಿನ ನಕ್ಷತ್ರಗಳನ್ನೂ, ಗಂಗಾದಡದಲ್ಲಿನ ಮರಳಿನ ಕಣಗಳನ್ನೂ, ಮೇರುಪರ್ವತದ ಶಿಲಾ ಸಂಖ್ಯೆಗಳನ್ನು ಸಾಗರದಲ್ಲಿನ ಜಲಚರಪ್ರಾಣಿಸಂಖ್ಯೆ, ರತ್ನಗಳನ್ನೂ ಮೀರುವಷ್ಟು ಗೋದಾನ ಮಾಡಿದ್ದನು.

೫. ಆತನ ಯಜ್ಞಶಾಲೆಗಳು ಸುವರ್ಣಮಯವಾಗಿಯೂ, ಬಯಸಿದ ಎಲ್ಲ ಭೋಗಪದಾರ್ಥಗಳಿಂದಲೂ ಪೂರ್ಣವಾಗಿದ್ದವು. ಭಕ್ಷ್ಯಭೋಜ್ಯಗಳು ಪರ್ವತದಷ್ಟು ಕ್ಷೀರ-ಪಾಯಸಾದಿಗಳು ನದೀ ಸ್ರೋತಸ್ಸುಗಳಂತೆ ಹರಿಯುತ್ತಿದ್ದವು. ರುಚಿಯಾಗಿಯೂ, ರುಚಿಕರವೂ ಆದ ಇವನ್ನು ಲಕ್ಷ ಲಕ್ಷ ಬ್ರಾಹ್ಮಣರು ಉಂಡು ತೃಪ್ತರಾದರು.

೬. ಶಿಬಿಯ ಯಜ್ಞಕ್ಕೆ ಮೆಚ್ಚಿನ ಶಿವ ವರ ಕೊಟ್ಟ-

**ಅಕ್ಷಯಾ ಚ ದದೌ ವಿತ್ತಂ ಶ್ರದ್ಧಾಂ ಕೀರ್ತಿಂ ತತೋಽವ್ಯಯಾಮ್ ।**
**ಯಥಾರ್ಥಮೇವ ಭೂತಾನಾಂ ಪ್ರಿಯತ್ವಂ ಸ್ವರ್ಗಮುತ್ತಮಮ್ ॥**

ಶಿಬಿ ಇತ್ತ ವಿತ್ತಾದಿಗಳು ಅಕ್ಷಯವಾಗಲಿ, ಆತನ ಕೀರ್ತಿ ಅಕ್ಷಯವಾಗಲಿ, ರಾಜನಿಗೆ ಮುಖ್ಯವಾಗಿ ಬೇಕಾದ ಪ್ರಜಾನುರಾಜ ಸಂಪಾದನೆಯನ್ನೂ ವರವನ್ನು ಕೊಟ್ಟರು ರುದ್ರದೇವರು.

೭. ಹೀಗೆ ತನ್ನ ಜನ್ಮಸಾರ್ಥಕಮಾಡಿಕೊಂಡ ಶಿಬಿ, ಮುಂದೆ ಕಾಲವಶನಾದ. ಯಾರಿಗೂ ಮೃತ್ಯು ಬಿಡದು. ಆದ್ದರಿಂದ ಇಂತಹ ಸಾಧನೆ ಮಾಡದ ಮಗನ ಮೇಲೆ ಏಕಿಷ್ಟು ವ್ಯಾಮೋಹ, ದುಃಖ. ಅದನ್ನು ತ್ಯಜಿಸೆಂದರು ನಾರದರು.

*****

## ಷೋಡಶರಾಜೋಪಾಖ್ಯಾನ

### ೫. ಶ್ರೀರಾಮನ ಚರಿತೆ

ಸೃಂಜಯ! ಅಷ್ಟೇಕೆ ಶ್ರೀರಾಮನು(ದಶರಥಪುತ್ರ) ಅವತಾರ ಕಾರ್ಯ ಮುಗಿಸಿ ಪರಂಧಾಮಕ್ಕೆ ತೆರಳಿದನೆಂದು ಕೇಳುತ್ತೇವೆ.

(ವಿ. ಸೂ. : ಹಿಂದೆ ಹೇಳಲಾದ ರಾಜರ ಬಗ್ಗೆ 'ಲೋಕಾನ್ ಗತಃ', 'ದಿವಂಗತಃ', 'ಮೃತಂ' ಎಂದು ಇದೆ. ರಾಮನ ಬಗ್ಗೆ ಮಾತ್ರ ಕೇವಲ 'ಗತಂ' ಎಂದಿದೆ. ಎಂದರೆ ತನ್ನ ಲೋಕಕ್ಕೆ - ವೈಕುಂಠಕ್ಕೆ ಹೋದನೆಂಬ ಅರ್ಥ ಗ್ರಹಿಸಬೇಕು. ಪರಮಾತ್ಮನಿಗೆ ಜನನ, ಮರಣ, ದೇಹನಾಶಾದಿಗಳಿಲ್ಲವೆಂಬುದು ಶಾಸ್ತ್ರಸಿದ್ಧ)

೧. ಅವನನ್ನು ಪ್ರಜೆಗಳು ಮೆಚ್ಚಿದ್ದರು; ತಾಯಿ ತನ್ನ ಮಗನನ್ನು ಮೆಚ್ಚುವಂತೆ. ಅವನಲ್ಲಿ ಅಸಂಖ್ಯ ಗುಣಗಳಿದ್ದವು. ರಾಮನ ಪರಂಬ್ರಹ್ಮಸೂಚಕವಾಗಿರುವ ವಿಶೇಷಣವಿದು.

**ಯಂ ಪ್ರಜಾ ಅನ್ವಮೋದಂತ ಮಾತಾ ಪುತ್ರಮಿವೌರಸಮ್ ।**
**ಅಸಂಖ್ಯೇಯಾ ಗುಣಾ ಯಸ್ಮಿನ್ನಾಸನ್ನಮಿತ ತೇಜಸಿ ॥ ೫೬/೧**

೨. ಪಿತೃವಾಕ್ಯ ಪರಿಪಾಲಕನಾಗಿ ತಪಸ್ವಿಋಷಿಗಳ ರಕ್ಷಣೆಗಾಗಿ ಸೋದರ ಲಕ್ಷ್ಮಣ ಹಾಗೂ ಪತ್ನಿಯೊಂದಿಗೆ (ಸೀತೆ)ಹದಿನಾಲ್ಕು ವರ್ಷ ವನವಾಸ ಮಾಡಿದ ಮಹಾತ್ಮ ರಾಮ.

**ತಪಸ್ವಿಜನರಕ್ಷಾರ್ಥಂ ಸಹಸ್ರಾಣಿ ಚತುರ್ದಶ ।**
**ಜಘಾನ ಚ ಜನಸ್ಥಾನೇ ರಾಕ್ಷಸಾನ್ ಮನುಜಾಧಿಪಃ ॥**

ಅರಣ್ಯದಲ್ಲಿ ಋಷಿಗಳ ರಕ್ಷಣೆಗಾಗಿ ೧೪೦೦೦ ರಾವಣನ ಪರಿವಾರದ ರಾಕ್ಷಸರನ್ನು ಸಂಹರಿಸಿದ. ಇದರಿಂದ ವನವಾಸದ ನಿಜವಾದ ಉದ್ದೇಶ ತಿಳಿಯುತ್ತದೆ.

೩. ಅರಣ್ಯದಲ್ಲಿದ್ದಾಗಸೀತಾ(ಕೃತಿಯ)ಪಹಾರರಾವಣನಿಂದ. ರಾಮನುಸುಗ್ರೀವನೊಡನೆ ಸಖ್ಯ ಮಾಡಿಕೊಂಡು ಲಂಕೆಗೆ ಸೇತುವೆ ನಿರ್ಮಿಸಿ ರಾವಣನನ್ನು ಸಪರಿವಾರದೊಂದಿಗೆ ಸಂಹರಿಸಿದ. ರಾವಣ ಸುರಾಸುರರಿಂದ ಅವಧ್ಯನಾಗಿದ್ದ. ದೇವಬ್ರಾಹ್ಮಣರಿಗೆ ಕಂಟಕನಾಗಿದ್ದ.

**ಸುರಾಸುರೈರವಧ್ಯಂತು ದೇವಬ್ರಾಹ್ಮಣಕಂಟಕಮ್ ।**
**ಜಘಾನ ಸ ಮಹಾಬಾಹುಃ ಪೌಲಸ್ತ್ಯಂ ಸಗಣಂ ರಣೇ ॥ ೫೬/೮**

೪. ನಂತರ ಧರ್ಮಾತ್ಮನಾದ ವಿಭೀಷಣನಿಗೆ ಲಂಕಾಧಿಪತಿಯನ್ನಾಗಿ ಮಾಡಿ, ಆತ ನೀಡಿದ ಪುಷ್ಪಕದಲ್ಲಿ ಕುಳಿತು ಅಯೋಧ್ಯೆಗೆ ಬಂದು, ಭರತನಿಂದ ರಾಜ್ಯವನ್ನು ಪಡೆದು, ಸೋದರರಾದ ಭರತ, ಶತ್ರುಘ್ನ ಲಕ್ಷ್ಮಣರೊಡನೆ, ಸೀತೆಯೊಡನೆ ಚತುಃಸಮುದ್ರಸಮೇತವಾದ ಭೂಮಿಯನ್ನು ೧೧೦೦೦ವರ್ಷ ಆಳಿದನು. ನಂತರ ಭೂರಿದಕ್ಷಿಣೆಗಳಿಂದ ಅಶ್ವಮೇಧಾದಿ ಯಜ್ಞಗಳಿಂದ (ತನ್ನನ್ನೇ) ಪೂಜಿಸಿಕೊಂಡು, ದೇವರ್ಷಿ ಮನುಷ್ಯರಿಂದ ಸೇವಿತನಾದ. ಪ್ರಜೆಗಳನ್ನು ಧರ್ಮದಿಂದ ಪಾಲಿಸಿದ. ನೂರು ಅಶ್ವಮೇಧಾದಿಯಜ್ಞಗಳನ್ನು ಮಾಡಿದನು.

೫. ರಾಮರಾಜ್ಯದಲ್ಲಿ ಯಾರಿಗೂ ಯಾವ ಕೊರತೆಯಿರಲಿಲ್ಲ, ಹಸಿವು, ನೀರಡಿಕೆ, ರೋಗರುಜಿನಗಳು ಇರಲಿಲ್ಲ ತಾನು ಸ್ವಯಂ ಗುಣಪೂರ್ಣನಾಗಿದ್ದ ಎಲ್ಲ ಸ್ಥಾವರ, ಜಂಗಮಗಳಿಗಿಂತಲೂ ಅತಿಶಯವಾಗಿ ಬೆಳಗಿದನು.

**ಸತತಂ ಗುಣಸಂಪನ್ನೋ ದೀಪ್ಯಮಾನಃ ಸ್ವತೇಜಸಾ ।**
**ಅಪಿ ಸರ್ವಾಣಿ ಭೂತಾನಿ ರಾಮೋ ದಾಶರಥಿರ್ಬಭೌ ॥ ೫೬/೨೨**

೬. ಪ್ರಜೆಗಳಿಗೆ ಅಕಾಲ ಮರಣ, ದುಃಖ, ಅನರ್ಥಗಳಿರಲಿಲ್ಲ ಜಗತ್ತಿಗೆ. ಅಕಾಲ ಮೃತ್ಯುವಿರಲಿಲ್ಲ ಜನರಿಗೆ; ಪ್ರಜೆಗಳು ದೀರ್ಘಾಯುಷಿಗಳೂ, ಬ್ರಾಹ್ಮಣರು ಚತುರ್ವೇದ ಸಂಪನ್ನರೂ, ಹವ್ಯಕವ್ಯ, ಇಷ್ಟಾಪೂರ್ತಗಳನ್ನು ಮಾಡಿ ಸ್ವರ್ಗ ಹೊಂದುತ್ತಿದ್ದರು.

೭. ರಾಮರಾಜ್ಯದಲ್ಲಿ ಅಧರ್ಮಾಚರಣೆ ಇರಲಿಲ್ಲ. ಎಲ್ಲರೂ ಸ್ವವರ್ಣಾಶ್ರಮ ಧರ್ಮ-ಗಳನ್ನು ಅನುಸರಿಸುತ್ತಿದ್ದರು. ಪುರಾಣವಿದರು ಆ ಕಾಲವನ್ನು –

**ಸಹಸ್ರಪುತ್ರಾಃ ಪುರುಷಾ ದಶವರ್ಷ ಶತಾಯುಷಃ ।**
**ನ ಚ ಜ್ಯೇಷ್ಠಾಃ ಕನಿಷ್ಠೇಭ್ಯಸ್ತದಾಶ್ರಾದ್ಧಾನಿ ಕುರ್ವತೇ ॥**

– ಆ ಕಾಲದ ಪುರುಷರು ಸಾವಿರಪುತ್ರ ಸಂತಾನವನ್ನು ಹೊಂದಿದ್ದರು. ಸಾವಿರವರ್ಷ ಆಯುಷ್ಯವುಳ್ಳವರೂ ಆಗಿದ್ದರು. ದೊಡ್ಡವರು, ಚಿಕ್ಕವರ ಶ್ರಾದ್ಧ ಮಾಡುತ್ತಿರಲಿಲ್ಲ. ಹೀಗೆ ಹಾಡಿ ಹೊಗಳಿದ್ದಾರೆ.

೮. ಕಳ್ಳಕಾಕರ ಭಯವಾಗಲಿ, ಆಧಿವ್ಯಾಧಿಗಳಾಗಲೀ, ಯಾವ ಉಪದ್ರವಗಳಾಗಲೀ , ಕ್ಷಾಮಡಾಮರಗಳಾಗಲೀ ಇರುತ್ತಿರಲಿಲ್ಲ. ಸಕಲ ಲೋಕಪ್ರಸನ್ನತೆಯಿಂದ (ಸುಖಸಮೃದ್ಧಿ) ಕೂಡಿತ್ತು. ಜಗವೆಲ್ಲ ರಾಮಮಯವಾಗಿತ್ತು. ಪ್ರಜೆಗಳೆಲ್ಲರೂ ರಾಮನಾಮಸ್ಮರಣೆ ಮಾಡುತ್ತಿದ್ದರು.

**ರಾಮೋ ರಾಮೋ ರಾಮ ಇತಿ ಪ್ರಜಾನಾಮಭವನ್ ಕಥಾಃ ।**
**ರಾಮಭೂತಂ ಜಗದಭೂದ್ರಾಮೇ ರಾಜ್ಯಂ ಪ್ರಶಾಸತಿ ॥ ೫೬/೩೫**

ಅಲ್ಲದೆ ರಾಮನು ಚತುರ್ವಿಧ ಪ್ರಜೆಗಳನ್ನು ತನ್ನೊಡನೆ ಸ್ವರ್ಗಕ್ಕೆ, ಮೋಕ್ಷಕ್ಕೆ ಕರೆದುಕೊಂಡು ಹೋದನು.

ಇಂತಹ ಮಹಾನ್ ವ್ಯಕ್ತಿತ್ವದ ರಾಮನಂತೆ ನಿನ್ನ ಮಗನಿದ್ದನೇ? ಹಾಗಿರುವಾಗ ಏಕೆ ಶೋಕಿಸುವೆ ಎಂದು ನಾರದರು ಸೃಂಜಯನಿಗೆ ಸಮಾಧಾನ ಹೇಳಿದರು.

*****

## ಷೋಡಶರಾಜೋಪಾಖ್ಯಾನ

### ೬. ಭಗೀರಥಚರಿತೆ

ತನ್ನ ಪೂರ್ವಜರಾದ ೬೦೦೦೦ ಸಗರ ಪುತ್ರರನ್ನು ಸ್ವರ್ಗಕ್ಕೆ ಕಳಿಸುವ (ಸದ್ಗತಿ ಕೊಡಿಸುವ) ಉದ್ದೇಶದಿಂದ ಗಂಗಾವತರಣಕ್ಕೆ ಕಾರಣನಾದ ಭಗೀರಥನೂ ಮೃತನಾದನೆಂದು ಕೇಳಿದ್ದೇವೆ.

೧. ಭಗೀರಥನ ಆಳ್ವಿಕೆ ಇಂದ್ರನಿಗೂ ಸಂತಸ ತಂದಿತ್ತು. ಭಗೀರಥ ನೂರು ಅಶ್ವಮೇಧಗಳನ್ನು ಆಚರಿಸಿ, ದೇವತೆಗಳನ್ನು ಸಂತೋಷಪಡಿಸಿದ, ಬ್ರಾಹ್ಮಣರಿಗೆ ಹತ್ತು ಲಕ್ಷ ಕನ್ಯೆಯರನ್ನು (ಸುವರ್ಣಾಲಂಕೃತರಾದ), ರಾಜಪುತ್ರರನ್ನೂ, ರಾಜಪುತ್ರಿಯರನ್ನೂ ದಾನ ಮಾಡಿದ್ದನು (ದಾಸದಾಸಿಯರನ್ನು ದಾನ ಮಾಡುವುದು ವಾಡಿಕೆ).

ಅಲ್ಲದೆ ಪ್ರತಿ ಕನ್ಯೆಯೊಡನೆ ನಾಲ್ಕು ಅಶ್ವಗಳ ರಥವೂ, ಸುವರ್ಣಮಾಲೆಯೂ, ನೂರು ಆನೆಗಳೂ ಕೊಡಲ್ಪಟ್ಟಿದ್ದವು. ಪ್ರತಿ ಆನೆಯ ಹಿಂದೆ ಸಾವಿರ ಕುದುರೆ, ಪ್ರತಿ ಅಶ್ವದ ಹಿಂದೆ ೧೦೦೦ ಗೋವುಗಳು, ಆಡುಗಳೂ, ಕುರಿಗಳೂ ಕೊಡಲ್ಪಟ್ಟಿದ್ದವು(ಪಶು ಸಂಪತ್ತು ಐಶ್ವರ್ಯದ ದ್ಯೋತಕವಾದ ಕಾಲವದು).

೨. ಭಗೀರಥ ಕೊಟ್ಟ ಈ ಪರಿ ಸಂಪತ್ತಿನಿಂದ ಭೂಮಿಯೆಲ್ಲ ತುಂಬಿ ತುಳುಕಿತು. ಭಗೀರಥನ ತಪಸ್ಸಿಗೆ ಒಲಿದ ಗಂಗೆ ಪರ್ವತಾದಿಗಳನ್ನು ಸೀಳಿ ಬಂದು ತುಂಬಾ ಆಯಾಸದಿಂದಲೋ ಏನೋ ಎಂಬಂತೆ ಭಗೀರಥನ ತೊಡೆಯ ಮಾಲೆ ಕುಳಿತಳಂತೆ, ಮಗಳಂತೆ. ಆದ್ದರಿಂದ ಆಕೆ ಭಾಗೀರಥೀ ಆದಳು. ಮಗಳನ್ನಾಗಿ ಉಪಚರಿಸಿದ. ಇದನ್ನೇ ಭಗೀರಥನ ಭೂರಿದಕ್ಷಿಣಾಕ ಯಜ್ಞವನ್ನು ಹೊಗಳುತ್ತಾ ಗಂಗೆ ಭಗೀರಥನನ್ನು ತಂದೆಯಾಗಿ ಸ್ವೀಕರಿಸಿ ಸಮುದ್ರಗಾಮಿಯಾದಳೆಂದು ದೇವಮನುಷ್ಯಗಂಧರ್ವಾದಿಗಳು ಹಾಡುತ್ತಾರೆ.

**ಭಗೀರಥಂ ಯಜಮಾನಮೈಕ್ಷ್ವಾಕುಂ ಭೂರಿದಕ್ಷಿಣಮ್ ।**
**ಗಂಗಾ ಸಮುದ್ರಗಾ ದೇವೀ ವವ್ರೇ ಪಿತರಮೀಶ್ವರಮ್ ॥** - ೫೭/೯

ಹೀಗಾಗಿ ಅವನ ಯಜ್ಞಗಳೆಲ್ಲ ಇಂದ್ರಾದಿ ದೇವತೆಗಳಿಂದ ಸ್ವೀಕರಿಸಲ್ಪಟ್ಟು ನಿರ್ವಿಘ್ನವಾದವು.

೩. ಬಯಸಿದ್ದೆಲ್ಲವನ್ನು ಬ್ರಾಹ್ಮಣರಿಗೆ ಕೊಟ್ಟನು, ತನಗೆ ಪ್ರಿಯವಾದುದನ್ನೂ ದಾನ ಮಾಡಿದ ಭಗೀರಥ. ಬ್ರಾಹ್ಮಣರ ಅನುಗ್ರಹದಿಂದ ಭಗೀರಥ ಕೊನೆಗೆ ಬ್ರಹ್ಮಲೋಕಕ್ಕೆ ಹೋದನು. ಅವನು ಹೋದ ದಿಕ್ಕನ್ನೇ ನೋಡಿದ , ಬಾಗಿದ ವೃಕ್ಷಗಳು ಈಗಲೂ ಕಾಣಸಿಗುತ್ತವೆ ಎನ್ನುತ್ತದೆ ಮಹಾಭಾರತ.

ರಾಜನ್ ಇಂತಹ ಭಗೀರಥನಿಗೆ ನೀನು ಸಮನೇ? ನಿನ್ನ ಮಗನು ಸಮನೇ? ಹೇಳು? ಅಂತಹ ನಿನ್ನ ಮೃತ ಮಗನ ಬಗ್ಗೆ ಏಕೆ ಶೋಕ? ಎಂದರು ನಾರದರು.

*****

## ಷೋಡಶರಾಜೋಪಾಖ್ಯಾನ

## ೭. ದಿಲೀಪನ ಕಥೆ

೧. ಸೂರ್ಯವಂಶದ ದಿಲೀಪ ನೂರಾರು ಯಜ್ಞಗಳನ್ನು ಮಾಡಿದ್ದ. ಆತನ ಯಜ್ಞದಲ್ಲಿ ಲಕ್ಷೋಪಲಕ್ಷ ವೇದವೇದಾಂಗತತ್ತ್ವಜ್ಞಾನಿಗಳು, ಯಜ್ಞವೇ ತಮ್ಮ ಜೀವಿತದ ಗುರಿ ಎಂದು ಭಾವಿಸಿದ ದ್ವಿಜರು ಭಾಗವಹಿಸಿದ್ದರು. ಆತನು ಒಂದು ದಿನ ಮೃತನಾದ. ಆತನ ಮಹಾಕಾರ್ಯಗಳನ್ನು ಜ್ಞಾನಿಗಳು ಕೊಂಡಾಡುತ್ತಾರೆ.

೨. ಯಜ್ಞ ಮಾಡಿ ದೇವತೆಗಳನ್ನು ಸಂತೋಷಪಡಿಸಿದುದಲ್ಲದೆ ಭೂಮಂಡಲವನ್ನು ಬ್ರಾಹ್ಮಣರಿಗೆ ದಾನ ಮಾಡಿದ ಮಹಾಮಹಿಮ ದಿಲೀಪ. ಪ್ರತಿಯಜ್ಞದಲ್ಲೂ ಸುವರ್ಣಮಯವಾದ ಆನೆಗಳನ್ನು ದಕ್ಷಿಣೆಯಾಗಿ ಕೊಟ್ಟ

೩. ಯಜ್ಞಶಾಲೆ ಇರಲಿ, ಆ ಶಾಲೆಗೆ ಹೋಗುವ ರಸ್ತೆಯೂ ಸುವರ್ಣ ಖಚಿತವಾಗಿತ್ತು.

೪. ಭೋಜನದ ಪರಿಯಂತೂ ರಸಗಳ ಸರೋವರಗಳು. ಕಂಠದ ಆಳತೆಯ ಆಳವಾಗಿದ್ದವು. ಯಜ್ಞಸ್ತಂಭಗಳು ಸಹಸ್ರಯಾಮದಷ್ಟಿದ್ದವು.

೫. ಅವನ ಯಜ್ಞದಲ್ಲಿ ೧೩೦೦೦ ಅಪ್ಸರೆಯರು ನರ್ತಿಸುತ್ತಿದ್ದರು. ವಿಶ್ವಾವಸು ಗಂಧರ್ವ ವಾದ್ಯಗಳನ್ನು ನುಡಿಸುತ್ತಿದ್ದನು. ಅವೆಲ್ಲವೂ ಬಂದ ಪ್ರಾಣಿಗಳಿಗೆ ಮನೋಹರವಾಗಿದ್ದವು.

೬. ಇಂತಹ ಯಜ್ಞ ಅನುಕರಿಸಲು ಅಗುತ್ತಿದ್ದಿಲ್ಲ. ಇನ್ನೂ ಮುಂದೆ ಹೇಳಲು, ರಾತ್ರಿ ಕಾಲದಲ್ಲಿ ಸುವರ್ಣಾಲಂಕೃತ ಮನುಷ್ಯರು ಬೀದಿಯಲ್ಲಿ ಮಲಗುತ್ತಿದ್ದರು (ಚೋರಭಯವಿದ್ದಿಲ್ಲವೆಂದು ಭಾವ).

೭. ರಾಜನ ರಥಚಕ್ರಗಳು ಸಮುದ್ರದಲ್ಲೂ ಚಲಿಸುತ್ತಿದ್ದವು, ಮುಳುಗುತ್ತಿದ್ದಿಲ್ಲ. ಅವನನ್ನು ನೋಡಿದ ಜನರೂ ಸ್ವರ್ಗಕ್ಕೆ ಹೋದರಂತೆ.

೮. ಆವನ ಅರಮನೆಯಲ್ಲಿ ಈ ೫ ಶಬ್ದಗಳಿಗೆ ಕೊನೆ ಇರಲಿಲ್ಲ ೧. ವೇದಾಧ್ಯಯನ; ೨. ಜ್ಯಾ ಶಬ್ದ(ಬಿಲ್ಲು); ೩. ಕುಡಿಯಿರಿ; ೪. ಉಣ್ಣಿರಿ; ೫. ತಿನ್ನಿರಿ – ಜ್ಞಾನ ಹಾಗೂ ಭೋಜನಗಳಿಂದ ಋಷಿ–ನರಯಜ್ಞಗಳು ನಡೆಯುತ್ತಿದ್ದವು. ಜ್ಯಾಶಬ್ದ ಶತ್ರುಗಳಿಗೆ ಭಯಂಕರವಾಗಿತ್ತು.

ಇಂತಹ ದಿಲೀಪನು ಒಂದು ದಿನ ಮರಣಹೊಂದಿದ. ಅವನೂ ನಿನಗಿಂತ ಉತ್ತಮ. ಅಂಥವನು ಮೃತನಾದ ಮೇಲೆ ನಿನಗೇಕೆ ಪುತ್ರಶೋಕ? ಎಂದರು ನಾರದರು.

*****

## ಷೋಡಶರಾಜೋಪಾಖ್ಯಾನ

## ೮. ಮಾಂಧಾತರಾಜನ ಕಥೆ

ಸೂರ್ಯವಂಶದಲ್ಲಿ ಇಕ್ಷ್ವಾಕು ನಂತರ ಮುಂದೆ ಬಂದ ಯುವನಾಶ್ವನ ಉದರದಲ್ಲಿ ಅಸಾಮಾನ್ಯವಾಗಿ (Abnormal) ಜನಿಸಿದ ವ್ಯಕ್ತಿಯೇ ಮಾಂಧಾತ ರಾಜ. ತ್ರಿಲೋಕಗಳನ್ನು ಗೆದ್ದವ. ಒಮ್ಮೆ ಬೇಟೆಗೆ ಹೋದ ಯುವನಾಶ್ವ ದಣಿದು ಬಸವಳಿದಿದ್ದ. ಆಗಲೇ ರಾತ್ರಿಯಾಗಿತ್ತು. ಹತ್ತಿರದಲ್ಲೇ ಇದ್ದ ಧೂಮ ಸುರಿಸುತ್ತಿದ್ದ ಆಶ್ರಮಕ್ಕೆ ಪ್ರವೇಶಿಸಿದ. ಎಲ್ಲರೂ ವಿಶ್ರಾಂತಿಯಲ್ಲಿದ್ದರು. ಅಲ್ಲಿ ನಡೆಯುತ್ತಿದ್ದ ಸತ್ರಯಾಗ ಮಂಟಪದಲ್ಲಿದ್ದ ತುಪ್ಪಮಿಶ್ರಿತ ಹೋಮಾನ್ನವನ್ನು ತಿಂದ(ಪೃಷದಾಜ್ಯ – ತುಪ್ಪ+ಮೊಸರು – ಇದನ್ನೇ ಕುಡಿದ). ಅದು ಆತನ ಪತ್ನಿಗಾಗಿ ಸಿದ್ಧವಾದ ಹೋಮಾನ್ನವಾಗಿತ್ತು. ಆದರೆ ಯುವನಾಶ್ವ ತಿಂದುದರಿಂದ ಆತನೇ ಗರ್ಭ ಧರಿಸಿದ. ಅದನ್ನು ಅಶ್ವಿನೀದೇವತೆಗಳು ಹೊರತೆಗೆದರು(ಇದೊಂದು ತರಹದ ದೈವೀ ಶಸ್ತ್ರಚಿಕಿತ್ಸೆ). ಬಂದ ಮಗು ದೈವೀ ತೇಜಸ್ಸಿನಿಂದ ಕೂಡಿತ್ತು. ನೋಡಿದ ದೇವತೆಗಳು ಇದಕ್ಕೆ ಯಾರು ಹಾಲುಕುಡಿಸುವರೆಂದು ಮಾತನಾಡಿಕೊಳ್ಳುತಿದ್ದಾಗ, ಇಂದ್ರನು '**ಮಾಂ ಧಾಸ್ಯತಿ**' ಎಂದ. ತನ್ನ ಅಂಗುಷ್ಠದಿಂದ ಅಮೃತಸದೃಶ ತುಪ್ಪ ಹಾಗೂ ಕ್ಷೀರ ಪಾನ ಮಾಡಿಸಿದ. ಆ ಮಗು **ಮಾಂಧಾತಾ** ಎಂದು ಹೆಸರು ಪಡೆಯಿತು.

**ಮಾಂ ಧಾಸ್ಯತೀತಿ ಕಾರುಣ್ಯಾತ್ ಯದಿಂದ್ರೋಽತ್ಯನ್ವಕಂಪತ ।**
**ತಸ್ಮಾನ್ಮಾಂಧಾತರಿತ್ಯೇವಂ ನಾಮ ತಸ್ಯಾಭವತ್ ಕೃತಮ್ ॥** ೫೯/೭

ಮಗು ಒಂದೇ ದಿನದಲ್ಲಿ ಒಂದುವರ್ಷದ ಬೆಳಗಣಿಗೆ ಪಡೆಯಿತು. ಹನ್ನೆರಡು ದಿನಗಳಲ್ಲಿ ಹನ್ನೆರಡು ವರ್ಷದ ಯುವಕನಾದ.

ಯುವನಾಶ್ವನ ನಂತರ ಗದ್ದುಗೆಯೇರಿದ ಮಾಂಧಾತನು ಒಂದೇ ದಿನದಲ್ಲಿ ಸಮಗ್ರ ಭೂಮಿಯನ್ನುಗೆದ್ದನು. ಆತನರಾಜ್ಯಸೂರ್ಯೋದಯ–ಸೂರ್ಯಾಸ್ತದವರೆಗಿನಭೂಮಿಯ ಮೇರೆಗಳನ್ನು ಹೊಂದಿತ್ತು. ನೂರುಅಶ್ವಮೇಧ, ನೂರು ರಾಜಸೂಯಯಾಗಗಳನ್ನು ಮಾಡಿ

ಬ್ರಾಹ್ಮಣರಿಗೆ ಹತ್ತು ಯೋಜನ ವಿಸ್ತಾರ ಒಂದು ಯೋಜನ ಎತ್ತರವಿದ್ದ ಚಿನ್ನದ ರಾಶಿಯನ್ನೇ ದಾನವಾಗಿ ಕೊಟ್ಟನು. ಬ್ರಾಹ್ಮಣರು ಬಹುಪ್ರಕಾರದ ಭಕ್ಷ್ಯಭೋಜ್ಯಗಳನ್ನು ಉಂಡು ಸಂತೃಪ್ತರಾದರು. ಎಲ್ಲ ಪ್ರಕಾರದ ಭಕ್ಷ್ಯಾದಿಗಳ ಪರ್ವತಗಳೇ ಇದ್ದವು. ಹಾಲಿನ ನದಿಗಳು, ತುಪ್ಪದ ಸರೋವರಗಳು, ಬೆಲ್ಲದ ಪರ್ವತಗಳು ಅಲ್ಲಿ ಇದ್ದವು. ಯಜ್ಞದಲ್ಲಿ ಪಾಲ್ಗೊಳ್ಳದ ಜೀವಿಗಳಿರಲಿಲ್ಲ. ಕೊನೆಗೆ ಕಶ್ಯಪರಿಗೆ ಸಮುದ್ರಾಂತ ಭೂದಾನ ಮಾಡಿ ಪುಣ್ಯಲೋಕಗಳನ್ನು ಸೇರಿದ.

*****

## ಷೋಡಶರಾಜೋಪಾಖ್ಯಾನ

### ೯. ಯಯಾತಿಯ ಕಥೆ

೧. ಚಂದ್ರವಂಶದ ನಹುಷ ಚಕ್ರವರ್ತಿಯ ಮಗ ಯಯಾತಿ. ಸಪ್ತಸಮುದ್ರ-ಪರ್ವತಪರ್ಯಂತ ಭೂಮಿಯನ್ನಾಳಿದ. ಶಮ್ಯಾಪ್ರಾಸದಿಂದ ವೇದಿಗಳನ್ನು ನಿರ್ಮಿಸಿ ಬಹುದಕ್ಷಿಣಾಕಯಾಗಗಳನ್ನು ಮಾಡಿ ಭೂಪ್ರದಕ್ಷಿಣೆಯನ್ನು ಮಾಡಿದ.

೨. ಆತನು ಸಹಸ್ರಸತ್ರ, ನೂರು ಅಶ್ವಮೇದ, ಸಾವಿರ ಪುಂಡರೀಕ, ನೂರು ವಾಜಪೇಯಿ, ಸಾವಿರ ಅತಿರಾತ್ರ, ಚಾತುರ್ಮಾಸ್ಯ, ಅಗ್ನಿಷ್ಟೋಮಯಾಗಗಳನ್ನು ಪೂರ್ಣದಕ್ಷಿಣಾಸಮೇತ ಮಾಡಿದ. ವಿಶ್ವದಲ್ಲಿ ಬ್ರಹ್ಮದ್ರೋಹಿಗಳಲ್ಲಿದ್ದ ಐಶ್ವರ್ಯವನ್ನು ಅವರಿಂದ ಪಡೆದು (ವಶಕ್ಕೆ) ಬ್ರಾಹ್ಮಣರಿಗೆ ಕೊಟ್ಟನು.

೩. ಸರಸ್ವತೀ ಮುಂತಾದ ಪುಣ್ಯನದಿಗಳು, ಸಮುದ್ರಗಳು, ಪರ್ವತಗಳು (ಇವುಗಳ ಅಭಿಮಾನಿ ದೇವತೆಗಳು) ಯಯಾತಿಗೆ ತುಪ್ಪ-ಹಾಲುಗಳನ್ನು ತಂದು ಸುರಿಸಿದರಂತೆ.

೪. ದೇವಾಸುರರ ಸಂಗ್ರಾಮದಲ್ಲಿ ಭಾಗವಹಿಸಿ, ದೇವತೆಗಳಿಗೆ ಗೆಲುವನ್ನು ಸಂಪಾದಿಸಿ ಈ ಭೂಮಿಯನ್ನು ನಾಲ್ಕು ವರ್ಣದವರಿಗೂ ಹಂಚಿದ ಮಹಾನುಭಾವ ಯಯಾತಿ.

೫. ಹೀಗೆ ಬಹುಪ್ರಕಾರಕವಾದ ಯಜ್ಞಗಳಿಂದ ದೇವತೆಗಳನ್ನು ಸಂತೋಷಗೊಳಿಸಿ ಶುಕ್ರಾಚಾರ್ಯಪುತ್ರಿ ದೇವಯಾನಿ ಹಾಗೂ ವೃಪರ್ವರಾಜಪುತ್ರಿ ಶರ್ಮಿಷ್ಠೆ ಎಂಬ ಇಬ್ಬರು ಪತ್ನಿಯರೊಡನೆ ದೇವಾರಣ್ಯ, ಉದ್ಯಾನಗಳಲ್ಲಿ ವಿಹಾರ ಮಾಡಿ, ಸತ್ಸಂತಾನ ಪಡೆದ. ಇಂದ್ರನಂತೆ ವೈಭವ ಜೀವನ ಸಾಗಿಸಿದರೂ, ಆತನ ಮನಸ್ಸಿಗೆ ಶಾಂತಿ ಸಿಗಲಿಲ್ಲ. ತನ್ನ ಅನುಭವವನ್ನು ಹೀಗೆ ತಾನೇ ಹಾಡಿದನಂತೆ ಯಯಾತಿ-

**ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್ಸರ್ವಂ ಸಂತೋಷಂ ಪರಮಂ ಸುಖಮ್ ॥** ೬೧/೧೧

'ಈ ಭೂಮಿಯಲ್ಲಿರುವ ಧಾನ್ಯ, ಹಿರಣ್ಯ, ಪಶು, ಸ್ತ್ರೀ ಸಂಪತ್ತೆಲ್ಲವೂ ಒಬ್ಬನಿಗೆ ಇದ್ದರೂ ಅದು ಸಾಕಾಗದು. ಅವನಿಗೆ ಅಲಂಬುದ್ಧಿ ಬರುವುದಿಲ್ಲ.' ಆದ್ದರಿಂದ **ತೃಪ್ತಿಯೇ** (ದೈವದತ್ತವಾದ) **ಸುಖಸಾಧನ**.

೬. ಹೀಗೆ ಭಾವಿಸಿ ತನ್ನ ಮಗನಾದ ಪುರುವನ್ನು ರಾಜ್ಯದಲ್ಲಿ ಅಭಿಷೆಕ ಮಾಡಿ ಕಾಡಿಗೆ ತಪಸ್ಸಿಗೆ ತೆರಳಿ ಮುಂದೊಮ್ಮೆ ಶರೀರತ್ಯಾಗ ಮಾಡಿದ.

ಆದ್ದರಿಂದ ಮರಣ ಎಲ್ಲರಿಗೂ ಅಪರಿಹಾರ್ಯ. ರಾಜನ್! ನೀನು ಇಂತಹ ಯಯಾತಿಗಿಂತ ಉತ್ತಮನಲ್ಲ. ನಿನ್ನ ಮಗನೂ ಹಾಗೆಯೇ. ಆದ್ದರಿಂದ ಜೀವನದಲ್ಲಿ ಯಾವ ಯಾಗ ಮಾಡದ, ದಕ್ಷಿಣೆ ಕೊಡದ ಮಗನಿಗೇಕೆ ಶೋಕವೆಂದರು ನಾರದರು.

*****

## ಷೋಡಶರಾಜೋಪಾಖ್ಯಾನ

## ೧೦. ಅಂಬರೀಷನ ಚರಿತೆ

ನಾಭಾಗನ ವಂಶ; ಇಕ್ಷ್ವಾಕುವಂಶ, ಸೂರ್ಯವಂಶದಲ್ಲಿ ಬಂದ ಅಂಬರೀಷನನ್ನು ಸೋಲಿಸಲು ೧೦ ಲಕ್ಷ ಶತ್ರುರಾಜರು ಯುದ್ಧಕ್ಕೆ ಬಂದರೂ ಅಂಬರೀಷನು ಅವರೆಲ್ಲರನ್ನೂ ತನ್ನ ಪರಾಕ್ರಮದಿಂದ ಗೆದ್ದನು. ಸೋತ ಅವರೆಲ್ಲರೂ ಅಂಬರೀಷನಿಗೆ ಶರಣಾದರು. ಅವರ ರಾಜ್ಯವೆಲ್ಲವನ್ನು ವಶಕ್ಕೆ ತೆಗೆದುಕೊಂಡ ಅಂಬರೀಷನು ಇಂದ್ರನಂತೆ ನೂರು ಯಾಗಗಳನ್ನು ಮಾಡಿದನು. ಆ ಯಜ್ಞಗಳಲ್ಲಿ ಬ್ರಾಹ್ಮಣರು ವಿಶೇಷವಾಗಿ ಸತ್ಕೃತರಾಗಿ ಸರ್ವಸಂಪನ್ನವಾದ ಅನ್ನವನ್ನು (ಭಕ್ಷ್ಯ, ಭೋಜ್ಯ ಇತ್ಯಾದಿ) ಉಂಡು ಸಂತಸಗೊಂಡರು. ಶೀತಲ ಪಾನಕಾದಿಗಳನ್ನೂ ಮದಭರಿತವಾದ ಪಾನಗಳನ್ನು ಸೇವಿಸಿದರು. ಮನ ಬಂದಂತೆ ಆ ಯಜ್ಞಗಳನ್ನು ರಾಜನು ಬ್ರಾಹ್ಮಣರಿಗೆ ಒಂದುಲಕ್ಷ ರಾಜರನ್ನು ಲಕ್ಷ ಲಕ್ಷ ಕುದುರೆಗಳನ್ನು ದಕ್ಷಿಣೆಯಾಗಿ ಕೊಟ್ಟನು. ಅವರೆಲ್ಲರೂ ಸುವರ್ಣಕವಚವುಳ್ಳವರೂ, ಶ್ರೇಷ್ಠ ಧನುರ್ಧಾರಿಗಳೂ, ಬಂಗಾರರಥದಲ್ಲಿ ಕುಳಿತವರೂ ಆಗಿದ್ದರು.

**ತೇಷು ಯಜ್ಞೇಷು ನಾಭಾಗೋ ದಕ್ಷಿಣಾ ಅತ್ಯಕಾಲಯತ್ ।**
**ರಾಜ್ಞಾಂ ಶತಸಹಸ್ರಾಣಿ ಪ್ರಯುತಾಯುತವಾಜಿನಾಮ್ ॥** ೬೧/೧೨

ಅಲ್ಲದೆ, ಪಟ್ಟಾಭಿಷಿಕ್ತರಾದ ರಾಜರನ್ನು, ನೂರು ರಾಜಕುಮಾರರನ್ನೂ ಅವರ ದಂಡ, ಕೋಶ, ರಾಜ್ಯ ಸಮೇತವಾಗಿಯೇ ಬ್ರಾಹ್ಮಣರಿಗೆ ನೀಡಿದನು.

**ಮೂರ್ಧಾವಸಿಕ್ತಾಂಶ್ಚ ನೃಪಾನ್ ರಾಜಪುತ್ರ ಶತಾನಿ ಚ ।**
**ಸದಂಡಕೋಶವಿಷಯಾನ್ ಬ್ರಾಹ್ಮಣೇಭ್ಯೋ ಹ್ಯಮಂಸತ ॥**

ದಾನದ ರೂಪದಲ್ಲಿ ದಾಸದಾಸಿ, ಹಣಕಾಸು, ಧಾನ್ಯ, ಪಶು, ರಥಾದಿಗಳನ್ನು ಕೊಡುವುದು ಕಂಡಿದೆ. ರಾಜ್ಯವನ್ನು, ರಾಜ, ರಾಜಕುಮಾರರನ್ನೇ ವಿಪ್ರರಿಗೆ ದಾನ ಮಾಡಿದ್ದು ತುಂಬಾ ವಿಶೇಷ; ಅಶ್ರುತಪೂರ್ವ. ಹೀಗೆ-

**ನೇಹ ಪೂರ್ವೇ ತಥಾ ಚಕ್ರುಃ ಕರ್ತಾರೋ ವಾ ನ ಚಾಪರೇ ।**
**ಯದಂಬರೀಷೋ ನೃಪತಿಃ ಕರೋತ್ಯಮಿತದಕ್ಷಿಣಃ ॥ - ೬೧/೧೫**

ಎಂದು ಗಾನ ಮಾಡಿದರು ದೇವತೆಗಳು, ಋಷಿಗಳು.

ಇಂತಹ ಅಂಬರೀಷನೂ ಮುಂದೊಂದು ದಿನ ಮರಣ ಹೊಂದಿದ. ಹೀಗಿರುವಾಗ ನಿನ್ನ ಮಗನಿಗಾಗಿ ಏಕೆ ಶೋಕವೆಂದರು ನಾರದರು.

*****

## ಷೋಡಶರಾಜೋಪಾಖ್ಯಾನ

## ೧೧. ಶಶಬಿಂದು(ಶಶಿಬಿಂದು) ಚರಿತೆ

೧. ದುಷ್ಯಂತನ ಮಗನಾದ ಭರತನ ವಂಶದಲ್ಲಿ ಜನಿಸಿದ ಪ್ರಖ್ಯಾತ ರಾಜ ಶಶಬಿಂದು. ಈತನ ತಂದೆ ಚಿತ್ರರಥ. ಶಶಬಿಂದುವೂ ವಿವಿಧ ಯಜ್ಞಗಳನ್ನು ಮಾಡಿ ಮುಂದೊಮ್ಮೆ ಮೃತನಾದ. ಈತನಿಗೆ ಒಂದುಲಕ್ಷ ಪತ್ನಿಯರು, ಒಬ್ಬೊಬ್ಬಳಲ್ಲೂ ಸಾವಿರಸಾವಿರ ಪುತ್ರರಿದ್ದರು. ಅವರೆಲ್ಲ ನಿಯುತಸಂಖ್ಯೆಯ ದಕ್ಷಿಣೆ ಕೊಡುವ ಉದಾರಿಗಳು. ಶ್ರೇಷ್ಠ ವೇದಾಧ್ಯಯನ ಮಾಡಿದವರಾಗಿದ್ದು ಹಾಗೆಯೇ ಯಜ್ಞ ಮಾಡುವವರು, ಯುದ್ಧದಲ್ಲಿ ಮಹಾಧನುರ್ಧಾರಿಗಳೂ, ಅಶ್ವಮೇಧಯಾಗ ಮಾಡಿದವರೂ ಆಗಿದ್ದರು.

೨. ಶಶಬಿಂದು ತಾನು ಮಾಡಿದ ಅಶ್ವಮೇಧದ ಅಂಗವಾಗಿ ಒಬ್ಬೊಬ್ಬ ಬ್ರಾಹ್ಮಣನಿಗೆ ನೂರು ಪುತ್ರರಂತೆ ದಕ್ಷಿಣೆಯಾಗಿ ಕೊಟ್ಟನು. ರಾಜಪುತ್ರರೊಡನೆ ಸುಂದರಕನ್ಯೆಯರೂ, ಒಬ್ಬೊಬ್ಬ ಕನ್ಯೆಯ ಹಿಂದೆ ನೂರು ಆನೆ, ಒಂದೊಂದು ಆನೆಯ ಹಿಂದೆ ನೂರು ರಥ, ಒಂದು ರಥದ ಹಿಂದೆ ನೂರು ಸಾಲಂಕೃತ ಕುದುರೆಗಳೂ, ಒಂದೊಂದು ಕುದುರೆಯ ಹಿಂದೆ ೧೦೦೦ ಗೋವುಗಳು, ಒಂದು ಗೋವಿನ ಹಿಂದೆ ಐದೈದು ಆಡು, ಕುರಿಗಳು – ಇವುಗಳನ್ನು ದಾನ ಮಾಡಿದನು.

೩. ಅಶ್ವಮೇಧಯಾಗದಲ್ಲಿದ್ದ ವೃಕ್ಷಗಳ ಯೂಪ (ಬಲಿಗಂಬ)ಕ್ಕೆ ತಕ್ಕಂತೆ ಅಷ್ಟೇ. ಚಿನ್ನದ ಯೂಪಗಳನ್ನು ಮಾಡಿಸಿದ್ದನು.

೪. ಇನ್ನೂ ಭಕ್ಷ್ಯಭೋಜ್ಯಾದಿಗಳು ಪರ್ವತಗಳಷ್ಟು ಯಾಗವೆಲ್ಲ ಮುಗಿದಮೇಲೂ ಒಂದು ಕ್ರೋಶದಷ್ಟು ಎತ್ತರವಾದ ಆಹಾರ ಪದಾರ್ಥಗಳು ಪರ್ವತಗಳಷ್ಟು ಹದಿಮೂರು ರಾಶಿಗಳು ಉಳಿದಿದ್ದವು.

ಹೀಗೆ ಶಶಬಿಂದು ರಾಜನು ಸಂತುಷ್ಟರಾದ ಜನರಿಂದ ಕೂಡಿದ ರಾಜ್ಯವನ್ನು ಬಹುಕಾಲ ಆಳಿ ಸ್ವರ್ಗಕ್ಕೆ ಹೋದನು.

ಸೃಂಜಯ ರಾಜನೇ! ಮೇಲಿನಂತೆ ಶಶಬಿಂದುವಿನಂತೆ ನೀನಾಗಲಿ, ನಿನ್ನ ಮಗನಾಗಲೀ ಇಲ್ಲವಲ್ಲ, ಆದ್ದರಿಂದ ಮಗನ ಬಗ್ಗೆ ಶೋಕಿಸಬೇಡ, ಎಂದರು ನಾರದರು.

*****

## ಷೋಡಶರಾಜೋಪಾಖ್ಯಾನ

## ೧೨. ಗಯನ ಚರಿತೆ

ಗಯರಾಜನು ನೂರುವರ್ಷಗಳವರೆಗೆ ಹೋಮಶೇಷವನ್ನು ಉಣ್ಣುತ್ತ ಇರಲು ಅಗ್ನಿಪ್ರತ್ಯಕ್ಷನಾಗಿ ವರಕೇಳೆಂದ. ಅದಕ್ಕೆ ರಾಜನು –

**ತಪಸಾ ಬ್ರಹ್ಮಚರ್ಯೇಣ ವ್ರತೇನ ಚ ದಮೇನ ಚ।**
**ಗುರೂಣಾಂ ಚ ಪ್ರಸಾದೇನ ವೇದಾನಿಚ್ಛಾಮಿ ವೇದಿತುಮ್ ॥**
**ಪಾತ್ರೇಷು ದದತಃ ಸಾ ಮೇ ಶ್ರದ್ಧಾ ಭವತು ನಿತ್ಯಶಃ।**
**ಅನನ್ಯಾಸು ಸವರ್ಣಾಸು ಸುಪ್ರಜಸ್ತ್ವಂ ಚ ಮೇ ಭವೇತ್ ॥**
**ಅನ್ನಂ ಮೇ ದದತಃ ಶ್ರದ್ಧಾ ಧರ್ಮೇ ಮೇ ರಮತಾಂ ಮನಃ।**
**ಅನ್ನಂ ಸ್ವಾದು ದುಹೇನ್ಮಹ್ಯಂ ಧರ್ಮೇ ಮೇ ರಮತಾಂ ಮನಃ॥**
**ಅವಿಘ್ನಂ ಚಾಸ್ತು ಮೇ ನಿತ್ಯಂ ಧರ್ಮಕಾರ್ಯೇಷು ಪಾವಕ ॥**

'ತಪಸ್ಸಿನಿಂದ, ಬ್ರಹ್ಮಚರ್ಯದಿಂದ, ವ್ರತಗಳನ್ನು ಮಾಡುವುದರಿಂದ, ಇಂದ್ರಿಯ-ನಿಗ್ರಹದಿಂದ, ಗುರುಗಳ ಅನುಗ್ರಹದಿಂದ, ನಾನು ವೇದಗಳನ್ನು ತಿಳಿಯಲು (ಜ್ಞಾನ ಹೊಂದಲು) ಇಚ್ಛಿಸುತ್ತೇನೆ. ನನ್ನ ಮುಖ್ಯಧರ್ಮ ಅಹಿಂಸೆ ಮತ್ತು ಅಕ್ಷಯವಾದ ಧರ್ಮ(ಧನ)ವನ್ನು (ಧರ್ಮಾಚರಣೆಗಾಗಿ) ಇಚ್ಛಿಸುತ್ತೇನೆ. ಸತ್ಪಾತ್ರರಿಗೆ ದಾನ ಮಾಡುವ ಬುದ್ಧಿ ಶ್ರದ್ಧೆ ಯಾವಾಗಲೂ ನನಗಿರಲಿ. ನನ್ನ ಪತ್ನಿಯರಲ್ಲಿ ಸತ್ಸಂತಾನ – ಪುತ್ರರನ್ನು ನಾನು ಪಡೆಯಬೇಕು. ನನ್ನ ಮನಸ್ಸು ಧರ್ಮದಲ್ಲಿಯೇ ಆಸಕ್ತವಾಗಿರಲಿ. ಧರ್ಮಕಾರ್ಯ ಮಾಡುವಲ್ಲಿ ವಿಘ್ನಗಳು ಬರದಿರಲಿ'. ಎಂದು ವರ ಬೇಡಲು, ಅಗ್ನಿದೇವ ಹಾಗೆಯೇ ಆಗಲಿ ಎಂದು ಅಂತರ್ಧಾನನಾದ.

ಗಯ ರಾಜ ಹೀಗೆ ವರ ಪಡೆದು ವಿಹಿತ ಕಾಲಗಳಲ್ಲಿ ದರ್ಶ, ಪೂರ್ಣಮಾಸಗಳನ್ನು ಚಾತುರ್ಮಾಸ್ಯಯಾಗಗಳನ್ನು, ನೂರುವರ್ಷಗಳವರೆಗೆ ಬಹುದಕ್ಷಿಣಾಗಳಿಂದ ಕೂಡಿದವು-ಗಳನ್ನಾಗಿ ವಿಧ್ಯುಕ್ತವಾಗಿ ಮಾಡಿದ. ಹಾಗೆಯೇ ಪ್ರತಿನಿತ್ಯ ಪ್ರಾತಃಕಾಲದಲ್ಲಿ ೧೦೦೦೦ ಆನೆ, ಒಂದುಲಕ್ಷ ಕುದುರೆ, ಒಂದುಲಕ್ಷ ನಿಷ್ಕ, ೬೦೦೦೦ ಗೋವುಗಳನ್ನು ದಾನ ಮಾಡಿದ. ಅಷ್ಟೆ

ಅಲ್ಲದೇ ಪ್ರತಿನಕ್ಷತ್ರದಲ್ಲೂ (೨೭) ಆಯಾ ನಕ್ಷತ್ರಕ್ಕೆ ಯೋಗ್ಯವಾದ ನಕ್ಷತ್ರ ದಕ್ಷಿಣೆಗಳನ್ನು ಕೊಟ್ಟು ರುದ್ರದೇವರು ಹಾಗೂ ಅಂಗೀರಸ ಋಷಿಗಳಂತೆ ವಿವಿಧ ಯಜ್ಞಗಳನ್ನು ಮಾಡಿದ. ನಂತರ ಅಶ್ವಮೇಧ ಮಹಾಯಜ್ಞದಲ್ಲಿ ಸುವರ್ಣಮಯವಾದ ಭೂಮಿಯ ಪ್ರತಿಮೆ ಮಾಡಿ ಅದರಲ್ಲಿ ಮರಳಿನ ಸ್ಥಾನದಲ್ಲಿ (ಭೂಮಿಯಲ್ಲಿರುತ್ತವೆಯಷ್ಟೆ) ಮಣಿಗಳನ್ನು ಇರಿಸಿ ಬ್ರಾಹ್ಮಣರಿಗೆ ದಾನ ಮಾಡಿದನು.

ಗಯನ ಯಜ್ಞದಲ್ಲಿ ಎಲ್ಲ ಯೂಪ ಸ್ಥಂಭಗಳೂ ಸುವರ್ಣಮಯವಾಗಿದ್ದವು. ಯಜ್ಞಾಂಗವಾಗಿ ಬ್ರಾಹ್ಮಣಾದಿ ಸರ್ವವರ್ಣದವರಿಗೆ, ಪ್ರಾಣಿಗಳಿಗೆ ಯಥೇಚ್ಛವಾಗಿ ಅನ್ನದಾನ ಮಾಡಿದನು.

ಆತನು ಸಮುದ್ರ, ದ್ವೀಪ, ಪರ್ವತ, ನದೀ, ವನ, ನಗರ, ರಾಷ್ಟ್ರಗಳಲ್ಲಿ, ಆಕಾಶ, ಅಂತರಿಕ್ಷದಲ್ಲಿಯೂ ವಾಸ ಮಾಡಿದನು. ಅವನ ಯಜ್ಞವು ಅಸದೃಶವೆಂದು ಜೀವರು ಮಾತನಾಡಿಕೊಂಡರು. ಆತನ ಯಜ್ಞವೇದಿಕೆ ೩೬ ಯೋಜನ ಉದ್ದ ೩೦ ಯೋಜನ ಅಗಲ, ಸುವರ್ಣಮಯವಾಗಿದ್ದು ಮುತ್ತು, ವಜ್ರ, ಮಣಿಗಳಿಂದ ತುಂಬಿತ್ತು. ಇಂತಹ ವೇದಿಕೆಯನ್ನು ಬ್ರಾಹ್ಮಣರಿಗೆ ದಕ್ಷಿಣಾಸಮೇತವಾಗಿ ದಾನ ಮಾಡಿದನು.

ಯಜ್ಞಾನಂತರವೂ ಭಕ್ಷ್ಯಾದಿ ರಾಶಿಯು ೨೫ ಪರ್ವತಗಳಷ್ಟು ಇತ್ತು. ಅಲ್ಲದೆ ಹಾಲು, ಮೊದಲಾದವುಗಳ ನದಿಗಳೂ, ಸರೋವರಗಳೂ, ವಸ್ತ್ರಾಭರಣ, ಪರಿಮಳ ದ್ರವ್ಯಗಳ ರಾಶಿಯೂ ಅಖಂಡವಾಗಿದ್ದವು.

ಅಗ್ನಿದೇವನ ಅನುಗ್ರಹದಿಂದ ಮೂರುಲೋಕಗಳಲ್ಲೂ ಪ್ರಸಿದ್ಧವಾದ ಅಕ್ಷಯವಟ ಹಾಗೂ ಪವಿತ್ರವಾದ ಬ್ರಹ್ಮಸರೋವರವನ್ನು ಪಡೆದನು (ಸದ್ಗತಿ-ಸಲ್ಲೋಕ). ಇಂತಹ ಗಯ ಮಹಾರಾಜನೂ ಒಂದೊಮ್ಮೆ ಮೃತನಾದನೆಂದು ಕೇಳಿದ್ದೇವೆ.

ಹೀಗಿರಲು ಅವನಿಗಿಂತ ಅಧಮರಾದ ನೀನು, ನಿನ್ನ ಮಗನಿಗಾಗಿ ಏಕೆ ಶೋಕಿಸುತ್ತೀ ಎಂದು ನಾರದರು ನುಡಿದರು.

*****

## ಷೋಡಶರಾಜೋಪಾಖ್ಯಾನ

## ೧೩. ರಂತಿದೇವಚಕ್ರವರ್ತಿಯ ಚರಿತೆ

೧. ಚಂದ್ರವಂಶದಲ್ಲಿ ಬಂದ ಭರತನ ನಂತರದ ಸಂಕೃತಿ ರಾಜನ ಮಗ. ಮಹಾ ಕಾರುಣ್ಯಗುಣ, ಭೂತದಯೆಯುಳ್ಳವನೆಂದು ಪ್ರಸಿದ್ಧಿ. ಆತನ ಮನೆಯಲ್ಲಿ ೨೦೦೦೦ ಅಡುಗೆಯವರೇ ಇದ್ದರಂತೆ. ಹಗಲು, ರಾತ್ರಿ ಅನ್ನದಾನ ನಡೆಯುತ್ತಿತ್ತು. ವೇದಾಧ್ಯಯನ

ಸಂಪನ್ನನಾದ ರಂತಿದೇವ, ನ್ಯಾಯಾರ್ಜಿತ ಸಂಪತ್ತನ್ನು ಬ್ರಾಹ್ಮಣರಿಗೆ ದಾನ ಮಾಡುತ್ತಿದ್ದ, ಬ್ರಾಹ್ಮಣರ ಸಂತಾಪ ಆತನಿಗೆ ಸಂತಾಪ ಕೊಡುತ್ತಿತ್ತು. ದಾನನೀಡುವಾಗ ಸ್ವಯಂ '**ನಿನಗಿದು ದಾನ**' ಎಂದು ಪ್ರತ್ಯೇಕವಾಗಿ ಕೊಡುತ್ತಿದ್ದ.

ತಾನು ಪ್ರತಿದಿನ ಸಾವಿರ ನಿಷ್ಕಕೋಟಿ ದಾನ ಕೊಡುತ್ತಿದ್ದರೂ, ಇದು ಅತ್ಯಲ್ಪವೆಂದು ಭಾವಿಸುತ್ತಿದ್ದ, ದಾನಮಾಡದಿದ್ದರೆ ಕೈಯಾರೆ ತನಗೆ ದುಃಖವೆಂದು ಭಾವಿಸುತ್ತಿದ್ದ.

೨. ೪೫ ದಿನಗಳ ಒಂದು ಅವಧಿಯಲ್ಲಿ ಸಾವಿರ ಸುವರ್ಣದ ಹೋರಿಗಳನ್ನು (ಎತ್ತು), ಒಂದು ವೃಷಭದ ಹಿಂದೆ ಒಂದುನೂರು ಗೋವುಗಳನ್ನು ನೂರು ವರ್ಷಗಳ ಕಾಲ ಕೊಟ್ಟಿದ್ದನು.

೩. ಅಗ್ನಿಹೋತ್ರಕ್ಕೆ ಬೇಕಾದ ಸಲಕರಣೆಗಳನ್ನು (Tools), ಪಾತ್ರೆ, ಚರು ಮಾಡುವ ಸ್ಥಾಲಿ, ಪಿಠರ ಮೊದಲಾದ ಪಾತ್ರೆಗಳನ್ನು, ದಾನಗಳಿಗಾಗಿ ಶಯನ, ಆಸನ, ವಾಹನ ಮನೆಗಳು, ಪ್ರಾಸಾದಗಳು, ಸಣ್ಣಪುಟ್ಟ ಪಾತ್ರೆಗಳು ಅಲಂಕಾರ ಸಾಮಗ್ರಿಗಳನ್ನೂ ಕೊಟ್ಟನು. ಸಲಕರಣೆಗಳಲ್ಲಿ ಸುವರ್ಣಮಯವಾದವುಗಳೇ.

೪. ಇಂತಹ ದಾನದ ವೈಭವ ಕುಬೇರನ ಅರಮನೆಯಲ್ಲೂ ಕಾಣಸಿಗವು. ಮನುಷ್ಯರಲ್ಲಿ ಹೇಗೆ ತಾನೇ ಸಿಕ್ಕೀತು? ಎಂದು ಜ್ಞಾನಿಗಳು ರಂತಿದೇವನನ್ನು ಕೊಂಡಾಡುತ್ತಿದ್ದರು. ಯಜ್ಞಾಂತ್ಯದಲ್ಲಿ ಉಳಿದ ಸುವರ್ಣವನ್ನು ದಾನ ಮಾಡಿಬಿಡುತ್ತಿದ್ದ. ತನಗೆ ಎಂದು ಯಾವುದನ್ನೂ ಇಟ್ಟುಕೊಳ್ಳಲಿಲ್ಲ.

೫. ಆತನು ಕೊಟ್ಟ ಹವಿಸ್ಸನ್ನು(ಹವ್ಯ) ದೇವತೆಗಳು ಪ್ರತ್ಯಕ್ಷವಾಗಿ ಸ್ವೀಕರಿಸುತ್ತಿದ್ದರು. ಕವ್ಯವನ್ನು ಶ್ರಾದ್ಧಕಾಲದಲ್ಲಿ ಪಿತೃಗಳು ಪ್ರತ್ಯಕ್ಷವಾಗಿ ಸ್ವೀಕರಿಸುತ್ತಿದ್ದರು. ಬ್ರಾಹ್ಮಣರು ಆತನ ದಾನಗಳಿಂದ ತುಂಬಾ ಸಂತುಷ್ಟರಾಗಿದ್ದರು.

ಇಂತಹ ರಂತಿದೇವನು ನಿನಗಿಂತ ನಾಲ್ಕು ಪಟ್ಟು ಶ್ರೇಷ್ಠ ಆತನ ಮಗನೂ ನಿನ್ನ ಮಗನಿಗಿಂತ ಶ್ರೇಷ್ಠ ಇವರೆಲ್ಲ ಕಾಲಕ್ರಮೇಣ ಮೃತರಾದರು. ರಾಜನ್! ಯಾಗವನ್ನು ಮಾಡದ, ದಾನದಕ್ಷಿಣೆಗಳನ್ನು ಕೊಡದ ನಿನ್ನ ಪುತ್ರನ ಬಗ್ಗೆ ಶೋಕವೇಕೆ? ಎಂದರು ನಾರದರು.

*****

## ಷೋಡಶರಾಜೋಪಾಖ್ಯಾನ

## ೧೪. ಭರತನ ಚರಿತ್ರೆ

ಚಂದ್ರವಂಶದ ಶಕುಂತಲಾ-ದುಷ್ಯಂತರ ಮಗನಾದ ಭರತಚಕ್ರವರ್ತಿಯೂ ಮೃತನಾದನೆಂದು ಕೇಳಿದ್ದೇವೆ. ಆತನ ಹಿರಿಮೆಗರಿಮೆಗಳು ಹೀಗಿವೆ.

೧. ಭರತನು ಮಗುವಾಗಿದ್ದಾಗಲೇ ಕಾಡಿನ ಹಿಂಸ್ರ, ಕ್ರೂರಮೃಗಗಳಾದ ಸಿಂಹ, ಹುಲಿ, ಆನೆಗಳನ್ನು ತನ್ನ ವಶಕ್ಕೆ ತೆಗೆದುಕೊಂಡು ಸಾಮರ್ಥ್ಯಹೀನವನ್ನಾಗಿ ಮಾಡುತ್ತಿದ್ದ. ಅವುಗಳನ್ನು ಅಂಜನಾದಿಗಳನ್ನು ಹಚ್ಚಿ ತಾನು ಹೇಳಿದಂತೆ ಕೇಳುವಂತೆ ಮಾಡುತ್ತಿದ್ದ. ಸಿಟ್ಟಿಗೆ ಬಂದ ನೂರಾರು ಕಾಡಕೋಣಗಳನ್ನು ಪಳಗಿಸಿಬಿಡುತ್ತಿದ್ದ. ಹಾಗೆಯೇ ಶರಭ, ಚಮರೀಮೃಗ, ಖಡ್ಗಮೃಗಳನ್ನೂ ಅರಣ್ಯದಲ್ಲಿ ಕೂಡಿಹಾಕಿ ಅವುಗಳಿಗೆ ಪ್ರಾಣಸಂಕಟವಾಗುವವರೆಗೆ ಪಳಗಿಸಿ(ಸಾಧುಶೀಲವನ್ನಾಗಿಸಿ) ನಂತರ ಬಿಡುಗಡೆಮಾಡುತ್ತಿದ್ದ(ದುಷ್ಟಮೃಗಗಳ ಹಾವಳಿ-ಯಿಂದ ಅರಣ್ಯವಾಸಿಗಳಿಗೆ, ಋಷಿಮುನಿಗಳಿಗೆ ತೊಂದರೆಯಾಗದಿರಲಿ ಎಂದು ಹೀಗೆ ಮಾಡುತ್ತಿದನೆಂದು ಭಾವ). ಆದ್ದರಿಂಬ ಅವನನ್ನು ಶಿಶುವಾಗಿದ್ದಾಗಲೇ **'ಸರ್ವದಮನ'** ಎನ್ನುತ್ತಿದ್ದರು. ತಾಯಿ ಶಕುಂತಲೆಯು ಪ್ರಾಣಿಗಳ ಹಿಂಸೆಯ್ನನು ತಡೆಯುತ್ತಿದ್ದಳು.

೨. ಆತನು ರಾಜನಾದ ಮೇಲೆ ಯಮುನೆಯ ದಡದಲ್ಲಿ ನೂರು ಅಶ್ವಮೇಧಯಾಗ, ಸರಸ್ವತೀ ಹಾಗೂ ಗಂಗಾನದಿಯ ದಡದಲ್ಲಿ ಕ್ರಮವಾಗಿ ೩೦, ೪೦ ಅಶ್ವಮೇಧಯಾಗಗಳನ್ನು, ನೂರು ರಾಜಸೂಯಯಾಗಗಳನ್ನು ಪೂರ್ಣದಕ್ಷಿಣೆಪೂರ್ವಕವಾಗಿ ಮಾಡಿದನು. ಅಲ್ಲದೆ ಅಗ್ನಿಷ್ಟೋಮ, ಅತಿರಾತ್ರ, ಉಕ್ಥ, ವಿಶ್ವಜಿತ್, ಚಾತುರ್ಮಾಸ್ಯ, ಸತ್ರ ಮೊದಲಾದ ಇಷ್ಟಿಗಳನ್ನೂ, ಇತರೆ ಯಾಗಗಳನ್ನೂ ಮಾಡಿ, ದೇವ, ಋಷಿ, ವಿಪ್ರರನ್ನು ಸಂತುಷ್ಟಗೊಳಿಸಿದ್ದ. ತನ್ನ ಸಾಕು ತಂದೆಯಂತಿದ್ದ (ಬಾಲ್ಯದ) ಕಣ್ವರಿಗೆ ಸುವರ್ಣದ ಸಹಸ್ರಪದ್ಮ ನಿಷ್ಕಗಳನ್ನು ದಾನ ಮಾಡಿದನು. ಸುವರ್ಣರತ್ನಸಾಲಂಕೃತ ಆನೆ, ಒಂಟೆ, ಅಶ್ವ, ಆಡು, ಕುರಿಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು. ಅಲ್ಲದೆ ದಾಸದಾಸಿಯರು ಧನಧಾನ್ಯ, ಗೋವುಗಳನ್ನು, ಗ್ರಾಮ, ಗೃಹ, ಕ್ಷೇತ್ರ(ಭೂ)ದಾನಗಳನ್ನು ಕೋಟಿಗಟ್ಟಲೆ ಬ್ರಾಹ್ಮಣರಿಗೆ ದಾನ ಮಾಡಿದವನು ಉದಾರಗುಣಿ ಭರತ.

ಇಂತಹ ಭರತನೂ ನಿನಗಿಂತ ಉತ್ತಮನೂ(ನಾಲ್ಕುಪಟ್ಟು), ನಿನ್ನ ಪುತ್ರನಿಗಿಂತಲೂ ಶ್ರೇಷ್ಠನಾದ ಅವನ (ಭರತನ) ಪುತ್ರನೂ ಮೃತರಾದರು. ಎಂದಮೇಲೆ ನಿನ್ನ ಪುತ್ರನ ನಿಧನಕ್ಕೆ ಶೋಕವೇಕೆ? ಎಂದರು ನಾರದರು.

*****

## ಷೋಡಶರಾಜೋಪಾಖ್ಯಾನ

## ೧೫. ಪೃಥುಚರಿತ್ರೆ

ಭಗವದ್ಭಕ್ತನಾದ ಧ್ರುವನ ವಂಶದಲ್ಲಿ ಬಂದ ಅಂಗರಾಜನ ಮಗನಾಗಿ ಜನಿಸಿದ **ವೇನನೆಂಬ** ಕ್ರೂರಿಯೂ ತಾನೇ ದೇವರೆಂದು ಹೇಳಿಕೊಂಡ. ಯಜ್ಞಾದಿಗಳನ್ನು ತನ್ನ ಉದ್ದಿಶ್ಯವಾಗಿ ಮಾಡಲು ಆದೇಶಿಸಿದ. ಆಗ ಋಷಿಗಳು ಶಪಿಸಿ, ಅವನನ್ನು ಸಂಹರಿಸಿದಾಗ ಜಗತ್ತಿನಲ್ಲಿ

ಅರಾಜಕತೆ ಉಂಟಾಯಿತಷ್ಟೆ ನಂತರ ಅದೇ ಋಷಿಗಳು ಶವವಾದ ವೇನನ ಬಲಭುಜವನ್ನು ಮಥಿಸಿದಾಗ ಬಂದವನೇ ಬಾಲಕ ಪೃಥು. ಮಹರ್ಷಿಗಳು ಅವನನ್ನು ರಾಜನನ್ನಾಗಿ ಮಾಡಿ ರಾಜಸೂಯಯಾಗದಲ್ಲಿ ಅಭಿಷೇಕ ಮಾಡಿದರು (ಅ. ೬೬/೧). ಅವನು ಪ್ರಜೆಗಳನ್ನು ಅಭಿವೃದ್ಧಿಯ ಪಥದಲ್ಲಿ ತರುತ್ತಾನೆ. ಸಂಕಟಗಳ ಸಂಕೋಲೆಗಳಿಂದ ಪಾರು ಮಾಡುತ್ತಾನೆ. ಆದ್ದರಿಂದ ಪೃಥು ಎಂಬ ಹೆಸರು ಬಂತು. ವೇನನ (ದೇಹದಿಂದ) ಜನಿಸಿದ್ದರಿಂದ (Abnormal Birth) ವೈನ್ಯನೆಂದೂ ಕರೆಯುತ್ತಾರೆ. ಪ್ರಜೆಗಳು ತಾವು ಅವನಲ್ಲಿ ಅನುರಕ್ತರಾಗಿದ್ದೇವೆ ಎಂದು ಹೇಳಿದ್ದರಿಂದ 'ರಾಜ'ನಾದನು. ತನ್ನ ಜೀವಿತದಲ್ಲಿ ಅದನ್ನು ಸಾಧಿಸಿ ತೋರಿಸಿ ಪ್ರಜೆಗಳ ಬೇಕುಗಳನ್ನು ಪೂರೈಸಿದನು.

ಅವನ ಕಾಲದಲ್ಲಿ ಪೃಥಿವಿಯು ಉಳುಮೆಯಿಲ್ಲದೆ, ಬಿತ್ತದೆ, ಫಲ ಕೊಡುತ್ತಿತ್ತು. ಗೋವುಗಳು ಬಯಸಿದ್ದನ್ನು ಕೊಡುತ್ತಿದ್ದವು. ವೃಕ್ಷಗಳು ಜೇನಿನ ಮನೆಗಳಾಗಿದ್ದವು. ಮರಗಳೆಲ್ಲ ಹಿರಣ್ಮಯವಾಗಿದ್ದವು. ಅವುಗಳಲ್ಲಿ ನಾರು ಮಡಿಗಳಿರುತ್ತಿದ್ದವು. ಪ್ರಜೆಗಳು ಅವುಗಳನ್ನು ವಸ್ತ್ರಗಳನ್ನಾಗಿ ಮಾಡಿಕೊಂಡಿದ್ದರು. ಅಲ್ಲಿಯೇ ಮಲಗುತ್ತಿದ್ದರು. ಫಲಮೂಲಗಳೆಲ್ಲ ಅಮೃತಮಯವಾಗಿದ್ದವು. ಅವೇ ಜನರ ಆಹಾರವಾಗಿದ್ದವು. ಆ ಕಾಲದಲ್ಲಿ ಭೂಮಿಯಲ್ಲಿ ನಗರ, ಪಟ್ಟಣ, ಗ್ರಾಮ, ಜನಪದವೆಂಬ ವಿಭಾಗಗಳಿರಲಿಲ್ಲ. ಪೃಥುವೇ ಈ ಪೃಥಿವಿಯನ್ನು ಸಮತಟ್ಟಾಗಿ ಮಾಡಿ ಈ ವಿಭಾಗಗಳನ್ನಾಗಿ ಮಾಡಿ ಜನವಸತಿ ಕೇಂದ್ರಗಳನ್ನು ವಿಭಾಗ ಮಾಡಿದನು. ಪೃಥು ಸಂಚರಿಸುವಾಗ ಪರ್ವತಗಳು, ನದೀ, ನದಗಳು, ಸಮುದ್ರಗಳು ದಾರಿ ಮಾಡಿಕೊಡುತ್ತಿದ್ದವು(ಅವುಗಳ ಅಭಿಮಾನಿ ದೇವತೆಗಳು). ಆತನ ರಥ ಭೂ, ಜಲ, ಆಕಾಶಗಾಮಿಯಾಗಿತ್ತು.

ಆತನನ್ನು ಸಮೀಪಿಸಿದ ವನಸ್ಪತಿ, ದೇವಾಸುರ, ನರ, ಉರಗ, ಅಪ್ಸರೆಯರು, ಸಪ್ತರ್ಷಿಗಳು, ರಾಕ್ಷಸರು, ಗಂಧರ್ವಾಪ್ಸರೆಯರು – 'ರಾಜನ್! ನೀನು ನಮ್ಮ ಪಾಲಕ, ಕ್ಷತ್ರಿಯ. ನಮ್ಮ ಸಂತೋಷಕ್ಕಾಗಿ ನೀನು ನಮಗೆ ವರ ಕೊಡು.' ಹಾಗೆಯೇ ಆಗಲಿ ಎಂದ ಪೃಥು ಧನುರ್ಧಾರಿಯಾಗಿ ಪೃಥಿವೀಯನ್ನು ಕುರಿತು ಹೀಗೆ ಹೇಳಿದನು. ಆತನ ಭಯದಿಂದ ಓಡಿದಳು. ರಾಜ ಆಕೆಯನ್ನು ಬೆನ್ನು ಹತ್ತಿದನು. ಆಕೆ ಸತ್ಯಲೋಕಾದಿಗಳಿಗೆ ಹೋದರೂ, ರಾಜ ಬಿಡದಿರುವಾಗ, ರಾಜನನ್ನು ಕುರಿತು ಆಕೆಯು 'ಅಧರ್ಮವಾದ ಸ್ತ್ರೀಸಂಹಾರ ಮಾಡಬೇಡ(ನನ್ನನ್ನು). ನಾನಿಲ್ಲದೆ ಪ್ರಜಾಧಾರಣೆಯನ್ನು ಹೇಗೆ ತಾನೇ ಮಾಡಬಲ್ಲೆ? ಅದಕ್ಕೆ ರಾಜನು ಪ್ರಜೆಗಳ ಹಿತಕ್ಕಾಗಿ ನಿನ್ನನ್ನು ಕೊಲ್ಲುವೆ. ಒಂದು ವೇಳೆ ನೀನು ಪ್ರಜಾಹಿತ ಕಾಯದಿದ್ದರೆ, ನನಗೆ ಪ್ರಿಯವಾದದನ್ನು ಮಾಡದಿದ್ದರೆ ಎಂದನು. ಇಲ್ಲದಿದ್ದರೆ ನಾನೇ ಪ್ರಜಾಧಾರಕನಾಗುವೆ. ಆಗ ಆಕೆ ತನ್ನನ್ನು ಮಗಳನ್ನಾಗಿ ಸ್ವೀಕರಿಸೆಂದಳು. ಹಾಗೆ ಆಗಲಿ ಎಂದ ರಾಜ, ನೀನು ಹೇಳಿದಂತೆ ಮಾಡುವೆ. ನಾನು ಹಸುವಿದ್ದಂತೆ. ನನ್ನಿಂದ ಎಲ್ಲವೂ ಸಿಗುತ್ತದೆ. ಆದರೆ ಅದಕ್ಕಾಗಿ ಒಂದು ವತ್ಸ(ಕರುವನ್ನು) ತಾ ಎಂದಳು. ನಾನು ಕ್ಷೀರವನ್ನು ಸುರಿಸುವೆ. ಭೂಮಿಯಲ್ಲಿರುವ

ಉಬ್ಬು ತಗ್ಗುಗಳನ್ನು ಹೋಗಲಾಡಿಸಿ ನೀರು ನಿಲ್ಲಲು ಸಮತಟ್ಟಾಗಿ ಮಾಡು. ಅದರಂತೆ ರಾಜನು ಸಸ್ಯಗಳು, ಕೃಷಿ, ವಾಣಿಜ್ಯ ಮಾರ್ಗಗಳನ್ನು ಮಾಡಿ ಭೂಮಿಯನ್ನು ಪರಿವರ್ತಿಸಿದ. ಸಮತಟ್ಟಾದ ಪ್ರದೇಶಗಳಲ್ಲಿ ಪ್ರಜೆಗಳು ವಾಸಿಸಲಾರಂಭಿಸಿದರು. ಮೊದಲು ಜನತೆಗೆ ಹಾಗೆ ಅನುಕೂಲಗಳಿರಲಿಲ್ಲ. ನಂತರ ಭೂಮಿಗೆ ಜನರಿಗೆ ಬೇಕಾದ ಕ್ಷೀರ ಸುರಿಸೆಂದು ಹೇಳಿದಾಗ ಆಕೆ ತನ್ನ ಶ್ರೇಯಸ್ಸನ್ನು ಬಯಸುವವಳಾಗಿ ವತ್ಸ(ಕರುಗಳನ್ನು), ಹಾಲು ಕರೆಯುವವರನ್ನೂ ಪಾತ್ರೆಗಳನ್ನು ಸಿದ್ಧಗೊಳಿಸು ಎಂದಾಗ ರಾಜನು ಎಲ್ಲವನ್ನೂ ಮಾಡಿದನು. ಆಗ ಪ್ರಾಣಿಗಳು ಭೂಮಿಯಿಂದ ತಮಗೆ ಬೇಕಾದ ಕ್ಷೀರವನ್ನು ಪಡೆದವು (ಕರೆದರು).

| ಕ್ರಸಂ | ಕ್ಷೀರ | ವತ್ಸ | ದೋಗ್ಧ | ಪಾತ್ರೆ |
|---|---|---|---|---|
| ೧ | ಭೂಮಿ | ಉದಯಪರ್ವತ | ಪ್ಲಕ್ಷವೃಕ್ಷ | ಔದುಂಬರ |
| ೨ | ಕ್ಷೀರ | ಉದಯಪರ್ವತ | ಮಹಾಮೇರು | ರತ್ನ- ಔಷದಿ- ಶಿಲೆಗಳು |
| ೩ | ಅನ್ನ | ಇಂದ್ರ | ಸವಿತೃ | ದಾರುಮಯ |
| ೪ | ಮಾಯಾ | ವಿರೋಚನ | ದ್ವಿಮೂರ್ಧ (ಎರಡುತಲೆ) | ಕಬ್ಬಿಣಪಾತ್ರೆ |
| ೫ | ಕೃಷಿ- ಸಸ್ಯಸಂಪತ್ | ಸ್ವಾಯಂಭುವ- ಮನು | ಪೃಥುಚಕ್ರವರ್ತಿ | ಭೂತಲ |
| ೬ | ವಿಷ | ತಕ್ಷಕ | ಧೃತರಾಷ್ಟ್ರ (ಸರ್ಪ) | ಸೋಬೆ ಬುರುಡೆ (ಅಲಾಬುಪಾತ್ರೆ) |
| ೭ | ವೇದ | ಚಂದ್ರ | ಬೃಹಸ್ಪತಿ | ಛಂದಸ್ಸು |
| ೮ | ಅಂತರ್ಧಾನವಿದ್ಯೆ | ಕುಬೇರ | ವೈಶ್ರವಣ | ಆಮಪಾತ್ರೆ |
| ೯ | ಶುಭಗಂಧ (ಗಂಧರ್ವಾಪ್ಸರಸರು) | ಚಿತ್ರರಥ | ವಸು | ಪದ್ಮಪಾತ್ರೆ |
| ೧೦ | ಪಿತರಃ (ಪಿತೃದೇವತೆಳು) ಸ್ವಧಾ | ವತ್ಸರ | ಯಮ | ರಜತಪಾತ್ರೆ |

ಹೀಗೆ ಪ್ರಜೆಗಳೆಲ್ಲ ತಮಗಿಷ್ಟವಾದ ಕ್ಷೀರಗಳನ್ನು (ವಿಭಿನ್ನವಾದ) ಭೂಮಿಯಿಂದ ಕರೆದುಕೊಂಡು ಅವರೆಲ್ಲ ತಮ್ಮ ಅದೇ ಪಾತ್ರೆ ಹಾಗೂ ಕರುಗಳಿಂದ ಜೀವಿಸುತ್ತಿದ್ದಾರೆ.

ನಂತರ ಪೃಥು ವಿವಿಧಯಜ್ಞಗಳಿಂದ ದೇವತೆಗಳನ್ನು ಪೂಜಿಸಿ ಸಂತೋಷಗೊಳಿಸಿದ. ಪ್ರಜೆಗಳನ್ನು ಆನಂದಪಡಿಸಿದ. ಯಜ್ಞವೆಲ್ಲ ಸುವರ್ಣಮಯವಾಗಿತ್ತು. ಅಶ್ವೇಮಧಯಜ್ಞ

ಮಾಡಿ ಸುವರ್ಣಮಯವಾದ ಅಲಂಕೃತವಾದ ೬೦೦೦೦ ಗೋವು, ೬೦೦೦ ಗಜಗಳನ್ನು ದಾನವಾಗಿ ಕೊಟ್ಟನು. ಭೂಮಿಯೆಲ್ಲವನ್ನೂ ಸುವರ್ಣ, ಮಣಿರತ್ನಗಳಿಂದ ಕೂಡಿದುದನ್ನಾಗಿ ಮಾಡಿ ಬ್ರಾಹ್ಮಣರಿಗೆ ದಾನ ಮಾಡಿದ (ಭೂಮಿಯನ್ನು). **ಪೃಥುಚಕ್ರವರ್ತಿಯಲ್ಲಿ ವಿಷ್ಣುವಿನ ಆವೇಶವಿತ್ತು**. ಹೀಗಾಗಿ ಆತನ ಹಿರಿಮೆ ಇತರ ಚಕ್ರವರ್ತಿಗಳಿಗಿಂತ ಮಿಗಿಲಾಗಿತ್ತು. ಇಂತಹ ಪೃಥು ಮಹಾರಾಜನೂ ಮೃತನಾದನೆಂದ ಮೇಲೆ ನಿನ್ನ ಪುತ್ರನ ಬಗ್ಗೆ ಶೋಕವೇಕೆಂದು ರಾಜನನ್ನು ಸಮಾಧಾನ ಮಾಡಿದರು ನಾರದರು.

*****

## ಷೋಡಶರಾಜೋಪಾಖ್ಯಾನ

## ೧೬. ಪರಶುರಾಮಚರಿತ್ರೆ

ಪರಶುರಾಮನು ಜಮದಗ್ನಿಯ ಪುತ್ರ. ಸಾಕ್ಷಾತ್ ವಿಷ್ಣುವಿನ ಅವತಾರಿ, ಮಹಾತಪಸ್ವಿ. ಭೂಮಿಯನ್ನು ನಿರ್ದುಷ್ಟಳನ್ನಾಗಿಸಲು ರಾಮನು ಅಸ್ತ್ರಧಾರಿಯಾಗಿ ಅನೇಕಬಾರಿ ಸುತ್ತಾಡಿದ. ಅಖಂಡ ಸಂಪತ್ತಿದ್ದರೂ ವಿಕಾರಗೊಳ್ಳಲಿಲ್ಲ. ಭೃಗುವಂಶದ ವಿಪ್ರರ ಪ್ರಾರ್ಥನೆಯ ಮೇರೆಗೆ ಭೂಮಿಯನ್ನು ೨೧ ಬಾರಿ ಸುತ್ತಿ ದುಷ್ಟಕ್ಷತ್ರಿಯರಿಲ್ಲದಂತೆ ಮಾಡಿದ ರಾಮನ ಬಗ್ಗೆ ರಾಜನ್ ಕೇಳಿದ್ದೀಯಾ?

೧. ಜಮದಗ್ನಿ ಆಶ್ರಮದಲ್ಲಿದ್ದ ಕಾಮಧೇನು, ಅದರ ಕರುವೂ, ತಂದೆ ಜಮದಗ್ನಿಯವರಿಗೆ ಕ್ಷತ್ರಿಯರು ತೊಂದರೆಕೊಟ್ಟಾಗ ರಾಮನು ಅದಕ್ಕೆ ಕಾರಣನಾದ ವಿಷ್ಣುಭಕ್ತನಾಗಿದ್ದರೂ, ಕಾರ್ತವೀರ್ಯಾರ್ಜುನನನ್ನು ಕೊಂದ.

೨. ಸರಸ್ವತೀನದೀ ತೀರದಲ್ಲಿ ಒಟ್ಟಾಗಿ ಬಂದ ೬೪೦೦೦ ಕ್ಷತ್ರಿಯರನ್ನು ರಾಮ ಏಕಾಕಿಯಾಗಿ ಧನುಸ್ಸಿನಿಂದ ಕೊಂದ.

೩. ಬ್ರಹ್ಮದ್ವೇಷಿಗಳನ್ನು ವಧಿಸಲು ಮೊದಲು ಹದಿನಾಲ್ಕು ರಾಷ್ಟ್ರಗಳನ್ನು, ನಂತರ ಬೇರೆದೇಶಜರನ್ನೂ '**ಪರಶು**'ವಿನಿಂದ ಸಂಹರಿಸಿದ.

೪. ಸಾವಿರ ಕ್ಷತ್ರಿಯರನ್ನು ಒನಕೆಯಿಂದಲೂ, ಅಷ್ಟೇ ಕ್ಷತ್ರಿಯರನ್ನು ಖಡ್ಗದಿಂದಲೂ, ಮತ್ತಷ್ಟನ್ನೂ ಉಸಿರುಗಟ್ಟಿಸಿಯೂ ನಂತರ ಅಷ್ಟನ್ನು ನೀರಿನಲ್ಲಿ ಮುಳುಗಿಸಿಕೊಂದನು (ಒಟ್ಟು ೪೦೦೦ ಈ ಬಾರಿ).

೫. ಸಾವಿರ ಜನರ ಹಲ್ಲು ಮುರಿದು, ಕಿವಿ ಕತ್ತರಿಸಿ, ೭೦೦೦ ಜನರನ್ನು ಧೂಮ ಕುಡಿಸಿ, ಉಳಿದವರನ್ನು ಬಂಧಿಸಿ, ಕೊಂದು, ಅವರ ತಲೆ ಬರುಡೆಗಳಿಂದ ಪಿತೃ ತರ್ಪಣಕೊಟ್ಟನು ರಾಮ.

೬. ಗುಣವತಿ ನದಿಯ ಉತ್ತರ ದಿಕ್ಕಿನಲ್ಲಿ ಪಾರ್ಥಿವನದಿಯ ದಕ್ಷಿಣ ದಿಕ್ಕಿನಲ್ಲಿ ಹೈಹಯದೇಶದ ಕ್ಷತ್ರಿಯರನ್ನು (ಹತ್ತುಸಾವಿರ) ಸಂಹರಿಸಿದನು.

೭. ತಂದೆಯ ವಧೆ ಮಾಡಿದ ಸೇಡಿಗೆ ತಾನೊಬ್ಬನೇ ಗಜ, ರಥಗಳಿಂದ ಕೂಡಿದ ವೀರರನ್ನು ಕೊಂದನು.

೮. ಕ್ಷತ್ರಿಯರ ಉಪಟಳಕ್ಕೆ ಒಳಗಾದ ಬ್ರಾಹ್ಮಣರು 'ರಾಮ ರಾಮಾ' ಎಂದು ಕೂಗಿದ ಕೂಡಲೇ 'ಪರಶು-ಕೊಡಲಿ' ಯಿಂದ ನೂರುಸಾವಿರ(ಲಕ್ಷ) ಕ್ಷತ್ರಿಯರನ್ನು ಕೊಂದನು. ಆರ್ತ ನಿನಾದವನ್ನು ಎಂದೂ ಸಹಿಸಲಿಲ್ಲ.

೯. ನಂತರ ರಾಮನು ಪ್ರಪಂಚದ ವಿವಿಧ ದೇಶಗಳಲ್ಲಿ ನೆಲೆಸಿದ್ದ ನೂರುಸಾವಿರ ಕೋಟಿ ಕ್ಷತ್ರಿಯರನ್ನು ಸಂಹರಿಸಿದ (ಕಾಶ್ಮೀರ, ಕುಂತಿ, ಮಾಲವ, ಅಂಗವಂಗ, ಕಲಿಂಗ, ವಿದೇಹ, ತ್ರಿಗರ್ತ, ಶಿಬಿ ಮೊದಲಾದ ದೇಶ).

೧೦. ಹೀಗೆ ಸಹಸ್ರಾರುಕೋಟಿ ದುಷ್ಟಕ್ಷತ್ರಿಯರನ್ನು ಸಂಹರಿಸಿ ಇಂದ್ರಗೋಪ ಹುಳದಂತೆ ಬಂಧೂಕ ಪುಷ್ಪದಂತೆ ಕೆಂಪಾದ ರಕ್ತಪ್ರವಾಹಗಳ ಸರೋವರಗಳನ್ನು ತುಂಬಿಸಿದನು ರಾಮನು.

೧೧. ವಿಶ್ವದ ೧೮ ದ್ವೀಪಗಳನ್ನು ವಶಮಾಡಿಕೊಂಡು ನೂರಾರು ಬಹುದಕ್ಷಿಣಾಕ ಯಾಗಗಳನ್ನು ಮಾಡಿದನು. ಅವುಗಳೆಲ್ಲ ಎಂಟು ಕೈ(ಹಸ್ತ) ಎತ್ತರದ ಸುವರ್ಣಮಯವಾದ ವೇದಿಗಳನ್ನು ನಿರ್ಮಿಸಿ, ಅಲಂಕರಿಸಿ, ಗ್ರಾಮ, ಅರಣ್ಯ, ಪಶುಗಳಿಂದ ಪೂರ್ಣವಾದ ಭೂಮಿಯನ್ನು ಮತ್ತು ನೂರಲಕ್ಷ ಅಲಂಕೃತ ಆನೆಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಇದೆಲ್ಲ ಮಾಡಿದ್ದು ಅಶ್ವಮೇಧಯಾಗದ ಕೊನೆಗೆ.

ಹೀಗೆ ಭೂಮಿಯನ್ನು ೨೧ ಬಾರಿ ಸುತ್ತಾಡಿ, ನಿಃಕ್ಷತ್ರಿಯವನ್ನಾಗಿಸಿ ಬ್ರಾಹ್ಮಣರಿಗೆ ವಶಮಾಡಿದನು.

ದಾನಸ್ವೀಕರಿಸಿದ ಕಶ್ಯಪರು ಪರಶುರಾಮನಿಗೆ 'ನೀನಿನ್ನು ಭೂಮಿಯಿಂದ ಹೊರಗೆ ಹೋಗು' ಎಂದರು. ಅದರಂತೆ ಪರಶುರಾಮರು ಬ್ರಾಹ್ಮಣರ ಶಾಸನದ ಮೇರೆಗೆ ಒಂದು ಬಾಣ ಪ್ರಯೋಗಿಸಿ ಸಮುದ್ರವನ್ನೇ ದೂರಸರಿಸಿ ಮಹೇಂದ್ರಪರ್ವತದಲ್ಲಿ ವಾಸ ಮಾಡಿದರು.

ಇಂತಹ ಪರಶುರಾಮನು ನೂರಾರು ಗುಣಪೂರ್ಣ(ಶತಗುಣಪೂರ್ಣ-ಅನಂತಗುಣಪೂರ್ಣ) ಮಹಾಕೀರ್ತಿವಂತನಾಗಿ ನಿನಗಿಂತ ಬಹಳ ಉತ್ತಮ. ಇಂತಹ ಯಾವ ಕಾರ್ಯವನ್ನೂ ಮಾಡದ ನಿನ್ನ ಮಗನ ಸಲುವಾಗಿ ಏಕೆ ಶೋಕವೆಂದರು ನಾರದರು.

ಇಂತಹ ಪರಶುರಾಮನ ಬಗ್ಗೆ ಮೊದಲ ಶ್ಲೋಕದಲ್ಲಿಯೇ 'ಅವಿತೃಪ್ತೋ ಮರಿಷ್ಯತಿ' ಎಂದಿದೆ. ಅತಿಶಯವಾಗಿ ವಿಶೇಷವಾಗಿ ತನ್ನ ಕಾರ್ಯಗಳಿಂದ (ದುಷ್ಟಕ್ಷತ್ರಿಯಸಂಹಾರರೂಪ)

ತೃಪ್ತನಾಗಿ ಎಂಬ ಅರ್ಥವನ್ನು '**ಅವಿತೃಪ್ತ**' ಎಂಬ ವಿಶೇಷಣದಿಂದ ತಿಳಿಯಬೇಕು. ಇಲ್ಲದಿದ್ದರೆ ಭಗವತ್ಸ್ವರೂಪಿಯಾದ ಪರಶುರಾಮನಿಗೆ ತೃಪ್ತಿಯಿದ್ದಿಲ್ಲ ಎನ್ನುವುದು ಶಾಸ್ತ್ರವಿರುದ್ಧ '**ಆಪ್ತಕಾಮಸ್ಯ ಕಾ ಸ್ಪೃಹಾ**' ಎಂಬ ಶ್ರುತಿಗೆ ವಿರುದ್ಧವಾಗುತ್ತದೆ.

**ರಾಮೋ ಮಹಾತಪಾ: ಶೂರೋ ವೀರೋ ಲೋಕನಮಸ್ಕೃತಃ।**
**ಜಾಮದಗ್ನ್ಯೋ ಮಹಾರಾಜ (ಪ್ರತಿಯಶಾ) ಅವಿತೃಪ್ತೋ ಮರಿಷ್ಯತಿ॥ ೬೭/೧**

ಮರಿಷ್ಯತಿ ಎಂದರೆ ಮರಣ ಹೊಂದುವನು ಎಂಬುದು ಸಾಮಾನ್ಯ ಅರ್ಥ. ಅದು ಭಗವಂತನ ಮಟ್ಟಿಗೆ ಅರ್ಥ ಕೂಡುವುದಿಲ್ಲ ಎಂದು ಭಾ.ತಾ. ೧೧/೩೧/೬,೧೦ ಶ್ಲೋಕಗಳ ತಾತ್ಪರ್ಯಗಳಲ್ಲಿ ಹೇಳಲಾಗಿದೆ. ತಂತ್ರಭಾಗವತ, ಬ್ರಾಹ್ಮಣಪುರಾಣ, ಬ್ರಹ್ಮಾಂಡ, ಪುರಾಣಗಳನ್ನು ಆಚಾರ್ಯರು ಉದಾಹರಿಸಿ ಭಗವಂತನ ಕೃಷ್ಣಾದಿರೂಪಗಳು ದಹಿಸಲ್ಪಡುವುದಿಲ್ಲ, ಮರಣ ಹೊಂದುವುದೂ ಇಲ್ಲ. ಜನ್ಮರಹಿತನು ಹುಟ್ಟಿದಂತೆ, ಮರಣ ಹೊಂದಿದಂತೆ ತನ್ನ ಇಚ್ಛೆಯಿಂದ ಅವತಾರಗಳಲ್ಲಿ ತೋರಿಸಿಕೊಳ್ಳುತ್ತಾನೆ. ಅದೆಲ್ಲವೂ ಅಜ್ಞಾನಿಗಳ ಮೋಹನಕ್ಕಾಗಿ ಎಂದು ತಿಳಿಯುವುದು:

**ಅಜಾತೋ ಜಾತವತ್ ವಿಷ್ಣುಃ ಅಮೃತೋ ಮೃತವತ್ ತಥಾ।**
**ಮಾಯಯಾ ದರ್ಶಯೇತ್ ನಿತ್ಯಂ ಅಜ್ಞಾನಾಂ ಮೋಹನಾಯ ಚ॥**

**-ಇತಿ ಬ್ರಾಹ್ಮೇ**

## ಸಂದೇಶಗಳು-ವಿವರಣೆಗಳು

೧. ಸೃಂಜಯನು ತನ್ನ ಮಗನನ್ನು ಯುದ್ಧದಲ್ಲಿ ಮೃತನಾದನೆಂದು, ಅವನ ವಿಯೋಗ ತಾಳದೆ ದುಃಖಿಸಿದ. ನಾರದರು ಅವನ ದುಃಖವನ್ನು ಅರ್ಥಮಾಡಿಕೊಂಡರಾದರೂ, ಅದು ಜ್ಞಾನಿಯಾದ ಸೃಂಜಯನಿಗೆ ಯೋಗ್ಯವಲ್ಲವೆಂದು ಮೊದಲೇ ತಿಳಿಸಿದಾಗಲೂ ಆತನ ದುಃಖ ಹೋಗಲಿಲ್ಲವಾದ್ದರಿಂದ ಹದಿನಾರು ಐತಿಹಾಸಿಕ ಉದಾಹರಣೆಗಳನ್ನು ಕೊಟ್ಟು ಆತನನ್ನು ಕೊನೆಗೂ ಸಮಾಧಾನ ಪಡಿಸಿದರೆಂಬುದು ಈ ಷೋಡಶರಾಜೋಪಾಖ್ಯಾನದ ಸಾರಾಂಶ ಮತ್ತು ಸಂದೇಶ.

೨. ದುಃಖಕ್ಕೆ ಕಾರಣವಾದುದು ಸ್ನೇಹ. ಅದನ್ನು ತ್ಯಜಿಸೆಂದು ನಾರದರು ಹೇಳುತ್ತಾರೆ. ಅದು ಗೀತಾಸಮ್ಮತತತ್ತ್ವ.

**ಮಾತ್ರಾ ಸ್ಪರ್ಶಾಸ್ತು ಕೌಂತೇಯ ಶೀತೋಷ್ಣ ಸುಖದುಃಖದಾಃ।**
**ಆಗಮಾಪಾಯಿನೋ ನಿತ್ಯಾ ತಾಂಸ್ತಿತಿಕ್ಷಸ್ವ ಭಾರತ॥** -ಗೀತೆ(೨/೧೪)
**ತ್ಯಜ ಮೋಹಂ ನೃಪಶ್ರೇಷ್ಠ ನ ಹಿ ಮುಹ್ಯಂತಿ ತ್ವದ್ವಿಧಾಃ।**
**ಧೀರೋ ಭವ ಮಹಾರಾಜ ಜ್ಞಾನವೃದ್ಧೋಽಸಿ ಮೇ ಮತಃ॥**

-ದ್ರೋ.ಪ.(೫೨/೪೫)

ಅರ್ಜುನನಿಗೂ ಕೃಷ್ಣನು ಹೇಳಿದುದೇ ಇಲ್ಲಿದೆ (ನಾರದರು ಹೇಳಿದ್ದರಲ್ಲಿ). ಆದ್ದರಿಂದ ಗೀತೋಪದೇಶ ಸಾರ್ವಕಾಲಿಕ ಮತ್ತು ಸಾರ್ವದೇಶಿಕ ಪ್ರಸ್ತುತವಾದುದು.

೩. ಸತ್ತವರು ಎಂದೂ ವಾಪಸು ಬಾರರು ಎಂಬುದೂ ಮೇಲಿನ ನಿಯಮಕ್ಕೆ ಒಳಪಟ್ಟದ್ದು. ಆದ್ದರಿಂದ ಶೋಕಿಸುವುದು ತರವಲ್ಲ.

**ನ ಮೃತಃ ಶೋಚತೋ ಜೀವೇತ್ ಮುಹ್ಯತೇ ವಾ ಜನಾಧಿಪ ॥** **೫೨/೪೪**

ಆದ್ದರಿಂದ ಅಪರಿಹಾರ್ಯವಾದ ಅನಿವಾರ್ಯವಾದ ಸತ್ಯವನ್ನು ತಿಳಿದು ಆಚರಿಸುವುದೇ ಧರ್ಮ. ಇದು ಯಾರನ್ನೂ ಬಿಡದು ಎಂದು ನಾರದರು ತಿಳಿಸುವ ಸಲುವಾಗಿ ಹದಿನಾರು ರಾಜರ ಕಥೆಗಳನ್ನೇ ಹೇಳಿದರು. ಬ್ರಾಹ್ಮಣರ, ಬ್ರಹ್ಮವಾದಿಗಳ ಕಥೆ ಹೇಳಿದೆ. ಸೃಂಜಯನು ಕ್ಷತ್ರಿಯ ಆದ್ದರಿಂದ ಕ್ಷತ್ರಿಯರು ಅನುಭವಿಸಿದ ಸಾವಿನ ವಿಶ್ಲೇಷಣೆ ಇಲ್ಲಿದೆ.

೪. ಇಂದ್ರಾನುಗ್ರಹಸಂಪಾದಿಸಿದ, ಇಂದ್ರನೊಡನೆಯೂ ಸ್ಪರ್ಧಿಸಿ ಲೋಕವನ್ನಾಳಿದ **ಮರುತ್ತರಾಜ**, ಸಾವಿರಾರು ಅಶ್ವಮೇಧ, ನೂರಾರು ರಾಜಸೂಯಯಾಗಗಳನ್ನು ಮಾಡಿದ. **ಸುಹೋತ್ರ**, **ಅಂಗರಾಜ**, ಭೂಮಿಯನ್ನೇ ಚಾಪೆ ಮಾಡುತ್ತಿದ್ದ ಶಿಬಿ ಚಕ್ರವರ್ತಿ, ವಿಷ್ಣುವಿನ ಅವತಾರ ಸಂಭೂತನಾದ **ರಾಮದೇವರು** (ಜಗತ್ತನ್ನೆಲ್ಲ ರಾಮಮಯ ಮಾಡಿದ), ದುಷ್ಟಕ್ಷತ್ರಿಯರನ್ನು ೨೧ ಬಾರಿ ಸಂಹರಿಸಿ ಭೂಮಿಯೆಲ್ಲವನ್ನೂ ಕಶ್ಯಪರಿಗೆ ದಾನ ಮಾಡಿದ **ಪರಶುರಾಮ**, ಸ್ವರ್ಗಂಗೆಯನ್ನು ಭೂಮಿಗೆ ತಂದ **ಭಗೀರಥ**, ಸಮಗ್ರ ಪೃಥ್ವಿಯನ್ನೇ ಬ್ರಾಹ್ಮಣರಿಗೆ ದಾನಗೈದ **ದಿಲೀಪ**, ಅಸಾಮಾನ್ಯವಾಗಿ ಉದರದಿಂದ ಹೊರಬಂದ **ಮಾಂಧಾತರಾಜ**, ಇಂದ್ರನಿಂದ ತುಪ್ಪ ಹಾಗೂ ಅಮೃತಧಾರೆಯನ್ನು ಹೆಬ್ಬೆರಳಿನಿಂದ ನೆಕ್ಕಿ ಬೆಳೆದು, ಸಮಗ್ರ ಭೂಮಿಯನ್ನು ವೈಭವದಿಂದ ಆಳಿ ಕಶ್ಯಪರಿಗೆ ದಾನ ಮಾಡಿದ **ಮಾಂಧಾತ**. ದೇವಾಸುರಯುದ್ಧದಲ್ಲಿ ದೇವತೆಗಳಿಗೆ ಜಯ ಗಳಿಸಿ, ಕಾಮವೆಂದೂ ಸಾಧನವೆಂದ ಬಗೆದ **ಯಯಾತಿ**. ೧೦ ಲಕ್ಷ ರಾಜರನ್ನು ಏಕಾಕಿಯಾಗಿ ಗೆದ್ದ **ಅಂಬರೀಷ**ನಾಗಲೀ, ಒಂದು ಲಕ್ಷ ಪತ್ನಿಯರು, ಅವರಲ್ಲಿ ಪ್ರತಿಯೊಬ್ಬರಲಿ ಸಹಸ್ರ ಸಹಸ್ರ ಪುತ್ರರನ್ನು ಪಡೆದು, ಅವರಿಂದ ಅಶ್ವಮೇಧಯಾಗ ಮಾಡಿಸಿ, ಅವರನ್ನೇ(ತನ್ನ ಮಕ್ಕಳನ್ನೇ) ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ **ಶಶಬಿಂದು**ವಾಗಲಿ, ಜೀವನವನ್ನೆಲ್ಲಧರ್ಮಮಯವಾಗಲೆಂದು ಬೇಡಿ ಹಾಗೆ ನಡೆದು, ಸಮಗ್ರ ಭೂಮಿಯನ್ನು ಬ್ರಾಹ್ಮಣರಿಗೆ ದಾನ ಮಾಡಿದ. **ಗಯರಾಜ**. ಹಗಲು, ರಾತ್ರಿ ಕೋಟ್ಯಂತರನಿಷ್ಕ ಸುವರ್ಣದಾನ ಮಾಡಿದರೂ ಅತೃಪ್ತನಾಗಿದ್ದ **ರಂತಿದೇವ**ನಾಗಲೀ, ಚಿಕ್ಕವನಾಗಿದ್ದಾಗಲೇ ಕ್ಷಾತ್ರ ತೇಜಸ್ಸನ್ನು ಮೆರೆದ **ಭರತ**ನಾಗಲಿ, ದೇವ ಋಷಿಗಂಧರ್ವಪ್ಸರೆಯರು ಬ್ರಾಹ್ಮಣರಿಗೆಲ್ಲ ಭೂಮಿಯಿಂದ ಅವರವರಿಗೆ ಯೋಗ್ಯ ಅನ್ನ(ಕ್ಷೀರ-ವಿದ್ಯೆ ಇತ್ಯಾದಿ)ಗಳನ್ನು ಕೊಡಿಸಿದ **ಪೃಥು** ರಾಜನಾಗಲೀ, ಈ ಪ್ರಪಂಚದಲ್ಲಿ ಶಾಶ್ವತವಾಗಿ ಇರಲಿಲ್ಲ. ಅವರೆಲ್ಲ ನೂರಾರು ಯಾಗಗಳನ್ನು

ಮಾಡಿ ಮಾಡಿಸಿದ ಬ್ರಾಹ್ಮಣರಿಗೆ ಭೂರಿದಕ್ಷಿಣೆ, ಬಂದ ಮಹರ್ಷಿಗಳೇ ಮೊದಲಾದವರಿಗೆ ವೈವಿಧ್ಯವಾದ ಭೋಜನ ಮಾಡಿಸಿದ ಮಹಾಪುಣ್ಯವಂತರಾಗಿದ್ದರೂ, ಭೂಲೋಕ ಬಿಟ್ಟರು. ದೇಹತ್ಯಾಗ ಮಾಡಿದರು. **ದಾಶರಥಿರಾಮ**, ಸದೇಹವಾಗಿ ಪರಂಧಾಮಕ್ಕೆ ಹೋದ. ಪರಶುರಾಮರು ಚಿರಂಜೀವಿಗಳಾಗಿ ಇನ್ನೂ ಇದ್ದಾರೆ. ಆದ್ದರಿಂದ ಮರಣಹೊಂದಿದ ನಿನ್ನ ಮಗನಿಗಾಗಿ ದುಃಖಿಸಬೇಡ.

೫. ದುಃಖಿಸಲು ನಿನ್ನ ಮಗನ ಸಾಧನೆಯಾದರೂ ಏನು? ಮೇಲೆ ಹೇಳಿದ ಹದಿನಾರು ರಾಜರು ಪರಶುರಾಮದೇವರು, ಬ್ರಾಹ್ಮಣರು, ಇವರೆಲ್ಲ ಅಸಾಧಾರಣ ಸಾಧಕರು, ಲೋಕೋಪಕಾರಿಗಳು, ಲೋಕೋದ್ಧಾರಕರು. ಮುಕ್ತರಾಗಿ ಎಲ್ಲರನ್ನೂ ತೃಪ್ತಿಪಡಿಸಿದವರು. ಸೃಂಜಯನಮಗಯಾವುದೇಸಾಧನೆಮಾಡಲಿಲ್ಲ.ತನ್ನತಂದೆಯನ್ನುಯುದ್ಧರಂಗದಲ್ಲಿಬಿಡಿಸಿದ ಎಂಬುದನ್ನು ಮಾತ್ರ ಪರಿಗಣಿಸಬೇಕಾಗಿತ್ತೋ ಏನೋ. ಕ್ಷತ್ರಿಯನಾಗಿ ಹೇಳಿಕೊಳ್ಳುವಂತಹ ಯಾವ ಸಾದನೆ ಮಾಡದಿರುವಾಗ ಅತನ ಬಗ್ಗೆ ಶೋಕವು ಸಮರ್ಥನೀಯವಾಗುವುದಿಲ್ಲ. ಜಗತ್ತಿನಲ್ಲಿಯೂ ಕೂಡಾ ವಿಖ್ಯಾತ ವ್ಯಕ್ತಿಗಳನ್ನು ಸಮಾಜಮುಖಿ ದೈವಮುಖಿಯಾದವರನ್ನು ನೆನೆಸುತ್ತಾರೆಯೇ ಹೊರತು ಸಾಧಾರಣ ಜನರನ್ನಲ್ಲ.

ಆದ್ದರಿಂದ ಶೋಕ ಪಡಲು ಕಾರಣವಿಲ್ಲ. ವಾಸ್ತವವಾಗಿ ಜೀವನಿಗೆ ಸಾವಿಲ್ಲ(ಸ್ವರೂಪಕ್ಕೆ). ದೇಹಕ್ಕೆ ಅದು ತಪ್ಪಿದ್ದಲ್ಲ. ಆದ್ದರಿಂದಲೂ ಶೋಕ ಅನಾವಶ್ಯಕ.

೬. ಪರಶುರಾಮ ದೇವರ ಬಗ್ಗೆ ಮಾತ್ರ '**ಮರಿಷ್ಯತಿ**' ಎಂಬ ಮಾತಿದೆ. ಪರಶುರಾಮರೂ ಮುಂದೆ ಮರಣಹೊಂದುವರೆಂಬ ಆಪಾತತಃ ಅರ್ಥ ಬರುತ್ತದೆ. **ಇದು ಪ್ರಾಯಃ ಪ್ರಕ್ಷಿಪ್ತಪಾಠವಿರಬಹುದು** ಅಥವಾ **ಅಸುರರ ಮೋಹನಾರ್ಥವಾಗಿ** ಇಂತಹ ಮಾತನ್ನು **ವೇದವ್ಯಾಸರು ಹೇಳಿದಿದ್ದಾರೆ** ಎನ್ನುವುದೂ ತಾತ್ಪರ್ಯ, ಹೊರತು ಪರಶುರಾಮದೇವರು ಮರಣಹೊಂದುತ್ತಾರೆ ಎಂದಲ್ಲ.

**ಜಾಯತೇ ನೈವ ಕುತ್ರಾಪಿ ಮ್ರಿಯತೇ ಕುತ ಏವ ತು ।**
**ಇತ್ಯಾದ್ಯಸುರಮೋಹಾಯ ದರ್ಶಯಾಮಾಸ ನಾಟ್ಯವತ್ ॥**

**- ಮ.ತಾ.ನಿ.(೨/೭೬-೮೩)**

೭. ೧೬ ರಾಜರಲ್ಲಿ೧೫ ಜನರು ಕ್ಷತ್ರಿಯ; ಶುದ್ಧಕ್ಷತ್ರಿಯರಾಗಿ ಯಶಸ್ವಿಯಾಗಿ ಬಾಳಿದವರು. ಆದ್ದರಿಂದ ಎಲ್ಲರೂ ಸ್ವವರ್ಣಾಶ್ರಮಧರ್ಮವನ್ನು ಭಕ್ತಿಶ್ರದ್ಧೆಗಳಿಂದ ಆಚರಿಸಿದಾಗಲೇ ಸದ್ಗತಿ, ಹರಿಪ್ರೀತ್ಯಾದಿಗಳು.

೮. ಧರ್ಮರಾಜನು ವ್ಯಾಸರನ್ನು ಕೇಳಿದ ಪ್ರಶ್ನೆಗೆ ನಾರದರು ಹೇಳಿದ ಉಪಾಖ್ಯಾನವನ್ನು ವ್ಯಾಸರು ಧರ್ಮರಾಜನಿಗೆ ಹೇಳಿದರು. ನಾರದರ ಉತ್ತರವು ಸೃಂಜಯನ ಸಂಶಯವನ್ನು ಪರಿಹರಿಸಿತು.

ಪಾವಿತೋಽಮುನೇನೈವ ಪ್ರಸನ್ನೋ ಯದ್ಭವಾನ್ ಮಮ ।
ಪ್ರಸನ್ನೋ ಯಸ್ಯ ಭಗವಾನ್ ನ ತಸ್ಯಾಸ್ತೀಹ ದುರ್ಲಭಮ್ ॥

೯. ತಮ್ಮ ಉತ್ತರ ಸೃಂಜಯನ ಸಂಶಯ ಪರಿಹಾರವಾದುದಕ್ಕಾಗಿ ವರ ಕೇಳೆಂದು ಕೇಳುತ್ತಾರೆ.

ನಾವು ಪ್ರಾಮಾಣಿಕವಾಗಿದ್ದರೆ ಸ್ವೋತ್ತಮರು ತಾವಾಗಿಯೇ ಅನುಗ್ರಹಿಸುತ್ತಾರೆ ಎನ್ನಲು ಇದೊಂದು ದೃಷ್ಟಾಂತ.

ನಾರದರು ಮೃತ ಪುತ್ರನನ್ನು ಬದುಕಿಸಿಕೊಟ್ಟು ಸೃಂಜಯನ ಮನಸ್ಸಿಗೆ ನೆಮ್ಮದಿ ತರುತ್ತಾರೆ. ದೊಡ್ಡವರು ಸಂತುಷ್ಟರಾದರೆ ಏನು ತಾನೆ ದುರ್ಲಭ? ಆದ್ದರಿಂದ ಸ್ವೋತ್ತಮರ ಅನುಗ್ರಹ ಸಂಪಾದನೆಗೆ ಪ್ರಯತ್ನ ಮಾಡಬೇಕು. ನರಕದಲ್ಲಿದ್ದರೂ ಆ ಮಗನನ್ನು ತಂದು ಕೊಡುತ್ತಾರೆ. ಸತ್ತವರನ್ನು ಬದುಕಿಸಿದವರು ನಾರದರು.

೧೦. ಹಾಗೆಯೇ ವ್ಯಾಸರ ಉತ್ತರದಿಂದ ಧರ್ಮರಾಜನೂ ತೃಪ್ತನಾಗಿ ಮತ್ತೆ ಯುದ್ಧಕ್ಕೆ ಅಣಿಯಾಗುತ್ತಾನೆ. ಸ್ವಧರ್ಮದಲ್ಲಿಮಗ್ನನಾಗುತ್ತಾನೆ. ವ್ಯಾಸರು ಮನಸ್ಸು ಮಾಡಿದ್ದರೆ ಅಭಿಮನ್ಯುವನ್ನು ವಾಪಸು ತರಿಸಬಹುದಿತ್ತು. ಅಭಿಮನ್ಯುವಿನ ಸಾಧನೆ ಮುಗಿದಿತ್ತು. ಆತನ ಭೂಮಿಯಲ್ಲಿ ಕರ್ತವ್ಯ-ಭೂಭಾರಹರಣದಲ್ಲಿ ಹರಿಯ ಅಂಗವಾಗಿ ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿದ್ದ. ಆದ್ದರಿಂದ ಆತನನ್ನು ವಾಪಸು ಕರೆಸಲಿಲ್ಲ.

*****

# ಕರ್ಣಪರ್ವ

## ೬೪. ತ್ರಿಪುರಾಸುರವಧೋಪಾಖ್ಯಾನ

ಕರ್ಣನು ದ್ರೋಣರ ನಂತರ ಸೇನಾಪತಿಯಾದ. ಅಶ್ವತ್ಥಾಮರು ಅದನ್ನು ಒಪ್ಪಿದ್ದರು. ಸೇನಾಪತ್ಯ ಮಾಡುತ್ತಾ ಅರ್ಜುನನಿಂದ ಸೋತ ಕರ್ಣನು ಅಂದು ರಾತ್ರಿ ಯುದ್ಧ ವಿರಾಮ ಮಾಡಿ ರಾತ್ರಿ ಶಿಬಿರ ಸೇರಿದ್ದ. ಮರುದಿನ ದುರ್ಯೋಧನನಿಗೆ ಕರ್ಣನು ತನ್ನ ಸೇನಾಪತ್ಯದ ಮಹತ್ತ್ವ, ತನ್ನ ಶಕ್ತಿಯ ಮಹತ್ತ್ವವನ್ನು ಹೇಳುತ್ತಾ '**ನನ್ನ ಮನಸ್ಸು ಬೇರೆ ಕಡೆ ಇದ್ದಾಗ ಅರ್ಜುನ ನನ್ನನ್ನು ಸೋಲಿಸಿದ್ದಾನೆ.** ವಾಸ್ತವವಾಗಿ ನನ್ನಲ್ಲಿ **ಪರಶುರಾಮಕೊಟ್ಟ 'ವಿಜಯರಥ'** ವಿದೆ. **ಅಭೇದ್ಯವಾದ ಧನುಸ್ಸಿದೆ.** ನನಗೆ ಅರ್ಜುನನಿಗಿರುವಂತಹ **ಸಾರಥಿ ಮಾತ್ರ** ಇಲ್ಲ. ಒಂದು ವೇಳೆ **ಶಲ್ಯರಾಜ** ನನಗೆ **ಸಾರಥಿ**ಯಾದಲ್ಲಿ ನಾನು ನಿನ್ನ ಶತ್ರುವಾದ **ಅರ್ಜುನನನ್ನು ಕೊಲ್ಲಬಲ್ಲೆ'** ಎಂದು ಹೇಳುತ್ತಾನೆ[೧].

ಅಂತೆಯೇ ದುರ್ಯೋಧನನು ಶಲ್ಯರಾಜನನ್ನು ಕರ್ಣನ ಸಾರಥಿಯಾಗಲು ಕೋರುತ್ತಾನೆ. ನೀನು ಕೃಷ್ಣನು ಅರ್ಜುನನನ್ನು ಕಾಪಾಡುವಂತೆ ಕರ್ಣನನ್ನು ಕಾಪಾಡು ಎನ್ನುತ್ತಾನೆ ದುರ್ಯೋಧನ, ಶಲ್ಯನಿಗೆ[೨].

ಈ ಮಾತು ಶಲ್ಯನನ್ನು ಭಾರೀ ಕೋಪಕ್ಕೆ ಗುರಿ ಮಾಡಿತು. ನಾನು ಮೂರ್ಧಾಭಿಷಿಕ್ತ ರಾಜ, ಕ್ಷತ್ರಿಯ. ಸೂತಪುತ್ರನಿಗೆ ಸಾರಥಿಯಾಗಬೇಕೇ? ನಾನೆಲ್ಲಿ ಕರ್ಣನೆಲ್ಲಿ? ಎಂದು ಕೋಪದಿಂದ ಯುದ್ಧದಿಂದ ವಾಪಸಾಗಲು ಹೊರಟ ಶಲ್ಯನನ್ನು ದುರ್ಯೋಧನನು ಸಮಾಧಾನ ಮಾಡಿದ. ನನ್ನ ಅಭಿಪ್ರಾಯ ನೀನು ಉತ್ತಮನಲ್ಲವೆಂದಲ್ಲ, ವಾಸ್ತವವಾಗಿ ನೀನು ನನಗಿಂತ, ಕರ್ಣನಿಗಿಂತ, ಅಷ್ಟೇಕೆ ಕೃಷ್ಣನಿಗಿಂತಲೂ ಉತ್ತಮ. ಅರ್ಜುನನಿಗಿಂತ ಉತ್ತಮ ಕೃಷ್ಣನು ಸಾರಥಿಯಾಗಿಲ್ಲವೇ?

---

೧ ಕಾಮಂ ರಥೋ ಮೇ ಧನುರಪ್ಯಭೇದ್ಯಮ್ ।
ದತ್ತಂ ಭೃಗೂಣಾಮಧಿಪೇನ ದಿವ್ಯಮ್ ॥
ಯಂತಾ ನ ತಾದೃಕ್ ಮಮ ಯಾದೃಶೀ ಹರಿಃ ।
ಶಲ್ಯೋ ಯದಿ ಸ್ಯಾತ್ ತ್ವದರಿಂ ನಿಹನ್ಯಾಮ್ ॥ - ಮ.ತಾ.ನಿ.(೨೭/೨೪)

೨ ಯಥಾ ಚ ಸಮರೇ ಕೃಷ್ಣೋ ರಕ್ಷತೇ ಸರ್ವತೋಽರ್ಜುನಮ್ ।
ತಥಾ ತ್ವಮಪಿ ರಾಧೇಯಂ ರಕ್ಷಸ್ವ ಚ ಮಹಾರಣೇ ॥ - ಕರ್ಣಪರ್ವ(೩೨/೩೬)

ಹಾಗೆಯೇ ನೀನೂ ಕೂಡಾ ಕರ್ಣನಿಗೆ ಸಾರಥಿಯಾಗಿ, ಯುದ್ಧದಲ್ಲಿ ಕರ್ಣನನ್ನು ವಿಜಯಿಯನ್ನಾಗಿಯೂ ಪಾಂಡವರ ಸಂಹಾರಕ್ಕೆ ನೆರವಾಗಬೇಕೆಂದು ದುರ್ಯೋಧನ ಪ್ರಾರ್ಥಿಸಿದ[೧].

ಹೀಗೆ ಹೇಳಿದಾಗ –

ನನ್ನನ್ನು ಕೃಷ್ಣನಿಗಿಂತ ಹೆಚ್ಚು ಎಂದು ಹೇಳಿದೆ. ಆದ್ದರಿಂದ ನಿನ್ನ ಬಗ್ಗೆ ಪ್ರೀತನಾಗಿದ್ದೇನೆಂದು ಶಲ್ಯನು ರಾಜನಿಗೆ ಹೇಳಿದ[೨].

ಅಲ್ಲದೆ ದುರ್ಯೋಧನು ಸಾರಥಿಯು ರಥಿಗಿಂತ ಉತ್ತಮನಾಗಿರಬೇಕು ಎಂಬ ಬಗ್ಗೆ ಹಿಂದಿನ ಇತಿಹಾಸವನ್ನು ಶಲ್ಯನಿಗೆ ಹೇಳುತ್ತಾನೆ. ಅದೇ ತ್ರಿಪುರಾಸುರವಧೋಪಾಖ್ಯಾನ. ಇದನ್ನು ಆಚಾರ್ಯರು ಒಂದೇ ವಾಕ್ಯದಲ್ಲಿ ಸಂಗ್ರಹಿಸಿದ್ದಾರೆ[೩].

ಈ ಉಪಾಖ್ಯಾನವನ್ನು ಮಾರ್ಕಂಡೇಯರು ಧೃತರಾಷ್ಟ್ರನಿಗೆ ಹೇಳಿದ್ದರು. ಅದನ್ನು ಕೇಳಿದ್ದ ದುರ್ಯೋಧನನು ಶಲ್ಯ ಮಹಾರಾಜನಿಗೆ ಅನುವಾದ ಮಾಡುತ್ತಾನೆ.

ಹಿಂದೆ ದೇವಾಸುರರ ಮಧ್ಯೆ ಮಹಾಯುದ್ಧ ನಡೆದಿತ್ತು. ಅಲ್ಲಿ ಸಿಂಹಿಕೆಯ ಮಕ್ಕಳು ದುರಾಚಾರಿಗಳು, ದೇವತೆಗಳನ್ನು ಬಹಳ ಪೀಡಿಸಿದರು. ಆದರೆ ದೇವತೆಗಳು ಬಲಗರ್ವಿತರಾದ ದಾನವರನ್ನು ಸೋಲಿಸಿದರು. ದೈತ್ಯರಲ್ಲಿ ತಾರಕಾಸುರನ ಮಗನಾದ ತಾರಾಕ್ಷನೆಂಬುವವನು ಮಹಾಭಯಂಕರನಾಗಿದ್ದ. ಅವನು ಘೋರ. ಅವನೊಡನೆ ಅಸುರರೊಂದಿಗೆ ನಡೆದ ಯುದ್ಧದಲ್ಲಿ ದೇವತೆಗಳು ಅವರನ್ನು ಸೋಲಿಸಿದರು. ಅವರೆಲ್ಲರೂ ಸೋತು ಪಾತಾಲ ಸೇರಿದರು. ಆದರೆ ತಾರಕಾಸುರನ ೩ ಜನ ಮಕ್ಕಳು **ತಾರಾಕ್ಷ, ಕಮಲಾಕ್ಷ** ಮತ್ತು **ವಿದ್ಯುನ್ಮಾಲಿ** ಬ್ರಹ್ಮದೇವರನ್ನು ಕುರಿತು ಉಗ್ರವಾದ ತಪಸ್ಸನ್ನು ಬಹಳ ವ್ರತನಿಯಮನಿಷ್ಠರಾಗಿ ಮಾಡಿದರು. ಪ್ರತ್ಯಕ್ಷರಾದ ಬ್ರಹ್ಮದೇವರನ್ನು ಸಾರ್ವಕಾಲಿಕ ಸರ್ವಾವಧ್ಯತ್ವ ವರವನ್ನು ಕೇಳಿದರು. ಇಂತಹ ಸದಾಕಾಲೀನ ಅಮರತ್ವವನ್ನು ಕೊಡುವುದಿಲ್ಲ, ಬೇರೆ ವರ ಕೇಳಿ ಎಂದಾಗ ಅವರು ಯೋಚಿಸಿ, 'ನಮಗೆ ವಾಸಮಾಡಲು ಮೂರು ಪಟ್ಟಣಗಳು ಬೇಕು. ಅವು ಆಕಾಶದಲ್ಲಿ ತೇಲುವಂತಿರಬೇಕು. ಸರ್ವಸಮೃದ್ಧಿಗಳಿಂದ ಕೂಡಿರಬೇಕು. ಅವನ್ನು ನಾಶ ಮಾಡಲು ಯಕ್ಷ, ರಾಕ್ಷಸ ಕೃತ್ಯೆಗಳು,

೧ ನ ಚ ತ್ವತ್ತೋ ಹಿ ರಾಧೇಯ ನ ಚಾಹಮಿತಿ ವೀರ್ಯವಾನ್ ।
ಭವಾನಭ್ಯಧಿಕಃ ಕೃಷ್ಣಾದಶ್ವಜ್ಞಾನೇ ಬಲೇ ತಥಾ ॥
ಮನ್ಯೇ ಚಾಭ್ಯಧಿಕಂ ಶಲ್ಯ ಗಣ್ಯೈಃ ಕರ್ಣಂ ಧನಂಜಯಾತ್ ।
ಭವಂತಂ ವಾಸುದೇವಾಚ್ಚ ಲೋಕೋಽಯಮತಿಮನ್ಯತೇ ॥ – ಕ.ಪ.(೩೨/೭೫-೭೭)

೨ ಯನ್ಮಾಂ ಬ್ರವೀಷಿ ಗಾಂಧಾರೇ ಮಧ್ಯೇ ಸೈನ್ಯಸ್ಯ ಕೌರವ ।
ವಿಶಿಷ್ಟಂ ದೇವಕೀಪುತ್ರಾತ್ ಪ್ರೀತಿಮಾನಸ್ಮ್ಯಹಂ ತ್ವಯಿ ॥ –ಕ.ಪ.(೩೨/೭೯)

೩ ಯಥಾ ಶಿವಸ್ಯ ಬ್ರಹ್ಮಾಭೂದ್ ದಹತಸ್ತ್ರಿಪುರಂ ಪುರಾ ।
ಇತ್ಯಾದಿ ವಾಕ್ಯೈಃ ಸಂಶಾಂತ ಇವ ಶಲ್ಯೋಽಸ್ಯ ಸಾರಥಿಃ ॥ – ಮ.ತಾ.ನಿ.(೨೭/೨೭)

ಬ್ರಹ್ಮವಾದಿಗಳ ಶಾಪ, ದೇವದಾನವರಿಂದ ಆಗಬಾರದು. ನಾವು ನಿನ್ನ ಅನುಗ್ರಹದಿಂದ ಈ ಮೂರು ಪುರಗಳಲ್ಲಿದ್ದು ಈ ಭೂಮಿಯಲ್ಲಿ ಸಂಚರಿಸುತ್ತಿರುತ್ತೇವೆ. ಸಾವಿರ ವರ್ಷಗಳಿಗೊಮ್ಮೆ ನಾವು ಪರಸ್ಪರ ಸಂಧಿಸುತ್ತೇವೆ. ಇವು ಆಗ ಒಂದೇ ಪ್ರದೇಶದಲ್ಲಿ ಸೇರಿ ಒಂದಾಗುತ್ತೇವೆ. ಆಗ ಯಾವ ದೇವೋತ್ತಮನು ಒಂದೇ ಬಾಣದಿಂದ ಈ ಪುರಗಳನ್ನು ನಾಶ ಮಾಡುವನೋ ಅವನು ನಮಗೆ ಮೃತ್ಯುವಾಗುವನು' ಎಂದಾಗ ಬ್ರಹ್ಮನು ಆಗಲಿ ಎಂದು ವರವಿತ್ತನು[೧].

ಹೀಗೆ ಬ್ರಹ್ಮನಿಂದ ವರ ಪಡೆದ ಈ ಮೂವರು ಮಯಾಸುರನಿಂದ ಸುವರ್ಣದ, ಬೆಳ್ಳಿಯ ಹಾಗೂ ಕಬ್ಬಿಣದ ಮೂರು ಪುರಗಳನ್ನು ಮಾಡಿಸಿಕೊಂಡರು. ಅವರು ಸ್ವರ್ಗ, ಅಂತರಿಕ್ಷ ಹಾಗೂ ಭೂಮಿಯ ಸಮೀಪದ ಆಕಾಶದಲ್ಲಿ ಹಾರಾಡಲು ಸಮರ್ಥವಾಗಿದ್ದವು. ಪ್ರತಿಪಟ್ಟಣವೂ ಒಂದು ನೂರು ಯೋಜನ ಉದ್ದಗಲ, ಮಾಳಿಗೆ ಮನೆಗಳಿಂದ, ಕೋಟೆ-ಕೊತ್ತಲ, ಹೆಬ್ಬಾಗಿಲು, ರಾಜಮಾರ್ಗಗಳು, ಭವ್ಯವಾದ ಮನೆಗಳು, ಮುಂತಾದ ಎಲ್ಲ ವೈಭವಗಳಿಂದ ಕೂಡಿದ್ದವು. ಅಲ್ಲಿಗೆ ಬೇರೆ ಬೇರೆ ಕಡೆಯಿಂದ ಅಸುರರೇ ವಾಸಿಸಲು ಬಂದರು. ತಾರಾಕ್ಷನು ಸುವರ್ಣಪುರಕ್ಕೂ, ಕಮಲಾಕ್ಷನು ರಜತಪುರಕ್ಕೂ, ವಿದ್ಯುನ್ಮಾಲಿಯು ಕಬ್ಬಿಣದ ಪುರಕ್ಕೂ ಅರಸರಾಗಿದ್ದರು. ತಾವು ಇಲ್ಲಿ ಸುಖಸಮೃದ್ಧಿಗಳಿಂದ ವಾಸಿಸುತ್ತಾ, **ವರ ಕೊಟ್ಟ ಬ್ರಹ್ಮನನ್ನೇ 'ಆ ಪ್ರಜಾಪತಿ ಯಾರೆಂದು**' ಉನ್ಮತ್ತತನದಿಂದ ಆತನ ಎದುರೇ ಹೇಳಲಾರಂಭಿಸಿದರು.

ದಿನೇ ದಿನೇ ಅವರ ದುರ್ವ್ಯಾಪಾರ, ದರ್ಪದ ನಡೆಗಳು ದೇವತೆಗಳನ್ನೂ, ಋಷಿಗಳನ್ನೂ ದೂರ ಓಡಿಸುವಂತೆ ಮಾಡಿದವು. ದೇವಲೋಕಾದಿಗಳನ್ನು ಆಕ್ರಮಿಸಿದರು. ದೇವತೆಗಳಿಗೆ ಹಿಂಸೆ ಕೊಡಲಾರಂಭಿಸಿದಾಗ ಇಂದ್ರನು ತನ್ನ ವಜ್ರಾಯುಧದಿಂದ ಈ ಪುರಗಳನ್ನು ನಾಶಮಾಡಲು ಪ್ರಯತ್ನಿಸಿ, ವಿಫಲನಾಗಿ, ಎಲ್ಲ ದೇವತೆಗಳೊಡನೆ ಬ್ರಹ್ಮದೇವರಿಗೆ ತಮ್ಮ ಸಂಕಟ ತೋಡಿಕೊಂಡನು. ಬ್ರಹ್ಮದೇವರು ಇದನ್ನು ಪರಿಹರಿಸಲು ಸ್ಥಾಣುವೇ ಸಮರ್ಥ(ರುದ್ರನೇ).

---

೧ ಅವಧ್ಯತ್ವಂ ಚ ತೇ ಸರ್ವೇ ಸರ್ವಭೂತೇಷು ಸರ್ವದಾ। (ವರ)
ನಾಸ್ತಿ ಸರ್ವಾಮರತ್ವಂ ವೈ ನಿವರ್ತಧ್ವಮಿತೋಽಸುರಾಃ॥
ಅನ್ಯ ವರಂ ವೃಣೀಷ್ವ........................................ ।
ವಸ್ತುಮಿಚ್ಛಾಮ ನಗರಂ ಕರ್ತುಂ ಕಾಮಗಮಂ ಶುಭಮ್।
ಸರ್ವಕಾಮ ಸಮೃದ್ಧಾರ್ಥಮವಧ್ಯಂ ದೇವದಾನವೈಃ॥
...................... ನ ಶಾಪೈರ್ಬ್ರಹ್ಮವಾದಿಭಿಃ॥
ವಯಂ ಪುರಾಣಿ ತ್ರೀಣ್ಯೇವ ಸಮಾಸ್ಥಾಯ ಮಹೀಮಿಮಾಮ್।
ವಿಚರಿಷ್ಯಾಮ ಲೋಕೇಽಸ್ಮಿನ್ ತ್ವತ್ಪ್ರಸಾದಪುರಸ್ಕೃತಾಃ।
ತತೋ ವರ್ಷಸಹಸ್ರೇಷು ಸಮೇಷ್ಯಾಮಃ ಪರಸ್ಪರಮ್॥
ಏಕಭಾವಂ ಗಮಿಷ್ಯಂತಿ ಪುರಾಣ್ಯೇತಾನಿ ಚಾನಘ॥
ಸಮಾಗತಾನಿ ಚ ತಾನಿ ಯೋ ಹನ್ಯಾದ್ ಭಗವಾಂಸ್ತದಾ।
ಏಕೇಷುಣಾ ದೇವವರಃ ಸ ನೋ ಮೃತ್ಯುರ್ಭವಿಷ್ಯತಿ॥ - ೩೩/೧೪-೨೩

ಆದ್ದರಿಂದ ಆತನನ್ನು ಶರಣು ಹೋಗಿ ಎಂದ. ತಾನೂ ದೇವತೆಗಳೊಡನೆ ಹೋಗಿ ರುದ್ರದೇವರನ್ನು ಸ್ತೋತ್ರ ಮಾಡಿದನು[೧].

ಆ ದೇವತೆಗಳು ಬ್ರಹ್ಮದೇವರ ಮಾತಿನ ಮೇರೆಗೆ ರುದ್ರದೇವರನ್ನು ಕುರಿತು ದೇವಮಾನದಿಂದ ಒಂದು ಸಾವಿರ ವರ್ಷ ತಪಸ್ಸನ್ನು ಮಾಡಿ ನಂತರ ಬ್ರಹ್ಮದೇವರೊಡನೆ ಶಿವಾಂತರ್ಯಾಮಿ ವಿಷ್ಣುವನ್ನು ಸ್ತುತಿಸಿದರು. ಶಿವಾಂತರ್ಯಾಮಿಯಲ್ಲಿ ಎಲ್ಲ ದೇವತೆಗಳು ತಮ್ಮ ತಮ್ಮ ರೂಪಗಳನ್ನು ಕಂಡು ಆಶ್ಚರ್ಯಚಕಿತರಾದರು. ನಂತರ ಪ್ರತ್ಯಕ್ಷನಾದ ಶಿವನು ನಮಿಸಿದ ಎಲ್ಲರನ್ನು ಎಬ್ಬಿಸಿ ನಿಮ್ಮ ಬೇಡಿಕೆಗಳನ್ನು ತಿಳಿಸಿರಿ ಎಂದನು[೨].

---

೧ ವಿದ್ರಾವ್ಯ ಸಗಣಾನ್ ದೇವಾನ್ ತತ್ರ ತತ್ರ ತದಾ ತದಾ।
ವಿಚೇರುಃ ಸ್ವೇನ ಕಾಮೇನ ವರದಾನೇನ ದರ್ಪಿತಾಃ॥ – ೩೩/೪೭
ಋಷೀಣಾಮಾಶ್ರಮಾನ್ ಪುಣ್ಯಾನ್ ................ ।
ಉತ್ಸಾದಯಂತ ಮರ್ಯಾದಾಂ ದಾನವಾ ದುಷ್ಟಚಾರಿಣಃ॥
ಪೀಡ್ಯಮಾನೇಷು ಲೋಕೇಷು ದೇವಾ ಋಷಯಃ ಪಿತೃಭಿಃ ಸಹ।
ಪುರಾಣ್ಯಾಯೋಧಯಾಂ ಚಕ್ರೇ ವಜ್ರಹಸ್ತಃ ಸಮಂತತಃ॥
ನಾಶಕತ್ ತಾನ್ಯಭೇದ್ಯಾನಿ ಮಹಾಭೇತ್ತುಂ ಪುರಂದರಃ।
ತೈರೇವ ವಿಬುಧೈಃ ಸಾರ್ಧಂ ಪಿತಾಮಹಮರಿಂದಮ॥
ಜಗಾಮಾಥ ತದಾಖ್ಯಾತುಂ ವಿಪ್ರಕಾರಂ ಸುರೇತರೈಃ।
ತದ್ವಧೋಪಾಯಮಾಚಿಕ್ಷ್ವ ಭಗವನ್ನಿತಿ ಚಾಬ್ರುವನ್।
ಮಮಾಪಿ ಸೋಽಪರಾಧ್ನೋತಿ ಯೋ ಯುಷ್ಮಾಕಮಸೌಖ್ಯಕೃತ್।
ಅವಿನೀತಾ ನಿಹಂತವ್ಯಾ ಇತ್ಯೇವಂ ಪ್ರಬ್ರವೀಮಿ ವಃ।
ಏಕೇಷುಣಾ ವಿಭೇದ್ಯಾನಿ ತಾನಿ ದುರ್ಗಾಣಿ ನಾನ್ಯಥಾ।
ಶಕ್ತಸ್ತು ತಾನಿ ಬಾಣೇನ ಭೇತ್ತುಂ ಕಾಮಂ ತ್ರಿಲೋಚನಃ।
ಯೋದ್ಧಾರಂ ವೃಣುತ ಕ್ಷಿಪ್ರಂ........................ ॥
೨ ಬ್ರಹ್ಮಾಣಂ ಅಗ್ರತಃ ಕೃತ್ವಾ ಶರಣ್ಯಂ ಶರಣಾಗತಾಃ।
ತಪಃ ಪರಮಮಾಜಗ್ಮುಃ ಗೃಣಂತೋ ಬ್ರಹ್ಮ ಶಾಶ್ವತಮ್॥
ಶರ್ವಮೀಢ್ಯಮಜಂ ರುದ್ರಂ................... ।
ತುಷ್ಟುವುರ್ವಾಗ್ಭಿರಗ್ರ್ಯಾಭಿರ್ಭಯೇಷ್ವ ಭಯಮಚ್ಯುತಮ್।
ತಂ ತೇ ದದೃಶುರೀಶಾನಂ .............. ಶರ್ವಮೀಶ್ವರಮ್॥
ಆತ್ಮನಃ ಪ್ರತಿರೂಪಾಣಿ ರೂಪಾಣ್ಯಥ ಮಹಾತ್ಮನಿ।
ಪರಸ್ಪರಸ್ಯ ಚಾಪಶ್ಯನ್ ಸರ್ವೇ ಪರಮವಿಸ್ಮಿತಾಃ।
ನಮೋ ನಮೋ ನಮಸ್ತೇಸ್ತು ಪ್ರಭೋ ಇತ್ಯಬ್ರುವನ್ ಭವಮ್।
ನಮೋ ದೇವಾಧಿದೇವಾಯ..................... ।
ಈಶಾನಾಯಾಪ್ರಮೇಯಾಯ ..................
ತಪೋರತಯ........... ಕುಮಾರಪಿತ್ರೇ ಪ್ರಪನ್ನಾರ್ತಿವಿನಾಶಾಯ

ಈ ಮಧ್ಯೆ ತಾರಕಾಕ್ಷನ ಸುತನಾದ **ಹರಿ** ಎನ್ನುವವನು ತೀವ್ರ ತಪಸ್ಸನ್ನು ಮಾಡಿ ಬ್ರಹ್ಮದೇವರಿಂದ 'ನಮ್ಮ ಪಟ್ಟಣದಲ್ಲೊಂದು ಬಾವಿ ನಿರ್ಮಾಣವಾಗಬೇಕು. ಆ ಬಾವಿಯಲ್ಲಿ ಸತ್ತ ಯಾವ ದೈತ್ಯನನ್ನು ಹಾಕಿದರೂ ಅವನು ಮೊದಲಿನಂತೆ ಬದುಕಿ ಬರಬೇಕು' ಎಂಬ ವರ ಪಡೆದ. ಹೀಗಾಗಿ ಸತ್ತ ದೈತ್ಯರೆಲ್ಲ ಪುನಃ ಆ ಬಾವಿಯಲ್ಲಿ ಹಾಕಲ್ಪಟ್ಟು (ಮೃತಸಂಜೀವಿನಿ ಬಾವಿ) ಬದುಕುತ್ತಿದ್ದರು. ಇದರಿಂದ ದೇವತೆಗಳೊಡನೆ ಸೆಣಸಾಡಿ ಸತ್ತವರೆಲ್ಲ ಬದುಕಲು ಅನುಕೂಲವಾಯಿತು.

- ಹೀಗೆ ಸ್ತೋತ್ರ ಮಾಡಿದಾಗ, ನಿಮ್ಮ ಭಯ ದೂರವಾಗಲಿ. ನಿಮಗೇನು ನಾನು ಮಾಡಲಿ? ಎಂದನು ಶಂಭು[೧].

ಆಗ ಬ್ರಹ್ಮದೇವರು ಎಲ್ಲ ದೇವತೆಗಳ ಪರವಾಗಿ ನಾನು ಅಸುರರಿಗೆ (ತಾರಕಾಮಯಾದಿಗಳಿಗೆ) ದೊಡ್ಡ ವರ ನೀಡಿದ್ದೇನೆ. ಅದರಿಂದಾಗಿ ಇವರಿಗೆ ತುಂಬಾ ತೊಂದರೆಯಾಗಿದೆ. ಪ್ರಾರ್ಥಿಸುವ ಈ ದೇವತೆಗಳ ಹಿತಕ್ಕಾಗಿ ಆ ದೈತ್ಯರನ್ನು ಸಂಹರಿಸು ಎಂದರು. ಆಗ ರುದ್ರದೇವರು 'ನಿಜ, ದೇವಶತ್ರುಗಳನ್ನು ಸಂಹರಿಸಬೇಕಾದುದು ಸರಿಯೇ. ಆದರೆ ನಾನೊಬ್ಬನೇ ಕೊಲ್ಲಲಾರೆ(ಬ್ರಹ್ಮವರವಿರುವುದರಿಂದ). ಆದ್ದರಿಂದ ನನ್ನ ತೇಜಸ್ಸಿನಿಂದ ಕೂಡಿದವರಾಗಿ ನೀವು ಎಲ್ಲರೂ ಸೇರಿ ಅವರನ್ನು ಗೆಲ್ಲಿರಿ, ಸಂಹರಿಸಿರಿ ಎಂದರು. ಇದಕ್ಕೆ ದೇವತೆಗಳು ನಮ್ಮ ತೇಜೋಬಲಕ್ಕಿಂತ ದೈತ್ಯರ ಬಲ ಹೆಚ್ಚಾಗಿದೆ. ಅದನ್ನು ನಾವು ಅನುಭವಿಸಿದ್ದೇವೆ ಎಂದರು. ಪುನಃ ಶಂಕರನು ನನ್ನ ಬಲಾರ್ಧವನ್ನು ನೀವು ತೆಗೆದುಕೊಂಡು ನಿಮ್ಮ ಬಲದೊಂದಿಗೆ ಅವರನ್ನು ಸಂಹರಿಸಿ ಎಂದ. ಅದಕ್ಕೂ ದೇವತೆಗಳು ನಿನ್ನ ಅರ್ಧ ತೇಜಸ್ಸನ್ನು (ಬಲ) ಧರಿಸಲು ನಾವು ಸಮರ್ಥರಲ್ಲ. ಆದ್ದರಿಂದ ನಮ್ಮ ಅರ್ಧಬಲವನ್ನು ನೀನೇ ಸ್ವೀಕರಿಸು. ಅವರನ್ನು ಸಂಹರಿಸು ಎಂದರು. ಹಾಗಾದರೆ ನಾನೇ ಅವರನ್ನು ವಧಿಸುವೆ ಎಂದು ರುದ್ರನು ಒಪ್ಪಿದನು. ನೀವು ನನ್ನೊಂದಿಗೆ ಸೇರಿ ಪ್ರಯತ್ನಿಸಿ, ಅದು ಹೇಗೆಂದು ಹೇಳುವೆನೆಂದ ಉಮಾಪತಿ.

ಮುಂದುವರಿದ ರುದ್ರದೇವರು ನಾನು ದೇವದಾನವರಿಗೆ ಸಮಾನವಾಗಿಯೇ ಶುಭ ಫಲ ಕೊಡುತ್ತೇನೆ. ಆದರಿಂದ ನಾನು ಶಿವ ಎನಿಸಿದ್ದೇನೆ. ಆದರೆ ಅಧರ್ಮದಿಂದ ವರ್ತಿಸುವ ದಾನವರು ನನ್ನ ಪಾಲಿಗೆ ವಧ್ಯರೇ. ದಾನವರೆಲ್ಲ ಪಶುಗಳು. ಅವರಿಗೆ ನಾನು ಸಂಹಾರಕ. ಆದ್ದರಿಂದ ನಾನು ಪಶುಪತಿ. ಭಗವಂತನಿಗೆ ಈ ಸಂಹಾರಯಜ್ಞದಲ್ಲಿ ಇವರನ್ನು ಪಶುಗಳನ್ನಾಗಿ ಭಾವಿಸಿ ಅನುಸಂಧಾನ ಮಾಡಿ ಕೊಲ್ಲುತ್ತೇನೆ. ನನಗೆ ಪಾಪ ಬರದು[೨].

---

ಮನೋವಾಕ್ಕರ್ಮಭಿರ್ದೇವ ತ್ವಾಂ ಪ್ರಪನ್ನಾನ್ ಭಜಸ್ವ ನಃ ॥ -೩೩/೪೮-೮೩

೧ ಪ್ರೋವಾಚ ವ್ಯೇತು ವಸ್ತ್ರಾಸೋ ಬ್ರೂತ ಕಿಂ ಕರವಾಣಿ ವಃ । - ೩೩/೮೪

೨ ಈಶ್ವರನ ಮಾತು -

ನ ತ್ವೇಕಶ್ಶೋತ್ಸಹೇ ಹಂತುಂ ಬಲಿನಃ ಸುರವಿದ್ವಿಷಃ । ೩೪/೮

ಎಲ್ಲ ದೇವತೆಗಳು ಪ್ರತ್ಯೇಕ ಪ್ರತ್ಯೇಕವಾಗಿ ತಮ್ಮ ಅರ್ಧ ಬಲವನ್ನು ಕೊಡಲಿ. ಮತ್ತು ಲೋಕಗಳೆಲ್ಲವೂ ಪೀಡಿತವಾಗಿರುವುದರಿಂದ (ದಾನವರಿಂದ) ನೀವು ನನಗೆ ಪಶುಗಳಾಗಿರಿ. ಆಗ ನಾನು ಪಶುಗಳಾದ ನಿಮಗೆಲ್ಲಾ ಪತಿಯಾಗಿ ಪಶುಪತಿಯಾಗುತ್ತೇನೆ. ಪಶುರೂಪಿಗಳಾದ ಅಸುರರನ್ನು ಸಂಹರಿಸುತ್ತೇನೆ. ಆಗ ಪಾಪವೂ ಬರದು[೨](ಯಾಗೀಯ ಹಿಂಸೆ ಹೇಗೆ ಪಾಪ ಸಾಧನವಲ್ಲವೋ ಹಾಗೆ).

ಅಲ್ಲದೇ 'ದೇವತೆಗಳೇ ನನಗೆ ಈ ಅಸುರಸಂಹಾರಕ್ಕಾಗಿ ದಿವ್ಯರಥ, ಅಶ್ವಗಳನ್ನು, ಬಿಲ್ಲು ಬಾಣ, ಸಾರಥಿ ಇವುಗಳನ್ನು ಸಹ ವ್ಯವಸ್ಥೆ ಮಾಡಿರಿ. ಆಗಲೇ ನಾನು ನಿಮ್ಮ ಶತ್ರುಗಳನ್ನು ಗೆಲ್ಲುವೆ'[೨] ಎಂದನು ಶಿವ.

**ವಿ.ಸೂ.** : ನೀವೆಲ್ಲ ಪಶುಗಳಾಗಿರಿ ಎಂಬ ಮಾತನ್ನು, ಭಾವವನ್ನು ಈಶ್ವರನು ದೇವತೆಗಳಿಗೆ ಹೇಳಿ ಅವರ ಸಂಶಯವನ್ನು ಪರಿಹರಿಸಿದನು. ಇದನ್ನು ಮೂಲಗ್ರಂಥ ಹಾಗೂ ಗುರುಗಳ ಸಹಾಯದಿಂದ ತಿಳಿಯುವುದು.

ನಂತರ ದೇವತೆಗಳೆಲ್ಲ ತಮ್ಮ ಸಾಮರ್ಥ್ಯ(ತೇಜಸ್ಸು)ದ ಅರ್ಧಭಾಗವನ್ನು ಕೊಟ್ಟಾಗ ಶಿವನು ಮತ್ತಷ್ಟು ಬಲಿಷ್ಠನಾದ. ದೇವದೇನಾದ ಮಹಾದೇವನಾದ. ಮತ್ತು ಪಶುಗಳಾದ ಜೀವರಿಗೆ ಪತಿಯಾದ, ಪಶುಪತಿಯಾದ[೩].

ನಂತರ ಎಲ್ಲ ದೇವತೆಗಳು ಪುರಾರಿಯಾದ ರುದ್ರನನ್ನು ಅಭಿಷೇಕ ಮಾಡಿದರು. ದೇವ ದೇವ ಮಹೇಶ್ವರ, ಮಹಾದೇವ ಎಂದು ಆದನು (ಕರೆಯಲ್ಪಟ್ಟನು):

---

ಈಶ್ವರನ ಮಾತು –
ಮಮ ತೇಜೋಬಲಾರ್ಧೇನ ಸರ್ವಾನ್ ಮೃದ್ನಥ ಶಾತ್ರವಾನ್ ।
ಬಿಭರ್ತುಂ ತವ ತೇಜೋಽರ್ಧಂ ನ ಶಕ್ಷ್ಯಾಮಸುರೇಶ್ವರ ।
ಸರ್ವೇಷಾಂ ನೋ ಬಲಾರ್ಧೇನ ತ್ವಮೇವ ಜಹಿ ಶಾತ್ರವಾನ್ ॥ ೩೪/೧೧-೧೨
೧ ರುದ್ರದೇವರು ಹೇಳುತ್ತಾರೆ –
ದೀಯತಾಂ ಚ ಬಲಾರ್ಧಂ ಮೇ ಸರ್ವೈರಪಿ ಪೃಥಕ್ ಪೃಥಕ್ ।
ಪಶುತ್ವಂ ಚೈವ ಮೇ ಲೋಕಾ ಸರ್ವೇ ಕಲ್ಪಂ ತು ಪೀಡಿತಾಃ ॥ – ೩೪/೧೯
ಪಶೂನಾಂ ತು ಪತಿತ್ವಂ ಮೇ ಭವತ್ವದ್ಯ ದಿವೌಕಸಾಃ ।
ಏವಂ ನ ಪಾಪಂ ಪ್ರಾಪ್ಸ್ಯಾಮಿ ಪಶೂನ್ ಹತ್ವಾ ಸುರದ್ವಿಷಃ ॥ – ೩೪/೨೦
೨ ಕಲ್ಪಯಧ್ವಂ ರಥಂ ದಿವ್ಯಂ ರಥಾಂಶ್ಚೈವ ಪಾರಗಾನ್ ।
ಧನುಃ ಶರಂ ಸಾರಥಿಂ ಚ ತತೋ ಜೇಷ್ಯಾಮಿ ವೋ ರಿಪೂನ್ ॥ – ೩೪/೨೧
೩ ಸರ್ವಮಾದಾಯ ಸರ್ವೇಷಾಂ ತೇಜಸೋಽರ್ಧಂ ದಿವೌಕಸಾಮ್ ।
ತೇಜಸಾಭ್ಯಧಿಕೋ ಭೂತ್ವಾ ಭೂಯೋಽಪ್ಯತಿಬಲೋಽಭವತ್ ॥ – ೩೪/೩೧
ತತಃ ಪ್ರಭೃತಿ ದೇವಾನಾಂ ದೇವದೇವೋಽಭವತ್ ಪತಿಃ ।
ಪತಿಶ್ಚ ಸರ್ವಭೂತಾನಾಂ ಪಶೂನಾಂ ಚಾಭವತ್ತದಾ ॥ – ೩೪/೩೨
ತಸ್ಮಾತ್ಪಶುಪತಿಶ್ಚೋಕ್ತೋ ಭವತ್ವಾಚ್ಚ ಭವೇತಿ ವೈ ॥ – ೩೪/೩೩

**ತತೋಽಭಿಷಿಷಿಚುಃ ಸರ್ವೇ ಸುರಾ ರುದ್ರಂ ಪುರಾರಿಣಮ್ ।**
**ಮಹಾದೇವ ಇತಿ ಹ್ಯಾಸೀದ್ ದೇವದೇವೋ ಮಹೇಶ್ವರಃ ॥** - ೩೪/೩೫

ನಂತರ ರುದ್ರದೇವರ ಅಪೇಕ್ಷೆಯಂತೆ ರಥಾದಿಗಳ ನಿರ್ಮಾಣವಾಯಿತು. ಅದನ್ನು ದೇವತೆಗಳು ವಿಶ್ವಕರ್ಮನಿಂದ ಮಾಡಿಸಿದರು.

| ಸಂಖ್ಯೆ | ವಸ್ತು | ವಸ್ತು ಹೇಗೆ ನಿರ್ಮಾಣವಾಯಿತು/ ಯಾರಿಂದ |
|---|---|---|
| ೧ | ರಥನಿರ್ಮಾಣ | ಮೂರುಲೋಕದ ಎಲ್ಲ ತೇಜಸ್ಸುಗಳ ಮೂರ್ತಸ್ವರೂಪವನ್ನು ಸಂಗ್ರಹಿಸಿ |
| ೨ | ಬಾಣ | ವಿಷ್ಣು, ಸೋಮ, ಅಗ್ನಿಗಳ ತೇಜಸ್ಸಿನಿಂದ<br>ಬಾಣದ ತುದಿಯಲ್ಲಿ ಅಗ್ನಿ (ಸನ್ನಿಧಾನ)<br>ಬಾಣದ ಅಲಗಿನಲ್ಲಿ ಸೋಮ (ಸನ್ನಿಧಾನ)<br>ಬಾಣದ ನಡುವಿನ ದಂಡದ ತುದಿಯಲ್ಲಿ ವಿಷ್ಣು |
| ೩ | ರಥದಲ್ಲಿ | ಭೂದೇವಿ(ಸನ್ನಿಧಾನ) |
| ೪ | ರಥದ ಅಚ್ಚು | ಮಂದರಪರ್ವತದ (ಸನ್ನಿಧಾನ) |
| ೫ | ರಥದ ತಳಭಾಗ | ಮಹಾನದಿಗಳ ಸನ್ನಿಧಾನ |
| ೬ | ರಥದ ಆವರಣ | ದಿಕ್ಕು-ವಿದಿಕ್ಕುಗಳು(೧೦) |
| ೭ | ಈಕ್ಷಾದಂಡ | ನಕ್ಷತ್ರಗಳು |
| ೮ | ನೊಗ(ರಥದ) | ಕೃತಯುಗ |
| ೯ | ಮೂಕೀಮರ (ನೊಗವನ್ನಿಡುವ) | ವಾಸುಕಿ ಸರ್ಪ |
| ೧೦ | ಉಪಸ್ಕರ ಚಕ್ರಗಳು | ಹಿಮಾಲಯ, ವಿಂಧ್ಯಪರ್ವತಗಳು |
| ೧೧ | ಅಧಿಷ್ಠಾನ(ಸ್ಥಳ-ರಥಕ್ಕೆ) | ಉದಯಾಚಲ-ಅಸ್ತಾಚಲ |
| ೧೨ | ರಥಕ್ಕೆ ಕಟ್ಟುವ ಹಗ್ಗ | ದಾನವರ ಆವಾಸಸ್ಥಾನ-ಸಮುದ್ರ |
| ೧೩ | ರಥದ ಅಲಂಕಾರ | ಸಪ್ತರ್ಷಿಮಂಡಲ(ಸಪ್ತರ್ಷಿಗಳ ಸನ್ನಿಧಾನ) |
| ೧೪ | ನೊಗಗಳು | ಗಂಗಾ, ಸಿಂಧು, ಸರಸ್ವತೀ, ಆಕಾಶಗಳು |
| ೧೫ | ಉಪಸ್ಕರ ಚಕ್ರಗಳು | ಇತರ ನದಿಗಳು, ಸರೋವರಗಳು, ಹಗಲುರಾತ್ರಿಗಳು, ಕಲಾ, ಕಾಷ್ಠಾ, ಋತುಗಳು (ಕಾಲದ ಭಾಗಗಳ ಅಭಿಮಾನಿಗಳು) |
| ೧೬ | ಘಂಟೆಗಳು | ಫಲಪುಷ್ಪಗಳನ್ನು ನೀಡುವ ವಿವಿಧ ಔಷಧಿಗಳು |
| ೧೭ | ರಥದ ಚಕ್ರಗಳು | ಸೂರ್ಯ-ಚಂದ್ರರು |

| | | |
|---|---|---|
| ೧೮ | ಅನುಕರ್ಷ | ಬೆಳಕು ನೀಡುವ ಗ್ರಹಗಳು |
| ೧೯ | ವರೂಥ | ನಕ್ಷತ್ರತಾರೆಗಳು |
| ೨೦ | ತ್ರಿವೇಣು | ಧರ್ಮ‌ಅರ್ಥಕಾಮಗಳು ಸುಂದರ ಜೋಡಣೆ (ಸೂಕ್ತ ಪರಿಮಾಣದಲ್ಲಿರುವಂತೆ |
| ೨೧ | ಚಕ್ರಗಳು | ಶುಕ್ಲಕೃಷ್ಣಪಕ್ಷಗಳು– ಹಗಲು ರಾತ್ರಿಗಳು |
| ೨೨ | ಈಷಾ | ಧೃತರಾಷ್ಟ್ರ ಮೊದಲಾದ ೧೦ ನಾಗಗಳು |
| ೨೩. | ಕಡಿವಾಣಗಳು | ಬುಸುಗುಟ್ಟುವ ಮಹಾನಾಗರು(ಸರ್ಪಗಳು) |
| ೨೪ | ನೊಗ | ಅಂತರಿಕ್ಷ |
| ೨೫ | ನೊಗದ ಚರ್ಮಗಳು | ಸಂವರ್ತಕಮೇಘಗಳು |
| ೨೬ | ಕುದುರೆ ಬಾಲಗಳಿಗೆ ಬಿಗಿಯುವ ಹಗ್ಗಗಳು | ಕಾಲಪೃಷ್ಠ ನಹುಷ, ಕರ್ಕೋಟಕ, ಧನಂಜಯ, ಬೇರೆ ನಾಗಗಳು |
| ೨೭ | ಕುದುರೆ ಹಗ್ಗಗಳು | ದಿಕ್ಕು–ವಿದಿಕ್ಕುಗಳು |
| ೨೮ | ಕುದುರೆಗಳು | ನಾಲ್ಕು ವೇದಗಳು, ಪುರಾಣ, ವೇದಾಂಗಗಳು |
| ೨೯ | ಕಡಿವಾಣ | ವಷಟ್ಕಾರ |
| ೩೦ | (ಶಿರ)ಶೀರ್ಷಬಂಧನ | ಗಾಯತ್ರೀ |
| ೩೧ | ಧನುಸ್ | ಸಂವತ್ಸರನಾಮಕ ಚತುರ್ಮುಖಬ್ರಹ್ಮ |
| ೩೨ | ಹೆದೆ(ಬಿಲ್ಲಿನ) | ಮಹಾಶಬ್ದಮಾಡುವ ಸಾವಿತ್ರಿ |
| ೩೩. | ಕವಚ | ಕಾಲಚಕ್ರಾಭಿಮಾನಿ |
| ೩೪ | ಪರಿಷ್ಕೃತನಾದ | ಚತುರ್ಮುಖಬ್ರಹ್ಮ |
| ೩೫ | ಧ್ವಜದಂಡ | ಮೇರುಪರ್ವತ(ಬಂಗಾರದ ಬೆಟ್ಟ) |
| ೩೬ | ಪತಾಕೆಗಳು | ಮೇಘಗಳು |
| ೩೭ | ರಥದ ಆವರಕ–ಚರ್ಮ | ಸಂಧ್ಯಾ–ಧೃತಿ–ಮೇಧಾ–ಸ್ಥಿತಿ– ಸನ್ನತಿದೇವಿಯರು–ಗ್ರಹ–ನಕ್ಷತ್ರ–ತಾರೆಗಳಿಂದ ಅಲಂಕೃತವಾದ ಆಕಾಶಾಭಿಮಾನಿ (ಗಣೇಶ) |
| ೩೮ | ಕುದುರೆಗಳು | ಸುರಪತಿ, ಅಂಬುಪತಿ, ಪ್ರೇತಪತಿ, ವಿತ್ತಪತಿ (ಇಂದ್ರ, ವರುಣ, ಯಮ, ಕುಬೇರ) |
| ೩೯ | ನೊಗಕ್ಕೆ ಕಟ್ಟುವ ಚರ್ಮದ ಹಗ್ಗಗಳು | ಕುಹೂ, ಸಿನೀವಾಲೀ, ರಾಕಾ, ಅನುಮತಿಗಳೆಂಬ ಅಮಾವಾಸ್ಯಾ, ಪೂರ್ಣಿಮಾಭಿಮಾನಿ ದೇವತೆಗಳು |
| ೪೦ | ಕಿರುಘಂಟೆ(ರಥದ) | ಹಾವುಗಳು |

| | | |
|---|---|---|
| ೪೧ | ಕುದುರೆ ಕಟ್ಟುವ ಹಗ್ಗಗಳು | ಧರ್ಮ, ಅರ್ಥ, ತಪಸ್ಸು, ಸತ್ಯ |
| ೪೨ | ರಥದ ಸ್ಥಳ | ಮನಸ್ಸು |
| ೪೩ | ಮಾರ್ಗ | ಮಾತು |
| ೪೪ | ರಥದ ರಕ್ಷಕರು | ಬ್ರಹ್ಮದಂಡ, ಕಾಲದಂಡ(ವಿಷ್ಣುದಂಡ), ರುದ್ರದಂಡ ಹಾಗೂ ಶೈವ-ವೈಷ್ಣವ ಜ್ವರ ಪುರುಷರು |
| ೪೫ | ರಥದ ಹಿಂದೆ ರಕ್ಷಕರು | ಇತಿಹಾಸ-ಯಜುರ್ವೇದಗಳು(ಅಭಿಮಾನಿ-ಗಳು) |
| ೪೬ | ಪಾರ್ಶ್ವರಕ್ಷಕರು | ದಿವ್ಯವಚನಗಳು-ವಿದ್ಯಾಗಳು(೧೪) |
| ೪೭ | ಮುಂದೆ ರಕ್ಷಕರು | ಸ್ತೋತ್ರಗಳು-ವಷಟ್ಕಾರಗಳು-ಓಂಕಾರಗಳು |
| ೪೮ | ಧನುಸ್ಸು | ಸಂವತ್ಸರ(೬ ಋತುಗಳಿಂದ ಕೂಡಿದ) |
| ೪೯ | ಬಾಣ | ವಿಷ್ಣು-ಅಗ್ನಿ-ಸೋಮ |
| ೫೦ | ಬಾಣದಲ್ಲಿ | ಕ್ರೋದಾಗ್ನಿ(ಭೃಗು, ಅಂಗಿರಸ ಋಷಿಗಳ ಕೋಪದಿಂದ ಉದ್ಭೃತವಾದ ಅಸಹನೀಯವಾದ) |

ಹೀಗೆ ಸರ್ವಲೋಕದ ತೇಜಸ್ಸು(ಅಭಿಮಾನಿದೇವತೆಗಳ ಸಾನ್ನಿಧ್ಯ)ಗಳ ಸಮಾಹಾರದಿಂದ ಸಿದ್ಧವಾದ ಭವ್ಯರಥವನ್ನು ನೋಡಿ, ದೇವತೆಗಳೇ (ತಮ್ಮ ಸನ್ನಿಧಾನದ ಭವ್ಯಸ್ವರೂಪ) ನೋಡಿ ಆಶ್ಚರ್ಯಚಕಿತರಾಗಿ ರುದ್ರದೇವರಿಗೆ ಸಿದ್ಧವಾದುದನ್ನು ನಿವೇದಿಸಿದರು. ಇಂತಹ ರಥದಲ್ಲಿ ರುದ್ರದೇವರು ತಮ್ಮ ಆಯುಧಗಳನ್ನಿರಿಸಿ, ಆಕಾಶವನ್ನೇ ಧ್ವಜಸ್ತಂಭವನ್ನಾಗಿ ಮಾಡಿ ಅದರ ತುದಿಯಲ್ಲಿ ತನ್ನ ವೃಷಭವನ್ನು (ನಂದೀಶ್ವರ) ಪ್ರತಿಷ್ಠಾಪಿಸಿ, ನಂತರ ಕಾಲಸ್ವರೂಪಿಯಾದ ರುದ್ರದೇವರು ರಥವೇರಿ ಬಾಣ, ಬಿಲ್ಲುಗಳನ್ನು ತೆಗೆದುಕೊಂಡರು. ಆಗ ಭೂಮ್ಯಂತರಿಕ್ಷಗಳು ಕಂಪಿಸಿದವು. ಆಗ ಆತನನ್ನು ದೇವರ್ಷಿ ಸಂಘವು ಸ್ತುತಿ ಮಾಡಿತು. ಹೀಗೆ ಶೋಭಿಸುತ್ತಾ ಖಡ್ಗ, ಬಾಣ, ಬಿಲ್ಲು ಹಿಡಿದುಕೊಂಡವನಾಗಿ ರಥದ ಸಾರಥಿ ಯಾರೆಂದು ಕೇಳಿದ. ಅದಕ್ಕೆ ನೀನು ಯಾರನ್ನು ನಿಯೋಜಿಸುತ್ತೀಯೋ ಆತನೇ ಸಾರಥಿಯಾಗುವನೆಂದರು. ಆಗ ನನಗಿಂತ ಶ್ರೇಷ್ಠರು ಯಾರು ಇದ್ದಾರೋ ಅವರನ್ನು ಯೋಚಿಸಿ ಸಾರಥಿಯನ್ನಾಗಿ ಮಾಡಿ. ತಡಮಾಡಬೇಡಿರೆಂದು ಶಿವ ನುಡಿದ[೧]. ಆಗ ರುದ್ರದೇವರ ಮಾತನ್ನು ದೇವತೆಗಳು ಬ್ರಹ್ಮದೇವರಿಗೆ ತಿಳಿಸಿ ಸಾರಥಿಯಾಗಲು ಪ್ರಾರ್ಥಿಸಲು ಅವರು ಕೂಡಲೇ ಬಂದೇಬಿಟ್ಟರು.

೧ ............ ಮತ್ತಃ ಶ್ರೇಷ್ಠತರೋ ಹಿ ಯಃ।
ತಂ ಸಾರಥಿಂ ಕುರುಧ್ವಂ ಮೇ ಸ್ವಯಂ ಸಂಚಿಂತ್ಯ ಮಾ ಚಿರಮ್ ॥ - ೩೫/೫೨

ಅವರು ರಥವೇರಿ ವಾಯುವೇಗದಿಂದ ಕುದುರೆಗಳನ್ನು ಓಡಿಸಿದರು. ಇದನ್ನು ನೋಡಿದ ವಿಶ್ವೇಶನು(ರುದ್ರನು) ಮುಗುಳ್ನಗೆಯಿಂದ ಮಾತನಾಡಿದ.

'ಎಲೈ ದೇವನೇ! ದೈತ್ಯರಿರುವೆಡೆಗೆ ಮೆಲ್ಲಗೆ ಕುದುರೆಗಳನ್ನು ಓಡಿಸು. ನನ್ನ ಬಾಹುಬಲವನ್ನು ನೋಡು. ರಣರಂಗದಲ್ಲಿ ಶತ್ರುಗಳನ್ನು ಸಂಹರಿಸುತ್ತೇನೆ. ಬ್ರಹ್ಮನು ತ್ರಿಪುರಗಳು ಇರುವೆಡೆ ರಥ ಓಡಿಸಿದ(ಅಂತರಿಕ್ಷದಲ್ಲಿ ತೇಲುತ್ತಿರುವ). ಆಗ ನಂದಕೇಶ್ವರನು ದಿಕ್ಕುಗಳೆಲ್ಲ ತುಂಬುವಂತೆ ಮಹಾನಾದ ಮಾಡಿದನು. ಆ ದನಿಗೆ ತ್ರಿಪುರಾಸುರರ ಕಡೆಯವರು ಹೆದರಿ ಅಲ್ಲಲ್ಲಿ ಅಡಗಿದರು. ಉಳಿದವರು ಯುದ್ಧಕ್ಕೆ ಬಂದರು. ಆಗ ಸ್ಥಾಣು ಕ್ರೋಧಮೂರ್ಛಿತನಾದ – ಮೈಮರೆತ. ಆ ಸಂದರ್ಭದಲ್ಲಿ ಮೂರ್ಜಗವೆಲ್ಲ ನಡುಗಿತು. ಭೂ ಕಂಪಿಸಿತು. ಅಪಶಕುನಗಳು ಕಂಡವು. ಶಿವ ಬಾಣವನ್ನು ಹೂಡಿದ. ಶರದಲ್ಲಿದ್ದ ಸೋಮ, ಅಗ್ನಿ, ವಿಷ್ಣುಗಳ ತೇಜಸ್ಸಿನಿಂದ, ಬ್ರಹ್ಮರುದ್ರರ ಕೋಪದಿಂದ, ಧನುಸ್ಸಿನ ಕ್ಷೋಭೆಯಿಂದ ರಥವು ಕೆಳಗೆ ಕುಸಿಯತೊಡಗಿತು[1]. ಕೂಡಲೇ ನಾರಾಯಣನು ಶರಭಾಗದಿಂದ ಹೊರಬಂದು ವೃಷಭರೂಪತಾಳಿ ಆ ಮಹಾರಥವನ್ನು ಎತ್ತಿಹಿಡಿದನು[2].

ನಂತರ ಶಿವನು ದಾನವರ ತ್ರಿಪುರವನ್ನು ನೋಡುತ್ತಾ ಮೊದಲು ಕುದುರೆಯ ಸ್ತನಗಳನ್ನು ಕೊಯ್ದು ವೃಷಭದ ಗೊರಸುಗಳನ್ನು ಎರಡಾಗಿ ಸೀಳಿದ. ಅಂದಿನಿಂದ ಗೋವುಗಳ ಗೊರಸುಗಳು ಎರಡಾಗಿಯೂ ಕುದುರೆಗಳು ಸ್ತನರಹಿತಗಳಾದವು[3]. ನಂತರ ಬಿಲ್ಲಿನ ಹೆದೆಯೇರಿಸಿ ಬಾಣಹೂಡಿ ಅದಕ್ಕೆ ಪಾಶುಪತಾಸ್ತ್ರಮಂತ್ರದಿಂದ ಅಭಿಮಂತ್ರಿಸಿ ತ್ರಿಪುರಗಳು ಏಕತ್ರ ಸೇರುವುದನ್ನು ಕಾಯುತ್ತಾ ನಿಂತನು. ಅವು ಏಕತ್ರ ಸೇರಿದ ಕೂಡಲೇ ದೇವರ್ಷಿಗಳು ಜಯಘೋಷ ಮಾಡಿದರು. ಶಿವನ ಮುಂದೆ ತ್ರಿಪುರ ಕಂಡಿತು. ನಂತರ ಶಿವನು ತ್ರಿಪುರದ ಮೇಲೆ ಹೂಡಿದ ಬಾಣವನ್ನು ಬಿಟ್ಟನು. ಪರಿಣಾಮವಾಗಿ ತ್ರಿಪುರವು, ಅಲ್ಲಿದ್ದ ತಾರಕಾಸುರನ ಮೂವರು ಮಕ್ಕಳಾದಿಯೂ ಎಲ್ಲರೂ ಭಸ್ಮೀಭೂತರಾದರು. ಇತರ ಲೋಕಗಳು ಶಿವ ಆದೇಶದ ಮೇರೆಗೆ ಅಗ್ನಿಯಿಂದ ಭಸ್ಮವಾಗಲಿಲ್ಲ.

ನಂತರ ದೇವರ್ಷ್ಯಾದಿಗಳು ಶಿವನನ್ನು ಅರ್ಥಪೂರ್ಣವಾಗಿ ಸ್ತುತಿ ಮಾಡಿದರು. ಪ್ರಜಾಪತಿ ಮೊದಲಾದ ಎಲ್ಲ ದೇವತೆಗಳು ರುದ್ರದೇವರಿಗೆ ಹೇಳಿ ತಮ್ಮ ಲೋಕಗಳಿಗೆ ತೆರಳಿದರು.

---

೧ ತಸ್ಮಿನ್ ಸೋಮಾಗ್ನಿವಿಷ್ಣೂನಾಂ ಕ್ಷೋಭೇಣ ಬ್ರಹ್ಮರುದ್ರಯೋಃ।
ಸ ರಥೋ ದನುಷಃ ಕ್ಷೋಭಾತ್ ಅತೀವ ಹ್ಯವಸೀದತಿ ॥ – ೩೫/೭೬

೨ ತತೋ ನಾರಾಯಣಸ್ತಸ್ಮಾತ್ ಶರಭಾಗಾದ್ವಿನಿಸ್ಸೃತಃ।
ವೃಷರೂಪಂ ಸಮಾಸ್ಥಾಯ ಉಜ್ಜಹಾರ ಮಹಾರಥಮ್ ॥ – ೩೫/೭೭

೩. ಈ ಬಗೆಗಿನ ಹೆಚ್ಚಿನ ವಿವರಗಳಿಗಾಗಿ ತತ್ತ್ವಸಂಶೋಧನ ಸಂಸತ್‌ನ ಕರ್ಣಪರ್ವ(ಭಾಗ-೨೦) ಪುಟ. ೩೭೭ ರಿಂದ ೩೮೧ ಗಳನ್ನು ನೋಡಿರಿ (ಕನ್ನಡ ಅನುವಾದ).

ಏವಂ ತತ್ ತ್ರಿಪುರಂ ದಗ್ಧಂ ದಾನವಾಶ್ಚಾಪ್ಯಶೇಷತಃ ।
ಮಹೇಶ್ವರೇಣ ಕ್ರುದ್ಧೇನ ತ್ರೈಲೋಕ್ಯಸ್ಯ ಹಿತೈಷಿಣಾ ॥
ಸ ಚಾತ್ಮ ಕ್ರೋಧಜೋ ವಹ್ನಿಃ ದಹೇತ್ಯುಕ್ತೋ ನಿವಾರಿತಃ ।
ಮಾಕಾರ್ಷೀರ್ಭಸ್ಮಸಾಲ್ಲೋಕಾನ್ ಇತಿ ತ್ರ್ಯಕ್ಷೋಽಬ್ರವೀಚ್ಚ ತಮ್ ॥

- ೩೫/೮೮,೮೯

ಹೀಗೆ ತ್ರಿಪುರಾಸುರವಧೋಪಾಖ್ಯಾನವನ್ನು ದುರ್ಯೋಧನನು ಹೇಳಿ, 'ಶಲ್ಯ ಮಹಾರಾಜ ನೀನು ಕೂಡಾ ಬ್ರಹ್ಮನಂತೆ ಕರ್ಣನ ರಥದ ಕುದುರೆಗಳನ್ನು ನಿಯಂತ್ರಿಸಿ, ಕರ್ಣನ ಸಾರಥ್ಯ ಮಾಡು. ಕರ್ಣನು ನಮ್ಮ ಶತ್ರುಗಳನ್ನು ಸಂಹರಿಸಲು ನೆರವಾಗು. ನೀನು, ಕರ್ಣ, ಅರ್ಜುನ, ಕೃಷ್ಣರಿಗಿಂತ ಶ್ರೇಷ್ಠನಾಗಿದ್ದೀಯಾ. ಇದರಲ್ಲಿ ಯಾವುದೇ ಸಂಶಯವಿಲ್ಲ' ಎಂದನು.

ತ್ವಂ ಹಿ ಕೃಷ್ಣಾಚ್ಚ ಕರ್ಣಾಚ್ಚ ಫಲ್ಗುನಾಚ್ಚ ವಿಶೇಷತಃ ।
ವಿಶಿಷ್ಟೋ ರಾಜಶಾರ್ದೂಲ ನಾಸ್ತಿ ತತ್ರ ವಿಚಾರಣಾ ॥ - ೩೫/೯೩

**ಸಂದೇಶಗಳು - ವಿವರಣೆಗಳು :**

೧. ಶಲ್ಯ ಮಹಾರಾಜ ಕರ್ಣನ ಸಾರಥ್ಯ ವಹಿಸಲು ಕಾರಣ, ತನ್ನನ್ನು ದುರ್ಯೋಧನ ದೇವಕೀಪುತ್ರನಿಗಿಂತಲೂ ಉತ್ತಮನೆಂದು ಹೊಗಳಿದ್ದು ಹೇಳಿದ್ದು.

ಇದನ್ನು ಶಲ್ಯರಾಜ ಒಪ್ಪಿದ್ದು ಅತ್ಯಂತ ಶಾಸ್ತ್ರವಿರುದ್ಧವಾದುದು. ತಾನು ಸ್ವಯಂ ದೇವತಾಪುರುಷನಾಗಿದ್ದು ತನ್ನ ಇತಿ-ಮಿತಿ ಗೊತ್ತಿದ್ದು ದುರ್ಯೋಧನನಿಂದ ಹಾಗೆ ಹೇಳಿಸಿಕೊಂಡದ್ದು ಸಾತ್ವಿಕ ಜನರಿಗೆ ಅತಿಕೆಟ್ಟ ಸಂದೇಶ ಕೊಡುತ್ತದೆ. ನವವಿಧ ದ್ವೇಷಗಳಲ್ಲಿ ಒಂದಾಗಿ ಅದು ಪರಿಗಣನೆಯಾಗುತ್ತದೆ. 'ಸಾಮ್ಯಾಧಿಕ್ಯೇ ತದನ್ಯೇಷಾಮ್' (ಮತಾನಿ-). ಇದೆಲ್ಲ ಕಲಿಯ ಸ್ವಾರ್ಥಮೂಲ ಉದ್ದೇಶದಿಂದ ಕಲ್ಯಾವಿಷ್ಟನಾಗಿ ಶಲ್ಯ ಮಾಡಬಾರದುದನ್ನು ಮಾಡಿಬಿಟ್ಟ. ಭಗವಂತನೆಲ್ಲಿ? ತಾನೆಲ್ಲಿ? ರಮಾದೇವಿಯೇ ಭಗವಂತನ ಮುಂದೆ ಅನಂತಗುಣಹೀನಳಾಗಿರುವಾಗ ಶಲ್ಯ ಸಹ್ಲಾದಾವತಾರಿ(ವಾಯುದೇವರ ಆವೇಶವುಳ್ಳವನು). ಕೃಷ್ಣನಿಗಿಂತ ಅಧಿಕನೆಂದು ಹೇಗೆ ಹೇಳಿಸಿಕೊಂಡ ಎಂಬುದೇ ಆಶ್ಚರ್ಯ! ಆದರೆ ಕಲಿಯ ಆವೇಶ ಏನೆಲ್ಲ ಮಾಡಿಸಬಲ್ಲದು ಎನ್ನಲು ಇದೊಂದು ಸಾಕ್ಷಿಯಾಗಿದೆ.

೨. ತಾರಕಾಸುರನಿಗಿಂತ ಅವನ ಮೂವರು ಮಕ್ಕಳು ಜಗತ್ತಿಗೆ ಭಾರಿ ಕಂಟಕರಾಗುತ್ತಾರೆ. ಅವರ ಸಂಹಾರಕ್ಕೆ ಬ್ರಹ್ಮದೇವರವನ್ನು ರುದ್ರದೇವರಿಗೆ ವಹಿಸಲಾಗಿತ್ತು. ಆದರೆ ರುದ್ರದೇವರು ಬ್ರಹ್ಮವರ ಪಡೆದವನನ್ನು ಸಂಹರಿಸುವುದು ತಮ್ಮ ಯೋಗ್ಯತೆ ಮೀರಿದುದೆಂದು ಅವರೇ ದೇವತೆಗಳಿಗೆ ಹೇಳಿದ್ದು, ಬ್ರಹ್ಮರುದ್ರರಲ್ಲಿರುವ ತಾರತಮ್ಯವನ್ನು ವಿಷ್ಣುವು ಬಾಣದಲ್ಲಿದ್ದು ತ್ರಿಪುರಾಸುರರನ್ನು ಸಂಹರಿಸಿದ್ದು, ಒಟ್ಟಾರೆ ತ್ರಿಮೂರ್ತಿಗಳಲ್ಲಿನ ತಾರತಮ್ಯವನ್ನು, ವಿಷ್ಣುವಿನ ಸರ್ವೋತ್ತಮತ್ವವನ್ನೂ ನಿಚ್ಚಳವಾಗಿ ತಿಳಿಸುತ್ತದೆ.

೩. ರುದ್ರದೇವರು ಎಲ್ಲ ದೇವತೆಗಳ ಸಹಕಾರ ಪಡೆದು ಅಸುರರನ್ನು ಸಂಹರಿಸಿದ್ದು ರುದ್ರದೇವರಿಗೆ ಅದು ಅಸಾಧ್ಯವಾಗಿತ್ತೆಂದೂ ತಿಳಿಸುತ್ತದೆ.

೪. ಎಲ್ಲ ದೇವತೆಗಳಿಗೆ ಅಸುರಸಂಹಾರಕಾರ್ಯದಲ್ಲಿ ಅವಕಾಶಸಿಕ್ಕು ಅವರೆಲ್ಲ ಪುಣ್ಯಭಾಗಿಗಳಾಗಲು ರುದ್ರದೇವರು ಅವಕಾಶ ಕೊಟ್ಟರೆಂದು ತಿಳಿಯಬಹುದು.

೫. ಬ್ರಹ್ಮದೇವರು ಕೊಟ್ಟ ವರವನ್ನು ರುದ್ರದೇವರು ಮೀರಲಾಗದು ಎಂಬ ತಾತ್ವಿಕ ಪ್ರಮೇಯ ಇಲ್ಲಿ ಗೊತ್ತಾಗುತ್ತದೆ. ವಾಯುದೇವರು ಹಾಗೆ ಮಾಡಿದುದಕ್ಕೆ ನಿದರ್ಶನಗಳಿವೆ. ವಾಯುದೇವರು ರುದ್ರದೇವರಿಗಿಂತ ಉತ್ತಮರೆಂದೂ ಈ ಕಥಾನಕದಿಂದ ತಿಳಿಯುತ್ತದೆ.

೬. ಬ್ರಹ್ಮದೇವರು ವರಕೊಟ್ಟ ಪ್ರಸಂಗಗಳಲ್ಲಿ ಈ ರೀತಿಯಾಗಿ ಅಸುರಸಂಹಾರ ಮಾಡಿದ ಬೇರೆಪ್ರಸಂಗಪ್ರಾಯಃಎಲ್ಲೂಇಲ್ಲ.ಇದೊಂದುಅಪರೂಪರೀತಿಯಸಂಹಾರ.ರುದ್ರದೇವರಿಗೆ ಬ್ರಹ್ಮದೇವರು ಆದೇಶ ಕೊಟ್ಟ ಮೇಲೆ ಅವರೇ ತ್ರಿಪುರಾಸುರನ್ನು ಕೊಲ್ಲಬಹುದಿತ್ತು. ಅವರ ಆದೇಶ ಎಂದರೆ ಅವರ ಅನುಗ್ರಹವೇ. ಅವರ ಆದೇಶ ಅನುಗ್ರಹವಿದ್ದೂ ಕೂಡಾ ಅಸುರರನ್ನು ಸಂಹಾರ ಮಾಡಲು ಪ್ರಾಯಃ ಎಲ್ಲ ತಾತ್ತ್ವಿಕ ದೇವತೆಗಳು ರಥ, ಬಾಣಗಳಲ್ಲಿ ಆವರಿಸಿ, ಸನ್ನಿಧಾನವಿರಿಸಿ ಈ ಅಸುರರನ್ನು ಸಂಹರಿಸಿದ ಉದಾಹರಣೆ ನಿಜಕ್ಕೂ ಅಪರೂಪವೇ. ಇದನ್ನು ವಿವರಿಸುವುದು ನಮ್ಮಂತಹವರಿಗೆ ಅಸಾಧ್ಯ. ಇದೊಂದು ಸಂಕೀರ್ಣ ಸಮಸ್ಯಾತ್ಮಕ ವಿಷಯವಿರಬಹುದು. ಎಲ್ಲಕ್ಕೂ ಹರೀಚ್ಛೆ, ಭಗವತ್ಸಂಕಲ್ಪ ಹಾಗೆಯೇ ಇದೆ ಎಂಬ ಅಂತಿಮ ಉತ್ತರ ಒಂದೇ ಇದಕ್ಕೆ ಪರಿಹಾರ. ಒಂದು ರಥ, ಒಂದು ಬಾಣವನ್ನು ಸಮಸ್ತ ದೇವತೆಗಳು ಚರಾಚರ ಪ್ರಪಂಚದ ನಿಯಂತಾರರು, ಸಕಲ ಶಾಸ್ತ್ರಾಭಿಮಾನಿದೇವತೆಗಳು ಹೊಕ್ಕಿದ್ದಾರೆ. ಅದರ ಭಾರ ಏನಾಗಿರಬೇಡ. ಇದೊಂದು ಮಹಾಭಾರತ ಗ್ರಂಥವಿದ್ದಂತೆ[1]. ಇದಕ್ಕೆ ಇನ್ನೂ ಅನೇಕ ರಹಸ್ಯ ಪ್ರಮೇಯಗಳಿವೆಯೋ ನಾಕಾಣೆ. ಈ ಬಗ್ಗೆ ಮಹಾಭಾರತದ ಈ ಭಾಗದ ಅನುವಾದದಲ್ಲಿ ಸ್ವಲ್ಪ ವಿವರಣೆ ಇದೆ[2](ಭಾಗ-೨೦, ಕರ್ಣಪರ್ವ, ಪುಟ. ೩೮೦-೩೮೧).

೭. ಒಟ್ಟಾರೆ ರುದ್ರದೇವರಿಗೆ ಅಸುರ ಸಂಹಾರ ಕೀರ್ತಿ ಕೊಡಲು ಬ್ರಹ್ಮ, ವಿಷ್ಣು ಇಬ್ಬರೂ ವ್ಯಕ್ತವಾಗಿ, ಅವ್ಯಕ್ತವಾಗಿ ತಮ್ಮ ವ್ಯಾಪಾರ ಮಾಡಿದ್ದಾರೆ. ಚಿಕ್ಕವರನ್ನು ಬೆಂಬಲಿಸುವುದು ಪ್ರೋತ್ಸಾಹಿಸುವುದು ಹಿರಿಯರ ಕರ್ತವ್ಯ ತಾನೇ? ಮೊಮ್ಮಕ್ಕಳನ್ನು ತಾವೇ ಓಡಾಡಿಸಿ ಅವರೇ ಓಡಾಡಿದರೆಂದು ಹೇಳುವ ತಾತಂದಿರು ಜಗತ್ತಿನಲ್ಲಿದ್ದಾರೆ ತಾನೆ?[3]

೮. ಬಾಣದಲ್ಲಿದ್ದ ಸೋಮಾಗ್ನಿ ಹಾಗೂ ವಿಷ್ಣುವಿನ ತೇಜಸ್ಸಿನಿಂದ ಹಾಗೂ ಧನುಸ್ಸಿನ ಭಾರ(ಈಗಾಗಲೇ ಹೇಳಿದಂತೆ ಅದರಲ್ಲಿ ಅಡಕವಾದ ದೇವತೆಗಳ ತೇಜಸ್ಸಿನ)ದಿಂದ ರಥವು

---

೧ **ಮಹತ್ತ್ವಾತ್ ಭಾರತ್ವಾಚ್ಚ ಮಹಾಭಾರತಮುಚ್ಯತೇ** ಎಂಬ ವಾಕ್ಯ ಇಲ್ಲಿ ಸ್ಮರಣಾರ್ಹ.

೨ ತತ್ತ್ವಸಂಶೋಧನ ಸಂಸತ್ ಪ್ರಕಾಶನ ಉಡುಪಿ.

೩ ಹರಿಕಥಾಮೃತಸಾರದಲ್ಲಿ ದಾಸರು ಹೀಗೆ ಹೇಳಿದ್ದಾರೆ:

ಕುಸಿದಾಗ, ಅದನ್ನು ಮೇಲೆತ್ತಿದ್ದು ನಾರಾಯಣನೇ! ನಾರಾಯಣ ವೃಷಭರೂಪತಾಳಿ ಮಹಾರಥವನ್ನು ಎತ್ತಿದನೇ ಹೊರತು ಬ್ರಹ್ಮರುದ್ರರಲ್ಲ. ಇಲ್ಲೂ ನಾರಾಯಣನ ಸರ್ವೋತ್ತಮತ್ವ ಸ್ಪಷ್ಟವಾಗಿ ಗೋಚರವಾಗುತ್ತದೆ (೩೫/೭೮-೮೦).

೯. ಈ ಕಥಾನಕದ ಮುಖ್ಯ ಸಂದೇಶ ಬ್ರಹ್ಮದೇವರು ರುದ್ರದೇವರಿಗಿಂತ ಉತ್ತಮ. ಅವನು (ದುರ್ಯೋಧನ) ಒಪ್ಪುವುದು ತಾತ್ತ್ವಿಕವಾಗಿ ಅಲ್ಲದಿದ್ದರೂ, ಸ್ವಾರ್ಥಕ್ಕಾಗಿಯಾದರೂ ಸತ್ಯಮಾತ್ರ ಹೊರಗೆ ಬಂದೇ ಬಂದಿತು. ಇದರ ಉದ್ದೇಶ ಈ ಉಪಾಖ್ಯಾನವು ರುದ್ರದೇವರ ಸರ್ವೋತ್ತಮತ್ವಕ್ಕೆ ನಿದರ್ಶನವೆಂದು ಯಾರಾದರೂ ಭಾವಿಸಿದರೆ, ಮೂಲ ಓದಿದಾಗ ಹರಿಸರ್ವೋತ್ತಮವು ನಿಚ್ಚಳವಾಗುತ್ತದೆ.

೧೦. ದೇವತೆಗಳು ರುದ್ರದೇವರನ್ನು ಕುರಿತು ತಪಸ್ಸು ಮಾಡಿ (೧೦೦೦ ವರ್ಷ) ಅವರನ್ನು ತ್ರಿಪುರಸಂಹಾರಕ್ಕೆ ಬೇಡಿದರಷ್ಟೇ. ಆಗ ಅವರು ಮಾಡಿದ ಅವರ ಸ್ತುತಿಯು 'ಮಿಶ್ರಸ್ತುತಿ'ಯ ಸಾಲಿಗೆ ಸೇರುತ್ತದೆ. ಅವರ ಹಾಗೂ ಅವರ ಅಂತರ್ಯಾಮಿಯಾದ ಭಗವಂತನ ಸ್ತೋತ್ರವೂ ಅಲ್ಲಿ ಒಟ್ಟಾಗಿ ಬಂದಿದೆ. ಇಂತಹ ಸ್ತುತಿಗಳು ಭಾಗವತದಲ್ಲೂ ಉಂಟು. ಈ ಬಗ್ಗೆ ಭಾಗವತತಾತ್ಪರ್ಯ ಮಾರ್ಗದರ್ಶನ ನೀಡುತ್ತದೆ (ಭಾ.ತಾ.ನಿ.೭/೩/೨೭).

೧೧. ತಾರಕಾಸುರಪುತ್ರರು ವರ ಪಡೆದು ಮಯನಿಂದ ನಿರ್ಮಿತವಾದ ಆಕಾಶದಲ್ಲಿ ತೇಲುವ ಪುರಗಳ ಕಲ್ಪನೆ ಒಂದು ಅದ್ಭುತವಾದುದು. ನಮ್ಮ ಶಾಸ್ತ್ರಗಳಲ್ಲಿ ಆಗಲೆ ತೇಲುವ ಆಕಾಶಕಾಯಗಳ ನಿರ್ಮಾಣದಲ್ಲಿ ಮುಂದೆ ಇದ್ದವು. ಈ ಕಲ್ಪನೆಯನ್ನು ವಿಜ್ಞಾನಿಗಳು, ಮೊದಲಾದವುಗಳ ಮೂಲಕ ಪ್ರಯತ್ನಿಸುತ್ತಿದ್ದಾರೆ.

ವಿವರಗಳಿಗೆ www.nasa.gov ಮತ್ತು http:/www.spaceflight.nasa.gov.readd-ata/sightings/index.html ನೋಡಿರಿ. ಅಮೇರಿಕಾ, ರಷ್ಯಾ, ಕೆನಡಾ, ಜಪಾನ್ ಹಾಗೂ ಯುರೋಪ್ ವಿಜ್ಞಾನಿಗಳು ಆಕಾಶಕಾಯ ಪ್ರಯೋಗಶಾಲೆ, ನಗರನಿರ್ಮಾಣದ ಬಗ್ಗೆ ಪ್ರಯತ್ನಿಸುತ್ತಿದ್ದಾರೆ. ಈಗಾಗಲೇ ಕೆಲ ಆಕಾಶಕಾಯ ಪ್ರಯೋಗಾಲಯಗಳು ಭೂಮಿಯನ್ನು ಸುತ್ತುತ್ತಿವೆ. ರಾಜಕೀಯ, ರಕ್ಷಣಾ, ಹಿತಾಸಕ್ತಿಗಳಿಗಾಗಿ ಬೇಹುಗಾರಿಕೆಗಾಗಿ ಇತ್ಯಾದಿ ಉದ್ದೇಶಗಳಿಗಾಗಿ.

ಇತ್ಯಾದಿ....

## ೬೫. ಹಂಸಕಾಕೀಯ ಉಪಾಖ್ಯಾನ

ಕರ್ಣನ ಅಪೇಕ್ಷೆಯ[1] ಮೇರೆಗೆ ದುರ್ಯೋಧನನು ಶಲ್ಯರಾಜನನ್ನು ಕರ್ಣನ ಸಾರಥಿಯನ್ನಾಗಿ ಸಹಾಯ ಮಾಡಲು ಪ್ರಾರ್ಥಿಸಿದ. ಶಲ್ಯನೂ ಒಪ್ಪಿದ. ಕರ್ಣನಿಗಿಂತಲೂ ಶಲ್ಯನೇ ಉತ್ತಮನೆಂಬ ಭಾವವನ್ನು ಕರ್ಣನೂ ಒಪ್ಪಿಯೇ ಸಾರಥಿಯನ್ನಾಗಿ ಶಲ್ಯನನ್ನು ಒಪ್ಪಿಕೊಂಡನಷ್ಟೇ. ನಂತರ ಕರ್ಣನು ಶಲ್ಯನಿಗೆ ಸಿದ್ಧವಾದ ಮಹಾರಥದಲ್ಲಿ ಶಲ್ಯನು ಕುಳಿತ ಮೇಲೆ ತಾನು ಏರಿ ರಥವನ್ನು ಪಾಂಡವರಿದ್ದಲ್ಲಿಗೆ ಓಡಿಸು ಎಂದನು. ಅಲ್ಲದೆ ದುರ್ಯೋಧನನ ನಿರ್ದೇಶನದಂತೆ ಧರ್ಮರಾಜನನ್ನು ಸೆರೆ ಹಿಡಿಯಲು, ಅಥವಾ ಇತರ ಪಾಂಡವರನ್ನು ಸಂಹರಿಸಲು ಕಟಿಬದ್ಧನಾಗಿ ಶಲ್ಯನಿಗೆ ಅಶ್ವಗಳನ್ನು ಓಡಿಸಲು ತಿಳಿಸಿದ. ಶಲ್ಯ ಇದನ್ನು ಒಪ್ಪಲಿಲ್ಲ. ಪಾಂಡವರ ಅವಮಾನವನ್ನು ಪ್ರತಿಭಟಿಸಿದ. ಕರ್ಣ ಯುದ್ಧಕ್ಕೆ ಹೊರಟಾಗ ಅಪಶಕುನಗಳಾದವು. ಅವನ್ನು ಕೌರವರು ಲೆಕ್ಕಿಸಲಿಲ್ಲ. ಪ್ರತ್ಯುತ ಅರ್ಜುನನ ಅಸದೃಶ ಸಾಹಸಗಳನ್ನೆಲ್ಲ (ಹಿಂದೆ ತೋರಿಸಿದ) ಮರೆತು, ದುರಹಂಕಾರ, ದರ್ಪಗಳಿಂದ ಉರಿಯುತ್ತ ನಿಟ್ಟುಸಿರು ಬಿಡುತ್ತ ಕರ್ಣನು ಶಲ್ಯನಿಗೆ 'ಪಾಂಡವರನ್ನು ಸಾತ್ಯಕಿಯನ್ನು, ಕೃಷ್ಣನನ್ನು ನನ್ನ ಹೊರತು ಯಾರು ತಾನೇ ಎದುರಿಸಬಲ್ಲರು?[2]. ಆದ್ದರಿಂದ ಕೂಡಲೇ ಪಾಂಡವರ ಎದುರು ಹೋಗು. ನಾನು ಅವರನ್ನು ಕೊಲ್ಲುವೆ ಅಥವಾ ದ್ರೋಣರಂತೆ ನಾನು ಯಮಲೋಕಕ್ಕೆ ಹೋಗುವೆ[3]. ಪರಶುರಾಮರು ದಯಪಾಲಿಸಿದ ದಿವ್ಯರಥ, ಧನುಸ್ಸು ಬಾಣ, ಧ್ವಜ, ಗದೆ, ಶಂಖಗಳಿವೆ. ಇಂದ್ರಾದಿ ದಿಕ್ಪಾಲಕರು ಬಂದರೂ ಅರ್ಜುನನನ್ನು ಗೆಲ್ಲುವೆ, ಕೊಲ್ಲುವೆ. ಹೀಗೆ ಕರ್ಣ ನುಡಿಯಲು ಶಲ್ಯ ಕರ್ಣನನ್ನು ಅವಮಾನಿಸುತ್ತಾ ನಕ್ಕ. ನೀನು ನರಾಧಮ. ಕೃಷ್ಣರಕ್ಷಿತ

---

೧ ದುರ್ಯೋಧನ ಉವಾಚ
ಗೃಹಾಣ ಧರ್ಮರಾಜಂ ವಾ ಜಹಿ ವಾ ತ್ವಂ ಧನಂಜಯಮ್ ।
ಭೀಮಸೇನಂ ಚ ರಾಧೇಯಂ ಮಾದ್ರೀ ಪುತ್ರೌ ಯಮಾವಪಿ ॥ – ೩೭/೨೧
ಕರ್ಣ ಉವಾಚ
ಚೋದಯಾಶ್ವಾನ್ ಮಹಾಬಾಹೋ ಯಾವದ್ಧನ್ಮಿ ಧನಂಜಯಮ್ ।
ಭೀಮಸೇನಂ ಯಮೌ ಚೋಭೌ ರಾಜಾನಂ ಚ ಯುಧಿಷ್ಠಿರಮ್ ॥
ಅದ್ಯ ಕ್ಷೇಪ್ಸ್ಯಾಮ್ಯಹಂ ಶಲ್ಯ ಶರಾನ್ ಪರಮತೇಜಸಾನ್ ।
ಪಾಂಡವಾನಾಂ ವಿನಾಶಾಯ ದುರ್ಯೋಧನ ಜಯಾಯ ಚ ॥ – ೩೭/೨೫,೨೭

೨ ಸ ಯತ್ರ ರಾಜಾ ಪಾಂಡವ ಸತ್ಯಸಂಧೋ....
........................... ಭೀಮಾರ್ಜುನೌ ಚ ॥
ಸ ವಾಸುದೇವಃ..........ಕಸ್ತಾನ್ ವಿಷಹೇನ್ಮದನ್ಯಃ । – ೩೮/೨೪

೩ ತಸ್ಮಾತ್ ಕ್ಷಿಪ್ರಂ ಮದ್ರಪತೇ ಪ್ರಯಾಹಿ....
ತಾನ್ ವಾ ಹನಿಷ್ಯಾಮಿ.............
ಯಾಸ್ಯಾಮಿ ವಾ ದ್ರೋಣಮುಖೋ ಯಮಾಯ ॥ – ೩೮/೨೫

ಸುಭದ್ರೆಯನ್ನು ದ್ವಾರಕೆಯಿಂದ ಅಪಹರಿಸಿದ, ಕೈಲಾಸವಾಸಿ ಶಿವನನ್ನು ಎದುರಿಸಿದ, ಖಾಂಡವವನವನ್ನು ಇಂದ್ರನ ವಿರೋಧವನ್ನು ಗಣಿಸದೆ ದಹಿಸಿ ಅಗ್ನಿಗೆ ಆಹುತಿ ನೀಡಿದ, ಘೋಷ ಯಾತ್ರೆಯಲ್ಲಿ ದುರ್ಯೋಧನನನ್ನು ಗಂಧರ್ವರಿಂದ ಬಿಡಿಸಿದ, ಅರ್ಜುನನನ್ನು ಹೇಗೆ ತಾನೆ ಗೆಲ್ಲುವೆ? ಕೊಲ್ಲುವುದಂತೂ ದೂರತೋಽಪಾಸ್ತವೆಂದನು ಶಲ್ಯ. ಇದಾವುದೂ ಕರ್ಣನಿಗೆ ಪಥ್ಯವೆನಿಸದೆ ಮತ್ತೆ ಶಲ್ಯನಿಗೆ ರಥ ನಡೆಸಲು ಸೂಚಿಸುತ್ತಾ 'ಅರ್ಜುನನನ್ನು ತೋರಿಸಿ' ತೋರಿಸಿದವರಿಗೆ ಅವರು ಬೇಡಿದಷ್ಟು ಐಶ್ವರ್ಯಾದಿಗಳನ್ನು ಕೊಡುವೆ ಎಂದು ದರ್ಪದಿಂದ ನುಡಿದ[1]. ಶಲ್ಯ ಕರ್ಣನಿಗೆ 'ನೀನು ಕಾಗೆ, ನರಿಯಿದ್ದಂತೆ. ಅರ್ಜುನ ಹಂಸ, ಸಿಂಹವಿದ್ದಂತೆ ಎಂದು ಛೇಡಿಸಿದ[2].

ಮಹಾಭಾರತದಲ್ಲಿ ಕರ್ಣನ ದರ್ಪದ ನುಡಿಗಳು–

**ಪುತ್ರದಾರಾನ್ ವಿಹಾಯೈವ ಯದನ್ಯದ್ ವಿತ್ತಮಸ್ತಿ ಮೇ ।**
**ತಚ್ಚ ತಸ್ಮೈ ಪುನರ್ದದ್ಯಾಂ ಯದ್ಯಚ್ಚ ಮನಸೇಚ್ಛತಿ ॥** - ೩೯/೨೧

(ಶಕಟಂ ರತ್ನಸಂಪೂರ್ಣಂ, ಸುವರ್ಣಂ ಹಸ್ತಿಷಡ್ಗತಮ್, ಇತ್ಯಾದೀನ್)

**ಹತ್ವಾ ಚ ಸಹಿತೌ ಕೃಷ್ಣೌ ತಯೋರ್ವಿತ್ತಾನಿ ಸರ್ವಶಃ ।**
**ತಸ್ಮೈ ದದ್ಯಾಮಹಂ ಯೋ ವೈ ಪ್ರಬ್ರೂಯಾತ್ ಕೇಶವಾರ್ಜುನೌ ॥** -೩೯/೨೨

ಕೃಷ್ಣಾರ್ಜುನರನ್ನು ಕೊಂದು ಅವರ ಐಶ್ವರ್ಯವನ್ನು ಕೃಷ್ಣಾರ್ಜುನರು ಎಲ್ಲಿರುವರೆಂದು ಹೇಳುವವರಿಗೆ ಕೊಡುವೆ (ನನ್ನ ಪತ್ನಿ ಪುತ್ರರನ್ನು ಹೊರತುಪಡಿಸಿ). ಅವರು ಏನೇ ಬಯಸಿದರೂ ಅಷ್ಟು ಐಶ್ವರ್ಯವನ್ನು ಕೊಡುವೆ. ರಾಜನಾದ ದುರ್ಯೋಧನ ನನಗೆ ಎಂದಿಗೂ ಒಳ್ಳೆಯದನ್ನೇ ಮಾಡುತ್ತಾ ಬಂದಿದ್ದಾನೆ. ಅವನ ಇಚ್ಛೆಯ ಮೇರೆಗೆ ನನಗೆ ಪ್ರಿಯವಾದ ಭೋಗವನ್ನು ಬಿಡಲಾಗದ ಪ್ರಾಣವನ್ನು ತ್ಯಜಿಸಲು ಸಿದ್ಧನಿದ್ದೇನೆ. ದುರ್ಯೋಧನನು ಯುದ್ಧಾರಂಭದಲ್ಲಿಯೇ ಹೀಗೆ ಹೇಳಿದ್ದ[3]. ಎಂದು ದುರ್ಯೋಧನನು ತನಗೆ ಆಪ್ತತಮವೆಂದೇ ಭ್ರಮಿಸಿದ ಕರ್ಣ[4] ರಣಾಂಗಣದಲ್ಲಿ ಪ್ರತಿಯೊಬ್ಬ ಯೋಧನನ್ನೂ

೧ ಗಚ್ಛನ್ ಯುದ್ಧಾಯ ದರ್ಪೇಣ ಪ್ರಾಹ ಯೋ ಮೇಽರ್ಜುನಂ ಪುಮಾನ್ ।
ದರ್ಶಯೇತ್ ತಸ್ಯ ದಾಸ್ಯಾಮಿ ಪ್ರೀತೋ ವಿತ್ತಮನರ್ಗಲಮ್ ॥ - ಮ.ತಾ.ನಿ.(೨೭/೨೮)

೨ ಕಾಕಗೋಮಾಯುಧರ್ಮಾತ್ತ್ವಂ ಹಂಸಸಿಂಹೋಪಮಂ ರಣೇ ।
ಮಾ ಯಾಹಿ ಪಾರ್ಥಂ ಮಾ ಯಾಹಿ ಹತೋಽನೇನ ಯಮಕ್ಷಯಮ್ ॥
- ಮ.ತಾ.ನಿ.(೨೭/೩೦,೩೧)

೩ ಭವಾನ್ ಭೀಷ್ಮಶ್ಚ ಕರ್ಣಶ್ಚ...... ಮದರ್ಥೇ ತ್ಯಕ್ತಜೀವಿತಾ । - ಭೀ.ಪ.ಗೀತಾ(೧/೮,೯)

೪ ಕಲ್ಯಾಣವೃತ್ತಃ ಸತತಂ ಹಿ ರಾಜಾ ವೈಚಿತ್ರ್ಯವೀರ್ಯಸ್ಯ ಸುತೋ ಮಮಾಸೀತ್ ।
ತಸ್ಯಾರ್ಥಸಿದ್ಧ್ಯರ್ಥಮಹಂ ತ್ಯಜಾಮಿ ಪ್ರಿಯಾನ್ ಭೋಗಾನ್ ದುಸ್ತ್ಯಜಂ ಜೀವಿತಂ ಚ ॥
- ೩೮/೨೮

ಅರ್ಜುನ ಎಲ್ಲಿ? ಎಂದ. ಶಲ್ಯ ಇವೆಲ್ಲವನ್ನೂ ಕೇಳಿ ನೋಡಿ ಅಸಹ್ಯಪಟ್ಟು ಕೋಪಗೊಂಡು ಉತ್ತರಿಸಿದ. 'ಕರ್ಣ! ಅರ್ಜುನನು ಅತಿಶೀಘ್ರದಲ್ಲಿ ನಿನಗೆ ಕಾಣುವನು. ಅದಕ್ಕಾಗಿ ಏಕಿಷ್ಟು ದ್ರವ್ಯವ್ಯಯ? ಅದೇ ಹಣವನ್ನು ಯಜ್ಞ-ದಾನಾದಿಗಳಿಗೆ ವಿನಿಯೋಗಿಸು. ಕೃಷ್ಣಾರ್ಜುನರನ್ನು ಕೊಲ್ಲುವ ನಿನ್ನ ಬಯಕೆ ವ್ಯರ್ಥ. ನೀನೊಬ್ಬ ಮೋಸದ ನರಿ. ಅವರೋ ಸಿಂಹಗಳಿದ್ದಂತೆ. ನಿನ್ನ ಹಾಗೂ ದುರ್ಯೋಧನನ ಹಿತಕ್ಕಾಗಿ ಸಾರಥಿಯಾಗಿ ನಿನಗೆ ಕೆಲ ಮಾತುಗಳನ್ನು ಅವಶ್ಯವಾಗಿ ಹೇಳಬೇಕಿದೆ. ಕೇಳು. ಕೇಳಿ ನಿನಗೆ ತೋಚಿದಂತೆ ಮಾಡು. ನಿನಗೆ ಬದುಕುವ ಆಶೆಯಿದ್ದಲ್ಲಿ.

೧. ನಿನಗೆ ಕಾರ್ಯಾಕಾರ್ಯ ಪರಿಜ್ಞಾನವಿಲ್ಲ; ೨. ನೀನೊಬ್ಬನೇ ಅರ್ಜುನನನ್ನು ಎದುರಿಸಬೇಡ. ಸೈನ್ಯದೊಂದಿಗೆ ಹೋಗು; ೩. ಸಮುದ್ರ ದಾಟಲು ಕೊರಳಿಗೆ ಕಲ್ಲು ಕಟ್ಟಿಕೊಂಡು ಈಜಲು ಹೊರಟಂತಿದೆ ನಿನ್ನ ಪ್ರಯತ್ನ; ೪. ಇಂದ್ರಾದಿ ದಿಕ್ಪಾಲಕರನ್ನು ಗೆಲ್ಲುವ ನಿನ್ನ ಆಸೆ ನಿರಾಶೆಯಾಗುವುದು; ೫. ಹಿಂದೆಲ್ಲ (ಇದೇ ಯುದ್ಧದಲ್ಲಿ) ಅರ್ಜುನನ ಬಾಣಗಳಿಗೆ ಹೆದರಿ ಓಡಿಹೋಗಲಿಲ್ಲವೇ? ೬. ನಿನ್ನ ಸೈನ್ಯ ಸಂಹಾರಗೈದಾಗ(ಅರ್ಜುನನು) ನಿನ್ನ ಪರಾಕ್ರಮ ಎಲ್ಲಿ ಹೋಗಿತ್ತು? ೭. ಅರ್ಜುನನೊಡನೆ ನೀನು ಬಯಸಿದ ಯುದ್ಧವೆಂದರೆ ತ್ರಿಶೂಲವನ್ನು ಆಲಂಗಿಸಿದಂತೆ! ೮. ಅರ್ಜುನನೊಡನೆ ನೀನು ಯುದ್ಧಕ್ಕಾಗಿ ಆಹ್ವಾನಿಸುವುದು ಮಹಾಮೇಘವನ್ನು ಕಪ್ಪೆಯು ಒಟಗುಟ್ಟುತ್ತಾ ಎದುರಿಸಿದಂತೆ; ೯. ವ್ಯಾಘ್ರನೆಂದು ನಿನ್ನನ್ನೇ ಬಗೆದಿರುವೆ. ನೀನು ನಿಜವಾಗಿ ಗುಳ್ಳೆನರಿ! ೧೦. ನೀನು ಯಾವಾಗಲೂ ನರಿ - ಅರ್ಜುನ ನಿತ್ಯ ಸಿಂಹ; ೧೧. ನೀವಿಬ್ಬರೂ ಬಲಾಬಲಗಳಲ್ಲಿ ಬೆಕ್ಕು-ಇಲಿ, ಹುಲಿ-ನಾಯಿ, ಸಿಂಹ-ನರಿ, ಆನೆ-ಮೊಲ, ಸತ್ಯ-ಅನೃತ, ವಿಷ-ಅಮೃತಗಳಿದ್ದಂತೆ[1].

ಈ ಮಾತುಗಳನ್ನು ಕೇಳಿದ ಕರ್ಣ ಕನಲಿ ಕೆಂಡವಾದ. ತಾನು ಗುಣವಂತನಾದರೂ, ಶಲ್ಯ ಅದನ್ನು ಗಣಿಸದೆ ದೋಷಿ ಎಂದು ಬಗೆದಿದ್ದಾನೆಂದು ಭ್ರಮಿಸಿದ[2]. ತನ್ನನ್ನು ತಾನೇ ಅರಿಯದ ಕರ್ಣ, ನೀನು ಗುಣಶೂನ್ಯ. ಹೇಗೆ ತಾನೇ ಇತರರಲ್ಲಿರುವ ಗುಣಾಗುಣಗಳನ್ನು ತಿಳಿಯಬಲ್ಲೆ? ಅರ್ಜುನ-ಕೃಷ್ಣರನ್ನು ನಾನೇ ಚೆನ್ನಾಗಿ ಅರಿತಿದ್ದೇನೆ. ನೀನು ತಿಳಿದಿಲ್ಲ. ಅರ್ಜುನ ಮಹಾಸ್ತ್ರವೇತ್ತ, ಕೃಷ್ಣನ ಮಾಹಾತ್ಮೆ ಕೂಡಾ ಬಲ್ಲೆ. ನನ್ನಲ್ಲಿರುವ ಒಂದು ವಿಶಿಷ್ಟ ಬಾಣವನ್ನು ಕೃಷ್ಣಾರ್ಜುನರಿಗೆ ಮೀಸಲಿಟ್ಟಿದ್ದೇನೆ. ಅವರನ್ನು ಎದುರಿಸುವ ಭಾಗ್ಯ ನನಗೆ ಬಂದಿದೆ. ನೀನೋ ಅತ್ಯಂತ ದುಷ್ಟ ಯುದ್ಧ ವಿಷಯದಲ್ಲಿ ಅಜ್ಞಾನಿ. ನಿನ್ನ ಜನ್ಮಸ್ಥಾನ ಮದ್ರದೇಶ ಕೆಟ್ಟದೇಶ. ಕ್ಷತ್ರಿಯಕುಲಕ್ಕೆ ಕಳಂಕ ನೀನು. ನಾನು ಕೃಷ್ಣಾರ್ಜುನರಿಗೆ ಅಂಜೆ. ನಾನೇ ಅವರಿಂದ ಕೊಲ್ಲಲ್ಪಟ್ಟರೂ. ಸಾವಿರ ಕೃಷ್ಣರನ್ನಾಗಲೀ, ನೂರು ಅರ್ಜುನರನ್ನಾಗಲಿ ನಾನೊಬ್ಬನೇ ಕೊಲ್ಲುವೆ. ನೀನು ಸುಮ್ಮನಿರು. ನಿನ್ನ ದೇಶ ಎಂತಹ ಕೆಟ್ಟದೇಶ ಎಂಬುದು ಎಲ್ಲರಿಗೂ ಗೊತ್ತು. ಬ್ರಾಹ್ಮಣರೇ ಹೇಳುತ್ತಾರೆ.

---

೧ ಯಥಾಽನೃತಂ ಚ ಸತ್ಯಂ ಚ ಯಥಾ ಚಾಪಿ ವಿಷಾಮೃತೇ।
ತಥಾ ತ್ವಮಪಿ ಪಾರ್ಥಶ್ಚ ಪ್ರಖ್ಯಾತಾವಾತ್ಮಕರ್ಮಭಿಃ॥ - ೩೯/೬೪

೨ ಗುಣಾನ್ ಗುಣವತಾಂ ಶಲ್ಯ ಗುಣವಾನ್ ವೇತ್ತಿ ನಾಗುಣಃ।
ತ್ವಂ ತು ನಿತ್ಯಂ ಗುಣೈರ್ಹೀನಃ ಕಿಂ ಜ್ಞಾಸ್ಯಸಿ ಗುಣಾಗುಣಾನ್॥

**ಪಾಪದೇಶಜ ದುರ್ಬುದ್ಧೇ ಕ್ಷುದ್ರ ಕ್ಷತ್ರಿಯಪಾಂಸನ ।**
**ವಾಸುದೇವಸಹಸ್ರಂ ವಾ ಫಲ್ಗುನಾನಾಂ ಶತಾನಿ ವಾ ॥**
**ಅಹಮೇಕೋ ಹನಿಷ್ಯಾಮಿ ಜೋಷಮಾಸ್ವ ಕುದೇಶಜ ॥ - ೪೦/೧೮,೨೦**

ಮದ್ರದೇಶಿಗಳು ಮಿತ್ರದ್ರೋಹಿಗಳು; ಸೌಹಾರ್ದವಿರದವರು; ದುರಾತ್ಮರು; ಸುಳ್ಳುಬುರುಕರು; ಬಂಧುಬಾಂಧವರು, ಹಿರಿಯರು, ಕಿರಿಯರೆನ್ನದೆ ದಾಸದಾಸಿಯರಂತೆ ಎಲ್ಲ ಪುರುಷರೊಡನೆ ಸ್ತ್ರೀಯರು ಬೆರೆಯುತ್ತಾರೆ (ವ್ಯಭಿಚಾರಿಗಳ ದೇಶ); ಸ್ವೇಚ್ಛಾಚಾರಿಗಳು; ಪಾಪಕರ್ಮಗಳಲ್ಲಿ ಪ್ರಖ್ಯಾತರು - ಇವರೊಡನೆ ವೈರವಾಗಲೀ, ಸೌಹಾರ್ದವಾಗಲೀ ಕೂಡದು. ಅವರೊಡನೆ ಸಹವಾಸ ನರಕಕ್ಕೆ ಸಾಧನವೇ ಸರಿ. ಇತ್ಯಾದಿಯಾಗಿ ಕರ್ಣ ನಿಂದಿಸುತ್ತಾ ಮತ್ತೆ ಶಲ್ಯನಿಗೆ ಹೋಗು ಮುಂದೆ (ಪಾಂಡವರ ಕಡೆಗೆ) ಎಂದ.

ಇದನ್ನು ಕೇಳಿದ ಮದ್ರರಾಜನೂ ಸಹ ತನ್ನ ಸಾತ್ವಿಕತನವನ್ನು ಶ್ರುತಪಡಿಸಿದ. ನಾನೊಬ್ಬ ಮೂರ್ಧಾಭಿಷಿಕ್ತ ರಾಜ. ಧರ್ಮಪರಾಯಣ, ನೀನು ತಪ್ಪು ದಾರಿಯಲ್ಲಿದ್ದೀಯಾ. ನಿನಗೆ ಸರಿಯಾದ ಚಿಕಿತ್ಸೆ ಮಾಡುತ್ತೇನೆ. ನೀನೇ ಹೀನ ಕುಲದವ. ನಾನು ಪಾಪಿಯಲ್ಲ. ಒಳ್ಳೆಯವರು ಕೆಟ್ಟವರು ಎಲ್ಲ ದೇಶದಲ್ಲಿರುತ್ತಾರೆ[೧]. ಆದರೆ ನಿನ್ನ ಸಾರಥಿಯಾಗಿ ರಥಿಕನ ಅನುಕೂಲ, ಪ್ರತಿಕೂಲ ಪರಿಸ್ಥಿತಿಗಳನ್ನು ಕುದುರೆ ಹಾಗೂ ರಾಜನಿಗೆ ಯುದ್ಧದಲ್ಲಿ ಆಗುವ ಶ್ರಮ ಮೊದಲಾದವುಗಳನ್ನು, ಆಯುಧಗಳ ಪರಿಜ್ಞಾನ, ಅವುಗಳ ಪ್ರಯೋಗದ ಔಚಿತ್ಯ ಇತ್ಯಾದಿ, ಶುಭಾಶುಭ ನಿಮಿತ್ತಗಳ ಬಗ್ಗೆ ಪ್ರತಿಕ್ರಿಯಿಸುವುದು ಇವೆಲ್ಲವುಗಳನ್ನು ಗ್ರಹಿಸಿ ಸೂಕ್ತ ಸಲಹೆಗಳನ್ನು ಕೊಡುವುದು ನನ್ನ ಕರ್ತವ್ಯ. ಅದಕ್ಕಾಗಿ ನಿನ್ನ ನಿಜವಾದ ವ್ಯಕ್ತಿತ್ವವನ್ನು ಬಲ್ಲವನಾಗಿ ತಿಳಿ ಹೇಳುತ್ತೇನೆ. ನಿನ್ನ ಮಾತನ್ನು ವಿರೋಧಿಸಿದ ಮಾತ್ರಕ್ಕೆ ನನ್ನನ್ನೂ ಕೊಲ್ಲುವ ನಿನ್ನ ವಿಚಾರಕ್ಕೆ ಧಿಕ್ಕಾರ. ನಾನು ನಿರಪರಾಧಿ. ನೀನೋ ದುರ್ಯೋಧನಾದಿ ಕೌರವರ ಎಂಜಲಿನಿಂದ ಕೊಬ್ಬಿ ಮಾತನಾಡಿರುವೆ. ಇದರಲ್ಲಿ ಸಂಶಯವಿಲ್ಲ.

**ಈ ಬಗ್ಗೆ ಒಂದು ಇತಿಹಾಸವಿದೆ. ಹಂಸಪಕ್ಷಿಗಳ ಹಾಗೂ ಕಾಗೆಯ ಕಥಾನಿದರ್ಶನವನ್ನು ಕೇಳು ಎಂದು ಶಲ್ಯ ಹೇಳುತ್ತಾನೆ.**

'ಒಬ್ಬ ಶ್ರೀಮಂತ ವೈಶ್ಯನಿದ್ದ. ಸಮುದ್ರದಂಡೆಯ ಮೇಲೆ ಅವನ ವಾಸ. ಕ್ಷಮಾಶೀಲ, ಧಾರ್ಮಿಕ. ಅವನು ಪುತ್ರ, ಪೌತ್ರರಿಂದ ಕೂಡಿದ ವಿಶಾಲ ಕುಟುಂಬಿ. ರಾಜ್ಯವೊಂದರಲ್ಲಿ ನಿರ್ಭಯನಾಗಿದ್ದ. ಅವನ ಮನೆಯ ಪರಿಸರದಲ್ಲಿದ್ದ ಒಂದು ಕಾಗೆ ಈ ಶ್ರೀಮಂತಕುಟುಂಬ ಉಂಡು ಉಳಿದುದನ್ನು ತಿಂದು ಜೀವಿಸುತ್ತಿತ್ತು. ಶ್ರೀಮಂತನ ಪರಿವಾರದವರು ಈ ಕಾಗೆಗೆ ತಾವು ಉಂಡು ಉಳಿದ ಮಾಂಸ, ಅನ್ನ ಮೊಸರು, ಹಾಲು, ಪಾಯಸಾದಿಗಳನ್ನು ಕೊಡುತ್ತಿದ್ದರು. ಈ

---

೧ ಶಲ್ಯೋಽಪಿ ಸರ್ವದೇಶೇಷು ನೀಚಮಧ್ಯೋತ್ತಮಾ ನರಾಃ ।
ಸಂತೀತ್ಯುಕ್ತ್ವಾಽಸ್ಯ ಸಾರಥ್ಯಂ ಚಕ್ರೇ ಪಾರ್ಥಹಿತೇಪ್ಸಯಾ ॥ - ಮ.ತಾ.ನಿ.(೨೭/೩೨)

ಕಾಗೆ ಈ ಎಂಜಲುಂಡೇ ಅಹಂಕಾರದಿಂದ ಕೊಬ್ಬಿ ಇತರ ಪಕ್ಷಿಗಳನ್ನು ಹೀಯಾಳಿಸುತ್ತಿತ್ತು[೧].

ಹೀಗಿರುವಾಗ ಒಮ್ಮೆ ಗರುಡನಂತೆ ವೇಗಶಾಲಿಗಳಾದ ಹಲವು ಹಂಸಪಕ್ಷಿಗಳು ಈ ಸಮುದ್ರದ ತೀರಕ್ಕೆ ಹಾರುತ್ತಾ ಬಂದವು. ಅವುಗಳನ್ನು ನೋಡಿದ ವೈಶ್ಯಪುತ್ರರು ಹಂಸಗಳನ್ನು ನೋಡಿ ಕಾಗೆಗೆ ಹೇಳಿದರು. 'ಎಲೈ ಕಾಗೆಯೇ! ನೀನೇ ಎಲ್ಲ ಪಕ್ಷಿಗಳಿಗಿಂತ ಉತ್ತಮ. ಮೇಲೆ ಹಾರುತ್ತಿರುವ ಹಂಸಪಕ್ಷಿಗಳನ್ನು ನೋಡು. ನೀನೇಕೆ ಶಕ್ತಿ ಇದ್ದರೂ ಹಾರುತ್ತಿಲ್ಲ?[೨]'

ಈ ಮಾತನ್ನು ಕೇಳಿದ ಕಾಗೆ ಆ ಕುಮಾರರು ತನ್ನನ್ನು ವಂಚಿಸಲು, ದಡ್ಡತನ ಹೊರಹಾಕಲು ಹೇಳಿದ ಮಾತನ್ನು ತನ್ನ ಮೂರ್ಖತನದಿಂದ ಅಹಂಕಾರದಿಂದ ಸತ್ಯವೆಂದೇ ಬಗೆಯಿತು[೩]. ನಂತರ ಕಾಗೆಯು ಹಾರಾಡುತ್ತಿರುವ ಹಂಸಪಕ್ಷಿಗಳಲ್ಲಿ ಯಾವುದು ಶ್ರೇಷ್ಠವೆಂದು ತಿಳಿಯಲು ತಾನು ಮೇಲೆ ಹಾರಿ, ಅದನ್ನು ತಿಳಿದು ಅದರ ಮುಂದೆ ಹೋಗಿ 'ನಾವಿಬ್ಬರೂ ಹಾರೋಣ' ಎಂದು ಸ್ಪರ್ಧೆಗೆ ಕರೆಯಿತು. ಕಾಗೆಯ ಮಾತನ್ನು ಕೇಳಿ ಉಳಿದ ಹಂಸಪಕ್ಷಿಗಳು ನಗೆಯಾಡಿದವು. ಮತ್ತು 'ನೀನು ದುರ್ಬುದ್ಧಿಯಿಂದ ನಿನ್ನ ದೌರ್ಬಲ್ಯ ತಿಳಿಯದೆ ಹೇಗೆ ತಾನೇ ಹಂಸನೊಡನೆ ಸ್ಪರ್ಧೆಗೆ ಇಳಿದಿದ್ದೀಯಾ? ಹೇಳು ಎಂದವು. ಆದಕ್ಕೆ ಕಾಗೆ ಹಂಸಪಕ್ಷಿಗಳ ಮಾತನ್ನೇ ಆಕ್ಷೇಪಿಸುತ್ತಾ ನಿಂದಿಸುತ್ತಾ ತನಗೆ ನೂರೊಂದು ಪ್ರಕಾರಗಳ ವಿಚಿತ್ರವಾದ ಹಾರಾಟ ಗೊತ್ತು. ನಾನು ಅವನ್ನು ತೋರಿಸಬಲ್ಲೆ, ನಿಮಗೆ ಯಾವ ಪ್ರಕಾರದ ಹಾರಾಟ ಗೊತ್ತು? ಹೇಳಿ ಎಂದಿತು ಕಾಗೆ[೪]. ವಿವರಗಳಿಗೆ ಪರಿಶಿಷ್ಟ ನೋಡಿರಿ.

ಆದಕ್ಕೆ ಹಂಸ 'ನಮಗೆ ಒಂದೇ ಗತಿ ಗೊತ್ತಿವೆ. ಅದನ್ನೇ ತೋರಿಸುತ್ತೇವೆ. ಬೇರೆ ಗತಿಗಳು ನಮಗೆ ತಿಳಿಯವು' ಎಂದಿತು. ಆಗ ಕಾಗೆಯು ಹಂಸಕ್ಕೆ 'ಹಾಗಾದರೆ ಯಾವ ಗತಿ ಗೊತ್ತಿದೆಯೋ, ಅದರಿಂದಲೇ ಬೇಗನೇ ಹಾರು' ಎಂದಾಗ ಕಾಗೆಯ ಇತರ ಸ್ನೇಹಿತ ಕಾಗೆಗಳು 'ಒಂದೇ ಗತಿ ಬಲ್ಲ ಹಂಸ ನೂರೊಂದು ಗತಿಯನ್ನು ಬಲ್ಲ ಕಾಗೆಯನ್ನು ಹೇಗೆ ತಾನೇ ಗೆದ್ದೀತು? ಎಂದು ನಕ್ಕವು.

---

೧ ಸ ಚೋಚ್ಛಿಷ್ಟಭೃತಃ ಕಾಕೋ ವೈಶ್ಯಪುತ್ರೈಃ ಕುಮಾರಕೈಃ।
ಸದೃಶಾನ್ ಪಕ್ಷಿಣೋ ದೃಪ್ತಃ ಶ್ರೇಯಸಶ್ಚಾವಮನ್ಯತೇ॥ - ೪೧/೧೬

೨ ಭವಾನೇವ ವಿಶಿಷ್ಟೋ ಹಿ ಪತತ್ರಿಭ್ಯೋ ವಿಹಂಗಮ।
ಏಹಿ ತ್ವಮಪಿ ಶಕ್ತೋ ಹಿ ಕಸ್ಮಾನ್ನ ಪತಿತಂ ತ್ವಯಾ॥

೩ ಪ್ರತಾರ್ಯಮಾಣಸ್ತೈಃ ಸರ್ವೈರಲ್ಪಬುದ್ಧಿಭಿರಂಡಜಃ।
ತದ್ವಚಃ ಸತ್ಯಮಿತ್ಯೇವ ಮೌರ್ಖ್ಯಾತ್ ದರ್ಪಾಚ್ಚ ಜಜ್ಞಿವಾನ್॥ - ೪೧/೨೦

೪ ಶತಮೇಕಂ ಚ ಪಾತಾನಾಂ ಪತಿತಾऽಸ್ಮಿ ನ ಸಂಶಯಃ।
ಶತಯೋಜನಮೇಕೈಕಂ ವಿಚಿತ್ರಂ ವಿವಿಧಂ ತಥಾ॥ - ೪೧/೨೮
ಏಕಮೇವ ತು ಯಂ ಪಾತಂ ವಿದುಃ ಸರ್ವೇ ವಿಹಂಗಮಾಃ।
ತಮಹಂ ಪತಿತಾ ಕಾಲ ನಾನ್ಯಂ ಜಾನಾಮಿ ಕಂಚನ॥ - ೪೧/೩೭,೩೮

ಅಂತೂ ಕೊನೆಗೆ ಒಪ್ಪಂದದಂತೆ ಕಾಗೆ ಹಂಸಗಳು ಹಾರಾಟ ಆರಂಭಿಸಿದವು. ಮೊದಲು ಕಾಗೆಯೇ ಹಾರಾಟ ಆರಂಬಿಸಿತು. ನಂತರ ಆರಂಭಿಸಿದ ಹಂಸ ಕಾಗೆಯನ್ನು ಹಿಂದೆ ಹಾಕಿ ಹಾರಿದಾಗ ಕಾಗೆ ಒಂದು ಮುಹೂರ್ತಕಾಲ ಹಿಂದೆ ಹಾಕಿ ಹಾರಲೇ ಇಲ್ಲ. ಆದರೆ ಕಾಗೆ ಮತ್ತೇ ಹಂಸಪಕ್ಷಿಯನ್ನು ತನ್ನ ಚಾಪಲ್ಯ, ಔದ್ಧತ್ಯ ತೋರಿಸುತ್ತಾ ಹಂಸಕ್ಕಿಂತ ಮುಂದೆ ಹೋಗಿ ಹಿಂದಿರುಗಿ ಬಂದು ಹಂಸಕ್ಕೆ ಹಂಗಿಸುವಂತೆ ವರ್ತಿಸಿತು. ಕಾಗೆ ತನ್ನ ಬಹುರೀತಿಯ ಹಾರಾಟಗಳನ್ನು ಪ್ರದರ್ಶಿಸಿತು. ಅದನ್ನು ನೋಡಿದ ಇತರ ಕಾಗೆಗಳು ಆನಂದದಿಂದ ಕೂಗಾಡಿದವು. ಹಂಸಗಳೂ ಕೂಡಾ ಕಾಗೆಗಳನ್ನು ತಮ್ಮದೇ ಆದ ವಿವಿಧ ಧ್ವನಿಗಳಿಂದ ಕೂಗುತ್ತಾ ತಮ್ಮ ಹಂಸಕ್ಕೆ ಜಯವನ್ನು ಹಾರೈಸಿದವು. ಇನ್ನೊಂದು ಮುಹೂರ್ತ ನೋಡಿರಿ ಕಾಗೆಗಳೇ. ಹಂಸವೇ ಗೆಲ್ಲುತ್ತದೆ ಎಂದವು ಹಂಸಪಕ್ಷಿಯ ಮಿತ್ರರು. ಹೀಗೆ ಹಂಸಪಕ್ಷಿಯು ಒಂದೇ ಗತಿಯಿಂದ, ಕಾಗೆಯಾದರೋ ನೂರು ಗತಿಗಳಿಂದ ವೇಗವಾಗಿ ಗಗನಕ್ಕೆ ಏರಿ ಜೊತೆಯಾದವು[೧]. ಹೀಗೆ ಇಲ್ಲಿಯವರೆಗೆ ಮಂದವೇಗದಿಂದ ಹೊರಟ ಹಂಸ ಮೆಲ್ಲಗೆ ತನ ವೇಗವನ್ನು ವೃದ್ಧಿಸಿದರೂ, ಒಂದು ಮುಹೂರ್ತದವರೆಗೆ ಕಾಗೆಗಿಂತ ಹಿಂದೆಯೇ ಉಳಿಯಿತು. ಅದನ್ನು ಕಾಗೆ ತಿಳಿಯದೇ ಹಂಸನನ್ನೇ ಅವಮಾನಿಸುತ್ತಾ 'ಈ ಹಂಸ ಈಗ ಮೇಲೆ ಹಾರಿದರೂ, ಮುಂದೆ-ಹಿಂದೆಯೇ ಉಳಿಯುತ್ತದೆ (ನನಗಿಂತ) ಎಂದಿತು.

ಈ ಮಾತನ್ನು ಕೇಳಿದ ಹಂಸವು ಪಶ್ಚಿಮಕ್ಕೆ ತಿರುಗಿ ಸಮುದ್ರದ ಮೂಲಕ ಮಾನಸ ಸರೋವರದ ಕಡೆ ಹಾರಲು ಆರಂಭಿಸಿತು. ಕೆಳಗೆ ಭಯಂಕರ ತೆರೆಗಳ ಸಮುದ್ರ. ಅದರ ಮೇಲೆ ಹಂಸ ವೇಗದಿಂದ ಹಾರಿತು. ಅಷ್ಟು ಹೊತ್ತಿಗೆ ಕಾಗೆ ಆಯಾಸಗೊಂಡು ತನ್ನ ವೇಗ ಕಳೆದುಕೊಂಡು ಕಷ್ಟಪಟ್ಟು ಹಂಸವನ್ನು ಅನುಸರಿಸಿತು. ಕಾಗೆಗೆ ಭಯ ಆವರಿಸಿತು. ಸಾಗರ ಮಧ್ಯದಲ್ಲಿ ಸಿಕ್ಕು ಹಾಕಿಕೊಂಡು ವಿಶ್ರಾಂತಿಗೆ ಪರದಾಡುವಂತಾಯಿತು. ಎಲ್ಲೂ ವಿಶ್ರಾಂತಿ ತಾಣ, ದ್ವೀಪ, ಮರಗಳು ತೋರದೇ ಇದ್ದಾಗ, ಹಂಸ ಕಾಗೆಗೆ ದಾರಿಯ ವಿವರ ನಿಡುತ್ತಾ 'ಕಾಗೆಯನ್ನು ದಾಟಿ ಮುಂದೆ ಹೋಯಿತು. ಹಿಂದೆ ಬಿದ್ದ ಕಾಗೆಗಾಗಿ ಕಾಯಿತು ಹಂಸ. ಕಾಗೆಯ ಪರಿಸ್ಥಿತಿಯನ್ನು ನೋಡಿತು. ಕಾಗೆ ಸಮುದ್ರದಲ್ಲಿ ಬೀಳುವ, ಮುಳುಗುವ ಸ್ಥಿತಿಗೆ ಬಂದಾಗ ಹಂಸ 'ಎಲ್ಲಿ ನಿನ್ನ ನೂರೊಂದು ಗತಿಗಳು, ಆಯಾಸಕ್ಕೆ ಕಾರಣವೇನು? ಕೆಳಗೆ ಬೀಳುತ್ತಿರುವೆಯಲ್ಲ? ನಂತರ ನಮ್ಮ ಬಗ್ಗೆ ದುರ್ನುಡಿಗಳನ್ನಾಡುವೆ. ನೀನು ಸಮುದ್ರದಲ್ಲಿ ಬೀಳುತ್ತಿರುವ ಈ ಗತಿಯ ಹೆಸರೇನು? ಬೇಗ ಬಾ, ನಾ ನಿನ್ನ ಸಲುವಾಗಿ ಕಾಯುತ್ತಿದ್ದೇನೆ' ಎಂದು ಹಂಗಿಸುವ ರೀತಿಯಲ್ಲಿ ನುಡಿಯಿತು.

ಕಾಗೆಗೆ ತನ್ನ ಸೋಲಿನ ದುರ್ನಡತೆಯ ಅರಿವಾಯಿತು. ಬದುಕು ನಿರ್ಭರವೆಂದು ಭಾವಿಸಿ ಪಶ್ಚಾತ್ತಾಪದಿಂದ ಹಂಸವನ್ನು ಕುರಿತು.

---

೧ ಹಂಸಸ್ತ್ವೇಕೇನ ಪಾತೇನ ಕಾಕಃ ಪಾತಶತೇನ ಚ।
ಸ್ಪರ್ಧಿನೌ ಸಹಿತೌ ತೂರ್ಣಂ ಖಮಾಸ್ಥಾಯ ತರಸ್ವಿನೌ॥ - ೪೧/೫೦

'ನಾವು ಕಾಕರು. ಕಾಕಾ ಎಂದು ಕರೆಯುತ್ತ ಹಾರಾಡುವವರು. ನಿಮ್ಮಂಥ ಸಜ್ಜನರೊಂದಿಗಲ್ಲ. ನನ್ನ ಪ್ರಾಣಗಳೊಂದಿಗೆ ನಿನ್ನನ್ನು ಶರಣಾಗಿದ್ದೇನೆ. ನನ್ನನ್ನು ರಕ್ಷಿಸು. ನಾನು ಹಿಂದೆ ಇದ್ದ ಜಾಗಕ್ಕೆ ಕರೆದೊಯ್ದು ಬದುಕಿಸು' ಎಂದಾಗ ಹಂಸ ಪಕ್ಷಿಯು ಕಾಗೆಯ ಹಿಂದಿನ ಮಾತುಗಳನ್ನು ಕಾಗೆಗೆ ನೆನಪಿಸಿ ಮುಳುಗುತ್ತಿದ್ದ (ಸಮುದ್ರದಲ್ಲಿ) ಕಾಗೆಯನ್ನು ಮೇಲೆತ್ತಿ, ತನ್ನ ಬೆನ್ನ ಮೇಲೆ ಕೂರಿಸಿಕೊಂಡು ತಾವು ಹೊರಟ ಸ್ಥಳಕ್ಕೆ ಮತ್ತೆ ಹೋಗಿ ಕಾಗೆಯನ್ನು ರಕ್ಷಿಸಿತು[೧].

ಹೀಗೆ ಕಾಗೆಯು ಮೊದಲು ಗರ್ವದಿಂದ ವರ್ತಿಸಿದರೂ ಕೊನೆಗಾದರೂ ತನ್ನ ತಪ್ಪನ್ನು ತಿಳಿದು ಹಂಸಪಕ್ಷಿಗೆ ಶರಣಾಯಿತು.

ಆದ್ದರಿಂದ ಕರ್ಣ! ನೀನೂ ಕೂಡಾ ದುರ್ಯೋಧನನ ಎಂಜಲನ್ನವನ್ನು ಮೆದ್ದು ಅವನು ಕೊಟ್ಟದ್ದರಿಂದ ಮೆರೆದು ಪಾಂಡವರಿಗೆ ವಿರೋಧಿಸುತ್ತಿದ್ದೀಯಾ. ನೀನು ಖಂಡಿತ ಅರ್ಜುನನನ್ನು ಗೆಲ್ಲಲಾರೆ, ಕೊಲ್ಲುವುದೆಲ್ಲಿ ಬಂತು? ಕೃಷ್ಣನನ್ನು ಸಂಹರಿಸುವುದೆಂದೂ ಊಹಾತೀತ. ಆತ ಭಗವಂತ. ಅದು ನಿನಗೂ ಗೊತ್ತು. ಆದ್ದರಿಂದ ಅರ್ಜುನಕೃಷ್ಣರಿಗೆ ಶರಣಾಗು. ಆಗಲೇ ನೀನು ಬದುಕುವೆ ಎಂದ.

## ಸಂದೇಶಗಳು-ವಿವರಣೆಗಳು

೧. ಕರ್ಣಪರ್ವದಲ್ಲಿನ ಈ ಪುಟ್ಟಕಥೆ ಸಾರ್ವಕಾಲಿಕ ಸತ್ಯವಾಗಿದೆ. ಜಗತ್ತಿನಲ್ಲಿ ಯಾರೇ ಆಗಲಿ ಅಯೋಗ್ಯರ ಹಂಗಿನ ಕೂಳಿಗೆ ಸಿಕ್ಕುಹಾಕಿಕೊಂಡಾಗ ಒಳ್ಳೆಯವರ ಪರಿಸ್ಥಿತಿಯೂ

---

೧ ಸಾಗರಾಂಭಸಿ ತಂ ದೃಷ್ಟ್ವಾ ಪತಂತಂ ದೀನಚೇತಸಮ್ ।
ಮ್ರಿಯಮಾಣಮಿದಂ ವಾಕ್ಯಂ ಹಂಸಃ ಕಾಕಮುವಾಚ ಹ ॥
ಸತ್ವಮೇಕಶತಂ ಪಾತಂ ಪತನ್ನಭ್ಯಧಿಕೋ ಮಯಾ ।
ಕಥಮೇವಂ ಪರಿಶ್ರಾಂತಃ ಪರಿತೋಽಸಿ ಮಹಾರ್ಣವೇ ॥
ಪ್ರತ್ಯುವಾಚ ತತಃ ಕಾಕಃ –
ಉಚ್ಛಿಷ್ಟಾನ್ನೇನ ಪುಷ್ಟೋಽಹಂ ದರ್ಪೋತ್ಸಿಕ್ತಃ ಕುಸತ್ವತಃ ।
ಶರಣಂ ತ್ವಾಂ ಪ್ರಪನ್ನೋಽಹಮುದಕಾಂತಮವಾಪ್ನುಯಾಮ್ ॥
ಹಂಸೇದಾನೀಂ ಪರಿಶ್ರಾಂತಮಾಪದೋ ಮಾಂ ಸಮುದ್ಧರ ॥
ಯದಿ ನಾಮ ಪುನರ್ಜೀವನ್ ಗಚ್ಛೇಯಂ ಸ್ವಂ ನಿವೇಶನಮ್ ।
ನೈವ ಪುನರ್ಹೀನಮಪಿ ಕ್ಷೇಪ್ತಾಽಹಂ ಖೇ ಚೇತಸಮ್ ॥
ಅಥ ತಂ ಪತಿತಂ ದೀನಂ ಜಲಕ್ಲಿನ್ನಮಚೇತನಮ್ ।
ಪದ್ಭ್ಯಾಮುತ್ಕ್ಷಿಪ್ಯ ವೇಪಂತಂ ಪೃಷ್ಠಮಾರೋಪಯತ್ ತದಾ ॥
ಸ ಹಂಸಃ ಪೃಷ್ಠಮಾರೋಪ್ಯ ಕಾಕಂ ಕರ್ಣ ವಿಚೇತಸಮ್ ॥
--- ಪುನರೇವ ಸಮಾನಯತ್ ।
ತಮೇವ ದೇಶಂ ತರಸಾ ಸ್ಪರ್ಧಯಾ ಪೇತತುರ್ಯತಃ ।
ಉತ್ಸೃಜ್ಯ ತ್ವಬ್ರವೀನ್ಮೈವಂ ಪುನಃ ಕಾರ್ಯಂ ತ್ವಯೇತಿ ಹ ॥ – ೪೧/೭೧-೮೩

ಹೇಗೆ ಸತ್ಯವಿರೋಧಿಯಾಗುತ್ತದೆ ಎನ್ನಲು ಕಾಗೆಯ ದೃಷ್ಟಾಂತವೇ ಸಾಕು. ದುರ್ಯೋಧನನು ಕರ್ಣನಿಗೆ ಮೊದಲು ಅಂಗರಾಜ್ಯವನ್ನು ಕೊಟ್ಟು ತನ್ನ ಆಪ್ತವಲಯದಲ್ಲಿ ಸೇರಿಸಿಕೊಂಡು ಅವನಿಗೆ ಬೇಕಾದ ಸ್ಥಾನಮಾನ ಕೊಟ್ಟಿದ್ದೇ ಕರ್ಣನಿಗೆ ದುರ್ಯೋಧನನ ಪರವಾಗಿ ಮಾತನಾಡಬೇಕಾಯಿತು. ಅದನ್ನು ಆತನು ಅನೇಕ ವೇಳೆ ಬಾಯಿಬಿಟ್ಟು ಸ್ಪಷ್ಟವಾಗಿ ಹೇಳುತ್ತಾನೆ. ಆದ್ದರಿಂದ ನ್ಯಾಯವಾಗಿ ಜೀವಿಸಲು ಇಚ್ಛೆ ಪಡುವವನು ಎಂದೂ ದುಷ್ಟರ ಕೂಟಕ್ಕೆ ಸೇರಬಾರದು.

೨. ವೈಶ್ಯನೊಬ್ಬನು ಕಾಗೆಗೆ ತನ್ನ ಮಕ್ಕಳು ಮೊದಲಾದವರಿಂದ ಕಾಗೆಗೆ ಅನ್ನಾದಿಗಳನ್ನು ತಿನಿಸುತ್ತಿದ್ದ. ಅಷ್ಟರಮಟ್ಟಿಗೆ ಇಲ್ಲಿ ದುರ್ಯೋಧನ ವೈಶ್ಯರ ಹೋಲಿಕೆ. ಇಲ್ಲಿ ಕಾಗೆಗೆ ಎಂಜಲನ್ನು ಬಿಟ್ಟರೆ, ಬೇರಾವ ಸ್ಥಾನ ಇದ್ದಿಲ್ಲ. ಇರಲು ಸಾಧ್ಯವಿಲ್ಲ. ಹೀಗಾಗಿ ಹೋಲಿಕೆಗೆ ಪೂರ್ಣಸಾಮ್ಯವಿಲ್ಲ. **'ನ ಹಿ ದೃಷ್ಟಾಂತೇ ಸರ್ವಸಾಮ್ಯಮ್'** ಎಂಬುದನ್ನು ತಿಳಿಯಬೇಕು.

೩. ಹಂಸಪಕ್ಷಿಗಳು ಸ್ವಭಾವತಃ ಸಾತ್ವಿಕಪಕ್ಷಿಗಳು. ಅಂತೆಯೇ ಪಾಂಡವರಿಗೆ, ಕೃಷ್ಣನಿಗೆ ಹೋಲಿಕೆ ಕೊಡಲಾಗಿದೆ.

೪. ಎಂಜಲುಂಡ ಕಾಗೆಯ ಮಾತುಗಳೆಲ್ಲವೂ ಕರ್ಣನ ನಡೆ ನುಡಿಗಳನ್ನು ಪ್ರತಿಫಲಿಸುತ್ತವೆ. ಆದ್ದರಿಂದ ದೃಷ್ಟಾಂತದಲ್ಲಿನ ಮುಖ್ಯ ಸಾಧಾರಣಧರ್ಮ ಮೂರ್ತಿಮತ್ತಾಗಿ ಬಂದಿದೆ.

೫. ಎಂಜಲುಂಡ ಕಾಗೆ ಅನ್ನ ಕೊಟ್ಟವರ ಮಾತನ್ನು, ಅವರ ಧಾಟಿಯನ್ನು ತಿಳಿಯಲು ಅಸಮರ್ಥವಾಗಿ, ತಾನೇ ಅವರ ಮಾತುಗಳಿಗೆ ಮರುಳಾಗಿ ತನ್ನನ್ನು ಅತಿದೊಡ್ಡದಾಗಿ ತಿಳಿದಂತೆ, ಕರ್ಣನೂ ದುರ್ಯೋಧನ ಕೊಟ್ಟ ಸ್ಥಾನಮಾನಾದಿಗಳ ಮರ್ಮ ಅರಿಯದೆ ಅವನ ದಾಸನಾಗುತ್ತಾನೆ. ಹಂಗಿನ ಕೂಳಿನ ಪರಿಣಾಮವಿದು. ದುರ್ಯೋಧನನ ಸ್ವಾರ್ಥದ ಅರಿವೂ ಕೊನೆಗೂ ಆಗಲೇ ಇಲ್ಲ, ಹಂಗಿನಿಂದಾಗಿ ದುರ್ಯೋಧನನ ಪರವಾಗಿ ಅತ್ಯಂತ ಹೀನಾಯವಾಗಿ ಪಾಂಡವರನ್ನು ಹಿಂಸಿಸುತ್ತಾನೆ. ಅದರ ಫಲವನ್ನೂ ಉಣ್ಣುತ್ತಾನೆ. ಕೊನೆಗೆ ಸಾಯುತ್ತಾನೆ. ಆದರೆ ಅವನಿಗೆ ತನ್ನ ತಪ್ಪಿನ ಅರಿವೂ ಆಗದಿದ್ದುದು ಅವನ ದುರದೃಷ್ಟ (ಪ್ರಾರಬ್ಧಕರ್ಮ).

೬. ಕಾಗೆಗೆ ತನ್ನ ತಪ್ಪಿನ ಅರಿವಾಗುತ್ತದೆ. ಕೊನೆಗೆ ಕ್ಷಮೆ ಕೇಳಿ ಜೀವಿತವನ್ನು , ಪ್ರಾಣವನ್ನು ಪಡೆಯುತ್ತದೆ, ಬದುಕುತ್ತದೆ. ಆದರೆ ಕರ್ಣನಿಗೆ ಪಶ್ಚಾತ್ತಾಪವಾಗಲಿಲ್ಲ, ಬದುಕಲಿಲ್ಲ. ಆದ್ದರಿಂದ ತಪ್ಪು ಮಾಡುವುದು ಸಹಜವಾದರೂ ಅದರ ಅರಿವು ಪಶ್ಚಾತ್ತಾಪದಲ್ಲಿ ಕೊನೆಯಾಗಿ, ಸಂಬಂಧಿಸಿದವರ ಕ್ಷಮೆ ಕೋರಬೇಕು. ಆಗಲೇ ಜೀವನ ಮರುಜೀವನ ಆರಂಭ.

೭. ಇದಕ್ಕೆಲ್ಲ ಆಧ್ಯಾತ್ಮಿಕ ಕಾರಣ - ಕರ್ಣನಿಗೆ ಆಗಲೆ ಇದ್ದ ಸಹಸ್ರವರ್ಮನಾಮಕ ಅಸುರಾವೇಶ. ಅದಕ್ಕಿಂತಲೂ ದುರ್ಯೋಧನನ (ಕಲಿ) ವಂಚಕ, ಸ್ವಾರ್ಥನೀತಿಗೆ ಮೋಸ ಹೋದುದು ಕರ್ಣನ ದುರಂತ. ಹೀಗಾಗಿ ಕಲ್ಯಾವೇಶ ಸೂರ್ಯಾವತಾರಿಯಾದ ಕರ್ಣನಿಗೂ

ಬಿಡದು. ಅವನತಪ್ಪಿನ ಅರಿವು ಅವನಿಗೆ ಅಗಲೇ ಇಲ್ಲ. ಆದ್ದರಿಂದ ಕಲಿಯ ವಿಚಾರವಿರುವಂತಹ ದುರ್ಜನರ ಸಹವಾಸ ಎಂದಿಗೂ ಸಾಧಕರಿಗೆ ತರವಲ್ಲ. ಅದು ದೇವರನ್ನು ಅವನ ಭಕ್ತರನ್ನು ದೂರ ಮಾಡುತ್ತದೆ.

೮. ದುರ್ಯೋಧನನ ಸಹವಾಸ ಕರ್ಣನಿಗೆ, ವಾಸುದೇವ ಹಾಗೂ ಪಾಂಡುಪುತ್ರರನ್ನು ಕೊಲ್ಲಬಲ್ಲೆ ಎಂಬ ಭ್ರಮೆ ಹುಟ್ಟಿಸುತ್ತದೆ. ಆದ್ದರಿಂದ ಕಲಿಯ ಗುಣವುಳ್ಳವರ ಸಹವಾಸ ಕೂಡದು.

೯. ಶಲ್ಯ ಕರ್ಣನ ಸ್ವಭಾವ ತಿಳಿದಿದ್ದ. ಪರಿಸ್ಥಿತಿಯ ಅರಿವಿತ್ತು. ಆದ್ದರಿಂದ ಅವನನ್ನು ತೇಜೋಭಂಗಕ್ಕೆ ಗುರಿಮಾಡಿದ. ಅಯೋಗ್ಯರಿಗೆ ಸಹಾಯಹಸ್ತ ನೀಡಲಿಲ್ಲ. ಯೋಗ್ಯರಿಗೆ (ಪಾಂಡವರಿಗೆ) ತನ್ನ ಕೈಲಾದ ಸಹಾಯ ಮಾಡಿ ಕರ್ತವ್ಯ ಸುಮುಖನಾದ. ಆದ್ದರಿಂದ ಶಲ್ಯನಂತೆ ದುಷ್ಟರ ಸಹವಾಸದಲ್ಲಿದ್ದರೂ, ಅವರ ಓಲೈಕೆಗೆ ಒಳಗಾಗಬಾರದು (ಹಂಗಿಗೆ ತುತ್ತಾಗಬಾರದು).

೧೦. ದುರ್ಯೋಧನನ ಗೌರವಾದರ ಸೆಳೆತಕ್ಕೆ ಒಳಗಾಗಿದ್ದ ಶಲ್ಯ ಆ ಜಾಲದಿಂದ ದೂರವೇ ಇದ್ದ. ಪಾಂಡವರ ಸೇವೆ ಮಾಡಿ, ಮಾಡಿದ ಪಾಪಕ್ಕೆ ಕರ್ಣನ ತೇಜೋವಧೆಯ ಮೂಲಕ ಪುಣ್ಯ ಸಂಪಾದಿಸಿದ. ಪ್ರಾಯಶ್ಚಿತ್ತ ಮಾಡಿಕೊಂಡ, ಪಾಂಡವರ ಹಿತ ಬಯಸಿದ.

೧೧. ಸಮುದ್ರತೀರದಲ್ಲಿದ್ದ ವೈಶ್ಯ ಧೃತರಾಷ್ಟ್ರನಿದ್ದಂತೆ ಆತನ ಮಕ್ಕಳು ದುರ್ಯೋಧನಾದಿಗಳಿದ್ದಂತೆ ಅವರು ಹಾಕಿದ ಎಂಜಲನ್ನ ಕಾಗೆಗೆ ಮಾರಕವಾಯಿತು. ಕರ್ಣನಿಗೆ ಆದಂತೆ. ಧೃತರಾಷ್ಟ್ರ ಒಳ್ಳೆಯವನಾದರೂ ಅವನ ಮಕ್ಕಳು ದುಷ್ಟರು. ತಂದೆ ಮಕ್ಕಳಲ್ಲಿ ಸ್ವಭಾವವೈರುಧ್ಯ ಇರಬಹುದು. ಆದ್ದರಿಂದ ಸಹವಾಸ ಮಾಡುವಾಗ ಎಚ್ಚರಿಕೆ ಇರಬೇಕು.

೧೨. ವಿಷ್ಣು-ವೈಷ್ಣವರ ಉಚ್ಛಿಷ್ಟ ನೈವೇದ್ಯಶೇಷಾದಿಗಳು ಯಾಚನಾರ್ಯ ಹೊರತು, ದೈತ್ಯರ ಅನ್ನಾದಿಗಳಲ್ಲ. ಅದನ್ನು ಸ್ವೀಕರಿಸಿದರೆ ಮಾರಕ. ಉದ್ಧವನ ನುಡಿ ಇಲ್ಲಿ ಗಮನಾರ್ಹ.

**ಉಚ್ಛಿಷ್ಟಭೋಜನೋ ದಾಸಾಃ ತವಮಾಯಾಂ ಜಮೇ ಮಹಿ ।**

**-ಭಾಗವತ.ಸ್ಕ.-೧೧**

ಇತ್ಯಾದಿ..

## ೬೬. ಬಲಾಕ-ಅಂಧಮೃಗ ಮತ್ತು ಕೌಶಿಕ ಬ್ರಾಹ್ಮಣರ ವೃತ್ತಾಂತ

## (ಕುರುಡ ಮೃಗವನ್ನು ಕೊಂದ ಬಲಾಕವ್ಯಾಧ ಮತ್ತು ಕೌಶಿಕ ಬ್ರಾಹ್ಮಣರ ಉಪಾಖ್ಯಾನಗಳು)

ಕರ್ಣಪರ್ವದಲ್ಲಿ ನಡೆದ ಅನೇಕ ತೆರನಾದ ಯುದ್ಧಗಳಲ್ಲಿ ಒಂದು ಹಂತದಲ್ಲಿ ಕರ್ಣನು ಯುಧಿಷ್ಠಿರನನ್ನು ತುಂಬಾ ಪೀಡಿಸಿದ್ದನು. ಭಾರ್ಗವಾಸ್ತ್ರವನ್ನು ಬಿಟ್ಟು ಪಾಂಡವಸೈನ್ಯದಲ್ಲಿ ಅಲ್ಲೋಕಲ್ಲೋಲವುಂಟುಮಾಡಿ, ಧೃಷ್ಟದ್ಯುಮ್ನಾದಿಗಳೂ ಪಲಾಯನ ಮಾಡಿದರು. ಅರ್ಜುನನು ಭಾರ್ಗವಾಸ್ತ್ರ ನಾರಾಯಣಾಸ್ತ್ರವಿದ್ದಂತೆ ಅದನ್ನು ಎದುರಿಸುವ ಬದಲು, ದೂರ ಹೋಗುವುದು(ಬೇರೆ ದಾರಿಯಿಂದ) ಉಚಿತವೆಂದಾಗ ಕೃಷ್ಣನೂ ಸಹ, ಧರ್ಮರಾಜನು ಕರ್ಣನಿಂದ ತುಂಬಾ ಘಾಸಿಯಾಗಿದ್ದಾನೆ. ಆದ್ದರಿಂದ ಶಿಬಿರಕ್ಕೆ ಹೋಗಿರುವ ಆತನನ್ನು ನೋಡಿ ಸಂತೈಸಿ ವಾಪಸು ಬಂದು ಕರ್ಣನ ವಧೆ ಮಾಡು ಎಂದು ಸಲಹೆ ನೀಡಿದ[1].

ಕರ್ಣನಿಂದ ತುಂಬಾ ಕ್ಲೇಶಗೊಂಡ ಅಣ್ಣನನ್ನು ಭೀಮಸೇನನೇ ಕಾಪಾಡಿದುದನ್ನು ಧರ್ಮರಾಜ ಸ್ಮರಿಸುತ್ತಾನೆ.

ಇದು ಹಿನ್ನೆಲೆ.

ಧರ್ಮರಾಜನನ್ನು ಕೃಷ್ಣಾರ್ಜುನರು ನೋಡಲು ಬರಲು, ಅವರನ್ನು ಸ್ವಾಗತಿಸಿ, ಅರ್ಜುನನನ್ನು ಕುರಿತು ಕರ್ಣನನ್ನು ಸಂಹಾರ ಮಾಡಿದೆಯಾ? ಎಂದು ಧರ್ಮರಾಜ ಕೇಳುತ್ತಾನೆ. ಅದಕ್ಕೆ ಅರ್ಜುನನು ಇನ್ನೂ ಕೊಂದಿಲ್ಲ ಕೊಲ್ಲುವೆ ಎಂದು ಉತ್ತರಿಸುತ್ತಾನೆ. ಈ ಉತ್ತರದಿಂದ ಕೋಪಗೊಂಡ ರಾಜನು ಅರ್ಜುನನನ್ನು ಮನಬಂದಂತೆ ನಿಂದಿಸುತ್ತಾನೆ. ನೀನು ಕುಂತಿಯ ಮಗನಾಗಲು ಅರ್ಹನಲ್ಲ, ಗಾಂಡೀವ ನಿನಗೇಕೆ? ಕೃಷ್ಣನಿಗೆ ಕೊಡು. ಕೃಷ್ಣನು ಕರ್ಣನನ್ನು ಸಂಹರಿಸುತ್ತಾನೆ ಎಂದು ಮುಂತಾಗಿ ಅರ್ಜುನನನ್ನು ಬೈಯುತ್ತಾನೆ[2]

---

೧ ಕರ್ಣೇನ ಹಿ ದೃಢಂ ರಾಜಾ ಕುಂತೀಪುತ್ರಃ ಪರಿಕ್ಷತಃ । - ಕರ್ಣಪರ್ವ(೬೧/೫೯)
ಅಹಂ ಹಿ ಸೂತಪುತ್ರೇಣ ಕ್ಲಿಷ್ಟೋ ಮಾರುತಿ ತೇಜಸಾ ।
ಜೀವಾಮೀತ್ಯಗ್ರಜೇನೋಕ್ತ ಉದ್ಧಬರ್ಹಾಸಿಮುತ್ತಮಮ್ ॥ - ಮ.ತಾ.ನಿ.(೨೭/೧೧೬)

೨ ಧನುಶ್ಚೈತತ್ ಕೇಶವಾಯ ಪ್ರದಾಯ
ಯಂತಾಽಭವಿಷ್ಯಸ್ತ್ವಂ ರಣೇ ಚೇದ್ ದುರಾತ್ಮನ್ ।
ತತೋಽಹನಿಷ್ಯತ್ಕೇಶವಃ ಕರ್ಣಮುಗ್ರಂ

(ಮಹಾಭಾರತದಲ್ಲಿ ಈ ಬಗ್ಗೆ ಸುಮಾರು ೩೦ ಶ್ಲೋಕಗಳಿವೆ). ಈ ಮಾತನ್ನು ಕೇಳಿದ್ದೇ ತಡ, ಅರ್ಜುನನು ತನ್ನ ಖಡ್ಗವನ್ನೆತ್ತಿದ. ಇದನ್ನು ನೋಡಿದ ಸರ್ವಜ್ಞನಾದ ಕೃಷ್ಣನು ಈ ಅವೇಳೆಯಲ್ಲಿ (ಅಕಾಲದಲ್ಲಿ) ಯಾರನ್ನು ಸಂಹರಿಸಲು ಕತ್ತಿಯನ್ನು ಹೊರತೆಗೆದೆ ಎಂದು ಪ್ರಶ್ನಿಸಲು, ಅರ್ಜುನನು 'ಅಣ್ಣನನ್ನು' ಎಂದ. ಏಕೆ ಎಂದು ಕೃಷ್ಣ ಕೇಳಲು 'ಗಾಂಡೀವವನ್ನು ಬೇರೆಯವರಿಗೆ ಕೊಡು' ಎಂದು ಯಾರು ಹೇಳುತ್ತಾರೋ ಅವರನ್ನು ಸಂಹರಿಸುವುದಾಗಿ ನಾನು ಹಿಂದೆಯೇ ಪ್ರತಿಜ್ಞೆ ಮಾಡಿದ್ದೇನೆ. ಈಗ ಅಣ್ಣನೇ ಹೀಗೆ ಅಂದಿದ್ದಾನೆ. ನನ್ನ ಪ್ರತಿಜ್ಞಾಪಾಲನೆಗೋಸ್ಕರ ಖಡ್ಗದಿಂದ ಸಂಹರಿಸುವೆ ಎಂದಾಗ, ಕೃಷ್ಣನು 'ನಿನಗೆ ಪ್ರತಿಜ್ಞಾಪಾಲನೆ, ಸತ್ಯ, ಅನೃತ(ಸುಳ್ಳು), ಧರ್ಮಾಧರ್ಮಗಳ ಪರಿಜ್ಞಾನವಿಲ್ಲದೆ ಅವಿವೇಕಿಯಂತೆ ವರ್ತಿಸುತ್ತಿದ್ದೀಯಾ. ಮಹಾಪಂಡಿತನಂತೆ ಮಾತನಾಡುತ್ತಿದ್ದೀಯಾ' ಎಂದು ಬುದ್ಧಿವಾದ ಹೇಳುತ್ತಾನೆ. ಉಪದೇಶ ಮಾಡುತ್ತಾನೆ. ಅದಕ್ಕೆ ಪೂರಕವಾಗಿ **ಹಿಂದೆ ನಡೆದ ಎರಡು ವೃತ್ತಾಂತಗಳನ್ನು ಹೇಳುತ್ತಾನೆ. ಅವೇ ಕುರುಡ ಮೃಗವನ್ನು ಕೊಂದ ಬಲಾಕ ವ್ಯಾಧನ ಹಾಗೂ ಕೌಶಿಕ ಬ್ರಾಹ್ಮಣನ ಎರಡು ಕಥೆಗಳು. ಅವುಗಳು ಹೀಗಿವೆ.**

ಒಬ್ಬ ಬಲಾಕವ್ಯಾಧ ಬೇಟೆಯಾಡಿ ತನ್ನ ಹೆಂಡತಿ, ಮಕ್ಕಳು, ವೃದ್ಧರಾದ ತಂದೆತಾಯಿಗಳನ್ನು ಸಲಹುತ್ತಿದ್ದ. ಅವನಿಗೆ ಹಿಂಸೆ ಮಾಡಲು ಉದ್ದೇಶವಿರಲಿಲ್ಲ. ಜಾತ್ಯಾ ಮಾಂಸಾಹಾರಿಯಾದುದರಿಂದ ಆಹಾರಕ್ಕಾಗಿ ಮಾಂಸ ಸಂಗ್ರಹಿಸಲು ಬೇಟೆಯಾಡುತ್ತಿದ್ದನೇ ಹೊರತು ವಿಹಾರಕ್ಕಾಗಿ ಬೇಟೆಯಾಡುತ್ತಿರಲಿಲ್ಲ. ಸತ್ಯ ನುಡಿಯುತ್ತಿದ್ದ ಅಸೂಯಾದಿ ದೋಷವಿರಲಿಲ್ಲ[೧].

ಒಮ್ಮೆ ಈ ಬೇಟೆಗಾರ ಪ್ರಯತ್ನಿಸಿದರೂ ಯಾವ ಮೃಗವೂ ಸಿಗಲಿಲ್ಲ. ಕೊನೆಗೆ ನೀರು ಕುಡಿಯುತ್ತಿದ್ದ ಕುರುಡಾದ ಒಂದು ತೋಳವನ್ನು ನೋಡಿ ಅದನ್ನು ಸಂಹರಿಸಿದ. ಆ ಪ್ರಾಣಿ ವಾಸನೆಯಿಂದಲೇ ಎಲ್ಲವನ್ನು ತಿಳಿಯುತ್ತಿತ್ತು. ಆ ಕುರುಡ ತೋಳ ಸಾಯುತ್ತಿರಲು ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಅಪ್ಸರೆಯರು ಗೀತೆ ಹಾಡುತ್ತಿದ್ದ ಒಂದು ಮನೋಹರವಾದ ವಿಮಾನ ಬಂದು ವ್ಯಾಧನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಯಿತು.

ಎಲೈ ಅರ್ಜುನ! ಈ ತೋಳ ಸಾಮಾನ್ಯ ಮೃಗವಾಗಿರದೆ, ಎಲ್ಲ ಪ್ರಾಣಿಗಳನ್ನು ನಾಶಮಾಡಲು ಬ್ರಹ್ಮನಿಂದ ವರ ಪಡೆದಿತ್ತು. ಇಂತಹ ಜಗನ್ನಾಶಕವಾದ ಅಸುರ ಸ್ವಭಾವದ ತೋಳನನ್ನು ಕೊಂದು ವ್ಯಾಧನು ಸ್ವರ್ಗಕ್ಕೆ ಹೋದ. ಹೀಗೆ ಸ್ವರ್ಗಕ್ಕೆ ಕಾರಣವಾದುದು ಹಿಂಸೆಯಾಯಿತು. ಜಗದಭಾವ ನಿಶ್ಚಯ ಮಾಡಿದ ಅಸುರ ಸಂಹಾರ ರೂಪ ಹಿಂಸೆಯೂ

ಮರುತ್ವತಿಃ ವೃತ್ರಮಿವಾತ್ತವಜ್ರಃ ॥ - ೬೫/೨೨

೧ ಯಾತ್ರಾರ್ಥಂ ಪುತ್ರದಾರಸ್ಯ ಮೃಗಾನ್ ಹಂತಿ ನ ಕಾಮತಃ ।
ವೃದ್ಧೌ ಚ ಮಾತಾಪಿತರೌ ಬಿಭರ್ತ್ಯನ್ಯಾಂಶ್ಚ ಸಂಶ್ರಿತಾನ್ ।
ಸ್ವಧರ್ಮನಿರತೋ ನಿತ್ಯಂ ಸತ್ಯವಾಗನಸೂಯಕಃ ॥ - ೬೬/೪೬,೪೭

ಸ್ವರ್ಗಕ್ಕೆ ಕಾರಣವಾಯಿತು. ಆದ್ದರಿಂದ ಹಿಂಸೆ, ಅಹಿಂಸೆ, ಧರ್ಮ, ಅಧರ್ಮಗಳ ನಿಜರೂಪ ತಿಳಿಯುವುದು. ತುಂಬಾ ಕಷ್ಟಕರವಾದುದು ಎಂದ ಶ್ರೀಕೃಷ್ಣ

**ಇನ್ನೊಂದು ಉದಾಹರಣೆ** ಕೌಶಿಕನೆಂಬ ವೇದಪಾರಂಗತನಾದ ತಪಸ್ವಿಯಾದ ಬ್ರಾಹ್ಮಣನು ಒಂದು ಗ್ರಾಮದ ಹತ್ತಿರವೇ ಇದ್ದ, ಒಂದು ನದೀಸಂಗಮ( ಎರಡು ನದಿಗಳ) ದಲ್ಲಿ ವಾಸವಾಗಿದ್ದನು. ಆತನು 'ನಾನು ಯಾವಾಗಲೂ ಸತ್ಯಮಾತನಾಡಬೇಕೆಂಬ ವ್ರತ' ಹಿಡಿದಿದ್ದ ಹಾಗೆಯೇ ಪಾಲಿಸುತ್ತಿದ್ದ ಸತ್ಯವಾದಿ ಎಂದು ಪ್ರಸಿದ್ಧನಾಗಿದ್ದನು.

ಒಮ್ಮೆ ಕಳ್ಳರ ಭಯದಿಂದ ಕೆಲವರು (ಗ್ರಾಮಸ್ಥರು) ತಪಸ್ಸನ್ನು ಮಾಡುತ್ತಿದ್ದ ಈ ಕೌಶಿಕರಿದ್ದ ವನದಲ್ಲಿ ಅವಿತು ಕೊಂಡಿದ್ದರು. ಅಲ್ಲಿಗೇ ಬಂದ ಕಳ್ಳರು ಈ ತಪಸ್ವಿಯನ್ನು ಜನರು ಎಲ್ಲಿದ್ದಾರೆ? ಎಂದು ಕೇಳಿದಾಗ, ಈ ಕೌಶಿಕರು ಇಲ್ಲಿಯೇ ಇದ್ದಾರೆಂದು ಅವರು ಅವಿತುಕೊಂಡ ಸ್ಥಳವನ್ನು ತೋರಿಸಿದರು. ತಾನು ಸತ್ಯವಾದಿ ಎಂದು ಭ್ರಮಿಸಿ ಹೀಗೆ ಸತ್ಯ ನುಡಿದಿದ್ದರಿಂದ ಅವಿತಿದ್ದ ಜನರು ಕಳ್ಳರಿಗೆ ಸಿಕ್ಕು ಸಾವನ್ನಪ್ಪಿದರು. ತಮ್ಮ ಇದ್ದಬಿದ್ದ ಐಶ್ವರ್ಯವನ್ನು ಕಳೆದುಕೊಂಡರು.

ನೋಡು ಅರ್ಜುನ! ಸತ್ಯ ನುಡಿದ ಈ ಕೌಶಿಕಮುನಿ ಮುಂದೆ ದೇಹ ಬಿಟ್ಟಾಗ ಆತನಿಗೆ ಸಿಕ್ಕಿದ್ದು ಘೋರ ನರಕ. ಆದ್ದರಿಂದ ನೀನೇ ತಿಳಿದುಕೋ. ಸತ್ಯ, ಅಸತ್ಯ ನುಡಿಗಳ ಪರಿಣಾಮವೇನು? ಸತ್ಯಾಸತ್ಯಗಳ ನಿಜವಾದ ಅರ್ಥವೇನೆಂದು, ಎಂದು ಕೃಷ್ಣ ಹೇಳಿದಾಗ ಅರ್ಜುನನು ಅವುಗಳ ಮರ್ಮವನ್ನು ಕೃಷ್ಣನಿಂದಲೇ ತಿಳಿದ. ಕೃಷ್ಣನು ಹೇಳಿದ-

ಸತ್ಯದ ಅರ್ಥ, ಮಾತು, ಪುಣ್ಯಕರ, ಸತ್ಯಕ್ಕಿಂತ ಮಿಗಿಲಾದುದು ಇಲ್ಲ. ಕೆಲವೆಡೆ ಸತ್ಯ ಹೇಳಬಾರದು, ಕೆಲವೆಡೆ ಸುಳ್ಳನ್ನೇ ಹೇಳುವುದು ಉಚಿತ[೧]. ವಿವಾಹಕಾಲದಲ್ಲಿ (ಮಂಗಳ ಕಾರ್ಯ ನಿಲ್ಲುವ ಪ್ರಸಂಗವಿದ್ದಾಗ), ಪ್ರೇಮ ಪ್ರಸಂಗದಲ್ಲಿ(ಶತ್ರುಸಂಬಂಧಿ ಸ್ತ್ರೀಯರೊಡನೆ ರಮಿಸುವಾಗ), ಪ್ರಾಣ ಉಳಿಸಿಕೊಳ್ಳಲು, ಎಲ್ಲರ ಐಶ್ವರ್ಯ ಅಪಹಾರವಾಗುತ್ತಿರುವಾಗ (ಕಳ್ಳರು ಬಂದು ಎಲ್ಲಿ ತಿಜೋರಿ ಕೀ? ಹಣ, ಚಿನ್ನ ಎಲ್ಲಿಟ್ಟಿದ್ದೀರಿ? ಎಂದು ಕೇಳಿದಾಗ ಅನೇಕ ಜನರ ಸ್ವತ್ತು ಅಪಹಾರವಾಗುತ್ತಿರುವಾಗ ಎಲ್ಲರ ಒಳಿತಿಗಾಗಿ), ಬ್ರಾಹ್ಮಣರ ರಕ್ಷಣೆಗಾಗಿ, ಈ ಐದು ಸುಳ್ಳು ಹೇಳಿದರೂ ಅವುಗಳಿಂದ ಪಾಪಬಾರದು. ಹೀಗೆ ಸತ್ಯ, ಸುಳ್ಳು ಇವುಗಳನ್ನು ಚೆನ್ನಾಗಿ ತಿಳಿದು ವಿವೇಕಿಯಾಗಿ ವರ್ತಿಸಬೇಕು. ಅದರಂತೆಯೇ ಇದೇ ಹಿಂಸೆ, [೨]ಅಹಿಂಸೆಗಳ

---

೧ ಸತ್ಯಸ್ಯ ವಚನಂ ಸಾಧು ನ ಸತ್ಯಾತ್ ವಿದ್ಯತೇ ಪರಮ್ ।
ಭವೇತ್ ಸತ್ಯಮವಕ್ತವ್ಯಂ ವಕ್ತವ್ಯಮನೃತಂ ಭವೇತ್ ।
ಯತ್ರಾನೃತಂ ಭವೇತ್ ಸತ್ಯಂ ಸತ್ಯಂ ಚಾಪ್ಯನೃತಂ ಭವೇತ್ ॥
ವಿವಾಹಕಾಲೇ ರತಿಸಂಪ್ರಯೋಗೇ ಪ್ರಾಣಾತ್ಯಯೇ ಸರ್ವಧನಾಪಹಾರೇ ।
ವಿಪ್ರಸ್ಯ ಚಾರ್ಥೇ ಹ್ಯನೃತಂ ವದೇತ ಪಂಚಾನೃತಾನ್ಯಾಹುರಪಾತಕಾನಿ ॥ - ೬೬/೩೪-೩೬

೨ ಪ್ರಭವಾರ್ಥಾಯ ಭೂತಾನಾಂ ಧರ್ಮಪ್ರವಚನಂ ಸ್ಮೃತಮ್ ।
ಅಹಿಂಸಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಮ್ ॥ - ೬೬/೪೨,೪೩)

ವಿವೇಕ. ಸಜ್ಜನರಿಗೆ ಒಳ್ಳೆಯದಾಗಲಿ ಎಂಬ ಉದ್ದೇಶದಿಂದ ಅವರಿಗೆ ಹಿಂಸೆಯಾಗಬಾರದು, ಅದುವೇ ಧರ್ಮ. ಅವರಿಗೆ ಅನಾನುಕೂಲವಾದಾಗ ಹಿಂಸೆಯೂ ಧರ್ಮವೇ ಸರಿ.

ಆದ್ದರಿಂದ ಈ ಹಿನ್ನೆಲೆಯಲ್ಲಿ ನಿನ್ನ ಅಣ್ಣ ಧರ್ಮರಾಜ ಮಹಾಸಜ್ಜನ. ನಿನಗೆ ಪಿತೃಸಮಾನ. ಆತನು ನಿನ್ನ ದ್ವೇಷಿಯಲ್ಲ. ನಿನ್ನ ವಿರುದ್ಧ ಯುದ್ಧ ಮಾಡುತ್ತಿಲ್ಲ. ಇನ್ನೂ ಅನೇಕ ಕಾರಣಗಳಿಂದ ಅವನನ್ನು ಸಂಹರಿಸುವುದು ಮಹಾಪಾಪ. ಪಿತೃಹತ್ಯೆಗೆ ಸಮ ಎಂದು ಮುಂತಾಗಿ ಕೃಷ್ಣನು ಹೇಳಿದಾಗ, ಅರ್ಜುನನು ತನ್ನ ತಪ್ಪಿನ ಅರಿವಾಗಿ ಈಗ ಏನು ಮಾಡಲಿ ಎಂದ. ಕೃಷ್ಣ ನಿನ್ನ ಪ್ರತಿಜ್ಞೆ ಪರಿಪಾಲನೆ ಮಾಡಬಯಸಲು ಅಣ್ಣನನ್ನು 'ಏಕವಚನದಿಂದ ನೀನು' ಎಂದು ಸಂಬೋಧಿಸು. ಅದೇ ಆತನ ವಧೆ ಇದ್ದಂತೆ. ವಧೆಗೆ ಸಮಾನ. ಅದರಂತೆ ಅರ್ಜುನ ಹಾಗೆಯೇ ಧರ್ಮರಾಜನನ್ನು 'ನಿನ್ನಿಂದಲೇ ನಾವೆಲ್ಲ ವನವಾಸ ಮಾಡಿದೆವು. ನೀನೇ ಇಷ್ಟೆಲ್ಲ ಯುದ್ಧಕ್ಕೆ ಕಾರಣ ಇತ್ಯಾದಿಯಾಗಿ ನಿಂದಿಸಿದ. ಮತ್ತೆ ಅರ್ಜುನ ತನಗೆ ಭ್ರಾತೃಹತ್ಯೆ ದೋಷ ಬಂತಲ್ಲಾ ಎಂದು ಮರುಗಿದ. ಅದಕ್ಕೇನು ಪ್ರಾಯಶ್ಚಿತ್ತವೆಂದು ದೇವರನ್ನೇ ಕೇಳಿದಾಗ ಕೃಷ್ಣನು 'ಅರ್ಜುನ ನಿನ್ನನ್ನು ನೀನು ಹೊಗಳಿಕೋ' ಅದೇ ಆತ್ಮಹತ್ಯೆ : ಗುರುನಿಂದಾऽऽತ್ಮನಿಂದಾ ಚ ನ ಧರ್ಮಾಯ ಭವೇತ್ ಕ್ವಚಿತ್ ॥ (ಮ.ತಾ.ನಿ.-೨೭/೧೩೧). ಹೀಗೆ ಆತ್ಮಪ್ರಶಂಸೆ, ಗುರುನಿಂದೆ ಎಲ್ಲವೂ ವರ್ಜ್ಯವೆಂಬ ನೀತಿ ಕೃಷ್ಣ ತಿಳಿಸಿ, ಸತ್ಯ, ಧರ್ಮ, ಹಿಂಸೆ, ಅನೃತಗಳ ಬಗ್ಗೆ ತಿಳಿಸುತ್ತಾನೆ. ಆಚಾರ್ಯರು ಇವೆಲ್ಲವನ್ನು ಹೀಗೆ ಸಂಗ್ರಹಿಸಿದ್ದಾರೆ, ನಿರ್ಣಯಿಸಿದ್ದಾರೆ[೧].

ಇದ್ದುದ್ದನ್ನು ಇದ್ದಂತೆ ನುಡಿಯುವುದು ಶ್ರೇಯಸ್ಕರವೇ. ಆದರೆ, ಸತ್ಯದ ಸ್ವರೂಪ ತಿಳಿಯುವುದು ಕಠಿಣ. ಧರ್ಮಾಚರಣೆ ಶ್ರೇಯಸ್ಕರವೇ. ಆದರೆ ಅದರ ಜ್ಞಾನ ಆಗುವುದು ಕಷ್ಟ ಸಜ್ಜನರಿಗೆ ಯಾವುದು ಹಿತವೋ, ಅದುವೇ ಸತ್ಯ, ಧರ್ಮ ಸಜ್ಜನರನ್ನು ಪೋಷಿಸುವ ನಡತೆಯ ಧರ್ಮ. ಹೀಗಾಗಿ ನಿರಪರಾಧಿಗಳಾದ, ಅವಿತುಕೊಂಡ ಜನರ ಸ್ಥಳವನ್ನು ನಿರ್ದೇಶಿಸಿ ಕೌಶಿಕ ಸತ್ಯ ನುಡಿಯುವ ಭರದಲ್ಲಿ ಅಷ್ಟು ಜನರ ಹತ್ಯೆಗೆ ಕಾರಣನಾಗಿ, ನರಕ ಹೊಂದಿದ. ವ್ಯಾಧನು ತನ್ನ ಧರ್ಮವಾದ ಬೇಟೆಯನ್ನು ಮೃಗಗಳ ಉಪಜೀವಿಸಿ, ಪರಿವಾರದವರನ್ನು ಸಾಕಲು ಮಾಡಿದ ಹಿಂಸೆ ಧರ್ಮವಾಯಿತು. ದುಷ್ಟಮೃಗ, ಅಸುರರನ್ನು ಕೊಂದುದೂ ಸ್ವರ್ಗಕ್ಕೆ ಕಾರಣವಾಯಿತು. ಎಂಬ ಸಂದೇಶ ಇಲ್ಲಿದೆ.

ಈ ಎರಡು ಕಥೆಗಳನ್ನೊಳಗೊಂಡ ಭಾರತದ ಭಾಗವನ್ನು ಆಚಾರ್ಯರು ಹೀಗೆ ಸಂಗ್ರಹಿಸಿದ್ದಾರೆ[೨].

---

೧ ಸತ್ಯಸ್ಯ ವಚನಂ ಶ್ರೇಯಃ ಸತ್ಯಜ್ಞಾನಂ ತು ದುಷ್ಕರಮ್ ।
ಯತ್ಸತಾಂ ಹಿತಮಂತ್ಯಂತ್ಯಂ ತತ್ ಸತ್ಯಮಿತಿ ನಿಶ್ಚಯಃ ॥
ಧರ್ಮಸ್ಯ ವಚನಂ ಶ್ರೇಯಃ ಧರ್ಮಜ್ಞಾನಂ ತು ದುಷ್ಕರಮ್ ।
ಯಃ ಸತಾಂ ಧಾರಕೋ ನಿತ್ಯಂ ಸ ಧರ್ಮ ಇತಿ ನಿಶ್ಚಯಃ ॥

೨ ಕೌಶಿಕಾಖ್ಯೋ ಬ್ರಾಹ್ಮಣೋ ಹಿ ಲೀನಂ ಗ್ರಾಮಜನಂ ಕ್ವಚಿತ್ ।

## ಸಂದೇಶಗಳು-ವಿವರಣೆಗಳು

೧. ಸಜ್ಜನರಿಗೆ ಹಿತವಾದುದೇ ಸತ್ಯ, ಸಜ್ಜನರಿಗೆ ಹಿತವಾದ ನಡೆಯೇ ಧರ್ಮ.

೨. ನಿತ್ಯಜೀವನದಲ್ಲಿ ಸತ್ಯನುಡಿ ಅವಶ್ಯ. ಇದರ ದುರುಪಯೋಗವಾಗಬಾರದು. ಭಗವದ್ಭಕ್ತರೇ ಸಜ್ಜನರು. ಅವರ ಹಿತ ಅನುಕೂಲಕ್ಕಾಗಿ ಸತ್ಯ ನುಡಿಯಬೇಕು. 'ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಮ್' ಎಂಬ ವೇದವಾಣಿಯೂ ಅಪ್ರಿಯವಾದ ಸತ್ಯ ಹೇಳಬಾರದು ಎಂದಿದೆ. ಸುಳ್ಳು ಹೇಳುವ ಪ್ರಸಂಗಗಳು ಅಪವಾದಾತ್ಮಕವಾಗಿ ಬರುತ್ತವೆ. ಅವು ನಿತ್ಯ ಜೀವನದ ಭಾಗಗಳೇನಲ್ಲ, ಸ್ವಾರ್ಥಕ್ಕಾಗಿ ಸುಳ್ಳು ಹೇಳಬಾರದು.

೩. ವಿವಾಹ ನಡೆದಾಗ, ಸತ್ತ ಸುದ್ದಿ ತಿಳಿಸದೇ ಸುಳ್ಳನ್ನೇ ಹೇಳುವುದು ಪುಣ್ಯಕರ.

೪. **ಅಶ್ವತ್ಥಾಮಾ ಹತಃ** ಎಂದು ಕೃಷ್ಣ ಹೇಳಿಸಿದ್ದು ಆ ಪ್ರಸಂಗದಲ್ಲಿ ಧರ್ಮವೇ. ಕೃಷ್ಣ ಹೇಳಿದುದನ್ನು ಕೇಳುವ ಧರ್ಮಕ್ಕಿಂತ ಮಿಗಿಲಾದ ಧರ್ಮ ಯಾವುದಿದೆ? ಲೌಕಿಕದಲ್ಲಿಯೂ ಸ್ವಾತಂತ್ರ್ಯ ಹೋರಾಟ ಸಂಗ್ರಾಮದಲ್ಲಿ ಭೂಗತರಾದ ಧುರೀಣರ ಸುಳಿವನ್ನು ಕೊಡದೇ ಸುಳ್ಳನ್ನು ಹೇಳಿದ್ದು ಇತ್ತೀಚಿನ ಉದಾಹರಣೆಗಳನ್ನು ನೋಡಿದ್ದೇವೆ. ಹೀಗೆ ಸತ್ಯ, ಅನೃತ, ಧರ್ಮಾಧರ್ಮಗಳ ಚಿಂತನೆಯ ಮೂಲಕ ತತ್ತ್ವಗಳು ಈ ಉಪಾಖ್ಯಾನಗಳಲ್ಲಿವೆ.

ಇತ್ಯಾದಿ...

*****

---

ತಸ್ಕರೇಷ್ವಭಿಧಾಯ್ಯೆವ ನಿರಯಂ ಪ್ರತ್ಯಪದ್ಯತ ॥
ಕಶ್ಚಿದ್ವ್ಯಾಧೋ ಮೃಗಂ ಹತ್ವಾ ಮಾತಾಪಿತೃನಿಮಿತ್ತತಃ ।
ಭಕ್ಷಾರ್ಥಮಭ್ಯಗಾತ್ ಸ್ವರ್ಗಮಸುರೋಽಸೌ ಮೃಗೋ ಯತಃ ॥
ಉಪದ್ರವಾಯ ಲೋಕಸ್ಯ ತಪಶ್ಚರತಿ ದುರ್ಮತಿಃ ।
ತಸ್ಮಾತ್ ಸದ್ಧಾರಕೋ ಧರ್ಮ ಇತಿ ಕೃತ್ವಾ ವಿನಿಶ್ಚಯಮ್ ।
ಮಾ ನೃಪಂ ಜಹಿ ಸತ್ಯಾಂ ತ್ವಂಕುರು ವಾಚಂ ತಿರಸ್ಕುರು ॥ - ೨೭/೧೨೧-೧೨೩

# ಶಲ್ಯಪರ್ವ

## ಗದಾಪರ್ವ(ಉಪ)

### ೬೭. ದಕ್ಷಪ್ರಜಾಪತಿಯಿಂದ ಚಂದ್ರನಿಗೆ ಶಾಪ

ಕುರುಕ್ಷೇತ್ರದಲ್ಲಿ ಭೀಮದುರ್ಯೋಧನರ ಯುದ್ಧ ನಡೆದಾಗ ಬಲರಾಮನು ಪಾಂಡವರಿಗೆ, ಕೌರವರಿಗೆ ಸಹಾಯ ಮಾಡಲು ಒಪ್ಪದೇ ತೀರ್ಥಯಾತ್ರೆಗೆ ಹೋದನು. ಆತನು ದುರ್ಯೋಧನಪಕ್ಷಪಾತಿಯಾಗಿ ವರ್ತಿಸಿದ. ಕೃಷ್ಣನು ಅದಕ್ಕೆ ಒಪ್ಪಲಿಲ್ಲ. ಮೊದಲು ಬಲರಾಮನು ಪ್ರಭಾಸಕ್ಷೇತ್ರಕ್ಕೆ ಹೊರಟನು. ದಕ್ಷಪ್ರಜಾಪತಿಯು (ಚಂದ್ರನ ಮಾವ) ತನ್ನ ಅಳಿಯನಿಗೆ ಕ್ಷಯರೋಗದಿಂದ ಕ್ಷೀಣನಾಗು ಎಂದು ಶಾಪಕೊಟ್ಟಿದ್ದ. ಆ ಶಾಪವನ್ನು ಈ ಕ್ಷೇತ್ರದಲ್ಲಿ ಕಳೆದುಕೊಂಡು ಚಂದ್ರ ಮತ್ತೆ ತನ್ನ ಪ್ರಕಾಶವನ್ನು ಹೊಂದಿ ಜಗತ್ತನ್ನು ಬೆಳಗಿದನು.

ಭೂಮಿಯಲ್ಲಿಯೇ ಈ ಕ್ಷೇತ್ರವು ಚೆನ್ನಾಗಿ ಶೋಭಿಸುವುದರಿಂದ ಇದಕ್ಕೆ ಪ್ರಭಾಸವೆಂಬ ನಾಮಧೇಯ ಎಂದು ವೈಶಂಪಾಯನರು ಜನಮೇಜಯನಿಗೆ ಹೇಳಿದಾಗ, ರಾಜನು ಚಂದ್ರನಿಗೆ ಶಾಪ ಬರಲು ಕಾರಣ, ಮತ್ತೆ ಹೇಗೆ ಈ ತೀರ್ಥದಲ್ಲಿ ಚಂದ್ರನು ಸ್ನಾನಮಾಡಿ ಮೊದಲಿನಂತಾದ? ಎಂದು ಕೇಳಿದಾಗ ವೈಶಂಪಾಯನರು ಆ ವೃತ್ತಾಂತವನ್ನು ವಿವರಿಸಿದರು[೧].

ದಕ್ಷಪ್ರಜಾಪತಿಗೆ ಇಪ್ಪತ್ತೇಳು ಕನ್ಯೆಯರಿದ್ದರು. ಅವರನ್ನು ದಕ್ಷನು ಚಂದ್ರನಿಗೆ ಕೊಟ್ಟು ವಿವಾಹ ಮಾಡಿದನು. ಅವರೇ ಇಪ್ಪತ್ತೇಳು ನಕ್ಷತ್ರಗಳು. ಇವರೇ ಶುಭಾಶುಭಕರ್ಮಗಳನ್ನು ಸೂಚಿಸುವವರು. ಶುಭಕರ್ಮ ಮಾಡುವ ಚಂದ್ರನ ಮಡದಿಯರಾಗಿದ್ದರು. ಈ ಇಪ್ಪತ್ತೇಳು

---

೧ ದಕ್ಷಸ್ಯ ತನಯಾ ರಾಜನ್ ಪ್ರಾದುರಾಸನ್ ವಿಶಾಂಪತೇ।
ಸಪ್ತವಿಂಶತ್ತು ತಾಃ ಕನ್ಯಾಃ ಸೋಮಾಯ ಪ್ರದದೌ ಪ್ರಭುಃ॥
ನಕ್ಷತ್ರಯೋಗನಿರತಾಃ ಸಂಖ್ಯಾನಾರ್ಥಂ ಚ ತಾ ಭವನ್।
ಪತ್ನ್ಯೋ ವೈ ತಸ್ಯ ರಾಜೇಂದ್ರ ಸೋಮಸ್ಯ ಶುಭಕರ್ಮಣಃ।
ಅತ್ಯರಿಚ್ಯತ ತಾಸಾಂ ತು ರೋಹಿಣೀ ರೂಪಸಂಪದಾ।
ತತಸ್ತಸ್ಯಾಂ ಸ ಭಗವಾನ್ ಪ್ರೀತಿಂ ಚಕ್ರೇ ನಿಶಾಕರಃ।
ಸೋಮೋ ವಸತಿ ನಾನ್ಯಾಸು ರೋಹಿಣ್ಯಾಂ ವಸತೇ ಸದಾ। – ೬/೪೯-೭೧

# ಶಲ್ಯಪರ್ವ

## ಗದಾಪರ್ವ(ಉಪ)

### ೬೭. ದಕ್ಷಪ್ರಜಾಪತಿಯಿಂದ ಚಂದ್ರನಿಗೆ ಶಾಪ

ಕುರುಕ್ಷೇತ್ರದಲ್ಲಿ ಭೀಮದುರ್ಯೋಧನರ ಯುದ್ಧ ನಡೆದಾಗ ಬಲರಾಮನು ಪಾಂಡವರಿಗೆ, ಕೌರವರಿಗೆ ಸಹಾಯ ಮಾಡಲು ಒಪ್ಪದೇ ತೀರ್ಥಯಾತ್ರೆಗೆ ಹೋದನು. ಅತನು ದುರ್ಯೋಧನಪಕ್ಷಪಾತಿಯಾಗಿ ವರ್ತಿಸಿದ. ಕೃಷ್ಣನು ಅದಕ್ಕೆ ಒಪ್ಪಲಿಲ್ಲ. ಮೊದಲು ಬಲರಾಮನು ಪ್ರಭಾಸಕ್ಷೇತ್ರಕ್ಕೆ ಹೊರಟನು. ದಕ್ಷಪ್ರಜಾಪತಿಯು (ಚಂದ್ರನ ಮಾವ) ತನ್ನ ಅಳಿಯನಿಗೆ ಕ್ಷಯರೋಗದಿಂದ ಕ್ಷೀಣನಾಗು ಎಂದು ಶಾಪಕೊಟ್ಟಿದ್ದ. ಆ ಶಾಪವನ್ನು ಈ ಕ್ಷೇತ್ರದಲ್ಲಿ ಕಳೆದುಕೊಂಡು ಚಂದ್ರ ಮತ್ತೆ ತನ್ನ ಪ್ರಕಾಶವನ್ನು ಹೊಂದಿ ಜಗತ್ತನ್ನು ಬೆಳಗಿದನು.

ಭೂಮಿಯಲ್ಲಿಯೇ ಈ ಕ್ಷೇತ್ರವು ಚೆನ್ನಾಗಿ ಶೋಭಿಸುವುದರಿಂದ ಇದಕ್ಕೆ ಪ್ರಭಾಸವೆಂಬ ನಾಮಧೇಯ ಎಂದು ವೈಶಂಪಾಯನರು ಜನಮೇಜಯನಿಗೆ ಹೇಳಿದಾಗ, ರಾಜನು ಚಂದ್ರನಿಗೆ ಶಾಪ ಬರಲು ಕಾರಣ, ಮತ್ತೆ ಹೇಗೆ ಈ ತೀರ್ಥದಲ್ಲಿ ಚಂದ್ರನು ಸ್ನಾನಮಾಡಿ ಮೊದಲಿನಂತಾದ? ಎಂದು ಕೇಳಿದಾಗ ವೈಶಂಪಾಯನರು ಆ ವೃತ್ತಾಂತವನ್ನು ವಿವರಿಸಿದರು[೧].

ದಕ್ಷಪ್ರಜಾಪತಿಗೆ ಇಪ್ಪತ್ತೇಳು ಕನ್ಯೆಯರಿದ್ದರು. ಅವರನ್ನು ದಕ್ಷನು ಚಂದ್ರನಿಗೆ ಕೊಟ್ಟು ವಿವಾಹ ಮಾಡಿದನು. ಅವರೇ ಇಪ್ಪತ್ತೇಳು ನಕ್ಷತ್ರಗಳು. ಇವರೇ ಶುಭಾಶುಭಕರ್ಮಗಳನ್ನು ಸೂಚಿಸುವವರು. ಶುಭಕರ್ಮ ಮಾಡುವ ಚಂದ್ರನ ಮಡದಿಯರಾಗಿದ್ದರು. ಈ ಇಪ್ಪತ್ತೇಳು

---

೧ ದಕ್ಷಸ್ಯ ತನಯಾ ರಾಜನ್ ಪ್ರಾದುರಾಸನ್ ವಿಶಾಂಪತೇ।
ಸಪ್ತವಿಂಶತ್ತು ತಾಃ ಕನ್ಯಾಃ ಸೋಮಾಯ ಪ್ರದದೌ ಪ್ರಭುಃ॥
ನಕ್ಷತ್ರಯೋಗನಿರತಾಃ ಸಂಖ್ಯಾನಾರ್ಥಂ ಚ ತಾ ಭವನ್।
ಪತ್ನ್ಯೋ ವೈ ತಸ್ಯ ರಾಜೇಂದ್ರ ಸೋಮಸ್ಯ ಶುಭಕರ್ಮಣಃ।
ಅತ್ಯರಿಚ್ಯತ ತಾಸಾಂ ತು ರೋಹಿಣೀ ರೂಪಸಂಪದಾ।
ತತಸ್ತಸ್ಯಾಂ ಸ ಭಗವಾನ್ ಪ್ರೀತಿಂ ಚಕ್ರೇ ನಿಶಾಕರಃ।
ಸೋಮೋ ವಸತಿ ನಾಸ್ಮಾಸು ರೋಹಿಣ್ಯಾಂ ವಸತೇ ಸದಾ। - ೬/೪೯-೭೧

ಮಡದಿಯರಲ್ಲಿ ರೋಹಿಣಿಯು ತುಂಬಾ ರೂಪಸಿಯಾಗಿದ್ದಳು. ಚಂದ್ರನು ಯಾವಾಗಲೂ ಅವಳಲ್ಲಿಯೇ ಅನುರಕ್ತನಾಗಿದ್ದನು. ಪರಿಣಾಮವಾಗಿ ಉಳಿದ ಇಪ್ಪತ್ತಾರು ಮಡದಿಯರು ಕೋಪಗೊಂಡು ತಂದೆ ದಕ್ಷನಿಗೆ ದೂರಿದರು. ದಕ್ಷನು ಚಂದ್ರನಿಗೆ ಬುದ್ಧಿವಾದ ಹೇಳಿ ಮಕ್ಕಳನ್ನು ಚಂದ್ರನ ಬಳಿಗೆ ಕಳಿಸಿದನು. ಆಗಲೂ ಚಂದ್ರನು ಮೊದಲಿನಂತೆಯೇ ರೋಹಿಣಿಯೊಡನೆ ವಾಸವಾಗಿರುತ್ತಿದ್ದನು. ಉಳಿದವರೊಡನೆ ವಾಸಿಸಲಿಲ್ಲ. ಬೇಸರಗೊಂಡ ಈ ಇಪ್ಪತ್ತಾರು ಜನ ಮತ್ತೇ ತಂದೆಗೆ ತಮ್ಮ ದುಃಖವನ್ನು ಹೇಳಿ ನಾವು ನಿನ್ನ ಹತ್ತಿರವೇ ಇರುತ್ತೇವೆ. ನಿನ್ನಲ್ಲಿಯೇ ಇದ್ದುಕೊಂಡು ಆಹಾರ ನಿಯಮ ಮಾಡಿಕೊಂಡು (ನಿಯತಾಹಾರರಾಗಿ) ತಪಸ್ಸನ್ನು ಮಾಡುತ್ತೇವೆ ಎಂದರು.

ಆಗ ದಕ್ಷನು (ಚಂದ್ರನಿಗೆ) ಚಂದ್ರನೇ! ನೀನು ಎಲ್ಲ ಪತ್ನಿಯರೊಂದಿಗೆ ಇರು. ಪಕ್ಷಪಾತ ಮಾಡಬೇಡ. ಮಾಡಿದರೆ ಮಹಾಪಾಪ ನಿನಗೆ ಉಂಟಾಗುತ್ತದೆ ಎಂದ. ಮಕ್ಕಳನ್ನು ಚಂದ್ರನ ಬಳಿಗೆ ಕಳಿಸಿದ. ಆದರೂ ಚಂದ್ರನು ತನ್ನ ಚಾಳಿ ಬಿಡದೇ ಮೊದಲಿನಂತೆ ರೋಹಿಣಿಯನ್ನು ಮಾತ್ರ ಸೇವಿಸಿ ಸಂತೋಷಪಡಿಸುತ್ತಿದ್ದನು. ಇದರಿಂದ ನೊಂದ ಉಳಿದ ಮಡದಿಯರು ಮತ್ತೆ ತಂದೆಗೆ ದೂರಿದರು. ಕೋಪಗೊಂಡ ದಕ್ಷನು ಚಂದ್ರನಿಗೆ 'ಎಲ್ಲರೊಡನೆ ಸಮನಾಗಿರು. ಇಲ್ಲದಿದ್ದರೆ ಶಾಪ ಕೊಡುವೆ' ಎಂದನ. ಆದರೆ ಭಗವಾನ್ ಚಂದ್ರನು ಮಾವನ ಮಾತನ್ನು ತಿರಸ್ಕರಿಸಿ ಮೊದಲಿನಂತೆ ಇದ್ದ. ಮಕ್ಕಳ ದೂರನ್ನು ಕೇಳಿದ ದಕ್ಷನು ಕೊನೆಗೆ ಕೋಪದಿಂದ ಕ್ಷಯರೋಗವನ್ನು ಸೃಷ್ಟಿಸಿ ಚಂದ್ರನ ಮೇಲೆ ಪ್ರಯೋಗಿಸಿದನು. ಆ ರೋಗ ಚಂದ್ರನನ್ನು ಪ್ರವೇಶಿಸಿತು. ರೋಗಕ್ಕೆ ತುತ್ತಾದ ಚಂದ್ರನು ದಿನೇ ದಿನೇ ಕ್ಷೀಣಿಸತೊಡಗಿದ[1].

ಚಂದ್ರನು ಕ್ಷಯಪರಿಹಾರಕ್ಕಾಗಿ ವಿಚಿತ್ರವಾದ ಅನೇಕ ಯಾಗಗಳನ್ನು ಮಾಡಿದರೂ, ಕ್ಷಯನಾಶವಾಗಲಿಲ್ಲ. ಚಂದ್ರನು ಕ್ಷೀಣಿಸಿದಂತೆಲ್ಲ ಆತನ ಪ್ರಕಾಶವನ್ನು ಅವಲಂಬಿಸಿದ ಔಷಧಿಯ ಸಸ್ಯಗಳು ಹುಟ್ಟಲಿಲ್ಲ. ಮರಗಿಡಗಳು ರಸ-ರುಚಿಹೀನವಾದವು. ಅವುಗಳಲ್ಲಿನ ಶಕ್ತಿ ಕುಂಠಿತವಾಯಿತು. ಸಸ್ಯಾಹಾರಿಗಳಾದ ಮನುಷ್ಯರೂ ಸೊರಗಿದರು[2]. ಜಗತ್ತಿನಲ್ಲಿ

೧ ಸಮಂ ವರ್ತಸ್ವ ಸರ್ವಾಸು ಮಾಸ್ತ್ವ ಶಪ್ಸ್ಯೇ ಹ ಚಂದ್ರಮಾಃ।
ಅನಾದೃತ್ಯ ತು ತದ್ವಾಕ್ಯಂ ದಕ್ಷಸ್ಯ ಭಗವಾನ್ ಶಶೀ।
ರೋಹಿಣ್ಯಾ ಸಾರ್ಧಮವಸತ್ ತತಸ್ತಾಃ ಕುಪಿತಾಃ ಪುನಃ।
ತಚ್ಛ್ರುತ್ವಾ ಭಗವಾನ್ ಕ್ರುದ್ಧೋ ಯಕ್ಷ್ಮಾಣಂ ಪೃಥಿವೀಪತೇ।
ಸಸರ್ಜ ರೋಷಾತ್ ಸೋಮಾಯ ಸ ಚೋಡುಪತಿಮಾವಿಶತ್।
ಸ ಯಕ್ಷ್ಮಣಾಽಭಿಭೂತಃ ಸನ್ ಕ್ಷೀಯತೇಽಹರಹಃ ಶಶೀ॥ - ೬/೪೯-೭೦

೨ ಯತ್ನಂ ಚಾಪ್ಯಕರೋದ್ ರಾಜನ್ ಮೋಕ್ಷಾರ್ಥಂ ತಸ್ಯ ಯಕ್ಷ್ಮಣಃ।
ಇಷ್ಟ್ವೇಷ್ಟಿಭಿರ್ಮಹಾರಾಜ ವಿಚಿತ್ರಾಭಿರ್ನಿಶಾಕರಃ।
ನ ಚಾಮುಚ್ಯತ ಶಾಪಾದ್ವೈ ಕ್ಷಯಂ ಚೈವಾಧಿಗಚ್ಛತಿ।
ಕ್ಷೀಯಮಾಣೇ ತತಃ ಸೋಮೇ ಓಷಧ್ಯೋ ನ ಪ್ರಜಜ್ಞಿರೇ।

ಹೀಗೆ ಜೀವಿಗಳೆಲ್ಲ ನಶಿಸುವ ಹಂತ ತಲುಪಲು ದೇವತೆಗಳು ಚಂದ್ರನ ಬಳಿಗೆ ಬಂದು ಆತನ ಕ್ಷಯಕ್ಕೆ ಕಾರಣ ಕೇಳಿದರು. ಚಂದ್ರನು ದಕ್ಷಶಾಪದ ಫಲವನ್ನು ವಿವರಿಸಿದನು[೧]. ದೇವತೆಗಳೆಲ್ಲ ದಕ್ಷಪ್ರಜಾಪತಿಯ ಸನ್ನಿಧಿಗೆ ಹೋಗಿ ಚಂದ್ರನಿಗೆ ಕೊಟ್ಟ ಶಾಪವನ್ನು ತೆಗೆದು ವಿಶಾಪ ನೀಡಲು ಪ್ರಾರ್ಥಿಸಿದರು[೨]. ಚಂದ್ರನ ಕ್ಷೀಣತೆ ಲೋಕದ ಪ್ರಜೆಗಳ ಮೇಲೂ ಆಗುವುದನ್ನೇ ವಿವರಿಸಿ ಬೇಡಿದರು.

ಆಗ ದಕ್ಷನು ವಿಚಾರ ಮಾಡಿ, ನನ್ನ ಮಾತುಗಳನ್ನು ಹಿಂದೆ ತೆಗೆದುಕೊಳ್ಳಲಾಗದು. ಬೇರೆ ಯಾವುದಾದರೂ ಕಾರಣದಿಂದ ಅದು (ಕ್ಷೀಣತೆ ವಾಪಸು) ಆಗಬಹುದೆಂದನು. ಚಂದ್ರನು ತನ್ನ ಮಡದಿಯರಲ್ಲಿ ಸಮವಾಗಿ ವರ್ತಿಸಲಿ. ಪಕ್ಷಪಾತ ಮಾಡದಿರಲಿ. ಪ್ರಭಾಸತೀರ್ಥದಲ್ಲಿ ಅವಗಾಹನಸ್ನಾನ ಮಾಡಲಿ ಎಂದು ಹೇಳಿದನು. ಹೀಗಾದರೆ ಚಂದ್ರನು ಮತ್ತೆ ಮೊದಲಿನಂತೆ ವೃದ್ಧಿ ಹೊಂದುತ್ತಾನೆ. ಮುಂದೆಯೂ ಮಾಸದ ಅರ್ಧ ವೃದ್ಧಿ, ಅರ್ಧಭಾಗ ಕ್ಷಯ ಹೊಂದುತ್ತಾನೆ. ನಾನು ಸತ್ಯ ಹೇಳುತ್ತೇನೆ ಎಂದನು[೩].

ನಂತರ ಋಷಿಗಳ ಆದೇಶದಂತೆ ಚಂದ್ರನು ತೀರ್ಥಯಾತ್ರೆಗೆ ಹೋಗಿ ಪ್ರಭಾಸತೀರ್ಥಕ್ಕೆ ಬಂದು, ಅಮಾವಾಸ್ಯೆಯಂದು ಅಲ್ಲಿ ಸ್ನಾನ ಮಾಡಿದನು. ಆದರಿಂದ ಪುನಃ ಕಾಂತಿಸಂಪನ್ನನಾಗಿ ಲೋಕಕ್ಕೆಲ್ಲ ಪ್ರಕಾಶ ನೀಡಿ, ಶೀತಾಂಶು ಎಂದು ಹೆಸರಾದನು.

ನಂತರ ದೇವತೆಗಳೆಲ್ಲ ಚಂದ್ರನೊಡನೆ ದಕ್ಷನಲ್ಲಿಗೆ ಹೋದರು(ಹೋಗಿ ಗೌರವಿಸಿದರು, ಚಂದ್ರನು ನೀನು ಹೇಳಿದಂತೆ ಸ್ನಾನ ಮಾಡಿದುದನ್ನು ನಿವೇದಿಸಿದರು). ಆಗ ದಕ್ಷನು ಚಂದ್ರನಿಗೆ ಮಗನೇ! ಸ್ತ್ರೀಯರನ್ನು ಮತ್ತು ಬ್ರಾಹ್ಮಣರನ್ನು ಎಂದೂ ಅವಮಾನಿಸಬೇಡ. ನಿನ್ನ ನಿವಾಸಕ್ಕೆ ಹೋಗು. ಯಾವಾಗಲೂ ನನ್ನ ಆದೇಶದಂತೆ ನಡೆ[೪].

---

ಓಷಧೀನಾಂ ಕ್ಷಯೇ ಜಾತೇ ಪ್ರಾಣಿನಾಮಪಿ ಸಂಕ್ಷಯಃ।
ಕೃಶಾಶ್ಚಾಸನ್ ಪ್ರಜಾಃ ಸರ್ವಾಃ ಕ್ಷೀಯಮಾಣೇ ನಿಶಾಕರೇ॥
೧ ಶಾಪಸ್ಯ ಕಾರಣಂ ಚೈವ ಯಕ್ಷ್ಮಾಣಂ ಚ ತಥಾಽಽತ್ಮನಃ।
೨ ಪ್ರಸೀದತು ಭವಾನ್ ಸೋಮೇ ಶಾಪೋಽಯಂ ವಿನಿವರ್ತ್ಯತಾಮ್। - ಶ.ಪ.(೩೬/೧೦)
೩ ನೈತತ್ ಶಕ್ಯಂ ಮಮ ವಚೋ ವ್ಯಾವರ್ತಯಿತುಮಂಜಸಾ।
ಹೇತುನಾ ತು ಮಹಾಭಾಗಾ ನಿವರ್ತಿಷ್ಯತಿ ಕೇನಚಿತ್।
ಸಮಂ ವರ್ತೇತ ಸರ್ವಾಸು ಶಶೀ ಭಾರ್ಯಾಸು ಸರ್ವಶಃ।
ಅಸ್ಮಿನ್ ತೀರ್ಥವರೇ ಚಾಪಿ ನಿಮಜ್ಜೇತ್ ಶಶಲಕ್ಷಣಃ।
ಪುನರ್ವರ್ಧಿಷ್ಯತೇ..................
ಮಾಸಾರ್ಧಂ ಚ ಕ್ಷಯಂ ಸೋಮೋ ನಿತ್ಯಮೇವ ಗಮಿಷ್ಯತಿ।
ಮಾಸಾರ್ಧಂ ಚ ಪುನರ್ವೃದ್ಧಿಂ ಸತ್ಯಮೇವ ಬ್ರವೀಮಿ ವಃ। - ಶ.ಪ.(೩೬/೧೧-೧೮)
೪ ಮಾಽವಮಂಸ್ಥಾಃ ಸ್ತ್ರಿಯಃ ಪುತ್ರ ಮಾ ಚ ವಿಪ್ರಾನ್ ಕದಾಚನ।
ಗಚ್ಛ ಯುಕ್ತಃ ಸದಾ ಭೂತ್ವಾ ಕುರು ತ್ವಂ ಶಾಸನಂ ಮಮ॥

ಹೀಗೆ ದಕ್ಷನ ಅನುಮತಿಯಿಂದ ಬೀಳ್ಕೊಟ್ಟ ಚಂದ್ರನು ತನ್ನ ಮನಗೆ ಬಂದ. ಪ್ರಕಾಶವುಳ್ಳ ಚಂದ್ರನಿಂದ ಜನರೆಲ್ಲ ಮತ್ತೆ ಮೊದಲಿನಂತೆ ಕರ್ತವ್ಯ ನಿರತರಾದರು.

ರಾಜನ್! ಇದು ಚಂದ್ರನಿಗೆ ದಕ್ಷನಿಂದ ಬಂದ ಶಾಪ ಹಾಗೂ ವಿಶಾಪಗಳ ಕಥೆ ಹಾಗೂ ಪ್ರಭಾಸದ ಮಹಿಮೆ.

ಇಂದಿಗೂ ಚಂದ್ರನು ಪ್ರತಿ ಅಮಾವಾಸ್ಯೆ ಪ್ರಭಾಸದಲ್ಲಿ ಮಿಂದು ಸಂತುಷ್ಟನಾಗುತ್ತಾನೆ. ಆತನನ್ನು ಮತ್ತೆ ಮೊದಲಿನಂತೆ ಮಾಡಿದ ಪುಣ್ಯಕ್ಷೇತ್ರವೇ ಪ್ರಭಾಸ. ಆದ್ದರಿಂದ ಇದನ್ನು ಪ್ರಭಾಸವೆನ್ನುತ್ತಾರೆ.

## ಸಂದೇಶಗಳು

೧. ಬಹುಪತ್ನಿಯರು ಇರುವ ಪತಿಯು ಎಲ್ಲರನ್ನೂ ಸಮಾನವಾಗಿ ಪ್ರೀತಿಸಬೇಕು, ವಿಶ್ವಾಸ ಮಾಡಬೇಕು. ಹಾಗಿಲ್ಲದಿದ್ದರೆ ಯಜಮಾನನು ತನ್ನ ವಿಶ್ವಾಸ ಮಾಡದೇ ಇರುವ ಪತ್ನಿಯರ ಹಾಗೂ ಮಾವನ ಕೋಪಕ್ಕೆ ಗುರಿಯಾಗುತ್ತಾನೆ. ಶಾಪಕ್ಕೂ ತುತ್ತಾಗುತ್ತಾನೆ. ಸಮಾಜದಲ್ಲಿ ತಲೆ ಎತ್ತದಂತೆ ಆಗಿ ಅಲ್ಲೂ ಅಗೌರವಕ್ಕೆ ತುತ್ತಾಗುತ್ತಾನೆ.

೨. ಇಂತಹ ಪ್ರಸಂಗದಲ್ಲಿ ಪ್ರಭಾಸಕ್ಷೇತ್ರಕ್ಕೆ ಹೋಗಿ ಸ್ನಾನಮಾಡಿ ಬಂದರೆ ಆ ಪಾಪವು ಹೋಗುತ್ತದೆ. ಆದರೆ ಮತ್ತೆ ಆ ಪಾಪವನ್ನು ಎಂದೂ ಮಾಡಬಾರದು.

೩. ತನ್ನ ಪತ್ನಿಯರನ್ನು ಮಾತ್ರವಲ್ಲ, ಸಾಮಾನ್ಯವಾಗಿ ಸ್ತ್ರೀಯರನ್ನು (ಪತ್ನಿಯರು ಅಥವಾ ಇತರರು) ಅಗೌರವದಿಂದ ಕಾಣಬಾರದು. ಮತ್ತು ಬ್ರಾಹ್ಮಣರಿಗೆ ಅಗೌರವ ತೋರಿಸಬಾರದು. ಅವರನ್ನು ಶಾಸ್ತ್ರೋಕ್ತವಾಗಿ ಗೌರವಿಸಬೇಕು

ಇತ್ಯಾದಿ....

*****

---

ಅಮಾವಾಸ್ಯಾಂ ಮಹಾರಾಜ ಸ ನಿತ್ಯಂ ಶಶಲಕ್ಷಣಃ।
ಸ್ನಾತ್ವಾ ಹ್ಯಾಪ್ಯಾಯತೇ ಶ್ರೀಮಾನ್ ಪ್ರಭಾಸೇ ತೀರ್ಥಸತ್ತಮೇ।
ಅತಶ್ಚೈನಂ ಪ್ರಜಾನಂತಿ ಪ್ರಭಾಸಮಿತಿ ಭೂಮಿಪ।
ಪ್ರಭಾಂ ಹಿ ಪರಮಾಂ ಲೇಭೇ ತಸ್ಮಿನ್ನಾಮಜ್ಯ ಚಂದ್ರಮಾಃ।
ಲೋಕಾನ್ ಪ್ರಭಾಸಯಾಮಾಸ ಪುಪೋಷ ಚ ವಪುಸ್ತದಾ॥ -ಶ.ಪ.(೩೬/೨೩-೩೮)

## ೬೮. ಏಕತ/ದ್ವಿತ/ತ್ರಿತ ಬ್ರಾಹ್ಮಣರ ಚರಿತೆ

ಬಲರಾಮನು ಪ್ರಭಾಸಕ್ಷೇತ್ರಯಾತ್ರೆ ಮುಗಿಸಿ ಚಮಸೋದ್ಭೇದಕ್ಷೇತ್ರಕ್ಕೆ ಹೋಗಿ, ನಂತರ ಉದಪಾನ ಕ್ಷೇತ್ರಕ್ಕೆ ಆಗಮಿಸಿ ಮತ್ತೆ ಕುರುಕ್ಷೇತ್ರಕ್ಕೆ ಬಂದನು. ಅಲ್ಲಿ ಸರಸ್ವತೀ ನದಿಯು ಭೂಮಿಯ ಅಂತರಾಳದಲ್ಲಿ ಗುಪ್ತಗಾಮಿನಿಯಾಗಿ ಹರಿಯುತ್ತದೆ ಎಂದು ಯೋಗಸಿದ್ಧಪುರುಷರು ಹೇಳುತ್ತಾರೆ.

ಅಲ್ಲಿ ನದೀಮಧ್ಯದಲ್ಲಿ ತ್ರಿತ ಎಂಬ ಬ್ರಾಹ್ಮಣನ ಉದಪಾನತೀರ್ಥ ಇದ್ದಲ್ಲಿಗೆ ಹೋದನು (ಗುಪ್ತಗಾಮಿನಿಯಾದ ಸರಸ್ವತೀನದಿಯ ಆದೊಂದು ಬಾವಿ). ಅಲ್ಲಿ ಬಲರಾಮನು ಬ್ರಾಹ್ಮಣಪೂಜೆ ಮಾಡಿ ಹೇರಳದಾನ ಮಾಡಿದನು.

[೧]ಮಹಾತಪಸ್ವಿಯಾದ ಧರ್ಮಿಷ್ಠನಾದ ತ್ರಿತಮುನಿಯು ಬಾವಿಯಲ್ಲಿ ವಾಸ ಮಾಡುತ್ತಿದ್ದನು. ಈ ತ್ರಿತನನ್ನು ಆತನ ಸಹೋದರರು ಆ ಬಾವಿಯಲ್ಲಿಯೇ ಬಿಟ್ಟು ಮನೆಗೆ ಹೋಗಿದ್ದರು. ಆದ್ದರಿಂದ ತ್ರಿತನು ಅವರಿಗೆ (ತನ್ನ ಸೋದರರಿಗೆ) ಶಾಪ ಕೊಟ್ಟಿದ್ದನು.

[೨]ಈ ಹಿನ್ನೆಲೆಯನ್ನು ವೈಶಂಪಾಯನರು ಹೇಳಿದಾಗ ಜನಮೇಜಯನು ತ್ರಿತನ ಸಹೋದರರು ತಮ್ಮ ಸಹೋದರನಾದ ತ್ರಿತನನ್ನು ಆ ಬಾವಿಯಲ್ಲಿ ಏಕೆ ಬಿಟ್ಟು ಹೋದರು? ಆತನು ಹೇಗೆ ಅಲ್ಲಿ ಬಿದ್ದನು? ಅಲ್ಲಿ ಬಾವಿ ಹೇಗೆ ಇತ್ತು? ಎಂದೆಲ್ಲ ಕೇಳಿದನು. ಅದಕ್ಕೆ ವೈಶಂಪಾಯನರು ಉತ್ತರಿಸಿದರು.

ಹಿಂದಿನ ಯುಗದಲ್ಲಿ ಗೌತಮ ಋಷಿಗಳಿಗೆ ಏಕ, ದ್ವಿತ, ತ್ರಿತ ಎಂಬ ಮೂವರು ಸೂರ್ಯಕಾಂತಿಸಮರಾದ ಪ್ರಜಾಪತಿಸದೃಶರಾದ, ತಪಸ್ಸಿನಿಂದ ಬ್ರಹ್ಮಲೋಕವನ್ನು ಗೆದ್ದ (ಹೋಗಲು ಯೋಗ್ಯರಾದ) ಬ್ರಹ್ಮವಾದಿಗಳಾದ ಮಕ್ಕಳಿದ್ದರು. ಅವರ ತಂದೆ ಮಕ್ಕಳ ತಪಸ್ಸಿನಿಂದ ತುಂಬಾ ಸಂತೋಷ ಹೊಂದಿದ್ದರು. ಮುಂದೆ ಸ್ವರ್ಗಕ್ಕೂ ಹೋದನು[೩].

---

೧ ತಸ್ಮಾನ್ನದೀಗತಂ ಚಾಪಿ ಉದಪಾನಂ ಮಹಾತ್ಮನಃ।
ತ್ರಿತಸ್ಯ ಚ.........................................॥
ಕೂಪೇ ಚ ವಸತಾ ತೇನ ಭ್ರಾತರೌ ಜಗ್ಮತುರ್ಗೃಹಾನ್।
ತತಸ್ತು ತೌ ಶಶಾಪಾಥ ತ್ರಿತೋ ಬ್ರಾಹ್ಮಣ ಪುಂಗವಃ॥

೨ ಉದಪಾನಂ ಕಥಂ ಬ್ರಹ್ಮನ್ ಕಥಂ ಚ ಸುಮಹಾತಪಾಃ।
ಪತಿತಃ ಕಿಂ ಚ ಸತ್ಯಕ್ತೋ ಭ್ರಾತೃಭ್ಯಾಂ ದ್ವಿಜಸತ್ತಮ॥
ಕೂಪೇ ಕಥಂ ಚ ಹಿತ್ವೈನಂ ಜಗ್ಮತುರ್ಭ್ರಾತರೌ ಗೃಹಾನ್।
ಏತದಾಚಕ್ಷ್ವ ಮೇ ಬ್ರಹ್ಮನ್ ಯದಿ ಶ್ರಾವ್ಯಂ ಹಿ ಮನ್ಯಸೇ॥ . ಶಪ.(೩೭/೧-೬)

೩ ಏಕತಶ್ಚ ದ್ವಿತಶ್ಚೈವ ತ್ರಿತಶ್ಚಾದಿತ್ಯಸನ್ನಿಭಾಃ।
ಸರ್ವೇ ಪ್ರಜಾಪತಿಸಮಾಃ ಪ್ರಜಾಪತಯ ಏವ ಚ।
ತೇಷಾಂ ತು ತಪಸಾ ಪ್ರೀತೋ ನಿಯಮೇನ ಯಮೇನ ಚ।

[1]ಗೌತಮರು ಸ್ವರ್ಗಸ್ಥರಾದ ಮೇಲೆ ಅವರನ್ನು ಪುರೋಹಿತರನ್ನಾಗಿ ಗೌರವಿಸುತ್ತಿದ್ದ ರಾಜರು ಅವರ ಈ ಮೂವರೂ ಮಕ್ಕಳನ್ನು ತಮ್ಮ ಯಜ್ಞ-ಯಾಗಾದಿಗಳಿಗೆ ಆಹ್ವಾನಿಸಿ ಪೂಜಿಸುತ್ತಿದ್ದರು. ಈ ಮೂವರಲ್ಲಿ ತ್ರಿತನು ತಂದೆಯಂತೆ ಶ್ರೇಷ್ಠತೆಯನ್ನು ಮೆರೆದು ಪ್ರಸಿದ್ಧನಾದನು. ಅಲ್ಲದೆ ಆ ಕಾಲದ ಮುನಿಗಳು - ಭಾಗ್ಯಶಾಲಿಗಳು ತ್ರಿತನನ್ನು ಪೂಜಿಸುತ್ತಿದ್ದರು.

ಒಮ್ಮೆ ಏಕತ ಹಾಗೂ ದ್ವಿತರು ತಮ್ಮ ಸೋದರನಾದ ತ್ರಿತನನ್ನು ಆಶ್ರಯಿಸಿ ಯಾಗ ಮಾಡಿಸುವವರನ್ನು (ಯಾಜ್ಯ-ಯಜಮಾನ) ಒಲಿಸಿ(ಸಂಗ್ರಹಿಸಿ) ಯಾಗಗಳನ್ನು ಮಾಡಿಸಿ ದಾನವಾಗಿ ಬರುವ ಗೋವುಗಳನ್ನು ಸಂಪಾದಿಸಿ, ಸೋಮಪಾನ ಮಾಡೋಣ, ಹೀಗೆ ಯಾಗದ ಮಹಾಫಲವನ್ನು ಹೊಂದೋಣ. ಹೀಗೆ ಯೋಚಿಸಿ ಏಕತ, ದ್ವಿತರು ತ್ರಿತನೊಡನೆ ಸೇರಿ ಬೇರೆ ಬೇರೆ ಯಜಮಾನರನ್ನು ಸಂಗ್ರಹಿಸಿ ಸಾಕಷ್ಟು ಯಾಗಗಳನ್ನು ಮಾಡಿ ಬಹು ಗೋಸಂಪತ್ತನ್ನು ಸಂಪಾದಿಸಿದರು. ನಂತರ ಮೂವರೂ ಪೂರ್ವದಿಕ್ಕಿಗೆ ಹೊರಟರು. ಈ ಮೂವರಲ್ಲಿ ತ್ರಿತನು ತುಂಬಾ ಸಂತೋಷದಿಂದ ಮುಂದೆ ಹೋಗುತ್ತಿದ್ದ. ಉಳಿದಿಬ್ಬರೂ ಪಶುಗಳನ್ನು ಮುಂದೆ ಮಾಡಿಕೊಂಡು ಹಿಂದೆ ಬರುತ್ತಿದ್ದರು.

[2]ಮತ್ತೆ ಹಿಂದೆ ಬರುತ್ತಿದ್ದ ಈ ಇಬ್ಬರಿಗೆ (ಏಕತ, ದ್ವಿತ) ದುರಾಲೋಚನೆ ಬಂದು ಈ ಸಂಪೂರ್ಣ ಪಶು ಸಂಪತ್ತು ತಮಗೆ ಮಾತ್ರ ಬರಲಿ ಅವನಿಗೆ ಬೇಡ. ಅವನು ಹೇಗೂ ಯಜ್ಞ ಮಾಡುವುದರಲ್ಲಿ ನಿಪುಣನಿದ್ದಾನೆ. ವೇದಗಳಲ್ಲಿ(ಪಠಣ-ಪಾಠನದಲ್ಲೂ)ಪರಿನಿಷ್ಠಿತ, ನಿಷ್ಣಾತನಾಗಿದ್ದಾನೆ. ಅವನು ಸ್ವತಂತ್ರವಾಗಿ ಗೋ ಸಂಪತ್ತನ್ನು ಸಂಪಾದಿಸಬಲ್ಲ. ಅವನು ಬೇರೆ ದೇಶಕ್ಕೆ ಹೋಗಲಿ ಎಂದು ಯೋಚಿಸಿದರು. ಹೀಗೆ ಯೋಚಿಸಿ ಮುಂದೆ ಹೋಗುತ್ತಿರುವಾಗ ರಾತ್ರಿಯಾಯಿತು[3]. ದಾರಿಯಲ್ಲಿ ತೋಳವೊಂದು ಬಂತು. ಸರಸ್ವತೀತೀರದ ಒಂದು ಬಾವಿ

---

ಅಭವದ್ ಗೌತಮೋ ನಿತ್ಯಂ ಪಿತಾ ಧರ್ಮರತಃ ಸದಾ ॥ -ಶ.ಪ.(೩೭/೭-೯)

೧ ತೇಷಾಂ ತು ಕರ್ಮಣಾ ರಾಜನ್ ತಪಸಾಽಧ್ಯಯನೇನ ಚ ।
ತ್ರಿತಃ ಶ್ರೇಷ್ಠತ್ವಮಾಪೇದೇ ಯಥಾ ಚಾಸ್ಯ ಪಿತಾ ತಥಾ ॥........ - ಶ.ಪ.(೩೭/೧೨)

೨ ತಯೋಶ್ಚಿಂತಾ ಸಮಭವದ್ ಏಕತಸ್ಯ ದ್ವಿತಸ್ಯ ಚ ।
ಕಥಂ ನು ಸ್ಯುರಿಮಾ ಗಾವಃ ಆವಾಭ್ಯಾಂ ಚ ತ್ರಿತಂ ವಿನಾ ।
ತ್ರಿತೋ ಯಜ್ಞೇಷು ಕುಶಲಃ ತ್ರಿತೋ ವೇದೇಷು ನಿಷ್ಠಿತಃ ।
ಅನ್ಯಾಸ್ತ್ರಿತೋ ಬಹುತರಾ ಗಾವಃ ಸಮುಪಲಪ್ಸ್ಯತೇ ।
ತ್ರಿತೋಽಪಿ ಗಚ್ಛೇತ್ ತಂ ಕಾಮಂ ಭ್ರಾತೃಭ್ಯಾಂ ವೈ ವಿನಾಕೃತಃ ।..... - ಶ.ಪ.(೩೭/೨೧-೨೪)

೩ ಅಥ ತ್ರಿತೋ ವೃಕಂ ದೃಷ್ಟ್ವಾ ಪಥಿ ತಿಷ್ಠಂತಮಗ್ರತಃ ।
ತದ್ಭಯಾದಪಸರ್ಪನ್ ವೈ ತಸ್ಮಿನ್ ಕೂಪೇ ಪಪಾತ ಹ ।
ಆರ್ತನಾದಂ ಮಹಚ್ಚಕ್ರಂ ತತ ಶುಶ್ರುವತುರ್ಮುನೀ ।
ತಂ ಜ್ಞಾತ್ವಾ ಪತಿತಂ ಕೂಪೇ ಭ್ರಾತರಾವೇಕತದ್ವಿತೌ ।
ವೃಕತ್ರಾಸಾಚ್ಚ ಲೋಭಾಚ್ಚ ತಮುತ್ಸೃಜ್ಯ ಪ್ರಜಗ್ಮತುಃ । - ಶ.ಪ.(೩೭/೨೬-೨೯)

ಹತ್ತಿರವೇ ಇತ್ತು. ತನ್ನೆದುರಿಗೆ ಬಂದ ತೋಳ ನೋಡಿ ಹೆದರಿದ ತ್ರಿತ ಆದರಿಂದ ತಪ್ಪಿಸಿಕೊಳ್ಳಲು ಹೋಗುತ್ತಾ ಅಗಾಧವಾದ ಎಲ್ಲ ಪ್ರಾಣಿಗೂ ಭಯ ಬರಿಸುವಂತಿದ್ದ ಘೋರವಾದ ಬಾವಿಯಲ್ಲಿ ಬಿದ್ದುಬಿಟ್ಟನು. ತನ್ನ ರಕ್ಷಣೆಗಾಗಿ ಬಾವಿಯಲ್ಲಿದ್ದು ಆರ್ತನಾಗಿ ಜೋರಾಗಿ ಕೂಗಿದ. ಆ ಕೂಗು ಸೋದರರಿಗೆ ಕೇಳಿಸಿತು. ಅವರೂ ಕೂಡಾ ತೋಳಕ್ಕೆ ಹೆದರಿ ಮತ್ತು ಪಶುಸಂಪತ್ತನ್ನು ತಮ್ಮದಾಗಿಸಲು ತ್ರಿತನನ್ನು ಕಾಪಾಡದೇ ಹೋಗಿಬಿಟ್ಟರು.

[೧]ಇತ್ತ ನೀರಿಲ್ಲದ, ಧೂಳು ತುಂಬಿದ, ಗಿಡಗಂಟೆಗಳಿಂದ ತುಂಬಿದ, ಮೃತ್ಯುಭಯ-ಗ್ರಸ್ತನಾದ, ಕುಡಿಯಲು ಸೋಮರಸವಿಲ್ಲದವನಾಗಿ ಭಯಂಕರ ಬಾವಿಯಲ್ಲಿ ಬಿದ್ದ ತ್ರಿತನು, ಕುಡಿಯಲು ಸೋಮರಸವಿಲ್ಲದೆ 'ನಾನು ಈ ಬಾವಿಯಲ್ಲಿದ್ದುಕೊಂಡೇ ಹೇಗೆ ಸೋಮ ಕುಡಿಯಲಿ' ಎಂದು ಯೋಚಿಸಿದನು. ಆಗ ಅಲ್ಲಿ ಅದೃಷ್ಟವಶಾತ್ ಚಾಚಿಕೊಂಡಿದ್ದ (ಜೋತುಬಿದ್ದಿದ್ದ) ಹರಡಿದ ಬಳ್ಳಿಯನ್ನು ನೋಡಿದನು. ಧೂಳು ತುಂಬಿದ ಬಾವಿಯಲ್ಲೇ ಅಗಿದು ನೀರನ್ನು ಪಡೆದು, ಅಗ್ನಿಯನ್ನು ಆಹ್ವಾನಿಸಿ ತನ್ನನ್ನೇ ಹೋತೃವನ್ನಾಗಿ ಸಂಕಲ್ಪಿಸಿದನು. ಅಲ್ಲಿದ್ದ ಬಳ್ಳಿಗಳನ್ನೇ ಸೋಮಲತೆಯನ್ನಾಗಿ ಸಂಕಲ್ಪಿಸಿ(ಅನುಸಂಧಾನ ಮಾಡಿ) ಋಗ್ವೇದ, ಯಜುರ್ವೇದ, ಸಾಮವೇದ ಮಂತ್ರಗಳನ್ನು ಮನಸ್ಸಿನಿಂದ ಜಪಿಸಿದನು. ಅಲ್ಲಿದ್ದ ಕಲ್ಲಿನ ತುಂಡು, ಕಣಗಳನ್ನೇ ಸೋಮಲತೆಯನ್ನು ಕುಟ್ಟುವ (ಜಜ್ಜುವ) ಕಲ್ಲನ್ನಾಗಿ ಮಾಡಿಕೊಂಡು, ಬಳ್ಳಿಗಳಿಂದ ರಸವನ್ನು ಹಿಂಡಿದನು. ಅಲ್ಲಿದ್ದ ನೀರನ್ನೇ ತುಪ್ಪವನ್ನಾಗಿ ಭಾವಿಸಿ (ಅನುಸಂಧಾನ) ದೇವತೆಗಳಿಗೆ ಆಹುತಿಗಳನ್ನಾಗಿ ಸಮರ್ಪಿಸಿದನು[೨]. ಲತೆಗಳಿಂದ ಸೋಮರಸವನ್ನು ಹಿಂಡಿ ತೆಗೆದಾಗ ಭಾರಿ ಶಬ್ದ ಹುಟ್ಟಿತು. ತ್ರಿತನಿಂದ ಹೊರಟ ವೇದಧ್ವನಿಯು ದೇವಲೋಕವನ್ನು ಪ್ರವೇಶಿಸಿತು. ಅವನು ಮಾಡಿದ ಯಜ್ಞ ಬ್ರಹ್ಮವಾದಿಗಳು ಮಾಡಿದ ಯಜ್ಞದಂತಾಯಿತು. [೩]ಹೀಗೆ ತ್ರಿತನು

---

೧ ಭ್ರಾತೃಭ್ಯಾಂ ಪಶುಲುಬ್ಧಾಭ್ಯಾಮುತ್ಸೃಷ್ಟಃ ಸುಮಹಾತಪಾಃ।
ಉದಪಾನೇ ...... ನಿರ್ಜಲೇ ಪಾಂಸು ಸಂವೃತೇ ॥
ನಿಮಗ್ನೋ.... ಸ ಬುಧ್ಯಾ ಗಣಯತ್ ಪ್ರಾಜ್ಞೋ ಮೃತ್ಯೋರ್ಭೀತೋ ಹ್ಯಸೋಮಪಃ ॥
ಸೋಮಃ ಕಥಂ ನು ಪಾತವ್ಯ ಇಹಸ್ಥೇನ ಮಯಾ ಭವೇತ್ ।
ಪಾಂಸುಗ್ರಸ್ತೇ ತತಃ ಕೂಪೇ ನ್ಯಖನತ್ ಸಲಿಲಂ ಮುನಿಃ ।
ಅಗ್ನಿಂ ಸಂಕಲ್ಪಯಾಮಾಸ ಹೋತ್ರ್ಯನಾತ್ಮಾನ ಮೇ ವ ಹಿ ।
ತತಸ್ತಾಂ ವೀರುಧಂ ಸೋಮಂ ಕಲ್ಪಯಿತ್ವಾ ಮಹಾತಪಾಃ ।
ಋಚೋ ಯಜೂಂಷಿ ಸಾಮಾನಿ ಮನಸಾಽಚಿಂತಯನ್ಮುನಿಃ ।
ಆಜ್ಯಂ ಚ ಸಲಿಲಂ ಚಕ್ರೇ ಭಾಗಾಂಶ್ಚತ್ರಿದಿವೌಕಸಾಮ್ ॥
೨ ಸೋಮಸ್ಯಾಭಿಷವಸ್ಯಾಗ್ರೇ ಪ್ರವೃದ್ಧಸ್ತುಮುಲೋ ಧ್ವನಿಃ ।
ಸ ಚಾವಿಶತ್ ದಿವಂ ರಾಜನ್ ಸ್ವರಶ್ಚೈವ ತ್ರಿತಸ್ಯ ವೈ ।
ಆವಿಗ್ನಂ ತ್ರಿದಿವಂ ಸರ್ವಂ ಕಾರಣಂ ನ ಚ ಬುಧ್ಯತೇ ॥ - ಶ.ಪ.(೩೭/೩೦-೪೦)
೩ ತತಸ್ತು ತುಮುಲಂ ಶಬ್ದಂ ಶುಶ್ರಾವ ಚ ಬೃಹಸ್ಪತಿಃ । - ಶ.ಪ.(೩೭/೩೦-೪೧)

ಯಜ್ಞಮಾಡುತ್ತಿರಲು ಸ್ವರ್ಗವು ತೊಂದರೆಗೊಳಗಾಯಿತು (ಭಯಗ್ರಸ್ತವಾಯಿತು, ಸ್ವರ್ಗದಲ್ಲಿ ತಳವಳವುಂಟಾಯಿತು). ಅದಕ್ಕೆ ಕಾರಣ ಅಲ್ಲಿದ್ದವರಿಗೆ ತಿಳಿಯಲಿಲ್ಲ. ಆಗ ಆ ಶಬ್ದವನ್ನು ಕೇಳಿಸಿಕೊಂಡ ದೇವಗುರು ಬೃಹಸ್ಪತಿಗಳು ದೇವತೆಗಳಿಗೆ ಹೀಗೆ ಹೇಳಿದರು.

'ದೇವತೆಗಳೇ! ತ್ರಿತನು ಮಾಡುತ್ತಿರುವ ಯಜ್ಞದ ಕಡೆಗೆ ಹೋಗೋಣ. ಹೋಗದಿದ್ದರೆ ಆ ಮಹಾತಪಸ್ವಿಯು ಸಿಟ್ಟಾಗಿ ಬೇರೆ ದೇವತೆಗಳನ್ನೇ ಸೃಷ್ಟಿಸಿಯಾನು'.

ಬೃಹಸ್ಪತ್ಯಾಚಾರ್ಯರ ಮಾತನ್ನು ಕೇಳಿ ದೇವತೆಗಳೆಲ್ಲ ತ್ರಿತನ ಯಜ್ಞ ನಡೆದ ಕಡೆಗೆ ಧಾವಿಸಿದರು. ಅವರು ಉದಪಾನ ಕೂಪದಲ್ಲಿ ಯಜ್ಞದೀಕ್ಷಿತನಾದ ತ್ರಿತನನ್ನು ನೋಡಿದರು. ಮಹಾಕಾಂತಿಯುಳ್ಳ ತ್ರಿತನನ್ನು 'ನಾವು ನಿನ್ನ ಯಜ್ಞದ ಭಾಗವನ್ನು (ಹವಿಸ್ಸನ್ನು) ಸ್ವೀಕರಿಸಲು ಬಂದಿದ್ದೇವೆ' ಎಂದರು. [೧]ಅದಕ್ಕೆ ತ್ರಿತನು ದೇವತೆಗಳನ್ನು ನೋಡಿ, 'ನಾನು ಭರವಸೆಯನ್ನೇ ಕಳೆದುಕೊಂಡವನಾಗಿ ಈ ಮಹಾ ಭಯಂಕರದಲ್ಲಿ ಬಿದ್ದಿರುವುದನ್ನು ನೋಡಿರಿ. ನಂತರ ತ್ರಿತನು ವಿಧ್ಯುಕ್ತವಾಗಿ ಮಂತ್ರಯುಕ್ತವಾದ ಯಜ್ಞದ ಭಾಗವನ್ನು (ಫಲವನ್ನು) ದೇವತೆಗಳಿಗೆ ಸಮರ್ಪಿಸಿದನು. ಅದರಿಂದ ದೇವತೆಗಳು ಸಂತೃಪ್ತರಾದರು. ತ್ರಿತನು ಮನಸ್ಸಿನಿಂದ ಬಯಸಿದ ವರಗಳನ್ನು ಕೊಟ್ಟರು. ತನ್ನನ್ನು ಈ ಬಾವಿಯಿಂದ ರಕ್ಷಿಸಲು ಹಾಗೂ ಈ ಬಾವಿಯ ನೀರನ್ನು ಕುಡಿದವರು ಸೋಮಪಾನಕ್ಕೆ ಯೋಗ್ಯವಾದ ಲೋಕಕ್ಕೆ ಹೋಗುವ ವರವನ್ನು ಪ್ರಾರ್ಥಿಸಿದನು. [೨]ಆಗ ಅಲ್ಲಿ ಸರಸ್ವತೀನದಿಯು ಭಾರೀ ತೆರೆಗಳೊಂದಿಗೆ ಎದ್ದು ಹರಿದಳು. ಆ ನೀರಿನ ಪ್ರವಾಹದಿಂದ ಮೇಲೆದ್ದ ತ್ರಿತನು ದೇವತೆಗಳನ್ನು ಪೂಜಿಸಿದನು. ಅವನು ಕೇಳಿದ ವರಗಳನ್ನು ಕೊಟ್ಟು ದೇವತೆಗಳು ಸ್ವರ್ಗಕ್ಕೆ ತೆರಳಿದರು. [೩]ತ್ರಿತನೂ ತನ್ನ ಮನೆಗೆ ಹೋಗಿ

---

ಸ ತಸ್ಯ ವರ್ತತೇ ಯಜ್ಞಃ ತತ್ರ ಗಚ್ಛಾಮಹೇ ಸುರಾಃ ।
ಸ ಹಿ ಕ್ರುದ್ಧಃ ಸೃಜೇದನ್ಯಾನ್ ದೇವಾನಪಿ ಮಹಾತಪಾಃ । - ಶ.ಪ.(೩೭/೩೦-೪೨)

೧ ಅಥಾಬ್ರವೀದ್ ಋಷಿರ್ದೇವಾನ್ ಪಶ್ಯಧ್ವಂ ತ್ರಿದಿವೌಕಸಃ ।
ಅಸ್ಮಿನ್ ಪ್ರತಿಭಯೇ ಕೂಪೇ ನಿಮಗ್ನಂ ನಷ್ಟಚೇತಸಮ್ ।
ತತೋ ಯಥಾವಿಧಿ ಪ್ರಾಪ್ತಾನ್ ಭಾಗಾನ್ ಪ್ರಾಪ್ಯ ದಿವೌಕಸಃ ।
ಪ್ರೀತಾತ್ಮಾನೋ ದದುಸ್ತಸ್ಮೈ ವರಾನ್ ಯಾನ್ ಮನಸೇಚ್ಛತಿ ।
ಸ ತು ವವ್ರೇ ವರಂ ದೇವಾನ್ ತ್ರಾತುಮರ್ಹಥ ಮಾಮಿಹ ।
ಯಶ್ಚೇಹಾಪಃ ಸ್ಪೃಶೇತ್ ಕೂಪೇ ಸ ಸೋಮಪ ಗತಿಂ ಲಭೇತ್ । - ಶ.ಪ.(೩೭/೪೬-೪೮)

೨ ತತ್ರ ಚೋರ್ಮಿಮತೀ ರಾಜನ್ನುತ್ಪಪಾತ ಸರಸ್ವತೀ ।
ತಯೋತ್ಕ್ಷಿಪ್ತಸ್ತ್ರಿತಸ್ತಸ್ಥೌ ಪೂಜಯನ್ ತ್ರಿದಿವೌಕಸಃ । - ಶ.ಪ.(೩೭/೫೦)

೩ ಕ್ರುದ್ಧಃ ಸ ತು ಸಮಾಸಾದ್ಯ ತಾವೃಷೀ ಭ್ರಾತರೌ ತದಾ ।
.................................. ಶಶಾಪ ಚ ಪರಂತಪ ॥ - ಶ.ಪ.(೩೭/೫೨)
ಪಶುಲುಬ್ಧೌ ಯುವಾಂ ಯಸ್ಮಾನ್ಮಾಮುತ್ಸೃಜ್ಯ ಪ್ರಧಾವಿತೌ ।
ತಸ್ಮಾದ್ರೂಪೇಣ ತಾಸಾಂ ವೈ ದಂಷ್ಟ್ರಿಣಾಮಭಿತಶ್ಚರೌ । - ಶ.ಪ.(೩೭/೫೩)

ತನ್ನನ್ನು ಬಿಟ್ಟು ತೆರಳಿದ ಸೋದರರನ್ನು ಕ್ರೂರಮಾತುಗಳನ್ನಾಡಿದ್ದಲ್ಲದೆ ಶಾಪ ಕೊಟ್ಟನು. 'ಪಶುಲೋಭದಿಂದಾಗಿ ನೀವು ನನ್ನನ್ನು ಬಿಟ್ಟು ಓಡಿ ಹೋದಿರಿ. ಆದ್ದರಿಂದ ನೀವೂ ಪಶುರೂಪ ಹೊಂದಿ, ಹಾಗೂ ಕೋರೆದಾಡಿಹಲ್ಲುಗಳಿಂದ ಕೂಡಿದವರಾಗಿರಿ. ನಿಮ್ಮ ಸಂತತಿಯಲ್ಲಿ ಗೋಲಾಂಗೂಲಗಳೂ, ಕರಡಿಗಳೂ, ಕಪ್ಪು ಮೂತಿಯ ಕೋತಿಗಳೂ ಹುಟ್ಟಲಿ.'

ತ್ರಿತನ ಶಾಪದಂತೆ ಏಕತ, ದ್ವಿತರು ತಕ್ಷಣ ಹಾಗೆಯೇ ರೂಪ ಹೊಂದಿದರು.

ಇಂತಹ ಉದಪಾನ ಕ್ಷೇತ್ರದಲ್ಲಿ ಬಲರಾಮನು ಸ್ನಾನದಾನಾದಿಗಳನ್ನು ಮಾಡಿ ಮುಂದೆ **ವಿನಶನ** ಕ್ಷೇತ್ರಕ್ಕೆ ಹೊರಟನು.

## ಸಂದೇಶಗಳು

೧. ಸಹೋದರ ಮಾತ್ಸರ್ಯ ಹೇಗಿರುತ್ತದೆ? ಜಾಣನಾದ ಸಹೋದರನಿಂದ ಸಂಪತ್ತು ಪಡೆದು ಅವನನ್ನೇ ನಿರ್ಲಕ್ಷಿಸಿದ ಸೋದರರ ಸ್ವಾರ್ಥದ ಬಗ್ಗೆ ಬೆಳಕನ್ನು ಚೆಲ್ಲುತ್ತದೆ. ಸಹೋದರರು ಹೇಗಿರಬಾರದೆನ್ನುವ ಸಂದೇಶ ಇಲ್ಲಿದೆ. ಸ್ವಾರ್ಥವು ತನ್ನ ಬಂಧುಗಳನ್ನು ಹಾಳಾಗಲಿ ಎಂದೂ ಬಯಸುತ್ತದೆ. ಉಪಕಾರ ಹೊಂದಿ ಪ್ರತ್ಯುಪಕಾರ ಮಾಡುವುದಿರಲಿ, ಅಪಕಾರ ಬುದ್ಧಿ ಇಲ್ಲಿ ಏಕತ, ದ್ವಿತರಲ್ಲಿ ನೋಡುತ್ತೇವೆ. ಯಾರೂ ಇವರಂತೆ ಇರಬಾರದು.

೨. ತ್ರಿತ ಜ್ಞಾನಿ, ಆಪತ್ತಿನಲ್ಲೂ ಯಜ್ಞ ಬಿಡಲಿಲ್ಲ. ನೀರೇ ಇಲ್ಲದ ಬಾವಿಯಲ್ಲಿ ಇರುವ ಸಂಪನ್ಮೂಲವನ್ನೇ ಶುದ್ಧೀಕರಿಸಿ, ಅದರಿಂದಲೇ ಯಜ್ಞ ಮಾಡಿ ಬ್ರಾಹ್ಮಣ್ಯ ಉಳಿಸಿಕೊಂಡ. ನಾವೂ ಕೂಡಾ ಅದಿಲ್ಲ ಇದಿಲ್ಲ ಎನ್ನದೇ ಇದ್ದುದರಲ್ಲೇ ನಿತ್ಯ ಪೂಜೆ ಮಾಡಿ ದೇವರನ್ನು ಸಂತೋಷ ಪಡಿಸಿದರೆ ದೇವತಾನುಗ್ರಹವಾಗುತ್ತದೆ. ನಿತ್ಯ ಕರ್ಮ ಎಂದೂ ಬಿಡಬಾರದು.

೩. ತ್ರಿತ ತನ್ನ ಸೋದರರಿಗೆ ಶಾಪ ಕೊಟ್ಟ ಅವರ ತಪ್ಪಿಗೆ. ದೊಡ್ಡವರ ದ್ರೋಹ ತಮಗೂ, ತಮ್ಮ ಮುಂದಿನ ಸಂತತಿಯು ದುಷ್ಟವಾಗಲು ಕಾರಣವಾಯಿತು. ಏಕ, ದ್ವಿತರು ತಮ್ಮ ತಪ್ಪಿಗೆ ಶಿಕ್ಷೆ ಪಡೆದರು. ಅವರು ತಪ್ಪು ಒಪ್ಪಿದ್ದರೆ ಶಿಕ್ಷೆಯಾಗುತ್ತಿರಲಿಲ್ಲ. ಮಾಡಿದ ತಪ್ಪು ಒಪ್ಪುವ ಗುಣವಿರಬೇಕು. ಇಲ್ಲದಿದ್ದರೆ ಶಿಕ್ಷೆ ತಪ್ಪಿದ್ದಲ್ಲ.

ಇತ್ಯಾದಿ...

*****

---

ಭವಿತಾರೌ ಮಯಾ ಶಪ್ತೌ ಪ್ರಾಪ್ತೇನಾನೇನ ಕರ್ಮಣಾ ।
ಪಶವಶ್ಚೈವ ಯುವಯೋರ್ಗೋಲಾಂಗೂಲರ್ಕ್ಷ ವಾನರಾಃ ॥
ತಥಾ ಭೂತಾವದೃಶ್ಯೇತಾಂ ವಚನಾತ್ ಸತ್ಯವಾದಿನಃ । - ಶ.ಪ.(೩೭/೪೬-೫೫)

## ೬೯. ಸಪ್ತಸಾರಸ್ವತತೀರ್ಥ - ಮಂಕಣಕಮುನಿಚರಿತೆ

ಬಲರಾಮನು ತೀರ್ಥಕ್ಷೇತ್ರ ಸಂದರ್ಶನ ಮಾಡುತ್ತಾ ಸಪ್ತಸಾರಸ್ವತಕ್ಷೇತ್ರಕ್ಕೆ ಬಂದನೆಂಬುದನ್ನು ಕೇಳಿದ ಜನಮೇಜಯನು ಸಪ್ತಸಾರಸ್ವತ ಎಂಬ ಹೆಸರು ಆ ತೀರ್ಥಕ್ಕೆ ಹೇಗೆ ಬಂತು ಮತ್ತು ಅಲ್ಲಿ ತಪಸ್ಸು ಮಾಡಿ ಸಿದ್ಧಿಪಡೆದ ಮಂಕಣಕ ಮುನಿಯ ಚರಿತ್ರೆಯನ್ನು ಹೇಳಲು ವೈಶಂಪಾಯರನ್ನು ಪ್ರಾರ್ಥಿಸಿದನು. ಅದಕ್ಕೆ ವೈಶಂಪಾಯನರು ಹೀಗೆ ಉತ್ತರಿಸಿದರು.

ಸರಸ್ವತೀನದಿಯನ್ನು ಮಹಾತಪಸ್ವಿಗಳು ತಮ್ಮ ತಪೋಬಲದಿಂದ ಅಲ್ಲಲ್ಲಿ ಆವಾಹಿಸಿದ್ದರಿಂದ ಏಳು ಸರಸ್ವತೀನದಿಗಳು ಉಂಟಾದವು. ಅವು ಯಾವೆಂದರೆ ೧. ಕಾಂಚನಾಕ್ಷೀ; ೨. ವಿಶಾಲಾ; ೩. ಮನೋವೃತಾ; ೪. ಓಘವತೀ(ಓಘಮಾಲಾ); ೫. ಸುವೇಣೀ; ೬. ವಿಮಲೋದಾ; ೭. ಸಪ್ತಸಾರಸ್ವತ.

ಬ್ರಹ್ಮದೇವರ ನೇತೃತ್ವದಲ್ಲಿ ಯಾಗ ನಡೆಯಿತು. ಅಲ್ಲಿ ಸಂಹಿತಾಪದ, ಕ್ರಮ, ಪಾಠರೂಪದ ವೇದಮಂತ್ರಗಳು ಉಚ್ಚರಿಸಲ್ಪಟ್ಟವು. ಯಜ್ಞದಲ್ಲಿ ಭಾಗವಹಿಸಿದ ಎಲ್ಲರಿಗೂ (ದ್ವಿಜರಿಗೆ) ಬಯಸಿದ್ದೆಲ್ಲ ಸಿಗುತ್ತಿತ್ತು. ಗಂಧರ್ವಾದಿಗಳು ಗಾನಾದಿಗಳಿಂದ ತೃಪ್ತಿ ಪಡಿಸುತ್ತಿದ್ದರು. ಆಗ ಋಷಿಗಳು ಈ ಯಜ್ಞ ಮಹಾಫಲಕಾರಿಯಾಗಿಲ್ಲ. ಕಾರಣ ಸರಸ್ವತೀನದಿ ಇಲ್ಲಿ ಹರಿಯುತ್ತಿಲ್ಲ ಎಂದರು. ಆಗ ಬ್ರಹ್ಮನು ಸರಸ್ವತೀನದಿಯನ್ನು ಸ್ಮರಿಸಿದ ಕೂಡಲೇ ಪುಷ್ಕರ ಕ್ಷೇತ್ರದಲ್ಲಿ ಉದ್ಭವವಾದಳು. ಋಷಿಗಳು ಸಂತುಷ್ಟರಾಗಿ ಈಗ ಯಜ್ಞ ಪರ್ಯಾಪ್ತವಾಯಿತೆಂದು ನುಡಿದರು.

ನೈಮಿಷಕ್ಷೇತ್ರದಲ್ಲಿ ನೆರೆದ ಮುನಿಗಳು (ಬೇರೆ ಬೇರೆ ವೇದಶಾಖೆಯ) ಸರಸ್ವತೀಯನ್ನು ಸ್ಮರಿಸಿದಾಗ, ಧ್ಯಾನಮಾಡಿದಾಗ, ಆಕೆ ಅವರೆಲ್ಲರಿಗೂ ಪುನೀತರನ್ನಾಗಿಸಲು ಉದ್ಭವಿಸಿದಳು. ಆಕೆಯು ಉದ್ಭವಗೊಂಡ ಪ್ರಕಾರ ಹೀಗಿದೆ[1] (ಉಲ್ಲೇಖ- ಅ. ೧೦/೪-೩೨).

---

೧ ಸಪ್ತನದ್ಯಃ ಸರಸ್ವತ್ಯೋ ಯಾಭಿರ್ವ್ಯಾಪ್ತಮಿದಂ ಜಗತ್ ।
ಆಹೂತಾ ಬಲವದ್ಭಿಸ್ತು ತತ್ರ ತತ್ರ ಸರಸ್ವತೀ ॥
ಸುಪ್ರಭಾ ಕಾಂಚನಾಕ್ಷೀ ಚ ವಿಶಾಲಾ ಚ ಮನೋವೃತಾ ।
ಸರಸ್ವತ್ಯೋಘಮಾಲಾ ಚ ಸುವೇಣಿರ್ವಿಮಲೋದಕಾ ॥

| ಕ್ರ.ಸಂ. | ಕ್ಷೇತ್ರ | ರೂಪ |
|---|---|---|
| ೧ | ಪುಷ್ಕರ | ಸುಪ್ರಭಾ |
| ೨ | ನೈಮಿಷ | ಕಾಂಚನಾಕ್ಷೀ |
| ೩ | ಗಯಾ | ವಿಶಾಲಾ |
| ೪ | ಉತ್ತರಕೋಸಲ | ಮನೋಽವ್ರತಾ |
| ೫ | ಕುರುಕ್ಷೇತ್ರ | ಓಘವತೀ |
| ೬ | ಗಂಗಾತೀರ (ಹರಿದ್ವಾರ) | ಸುವೇಣಿ |
| ೭ | ಹಿಮಾಲಯ | ವಿಮಲೋದಾ |

ಸಪ್ತಸಾರಸ್ವತಕ್ಷೇತ್ರವನ್ನು ತಿಳಿಸಿದ ವೈಶಂಪಾಯನರು ಮಂಕಣಕಮುನಿಯ ಬಗ್ಗೆ ವಿವರಿಸಿದರು.

ಮಂಕಣಕಮುನಿಯು ಮಾತರಿಶ್ವನಿಂದ ಸುಕನ್ಯೆಯಲ್ಲಿ ಜನಿಸಿದ ಮಗನು. ಮಹಾಜ್ಞಾನಿಯಾಗಿದ್ದನು[೧]. ಆತನು ಕುಮಾರಾವಸ್ಥೆಯಿಂದಲೇ ಬ್ರಹ್ಮಚರ್ಯ ಪರಿಪಾಲನೆ ಮಾಡುತ್ತಿದ್ದನು. ಆತನು ಒಮ್ಮೆ ಅಕಸ್ಮಾತ್ತಾಗಿ (ದೈವವಶಾತ್) ಸರಸ್ವತೀನದಿಯಲ್ಲಿ ನಗ್ನಳಾಗಿ ಸ್ನಾನ ಮಾಡುತ್ತಿದ್ದ ಸುಂದರ ಸ್ತ್ರೀಯರನ್ನು ನೋಡಿದನು. ಆಗ ಆತನೂ ನದಿಯಲ್ಲಿ ಅವಗಾಹನಸ್ನಾನ ಮಾಡುತ್ತಿದ್ದನು. ಪರಿಣಾಮವಾಗಿ ಆತನಿಗೆ ಇಂದ್ರಿಯಸ್ಖಲನವಾಗಿ ರೇತಸ್ಸು ನದೀನೀರಿನಲ್ಲಿಯೇ ಬಿತ್ತು. ಅದನ್ನು ಆತನು ಕಲಶದಲ್ಲಿ ಸಂಗ್ರಹಿಸಿದನು. ಅದು ಏಳು ಭಾಗವಾಗಿ ವಿಭಕ್ತವಾಯಿತು. ಅಲ್ಲಿ ಮರುದ್ಗಣ ದೇವತೆಗಳಿಗೆ ಮೂಲಭೂತರಾದ ಏಳು ಋಷಿಗಳು ಜನಿಸಿದರು. ಅವರು ೧. ವಾಯುವೇಗ; ೨. ವಾಯುಬಲ; ೩. ವಾಹುಹಾ; ೪. ವಾಯುಮಂಡಲ; ೫. ವಾಯುಜಾಲ; ೬. ವಾಯುರೇತ ಹಾಗೂ ೭. ವಾಯುಚಕ್ರ ಎನ್ನುವವರು[೨]. ಇವರೇ ಮರುತ್ತುಗಳಿಗೆ ಕಾರಣರಾದ ಋಷಿಗಳು. ಇದೊಂದು

---

ಏಕೀಭೂತಾಸ್ತತಸ್ತಾಸ್ತು ತಸ್ಮಿಂಸ್ತೀರ್ಥೇ ಸಮಾಗತಾಃ।
ಸಪ್ತಸಾರಸ್ವತಂ ತೀರ್ಥಂ ತತಸ್ತತ್ ಪ್ರಥಿತಂ ಭುವಿ ॥ - ಶ.ಪ.(೩೯/೩-೩೧)
೧ ಸಹಿ ಪುತ್ರಃ ಸುಕನ್ಯಾಯಾಂ ಉತ್ಪನ್ನೋ ಮಾತರಿಶ್ವನಃ ॥ - ಶ.ಪ.(೩೯/೭೨)
೨ ದೃಷ್ಟ್ವಾ ಯದೃಚ್ಛಯಾ ತತ್ರ ಸ್ತ್ರಿಯಮಂಭಸಿ ಭಾರತ।
ಸ್ನಾಯಂತೀಂ ರುಚಿರಾಕಾರಾಂ ದಿಗ್ವಾಸಸಮನಿಂದಿತಾಮ್।
ಸರಸ್ವತ್ಯಾಂ ಮಹಾರಾಜ ಚ ಸ್ಕಂದೇ ರೇತ ಅಂಭಸಿ।
ತದ್ರೇತಃ ಸ ತು ಜಗ್ರಾಹ ಕಲಶೇನ ಮಹಾತಪಾಃ।
ಋಷಿಃ ............................
ಸಪ್ತಧಾ ಪ್ರವಿಭಕ್ತಂ ತತ್ ಕಲಶಸ್ಥಂ ಜಗಾಮ ಹ।
ತರ್ತರ್ಷಯಃ ಸಪ್ತಜಾತಾ ಜಜ್ಞಿರೇಭ್ಯೋ ಮರುದ್ಗಣಾಃ।

ಆಶ್ಚರ್ಯಜನಕ ವಿಚಾರ. ಮತ್ತೊಂದು ಹೇಳುತ್ತೇನೆ ಕೇಳು.

ಹಿಂದೆ ಇದೇ ಮಂಕಣಕನ ಕೈಗೆ ದರ್ಭೆಯ ತುದಿ ತಾಗಿ ರಕ್ತ ಸುರಿಯುವ ಬದಲಾಗಿ ಶಾಕರಸ ಸುರಿಯಿತು. ಇದನ್ನು ಕಂಡು ಋಷಿ ತುಂಬಾ ಸಂತೋಷದಿಂದ ಕುಣಿದಾಡಿದನು. ಆತನ ತೇಜಸ್ಸಿನ ಮೋಹಕ್ಕೆ ಒಳಗಾಗಿ ಸ್ಥಾವರ ಜಂಗಮ ಪ್ರಪಂಚವೇ ನರ್ತಿಸಿತಂತೆ.

ಆಗ ಬ್ರಹ್ಮಾದಿ ದೇವತೆಗಳು 'ಈ ಋಷಿಯು ಕುಣಿಯದಂತೆ ಮಾಡಲು ಶಿವನಿಗೆ ಹೇಳಲು ಶಿವನು 'ಯಾವ ಕಾರಣದಿಂದ ಈ ಸ್ಥಳವು ನಿನ್ನ ಆನಂದಕ್ಕೆ ಕಾರಣವಾಯಿತು ಎಂದು ಕೇಳಿದರು. ಋಷಿಗಳು ತಮ್ಮ ಕೈಯಿಂದ ಶಾಕರಸ ಸುರಿಯುತ್ತಿರುವುದರಿಂದ ಎಂದು ಹೇಳಿದರು. ರುದ್ರದೇವರು ನನಗೆ ನಿನ್ನನ್ನು ನೋಡಿ ಆಶ್ಚರ್ಯವಾಗುತ್ತಿಲ್ಲ. ನೀನು ರಾಗಕ್ಕೆ ಒಳಗಾಗಿ ಕುಣಿಯುತ್ತಿರುವೆ (ಜ್ಞಾನಿಗೆ ರಾಗಾದಿಗಳು ಇರಬಾರದಷ್ಟೇ) ಎಂದರು. ಹೀಗೆ ಹೇಳಿ ಶಿವನು ತನ್ನ ಬೆರಳ ತುದಿಯಿಂದ ಹೆಬ್ಬೆರಳಿಗೆ ಚೆನ್ನಾಗಿ ಹೊಡೆದುಕೊಂಡರು. ಆಗ ಆ ಗಾಯದಿಂದ ಹಿಮಸದೃಶವಾದ ಭಸ್ಮ ಹೊರಬಂತು (ಆದ್ದರಿಂದ ಇದನ್ನು ನೋಡಿ ಕುಣಿಯಬೇಕೇ? ಎಂಬ ಭಾವವನ್ನು ಶಿವನು ಋಷಿಗೆ ಕೇಳಿದನು).

ಇದನ್ನು ನೋಡಿದ ಮಂಕಣಕನು ನಾಚಿಕೆಯಿಂದ ಶಿವನ ಪಾದಗಳಿಗೆ ನಮಸ್ಕರಿಸಿದನು ಮತ್ತು ಸ್ತೋತ್ರ ಮಾಡಿದನು[೧].

ಮಂಕಣಕ ಋಷಿಯ ಶಿವಸ್ತೋತ್ರ –

೧. ಇದು ರುದ್ರದೇವರೇ ಸರ್ವೋತ್ತಮನೆಂಬ ಭ್ರಾಂತಿ ಹುಟ್ಟಿಸುವಂತಿದೆ. ಅಂತಹ ಪದಗಳಿಗೆ ಅಂತರ್ಯಾಮಿ ವಿವಕ್ಷಾದಿಂದ ಅರ್ಥ ಮಾಡಿದರೆ ಯಾವುದೇ ಸಮಸ್ಯೆ ಇರದು.

---

ವಾಯುವೇಗೋ ವಾಯುಬಲೋ ವಾಯುಹಾ ವಾಯುಮಂಡಲಃ।
ವಾಯುಜಾಲೋ ವಾಯುರೇತಾ ವಾಯುಚಕ್ರಶ್ಚ ವೀರ್ಯವಾನ್ ॥ – ಶ.ಪ.(೩೯/೨೮)

೧ ಪುರಾ ಮಂಕಣಕಃ ಸಿದ್ಧಃ ಕುಶಾಗ್ರೇಣೇತಿ ವಿಶ್ರುತಃ।
ಕ್ಷತಃ ಕಿಲ ಕರೇ ರಾಜನ್ ತಸ್ಯ ಶಾಕರಸೋಽಸ್ರವತ್ ।
ತಂ ವೈ ಶಾಕರಸಂ ದೃಷ್ಟ್ವಾ ಹರ್ಷಾವಿಷ್ಟಃ ಪ್ರನೃತ್ತವಾನ್ ।
ಬ್ರಹ್ಮಾದಿಭಿಃ ಸುರೈ ರಾಜನ್.......................
ವಿಜ್ಞಪ್ತೋ ವೈ ಮಹಾದೇವ ಋಷೇರರ್ಥೇ ನರಾಧಿಪ।
ನಾಯಂ ನೃತ್ಯೇದ್ ಯಥಾ ದೇವ ತಥಾ ತ್ವಂ ಕರ್ತುಮರ್ಹಸಿ।
ಶಿವ –
ಅಹಂ ವೈ ವಿಸ್ಮಯಂ ವಿಪ್ರ ನ ಗಚ್ಛಾಮೀಹ ಪಶ್ಯ ಮಾಮ್ ।
ಅಂಗುಲ್ಯಗ್ರೇಣ ರಾಜೇಂದ್ರ ಸ್ವಾಂಗುಷ್ಠಸ್ತಾಡಿತೋ ಭೃಶಮ್ ।
ತತೋ ಭಸ್ಮಕ್ಷತಾತ್ ರಾಜನ್ ನಿರ್ಗತಂ ಹಿಮಸನ್ನಿಭಮ್ ।
ತದ್ ದೃಷ್ಟ್ವಾ ವ್ರೀಡಿತೋ ರಾಜನ್ ಸ ಪಾದಯೋರ್ನತಃ॥ – ಶ.ಪ.(೩೯/೪೧-೫೨)

೨. ಇದು ಅಸುರಮೋಹನಾರ್ಥದಿಂದಲೂ ಇರಬಹುದಾದ ಸ್ತೋತ್ರ.

೩. ಇದು ದರ್ಶನ ಭಾಷೆಯ ಒಂದು ದೃಷ್ಟಾಂತವಾಗಿಯೂ ತೆಗೆದುಕೊಳ್ಳಬಹುದು. ಆಗ ಯಾವ ಸಮಸ್ಯೆ ಇರದು.

ಶಿವಸ್ತೋತ್ರದ ಕೆಲವು ಮಾತುಗಳು -

೧. ರುದ್ರನಿಗಿಂತ ಪರತರನಾದ ಅತ್ಯುತ್ತಮದೇವತೆಯನ್ನು ನಾನು ಸುರಾಸುರರಲ್ಲಿ ತಿಳಿದಿಲ್ಲ.

೨. ನೀನೇ ಸೃಷ್ಟಿ ಹಾಗೂ ಲಯಕರ್ತಾ.

೩. ನಿನ್ನನ್ನು ದೇವತೆಗಳೂ ತಿಳಿಯಲಾರರು. ನಾನು ಹೇಗೆ ತಿಳಿಯಲು ಸಾಧ್ಯ? ಬ್ರಹ್ಮಾದಿಗಳು ನಿನ್ನನ್ನು ಆಶ್ರಯಿಸಿದ್ದಾರೆ.

೪. ಪರಮೈಶ್ವರ್ಯ ಇರುವುದರಿಂದ ನೀನೇ ಪ್ರಭು. ಬ್ರಹ್ಮ ಇಂದ್ರರು ನಿನ್ನನ್ನು ಆಶ್ರಯಿಸಿ ಲೋಕಧಾರಣೆ ಮಾಡುತ್ತಿದ್ದಾರೆ.

೫. ನೀನೇ ಜಗತ್ತಿಗೆ ಮೂಲಕಾರಣ. ನಿನ್ನಲ್ಲೇ ಜಗತ್ತೆಲ್ಲ ಲಯವಾಗುತ್ತದೆ.

೬. ದೇವತೆಗಳೆಲ್ಲ ನಿನ್ನನ್ನು ಎಲ್ಲ ರೀತಿಯಿಂದ ಪೂಜಿಸುತ್ತಾರೆ.

೭. ಸ್ಥಾವರ ಜಂಗಮಾತ್ಮಕ ಜಗತ್ತೆಲ್ಲ ನೀನೇ (ನಿನ್ನಲ್ಲಿಯೇ ಇದೆ)

೮. ತಿರುಗಿ ಬರದ ಮೋಕ್ಷವನ್ನು ನೀನೇ ಕೊಡುವೆ.

೯. ನಿನ್ನ ಅನುಗ್ರಹ ವ್ಯರ್ಥವಲ್ಲ.

೧೦. ಯಾವಾಗಲೂ, ಎಲ್ಲೆಡೆ ಇರುವ ನಿನ್ನನ್ನು ಶರಣು ಹೊಂದಿದ್ದೇನೆ.

ಹೀಗೆ ಸ್ತೋತ್ರ ಮಾಡಿ ಶಿವನನ್ನು ನಮಸ್ಕರಿಸಿದನು. ಮತ್ತು ನಿನ್ನ ಪ್ರಸಾದದಿಂದ ನನ್ನ ತಪಸ್ಸು ನಾಶವಾಗದಿರಲಿ ಎಂದು ಬೇಡಿದಾಗ ಮಹದೇವನು 'ನನ್ನ ಅನುಗ್ರಹದಿಂದ ನಿನ್ನ ತಪಸ್ಸು ಸಾವಿರ ಪಟ್ಟು ಹೆಚ್ಚಲಿ. ನಾನು ನಿನ್ನ ಆಶ್ರಯದಲ್ಲಿ ನಿನ್ನ ಜೊತೆಗೆ ಇರುವೆ. ಸಪ್ತಸಾರಸ್ವತ ಕ್ಷೇತ್ರದಲ್ಲಿ ಯಾರು ಪೂಜಿಸುತ್ತಾರೋ (ನನ್ನನ್ನು) ಅಂತಹವರಿಗೆ ಈ ಲೋಕದಲ್ಲಿ ಪರಲೋಕದಲ್ಲಿ ಸಿಗದ ಪದಾರ್ಥಗಳು ಯಾವುದೂ ಇಲ್ಲ. ಅಂತಹವರು ಸಾರಸ್ವತಲೋಕಕ್ಕೆ ಹೋಗುತ್ತಾರೆ ಇದರಲ್ಲಿ ಸಂಶಯವಿಲ್ಲ.

ಇದುವೇ ಮಂಕಣಕ ಋಷಿಯ ಚರಿತ್ರೆ ಎಂದು ವೈಶಂಪಾಯನರು ಜನಮೇಜಯನಿಗೆ ಹೇಳಿದರು:

ಮಂಕಣಕ ಋಷಿ ಮಾಡಿದ ಶಿವಸ್ತುತಿ -

ನಾನ್ಯಂ ದೈವಮಹಂ ಮನ್ಯೇ ರುದ್ರಾತ್ ಪರತರಂ ಮಹತ್ ।
ಸುರಾಸುರೇಷು ಜಗತೋ ಗತಿಸ್ತ್ವಮಸಿ ಶೂಲಧೃಕ್ ।
ದೇವೈರಪಿ ನ ಶಕ್ಯಸ್ತ್ವಂ ಪರಿಜ್ಞಾತುಂ ಕುತೋ ಮಯಾ ।
ತ್ವಯಿ ಸರ್ವೇಶ ದೃಶ್ಯಂತೇ ಸುರಾ ಬ್ರಹ್ಮಾದಯೋಽನಘ ।
ಸರ್ವಸ್ತ್ವಮಸಿ ದೇವಾನಾಂ ಕರ್ತಾ ಕಾರಯಿತಾ ಚ ಹ ।
ತ್ವತ್ಪ್ರಸಾದಾತ್ ಸುರಾಃ ಸರ್ವೇ ಮೋದಂತೇ ಹ್ಯಕುತೋಭಯಾಃ ।
ತ್ವಂ ಪ್ರಭುಃ ಪರಮೈಶ್ವರ್ಯಾತ್ ಅಧಿಕಂ ಭಾಸಿ ಶಂಕರ ।
ತ್ವಯಿ ಬ್ರಹ್ಮಾ ಚ ಶಕ್ರಶ್ಚ ಲೋಕಾನ್ ಸಂಧಾರ್ಯ ತಿಷ್ಠತಃ ।
ತ್ವನ್ಮೂಲಂ ಚ ಜಗತ್ಸರ್ವಂ ತ್ವದಂತಂ ಚ ಮಹೇಶ್ವರ ।
ತ್ವಯಾ ಹಿ ವಿತತಾ ಲೋಕಾಃ ಸಪ್ತಮೇ ಸರ್ವ ಸಂಭವ ।
ಅನಾವೃತ್ತಿಂ ಪದಂ ನೄಣಾಂ ನಿತ್ಯಂ ನಿಃಶ್ರೇಯಸಾರ್ಥಿನಾಮ್ ।
ನ ವೃಥಾಽಸ್ತಿ ಮಹಾದೇವ ಪ್ರಸಾದಸ್ತೇ ಮಹೇಶ್ವರ ।
ಪ್ರಪದ್ಯೇ ಶರಣಂ ಶಂಭುಂ ಸರ್ವದಾ ಸರ್ವತಃ ಸ್ಥಿತಮ್ ।
ಭಗವನ್ ತ್ವತ್ಪ್ರಸಾದಾತ್ ತಪೋ ಮೇ ನ ಕ್ಷರೇದಿತಿ ।

ಶಿವ -

ತಪಸ್ತೇ ವರ್ಧತಾಂ ವಿಪ್ರ ಮತ್ಪ್ರಸಾದಾತ್ ಸಹಸ್ರಧಾ ।
ಆಶ್ರಮೇ ಚೇಹ ವತ್ಸ್ಯಾಮಿ ತ್ವಯಾ ಸಾರ್ಧಂ ಅಹಂ ಸದಾ । -೧೦/೫೩-೭೨

## ಸಂದೇಶಗಳು

೧. ಬ್ರಹ್ಮದೇವರಿಂದ ಮಾಡಲ್ಪಟ್ಟ ಯಜ್ಞ ಅತಿ ಪವಿತ್ರ. ಮಹಾಫಲಕೊಡುವ ಸಾಮರ್ಥ್ಯವುಳ್ಳದಾಗಿದ್ದರೂ, ಅಲ್ಲಿನ ಋಷಿಗಳು ಸರಸ್ವತೀ ಇಲ್ಲದ್ದರಿಂದ ಆ ಮಹಾಫಲ ಇಲ್ಲವೆಂದಾಗ ಅವರು ಅದನ್ನು ನಿರಾಕರಿಸದೆ ಋಷಿಗಳ ಮೇಲೆ ಕರುಣೆಯಿಂದ ಸರಸ್ವತೀ-ಯನ್ನು ಅಲ್ಲಿಗೆ ಕರೆತರುತ್ತಾರೆ. ಅವರ ಮಾತಿಗೆ ಬೆಲೆ ಕೊಡುತ್ತಾರೆ. ದೊಡ್ಡವರು ಸಣ್ಣವರ ಮಾತಿಗೆ ಬೆಲೆ ಕೊಟ್ಟರೆ ಅವರು ಇನ್ನೂ ದೊಡ್ಡವರಾಗುತ್ತಾರೆ.

೨. ಸರಸ್ವತೀ ನದಿಯ ಏಳು ಶಾಖೆಗಳ ಸನ್ನಿಧಾನ ಸಪ್ತಸಾರಸ್ವತ ಕ್ಷೇತ್ರದಲ್ಲಿದೆ. ಅದನ್ನು ಬ್ರಹ್ಮದೇವರೇ ಅನುಗ್ರಹಿಸುತ್ತಾರೆ.

೩. ಮಂಕಣಕ ಕುಮಾರನಾಗಿರುವಾಗಿನಿಂದಲೂ ಬ್ರಹ್ಮಚರ್ಯೆ ಕಾಪಾಡಿಕೊಂಡು ಬಂದರೂ ಸ್ತ್ರೀಯರ ದರ್ಶನ, (ಅದರಲ್ಲೂ ವಸ್ತ್ರರಹಿತ) ರೇತಸ್ಖಲನೆಗೆ ಕಾರಣವಾಯಿತು. ಕಾಮದ ಪರಿಣಾಮ ಯಾರನ್ನೂ ಬಿಡದು. ಆದರೂ ಅವರ ರೇತಸ್ಸು ಮುಂದೆ ಸಪ್ತರ್ಷಿಗಳ

ಜನನಕ್ಕೆ ಕಾರಣ, ಅವರು ಮರುದ್ಗಣ ಜನನಕ್ಕೆ ಕಾರಣವಾಯಿತು. ದೊಡ್ಡವರ ಕಾಮವೂ ಮುಂದೆ ಒಳ್ಳೆಯ ಸಾಧನೆಗೆ, ದೊಡ್ಡ ವ್ಯಕ್ತಿಗಳ, ದೇವತೆಗಳ ಅವತಾರಕ್ಕೆ ಕಾರಣವಾಗುತ್ತದೆ (ದ್ರೋಣ, ದ್ರುಪದ, ಕೃಪ, ಕೃಪಿ ಮೊದಲಾದವರ ಹುಟ್ಟುಗಳೂ ಹೀಗೆಯೇ ಇವೆ).

೪. ಶಿವನ ಮಾತಿಗೆ ಬೆಲೆ ಕೊಟ್ಟ ಗೌರವಿಸಿ ನರ್ತಿಸುವುದನ್ನೇ ನಿಲ್ಲಿಸುತ್ತಾರೆ. ಸ್ತೋತ್ತಮರು ಬೇಡವೆಂದುದನ್ನು ಮಾಡಕೂಡದು.

೫. ಮಂಕಣಕರ ಶಿವಸ್ತುತಿ ಅಸುರಮೋಹಕ, ದರ್ಶನಭಾಷೆಯದು. ಅಂತರ್ಯಾಮಿ ಭಗವಂತನ ಸ್ತುತಿ. ಸ್ವಲ್ಪಮಟ್ಟಿಗೆ ಮಿಶ್ರಸ್ತುತಿ ಎಂದೂ ಕರೆಯಬಹುದು.

೬. ಮಂಕಣಕರ ಸ್ತುತಿಗೆ ಒಲಿದು ಅವರ ಆಶ್ರಮದಲ್ಲಿಯೇ ಒಂದುರೂಪದಿಂದ ಇರುವ ಅನುಗ್ರಹ, ಮಹಾ ಅನುಗ್ರಹವೇ ಸರಿ. ಬಲಿಚಕ್ರವರ್ತಿಗೆ ವಾಮನದೇವರು ಅನುಗ್ರಹಿಸಿದಂತೆ. (ರುದ್ರದೇವರ ಭಕ್ತವಾತ್ಸಲ್ಯ ಭಗವಂತನಂತೇ) ಸುತಲಲೋಕದಲ್ಲಿ ದ್ವಾರಪಾಲಕನಾಗಿ ಬಲಿ ರಕ್ಷಣೆಯನ್ನು ಇಂದೂ ಮಾಡುತ್ತಿದ್ದಾನಲ್ಲ, ಇದೂ ಅಂತಹುದೇ ಉದಾಹರಣೆ.

ಇತ್ಯಾದಿ....

## ೭೦. ಬಕಮುನಿ ಚರಿತ್ರೆ

ಬಲರಾಮನು ವಿಶ್ವಾಮಿತ್ರನು ತಪಸ್ಸನ್ನು ಮಾಡಿ ಬ್ರಹ್ಮದೇವರಿಂದ ವರ ಪಡೆದು ಬ್ರಾಹ್ಮಣ್ಯವನ್ನು ಸಂಪಾದಿಸಿದ ಸರಸ್ವತೀನದಿಯಲ್ಲಿರುವ ತೀರ್ಥಕ್ಕೆ ಆಗಮಿಸಿ, ಅಲ್ಲಿ ಅನೇಕ ವಿಧವಾದ ದಾನಾದಿಗಳನ್ನು ಮಾಡಿ, ಅದರ ಹತ್ತಿರವಿದ್ದ ಬಕಾಶ್ರಮಕ್ಕೆ ಹೋದನು (ಅ.೧೨). ಬಕ ದಲ್ಬ ಮುನಿಯ ಮಗ. ಆತನು ಅಲ್ಲಿ ತೀವ್ರ ತಪಸ್ಸನ್ನು ಮಾಡಿದ್ದನು. ಬಕ ಮುನಿಯ ಬಗ್ಗೆ ವೈಶಂಪಾಯನರು ಹೀಗೆ ನಿರೂಪಿಸುತ್ತಾರೆ.

ಹಿಂದೆ ನೈಮಿಷಕ್ಷೇತ್ರವಾಸಿ ಋಷಿಗಳು ಹನ್ನೆರಡು ವರ್ಷದ ಸತ್ರ ನಡೆಸಿದರು. ಅದರಂಗವಾಗಿ **ವಿಶ್ವಜಿತ್** ಎಂಬ ಸರ್ವಸ್ವದಕ್ಷಿಣೆ ಕೊಡಬೇಕಾದ ಯಾಗವನ್ನು ಮಾಡಿ, ಯಾಗದ ಕೊನೆಗೆ ದಕ್ಷಿಣೆಗಾಗಿ ಪಾಂಚಾಲ ದೇಶದ ರಾಜನನ್ನು ಯಾಚಿಸಿದರು. ಆಗ ರಾಜನು ಬಲಶಾಲಿಗಳಾದ ನಿರೋಗಿಗಳಾದ ಒಂದು ವರ್ಷದ ಉತ್ತಮವಾದ ಇಪ್ಪತ್ತೇಳು ಕರುಗಳನ್ನು ಕೊಟ್ಟನು. ದಲ್ಬನ ಮಗನಾದ ಬಕಮುನಿಯು (ದಾಲ್ಭ್ಯನು) ಈ ಕರುಗಳನ್ನು ನೀವೇ ಹಂಚಿಕೊಳ್ಳಿರೆಂದು ಉಳಿದ ಋಷಿಗಳಿಗೆ ಹೇಳಿ ತಾನು ಬೇರೆ ರಾಜನಲ್ಲಿ ಭಿಕ್ಷೆ ಕೇಳುತ್ತೇನೆ (ಬೇಡುತ್ತೇನೆ) ಎಂದು ಹೇಳಿದನು.

ನಂತರ ಬಕನು ಧೃತರಾಷ್ಟ್ರ ಎಂಬ ರಾಜನ ಅರಮನೆಗೆ ಹೋಗಿ ಪಶುಗಳನ್ನು ದಾನವಾಗಿ ಕೇಳಿದನು. ರಾಜ ಧೃತರಾಷ್ಟ್ರನು ತನ್ನಲ್ಲಿದ್ದ ಪಶುಗಳು ಅಕಸ್ಮಾತ್ತಾಗಿ ಸತ್ತು ಹೋಗಿವೆ. ಅವನ್ನು ನೋಡಿ ಬಕನಿಗೆ 'ಎಲೈ ಬ್ರಾಹ್ಮಣಾಧಮನೇ!(ಬ್ರಹ್ಮಬಂಧುವೇ) ಈ ಸತ್ತು ಹೋದ ಪಶುಗಳನ್ನೇ ನೀನು ಬಯಸಿದ್ದಲ್ಲಿ ತೆಗೆದುಕೊಂಡು ಹೋಗು' ಎಂದು ಕೋಪದಿಂದ ಹೇಳಿದನು[೧].

ಬಕನಿಗೆ ತುಂಬಾ ಕೋಪ ಬಂತು. ಸಭಾಮಧ್ಯದಲ್ಲಿ ಎಂತಹ ಕ್ರೂರ ಮಾತನ್ನು ಕೇಳಿದೆನಲ್ಲ(ನನ್ನ ಯಾವುದೇ ತಪ್ಪಿಲ್ಲದೇ). ಹೀಗೆ ಒಂದು ಮುಹೂರ್ತ ವಿಚಾರ ಮಾಡಿ, ಕೋಪಾವೇಶದಿಂದ ಬಕನೂ ಕೂಡಾ ಧೃತರಾಷ್ಟ್ರನ ರಾಷ್ಟ್ರನಾಶವಾಗಲೆಂದು ನಿಶ್ಚಯಿಸಿ,

---

೧ ಸ ಸಮೀಪಂ ಗತೋ ಭೂತ್ವಾ ಧೃತರಾಷ್ಟ್ರಂ ನರೇಶ್ವರಮ್ ।
ಅಯಾಚತ ಪಶೂನ್ ದಾಲ್ಭ್ಯಃ ಸ ಚೈನಂ ರೂಕ್ಷಿತೋಽಬ್ರವೀತ್ ।
ಏತಾನ್ ಪಶೂನ್ ನಯ ಕ್ಷಿಪ್ರಂ ಬ್ರಹ್ಮಬಂಧೋ ಯದಿಚ್ಛಸಿ । - ೧೩/(೪-೭)೮-೧೦

ರಾಜ ತೆಗೆದುಕೊಂಡು ಹೋಗೆಂದ ಸತ್ತ ಗೋವುಗಳ ಮಾಂಸವನ್ನೇ ಕಿತ್ತು ತೆಗೆದುಕೊಂಡು ಸರಸ್ವತೀತೀರ್ಥದ ತೀರದಲ್ಲಿ ಅಗ್ನಿಯನ್ನು ಪ್ರಜ್ವಲಗೊಳಿಸಿ ಹೋಮವನ್ನು ಮಾಡಿದನು. ಹೀಗೆ ವಿಧ್ಯುಕ್ತವಾಗಿ ಯಾಗ ನಡೆಯುತ್ತಿರಲು ರಾಷ್ಟ್ರವು ಕ್ಷೀಣಿಸಲಾರಂಭಿಸಿತು. ನಿಶಿತವಾದ ಕೊಡಲಿಗೆ ಸಿಕ್ಕ ಕಾಡಿನ ಮರಗಳಂತೆ ರಾಷ್ಟ್ರವು ನಾಶವಾಯಿತು[೧].

ಇದನ್ನು ನೋಡಿದ ರಾಜನು ದುಗುಡಗೊಂಡನು. ದುಃಖಿಸಿದನು. ತನ್ನ ಬ್ರಾಹ್ಮಣ ಪುರೋಹಿತರೊಡನೆ ಇದಕ್ಕೆ ಪರಿಹಾರವನ್ನು ಯೋಚಿಸಿ ಪ್ರಯತ್ನಿಸಿದರೂ ರಾಜ್ಯ ಕ್ಷೀಣಿಸುತ್ತಾ ಹೋಯಿತು.

ನಂತರ ರಾಜನು ದೈವಜ್ಞರನ್ನು(ವಿಪ್ರಶ್ನಿಕರನ್ನು) ಇದಕ್ಕೆ ಪರಿಹಾರ ಕೇಳಿದ. ಅವರು ಬಕರಿಗೆ ನೀನು ಸತ್ತ ಪಶುಗಳನ್ನು ತೆಗೆದುಕೊಂಡು ಹೋಗು ಎಂದು ಹೇಳಿ, ಶಾಸ್ತ್ರವಿರುದ್ಧವಾಗಿ ವರ್ತಿಸಿದೆ(ಬ್ರಾಹ್ಮಣಾವಮಾನವಾಗಿದೆ). ಆತನು ಗೋಮಾಂಸದಿಂದ ನಿನ್ನ ರಾಷ್ಟ್ರನಾಶಕ್ಕಾಗಿ ಹೋಮ ಮಾಡುತ್ತಿದ್ದಾನೆ. ಇದೆಲ್ಲ ಬಕನ ತಪೋ ಮಹಿಮೆ. ಇದರ ಪರಿಹಾರಕ್ಕಾಗಿ ನೀನು ಬಕ ಮುನಿಯ ಬಳಿಗೆ ಹೋಗಿ, ಅವರನ್ನು ಸಮಾಧಾನಿಸು, ಅನುಗ್ರಹ ಪಡೆ ಎಂದು ಹೇಳಿದರು[೨].

ದೈವಜ್ಞರ ಅನುಮತಿ ಪಡೆದು ರಾಜನು ಬಕರ ಬಳಿ ಹೋಗಿ ಮೂರ್ಖತನದಿಂದ ಬುದ್ಧಿಗೇಡಿಯಾದ, ದೀನನಾದ, ಲೋಭಿಯಾದ ನಾನು ಮಾಡಿದ ಅಪರಾಧವನ್ನು ಕ್ಷಮಿಸಿರಿ. ನೀವೇ ನನಗೆ ಗತಿ. ಸ್ವಾಮಿ, ಅನುಗ್ರಹ ಮಾಡಿ ಎಂದು ದುಃಖದಿಂದ ಅಳುತ್ತಾ ಬೇಡಿಕೊಂಡಾಗ ಬಕರು ಕರುಣೆಯಿಂದ ಮತ್ತೆ ರಾಜನ ರಾಷ್ಟ್ರದ ಪುನರ್ನಿರ್ಮಾಣಕ್ಕೆ (ಆಪತ್ತಿನಿಂದ ಬಿಡುಗಡೆಗಾಗಿ) ಮತ್ತೆ ಹೋಮವನ್ನು ಆಚರಿಸಿ, ರಾಷ್ಟ್ರವನ್ನು ನಾಶದಿಂದ ಮೋಚನಗೊಳಿಸಿ, ಪಶುಗಳನ್ನು ರಾಜನಿಂದ ಪಡೆದು (ದಾನ) ನೈಮಿಷಾರಣ್ಯಕ್ಕೆ ಹೋದರು[೩].

---

೧ ಅಹೋ ಬತ ನೃಶಂಸ್ಯಂ ವೈ ವಾಕ್ಯಮುಕ್ತೋಽಸ್ಮಿ ಸಂಸದಿ।
ಮತಿಂ ಚಕ್ರೇ ವಿನಾಶಾಯ ಧೃತರಾಷ್ಟ್ರಸ್ಯ ಭಾರತ।
ಉತ್ಕೃತ್ಯ ತು ಮೃತಾ ಗಾ ವೈ ಮಾಂಸಾನಿ ದ್ವಿಜಸತ್ತಮ।
ಜುಹಾವ ಧೃತರಾಷ್ಟ್ರಸ್ಯ ರಾಷ್ಟ್ರಂ ನರಪತೇಃ ಪರಮ್।
ಅಕ್ಷೀಯತ ತತೋ ರಾಷ್ಟ್ರಂ ಧೃತರಾಷ್ಟ್ರಸ್ಯ ಪಾರ್ಥಿವ॥ - ೪೨/೧೨-೧೭

೨ ತತೋ ವಿಪ್ರಶ್ನಿಕಾಃ ಪ್ರಾಹುಃ ಪಶುವಿಪ್ರಕೃತಸ್ತ್ವಯಾ।
ಮಾಂಸೈರಥ ಜುಹೋತೀದಂ ತವ ರಾಷ್ಟ್ರಂ ಮುನಿರ್ಬಕಃ।
ತೇನ ತೇ ಹೂಯಮಾನಸ್ಯ ರಾಷ್ಟ್ರಸ್ಯಾಸೀತ್ ಕ್ಷಯೋ ಮಹಾನ್।
ತಸ್ಯ ತತ್ತಪಸಃ ಕರ್ಮಯೇನ ತೇ ಹ್ಯನಯೋ ಮಹಾನ್।
ಯದೀಚ್ಛಸಿ ಮಹಾಬಾಹೋ ಶಾಂತಿಂ ರಾಷ್ಟ್ರಸ್ಯ ಭೂಮಿಪ।
ಅಪಾಂ ಕೂಲೇ ಸರಸ್ವತ್ಯಾಃ ತಂ ಪ್ರಸಾದಯ ಪಾರ್ಥಿವ॥ - ೪೨/೨೩-೨೫

೩ ಪ್ರಸಾದಯೇ ತ್ವಾಂ ಭಗವನ್ನಪರಾಧಂ ಕ್ಷಮಸ್ವ ಮೇ।
ಮಮ ದೀನಸ್ಯ ಲುಬ್ಧಸ್ಯ ಮೌರ್ಖ್ಯೇಣ ಹತಚೇತಸಃ।

## ೭೦. ಬಕಮುನಿ ಚರಿತ್ರೆ

ಬಲರಾಮನು ವಿಶ್ವಾಮಿತ್ರನು ತಪಸ್ಸನ್ನು ಮಾಡಿ ಬ್ರಹ್ಮದೇವರಿಂದ ವರ ಪಡೆದು ಬ್ರಾಹ್ಮಣ್ಯವನ್ನು ಸಂಪಾದಿಸಿದ ಸರಸ್ವತೀನದಿಯಲ್ಲಿರುವ ತೀರ್ಥಕ್ಕೆ ಆಗಮಿಸಿ, ಅಲ್ಲಿ ಅನೇಕ ವಿಧವಾದ ದಾನಾದಿಗಳನ್ನು ಮಾಡಿ, ಅದರ ಹತ್ತಿರವಿದ್ದ ಬಕಾಶ್ರಮಕ್ಕೆ ಹೋದನು (ಅ.೧೨). ಬಕ ದಲ್ಬ ಮುನಿಯ ಮಗ. ಆತನು ಅಲ್ಲಿ ತೀವ್ರ ತಪಸ್ಸನ್ನು ಮಾಡಿದ್ದನು. ಬಕ ಮುನಿಯ ಬಗ್ಗೆ ವೈಶಂಪಾಯನರು ಹೀಗೆ ನಿರೂಪಿಸುತ್ತಾರೆ.

ಹಿಂದೆ ನೈಮಿಷಕ್ಷೇತ್ರವಾಸಿ ಋಷಿಗಳು ಹನ್ನೆರಡು ವರ್ಷದ ಸತ್ರ ನಡೆಸಿದರು. ಅದರಂಗವಾಗಿ **ವಿಶ್ವಜಿತ್** ಎಂಬ ಸರ್ವಸ್ವದಕ್ಷಿಣೆ ಕೊಡಬೇಕಾದ ಯಾಗವನ್ನು ಮಾಡಿ, ಯಾಗದ ಕೊನೆಗೆ ದಕ್ಷಿಣೆಗಾಗಿ ಪಾಂಚಾಲ ದೇಶದ ರಾಜನನ್ನು ಯಾಚಿಸಿದರು. ಆಗ ರಾಜನು ಬಲಶಾಲಿಗಳಾದ ನಿರೋಗಿಗಳಾದ ಒಂದು ವರ್ಷದ ಉತ್ತಮವಾದ ಇಪ್ಪತ್ತೇಳು ಕರುಗಳನ್ನು ಕೊಟ್ಟನು. ದಲ್ಬನ ಮಗನಾದ ಬಕಮುನಿಯು (ದಾಲ್ಭ್ಯನು) ಈ ಕರುಗಳನ್ನು ನೀವೇ ಹಂಚಿಕೊಳ್ಳಿರೆಂದು ಉಳಿದ ಋಷಿಗಳಿಗೆ ಹೇಳಿ ತಾನು ಬೇರೆ ರಾಜನಲ್ಲಿ ಭಿಕ್ಷೆ ಕೇಳುತ್ತೇನೆ (ಬೇಡುತ್ತೇನೆ) ಎಂದು ಹೇಳಿದನು.

ನಂತರ ಬಕನು ಧೃತರಾಷ್ಟ್ರ ಎಂಬ ರಾಜನ ಅರಮನೆಗೆ ಹೋಗಿ ಪಶುಗಳನ್ನು ದಾನವಾಗಿ ಕೇಳಿದನು. ರಾಜ ಧೃತರಾಷ್ಟ್ರನು ತನ್ನಲ್ಲಿದ್ದ ಪಶುಗಳು ಆಕಸ್ಮಾತ್ತಾಗಿ ಸತ್ತು ಹೋಗಿವೆ. ಅವನ್ನು ನೋಡಿ ಬಕನಿಗೆ 'ಎಲೈ ಬ್ರಾಹ್ಮಣಾಧಮನೇ!(ಬ್ರಹ್ಮಬಂಧುವೇ) ಈ ಸತ್ತು ಹೋದ ಪಶುಗಳನ್ನೇ ನೀನು ಬಯಸಿದ್ದಲ್ಲಿ ತೆಗೆದುಕೊಂಡು ಹೋಗು' ಎಂದು ಕೋಪದಿಂದ ಹೇಳಿದನು[1].

ಬಕನಿಗೆ ತುಂಬಾ ಕೋಪ ಬಂತು. ಸಭಾಮಧ್ಯದಲ್ಲಿ ಎಂತಹ ಕ್ರೂರ ಮಾತನ್ನು ಕೇಳಿದೆನಲ್ಲ(ನನ್ನ ಯಾವುದೇ ತಪ್ಪಿಲ್ಲದೇ). ಹೀಗೆ ಒಂದು ಮುಹೂರ್ತ ವಿಚಾರ ಮಾಡಿ, ಕೋಪಾವೇಶದಿಂದ ಬಕನೂ ಕೂಡಾ ಧೃತರಾಷ್ಟ್ರನ ರಾಷ್ಟ್ರನಾಶವಾಗಲೆಂದು ನಿಶ್ಚಯಿಸಿ,

---

೧ ಸ ಸಮೀಪಂ ಗತೋ ಭೂತ್ವಾ ಧೃತರಾಷ್ಟ್ರಂ ನರೇಶ್ವರಮ್ ।
ಅಯಾಚತ ಪಶೂನ್ ದಾಲ್ಭ್ಯಃ ಸ ಚೈನಂ ರೂಕ್ಷಿತೋಽಬ್ರವೀತ್ ।
ಏತಾನ್ ಪಶೂನ್ ನಯ ಕ್ಷಿಪ್ರಂ ಬ್ರಹ್ಮಬಂಧೋ ಯದಿಚ್ಛಸಿ । - ೧೩/(೪-೭)೮-೧೦

ರಾಜ ತೆಗೆದುಕೊಂಡು ಹೋಗೆಂದ ಸತ್ತ ಗೋವುಗಳ ಮಾಂಸವನ್ನೇ ಕಿತ್ತು ತೆಗೆದುಕೊಂಡು ಸರಸ್ವತೀತೀರ್ಥದ ತೀರದಲ್ಲಿ ಅಗ್ನಿಯನ್ನು ಪ್ರಜ್ವಲಗೊಳಿಸಿ ಹೋಮವನ್ನು ಮಾಡಿದನು. ಹೀಗೆ ವಿಧ್ಯುಕ್ತವಾಗಿ ಯಾಗ ನಡೆಯುತ್ತಿರಲು ರಾಷ್ಟ್ರವು ಕ್ಷೀಣಿಸಲಾರಂಭಿಸಿತು. ನಿಶಿತವಾದ ಕೊಡಲಿಗೆ ಸಿಕ್ಕ ಕಾಡಿನ ಮರಗಳಂತೆ ರಾಷ್ಟ್ರವು ನಾಶವಾಯಿತು[೧].

ಇದನ್ನು ನೋಡಿದ ರಾಜನು ದುಗುಡಗೊಂಡನು. ದುಃಖಿಸಿದನು. ತನ್ನ ಬ್ರಾಹ್ಮಣ ಪುರೋಹಿತರೊಡನೆ ಇದಕ್ಕೆ ಪರಿಹಾರವನ್ನು ಯೋಚಿಸಿ ಪ್ರಯತ್ನಿಸಿದರೂ ರಾಜ್ಯ ಕ್ಷೀಣಿಸುತ್ತಾ ಹೋಯಿತು.

ನಂತರ ರಾಜನು ದೈವಜ್ಞರನ್ನು(ವಿಪ್ರಶ್ನಿಕರನ್ನು) ಇದಕ್ಕೆ ಪರಿಹಾರ ಕೇಳಿದ. ಅವರು ಬಕರಿಗೆ ನೀನು ಸತ್ತ ಪಶುಗಳನ್ನು ತೆಗೆದುಕೊಂಡು ಹೋಗು ಎಂದು ಹೇಳಿ, ಶಾಸ್ತ್ರವಿರುದ್ಧವಾಗಿ ವರ್ತಿಸಿದೆ(ಬ್ರಾಹ್ಮಣಾವಮಾನವಾಗಿದೆ). ಆತನು ಗೋಮಾಂಸದಿಂದ ನಿನ್ನ ರಾಷ್ಟ್ರನಾಶಕ್ಕಾಗಿ ಹೋಮ ಮಾಡುತ್ತಿದ್ದಾನೆ. ಇದೆಲ್ಲ ಬಕನ ತಪೋ ಮಹಿಮೆ. ಇದರ ಪರಿಹಾರಕ್ಕಾಗಿ ನೀನು ಬಕ ಮುನಿಯ ಬಳಿಗೆ ಹೋಗಿ, ಅವರನ್ನು ಸಮಾಧಾನಿಸು, ಅನುಗ್ರಹ ಪಡೆ ಎಂದು ಹೇಳಿದರು[೨].

ದೈವಜ್ಞರ ಅನುಮತಿ ಪಡೆದು ರಾಜನು ಬಕರ ಬಳಿ ಹೋಗಿ ಮೂರ್ಖತನದಿಂದ ಬುದ್ಧಿಗೇಡಿಯಾದ, ದೀನನಾದ, ಲೋಭಿಯಾದ ನಾನು ಮಾಡಿದ ಅಪರಾಧವನ್ನು ಕ್ಷಮಿಸಿರಿ. ನೀವೇ ನನಗೆ ಗತಿ. ಸ್ವಾಮಿ, ಅನುಗ್ರಹ ಮಾಡಿ ಎಂದು ದುಃಖದಿಂದ ಅಳುತ್ತಾ ಬೇಡಿಕೊಂಡಾಗ ಬಕರು ಕರುಣೆಯಿಂದ ಮತ್ತೆ ರಾಜನ ರಾಷ್ಟ್ರದ ಪುನರ್ನಿರ್ಮಾಣಕ್ಕೆ (ಆಪತ್ತಿನಿಂದ ಬಿಡುಗಡೆಗಾಗಿ) ಮತ್ತೆ ಹೋಮವನ್ನು ಆಚರಿಸಿ, ರಾಷ್ಟ್ರವನ್ನು ನಾಶದಿಂದ ಮೋಚನಗೊಳಿಸಿ, ಪಶುಗಳನ್ನು ರಾಜನಿಂದ ಪಡೆದು (ದಾನ) ನೈಮಿಷಾರಣ್ಯಕ್ಕೆ ಹೋದರು[೩].

---

೧ ಅಹೋ ಬತ ನೃಶಂಸ್ಯಂ ವೈ ವಾಕ್ಯಮುಕ್ತೋಽಸ್ಮಿ ಸಂಸದಿ।
ಮತಿಂ ಚಕ್ರೇ ವಿನಾಶಾಯ ಧೃತರಾಷ್ಟ್ರಸ್ಯ ಭಾರತ।
ಉತ್ಕೃತ್ಯ ತು ಮೃತಾ ಗಾ ವೈ ಮಾಂಸಾನಿ ದ್ವಿಜಸತ್ತಮ।
ಜುಹಾವ ಧೃತರಾಷ್ಟ್ರಸ್ಯ ರಾಷ್ಟ್ರಂ ನರಪತೇಃ ಪರಮ್।
ಅಕ್ಷೀಯತ ತತೋ ರಾಷ್ಟ್ರಂ ಧೃತರಾಷ್ಟ್ರಸ್ಯ ಪಾರ್ಥಿವ॥ - ೪೨/೧೨-೧೭

೨ ತತೋ ವಿಪ್ರಶ್ನಿಕಾಃ ಪ್ರಾಹುಃ ಪಶುವಿಪ್ರಕೃತಸ್ತ್ವಯಾ।
ಮಾಂಸೈರಥ ಜುಹೋತೀದಂ ತವ ರಾಷ್ಟ್ರಂ ಮುನಿರ್ಬಕಃ।
ತೇನ ತೇ ಹೂಯಮಾನಸ್ಯ ರಾಷ್ಟ್ರಸ್ಯಾಸೀತ್ ಕ್ಷಯೋ ಮಹಾನ್।
ತಸ್ಯ ತತ್ತಪಸಃ ಕರ್ಮಯೇನ ತೇ ಹ್ಯನಯೋ ಮಹಾನ್।
ಯದೀಚ್ಛಸಿ ಮಹಾಬಾಹೋ ಶಾಂತಿಂ ರಾಷ್ಟ್ರಸ್ಯ ಭೂಮಿಪ।
ಅಪಾಂ ಕೂಲೇ ಸರಸ್ವತ್ಯಾಃ ತಂ ಪ್ರಸಾದಯ ಪಾರ್ಥಿವ॥ - ೪೨/೨೩-೨೫

೩ ಪ್ರಸಾದಯೇ ತ್ವಾಂ ಭಗವನ್ನಪರಾಧಂ ಕ್ಷಮಸ್ವ ಮೇ।
ಮಮ ದೀನಸ್ಯ ಲುಬ್ಧಸ್ಯ ಮೌರ್ಖ್ಯೇಣ ಹತಚೇತಸಃ।

ನಂತರ ರಾಜನು ದುಃಖ ಕಳೆದುಕೊಂಡು ಸಂತೋಷದಿಂದ ಸಂಪದ್ಭರಿತವಾದ ತನ್ನ ರಾಷ್ಟ್ರವನ್ನು ಪ್ರವೇಶಿಸಿದನು.

ಹೀಗೆ ವೈಶಂಪಾಯನರು ಬಕರ ಮಹಿಮೆಯನ್ನು ಅರುಹುತ್ತಾ ಹಿಂದೆ ಬೃಹಸ್ಪತ್ಯಾಚಾರ್ಯರೂ ಕೂಡಾ ಅಸುರರ ನಾಶಕ್ಕಾಗಿ ದೇವತೆಗಳ ಮಾಂಗಲ್ಯಕ್ಕಾಗಿ ಅದೇ ತೀರ್ಥದಲ್ಲಿ ಮಾಂಸದಿಂದ ಯಾಗ ಮಾಡಿದುದನ್ನು ಜನಮೇಜಯನಿಗೆ ತಿಳಿಸಿದರು. ಆಗ ಅಸುರರು ಕ್ಷೀಣಿಸಿ, ಸತ್ತುಹೋದರಂತೆ.

ಇಲ್ಲಿಯೇ ಬಲರಾಮನೂ ಸಹ ಬ್ರಾಹ್ಮಣರಿಗೆ ಬಹುವಿಧವಾದ ದಾನಗಳನ್ನು ಮಾಡಿದನು. ನಂತರ ಯಯಾತತೀರ್ಥಕ್ಕೆ ಹೋಗುತ್ತಾನೆ. ಅಲ್ಲಿ ಯಯಾತಿ ಭಾರೀ ಯಜ್ಞ ಮಾಡಿದ್ದನು. ಅಲ್ಲಿ ಸರಸ್ವತಿಯು ಹಾಲು, ತುಪ್ಪಗಳನ್ನೇ ಸುರಿಸಿದ್ದಳು (ನದೀ ಮೂಲಕ)

## ಸಂದೇಶಗಳು

೧. ಬಕರು ವಿಶ್ವಜಿತ್ ಯಾಗದಲ್ಲಿ ಋತ್ವಿಜರಿಗೆಲ್ಲ ಪಾಂಚಾಲರಾಜನಿಂದ ಬಂದ ೨೭ ಗೋವುಗಳನ್ನು ಹಂಚಿ ತಾವು ತೆಗೆದುಕೊಳ್ಳದೇ ಔದಾರ್ಯ ಮೆರೆಯುತ್ತಾರೆ. ಬಹುಶಃ ಬಕರು ಋತ್ವಿಜರುಗಳಲ್ಲಿ ಮುಖ್ಯ ಪುರೋಹಿತರಾಗಿದ್ದರೆಂದು ತೋರುತ್ತದೆ. ಅಲ್ಪದಾನ ಬಂದಾಗ ಮೊದಲು ಕಿರಿಯ ಪುರೋಹಿತರಿಗೆ ತಾನು ನಂತರ ಎಂಬ ಭಾವ ಇಲ್ಲಿದೆ. ಹಿರಿಯರು ಕಿರಿಯರಿಗೆ ಹಂಚಿ ತಿನ್ನಬೇಕೆಂಬ ಉದಾತ್ತ ನೀತಿ ಇಲ್ಲಿದೆ.

೨. ಬಕಮುನಿಯು ತನಗಾಗಿ ಗೋವುಗಳನ್ನು ಧೃತರಾಷ್ಟ್ರನೆಂಬ ರಾಜನನ್ನು ಕೇಳುತ್ತಾನೆ. ರಾಜನ ಉನ್ನತ್ತಪೂರ್ಣ ಉತ್ತರದಿಂದ ಕೋಪಾವಿಷ್ಟನಾಗುತ್ತಾನೆ, ಸಹಜವಾಗಿಯೇ ಬಕಮುನಿ. ರಾಜನು ಗೋವು ಬೇಡಿ ಬಂದ ಬ್ರಾಹ್ಮಣರಿಗೆ ಗೋವುಗಳಿಲ್ಲವೆಂದು ಸೌಜನ್ಯದಿಂದ ಹೇಳಬಹುದಾಗಿತ್ತು. ಆದರೆ ದುರದೃಷ್ಟವಶಾತ್ ಆಗಲೇ ಸತ್ತ ಗೋವುಗಳಿಂದ ಏಕೋ ವಿಚಲಿತನಾದ ರಾಜನು ಉನ್ಮತ್ತನಾಗಿ ಸತ್ತ ಗೋವುಗಳನ್ನು ತೆಗೆದುಕೊಂಡು ಹೋಗು ಎನ್ನುತ್ತಾನೆ. ಬಕನಂತಹ ಜ್ಞಾನಿಯನ್ನು ಬ್ರಹ್ಮಬಂಧು ಎಂದು ಕರೆದುದಂತೂ ರಾಜನಿಗೆ

ತ್ವಂ ಗತಿಸ್ತ್ವಂ ಚ ಮೇ ನಾಥಃ ಪ್ರಸಾದಂ ಕರ್ತುಮರ್ಹಸಿ।
ತಂ ತಥಾ ವಿಲಪಂತಂ ತು ಶೋಕೋಪಹತಚೇತಸಮ್।
ದೃಷ್ಟ್ವಾ ತಸ್ಯ ಕೃಪಾ ಜಜ್ಞೇ ರಾಷ್ಟ್ರಂ ತಸ್ಯ ವ್ಯಮೋಚಯತ್।
ಋಷಿಃ ಪ್ರಸನ್ನಸ್ತಸ್ಯಾಸೀತ್ ಸಂರಂಭಂ ಚ ವಿಹಾಯ ಸಃ।
ಮೋಕ್ಷಾರ್ಥಂ ತಸ್ಯ ರಾಷ್ಟ್ರಸ್ಯ ಜುಹಾವ ಪುನರಾಹುತಿಮ್।
ಮೋಕ್ಷಯಿತ್ವಾ ತದಾ ರಾಷ್ಟ್ರಂ ಪ್ರತಿಗೃಹ್ಯ ತಥಾ ಪಶೂನ್।
ಹೃಷ್ಟಾತ್ಮಾ ನೈಮಿಷಾರಣ್ಯಂ ಜಗಾಮ ಪುನರೇವ ಚ॥ – ೪೩/೨೭-೩೧

ಶೋಭಿಸುವುದಿಲ್ಲ. ಹೀಗಾಗಿ ರಾಜ ತನ್ನ ನಾಶಕ್ಕೆ, ರಾಷ್ಟ್ರನಾಶಕ್ಕೆ ಕಾರಣನಾಗುತ್ತಾನೆ. ಆದ್ದರಿಂದ ರಾಜನಾದವನು ದಾನಿಯಾಗಿ ಮೆರೆಯಬೇಕೇ ಹೊರತು ಮದಿಸಿದ ಆನೆಯಂತಲ್ಲ.

೩. ಬಕಮುನಿಯು ಕೂಡಾ ಪ್ರಾಯಃ ರಾಜನ ಮೇಲೆ ತುಂಬಾ ಕೋಪಾವಿಷ್ಟನಾಗಿ ಆತನ ರಾಷ್ಟ್ರನಾಶಕ್ಕಾಗಿ ಆ ಸತ್ತ ಗೋವುಗಳ ಮಾಂಸವನ್ನೇ ಹೋಮಕ್ಕಾಗಿ ಉಪಯೋಗಿಸಿ, ರಾಷ್ಟ್ರನಾಶಕರ ಹೋಮ ಮಾಡಿ ತನ್ನ ತಪಸ್ಸಿನ ಪರಿಣಾಮ ತೋರಿಸುತ್ತಾನೆ. ತಪಸ್ಸಿನಿಂದ ರಾಷ್ಟ್ರನಾಶ ಮಾಡಬಹುದು.

೪. ರಾಜನಿಗೆ ಪಶ್ಚಾತ್ತಾಪವಾಗಿ ಯಾರೂ ಪರಿಹಾರ ತೋರದಿದ್ದಾಗ ದೈವಜ್ಞ ಬ್ರಾಹ್ಮಣರ ಅಣತಿಯಂತೆ ರಾಷ್ಟ್ರದ ರಕ್ಷಣೆಗಾಗಿ ಬಕರಿಗೆ ಶರಣಾಗುತ್ತಾನೆ. ಆದ್ದರಿಂದ ತಪಸ್ವೀ ಬ್ರಾಹ್ಮಣರ ತಪಸ್ಸಿನ ಬಲ ವಿನಾಶಕಾರಿಯೂ ಆಗಬಲ್ಲುದು, ರಚನಾತ್ಮಕವಾಗಿಯೂ ಆಗಬಲ್ಲುದು ಎಂದು ಇಲ್ಲಿ ಸಂದೇಶಗಳಿವೆ.

ಆದ್ದರಿಂದ ರಾಜನು ಕೋಪಾವಿಷ್ಟನಾಗಿ ಹಾಳಾಗುತ್ತಾನೆ. ಬ್ರಾಹ್ಮಣನು ಕೋಪದಿಂದ ರಾಜನ, ರಾಷ್ಟ್ರದ ನಾಶಕ್ಕೆ ಹಾಗೂ ಪುನಃ ತಪಸ್ಸಿನಿಂದಲೇ ಉದ್ಧಾರಕ್ಕೆ ಕಾರಣನಾಗಬಲ್ಲನೆಂದು ತಿಳಿಯುತ್ತದೆ.

೫. ಯಜ್ಞಗಳು ನಾಶಕ್ಕಾಗಿ, ಉದ್ಧಾರಕ್ಕಾಗಿಯೂ ಇರುತ್ತವೆ. ನಾಶಕಾರಕ ಯಜ್ಞಗಳು ಆಭಿಚಾರಿಕವಾಗಿರುತ್ತವೆ.

ಇತ್ಯಾದಿ...

# ೭೧. ಕುಮಾರೋತ್ಪತ್ತಿ

## ಸ್ಕಂದನ ಪಟ್ಟಾಭಿಷೇಕ ತಾರಕಾಸುರ ಸಂಹಾರ

ಸರಸ್ವತೀತೀರ್ಥ(ನದಿ)ಯ ಪ್ರಭಾವವನ್ನು ಕೇಳಿದ ಜನಮೇಜಯನು ವೈಶಂಪಾಯನರನ್ನು ಕುಮಾರನ ಅಭಿಷೇಕ ಆತನು ದೈತ್ಯರೊಡನೆ ಮಾಡಿದ ಯುದ್ಧದ ವಿಷಯಗಳನ್ನು ತಿಳಿಸಲು ಕೋರಿದಾಗ ಅವರು ರಾಜನನ್ನು ಅಭಿನಂದಿಸಿ ಕುಮಾರನ ಅಭಿಷೇಕ ಹಾಗೂ ಆತನ ಪ್ರಭಾವಗಳನ್ನು ಹೇಳಲಾರಂಭಿಸಿದರು.

(ವಿ.ಸೂ.: ಈ ಚರಿತೆಯನ್ನು ಇತಿಹಾಸ, ಆಖ್ಯಾನವೆಂದು ಭಾರತ ದಾಖಲಿಸಿಲ್ಲ. ಆದರೂ ಒಂದು ಸುಂದರವಾದ ಕಥಾಹಂದರವಿದೆ. ಆದ್ದರಿಂದ ಇದನ್ನು ಉಪಾಖ್ಯಾನ, ಚರಿತ್ರೆಯನ್ನಾಗಿ ಗಣಿಸಿ ಇಲ್ಲಿ ಸೇರಿಸಲಾಗಿದೆ. ಇದರ ಅರ್ಥ ಇದು ಉಪಾಖ್ಯಾನ, ಇತಿಹಾಸವಲ್ಲವೆಂದೇನೂ ಅಲ್ಲ. ಇದು ಈಗಾಗಲೇ ಒಮ್ಮೆ ಬಂದಿದೆ.

ರುದ್ರದೇವರ ತೇಜಸ್ಸು ಒಮ್ಮೆ ವೀರ್ಯರೂಪದಿಂದ ಸ್ಖಲನೆಯಾಗಿ ಅಗ್ನಿಯಲ್ಲಿ ಬಿತ್ತು (ಕಾರಣ ಇಲ್ಲಿ ಹೇಳಿಲ್ಲ. ಬೇರೆ ಕಡೆ ಹೇಳಲಾಗಿದೆ). ಅಕ್ಷಯವಾದ ನಾಶರಹಿತವಾದ ಈ ವೀರ್ಯವನ್ನು ಅಗ್ನಿದೇವನಿಗೆ ಹಿಡಿದಿಟ್ಟುಕೊಳ್ಳಲು ಆಗದೇ ಬ್ರಹ್ಮನನ್ನು ಈ ಬಗ್ಗೆ ಏನು ಮಾಡಬೇಕೆಂದು ಕೇಳಿದ ಅದಕ್ಕೆ ಬ್ರಹ್ಮದೇವರು ಗಂಗೆಯು ಅದನ್ನು ಧರಿಸಲಿ ಅಲ್ಲಿ ವಿಸರ್ಜಿಸು ಎಂದ ಪ್ರಕಾರ ಅಗ್ನಿ ಅದನ್ನು ಗಂಗೆಯಲ್ಲಿ ಸೂರ್ಯ ಸದೃಶವಾದ ಆ ಗರ್ಭವನ್ನು ಇರಿಸಿದರೂ, ಆಕೆಗೂ ಅದನ್ನು ಧರಿಸಲಾಗದೆ, ಹಿಮವತ್ಪರ್ವತದ ರಮ್ಯವಾದ ಗಿರಿಯಲ್ಲಿ ಅದನ್ನು ವಿಸರ್ಜಿಸಿದಳು. ಅಲ್ಲಿ ಆ ಗರ್ಭ ಅಗ್ನಿಪುತ್ರನು, ಲೋಕಗಳನ್ನು ಆವರಿಸಿ ಬೆಳೆದ. ಬೆಂಕಿಯಂತಿದ್ದ ಆ ಗರ್ಭವನ್ನು [೧]ಕೃತ್ತಿಕಾ ದೇವಿಯರು ಶರಸ್ತಂಭದಲ್ಲಿ (ಶರ ಎಂಬ ಹುಲ್ಲಿನ

---

೧ ಸ ತತ್ರ ವವೃಧೇ ಲೋಕಾನಾವೃತ್ಯ ಜ್ವಲನಾತ್ಮಜಃ ।
ದದೃಶುರ್ಜ್ವಲನಾಕಾರಂ ತಂ ಗರ್ಭಮಥ ಕೃತ್ತಿಕಾಃ ॥
ಶರಸ್ತಂಭೇ ಮಹಾತ್ಮಾನಮನಲಾತ್ಮಜಮೀಶ್ವರಮ್ ।

ಪೊದೆಯಲ್ಲಿ - ಜಂಬುಹುಲ್ಲಿನ ಪೊದೆ) ನೋಡಿ ಇವನನ್ನು ಇವನು ನನ್ನವನು ಇವನು ನನ್ನವನು ಎಂದು ಜೋರಾಗಿ ಕೂಗಿದರು. ಕಾರಣ ಅವರೆಲ್ಲ ಪುತ್ರಾಪೇಕ್ಷಿಗಳಾಗಿದ್ದರು. ಅವರ ಭಾವವನ್ನರಿತು ಕುಮಾರನು (ಅಗ್ನಿಪುತ್ರನು) ಆರೂ ಜನರ ಸ್ತನಗಳಿಂದ [೧]ಹಾಲನ್ನು ತನ್ನ ಆರೂ ಮುಖಗಳಿಂದ ಕುಡಿದನು. ಅಲೌಕಿಕವಾದ ಶರೀರವುಳ್ಳಅವರು ಬಾಲಕನ ಸಾಮರ್ಥ್ಯಕ್ಕೆ ಆಶ್ಚರ್ಯಪಟ್ಟರು. ಗಂಗೆಯು ತನ್ನಲ್ಲಿದ್ದ ಗರ್ಭವನ್ನು (ರುದ್ರತೇಜಸ್ಸು-ಅಗ್ನಿಪುತ್ರ) ಯಾವ ಪರ್ವತದಲ್ಲಿ ಹಾಕಿದ್ದಳೋ ಆ ಪರ್ವತ ಬಂಗಾರಪರ್ವತವಾಗಿ ಮೇರು ಪರ್ವತದಂತೆ ಕಂಗೊಳಿಸಿತು. ಬೆಳೆಯುತ್ತಿದ್ದ ಆ ಗರ್ಭದಿಂದ ಪೃಥಿವೀ ಅದರ ಹತ್ತಿರದ ಎಲ್ಲ ಪರ್ವತಗಳೆಲ್ಲ ಕಾಂಚನಮಯವಾದವು. ಕೃತ್ತಿಕೆಯರಿಂದ ಲಾಲಿತನಾಗಿ ಕುಮಾರನು ಕಾರ್ತಿಕೇಯನಾದನು. ಗಂಗೆ ಆ ಗರ್ಭ ಮೊದಲು ಧರಿಸಿದ್ದರಿಂದ ಗಾಂಗೇಯನೆಂದೂ ಕರೆಯಲ್ಪಟ್ಟನು. ಈ ಮಗು ತನ್ನ ಇಂದ್ರಿಯನಿಗ್ರಹ ಭಗವನ್ನಿಷ್ಠೆ ತಪಸ್ಸುಗಳಿಂದ ಅತ್ಯಂತವಾಗಿ ಚಂದ್ರನಂತೆ ವರ್ಧಿಸಿದ ಆಹ್ಲಾದಕರವಾಗಿಯೂ, ಬೆಳಗಿತು.

ಬಂಗಾರಮಯವಾದ ಶರಸ್ತಂಭದಲ್ಲಿ (ಒಂದು ಜಾತೀಯ ದರ್ಭೆ) ಮಲಗಿದ ಮಗುವನ್ನು ದೇವಗಂಧರ್ವರು, ಮುನಿಗಳು ಸ್ತುತಿಸಿದರೆ, ದೇವಸ್ತ್ರೀಯರು ಸಾವಿರಾರು ಸಂಖ್ಯೆಯಲ್ಲಿ ಬಂದು ಅಲೌಕಿಕವಾದ, ನೃತ್ಯಗಳನ್ನು ಮಾಡುತ್ತಾ ಸ್ತುತಿಸಿದರು.

ಆತನನ್ನು ನೋಡಲು ಎಲ್ಲ ಅಗ್ನಿಗಳೂ, ನದಿಗಳಲ್ಲಿ ಶ್ರೇಷ್ಠವಾದ ಗಂಗೆ ಹಾಗೂ ಭೂದೇವಿ ಉತ್ತಮರೂಪಧರಿಸಿ ಬಂದರು.

೩. [೨]ಬೃಹಸ್ಪತ್ಯಾಚಾರ್ಯರು ಜಾತಕರ್ಮಾದಿಗಳನ್ನು ಮಾಡಿಸಿದರು.

೪. ವೇದಪುರುಷನು (ವೇದಾಭಿಮಾನಿ) ನಾಲ್ಕು ರೂಪಗಳನ್ನು ತೆಗೆದುಕೊಂಡು ಅಂಜಲೀಬದ್ಧನಾಗಿ ಅವನ ಸಮೀಪದಲ್ಲಿ ಕೈ ಮುಗಿದು ನಿಂತನು.

೫. ನಾಲ್ಕು ಪ್ರಕಾರದ ಧನುರ್ವೇದ, ಎಲ್ಲ ಅಸ್ತ್ರಗಳು (ಅಸ್ತ್ರಾಭಿಮಾನಿಗಳು) ಬಂದು ನಿಂತರು. ವಾಣಿಯೂ ಸಾಕ್ಷಾತ್ತಾಗಿ ಅಲ್ಲಿಗೆ ಆಗಮಿಸಿದಳು (ಅಜ್ಜಿ).

೬. ವಿವಿಧವಾದ ಭೂತಗಣಗಳಿಂದ ಕೂಡಿದ, ಹಿಮವತ್ಪುತ್ರಿಯಾದ ಉಮೆಯೊಡನೆ ದೇವಾಧಿದೇವನಾದ ಶಿವನು ಮಹಾತ್ಮನಾದ ಕುಮಾರನನ್ನು ನೋಡಿದನು (ಮಗನನ್ನು).

---

ಮಮಾಯಮಿತಿ ತಾಃ ಸರ್ವಾಃ ಪುತ್ರಾರ್ಥಿನ್ಯೋಽಭಿಚುಕ್ರುಶುಃ ॥ - ೪೪/೧೦,೧೧

೧ ತಾಸಾಂ ವಿದಿತ್ವಾ ಭಾವಂ ತಂ ಮಾತೄಣಾಂ ಭಗವಾನ್ ಪ್ರಭುಃ ।
ಪ್ರಸ್ರುತಾನಾಂ ಪಯಃ ಷಡ್ಭಿರ್ವದನೈರಪಿಬತ್ತದಾ ॥ - ೪೪/೧೨

೨ ಜಾತಕರ್ಮಾದಿಕಾಸ್ತಸ್ಯ ಕ್ರಿಯಾಶ್ಚಕ್ರೇ ಬೃಹಸ್ಪತಿಃ ।
ವೇದಶ್ಚೈನಂ ಚತುರ್ಮೂರ್ತಿರುಪತಸ್ಥೇ ಕೃತಾಂಜಲಿಃ ॥
ಸ ದದರ್ಶ ಮಹಾತ್ಮಾನಂ ದೇವದೇವಮುಮಾಪತಿಮ್ ।
ಶೈಲಪುತ್ರ್ಯಾ ಸಮಾಗಮ್ಯ ಭೂತಸಂಘಶತೈರ್ವೃತಃ ॥ - ೪೪/೨೧,೨೩

೭. ಸಪ್ತಮಾತೃಗಣಗಳೂ, ಸಾಧ್ಯರೂ, ವಿಶ್ವೇದೇವತೆಗಳೂ, ಮರುದ್ಗಣ (೪೯), ಅಷ್ಟವಸುಗಳು, ಪಿತೃಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಸಿದ್ಧರು, ಸರ್ಪಗಳು, ದಾನವರು, ಪಕ್ಷಿಗಳು(ಗರುಡಾದಿಗಳು), ಬ್ರಹ್ಮದೇವ,[೧]ವಿಷ್ಣು ಇಂದ್ರದೇವರೇ ಮೊದಲಾದವರು, ನಾರದಾದಿ ಮುನಿಗಳು, ದೇವಗಂಧರ್ವರು ಎಲ್ಲರೂ ಕುಮಾರನನ್ನು ನೋಡಲು ಬಂದರು.

೮. [೨]ಮಹಾಯೋಗಿಯಾದ ಕುಮಾರನು ಪಿನಾಕಿ (ಪಿನಾಕಿಧನುರ್ಧಾರಿ)ಯಾದ ತ್ರಿಶೂಲಧಾರಿಯಾದ ದೇವೇಶನಾದ ಶಿವನನ್ನು ಎದುರುಗೊಂಡನು. ತನ್ನ ಮುಂದೆ ಬರುತ್ತಿದ್ದ ಕುಮಾರನನ್ನು ನೋಡಿದ ಶಿವಪಾರ್ವತಿಯರಿಗೆ, ಅಗ್ನಿ-ಗಂಗೆಯರ ಮನದಲ್ಲಿ ಈ ಬಾಲಕನು ಯಾರನ್ನು ಮೊದಲು ಗೌರವದಿಂದ ಸ್ವೀಕರಿಸುತ್ತಾನೆ ಎಂಬ ಆಲೋಚನೆ ಮೂಡಿಬಂತು. ಈ ಅಭಿಪ್ರಾಯ ತಿಳಿದ [೩]ಕುಮಾರನು ಏಕಕಾಲದಲ್ಲಿ ನಾಲ್ಕು ರೂಪಗಳನ್ನು ಸೃಷ್ಟಿಸಿಕೊಂಡು ಮೊದಲಿದ್ದ ಕುಮಾರ, ಶಾಖ, ವಿಶಾಖ, ನೈಗಮೇಯ ಎಂಬ ರೂಪಗಳಿಂದ ವ್ಯಕ್ತನಾಗಿ ರುದ್ರನಿದ್ದಲ್ಲಿಗೆ (ಕುಮಾರ)ಸ್ಕಂದನಾಗಿ ಹೋದನು. ವಿಶಾಖರೂಪದಿಂದ ಪರ್ವತಕುಮಾರಿಯಾದ ಪಾರ್ವತಿ ಬಳಿ, ಶಾಖ ಎಂಬ ಅಲೌಕಿಕರೂಪದಿಂದ ಅಗ್ನಿ ಕಡೆ, ನೈಗಮೇಯ ರೂಪದಿಂದ ಗಂಗೆಯ ಬಳಿ ಹೋದನು. ಆ ಎಲ್ಲ ನಾಲ್ಕು ರೂಪಗಳೂ (ಶರೀರಗಳು) ಸಮಾನವಾಗಿದ್ದವು (ತೇಜಸ್ಸಿನಲ್ಲಿ). ತಮ್ಮ ಕಡೆಗಳಿಗೆ ಬಂದ ನಾಲ್ಕೂ ರೂಪಗಳನ್ನು ನಾಲ್ವರು ಯಾವುದೇ ವಿಕಾರಗಳಿಗೊಳಗಾಗದೆ ಗೊಂದಲಗಳಿಗೆ ಒಳಗಾಗದೆ ಸ್ವೀಕರಿಸಿದರು. ಅದೊಂದು ಅದ್ಭುತ ದೃಶ್ಯವಾಗಿತ್ತು.

[೪]ನಂತರ ಈ ನಾಲ್ವರೂ ರುದ್ರಾದಿಗಳು) ಜಗತ್ಪತಿಯಾದ ಪಿತಾಮಹ ಬ್ರಹ್ಮನನ್ನು ಭಕ್ತಿಯಿಂದ ನಮಿಸಿ, ಕಾರ್ತಿಕೇಯನಿಗೆ ಹಿತವನ್ನು ಮಾಡುವ ಬಯಕೆಯಿಂದ ಬ್ರಹ್ಮನಿಗೆ ಹೀಗೆ ನುಡಿದರು.

ದೇವೇಶನೇ! ಈ ಬಾಲಕನಿಗೆ ಯೋಗ್ಯವಾದ ಹಾಗೂ ನಮಗೂ ಇಷ್ಟವಾದ (ಸಂತೋಷಕೊಡುವಂತೆ) ಒಂದು ಆಧಿಪತ್ಯವನ್ನು (ನಾಯಕತ್ವ, ಸ್ವಾಮಿತ್ವ) ತಾವು ಕೊಡಬೇಕು, ಅನುಗ್ರಹಿಸಬೇಕು:

---

೧ ರುದ್ರಾದಿತ್ಯಾಸ್ತಥಾ ಸಿದ್ಧಾ ಭುಜಗಾ ದಾನವಾಃ ಖಗಾಃ।
ಬ್ರಹ್ಮಾ ಸ್ವಯಂಭೂರ್ಭಗವಾನ್ ಸಪುತ್ರಃ ಸಹವಿಷ್ಣುನಾ॥ - ೪೪/೩೦

೨ ಸ ತು ಬಾಲೋಽಪಿ ಬಲವಾನ್ ಮಹಾಯೋಗಬಲಾನ್ವಿತಃ।
ಅಭ್ಯಾಜಗಾಮ ದೇವೇಶಂ ಶೂಲಹಸ್ತಂ ಪಿನಾಕಿನಮ್॥ - ೪೪/೩೩

೩ ತತೋಽಭವಚ್ಚತುರ್ಮೂರ್ತಿಃ ಕ್ಷಣೇನ ಭಗವಾನ್ ಪ್ರಭುಃ।
ತಸ್ಯ ಶಾಖೋ ವಿಶಾಖಶ್ಚ ನೈಗಮೇಯಶ್ಚ ಪೃಷ್ಠತಃ॥ - ೪೪/೩೭

೪ ತತೋ ರುದ್ರಶ್ಚ ದೇವೀ ಚ ಪಾವಕಶ್ಚ ಪಿತಾಮಹಮ್।
ಗಂಗಯಾ ಸಹಿತಾಃ ಸರ್ವೇ ಪ್ರಣಿಪೇತುರ್ಜಗತ್ಪತಿಮ್॥ - ೪೪/೪೩

**ಅಸ್ಯ ಬಾಲಸ್ಯ ಭಗವನ್ನಾಧಿಪತ್ಯಂ ಯಥೇಪ್ಸಿತಮ್ ।**
**ಅಸ್ಮತ್ಪ್ರಿಯಾರ್ಥಂ ದೇವೇಶ ಸದೃಶಂ ದಾತುಮರ್ಹಸಿ ॥ - ೪೪/೪೫**

ಆಗ ಪಿತಾಮಹನು ಮನಸಾ ಹೀಗೆ ಚಿಂತಿಸಿದನು. ದೇವತೆಗಳ, ದಾನವರ, ರಾಕ್ಷಸರ, ಭೂತಾದಿಗಳ, ಸರ್ಪಗಳ, ಎಲ್ಲ ಐಶ್ವರ್ಯಗಳೂ ಹಿಂದೆಯೇ ನಿರ್ಧಾರಿತವಾಗಿ ಕೊಡಲ್ಪಟ್ಟಿದೆ. ಈ ಎಲ್ಲ ವರ್ಗಗಳ ಆಧಿಪತ್ಯ ಸ್ವೀಕಾರಕ್ಕೆ ಬೇಕಾದ ಸಾಮರ್ಥ್ಯ ಹಾಗೂ ಐಶ್ವರ್ಯ ಈ ಕುಮಾರನಲ್ಲಿದೆ ಎಂದು ಭಾವಿಸಿದನು. ನಂತರ ಒಂದು ಮುಹೂರ್ತ ಧ್ಯಾನ ಮಾಡಿ ದೇವತೆಗಳ ಶ್ರೇಯಸ್ಸಿಗಾಗಿ ಎಲ್ಲ ಜೀವರ [೧]ಸೇನಾಧಿಪತ್ಯವನ್ನು ಕುಮಾರನಿಗೆ ಕೊಟ್ಟನು(ಅನುಗ್ರಹ ಮಾಡಿದನು).

ಸಕಲ ಪ್ರಾಣಿಗಳೂ ಪಿತಾಮಹನಾದ ಬ್ರಹ್ಮನು ಸ್ವರ್ಗದಲ್ಲಿ ಪ್ರಸಿದ್ಧರಾದ ದೇವತೆಗಳನ್ನೆಲ್ಲ ಉದ್ದೇಶಿಸಿ ಈ ಆದೇಶ ಕೊಟ್ಟನು. ನಂತರ ಕುಮಾರನನ್ನು ಬ್ರಹ್ಮದೇವರೇ ಮೊದಲಾದ ಎಲ್ಲ ದೇವತೆಗಳು ಕರೆತಂದು ಪಟ್ಟಾಭಿಷೇಕ ಮಾಡಲು ಹಿಮಾಲಯ ಪರ್ವತಕ್ಕೆ ಹೋದರು. ಅಲ್ಲಿ ಹರಿಯುವ ಪುಣ್ಯನದಿ ಸರಸ್ವತೀ ಸ್ಯಮಂತಪಂಚಕಕ್ಷೇತ್ರಕ್ಕೆ ಹೋದರು. ಅದು ಪಿತೃಲೋಕಗಳಲ್ಲಿಯೂ ಪ್ರಸಿದ್ಧವಾದುದು. ಆ ಸರಸ್ವತೀ ತೀರದಲ್ಲಿ ಎಲ್ಲ ದೇವಗಂಧರ್ವರು ಕುಳಿತುಕೊಂಡರು.

ಬ್ರಹ್ಮದೇವರ ಆದೇಶದ ಮೇರೆಗೆ ಸ್ಕಂದನ ಸೇನಾ ಪಟ್ಟಾಭಿಷೇಕವನ್ನು ಬೃಹಸ್ಪತ್ಯಾಚಾರ್ಯರ ಅಧ್ವರ್ಯುತನದಲ್ಲಿ ಸಕಲ ಸಿದ್ಧತೆಗಳು ಆರಂಭವಾಗಿ ವಿಧ್ಯುಕ್ತವಾಗಿ ಅಗ್ನಿಯಲ್ಲಿ ತುಪ್ಪವನ್ನು ಹೋಮಿಸಲಾಯಿತು. ಆಗ ಹಿಮತ್ಪರ್ವತರಾಜನು ಸ್ಕಂದನಿಗೆ ಕುಳಿತುಕೊಳ್ಳಲು ದೇವಲೋಕದ ರತ್ನಖಚಿತವಾದ ಆಸನ ಕೊಟ್ಟನು. ಅದರ ಮೇಲೆ ಕುಮಾರನು ಕುಳಿತನು. ದೇವತಾದಿ ಗಣಗಳೆಲ್ಲ ಅಭಿಷೇಕಕ್ಕೆ ಬೇಕಾದ ಮಂಗಳದ್ರವ್ಯಗಳನ್ನು ಮಂತ್ರಪುರಸ್ಸರವಾಗಿ ಹಿಡಿದುಕೊಂಡು ಸೇರಿದ್ದರು. ಅಲ್ಲಿ ಸೇರಿದ ದೇವತೆಗಳ ಋಷಿಗಳ ಮೊದಲಾದವರ ಪಟ್ಟಿಯನ್ನು ವ್ಯಾಸರು ಹದಿನೈದು ಶ್ಲೋಕಗಳಲ್ಲಿ ಕೊಟ್ಟಿದ್ದಾರೆ. ಕುಮಾರನು ಅವತರಿಸಿದಾಗ ಜಾತಕರ್ಮಾದಿಗಳನ್ನು ನೋಡಲು ಬಂದ ದೇವತಾದಿಗಳ ಸಂಖ್ಯೆಯನ್ನು ಇದು ಮೀರಿಸುತ್ತದೆ. ಪ್ರಧಾನ ದೇವತೆಗಳಲ್ಲಿಯೂ ಮುಖ್ಯರಾದ ವಿಷ್ಣು ಬ್ರಹ್ಮ ರುದ್ರ(ಸಗಣ), ಇಂದ್ರಾದಿಗಳು, ವಸುಗಳು ಏಕಾದಶರುದ್ರರು, ದ್ವಾದಶಾದಿತ್ಯರು, ವೈಖಾನಸರು, ದೇವ-ಋಷಿಗಂಧರ್ವರು, ಪುಲಸ್ತ್ಯಾದಿ ಋಷಿಗಳು, ಸಪ್ತರ್ಷಿಗಳು, ಋತುಗಳು, ಗ್ರಹಗಳು, ನಕ್ಷತ್ರಗಳು, ಹಗಲು, ರಾತ್ರಿ, ದಿನ, ವಾರ, ಪಕ್ಷ, ಮಾಸಾಧಿಪತಿಗಳು, ನದೀನದಸಮುದ್ರಗಳು, ಹಿಮಾಲಯ, ಮೇರು, ವಿಂಧ್ಯಾದಿಪರ್ವತಗಳು, ಐರಾವತಾದಿ ಆನೆಗಳು, ಉಚ್ಚೈಃಶ್ರವಾದಿ ಕುದುರೆಗಳು, ಇತ್ಯಾದಿ ಇತ್ಯಾದಿ ಹೆಚ್ಚೇನು ಹೇಳುವುದು.

---

೧ ದಿವಿ ದೇವನಿಕಾಯಾನಾಂ ಯೇ ಚ ರಾಜನ್ ಪರಿಶ್ರುತಾಃ ।
ತಾನ್ ಸರ್ವಾನ್ ವ್ಯಾದಿದೇಶಾಸ್ಮೈ ಸರ್ವಭೂತಪಿತಾಮಹಃ ॥ - ೪೪/೫೧

ವ್ಯಾಸರೇ -

**ಬಹುಲತ್ವಾಚ್ಚ ಯೇ ನೋಕ್ತಾ ವಿವಿಧಾ ದೇವತಾಗತಾಃ।**
**ತೇ ಕುಮಾರಾಭಿಷೇಕಾರ್ಥಂ ಸಮಾಜಗ್ಮುಃ ತತಸ್ತತಃ ॥** - ೪೫/೧೮

-ಎಂದಿದ್ದಾರೆ. ಕುಮಾರನಿಗೆ ಬಂದ ದೇವತೆಗಳು ಅಭಿಷೇಕದ ಮಂಗಳದ್ರವ್ಯಗಳಿಂದ ದೇವತಾ ಸೈನ್ಯಾಧಿಪತ್ಯ ಪದವಿಯನ್ನು ಕೊಡುವ ಸಲುವಾಗಿ ಅಸುರರಿಗೆ ಭಯ ಹುಟ್ಟಿಸಲು ಅಭಿಷೇಕ ಮಾಡಿದರು[೧].

ಹಿಂದೆ ವರುಣನನ್ನು ಜಲಾಧಿಪತಿಯನ್ನಾಗಿ ವರುಣನನ್ನು ಅಭಿಷೇಕ ಮಾಡಿದರೋ ಹಾಗೆ ಪೂಜ್ಯರಾದ ಬ್ರಹ್ಮದೇವರು, ಕಾಶ್ಯಪ ಹಾಗೂ ದೇವತೆಗಳೆಲ್ಲ ಅಭಿಷೇಕ ಮಾಡಿದರು ಕುಮಾರನಿಗೆ. ಬ್ರಹ್ಮಾದಿ ಸಮಸ್ತ ದೇವತೆಗಳು ಹಾಗೂ ಬಂದ ಇತರರೆಲ್ಲರೂ ಕೂಡಾ ಕುಮಾರನಿಗೆ ಕೊಟ್ಟ ಉಡುಗೊರೆ, ದಾಸದಾಸಿಯರ ಆಯುಧಗಳ ವಿವರಗಳನ್ನು ವ್ಯಾಸರು ಮೂವತ್ತು ಶ್ಲೋಕಗಳಿಂದ ವಿವರಿಸಿದ್ದಾರೆ.

| ಸಂಖ್ಯೆ | ದೇವತೆಗಳು | ಕೊಟ್ಟ ಉಡುಗೊರೆ<br>ಅನುಚರರು |
|---|---|---|
| ೧ | ಬ್ರಹ್ಮದೇವರು | ವಾಯುವೇಗವುಳ್ಳ, ಬಲಶಾಲಿಗಳಾದ ಬೇಕಾದ ರೂಪತಾಳುವ ಶಕ್ತಿಯುಳ್ಳ ನಾಲ್ಕು ಅನುಚರರು |
| ೨ | ಸ್ಥಾಣು(ರುದ್ರ) | ಕ್ರತು<br>ಮಹಾಪಾರಿಷದ |
| ೩. | ದೇವತೆಗಳು | ಶಕ್ತ್ಯಾಯುಧ<br>ವಿಶ್ವರೂಪಿ ರಾಕ್ಷಸ ಸಂಹಾರಕ ಜಗದ್ವ್ಯಾಪಿ |
| ೪ | ಯಮ | ಕಾಲಸದೃಶರಾದ ಉನ್ಮಾಥ ಮತ್ತು ಪ್ರಮಾಥ ಎಂಬ ಇಬ್ಬರೂ ಅನುಚರರು |
| ೫ | ಸೂರ್ಯ | ಸುಭ್ರಾಜ ಮತ್ತು ಭಾಸ್ವರ ಎಂಬ ಇಬ್ಬರು ಅನುಚರರು |
| ೬ | ಚಂದ್ರ | ಮಣಿ ಸುಮಣಿ<br>ಕೈಲಾಸಶಿಖರದಂತೆ ಇರುವ ಅನುಚರರು |

---

೧ ದಿವ್ಯಸಂಭಾರಸಂಯುಕ್ತೈಃ ಕಲಶೈಃ ಕಾಂಚನೈರ್ನೃಪ।
ಸಮಿದ್ಭಿಃ ಪುಣ್ಯಗಂಧಾಭಿರದ್ಭಿಸ್ತಾಭಿರಲಂಕೃತೈಃ ॥
ಅಭ್ಯಷಿಂಚನ್ ಕುಮಾರಂ ವೈ ಹೃಷ್ಟರೂಪಾ ದಿವೌಕಸಃ।
ಸೈನಾಪತ್ಯೇ ಮಹಾತ್ಮಾನಮಸುರಾಣಾಂ ಭಯಾವಹಮ್ ॥ ೪೬/೨೦,೨೧

| | | |
|---|---|---|
| ೭ | ಅಗ್ನಿ | ಜ್ವಾಲಾಜಿಹ್ವ ಹಾಗೂ ಜ್ಯೋತಿ ಎಂಬ ಇಬ್ಬರು ಅನುಚರರು |
| ೮ | ಅಂಶ (ಎಂಬ ದೇವತೆ) | ಪರಿಘ, ವಿಕಟ, ಭೀಮ, ದಹತಿ, ದಹನ ಎಂಬ ಐದು ಅನುಚರರು |
| ೯ | ಇಂದ್ರ | ಉತ್ಕ್ರೋಶ, ಸಂಸ್ಕರ ಎಂಬ ಇಬ್ಬರು ಅನುಚರರು (ವಜ್ರಾಯುಧ ಧರಿಸಿದ) |
| ೧೦ | ವಿಷ್ಣು | ಚಕ್ರ, ವಿಕ್ರಮಕ, ಸಂಶ್ರಮ ಮೂರು ಅನುಚರರು |
| ೧೧ | ಅಶ್ವಿನೀದೇವತೆಗಳು | ವರ್ಧನ, ನಂದ ಇಬ್ಬರು ಅನುಚರರು |
| ೧೨ | ಚತುಮುಖಬ್ರಹ್ಮ | ಕುಂದರ, ಕ್ರಮುಕ, ಕುಮುದ, ಡಂಬರ, ಆಡಂಬರ ಐದು ಅನುಚರರು |
| ೧೩ | ತ್ವಷ್ಟ್ರ | ವಕ್ರ, ಅನುವಕ್ರ ಇಬ್ಬರು ಅನುಚರರು |
| ೧೪ | ಮಿತ್ರ | ಸುವ್ರತ, ಸತ್ಯಸಂಧ ಇಬ್ಬರು ವಿದ್ಯಾಧರರು |
| ೧೫ | ವಿಧಾತ್ರ | ಸುಪ್ರಭ, ಶುಭಕರ್ಮಕ ಇಬ್ಬರು ಅನುಚರರು |
| ೧೬ | ಪೂಷ | ಪಾಲಿತುಂಗ, ಕಲಿಂಗ ಮಹಾಮಾಯಾವಿಗಳು |
| ೧೭ | ವರುಣ | ತಿಮಿಂಗಲಮುಖದ ಸವ ಅತಿಸವ ಇಬ್ಬರು ಅನುಚರರು |
| ೧೮ | ಹಿಮಾಲಯ | ಸುವರ್ಚಸ ಅತಿವರ್ಚಸ |
| ೧೯ | ಮೇರು | ಕಾಂಚನ, ಮೇಘಮಾಲಿ, ಅಸ್ಥಿರ, ಅತಿಸ್ಥಿರ ನಾಲ್ಕು ಅನುಚರರು |
| ೨೦ | ವಿಂಧ್ಯ | ಉಚ್ಛ್ರಿತ, ಅತಿಶೃಂಗ, ಮೇಘಮಾಲಿ ಮೂವರು ಅನುಚರರು |
| ೨೧ | ಸಮುದ್ರ | ಗದಾಧಾರಿಗಳಾದ ಸಂಗ್ರಹ, ವಿಗ್ರಹ ಅನುಚರರು |
| ೨೨ | ಪಾರ್ವತೀ | ಉನ್ಮಾದ, ಪುಷ್ಪದಂತ, ಶಂಕುಕರ್ಣ ಮೂವರು ಅನುಚರರು |
| ೨೩ | ಗಂಗಾ | ಜಯ, ಮಹಾಜಯ ಇಬ್ಬರು ಅನುಚರರು |
| ೨೪ | ಸಾಧ್ಯರು, ರುದ್ರರು, ಪಿತೃಗಳು, ಸಾಗರಗಳು, ನದಿಗಳು, ಗಿರಿಗಳು | ಆಯುಧಪಾಣಿಗಳಾದ ಸೇನಾಧ್ಯಕ್ಷರು |

ವ್ಯಾಸರು ಮುಂದೆ ವಿವಿಧ ಆಯುಧಧಾರಿಗಳೂ, ಚಿತ್ರವಿಚಿತ್ರ ವೇಷಧಾರಿಗಳೂ, ಕವಚಗಳನ್ನು ಧರಿಸಿದ ಸ್ಕಂದನ ಸೈನಿಕರ ಹೆಸರುಗಳನ್ನು ೨೧ ಶ್ಲೋಕಗಳಿಂದ ನಿರೂಪಿಸಿದ್ದಾರೆ (೫೭ ರಿಂದ ೭೮ರವರೆಗೆ). ಅವುಗಳಲ್ಲಿ ಕೆಲವು ಗಣಕರ್ಣ, ನಿಕುಂಭ, ಪದ್ಮಕುಮುದ, ಸುನಂದ, ದ್ವಾದಶಭುಜ, ಏಕಾಕ್ಷ, ದ್ವಾದಶಭುಜ, ಏಕಜಟ, ಪುಣ್ಯನಾಮಾ, ಸುನಾಮಾ,

ವ್ಯಾಸರೇ –

**ಬಹುಲತ್ವಾಚ್ಚ ಯೇ ನೋಕ್ತಾ ವಿವಿಧಾ ದೇವತಾಗತಾಃ।**
**ತೇ ಕುಮಾರಾಭಿಷೇಕಾರ್ಥಂ ಸಮಾಜಗ್ಮುಃ ತತಸ್ತತಃ ॥ – ೪೫/೧೮**

–ಎಂದಿದ್ದಾರೆ. ಕುಮಾರನಿಗೆ ಬಂದ ದೇವತೆಗಳು ಅಭಿಷೇಕದ ಮಂಗಳದ್ರವ್ಯಗಳಿಂದ ದೇವತಾ ಸೈನ್ಯಾಧಿಪತ್ಯ ಪದವಿಯನ್ನು ಕೊಡುವ ಸಲುವಾಗಿ ಅಸುರರಿಗೆ ಭಯ ಹುಟ್ಟಿಸಲು ಅಭಿಷೇಕ ಮಾಡಿದರು[೧].

ಹಿಂದೆ ವರುಣನನ್ನು ಜಲಾಧಿಪತಿಯನ್ನಾಗಿ ವರುಣನನ್ನು ಅಭಿಷೇಕ ಮಾಡಿದರೋ ಹಾಗೆ ಪೂಜ್ಯರಾದ ಬ್ರಹ್ಮದೇವರು, ಕಾಶ್ಯಪ ಹಾಗೂ ದೇವತೆಗಳೆಲ್ಲ ಅಭಿಷೇಕ ಮಾಡಿದರು ಕುಮಾರನಿಗೆ. ಬ್ರಹ್ಮಾದಿ ಸಮಸ್ತ ದೇವತೆಗಳು ಹಾಗೂ ಬಂದ ಇತರರೆಲ್ಲರೂ ಕೂಡಾ ಕುಮಾರನಿಗೆ ಕೊಟ್ಟ ಉಡುಗೊರೆ, ದಾಸದಾಸಿಯರ ಆಯುಧಗಳ ವಿವರಗಳನ್ನು ವ್ಯಾಸರು ಮೂವತ್ತು ಶ್ಲೋಕಗಳಿಂದ ವಿವರಿಸಿದ್ದಾರೆ.

| ಸಂಖ್ಯೆ | ದೇವತೆಗಳು | ಕೊಟ್ಟ ಉಡುಗೊರೆ<br>ಅನುಚರರು |
|---|---|---|
| ೧ | ಬ್ರಹ್ಮದೇವರು | ವಾಯುವೇಗವುಳ್ಳ, ಬಲಶಾಲಿಗಳಾದ ಬೇಕಾದ ರೂಪತಾಳುವ ಶಕ್ತಿಯುಳ್ಳ ನಾಲ್ಕು ಅನುಚರರು |
| ೨ | ಸ್ಥಾಣು(ರುದ್ರ) | ಕ್ರತು<br>ಮಹಾಪಾರಿಷದ |
| ೩. | ದೇವತೆಗಳು | ಶಕ್ತ್ಯಾಯುಧ<br>ವಿಶ್ವರೂಪಿ ರಾಕ್ಷಸ ಸಂಹಾರಕ ಜಗದ್ವ್ಯಾಪಿ |
| ೪ | ಯಮ | ಕಾಲಸದೃಶರಾದ ಉನ್ಮಾಥ ಮತ್ತು ಪ್ರಮಾಥ ಎಂಬ ಇಬ್ಬರೂ ಅನುಚರರು |
| ೫ | ಸೂರ್ಯ | ಸುಭ್ರಾಜ ಮತ್ತು ಭಾಸ್ಕರ ಎಂಬ ಇಬ್ಬರು ಅನುಚರರು |
| ೬ | ಚಂದ್ರ | ಮಣಿ ಸುಮಣಿ<br>ಕೈಲಾಸಶಿಖರದಂತೆ ಇರುವ ಅನುಚರರು |

೧ ದಿವ್ಯಸಂಭಾರಸಂಯುಕ್ತೈಃ ಕಲಶೈಃ ಕಾಂಚನೈರ್ನೃಪ।
ಸಮಿದ್ಭಿಃ ಪುಣ್ಯಗಂಧಾಭಿರದ್ಭಿಸ್ತಾಭಿರಲಂಕೃತೈಃ ॥
ಅಭ್ಯಷಿಂಚನ್ ಕುಮಾರಂ ವೈ ಹೃಷ್ಟರೂಪಾ ದಿವೌಕಸಃ।
ಸೈನಾಪತ್ಯೇ ಮಹಾತ್ಮಾನಮಸುರಾಣಾಂ ಭಯಾವಹಮ್ ॥ ೪೬/೨೦,೨೧

| | | |
|---|---|---|
| ೭ | ಅಗ್ನಿ | ಜ್ವಾಲಾಜಿಹ್ವ ಹಾಗೂ ಜ್ಯೋತಿ ಎಂಬ ಇಬ್ಬರು ಅನುಚರರು |
| ೮ | ಅಂಶ (ಎಂಬ ದೇವತೆ) | ಪರಿಘ, ವಿಕಟ, ಭೀಮ, ದಹತಿ, ದಹನ ಎಂಬ ಐದು ಅನುಚರರು |
| ೯ | ಇಂದ್ರ | ಉತ್ಕ್ರೋಶ, ಸಂಸ್ಕರ ಎಂಬ ಇಬ್ಬರು ಅನುಚರರು (ವಜ್ರಾಯುಧ ಧರಿಸಿದ) |
| ೧೦ | ವಿಷ್ಣು | ಚಕ್ರ, ವಿಕ್ರಮಕ, ಸಂಕ್ರಮ ಮೂರು ಅನುಚರರು |
| ೧೧ | ಅಶ್ವಿನೀದೇವತೆಗಳು | ವರ್ಧನ, ನಂದ ಇಬ್ಬರು ಅನುಚರರು |
| ೧೨ | ಚತುಮುಖಬ್ರಹ್ಮ | ಕುಂದರ, ಕ್ರಮುಕ, ಕುಮುದ, ಡಂಬರ, ಆಡಂಬರ ಐದು ಅನುಚರರು |
| ೧೩ | ತ್ವಷ್ಟ | ವಕ್ರ, ಅನುವಕ್ರ ಇಬ್ಬರು ಅನುಚರರು |
| ೧೪ | ಮಿತ್ರ | ಸುವ್ರತ, ಸತ್ಯಸಂಧ ಇಬ್ಬರು ವಿದ್ಯಾಧರರು |
| ೧೫ | ವಿಧಾತೃ | ಸುಪ್ರಭ, ಶುಭಕರ್ಮಕ ಇಬ್ಬರು ಅನುಚರರು |
| ೧೬ | ಪೂಷ | ಪಾಲಿತುಂಗ, ಕಲಿಂಗ ಮಹಾಮಾಯಾವಿಗಳು |
| ೧೭ | ವರುಣ | ತಿಮಿಂಗಲಮುಖದ ಸವ ಅತಿಸವ ಇಬ್ಬರು ಅನುಚರರು |
| ೧೮ | ಹಿಮಾಲಯ | ಸುವರ್ಚಸ ಅತಿವರ್ಚಸ |
| ೧೯ | ಮೇರು | ಕಾಂಚನ, ಮೇಘಮಾಲಿ, ಅಸ್ಥಿರ, ಅತಿಸ್ಥಿರ ನಾಲ್ಕು ಅನುಚರರು |
| ೨೦ | ವಿಂಧ್ಯ | ಉಚ್ಛ್ರಿತ, ಅತಿಶೃಂಗ, ಮೇಘಮಾಲಿ ಮೂವರು ಅನುಚರರು |
| ೨೧ | ಸಮುದ್ರ | ಗದಾಧಾರಿಗಳಾದ ಸಂಗ್ರಹ, ವಿಗ್ರಹ ಅನುಚರರು |
| ೨೨ | ಪಾರ್ವತೀ | ಉನ್ಮಾದ, ಪುಷ್ಪದಂತ, ಶಂಕುಕರ್ಣ ಮೂವರು ಅನುಚರರು |
| ೨೩ | ಗಂಗಾ | ಜಯ, ಮಹಾಜಯ ಇಬ್ಬರು ಅನುಚರರು |
| ೨೪ | ಸಾಧ್ಯರು, ರುದ್ರರು, ಪಿತೃಗಳು, ಸಾಗರಗಳು, ನದಿಗಳು, ಗಿರಿಗಳು | ಆಯುಧಪಾಣಿಗಳಾದ ಸೇನಾಧ್ಯಕ್ಷರು |

ವ್ಯಾಸರು ಮುಂದೆ ವಿವಿಧ ಆಯುಧಧಾರಿಗಳೂ, ಚಿತ್ರವಿಚಿತ್ರ ವೇಷಧಾರಿಗಳೂ, ಕವಚಗಳನ್ನು ಧರಿಸಿದ ಸ್ಕಂದನ ಸೈನಿಕರ ಹೆಸರುಗಳನ್ನು ೨೧ ಶ್ಲೋಕಗಳಿಂದ ನಿರೂಪಿಸಿದ್ದಾರೆ (೫೭ ರಿಂದ ೭೮ರವರೆಗೆ). ಅವುಗಳಲ್ಲಿ ಕೆಲವು ಗಣಕರ್ಣ, ನಿಕುಂಭ, ಪದ್ಮಕುಮುದ, ಸುನಂದ, ದ್ವಾದಶಭುಜ, ಏಕಾಕ್ಷ, ದ್ವಾದಶಭುಜ, ಏಕಜಟ, ಪುಣ್ಯನಾಮಾ, ಸುನಾಮಾ,

ಗಜೋದರ, ಚತುರ್ದ್ರಂಷ್ಟ್ರ, ಅಷ್ಟಜಿಹ್ವ ಇತ್ಯಾದಿಗಳು ದೈತ್ಯರ, ರಾಕ್ಷಸರ ಹೆಸರುಗಳಂತೆಯೂ ಇವೆ. ಆಕಾರಗಳು ಹಾಗೆಯೇ ಇರುತ್ತವೆ.

ಸ್ಕಂದನ ಬಳಿಗೆ ಸಾವಿರಾರು ಸಂಖ್ಯೆಯಲ್ಲಿ ಅನುಚರರು ಬಂದರಂತೆ. ಅನುಚರರಲ್ಲಿಯೂ ಬೇರೆ ಬೇರೆ ಮುಖವುಳ್ಳವರೂ ಇದ್ದರು (ಆಮೆ, ಹುಂಜ, ಮೊಲ, ಉಡ, ಕತ್ತೆ, ಒಂಟೆ, ಹಂದಿ, ಮನುಷ್ಯ, ನರಿ, ಬೆಕ್ಕು, ಮುಂಗುಸಿ, ಗೂಬೆ, ನಾಯಿ, ಕುದುರೆ, ಇಲಿ, ನವಿಲು, ಮೀನು, ಕುರಿ, ಹುಲಿ, ಕರಡಿ, ಕೋಣ, ಚಿರತೆ, ತೋಳ ಇತ್ಯಾದಿ). ಅಲ್ಲದೆ ಚೆನ್ನಾಗಿ ಕಾಣುವ ಮುಖವುಳ್ಳವರೂ, ಉದಾ: ಪಾರಿವಾಳ, ನವಿಲು, ಕೋಗಿಲೆ, ತಿತ್ತಿರಿ ಮುಖವುಳ್ಳವರೂ, ಕಂಠದಲ್ಲಿ ಸರ್ಪಗಳನ್ನು ಸುತ್ತಿಕೊಂಡವರೂ, ವಿವಿಧ ಆಕಾರದ, ವಿಕಾರದ ಹೊಟ್ಟೆಯುಳ್ಳವರೂ, ಕೃಷ್ಣಮೃಗದ ಚರ್ಮವುಳ್ಳವರೂ, ಹೆಗಲಲ್ಲಿ, ಹೊಟ್ಟೆಯಲ್ಲಿ, ಬೆನ್ನಲ್ಲಿ ಮುಖವುಳ್ಳವರೂ, ಕೀಟಗಳಂತೆ ಕಾಣುವ ಮುಖವುಳ್ಳವರೂ, ಹಾವಿನ ಶರೀರದಂತೆ ಮುಖವುಳ್ಳವರೂ, ನಾರುಮಡಿಯುಟ್ಟವರೂ, ಹೀಗೆ ನಾನಾ ವೇಷಧಾರಿಗಳು, ಸ್ವಾಭಾವಿಕವಾಗಿಯೂ, ಕೃತಕವಾಗಿಯೂ ಇದ್ದರು. ಹೀಗೆ ಅನುಚರರ ದೇಹಗಳ ವಿವರಗಳನ್ನೇ ಸುಮಾರು ನಾಲ್ವತ್ತು ಶ್ಲೋಕಗಳಿಂದ ವರ್ಣಿಸಿದ್ದಾರೆ. ಇವೆರಲ್ಲರೂ ಸ್ಕಂದ ಅನುಚರರು. ಸಾವಿರ, ಹತ್ತು ಸಾವಿರ, ಅರ್ಬುದ ಸಂಖ್ಯೆಯಲ್ಲಿದ್ದರು. ಇವರೆಲ್ಲ ಪಟ್ಟಾಭಿಷೇಕೋತ್ಸವದಲ್ಲಿ ಸುತ್ತಲೂ ನೆರೆದಿದ್ದರು, ನರ್ತನಗೈದರು, ಸಂತೋಷಪಟ್ಟರು. ಇವರೆಲ್ಲ ಪಟ್ಟಾಭಿಷೇಕೋತ್ಸವದಲ್ಲಿ ಸಂತುಷ್ಟರಾಗಿ ನೃತ್ಯಗೈದರು[೧].

ನಂತರ ವೈಶಂಪಾಯನರು ಜನಮೇಜಯನಿಗೆ ಸ್ಕಂದ ನ ಅನುಚರರಾದ ಮಾತೃಗಣಗಳ ನಾಮಸಂಕೀರ್ತನೆಯನ್ನು ಮಾಡಿ ಅವರೆಲ್ಲರೂ ಮಹಾವೀರ್ಯವುಳ್ಳವರೂ, ದಾಯಾದಿಗಳ ನಾಶಕರೆಂದೂ ವರ್ಣಿಸಿದ್ದಾರೆ ೨೪ ಶ್ಲೋಕಗಳಿಂದ. ಅಲ್ಲದೆ ಅವರ ರೂಪ, ಶರೀರ, ಅಲಂಕಾರ, ಅವರು ಯಾರಿಗೆ ಸಂಬಂಧಿಗಳು, ಶರೀರದ ವರ್ಣ, ರೂಪವರ್ಣನೆಗಳೆಲ್ಲವನ್ನು ಹತ್ತಾರು ಶ್ಲೋಕಗಳಿಂದ ವರ್ಣಿಸಿದ್ದಾರೆ[೨].

---

೧ ದಿವ್ಯಾಶ್ಚಾಪ್ಯಾಂತರಿಕ್ಷಾಶ್ಚ ಪಾರ್ಥಿವಾಶ್ಚಾನಲೋಪಮಾಃ।
ವ್ಯಾದಿಷ್ಟಾ ದೈವತ್ಯೈಃ ಶೂರೈಃ ಸ್ಕಂದಸ್ಯಾನುಚರಾಽಭವನ್ ॥
ತಾದೃಶಾನಾಂ ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ।
ಅಭಿಷಿಕ್ತಂ ಮಹಾತ್ಮಾನಂ ಪರಿವಾರ್ಯೋಪತಸ್ಥಿರೇ ॥ - ೪೬/೧೧೯-೧೨೦

೨ ಯಶಸ್ವಿನೀನಾಂ ಮಾತೃಣಾಂ ಶೃಣು ನಾಮಾನಿ ಭಾರತ।
ಯಾಭಿರ್ವ್ಯಾಪ್ತಾಸ್ತ್ರಯೋ ಲೋಕಾಃ ಕಲ್ಯಾಣೀಭಿಶ್ಚರಾಚರಾಃ।
ಪ್ರಭಾವತೀ ವಿಶಾಲಾಕ್ಷೀ......... ಶ್ರೀಮತೀ ಬಹುಲಾ...........
ಸುರಚಕ್ರಾಮೇಘರವಾ ಮೇಘಮಾಲಾ ವಿರೋಚನಾ ॥ - ೪೭/೨-೨೩
ಏತಾಶ್ಚಾನ್ಯಾಶ್ಚ ಬಹುಲಾ ಮಾತರೋ ಭರತರ್ಷಭ।
ಕಾರ್ತಿಕೇಯಾನುಯಾಯಿನ್ಯೋ ನಾನಾರೂಪಾಃ ಸಹಸ್ರಶಃ।

ಇವರಲ್ಲಿ ಅನೇಕರು ಉದ್ದ ಹಲ್ಲುಗಳುಳ್ಳವರು, ಸುಂದರಿಯರು, ವರುಣ, ಅಗ್ನಿ, ಇಂದ್ರ, ವಾಯು, ಕುಬೇರ, ಬ್ರಹ್ಮಸಂಬಂಧಿಗಳೂ ಇದ್ದಾರೆ[೧].

ಆ ಮಾತೃಗಣಗಳು ರೂಪದಲ್ಲಿ ಅಪ್ಸರೆಯರಿಗೆ ಸಮಾನರೂ, ವೇಗದಲ್ಲಿ ವಾಯುವಿಗೆ ಸಮಾನರೂ ಆಗಿದ್ದಾರೆ.

ಯುದ್ಧದಲ್ಲಿ ಇಂದ್ರಸದೃಶರೂ, ಪ್ರಕಾಶದಲ್ಲಿ ಅಗ್ನಿಗೂ, ಕೋಗಿಲೆಯ ಧ್ವನಿಯುಳ್ಳವರೂ, ಕುಬೇರನಂತೆ ಧನಾಢ್ಯರೂ ಆಗಿದ್ದರು.

ಇವರೆಲ್ಲ ನಾನಾಭರಣ ಧರಿಸಿದವರೂ, ವಿವಿಧ ವೇಷಧಾರಿಗಳೂ, ಬೇರೆ ಬೇರೆ ಭಾಷೆಗಳಲ್ಲಿ ಮಾತನಾಡುವವರೂ ಆಗಿದ್ದರು. (ಔತ್ತರೇಯ ಪಾಠದಲ್ಲಿ ಕೆಲವು ಬೇರೆ ಶ್ಲೋಕಗಳೇ ಇವೆ. ಅವುಗಳಲ್ಲಿ ಈ ಮಾತೃಗಣಗಳು, ಕಾಮಚಾರಿಗಳೂ, ನಿತ್ಯಸಂತುಷ್ಟರೂ, ಯಮ, ರುದ್ರ, ಚಂದ್ರ, ಕುಬೇರ, ವರುಣ, ಅಗ್ನಿ, ವಾಯು, ಕುಮಾರ, ಬ್ರಹ್ಮ, ವಿಷ್ಣು, ಸೂರ್ಯ, ವರಾಹ, ದೇವತೆಗಳ ಸಂಬಂಧಿ ಶಕ್ತಿಯುಳ್ಳವರೆಂದು ವರ್ಣಿಸಲಾಗಿದೆ. ಈ ಅಧ್ಯಾಯದ ಶ್ಲೋಕಗಳಲ್ಲಿ ಒಂದೇ ರೀತಿ ಕಾಣುವುದಿಲ್ಲ). ಇವರೆಲ್ಲ ಸ್ಕಂದನನ್ನು ಅನುಸರಿಸಿ ಹೋದರು. ನಂತರ ಇಂದ್ರನು ಸ್ಕಂದನಿಗೆ **ಶಕ್ತ್ಯಸ್ತ್ರ**ವನ್ನು ಕೊಟ್ಟನು. ಅಲ್ಲದೆ ಭಾರೀ ಧ್ವನಿ ಮಾಡುವ ಘಂಟೆ ಹಾಗೂ ತರುಣ ಸೂರ್ಯನಂತಿರುವ ಬಿಳಿದಾದ ಧ್ವಜವನ್ನೂ ಕೊಟ್ಟನು ಮತ್ತು

| ಸಂಖ್ಯೆ | ದೇವತೆ | ಕೊಟ್ಟ ಉಡುಗೊರೆ ಅನುಚರರು |
|---|---|---|
| ೧ | ಇಂದ್ರ | ಶಕ್ತ್ಯಸ್ತ್ರ ದೊಡ್ಡ ಘಂಟೆ, ಬಿಳಿಧ್ವಜ |
| ೨ | ಪಶುಪತಿ | ಸರ್ವಭೂತ ಮಹಾಸೈನ್ಯ ರುದ್ರಸೈನ್ಯದ ಮುಖ್ಯಭಾಗ ಭೂತಗಳು |
| ೩ | ವಿಷ್ಣು | ವೈಜಯಂತೀ ಮಾಲೆ |
| ೪ | ಉಮಾ | ಚಂದ್ರನಂತೆ ಬಿಳಿಬಣ್ಣದ ಎರಡು ವಸ್ತ್ರ |
| ೫ | ಗಂಗಾ | ಅಮೃತೋದ್ಭವ ಕಮಂಡಲು |

---

ದೀರ್ಘದಂತಾಃ ದೀರ್ಘನೇತ್ರಾ.......................
ವಾಯವ್ಯಾಶ್ಚಾಥ ಕೌಬೇರ್ಯೋ ಬ್ರಾಹ್ಮ್ಯಶ್ಚ ಭರತರ್ಷಭ। - ೪೭/೨೪-೩೨
೧ ರೂಪೇಣಾಪ್ಸರಸಾಂ ತುಲ್ಯಾ ಜವೇ ವಾಯುಸಮಾಶ್ಚತಾಃ।
ಶಕ್ರವೀರ್ಯೋಪಮಾಃ ಯುದ್ಧೇ ದೀಪ್ತವಹ್ನಿಸಮಪ್ರಭಾಃ।
ಪರಪುಷ್ಟೋಪಮಾ ವಾಕ್ಯೇ ಧನಾಢ್ಯಾ ಧನದೋಪಮಾಃ॥ - ೪೭/೩೩,೩೪

| | | |
|---|---|---|
| ೬ | ಬೃಹಸ್ಪತಿ | ದಂಡ |
| ೭ | ಗರುಡ | ಚಿತ್ರಗರಿಯುಳ್ಳ ನವಿಲು, ವಿವಿಧ ಬಣ್ಣಗಳುಳ್ಳ |
| ೮ | ಅರುಣ | ಕೋಳಿ (ಅದರ ಕಾಲೇ ಆಯುಧ) |
| ೯ | ಚತುರ್ಮುಖ ಬ್ರಹ್ಮ | ಬ್ರಾಹ್ಮಣಪ್ರಿಯನಾದ, ಬ್ರಹ್ಮಣ್ಯ- ನಾದ, ಸ್ಕಂದನಿಗೆ ಕೃಷ್ಣಾಜಿನ, ಯುದ್ಧಗಳಲ್ಲಿ ಜಯ ಹಾರೈಕೆ |

ಹೀಗೆ ಸ್ಕಂದನು ದೇವಸೇನಾಪತ್ಯವನ್ನು ಹೊಂದಿ ಕಾಂತಿಯಿಂದ ಎರಡನೇ ಅಗ್ನಿಯಂತೆ ಪ್ರಜ್ವಲಿಸಿದನು. ನಂತರ ಅನುಚರರು ಮಾತೃಗಳು, ಕೂಡಿಕೊಂಡು ದೇವತೆಗಳಿಗೆ ಆನಂದವುಂಟು ಮಾಡುತ್ತಾ ದೈತ್ಯನಾಶಕ್ಕಾಗಿ ಹೋದನು. ಆ ಸೈನ್ಯ ಶರತ್ಕಾಲದ ನಕ್ಷತ್ರಗಳಿಂದ ಕೂಡಿದ ಆಕಾಶದಂತಿತ್ತು. ನಂತರ ದೇವ, ಭೂತಗಣಗಳು ಭೇರಿ, ಶಂಖ, ಪಟಹಾದಿಗಳಿಂದ ಭಾರಿನಾದ ಮಾಡಿದವು. ಇಂದ್ರಾದಿದೇವತೆಗಳು ಸ್ತುತಿಸಿದರು, ಗಂಧರ್ವರು ಹಾಡಿದರು, ಅಪ್ಸರೆಯರು ನರ್ತಿಸಿದರು. ಇದರಿಂದ ಪ್ರೀತನಾದ ಸ್ಕಂದನು ದೇವತೆಗಳಿಗೆ ವರಕೊಟ್ಟು ಉದ್ದೇಶಿತ ದೈತ್ಯಸಂಹಾರ ಮಾಡುವೆನೆಂದನು[೧].

ಸ್ಕಂದನ ವರದಿಂದ ಸಂತುಷ್ಟರಾದ ದೇವತೆಗಳು ದೈತ್ಯನಾದ (ತಾರಕಾಸುರ), ಶತ್ರುಗಳು ಸತ್ತರೆಂದು ಭಾವಿಸಿದರು. ಸ್ಕಂದನ ವರಪ್ರಸಾದದಿಂದ ಮೂರು ಲೋಕಗಳು ಹರ್ಷೋದ್ಗಾರದಿಂದ ತುಂಬಿದವು.

ಸ್ಕಂದನ ಸೈನ್ಯದ ಮುಂದೆ [೨]ವ್ಯವಸಾಯ, ಜಯ, ಧರ್ಮ, ಸಿದ್ಧಿ ಲಕ್ಷ್ಮೀ, ಧೃತಿ, ಸ್ಮೃತಿಗಳು ಇದ್ದರು (ಈ ಗುಣಧರ್ಮಗಳ ಅಭಿಮಾನಿ ದೇವತೆಗಳು ಇದ್ದರು. ಆದ್ದರಿಂದ ಜಯ ಕಟ್ಟಿಟ್ಟ ಬುತ್ತಿ ಎಂದು ಭಾವ). ಸ್ಕಂದನು ಸೈನ್ಯದೊಂದಿಗೆ ಗರ್ಜಿಸುತ್ತಾ ಹೊರಟನು. [೩]ಸ್ಕಂದನನ್ನು ನೋಡಿದ ದೈತ್ಯರು, ರಾಕ್ಷಸರು, ದಾನವರು, ಭಯದಿಂದ ಉದ್ವಿಗ್ನರಾಗಿ ಏನೂ ಮಾಡಲು

---

೧ ತುಷ್ಟುವುಸ್ತೇ ಕುಮಾರಂ ಚ ಸರ್ವೇ ದೇವಾಃ ಸವಾಸವಾಃ।
ಜಗುಶ್ಚ ದೇವಗಂಧರ್ವಾಃ ನನೃತುಶ್ಚಾಪ್ಸರೋ ಗಣಾಃ॥
ತತಃ ಪ್ರೀತೋ ಮಹಾಸೇನಃ ತ್ರಿದಶಾನಾಂ ವರಂ ದದೌ।
ರಿಪೂನ್ ಹಂತಾಸ್ಮಿ ಸಮರೇ ಯೇಷಾಂ ವಧಚಿಕೀರ್ಷವಃ॥
ಪ್ರತಿಗೃಹ್ಯ ಪರಂ ದೇವಾಃ ತಸ್ಮಾದ್ ವಿಬುಧಸತ್ತಮಾತ್।
ಪ್ರೀತಾತ್ಮನೋ ಮಹಾತ್ಮನೋ ಮೇನಿರೇ ನಿಹತಾನ್ ರಿಪೂನ್॥ - ೪೭/೫೩-೫೫
೨ ವ್ಯವಸಾಯೋ ಜಯೋ ಧರ್ಮಃ ಸಿದ್ಧಿರ್ಲಕ್ಷ್ಮೀರ್ಧೃತಿಃ ಸ್ಮೃತಿಃ।
ಮಹಾಸೇನಸ್ಯ ಸೈನ್ಯಾನಾಮಗ್ರೇ ಜಗ್ಮುರ್ನರಾಧಿಪ॥ -೪೭/೫೮
೩ ತಂ ದೃಷ್ಟ್ವಾ ಸರ್ವದೈತೇಯಾ ರಾಕ್ಷಸಾ ದಾನವಾಸ್ತಥಾ।
ವ್ಯದ್ರವಂತ ದಿಶಃ ಸರ್ವಾ ಭಯೋದ್ವಿಗ್ನಾಃ ಸಮಂತತಃ॥ - ೪೭/೬೧

ತೋಚದವರಾಗಿ ಎಲ್ಲ ದಿಕ್ಕುಗಳಿಗೆ ಪಲಾಯನ ಮಾಡಿದರು. ದೇವತೆಗಳು ಅವರನ್ನು ಬೆನ್ನಟ್ಟಿಸಿಕೊಂಡು ಹೋದರು.

ನಂತರ ಸ್ಕಂದನು, ಅಗ್ನಿಯು ತನ್ನ ಬಲವನ್ನು ಪ್ರಯೋಗಿಸಿದಂತೆ ತನ್ನಲ್ಲಿದ್ದ [೧]ಶಕ್ತ್ಯಸ್ತ್ರವನ್ನು ಪ್ರಯೋಗಿಸಿದನು. ಆಗ ಭೂಮಿಯ ಮೇಲೆ ಉಲ್ಕಾಪಾತಗಳಾದವು. ಪ್ರಯೋಗಿಸಿದ್ದು ಒಂದು ಶಕ್ತ್ಯಸ್ತ್ರ. ಆದರೆ ಆಗ ಕೋಟ್ಯಂತರ ಶಕ್ತ್ಯಾಯುಧಗಳು ಬಿದ್ದವು, ಶತ್ರುಗಳ ಮೇಲೆ[೨]. ಅದರಿಂದ ಶತ್ರುಗಳನ್ನು ದಾನವರನ್ನುಸ್ಕಂದನು ಸಂಹರಿಸಿದನು. ಮಹಾಬಲಪರಾಕ್ರಮಿಯಾದ ಒಂದುಲಕ್ಷ ಸಂಖ್ಯೆಯ ವೀರದೈತ್ಯರು ಸುತ್ತುವರಿದಿದ್ದು (ಅವರಿಂದ ರಕ್ಷಿತನಾದ) **ತಾರಕಾಸುರನನ್ನೂ** (ಶಕ್ತ್ಯಾಯುಧ)ದಿಂದಲೇ ಹೊಡೆದು ಸಂಹರಿಸಿದನು. ಎಂಟು ಪದ್ಮಸಂಖ್ಯೆಯ ದೈತ್ಯರಿಂದ ಸುತ್ತುವರಿಯಲ್ಪಟ್ಟ **ಮಹಿಷಾಸುರನನ್ನೂ** ಯುದ್ಧದಲ್ಲಿ ಕೊಂದನು (ಪದ್ಮ - ಒಂದರ ಮುಂದೆ ೧೯ ಸೊನ್ನೆಗಳಿಟ್ಟಾಗ ಆಗುವ ಸಂಖ್ಯೆ - ೧೦೦೦೦೦೦೦೦೦೦೦೦೦೦೦೦೦೦೦ - ಬಹುಸಂಖ್ಯಾತ ಸೈನ್ಯ ಎಂದುಕೊಳ್ಳಬಹುದು).

ಅಲ್ಲದೆ ಹತ್ತು ಅಯುತಶತ ಸಂಖ್ಯೆಯ (ಹತ್ತುಲಕ್ಷ) ಸೈನ್ಯರಿಂದ ಸುತ್ತುವರಿಯಲ್ಪಟ್ಟ [೩]**ತ್ರಿಪಾದ** ಎಂಬ ದೈತ್ಯನನ್ನೂ ಕೊಂದನು. ನಂತರ ಸ್ಕಂದನು ಹತ್ತು ನಿಖರ್ವ ದೈತ್ಯರಿಂದ ಸಂರಕ್ಷಿತನಾದ 'ಹ್ರದೋದರ' ಎಂಬ ದೈತ್ಯನನ್ನು ಹಾಗೂ ವಿವಿಧ ಆಯುಧಧಾರಿಗಳಾದ ದೈತ್ಯರನ್ನು ಸಂಹರಿಸಿದನು. ಹೀಗೆ ದೈತ್ಯರ ಸಂಹಾರವಾಗುತ್ತಿರಲು ಸ್ಕಂದಾನುಚರರು, ಮಹಾನಾದ ಮಾಡಿದರು.. ಅದೆಲ್ಲ ದಿಕ್ಕುಗಳಲ್ಲಿ ವ್ಯಾಪಿಸಿತು. ಶಕ್ತ್ಯಸ್ತ್ರದ ಜ್ವಾಲೆಗಳಿಂದ ಮೂರೂ ಲೋಕಗಳು ಸಂತಪ್ತವಾದವು. ಅಲ್ಲದೆ ಸ್ಕಂದನ ನಾದವೇ ಸಾವಿರಾರು ದೈತ್ಯರ ನಾಶಕ್ಕೆ ಕಾರಣವಾಯಿತು. ಹೀಗೆ ಆತತಾಯಿಗಳಾದ ದೈತ್ಯರ ನಾಶವು ಯುದ್ಧದಲ್ಲಿ ನಡೆಯಿತು.

---

೧ ದೃಷ್ಟ್ವಾ ಚಾಪತತಃ ಕ್ರುದ್ಧಃ ಸ್ಕಂದಸ್ತೇಜೋಬಲಾನ್ವಿತಃ ।
ಶಕ್ತ್ಯಸ್ತ್ರಂ ಭಗವಾನ್ ದೇವಃ ಪುನಃ ಪುನರರಿಂದಮಃ ॥
ಆದಧಚ್ಚಾತ್ಮನಸ್ತೇಜೋ ಹವಿಷೇವ ಯಥಾಽನಲಃ ।
ಸಂಹ್ರಾದಯಂತಃ ಶತಶೋ ನಿರ್ಘಾತಾಶ್ಚಾಪತನ್ ಕ್ಷಿತೌ ।
ಯಥಾಽಂತಕಾಲಸಮಯೇ ಸುಘೋರಾಃ ಸ್ಯುಸ್ತಥಾ ನೃಪ ॥ - ೪೭/೬೩,೬೪,೬೬

೨ ಕ್ಷಿಪ್ತಾ ಹ್ಯೇಕಾ ಯದಾ ಶಕ್ತಿಃ ಸುಘೋರಾಽನಲಸೂನುನಾ ।
ತದಾ ಕೋಟ್ಯೋ ವಿನಿಷ್ಪೇತುಃ ಶಕ್ತೀನಾಂ ಭರತರ್ಷಭ ॥
ಸ ಶಕ್ತ್ಯಸ್ತ್ರೇಣ ದನುಜಾನ್ ಜಘಾನ ಭಗವಾನ್ ಪ್ರಭುಃ ॥
ದೈತ್ಯೇಂದ್ರಂ **ತಾರಕಂ** ನಾಮ ಮಹಾಬಲಪರಾಕ್ರಮಮ್ ।
ವೃತಂ ದೈತ್ಯಾಯುತೈರ್ವೀರೈರ್ಬಲಿಭಿರ್ದಶಭಿಃ ಪ್ರಭುಃ ॥
**ಮಹಿಷಂ** ಚಾಷ್ಟಭಿಃ ಪದ್ಮೈರ್ವೃತಂ ಸಂಖ್ಯೇ ಜಘಾನ ಹ ॥ - ೪೭/೬೭-೭೦

೩ ತ್ರಿಪಾದಂ ಚಾಯುತಶತೈರ್ಜಘಾನ ದಶಭಿರ್ವೃತಮ್ ॥
**ಹ್ರದೋದರಂ** ನಿಖರ್ವೈಶ್ಚ ವೃತಂ ದಶಭಿರೀಶ್ವರಃ ।
ಜಘಾನಾನುಚರೈಃ ಸಾರ್ಧಂ ವಿವಿಧಾಯುಧಪಾಣಿಭಿಃ ॥ - ೪೭/೭೧,೭೨

ನಂತರ ಬಲಿಯ ಮಗನಾದ [೧]ಬಾಣಾಸುರ ಕ್ರೌಂಚಪರ್ವತವನ್ನೇರಿ ದೇವತಾ ಸಂಘವನ್ನು ಪೀಡಿಸಿದನು. ಆಗ ಅವನನ್ನು ಸ್ಕಂದನು ಎದುರಿಸಲು ಅವನು ಕ್ರೌಂಚಪರ್ವತವನ್ನು ಆಶ್ರಯಿಸಿದನು. ಸ್ಕಂದನು ಆ ಪರ್ವತಕ್ಕೇನೇ ಶಕ್ತ್ಯಸ್ತ್ರದಿಂದ ಅಗ್ನಿಸ್ಪರ್ಶ ಮಾಡಿಸಿದನು. ಪರಿಣಾಮವಾಗಿ ಪರ್ವತವನ್ನು ಆಶ್ರಯಿಸಿದ್ದ ಕೋತಿಗಳು, ಆನೆಗಳು ಹೆದರಿದವು. ಹಕ್ಕಿಗಳು ಹಾರಿದವು. ಬಿಲದೊಳಗಿದ್ದ ಹಾವುಗಳು ಹೊರಬಂದವು. ಅನೇಕಾನೇಕ ಪ್ರಾಣಿಗಳ ಕಿರುಚಾಟದಿಂದ ಆರ್ತನಾದ ಉಂಟಾಯಿತು. ಶರಭಗಳೂ ಭಯದಿಂದ ಕುಪ್ಪಳಿಸಿದವು. ಸಿಂಹಗಳು ಓಡಿಹೋದವು. ಪರ್ವತವು ಹೀಗೆ ದಯನೀಯಸ್ಥಿತಿ ಹೊಂದಿತು. ಅಲ್ಲಿದ್ದ ವಿದ್ಯಾಧರರು, ಕಿನ್ನರರು ಬೇರೆ ಕಡೆಗೆ ಹೋದರು. ಆಗ ಆಭರಣಾದಿಗಳಿಂದ ಅಲಂಕೃತರಾದ ದೈತ್ಯರು ಪರ್ವತದಿಂದ ಹೊರಬಿದ್ದರು. ಅವರನ್ನು ಸ್ಕಂದಾನುಚರರು ಕೊಂದರು, ಶಕ್ತ್ಯಸ್ತ್ರದಿಂದ. ಕ್ರೌಂಚಪರ್ವತ ಪುಡಿಪುಡಿಯಾಯಿತು. ಸ್ಕಂದನು ತನ್ನನ್ನು ಅನೇಕ ವಿಧವಾಗಿ ರೂಪಾಂತರಿಸಿಕೊಂಡು, ಕೆಲವೊಮ್ಮೆ ಒಂದೇ ರೂಪ ತಾಳಿ ಶಕ್ತ್ಯಾಯುಧ ಪ್ರಯೋಗಿಸುತ್ತಿದ್ದ. ಅದು ಮತ್ತೆ ವಾಪಸು ಬಂದು ಸ್ಕಂದನ ಕೈ ಸೇರುತ್ತಿತ್ತು. ಅದರ ಉಪಯೋಗ ಅನೇಕ ಬಾರಿ ಆಗುತ್ತಿತ್ತು. ಹೀಗಾಗಿ ದೈತ್ಯರೂ ಹತರಾದವು. ಪರ್ವತವೂ ತುಂಡು ತುಂಡಾಯಿತು. ಹೀಗೆ ಕ್ರೌಂಚಪರ್ವತ ಒಡೆದುಹೋಗಲು, ದೈತ್ಯರು ನಾಶವಾಗಲು ದೇವತೆಗಳು ಸ್ಕಂದನನ್ನು ಪ್ರಶಂಸಿಸಿದರು. ತಾವೂ ಸಂತೋಷಗೊಂಡರು.

ನಂತರ ದೇವ ದುಂದುಭಿಗಳು ನಾದ ಮಾಡಿದವು ಶಂಖಗಳು ಮೊಳಗಿದವು, ದೇವತೆಗಳು ಸೇನಾನಿಯಾದ ಸ್ಕಂದನ ಮೇಲೆ ಪುಷ್ಪವೃಷ್ಟಿಗೈದರು. ಪರಿಮಳೋಪೇತ ಗಾಳಿ ಬೀಸಿತು.

---

೧ ಬಾಣೋ ನಾಮಾಥ ದೈತ್ಯೇಂದ್ರೋ ಬಲೇಃ ಪುತ್ರೋ ಮಹಾಬಲಃ।
ಕ್ರೌಂಚಪರ್ವತಮಾಸಾದ್ಯ ದೇವಸಂಘಾನಬಾಧತ ॥
ತತಃ ಕ್ರೌಂಚಮಭಿದ್ರುತ್ಯ ಕ್ರೌಂಚನಾದವಿನಾದಿತಮ್ ।
ಶಕ್ತ್ಯಾಬಿಭೇದ ಭಗವಾನ್ ಕಾರ್ತಿಕೇಯೋಽಗ್ನಿದತ್ತಯಾ ॥
ವಿದ್ಯಾಧರಾಃ ಸಮುತ್ಪೇತುಸ್ತಸ್ಯ ಶೃಂಗನಿವಾಸಿನಃ।
ಕಿನ್ನರಾಶ್ಚ ಭಯೋದ್ವಿಗ್ನಾಃ ಶಕ್ತಿಪ್ರಾಸರವೋದ್ಧತಾಃ ॥
ತತೋ ದೈತ್ಯಾ ವಿನಿಷ್ಪೇತುಃ ಶತಶೋಽಥ ಸಹಸ್ರಶಃ।
ಪ್ರದೀಪ್ತಾತ್ ಪರ್ವತಶ್ರೇಷ್ಠಾದ್ ವಿಚಿತ್ರಾಭರಣಸ್ರಜಃ ॥
ತಾನ್ ನಿಜಘ್ನುರತಿಕ್ರಮ್ಯ ಕುಮಾರಾನುಚರಾ ಮೃಧೇ।
ಬಿಭೇದ ಶಕ್ತ್ಯಾ ಕ್ರೌಂಚಂ ಚ ಪಾವಕಿಃ ಪರವೀರಹಾ ॥
ಬಹುಧಾ ಚೈಕಧಾ ಚೈವ ಕೃತ್ವಾಽಽತ್ಮಾನಂ ಮಹಾತ್ಮನಾ।
ಶಕ್ತಿಃ ಕ್ಷಿಪ್ತಾ ರಣೇ ತೇನ ಪಾಣಿಮೇತಿ ಪುನಃ ಪುನಃ ॥
ಏವಂ ಪ್ರಭಾವೋ ಭಗವಾನತೋ ಭೂಯಶ್ಚ ಪಾವಕಿಃ।
ಕ್ರೌಂಚಸ್ತೇನ ವಿನಿರ್ಭಿನ್ನೋ ದೈತ್ಯಾಶ್ಚ ಶತಶೋ ಹತಾಃ ॥ - ೪೭/೭೯,೮೧,೮೫-೮೯

ಗಂಧರ್ವರು ಸ್ತೋತ್ರ ಮಾಡಿದರು. ಮಹರ್ಷಿಗಳು ಗೆಲುವಿನ ಯಾಗ ಮಾಡಿದರು.

[೧]ಕೆಲವರು ಹೀಗೆ ನಿಶ್ಚಯಿಸಿದರು. ಈತನು ಬ್ರಹ್ಮಪುತ್ರನಾದ (ಕುಮಾರನನ್ನು) ಬ್ರಹ್ಮಪುತ್ರರಲ್ಲಿ ದೊಡ್ಡವನಾದ ಸನತ್ಕುಮಾರ, ಮತ್ತೆ ಕೆಲವರು ರುದ್ರಪುತ್ರನೆಂದೂ, ಇನ್ನೂ ಕೆಲವರು ಅಗ್ನಿಪುತ್ರನೆಂದೂ, ಪಾರ್ವತೀಪುತ್ರನೆಂದೂ, ಕೃತ್ತಿಕೆಯರ ಮಗನೆಂದೂ, ಮತ್ತೆ ಕೆಲವರು ಗಂಗೆಯ ಪುತ್ರನೆಂದೂ ಹೇಳಲಾರಂಭಿಸಿದರು.

ದೇವತೆಗಳು, ಗಂಧರ್ವರು ಒಬ್ಬೊಬ್ಬರಾಗಿ, ಇಬ್ಬಿಬ್ಬರಾಗಿ, ನಾಲ್ಕಾರು ಜನ ಸೇರಿ, ಯೋಗೀಶ್ವರನಾದ ಸ್ಕಂದನನ್ನು ಆತನ ಮಹಿಮೆಯನ್ನು ಕೊಂಡಾಡಿದರು.

ಎಲೈ ಜನಮೇಜಯನೇ! ಇದುವೇ ಕಾರ್ತಿಕೇಯನ ಅಭಿಷೇಕ ಹಾಗೂ ಆತನು ಮಾಡಿದ ತಾರಕ ಸಂಹಾರ ಚರಿತ್ರೆ. ನಂತರ ಸರಸ್ವತೀತೀರ್ಥ ಸ್ವರ್ಗತುಲ್ಯವಾಯಿತು. [೨]ಸರಸ್ವತೀತೀರ್ಥದಲ್ಲಿದ್ದ ಸಂಪತ್ತನ್ನು ಸ್ಕಂದನು ತನ್ನ ಅನುಚರರಿಗೆ ಹಂಚಿದನು. ಹೀಗೆ ಸ್ಕಂದನು ಸರಸ್ವತೀತೀರ್ಥದಲ್ಲಿ ಸೇನಾನಿಯಾಗಿ ದೈತ್ಯಕುಲನಾಶಕನಾದ. ವರುಣನು ಅಭಿಷಿಕ್ತನಾದ ತೀರ್ಥ ತೈಜಸತೀರ್ಥವಾಯಿತು.

ಬಲರಾಮನು ಆ ತೀರ್ಥದಲ್ಲಿ ಸ್ನಾನ ಮಾಡಿ, ಸ್ಕಂದನನ್ನು ಪೂಜಿಸಿ, ಬ್ರಾಹ್ಮಣರಿಗೆ ಅನೇಕ ದಾನ ನೀಡಿದನು. ನಂತರ ಅಲ್ಲಿ ರಾತ್ರಿ ಇದ್ದು ಸಂತೋಷಗೊಂಡನು.

ದೇವತೆಗಳಿಂದ ಯಾವತೀರ್ಥದಲ್ಲಿ ಬಾಲಕ ಸ್ಕಂದನು ಅಭಿಷೇಕಗೊಂಡನೋ ಅಲ್ಲಿಯೇ ದೇವಸೇನಾಪತಿ ಎಂದು ಕರೆಸಿಕೊಂಡನು.

## ಸಂದೇಶಗಳು-ವಿವರಣೆಗಳು

೧. ರುದ್ರದೇವರ ವೀರ್ಯವನ್ನು ಅಗ್ನಿ, ಗಂಗೆಯರು ಧರಿಸಲು ಅಸಮರ್ಥರೆಂಬುದು ಅತಿ ಸಹಜವಾದುದು. ಎಲ್ಲಿಯ ರುದ್ರದೇವರು, ಎಲ್ಲಿಯ ಅಗ್ನಿ, ಗಂಗೆಯರು. ಆದರೂ ಅವರಿಗೆ ಕೀರ್ತಿ ಕೊಡಲೋಸುಗ ಸ್ಕಂದನನ್ನು ಅಗ್ನಿಪುತ್ರ, ಗಾಂಗೇಯ ಎಂಬುದಾಗಿ ಕರೆಯಲಾಗಿದೆ. ಅದು ರುದ್ರದೇವರ ಕಾರುಣ್ಯ. ಅವರ ವೀರ್ಯಧಾರಣ ಸಾಮರ್ಥ್ಯ

---

೧ ಕೇಚಿದೇನಂ ವ್ಯವಸ್ಯಂತಿ ಪಿತಾಮಹಸುತಂ ವಿಭುಮ್ ।
ಸನತ್ಕುಮಾರಂ ಸರ್ವೇಷಾಂ ಬ್ರಹ್ಮಯೋನಿಂ ತಮಗ್ರಜಮ್ ।
ಕೇಚಿನ್ಮಹೇಶ್ವರಸುತಂ ಕೇಚಿತ್ ಪುತ್ರಂ ವಿಭಾವಸೋಃ ।
ಉಮಾಯಾಃ ಕೃತ್ತಿಕಾಯಾಶ್ಚ ಗಂಗಾಯಾಶ್ಚ ವದಂತ್ಯುತ ॥ - ೪೭/೯೪,೯೫

೨ ಐಶ್ವರ್ಯಾಣಿ ಚ ತತ್ರಸ್ಥೋ ದದಾವೀಶಃ ಪೃಥಕ್ ಪೃಥಕ್ ।
ತಥಾ ನೈರ್ಋತಮುಖ್ಯೇಷು ತ್ರೈಲೋಕ್ಯೇ ಪಾವಕಾತ್ಮಜಃ ॥
ಏವಂ ಸ ಭಗವಾಂಸ್ತಸ್ಮಿನ್ ತೀರ್ಥೇ ದೈತ್ಯಕುಲಾಂತಕೃತ್ ।
ಅಭಿಷಿಕ್ತೋ ಮಹಾರಾಜ ದೇವಸೇನಾಪತಿಃ ಸುರೈಃ ॥ - ೪೭/೯೯,೧೦೦

ಇರುವುದು ಉಮಾದೇವಿಗೆ ಮಾತ್ರ. ದೇವತೆಗಳ ಪ್ರಾರ್ಥನೆ ಮೇರೆಗೆ ಉಮಾದೇವಿ ಗರ್ಭಧರಿಸಲಿಲ್ಲವೆಂಬುದು ಮಹಾಭಾರತದ ಇನ್ನೊಂದು ಭಾಗದಲ್ಲಿ ಬಂದಿದೆ.

೨. ಕುಮಾರನಿಗೆ ಹಾಲು ಕುಡಿಸಿದ(ಸ್ತನ್ಯಪಾನ ಮಾಡಿಸಿದ) ಕೃತ್ತಿಕಾ ನಕ್ಷತ್ರಗಳು ಮಹಾಪುಣ್ಯಂತರೇ ಸರಿ. ಅವರಿಗೆ ಮಾತೃತ್ವಕೀರ್ತಿಯನ್ನು ಕೊಟ್ಟ ದೊಡ್ಡಸ್ತಿಕೆ ಸ್ಕಂದ ಹಾಗೂ ರುದ್ರದೇವರಿಗೆ ಸಲ್ಲುತ್ತವೆ. ಪ್ರಪಂಚದಲ್ಲೂ ಇಂತಹ ಪ್ರಸಂಗಗಳನ್ನು ನೋಡುತ್ತೇವೆ. ಯಾರದೋ ಮಕ್ಕಳಿಗೆ ಬೇರಾವ ಮಹಿಳೆಯು ಸ್ತನ್ಯಪಾನ ಮಾಡಿಸಿ, ಲಾಲನೆ, ಪಾಲನೆ ಮಾಡುವುದು ಅಲ್ಲಲ್ಲಿ ಇಂದಿಗೂ ನೋಡುತ್ತೇವೆ. ಅದೆಲ್ಲ ಅವರು ಪಡೆದ ಪೂರ್ವಜನ್ಮ ಸುಕೃತದ ಫಲ.

೩. ಸ್ಕಂದನ ಜಾತಕರ್ಮ ಕಾರ್ಯಕ್ರಮಕ್ಕೆ ದೇವಾಧಿದೇವತೆಗಳು ಬಂದುದು ಪ್ರಾಯಃ ಒಂದು ದೊಡ್ಡ ದಾಖಲೆ. ಭಗವಂತನ ಒಲುಮೆ ಇದ್ದರೆ ತಂದೆತಾಯಿಗಳ ಪುಣ್ಯದಿಂದ (ಶಿವಪಾರ್ವತಿಯರ) ಸ್ಕಂದನ ಜಾತಕರ್ಮಕ್ಕೆ ಹರಿಹರ ಬ್ರಹ್ಮಾದಿ ಸಮಸ್ತ ದೇವತೆಗಳ ಮೇಲನ ಅಪೂರ್ವದಾಖಲೆ (ವೈದಿಕ).

೪. ಹಾಗೆಯೇ ಆತನ ಸೇನಾಪತ್ಯಾಭಿಷೇಕವೂ ಅತ್ಯಂತ ಅಪೂರ್ವ ದಾಖಲೆ. ತಾರಕಾಸುರ ಸಂಹಾರದ ಕೀರ್ತಿಯನ್ನು ಸರ್ವೋತ್ತಮನಾದ ಹರಿಯಿಂದ ಎಲ್ಲ ವೈಷ್ಣವರು ಆಗಮಿಸಿ, ಹರಸಿ, ಕೊಟ್ಟುದುದು ಸ್ಕಂದನ ಯೋಗ್ಯತೆ ಹಾಗೂ ಅತಿ ವಿಶೇಷವಾದ ಭಗವದ್ವಿಭೂತಿಯುಳ್ಳವನೆಂಬುದಕ್ಕೆ ಸಾಕ್ಷಿಯಾಗಿದೆ. ಇದು '**ಸೇನಾನೀನಾಂ ಅಹಂ ಸ್ಕಂದಃ**' (೧೦/೨೦) ಎಂಬ ಗೀತೆಯ ಮಾತಿನಲ್ಲಿ ಸ್ಫುಟವಾಗುತ್ತದೆ.

೫. ವಿಷ್ಣುವಿನಿಂದ ಹಿಡಿದು ಎಲ್ಲ ದೇವತೆಗಳು ಸೇನಾಪತಿಪಟ್ಟಕ್ಕೇರಿದ. ಸ್ಕಂದನಿಗೆ ನೀಡಿದ ವಿವಿಧ ಅಸ್ತ್ರ ಶಸ್ತ್ರ ಉಡುಗೊರೆಗಳು, ಅನುಚರರು ಅವರೆಲ್ಲರ ಅನುಗ್ರಹ, ಆಶೀರ್ವಾದ, ಕಿರಿಯರು ನೀಡಿದ ಸದ್ಭಾವನಾ ಗೌರವಪೂರ್ವಕ ಕಾಣಿಕೆಗಳು. ಮತ್ತೊಂದು ಐತಿಹಾಸಿಕ ವೈದಿಕ ದಾಖಲೆ. ಇಂತಹ ದಾಖಲೆಗಳು ಪ್ರಾಯಃ ಇತರೆಡೆ ಕಾಣಸಿಗದು. ಇಂದ್ರದೇವರು ಕೊಟ್ಟ ಶಕ್ತ್ಯಸ್ತ್ರದ ಪ್ರಭಾವ ಪ್ರಾಯಃ ಎಲ್ಲ ಅಸ್ತ್ರಗಳಿಗಿಂತ ವೈಶಿಷ್ಟ್ಯಪೂರ್ಣವಾದುದೆಂದು ತೋರುತ್ತದೆ.

೬. ಸ್ಕಂದ ಮೂಲತಃ ಕಾಮದೇವ. ಆದರೆ ಇಲ್ಲಿ ಆತನದು ಅತ್ಯಂತ ಶುದ್ಧ ಬ್ರಹ್ಮಚರ್ಯಜೀವನ. ದೇವತೆಗಳಿಗೆ ಎಲ್ಲ ಆಶ್ರಮಗಳ ನಿರ್ವಹಣೆ ಇವೆ ಎಂಬ ಶಾಸ್ತ್ರಮಾತಿಗೆ ಇದೊಂದು ಒಳ್ಳೆಯ ಉದಾಹರಣೆ.

**ಧ್ಯಾಯೇತ್(ತಂ) ಪರಮಾನಂದಂ ಯನ್ಮಾತಾ ಪತಿಮಯದಪರಮಾನಂದಮ್ ।**
**ಉಜ್ಜಿತಪರಮಾನಂದಂ ಪತ್ಯಾದ್ಯಾದ್ಯಾಶ್ರಮೈಃ ಸದೈವ ಪರಮಾನಂದಮ್ ॥**

**- ಯಮಕಭಾರತ**

**ದೇವಾ ಏವ ಬ್ರಹ್ಮಚಾರಿಣಃ ದೇವಾ ಏವ ಗೃಹಸ್ಥಾಃ ........।'** - **ಶ್ರುತಿಃ**

**ಚತುರ್ಭಿರಾಶ್ರಮೈಃ ಪೂರ್ಣೈರ್ಯುಕ್ತಾ ಯೇ ಹಿ ಸುರಾಃ ಸದಾ ।** ಎಂದು ಶ್ರೀನರಹರಿತೀರ್ಥರ ಯಮಕಭಾರತಪದ್ಯವ್ಯಾಖ್ಯಾನದಲ್ಲಿದೆ.

೭. ಸ್ಕಂದನ ಬ್ರಹ್ಮಚರ್ಯಾಶ್ರಮ ಜೀವನ ಬ್ರಹ್ಮಚಾರಿಗಳಿಗೆ ಅತ್ಯಂತ ಆದರ್ಶ, ಅನುಕರಣೀಯ.

೮. ಸ್ಕಂದ ಮೂಲರೂಪ ಮನ್ಮಥ. ತಮ್ಮ ಮೂರನೇ ಕಣ್ಣಿನಿಂದ ಕಾಮನನ್ನು ಸುಟ್ಟರೂ, ತಾನೇ ಮತ್ತೇ ಮನ್ಮಥನಿಗೆ ತಂದೆಯಾದುದು ಶಿವನ ಕಾರಣ್ಯದ್ಯೋತಕ. ಮನ್ಮಥ ಇಲ್ಲಿ ಶಿವಪುತ್ರನಾಗಿ, ಸ್ಕಂದನಾದುದು ಅಯೋನಿಜ ಜನ್ಮ. ಸ್ಕಂದನನ್ನು ಯಾರೂ ತಮ್ಮ ಗರ್ಭದಲ್ಲಿ ಧರಿಸಲಿಲ್ಲ, ಧೃಷ್ಟದ್ಯುಮ್ನ, ದ್ರೋಣ, ದ್ರುಪದಾದಿಗಳಂತೆ.

೯. ಸ್ಕಂದನ ಜನನ, ಬೆಳವಣಿಗೆ ಎಲ್ಲವೂ ಒಂದು ಸಂಕೀರ್ಣ ವಿಷಯಗಳಿಂದ ತುಂಬಿದ್ದು ಅದರ ಅಂತರಾರ್ಥ ತಿಳಿಯುವುದು ಕಷ್ಟಸಾಧ್ಯವಾದುದಾಗಿದೆ.

ಇತ್ಯಾದಿ....

## ೭೨. ದೇವಲ-ಜೈಗೀಷವ್ಯರ ಚರಿತ್ರೆ

ಸರಸ್ವತೀತೀರ್ಥದಲ್ಲಿ ಅಸಿತದೇವಲನೆಂಬ ಧಾರ್ಮಿಕನಾದ, ತಪಸ್ಸನ್ನೇ ಧನವೆಂದು ನಂಬಿದ್ದ ಋಷಿಯು ಗೃಹಸ್ಥಾಶ್ರಮಿಯಾಗಿ ವಾಸವಾಗಿದ್ದನು. ಸದಾ ಬಾಹ್ಯಾಂತಃ ಶುಚಿಯುಳ್ಳವನಾಗಿಯೂ, ಯಜ್ಞಶೀಲನಾಗಿಯೂ, ಮನೋವಾಕ್ಕಾಯಕರ್ಮಗಳಿಂದ ಸಾಧು, ಸಜ್ಜನರನ್ನು ಸಮಾನವಾಗಿ ಎಂದರೆ, ಅವರಲ್ಲಿ ಭಗವಂತನು (ಸಮನಾಮಕ) ಇರುವನೆಂದು ಕಾಣುತ್ತಾ, ಕೋಪತಾಪರಹಿತನಾಗಿಯೂ, ತನ್ನನ್ನು ನಿಂದಿಸಲಿ, ಪ್ರಶಂಸಿಸಲಿ, ನಿರ್ವಿಕಾರನಾಗಿರುತ್ತಿದ್ದನು. ಕಲ್ಲು, ಶಿಲೆ, ಬಂಗಾರಗಳನ್ನು ಸಮಾನವಾಗಿಯೇ ನೋಡುತ್ತಿದ್ದನು (ಬಂಗಾರದ ಬಗ್ಗೆ ವ್ಯಾಮೋಹವಿರಲಿಲ್ಲ). ದೇವತೆಗಳನ್ನೂ, ಬ್ರಾಹ್ಮಣರನ್ನೂ, ಅತಿಥಿಗಳನ್ನೂ ನಿತ್ಯವೂ ಪೂಜಿಸುತ್ತಾ ಪಂಚಯಜ್ಞ ತತ್ಪರನಾಗಿ ಇದ್ದನು. ನಿತ್ಯ ಬ್ರಹ್ಮಚರ್ಯರತನಾಗಿಯೂ (ಪರಸತಿಯರನ್ನು ನೋಡದೇ ಕೇವಲ ಸ್ವಪತ್ನಿಯಲ್ಲೆ ರತನಾಗಿರುತ್ತಾ) ಧರ್ಮಪರಾಯಣನಾಗಿದ್ದನು.

ಇವರ ಆಶ್ರಮಕ್ಕೆ ಯೋಗರತನಾದ ಜೈಗೀಷವ್ಯನೆಂಬ ಭಿಕ್ಷು(ಸನ್ಯಾಸಿ) ಬಂದು ವಾಸಿಸಿದನು. ಜೈಗೀಷವ್ಯನಾದರೂ ನಿತ್ಯವೂ ಯೋಗಸಾಧನೆ ಮಾಡುತ್ತಾ ಸಿದ್ಧಿಯನ್ನು ಸಂಪಾದಿಸಿದ್ದನು. ಅಲ್ಲಿಯೇ ವಾಸಮಾಡುತ್ತಿದ್ದ ಜೈಗೀಷವ್ಯನನ್ನು ದೇವಲನು ತಿಳಿದಿರಲಿಲ್ಲ (ದೇವಲನಿಗೆ ಪರಿಚಯವಿರಲಿಲ್ಲ). ಇಬ್ಬರೂ ಒಂದೇ ಆಶ್ರಮದಲ್ಲಿ ಬಹಳ ವರ್ಷ ಕಳೆದರು (ವಾಸವಾಗಿದ್ದರು).

ಬುದ್ಧಿವಂತನಾದ ಜೈಗೀಷವ್ಯ ಮುನಿಯು ನಿತ್ಯ ಸಂಚಾರಿ(ಸನ್ಯಾಸಿಯಾದ್ದರಿಂದ) ಭೋಜನ ಸಮಯದಲ್ಲಿ ನೋಡಿದನು. ಗೃಹಸ್ಥಾಶ್ರಮಿಯಾದ ದೇವಲನು ಸನ್ಯಾಸಿಗೆ ಭಿಕ್ಷಾಕಾಲದಲ್ಲಿ ಯೋಗ್ಯಸೇವೆ ಮಾಡಿದನು (ಮಾಡುತ್ತಿದ್ದನು). ಸನ್ಯಾಸಿ ರೂಪದಿಂದ ಬಂದು ಇದ್ದ ಜೈಗೀಷವ್ಯನನ್ನು ದೇವಲನು ಪರಮಾದರದಿಂದ ಕಂಡನು (ಗೌರವ ತೋರಿಸಿದನು). ದೇವಲನು ಅವರನ್ನು ಋಷಿಸಂಪ್ರದಾಯದಂತೆ (ವೇದೋಕ್ತ ರೀತಿಯಲ್ಲಿ) ಸತ್ಕರಿಸಿದನು.

ಹೀಗೆ ಇರುತ್ತಿರಲು, ಒಮ್ಮೆ ಮಹಾತೇಜಸ್ವಿಯಾದ ಜೈಗೀಷವ್ಯ ಮುನಿಯನ್ನು ನೋಡಿ ಭಾರೀ ಚಿಂತೆಯಾಯಿತು. ಈ ಮುನಿಯನ್ನು ನಾನು ಸತ್ಕರಿಸುತ್ತಾ ಅನೇಕ ವರ್ಷಗಳೇ ಕಳೆದು

ಹೋದರೂ, ಈ ಆಲಸಿ (ಸೋಮಾರಿ) ಮುನಿ (ನನ್ನೊಡನೆ) ಏನನ್ನೂ [1]ಮಾತನಾಡುತ್ತಿಲ್ಲವಲ್ಲ (ಏಕೆ)? ಹೀಗೆ ವಿಚಾರ ಮಾಡುತ್ತಲೇ ದೇವಲನು ಕಲಶವನ್ನು (ಕೈಯಲ್ಲಿ) ಹಿಡಿದುಕೊಂಡು ಆಕಾಶಮಾರ್ಗದಿಂದ ಸಮುದ್ರಕ್ಕೆ ಹೋದನು.

ಹೀಗೆ ದೇವಲನು ಸಮುದ್ರದ ಸಮೀಪ ಹೋಗುವ [2]ಮುನ್ನವೇ ಜೈಗೀಷವ್ಯ ಮುನಿಯು ಹೋಗಿದ್ದುದನ್ನು ನೋಡಿ ಆಶ್ಚರ್ಯ ಚಕಿತನಾಗಿ ಈ ಮಹಾಮುನಿ (ಸನ್ಯಾಸಿ) ಹೇಗೆ ಇಲ್ಲಿಗೆ ಬಂದನು? ಎಂದು ಚಿಂತಾಗ್ರಸ್ತನಾಗಿ ಅಸಿತನು ಸಮುದ್ರಸ್ನಾನ ಮಾಡಿ ಜಪಿಸಲು ಯೋಗ್ಯವಾದ (ದೇಶಕಾಲೋಚಿತವಾದ) ಮಂತ್ರ ಜಪ ಮಾಡುತ್ತಾ ನಿಂತನು. ಜಪ ಹಾಗೂ ಆಹ್ನೀಕಗಳನ್ನು ಮುಗಿಸಿ ದೇವಲನು ಕಲಶದಲ್ಲಿ ನೀರನ್ನು ಹಿಡಿದುಕೊಂಡು ತನ್ನ ಆಶ್ರಮಕ್ಕೆ ಹೋದನು. [3]ಆಶ್ಚರ್ಯ ಎಂಬಂತೆ ಆಗಲೇ ಜೈಗೀಷವ್ಯ ಭಿಕ್ಷುವೂ ಕೂಡಾ ಅಸಿತ ಬರುವ ಮುನ್ನವೇ ಆಶ್ರಮಕ್ಕೆ ಬಂದಿದ್ದನು.

ಜೈಗೀಷವ್ಯ ಮುನಿಯು ದೇವಲಮುನಿಯನ್ನು (ಯೊಂದಿಗೆ) ಎಷ್ಟೇ ಪ್ರಯತ್ನಪಟ್ಟರೂ, ಮಾತನಾಡುತ್ತಿರಲಿಲ್ಲ (ಮಾತನಾಡಿಸುತ್ತಿರಲಿಲ್ಲ). ಅಂತಹ ಮಹಾತಪಸ್ವಿ, ಕಾಷ್ಠಮೌನವ್ರತ ಮಾಡುತ್ತಾ (ಮರದಂತೆ ನಿಶ್ಚಲವಾಗಿರುತ್ತಾ) ಆಶ್ರಮದಲ್ಲಿ(ಮಾತ್ರ)ವಾಸಿಸುತ್ತಿದ್ದ. ದೇವಲನು ಮಾತ್ರ ನಾನು ಇವರನ್ನು ಸಮುದ್ರದಲ್ಲಿ ಹಾಗೂ ಆಶ್ರಮದಲ್ಲಿ ಎರಡೂ ಕಡೆ ನೋಡಿದೆ. ಇದು ಹೇಗೆ ಸಾಧ್ಯ? ಎಂದು ಚಿಂತಿಸಿದ.

ಹೀಗೆ ವಿಚಾರಮಾಡುತ್ತಾ ಮಂತ್ರಶಾಸ್ತ್ರದಲ್ಲಿ ಪಾರಂಗತನಾದ(ಸಿದ್ಧನಾದ-ಮಂತ್ರಸಿದ್ಧನಾದ) ದೇವಲನು ಜೈಗೀಷವ್ಯರ ಸಿದ್ಧಿಯ ಹಿಂದಿನ ರಹಸ್ಯವನ್ನು ತಿಳಿಯಲು ತನ್ನ ಆಶ್ರಮದಿಂದ ಅಂತರಿಕ್ಷಕ್ಕೆ ಹಾರಿದನು. ಆಕಾಶದಲ್ಲಿ ಹೋಗುತ್ತಿರುವಾಗ ಅಲ್ಲಿಗೆ ಬಂದ ಸಿದ್ಧಪುರುಷರನ್ನು ನೋಡಿದನು. ಆ ಸಿದ್ಧರು ಜೈಗೀಷವ್ಯರನ್ನು ಪೂಜಿಸುತ್ತಿರುವುದನ್ನು ದೇವಲನು ನೋಡಿದನು. ಆದರೆ ದೇವಲರನ್ನು ಮಾತ್ರ ಜೈಗೀಷವ್ಯರು ಮಾತನಾಡಿಸಲಿಲ್ಲ. ಇದನ್ನು ನೋಡಿ ದೇವಲನಿಗೆ

---

೧ ಕದಾಚಿತ್ ತಸ್ಯ ನೃಪತೇಃ ದೇವಲಸ್ಯ ಮಹಾತ್ಮನಃ।
ಚಿಂತಾ ಸುಮಹತೀ ಜಾತಾ ಮುನಿಂ ದೃಷ್ಟ್ವಾ ಮಹಾದ್ಯುತಿಮ್॥
ಸಮಾಸ್ತು ಸಮತಿಕ್ರಾಂತಾ ಬಹ್ವ್ಯಃ ಪೂಜಯತೋ ಮಮ।
ನ ಚಾಯಮಲಸೋ ಭಿಕ್ಷುರಭ್ಯಭಾಷತ ಕಿಂಚನ॥ - ಶ.ಪ.(೫೦/೧೪,೧೫)

೨ ಗಚ್ಛನ್ನೇವ ಚ ಧರ್ಮಾತ್ಮಾ ಸಮುದ್ರಂ ಸರಿತಾಂ ಪತಿಮ್।
ಜೈಗೀಷವ್ಯಂ ತಪೋಽಪಶ್ಯದ್ ಗತಂ ಪ್ರಾಗೇವ ಭಾರತ॥
ತತಃ ಸವಿಸ್ಮಿತಶ್ಚಿಂತಾಂ ಜಗಾಮಾಥಾಸಿತಃ ಪ್ರಭುಃ।
ಕಥಂ ಭಿಕ್ಷುರಯಂ ಪ್ರಾಪ್ತಃ ಸಮುದ್ರಂ ಸುಮಹಾತಪಾಃ॥ - ೫೦/೧೭,೧೮

೩ ತತಃ ಸ ಪ್ರವಿಶನ್ನೇವ ಸ್ವಮಾಶ್ರಮಪದಂ ಮುನಿಃ।
ಆಸೀನಮಾಶ್ರಮೇ ಪುಣ್ಯೇ ಜೈಗೀಷವ್ಯಮಪಶ್ಯತ॥ - ೫೦/೨೧

ಕೋಪಬಂತು. ಅವರು ಸ್ವರ್ಗಕ್ಕೆ ಹೋಗುವುದನ್ನೂ ನೋಡಿದನು. ಅಲ್ಲಿಂದ ಪಿತೃಲೋಕಕ್ಕೆ, ನಂತರ ಆದಿತ್ಯಲೋಕಕ್ಕೆ, ಮುಂದೆ ಸೋಮಲೋಕಕ್ಕೆ ಹಾರುವುದನ್ನು ಮತ್ತೆ ಇನ್ನೂ ಅನೇಕ ಸಲ್ಲೋಕಗಳಿಗೆ ಹಾರುತ್ತಾ ಹೋಗುವುದನ್ನೂ ನೋಡಿದನು. ಅಲ್ಲದೆ ಅಗ್ನಿಷ್ಟೋಮಯಾಗ, ವಾಜಪೇಯಯಾಗ, ಪುಂಡರೀಕಯಾಗ, ರಾಜಸೂಯಯಾಗ, ಹನ್ನೆರಡು ದಿನಗಳಲ್ಲಿ ನಡೆಯುವ ವಿವಿಧಯಾಗಗಳು, ಮೈತ್ರಾವರುಣ, ಆದಿತ್ಯ, ಏಕಾದಶರುದ್ರರ, ದ್ವಾದಶ ಆದಿತ್ಯರ, ಬೃಹಸ್ಪತಿಯಲೋಕ, ಗೋಲೋಕಗಳು, ಪತಿವ್ರತಾಲೋಕಗಳು– ಹೀಗೆ ವಿವಿಧ ಲೋಕಗಳಿಗೆ ಹೋಗುವುದನ್ನು ನೋಡಿದನು. ನಂತರ ಜೈಗೀಷವ್ಯರು ಎಲ್ಲಿ ಹೋಗುತ್ತಿದ್ದಾರೆ? ಎನ್ನುವುದನ್ನು ದೇವಲನು ನೋಡದಾದನು. ಹೀಗೆ ದೇವಲನು ಜೈಗೀಷವ್ಯರ ತಪಃಪ್ರಭಾವ, ಸದಾಚಾರ, ಅಸದೃಶಯೋಗಸಿದ್ಧಿಗಳನ್ನು ತಿಳಿದನು (ನಿಶ್ಚಯಿಸಿಕೊಂಡನು).

[೧]ನಂತರ ಅಸಿತದೇವಲನು ತಾನು ಕಂಡ ಲೋಕಗಳಲ್ಲಿದ್ದ ಬ್ರಹ್ಮಚಾರಿಗಳಾದ, ಸಿದ್ಧರನ್ನು ಕೈಮುಗಿದು, ತಪೋಧನರೇ! ಜೈಗೀಷವ್ಯರು ಕಾಣುತ್ತಿಲ್ಲ. ನನಗೆ ತಿಳಿಯುವ ಕುತೂಹಲವಿದೆ. ಅವರೆಲ್ಲಿದ್ದಾರೆ? ಎಂದು ಕೇಳಿದನು. ಆಗ ಆ ಸಿದ್ಧರು[೨] ಜೈಗೀಷವ್ಯರು ನಾಶರಹಿತವಾದ (ಅಕ್ಷಯವಾದ) ಶಾಶ್ವತವಾದ ಬ್ರಹ್ಮಲೋಕಕ್ಕೆ ಹೋಗಿದ್ದಾರೆ ಎಂದರು. ಅವರ ಮಾತನ್ನು ಕೇಳಿದ ದೇಲವನು ತಕ್ಷಣವೇ ಮೇಲೆ ಹಾರಿದನು. ಮತ್ತೆ ಅದೇ ಸಿದ್ಧರು ನುಡಿದರು 'ಎಲೈ ದೇವಲನೇ! ಜೈಗೀಷವ್ಯರು ಹೋಗಿರುವ ಬ್ರಹ್ಮಲೋಕಕ್ಕೆ ಹೋಗಲು ನಿನಗೆ ಸಾಧ್ಯವಿಲ್ಲ'.[೩] ಅವರ ಮಾತನ್ನು ಕೇಳಿದ ದೇವಲನು ಹಿಂದೆ ತಾನು ಹೋದ (ಭೂಮಿಯಿಂದ) ಲೋಕಗಳಿಂದ ಕ್ರಮೇಣ ಇಳಿಯುತ್ತಾ ತನ್ನ ಆಶ್ರಮಕ್ಕೆ ಬಂದನು[೪]. ಆದರೆ ಮತ್ತೆ ಆಶ್ಚರ್ಯ ಕಾದಿತ್ತು ದೇವಲನಿಗೆ. ಆಗಲೇ ಅಲ್ಲಿಗೆ ಜೈಗೀಷವ್ಯರು ಬಂದಿರುವುದನ್ನು ನೋಡಿದನು[೫]. ಆಗ ಜೈಗೀಷವ್ಯರ ಯೋಗಜನ್ಯವಾದ ಧರ್ಮಯುಕ್ತವಾದ ತಪಃಪ್ರಭಾವವನ್ನು ಗಣನೆಗೆ ತೆಗೆದುಕೊಂಡನು (ವಿಶೇಷವಾಗಿ ತಿಳಿದನು). ನಂತರ ದೇವಲನು ಜೈಗೀಷವ್ಯರನ್ನು ವಿನಯದಿಂದ ತಲೆಬಾಗಿ ಮಾತನಾಡಿಸಿದನು.

---

೧ ತತೋಽಸಿತಃ ಸುಸರಂಬ್ಧೋ ವ್ಯವಸಾಯೋ ದೃಢವ್ರತಃ ॥

೨ ಜೈಗೀಷವ್ಯೋ ಗತೋ ಲೋಕಂ ಶಾಶ್ವತಂ ಬ್ರಹ್ಮಣೋಽಕ್ಷಯಮ್ ।

೩. ನ ದೇವಲಗತಿಸ್ತತ್ರ ತವ ಗಂತುಂ ತಪೋಧನ ।
ಬ್ರಹ್ಮಣಃ ಸದನಂ ವಿಪ್ರ ಜೈಗೀಷವ್ಯೋ ಯದಾಪ್ತವಾನ್ ॥

೪ ತೇಷಾಂ ತದ್ವಚನಂ ಶ್ರುತ್ವಾ ಸಿದ್ಧಾನಾಂ ದೇವಲಸ್ತದಾ ।
ಆನುಪೂರ್ವ್ಯೇಣ ಲೋಕಾಂಸ್ತಾನ್ ಸರ್ವಾನವತತಾರ ಚ ॥
ಸ್ವಂ ಚಾಶ್ರಮಪದಂ ಪುಣ್ಯಂ ಆ ಜಗಾಮ ಪತಂಗವತ್ ।

೫ ಪ್ರವಿಶನ್ನೇವ ಚಾಪಶ್ಯತ್ ಜೈಗೀಷವ್ಯಂ ಸ ದೇವಲಃ ।
ತತೋ ಬುದ್ಧ್ಯಾ ವ್ಯಗಣಯದ್ ದೇವಲೋ ಧರ್ಮಯುಕ್ತಯಾ ।
ದೃಷ್ಟ್ವಾ ಪ್ರಭಾವಂ ತಪಸೋ ಜೈಗೀಷವ್ಯಸ್ಯ ಯೋಗಜಮ್ ॥

'ಪೂಜ್ಯರೇ! ನಾನು ಮೋಕ್ಷಧರ್ಮವನ್ನು (ಮೋಕ್ಷ ಹೊಂದಲು ಬೇಕಾದ ಧರ್ಮಸಾಧನವನ್ನು) ಆಚರಿಸಲು ಇಚ್ಛಿಸುವೆನು. ಆದ್ದರಿಂದ ಅದನ್ನು ತಿಳಿಸಿರಿ'[1]

ಕರುಣಾಮಯಿಗಳಾದ ಜೈಗೀಷವ್ಯರು ದೇವಲರಿಗೆ ಮೋಕ್ಷಧರ್ಮೋಪದೇಶವನ್ನು ಶಾಸ್ತ್ರಗಳಲ್ಲಿ ಹೇಳಿದ, ಮಾಡಬೇಕಾದ, ಮಾಡಬಾರದ ಕರ್ಮಗಳನ್ನು ಉಪದೇಶಿಸಿದರು. ಸನ್ಯಾಸಕ್ಕೆ ಸಿದ್ಧನಾದ ದೇವಲನಿಗೆ ಅದರ ವಿಧಿಗಳನ್ನೂ ಉಪದೇಶಿಸಿ, ಅವನ್ನು ಮಾಡಿಸಿದರು.

ಆದರೆ ಸನ್ಯಾಸ್ವೀಕರಿಸಲು ಸಿದ್ಧನಾದ ದೇವಲನನ್ನು ನೋಡಿ ಎಲ್ಲ ಜೀವರು (ದೇವಲನ ಪರಿಸರದ) ಹಾಗೂ ಸಂಬಂಧಿಸಿದ ಪಿತೃಗಳು ರೋದಿಸಿದರು. (ಸನ್ಯಾಸಿಯಾಗಬೇಡವೆಂದು ಸೂಚಿಸಿದರು). ನೀನು ಸನ್ಯಾಸಿಯಾದರೆ ನಮ್ಮನ್ನು ದೇವಪಿತೃಕಾರ್ಯಗಳಿಂದ ವಿಭಜಿಸಿ, ಯಾರು ಮುಂದೆ ಪೂಜಿಸುತ್ತಾರೆ(ನಿನ್ನ ಉತ್ತರಾಧಿಕಾರಿಗಳಾರು?) ಹೀಗೆ ಎಲ್ಲೆಡೆ ಆತನ ಸನ್ಯಾಸಕ್ಕೆ ಪ್ರತಿರೋಧ ಬರುತ್ತಿರಲು ಅದನ್ನು ಬಿಡಲು ದೇವಲನು ನಿಶ್ಚಯ ಮಾಡಿದನು.

ವ್ಯಾಸರು ರೋದಿಸಿದ (ಆತ್ತ) ಭೂತಗಳು ಯಾರ್‍ಯಾರು ಎಂದು ತಿಳಿಸಿದ್ದಾರೆ. ಅವರು ವೃಕ್ಷಗಳಿಂದ ಬಿದ್ದ ಹಣ್ಣುಗಳು, ಗೆಡ್ಡೆ-ಗೆಣಸುಗಳು, ಪುಷ್ಪಗಳು, ಇತರ ಔಷಧಿಗಳು ಮುಂತಾದವು. ಇವರೆಲ್ಲ ದೇವಲ ಹಿಂದೆ ತಮಗೆ ಕೊಟ್ಟ ಅಭಯವನ್ನು ಆತನಿಗೆ ನೆನಪಿಸಿದವಂತೆ. ಇದರ ಅಭಿಪ್ರಾಯವಿಷ್ಟು, ಗೃಹಸ್ಥಾಶ್ರಮಿಯ ಧರ್ಮಗಳು ಕೇವಲ ತನ್ನ ಸಂಸಾರದ ಜವಾಬ್ದಾರಿ ಮಾತ್ರವಲ್ಲ, ಸುತ್ತಮುತ್ತಲಿನ ಪರಿಸರದ ಸ್ಥಾವರ, ಜಂಗಮ ಪ್ರಾಣಿಗಳೆಲ್ಲ ಗೃಹಸ್ಥನ ವ್ಯಾಪ್ತಿಗೆ ಬರುತ್ತವೆ. ಇವಲ್ಲದೆ ಬ್ರಹ್ಮಚಾರಿಗಳು, ಅತಿಥಿಗಳು, ಸ್ನಾತಕರು, ಸನ್ಯಾಸಿಗಳು ಇವರೂ ಕೂಡಾ ಗೃಹಸ್ಥನ ವ್ಯಾಪ್ತಿಗೆ ಬರುತ್ತಾರೆ ಎಂದು ಹೇಳಬೇಕಾಗಿಲ್ಲ. ಅಲ್ಲದೆ ದೇವ, ಋಷಿ, ಪಿತೃ, ಮನುಷ್ಯ ಯಜ್ಞಗಳೂ ಇದ್ದೇ ಇವೆ.

ಇಷ್ಟೆಲ್ಲ ಗೊಂದಲಗಳ ಮಧ್ಯೆ ದೇವಲ ಮತ್ತೆ ಗಾರ್ಹಸ್ಥ್ಯ, ಸನ್ಯಾಸಗಳ - ಅವುಗಳಲ್ಲಿ ತನಗೆ ವಿಹಿತವಾದುದು ಸನ್ಯಾಸವೇ ಶ್ರೇಯಸ್ಕರವೆಂದು ಭಾವಿಸಿ[2], ಮೋಕ್ಷಧರ್ಮವನ್ನೇ ಸ್ವೀಕರಿಸಿದನೆಂದು ಭಾರತ ಹೇಳುತ್ತದೆ.

ನಂತರ ದೇವಲನು ಉತ್ತಮಯೋಗವನ್ನು, ಉತ್ತಮಸಿದ್ಧಿಯನ್ನೂ ಪಡೆದನು.

ಆಗ ಬೃಹಸ್ಪತ್ಯಾದಿ ದೇವತೆಗಳು, ತಪಸ್ಸನ್ನು ಮಾಡುತ್ತಿದ್ದ ಜೈಗೀಷವ್ಯರನ್ನು ಪ್ರಶಂಸಿಸಿದರು. ಆಗಲೇ ಬಂದ ನಾರದರು ಜೈಗೀಷವ್ಯರಲ್ಲಿ ತಪಸ್ಸೇ ಇಲ್ಲ, ತನ್ನ ತಪಸ್ಸಿನಿಂದ ಅಸಿತನನ್ನು ಆಶ್ಚರ್ಯ ಪಡುವಂತೆ ಮಾಡಿದ್ದಾನೆ ಎಂದರು (ಇದೊಂದು ಒಗಟಿನಂತಿದೆ):

---

೧ ಮೋಕ್ಷದರ್ಮಂ ಸಮಾಸ್ಥಾತುಮಿಚ್ಛೇಯಂ ಭಗವನ್ನಹಮ್ । - ೫೦/೪೪-೫೪

೨ ತತೋ ಭೂಯೋ ವ್ಯಗಣಯತ್ ಸ್ವಬುದ್ಧ್ಯಾ ಮುನಿಸತ್ತಮಃ ।
ಮೋಕ್ಷೇ ಗಾರ್ಹಸ್ಥ್ಯಧರ್ಮೇ ವಾ ಕಿಂ ನು ಶ್ರೇಯಸ್ಕರಂ ಭವೇತ್ ॥
ಇತಿ ಸಂಚಿಂತ್ಯ ಬಹುಧಾ ದೇವಲೋ ರಾಜಸತ್ತಮ ।
ತ್ಯಕ್ತ್ವಾ ಗಾರ್ಹಸ್ಥ್ಯ ಧರ್ಮಂ ತು ಮೋಕ್ಷಧರ್ಮಮರೋಚಯತ್ ॥

**ತತೋ ದೇವಾಃ ಸಮಾಗತ್ಯ ಬೃಹಸ್ಪತಿಪುರೋಗಮಾಃ।**
**ಜೈಗೀಷವ್ಯಂ ತಪಸ್ಯುತಂ ಪ್ರಶಂಶಂಸುರ್ಮನೀಕ್ಷಿಣಃ।**
**ಅಥಾಬ್ರವೀದ್ ಋಷಿವರೋ ದೇವಾನ್ ವೈ ನಾರದಸ್ತಥಾ।**
**ಜೈಗೀಷವ್ಯೇ ತಪೋ ನಾಸ್ತಿ ವಿಸ್ಮಾಪಯತಿ ಸೋಽಸಿತಮ್ ॥ ೫೦/೬೧-೬೫**

ಮತ್ತೆ ಜೈಗೀಷವ್ಯರನ್ನೇ ಹೊಗಳಿದ ದೇವತೆಗಳು 'ಜೈಗೀಷವ್ಯ ಹಾಗೂ ದೇವಲರು ಇಬ್ಬರೂ ಧಾರ್ಮಿಕರು. ಇವರಿಬ್ಬರಿಗೆ ಸಂಬಂಧಿಸಿದ ಈ ತೀರ್ಥಕ್ಷೇತ್ರ, ಬಹಳ ಪ್ರಸಿದ್ಧ' ಎಂದರು.

ಇಲ್ಲೂ ಬಲರಾಮನು ಸ್ನಾನಾದಿಗಳನ್ನು ಮಾಡಿ ಮುಂದೆ ಸೋಮತೀರ್ಥಕ್ಕೆ ಹೊರಟನು.

## ಸಂದೇಶಗಳು-ವಿವರಗಳು

೧ ಕಥೆಯಲ್ಲಿ ಸ್ಪಷ್ಟವಾಗಿ ಜೈಗೀಷವ್ಯರ ತಪಃಪ್ರಭಾವ ಹೇಳಲಾಗಿದೆ. ಆದ್ದರಿಂದ ಪ್ರತಿಯೊಬ್ಬ ಸಾಧಕನು ಜೀವನದಲ್ಲಿ ತಪಸ್ಸಂಪನ್ನನಾಗಲು ಯತ್ನಿಸಬೇಕು. ಅದರಿಂದ ಸಿಗದ ಲೋಕಗಳೇ ಇಲ್ಲ.

೨. ದೇವಲರಂತೆ ತಪಸ್ವಿಗಳನ್ನು ಹಿಂಬಾಲಿಸಿ ಅವರ ಮಹಿಮೆ ತಿಳಿಯಬೇಕು. ಎಲ್ಲ ಕಾಲದಲ್ಲಿ ಆಯಾ ದೇಶಕಾಲೋಚಿತವಾಗಿ ತಪಸ್ವಿಗಳಿರುತ್ತಾರೆ. ಅವರಿಂದ ಮೋಕ್ಷದರ್ಮಗಳನ್ನು ತಿಳಿಯಲು ಪಯತ್ನಿಸಬೇಕು.

೩. ನಮ್ಮ ಆಧ್ಯಾತ್ಮಿಕ ಸಾಧನೆಗಾಗಿ ಸ್ನಾನ, ಸಂಧ್ಯಾದಿಗಳಿಂದ ಶಾಸ್ತ್ರಾಧ್ಯಯನ, ಜಪತಪಾದಿಗಳಲ್ಲಿ, ಅಧ್ಯಯನಾದಿಗಳಲ್ಲಿ ಆಸಕ್ತರಾಗುವುದೇ ನಿಜವಾದ ತಪಸ್ಸು.

೪. ನಮ್ಮ ಪರಿಸರದಲ್ಲಿರುವ ಮಹಾವ್ಯಕ್ತಿಗಳನ್ನು ತಿಳಿಯಲು ಪ್ರಯತ್ನಿಸಬೇಕು ದೇವಲರಂತೆ. ಆ ವ್ಯಕ್ತಿಗಳಿಂದ ಯಾವ ಪ್ರತಿಫಲ ಬಯಸದೇ ಅವರಿಗೆ ಸೇವೆ ಸಲ್ಲಿಸುವುದೇ ಮೋಕ್ಷಕ್ಕೆ ಮಾರ್ಗವಾಗುತ್ತದೆ.

೫. ಜೈಗೀಷವ್ಯರಷ್ಟು ತಪಃಸಾಮರ್ಥ್ಯ ಅಸಿತರಿಗೆ ಇಲ್ಲದಿದ್ದರೂ, ಅವರೂ ದೊಡ್ಡ ತಪಸ್ವಿಗಳೂ, ಅನೇಕಲೋಕಗಳನ್ನು ತಮ್ಮ ಯೋಗಬಲದಿಂದ ಸುತ್ತುವ ಸಾಮರ್ಥ್ಯವಿದ್ದವರೆಂದೂ ಈ ಉಪಾಖ್ಯಾನ ತಿಳಿಸುತ್ತದೆ.

೬. ಜೈಗೀಷವ್ಯರ ನಡೆ ಒಂದು ರಹಸ್ಯ. ಅದನ್ನು ತಿಳಿಯಲು ಅಸಿತರಿಗೂ ಆಗಲಿಲ್ಲ. ಇದು ಹಾಗೆಯೇ. ದೊಡ್ಡವರ ಆಚಾರ, ವಿಚಾರ, ನಡೆ ಎಲ್ಲರಿಗೂ ತಿಳಿಯದು. ಇದೊಂದು ಸಾರ್ವಕಾಲಿಕ ಸತ್ಯ. ಅಂದ ಮಾತ್ರಕ್ಕೆ ಯಾರನ್ನೂ ಅವಸರದಿಂದ ತೂಗುವುದು ಸರಿಯಲ್ಲ.

೭. ಜೈಗೀಷವ್ಯರ ಸ್ವರೂಪ ಇಲ್ಲಿ ತಿಳಿಯುವುದಿಲ್ಲ.

*****

## ೭೩. ದಧೀಚಿ-ಸಾರಸ್ವತರ ಚರಿತ್ರೆ

ಸಾರಸ್ವತತೀರ್ಥದಲ್ಲಿದ್ದ ಸಾರಸ್ವತಮುನಿಯು ಹಿಂದೊಮ್ಮೆ ಹನ್ನೆರಡುವರ್ಷ ಬರಗಾಲ ಬಂದಾಗ ಬ್ರಾಹ್ಮಣರಿಗೆ ವೇದಾಧ್ಯಯನ ಮಾಡಿಸಿದನೆಂದು ವೈಶಂಪಾಯನರು ಹೇಳಲು, ಅದು ಹೇಗೆ ಸಾಧ್ಯವಾಯಿತು ಎಂದು ಜನಮೇಜಯ ಕೇಳಿದನು.

ವೈಶಂಪಾಯನರು ಆಗ 'ಹಿಂದೆ ಬ್ರಹ್ಮಚಾರಿಯೂ, ಜಿತೇಂದ್ರಿಯನೂ ಆದ ದಧೀಚಿ ಎಂಬ ಪ್ರಖ್ಯಾತನಾದ ಬ್ರಾಹ್ಮಣೋತ್ತಮನಿದ್ದನು. ಆತನ ಭಾರೀ ತಪಸ್ಸಿಗೆ ಇಂದ್ರ ಭಯಪಟ್ಟಿದ್ದ. ಯಾವ ಪ್ರಲೋಭನೆಗಳೂ (ಆಶೆ-ಆಮಿಷಗಳು) ದಧೀಚಿಯನ್ನು ತಪಸ್ಸಿನಿಂದ ಹಿಂದೆ ಸರಿಸಲಾಗಲಿಲ್ಲ. ಅದಕ್ಕಾಗಿ ಇಂದ್ರನು ದಿವ್ಯಸುಂದರಿಯಾದ **ಅಲಂಬುಸಾ** ಎಂಬ ಅಪ್ಸರೆಯನ್ನು ಆತನ ಬಳಿ ಕಳಿಸಿದ. ಆತನು ಸರಸ್ವತೀ ನದಿಯಲ್ಲಿ ದೇವತರ್ಪಣ ಕೊಡುವಾಗ ಈ ಅಪ್ಸರೆ ಹೋಗಿ ಆತನ ಬಳಿ ನಿಂತಳು. ಆಕೆಯ ದಿವ್ಯಶರೀರಲಾವಣ್ಯ ನೋಡಿ ಋಷಿಯ ರೇತಸ್ಸು ಸರಸ್ವತೀನದಿಯಲ್ಲಿಯೇ ಬಿದ್ದಿತು. ಅದನ್ನು ನದಿ ಸ್ವೀಕರಿಸಿ ತನ್ನ ಉದರದಲ್ಲಿ ಧರಿಸಿ ಗರ್ಭವತಿಯಾದಳು. ಸೂಕ್ತಕಾಲ ಪುತ್ರರತ್ನನನ್ನು ಹೆತ್ತು, ಆ ಮಗುವನ್ನು ಮತ್ತೆ ದಧೀಚಿಗೆ ಕೊಡುವಾಗ ಹೀಗೆ ಹೇಳಿದಳು:

**'ಬ್ರಹ್ಮರ್ಷೇ ತವ ಪುತ್ರೋಽಯಂ ತ್ವದ್ಭಕ್ತ್ಯಾ ಧಾರಿತೋ ಮಯಾ ।**
**ದೃಷ್ಟ್ವಾ ತೇಽಪ್ಸರಸಂ ರೇತೋ ಯತ್ ಸ್ಕನ್ನಂ ಪ್ರಾಗಲಂಬುಸಾಂ ॥**
**ತತ್ ಕುಕ್ಷಿಣಾಽಹಂ ಬ್ರಹ್ಮರ್ಷೇ ಭಕ್ತ್ಯಾ ಧೃತವತೀ ತವ ।**
**ನ ವಿನಾಶಮಿದಂ ಗಚ್ಛೇತ್ ತ್ವತ್ತೇಜ ಇತಿ ನಿಶ್ಚಯಾತ್ ॥'** - ೨೨/೯-೧೫

ಸರಸ್ವತೀ ನದಿ ಹೆತ್ತು ಕೊಟ್ಟ ಮಗುವನ್ನು ದಧೀಚಿಗಳು ಪ್ರಿತಿಯಿಂದ ಸ್ವೀಕರಿಸಿ, ಬಹಳ ಹೊತ್ತು ಆಲಿಂಗಿಸಿ, ಮಗನ ತಲೆಯನ್ನು ಮೂಸಿ ನೋಡಿದರು. ಮಗನನ್ನು ಆಲಿಂಗಿಸಿ ನದಿಗೆ ಹೀಗೆ ವರ ಕೊಟ್ಟರು.

ಎಲ್ವೆ ಪುಣ್ಯವಂತಳೇ! ನಿನ್ನ ಜಲದಿಂದ ತರ್ಪಣ ಸ್ವೀಕರಿಸುವ ವಿಶ್ವೇದೇವತೆಗಳು, ಪಿತೃಗಳು, ಗಂಧರ್ವರು, ಅಪ್ಸರೆಯರು ತೃಪ್ತರಾಗಲಿ[1]. ಹೀಗೆ ಹೇಳಿ ಸರಸ್ವತೀ ನದಿಯನ್ನು ಪ್ರೀತಿಯಿಂದ ಸ್ತುತಿಸಿದರು.

---

೧ ವಿಶ್ವೇದಾವಾಃ ಸಪಿತರೋ ಗಂಧರ್ವಾಪ್ಸರಸೋ ಗಣಾಃ ।
ತೃಪ್ತಿಂ ಯಾಸ್ಯಂತಿ ಸುಭಗೇ ತರ್ಪ್ಯಮಾಣಾಸ್ತ್ವದಂಭಸಾ ॥ - ಶ.ಪ.(೫೧/೧೭-೧೯)

೧. ಮಹಾಭಾಗ್ಯವಂತಳೇ! ನೀನು ಹಿಂದೆ ಬ್ರಹ್ಮಸರೋವರದಿಂದ ಹರಿದು ಬಂದವಳು. ನದಿಗಳಲ್ಲಿ ಶ್ರೇಷ್ಠಳೇ. ನಿನ್ನನ್ನು ಕಠಿಣವ್ರತನಿಷ್ಠರಾದ ಮುನಿಗಳು ತಿಳಿದಿದ್ದಾರೆ.

೨. ಪ್ರಿಯದರ್ಶನವುಳ್ಳವಳೇ! ನನಗೆ ನೀನು ಯಾವಾಗಲೂ ಬೇಕಾದುದನ್ನೇ ಮಾಡುವವಳಾಗಿದ್ದೀಯಾ. ಆದ್ದರಿಂದ ಉತ್ತಮ ವರ್ಣವುಳ್ಳವಳೇ ನೀನು ನನಗೆ ಮಗನನ್ನು (ಹೆತ್ತು) ಕೊಟ್ಟಿರುವೆ[1].

೩. ನಿನ್ನ ಮಗನು ನಿನ್ನ ಹೆಸರಿನಿಂದಲೇ ಪ್ರಸಿದ್ಧನಾಗಿ, ಲೋಕದಲ್ಲಿ ಪೂಜ್ಯನಾಗಲಿ, ಮಹಾತಪಸ್ವಿಯಾಗಲಿ[2].

೪. ಇವನು ಮುಂದೊಮ್ಮೆ ಹನ್ನೆರಡು ವರ್ಷ ಬರಗಾಲ ಬಂದಾಗ ಬ್ರಾಹ್ಮಣರಿಗೆ ವೇದಾಧ್ಯಯನ ಮಾಡಿಸುವನು[3].

೫. ಸರಸ್ವತಿಯೇ! (ನದಿಯೇ!) ನನ್ನ ಅನುಗ್ರಹದಿಂದ ನೀನು ಎಲ್ಲ ಪುಣ್ಯನದಿಗಳಿಗಿಂತ ಅತ್ಯಂತ ಪುಣ್ಯತಮಳಾಗುವೆ.

ಹೀಗೆ ಸ್ತುತಿಸಲ್ಪಟ್ಟ ಸರಸ್ವತೀ ನದೀ ವರವನ್ನು ಋಷಿಯಿಂದ ಪಡೆದು ಮಗುವಿನೊಡನೆ ಸಂತೋಷದಿಂದ ಹೊರಟಳು.

ಇದೇ ವೇಳೆ ದೇವದಾವನರ ಮಧ್ಯೆ ವಿರೋಧವುಂಟಾಗಿ ಇಂದ್ರನು ಯೋಗ್ಯ ಆಯುಧಕ್ಕಾಗಿ ಮೂರುಲೋಕಗಳನ್ನು ಸಂಚಿಸಿದರೂ ಸಿಗದಿದ್ದಾಗ, ದೇವತೆಗಳಿಗೆ ಹೇಳಿದನು. 'ದಧೀಚಿಮುನಿಗಳ ಮೂಳೆಗಳಿಲ್ಲದೆ ದೈತ್ಯರ ಸಂಹಾರ ಅಸಾಧ್ಯ. ಆದ್ದರಿಂದ ನಮ್ಮ ಕಾರ್ಯಸಾಧನೆಗಾಗಿ ದಧೀಚಿಮುನಿಗಳ ಅಸ್ಥಿಗಳನ್ನು ಪ್ರಾರ್ಥಿಸಿ' ಎಂದು ಆ ಪ್ರಕಾರ ದೇವತೆಗಳು ದಧೀಚಿಮುನಿಗಳ ಬಳಿಗೆ ಹೋಗಿ ಯಾಚಿಸಲು, ಬೇರೆ ವಿಚಾರ ಮಾಡದೇ ಋಷಿಗಳು ತಮ್ಮ ಪ್ರಾಣತ್ಯಾಗ ಮಾಡಿ, ಆಯುಧ ನಿರ್ಮಾಣಕ್ಕೆ ಅನುವು ಮಾಡಿಕೊಟ್ಟರು. ಆದರಿಂದ ಅಕ್ಷಯ ಲೋಕಗಳನ್ನು ಹೊಂದಿದರು. ದೈತ್ಯದಾನವರ ಸಂಹಾರಕ್ಕೆ ಸಹಾಯ ಮಾಡಿದ್ದರಿಂದ ನಂತರ ಇಂದ್ರನು ದಧೀಚಿ ಋಷಿಗಳ ಅಸ್ಥಿಗಳಿಂದ **ವಜ್ರಾಯುಧ, ಭಾರವಾದ ಗದೆ, ಸಮೃದ್ಧವಾದ ದಂಡ** ಮೊದಲಾದ ಆಯುಧಗಳನ್ನು ವಿಶ್ವಕರ್ಮನಿಂದ ಮಾಡಿಸಿದನು

---

೧ ಮಮ ಪ್ರಿಯಕರೀ ಚಾಪಿ ಸತತಂ ಪ್ರಿಯದರ್ಶನೇ।
ತಸ್ಮಾತ್ ಸಾರಸ್ವತಂ ಪುತ್ರಮದಧಾ ವರವರ್ಣಿನೀ॥ - ೫೧/೨೨

೨ ತವೈವ ನಾಮ್ನಾ ಪ್ರಥಿತಃ ಪುತ್ರಸ್ತೇ ಲೋಕಭಾವನಃ।
ಸಾರಸ್ವತ ಇತಿ ಖ್ಯಾತೋ ಭವಿಷ್ಯತಿ ಮಹಾತಪಾಃ। - ೫೧/೨೩

೩. ಏಷ ದ್ವಾದಶವಾರ್ಷಿಕ್ಯಾಮನಾವೃಷ್ಟ್ಯಾಂ ದ್ವಿಜೋತ್ತಮಾನ್।
ಸಾರಸ್ವತೋ ಮಹಾಭಾಗೇ ವೇದಾನಧ್ಯಾಪಯಿಷ್ಯತಿ॥ - ೫೧/೨೪

ತತೋಽಬ್ರವೀತ್ ಸುರಾನ್ ಶಕ್ರೋ ನ ಮೇ ಶಕ್ಯಾಃ ಸುರಾರಯಃ।
ಋತೇಽಸ್ಥಿಭಿರ್ದಧೀಚಸ್ಯ ನಿಹಂತುಂ ದೇವ ಸತ್ತಮಾಃ।
ತಸ್ಮಾದ್ಯತ್ನಾದ್ ಋಷಿಶ್ರೇಷ್ಠೋ ಯಾಚ್ಯತಾಂ ಕಾರ್ಯಸಿದ್ಧಯೇ।
ದಧೀಚ್ಯಸ್ಥೀನಿ ದೇಹೀತಿ ತೈರ್ವಧಿಷ್ಯೇ ರಣೇ ರಿಪೂನ್।
ಸ ದೇವೈರ್ಯಾಚಿತೋಽಸ್ಥೀನಿ ಯತ್ನಾದ್ ಋಷಿವರಸ್ತದಾ।
ಪ್ರಾಣತ್ಯಾಗಂ ಕುರುಶ್ರೇಷ್ಠಂ ಚಕಾರೈವಾವಿಚಾರಯನ್।
ಸ ಲೋಕಾನಕ್ಷಯಾನ್ ಪ್ರಾಪ್ತೋ ದೇವಪ್ರಿಯಕರಸ್ತದಾ।
ತಸ್ಯಾಸ್ಥೀನಿ ತತಃ ಶಕ್ರಃ ಸಂಪ್ರಹೃಷ್ಟಮನಸ್ತದಾ।
ಕಾರಯಾಮಾಸ ದಿವ್ಯಾನಿ ತದಾ ಪ್ರಹರಣಾನ್ಯುತ।
ವಜ್ರಾಣಿ ಚ ಗದಾಶ್ಚೈವ ಗುರೂನ್ ದಂಡಾಂಶ್ಚ ಪುಷ್ಕಲಾನ್। - ೫೧/೨೯-೩೩

ಇದೇ ಪ್ರಸಂಗದಲ್ಲಿ ದಧೀಚಿಮುನಿಗಳ ಪರಿಚಯವನ್ನು ವ್ಯಾಸರು ಮಾಡಿಸಿದ್ದಾರೆ. ದಧೀ- ಚರು ಬ್ರಹ್ಮಪುತ್ರರಾದ ಭೃಗುಋಷಿಗಳ ಪುತ್ರರು. ಮಹಾತಪಸ್ವಿಗಳು, ಲೋಕದಲ್ಲಿ ಪೂಜ್ಯರು, ಭಾರೀ ಶರೀರ, ತೇಜಸ್ವಿ, ಲೋಕದ ಸಾರಭೂತ ಪದಾರ್ಥಗಳ ಸಾರದಂತಿದ್ದರು. ಪರ್ವತದಂತೆ ಭಾರ, ತೂಕ, ಎತ್ತರದ ಶರೀರ, ತನ್ನ ಮಹಿಮೆಯಿಂದಲೇ ಪ್ರಸಿದ್ಧರು. ಇವರ ತೇಜಸ್ಸಿನಿಂದ ಇಂದ್ರನು ಯಾವಾಗಲೂ ಹೆದರಿದ್ದ(೨೨/೩೪-೩೬).

ಇಂದ್ರ ಇಂತಹ ವಜ್ರಾಯುಧದಿಂದ **ಎಂಟುನೂರಹತ್ತು** (೮೧೦)ದೈತ್ಯದಾನವವೀರರನ್ನು ಕೊಂದನು[೧].

ಹೀಗೆ ಕಾಲ ಕಳೆಯುತ್ತಿರಲು ಒಮ್ಮೆ ಹನ್ನೆರಡು ವರ್ಷಗಳ ಮಹಾ ಬರಗಾಲ ಬಂತು. ಆಗ ಮಹರ್ಷಿಗಳು ಜೀವನೋಪಾಯಕ್ಕಾಗಿ ದಿಕ್ಕೆಟ್ಟು ಓಡಿ ಹೋದರು. ಸಾರಸ್ವತ ಮುನಿಯು ಇದನ್ನು ನೋಡಿ ತಾನೂ ಎಲ್ಲೋ ಹೋಗಲು ಇಚ್ಛಿಸಿದ. ಆಗ ತಾಯಿ ಸರಸ್ವತೀ ಹೇಳಿದಳು.

'ಮಗನೇ! ಇಲ್ಲಿಂದ ನೀನು ಎಲ್ಲಿಗೂ ಹೇಗಬೇಡ. ನಿನಗೆ ತಿನ್ನಲು ಒಳ್ಳೆಯ ಮೀನುಗಳನ್ನು ಕೊಡುವೆ, ಇಲ್ಲಿಯೇ ಇರು'[೨].

ಹೀಗೆತಾಯಿಹೇಳಲುಸಾರಸ್ವತನುಅಲ್ಲೇಇದ್ದುಪಿತೃಗಳನ್ನು ದೇವತೆಗಳನ್ನುತೃಪ್ತಿಪಡಿಸುತ್ತಾ, ಆಹಾರ ಸಂಪಾದಿಸಿ, ಪ್ರಾಣಗಳನ್ನೂ, ವೇದಗಳನ್ನೂ ರಕ್ಷಿಸಿ ಧಾರಣ ಮಾಡಿದನು. ಬರಗಾಲ ಮುಗಿದ ಮೇಲೆ ಎಲ್ಲೆಲ್ಲೋ ಓಡಿಹೋದ ಮಹರ್ಷಿಗಳು ಒಂದೆಡೆ ಸೇರಿ ಮತ್ತೆ ತಮ್ಮ

---

೧ ತೇನ ವಜ್ರೇಣ ಭಗವಾನ್..............................
ದೈತ್ಯದಾನವವೀರಾಣಾಂ ಜಘಾನ ನವತೀರ್ನವ॥ - ೫೧/೩೭,೩೮

೨ ನ ಗಂತವ್ಯಮಿತಃ ಪುತ್ರ ತವಾಹಾರಮಹಂ ಸದಾ।
ದಾಸ್ಯಾಮಿ ಮತ್ಸ್ಯಪ್ರವರಾನ್ ಉಷ್ಯತಾಮಿತಿ ಭಾರತ॥ - ೫೧/೪೨

ಅಧ್ಯಯನದ ಬಗ್ಗೆ ಪರಸ್ಪರ ಕೇಳಿಕೊಂಡರು. ಇಲ್ಲಿಯವರೆಗೆ ಹಸಿವಿನ ಬಾಧೆಯಿಂದ ಅವರು ಕಲಿತ ವೇದಗಳೆಲ್ಲ ಸ್ಮೃತಿಪಟಲದಿಂದ ದೂರ ಹೋಗಿದ್ದವು(ಮರೆತಿದ್ದವು). ಸ್ಮರಣೆಗೆ ಬರಲಿಲ್ಲ.

ಆಮೇಲೆ ಒಬ್ಬ ಋಷಿಯು ಸಾರಸ್ವತಋಷಿಯ ಬಳಿಗೆ ಬಂದನು. ಆಗ ವ್ರತದೀಕ್ಷಿತನಾಗಿ ವೇದಾಧ್ಯಯನ ಮಾಡುತ್ತಿದ್ದನು. ಬಂದ ಋಷಿಯು ಉಳಿದ ಋಷಿಗಳಿಗೆ ಸಾರಸ್ವತನು ಸ್ವಾಧ್ಯಾಯನಿರತನಾಗಿರುವುದನ್ನು ಹೇಳಿದನು. ಅವರೆಲ್ಲರೂ ಸಾರಸ್ವತನ ಬಳಿ ಬಂದು 'ವೇದಾಧ್ಯಯನ ಮಾಡಿಸು' ಎಂದರು[೧]. ಅದಕ್ಕೆ ಸಾರಸ್ವತನು 'ನೀವು ನನ್ನ ಶಿಷ್ಯತ್ವವನ್ನು ವಿಧ್ಯುಕ್ತವಾಗಿ ಸ್ವೀಕರಿಸಿ' ಎಂದನು. ಅದಕ್ಕೆ ಅವರು 'ನೀನು ಚಿಕ್ಕವ, ಬಾಲಕ' ಎಂದರು (ಚಿಕ್ಕವನಾದ ನಿನಗೆ ನಾವು ಹೇಗೆ ಶಿಷ್ಯತ್ವವಹಿಸುವುದು?).

ಋಷಿಗಳಿಗೆ ಸಾರಸ್ವತನು ಹೀಗೆ ಉತ್ತರಿಸಿದನು.

'ಧರ್ಮವಿರುದ್ಧವಾಗಿ ಪಾಠ ಹೇಳಿ ಕೊಡುವವರೂ, ಪಾಠ ಕಲಿಯುವವರೂ ಇಬ್ಬರೂ ಶೀಘ್ರವಾಗಿ ಸಾಯುತ್ತಾರೆ ಅಥವಾ ವೈರಿಗಳಾಗುತ್ತಾರೆ. (೫೧). ಬರೀ ವಯಸ್ಸು ಕೂದಲಿನ ಬಣ್ಣ ಋಷಿಗಳು ಹೇಳಿದ ಧರ್ಮದ ಮಾತುಗಳು, ಪರಂಪರೆ ಮಾತ್ರ ಶ್ರೇಷ್ಠ ಧರ್ಮ ಎನಿಸುತ್ತವೆ[೨].

ಈ ಮಾತುಗಳನ್ನು ಕೇಳಿದ ಋಷಿಗಳು ಸಾರಸ್ವತನಿಂದ ವೇದಗಳನ್ನು ಉಪದೇಶಿಸಿಕೊಂಡು ಮತ್ತೇ ಧರ್ಮಪಾಲನತತ್ಪರರಾದರು.

ನಂತರ ಸಾರಸ್ವತಮುನಿಯಲ್ಲಿ ಅರವತ್ತುಸಾವಿರ ಮುನಿಗಳು ಶಿಷ್ಯತ್ವ ಹೊಂದಿ ಪ್ರತಿಯೊಬ್ಬರು ಕೈಯಲ್ಲಿ ಮುಷ್ಟಿ ದರ್ಭೆಗಳನ್ನು ತಂದು ಆಸನಕ್ಕಾಗಿ ಕೊಟ್ಟರು. ಹೀಗೆ ಸಾರಸ್ವತನು ಬಾಲಕನಾದರೂ ಆ ಋಷಿಗಳು ಅವನ ಅಧೀನರಾಗಿದ್ದರು (ಗುರುವೆಂದು ಸ್ವೀಕರಿಸಿದರು).

---

೧ ತೇಷಾಂ ಕ್ಷುಧಾಪರೀತಾನಾಂ ನಷ್ಟಾ ವೇದಾ ವಿಧಾವತಾಮ್ ।
ಸರ್ವೇಷಾಮೇವ ರಾಜೇಂದ್ರ ನ ಕಿಂಚಿತ್ ಪ್ರತಿಭಾತಿ ಹಿ ॥
ಅಸ್ಮಾನಧ್ಯಾಪಯಸ್ವೇತಿ ತಾನುವಾಚ ತತೋ ಮುನಿಃ ।
ಶಿಷ್ಯತ್ವಮುಪನಚ್ಛಧ್ವಂ ವಿಧಿನಾ ಚ ಮಮೇತ್ಯುತ ॥
ತತೋಽಬ್ರವೀದೃಷಿಗಣೋ ಬಾಲಸ್ತ್ವಮಸಿ ಪುತ್ರಕ ।
ಸ ತಾನಾಹ ನ ಮೇ ಧರ್ಮೋ ನಶ್ಯೇದಿತಿ ತತೋ ಮುನೀನ್ ॥ - ೫೧/೪೫-೫೦

೨ ಯೋ ಹ್ಯಧರ್ಮೇಣ ಗೃಹ್ಣೀಯಾತ್ ಪ್ರಬ್ರೂಯಾದ್ವಾ ಹ್ಯಧರ್ಮತಃ ।
ಮ್ರಿಯೇತೇ ತಾವುಭೌ ಕ್ಷಿಪ್ರಂ ಸ್ಯಾತಾಂ ವಾ ವೈರಿಣಾವುಭೌ ।
ನ ಹಾಯನೈರ್ನ ಪಲಿತೈರ್ನ ವಿತ್ತೈರ್ನ ಚ ಬಂಧುಭಿಃ ।
ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ ॥ - ೫೧/೫೧,೫೨

ಇಂತಹ ಕ್ಷೇತ್ರದಲ್ಲಿ ಬಲರಾಮದೇವರು ಸ್ನಾನದಾನಾದಿಗಳನ್ನು ಮಾಡಿ ಮುಂದೆ ವೃದ್ಧಾಕನ್ಯಾಶ್ರಮಕ್ಕೆ ಹೊರಟನು.

## ಸಂದೇಶಗಳು- ವಿವರಣೆಗಳು

೧. ದಧೀಚಿಮುನಿಗಳ ಬಗ್ಗೆ ಇಲ್ಲಿ ಹಾಗೂ ಭಾಗವತದಲ್ಲೂ (೬/೧೦) ಬಂದಿದೆ. ಇಲ್ಲಿ ದಧೀಚಿಗಳು ವಿಚಾರ ಮಾಡದೆ ತಮ್ಮ ದೇಹ ಕೊಟ್ಟರೆ, ಭಾಗವತದಲ್ಲಿ ವಿಚಾರ ಮಾಡಿ ಕೊಡುತ್ತಾರೆ ಎಂದಿದೆ. ಆದರೆ ತ್ಯಾಗ ಮಾಡಿದ್ದಂತೂ ಸತ್ಯ, ದೈತ್ಯ ದಾನವ ನಾಶಕ್ಕಾಗಿ.

೨. ಭಾಗವತದಲ್ಲಿ ವೃತ್ರಾಸುರ ಸಂಹಾರಕ್ಕಾಗಿ ವಜ್ರಾಯುಧ ತಯಾರಿಸಲಾಯಿತು. ಇಲ್ಲಿ ೮೧೦ ದೈತ್ಯದಾನವರ ಸಂಹಾರವಾಯಿತೆಂದಿದೆ.

೩. ಇಲ್ಲಿ ವಜ್ರಾಯುಧವಲ್ಲದೆ ಗದಾ ಮೊದಲಾದ ಆಯುಧಗಳೂ ತಯಾರಿಸಲ್ಪಟ್ಟವು ಎಂದಿದೆ. ಆಯುಧ ತಯಾರಿಸಿದ್ದು ವಿಶ್ವಕರ್ಮನೆಂದೇ ಎರಡೂ ಕಡೆ ಇದೆ.

೪. ದಧೀಚಿಯ ಭಾರೀ ಶರೀರ ವರ್ಣನೆ ಭಾರತದ ವಿಶೇಷ. ದಧೀಚಿಯ ದೇಹತ್ಯಾಗ, ಬ್ರಾಹ್ಮಣರಿಗೆ ಕೊಟ್ಟ ಸಂದೇಶ. ತಮ್ಮ ಶರೀರ ಬೇರೆಯವರಿಗಾಗಿ ಇರಬೇಕೆಂಬುದೇ ಆ ಸಂದೇಶ. ನಮಗೆಲ್ಲ ಇದೊಂದು ಎಚ್ಚರಿಕೆಯ ಗಂಟೆ.

೫. ದಧೀಚಿಯ ತಪಸ್ಸಿಗೆ ಶಕ್ರ ಹೆದರಿದ್ದು ಬ್ರಾಹ್ಮಣರ ತಪಸ್ಸು ಇಂದ್ರನನ್ನೂ ಹೆದರಿಸಬಲ್ಲದು.

೬. ದಧೀಚಿಗಳು ಬ್ರಹ್ಮಚಾರಿಗಳಾದರೂ, ಅಪ್ಸರೆಯ ದರ್ಶನದಿಂದ ಅವರ ಕಾಮೋದ್ದೀಪನವಾಯಿತು. ರೇತಃಸ್ಖಲನವಾಯಿತು. ಅಂತಹ ಬ್ರಹ್ಮರ್ಷಿಗಳಿಗೂ ಕಾಮದ ಆಟಾಟೋಪ ತಪ್ಪಿದ್ದಲ್ಲ. ಉಳಿದವರ ಪಾಡೇನು. ಕಾಮನಿಗ್ರಹಕ್ಕೆ ಸರ್ವಪ್ರಯತ್ನ ಆಗಬೇಕು.

೭. ದಧೀಚಿಗಳ ಕಾಮ ಶ್ರೇಷ್ಠ ಸಂತಾನದಲ್ಲಿ ಮುಕ್ತಾಯವಾಯಿತು. ಸರಸ್ವತೀನದಿಯೇ ತಾನು ಆ ರೇತಸ್ಸನ್ನು ಸ್ವೀಕರಿಸಿ, ಗರ್ಭಧರಿಸಿ, ಮಗನನ್ನು ಹೆತ್ತು ದಧೀಚಿಗಳಿಗೆ ಒಪ್ಪಿಸುತ್ತಾಳೆ. ಮಹಾತಾಯಿ ಆಕೆ ಆದರ್ಶ. ದುರ್ಜನರ ರೇತಸ್ಖಲನ ಲೋಕಮಾರಕ, ಇವರದು ಲೋಕಪಾಲಕ, ಜ್ಞಾನಪ್ರದ. ಆ ಮಗುವೇ ಮುಂದೆ ಸಾರಸ್ವತ.

೮. ತಂದೆಯ ಅನುಗ್ರಹ, ಸರಸ್ವತೀನದೀಪಾಲನೆ ಪೋಷಣೆಗಳಿಂದ ಬಾಲಕ ಸಾರಸ್ವತ ಜ್ಞಾನಿಯಾಗಿ, ೬೦೦೦೦ ವಯಸ್ಸಿನಿಂದ ಹಿರಿಯರಾದ ಮುನಿಗಳಿಗೆ ಗುರುವಾಗಿ ವೇದಾಧ್ಯಯನ ಮಾಡಿಸುತ್ತಾನೆ. ಆದ್ದರಿಂದ ದಧೀಚಿಗಳ ರೇತಃಸ್ಖಲನ ಜ್ಞಾನಿಜನಕವಾಗಿ ಲೋಕೋದ್ಧಾರಕ್ಕೆ ಜ್ಞಾನ ಪರಂಪರೆ ಉಳಿಯಲು ಸಹಾಯವಾಗುತ್ತದೆ. ಇದೇ ರೀತಿ ಹುಟ್ಟಿದವರು ವಿರಾಟ, ದ್ರುಪದ, ಕೃಪ, ಕಪೀ ಮೊದಲಾದವರು ಕೂಡಾ ಜ್ಞಾನಿಗಳೂ, ವೀರರೂ ಆಗಿದ್ದರು.

೯. ದಧೀಚಿ ರೇತಸ್ಸನ್ನು ಧರಿಸಿದ ಸರಸ್ವತೀನದಿಯು ಜಗದ್ವಿಖ್ಯಾತ ಪವಿತ್ರನದಿಯಾಗುತ್ತಾಳೆ. ಅವರ ಅನುಗ್ರಹ, ತಪಸ್ಸು ಅಂತಹ ಉಚ್ಚ ಮಟ್ಟದ್ದು.

೧೦. ಸರಸ್ವತೀ ನದಿಯು ಕೂಡಾ ದಧೀಚಿಗಳ ರೇತಸ್ಸನ್ನು ಭಕ್ತಿಯಿಂದ ಗರ್ಭಧರಿಸಿ, ಭರಿಸಿ, ಹೆತ್ತು ಸಂತೋಷದಿಂದ ಮಗುವನ್ನು ಕೊಟ್ಟು ತಾನು ಧನ್ಯತಾಭಾವವನ್ನು ಹೊಂದಿ ಗೌರವಿಸುತ್ತಾಳೆ ದಧೀಚಿಗಳನ್ನು. ಆದ್ದರಿಂದ ಈ ಪ್ರಸಂಗ ಅತ್ಯಂತ ಭಕ್ತಿದಾಯಕವೇ ಆದ್ದರಿಂದ ಅಪಾರ್ಥಕ್ಕೆ ಎಡೆ ಇಲ್ಲ.

೧೧. ದಧೀಚಿಗಳಂತೆ ಉಳಿದ ಸಾಮಾನ್ಯ ಜನರು ವರ್ತಿಸಕೂಡದು. ಇದು ಅತಿಮುಖ್ಯ. **ತೈತ್ತಿರೀಯೋಪನಿಷತ್ತು** ಇದನ್ನೇ ಹೇಳುತ್ತದೆ.

'ಯಾನ್ಯ ನವದ್ಯಾನಿ ಕರ್ಮಾಣಿ। ತಾನಿ ಸೇವಿತವ್ಯಾನಿ। ನೋ ಇತರಾಣಿ। ಯಾನ್ಯಸ್ಮಾಕಗ್ಂ ಸುಚರಿತಾನಿ । ತಾನಿ ಸೇವಿತವ್ಯಾನಿ । ನೋ ಇತರಾಣಿ । ತೈ. ಉ. ಶಿಕ್ಷಾವಲ್ಲೀ - ೨೩ನೇ ಮಂತ್ರ.

ಇತ್ಯಾದಿ...

# ೭೪. ವೃದ್ಧಕನ್ಯಾಚರಿತ್ರೆ

ಬಲರಾಮದೇವರು ಸಾರಸ್ವತತೀರ್ಥದಿಂದ ವೃದ್ಧಕನ್ಯಾಶ್ರಮಕ್ಕೆ ಹೋದರೆಂದು ಹೇಳಲು ವೈಶಂಪಾಯನರನ್ನು ಜನಮೇಜಯ ರಾಜನು ವೃದ್ಧಕನ್ಯಾಶ್ರಮದಲ್ಲಿ ಹಿಂದೆ ಇದ್ದ ಕುಮಾರಿ(ಕನ್ಯೆ) ತಪೋಯುಕ್ತಳಾಗಿದ್ದಳು? ತಪಸ್ಸಿನ ಉದ್ದೇಶವೇನಾಗಿತ್ತು? ತಪಸ್ಸನ್ನು ಮಾಡುವಾಗ ಆಕೆಯು ಯಾವ ನಿಯಮಗಳಿಗೆ ಒಳಪಟ್ಟಿದ್ದಳು ಎಂದು ಮುಂತಾಗಿ ಕೇಳಲು ವೈಶಂಪಾಯನರು ಉತ್ತರಿಸಿದರು.

ಹಿಂದೆ ಗರ್ಗವಂಶದಲ್ಲಿ ಮಹಾಕೀರ್ತಿಶಾಲಿಯೂ, ಪ್ರಭಾವಶಾಲಿಯೂ ಆದ '**ಕುಣಿ**' ಎಂಬ ಋಷಿಯು ಇದ್ದನು. ಅವನು ತಪಸ್ವಿಗಳಲ್ಲಿ ಶ್ರೇಷ್ಠನಾದ ತಪಸ್ವಿಯಾಗಿದ್ದನು. ಆತನಿಗೆ ಒಬ್ಬ ಸುಂದರಿಯಾದ, ಒಳ್ಳೆಯ ಹುಬ್ಬುಳ್ಳ ಮಗಳು ಜನಿಸಿದಳು[೧] (ಮುನಿಯ ಪತ್ನಿಯ ಹೆಸರು ಇಲ್ಲಿಲ್ಲ - ಆತನು ಮನಃಸಂಕಲ್ಪದಿಂದಲೇ ಮಗಳನ್ನು ಸೃಷ್ಟಿಸಿಕೊಂಡನು). ಮಗಳನ್ನು ನೋಡಿ ತುಂಬಾ ಸಂತೋಷಗೊಂಡ 'ಕುಣಿ' ಮುನಿಯು ತನ್ನ ಶರೀರತ್ಯಾಗ ಮಾಡಿ ಸ್ವರ್ಗಕ್ಕೆ ಹೋದನು. ನಂತರ ಕಮಲದಂತ ಕಣ್ಣುಳ್ಳ ಆ ಸುಂದಿರಯು ಆಶ್ರಮವನ್ನು ನಿರ್ಮಿಸಿಕೊಂಡು, ಭಾರೀ ತಪಸ್ಸಿನಿಂದ ಉಪವಾಸಗಳಿಂದ ಪಿತೃಗಳನ್ನು ದೇವತೆಗಳನ್ನು ಪೂಜಿಸುತ್ತಾ ಪರಿಶುದ್ಧ ಜೀವನ ನಡೆಸಿದಳು. ಹೀಗೆ ಉಗ್ರವಾದ ತಪಸ್ಸನ್ನು ಮಾಡುತ್ತಲೇ (ವರ್ಷಗಳು) ಆಕೆಯ ಜೀವನದ ಬಹಳ ಕಾಲ ಕಳೆದುಹೋಯಿತು. ತಂದೆಯು ಇದ್ದಾಗಲೇ ಆಕೆಗೆ ಮದುವೆ ಮಾಡಿಕೊಡಲು ಆತನು ಇಚ್ಛಿಸಿದೂ ಶುದ್ಧಸ್ವಭಾವದ ಆಕೆ ಯೋಗ್ಯಪತಿಯನ್ನು [೨]ಹೊಂದಲಿಲ್ಲ(ದೊರೆಯಲಿಲ್ಲ).

ನಂತರ ಆಕೆ ಮತ್ತೆ ನಿರ್ಜನ ಕಾಡಿನಲ್ಲಿ ಕಠಿಣ ತಪಸ್ಸಿನಿಂದ ತನ್ನ ಶರೀರವನ್ನು ದಂಡಿಸುತ್ತಾ ಪಿತೃಗಳನ್ನು ದೇವತೆಗಳನ್ನು ಪೂಜಾ ನಿರತಳಾಗಿದ್ದಳು. ಹೀಗೆ ಶ್ರಮ ಸಾಧ್ಯವಾದ ತಪಸ್ಸನ್ನು ಮಾಡುತ್ತಾ ಕೃತಕೃತ್ಯಭಾವ ತಾಳಿದ ಸುಭ್ರೂ ಕುಮಾರಾವಸ್ಥೆಯಿಂದಲೂ [೩]ಬ್ರಹ್ಮಚಾರಿಯಾಗಿಯೇ ಇರುತ್ತಾ ಕ್ರಮೇಣ ವೃದ್ಧಾವಸ್ಥೆಯನ್ನು ಹೊಂದಿದಳು. ಈಗ ವೃದ್ಧಾಪ್ಯದ ದೆಸೆಯಿಂದಾಗಿ ಮೊದಲೇ ತಪಸ್ಸಿನಿಂದ ಕೃಶಳಾದ ಆಕೆ ಒಂದು ಹೆಜ್ಜೆ ಮುಂದಿಡಲು ಅಸಮರ್ಥಳಾಗಿ ಪರಲೋಕಕ್ಕೆ ಹೋಗಲು (ದೇಹತ್ಯಾಗ ಮಾಡಲು) ಚಿಂತಿಸಿದಳು, ನಿಶ್ಚಯಿಸಿದಳು[೪]. ದೇಹತ್ಯಾಗ ಮಾಡುವ

---

೧ ತಪಸಾ ಸಂಯುತಾ ಸುಭ್ರೂಃ ಸಮುತ್ಪನ್ನಾ ಮಹಾತ್ಮನಃ ॥ - ೫೨/೪

೨ ಸಾ ಪಿತ್ರಾ ದೀಯಮಾನಾಽಪಿ ಪತಿಂ ನೈಚ್ಛದನಿಂದಿತಾ ।
ಆತ್ಮನಃ ಸದೃಶಂ ಸಾ ತು ಭರ್ತಾರಂ ನಾನ್ವಪದ್ಯತ ॥ - ೫೨/೯

೩ ಸಾತ್ಮಾನಂ ಮನ್ಯಮಾನಾ ತು ಕೃತಕೃತ್ಯಂ ಶ್ರಮಾನ್ವಿತಾ ।
ಜಗಾಮ ವೃದ್ಧಭಾವಂ ಚ ಕೌಮಾರಬ್ರಹ್ಮಚಾರಿಣೀ ॥ - ೫೨/೯

೪ ವಾರ್ಧಕ್ಯೇನ ಚ ರಾಜೇಂದ್ರ ತಪಸೈವ ಚ ಕರ್ಶಿತಾ ।
ಸಾ ನಾಶಕದ್ ಯದಾ ಗಂತುಂ ಪದಾತ್ ಪದಮಪಿ ಸ್ವಯಮ್ ।
ಚಕಾರ ಗಮನೇ ಬುದ್ಧಿಂ ಪರಲೋಕಾಯ ವೈ ತದಾ ॥ - ೫೨/೧೨,೧೩

ನಿಶ್ಚಯ ಹೊಂದಿದ ಆಕೆಯನ್ನು ಕುರಿತು ನಾರದರು ಹೀಗೆ ಹೇಳಿದರು. "[೧]ಸಂಸ್ಕಾರ ಹೊಂದದ ಕನ್ನೆಗೆ ಪರಲೋಕಗಳು ಹೇಗೆ ಸಿಕ್ಕಾವು ಎಂದು ಶಾಸ್ತ್ರಗಳು ಹೇಳುವುದನ್ನು ನಾವು ಕೇಳಿದ್ದೇವೆ. ನೀನು ಬಹಳ ತಪಸ್ಸು ಮಾಡಿದ್ದರೂ ಉತ್ತಮಲೋಕಗಳನ್ನು ಪಡೆಯುವ ಸಾಮರ್ಥ್ಯ ಹೊಂದಿಲ್ಲ (ಪರಲೋಕಗಳನ್ನು ನೀನು ಗೆದ್ದಿಲ್ಲ).

ನಾರದರ ಮಾತನ್ನು ಕೇಳಿದ ಆ ವೃದ್ಧಕನ್ಯೆ ಋಷಿಸಮಾಜದಲ್ಲಿ ಹೀಗೆ ಘೋಷಿಸಿದಳು. 'ನಾನು ಮಾಡಿದ ತಪಸ್ಸಿನ ಅರ್ಧಫಲವನ್ನು ನನ್ನನ್ನು ಮದುವೆಯಾಗುವವನಿಗೆ (ಪಾಣಿಗ್ರಹಣ ಮಾಡುವವನಿಗೆ) ಕೊಡುತ್ತೇನೆ.'[೨]

ಈಕೆಯ ಮಾತನ್ನು ಕೇಳಿದ ಗಾಲವ ಋಷಿಯ ಮಗನಾದ ಶೃಂಗವಾನ್ ಎಂಬ ಋಷಿಯು ಒಂದು ನಿಬಂಧನೆಗೆ ಒಪ್ಪಿ ಮದುವೆಯಾಗಲು ಒಪ್ಪಿದನು. [೩]'ವಿವಾಹ ನಂತರ ಒಂದು ರಾತ್ರಿ ನನ್ನ ಜೊತೆಗೆ ವಾಸ ಮಾಡಲು ಒಪ್ಪಬೇಕು' ಎಂಬುದೇ ಆತನ ನಿಬಂಧನೆಯಾಗಿತ್ತು. ಸುಭ್ರೂ ಮಾತಿಗೆ ಒಪ್ಪಿ ಪ್ರತಿಜ್ಞೆಗೈದಳು. ಗಾಲವಪುತ್ರ ಆಕೆಯನ್ನು ಮದುವೆಯಾದ.

ಜನಮೇಜಯನೇ! ರಾತ್ರಿಯಲ್ಲಿ ಆಕೆ ಅಲೌಕಿಕ ರೂಪವುಳ್ಳವಳಾಗಿ, ದಿವ್ಯಾಭರಣ, ವಸ್ತ್ರಧಾರಿಯಾಗಿ, ಗಂಧಾದಿಲೇಪನವುಳ್ಳವಳಾಗಿ, ಮಾರ್ಪಟ್ಟ ಸುಭ್ರೂ ಜೊತೆ ಗಾಲವಪುತ್ರ ರಾತ್ರಿ ಕಳೆದ. ಆಕೆಯ ಸೌಂದರ್ಯದಿಂದ ಸಂತುಷ್ಟನಾದ ಬೆಳಿಗ್ಗೆ ಆಕೆ ಪತಿಯನ್ನು ಕುರಿತು –

ಬ್ರಹ್ಮಜ್ಞಾನಿಯೇ! ಬ್ರಹ್ಮರ್ಷಿ ಸಭೆಯಲ್ಲಿ ನೀನು ವಿಧಿಸಿದ ನಿಯಮಾನುಸಾರ ನಾನು ನಿನ್ನೊಡನೆ ಒಂದು ರಾತ್ರಿ ಕಳೆದಿದ್ದೇನೆ. ನಿನಗೆ ಮಂಗಳವಾಗಲಿ. ನಾನು ಇನ್ನು ಹೋಗುತ್ತೇನೆ[೪]. ಆಕೆ ಮತ್ತೆ ಧ್ಯಾನಮಾಡಿ 'ಈ ತೀರ್ಥದಲ್ಲಿ ಯಾರು ಒಂದು ರಾತ್ರಿ ಶುದ್ಧ ಮನಸ್ಸಿನಿಂದ ವಾಸ ಮಾಡಿ ದೇವತೆಗಳನ್ನು ತೃಪ್ತಿ ಪಡಿಸುತ್ತಾರೋ, ಅಂತಹವರು ಐವತ್ತೆಂಟು ವರ್ಷ ಬ್ರಹ್ಮಚರ್ಯ ಹೊಂದುತ್ತಾರೆ, ಪಾಲಿಸಿಕೊಂಡವರಿಗೆ ಬರುವ ಫಲವು ಬರುತ್ತದೆ' ಎಂದು ಹೇಳಿದಳು. ನಂತರ ಆ ಸಾಧ್ವಿಯು ದೇಹತ್ಯಾಗ ಮಾಡಿ ಸ್ವರ್ಗಕ್ಕೆ ಹೋದಳು:

**ಸಾ ತು ಧ್ಯಾತ್ವಾಬ್ರವೀದ್ ಭೂಯೋ ಯೋಽಸ್ಮಿಂಸ್ತೀರ್ಥೇ ಸಮಾಹಿತಃ ।**
**ಉಷಿತ್ವಾ ರಜನೀಮೇಕಾಂ ತರ್ಪಯಿತ್ವಾ ದಿವೌಕಸಃ ॥**

---

೧ ಅಸಂಸ್ಕೃತಾಯಾಃ ಕನ್ಯಾಯಾಃ ಕುತೋ ಲೋಕಾಸ್ತವಾನಘೇ ।
ಏವಂ ಹಿ ಶ್ರುತಮಸ್ಮಾಭಿರ್ದೇವಲೋಕೇ ಮಹಾವ್ರತೇ ।
ತಪಃ ಪರಮಕಂ ಪ್ರಾಪ್ಯ ನ ತು ಲೋಕಾಸ್ತ್ವಯಾ ಜಿತಾಃ ॥ – ೫೨/೧೫

೨ ತಪಸೋಽರ್ಧಂ ಪ್ರಯಚ್ಛಾಮಿ ಪಾಣಿಗ್ರಾಹಸ್ಯ ಸತ್ತಮಾಃ ॥ – ೫೨/೧೭

೩ ಸಮಯೇನ ತವಾದ್ಯಾಹಂ ಪಾಣಿಂ ಸ್ಪ್ರಕ್ಷ್ಯಾಮಿ ಶೋಭನೇ ।
ಯದ್ಯೇಕರಾತ್ರಂ ವಸ್ತವ್ಯಂ ತ್ವಯಾ ಸಹ ಮಮೇತಿ ಹ ॥ – ೫೨/೧೯

೪ ಯಸ್ತ್ವಯಾ ಸಮಯೋ ಬ್ರಹ್ಮನ್ ಕೃತೋ ಬ್ರಹ್ಮರ್ಷಿಸಂಸದಿ ।
ತೇನೋಷಿತಾಽಸ್ಮಿ ಭದ್ರಂ ತೇ ಸ್ವಸ್ತಿ ತೇಽಸ್ತು ವ್ರಜಾಮ್ಯಹಮ್ ॥ – ೫೨/೨೩

**ಚತ್ವಾರಿಂಶತಮಷ್ಟೌ ಚ ದ್ವೌ ಚಾಷ್ಟೌ ಸಮ್ಯಗಾಚರೇತ್ ।**
**ಬ್ರಹ್ಮಚರ್ಯಂ ಹಿ ಶಾಂತಾತ್ಮಾ ಫಲಂ ತಸ್ಯ ಲಭೇತ ಸಃ ॥** - ೫೨/೨೪,೨೫

ಇತ್ತ ಶೃಂಗವಾನ್ ಋಷಿಗೆ ಆಕೆಯ ರೂಪವನ್ನೇ ಚಿಂತಿಸುತ್ತಾ ತನ್ನ ನಿಯಮದಿಂದ (ತಾನೇ ವಿಧಿಸಿದ) ಈಗ ಪತ್ನಿ ವಂಚಿತನಾದೆನಲ್ಲ ಎಂದು ದುಃಖಿತನಾದ. ತುಂಬಾ ಕಷ್ಟದಿಂದ (ಮನಸ್ಸಿನಲ್ಲದ ಮನಸ್ಸಿನಿಂದ) ಆಕೆಯು ನೀಡಿದ ತಪಸ್ಸಿನ ಅರ್ಧಪುಣ್ಯವನ್ನು ಸ್ವೀಕರಿಸಿದನು.

ಆಕೆಯ ಲಾವಣ್ಯಕ್ಕೆ ಮೋಹಗೊಂಡ ಶೃಂಗವಾನ್ ದುಃಖಿತನಾಗಿ, ತನ್ನ ದೇಹವನ್ನು ತ್ಯಾಗ ಮಾಡಿ ಅಕೆಯನ್ನೇ ಅನುಸರಿಸಿ ಹೋದನು (ಪರಲೋಕಕ್ಕೆ).

ರಾಜನ್! ಇದುವೇ ವೃದ್ಧಕನ್ಯೆಯ ಮಹಾಚರಿತ್ರೆ ಹಾಗೂ ಆಕೆಯ ಬ್ರಹ್ಮಚರ್ಯ ಮತ್ತು ಸ್ವರ್ಗಕ್ಕೆ ಹೋಬೇಕೆಂಬ ಮನೋನಿರ್ಧಾರಗಳ ನಿರೂಪಣೆ.

## ಸಂದೇಶಗಳು - ವಿವರಣೆಗಳು

೧. ತಂದೆ 'ಕುಣಿ'ಯಂತೆ ಜನಿಸಿದ ಮಗಳೂ ಕೂಡಾ ಮಹಾತಪಸ್ವಿನಿ. ಇದು ಅಪರೂಪ ಹಾಗೂ ಸಹಜ ನಿಸರ್ಗಪ್ರಕ್ರಿಯೆ. ವಿಶೇಷವಾಗಿ ಸನಾತನರಲ್ಲಿ ಕಾಣುತ್ತಿದ್ದ ಸಂತತಿಯ ಗುಣಾತ್ಮಕ ಮುಂದುವರಿಯುವಿಕೆ. ಆಗ ಹಾಗೆಯೇ ಇತ್ತು. ಇದು ಅದರಲ್ಲೂ ವಿಶಿಷ್ಟವಾದುದು.

೨. ತಂದೆ, ಮಗಳ ಮದುವೆಗೆ ಪ್ರಯತ್ನಿಸಿದರೂ ಮಗಳಂತೆ ಇರುವ ವರ ಪುರುಷ ಸಿಗದಿದ್ದುದು ಸೋಜಿಗ. ಆದರೆ ಸತ್ಯ.

೩. ಮಗಳೂ ಮದುವೆಯ ಬಗ್ಗೆ ಆಸೆಯೇ ಇಟ್ಟುಕೊಳ್ಳದ ಅಪೂರ್ವ ಬಾಲೆ, ಬ್ರಹ್ಮಚಾರಿಯಾಗಿಯೇ ಜೀವನ ಕಳೆದ ಮಹಾತಪಸ್ವಿ: **ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**' ಎಂಬ ಗೀತಾವಾಕ್ಯಕ್ಕೆ ಒಳ್ಳೆಯ ಉದಾಹರಣೆ '**ಸುಭ್ರೂ**' ಕುಮಾರಿ.

೪. ಸ್ತ್ರೀಯರಿಗೆ ಕಾಮವಾಸನೆ ಹೆಚ್ಚು ಎಂಬ ವಿಚಾರ ಒಂದು ಉಪಾಖ್ಯಾನದಲ್ಲಿ ಬಂದಿದೆ (ಅನುಶಾಸನಪರ್ವ; ಅ. ೩೦ ಭಂಗಾಶ್ವನೋಪಾಖ್ಯಾನ) ಇದು ಅದಕ್ಕೆ ಅಪವಾದವಾಗಿ ತೋರುತ್ತದೆ. (ಅ. ೩೦/೪೩-೪೮)

೫. ತಂದೆಯು ಮಗಳು ಬಾಲೆಯಿದ್ದಾಗಲೇ ಸ್ವರ್ಗಸ್ಥನಾದರೂ ಬಾಲೆ ಸುಭ್ರೂ ತಂದೆಯ ವಿಯೋಗವನ್ನು ತಪಸ್ವಿಯಾಗಿ ಭರಿಸಿದ ಮಹಾಸಾಧಕಿ. ನಮ್ಮ ಹಿಂದೆ ತಂದೆ-ತಾಯಿ, ಬಂಧುಬಳಗ, ಆಸ್ತಿ ಯಾವುದೂ ಬರದೆಂದು ತನ್ನ ಸಾಧನೆಯ ಪುಣ್ಯಕರ್ಮ ಮಾತ್ರ ಬರುತ್ತದೆ ಎಂದು ನಂಬಿದ ಸುಭ್ರೂ ಎಲ್ಲ ಜೀವಿಗಳಿಗೆ ವಿಶೇಷವಾಗಿ ಸ್ತ್ರೀಯರಿಗೆ ಆದರ್ಶ ನಿದರ್ಶನಗಳಾಗಿದ್ದಾಳೆ. ಕಾರಣ ಗೀತೋಪದೇಶ ಆಕೆಯ ನರನಾಡಿಗಳಲ್ಲಿ ಧಮನಿಧಮನಿಗಳಲ್ಲಿ ರಕ್ತಗತವಾಗಿತ್ತು. ಶಾಸ್ತ್ರ ಓದದೇ ಬಂದ ಶಾಸ್ತ್ರೀಯ ವಿಚಾರಗಳು ಆಕೆಯನ್ನು ಉನ್ನತಮಟ್ಟದ ಸಾಧಕಿಯನ್ನಾಗಿ ತೋರಿಸುತ್ತದೆ.

೬. ಪುರುಷರಿಗೆ ಉಪನಯನ ಸಂಸ್ಕಾರ ಹೇಗೋ ಹಾಗೆ ಸ್ತ್ರೀಯರಿಗೆ ವಿವಾಹ ಸಂಸ್ಕಾರ ಆಗಲೇಬೇಕು. ಆಗಲೇ ಸಲ್ಲೋಕಪ್ರಾಪ್ತಿ ಎಂಬ ವಿಚಾರ ನಾರದರಿಂದ ತಿಳಿದ ಕೂಡಲೇ ತಾನು ವಿವಾಹವಾಗಲು ಸಿದ್ಧಳಾಗುತ್ತಾಳೆ. ಶಾಸ್ತ್ರದ ವಿಧಿಗಳನ್ನು ಪಾಲಿಸಲು. ಆದ್ದರಿಂದ ಮಹಿಳೆಯರು ಶಾಸ್ತ್ರದ ವಿಧಿಗಳಿಗೆ ಹೊರತಲ್ಲ. ಅದಕ್ಕಾಗಿ ತನ್ನ ಜೀವಮಾನದ ಅರ್ಧ ತಪಸ್ಸು ಧಾರೆ ಎರೆದು ಕೊಡಲು ಮುಂದಾಗುತ್ತಾಳೆ. ತನ್ನನ್ನು ಮದುವೆಯಾಗುವ ಋಷಿಗೆ. ಎಂತಹ ತ್ಯಾಗ, ಶಾಸ್ತ್ರಕ್ಕಾಗಿ. ಅಬ್ಬ ಆಶ್ಚರ್ಯ. ಶಾಸ್ತ್ರವಿಧಿಗಳನ್ನು ಪ್ರಶ್ನಿಸದೆ ಆಕೆಯ ತ್ಯಾಗ ಗಮನಿಸಬೇಕು. ಹಾಗೆ ಎಲ್ಲರೂ ಶಾಸ್ತ್ರಕ್ಕಾಗಿ ಅದರ ನಿಟ್ಟಿನಲ್ಲಿ ನಮ್ಮ ಜೀವನ ರೂಪಿಸಬೇಕು.

೭. ಶೃಂಗವಾನ್ ವಿಧಿಸಿದ ಒಂದು ರಾತ್ರಿಯ ಸಹವಾಸಕ್ಕೆ ಒಪ್ಪಿ ತನ್ನ ತಪೋಬಲದಿಂದ ಸುಂದರ ತರುಣಿಯಾಗಿ ಆತನಿಗೆ ದಾಂಪತ್ಯಸುಖ ನೀಡುತ್ತಾಳೆ. ಅಲ್ಲೂ ತಪಸ್ಸಿನ ಮಹಿಮೆ. ಕರ್ದಮ, ಸೌಭರಿಗಳಂತಹ ಪುರುಷರು ತೋರಿಸಿದ ತಪಸ್ಸಿನ ಮಹಿಮೆ ಈಕೆ ತೋರಿಸುತ್ತಾಳೆ.

೮. ಪತಿಯ ನಿಬಂಧನೆ ಒಂದು ರಾತ್ರಿ ಸಹವಾಸ. ಮುಗಿದ ಕೂಡಲೇ ಪತಿಗೆ ವಿದಾಯ, ಮಂಗಳ ಹೇಳಿ ಹೋಗೇ ಬಿಡುತ್ತಾಳೆ. ಇದುವೇ ನಿಜವಾದ ಬ್ರಹ್ಮಚರ್ಯ. ಆಕೆಗೆ ಆ ದಾಂಪತ್ಯಸುಖ ಹಿಂದೆ ಈಗ ಮುಂದೆಯೂ ಬೇಕಾಗಿರಲಿಲ್ಲ. ಆದ್ದರಿಂದ ಸುಂದರ ತರುಣಿಯ ಶರೀರ ತ್ಯಾಗ ಮಾಡುತ್ತಾಳೆ. ಅದುವೇ ನಿಜವಾದ ಪರಮಾತ್ಮನಲ್ಲಿ ತನ್ನ ಎಲ್ಲ ಇಂದ್ರಿಯಗಳ ಸಮರ್ಪಣೆ, ಕ್ಷುಲ್ಲಕ ದೇಹದ ಸುಖಕ್ಕಲ್ಲ ಎಂದು ತೋರಿಸುತ್ತಾಳೆ.

೯. ಆದರೆ ಆಕೆಯ ಕೈಹಿಡಿದ ಶೃಂಗವಾನ್ ಆಕೆಯ ರೂಪತಾರುಣ್ಯಕ್ಕೆ ಮರುಳಾಗಿದ್ದ ದೇಹಸುಖ ಬಯಸಿ ತಾನೂ ದೇಹತ್ಯಾಗ ಮಾಡಿ ಆಕೆ ಹೋದೆಡೆ ಹೋದ ಎನ್ನುತ್ತದೆ ಭಾರತ. ಆತನು ಮತ್ತೆ ಸುಭ್ರೂ ಜೊತೆ ಸ್ವರ್ಗದಲ್ಲಿ ಸೇರಿದನೋ ಇಲ್ಲವೋ ಭಾರತ ಹೇಳವುದಿಲ್ಲ

೧೦. ಪುರುಷರಲ್ಲಿರಬೇಕಾದ ಬ್ರಹ್ಮಚರ್ಯ, ತಪಸ್ಸು ಸ್ತ್ರೀಯರಲ್ಲಿ ನಿರೂಪಿಸುವ ಈ ಉಪಾಖ್ಯಾನ ತುಂಬಾ ಅಪರೂಪ ಚರಿತೆ. ಪ್ರಪಂಚ ಹೀಗೂ ಇರುತ್ತದೆ '**ಬಹುಚಿತ್ರ ಜಗತ್ ಬಹುಧಾಕರಣಾತ್ ಪರಶಕ್ತಿರನಂತಗುಣಃ ಪರಮಃ ॥** (ದ್ವಾದಶಸ್ತೋತ್ರ) ಎನ್ನುವುದು ಆದ್ದರಿಂದಲೇ ಚಿರಂತನ ಸತ್ಯ.

೧೧. ತಾನು ವಾಸವಾಗಿದ್ದ ತೀರ್ಥಕ್ಕೆ ಮಹತ್ತ್ವವನ್ನು ಸಾಧಿಸಿ ಕೊಟ್ಟ ತಪಸ್ವಿನೀ ಸುಭ್ರೂ. ಒಂದು ರಾತ್ರಿ ತೀರ್ಥವಾಸ ಮಾಡಿ ದೇವತೆಗಳಿಗೆ ಸಂತೋಷ ಪಡಿಸುವವನಿಗೆ ೫೪ ವರ್ಷ ಬ್ರಹ್ಮಚರ್ಯವ್ರತ ಮಾಡಿದವನಿಗೆ ಸಿಗುವ ಫಲ ಬರಲಿ ಎಂದು ಹೇಳಿದ ಸುಭ್ರೂ, ಸಾಧನೆ, ವಿವೇಕ ಅವರ್ಣನೀಯ. ಅಕೆಯವಾಸ ಆ ತೀರ್ಥಕ್ಕೆ ಅಷ್ಟು ಪಾವಿತ್ರ್ಯ ತಂದಿತು. **ತೀರ್ಥೀ ಕುರ್ವಂತಿ ತೀರ್ಥಾನಿ** ಎಂಬುದಕ್ಕೆ ಈಕೆಯೂ ದೃಷ್ಟಾಂತವಾಗಿದ್ದಾಳೆ.

ಇತ್ಯಾದಿ....

# ಶಾಂತಿಪರ್ವ

## ರಾಜಧರ್ಮಪರ್ವ

### ೭೫. ಶಂಖ-ಲಿಖಿತರ ಕಥೆ

ದುರ್ಯೋಧನನ ಪಕ್ಷವಹಿಸಿ ತಮ್ಮ ವಿರುದ್ಧ ಯುದ್ಧ ಮಾಡಿದ ಕರ್ಣನು ತನ್ನ ಹಿರಿಯ ಸೋದರನೆಂದು ತಿಳಿದ ಮೇಲೆ ಧರ್ಮರಾಜನಿಗೆ ಬಹಳ ವ್ಯಥೆಯಾಗಿ, ರಾಜ್ಯತ್ಯಾಗ ಮಾಡಿ, ತಾನು ಕಾಡಿಗೆ ಹೋಗಲು ಬಯಸಿದಾಗ ಆತನಿಗೆ ಕ್ಷತ್ರಿಯಧರ್ಮ, ಗೃಹಸ್ಥಧರ್ಮದ ಆಚರಣೆಯೇ ವಿಹಿತವಾದುದೆಂದು ಪರಿಪರಿಯಿಂದ ಅರ್ಜುನ, ಭೀಮಸೇನ, ನಕುಲ, ಸಹದೇವ, ದ್ರೌಪದಿಯರು ಹೇಳಿದರೂ ಒಪ್ಪದಿದ್ದಾಗ ವೇದವ್ಯಾಸದೇವರು ಗೃಹಸ್ಥಧರ್ಮವೇ ಶ್ರೇಷ್ಠವೆಂದು ಪ್ರತಿಪಾದಿಸಿ ಉಪದೇಶಿಸುತ್ತಾರೆ.

ನೋಡು ಧರ್ಮರಾಜ! ಅರ್ಜುನನು ನಿನಗೆ ಹೇಳಿದ ಮಾತುಗಳೆಲ್ಲ ಶಾಸ್ತ್ರಸಮ್ಮತ. ಆದ್ದರಿಂದ ನೀನು –

೧. ಸ್ವಧರ್ಮದಲ್ಲಿದ್ದು ಕರ್ತವ್ಯನಿರ್ವಹಿಸು. ಗೃಹಸ್ಥಧರ್ಮ ಪರಿತ್ಯಾಗ ಮಾಡಿ ಅರಣ್ಯದಲ್ಲಿರುವುದು ಕ್ಷತ್ರಿಯನಾದ ನಿನಗೆ ವಿಹಿತವಲ್ಲ.

೨. ಗೃಹಸ್ಥರನ್ನೇ ದೇವತೆಗಳು, ಪಿತೃಗಳು, ಅತಿಥಿಗಳು, ಪಶುಪಕ್ಷಿಗಳೂ ಆಶ್ರಯಿಸಿರುತ್ತವೆ. ಗೃಹಸ್ಥರನ್ನೇ ಉಪಜೀವಿಸಿಕೊಂಡಿರುತ್ತಾರೆ.

೩. ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮ ಕಠಿಣ. ಅದನ್ನು ನೀನು ನಿರ್ವಹಿಸು. ಅದುವೇ ನಿನ್ನ ಧರ್ಮವಾಗಿದೆ.

೪. ನಿನಗೆ ಎಲ್ಲ ವೇದಾರ್ಥ ಪರಿಜ್ಞಾನವಿದೆ. ಮಹಾತಪಸ್ಸನ್ನು ಆಚರಿಸಿರುವ ಹಿನ್ನೆಲೆ ಇದೆ. ಆದ್ದರಿಂದ ನಿನ್ನ ಪಿತಾ, ಪಿತಾಮಹರಿಂದ ವಂಶಾನುಗತವಾಗಿ ಬಂದ ರಾಜ್ಯವನ್ನು ನಡೆಸುವ ದೊಡ್ಡ ಹೊಣೆಯನ್ನು ಹೊರುವುದು ನಿನ್ನ ಕರ್ತವ್ಯ.

೫. ತಪಸ್ಸು ಯಜ್ಞ, ಅಧ್ಯಾತ್ಮವಿದ್ಯೆ, ಭಿಕ್ಷಾಟನೆ, ಇಂದ್ರಿಯನಿಗ್ರಹ, ಧ್ಯಾನ, ಏಕಾಂತವಾಸ, ಯಥಾಶಕ್ತಿದಾನಾದಿಗಳು, ಬ್ರಾಹ್ಮಣರ ಧರ್ಮಗಳೇ ಹೊರತು ನಿನಗಲ್ಲ.

೬. ಕ್ಷತ್ರಿಯಧರ್ಮಗಳುನಿನಗೆಗೊತ್ತೇಇವೆ. ಅವುಯಜ್ಞ,ವಿದ್ಯಾಭ್ಯಾಸ,ಸಂಪತ್ಸಂಗ್ರಹದಲ್ಲಿ ಅತೃಪ್ತಿ (ಎಷ್ಟೇ ಇದ್ದರೂ ಮತ್ತೂ ಸಂಪಾದಿಸುವುದೇ ಕ್ಷಾತ್ರಧರ್ಮ). ಅಪರಾಧಿಗಳ ಶಿಕ್ಷೆ, ಪ್ರಜಾಪರಿಪಾಲನೆ, ಸಮಗ್ರವೇದಗಳ ಅರ್ಥಜ್ಞಾನ ಸಂಪಾದನೆ, ಸಚ್ಚಾರಿತ್ರ್ಯ, ಸತ್ಪಾತ್ರರಿಗೆದಾನ

ಇವೇ ಮೊದಲಾದವು ರಾಜರ ಕರ್ತವ್ಯಗಳು. ಇವು ಇದ್ದವರು ಇಹಪರ ಸಾಧನೆ ಮಾಡುವರು. ಇವೆಲ್ಲವುಗಳಲ್ಲಿ ದಂಡಧಾರಣೆ ಅತಿಶ್ರೇಷ್ಠ ಇವೇ ಮೋಕ್ಷದಾಯಕಗಳು. ಈ ವಿಷಯದಲ್ಲಿ ಬೃಹಸ್ಪತ್ಯಾಚಾರ್ಯರ ಒಂದು ಗಾಥಾ ಇದೆ. 'ಸರ್ಪವು ಬಿಲದಲ್ಲಿ ಅಡಗಿದ ಇಲಿಗಳನ್ನು ನುಂಗುವಂತೆ ಭೂಮಿಯು ಶತ್ರುವನ್ನು ವಿರೋಧಿಸದ ಕ್ಷತ್ರಿಯನನ್ನು ಮತ್ತು ದೇಶ ಸಂಚಾರ ಮಾಡದ ಬ್ರಹ್ಮಣನನ್ನು ನುಂಗಿಬಿಡುತ್ತದೆ (ಕೊಲ್ಲುತ್ತದೆ)[೧].

ರಾಜರ್ಷಿಯಾದ **ಸುದ್ಯುಮ್ನನು** ಕೂಡಾ ದಂಡಧಾರಣದಿಂದಲೇ (ಶತ್ರುನಿವಾರಕ-ನಾಗಿಯೇ) ಮಹಾಸಿದ್ಧಿಯನ್ನು ಪ್ರಚೇತಸನ ಮಗನಾದ ದಕ್ಷನಂತೆ ಹೊಂದಿದನು.

ಈ ಮಾತನ್ನು ಕೇಳಿದ ಧರ್ಮರಾಜನು **ಸುದ್ಯುಮ್ನನು** ಸಿದ್ಧಿಪಡೆದ ಬಗೆಯನ್ನು ವಿವರಿಸಲು ಪ್ರಾರ್ಥಿಸಿದ. ವ್ಯಾಸರು, ಇದಕ್ಕೆ ಸಂಬಂಧಿಸಿದ '**ಶಂಖಲಿಖಿತರ**' ಚರಿತ್ರೆಯನ್ನು ಹೇಳಿದರು.

ಶಂಖಲಿಖಿತರು ಇಬ್ಬರು ಸೋದರರು. ಇಬ್ಬರೂ ರಮಣೀಯವಾದ ಬೇರೆ ಬೇರೆ ಆಶ್ರಮಗಳಲ್ಲಿ '**ಬಾಹುದಾ**' ಎಂಬ ನದಿಯ ದಂಡೆಯಲ್ಲಿ ವಾಸವಾಗಿದ್ದರು. ಒಮ್ಮೆ ಲಿಖಿತನು ಅಣ್ಣನಾದ ಶಂಖನ ಆಶ್ರಮಕ್ಕೆ ಹೋಗಿದ್ದನು. ಆಗ ಅಣ್ಣನು ಆಶ್ರಮದಲ್ಲಿರಲಿಲ್ಲ. ತಮ್ಮ ಸೋದರ ಲಿಖಿತನು ಆಶ್ರಮದ ತೋಟದಲ್ಲಿದ್ದ ಫಲಭರಿತ ಮರವನ್ನು ನೋಡಿ, ಅದರಿಂದ ಕೆಲವು ಪಕ್ವವಾದ ಹಣ್ಣುಗಳನ್ನು ಬೀಳಿಸಿ ತಿನ್ನುತ್ತಿದ್ದ. ಅಣ್ಣ ಶಂಖನು ಬಂದು ನೋಡಿದನು. ಶಂಖನು ಲಿಖಿತನನ್ನು ನೀನು ತಿನ್ನುತ್ತಿರುವ ಹಣ್ಣುಗಳು ಎಲ್ಲಿಂದ ಪಡೆದೆ? ಏಕೆ ತಿನ್ನುತ್ತಿದ್ದೀಯಾ?[೨]

ತನ್ನ ಆಶ್ರಮಕ್ಕೆ ಬಂದ ಅಣ್ಣನನ್ನು ಎದ್ದು ನಮಸ್ಕರಿಸಿ 'ನಾನು ಈ ಹಣ್ಣುಗಳನ್ನು ನಿನ್ನ ತೋಟದ ಮರದಿಂದಲೇ ತೆಗೆದುಕೊಂಡು ತಿನ್ನುತ್ತಿದ್ದೇನೆ.' ಎಂದು ನಗುತ್ತಲೇ ಉತ್ತರಿಸಿದ. ಅದನ್ನು ಇಷ್ಟಪಡದ ಅಣ್ಣ ತೀವ್ರ ಕೋಪದಿಂದ 'ನೀನು ಹಣ್ಣುಗಳನ್ನು ತೆಗೆದುಕೊಂಡು(ನನ್ನ ಅನುಮತಿಯಿಲ್ಲದೆ) ಕಳ್ಳತನಮಾಡಿದ್ದೀಯಾ. ಆದ್ದರಿಂದ ರಾಜನ ಬಳಿಗೆ ಹೋಗಿ ನೀನು ಮಾಡಿದ ಕಳ್ಳತನವನ್ನು ಹೀಗೆ ಹೇಳು.

'ರಾಜನ್! ನನಗೆ ಹಣ್ಣುಗಳನ್ನು ಯಾರೂ ಕೊಟ್ಟಿರಲಿಲ್ಲ. ಆದರೂ ನಾನೇ ತೆಗೆದುಕೊಂಡು ತಿಂದಿರುವುದರಿಂದ ನಾನು ಕಳ್ಳತನ ಮಾಡಿದಂತಾಯಿತು. ನನಗೆ ದಂಡ, ಶಿಕ್ಷೆ ಕೊಡು,

೧ ಭೂಮಿರೇತೌ ನಿಗಿರತಿ ಸರ್ಪೋ ಬಿಲಶಯಾನಿವ।
ರಾಜನ್ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್॥ - ಅ. (೨೩/೧೫,೧೬)

೨ ಸೋಽಭಿಗಮ್ಯಾಶ್ರಮಂ ಭ್ರಾತುಃ ಶಂಖಸ್ಯ ಲಿಖಿತಸ್ತದಾ।
ಫಲಾನಿ ಪಾತಯಾಮಾಸ ಸಮ್ಯಕ್ ಪರಿಣತಾನ್ಯುತ॥
ತಾನ್ಯುಪಾದಾಯ ವಿಸ್ರಬ್ಧೋ ಭಕ್ಷಯಾಮಾಸ ಸ ದ್ವಿಜಃ।
ತಸ್ಮಿಂಶ್ಚ ಭಕ್ಷಯತ್ಯೇವ ಶಂಖೋಽಪ್ಯಾಶ್ರಮಮಾಗಮತ್।
ಭಕ್ಷಯಂತಂ ತು ತಂ ದೃಷ್ಟ್ವಾ ಶಂಖೋ ಭ್ರಾತರಮಬ್ರವೀತ್।
ಕುತಃ ಫಲಾನ್ಯವಾಪ್ತಾನಿ ಹೇತುನಾ ಕೇನ ಖಾದಸಿ॥

ರಾಜಧರ್ಮ ಪಾಲನೆ ಮಾಡು. ಕಳ್ಳನಿಗೆ ಯಾವ ಶಿಕ್ಷೆ ಕೊಡಬೇಕೋ, ಅದನ್ನೇ ನನಗೂ ಕೊಡು.'[೧]

ಹೀಗೆ ಅಣ್ಣನಿಂದ ಆದಿಷ್ಟನಾದ ತಮ್ಮ ಲಿಖಿತನು ಅಣ್ಣನ ಆದೇಶದಂತೆ ರಾಜನಾದ **'ಸುದ್ಯುಮ್ನ'**ನನ್ನು ಭೇಟಿಯಾಗಿ ಅಣ್ಣನು ಹೇಳಿದಂತೆ ರಾಜನಿಗೆ ನಿವೇದಿಸಿದ. ಆಗ ರಾಜನು –

ಎಲೈ ಬ್ರಾಹ್ಮಣಶ್ರೇಷ್ಠನೇ! ಶಿಕ್ಷೆ ನೀಡುವ ಅಧಿಕಾರವಿರುವ ರಾಜನಿಗೆ ನಿನಗೆ ಅನುಜ್ಞೆ (ಅಪ್ಪಣೆ) ಕೊಡಲು ಅಧಿಕಾರವಿದೆಯಷ್ಟೇ![೨] (ನೀನು ಮಾಡಿದ ತಪ್ಪನ್ನು ಕ್ಷಮಿಸುವ ಅಧಿಕಾರವೂ ನನಗಿದೆ)

ಇಲ್ಲಿ **ಲಕ್ಷಾಲಂಕಾರವು 'ಅನುಜ್ಞಾಯಾಮಪಿ ತಥಾ ಇತ್ಯತ್ರ ಅನುಜ್ಞಾಯಾಂ ಕರ್ತವ್ಯಯಾಮಪಿ ತಥಾ ಜ್ಯೇಷ್ಠವತ್ ರಾಜಾಪಿ ಹೇತುಃ ಸ್ಯಾತ್ ಸ ಭವಾನ್ ಅಭ್ಯನುಜ್ಞಾತಃ ಮಯಾ ಅಭ್ಯನುಜ್ಞಾತಃ'** ಎಂದು ಇದೆ.

ನಿನ್ನ ಅಣ್ಣನು ಅನುಜ್ಞೆಯನ್ನು ಕೊಟ್ಟಿರದಿದ್ದರೂ ನಾನು ಅನುಜ್ಞೆಯನ್ನು ಕೊಡುತ್ತಿದ್ದೇನೆ (ಅನುಜ್ಞೆಯನ್ನು ಕೊಡುವ ಅಧಿಕಾರವಿದೆ. ಶಿಕ್ಷೆ ಕೊಡುವ ಅಧಿಕಾರವಿರುವಂತೆ). ಎಂದು ಅಭಿಪ್ರಾಯ.

ರಾಜನು ಕ್ಷಮಿಸಲು ಸಿದ್ಧನಾಗಿದ್ದರೂ ಲಿಖಿತ ಸಿದ್ಧನಿರಲಿಲ್ಲ. ಶಿಕ್ಷೆಯನ್ನು ಕೊಡಲೇಬೇಕೆಂದು ಆಗ್ರಹ ಮಾಡಲು ರಾಜನು ತನ್ನ ಭಟರಿಗೆ ಲಿಖಿತನ ಎರಡೂ ಕೈಗಳನ್ನು ಕತ್ತರಿಸಲು ಆಜ್ಞೆ ಮಾಡಿದನು. ಭಟರು ಎರಡೂ ಕೈಗಳನ್ನು ಕತ್ತರಿಸಿದರು. ಲಿಖಿತ ಶಿಕ್ಷೆಯನ್ನು ಸ್ವೀಕರಿಸಿ ಅಣ್ಣನಿಗೆ 'ನಾನು ಶಿಕ್ಷೆಯನ್ನು ಪಡೆದು ಬಂದಿದ್ದೇನೆ. ಪೂಜ್ಯನೇ! ದುರ್ಬುದ್ಧಿಯುಳ್ಳ ನನ್ನನ್ನು ಕ್ಷಮಿಸಿರಿ' ಎಂದನು. ಅದಕ್ಕೆ ಅಣ್ಣನು –

'ಧರ್ಮಜ್ಞನೇ! ನಾನು ನಿನ್ನ ಬಗ್ಗೆ ಕೋಪಗೊಂಡಿಲ್ಲ. ನೀನಾದರೂ ನನಗೆ ಯಾವುದೇ ಅಪರಾಧವೆಸಗಿಲ್ಲ. ಆದರೆ ನಮ್ಮ ವಂಶವು ತುಂಬಾ ಕಲಂಕರಹಿತವಾದುದೆಂದು ಪ್ರಸಿದ್ಧವಾಗಿದೆ. ನಿನ್ನಿಂದ ಧರ್ಮ ಅತಿಕ್ರಮಣವಾಯಿತಲ್ಲ. ಅದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಹೇಳಿದೆ. ಈಗ ನೀನು **ಬಹುದಾ** ನದಿಗೆ ಹೋಗು. ಅಲ್ಲಿ ಶಾಸ್ತ್ರಪ್ರಕಾರವಾಗಿ ದೇವತೆ, ಋಷಿ, ಪಿತೃಗಳಿಗೆ ತರ್ಪಣ ಕೊಟ್ಟು ಅವರನ್ನು ತೃಪ್ತಿ ಪಡಿಸು. ಇನ್ನು ಮುಂದೆ ಅಧರ್ಮದಲ್ಲಿ ಮನಸ್ಸನ್ನು ಹಾಕಬೇಡ. ಬ್ರಹ್ಮಹತ್ಯಾ, ಸುರಾಪಾನ, ಕಳ್ಳತನ, ಗುರುಪತ್ನಿಗಮನಗಳೆಂಬ ಮಹಾ

---

೧ ಆದತ್ತಾದಾನ ಮೇವೇದಂ ಕೃತಂ ಪಾರ್ಥಿವಸತ್ತಮ।
ಸ್ತೇನಂ ಮಾಂ ತ್ವಂ ವಿದಿತ್ವಾ ಚ ಸ್ವಧರ್ಮಮನುಪಾಲಯ॥
ಶೀಘ್ರಂ ಧಾರಯ ಚೌರಸ್ಯ ಮಮ ದಂಡಂ ನರಾಧಿಪ॥ – ೨೪/೧೦

೨ ಪ್ರಮಾಣಂ ಚೇನ್ಮತೋ ರಾಜಾ ಭವತೋ ದಂಡಧಾರಣೇ।
ಅನುಜ್ಞಾಯಾಮಪಿ ತಥಾ ಹೇತುಃ ಸ್ಯಾತ್ ಬ್ರಾಹ್ಮಣರ್ಷಭ॥

ಪಾತಕಗಳನ್ನು ಮಾಡುವವರ ಸಹವಾಸ ಮಾಡಬಾರದೆಂದು ಜ್ಞಾನಿಗಳು ಹೇಳುತ್ತಾರೆ. ಕಳ್ಳತನವೂ ಮಹಾಪಾತಕವೇ. ಇದಕ್ಕೆ ಸಮವಾದ ಮತ್ತೊಂದು ಮಹಾಪಾತಕವಿಲ್ಲ. ಬ್ರಹ್ಮಹತ್ಯೆಗೆ ಸಮಾನವಾದ ಪಾತಕವೂ ಇಲ್ಲ. ಎಲ್ಲ ಪಾತಕ ಮಾಡಿದವನಿಗೆ ಶಾರೀರಿಕ ದಂಡ ಹೇಳಲಾಗುತ್ತದೆ. ವಿಶೇಷವಾಗಿ ಕಳ್ಳತನ ಮಾಡಿದವರಿಗೆ ಶಾರೀರಿಕ ದಂಡವೇ ವಿಧಾನವಾಗಿದೆ. ಬೇರೆ ದಂಡವಿಲ್ಲ. ಚತುರ್ವರ್ಣದವರಲ್ಲಿ ಯಾರೇ ಉದ್ದೇಶಪೂರ್ವಕವಾಗಿ ಪಾಪ ಮಾಡಿದರೆ ಅವರಿಗೆ ಶಿಕ್ಷೆ ನೀಡಲೇಬೇಕು. ಬೇರೆ ಮಾರ್ಗವೇ ಇಲ್ಲ. ರಾಜ ವಿಧಿಸಿದ ದಂಡದಿಂದಲೇ ಪಾಪಪರಿಹಾರವಾಗಿ ಮುಂದೆ ಸ್ವರ್ಗಕ್ಕೆ ಹೋಗುತ್ತಾರೆ. ನೀನು ಈಗ ಶಿಕ್ಷೆ ಪಡೆದು ಶುದ್ಧನಾಗಿರುವೆ.'[೧] ನಮ್ಮ ಕುಲ ಪುನೀತವಾಯಿತು.

ಅಣ್ಣನ ಮಾತಿನ ಮೇರೆಗೆ ಲಿಖಿತನು ಬಾಹುದಾ ನದಿಗೆ ಹೋಗಿ ಸ್ನಾನ ಮಾಡಿದ. ತರ್ಪಣ ಕೊಡಲು ಉಪಕ್ರಮಿಸಿದನು. ಆಶ್ಚರ್ಯವೆಂಬಂತೆ ಕತ್ತರಿಸಲ್ಪಟ್ಟ ಎರಡೂ ಕೈಗಳು ಮತ್ತೆ ಪ್ರಕಟವಾದವು. ನಂತರ ತರ್ಪಣ ನೀಡಿ, ಅಣ್ಣನಿಗೆ ಬಂದು ಕೈಗಳು ಮತ್ತೆ ಬಂದುದನ್ನು ತೋರಿಸಿದನು. ಆಗ ಅಣ್ಣನು ನನ್ನ ತಪಸ್ಸಿನ ಮಹಿಮೆಯಿಂದ ಇದೆಲ್ಲ ಆಗಿದೆ. ಸಂಶಯಬೇಡ. ಎಲ್ಲವೂ ಭಗವಂತನ ಅನುಗ್ರಹದಿಂದ ಆಗಿದೆ ಎಂದನು[೨].

(ತಮ್ಮನು ಕೈಗಳಿಂದ ವಂಚಿತನಾದುದರಿಂದ ವ್ಯಥೆಯಿಂದ ಅಣ್ಣನು ತನ್ನ ಪುಣ್ಯವನ್ನು ಧಾರೆಯೆರೆದ ಪರಿಣಾಮವಾಗಿ ಅವನ ಹೋದ ಕೈಗಳು ತಕ್ಷಣ ಬಂದವು ಎಂದು ಅಭಿಪ್ರಾಯ. ಅಣ್ಣನ ಮಾತಿನ ಅಭಿಪ್ರಾಯ ಇದಿರಲು ಸಾಕು)

---

೧ ನ ಕುಪ್ಯೇ ತವ ಧರ್ಮಜ್ಞ ನ ಚ ದೂಷಯಸೇ ಮಮ।
ಸುನಿರ್ಮಲ ಕುಲಂ ಬ್ರಹ್ಮನ್ ಅಸ್ಮಿನ್ ಜಗತಿ ವಿಶ್ರುತಮ್ ॥
ಧರ್ಮಸ್ತು ತೇ ವ್ಯತಿಕ್ರಾಂತಃ ತತಸ್ತೇ ನಿಷ್ಕೃತಿಃ ಕೃತಾ।
ಸ ಗತ್ವಾ ಬಾಹುದಾಂ ಶೀಘ್ರಂ ತರ್ಪಯಸ್ವ ಯಥಾ ವಿಧಿ।
ದೇವಾನ್ ಪಿತೄನ್ ಋಷೀಂಶ್ಚೈವ ಮಾ ಚಾಧರ್ಮೇ ಮನಃ ಕೃಥಾಃ।
ನ ಸ್ತೇಯಂ ಸದೃಶಂ ಬ್ರಹ್ಮನ್ ಮಹಾಪಾತಕಮಸ್ತ್ವತ್ರ।
ಜಗತ್ಯಸ್ಮಿನ್ ಮಹಾಭಾಗ ಬ್ರಹ್ಮಹತ್ಯಾ ಸಮೋ ಹಿ ತತ್।
ಸರ್ವಪಾತಕಿನಾ ಬ್ರಹ್ಮನ್ ದಂಡಃ ಶಾರೀರ ಉಚ್ಯತೇ।
ತಸ್ಕರಸ್ಯ ವಿಶೇಷೇಣ ನಾನ್ಯೋ ದಂಡೋ ವಿಧೀಯತೇ।
ಉದ್ಧೃತಂ ನಃ ಕುಲಂ ಬ್ರಹ್ಮನ್ ರಾಜ್ಞಾ ದಂಡೇ ಧೃತೇ ತ್ವಯಿ ॥

೨ ತಸ್ಯ ತದ್ವಚನಂ ಶ್ರುತ್ವಾ ಶಂಖಸ್ಯ ಲಿಖಿತಸ್ತದಾ।
ಅವಗಾಹ್ಯಾಪಗಾಂ ಪುಣ್ಯಾಮುದಕಾರ್ಥಂ ಪ್ರಚಕ್ರಮೇ।
ಪ್ರಾದುರಾಸ್ತಾಂ ತತಸ್ತಸ್ಯ ಕರೌ............................
ತತಸ್ತಸ್ಯ ವಿಸ್ಮಿತೋ ಭ್ರಾತುರ್ದರ್ಶಯಾಮಾಸ ತೌ ಕರೌ।
ತತಸ್ತಮಬ್ರವೀತ್ ಶಂಖಸ್ತಪಸೇದಂ ಕೃತಂ ಮಯಾ।
ಮಾ ಚ ತೇಽತ್ರ ವಿಶಂಕಾಽಭೂದ್ ದೈವಮೇವ ವಿಧೀಯತೇ ॥ – ೨೪/೨೧-೩೦

ಅಣ್ಣನ ಮಾತನ್ನು ಕೇಳಿದ ತಮ್ಮ ಲಿಖಿತನು 'ಅಣ್ಣನೇ! ನಿನ್ನ ತಪಸ್ಸಿಗೆ ಇಷ್ಟು ಶಕ್ತಿ ಇದ್ದಲ್ಲಿ ಮೊದಲೇ ನನ್ನನ್ನು ಏಕೆ ಶುದ್ಧ ಮಾಡಲಿಲ್ಲ? ನೀನೇ ನನ್ನ ಕೈಗಳನ್ನು ಕತ್ತರಿಸಿ, ನನ್ನನ್ನು ಮತ್ತೆ ಶುದ್ಧಮಾಡಬಹುದಿತ್ತಲ್ಲವೇ? ರಾಜನ ಬಳಿಗೆ ಏಕೆ ಕಳಿಸಿದೆ? ಅದರಿಂದ ಪಾಪ ಪರಿಹಾರ ತಡವಾಯಿತಲ್ಲ.

ಹೀಗೆಂದಾಗ ಶಂಖನು ಮತ್ತೆ 'ನಾನೇ ಮಾಡಬಹುದಿತ್ತು. ಆದರೆ ನಾನು ದಂಡಾಧಿಕಾರಿಯಲ್ಲ. ಅದು ಕೇವಲ ರಾಜನ ಕರ್ತವ್ಯ. ರಾಜನಿಂದ ಶಿಕ್ಷೆ ಅನುಭವಿಸಿದಾಗಲೇ ಪಿತೃಗಳೊಡನೆ ನೀನೂ ಸಹ ಪವಿತ್ರನಾದೆ. ರಾಜನೂ ದಂಡನೀತಿ ಅನುಷ್ಠಾನ ಮಾಡಿದ್ದರಿಂದ ಪುನೀತನಾದ.'

ಹೀಗೆ ರಾಜ ಸುದ್ಯುಮ್ನನು ದಂಡ ಪ್ರಯೋಗ ಮಾಡಿ ಮುಂದೆ ಪರಮಸಿದ್ಧಿಯನ್ನು ಹೊಂದಿದನು ಎಂದು ವ್ಯಾಸರು ಧರ್ಮರಾಜನಿಗೆ ಹೇಳಿದರು.

ಇದುವೇ ಕ್ಷತ್ರಿಯರ ಪರಮಧರ್ಮ. ಪ್ರಜಾಪರಿಪಾಲನೆ, ದಂಡ ನೀತಿಯ ಅನುಸರಣೆ. ಆದ್ದರಿಂದ ಕ್ಷಾತ್ರಧರ್ಮ ಪಾಲನೆಯ ವಿಷಯದಲ್ಲಿ ದುಃಖಿಸಬೇಡ. ನಿನ್ನ ಸಹೋದರ ಅರ್ಜುನನ ಮಾತಿನಂತೆ ನಡೆದ. ಕ್ಷತ್ರಿಯರಿಗೆ ಶಿಕ್ಷೆ ನೀಡುವ ಅಧಿಕಾರವಿದೆ. ಅದೇ ಮುಖ್ಯ ಧರ್ಮ. ಹೊರತು ಮುಂಡನವಲ್ಲ(ಸನ್ಯಾಸವಲ್ಲ).

## ಸಂದೇಶಗಳು-ವಿವರಣೆಗಳು

೧. ಕಥಾ/ಸಂದೇಶಗಳು ಅತ್ಯಂತ ಸ್ಪಷ್ಟವಾಗಿವೆ.

೨. ಪ್ರತಿಯೊಬ್ಬರು ತಮ್ಮ ತಮ್ಮ ವರ್ಣಾಶ್ರಮಧರ್ಮ ಪಾಲನೆ ಮಾಡಬೇಕು.

೩. ಬಂಧುಗಳು ತಪ್ಪು ಮಾಡಿದರೂ ಶಿಕ್ಷೆಯನ್ನು ದಂಡಾಧಿಕಾರಿಗಳಿಂದ ಕೊಡಿಸಲು ಹಿರಿಯರು ಮುತುವರ್ಜಿ ವಹಿಸಬೇಕೇ ಹೊರತು, ಶಿಕ್ಷೆಯಿಂದ ಪಾರಾಗಲು ಒಳ ಹಾದಿಗಳನ್ನು ಹುಡುಕಬಾರದು.

೪. ಪ್ರತಿಯೊಬ್ಬರು ತಮ್ಮ ವಂಶದ ಮಾನ, ಮರ್ಯಾದೆ, ವರ್ಚಸ್ಸಿಗೆ ಧಕ್ಕೆ ತರದಂತೆ ವರ್ತಿಸಬೇಕು.

೫. ಕಿರಿಯರು ಅಂದಮಟ್ಟಿಗೆ ಅವರ ಮಾತನ್ನು ನಿರ್ಲಕ್ಷಿಸದೆ ಅನುಸರಿಸಬೇಕು.

೬. ಶ್ರದ್ಧೆಯಿಂದ ಸ್ವಧರ್ಮಪಾಲನೆ ಮಾಡಿದರೆ, ಕಳೆದುಹೋದುದು ಸಿಗುತ್ತದೆ(ಲಿಖಿತನು ಕೈಗಳನ್ನು ಪಡೆದಂತೆ). ಧರ್ಮ ಉಳಿದು ಕುಲದ ಹಿಂದಿನ ಪಿತ್ರಾದಿಗಳು ಸಂತೋಷದಿಂದ ನಮ್ಮನ್ನು ಹರಸುತ್ತಾರೆ.

೭. ನಾವು ಕುಲದೀಪಕರಾಗಬೇಕೇ ಹೊರತು ಕುಲಘ್ನರಾಗಬಾರದು. ನಮ್ಮ ಗೋತ್ರ ಪ್ರವರ್ತಕರ ಅನುಗ್ರಹ ನಮ್ಮ ಮೇಲೆ ಯಾವಾಗಲೂ ಇರುವಂತೆ ವರ್ತಿಸಬೇಕು. ಇತ್ಯಾದಿ..

*****

## ೭೬. ಹಯಗ್ರೀವ ರಾಜರ್ಷಿಯ ವೃತ್ತಾಂತ

ವೇದವ್ಯಾಸರು ದಂಡ ನೀತಿಯು ಕ್ಷತ್ರಿಯರ ಮುಖ್ಯಧರ್ಮವೆಂದು ಸುದ್ಯುಮ್ನರಾಜನ ಉದಾಹರಣೆಯನ್ನು ಕೊಟ್ಟ ನಂತರ ಧರ್ಮರಾಜನಿಗೆ ಆತನದೇ ಆದ ಕೌಟುಂಬಿಕ ಜವಾಬ್ದಾರಿಗಳನ್ನು ನೆನಪಿಸುತ್ತಾರೆ. ನಂತರ ಹಯಗ್ರೀವ ಎಂಬ ಒಬ್ಬ ರಾಜರ್ಷಿಯು ಹೇಗೆ ದಂಡಧರನಾಗಿದ್ದು ತನ್ನ ಕೀರ್ತಿಯನ್ನು ಬೆಳಗಿಸಿಕೊಂಡನೆಂಬುದನ್ನು ಉಪದೇಶಿಸುತ್ತಾರೆ.

೧. ಪಾಂಡವರು ೧೩ ವರ್ಷಕಾಲ ರಾಜ್ಯವಂಚಿತರಾಗಿದ್ದರಿಂದ ಅವರ ಅಭಿಲಾಷೆಗಳನ್ನು ಈಗಲಾದರೂ ಪೂರ್ಣವಾಗಲು ಹಿರಿಯಣ್ಣನಾಗಿ ಧರ್ಮರಾಜನು ರಾಜ್ಯಭಾರ ಮಾಡಬೇಕೆ ಹೊರತು, ರಾಜ್ಯತ್ಯಾಗವಾಗಲೀ, ಸನ್ಯಾಸವಾಗಲೀ ಮಾಡಬಾರದು. ಈಗ ಸದ್ಯ ಧರ್ಮ, ಅರ್ಥ, ಕಾಮಗಳನ್ನು ಅನುಭವಿಸಿ, ನಂತರ ವಾನಪ್ರಸ್ಥಾಶ್ರಮಕ್ಕೆ ಹೋಗಬಹುದು.

೨. ದೇವ, ಪಿತೃ, ಋಷಿ, ಅತಿಥಿ ಋಣಗಳಿಂದ ಪರಿಹಾರಕ್ಕೆ ಪ್ರಯತ್ನಿಸಬೇಕು. ಅದಕ್ಕಾಗಿ ಸರ್ವಮೇಧ, ಅಶ್ವಮೇಧ ಮೊದಲಾದ ಬಹು ದಕ್ಷಿಣಾಕ ಯಾಗಗಳನ್ನು ಮಾಡಬೇಕು.

೩. ರಾಜನು ಯಾವೆಲ್ಲ ಶಾಸ್ತ್ರಗಳನ್ನು ಅನುಸರಿಸಬೇಕೆಂದು ವ್ಯಾಸರು ಉಪದೇಶಿಸುತ್ತಾರೆ. ಪ್ರಮಾಣಗಳು ಯಾವುವೆಂಬುದನ್ನು ಹೇಳುತ್ತಾರೆ.

೪. ಪ್ರಜಾಪಾಲನೆಯ ಅಂಗವಾಗಿ ತಾನು ಪ್ರಜೆಗಳ ಆದಾಯದ ಆರನೇ ಒಂದು ಭಾಗ ಸ್ವೀಕರಿಸಿ, ಅದನ್ನು ರಾಷ್ಟ್ರರಕ್ಷಣೆಗೆ ಬಳಸಬೇಕು. ಹಾಗೆ ಮಾಡದಿದ್ದರೆ, ಪ್ರಜೆಗಳು ಮಾಡುವ ಪಾಪದ ನಾಲ್ಕನೇ ಒಂದು ಭಾಗ ಪಾಪ ರಾಜನಿಗೆ ಬರುತ್ತದೆ.

೫. ರಾಜನು ಪ್ರಮಾಣಜ್ಞನಾದ ನ್ಯಾಯಶಾಸ್ತ್ರ ವೇದಶಾಸ್ತ್ರ ಬಲ್ಲ ವಿದ್ವಾಂಸನನ್ನು ವ್ಯವಹಾರ, ಮಂತ್ರಾಲೋಚನೆ ಮಾಡುವ ಅಧಿಕಾರಿಗಳನ್ನಾಗಿ ನಿಯೋಜಿಸಿಕೊಳ್ಳಬೇಕು. ಇತ್ಯಾದಿ.

[೧]ಈ ಬಗ್ಗೆ ವ್ಯಾಸರು ಹೇಳಿದ ಹಯಗ್ರೀವರಾಜರ್ಷಿಯ ವೃತ್ತಾಂತ ಹೀಗಿದೆ. ಆತನ ದೇಶ, ಕಾಲ ಮೊದಲಾದ ವಿವರಗಳು ಇಲ್ಲಿಲ್ಲ. ಒಟ್ಟಾರೆ ಆತನು ಕ್ಷತ್ರಧರ್ಮವನ್ನು ಪರಿಪೂರ್ಣವಾಗಿ

---

೧ ಅತ್ರ ವೈ ರಾಜಶಾರ್ದೂಲ ವರ್ತಯಿಷ್ಯೇ ಕಥಾಮಿಮಾಮ್ ।
ಯದ್ವೃತ್ತಂ ಪೂರ್ವರಾಜರ್ಷೇರ್ಹಯಗ್ರೀವಸ್ಯ ಪಾರ್ಥಿವ ॥ - ೨೫/೨೮

ನಡೆಸಿಕೊಂಡು ಬಂದಿದ್ದ. [1]ಆತನು ಶತ್ರುಗಳ ಜೊತೆಗೆ ಯುದ್ಧವನ್ನು ಅಸಹಾಯನಾಗಿಯೇ ಮಾಡಿ ಶತ್ರುಗಳನ್ನು ಕೊಂದು, ತಾನು ಹತನಾದ. ಆತನ ಗುಣಗಾನವನ್ನು ಸ್ವಯಂ ವ್ಯಾಸರು ಮಾಡಿದ್ದಾರೆ. ಎಂದಮೇಲೆ ಆತನು ಮಹಾಪುಣ್ಯವಂತನೇ ಸರಿ. ಒಂಭತ್ತು ಶ್ಲೋಕಗಳಿಂದ ಆತನನ್ನು ವರ್ಣಿಸಿ, ಆತನು ದೇವಲೋಕದಲ್ಲಿ ಸುಖವಾಗಿದ್ದಾನೆಂದು ವರ್ಣಿಸಲಾಗಿದೆ. ಆತನ ಸಾಧನೆಗಳು ಹೀಗಿವೆ.

೧. ಹಯಗ್ರೀವರಾಜರ್ಷಿ ಕ್ಷತ್ರಿಯನಾಗಿ ಶತ್ರುಗಳೊಡನೆ ಯುದ್ಧ ಮಾಡುತ್ತಾ ಅವರಲ್ಲಿ ಅನೇಕರನ್ನು ಕೊಂದು, ಅಸಹಾಯನಾಗಿಯೇ ಇದ್ದರೂ, ತಾನು ಯುದ್ಧ ಮಾಡುತ್ತಲೇ ಮಡಿದ.

೨. ಪ್ರಜಾಪಾಲನೆಗಾಗಿ ಏನೆಲ್ಲಾ ಮಾಡಬಹುದೋ, ಅದೆಲ್ಲ ಮಾಡಿದ್ದನು. ಈ ಲೋಕದಲ್ಲಿ ಕೀರ್ತಿಶಾಲಿಯಾಗಿದ್ದನು.

೩. ಆತನು ಭಗವಚ್ಚಿಂತನೆಯನ್ನು ನಿರಂತರವಾಗಿ ಮಾಡುತ್ತಿದ್ದನು (ಯುದ್ಧಕ್ಕೂ ಮೊದಲು). ಕರ್ಮಶೀಲನಾಗಿದ್ದನು.

೪. ಯುದ್ಧವನ್ನು ಮಹಾಯಜ್ಞವೆಂದು ಭಾವಿಸಿದ್ದನು. ಆ ಯಜ್ಞದಲ್ಲಿ[2] -

| | |
|---|---|
| ಧನುಸ್ಸು | ಯೂಪಸ್ತಂಭ( ಬಲಿಗಂಭ) |
| ಧನುಸ್ಸಿನ ಜ್ಯಾ | ಯಜ್ಞದಲ್ಲಿನ ಹಗ್ಗ |
| ಬಾಣ | ಸ್ರುಕ್ |
| ರಕ್ತ | ಆಜ್ಯ (ತುಪ್ಪ) |
| ರಥ | ಯಜ್ಞದ ವೇದಿಕೆ |
| ಕ್ರೋಧ | ಅಗ್ನಿ |
| ರಥದ ನಾಲ್ಕು ಕುದುರೆಗಳು | ನಾಲ್ಕು ಋತ್ವಿಜರು (ಹೋತೃ, ಅಧ್ವರ್ಯ ಉದ್ಗಾತೃ, ಬ್ರಹ್ಮ) |

**ಏವಂ ಬಹುವಿಧಂ ಸಾಂತ್ವಮುಕ್ತ್ವಾ ಧರ್ಮಾರ್ಥಹೇತುಮತ್ ।**
**ಸಂಕ್ಷಿಪ್ತೋ ನೀತಿಶಾಸ್ತ್ರಾಣಾಂ ಅವಿಶ್ವಾಸಃ ಪರೋ ಮತಃ ।**

---

೧ ಶತ್ರೂನ್ ಹತ್ವಾ ಹತಸ್ಯಾಜೌ ಶೂರಸ್ಯಾಕ್ಲಿಷ್ಟಕರ್ಮಣಃ ।
ಅಸಹಾಯಸ್ಯ ಧೀರಸ್ಯ ನಿರ್ಜಿತಸ್ಯ ಯುಧಿಷ್ಠಿರ ॥ - ೨೫/೨೯

೨ ಧನುರ್ಯೂಪೋ ರಶನಾ ಜ್ಯಾ ಶರಃ ಸ್ರುಕ್ ಸ್ರುವಃ ಖಡ್ಗೋ ರುಧಿರಂ ಯತ್ರ ಚಾಜ್ಯಮ್ ।
ರಥೋ ವೇದೀ ಕಾಮಗೋ ಯುದ್ಧಮಗ್ನಿಃ ಚಾತುರ್ಹೋತ್ರಂ ಚತುರೋ ವಾಜಿಮುಖ್ಯಾಃ ॥
- ೨೫/೩೨

೫. [1]ಆತನ ಕೀರ್ತಿಯು ಎಲ್ಲ ಲೋಕಗಳಲ್ಲಿ ವ್ಯಾಪಿಸಿತ್ತು. ಧರ್ಮಶೀಲನಾಗಿದ್ದನು. ಯಜ್ಞಶೀಲನಾಗಿದ್ದನು. ಜೀವನದಲ್ಲಿ ಅನೇಕ ಯಜ್ಞಗಳನ್ನು ಮಾಡಿದ್ದನು.

೬. ವಿದ್ವಾಂಸನೂ, ತ್ಯಾಗಿಯೂ, ಶ್ರದ್ಧಾಳುವೂ, ಕೃತಜ್ಞನೂ ಆಗಿದ್ದನು. ಮೇಧಾವಿಗಳಿಗೂ, ವಿದ್ವಾಂಸರಿಗೂ ಸಮ್ಮತನಾಗಿದ್ದನು.

೭. [2]ವೇದಶಾಸ್ತ್ರಗಳನ್ನು ಚೆನ್ನಾಗಿ ಅಧ್ಯಯನ ಮಾಡಿ, ರಾಷ್ಟ್ರವನ್ನು ಚೆನ್ನಾಗಿ ಪರಿಪಾಲನೆ ಮಾಡಿ, ಚಾತುರ್ವರ್ಣ್ಯ ವ್ಯವಸ್ಥೆ ಮಾಡಿ ಸ್ವಧರ್ಮರತನಾಗಿದ್ದನು.

೮. ಅನೇಕ ಯಜ್ಞಗಳಲ್ಲಿ ಗೆದ್ದಿದ್ದನು. ಪ್ರಜಾಪಾಲನೆಯ ಮಾಡಿ ಯಜ್ಞಗಳಲ್ಲಿ [3]ಸೋಮಪಾನ ಮಾಡಿ ಬ್ರಾಹ್ಮಣಶ್ರೇಷ್ಠರನ್ನು ದಕ್ಷಿಣೆ(ದಾನಾದಿ)ಗಳಿಂದ ತೃಪ್ತಿಪಡಿಸಿ, ದಂಡನೀತಿ ಹಾಗೂ ಯುಕ್ತಿಯಿಂದ ಪ್ರಜೆಗಳನ್ನು ಧಾರಣ ಮಾಡಿ(ಪಾಲಿಸಿ)ದ್ದನು.

ಆತನ ಪ್ರಶಂಸಾರ್ಹವಾದ ನಡೆಯನ್ನು ವಿದ್ವಾಂಸರು, ಸಜ್ಜನರು ಹೊಗಳುತ್ತಾರೆ. ಪುಣ್ಯಕೀರ್ತಿಯಾದ ಈ ಮಹಾತ್ಮನು [4]ವೀರರು ಹೊಂದುವ ಲೋಕಗಳನ್ನು ಹೊಂದಿ ಸಿದ್ಧಿಯನ್ನು ಹೊಂದಿ, ದೇವಲೋಕದಲ್ಲಿ ಆನಂದವಾಗಿದ್ದಾನೆ.

ಹೀಗೆ ವ್ಯಾಸರಿಂದ ಪ್ರಶಂಸೆಯನ್ನು ಹೊಂದಿದ ಹಯಗ್ರೀವರಾಜನ ಚರಿತ್ರೆಯನ್ನು ಧರ್ಮರಾಜನು ಕೇಳಿದನು. ವ್ಯಾಸರು ಧರ್ಮರಾಜನಿಗೆ ಹಯಗ್ರೀವನಂತೆ ಬದುಕಲು ಉಪದೇಶಿಸಿದರು.

**ಸಂದೇಶಗಳು ಸ್ಪಷ್ಟವಾಗಿದೆ.**

*****

---

೧ ಹುತ್ವಾತಸ್ಮಿನ್ ಯಜ್ಞವಹ್ನಾವಧಾ(ಥಾ)ರೀನ್ ಪಾಪಾನ್ಮುಕ್ತೋ ರಾಜಸಿಂಹಸ್ತರಸ್ವೀ।
ಪ್ರಾಣಾನ್ ಹುತ್ವಾ ಚಾವಭೃಥೇ ರಣೇ ಸ ವಾಜಿಗ್ರೀವೋ ಮೋದತೇ ದೇವಲೋಕೇ॥ - ೨೫/೩೩
ರಾಷ್ಟ್ರಂ ರಕ್ಷನ್ ಬುದ್ಧಿಪೂರ್ವಂ ನಯೇನ ಸಂತ್ಯಕ್ತಾತ್ಮಾ ಯಜ್ಞಶೀಲೋ ಮಹಾತ್ಮಾ।
ಸರ್ವಾನ್ ಲೋಕಾನ್ ವ್ಯಾಪ್ಯ ಕೀರ್ತ್ಯಾ ಮನಸ್ವೀ ವಾಜಿಗ್ರೀವೋ ಮೋದತೇ ದೇವಲೋಕೇ॥
- ೨೫/೩೪

೨ ಸಮ್ಯಗ್ವೇದಾನ್ ಪ್ರಾಪ್ಯ ಶಾಸ್ತ್ರಾಣ್ಯಧೀತ್ಯ ಸಮ್ಯಗ್ರಾಷ್ಟ್ರಂ ಪಾಲಯಿತ್ವಾ ಮಹಾತ್ಮಾ।
ಚಾತುರ್ವರ್ಣ್ಯಂ ಸ್ಥಾಪಯಿತ್ವಾ ಸ್ವಧರ್ಮೇ ವಾಜಿಗ್ರೀವೋ ಮೋದತೇ ದೇವಲೋಕೇ॥
- ೨೫/೩೭

೩ ಜಿತ್ವಾ ಸಂಗ್ರಾಮಾನ್ ಪಾಲಯಿತ್ವಾ ಪ್ರಜಾಶ್ಚ ಸೋಮಂ ಪೀತ್ವಾ ತರ್ಪಯಿತ್ವಾ ದ್ವಿಜಾಗ್ರ್ಯಾನ್।
- ೨೫/೩೮

೪ ಸ್ವರ್ಗಂ ಜಿತ್ವಾ ವೀರಲೋಕಾಂಶ್ಚ ಗತ್ವಾ ಸಿದ್ಧಿಂ ಪ್ರಾಪ್ತಃ ಪುಣ್ಯಕೀರ್ತಿರ್ಮಹಾತ್ಮಾ। - ೨೫/೩೯

## ೭೭. ಸೇನಜಿತ್ ಉಪಾಖ್ಯಾನ

ಅರ್ಜುನನು ಅಣ್ಣ ಧರ್ಮರಾಜನಿಗೆ ಕ್ಷತ್ರಿಯ ಧರ್ಮಾನುಷ್ಠಾನ ಮಾಡುತ್ತಾ ನಿನ್ನ ಬಂಧುಗಳು, ದಾಯಾದಿಗಳು, ಶಸ್ತ್ರಪೂತರಾಗಿ ಸದ್ಗತಿ ಹೊಂದಿದ್ದಾರೆ. ಆಗುವುದು ಆಗಿದೆ. ಎಂದೆಲ್ಲಾ ಹೇಳಿದ್ದನು (ಅ. ೨೨ರಲ್ಲಿ). ಆದರೆ ಅದನ್ನು ಆತನು ಒಪ್ಪದಿದ್ದಾಗ ವ್ಯಾಸರು ಮಧ್ಯೆ ಪ್ರವೇಶಿಸಿ ಕ್ಷತ್ರಿಯ ಧರ್ಮದ ಅನುಷ್ಠಾನದ ಬಗ್ಗೆ ಸುದ್ಯುಮ್ನನ ಉದಾಹರಣೆ ನೀಡಿ, ಉಪದೇಶಿಸಿದರು. ಧರ್ಮರಾಜನು ಮತ್ತೆ ತನಗೆ ರಾಜ್ಯಸುಖಭೋಗಗಳು ಸಂತೋಷಕರವಲ್ಲ. ಯುದ್ಧದಲ್ಲಿ(ಕುರುಕ್ಷೇತ್ರ) ಪತಿ, ಪುತ್ರರನ್ನು ಕಳೆದುಕೊಂಡ ಸ್ತ್ರೀಯರ ಆಕ್ರಂದನದಿಂದ ನನಗೆ ಶಾಂತಿಯೇ ಇಲ್ಲವಾಗಿದೆ ಎಂದು ಹೇಳಿದ.

ಅದಕ್ಕೋಸ್ಕರ ಯೋಗಿಗಳಲ್ಲಿಯೇ ಶ್ರೇಷ್ಠರಾದ, ಮಹಾಪ್ರಾಜ್ಞರಾದ, ಧರ್ಮಜ್ಞರಾದ, ವೇದಪಾರಂಗತರಾದ ವ್ಯಾಸರು ಧರ್ಮರಾಜನಿಗೆ ಕಾಲಕ್ಕೆ ಅನುಗುಣವಾಗಿ ವಿವಿಧ ಕರ್ಮಫಲಗಳು ಬರುತ್ತವೆ ಎಂಬುದನ್ನು ವಿವರಿಸಿ ಸಮಾಧಾನ ಹೇಳುತ್ತಾರೆ. ಉದಾಹರಣೆಗಾಗಿ ೧. ಕಾಲಕಾಲಕ್ಕನುಗುಣವಾಗಿಯೇ ಶುಕ್ಲಕೃಷ್ಣಪಕ್ಷಗಳು ಬರುತ್ತವೆ. ೨. ಚಂದ್ರನು ಪರಿಪೂರ್ಣನಾಗುತ್ತಾನೆ(ಪೂರ್ಣಿಮೆಯಂದು); ೩. ಅಕಾಲದಲ್ಲಿ – ವೃಕ್ಷಗಳು ಫಲ ಬಿಡುವುದಿಲ್ಲ; ನದಿಗಳು ಹರಿಯುವುದಿಲ್ಲ; ವಿವಿಧ ಪ್ರಾಣಿಗಳು ಅಕಾಲದಲ್ಲಿ ಮದಭರಿತವಾಗುವುದಿಲ್ಲ; ಸ್ತ್ರೀಯರು ಗರ್ಭಧರಿಸುವುದಿಲ್ಲ; ಮಳೆ ಬರುವುದಿಲ್ಲ; ಮಗು ಹುಟ್ಟುವುದಿಲ್ಲ; ಸಾಯುವುದಿಲ್ಲ; ಮಾತು ಬರುವುದಿಲ್ಲ; ಯೌವನ ಬರುವುದಿಲ್ಲ; ಸೂರ್ಯೋದಯ, ಚಂದ್ರೋದಯ ಅಸ್ತಗಳು ಆಗುವುದಿಲ್ಲ; ಪರ್ವಕಾಲ, ಸಮುದ್ರವೃದ್ಧಿ ಹೊಂದುವುದಿಲ್ಲ ಎಂದು ಹೇಳಿ,

ಈ ವಿಷಯದಲ್ಲಿ ದುಃಖಿತನಾದ ಸೇನ್‌ಜಿತ್ ರಾಜನು ನುಡಿದ ಮಾತುಗಳನ್ನು ಉದಾಹರಿಸಿದರು(ಸ್ವಯಂಭಗವಂತ ಸಾಮಾನ್ಯ ರಾಜನೊಬ್ಬನ ಮಾತುಗಳನ್ನು ಪ್ರಮಾಣತ್ವೇನ ಉದಾಹರಿಸಿದುದು ಆತನ ವಿಶಾಲದೃಷ್ಟಿಗೆ ಕಾರುಣ್ಯಕ್ಕೆ ಉದಾಹರಣೆಯಾಗಿದೆ).

ಸೇನ್‌ಜಿತ್ ರಾಜನ ಮಾತುಗಳ ಸಾರ ಹೀಗಿದೆ (ಇಪ್ಪತ್ತುಮೂರು ಶ್ಲೋಕಗಳಲ್ಲಿ ರಾಜನ ಅನುಭವದ ಮಾತುಗಳಿವೆ).

೧. ಎಲ್ಲ ಮನುಷ್ಯರು ಕಾಲವು ಕೂಡಿ ಬಂದಾಗಲೇ ಮರಣ ಹೊಂದುತ್ತಾರೆ. ಆದರೆ ನಾನು ಅವನನ್ನು ಕೊಂದೆ, ಅವನು ನನ್ನನ್ನು ಕೊಂದ. ಇತ್ಯಾದಿ ಮಾತುಗಳು ಕೇವಲ ಲೌಕಿಕ,

ನಿಜವಾಗಿಯೂ ಕಾಲಾಧೀನರಾಗಿಯೇ ಮರ್ತ್ಯರು ಮರಣ ಹೊಂದುತ್ತಾರೆ ಎನ್ನುವುದು ತತ್ತ್ವ. ಹುಟ್ಟುಸಾವುಗಳು ಸ್ವಾಭಾವಿಕ ಕ್ರಿಯೆಗಳು.

೨. ಪತ್ನಿ, ಪುತ್ರ, ತಂದೆ, ತಾಯಿಯರು ಸತ್ತೆ, ಧನ ನಷ್ಟವಾದಾಗ, ಅಹೋ ಎಂತಹ ಕಷ್ಟ ಬಂತಲ್ಲ ಎಂದು ದುಃಖಿಸಿದಷ್ಟೂ ದುಃಖ ಹೆಚ್ಚಾಗುತ್ತದೆ ಹೊರತು ಕಡಿಮೆಯಾಗದು. ಆದ್ದರಿಂದ ದುಃಖದ ಅಪಚಿತಿ (ನಿಗ್ರಹ) ಮಾಡಬೇಕು (ನಿಯಂತ್ರಿಸಬೇಕು).

೩. ಈ ವಿಶ್ವದಲ್ಲಿ ದುಃಖವಿಲ್ಲದ ತಾಣವಿಲ್ಲ. ಸುಖ ಕಾಣ ಸಿಗದು. ಅದರ ಕಾರಣ ಮನುಷ್ಯನ ಅತ್ಯಾಶೆ. ಅತಿ ಆಶೆಯ ಫಲವೇ ದುಃಖ. ಇದು ನಾಶವಾದರೆ ಸುಖ, ಅದಕ್ಕಾಗಿ ದುಃಖಕ್ಕೆ ಕಾರಣವಾದ ಅತ್ಯಾಶೆಯನ್ನು ತ್ಯಜಿಸಬೇಕು. ಪ್ರಪಂಚದಲ್ಲಿ ಸುಖದುಃಖಗಳು ಒಂದಾದ ನಂತರ ಮತ್ತೊಂದು ಬರುತ್ತವೆ. ಯಾರೂ ಕೇವಲ ದುಃಖವನ್ನಾಗಲೀ, ಸುಖವನ್ನಾಗಲೀ ಅನುಭವಿಸುವುದಿಲ್ಲ[೧].

ಆದ್ದರಿಂದ ಇವೆರಡನ್ನು ತ್ಯಜಿಸಿ ಶಾಶ್ವತ ಸುಖವನ್ನು ಬಯಸಬೇಕು[೨]. ಸುಖವಾಗಲೀ, ದುಃಖವಾಗಲೀ, ಪ್ರಿಯವಾಗಲೀ, ಅಪ್ರಿಯವಾಗಲೀ ಬಂದುದನ್ನು ಹೆದರದೇ ಎದುರಿಸಬೇಕು. ಏಕೆಂದರೆ ಅದನ್ನು ತಪ್ಪಿಸಲು ಸಾಧ್ಯವೇ ಇಲ್ಲ.

೪. ಲೋಕದಲ್ಲಿ ಒಬ್ಬ ಮೂಢ(ಅಜ್ಞಾನಿ) ಇನ್ನೊಬ್ಬ ಬುದ್ಧಿವಂತ, ಇವರು ಮಾತ್ರ ಸಂತೋಷವಾಗಿರುತ್ತಾರೆ. ಮಧ್ಯಮವ್ಯಕ್ತಿ (Persons in between these two) ದುಃಖವನ್ನೇ ಅನುಭವಿಸುತ್ತಾನೆ. ಹೀಗೆ ಮಹಾಪ್ರಾಜ್ಞನಾದ ಸೇನಜಿತ್ ಹೇಳಿದ್ದಾನೆ.

ಪರರ ದುಃಖಗಳಿಗೆ ಯಾರು ದುಃಖಿಸುವನೋ ಅವನು ಎಂದೂ ಸುಖಿಯಾಗಲಾರ. ಕಾರಣ ದುಃಖಗಳಿಗೆ ಕೊನೆಯೇ ಇರುವುದಿಲ್ಲ. ಸುಖದುಃಖಗಳು, ಲಾಭನಷ್ಟಗಳು, ಜನನಮರಣಗಳು, ಒಂದಾದ ಮೇಲೆ ಒಂದು ಸಮುದ್ರದ ಅಲೆಗಳಂತೆ ಬರುತ್ತಿರುತ್ತವೆ. ಆದ್ದರಿಂದ ಧೀರನು – ಜ್ಞಾನಿಯು ಸುಖದುಃಖಗಳು ಬಂದಾಗ ಸಂತೋಷವೂ ಪಡಬಾರದು. ದುಃಖಕ್ಕೊಳಗಾಗಬಾರದು[೩].

---

೧ ತೃಷ್ಣಾರ್ತಿಪ್ರಭವಂ ದುಃಖಂ ದುಃಖಾರ್ತಿಪ್ರಭವಂ ಸುಖಮ್ ।
ಸುಖಸ್ಯಾನಂತರಂ ದುಃಖಂ ದುಃಖಸ್ಯಾ ನಂತರಂ ಸುಖಮ್ ॥
ನ ನಿತ್ಯಂ ಲಭತೇ ದುಃಖಂ ನ ನಿತ್ಯಂ ಲಭತೇ ಸುಖಮ್ ॥ – ೨೬/೨೨,೨೩

೨ ತಸ್ಮಾದೇತತ್ ದ್ವಯಂ ಜಹ್ಯಾತ್ ಯ ಇಚ್ಛೇಚ್ಛಾಶ್ವತಂ ಸುಖಮ್ । – ೨೬/೨೪

೩. ಪರದುಃಖೇನ ಯೋ ದುಃಖೀ ನ ಜಾತು ಸ ಸುಖೀ ಭವೇತ್ ।
ದುಃಖಾನಾಂ ಹಿ ಕ್ಷಯೋ ನಾಸ್ತಿ ಜಾಯತೇ ಹ್ಯಪರಾತ್ ಪರಮ್ ॥
ಸುಖಂ ಚ ದುಃಖಂ ಚ ಭವಾಭವೌ ಚ.................. ।
ಪರ್ಯಾಯತಃ ಸರ್ವಮಿಹ ಸ್ಪೃಶಂತಿ ತಸ್ಮಾತ್ ಧೀರೋ ನೈವ ಹೃಷ್ಯೇತ್ ನ ಶೋಚೇತ್ ॥
– ೨೬/೩೦,೩೧

ರಾಜನ್ ಯುದ್ಧ ರಾಜ್ಯಪರಿಪಾಲನೆ, ದಂಡ ನೀತಿ ಅನುಷ್ಠಾನ (ದುಷ್ಟರ ಅಪರಾಧಗಳ ನಿಗ್ರಹಕ್ಕಾಗಿಸೂಕ್ತಶಿಕ್ಷೆವಿಧಿಸುವುದು), ಗಳಿಸಿದಸಂಪತ್ತನ್ನುಯಜ್ಞಾದಿಗಳಲ್ಲಿದಕ್ಷಿಣಾರೂಪವಾಗಿ ದಾನ ಮಾಡುವುದು, ಯಥಾರ್ಥಜ್ಞಾನ ಸಂಪಾದನೆ(ವೇದ ವೇದಾಂಗಾದಿಗಳ), ಇವು ಪರಮಪವಿತ್ರಗಳಾದ ಕ್ಷತ್ರಿಯರ ದೀಕ್ಷೆ ಎಂದು ಜ್ಞಾನಿಗಳು ತಿಳಿಯಬೇಕು[೧].

(ಮುಂದಿನ ಮೂರು ಶ್ಲೋಕಗಳು ಅ. ೨೫ರಲ್ಲೂ ಬಂದಿವೆ (೩೩-೩೫). ೩೬ನೇ ಶ್ಲೋಕದಲ್ಲಿ ಸ್ವಲ್ಪ ವ್ಯತ್ಯಾಸವಾಗಿದೆ[೨].)

**(ಯಾವ) ರಾಜನು ಮರಣವಾದ ಮೇಲೂ, ಆತನ ನಡತೆಯನ್ನು ಅಮಾತ್ಯರು, ಪ್ರಜೆಗಳು ನೆನೆದು ನಮಸ್ಕರಿಸುತ್ತಾರೋ, ಅಂತಹ ರಾಜನೇ ಶ್ರೇಷ್ಠರಾಜ ಎಂದು ಕರೆಯಲ್ಪಡುತ್ತಾನೆ.**

ಹೀಗೆ ಈ ಅಧ್ಯಾಯದಲ್ಲಿ ಉತ್ತಮರಾಜನ ನೀತಿ, ನಿಲುವು, ನಡತೆಗಳು ಹೇಗಿರಬೇಕೆಂಬ ಚಿಂತನೆಗಳೊಳಗೊಂಡ ಸೇನಜಿತ್ ರಾಜನ ಮಾತುಗಳನ್ನು ವ್ಯಾಸರು ಉದಾಹರಿಸಿ ಧರ್ಮರಾಜನನ್ನು ಎಚ್ಚರಿಸಿದ್ದಾರೆ.

ವಿ.ಸೂ.: ಸಂದೇಶಗಳು ಸ್ಪಷ್ಟವಾಗಿಯೇ ಇವೆ.

*****

೧ ದೀಕ್ಷಾಂ ರಾಜ್ಞಃ ಸಂಯುಗೇ ಯುದ್ಧಮಾಹುಃ
ಯೋಗಂ ರಾಷ್ಟ್ರೇ ದಂಡನೀತ್ಯಾಂ ಚ ಸಮ್ಯಕ್ ।
ವಿತ್ತತ್ಯಾಗೋ ದಕ್ಷಿಣಾನಾಂ ಚ ಯಜ್ಞೇ
ಸಮ್ಯಗ್‌ಜ್ಞಾನಂ ಪಾವನಾನೀತಿ ವಿದ್ಯಾತ್ ॥ - ೨೬/೩೨

೨ **ಯಸ್ಯ ವೃತ್ತಂ ನಮಸ್ಯಂತಿ ಸ್ವರ್ಗಸ್ಥಸ್ಯಾಪಿ ಮಾನವಾಃ ।
ಪೌರಜಾನಪದಾಮಾತ್ಯಾಃ ಸ ರಾಜಾ ರಾಜಸತ್ತಮಃ ॥** - ೨೬/೩೬

## ೭೮. ಷೋಡಶರಾಜರ ಕಥೆ (ಷೋಡಶರಾಜೋಪಾಖ್ಯಾನ)

(ಈ ಉಪಾಖ್ಯಾನವು ದ್ರೋಣಪರ್ವದಲ್ಲಿ ಹದಿನೇಳು ಅಧ್ಯಾಯಗಳಲ್ಲಿ ಅತ್ಯಂತ ವಿಸ್ತಾರವಾಗಿ ಬಂದಿದೆ[1] (ಅಭಿಮನ್ಯುವಧ ಪರ್ವ - ಅ. ೫೨-೭೮ರವರೆಗೆ). ಪ್ರಾಯಃ ಅವೇ ರಾಜರ ಕಥೆಗಳು ಈ ಪರ್ವದಲ್ಲಿ ಒಂದೇ ಅಧ್ಯಾಯದಲ್ಲಿ ಬಂದಿವೆ. ದ್ರೋಣಪರ್ವದಲ್ಲಿ ಧರ್ಮರಾಜನಿಗೆ ವ್ಯಾಸರು ಉಪದೇಶಿಸುತ್ತಾರೆ. ಇಲ್ಲಿ ಅರ್ಜುನನ ಪ್ರಾರ್ಥನೆಯ ಮೇರೆಗೆ ಶ್ರೀಕೃಷ್ಣನು ಬಂಧುಬಾಂಧವರ ನಾಶದಿಂದ ಶೋಕಾವೇಶಕ್ಕೆ ಒಳಪಟ್ಟು ದುಃಖತಪ್ತನಾದ ಧರ್ಮರಾಜನಿಗೆ ಇವೇ ಹದಿನಾರು ರಾಜರ (ಅದರಲ್ಲೂ ಶ್ರೀರಾಮ, ಪರಶುರಾಮದೇವರ ಭಗವದ್ರೂಪಗಳೂ ಸೇರಿ) ಕಥೆಗಳನ್ನೂ ವಿವರಿಸಿ ದುಃಖಶಮನ ಮಾಡುತ್ತಾನೆ. ಇದಕ್ಕೂ ಮೊದಲು ವ್ಯಾಸರು, ಅರ್ಜುನಾದಿಗಳು, ಅನೇಕ ಋಷಿಗಳೂ ಧರ್ಮರಾಜನಿಗೆ ಕ್ಷತ್ರಿಯಧರ್ಮಗಳನ್ನು ವಿವರಿಸಿದರೂ, ಮೌನವಾಗಿಯೇ ಇರುತ್ತಾನೆ. ಆಗ ಮತ್ತೆ ಅರ್ಜುನನ ಒತ್ತಾಸೆಯಂತೆ ಶ್ರೀಕೃಷ್ಣನು ಧರ್ಮರಾಜನಿಗೆ ಉಪದೇಶಿಸುತ್ತಾನೆ ಎನ್ನುವುದು ಇಲ್ಲಿಯ ಹಿನ್ನೆಲೆ. ಆದ್ದರಿಂದ ಇಲ್ಲಿ ಈ ಉಪಾಖ್ಯಾನವನ್ನು ಅತಿ ಸಂಕ್ಷೇಪವಾಗಿ ಅನುವಾದಿಸಲಾಗಿದೆ.

**ಅರ್ಜುನನ ಪ್ರಾರ್ಥನೆ :**

**ಅವ್ಯಾಹರತಿ ಕೌಂತೇಯೇ ಧರ್ಮಪುತ್ರೇ ಯುಧಿಷ್ಠಿರೇ ।**
**ಗುಡಾಕೇಶೋ ಹೃಷೀಕೇಶಮಭ್ಯಭಾಷತ ಪಾಂಡವಃ ॥**
**ಜ್ಞಾತಿ ಶೋಕಾಭಿ ಸಂತಪ್ತೋ ಧರ್ಮರಾಜಃ ಪರಂತಪಃ ।**
**ಏಷ ಶೋಕಾರ್ಣವೇ ಮಗ್ನಸ್ತಮಾಶ್ವಾಸಯ ಮಾಧವ ॥** - ೩೦/೧,೨

ಧರ್ಮರಾಜನಿಗೆ ಹಿಂದಿನ ಅಧ್ಯಾಯಗಳಲ್ಲಿ ವ್ಯಾಸರೂ ಮೊದಲಾದವರೂ ಹಾಗೂ ಸೋದರರೂ ಎಷ್ಟೇ ತಿಳಿಹೇಳಿದರೂ, ಮತ್ತೆ ಮೌನ ಧರಿಸಿದ. ಆಗ ಅರ್ಜುನನು

---

೧ ದ್ರೋಣಪರ್ವದಲ್ಲಿ ಸಗರರಾಜನ ಬಗ್ಗೆ ಬಂದಿಲ್ಲ, ಶಾಂತಿಪರ್ವದಲ್ಲಿ(ಈ ಉಪಾಖ್ಯಾನದಲ್ಲಿ) ಪರಶುರಾಮದೇವರ ಬಗ್ಗೆ ಬಂದಿಲ್ಲವೆಂಬುದೇ ಇವೆರಡೂ ಪರ್ವಗಳಲ್ಲಿನ ವ್ಯತ್ಯಾಸಗಳು. ದ್ರೋಣಪರ್ವದಲ್ಲಿ ಪರಶುರಾಮದೇವರು ರಾಜರಾಗಿರದಿದ್ದರೂ, ಅವರ ಬಗ್ಗೆ ಬಂದಿರಲು ಕಾರಣ ಅವರು ಕ್ಷತ್ರಿಯರನ್ನೇ (ರಾಜ ಕುಲವನ್ನೇ) ಧಿಕ್ಕರಿಸಿ ನಾಶ ಮಾಡಿರುವುದು ಇರಬಹುದು. ಅವರು ಅನಭಿಷಿಕ್ತ ರಾಜಾಧಿರಾಜರು ಲೋಕದೃಷ್ಟಿಯಲ್ಲಿ. ವಸ್ತುತಸ್ತು ವಿಶ್ವಕ್ಕೆಲ್ಲ ರಾಜರಲ್ಲವೇ?

ಶೋಕಸಮುದ್ರದಲ್ಲಿ ಮುಳುಗಿದ ಅಣ್ಣ ಧರ್ಮರಾಜನನ್ನು ಸಂತೈಸು ಎಂದು ಪ್ರಾರ್ಥಿಸಲು ಶ್ರೀಕೃಷ್ಣನು ಕಲ್ಲಿನ ಕಂಬದಂತೆ ಇದ್ದ ಯುಧಿಷ್ಠಿರನನ್ನು ತನ್ನ ವಿನೋದದಿಂದ (ಅನಾಯಾಸವಾಗಿ ತಾನು ಉದ್ವಿಗ್ನನಾಗದೆ, ಅರಳಿದ ಕಮಲದಂತಹ ಮುಖದಿಂದ ನೋಡುವವರಿಗೆ ಆನಂದವೀಯುವ) ಹೀಗೆ ನುಡಿದನು.

೧. ನೀನು ಪುರುಷರ ಮಧ್ಯೆ ಸಿಂಹದಂತಿರುವೆ. ಏಕೆ ದುಃಖಿಸುವೆ. ನಿನ್ನ ದುಃಖ ನಿನ್ನ ಶರೀರವನ್ನು ಒಣಗಿಸುತ್ತದೆ. ನೀನು ಎಷ್ಟೇ ದುಃಖಿಸಿದರೂ, ರಣದಲ್ಲಿ ಮರಣಹೊಂದಿದವರು ಮತ್ತೆ ಬದುಕಿ ಬರುವುದಿಲ್ಲ.

೨. ನಿನ್ನ ಶೋಕ ವ್ಯರ್ಥ. ಸ್ವಪ್ನದಂತೆ ಕಂಡ ಸಂಪತ್ತು ಹೇಗೆ ಎಚ್ಚೆತ್ತಾಗ ಸಿಗುವುದಿಲ್ಲವೋ, ಹಾಗೇ ಯುದ್ಧದಲ್ಲಿ ಸತ್ತವರು ವಾಪಸು ದೊರಕುವುದಿಲ್ಲ.

೩. ಸತ್ತವರೆಲ್ಲ ಯುದ್ಧದಲ್ಲಿ ಶತ್ರುಗಳಿಗೆ ಅಭಿಮುಖವಾಗಿ ಹೋರಾಡಿದವರು ಬೆನ್ನು ತೋರಿಸಿದವರಲ್ಲ.

೪. ಶಸ್ತ್ರಗಳಿಂದ ಹೊಡೆಯಿಸಿಕೊಂಡು ಪವಿತ್ರವಾಗಿ ಪ್ರಾಣತ್ಯಾಗ ಮಾಡಿದವರು. ಆದ್ದರಿಂದ ಸ್ವರ್ಗದಲ್ಲಿ ಈಗ ಸುಖವಾಗಿರುವವರು. ಹಾಗಿರುವಾಗ ನೀನೇಕೆ ದುಃಖಿ-ಸುತ್ತೀಯಾ? ಅವರೆಲ್ಲ ಕ್ಷತ್ರಧರ್ಮರತರೂ, ವೇದವೇದಾಂಗ ಪಾರಂಗತರೂ, ವೀರರಿಗೆ ಸಿಗಬೇಕಾದ ಸದ್ಗತಿ ಹೊಂದಿದವರು. ಆದ್ದರಿಂದ ಅವರ ಸಾವಿಗೆ ನೀನು ದುಃಖಿಸುವುದು ತರವಲ್ಲ. ಈ ವಿಷಯದಲ್ಲಿ ಹಿಂದೆ ಪುತ್ರಶೋಕಾರ್ತನಾದ ಸೃಂಜಯನನ್ನು ಕುರಿತು ನಾರದರು ಹೇಳಿದ ಹದಿನಾರು ರಾಜರ ಕಥೆಗಳನ್ನು ಹೇಳುತ್ತೇನೆ ಎಂದು ಶ್ರೀಕೃಷ್ಣನು ನುಡಿದನು[೧].

ಶ್ರೀಕೃಷ್ಣನು ಮುಂದುವರಿದು ಧರ್ಮರಾಜನಿಗೆ 'ನಾರದರು ಮಗನನ್ನು ಕಳೆದುಕೊಂಡು ದುಃಖಿಸುತ್ತಿರುವ ಸೃಂಜಯನಿಗೆ ಉಪದೇಶಿಸಿದುದನ್ನು ಹೇಳುತ್ತಾನೆ.

**ನಾರದರ ಮಾತುಗಳು -**

೧. ನಾನು ನೀನು (ಏಕೆ?) ಎಲ್ಲ ಪ್ರಜೆಗಳು (ಜೀವರು) ಸುಖದುಃಖಗಳಿಂದ ಮುಕ್ತರಾಗಲಾರೆವು (ಸಂಸಾರದಲ್ಲಿರುವವರೆಗೆ). ಈ ವಿಷಯದಲ್ಲಿ ನಿನಗೆ (ಮಾತ್ರ) ಏಕೆ

---

೧ ಮಾ ಕೃಥಾ ಪುರುಷವ್ಯಾಘ್ರ ಶೋಕತ್ವಂ ಗಾತ್ರಶೋಷಣಮ್ ।
ನ ಹಿ ತೇ ಸುಲಭಾ ಭೂಯೋ ಯೇ ಹತಾऽಸ್ಮಿನ್ ರಣಾಜಿರೇ ॥
ಸ್ವಪ್ನಲಬ್ಧಾ ಯಥಾ ಲಾಭಾ ವಿತಥಾಃ ಪ್ರತಿಬೋಧನೇ ।
ಏವಂ ತೇ ಕ್ಷತ್ರಿಯಾ ರಾಜನ್ ಯೇ ವ್ಯತೀತಾ ಮಹಾರಣೇ ॥
ಸರ್ವೇ ತ್ಯಕ್ತ್ವಾತ್ಮನಃ ಪ್ರಾಣಾನ್ ಯುದ್ಧವೀರಾ ಮಹಾಹವೇ ।
ಶಸ್ತ್ರಪೂತಾ ದಿವಂ ಪ್ರಾಪ್ತಾ ನ ತಾನ್ ಶೋಚಿತುಮರ್ಹಸಿ ॥
ಕ್ಷತ್ರಧರ್ಮರತಾ ಶೂರಾ ವೇದವೇದಾಂಗಪಾರಗಾಃ ॥ - ೩೦/೮-೧೨

ದುಃಖ?

ಪುರಾತನ ರಾಜರ ಚರಿತ್ರೆಗಳನ್ನು ವಿಸ್ತಾರವಾಗಿ ಹೇಳುವೆ. ಅದನ್ನು ಕೇಳಿಯಾದರೂ ನಿನ್ನ ದುಃಖ ತಡೆ.

೨. ಅವರ ಚರಿತ್ರೆ (ಶ್ರವಣ) ಉತ್ತಮವೂ, ಶ್ರವಣಮಾತ್ರದಿಂದ ಕ್ರೂರಗ್ರಹಪೀಡೆಯನ್ನು ಶಮನ ಮಾಡುತ್ತದೆ. ಆಯುರ್ವೃದ್ಧಿಯಾಗುತ್ತದೆ.

ಆ ರಾಜರು ಯಾರೆಂದರೆ –

೧. **ಮರುತ್ತ (ಆವಿಕ್ಷಿತ್)** : ಅವಿಕ್ಷಿತ್ ರಾಜನ ಮಗ ಆವಿಕ್ಷಿತ್ – ಮರುತ್ತ. ಈತನು ಇಂದ್ರನೊಡನೆ ಸ್ಪರ್ಧಿಸುವಂತೆ ರಾಜ್ಯವಾಳಿದ. ಯಜ್ಞ-ಯಾಗಾದಿಗಳನ್ನು ಮಾಡಿದ. ಬೃಹಸ್ಪತ್ಯಾಚಾರ್ಯರು ಇಂದ್ರನ ಅಣತಿಯಂತೆ ಪೌರೋಹಿತ್ಯ ಒಪ್ಪದಿದ್ದರೂ, ಬೃಹಸ್ಪತಿಯ ತಮ್ಮ **ಸಂವರ್ತನು** ಪೌರೋಹಿತ್ಯ ಮಾಡಿಸಿ ಯಜ್ಞವನ್ನು ನೆರವೇರಿಸಿದ. ಈತನ ಯಜ್ಞಕ್ಕೆ ವಿಶ್ವೇದೇವತೆಗಳೇ ಸಭಾಸದರಾಗಿದ್ದರು. ಮರುತ್ ದೇವತೆಗಳು ಸಾಧ್ಯರು, ಊಟ ಬಡಿಸುವವರಾಗಿ ಸೇವೆ ಸಲ್ಲಿಸಿದರು (ಪರಿವೇಷಣ ಮಾಡುವವರು – ಪರಿವೇಷ್ಟಿಗಳು). ಎಲ್ಲ ಮರುದ್ಗಣಗಳು ಯಥೇಚ್ಛ ಸೋಮಪಾನ ಮಾಡಿದರು. ರಾಜನು ಕೊಟ್ಟ ದಕ್ಷಿಣೆ ದೇವತೆಗಳು ಮನುಷ್ಯರು ಗಂಧರ್ವಾದಿಗಳು ಕೊಟ್ಟ ದಕ್ಷಿಣೆಯನ್ನು ಮೀರಿಸಿತ್ತು. ಹೀಗಾಗಿ ಕೊಟ್ಟ ಎಲ್ಲ ಸುವರ್ಣರಾಶಿ ದಕ್ಷಿಣೆ ಒಯ್ಯಲಾರದೆ ಬ್ರಾಹ್ಮಣರು ಎಷ್ಟೋ, ಅಲ್ಲೇ ಬಿಟ್ಟು ಹೋಗಿದ್ದರು. ಇಂತಹ ಮರುತ್ತರಾಜನು ಎಂಭತ್ತೈದುಸಾವಿರ ವರ್ಷ ರಾಜ್ಯವಾಳಿ ಮುಂದೊಮ್ಮೆ ಮೃತನಾದ. ಹೀಗಿರುವಾಗ ನಿನ್ನ ಮಗನ ಮರಣಕ್ಕೆ ಏಕೆ ಶೋಕ? ಎಂದು ನಾರದರು ಸೃಂಜಯನಿಗೆ ಹೇಳಿದರು.

೨. **ಸುಹೋತ್ರ : ವಿತಥರಾಜನ** ಮಗ **ಸುಹೋತ್ರ**. ಈತನ ರಾಜ್ಯಭಾರದಲ್ಲಿ ಇಂದ್ರನು ಒಂದು ವರ್ಷ ಸುವರ್ಣವೃಷ್ಟಿಕರೆದಿದ್ದನಂತೆ. ಆದ್ದರಿಂದ ಈತನ ಕಾಲದ ಭೂಮಿಗೆ ವಸುಮತಿ ಎಂಬ ಹೆಸರಿತ್ತು. ನದಿಗಳಲ್ಲಿ ಸುವರ್ಣದ ನೀರು. ಜಲಜಂತುಗಳು ಸುವರ್ಣಮಯವಾಗಿದ್ದವು. ಇಂದ್ರನ ಅನುಗ್ರಹದಿಂದ ಇದನ್ನೂ ನೋಡಿ ಸುಹೋತ್ರನೇ ಆಚ್ಚರಿಪಟ್ಟಿದ್ದ. ಕುರುಜಾಂಗಲ ದೇಶದಲ್ಲಿ ಸುಹೋತ್ರನು ಮಾಡಿದ ಯಜ್ಞದಲ್ಲಿ ಬ್ರಾಹ್ಮಣರಿಗೆ ಸುವರ್ಣದ ರಾಶಿಯನ್ನೇ ಕೊಟ್ಟಿದ್ದ.

ಇಂತಹ ಮಹಾದಾನಿಯಾದ ಸುಹೋತ್ರನು ಮೃತನಾದ ಕಾರಣ ನೀನೇಕೇ ಶೋಕ ಪಡುವೆ?

೩. **ಬೃಹದ್ರಥ** : ಅಂಗದೇಶದ ರಾಜ. ಈತ ರಾಜ್ಯಭಾರ ಮಾಡುವಾಗ ಪದ್ಮಮಾಲೆಯುಳ್ಳ ಹತ್ತುಲಕ್ಷ ಆನೆಗಳನ್ನು ಬಿಳಿ ಬಣ್ಣದ ಹತ್ತು ಲಕ್ಷ ಕುದುರೆಗಳನ್ನು ಸಾಲಂಕೃತ ಹತ್ತುಲಕ್ಷ

ಕನ್ಯೆಯರನ್ನು ಒಂದು ಕೋಟಿ ಗೋವು, ಎತ್ತುಗಳನ್ನು ಅವುಗಳ ಸೇವೆಗೆ ಸಾವಿರಾರು ಸೇವಕರನ್ನೂ ದಾನರೂಪವಾಗಿ ಕೊಟ್ಟಿದ್ದನು. ಈತನು ವಿಷ್ಣುಪದವೆಂಬ ಗಿರಿಯಲ್ಲಿ ಮಾಡಿದ ಯಜ್ಞದಲ್ಲಿ ಇಂದ್ರನು ಯಥೇಚ್ಛ ಸೋಮಪಾನ ಮಾಡಿದ. ಬ್ರಾಹ್ಮಣರು ಭೋಜನ, ದಕ್ಷಿಣೆಗಳಿಂದ ತೃಪ್ತರಾದರು. ಆತ ಕೊಟ್ಟ ದಾನವನ್ನು ದೇವತೆಗಳು, ಮನುಷ್ಯರು, ಗಂಧರ್ವರು ಎಲ್ಲರೂ ಸೇರಿ ಕೊಡುತ್ತಿದ್ದ ದಕ್ಷಿಣೆಯನ್ನು ಮೀರಿಸುತ್ತಿತ್ತು. ಆತನು ಸೋಮಸಂಸ್ಥಾ ಎಂದು ಕರೆಯಲ್ಪಡುವ ಏಳು ಯಾಗಗಳಲ್ಲಿ ಕೊಟ್ಟ ದಾನವನ್ನು ಯಾರೂ ಹಿಂದೆ ಕೊಟ್ಟಿಲ್ಲ, ಮುಂದೆ ಕೊಡುವುದಿಲ್ಲವೆಂಬ ಖ್ಯಾತಿ ಗಳಿಸಿದ (ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯಾ ಷೋಡಶೀ, ಅತಿರಾತ್ರ, ವಾಜಪೇಯ, ಆಪ್ತೋರ್ಯಾಮ ಎಂಬ ಏಳು ಯಾಗಗಳನ್ನು ಸೋಮಸಂಸ್ಥಾ ಎನ್ನುತ್ತಾರೆ).

ಇಂತಹ ಧರ್ಮಜ್ಞಾನವೈರಾಗ್ಯ ಐಶ್ವರ್ಯವೆಂಬ ನಾಲ್ಕು ಗುಣಗಳಿಂದ ಉತ್ತಮನಾದ ಬೃಹದ್ರಥನು ಮರಣ ಹೊಂದಿದನೆಂದ ಮೇಲೆ ನಿನ್ನ ಮಗನ ಮರಣಕ್ಕೆ ಏಕೆ ಶೋಕ? ಎಂದು ನಾರದರು ಕೇಳಿದರು ಸೃಂಜಯನಿಗೆ.

**೪. ಶಿಬಿ ಚಕ್ರವರ್ತಿ** : ಉಶೀನರ ರಾಜನ ಮಗ ಶಿಬಿ. ಯಯಾತಿಯ ಮಗಳು ಮಾಧವಿ ತಾಯಿ. ಸಮಗ್ರ ಭೂಮಿಯನ್ನೇ ಚರ್ಮದಂತೆ ಹೊದಿಸಿ, ತನ್ನ ಅಧೀನ ಮಾಡಿಕೊಂಡಿದ್ದನು. ಈತನೇ ಭೂಮಿಯ ಏಕಚಕ್ರಾಧಿಪತಿಯಾಗಿದ್ದನು. ತಾನು ಮಾಡಿದ ಮಹಾಯಾಗದಲ್ಲಿ ತನ್ನ ಆಡಳಿತದಲ್ಲಿದ್ದಷ್ಟು ಹಸು, ಕುದುರೆಗಳನ್ನು ದಾನ ಮಾಡಿದ್ದನು. ಈತನ ರಾಜ್ಯಭಾರವು ಅಸದೃಶವೆಂದು ಬ್ರಹ್ಮನೇ ಬಗೆದಿದ್ದನು. ಅಂತಹ ಚಕ್ರವರ್ತಿಯೂ ಮರಣ ಹೊಂದಿದ. ಆದ್ದರಿಂದ ನೀನೇಕೆ ಶೋಕ ಪಡುವೆ?

**೫. ಭರತ ಚಕ್ರವರ್ತಿ** : ಶಕುಂತಲೆ-ದುಷ್ಯಂತರ ಮಗ. ಯಮುನೆಯ ತೀರದಲ್ಲಿ ಮೂವತ್ತು ಅಶ್ವಮೇಧ, ಗಂಗಾತೀರದಲ್ಲಿ ಇಪ್ಪತ್ತು ಅಶ್ವಮೇಧ, ಸರಸ್ವತೀ ತೀರದಲ್ಲಿ ಹದಿನಾಲ್ಕು ಅಶ್ವಮೇಧಯಾಗ ಮಾಡಿದ. ಈತನ ಆಡಳಿತ ಅವಧಿಯಲ್ಲಿ ಒಟ್ಟಾರೆ ಒಂದುಸಾವಿರ ಅಶ್ವಮೇಧ, ನೂರು ರಾಜಸೂಯಯಾಗ ಮಾಡಿ ದೇವತೆಗಳನ್ನು ತೃಪ್ತಿಪಡಿಸಿದ್ದನು. ಮನುಷ್ಯನು ತನ್ನ ಬಾಹುಗಳಿಂದ ಆಕಾಶವನ್ನು ಹೇಗೆ ಮುಟ್ಟಲಾರನೋ, ಹಾಗೆಯೇ ಈತನ ಸಾಧನೆಗಳನ್ನು ಯಾವ ರಾಜನು ಅನುಸರಿಸಲು ಅಸಾಧ್ಯ. ಈತನು ನೂರು ಕೋಟಿ ಹಸುಗಳನ್ನು ಕಣ್ವರಿಗೆ ದಾನ ಮಾಡಿದ. ಇಂತಹ ಭರತನೂ ಮರಣ ಹೊಂದಿದ. ಹೀಗಿರುವಾಗ ನೀನೇಕೆ ಚಿಂತಿಸುವೆ?

**೬. ಶ್ರೀರಾಮಚಂದ್ರ** : ದಶರಥನ ಮಗ ರಾಮ. ಪ್ರಜೆಗಳನ್ನು ತನ್ನ ಮಕ್ಕಳಂತೆ ಕಂಡ, ಅನುಕಂಪಿಸಿದ. ಆತನ ರಾಜ್ಯದಲ್ಲಿ

i. ಅನಾಥರಾದ ವಿಧವೆಯರು ಇರಲಿಲ್ಲ.

ದುಃಖ?

ಪುರಾತನ ರಾಜರ ಚರಿತ್ರೆಗಳನ್ನು ವಿಸ್ತಾರವಾಗಿ ಹೇಳುವೆ. ಅದನ್ನು ಕೇಳಿಯಾದರೂ ನಿನ್ನ ದುಃಖ ತಡೆ.

೨. ಅವರ ಚರಿತ್ರೆ (ಶ್ರವಣ) ಉತ್ತಮವೂ, ಶ್ರವಣಮಾತ್ರದಿಂದ ಕ್ರೂರಗ್ರಹಪೀಡೆಯನ್ನು ಶಮನ ಮಾಡುತ್ತದೆ. ಆಯುರ್ವೃದ್ಧಿಯಾಗುತ್ತದೆ.

ಆ ರಾಜರು ಯಾರೆಂದರೆ -

೧. **ಮರುತ್ತ (ಆವಿಕ್ಷಿತ್)** : ಅವಿಕ್ಷಿತ್ ರಾಜನ ಮಗ ಆವಿಕ್ಷಿತ್ - ಮರುತ್ತ. ಈತನು ಇಂದ್ರನೊಡನೆ ಸ್ಪರ್ಧಿಸುವಂತೆ ರಾಜ್ಯವಾಳಿದ. ಯಜ್ಞ-ಯಾಗಾದಿಗಳನ್ನು ಮಾಡಿದ. ಬೃಹಸ್ಪತ್ಯಾಚಾರ್ಯರು ಇಂದ್ರನ ಅಣತಿಯಂತೆ ಪೌರೋಹಿತ್ಯ ಒಪ್ಪದಿದ್ದರೂ, ಬೃಹಸ್ಪತಿಯ ತಮ್ಮ **ಸಂವರ್ತನು** ಪೌರೋಹಿತ್ಯ ಮಾಡಿಸಿ ಯಜ್ಞವನ್ನು ನೆರವೇರಿಸಿದ. ಈತನ ಯಜ್ಞಕ್ಕೆ ವಿಶ್ವೇದೇವತೆಗಳೇ ಸಭಾಸದರಾಗಿದ್ದರು. ಮರುತ್ ದೇವತೆಗಳು ಸಾಧ್ಯರು, ಊಟ ಬಡಿಸುವವರಾಗಿ ಸೇವೆ ಸಲ್ಲಿಸಿದರು (ಪರಿವೇಷಣ ಮಾಡುವವರು - ಪರಿವೇಷ್ಟಿಗಳು). ಎಲ್ಲ ಮರುದ್ಗಣಗಳು ಯಥೇಚ್ಛ ಸೋಮಪಾನ ಮಾಡಿದರು. ರಾಜನು ಕೊಟ್ಟ ದಕ್ಷಿಣೆ ದೇವತೆಗಳು ಮನುಷ್ಯರು ಗಂಧರ್ವಾದಿಗಳು ಕೊಟ್ಟ ದಕ್ಷಿಣೆಯನ್ನು ಮೀರಿಸಿತ್ತು. ಹೀಗಾಗಿ ಕೊಟ್ಟ ಎಲ್ಲ ಸುವರ್ಣರಾಶಿ ದಕ್ಷಿಣೆ ಒಯ್ಯಲಾರದೆ ಬ್ರಾಹ್ಮಣರು ಎಷ್ಟೋ, ಅಲ್ಲೇ ಬಿಟ್ಟು ಹೋಗಿದ್ದರು. ಇಂತಹ ಮರುತ್ತರಾಜನು ಎಂಭತ್ತೈದುಸಾವಿರ ವರ್ಷ ರಾಜ್ಯವಾಳಿ ಮುಂದೊಮ್ಮೆ ಮೃತನಾದ. ಹೀಗಿರುವಾಗ ನಿನ್ನ ಮಗನ ಮರಣಕ್ಕೆ ಏಕೆ ಶೋಕ? ಎಂದು ನಾರದರು ಸೃಂಜಯನಿಗೆ ಹೇಳಿದರು.

೨. **ಸುಹೋತ್ರ : ವಿತಥರಾಜನ** ಮಗ **ಸುಹೋತ್ರ**. ಈತನ ರಾಜ್ಯಭಾರದಲ್ಲಿ ಇಂದ್ರನು ಒಂದು ವರ್ಷ ಸುವರ್ಣವೃಷ್ಟಿಕರೆದಿದ್ದನಂತೆ. ಆದ್ದರಿಂದ ಈತನ ಕಾಲದ ಭೂಮಿಗೆ ವಸುಮತಿ ಎಂಬ ಹೆಸರಿತ್ತು. ನದಿಗಳಲ್ಲಿ ಸುವರ್ಣದ ನೀರು. ಜಲಜಂತುಗಳು ಸುವರ್ಣಮಯವಾಗಿದ್ದವು. ಇಂದ್ರನ ಅನುಗ್ರಹದಿಂದ ಇದನ್ನೂ ನೋಡಿ ಸುಹೋತ್ರನೇ ಆಚ್ಚರಿಪಟ್ಟಿದ್ದ. ಕುರುಜಾಂಗಲ ದೇಶದಲ್ಲಿ ಸುಹೋತ್ರನು ಮಾಡಿದ ಯಜ್ಞದಲ್ಲಿ ಬ್ರಾಹ್ಮಣರಿಗೆ ಸುವರ್ಣದ ರಾಶಿಯನ್ನೇ ಕೊಟ್ಟಿದ್ದ.

ಇಂತಹ ಮಹಾದಾನಿಯಾದ ಸುಹೋತ್ರನು ಮೃತನಾದ ಕಾರಣ ನೀನೇಕೇ ಶೋಕ ಪಡುವೆ?

೩. **ಬೃಹದ್ರಥ** : ಅಂಗದೇಶದ ರಾಜ. ಈತ ರಾಜ್ಯಭಾರ ಮಾಡುವಾಗ ಪದ್ಮಮಾಲೆಯುಳ್ಳ ಹತ್ತುಲಕ್ಷ ಆನೆಗಳನ್ನು ಬಿಳಿ ಬಣ್ಣದ ಹತ್ತು ಲಕ್ಷ ಕುದುರೆಗಳನ್ನು ಸಾಲಂಕೃತ ಹತ್ತುಲಕ್ಷ

ಕನ್ಯೆಯರನ್ನು, ಒಂದು ಕೋಟಿ ಗೋವು, ಎತ್ತುಗಳನ್ನು ಅವುಗಳ ಸೇವೆಗೆ ಸಾವಿರಾರು ಸೇವಕರನ್ನೂ, ದಾನರೂಪವಾಗಿ ಕೊಟ್ಟಿದ್ದನು. ಈತನು ವಿಷ್ಣುಪದವೆಂಬ ಗಿರಿಯಲ್ಲಿ ಮಾಡಿದ ಯಜ್ಞದಲ್ಲಿ ಇಂದ್ರನು ಯಥೇಚ್ಛ ಸೋಮಪಾನ ಮಾಡಿದ. ಬ್ರಾಹ್ಮಣರು ಭೋಜನ, ದಕ್ಷಿಣೆಗಳಿಂದ ತೃಪ್ತರಾದರು. ಆತ ಕೊಟ್ಟ ದಾನವನ್ನು ದೇವತೆಗಳು, ಮನುಷ್ಯರು, ಗಂಧರ್ವರು ಎಲ್ಲರೂ ಸೇರಿ ಕೊಡುತ್ತಿದ್ದ ದಕ್ಷಿಣೆಯನ್ನು ಮೀರಿಸುತ್ತಿತ್ತು. ಆತನು ಸೋಮಸಂಸ್ಥಾ ಎಂದು ಕರೆಯಲ್ಪಡುವ ಏಳು ಯಾಗಗಳಲ್ಲಿ ಕೊಟ್ಟ ದಾನವನ್ನು ಯಾರೂ ಹಿಂದೆ ಕೊಟ್ಟಿಲ್ಲ, ಮುಂದೆ ಕೊಡುವುದಿಲ್ಲವೆಂಬ ಖ್ಯಾತಿ ಗಳಿಸಿದ (ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯಾ ಷೋಡಶೀ, ಅತಿರಾತ್ರ, ವಾಜಪೇಯ, ಅಪ್ತೋರ್ಯಾಮ ಎಂಬ ಏಳು ಯಾಗಗಳನ್ನು ಸೋಮಸಂಸ್ಥಾ ಎನ್ನುತ್ತಾರೆ).

ಇಂತಹ ಧರ್ಮಜ್ಞಾನವೈರಾಗ್ಯ ಐಶ್ವರ್ಯವೆಂಬ ನಾಲ್ಕು ಗುಣಗಳಿಂದ ಉತ್ತಮನಾದ ಬೃಹದ್ರಥನು ಮರಣ ಹೊಂದಿದನೆಂದ ಮೇಲೆ ನಿನ್ನ ಮಗನ ಮರಣಕ್ಕೆ ಏಕೆ ಶೋಕ? ಎಂದು ನಾರದರು ಕೇಳಿದರು ಸೃಂಜಯನಿಗೆ.

**೪. ಶಿಬಿ ಚಕ್ರವರ್ತಿ** : ಉಶೀನರ ರಾಜನ ಮಗ ಶಿಬಿ. ಯಯಾತಿಯ ಮಗಳು ಮಾಧವಿ ತಾಯಿ. ಸಮಗ್ರ ಭೂಮಿಯನ್ನೇ ಚರ್ಮದಂತೆ ಹೊದಿಸಿ, ತನ್ನ ಅಧೀನ ಮಾಡಿಕೊಂಡಿದ್ದನು. ಈತನೇ ಭೂಮಿಯ ಏಕಚಕ್ರಾಧಿಪತಿಯಾಗಿದ್ದನು. ತಾನು ಮಾಡಿದ ಮಹಾಯಾಗದಲ್ಲಿ ತನ್ನ ಆಡಳಿತದಲ್ಲಿದ್ದಷ್ಟು ಹಸು, ಕುದುರೆಗಳನ್ನು ದಾನ ಮಾಡಿದ್ದನು. ಈತನ ರಾಜ್ಯಭಾರವು ಅಸದೃಶವೆಂದು ಬ್ರಹ್ಮನೇ ಬಗೆದಿದ್ದನು. ಅಂತಹ ಚಕ್ರವರ್ತಿಯೂ ಮರಣ ಹೊಂದಿದ. ಆದ್ದರಿಂದ ನೀನೇಕೆ ಶೋಕ ಪಡುವೆ?

**೫. ಭರತ ಚಕ್ರವರ್ತಿ** : ಶಕುಂತಲೆ-ದುಷ್ಯಂತರ ಮಗ. ಯಮುನೆಯ ತೀರದಲ್ಲಿ ಮೂವತ್ತು ಅಶ್ವಮೇಧ, ಗಂಗಾತೀರದಲ್ಲಿ ಇಪ್ಪತ್ತು ಅಶ್ವಮೇಧ, ಸರಸ್ವತೀ ತೀರದಲ್ಲಿ ಹದಿನಾಲ್ಕು ಅಶ್ವಮೇಧಯಾಗ ಮಾಡಿದ. ಈತನ ಆಡಳಿತ ಅವಧಿಯಲ್ಲಿ ಒಟ್ಟಾರೆ ಒಂದುಸಾವಿರ ಅಶ್ವಮೇಧ, ನೂರು ರಾಜಸೂಯಯಾಗ ಮಾಡಿ ದೇವತೆಗಳನ್ನು ತೃಪ್ತಿಪಡಿಸಿದ್ದನು. ಮನುಷ್ಯನು ತನ್ನ ಬಾಹುಗಳಿಂದ ಆಕಾಶವನ್ನು ಹೇಗೆ ಮುಟ್ಟಲಾರನೋ, ಹಾಗೆಯೇ ಈತನ ಸಾಧನೆಗಳನ್ನು ಯಾವ ರಾಜನು ಅನುಸರಿಸಲು ಅಸಾಧ್ಯ. ಈತನು ನೂರು ಕೋಟಿ ಹಸುಗಳನ್ನು ಕಣ್ವರಿಗೆ ದಾನ ಮಾಡಿದ. ಇಂತಹ ಭರತನೂ ಮರಣ ಹೊಂದಿದ. ಹೀಗಿರುವಾಗ ನೀನೇಕೆ ಚಿಂತಿಸುವೆ?

**೬. ಶ್ರೀರಾಮಚಂದ್ರ** : ದಶರಥನ ಮಗ ರಾಮ. ಪ್ರಜೆಗಳನ್ನು ತನ್ನ ಮಕ್ಕಳಂತೆ ಕಂಡ, ಅನುಕಂಪಿಸಿದ. ಆತನ ರಾಜ್ಯದಲ್ಲಿ

i. ಅನಾಥರಾದ ವಿಧವೆಯರು ಇರಲಿಲ್ಲ

ii. ನಿತ್ಯಸುಭಿಕ್ಷರಾಜ್ಯವಾಗಿತ್ತು.

iii. ಯಾರೊಬ್ಬರೂ ನೀರಿನಲ್ಲಿ ಮುಳುಗಿ ಸಾಯಲಿಲ್ಲ, ಅಗ್ನಿಯಲ್ಲಿ ಸುಡಲಿಲ್ಲ, ರೋಗ ಪೀಡಿತರಾಗಲಿಲ್ಲ.

iv. ರಾಮರಾಜ್ಯದಲ್ಲಿ ಸಾವಿರವರ್ಷ ಬದುಕಿದ್ದರು. ಮಕ್ಕಳು (ಪುತ್ರರು) ಸಾವಿರ ವರ್ಷ ಆಯುಷ್ಯವಂತರು, ನಿರೋಗಿಗಳು, ಎಲ್ಲರ ಆಶೆ ಈಡೇರಿದ್ದವು.

vi. ಸ್ತ್ರೀಯರು ವಿವಾದರಹಿತರು (ಕಲಹವಿರಲಿಲ್ಲ), ಪುರುಷರೂ ಹಾಗೆಯೇ. ಎಂದು ಹೇಳಬೇಕೇ? ಪ್ರಜೆಗಳೆಲ್ಲ ಧರ್ಮಪರರು, ನಿರ್ಭಯ ವಾತಾವರಣ, ಯಥೇಚ್ಛ ಜೀವಿಸುತ್ತಿದ್ದರು, ಸತ್ಯವ್ರತರು.

vii. ವೃಕ್ಷಗಳಲ್ಲಿ ನಿತ್ಯಪುಷ್ಪಗಳು, ಎಲ್ಲ ಗೋವುಗಳು ಸಾಕಷ್ಟು ಹಾಲು ಕೊಡುತ್ತಿದ್ದವು.

viii. ರಾಮನು ಹದಿನಾಲ್ಕು ವರ್ಷ ವನವಾಸ ಮಾಡಿ **ಜಾರೂಧಿ** ನದೀ ದಡದಲ್ಲಿ ಹತ್ತು ಅಶ್ವಮೇಧ ಯಾಗಗಳನ್ನು ಮಾಡಿದನು.

೮. ರಾಮನು ನೀಲಮೇಘಶ್ಯಾಮನೂ, ನಿತ್ಯ ಯುವಕನೂ, ಮದಿಸಿದ ಆನೆಗಳನ್ನು ನಿಯಂತ್ರಿಸುವ ಸಲಗನಂತೆ, ಆಜಾನುಬಾಹುವಾಗಿಯೂ, ಕೆಂಪಾದ ಸುಂದರ ಕಣ್ಣುಗಳುಳ್ಳವನೂ, ಆಗಿ ಹತ್ತು ಸಾವಿರವರ್ಷ ರಾಜ್ಯವಾಳಿದನು (**ಇಲ್ಲಿ ಹತ್ತುಸಾವಿರ ಎಂದಿದೆ. ಇದು ಕಾಲವ್ಯತ್ಯಾಸಕ್ಕೆ ಉದಾಹರಣೆ**).

ಇಂತಹ ರಾಮನೂ ಪರಂಧಾಮವೈದಿದನೆಂದ ಮೇಲೆ ನಿನ್ನ ಮಗನಿಗಾಗಿ ಏಕೆ ಶೋಕ ಎಂದರು ನಾರದರು (**ಇಲ್ಲಿ ರಾಮನು ಮರಣಹೊಂದಿದ ಎಂಬ ಮಾತು ಅಸುರಮೋಹನಾತ್ಮಕವಾದ ಮಾತು ಎಂದು ಭಾವಿಸಬೇಕು**).

೭. **ಭಗೀರಥ** : ಈತ ಸೂರ್ಯವಂಶದ ರಾಜ. ಈತನ ಯಾಗದಲ್ಲಿ ಇಂದ್ರ ಯಥೇಚ್ಛ ಸೋಮಪಾನ ಮಾಡಿ ಮದಭರಿತನಾದ. ಭಗೀರಥನು ಸಾವಿರಾರು ಅಸುರರನ್ನು ಒಬ್ಬನೇ ಕೊಂದನು. ತಾನು ಮಾಡಿದ ಯಾಗದಲ್ಲಿ ಹತ್ತು ಲಕ್ಷ ಕನ್ಯೆಯರನ್ನು ದಕ್ಷಿಣಾರೂಪದಲ್ಲಿ ದಾನಮಾಡಿದ. ಅವರನ್ನು ರಥದಲ್ಲಿ ಕೂಡಿಸಿ, ಪ್ರತಿರಥಕ್ಕೆ ನೂರು ಆನೆ, ನಾಲ್ಕು ಕುದುರೆ, ಆನೆಗಳ ಜೊತೆಗೂ, ಸಾವಿರಾರು ಕುದುರೆಗಳೇ ಮೊದಲಾಗಿ ದಾನ ಮಾಡಿದ್ದನು. ಗಂಗೆ ಭಗೀರಥನ ತೊಡೆಯ ಮೇಲೆ ಬಂದು ಕುಳಿತು ಆತನನ್ನು ತಂದೆಯನ್ನಾಗಿ ಮಾಡಿಕೊಂಡಳು. ಭಾಗೀರಥಿಯಾದಳು. ಇಂತಹ ಭಗೀರಥನೂ ಮರಣ ಹೊಂದಿದ. ಆದ್ದರಿಂದ ನೀನು ನಿನ್ನ ಮಗನಿಗೇಕೆ ಶೋಕ ಮಾಡುವೆ?

೮. **ದಿಲೀಪರಾಜ** : ಇಕ್ಷ್ವಾಕು ವಂಶದ ರಾಜನಾದ ಈತನು ಒಮ್ಮೆ ಯಾಗ ಮಾಡಿದಾಗ ಸಮಗ್ರ ಭೂಮಿಯನ್ನೇ ಬ್ರಾಹ್ಮಣರಿಗೆ ದಾನ ಮಾಡಿದ್ದನು. ಪ್ರತಿ ಪುರೋಹಿತನಿಗೆ

ಸುವರ್ಣಾಲಂಕೃತ ಸಾವಿರಾರು ಆನೆಗಳನ್ನು ದಕ್ಷಿಣೆಯಾಗಿ ಕೊಟ್ಟಿದ್ದನು. ಆತನ ಯೂಪಸ್ತಂಭ ಸುವರ್ಣಮಯವಾಗಿತ್ತು. ಇದನ್ನು ಆಶ್ರಯಿಸಿ ಇಂದ್ರಾದಿಗಳು ಯಜ್ಞಕರ್ಮಗಳನ್ನು ಮಾಡುತ್ತಿದ್ದರು. ಆತನ ಯಾಗದಲ್ಲಿ ದೇವಗಂಧರ್ವರು ನರ್ತನ ಮಾಡುತ್ತಿದ್ದರೆ, ವಿಶ್ವಾವಸು ಗಂಧರ್ವನು ವೀಣಾವಾದನ ಮಾಡುತ್ತಿದ್ದನು. ಇಂತಹ ಯಾಗದಂತೆ ಹಿಂದೆ ಯಾರೂ ಮಾಡಿರಲಿಲ್ಲವಂತೆ. ಯಾಗಪ್ರದೇಶದಬೀದಿಯಲ್ಲಿಸ್ತ್ರೀಯರುಸುವರ್ಣಾಭರಣಾಲಂಕೃತರಾಗಿ ಮದಭರಿತರಾಗಿ ಮಲಗುತ್ತಿದ್ದರು. ಈ ರಾಜನನ್ನು ನೋಡಿದವರೂ ಸ್ವರ್ಗ ಪಡೆಯುತ್ತಾರೆ (ಪಡೆದರಂತೆ). ದಿಲೀಪನ ಅರಮನೆಯಲ್ಲಿ ವೇದಧ್ವನಿ, ಬಿಲ್ಲಿನ ಧ್ವನಿ, ದಾನ ಮಾಡಿರಿ ಎಂಬ ಮೂರು ಧ್ವನಿಗಳು ನಿರಂತರವಾಗಿ ಕೇಳಿಸುತ್ತಿದ್ದವು. ಇಂತಹ ದಿಲೀಪರಾಜನೂ ಮರಣಹೊಂದಿರುವಾಗ ನೀನೇಕೆ ಶೋಕಿಸುತ್ತೀಯಾ?

೯. **ಮಾಂಧಾತರಾಜ** : ಇಕ್ಷ್ವಾಕುವಂಶದ ಯವನಾಶ್ವನ (ಅಯೋನಿಜ) ತಂದೆಯ ಗರ್ಭದಲ್ಲಿ ಬೆಳೆದು ಉದರದ ಒಂದು ಪಾರ್ಶ್ವದಲ್ಲಿ ಜನಿಸಿದ ಅಸಾಮಾನ್ಯ ಶಿಶು. ಇಂದ್ರನ ಬೆರಳನ್ನು ಮಗುವಿನ ಬಾಯಿಯಲ್ಲಿಟ್ಟು ಬೆಳೆದ ಮಗು. ಬೆರಳಿನಿಂದ ಅಮೃತಕುಡಿದ ಮಗು ಹನ್ನೆರಡು ದಿನಗಳಲ್ಲಿ ಹನ್ನೆರಡು ವರ್ಷದವನಾದ. ದೇವೇಂದ್ರನಿಗೆ ಸಮನಾಗಿ ಬೆಳೆದ ಅಸಾಧಾರಣ ಶಿಶು. ಮಹಾಪರಾಕ್ರಮಿಯಾದ ಇವನು ಅಂಗಾರ, ಮರುತ್, ಅಸಿತ, ಬೃಹದ್ರಥ ಮೊದಲಾದ ರಾಜ್ಯವನ್ನು ಗೆದ್ದ. ಆತನ ಬಿಲ್ಲಿನ ಝೇಂಕಾರದಿಂದ ಸ್ವರ್ಗವೇ ಸೀಳಿತು ಎಂದು ದೇವತೆಗಳು ಹೆದರಿದರಂತೆ. ಸೂರ್ಯೋದಯವಾಗುವ ಭೂಭಾಗವೆಲ್ಲ ಆತನ ಆಳ್ವಿಕೆಯಲ್ಲಿತ್ತು. ನೂರು ಅಶ್ವಮೇಧಯಾಗ, ನೂರು ರಾಜಸೂಯಯಾಗಗಳನ್ನು ಮಾಡಿ ಬ್ರಾಹ್ಮಣರಿಗೆ ರೋಹಿತ ಮತ್ಸ್ಯಗಳನ್ನು (ಕೆಂಪು ಮೀನು) ದಾನಮಾಡಿದನಂತೆ. ಅವು ಒಂದು ಯೋಜನ ಎತ್ತರ, ಹತ್ತು ಯೋಜನ ಉದ್ದ ಇದ್ದವು. ಅವೆಲ್ಲವೂ ಹಿರಣ್ಯದವಾಗಿದ್ದವು. ಇಂತಹ ಮಾಂಧಾತನು ಕೊನೆಗೆ ಮೃತನಾದ. ಆದ್ದರಿಂದ ಏಕೆ ಶೋಕ?

೧೦. **ಯಯಾತಿ** : ಆಸಮುದ್ರಾಂತ(ಸಮುದ್ರದವರೆಗೆ) ಆತನ ರಾಜ್ಯವಿತ್ತು. ಆತನ ಯಜ್ಞವೇದಿಕೆಯು '**ಶಮ್ಯಾ**' ಎಂಬ ದಂಡವನ್ನು ಬಲಿಷ್ಠನಾದವನ್ನು ಎಷ್ಟು ದೂರ ಎಸೆಯಬಲ್ಲನೋ ಅಷ್ಟು ದೂರ ಯಜ್ಞವೇದಿಕೆಯೇ ಇತ್ತು. ಕೊನೆಗೆ ಸಮಗ್ರ ಭೂಮಿಯನ್ನೇ ಯಜ್ಞವೇದಿಕೆಯನ್ನಾಗಿ ಮಾಡಿದ ಭೂಪತಿ (ವಿವರಣೆಗಳಿಗೆ ತತ್ತ್ವಸಂಶೋಧನ ಸಂಸತ್ ಪ್ರಕಾಶನ, ಮಹಾಭಾರತಶಾಂತಿಪರ್ವ, ರಾಜಧರ್ಮಪರ್ವ, ಅಧ್ಯಾಯ೩, ಪು. ೩೯೨-೩೯೫ ನೋಡಿರಿ). ಈತ ನೂರು ವಾಜಪೇಯಯಾಗ, ಸಾವಿರಾರು ಇತರೆ ಯಾಗಗಳನ್ನು ಮಾಡಿ ಮೂರು ಕಾಂಚನ ಪರ್ವತದಾನಗಳಿಂದ ಇಂದ್ರನನ್ನು ಸಂತೋಷಗೊಳಿಸಿದ್ದನಂತೆ. ಈತನು ಭೂಮಿಯಲ್ಲಿನ ದೈತ್ಯದಾನವರನ್ನು ಸೋಲಿಸಿದ್ದನು. ಸಮಗ್ರಭೂಮಿಯನ್ನು ಗೆದ್ದು ತನ್ನ ಮಕ್ಕಳಿಗೆ ವಿಭಾಗಮಾಡಿದ್ದನು. ಈತನ ಉತ್ತರಾಧಿಕಾರಿ ಪುರು. ಉಳಿದ ಮಕ್ಕಳು ಗಡಿರಾಜ್ಯದ ರಾಜರಾಗಿದ್ದರು.

ಇಂತಹ ಭೂಮಂಡಲ ಚಕ್ರವರ್ತಿಯೂ ಮರಣಹೊಂದಿದನೆಂದ ಮೇಲೆ ನಿನ್ನ ಶೋಕಕ್ಕೆ ಯಾವ ಬೆಲೆ ಇದೆ?

೧೧. **ಅಂಬರೀಷ ಮಹಾರಾಜ** : ನಾಭಾಗನ ಮಗ. ಪ್ರಜೆಗಳ ದಕ್ಷರಕ್ಷಕರಾಜ. ಈತ ಮಾಡಿದ ಯಾಗದ ಬ್ರಾಹ್ಮಣರ ಸೇವೆಗಾಗಿ ಒಂದು ಲಕ್ಷ ಹತ್ತುಸಾವಿರ ರಾಜರನ್ನೇ ಯೋಜಿಸಿ-ದ್ದನು (ಈ ರಾಜರೆಲ್ಲ ಇವನಿಗೆ ಸೋತು ಶರಣಾಗತರಾಗಿದ್ದರೆಂದು ದ್ರೋಣಪರ್ವದಲ್ಲಿ ಬಂದಿದೆ). ಪರಿಣಾಮವಾಗಿ ಆ ಸೇವಕರಾಜರೂ ಕೂಡಾ ಅಂಬರೀಷ ಮಾಡಿದ ಅಶ್ವಮೇಧಯಾಗದ ಫಲ ಹೊಂದಿದರಂತೆ. ಇದು ಈತನ ವೈಭವ. ಈತನೂ ಮುಂದೊಮ್ಮೆ ಮರಣಹೊಂದಿದ. ಆದ್ದರಿಂದ ನೀನೇಕೆ ಶೋಕ ಪಡುವೆ? ಎಂದರು ನಾರದರು.

೧೨. **ಶಶಬಿಂದು** : ಈತ ಚಿತ್ರರಥರಾಜನ ಮಗ. ಇವನಿಗೆ ಒಂದುಲಕ್ಷ ಪತ್ನಿಯರಿದ್ದರು. ಪ್ರತಿಯೊಬ್ಬರಲ್ಲೂ ಸಾವಿರ ಸಾವಿರ ಮಕ್ಕಳು ಜನಿಸಿದರು. ಅಶ್ವಮೇಧ ಯಜ್ಞಕ್ಕೆ ಆಗಮಿಸಿದ ಬ್ರಾಹ್ಮಣರಿಗೆ ತನ್ನ ಮಕ್ಕಳು, ಸೊಸೆ, ಆನೆ, ರಥ, ಕುದುರೆ, ಆಡುಗಳನ್ನು ಸುವರ್ಣಮಾಲೆಗಳೊಂದಿಗೆ ದಾನ ಮಾಡಿದ ಮಹಾತ್ಮನಾದ ಶಶಬಿಂದುವೂ ಮರಣಹೊಂದಿರುವಾಗ ನಿನ್ನ ಪುತ್ರರ ಶ್ಲೋಕವೇಕೆ?

೧೩. **ಗಯರಾಜ** : ಈತನು ನೂರುವರ್ಷಗಳ ಕಾಲ ಹೋಮಮಾಡಿ ಅದರ ಶೇಷವನ್ನು ತಿಂದು ಇದ್ದನು. ಇದರಿಂದ ಪ್ರೀತನಾದ ಅಗ್ನಿ ವರವನ್ನು ಬೇಡೆನ್ನಲು ಗಯನು ೧. ನಾನು ಮಾಡಿದ್ದು ಅಕ್ಷಯವಾಗಬೇಕು; ೨. ನನ್ನ ಧರ್ಮಶ್ರದ್ಧೆ ವೃದ್ಧಿಯಾಗಬೇಕು; ೩. ಮನಸ್ಸು ಸತ್ಯದಲ್ಲಿ ನಿಷ್ಠೆ ಹೊಂದಿರಬೇಕು; ೪. ನಿನ್ನ ಅನುಗ್ರಹ ಯಾವಾಗಲೂ ಇರಬೇಕು. ಗಯ ಕೇಳಿದಂತೆ ಅಗ್ನಿ ವರ ನೀಡುತ್ತಾನೆ. ಗಯನು ಒಂದು ಸಾವಿರ ವರ್ಷಕಾಲ ಪೌರ್ಣಮಾಸ ಯಾಗ, ಚಾತುರ್ಮಾಸ್ಯ ಯಾಗ, ದರ್ಶಯಾಗಗಳನ್ನು ಆಚರಿಸುತ್ತಾನೆ. ಅಷ್ಟುಕಾಲ ಒಂದು ಲಕ್ಷ ಗೋವು, ಹತ್ತುಸಾವಿರ ಕುದುರೆಗಳನ್ನು ದಾನ ಮಾಡಿದನು. ದೇವತೆಗಳನ್ನು ಸೋಮರಸದಿಂದ, ಬ್ರಾಹ್ಮಣರನ್ನು (ಐಶ್ವರ್ಯ) ದಕ್ಷಿಣೆಯಿಂದ, ಶ್ರಾದ್ಧಾದಿಗಳಿಂದ ಪಿತೃಗಳನ್ನು, ಸ್ತ್ರೀಯರನ್ನು ವಿವಿಧ ಕಾಮೋಪಭೋಗಗಳಿಂದ ತೃಪ್ತಿಪಡಿಸಿದನು. ನಂತರ ಒಂದು ಅಶ್ವಮೇಧಯಾಗದಲ್ಲಿ ಐವತ್ತು ಮಾರು ಅಗಲವಾದ, ನೂರು ಮಾರು ಉದ್ದವಾದ ಸುವರ್ಣ ಭೂಮಿಯನ್ನು ಮಾಡಿಸಿ ಬ್ರಾಹ್ಮಣರಿಗೆ ದಾನ ಮಾಡಿದ ಪುಣ್ಯಾತ್ಮ ಗಯ ಮಹಾರಾಜ. ಈತನೂ ಮೃತನಾದ. ಕಾರಣ ಶೋಕಿಸಬೇಡ.

೧೪. **ರಂತಿದೇವ** : ಸಂಕೃತಿ ರಾಜನ ಮಗ ರಂತಿದೇವ. ಇಂದ್ರನನ್ನು ಆರಾಧಿಸಿ ಮಹಾಕೀರ್ತಿವಂತನಾದ, ವರವನ್ನೂ ಪಡೆದ. ಅದು ೧. ದಾನಕ್ಕೆ ಬಹಳ ಅನ್ನವಿರಬೇಕು; ೨. ಸೇವೆಗಾಗಿ ನಿರಂತರ ಅತಿಥಿಗಳಿರಬೇಕು; ೩. ಅತಿಥಿಸತ್ಕಾರದಲ್ಲಿ ಶ್ರದ್ಧೆ ಕಡಿಮೆಯಾಗಬಾರದು; ೪. ಅದಕ್ಕಾಗಿ ಬೇರೆಯವರನ್ನೂ ಬೇಡಬಾರದು.

ಆತನ ಧಾರ್ಮಿಕ ಕಾರ್ಯಗಳಿಗೆ ಗ್ರಾಮ, ಅರಣ್ಯಗಳಲ್ಲಿರುವ ಪಕ್ಷಿಗಳು ಹಸುಗಳು ತಾವೇ ಬರುತ್ತಿದ್ದವು. ಆತನು ಮಾಡಿದ ಯಾಗದಲ್ಲಿ ಉಪಯುಕ್ತವಾದ ಪಶುಗಳ ಚರ್ಮದಿಂದ ಸ್ರವದ ಜಲವೇ ಚರ್ಮಣ್ವತಿನದಿಯಂತಾಯಿತು. ಬ್ರಾಹ್ಮಣರಿಗೆ ಯಥೇಚ್ಛ ಸುವರ್ಣ ನಾಣ್ಯಗಳನ್ನು ಕೊಡುತ್ತಿದ್ದನು. ಅವರ ವರಪೇಕ್ಷೆಗಿಂತ ಜಾಸ್ತಿಯೇ ಕೊಡುತ್ತಿದ್ದನು. ಆತನ ಮನೆಯಲ್ಲಿ ರಾತ್ರಿ ಅತಿಥ್ಯವಾದ ಮೇಲೂ ಅತಿಥಿಗಳಿಗೆ ಇಪ್ಪತ್ತು ಸಾವಿರ ಗೋವುಗಳ ದಾನ ಸಿಗುತ್ತಿತ್ತಂತೆ. ಇಂತಹ ರಂತಿದೇವನು ಮರಣಿಸಿದ. ಉಳಿದವರ ಗತಿಯೇನು?

**೧೫. ಸಗರಚಕ್ರವರ್ತಿ** : ಇಕ್ಷ್ವಾಕು ವಂಶದ ರಾಜ. ಇವನಿಗೆ೬೦೦೦೦ ಮಕ್ಕಳು. ಎಲ್ಲರೂ ತಂದೆಯನ್ನು ಅನುಸರಿಸಿಕೊಂಡಿದ್ದರು. ಈತ ೧೦೦೦ ಅಶ್ವಮೇಧಯಾಗ ಮಾಡಿದ್ದನು. ಈತನು ಸುವರ್ಣಸ್ತಂಭಗಳಿಂದ ಕೂಡಿದ, ಕಮಲದಂತಹ ಕಣ್ಣುಳ್ಳ ಸ್ತ್ರೀಯರಿಂದ ಕೂಡಿದ ಹಂಸತೂಲಿಕಾತಲ್ಪಗಳಿಂದ ಅಲಂಕೃತವಾದ ಸುವರ್ಣ ಪ್ರಾಸಾದಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು. ಬ್ರಾಹ್ಮಣನು ಬೇಡಿದ್ದನ್ನೆಲ್ಲ ಕೊಟ್ಟಿದ್ದನು. ತನ್ನ ಪಿತೃಗಳ ಸದ್ಗತಿಗಾಗಿ ಸಮುದ್ರವನ್ನೇ ತನ್ನ ಮಕ್ಕಳಿಂದ ಅಗೆಸಿ ಸಮುದ್ರಕ್ಕೆ ಸಾಗರವೆಂಬ ಬಿರುದು ಬರುವಂತೆ ಮಾಡಿದ ಮಹಾನುಭಾವನೇ ಈ ಸಗರ.

ಈತನೂ ಮುಂದೊಮ್ಮೆ ಮರಣಿಸಿದ. ಆದ್ದರಿಂದ ರಾಜನೇ ನೀನೇಕೆ ಶೋಕ ಪಡುವೆ ಎಂದರು ನಾರದರು.

**೧೬. ಪೃಥುಚಕ್ರವರ್ತಿ** : ದೈತ್ಯ ವೇನನ ದೇಹದ ಮಥನದಿಂದ ಜನಿಸಿದ ಮಹಾನುಭಾವ. ಲೋಕದಲ್ಲಿ ಧರ್ಮಮರ್ಯಾದಾ ಸ್ಥಾಪಿಸಿದ್ದರಿಂದ ಪೃಥು ಎಂದು ಹೆಸರು ಬಂತು. ಆಪದ್ರಕ್ಷಕನಾದ್ದರಿಂದ ಕ್ಷತ್ರಿಯನಾದ. ಪ್ರಜಾನುರಾಗದಿಂದ ರಾಜನೆಂದು ಪ್ರಸಿದ್ಧನಾದ. ಆತನ ಕಾಲದಲ್ಲಿ ಪೃಥಿವೀ ಕೃಷಿ ಮಾಡದಿದ್ದರೂ ಫಲ ಕೊಡುತ್ತಿತ್ತು. ಎಲ್ಲೆಡೆ ಪೊಟರೆಗಳಲ್ಲಿ ಜೇನಿರುತ್ತಿತ್ತು. ಹಸುಗಳು ಯಥೇಚ್ಛ ಹಾಲು ಕರೆಯುತ್ತಿದ್ದವು. ಯಾವ ಮನುಷ್ಯನಿಗೂ ರೋಗವಿರಲಿಲ್ಲ. ಎಲ್ಲರೂ ದೃಢಕಾಯರು. ಸಮುದ್ರ ಯಾನವು ಆತನಿಗೆ ಕಷ್ಟವಾಗದೆ ಜಲವೂ ಕಲ್ಲಿನಂತಾಗಿತ್ತು. ಬಿಲ್ಲಿನ ತುದಿಯಿಂದ ಭೂಮಿಯನ್ನು ಮೈದಾನಗಳಂತೆ ಮಾಡಿದನು. ಆತ ಮಾಡಿದ ಅಶ್ವಮೇಧದಲ್ಲಿ ಮೂರು ಆಳುಗಳಷ್ಟು ಎತ್ತರದ ಸುವರ್ಣಪರ್ವತಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು.

ಇಂತಹ ಪೃಥು ಚಕ್ರವರ್ತಿಯೂ ಮರಣಹೊಂದಿರುವಾಗ ನೀನೇಕೆ ಶೋಕಿಸುವೆ? ನಿನ್ನ ಮಗನು ಮೇಲಿನ ರಾಜರಂತೆ ಮಹಾಕಾರ್ಯಗಳನ್ನೇನಾದರೂ ಮಾಡಿದ್ದಾನೋ?

ನಾರದರ ಮಾತುಗಳನ್ನು ಕೇಳಿದ ಸೃಂಜಯ ರಾಜನು 'ನಿಮ್ಮ ಮಾತುಗಳು ನನ್ನ ದುಃಖವನ್ನೆಲ್ಲ ಪೂರ್ಣವಾಗಿ ದೂರ ಮಾಡಿವೆ. ಅವು ವ್ಯರ್ಥವಾಗುವುದಿಲ್ಲ. ನಿಮ್ಮ ಮಾತುಗಳೆಂಬ ಅಮೃತಪಾನವು ನನಗೆ ಎಷ್ಟು ಹೀರಿದರೂ ತೃಪ್ತಿ ಇಲ್ಲ. ತಮ್ಮ ದರ್ಶನವೇ ಅಮೋಘ. ನಾನು

ಪುತ್ರವಿಯೋಗದಿಂದ ಸಂತಪ್ತನಾಗಿದ್ದೇನೆ. ನೀವು ಪ್ರಸನ್ನರಾದಲ್ಲಿ ನನ್ನ ಸತ್ತಮಗ ಬದುಕಿ ಬರುತ್ತಾನೆ. ಅಂಥ ಶಕ್ತಿ ತಮ್ಮಲ್ಲಿದೆ. ನನಗೆ ನನ್ನ ಮಗನ ಸಮಾಗಮವಾಗುವಂತೆ ಮಾಡಿರಿ' ಎಂದನು. ಅದಕ್ಕೆ ನಾರದರು ಅನುಗ್ರಹ ಮಾಡಿ, ಶವವಾಗಿದ್ದ ಸುವರ್ಣಷ್ಠೀವಿಯನ್ನು ಮತ್ತೆ ಬದುಕಿಸಿದರು. ಅವನು ಒಂದು ಸಾವಿರವರ್ಷ ಕಾಲ ಬದುಕುವನೆಂದೂ ತಿಳಿಸಿದರು[೧].

## ಸಂದೇಶಗಳು-ವಿವರಣೆಗಳು

ಸಂದೇಶಗಳು ದ್ರೋಣಪರ್ವದಲ್ಲಿಯೇ ನೀಡಲಾಗಿದೆ. ಒಂದು ಸಾಮಾನ್ಯವೆಂದರೆ ಕೆಲವು ರಾಜರ ಯಾಗಗಳಿಗೆ ದೇವತೆಗಳೇ ಬಂದು ಸೋಮಪಾನವನ್ನು ಸಾಕ್ಷಾತ್ತಾಗಿ ಮಾಡುವುದು ಮತ್ತು ಮರುತ್ತರಾಜನ ಯಾಗಕ್ಕೆ ಮರುತ್ ದೇವತೆಗಳು, ಸಾಧ್ಯರು ಉಣಬಡಿಸುವ ಪರಿಚಾರಕರಾಗಿ ಸೇವೆ ಸಲ್ಲಿಸಿದ್ದು (ಪರಿವೇಷಕರು).

ಮರುತಃ ಪರಿವೇಷ್ಟಾರ ಸಾಧ್ಯಾಶ್ಚಾಸನ್ ಮಹಾತ್ಮನಃ। ಅ. ೩೦/೨೨

ಭೌತಿಕದೇಹವುಳ್ಳವರಿಗೆಲ್ಲ ಮರಣ ಇದ್ದೇ ಇರುತ್ತದೆ. ಅದನ್ನು ತಪ್ಪಿಸಲು ಆಗದು ಎನ್ನುವುದೇ ಮುಖ್ಯ ಸಂದೇಶ.

*****

೧ ರಾಜಾ ಉವಾಚ -
ನ ತೇ ಮೋಘಂ ವಿಪ್ರಲಪ್ತಂ ಮಹರ್ಷೇ
ದೃಷ್ಟ್ವೈವ ತ್ವಾಂ ನಾರದಾಹಂ ವಿಶೋಕಃ।
ನ ತೇ ತೃಪ್ಯಾಮ್ಯಮೃತಸ್ಯೇವ ಪಾನಾತ್ - ೩೦/೧೪೪
ಮೃತಸ್ಯ ಸಂಜೀವನಮದ್ಯ ಮೇ ಸ್ಯಾತ್
ತವಪ್ರಸಾದಾತ್ ಸುತಸಂಗಮಶ್ಚ॥ - ೩೦/೧೪೫
ನಾರದ -
ಯಸ್ತೇ ಪುತ್ರೋ ದಯಿತೋಽಯಂ ವಿಜಾತಃ
ಸ್ವರ್ಣಷ್ಠೀವೀಂ ಯಮದಾತ್ ಪರ್ವತಸ್ತೇ।
ಪುನಸ್ತೇ ತಂ ಪುತ್ರಮಹಂ ದದಾಮಿ
ಹಿರಣ್ಯನಾಭಂ ವರ್ಷಸಹಸ್ರಿಣಂ ಚ॥ - ೩೦/೧೪೬

# ೭೯. ದೇವರ್ಷಿನಾರದರು ಮತ್ತು ಪರ್ವತ ಋಷಿಗಳ ಕಥೆ

ಧರ್ಮರಾಜ ಕೃಷ್ಣನನ್ನು ಪ್ರಶ್ನಿಸುತ್ತಾನೆ.

ಆ ಸ್ವರ್ಣಷ್ಠೀವಿಯು ಸೃಂಜಯನಿಗೆ ಹೇಗೆ ಮಗನಾದನು? ಪರ್ವತ ಋಷಿಯು ಸ್ವರ್ಣಷ್ಠೀವಿಯನ್ನು ಸೃಂಜಯನಿಗೆ ಏಕೆ ಕೊಟ್ಟನು? ಮತ್ತು ಅವನು ಏಕೆ ಮರಣಹೊಂದಿದನು?

ಆ ಕಾಲದಲ್ಲಿ ಪ್ರತಿ ಮನುಷ್ಯನು ಒಂದು ಸಾವಿರ ವರ್ಷ ಜೀವಿಸುತ್ತಿದ್ದನಷ್ಟೇ? ಹಾಗೆ ಇದ್ದರೂ ಕೌಮಾರಾವಸ್ಥೆ ಮೊದಲೇ ಆ ಮಗು ಏಕೆ ಸತ್ತಿತು? ಅವನಿಗೆ ಸ್ವರ್ಣಷ್ಠೀವಿ ಎಂಬುವುದು ಕೇವಲ ಹೆಸರಿಗೆ ಮಾತ್ರವೋ ಅಥವಾ ಯಾವ ನಿಮಿತ್ತದಿಂದ ಬಂದಿತ್ತು (ಆ ನಾಮ)? ಇದನ್ನು ತಿಳಿಯಲು ಇಚ್ಛಿಸುತ್ತೇನೆ.

ಆಗ ಶ್ರೀಕೃಷ್ಣನ ಎಲೈ ರಾಜನೇ ! ಅವನ (ಸ್ವರ್ಣಷ್ಠೀವಿಯ) ಚರಿತ್ರೆಯನ್ನು ತಿಳಿಸುತ್ತೇನೆ ಕೇಳು.

[೧]ನಾರದರು ಮತ್ತು ಪರ್ವತಮುನಿಗಳು ಇಬ್ಬರು ಭಾಗಿನೇಯರು (ಅಕ್ಕತಂಗಿಯರ ಮಕ್ಕಳು). ಪರ್ವತನ ಸೋದರಮಾವ ನಾರದ. ನಾರದನ ಸೋದರಳಿಯ ಪರ್ವತಮುನಿ. ಇಬ್ಬರೂ ಲೋಕದಲ್ಲಿ ಪೂಜ್ಯರು ಇಬ್ಬರೂ ಒಮ್ಮೆ ದೇವಲೋಕದಿಂದ ಭೂಲೋಕದಲ್ಲಿ ಯಜ್ಞಾರ್ಪಿತ ಹವಿಸ್ಸನ್ನು ಮತ್ತು ದೇವತೆಗಳು ಉಪಯೋಗಿಸುವ ಆಹಾರಗಳನ್ನು ತಿನ್ನುತ್ತಾ ಸಂಚರಿಸಿದರು. ಭೂಮಿಯಲ್ಲಿ ತಪಸ್ಸನ್ನು ಮಾಡುತ್ತಾ ಮಾನುಷಾನ್ನಾದಿಗಳನ್ನು ಉಣ್ಣುತ್ತಿದ್ದರು.ಇಬ್ಬರೂ ತುಂಬಾ ಅನ್ಯೋನ್ಯವಾಗಿದ್ದು ಪ್ರೀತಿಯುಳ್ಳವರಾಗಿದ್ದರು. ಒಮ್ಮೆ ಇಬ್ಬರೂ ಸೇರಿ ಒಂದು ಒಪ್ಪಂದ/ನಿರ್ಬಂಧ ಮಾಡಿಕೊಂಡರು. 'ತಮ್ಮಲ್ಲಿ ಒಬ್ಬರಿಗೊಬ್ಬರು ಯಾವುದೇ ವಿಷಯವನ್ನು ಮುಚ್ಚಿಡಬಾರದು. ಅದು ಒಳ್ಳೆಯದೇ ಇರಲಿ, ಕೆಟ್ಟದ್ದೇ ಇರಲಿ, ಒಬ್ಬರಿಗೊಬ್ಬರು ತಮ್ಮ ಮನಸ್ಸಿನಲ್ಲಿ ಬಂದುದನ್ನು ಹೇಳಿಕೊಳ್ಳಬೇಕು. ಹೇಳಿಕೊಳ್ಳದಿದ್ದರೆ ಅಥವಾ ಸುಳ್ಳು ಹೇಳಿದರೆ ಹಾಗೆ ಮಾಡಿದವನು ಶಾಪಕ್ಕೆ ಗುರಿಯಾಗುತ್ತಾನೆ'[೨] ಎಂದು.

---

೧ ನಾರದೋ ಪರ್ವತಶ್ಚೈವ ಭಾಗಿನೇಯಶ್ಚ ಪರ್ವತಃ ॥ – ೩೧/೬

೨ ಪ್ರೀತಿಮಂತೌ ಮುದಾ ಯುಕ್ತೌ ಸಮಯಂ ತತ್ರ ಚಕ್ರತುಃ ।
ಯೋ ಭವೇದ್ ಹೃದಿ ಸಂಕಲ್ಪಃ ಶುಭೋ ವಾ ಯದಿ ವಾಶುಭಃ ।
ಅನ್ಯೋನ್ಯಸ್ಯ ಸ ಆಖ್ಯೇಯೋ ಮೃಷಾ ಶಾಪೋಽನ್ಯಥಾ ಭವೇತ್ ॥ – ೩೧/೮,೯

ಹೀಗೆ ಪರಸ್ಪರ ಪ್ರತಿಜ್ಞೆ ಮಾಡಿಕೊಂಡು ಇಬ್ಬರೂ ಶ್ವೇತರಾಜನ ಮಗನಾದ ಸೃಂಜಯನ ಬಳಿ ಬಂದು 'ರಾಜನ್! ನಾವಿಬ್ಬರೂ ನಿನ್ನ ಹಿತಕ್ಕಾಗಿ ನಿಮ್ಮಲ್ಲಿ ಕೆಲವು ಕಾಲ ವಾಸಿಸಲು ಉದ್ದೇಶಿಸಿದ್ದೇವೆ. ನಮಗೆ ನೀನು ಅನುಕೂಲ ಮಾಡಿಕೊಡು' ಎಂದಾಗ, ಸಂತೋಷದಿಂದ ರಾಜನು ಅವರನ್ನು ಸತ್ಕರಿಸಿ ಒಪ್ಪಿದನು, ಬೇಕಾದ ವಸತಿ ಮೊದಲಾದ ಸೌಕರ್ಯಗಳನ್ನು ಕೊಟ್ಟನು.

ಕೆಲವು ಕಾಲವಾದ ಮೇಲೆ ರಾಜನು ತನ್ನ ಒಬ್ಬಳೇ ಮಗಳು ಕನ್ಯೆ ಇದ್ದಾಳೆ, ಆಕೆ ನಿಮ್ಮ ಸೇವೆಯನ್ನು ಮಾಡಲು ಇಚ್ಛಿಸಿದ್ದಾಳೆ. ಒಳ್ಳೆಯ ಶೀಲವಂತಳು. ಸುಕುಮಾರಿ. ಅದಕ್ಕೆ ಇಬ್ಬರೂ ಒಪ್ಪಿದಾಗ ರಾಜನು ಆಕೆಯನ್ನು ಋಷಿಗಳ ಬಳಿ ಕರೆದುಕೊಂಡು ಹೋಗಿ ಇವರನ್ನು ತಂದೆ ಮತ್ತು ದೇವತೆಗಳಂತೆ ಭಕ್ತಿಯಿಂದ ಸೇವೆ ಮಾಡು ಎಂದು ಹೇಳಿದನು[೧]. ಆಕೆಯು ಹಾಗೆಯೇ ಇಬ್ಬರ ಸೇವೆ ಮಾಡುತ್ತಿದ್ದಳು.

ಕೆಲವು ಕಾಲವಾದ ನಂತರ ಆಕೆ ಮಾಡುತ್ತಿದ್ದ ಉಪಚಾರದಿಂದ ಆಕೆಯ ರೂಪಲಾವಣ್ಯದಿಂದ ನಾರದರ ಮನಸ್ಸು ಆಕೆಯತ್ತ ಹೊರಳಿ ಮನ್ಮಥನ ಬಾಣಕ್ಕೆ ತುತ್ತಾಗಿ ಕಾಮಾರ್ತರಾದರು. ಶುಕ್ಲಪಕ್ಷದ ಚಂದ್ರನಂತೆ ಆ ಕಾಮವು ವೃದ್ಧಿಸಿತು. ನಾಚಿಕೆಯಿಂದ ಈ ವಿಷಯವನ್ನು ನಾರದರು ಪರ್ವತಮುನಿಗೆ ತಿಳಿಸಲಿಲ್ಲ. ನಾರದರ ಮುಖದ ಹಾವಭಾವ, ಅಂಗಚೇಷ್ಟೆಗಳಿಂದ ಪರ್ವತಮುನಿಗೆ ನಾರದರ ಈ ಕಾಮಚೇಷ್ಟೆ ಅರ್ಥವಾಗಿ, ತನಗೆ ವಿಷಯ ತಿಳಿಸದಿದ್ದುದಕ್ಕೆ ನಾರದರನ್ನು ಶಪಿಸಿಬಿಟ್ಟರು. 'ನೀನು ಯಾರನ್ನು ಕಾಮಿಸುತ್ತಿರುವೆಯೋ ಆ ಸುಕುಮಾರಿಯೇ ನಿನ್ನ ಪತ್ನಿಯಾಗುತ್ತಾಳೆ. ಆದರೆ ವಿವಾಹವಾದ ಕೂಡಲೇ ನೀನು ಕಪಿಯಾಗುವೆ. ನಿನ್ನನ್ನು ಎಲ್ಲ ಮನುಷ್ಯರೂ ಕಪಿರೂಪ ಹೊಂದಿರುವುದನ್ನು ಕಾಣುವರು[೨]'

೧ ಕನ್ಯೇ ವಿಪ್ರಾವುಪಚರ ದೇವವತ್ ಪಿತೃವಚ್ಚ ಹ॥ – ೩೧/೧೩

೨ ತಸ್ಯಾಸ್ತಥೋಪಚಾರೇಣ ರೂಪೇಣಾಪ್ರತಿಮೇನ ಚ।
ನಾರದಂ ಹೃಚ್ಛಯಸ್ತೂರ್ಣಂ ಸಹಸೈವಾವಾನ್ವಪದ್ಯತ॥
ವವೃಧೇ ಚ ತತಸ್ತಸ್ಯ ಹೃದಿ ಕಾಮೋ ಮಹಾತ್ಮನಃ।
ಯಥಾ ಶುಕ್ಲಸ್ಯ ಪಕ್ಷಸ್ಯ ಪ್ರವೃತ್ತಾವುಡುರಾಟ್ ಶನೈಃ॥
ನ ಚ ತಂ ಭಾಗಿನೇಯಾಯ ಪರ್ವತಾಯ ಮಹಾತ್ಮನೇ।
ಶಶಂಸ ಮನ್ಮಥಂ ತೀವ್ರಂ ವ್ರೀಡಮಾನಃ ಸ ಧರ್ಮವಿತ್॥
ತಪಸಾ ಚೇಂಗಿತೇನಾಥ ಪರ್ವತೋऽಥ ಬುಬುಧೇ ತತ್।
ಕಾಮಾರ್ತಂ ನಾರದಂ ಕೃದ್ಧಃ ಶಶಾಪೈನಂ ತತೋಭೃಶಮ್॥....
ಸುಕುಮಾರೀ ಚ ತೇ ಭಾರ್ಯಾ ಭವಿಷ್ಯತಿ ನ ಸಂಶಯಃ।
ವಾನರಂ ಚೈವ ಕನ್ಯಾ ತ್ವಾಂ ವಿವಾಹಾತ್ ಪ್ರಭೃತಿ ಪ್ರಭೋ।
ಸಂದ್ರಕ್ಷ್ಯಂತಿ ನರಾಶ್ಚಾನ್ಯೇ ಸ್ವರೂಪೇಣ ವಿನಾ ಕೃತಮ್॥

ತನ್ನನ್ನು ಶಪಿಸಿದ್ದನ್ನು ತಿಳಿದ ನಾರದರೂ ಕೂಡಾ ಪರ್ವತನನ್ನು ಸಿಟ್ಟಿನಿಂದ 'ತಪಸ್ಸು ಬ್ರಹ್ಮಚರ್ಯ, ಸತ್ಯ, ಇಂದ್ರಿಯನಿಗ್ರಹಗಳಿಂದ ನಿತ್ಯ ಧರ್ಮರತನಾಗಿದ್ದರೂ, ನಿನಗೆ ಮತ್ತೆ ಸ್ವರ್ಗಕ್ಕೆ ಹೋಗುವ ಶಕ್ತಿಯು ಇರುವುದಿಲ್ಲ(ನಶಿಸುತ್ತದೆ).[೧]' ಹೀಗೆ ಪರಸ್ಪರ ಶಪಿಸಿಕೊಂಡು ಸಹನೆಯಿಲ್ಲದೆ ಎರಡು ಆನೆಗಳಂತೆ ವಿರುದ್ಧ ದಿಕ್ಕುಗಳಿಗೆ ಹೊರಟುಹೋದರು.

ಪರ್ವತಮುನಿ ನಂತರ ತಪಸ್ಸಿನಿಂದ ಪೃಥಿವಿಯನ್ನು ಸಂಚರಿಸಿದರು. ಎಲ್ಲೆಡೆ ಸತ್ಕೃತರಾದರು. ನಾರದರೂ ಕೂಡಾ ಆ ಸುಕುಮಾರಿಯೊಡನೆ ಮದುವೆಯಾದರು. ಶಾಪದಂತೆ ಪಾಣಿಗ್ರಹಣ ಮಂತ್ರ ಉಚ್ಚಾರವಾದಾಗಲೇ ನಾರದರ ಮುಖ [೨]ಕಪಿಯಂತಾದುದನ್ನು ರಾಜ ಕುಮಾರಿ ಗಮನಿಸಿದಳು. ಆದರೂ ನಾರದರನ್ನು ಪಾತಿವ್ರತ್ಯದಿಂದಲೇ ಸತ್ಕರಿಸಿದಳು, ತಿರಸ್ಕಾರ ಮಾಡಲಿಲ್ಲ. ಪೂರ್ಣಪ್ರೀತಿಯನ್ನೇ ತೋರಿಸಿದಳು. [೩]ಬೇರೆ ದೇವತೆ, ಮುನಿಯಕ್ಷರನ್ನು ಯಾರನ್ನೂ ಮನಸ್ಸಿನಲ್ಲಿ ಪತಿತ್ವೇನ ಚಿಂತಿಸಲಿಲ್ಲ. ಕಪಿಮುಖದ ನಾರದರ ಬಗ್ಗೆ ತುಂಬಾ ಗೌರವದಿಂದಲೇ ಇದ್ದಳು.

ಹೀಗಿರುವಾಗ ಒಮ್ಮೆ ಪರ್ವತಮುನಿಗಳು ವನವೊಂದರಲ್ಲಿ ಒಬ್ಬರೇ ಸಂಚರಿಸುತ್ತಿದ್ದಾಗ ನಾರದರನ್ನು ಕಂಡು ನಮಸ್ಕರಿಸಿ '[೪]ಭಗವನ್! ನನಗೆ ಸ್ವರ್ಗಕ್ಕೆ ಹೋಗಲು ಅನುಗ್ರಹ ಮಾಡಿರಿ' ಎಂದು ದೈನ್ಯದಿಂದ ಕೈಮುಗಿದು ಬೇಡಿಕೊಂಡರು. ನಾರದರು ಪರ್ವತನಿಗೆ 'ನೀನು ನನಗೆ ಪುತ್ರಸ್ಥಾನದಲ್ಲಿರುವೆ. ನನಗೆ ಮೊದಲು ನೀನು ಶಾಪ ಕೊಟ್ಟೆ, ನಾನೂ ಮಾತ್ಸರ್ಯದಿಂದ ನಿನಗೆ ಶಾಪ ಕೊಟ್ಟೆ. [೫]ನೀನು ನನಗೆ ಶಾಪ ಕೊಡಬಾರದಿತ್ತು'. ಎಂದರು. ಹೀಗೆ ಪರಸ್ಪರ ಮಾತನಾಡಿಕೊಂಡ ಪರ್ವತ ಹಾಗೂ ನಾರದ ಮುನಿಗಳು ತಾವು ಕೊಟ್ಟ

---

೧ ಸ ತದ್ವಾಕ್ಯಂ ತು ವಿಜ್ಞಾಯ ನಾರದಃ ಪರ್ವತಾತ್ತದಾ ।
ಅಶಪತ್ತಮಪಿ ಕ್ರೋಧಾದ್ ಭಾಗಿನೇಯಂ ಸ ಮಾತುಲಃ ।
ತಪಸಾ ಧರ್ಮಚರ್ಯೇಣ ಸತ್ಯೇನ ಚ ದಮೇನ ಚ ।
ಯುಕ್ತೋಽಪಿ ಧರ್ಮನಿತ್ಯಶ್ಚ ನ ಸ್ವರ್ಗಮವಾಪ್ಸ್ಯಸಿ ।
ತೌ ತು ಶಪ್ತ್ವಾ ಭೃಶಂ ಕ್ರುದ್ಧೌ ಪರಸ್ಪರಮಮರ್ಷಣೌ ।
ಪ್ರತಿಜಗ್ಮತುರನ್ಯೋನ್ಯಂ ಕ್ರುದ್ಧಾವಿವ ಗಜೋತ್ತಮೌ ॥ - (೩೧/೧೫/೨೭)

೨ ಸಾತು ಕನ್ಯಾ ಯಥಾ ಶಾಪಂ ನಾರದಂ ತಂ ದದರ್ಶ ಹ ।
ಪಾಣಿಗ್ರಹಣಮಂತ್ರಾಣಾಂ ಪ್ರಯೋಗಾದೇವ ವಾನರಮ್ ॥ - ೩೧/೩೦

೩ ಉಪತಸ್ಥೇ ಚ ಭರ್ತಾರಂ ನ ಚಾನ್ಯಂ ಮನಸಾಪ್ಯಗಾತ್ ।
ದೇವಂ ಮುನಿಂ ವಾ ಯಕ್ಷಂ ವಾ ಪತಿತ್ವೇ ಪತಿವತ್ಸಲಾ ॥ - ೩೧/೩೨

೪ ತತೋಽಭಿವಾದ್ಯ ಪ್ರೋವಾಚ ನಾರದಂ ಪರ್ವತಸ್ತದಾ ।
ಭವಾನ್ ಪ್ರಸಾದಂ ಕುರುತಾಂ ಸ್ವರ್ಗದೇಶಾಯ ಮೇ ಪ್ರಭೋ ॥ - ೩೧/೩೪

೫ ತವ ನೈತದ್ಧಿ ಸದೃಶಂ ಪುತ್ರಸ್ಥಾನೇ ಹಿ ಮೇ ಭವಾನ್ ।
ನಿವರ್ತಯೇತಾಂ ತೌ ಶಾಪಮನ್ಯೋನ್ಯೇನೈವ ತದಾ ಮುನೀ ॥ - ೩೧/೩೭

ಶಾಪಗಳನ್ನು ಹಿಂಪಡೆದರು. ಪರಿಣಾಮವಾಗಿ ನಾರದರು ಮೊದಲಿನಂತೆ ಸುರೂಪಿಯಾದರು, ದೇವತೆಯಂತೆ ಕಂಡರು. ಇಂತಹ ನಾರದರನ್ನು ಕಂಡ ಪತ್ನಿಯು ಇವರು ನನ ಪತಿಯಲ್ಲ, ಪರಪುರುಷ ಎಂದು ಭಾವಿಸಿ, ಓಡಲಾರಂಭಿಸಿದಳು[೧]. ಆಗ ಪರ್ವತಮುನಿಗಳು ಆಕೆಗೆ 'ಇವರೇ ನಿನ್ನ ಪತಿ. ಇದರಲ್ಲಿ ಸಂಶಯವಿಲ್ಲ' ಎಂದು ಅನೇಕ ರೀತಿಯಲ್ಲಿ [೨]ಸಾಂತ್ವನದ ಮಾತುಗಳನ್ನು ಹೇಳಿದರು. ತನಗೂ ಹಾಗೂ ನಾರದರಿಗೂ ನಡೆದ ಶಾಪಪ್ರಸಂಗವನ್ನು ನಾರದರ ಪತ್ನಿಗೆ ತಿಳಿಸಿದರು[೩]. ವಿಷಯ ತಿಳಿದ ಆಕೆ ಸಮಾಧಾನ ಹೊಂದಿದಳು. ಪರ್ವತರು ಸ್ವರ್ಗಕ್ಕೆ ಹೋದರು. ನಾರದರು ಪತ್ನಿಯೊಡನೆ ಮನೆಗೆ ತೆರಳಿದರು.

ಎಲೈ ಧರ್ಮರಾಜನೇ! ಈಗ ನಿನ್ನ ಮುಂದಿರುವ ನಾರದರೇ ಈ ಎಲ್ಲ ಘಟನೆಗಳ ಮುಖ್ಯಪಾತ್ರಧಾರಿಗಳು. ಸುವರ್ಣಷ್ಠೀವಿಯ ಹುಟ್ಟು ಸಾವುಗಳನ್ನು ಕಂಡವರು. ಅವರು ಎಲ್ಲವನ್ನು ನಿನಗೆ ತಿಳಿಸುತ್ತಾರೆ ಎಂದು ಕೃಷ್ಣನು ಹೇಳಿದನು.

ನಂತರ ಧರ್ಮರಾಜನ ಕೋರಿಕೆಯ ಮೇರೆಗೆ ನಾರದರು ಮೇಲೆ ಹೇಳಿದ ಮುಂದಿನ ಕಥೆಯೆಲ್ಲವನ್ನು ಹೇಳಲಾರಂಭಿಸಿದರು.

ರಾಜನ್! ನಾನು ಮತ್ತು ನನ್ನ ಸೋದರಿಯ ಮಗನಾದ ಪರ್ವತರು ಸೃಂಜಯರಾಜನ ಅರಮನೆಯಲ್ಲಿ ಕೆಲಕಾಲ ಇರಬಯಸಿ, ಆತನಲ್ಲಿಗೆ ಹೋಗಿ ಆತನಿಂದ ಸತ್ಕಾರ ಪಡೆದು ಆತನ ಅರಮನೆಯಲ್ಲಿ ಸುಖವಾಗಿ ಕೆಲಕಾಲ ಇದ್ದೆವು. ಮಳೆಗಾಲ ಬಂದಿತು. ನಾವು ವಾಪಸು ಹೋಗುವ ಕಾಲ ಬಂದಾಗ ಪರ್ವತಮುನಿಯು ನನಗೆ ಹೇಳಿದನು. 'ನಾವು ಇಲ್ಲಿಯವರೆಗೆ ರಾಜನಿಂದ ತುಂಬಾ ಸತ್ಕೃತರಾಗಿದ್ದೇವೆ. ಆತನಿಗೆ ನಾವು ಏನಾದರೂ ಉಪಕಾರ ಮಾಡಬೇಕು. ಅದಕ್ಕೆ ಸೂಕ್ತ ಉಪಾಯ ಯೋಚಿಸು' ಎಂದು. ನಾನು 'ರಾಜನನ್ನೇ ಕೇಳು. ಆತ ಬಯಸಿದುದನ್ನು ನಮ್ಮ ತಪಸ್ಸಿದ್ಧಿಯಿಂದ ಕೊಡೋಣ' ಎಂದೆ.

ಪರ್ವತಮುನಿಯು ನನ್ನ ಅನುಮತಿ ಪಡೆದು ರಾಜನಿಗೆ 'ರಾಜನ್! ನಿನ್ನ ಸರಳತೆ, ಆದರ, ಸತ್ಕಾರ, ಪ್ರೀತಿವಿಶ್ವಾಸಗಳಿಂದ ನಾವು ಪ್ರೀತರಾಗಿದ್ದೇವೆ. ನಿನಗೇನು ಬೇಕೋ ಆ ವರವನ್ನು ನಮ್ಮಿಂದ ಪಡೆ'[೪] ಎಂದು ಹೇಳಿದರು. ರಾಜನು 'ತಾವು ಸಂತುಷ್ಟರಾದರೆ ಅದೇ ಸಾಕು. ಅದೇ

---

೧ ಸಮೃದ್ಧಾಂ ತದಾ ದೃಷ್ಟ್ವಾ ನಾರದಂ ದೇವರೂಪಿಣಮ್ ।
ಸುಕುಮಾರೀ ಪ್ರದುದ್ರಾವ ಪರಪತ್ಯಾಭಿಶಂಕಯಾ ॥ – ೩೧/೩೮

೨ ತಾಂ ಪರ್ವತಸ್ತತೋ ದೃಷ್ಟ್ವಾ ಪ್ರದ್ರವಂತೀಮನಿಂದಿತಾಮ್ ।
ಅಬ್ರವೀತ್ ತವ ಭರ್ತೈಷ ನಾತ್ರ ಕಾರ್ಯಾ ವಿಚಾರಣಾ ॥ – ೩೧/೩೯

೩ ಶಾಪದೋಷಂ ಚ ತಂ ಭರ್ತುಃ ಶ್ರುತ್ವಾ ಸ್ವಾಂ ಪ್ರಕೃತಿಂ ಗತೌ ॥ – ೩೧/೪೧

೪ ಪ್ರೀತೌ ಸ್ವೋ ನೃಪ ಸತ್ಕಾರೈಸ್ತವ ಹ್ಯಾರ್ಜವಸಂಭೃತೈಃ ।
ಆವಾಭ್ಯಾಮಭ್ಯನುಜ್ಞಾತೋ ವರಂ ನೃವರ ಚಿಂತಯ ॥ – ೩೨/೧೧

ಮಹಾಲಾಭ, ಮಹಾಫಲ'[೧] ಎಂದ. ಆಗ ಪರ್ವತಮುನಿಯು ರಾಜನಿಗೆ 'ನಿನ್ನ ಹೃದಯದಲ್ಲಿ ಬಹಳ ಕಾಲದಿಂದ ಇರುವ ಕೋರಿಕೆಯನ್ನು ಕೇಳು. ನಾವು ಈಡೇರಿಸುತ್ತೇವೆ' ಎಂದನು.

ಆಗ ರಾಜನು [೨]'ನನಗೆ ಆಯುಷ್ಮಂತನಾದ, ದೃಢವ್ರತನಾದ, ಪರಾಕ್ರಮಶಾಲಿಯಾದ, ಇಂದ್ರನಿಗೆ ಸಮನಾದ ಮಗನನ್ನು ಬಯಸುತ್ತೇನೆ' ಎಂದನು. ಅದಕ್ಕೆ ಪರ್ವತಮುನಿಗಳು 'ರಾಜನೇ! ನಿನ್ನ ಇಚ್ಛೆ ಈಡೇರುತ್ತದೆ. ಆದರೆ ಮಗ ಆಯುಷ್ಮಂತನಾಗನು[೩]. ಏಕೆಂದರೆ ನೀನು ಇಂದ್ರನನ್ನು ಸೋಲಿಸುವ ಮಗನನ್ನು ಬಯಸುತ್ತಿದ್ದೀಯಾ. ನಿನ್ನ ಮಗನು ಸುವರ್ಣಷ್ಠೀವಿ ಎಂದು ವಿಖ್ಯಾತನಾಗುವನು. ದೇವರಾಜನಿಗೆ ಸಮನಾದ ತೇಜಸ್ಸನ್ನು ಹೊಂದುವ ಆ ಮಗನನ್ನು ದೇವರಾಜನಿಂದ ನೀನೇ ರಕ್ಷಣೆ ಮಾಡಿಕೊಳ್ಳಬೇಕು[೪]. ಇದನ್ನು ಕೇಳಿದ ರಾಜನು 'ನನ್ನ ಮಗನು ಅಲ್ಪಾಯುಷ್ಯಮಾತ್ರ ಆಗದಿರಲಿ. ತಮ್ಮ ತಪಃಪ್ರಭಾವದಿಂದ ಅವನು ಆಯುಷ್ಮಾನ್ ಆಗಲಿ ಎಂದು ಬೇಡಿಕೊಂಡನು. ದೇವೇಂದ್ರನಿಗೆ ಬೇಸರವಾಗದಿರಲೆಂದು ಪರ್ವತಮುನಿಯು ಏನೂ ಮಾತನಾಡಲಿಲ್ಲ.

ಆಗ ನಾನು (ನಾರದ) ದೀನನಾದ ರಾಜನನ್ನು ಕುರಿತು 'ಮಹಾರಾಜ ! ನಿನ್ನ ಮಗನಿಗೆ ಅಂತಹ ವಿಪತ್ತು ಬಂದರೆ ನನ್ನನ್ನು ಸ್ಮರಿಸು[೫]. ನಾನು ನಿನಗೆ ದರ್ಶನ ಕೊಡುತ್ತೇನೆ. ನಿನ್ನ ಮಗನು ಯಮನ ಬಳಿಗೆ ಹೋಗಿದ್ದರೂ, ಅವನನ್ನು ಮತ್ತೆ ವಾಪಸು ಕರೆತಂದು ಹಿಂದಿನ ಶರೀರಕ್ಕೆ ಬರುವಂತೆ ಮಾಡುವೆ (ಸತ್ತವನನ್ನು ಬದುಕಿಸುವೆ) ದುಃಖಿಸಬೇಡ ಎಂದೆ[೬]. ಹೀಗೆ ನಾವು ವಾಗ್ದಾನ ಮಾಡಿ ನಾವು ಹೊರಟೆವು. ಸೃಂಜಯನು ತನ್ನ ಅರಮನೆಗೆ ಹೋದನು.

ಕೆಲವು ಕಾಲದ ನಂತರ ಸೃಂಜಯ ರಾಜರ್ಷಿಗೆ ತೇಜಸ್ವಿಯಾದ ಮಗನು ಜನಿಸಿದನು. ಸರೋವರದಲ್ಲಿ ಬೆಳೆಯುವ ಕಮಲದಂತೆ ವರ್ಧಿಸಿದನು. ಸುವರ್ಣವನ್ನು ಚೆಲ್ಲುವ (ಉಗುಳುವ) ಕಾಂತಿಯುಳ್ಳವನಾದ್ದರಿಂದ ಸುವರ್ಣಷ್ಠೀವಿ ಎಂದು ಅವನನ್ನು ಎಲ್ಲರೂ ಕರೆದರು.

ಬಾಲಕನ ಅದ್ಭುತ ಚರ್ಯೆಯು ಪರ್ವತಮುನಿಗಳ ಆಶೀರ್ವಾದದ ಫಲವೆಂದು ಎಲ್ಲರಿಗೂ ಗೊತ್ತಾಯಿತು. ಇಂದ್ರನಿಗೂ ಗೊತ್ತಾಯಿತು ಮುಂದೆ ತನ್ನನ್ನು ಸೋಲಿಸುವನೆಂದು

---

೧ ಏಷ ಏವ ಪರೋ ಲಾಭೋ ನಿರ್ವೃತ್ತೋ ಮೇ ಮಹಾಫಲಃ ॥ - ೩೨/೧೩

೨ ಅಭೀಪ್ಸಾಮಿ ಸುತಂ ವೀರಂ ವೀರ್ಯವಂತಂ ದೃಢವ್ರತಮ್ ।
ಆಯುಷ್ಮಂತಂ ಮಹಾಭಾಗಂ ದೇವರಾಜಸಮದ್ಯುತಿಃ ॥ - ೩೨/೧೫

೩ ಭವಿಷ್ಯತ್ಯೇಷ ತೇ ಕಾಮೋ ನ ತ್ವಾಯುಷ್ಮಾನ್ ಭವಿಷ್ಯತಿ ॥

೪ ದೇವರಾಜಾಭಿಭೂತ್ಯರ್ಥಂ ಸಂಕಲ್ಪೋ ಹ್ಯೇಷ ತೇ ಹೃದಿ ।
ರಕ್ಷ್ಯಶ್ಚ ದೇವರಾಜಾತ್ಸ ದೇವರಾಜಸಮದ್ಯುತಿಃ ॥ - ೩೨/೧೭

೫ ಸ್ಮರ್ತವ್ಯೋಽಹಂ ಮಹಾರಾಜ ದರ್ಶಯಿಷ್ಯಾಮಿ ತೇ ಸ್ಮೃತಃ ।
ಅಹಂ ತೇ ದಯಿತಂ ಪುತ್ರಂ ಪ್ರೇತರಾಜವಶಂ ಗತಮ್ ॥ - ೩೨/೨೦

೬ ಪುನರ್ದಾಸ್ಯಾಮಿ ತದ್ರೂಪಂ ಮಾ ಶುಚಃ ಪೃಥಿವೀಪತೇ ॥ - ೩೨/೨೧

ತಿಳಿದು [1]ಭಯದಿಂದ ಆ ಮಗನನ್ನು ಕೊಲ್ಲಲು ಯೋಚಿಸಿದ. ಬೃಹಸ್ಪತ್ಯಾಚಾರ್ಯರೊಡನೆ ಸಮಾಲೋಚಿಸಿದ. ಬಾಲಕನಲ್ಲಿ ಏನಾದರೂ ದೋಷವನ್ನು ಹುಡುಕತೊಡಗಿದನು. ತನ್ನ ವಜ್ರಾಯುಧಕ್ಕೆ ಸೃಂಜಯನ ಮಗನನ್ನು ಕೊಲ್ಲಲು ಆದೇಶ ನೀಡಿದ. ನಿತ್ಯವೂ ಬಾಲಕನನ್ನು ಕೊಲ್ಲಲು ಹೊಂಚು ಹಾಕುತ್ತಿದ್ದ ವಜ್ರವು, ಒಮ್ಮೆ ಒಬ್ಬ ದಾದಿಯೊಡನೆ ಭಾಗೀರಥೀ ತೀರದಲ್ಲಿ ಆಟವಾಡುತ್ತಿದ್ದ ಐದೇ ವರ್ಷದ ಮಹಾಗಜದಂತೆ ಬಲಶಾಲಿಯಾದ ಮಗುವಿನ ಮೇಲೆ ಹಿಂದಿನಿಂದ ಹೆಬ್ಬುಲಿಯ ರೂಪದಲ್ಲಿ ಅವನ ಮೇಲೆ ಬಿದ್ದು ಕೊಂದುಬಿಟ್ಟಿತು.

ಇದನ್ನು ಕಂಡ ದಾದಿಯು ಅಳುತ್ತಾ ರಾಜನಿಗೆ ತಿಳಿಸಲಾಗಿ, ಕೂಡಲೇ ತಾನೇ ಅಲ್ಲಿಗೆ ಬಂದ. ಹುಲಿವೇಷದ ವಜ್ರಾಯುಧ ಕೊಂದು ಅಂತರ್ಧಾನವಾಗಿತ್ತು. ಹುಲಿಯು ಬಾಲಕನ ರಕ್ತಪಾನ ಮಾಡಿದ್ದರಿಂದ ಒಣಗಿಹೋಗಿದ್ದ (ರಕ್ತಶೂನ್ಯನಾಗಿದ್ದ).

ಮೃತ ಮಗನನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡ ಸೃಂಜಯನು ಗಳಗಳ ಅತ್ತನು. ಮಗುವಿನ ತಾಯಂದರೂ, ಬಂದು ರೋದಿಸಿದರು. ಆಗ ನಾರದರ ಮಾತನ್ನು ಸ್ಮರಿಸಿಕೊಂಡ ರಾಜ, ಅವರನ್ನು ಸ್ಮರಿಸಿದ. ನಾರದರು ದರ್ಶನ ಕೊಟ್ಟರು[2].

ಧರ್ಮರಾಜನೇ! ನಿನಗೆ ಶ್ರೀಕೃಷ್ಣನು ಯಾವ ಮಾತುಗಳಿಂದ ಸಮಾಧಾನ ಮಾಡಿದನೋ, ನಾನೂ ಕೂಡಾ ಸೃಂಜಯನಿಗೆ ಅಂತಹುದೇ ಮಾತುಗಳನ್ನಾಡಿ ಸಮಾಧಾನ ಮಾಡಿದೆ. ಅವನ ದುಃಖವನ್ನು ನೋಡಿ ಮಗುವನ್ನು ಬದುಕಿಸಲು ಮೊದಲು ಇಂದ್ರನ ಅನುಮತಿ ಪಡೆದೆ. ಇಂದ್ರನಿಗೆ ಅನುಸರಿಸಿರಬೇಕೆಂದು ತಿಳಿಹೇಳಿದೆ[3]. ಇಂದ್ರನಿಗೆ ವಿರುದ್ಧ ಹೋಗಬಾರದೆಂದು ಹೇಳಿದೆ. ಹೋದರೆ ಬದುಕಿಸಲು ಸಾಧ್ಯವಿಲ್ಲವೆಂದು ಹೇಳಿ ನಂತರ ಮಗುವನ್ನು ಬದುಕಿಸಿದೆ.

ನನ್ನ ಮಾತಿಗೆ ರಾಜನು ಒಪ್ಪಿದ. ನಂತರ ಬದುಕಿದ ಸುವರ್ಣಷ್ಠೀವಿ ಕೀರ್ತಿವಂತನಾದ. ತಂದೆ, ತಾಯಿಗಳನ್ನು ಸಂತೋಷಪಡಿಸಿದ. ತಂದೆ(ಸೃಂಜಯ) ಸ್ವರ್ಗಕ್ಕೆ ಹೋಗಲು

---

೧ ತತಸ್ತ್ವಭಿಭವಾತ್ ಭೀತೋ ಬೃಹಸ್ಪತಿಮತೇ ಸ್ಥಿತಃ।
ಕುಮಾರಸ್ಯಾಂತರಪ್ರೇಕ್ಷೀ ...........
ಚೋದಯಾಮಾಸ ವಜ್ರಂ ಸ...........
ವ್ಯಾಘ್ರೋ ಭೂತ್ವಾ ಜಹೀಮಂ ತ್ವಂ ರಾಜಪುತ್ರಂ.........
ಪಂಚವರ್ಷಕ ದೇಶೀಯೋ ಬಾಲೋ ನಾಗೇಂದ್ರವಿಕ್ರಮಃ।
ಸಹಸೋತ್ಪತಿತಂ ವ್ಯಾಘ್ರಮಾಸಸಾದ ಮಹಾಬಲಮ್ ॥
ವ್ಯಸುಃ ಪಪಾತ ಮೇದಿನ್ಯಾಂ...........
ಹತ್ವಾ ತು ರಾಜಪುತ್ರಂ ಸ ತತ್ರೈವಾಂತರಧೀಯತ ॥

೨ ತತಃ ಸ ರಾಜಾ ಸಸ್ಮಾರ ಮಾಮಂತರ್ಗತಮಾನಸಃ।

೩. ಸಂಜೀವಿತಶ್ಚಾಪಿ ಮಯಾ ವಾಸವಾನುಮತೇ ತದಾ।
ಭವಿತವ್ಯಂ ತಥಾ ತಚ್ಚ ತಚ್ಛಕ್ಯಮತೋಽನ್ಯಥಾ ॥ - ೩೨/೨೧-೪೧

ರಾಜ್ಯವಾಳಿದ. ಬಹುದಕ್ಷಿಣಾಕವಾದ ಮಹಾಯಜ್ಞಗಳಿಂದ ದೇವತೆಗಳನ್ನು ಪ್ರೀತಿಗೊಳಿಸಿದ. ಪಿತೃಗಳನ್ನು (ತರ್ಪಣಾದಿಗಳಿಂದ) ತೃಪ್ತಿಗೊಳಿಸಿದ. ವಂಶೋದ್ಧಾರಕರಾದ ಬಹಳ ಪುತ್ರರನ್ನು ಪಡೆದು ಹನ್ನೊಂದು ನೂರು ವರ್ಷಗಳ ಕಾಲ ರಾಜ್ಯವಾಳಿ, ತಾನೂ ಪರಲೋಕಕ್ಕೆ ಹೋದನು.

ಆದ್ದರಿಂದ ಧರ್ಮರಾಜನೇ! ನೀನು ಕೂಡಾ ಶ್ರೀಕೃಷ್ಣ ಹಾಗೂ ವ್ಯಾಸರು ಹೇಳಿದಂತೆ ನಡೆ. ಶೋಕವನ್ನು ಬಿಡು. ನಿನ್ನ ತಾತ, ಮುತ್ತಾತರಿಂದ ಬಂದ ರಾಜ್ಯವನ್ನು ಆಳಿ, ಭಾರವನ್ನು ಹೊರು (ಜವಾಬ್ದಾರಿಯನ್ನು ನಿರ್ವಹಿಸು). ಮಹಾಯಜ್ಞಗಳನ್ನು ಮಾಡಿ ಬರುವ ಪುಣ್ಯಗಳಿಂದ ನಿನಗೆ ಇಷ್ಟವಾದ ಲೋಕಗಳನ್ನು ಹೊಂದುವೆ.

## ಸಂದೇಶಗಳು-ವಿವರಣೆಗಳು

೧. ನಾರದ ಹಾಗು ಪರ್ವತರ ಸ್ನೇಹ ಅನ್ಯಾದೃಶ. ತಾನು ಕಾಮಿಸಿದುದನ್ನು ಪರ್ವತಮುನಿಗೆ ಹೇಳಲಿಲ್ಲವೆಂಬ ಪಾರದರ್ಶಕ ನಡತೆಯನ್ನು ಮುಚ್ಚಿಟ್ಟಿದ್ದುದಕ್ಕೆ ಪರ್ವತಮುನಿಗೆ ಕೋಪ ಬಂದು, ನಾರದರಿಗೆ ಶಾಪದಲ್ಲಿ ಪರ್ಯವಸಾನವಾಯಿತು. ಪರ್ವತ ಮುನಿ ದುಡುಕಿ ಶಾಪಕೊಟ್ಟರೆ, ನಾರದರೂ ಶಾಪ ಹೊಂದಿದ ಕೋಪಕ್ಕೆ ಗುರಿಯಾಗಿ ಪ್ರತಿಶಾಪ ಕೊಡುತ್ತಾರೆ. ಪರ್ವತಮುನಿ ಚಿಕ್ಕವ. ನಾರದರ ಮೇಲೆ ಪೈಪೋಟಿ ಮಾಡಿದ್ದು ತಪ್ಪಾಗುತ್ತದೆ. ಕಿರಿಯರು ಹಿರಿಯರಿಗೆ ಶಾಪ ಕೊಡಲು ಅಧಿಕಾರವಿಲ್ಲ. ಹಿರಿಯರಾಗಿ ನಾರದರೂ ಮುಂಗೋಪಿಗಳಾದರು. ಅದೂ ತಪ್ಪೆಂದೂ ಇಬ್ಬರೂ ಪರಸ್ಪರ ಒಪ್ಪಿ ತಮ್ಮ ಶಾಪ ಹಿಂಪಡೆದುದು ಒಳ್ಳೆಯ ಮುತ್ಸದ್ದಿತನವೇ, ವಿವೇಕಿಗಳು ಹಾಗೇ ಇರುತ್ತಾರೆ, ಇರಬೇಕು.

೨. ನಾರದರು ಪತಿಯಾಗಿ, ರಾಜಕುವರಿಯನ್ನು ಮದುವೆಯಾಗುತ್ತಾರೆ. ಆಕೆ ನಾರದರು ಕಪಿಯಾದರೂ ಹಾಗೇ ಪರಿವ್ರತೆಯಾಗಿ ಗಂಡನೊಡನೆ ಬಾಳಿ ಆದರ್ಶಸತಿಯಾಗುತ್ತಾಳೆ.

೩. ಪರ್ವತಮುನಿಯನ್ನು ಅವರ ಪ್ರಾರ್ಥನೆ ಮೇರೆಗೆ ಕ್ಷಮಿಸುತ್ತಾರೆ ನಾರದರು. ಕಿರಿಯರನ್ನು ಕ್ಷಮಿಸುವ ಗುಣ ಹಿರಿಯರಲ್ಲಿರಬೇಕು. ತಪ್ಪು ಒಪ್ಪಿಕೊಳ್ಳುವ ಗುಣ ಎಲ್ಲರಲ್ಲಿರಬೇಕು.

೪. ಸೃಂಜಯರಾಜ ಪುತ್ರಸಂತಾನ ಬೇಡಿದ್ದು ಸರಿ. ಆದರೆ ಇಂದ್ರನ ಸಮನಾಗುವ ಆಸೆ, ಸಾತ್ವಿಕವಾದುದಲ್ಲ. ಆದ್ದರಿಂದಲೇ ಸ್ವೋತ್ತಮದ್ರೋಹದಿಂದ ಮಗ ಸಾಯುತ್ತಾನೆ. ಸ್ವೋತ್ತಮದ್ರೋಹದಲ್ಲಿ ಪರ್ಯವಸಾನವಾಗುವ ಆಸೆಗಳಿರಬಾರದು. ಪರ್ವತರು ಅಂತಹ ವರ ಕೊಡಲಿಲ್ಲ.

೫. ರಾಜನು ಸ್ಮರಿಸಿದಾಗ ಬರುತ್ತಾರೆ ನಾರದರು. ರಾಜಕುಮಾರನನ್ನು ಬದುಕಿಸುತ್ತಾರೆ. ನಿಬಂಧನೆಗೆ ಒಳಪಡಿಸಿ. ಮುಂದೆಂದೂ ಸೃಂಜಯನು ಅವನ ಮಗ ಇಂದ್ರನಿಗೆ ವಿರೋಧ

ಮಾಡಬಾರದು ಎಂಬ ನಿಬಂಧನೆಗೆ. ಹಾಗೆಯೇ ಮಗ ತಂದೆ ನಡೆಯುತ್ತಾರೆ. ಎಂದೂ ಸ್ವೋತ್ತಮರ ಸಾಮ್ಯಾದಿಗಳನ್ನು ಬಯಸಬಾರದು.

೬. ಸೃಂಜಯ ಹಾಗೂ ಆತನ ಮಗ ಸ್ವರ್ಣಷ್ಠೀವಿ ಕ್ಷತ್ರಧರ್ಮ ಪಾಲಕರು. ಮುಂದೆ ಸದ್ಗತಿ ಹೊಂದುತ್ತಾರೆ. ಆದ್ದರಿಂದ ಧರ್ಮರಾಜನಿಗೆ ತಿಳಿಹೇಳಲು ಈ ಉಪಾಖ್ಯಾನ ಹೊರಟಿದೆ. ಪುತ್ರಶೋಕಾದಿಗಳನ್ನು ಮರೆತು ಸ್ವಧರ್ಮಪರಿಪಾಲನೆಗೆ ಶ್ರೀಕೃಷ್ಣನು, ವ್ಯಾಸರು, ಧರ್ಮರಾಜರಿಗೆ ಉಪದೇಶಿಸುತ್ತಾರೆ. ಸ್ವಧರ್ಮ ಪರಿಪಾಲನೆಯೇ ಪ್ರತಿಯೊಬ್ಬರಿಗೂ ಧರ್ಮ.

ಇತ್ಯಾದಿ....

# ೮೦. ಪರಶುರಾಮಚರಿತೆ

ಆಚಾರ್ಯ ಭೀಷ್ಮರು ವಿಷ್ಣುಸ್ತವರಾಜವನ್ನು ಪಠಿಸಿದ ನಂತರ ದೇಹತ್ಯಾಗ ಮಾಡಿದರು. ನಂತರ ಪಾಂಡವರು ಶ್ರೀಕೃಷ್ಣನೊಡನೆ ಕುರುಕ್ಷೇತ್ರಕ್ಕೆ ಬಂದರು. ಅಲ್ಲಿ ಪರ್ವತದಾಕಾರದ ಸೈನಿಕರೇ ಮೊದಲಾದವರ ಮೃತದೇಹ, ತಲೆಬುರುಡೆ, ಕವಚ, ಶಸ್ತ್ರಗಳು ಎಲ್ಲೆಲ್ಲೋ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಅವೆಲ್ಲವನ್ನು ತೋರಿಸುತ್ತಾ ಹೊಟ ಪಾಂಡವರಿಗೆ ಶ್ರೀಕೃಷ್ಣನು '**ಪಂಚರಾಮಹ್ರದ**'ಗಳನ್ನು ದೂರದಿಂದಲೇ ತೊರಿಸಿ, 'ಪರಶುರಾಮನು ತನ್ನ ಪಿತೃಗಳಿಗೆ ಆ ಹ್ರದದಲ್ಲಿದ್ದ ರಕ್ತದಿಂದ ತರ್ಪಣ ಕೊಟ್ಟುದುದನ್ನು ಹೇಳಿದನು[೧]. ಪರಶುರಾಮನು ಇಪ್ಪತ್ತೊಂದು ಬಾರಿ ಭೂಮಿಯನ್ನು ಕ್ಷತ್ರಿಯರಹಿತರನ್ನಾಗಿ ಮಾಡಿದರ ಬಗ್ಗೆ ಪ್ರಶ್ನಿಸುತ್ತಾನೆ ಧರ್ಮರಾಜ. ಭೂಮಿಯೆಲ್ಲ ಕ್ಷತ್ರಿಯರಹಿತರಾದಲ್ಲಿ ಮತ್ತೆ ಕ್ಷತ್ರಿಯ ವಂಶ ಹೇಗೆ ಮುಂದುವರೆಯಿತು? ಪರಶುರಾಮರಿಂದ ಕ್ಷತ್ರಿಯ ಕುಲವು ಹೇಗೆ ನಾಶವಾಯಿತು? ಕುರುಕ್ಷೇತ್ರ ಯುದ್ಧಪೂರ್ವದಲ್ಲೂ ಭೂಮಿ ಕ್ಷತ್ರಿಯರಿಂದ ತುಂಬಿತ್ತಲ್ಲಾ?[೨]

ಧರ್ಮರಾಜನ ಪ್ರಶ್ನೆಗಳಿಗೆ ಉತ್ತರವೀಯುತ್ತಾ, ಶ್ರೀಕೃಷ್ಣನು ಪರಶುರಾಮ ಚರಿತೆಯನ್ನು ವಿವರಿಸಿದನು.

'ಎಲೈ ಕೌಂತೇಯನೇ! (ಧರ್ಮರಾಜನೇ!) ಮಹರ್ಷಿಗಳು ಪರಶುರಾಮನ ಚರಿತೆಯನ್ನು ಹೇಳುವಾಗ ನಾನು ಕೇಳಿದುದನ್ನು ನಿನಗೆ ಹೇಳುತ್ತೇನೆ.

**ಜಹ್ನು** ರಾಜನ ಮಗ **ಅಜಹ್ನು**. ಇವನ ಮಗ **ವಲ್ಲವ**. ಈತನ ಪುತ್ರ ಧರ್ಮಜ್ಞನಾದ **ಕುಶಿಕರಾಜ**. ಈತನು ಭೂಮಿಯಲ್ಲಿ ಇಂದ್ರನಿಗೆ ಸಮನಾಗಿದ್ದ ಇವನು [೩]ಯುದ್ಧದಲ್ಲಿ

---

೧ ಅಮೀ ರಾಮಹ್ರದಾಃ ಪಂಚ ದೃಶ್ಯಂತೇ ಪಾರ್ಥ ದೂರತಃ।
ಯೇಷು ಸಂತರ್ಪಯಾಮಾಸ ಪೂರ್ವಾನ್ ಕ್ಷತ್ರಿಯಶೋಣಿತೈಃ॥
ತ್ರಿಸಪ್ತಕೃತ್ವೋ ವಸುಧಾಂ ಕೃತ್ವಾ ನಿಃ ಕ್ಷತ್ರಿಯಾಂ ಪ್ರಭುಃ।
ಇಹೇದಾನೀಂ ತತೋ ರಾಮಃ ಕರ್ಮಣೋ ವಿರರಾಮ ಹ॥ – ೪೮/೮,೯

೨ ಮಹಾತ್ಮನಾ ಭಗವತಾ ರಾಮೇಣ ಯದುಪುಂಗವ।
ಕಥಂ ಉತ್ಸಾದಿತಂ ಕ್ಷತ್ರಂ ಕಥಂ ವೃದ್ಧಿಂ ಪುನರ್ಗತಮ್॥
ಮಹಾಭಾರತಯುದ್ಧೇ ಹಿ ಕೋಟಿಶಃ ಕ್ಷತ್ರಿಯಾ ಹತಾಃ।
ತಥಾ ಭೂಚ್ಚ ಮಹೀ ಕೀರ್ಣಾ ಕ್ಷತ್ರಿಯೈರ್ವದತಾಂ ವರ॥ – ೪೮/೧೨,೧೩

೩ ಉಗ್ರಂ ತಪಃ ಸಮಾತಿಷ್ಠತ್ ಸಹಸ್ರಾಕ್ಷಸಮೋ ಭುವಿ।
ಪುತ್ರಂ ಲಭೇಯಮಜಿತಂ ತ್ರಿಲೋಕೇಶ್ವರಮಿತ್ಯುತ॥
ತಮುಗ್ರತಪಸಂ ದೃಷ್ಟ್ವಾ ಸಹಸ್ರಾಕ್ಷಃ ಪುರಂದರಃ।
ಸಮರ್ಥಂ ಪುತ್ರಜನನೇ ಸ್ವಯಮೇವೇತ್ಯ ಭಾರತ॥
ಪುತ್ರತ್ವಮಗಮದ್ ರಾಜಂಸ್ತಸ್ಯ ಲೋಕೇಶ್ವರೇಶ್ವರಃ।
ಗಾಧಿರ್ನಾಮಾಭವತ್ ಪುತ್ರಃ ಕೌಶಿಕಃ ಪಾಕಶಾಸನಃ॥ – ೪೯/೪-೬

ಎಂದೂ ಸೋಲದ ತ್ರಿಲೋಕಪತಿಯಾದ ಪುತ್ರನನ್ನು ಪಡೆಯಲು ಉಗ್ರವಾದ ತಪಸ್ಸನ್ನು ಆರಂಭಿಸಿದನು. ಇದನ್ನು ಗಮನಿಸಿದ ಪುರಂದರ, ಇಂದ್ರನು ಇಂತಹ ಪುತ್ರ ಹೊಂದಲು **ಕುಶಿಕನು** ಯೋಗ್ಯನೆಂದು ಭಾವಿಸಿ, ತಾನೇ ಅವನಿಗೆ (ಕುಶಿಕ)ನಿಗೆ ಮಗನಾಗಿ ಜನಿಸಿದನು. ಆಗ ಆತನ ಹೆಸರು **ಗಾಧಿ** ಎಂದಿತ್ತು. ಕುಶಿಕನ ಮಗನಾದ್ದರಿಂದ ಕೌಶಿಕನೆಂದೂ ಹೆಸರಾದನು.

ಆ ಗಾಧಿಗೆ '**ಸತ್ಯವತೀ**' ಎಂಬ ಮಗಳಿದ್ದಳು. ಇವಳನ್ನು ಗಾಧಿಯು **ಕವಿ(ಶುಕ್ರ)** ಪುತ್ರನಾದ **ಋಚೀಕನಿಗೆ** ಕೊಟ್ಟು ವಿವಾಹ ಮಾಡಿದನು. ಒಮ್ಮೆ ಸಂತುಷ್ಟರಾದ ಋಚೀಕರು ತನ್ನ ಪತ್ನಿಗೆ ಹಾಗೂ ತನ್ನ ಅತ್ತೆಗೆ ಶ್ರೇಷ್ಠ ಬ್ರಾಹ್ಮಣ ಹಾಗೂ ಕ್ಷತ್ರಿಯ ಪುತ್ರಸಂತಾನವಾಗುವ ಉದ್ದೇಶದಿಂದ ಎರಡು ಪ್ರತ್ಯೇಕ ಚರುಗಳನ್ನು ಅಭಿಮಂತ್ರಿಸಿ, ಸತ್ಯವತಿಗೆ ಹೇಳಿ ಕೊಟ್ಟರು. ತಾನು ತಿಳಿಸಿದಂತೆಯೇ ಚರು ಭಕ್ಷಣ ಮಾಡಲು ತಿಳಿಸಿ ಹೇಳಿದರೂ ಸತ್ಯವತಿಯ [೧]ತಾಯಿಯು ತನ್ನ ಚರುವನ್ನು ಮಗಳಿಗೂ ಮಗಳ ಚರುವನ್ನು ತಾನೂ ಭಕ್ಷಿಸಿದಳು. ತಾಯಿಯನ್ನು ಮಗಳು ತಡೆಯದಾದಳು. ಈ ವಿಷಯವನ್ನು ಧ್ಯಾನ ದೃಷ್ಟಿಯಿಂದ ತಿಳಿದ ಋಚೀಕರು ತನ್ನ ಪತ್ನಿಗೆ [೨]ಚರು ವ್ಯತ್ಯಾಸದಿಂದ ನಿನಗೆ ಕ್ರೂರಕರ್ಮಿಯೂ, ಮಹಾಬಲಶಾಲಿಯೂ ಆದ ಮಗನು ಜನಿಸುವನು. ನಿನ್ನ ತಾಯಿಗೆ ಬ್ರಾಹ್ಮತೇಜಸ್ಸಿನ ಮಗನು ಜನಿಸುವನೆಂದು ಹೇಳಿದಾಗ ಸತ್ಯವತಿಯು ನಡುಗುತ್ತಾ ಪತಿಯ ಪಾದಗಳಿಗೆರಗಿ ಹಾಗಾಗದಿರಲಿ, ದಯವಿಟ್ಟು ತನಗೆ ಶಮಾತ್ಮಕ (ಶಾಂತಸ್ವರೂಪಿ, ಬ್ರಹ್ಮನಿಷ್ಠನಾದ) - ತ್ರಿಕರಣದಲ್ಲೂ ಒಂದೇ ರೀತಿಯಿರುವ (ಆರ್ಜವ) ಮಗನೇ ಜನಿಸಲಿ ಎಂದು ಪರಿಪರಿಯಿಂದ ಬೇಡಿಕೊಂಡಾಗ ಋಚೀಕರು ತಥಾಸ್ತು ಎಂದರು. ಮಗನ ಬದಲಾಗಿ ಮೊಮ್ಮಗನು ಕ್ಷಾತ್ರ ತೇಜಸ್ಸಿನವನಾಗುತ್ತಾನೆ ಎಂದು ಅನುಗ್ರಹಿಸಿದರು.

---

೧ ಮಾತಾ ತು ತಸ್ಯಾಃ ಕೌಂತೇಯ ದುಹಿತ್ರೇ ಸ್ವಂ ಚರುಂ ದದೌ।
ತಸ್ಯಾಶ್ಚರುಮಥಾಜ್ಞಾತಮಾತ್ಮಸಂಸ್ಥಂ ಚಕಾರ ಹ॥ - ೪೯/೧೫

೨ ಮಾತ್ರಾಽಸಿ ವ್ಯಂಸಿತಾ ಭದ್ರೇ ಚರುವ್ಯತ್ಯಾಸಹೇತುನಾ।
ಜನಿಷ್ಯತೇ ಹಿ ತೇ ಪುತ್ರಃ ಕ್ರೂರಕರ್ಮಾ ಮಹಾಬಲಃ॥
ಜನಿಷ್ಯತೇ ಹಿ ತೇ ಭ್ರಾತಾ ಬ್ರಹ್ಮಭೂತಸ್ತಪೋಧನಃ।
ವಿಶ್ವಂ ಹಿ ಬ್ರಹ್ಮತಪಸಾ ಮಯಾ ತತ್ರ ಸಮರ್ಪಿತಮ್॥
ಕ್ಷತ್ರವೀರ್ಯಂ ಚ ಸಕಲಂ ತವ ಮಾತ್ರೇ ಸಮರ್ಪಿತಮ್।
ವಿಪರ್ಯಯೇಣ ತೇ ಭದ್ರೇ ನೈತದೇವಂ ಭವಿಷ್ಯತಿ।
ಮಾತುಸ್ತೇ ಬ್ರಾಹ್ಮಣೋ ಭೂಯಾತ್ ತವ ಚ ಕ್ಷತ್ರಿಯಃ ಸುತಃ॥
ಸೈವಮುಕ್ತಾ ಮಹಾಭಾಗಾ ಭರ್ತ್ರಾ ಸತ್ಯವತೀ ತದಾ।
ಪಪಾತ ಶಿರಸಾ ತಸ್ಮೈ ವೇಪಂತೀ ಚಾಬ್ರವೀದಿದಮ್॥
ಕಾಮಮೇವಂ ಭವೇತ್ ಪೌತ್ರೋ ಮಮೇಹ ತವ ಚೈವ ಹ।
ಶಮಾತ್ಮಕಮೃಜುಂ ಪುತ್ರಂ ಲಭೇಯಂ ಜಪತಾಂ ವರ॥
ಪುತ್ರೇ ನಾಸ್ತಿ ವಿಶೇಷೋ ಮೇ ಪೌತ್ರೇ ವಾ ವರವರ್ಣಿನಿ।
ಯಥಾ ತ್ವಯೋಕ್ತಂ ತು ವಚಸ್ತಥಾ ಭದ್ರೇ ಭವಿಷ್ಯತಿ॥ - ೪೯/೧೮-೨೦,೨೬,೨೭

[1]ಪತಿಯ ಮರು ಆಶೀರ್ವಾದದಿಂದ ತಪೋನಿರತ ಹಾಗೂ ಶಾಂತಸ್ವಭಾವದ 'ಜಮದಗ್ನಿ' ಋಷಿಗಳು ಮಗನಾಗಿ ಜನಿಸಿದರು, ಸತ್ಯವತಿಗೆ. ಗಾಧಿರಾಜನಿಗೆ ಬ್ರಹ್ಮರ್ಷಿ ಸಮಾನನಾಗಿ ಪರಿಗಣಿಸಲ್ಪಡುವ ವಿಶ್ವನಾಮಕ ಹರಿಯ ಸನ್ನಿಧಾನ ಪಾತ್ರರಾದ ವಿಶ್ವಾಮಿತ್ರರು ಮಗನಾಗಿ ಜನಿಸಿದರು. ಜಮದಗ್ನಿಗಳು ಸರ್ವವಿದ್ಯಾಪಾರಂಗತರೂ, ಧನುರ್ವೇದ ಪಾರಂಗತರೂ ಆದ ಪರಶುರಾಮನನ್ನು ಪುತ್ರನನ್ನಾಗಿ ಪಡೆದರು.

ಪರಶುರಾಮನು (ಲೋಕದೃಷ್ಟಿಯಲ್ಲಿ) ಶಿವನನ್ನು ಕುರಿತು ಗಂಧಮಾದನಪರ್ವತದಲ್ಲಿ ತಪಸ್ಸನ್ನು ಮಾಡಿ, ಸಂತೋಷಪಡಿಸಿ ಅಸ್ತ್ರಗಳನ್ನೂ ಹಾಗೂ ಮಹಾತೇಜಸ್ಸುಳ್ಳ ಪರಶು(ಕೊಡಲಿ)ಯನ್ನೂ ಪಡೆದನು. ಆ ಪರಶುವಿನಿಂದ ಅವನು ಲೋಕದಲ್ಲಿ ಅಪ್ರತಿಮನಾದನು.

ಇದೇ ಸಮಯದಲ್ಲಿ ಕೃತವೀರ್ಯ ಪುತ್ರನಾದ ಅರ್ಜುನನೆಂಬ ಹೈಹಯಕುಲದ ಕ್ಷತ್ರಿಯನು (ಚಂದ್ರವಂಶದ) ತನ್ನ ಬಾಹುಬಲ, ಅಸ್ತ್ರಬಲ, ಧರ್ಮಬಲಗಳಿಂದ ಸಮಗ್ರ ಭೂಮಿಯನ್ನೇ ಗೆದ್ದಿದ್ದನು. ಅರ್ಜುನ ಸಾವಿರ ಬಾಹುಗಳಿಂದ ಮೆರೆದಿದ್ದ. ಆತನು ಒಮ್ಮೆ ಬಾಯಾರಿ ಬೇಡಿಬಂದ ಅಗ್ನಿಗೆ ತಾನು ಪ್ರಯೋಗಿಸಿದ ಬಾಣದಿಂದ ಗ್ರಾಮ, ಪುರ, ಪಟ್ಟಣಗಳನ್ನು ಕೊಟ್ಟಿದ್ದ. ಅಗ್ನಿ ಅವೆಲ್ಲವನ್ನೂ ದಹಿಸಿ ಜ್ವಲಿಸಿದ. ಅಗ್ನಿ ಕಾರ್ತವೀರ್ಯಾರ್ಜುನನ ಪರ್ವತ ಹಾಗೂ ವನಗಳನ್ನೂ ಸುಟ್ಟು ಹಾಕಿದ್ದನು. [2]ಅಲ್ಲದೆ ಅರ್ಜುನನ ಜೊತೆಗೆ ಅಗ್ನಿಯು ವಸಿಷ್ಠರ ಆರಣ್ಯಾಶ್ರಮವನ್ನೂ ಸುಟ್ಟು ಹಾಕಿದ್ದ. ಇದರಿಂದ ಖತಿಗೊಂಡ ವಸಿಷ್ಠರು ಅರ್ಜುನನಿಗೆ 'ನಿನ್ನೀ ಮೋಹಕವಾದ ಕಾರ್ಯ(ಮಿಥ್ಯಾಜ್ಞಾನ, ದರ್ಪಮುಕ್ತ)ದಿಂದಾಗಿ ಮುಂದೆ ಪರಶುರಾಮನು ನಿನ್ನ ಸಹಸ್ರಬಾಹುಗಳನ್ನು ಕತ್ತರಿಸುವನು' ಎಂದು ಶಾಪ ಕೊಟ್ಟನು.

---

೧ ತತಃ ಸತ್ಯವತೀ ಪುತ್ರಂ ಜನಯಾಮಾಸ ಭಾರ್ಗವಮ್ ।
ತಪಸ್ಯಭಿರತಂ ಶಾಂತಂ ಜಮದಗ್ನಿಂ ಶಮಾತ್ಮಕಮ್ ॥
ವಿಶ್ವಾಮಿತ್ರಂ ಚ ದಾಯಾದಂ ಗಾಧಿಃ ಕುಶಿಕನಂದನಃ ।
ಪ್ರಾಪ ಬ್ರಹ್ಮರ್ಷಿಸಮಿತಂ ವಿಶ್ವೇನ ಬ್ರಹ್ಮಣಾ ಯುತಮ್ ॥
ಆರ್ಚೀಕೋ ಜನಯಾಮಾಸ ಜಮದಗ್ನಿಃ ಸುದಾರುಣಮ್ ।
ಸರ್ವವಿದ್ಯಾಂತಗಂ ಶ್ರೇಷ್ಠಂ ಧನುರ್ವೇದೇ ಚ ಪಾರಗಮ್ ।
ರಾಮಂ ಕ್ಷತ್ರಿಯಹಂತಾರಂ ಪ್ರದೀಪ್ತಮಿವ ಪಾವಕಮ್ ॥ - ೪೯/೨೮-೩೦

೨ ಸ ಶೂನ್ಯಮಾಶ್ರಮಾರಣ್ಯಂ ಆಪವಸ್ಯ ಮಹಾತ್ಮನಃ ।
ದದಾಹ ಪವನೇನೇದ್ಧಶ್ಚಿತ್ರಭಾನುಃ ಸಹೈಹಯಃ ॥
ಆಪವಸ್ತಂ ತತೋ ರೋಷಾಚ್ಛಶಾಪಾರ್ಜುನಮಚ್ಯುತ ।
ದಗ್ಧೇ ಶ್ರಮೇ ಮಹಾರಾಜ ಕಾರ್ತವೀರ್ಯೇಣ ವೀರ್ಯವಾನ್ ।
ತ್ವಯಾ ನ ವರ್ಜಿತಂ ಮೋಹಾದ್ ಯಸ್ಮಾದ್ ವನಮಿದಂ ಮಮ ।
ದಗ್ಧಂ ತಸ್ಮಾದ್ ರಣೇ ರಾಮೋ ಬಾಹೂಂಸ್ತೇ ಛೇತ್ಸ್ಯತೇಽರ್ಜುನ ॥ -೪೯/೩೮-೪೦

[೧]ಅರ್ಜುನನುಬಲಿಷ್ಠನಾಗಿದ್ದರೂ, ಶಾಂತನೂ, ಬ್ರಾಹ್ಮಣವತ್ಸಲನೂ, ಶರಣಾಗತವತ್ಸಲನೂ, ದಾನಿಯೂ, ಶೂರನೂ ಆಗಿದ್ದನು. ಆದರೆ ಆತನ ಮಕ್ಕಳು ಕ್ರೂರಿಗಳೂ, ದರ್ಪಿಷ್ಠರೂ, ಆಗಿ ಪಿತೃವಧೆಗೆ(ಅರ್ಜುನನ) ಕಾರಣೀಭೂತರಾದರು. ಅವರು ಕಾರ್ತವೀರ್ಯನಿಗೆ ತಿಳಿಯದೆ ಜಮದಗ್ನಿಯ ಧೇನುವಿನ ಕರುವನ್ನು ಎಳೆದು ತಂದರು.

[೨]ಇದು ಗೊತ್ತಾದ ಕೂಡಲೇ ಪರಶುರಾಮನು ಅರ್ಜುನನ ಬಾಹು ಕತ್ತರಿಸಿ ಅಳುತ್ತಿದ್ದ ಕರುವನ್ನು ವಾಪಸು ತಂದರು. ನಂತರ ಅರ್ಜುನನ ಮಕ್ಕಳೆಲ್ಲ (ಬುದ್ಧಿಹೀನರಾದ) ಪರಶುರಾಮನು ಆಶ್ರಮದಲ್ಲಿಲ್ಲದಿದ್ದಾಗ ಹೋಗಿ ಪತ್ನಿಯಾದ ರೇಣುಕೆ ಹಾಗೂ ಇತರ ಆಶ್ರಮವಾಸಿಗಳ ಎದುರೇ ಜಮದಗ್ನಿಯ ಶಿರಚ್ಛೇದ ಮಾಡಿದರು. ಮನೆಗೆ ಬಂದ ಪರಶುರಾಮನು ತಂದೆಯ ಸಂಹಾರವಾದುದನ್ನು ಕೇಳಿ ಪ್ರಲಯಕಾಲಾನಲನಾದನು.

ಧನುರ್ವೇದದಲ್ಲಿ ಅದ್ವಿತೀಯನೂ, ದಿವ್ಯಾಸ್ತ್ರಗಳಿಂದ ಅಲಂಕೃತನೂ, ಅರ್ಧಚಂದ್ರಬಿಂದದಂತಿದ್ದ ಪರಶುವನ್ನು ಹಿಡಿದು ಭೂಮಿಯನ್ನು ಕ್ಷತ್ರಿಯರಹಿತರನ್ನಾಗಿಸುವೆ ಎಂದು ಶಪಥ ಮಾಡಿದನು. ಪ್ರತಿಜ್ಞೆಯ ಮೊದಲ ಭಾಗವಾಗಿ ಅರ್ಜುನನ ಮಕ್ಕಳನ್ನು (ಸಾವಿರ) ಸಂಹರಿಸಿದನು. ನಂತರ ಭೂಮಿಯನ್ನು ಕ್ಷತ್ರಿಯರಹಿತರನ್ನಾಗಿ ಮಾಡಿ ಕೃಪಾವಿಶಿಷ್ಟನಾಗಿ ಕಾಡಿಗೆ ಹೊರಟು ಹೋದನು.

ನಂತರ ಹಲವು ಸಾವಿರ ವರ್ಷಗಳು ಸಂದವು. ವಿಶ್ವಾಮಿತ್ರನ ಕಾತ್ರ(ಮೊಮ್ಮಗ), ರೈಭ್ಯಪುತ್ರನಾದ [೩]ಪರಾವಸು ಜನಸಂಸತ್ತಿನಲ್ಲಿ(ಸಭೆ) ಪರಶುರಾಮನನ್ನು ಹೀಗೆ ಆಕ್ಷೇಪಿಸಿದನು.

---

೧ ಅರ್ಜುನಸ್ತು ಮಹಾರಾಜ ಬಲೀ ನಿತ್ಯಂ ಶಮಾತ್ಮಕಃ।
ಬ್ರಹ್ಮಣ್ಯಶ್ಚ ಶರಣ್ಯಶ್ಚ ದಾತಾ ಶೂರಶ್ಚ ಭಾರತ ॥
ತಸ್ಯ ಪುತ್ರಾಃ ಸುಬಲಿನಃ ಶಾಪೇನಾಸನ್ ಪಿತುರ್ವಧೇ।
ನಿಮಿತ್ತಮವಲಿಪ್ತಾ ವೈ ನೃಶಂಸಾಶ್ಚೈವ ನಿತ್ಯದಾ ॥ - ೪೯/೪೧,೪೨

೨ ತತೋಽರ್ಜುನಸ್ಯ ಬಾಹೂಂಸ್ತು ಛಿತ್ತ್ವಾ ವೈ ಪೌರುಷಾನ್ವಿತಃ।
ತಂ ರುವಂತಂ ತತೋ ವತ್ಸಂ ಜಾಮದಗ್ನ್ಯಃ ಸ್ವಮಾಶ್ರಮಮ್ ॥
ತತಃ ಪಿತೃವಧಾಮರ್ಷಾದ್ ರಾಮಃ ಪರಮಮನ್ಯುಮಾನ್।
ನಿಃಕ್ಷತ್ರಿಯಾಂ ಪ್ರತಿಶ್ರುತ್ಯ ಮಹೀಂ ಶಸ್ತ್ರಮಗೃಹ್ಣತ ॥ - ೪೯/೪೪,೪೯

೩. ವಿಶ್ವಾಮಿತ್ರಸ್ಯ ಪೌತ್ರಸ್ತು ರೈಭ್ಯಪುತ್ರೋ ಮಹಾತಪಾಃ।
ಪರಾವಸುರ್ಮಹಾರಾಜ ಕ್ಷಿಪ್ತ್ವಾಹ ಜನಸಂಸದಿ ॥
ಸ ಪುನಃ ಕ್ಷತ್ರಿಯಶತೈಃ ಪೃಥಿವೀಮನುಸಂತತಾಮ್।
ಪರಾವಸೋಸ್ತದಾ ಶ್ರುತ್ವಾ ಶಸ್ತ್ರಂ ಜಗ್ರಾಹ ಭಾರ್ಗವಃ ॥
ತ್ರಿಸಪ್ತಕೃತ್ವಃ ಪೃಥಿವೀಂ ಕೃತ್ವಾ ನಿಃಕ್ಷತ್ರಿಯಾಂ ಪ್ರಭುಃ।
ದಕ್ಷಿಣಾಮಶ್ವಮೇಧಾಂತೇ ಕಶ್ಯಪಾಯಾದದತ್ ತತಃ ॥
ಗಚ್ಛಂ ಪಾರಂ ಸಮುದ್ರಸ್ಯ ದಕ್ಷಿಣಸ್ಯ ಮಹಾಮುನೇ।
ನ ತೇ ಮದ್ವಿಷಯೇ ರಾಮ ವಸ್ತವ್ಯಮಿಹ ಕರ್ಹಿಚಿತ್ ॥ - ೪೯/೫೪,೫೭,೬೧,೬೩

೧. **ಯಯಾತಿ ಪತನ** ಎಂಬ ಸ್ಥಳದಲ್ಲಿ ಸೇರಿದ್ದ **ಪ್ರತರ್ದನ** ಮೊದಲಾದ ಕ್ಷತ್ರಿಯರನ್ನು ಏಕೆ ಕೊಲ್ಲಲಿಲ್ಲ?

೨. ರಾಮನೇ ನಿನಗೆ ಕ್ಷತ್ರಿಯರ ಭಯವಿದೆ. ನಿನ್ನ ಪ್ರತಿಜ್ಞೆಯನ್ನು ಸುಮ್ಮನೆ ಜನರೆದುರು ಕೊಚ್ಚಿಕೊಳ್ಳುತ್ತಿದ್ದೀಯಾ. ಹೆದರಿ ನೀನು ಪರ್ವತ ಸೇರಿದ್ದೀಯಾ.

ಆ ಆಕ್ಷೇಪದ ನುಡಿಗಳನ್ನು ಕೇಳಿ ಸಹಿಸದೆ ರಾಮನು ಮತ್ತೆ ಕ್ಷತ್ರಿಯರ ಹುಟ್ಟಡಗಿಸಲು ಶಸ್ತ್ರಗ್ರಹಣ ಮಾಡಿ ಉಳಿದ ನೂರಾರು ಕ್ಷತ್ರಿಯರಾಜರನ್ನು ಅವರ ಸಂತಾನ, ಬಾಲಕರನ್ನು ಸಂಹರಿಸಿದನು. ಹುಟ್ಟಿದ, ಹುಟ್ಟುವ ಮಕ್ಕಳನ್ನೂ ಸಂಹರಿಸಿದನು. ಆಗ ಕೆಲವು ಕ್ಷತ್ರಿಯ ಸ್ತ್ರೀಯರು ಮಾತ್ರ ಹೇಗೋ ತಮ್ಮ ಮಕ್ಕಳನ್ನು ರಕ್ಷಿಸಿದರು. ಆದರೂ ಪರಶುರಾಮನು ಇಪ್ಪತ್ತೊಂದು ಬಾರಿ ಭೂಮಿಯನ್ನು ಸುತ್ತಿ ಕ್ಷತ್ರಿಯರಹಿತರನ್ನಾಗಿಸಿ ಅಶ್ವಮೇಧಯಾಗ ಮಾಡಿ ಸಮಗ್ರಭೂಮಿಯನ್ನು ಕಶ್ಯಪರಿಗೆ ದಾನ ಮಾಡಿದನು.

ಭೂದಾನ ಪಡೆದ ಕಶ್ಯಪರು ಪರಶುರಾಮನನ್ನು 'ನೀನು ದಕ್ಷಿಣಸಮುದ್ರದತೀರಕ್ಕೆ ಹೋಗು. ರಾಮನೇ! ನನ್ನ ರಾಜ್ಯದಲ್ಲಿ ನೀನು ಯಾವುದೇ ಕಾರಣಕ್ಕೂ ವಾಸಿಸಬೇಡ' ಎಂದು ಹೇಳಿದಾಗ ಪರಶುರಾಮನ ಭಯದಿಂದ ಸಮುದ್ರರಾಜನು ಪಶ್ಚಿಮಸಮುದ್ರದಲ್ಲಿ ಕನ್ಯಾತೀರ್ಥದ ಸಮೀಪದಲ್ಲಿ ಆತನು(ಪರಶುರಾಮ) ಬಿಟ್ಟ ಬಾಣವು ಶೂರ್ಪಾಕಾರ(ಮರದ ಆಕಾರ) ಬಿದ್ದ ನಿಮಿತ್ತ ಆದೇಶದವರೆಗೆ ಭೂಮಿಯನ್ನು ನಿರ್ಮಾಣ ಮಾಡಿ ಸಮರ್ಪಿಸಿದನು. ದಾನ ಪಡೆದ ಕಶ್ಯಪರು ಭೂಮಿಯೆಲ್ಲವನ್ನೂ ಬ್ರಾಹ್ಮಣರಿಗೆ ದಾನ ಮಾಡಿ ಬಿಟ್ಟು ತಾವು ಮಹಾರಣ್ಯಕ್ಕೆ ತಪಸ್ಸಿಗೆ ತೆರಳಿದರು.

ನಂತರ (ಭೂಮಿಯು ರಾಜರಹಿತವಾದ್ದರಿಂದ) ಶೂದ್ರರು, ವೈಶ್ಯರು ಸ್ವೇಚ್ಛಾಚಾರಿಗಳಾಗಿ ಬ್ರಾಹ್ಮಣರ ಪತ್ನಿಯರನ್ನು ಸಹವಾಸ ಮಾಡಿದರು. ಜೀವಲೋಕದಲ್ಲಿ ಅರಾಜಕತೆಯುಂಟಾಯಿತು. ಬಲಿಷ್ಠರದೇ ರಾಜ್ಯ. ಯಾರಿಗೂ ತಮ್ಮ ಧನ-ಧಾನ್ಯಗಳ ಒಡೆಯತನ ಇರದಾಯಿತು. ಬ್ರಾಹ್ಮಣರು ಕುಡುಕರಾದರು. ಕೆಲವು ಸ್ವಯಂ ಪಂಡಿತರೆಂದು ಭ್ರಮಿಸಿದರು. ಚಾತುರ್ವರ್ಣಗಳೂ ದುರ್ಮಾರ್ಗಿಗಳಾದರು. ದುರ್ಬಲಪ್ರಜೆಗಳು ಪ್ರಾಣ ಕಳೆದುಕೊಂಡರು. ಬ್ರಾಹ್ಮಣರು ಪಾಷಂಡರಾದರು.

ಕೆಲವೇ ಕೆಲವು ಸದ್ಬ್ರಾಹ್ಮಣರು ಕೊಲೆಗೈಯಲ್ಪಟ್ಟರು. ದುರ್ಜನರು ನಿರ್ಭಯರಾದರು. ಎಲ್ಲೋ ಅಲ್ಲಲ್ಲಿದ್ದ ಆಶ್ರಮವಾಸಿಗಳಾದ ತಪೋನಿರತರಾದ ಬ್ರಾಹ್ಮಣರು, ಗೋವುಗಳೂ, ಬಾಲಕರೂ, ವೃದ್ಧರೂ ಸ್ತ್ರೀಯರೂ ದುರ್ಜನರಿಂದ ಹತರಾದರು.

ರಾಜ್ಯದಲ್ಲಿ ಸತ್ತರ್ಕ, ವೇದವಿದ್ಯಾ, ವಾಣಿಜ್ಯನೀತಿಗಳಿಗೆ ಯಾವುದಕ್ಕೂ ಬೆಲೆ ಇರಲಿಲ್ಲ. ಬ್ರಾಹ್ಮಣರು ವ್ರತಭ್ರಷ್ಟರಾದರು. ಅಧಮರಾದ ವೈಶ್ಯ, ಶೂದ್ರರು ಉನ್ನತಸ್ಥಾನ ಅಲಂಕರಿಸಿದರು. ಎಲ್ಲೇ ನೋಡಿದರೂ, ಮ್ಲೇಚ್ಛರೇ ಕಾಣುತ್ತಿದ್ದರು.

ಹೀಗೆ ಅರಾಜಕವಾದ ಭೂಮಿ ರಸಾತಳ ಸೇರಿತು (ಭೂದೇವಿ ಭೂಮಿಯಿಂದ ಮರೆಯಾಗಿ) ಮುಳುಗುವ ಭೂಮಿಯನ್ನು ಕಶ್ಯಪರು ತಮ್ಮ ತೊಡೆ(ಯಲ್ಲಿ)ಯಿಂದ ಧರಿಸಿದರು. ಆದ್ದರಿಂದ ಭೂಮಿಯೂ '**ಉರ್ವೀ**' ಹೆಸರು ಪಡೆಯಿತು. [೧]ಭೂಮಿ ತನ್ನ ರಕ್ಷಣೆಗೆ ಬಾಹುಶಾಲಿಗಳಾದ (ಬಲಶಾಲಿ) ಅಲ್ಲಲ್ಲಿ ಗುಪ್ತವಾಗಿ ರಕ್ಷಿತರಾದ ಕ್ಷತ್ರಿಯರನ್ನು ದಯಪಾಲಿಸಲು ಬೇಡಿಕೊಂಡಳು.

೧. ಕಶ್ಯಪರೇ (ಬ್ರಾಹ್ಮಣಶ್ರೇಷ್ಠರೇ) ನಾನು ಹೈಹಯ ಕುಲದ (ಕೆಲ) ಕ್ಷತ್ರಿಯರನ್ನು ರಹಸ್ಯವಾಗಿ ರಕ್ಷಿಸಿದ್ದೇನೆ. ಅವರು ನನ್ನನ್ನು ರಕ್ಷಿಸಲಿ.

i. ಪೌರವವಂಶದಲ್ಲಿ ಜನಿಸಿದ **ವಿಡೂರಥನ** ಪುತ್ರ ಕರಡಿಗಳಿಂದ ಪೋಷಿಸಲ್ಪಟ್ಟ ಒಬ್ಬ ಕ್ಷತ್ರಿಯ ಋಕ್ಷವಾನ್ ಪರ್ವತದಲ್ಲಿದ್ದಾನೆ.

ii. ಅಮಿತಪರಾಕ್ರಮಿಯಾದ, ಯಜ್ಞಶೀಲನಾದ, ಪರಾಶರರ ಅನುಕಂಪಕ್ಕೆ ಪಾತ್ರರಾದ **ಸೌದಾಸನ** ಪುತ್ರ ಪರಾಶರರಿಂದ ರಕ್ಷಿತನಾಗಿದ್ದಾನೆ. ಇವನು ಪರಾಶರರ ಸರ್ವಸೇವೆ ಮಾಡುತ್ತಿದ್ದಾನೆ. ಅವನು ಸರ್ವಕರ್ಮ.

iii. **ಶಿಬಿ**ಯ ಪುತ್ರ, **ಗೋಪತಿ**, ಕಾಡಿನಲ್ಲಿ ಗೋವುಗಳಿಂದ ರಕ್ಷಿತನಾಗಿದ್ದಾನೆ.

iv. ಪ್ರತರ್ದನನ ಮಗ **ವತ್ಸ** - ಗೋಶಾಲೆಯಲ್ಲಿ ಕರುಗಳಿಂದ ಪೋಷಿತನಾಗಿದ್ದಾನೆ.

v. ದಧಿವಾಹನನ ಮೊಮ್ಮಗ **ದಿವ್ಯರಥನ** ಮಗನಾದ **ಅಂಗನು** ಗಂಗಾತೀರದಲ್ಲಿ ಗೌತಮರಿಂದ ರಕ್ಷಿತವಾಗಿದ್ದಾನೆ.

vi. ಮಹಾಬಾಹುವೂ, ಮಹಾನುಭಾವನೂ ಆದ ಐಶ್ವರ್ಯವಂತನಾದ **ಬೃಹದ್ರಥನು** **ಗೃಧ್ರಕೂಟಪರ್ವತ**ದಲ್ಲಿ **ಗೋಲಾಂಗೂಲ** ಎಂಬ ಕಪಿಗಳಿಂದ ರಕ್ಷಿತನಾಗಿದ್ದಾನೆ.

vii. ಮರುತ್ತನ ವಂಶದ **ತುರ್ವಸು**ವಿನ ಮೂವರು ಕ್ಷತ್ರಿಯರು ಸಮುದ್ರದಲ್ಲಿ ರಕ್ಷಿತರಾಗಿದ್ದಾರೆ.

ಇವರೇ ಅಲ್ಲಲ್ಲಿ ಪ್ರಸಿದ್ಧರಾಗಿದ್ದಾರೆ. ಇವರೆಲ್ಲ ಲೋಹಕಾರರ, ಸ್ವರ್ಣಕಾರರ ವೃತ್ತಿಯಲ್ಲಿದ್ದಾರೆ. ಇವರೆಲ್ಲ ರಕ್ಷಿಸಲ್ಪಟ್ಟಲ್ಲಿ ನಾನು ಭೂಮಿಯಲ್ಲಿ ಸ್ಥಿರವಾಗಿರಬಲ್ಲೆ. ಇವರ ಪಿತೃ ಪಿತಾಮಹರೆಲ್ಲ ರಾಮನಿಂದ ಹತರಾಗಿದ್ದಾರೆ. ನಾನು ಬಲಹೀನರಿಂದ ರಕ್ಷಿಸಲ್ಪಡಲಾರೆ.

---

೧ ಸಂತಿ ಬ್ರಹ್ಮನ್ ಮಯಾ ಗುಪ್ತಾ ನೃಷು ಕ್ಷತ್ರಿಯಪುಂಗವಾಃ।
ಹೈಹಯಾನಾಂ ಕುಲೇ ಜಾತಾಸ್ತೇ ಸಂರಕ್ಷಂತು ಮಾಂ ಮುನೇ॥
ತತಃ ಪೃಥಿವ್ಯಾ ನಿರ್ದಿಷ್ಟಾಂಸ್ತಾನ್ ಸಮಾನೀಯ ಕಶ್ಯಪಃ।
ಅಭ್ಯಷಿಂಚತ್ ಮಹೀಪಾಲಾನ್ ಕ್ಷತ್ರಿಯಾನ್ ವೀರ್ಯಸಮ್ಮತಾನ್॥
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಯೇಷಾಂ ವಂಶಾಃ ಪ್ರತಿಷ್ಠಿತಾಃ।
ಏವಮೇತತ್ ಪುರಾ ವೃತ್ತಂ ಯನ್ಮಾಂ ಪೃಚ್ಛಸಿ ಪಾಂಡವ॥ - ೭೭-೯೦

ನಂತರ ಕಶ್ಯಪರು ಭೂದೇವಿ ಹೇಳಿದ ಮೇಲಿನ ಮಹನೀಯರನ್ನು ಕರೆತಂದು ರಾಜರನ್ನಾಗಿ ಅಭಿಷೇಕ ಮಾಡಿದರು. ಇವರ ಮಕ್ಕಳು, ಮೊಮ್ಮಕ್ಕಳೇ ಮುಂದೆ ಕ್ಷತ್ರಿಯವಂಶವೃದ್ಧಿ ಮಾಡಿದರು. ರಾಜನ್! ಹೀಗೆ ಕ್ಷತ್ರಿಯವಂಶವೃದ್ಧಿಯಾಯಿತು ನೋಡು ಎಂದು ಶ್ರೀಕೃಷ್ಣನು ಧರ್ಮರಾಜನಿಗೆ ಹೇಳಿದನು.

## ಸಂದೇಶಗಳು - ವಿವರಣೆಗಳು

೧. ಪರಶುರಾಮದೇವರ ಚರಿತೆಯು ಈಗಾಗಲೇ ದ್ರೋಣಪರ್ವದಲ್ಲಿ ಬಂದಿದೆ. ವಸ್ತು ಒಂದೇ, ದುಷ್ಟಕ್ಷತ್ರಿಯರನ್ನು ನಿರ್ನಾಮ ಮಾಡಿದ್ದು ಈ ಅವತಾರದ ಬಲಕಾರ್ಯ.

೨. ಭಗವಂತನಿಗೆ ಯಾರ ಬಗ್ಗೆಯೂ ಪಕ್ಷಪಾತವಾಗಲೂ, ನಿರ್ನಿಮಿತ್ತಕವಾದ ದ್ವೇಷವೂ ಇಲ್ಲವೆಂದು ತೋರಿಸಿದ್ದು ಈ ಅವತಾರದಲ್ಲೂ ಬಂದಿದೆ. ದೈತ್ಯರು ಒಳ್ಳೆಯವರಾಗಿದ್ದರೆ ಅವರಿಗೆ ಮನ್ನಣೆ. ಪ್ರಹ್ಲಾದರಾಜನೇ ಇದಕ್ಕೆ ನಿದರ್ಶನ. ಹಿರಣ್ಯಕಶಿಪು ಗುಣದ್ರೋಹಿ. ಆದ್ದರಿಂದ ಅವರ ನಾಶವಾಯಿತು. ಇಲ್ಲಿ **ಕಾರ್ತವೀರ್ಯಾರ್ಜುನ 'ದತ್ತ'**ರೂಪಿ ಪರಮಾತ್ಮ(ಹರಿ)ನಿಂದ ಅನುಗ್ರಹ ಹೊಂದಿದ್ದ. ಮುಂದೆ ಅದೇ ಅರ್ಜುನ ತನ್ನ ಪರಾಕ್ರಮದ ಅಮಲೇರಿದ್ದರಿಂದ ಅದೇ ಶ್ರೀಹರಿಯಾದ ಪರಶುರಾಮನಿಂದ ತಿರಸ್ಕೃತನಾದ. ಅವನ ವಂಶ, ಅವನನ್ನು ಅನುಸರಿಸಿದವರೂ, ಎಲ್ಲರೂ ಹತರಾದರು.

೩. ಆಗಲೂ ಕೆಲವು ಕ್ಷತ್ರಿಯರು ಉಳಿದಿದ್ದರು. ಅವರನ್ನು ಭೂದೇವಿ ಹೆಸರಿಸಿ ತಿಳಿಸಿದ ಮೇಲೆ ಕಶ್ಯಪರು ಅವರಿಗೆ ರಾಜ್ಯಾಭಿಷೇಕವಾಯಿತು. ಅವರನ್ನೇನೂ ಪರಶುರಾಮ ಸಂಹರಿಸಲಿಲ್ಲ, ಕಾರಣ ಅವರೆಲ್ಲ ಸಜ್ಜನರೇ ಆಗಿದ್ದರು.

೪. ಪರಶುರಾಮನೂ ಮರಣ ಹೊಂದುವನೆಂಬ ಮಾತು ತೋರಿಕೆಗೆ ಇಲ್ಲೂ ಬಂದಿದೆ. ಇದಕ್ಕೆ ಉತ್ತರವನ್ನು ದ್ರೋಣಪರ್ವದಲ್ಲಿ ಮಹಾಭಾರತತಾತ್ಪರ್ಯನಿರ್ಣಯ ಉದಾಹರಿಸಿ ನೀಡಲಾಗಿದೆ.

೫. ಬ್ರಹ್ಮದ್ರೋಹಿಗಳಿಗೆ ಆಗುವ ಗತಿ ತಿಳಿಯಲು ಈ ಉಪಾಖ್ಯಾನ ಒಳ್ಳೆಯ ಆಕರವಾಗಿದೆ.

ಇತ್ಯಾದಿ............

## ೮೧. ಮುಚುಕುಂದ ಚರಿತೆ

ಧರ್ಮರಾಜನ ಪ್ರಶ್ನೆ – ಭೀಷ್ಮ ಪಿತಾಮಹರನ್ನು ಕುರಿತು –

ಬ್ರಾಹ್ಮಣರ ಮತ್ತು ಕ್ಷತ್ರಿಯರ ಬಲಾಬಲಗಳ ವಿಶೇಷವಾದ ನಿರ್ಣಾಯಕವಾದ ಅಂಶಗಳನ್ನು ತಿಳಿಸು. ಬ್ರಹ್ಮಕ್ಷತ್ರಿಯ ಸಮುದಾಯದಲ್ಲಿ ಜಗತ್ತಿನ ಯೋಗಕ್ಷೇಮ, ರಾಷ್ಟ್ರಹಿತ ಅಡಗಿದೆ. ಕಾರಣ ಈ ಎರಡು ವರ್ಣಗಳ ಮಹತ್ತ್ವ ತಿಳಿಸು[೧].

ಅದಕ್ಕೆ ಭೀಷ್ಮರು ವಿಶ್ಲೇಷಿಸಿ ಹೇಳುತ್ತಾರೆ.

ರಾಷ್ಟ್ರದ ಯೋಗಕ್ಷೇಮ ರಾಜಾಧೀನ. ರಾಜನ ಯೋಗಕ್ಷೇಮವು ಪುರೋಹಿತನನ್ನು ಅವಲಂಬಿಸಿರುತ್ತದೆ. ರಾಜನು ತನ್ನ ಬಾಹುಬಲದಿಂದ, ಬ್ರಾಹ್ಮಣರು ತಮ್ಮ ತಪಸ್ಸು ಮಂತ್ರಗಳ ಬಲದಿಂದ ಪ್ರಜೆಗಳ ಭಯವನ್ನು ನಿವಾರಿಸುತ್ತಾರೆ. ಅಂತಹ ರಾಷ್ಟ್ರವು ಸುಖ ಹೊಂದುತ್ತದೆ. ಈ ವಿಷಯದಲ್ಲಿ ಮುಚುಕುಂದ ಹಾಗೂ ರಾಜನಾದ ಕುಬೇರನ ಸಂವಾದ ರೂಪ ಇತಿಹಾಸವನ್ನು ಹೇಳುತ್ತೇನೆ.ಎಂದರು ಭೀಷ್ಮರು.

(ಸೂರ್ಯವಂಶದ ಮಾಂಧಾತರಾಜನ ಮ್ರಗ) ಮುಚುಕುಂದ ತನ್ನ ಬಾಹುಬಲದಿಂದ ಭೂಮಿ ಎಲ್ಲ ಗೆದ್ದು ತನ್ನ ಬಲ ತಿಳಿಯಲು ಕುಬೇರನ ಮೇಲೆ ದಂಡೆತ್ತಿ ಹೋದ. ಆಗ ಕುಬೇರನು ತನ್ನ ರಾಕ್ಷಸರನ್ನು ಕಳಿಸಿ ಮುಚುಕುಂದನ ಸೈನ್ಯವನ್ನು ನಾಶಗೈದನು. ತನ್ನ ಸೈನ್ಯ ನಾಶವಾಗಲು ಮುಚುಕುಂದ ಪುರೋಹಿತರನ್ನು ಆಕ್ಷೇಪಿಸಿದ(ನಿಂದಿಸಿದ). ಆಗ ಬ್ರಹ್ಮಜ್ಞಾನಿವರಿಷ್ಠರಾದ ವಸಿಷ್ಠರು (ಪುರೋಹಿತರು) ಉಗ್ರ ತಪಸ್ಸನ್ನು ಮಾಡಿ ಕುಬೇರಡನ ರಾಕ್ಷಸರನ್ನು ಸಂಹರಿಸಿ ದಾರಿ ಮಾಡಿಕೊಟ್ಟರು. ತನ್ನ ರಾಕ್ಷಸರು ನಾಶವಾದಾಗ ಕುಬೇರನು ಮುಚುಕುಂದನನ್ನು ನಿಂದಿಸಿ ಹೀಗೆ ನುಡಿದ.

ನಿನಗಿಂತ ಪೂರ್ವದಲ್ಲಿದ್ದ ಪುರೋಹಿತ ಸಹಿತ ರಾಜರು ಬಲಿಷ್ಠರಾಗಿಯೇ ಇದ್ದರು. ಅವರು ಯಾರೂ ನಿನ್ನಂತೆ ನಡೆದುಕೊಳ್ಳಲಿಲ್ಲ(ನನ್ನ ಮೇಲೆ ಏರಿ ಬರಲಿಲ್ಲ). ಅವರು ಸುಖದುಃಖಗಳಿಗೆ ಒಡೆಯನಾದ ನನ್ನನ್ನು ಉಪಾಸನೆ ಮಾಡುತ್ತಿದ್ದರು. ತಮ್ಮ ಸುಖದುಃಖ ಹೇಳಿಕೊಂಡು

---

೧ ಬ್ರಹ್ಮಕ್ಷತ್ರಂ ಹಿ ಸರ್ವಸ್ಯ ಕಾರಣಂ ಜಗತಃ ಪರಮ್ ।
ಯೋಗಕ್ಷೇಮೋ ಹಿ ರಾಷ್ಟ್ರಸ್ಯ ತಾಭ್ಯಾಮಾಯತ್ತ ಏವ ಹಿ ॥ – ೭೬/೧,೨

ನನ್ನಿಂದ ಪರಿಹಾರ, ಅನುಗ್ರಹ ಹೊಂದುತ್ತಿದ್ದರು. ನಿಜವಾಗಿಯೂ ಅಷ್ಟು ಬಲವಿದ್ದರೆ ಅದನ್ನು ಸಾಕ್ಷಾತ್ತಾಗಿ ತೋರಿಸು. ಅದು ಬಿಟ್ಟು ಬ್ರಾಹ್ಮಣರನ್ನು ಆಶ್ರಯಿಸಿ ಏಕೆ ತೋರಿಸುವೆ?[೧]

ಈ ಮಾತುಗಳಿಂದ ಸಿಟ್ಟು ಬಂದ ಮುಚುಕುಂದನು ಕುಬೇರನಿಗೆ ನ್ಯಾಯೋಚಿತವಾದ, ಶಾಂತವಾಗಿ ತತ್ತ್ವಶಃ ಉತ್ತರಿಸಿದ.

ಬ್ರಹ್ಮದೇವರು ಬ್ರಾಹ್ಮಣ, ಕ್ಷತ್ರಿಯರಿಬ್ಬರನ್ನೂ ಒಂದೇ ಯೋನಿ (ಮೂಲ)ದವರನ್ನಾಗಿ ಸೃಷ್ಟಿಸಿದ್ದಾರೆ. ಆದರೆ ಅವರ ಬಲಗಳು ಬೇರೆ ರೀತಿಯವು. ಆ ಬಲವೇ ಲೋಕವನ್ನು ರಕ್ಷಿಸುತ್ತದೆ. ನಿತ್ಯವೂ ಬ್ರಾಹ್ಮಣರಲ್ಲಿ ತಪಸ್ಸು ಹಾಗೂ ಮಂತ್ರ ಬಲಗಳು ಇರುತ್ತವೆ. ಕ್ಷತ್ರಿಯರಲ್ಲಿ ಅಸ್ತ್ರ ಹಾಗೂ ಬಾಹುಬಲಗಳು. ಇವರಿಬ್ಬರಿಂದಲೇ ಪ್ರಜಾಪರಿಪಾಲನೆ. ನಾನು ಹಾಗೆಯೇ (ಇದೇ ಹಿನ್ನೆಲೆಯಲ್ಲಿ) ನಾನು ಪ್ರವೃತ್ತನಾಗಿರುವಾಗ ನೀನೇಕೆ ನಿಂದಿಸುವೆ?[೨] (ಬ್ರಾಹ್ಮಣ ಬಲದಿಂದ ಏಕೆ ಅವಲಂಬಿಸಿದ್ದೀಯಾ ಎಂದು).

ಆಗ ಕುಬೇರನು ಪುರೋಹಿತಸಹಿತನಾದ ಮುಚುಕುಂದನಿಗೆ 'ನಾನು ಯಾರಿಗೆ ಎಷ್ಟು ನಿಗದಿತವಾಗಿದೆಯೋ ಅಷ್ಟೇ ರಾಜ್ಯವನ್ನು ಕೊಡುವೆ. ಅದಕ್ಕಿಂತ ಅಧಿಕ ಕೊಡುವುದಿಲ್ಲ, ನಿರ್ದಿಷ್ಟವಾದುದನ್ನು ಕಡಿಮೆ ಮಾಡುವುದಿಲ್ಲ, ಆದ್ದರಿಂದ ರಾಜನ್! ನಾನು ನೀಡಿದ ಅಖಿಲ ಭೂಮಿಯನ್ನು ಆಳು' ಎಂದನು.

ಇದರಿಂದ ಸ್ವಾಭಿಮಾನಿ ಮುಚುಕುಂದ ರಾಜನು 'ನಾನು ನೀನು ನೀಡಿದ ರಾಜ್ಯವನ್ನು ಭೋಗಿಸಲು ಇಚ್ಛಿಸುವುದಿಲ್ಲ, ನನ್ನ ಬಾಹುಬಲದಿಂದ ಸಂಪಾದಿಸಿದ ರಾಜ್ಯವನ್ನು ಮಾತ್ರ ಭೋಗಿಸಲು ಇಚ್ಛಿಸುವೆ.

---

೧ ತ್ವತ್ತೋ ಹಿ ಬಲಿನಃ ಪೂರ್ವೇ ರಾಜಾನಃ ಸಪುರೋಹಿತಾಃ ।
ನ ಚೈವಂ ಸಮವರ್ತಂಸ್ತೇ ಯಥಾತ್ವಮಿಹ ವರ್ತಸೇ ।
ತೇ ಖಲ್ವಪಿ ಕೃತಾಸ್ತ್ರಾಶ್ಚ ಬಲವಂತಶ್ಚ ಭೂಮಿಪಾಃ ।
ಆಗಮ್ಯ ಪರ್ಯುಪಾಸಂತೇ ಮಾಮೀಶಂ ಸುಖದುಃಖಯೋಃ ॥
ಯದ್ಯಸ್ತಿ ಬಾಹುವೀರ್ಯಂ ತೇ ತದ್ ದರ್ಶಯಿತುಮರ್ಹಸಿ ।
ಕಿಂ ಬ್ರಾಹ್ಮಣ ಬಲೇನ ತ್ವಮತಿಮಾತ್ರಂ ಪ್ರವರ್ತಸೇ ॥ – ೭೬/೯,೧೧,೧೨

೨ ಮುಚುಕುಂದಸ್ತತಃ ಕ್ರುದ್ಧಃ ಪ್ರತ್ಯುವಾಚ ಧನೇಶ್ವರಮ್ ।
ನ್ಯಾಯಪೂರ್ವಮಸಂರಬ್ಧಮಸಂಭ್ರಾಂತಮಿದಂ ವಚಃ ॥
ಬ್ರಹ್ಮಕ್ಷತ್ರಮಿದಂ ಸೃಷ್ಟಮೇಕಯೋನಿ ಸ್ವಯಂಭುವಾ ।
ಪೃಥಗ್ ಬಲವಿಧಾನಂ ಚ ತಲ್ಲೋಕಂ ಪರಿರಕ್ಷತಿ ॥
ತಪೋಮಂತ್ರಬಲಂ ನಿತ್ಯಂ ಬ್ರಾಹ್ಮಣೇಷು ಪ್ರತಿಷ್ಠಿತಮ್ ।
ಅಸ್ತ್ರಬಾಹುಬಲಂ ನಿತ್ಯಂ ಕ್ಷತ್ರಿಯೇಷು ಪ್ರತಿಷ್ಠಿತಮ್ ।
ತಾಭ್ಯಾಂ ಸಂಭೂಯ ಕರ್ತವ್ಯಂ ಪ್ರಜಾನಾಂ ಪರಿಪಾಲನಮ್ ।
ತಥಾ ಚ ಮಾಂ ಪ್ರವರ್ತಂತಂ ಗರ್ಹಯಸ್ಯಲಕಾಧಿಪ ॥ – ೭೬/೧೪-೧೭

**ನಾಹಂ ರಾಜ್ಯಂ ಭವದ್ದತ್ತಂ ಭೋಕ್ತುಮಿಚ್ಛಾಮಿ ಪಾರ್ಥಿವ।**
**ಬಾಹುವೀರ್ಯಾರ್ಜಿತಂ ರಾಜ್ಯಮಶ್ನೀಯಾಮಿತಿ ಕಾಮಯೇ॥**

**- ೭೬/೨೦(೧೮,೧೯)**

ಮುಚುಕುಂದನು ಯಾವುದೇ ಭ್ರಾಂತಿಯಿಲ್ಲದೆ ನೀಡಿದ ಉತ್ತರದಿಂದ ಕ್ಷತ್ರಿಯ-ಧರ್ಮದಲ್ಲಿರತನಾದ ರಾಜನನ್ನು ನೋಡಿ ಕುಬೇರನು ತುಂಬಾ ವಿಸ್ಮಯಗೊಂಡನು.

ನಂತರ ಮುಚುಕುಂದ ರಾಜನು ತನ್ನ ಬಾಹುಬಲದಿಂದ ಸಂಪಾದಿಸಿದ ಭೂಮಿಯನ್ನು ಕ್ಷತ್ರಿಯಧರ್ಮಾನುಸಾರವಾಗಿ ಶಾಸನ ಮಾಡಿದನು. ಹೀಗೆ ಯಾವ ರಾಜನು ಬ್ರಾಹ್ಮಣರ ಸಾಮರ್ಥ್ಯವನ್ನು ತಿಳಿದು, ಅವರನ್ನು ಮುಂದಿಟ್ಟುಕೊಂಡು ಕರ್ತವ್ಯ ಪ್ರವೃತ್ತನಾಗುತ್ತಾನೋ ಅವನು ಗೆಲ್ಲದೆ ಇದ್ದ ಭೂಮಿಯನ್ನೂ ಗೆದ್ದು ಕೀರ್ತಿವಂತನಾಗುತ್ತಾನೆ.

ಬ್ರಾಹ್ಮಣನು ನಿತ್ಯವೂ ಜಪತರ್ಪಣಶೀಲನಾಗಬೇಕು. ಕ್ಷತ್ರಿಯನು ಶಸ್ತ್ರಶೀಲನಾಗಬೇಕು. ಜಗದೊಳಗೆ ಇರುವ ಎಲ್ಲರೂ ಇವರಿಬ್ಬರನ್ನು ಅವಲಂಬಿಸಿದಾರೆ.

## ಸಂದೇಶಗಳು-ವಿವರಣೆಗಳು

೧. ಕ್ಷತ್ರಿಯನು ಬ್ರಾಹ್ಮಣನ ಮೇಲೆ ಶಾಸ್ತ್ರಾನುಸಾರವಾಗಿ ಅವಲಂಬಿತನಾಗಿದ್ದರೂ, ಅದು ಆತನ ಅಧಿಕಾರವ್ಯಾಪ್ತಿಯಲ್ಲಿಯೇ ಬರುತ್ತದೆ. ಆದರೆ ಕ್ಷತ್ರಿಯನು ಬೇರೆ ರಾಜರಾಗಲೀ, ಯಾರನ್ನಾಗಲೀ ಆಶ್ರಯಿಸಬಾರದು.

೨. ಪಾಂಡವರೂ ಹಾಗೆಯೇ ಇದ್ದರೆಂದು ಕೃಷ್ಣನು ಅವರನ್ನು ಪ್ರಶಂಸೆ ಮಾಡುತ್ತಾನೆ. ಯಾದವರು ಕೌರವರನ್ನು ಸಂಹರಿಸಿ ರಾಜ್ಯ ಕೊಟ್ಟರೆ ಅದನ್ನು ಅವರು ಸ್ವೀಕರಿಸುವುದಿಲ್ಲ ಎಂದು.

**ಸ್ವಾಭ್ಯಾಂ ಭುಜಾಭ್ಯಾಮಜಿತಾಂ ತು ಭೂಮಿಂ।**
**ನೇಚ್ಛೇತ್ ಕುರೂಣಾಮೃಷಭಃ ಕಥಂಚಿತ್॥ - ವನಪರ್ವ**
**- ಗೀತಾಪ್ರೆಸ್(೧೨೦/೨೩) - ತತ್ತ್ವಸಂಶೋಧನಸಂಸತ್(೧೧೭/೨೩)**
**ಉವಾಚ ಶೈನೇಯ ನ ಪಾಂಡುಪುತ್ರಾಃ ಪರೇಣ ಸಂಸಾಧಿತ ರಾಜ್ಯಕಾಮಾಃ**
**- ಮ.ತಾ.ನಿ.(೨೨/೨೭೯)**

- ಎಂದು ಕೃಷ್ಣನು ಸಾತ್ಯಕಿಗೆ ಹೇಳುತ್ತಾನೆ.

ಬೇರೆಯವರು ಸಂಪಾದಿಸಿದ ರಾಜ್ಯವನ್ನು ಪಾಂಡುಪುತ್ರರು ಇಚ್ಛಿಸುವುದಿಲ್ಲ, ಅವರು ತಮ್ಮ ಬಾಹುಬಲದಿಂದಲೇ ಬದುಕಲು ಇಚ್ಛಿಸುತ್ತಾರೆ.

ಇತ್ಯಾದಿ.....

# ೮೨. ಕೇಕಯ ರಾಜ ಹಾಗೂ ರಾಕ್ಷಸ ಸಂವಾದ

ಧರ್ಮರಾಜನ ಪ್ರಶ್ನೆ ಭೀಷ್ಮರಿಗೆ –

೧. ರಾಜನಿಗೆ ಯಾರ ದ್ರವ್ಯ(ವಿತ್ತ)ದ ಮೇಲೆ ಅಧಿಕಾರವಿರುತ್ತದೆ? ೨. ರಾಜನ ನಡತೆ (ವೃತ್ತಿ) ಹೇಗಿರಬೇಕು, ಹೇಗೆ ಜೀವಿಸಬೇಕು?

ಭೀಷ್ಮರು ಈ ಪ್ರಶ್ನೆಗೆ ಉತ್ತರಿಸುತ್ತಾರೆ.

೧. ಬ್ರಾಹ್ಮಣೇತರರ ವಿತ್ತದ ಸ್ವಾಮಿತ್ವ ರಾಜನದೇ ಎಂದು ವೇದ ಹೇಳುತ್ತದೆ.

೨. ವಿರುದ್ಧ ಕರ್ಮಸ್ವಭಾವದ ಬ್ರಾಹ್ಮಣರ ವಿತ್ತದ ಮೇಲೂ ರಾಜನಿಗೆ ಸ್ವಾಮ್ಯವಿದೆ. ಆದ್ದರಿಂದ ವಿಕರ್ಮಿಗಳಾದ ಬ್ರಾಹ್ಮಣರ ಬಗ್ಗೆ ರಾಜನು ಉದಾಸೀನ ಮಾಡಬಾರದೆಂದು ಹಿಂದಿನ ಸಾಧು ಜನರು ಹೇಳುತ್ತಾರೆ(ಹೇಳುತ್ತಿದ್ದರು). ಬ್ರಾಹ್ಮಣನೊಬ್ಬ ಕಳ್ಳನಾಗಿದ್ದರೆ ಆ ದೋಷ ರಾಜನಿಗೇ ಬರುತ್ತದೆ. ಆದ್ದರಿಂದ ಬ್ರಾಹ್ಮಣರನ್ನು ರಾಜರು ಚೆನ್ನಾಗಿ ನೋಡಿಕೊಳ್ಳುತ್ತಾರೆ (ಅವರು ಕಳ್ಳಕಾಕರಾಗದಂತೆ).

ಈ ಬಗ್ಗೆ ಒಂದು ಇತಿಹಾಸವಿದೆ. **ಕೇಕಯರಾಜ**ನನ್ನು ಅಪಹರಿಸಿದ **ರಾಕ್ಷಸನಿಗೂ** ಹಾಗೂ ರಾಜನಿಗೂ ನಡೆದ ಸಂವಾದರೂಪವಾದುದು.

ಒಮ್ಮೆ ಸ್ವಾಧ್ಯಾಯಶೀಲನಾದ, ವ್ರತಾನುಷ್ಠಾನ ಸಂಪನ್ನನಾದ ಕೇಕಯ ರಾಜನನ್ನು ಅರಣ್ಯದಲ್ಲಿ ಒಬ್ಬ ರಾಕ್ಷಸನು ಹಿಡಿದು ಅವನ ಮನಸ್ಸನ್ನು ಪ್ರವೇಶಿಸಿದಾಗ ರಾಜನು ರಾಕ್ಷಸನನ್ನು ಕುರಿತು ಹೀಗೆ ಮಾತನಾಡಿದನು.

ನನ್ನನ್ನು ನೀನು ಪ್ರವೇಶಿಸಬೇಡ ಏಕೆಂದರೆ–

೧. ನನ್ನ ರಾಜ್ಯದಲ್ಲಿ ಕಳ್ಳರಿಲ್ಲ, ಕೃಪಣ(ಜಿಪುಣ, ಲೋಭಿ)ರಿಲ್ಲ, ಮದ್ಯಪಾನಿಗಳಿಲ್ಲ, ಅಗ್ನ್ಯಾಧಾನ(ಅಗ್ನ್ಯಾರಾಧನೆ, ಅಗ್ನಿಪ್ರತಿಷ್ಠಾಪನೆ, ಅಗ್ನಿಹೋತ್ರ) ಮಾಡದವರಿಲ್ಲ, ಯಾಗ ಮಾಡದವರಿಲ್ಲ.

೨. ನನ್ನ ರಾಜ್ಯದಲ್ಲಿ ವಿದ್ವಾಂಸನಲ್ಲದವನು (ಅಪಂಡಿತ), ವ್ರತಗಳನ್ನು ಮಾಡದ, ಸೋಮಪಾನ ಮಾಡದ, ಆಧಾನಪೂರ್ವಕವಾಗಿ ಸಂಸ್ಕೃತವಾದ ಅಗ್ನಿ ಇಲ್ಲದವನು(ಅನಾಹಿತಾಗ್ನಿಃ) ಯಾರೂ ಇಲ್ಲ.

೩. ನನ್ನ ರಾಜ್ಯದಲ್ಲಿ ಬಹಳ ದಕ್ಷಿಣೆ ಕೊಡದೆ ಯಜ್ಞಮಾಡುವುದಿಲ್ಲ. ಎಲ್ಲರೂ ವ್ರತವನ್ನು ಧರಿಸಿದವರೇ (ಶಿಖಾ ವ್ರತ ಮೊದಲಾದ), ಅಧ್ಯಯನ ಮಾಡುವವರೇ (ಶಾಸ್ತ್ರಾದಿ) ಆಗಿದ್ದಾರೆ.

೪. ಬ್ರಾಹ್ಮಣರು ಅಧ್ಯಯನ, ಅಧ್ಯಾಪನ ಮಾಡುವವರು, ಯಜ್ಞವನ್ನು ಮಾಡುವವರು, ಮಾಡಿಸುವವರು, ದಾನಶೀಲರು, ಪ್ರತಿಗ್ರಹಶೀಲರು ಆಗಿದ್ದಾರೆ.

೫. ಬ್ರಾಹ್ಮಣರು (ನನ್ನಿಂದ) ಪೂಜಿತರೂ, ಕಾಯೇನ ವಾಚಾ ಮನಸಾ ಏಕರೀತಿಯರು(ಋಜುಗಳು), ಸತ್ಯವಾದಿಗಳು, ಸ್ವಕರ್ಮಗಳಲ್ಲಿ ಆಸಕ್ತರು.

೬. ನನ್ನ ರಾಜ್ಯದಲ್ಲಿ ಕ್ಷತ್ರಿಯರು ಯಾಚಿಸುವುದಿಲ್ಲ, ದಾನ ಕೊಡುತ್ತಾರೆ. ಸತ್ಯಧರ್ಮರತರು, ಅಧ್ಯಯನ ಮಾಡುತ್ತಾರೆ, ಅಧ್ಯಾಪನ ಮಾಡುವುದಿಲ್ಲ, ಯಾಗ ಮಾಡುತ್ತಾರೆ, ಮಾಡಿಸುವುದಿಲ್ಲ. ಬ್ರಾಹ್ಮಣರನ್ನು ರಕ್ಷಿಸುತ್ತಾರೆ, ಸಂಗ್ರಾಮಗಳಲ್ಲಿ ಪಲಾಯನ ಮಾಡುವುದಿಲ್ಲ- ಹೀಗೆ ಅವರು ಸ್ವಧರ್ಮಾಸಕ್ತರು.

೭. ನನ್ನ ರಾಜ್ಯದ ವೈಶ್ಯರು ಕೃಷಿ, ಗೋರಕ್ಷಣೆ, ವ್ಯಾಪಾರಗಳನ್ನು ಮೋಸ ಮಾಡದೆ ಮಾಡುತ್ತಾರೆ. ಸತ್ಕರ್ಮ, ಶ್ರೇಷ್ಠವ್ರತಶೀಲರು, ಸತ್ಯವಾದಿಗಳು, ಪಿತ್ರಾರ್ಜಿತ ಆಸ್ತಿಗಳನ್ನು ನ್ಯಾಯೋಚಿತವಾಗಿವಿಭಾಗಮಾಡುವವರು,ನಿಗರ್ವಿಗಳು(ಅಪ್ರಮತ್ತರು),ಇಂದ್ರಿಯನಿಗ್ರಹ, ಶೌಚ, ಸೌಹಾರ್ದತೆಗಳನ್ನು ಹೊಂದಿದವರಾಗಿ ತಮ್ಮ ಕರ್ತವ್ಯರತರಾಗಿದ್ದಾರೆ.

೮. ನನ್ನ ರಾಜ್ಯದ ಶೂದ್ರರು ದ್ವಿಜರನ್ನು(ತ್ರಿವರ್ಣ) ಅಸೂಯಾರಹಿತರಾಗಿ ಅನುಸರಿಸುವವರು, ಸೇವೆ ಮಾಡುವವರು ಆಗಿದ್ದಾರೆ.

೯. ನಾನು ಕೃಪಣರಿಗೂ (ಬಡವರಿಗೆ), ಅನಾಥರಿಗೆ, ವೃದ್ಧರಿಗೆ, ದುರ್ಬಲರಿಗೆ, ರೋಗಿ ಗಳಿಗೆ, ಸ್ತ್ರೀಯರಿಗೆ ಎಲ್ಲರಿಗೂ ರಾಜ್ಯದ ಐಶ್ವರ್ಯವನ್ನು ಸೂಕ್ತವಾಗಿ ಹಂಚುತ್ತೇನೆ.

೧೦. ಕುಲ, ದೇಶ ಧರ್ಮಗಳನ್ನು ವಿಧ್ಯುಕ್ತವಾಗಿ (ಶಾಸ್ತ್ರೋಕ್ತವಾಗಿ) ಪ್ರವರ್ತಿಸುತ್ತೇನೆ.

೧೧. ನನ್ನ ದೇಶದಲ್ಲಿರುವ ತಪಸ್ವಿಗಳು, ಗೌರವಿಸಲ್ಪಟ್ಟವರಾಗಿ, ನನ್ನ ಐಶ್ವರ್ಯವನ್ನು ಹೊಂದಿದವರಾಗಿ (ಸಂವಿಭಕ್ತರಾಗಿ) ಪಾಲಿತರಾಗಿದ್ದಾರೆ.

೧೨. ನಾನು ಬೇರೆಯವರಿಗೆ ಕೊಡದೆ ಏನನ್ನೂ ಭೋಗಿಸುವುದಿಲ್ಲ. ಪರಸ್ತ್ರೀಯರನ್ನು ಇಚ್ಛಿಸುವುದಿಲ್ಲ- ಒಬ್ಬನೇ ಯಾವ ಕ್ರೀಡೆಯನ್ನೂ ಆಡುವುದಿಲ್ಲ.

೧೩. ನನ್ನ ರಾಜ್ಯದಲ್ಲಿ ಬ್ರಹ್ಮಚಾರಿಯಲ್ಲದವನು ಭಿಕ್ಷೆ ಬೇಡುವುದಿಲ್ಲ, ಬ್ರಹ್ಮಚಾರಿಯಲ್ಲದ ಸನ್ಯಾಸಿಯೂ ಇಲ್ಲ. ಋತ್ವಿಜರಿಲ್ಲದೆ ಹೋಮ ನಡೆಯದು.

೧೪. ನಾನು ವೃದ್ಧರನ್ನು, ತಪಸ್ವಿಗಳನ್ನು, ವೈದ್ಯರನ್ನು ಅವಮಾನಿಸುವುದಿಲ್ಲ (ಯಾರನ್ನೂ ಅಗೌರವಿಸುವುದಿಲ್ಲ ಎಂದು ಭಾವ). ರಾಷ್ಟ್ರವು ನಿದ್ರಿಸುವಾಗ ನಾನು ಎದ್ದಿರುತ್ತೇನೆ (ರಾತ್ರಿ ಕೂಡಾ ರಾಷ್ಟ್ರರಕ್ಷಣೆಯ ಭಾರ ಹೊಂದಿರುತ್ತೇನೆ - ಗೂಢಚಾರನಾಗಿಯೂ, ಶತ್ರುಗಳು ರಾಷ್ಟ್ರದಲ್ಲಿ ನುಸುಳದಂತೆ ಎಚ್ಚರವಿರುತ್ತೇನೆ).

೧೫. ನಾನು ಎಲ್ಲೆಡೆ ಶುದ್ಧಕರ್ಮ (ಸಾತ್ವಿಕ) ಮಾಡಿದ್ದೇನೆ. ನನಗೆ ದುರ್ಗತಿಯ ಭಯವಿಲ್ಲ, ನಾನು ಧರ್ಮಾಚರಣೆ ಮಾಡುತ್ತಾ ಗೃಹಸ್ಥನಾಗಿದ್ದೇನೆ. ಸರ್ವಧರ್ಮ ಬಲ್ಲವನೂ, ರಾಜ್ಯದ ಎಲ್ಲದಕ್ಕೂ ಸ್ವಾಮಿಯೂ ಮತ್ತು ಸಂಪದ್ಯುಕ್ತನೂ ಆಗಿದ್ದೇನೆ(ವೇದಶಾಸ್ತ್ರ ಬಲ್ಲವರದೇ ಈ ಜಗದೈಶ್ವರ್ಯ ಎಂಬ ಭಾವವಿದೆ ಇಲ್ಲಿ, **ಸ್ವೀಯಂ ವೇದವಿದಾಂ ಸರ್ವಂ**).

೧೭. ನಾನು ದಾನದಿಂದಲೂ, ಸತ್ಯವಚನದಿಂದಲೂ, ಬ್ರಾಹ್ಮಣರ ರಕ್ಷಣೆಯಿಂದಲೂ, ಗುರುಸೇವೆಯಿಂದಲೂ, ದಿವ್ಯಲೋಕಗಳನ್ನು ಹೊಂದಲು ಇಚ್ಛಿಸುತ್ತೇನೆ. ನನಗೆ ರಾಕ್ಷಸರ ಭಯವಿಲ್ಲ.

೧೮. ನನ್ನ ರಾಷ್ಟ್ರದಲ್ಲಿ ವಿಧವೆಯರಿಲ್ಲ, ಬ್ರಹ್ಮಬಂಧು(ಹೆಸರಿಗೆ ಮಾತ್ರ ಬ್ರಾಹ್ಮಣ, ಬ್ರಾಹ್ಮಣ್ಯವಿಲ್ಲದವನು)ಗಳಿಲ್ಲ, ಯಾವ ಬ್ರಾಹ್ಮಣನೂ ದರಿದ್ರನಲ್ಲ, ಚೋರನೂ ಅಲ್ಲ, ಪರಸ್ತ್ರೀ ಸಂಗಿಯೂ ಅಲ್ಲ, ಪಾಪಕರ್ಮ ಮಾಡುವುದಿಲ್ಲ (ಆದ್ದರಿಂದ) ನನಗೆ ರಾಕ್ಷಸರ ಭಯವಿಲ್ಲ.

೧೯. ಧರ್ಮದ ಸಲುವಾಗಿ ಯುದ್ಧ ಮಾಡುವ ನನಗೆ ದೇಹದಲ್ಲಿ ಶಸ್ತ್ರದಿಂದ ಗಾಯಗೊಳ್ಳದ ಎರಡಂಗುಲ ಪ್ರದೇಶವೂ ಇಲ್ಲ (ದೇಹದಲ್ಲಿ ಎಲ್ಲೆಡೆ ಗಾಯ ತುಂಬಿದ ಪ್ರದೇಶಗಳೇ).

೨೦. ನನ್ನ ರಾಜ್ಯದ ಪ್ರಜೆಗಳು ಯಜ್ಞಗಳಲ್ಲಿ ಹಾಗೂ ಗೋಬ್ರಾಹ್ಮಣರಲ್ಲಿ ನನಗೆ ಯಾವಾಗಲೂ ಶುಭವನ್ನೇ ಹಾರೈಸುತ್ತಾರೆ.

೨೧. ಸ್ತ್ರೀಯರು ವ್ಯಭಿಚಾರಿಗಳಾದಾಗ, ರಾಜರು ಅನ್ಯಾಯಶೀಲರಾದಾಗ, ಬ್ರಾಹ್ಮಣರ ಕರ್ಮ ದೋಷದಿಂದ ಪ್ರಜೆಗಳಿಗೆ ಭಯ ಉಂಟಾಗುತ್ತದೆ.

ಅಂತಹ ದೇಶದಲ್ಲಿ ಅನಾವೃಷ್ಟಿ ಮಾರಕರೋಗಗಳು, ಸತತ ಹಸಿವಿನ ಭಯ, ಕಲಹಗಳು ಉಂಟಾಗುತ್ತವೆ. ಎಲ್ಲಿ ಬ್ರಾಹ್ಮಣರು ಸಂಯಮಶೀಲರಾಗಿರುತ್ತಾರೋ, (ಜಿತೇಂದ್ರಿಯರಾಗಿರುತ್ತಾರೋ) ಅಲ್ಲಿ ಯಕ್ಷರಾಕ್ಷಸ ಅಸುರರಿಂದ ಭಯ ಉಂಟಾಗುವುದಿಲ್ಲ. ಎಲ್ಲಿ ಸ್ತ್ರೀಯರು ಪತಿವ್ರತೆಯಾಗಿರುತ್ತಾರೋ, ಅಲ್ಲಿ ಗಂಧರ್ವ, ಅಪ್ಸರೆ, ಸಿದ್ಧ, ಸರ್ಪ(ಪನ್ನಗ) ಗಳಾಗಲೀ, ಮಾನವರನ್ನು ಕೊಲ್ಲಲು ಇಚ್ಛಿಸುವುದಿಲ್ಲ. ಚತುರ್ವರ್ಣದವರೆಲ್ಲರೂ ಯಾವ ದೇಶದಲ್ಲಿ ಧಾರ್ಮಿಕರಾಗಿರುತ್ತಾರೋ, ಅಲ್ಲಿ ಅನಾವೃಷ್ಟಿ, ದುರ್ಭಿಕ್ಷೆ, ಉನ್ಮಾದಾದಿ (ಹುಚ್ಚುತನ) ರೋಗಗಳಿರುವುದಿಲ್ಲ.

ಎಲ್ಲಿ ರಾಜನು ಧಾರ್ಮಿಕನಾಗಿರುತ್ತಾನೋ, ಅಲ್ಲಿ ಪರಾಭವ(ಸೋಲು) ಇಲ್ಲ, ಉತ್ಪಾತಗಳು ಕಾಣವು, ಮಾನುಷ ಮತ್ತು ಅಲೌಕಿಕ ಅಪಶಕುನಗಳು ಸಂಭವಿಸುವುದಿಲ್ಲ.

ಹೀಗೆ ರಾಜನು ನುಡಿಯಲು ರಾಕ್ಷಸನು ಎಲೈ ರಾಜನೇ! ಯಾವ ಕಾರಣದಿಂದ ನೀನು ಎಲ್ಲ ಅವಸ್ಥೆಗಳಲ್ಲಿ (ನಾನು ನಿನ್ನನ್ನು ಹಿಡಿದಾಗಲೂ) ಧರ್ಮವನ್ನೇ ಯೋಚಿಸುತ್ತೀಯಾ. ಆದ್ದರಿಂದ ನೀನು ಮನೆಗೆ ಸುಖವಾಗಿ ಹೋಗು. ನಾನೂ ನನ್ನ ದಾರಿಗೆ ಹೋಗುವೆ. ನೋಡು ರಾಜ, ಗೋಬ್ರಾಹ್ಮಣರನ್ನು ಯಾರು ರಕ್ಷಿಸುತ್ತಾರೋ, ಅವರಿಗೆ ರಾಕ್ಷಸರ ಭಯವಿಲ್ಲ. ಹೀಗಿರಲು ಮನುಷ್ಯರ ಭಯವೆಲ್ಲಿಂದ ಆದೀತು?

ಯಾರಿಗೆ ಬ್ರಾಹ್ಮಣರೇ ಪುರೋಹಿತರೋ (ಮುನ್ನಡೆಸುವವರೋ) ಯಾರಿಗೆ ಬ್ರಾಹ್ಮಣರ ಬಲವೇ ಬಲವೋ, ಯಾರು ಅತಿಥಿಪ್ರಿಯರೋ ತಮ್ಮ ಪತ್ನಿಗೆ ಪ್ರಿಯರೋ, ಅಂತಹ ಮನುಷ್ಯರು ಸ್ವರ್ಗವನ್ನು ಜಯಿಸಿದವರೇ ಸರಿ ಎಂದು ಉದ್ಗರಿಸಿದನು.

ಈ ಉಪಾಖ್ಯಾನ ಹೇಳುವ ಭೀಷ್ಮರು ಧರ್ಮರಾಜನಿಗೂ ಬ್ರಾಹ್ಮಣರನ್ನು ರಕ್ಷಿಸಲು ತಿಳಿಸಿದ. ಅದರಿಂದಲೇ ರಾಷ್ಟ್ರರಕ್ಷಣೆ. ಅದೇ ಆಸೆ ರಾಜನಿಗೆ ಇರಬೇಕು[೧].

## ಸಂದೇಶಗಳು-ವಿವರಣೆಗಳು

ಈ ಉಪಾಖ್ಯಾನದಲ್ಲಿನ ಎಲ್ಲ ವಿಷಯಗಳೂ ಸಂದೇಶಗಳೇ ಆಗಿವೆ. ಅವು ಅತ್ಯಂತ ಸ್ಪಷ್ಟವಾಗಿವೆ. ಒಬ್ಬ ಆದರ್ಶ ರಾಜನ ಗುಣಗಳು, ರಾಜ್ಯದ ಪ್ರಜೆಗಳಲ್ಲಿ ಪ್ರತಿಫಲಿಸುತ್ತವೆ. ರಾಜ್ಯದ ಮಂಗಳಸೂತ್ರ ರಾಜ. ರಾಜನಂತೆ ಪ್ರಜೆಗಳು. ರಾಜ, ರಾಜ್ಯ, ಪುರೋಹಿತರು, ಪ್ರಜೆಗಳು ವಿಶೇಷವಾಗಿ ಎಲ್ಲ ವರ್ಣದ ಪ್ರಜೆಗಳ ಗುಣಗಾನ ಇಲ್ಲಿ ನೋಡುತ್ತೇವೆ.

*****

---

೧ ತಸ್ಮಾತ್ ದ್ವಿಜಾತೀನ್ ರಕ್ಷೇತ ತೇ ಹಿ ರಕ್ಷಂತಿ ರಕ್ಷಿತಾಃ।
ಆಶೀರೇಷಾಂ ಭವೇದ್ರಾಜ್ಞಾಂ ರಾಷ್ಟ್ರಂ ಸಮ್ಯಕ್ ಪ್ರವರ್ಧತೇ ॥ - ೭೯/೩೯

## ೮೩. ಹುಲಿ-ನರಿ ಸಂವಾದ

ಧರ್ಮರಾಜನು ತಾತ ಭೀಷ್ಮರನ್ನು ಪ್ರಶ್ನಿಸುತ್ತಾನೆ -

ಕೆಲವರು (ಪ್ರಪಂಚದಲ್ಲಿ)ತೋರಿಕೆಗೆ ಮೃದುಸ್ವಭಾವದರಾದರೂ ವಸ್ತುತಃ ಕ್ರೂರಿಗಳಾಗಿರುತ್ತಾರೆ. ನೋಡಲು ಒರಟಾಗಿಯೂ, ಕ್ರೂರಿಗಳಾಗಿದ್ದರೂ, ಸ್ವಭಾವತಃ ಒಳ್ಳೆಯವರಾಗಿರುತ್ತಾರೆ, ಇನ್ನೂ ಕೆಲವರು. ಇಂತಹ ಜನರನ್ನು ಹೇಗೆ ತಿಳಿಯುವುದು?

ಭೀಷ್ಮರು ಈ ಬಗ್ಗೆ ಹುಲಿ ಹಾಗೂ ನರಿಗಳ ಸಂವಾದರೂಪ ಇತಿಹಾಸವನ್ನು ತಿಳಿಸಿ, ಜನರ ನಿಜವಾದ ಸ್ವಭಾವವನ್ನು ತಿಳಿಯಬಹುದೆಂದು ಧರ್ಮರಾಜನಿಗೆ ನಿರೂಪಿಸುತ್ತಾರೆ. ಹುಲಿನರಿಗಳು ತಮ್ಮ ನೈಜ ಸ್ವಭಾವವನ್ನು ಹೇಗೆ ತೋರಿಸುತ್ತವೆ ಎಂದು ಹೀಗೆ ವರ್ಣಿಸಿದರು ಭೀಷ್ಮರು.

ಮನುಷ್ಯಾಧಮನಾದ **ಪಾರಿಕನೆಂಬ** ರಾಜನು **ಪುರೀಕಾ** ಎಂಬ ಶ್ರೀಮಂತ ಪಟ್ಟಣ-ದಲ್ಲಿದ್ದನು. ಅವನಿಗೆ ಪರಹಿಂಸೆ ಎಂದರೆ ಬಹು ಆಸಕ್ತಿ. ಅದೇ ಅವನ ವಿಹಾರವಾಗಿತ್ತು[೧]. ಅವನ ಆಯುಷ್ಯ ತೀರಲು ದುರ್ಗತಿಗೆ ಹೋಗಿ, ಮಾರನೆ ಜನ್ಮದಲ್ಲಿ ನರಿಯಾಗಿ ಒಂದು ಸ್ಮಶಾನದಲ್ಲಿ ಜನಿಸಿದ. ಆದರೆ ಅವನಿಗೆ ಪೂರ್ವಜನ್ಮ ಸ್ಮರಣೆ ಇತ್ತು. ಅಂತೆಯೇ ಅದೃಷ್ಟವಶಾತ್ ಅದಕ್ಕೆ ತನ್ನ ಬಗ್ಗೆ ಅಸಹ್ಯವುಂಟಾಗಿ ತನ್ನ ಜಾತಿಗೆ ತಕ್ಕಂತೆ ಮಾಂಸಾಹಾರಿಯಾಗಿರದೆ ಕೇವಲ ಭೂಮಿಯಲ್ಲಿ ಬಿದ್ದ ಹಣ್ಣುಗಳನ್ನು ತಿಂದು ಜೀವನ ನಡೆಸುತ್ತಿದ್ದ[೨]. ಸ್ಮಶಾನವನ್ನು ಬಿಟ್ಟು ಬೇರೆ ಕಡೆ ಎಲ್ಲೂ ಹೋಗಲು ಇಚ್ಛಿಸಲಿಲ್ಲ. ಈ ನರಿಯ ಸ್ವಭಾವ ಇತರ ನರಿಗಳಿಗೆ ಹಿಡಿಸದೆ ಅವು ಈ ನರಿಗೆ ಹೀಗೆ ಉಪದೇಶ ಮಾಡಿದವು.

'ನೀನು ಭಯಂಕರವಾದ ಸ್ಮಶಾನದಲ್ಲಿದ್ದುಕೊಂಡು ಶುಚಿಯಾಗಿರಲು ಇಚ್ಛಿಸುತ್ತೀಯಲ್ಲ? (ಏಕೆಂದರೆ ಸ್ಮಶಾನವೆಂದರೆ ಅಶುಚಿ, ಅಪವಿತ್ರ ಜಾಗವೇ) ಮಾಂಸಾಹಾರಿಯಾದ ನಿನಗೆ

---

೧ ಪುರೀಕಾಯಾಂ ಪುರಿ ಪುರಾ ಶ್ರೀಮತ್ಯಾಂ ಪೌರಿಕೋ ನೃಪಃ।
ಪರಹಿಂಸಾರುಚಿಃ ಕ್ರೂರೋ ಬಭೂವ ಪುರುಷಾಧಮಃ॥ - ೧೧೩/೩

೨ ಸಂಸ್ಮೃತ್ಯ ಪೂರ್ವಜಾತಿಂ ಸ ನಿರ್ವೇದಂ ಪರಮಂ ಗತಃ।
ನ ಭಕ್ಷಯತಿ ಮಾಂಸಾನಿ ಪರೈರುಪಹೃತಾನ್ಯಪಿ॥
ಅಹಿಂಸ್ರಃ ಸರ್ವಭೂತೇಷು ಸತ್ಯವಾಕ್ ಸುದೃಢವ್ರತಃ।
ಚಕಾರ ಚ ಯಥಾಕಾಲಮಾಹಾರಂ ಪತಿತೈಃ ಫಲೈಃ॥ - ೧೧೩/೫,೬

(ಜಾತಿಯಿಂದ) ಇದು ಉಚಿತವಲ್ಲ. ಆದ್ದರಿಂದ ನಮ್ಮಂತೆ ಇರು. ನಿನಗೆ ನಾವು ಭಕ್ಷ್ಯಗಳನ್ನು (ನಿನ್ನ ಜಾತಿ ಯೋಗ್ಯ) ತಂದು ಕೊಡುತ್ತೇವೆ.[೧]"

ಆ ನರಿಗಳ ಮಾತುಗಳನ್ನು ಕೇಳಿದ (ರಾಜ)ನರಿಯು ವಿನಯಪೂರ್ವಕವಾಗಿ, ಯುಕ್ತಿಯುಕ್ತವಾಗಿ ಉತ್ತರಿಸಿತು.

ಸ್ನೇಹಿತ ನರಿಗಳೇ! ನಾನು ಎಲ್ಲೇ ಹುಟ್ಟಿರಲಿ, ಶೀಲದಿಂದ(ಸದ್ಗುಣ) ಕುಲದ ಹುಟ್ಟು ಇರುತ್ತದೆ. ಆದ್ದರಿಂದ ಸತ್ಕೀರ್ತಿದಾಯಕ ಕರ್ಮ ಮಾಡಲು ನಾನು ಇಚ್ಛಿಸುತ್ತೇನೆ.

ನಾವುವಾಸವಾಗಿರುವಸ್ಥಳಪುಣ್ಯ, ಪಾಪಗಳನ್ನುನಿರ್ಧರಿಸದು. ಆಶ್ರಮದಲ್ಲಿಬ್ರಾಹ್ಮಣನನ್ನು ಕೊಂದರೆ ಪಾಪ ಬರುವುದಿಲ್ಲವೇ? ಆಶ್ರಮವಲ್ಲದ ಸ್ಥಳದಲ್ಲಿ ಗೋದಾನ ಮಾಡಿದರೆ ಪುಣ್ಯ ಬರುವುದಿಲ್ಲವೆ? ನೀವಂತೂ ಪರಮಲೋಭಿಗಳು. ನೀವು ಅಜ್ಞಾನಕ್ಕೆ ಒಳಗಾಗಿದ್ದೀರಾ. ನೀವು ನಿಮ್ಮ ವರ್ತನೆಗಳ ಪರಿಣಾಮಗಳನ್ನು ತಿಳಿಯುತ್ತಿಲ್ಲ. ನಿಮ್ಮ ಅಜ್ಞಾನವು ನಿಂದ್ಯವಾದುದು. ನಿಮ್ಮ ಈ ವರ್ತನೆ ಇಹಪರಲೋಕಗಳಲ್ಲಿ ಅನಿಷ್ಟವುಂಟುಮಾಡುತ್ತದೆ. ಅಂತಹ ಆಸೆಯನ್ನು ನಾನು ಬಯಸುವುದಿಲ್ಲ(ಎಂದು ರಾಜ ನರಿ ಹೇಳಿತು)[೨]. ಇತರ ನರಿಗಳಿಗೆ ಈ ರಾಜನರಿಯ ಬುದ್ಧಿಯನ್ನು ಕೆಡಿಸಲು ಆಗಲಿಲ್ಲ.

ಇದನ್ನೆಲ್ಲ ಗಮನಿಸಿದ ಹುಲಿಯು ಈ ರಾಜನರಿಯನ್ನು ಪಂಡಿತನೆಂದು ತಿಳಿದು ತನ್ನಂತೆ ಅದಕ್ಕೂ ಯೋಗ್ಯ ಪೂಜೆ ಮಾಡಿ ಸಚಿವನನ್ನಾಗಿ ಮಾಡಿ ಬೆಳೆಸಿತು[೩].

ರಾಜನರಿಯನ್ನು ಕುರಿತು ಹುಲಿಯು 'ನೀನು ತುಂಬಾ ಸೌಮ್ಯನೆಂದು ತಿಳಿದಿದ್ದೇನೆ. ನನ್ನೊಡನೆ ಸಂಚರಿಸು. ನಿನಗಿಷ್ಟವಾದ ಭೋಗಗಳನ್ನು ಭೋಗಿಸು. ಮಾರ್ದವತೆಯಿಂದಲೇ ಪ್ರಾಣಿಗಳನ್ನು ನೀನು ಕೊಂದು, ಒಳ್ಳೆಯ ಶ್ರೇಯಸ್ಸನ್ನು ಹೊಂದಬಹುದು. ನಾವಾದರೋ ಕ್ರೂರಿಗಳೆಂದು ಪ್ರಸಿದ್ಧರು.'

ಆಮೇಲೆ ಸಚಿವ ನರಿಯು ಹುಲಿಗೆ ನಮಿಸಿ ವಿನಯಪೂರ್ವಕವಾಗಿ ಮಾತನಾಡಿತು. 'ನೀನು ನನ್ನಂತಹ ಶುಚಿಯಾದವರ ಬಗ್ಗೆ ಹೇಳಿದ ಮಾತು ಯೋಗ್ಯವಾದುದೇ. ಅಮಾತ್ಯನಿಲ್ಲದೆ

---

೧ ತತ್ ಸಮೋ ವಾ ಭವಾಸ್ಮಾಭಿರ್ಭಕ್ಷ್ಯಾನ್ ದಾಸ್ಯಾಮಹೇ ವಯಮ್ ।
ಭುಂಕ್ಷ್ವ ಶೌಚಂ ಪರಿತ್ಯಜ್ಯ ಯದ್ಧಿ ಭುಕ್ತಂ ತದಸ್ತಿ ತೇ ॥ - ೧೧೩/೧೦

೨ ಆಶ್ರವೇ ಯೇ ದ್ವಿಜಂ ಹನ್ಯಾದ್ ಗಾಂ ವಾ ದದ್ಯಾದನಾಶ್ರಮೇ ।
ಕಿಂ ನು ತತ್ ಪಾತಕಂ ನ ಸ್ಯಾತ್ ತದ್ವಾ ದತ್ತಂ ವೃಥಾ ಭವೇತ್ ॥
ಭವಂತಃ ಸರ್ವಲೋಭೇನ ಕೇವಲಂ ಭಕ್ಷಣೇ ರತಾಃ ।
... ಇಹ ಚಾಮುತ್ರ ಚಾನಿಷ್ಟಾಂ ತಸ್ಮಾದ್ ವೃತ್ತಿಂ ನ ರೋಚಯೇ ॥ - ೧೧೩/೧೪-೧೬

೩ ತಂ ಶುಚಿಂ ಪಂಡಿತಂ ಮತ್ವಾ ಶಾರ್ದೂಲಃ ಖ್ಯಾತವಿಕ್ರಮಃ ।
ಕೃತ್ವಾऽऽತ್ಮಸದೃಶಾಂ ಪೂಜಾಂ ಸಾಚಿವ್ಯೇऽವರ್ಧಯತ್ ಸ್ವಯಮ್ ॥ - ೧೧೩/೧೭

ದೊಡ್ಡ ರಾಜ್ಯವಾಳುವುದು ಸಾಧ್ಯವಲ್ಲ. ತನ್ನ ವಿರೋಧಿಯಾದ ಕೆಟ್ಟ ಅಮಾತ್ಯನ ಸಹಾಯವೂ ದೊಡ್ಡ ರಾಜ್ಯವನ್ನಾಳಲು ಉಪಯೋಗವಲ್ಲ. ಗುಂಪುಗಾರಿಕೆ ಮಾಡದ, ಇಂದ್ರಿಯಗಳ ದಾಸರಾಗದ, ಸ್ವಾಮಿನಿಷ್ಠೆಯುಳ್ಳ ಪ್ರೀತಿವಿಶ್ವಾಸವುಳ್ಳ ನಿಷ್ಕಪಟಿಗಳಾದ ಸಹಾಯಕರನ್ನು ಹೊಂದಲು ಪ್ರಯತ್ನಿಸಬೇಕು. ತಮಗೆ ಒಳ್ಳೆಯದನ್ನು ಬಯಸದವರನ್ನು ನೀನು ಗುರು ಹಾಗೂ ತಂದೆಯಂತೆ ಪೂಜಿಸು. ನೀನು ಆಶ್ರಯಿಸುವ ಸುಖ, ಭೋಗ, ಐಶ್ವರ್ಯಗಳನ್ನು ನಾನು ಬಯಸೆನು. ನಿನ್ನ ಹಿಂದಿನ ಸೇವಕರು ನಮ್ಮ ಮಧ್ಯೆ ಬಿರುಕು ಉಂಟು ಮಾಡುತ್ತಾರೆ. ಆದ್ದರಿಂದ ಅಂತಹವರನ್ನು ನಾನು ಇಚ್ಛೆಪಡುವುದಿಲ್ಲ. ಅವರು ನಮ್ಮ ಮೈತ್ರಿಯನ್ನು ಹಾಳು ಮಾಡುವವರು. ನೀನು ತಪ್ಪು ಮಾಡಿದವರನ್ನು ಕ್ಷಮಿಸುವವನು. ಒಳ್ಳೆಯ ಮನಸ್ಸುಳ್ಳವನು. ಬೇರೆ ಬಲಿಷ್ಠ ಪ್ರಾಣಿಗಳೂ ನಿನ್ನನ್ನು ಆಶ್ರಯಿಸುವುದು ಶ್ಲಾಘನೀಯವಾದುದು. ನೀನು ಮುಂದಾಲೋಚನೆಯುಳ್ಳವನೂ, ಭಾರೀ ಉತ್ಸಾಹಿಯೂ, ನಿಪುಣನೂ, ವ್ಯರ್ಥಕೆಲಸ ಮಾಡದವನೂ ಅಲ್ಲದೆ ಇನ್ನೂ ಅನೇಕ ಗುಣವುಳ್ಳವನಾಗಿರುವೆ. ನಾನಂತೂ ನನ್ನ ಪಾಡಿಗೆ ಸಂತುಷ್ಟ ಸಂತೋಷದಿಂದಲೇ ದುಃಖಕರವಾದ ಜೀವನ ವೃತ್ತಿಯನ್ನು ಅವಲಂಬಿಸಿದ್ದೇನೆ. ಮನಸ್ವಿಯಾಗಿ ಕಾಡಿನಲ್ಲಿ ತಿರುಗುವ ನಾನು ಸ್ವಾಮಿಸೇವೆ ಮಾಡುವುದನ್ನೂ[೧] ತಿಳಿದಿಲ್ಲ.

ಒಂದು ಕಡೆ ನಿರಾಯಾಸವಾಗಿ ನೀರು ಮಾತ್ರ ಸಿಗುತ್ತದೆ. ಇನ್ನೊಂದೆಡೆ ಭಯದಿಂದ ಕೂಡಿದ ರುಚಿಕಟ್ಟಾದ ಅನ್ನ. ಇವೆರಡರಲ್ಲಿ ಮೊದಲನೆಯದೇ ಸುಖಕರವಾದುದು. ರಾಜನ ಕೋಪದಿಂದ ಸಾಯುವ ಸೇವಕರು ಅಪರಾಧ ಮಾಡುವ ಸೇವಕರ ಸಂಖ್ಯೆಗಿಂತ ಅಧಿಕ.

ನಿನ್ನೊಡನೆ ನಾನು ಸೇವೆಗೆ ಸೇರಲು ನನ್ನದೊಂದು ಷರತ್ತು ಇದೆ. 'ನನ್ನವರನ್ನು ಸನ್ಮಾನಿಸಬೇಕು. ಹಿತವಚನ ಹೇಳಿದರೆ ಕೇಳಬೇಕು. ನಿನ್ನ ಜೀವನೋಪಾಯವನ್ನು ನಾನು ಅನುಸರಿಸಬೇಕೆಂದು ಬಲಾತ್ಕಾರ ಮಾಡಬಾರದು. ನಾನು ನಿನ್ನ ಉಳಿದ ಸಚಿವರೊಡನೆ ಮಂತ್ರಾಲೋಚನೆ ಮಾಡುವುದಿಲ್ಲ. ಅವರು ನನ್ನ ವಿಷಯದಲ್ಲಿ ನಿನ್ನ ಮುಂದೆ ಸುಳ್ಳು ಹೇಳಬಹುದು. ನಾನು ನಿನ್ನ ಹಿತವನ್ನು ನಿನ್ನೊಬ್ಬನಿಗೆ ಏಕಾಂತದಲ್ಲಿ ಹೇಳುವೆನು. ನಿನ್ನ ಜ್ಞಾತಿಗಳ ಹಿತಾಹಿತ ವಿಷಯದಲ್ಲಿ ನನ್ನನ್ನು ನೀನು ಪ್ರಶ್ನಿಸಬಾರದು. ನನ್ನೊಡನೆ ಸಮಾಲೋಚಿಸಿ, ನಿನ್ನ ಉಳಿದ ಸಚಿವರನ್ನೂ ಹಿಂಸಿಸಬಾರದು. ನನ್ನವರ ಮೇಲೆ ಕೋಪಗೊಂಡು ಶಿಕ್ಷೆ ವಿಧಿಸ-

---

೧ ....ನ ಕಾಮಯೇ ಸುಖಾನ್ ಭೋಗಾನ್ ಐಶ್ವರ್ಯಂ ವಾ ತ್ವದಾಶ್ರಯಮ್ ।

......

ತೇ ತ್ವಾಂ ವಿಭೇದಯಿಷ್ಯಂತಿ ದುಃಶೀಲಾಶ್ಚ ಮದಂತರೇ ।

ಸಂಶ್ರಯಃ ಶ್ಲಾಘನೀಯಸ್ತ್ವಂ .... ಪಾಪಕೇಷ್ವಪ್ಯ ದಾರುಣಃ ।

ದೀರ್ಘದರ್ಶೀ ಮಹೋತ್ಸಾಹಃ ..........

ಕೃತೀ ಚಾಮೋಘಕರ್ತಾಸಿ........

ಸೇವಾಯಾಶ್ಚಾಪಿ ನಾಭಿಜ್ಞಃ ಸ್ವಚ್ಛಂದೇನ ವನೇಚರಃ ।

ಬಾರದು' (ಎಂದು ರಾಜನರಿ ಹುಲಿಗೆ ತನ್ನ ನಿಬಂಧನೆಗಳನ್ನು ಹೇಳಿತು). ಮೃಗೇಂದ್ರನು ಇದೆಲ್ಲಕ್ಕೂ ಒಪ್ಪಿ ನರಿಯನ್ನು ಪೂಜಿಸಿದನು:

ಯದಿ ತ್ವೇತನ್ಮಯಾ ಕಾರ್ಯಂ ಮೃಗೇಂದ್ರ ಯದಿ ಮನ್ಯಸೇ ।
ಸಮಯಂ ಕೃತಮಿಚ್ಛಾಮಿ ವರ್ತಿತವ್ಯಂ ಯಥಾ ಮಯಿ ।
ಮದೀಯಾ ಮಾನನೀಯಾಸ್ತೇ ಶ್ರೋತವ್ಯಂ ಚ ಹಿತಂ ವಚಃ ।
ನ ಮಂತ್ರಯೇಽಯಂ ಅನ್ಯೈಸ್ತೇ ಸಚಿವೈಃ ಸಹ ಕರ್ಹಿಚಿತ್ ।
ನೀತಿಮಂತಃ ಪರೀಪ್ಸಂತೋ ವೃಥಾ ಬ್ರೂಯಃ ಪರೇ ಮಯಿ ।
ಏಕ ಏಕೇನ ಸಂಗಮ್ಯ ರಹೋ ಬ್ರೂಯಾಃ ಹಿತಂ ತವ ।
ನ ಚ ತೇ ಜ್ಞಾತಿಕಾರ್ಯೇಷು ಪ್ರಷ್ಟವ್ಯೋಽಹಂ ಹಿತಾಹಿತೇ ।
ಮಯಾ ಸಂಮಂತ್ರ್ಯ ಪಶ್ಚಾಚ್ಚ ನ ಹಿಂಸ್ಯಾಃ ಸಚಿವಾಸ್ತ್ವಯಾ ।
ಮದೀಯಾನಾಂ ಚ ಕುಪಿತೋ ಮಾ ತ್ವಂ ದಂಡಂ ನಿಪಾತಯೇ ।
ಏವಮಸ್ತ್ವಿತಿ ತೇನಾಸೌ ಮೃಗೇಂದ್ರೇಣಾಭಿಪೂಜಿತಃ ।
ಪ್ರಾಪ್ತವಾನ್ ಮತಿಸಾಚಿವ್ಯಂ ಗೋಮಾಯುರ್ವ್ಯಾಘ್ರಯೋನಿತಃ ॥

- ೧೧೩/೨೧-೩೯

ವ್ಯಾಘ್ರನು ನರಿಯನ್ನು ಸಚಿವನನ್ನಾಗಿ ಮಾಡಿಕೊಂಡು, ಪೂಜಿತವಾದುದನ್ನು ನೋಡಿದ ಮೊದಲ ಸೇವಕರು ಗುಂಪುಗೂಡಿ ರಾಜನರಿಯನ್ನು ದ್ವೇಷಿಸಲಾರಂಬಿಸಿದರು. ತಮ್ಮ ನರಿಬುದ್ಧಿಯಿಂದ ಈ ಹೊಸ ನರಿಯಲ್ಲಿ ಮಿತ್ರಬುದ್ಧಿಯಿಂದ ವರ್ತಿಸಿದಂತೆ ಮಾಡಿ ತಮ್ಮ ದೋಷಗಳನ್ನು ಉಂಟು ಮಾಡಲು ಪ್ರಯತ್ನಿಸಿದರು.

ಹಿಂದೆಲ್ಲ ಪರದ್ರವ್ಯಾಪಹಾರ ಮಾಡಿ ಜೀವನ ಮಾಡಿದ ಪೂರ್ವಭೃತ್ಯರು ಈಗ ರಾಜನರಿಯಿಂದಾಗಿ ಮತ್ತೊಬ್ಬರ ದ್ರವ್ಯವನ್ನು ತರಲು ಅಸಮರ್ಥರಾದರು. ರಾಜನರಿಯನ್ನು ಅಲ್ಲಿಂದ ಓಡಿಸಲು ಬೇರೆ ಬೇರೆ ಕಥೆಗಳನ್ನು ಹೇಳಲಾರಂಭಿಸಿದರು. ಪ್ರಾಜ್ಞನರಿಯು ತನ್ನ ಧೈರ್ಯದಿಂದ ಚಲಿಸಲಿಲ್ಲ. ಹೀಗಾಗಿ ಉಳಿದ ನರಿಗಳು ಈ ರಾಜನರಿಯನ್ನು ಕೊಲ್ಲಲು ಪಣ ತೊಟ್ಟರು[೧].

ಒಮ್ಮೆ ಮೃಗೇಂದ್ರನಿಗೆ ಬೇಕಾದ ಪಕ್ವವಾದ ಮಾಂಸವನ್ನು ತಾವೇ ತಂದು ರಾಜನರಿಯ ಮನೆಯಲ್ಲಿಟ್ಟವು. ರಾಜನರಿಗೆ ಇದೆಲ್ಲವೂ ಗೊತ್ತಾದರೂ ಕ್ಷಮಾಗುಣ ತೋರಿಸಿ ಸುಮ್ಮನಿದ್ದಿತು. ಕಾರಣ ಮೃಗೇಂದ್ರನೊಡನೆ ಮಾಡಿಕೊಂಡ ಒಪ್ಪಂದದ ಪ್ರಕಾರ ಆತನು ತನ್ನನ್ನು

೧ ತಂ ತಥಾ ಸತ್ಕೃತಂ ದೃಷ್ಟ್ವಾ ಯುಜ್ಯಮಾನಂ ಚ ಕರ್ಮಣಿ ।
ಪ್ರಾದ್ವಿಷನ್ ಕೃತ ಸಂಘಾತಾಃ ಪೂರ್ವಭೃತ್ಯಾ ಮುಹುರ್ಮುಹುಃ
ಅನ್ಯಥಾಭ್ಯುಚಿತಾಃ ಪೂರ್ವಂ ಪರದ್ರವ್ಯಾಪಹಾರಿಣಃ ।
ಅಶಕ್ತಾಃ ಕಿಂಚಿದಾದಾತುಂ ದ್ರವ್ಯಂ ಗೋಮಲಿಯು ಯಂತ್ರಿತಾಃ । - ೧೧೩/೪೦,೪೨

ಹಿಂಸಿಸುವಂತಿಲ್ಲ, ಸ್ನೇಹಕ್ಕಾಗಿ. ಆದರೆ ಮೃಗರಾಜನಿಗೆ ಆಹಾರ ಬರಲಿಲ್ಲ. ಅದು ಎಲ್ಲಿ ಹೋಯಿತೆಂದು ಹುಡುಕಲು ಆಜ್ಞೆ ಮಾಡಿದ. ಕಪಟಿಗಳಾದ ಪೂರ್ವಭೃತ್ಯರು ಆ ಮಾಂಸವು ರಾಜನರಿಯಿಂದ ಅಪಹೃತವಾಗಿದೆ ಎಂದು ಹುಲಿಗೆ ಹೇಳಿದರು.

ಹಳೆ ನರಿಗಳು ಹುಲಿಗೆ 'ಈ ರಾಜನರಿಯು ನಮ್ಮೆಲ್ಲರ ಜೀವನೋಪಾಯವನ್ನು ಭಂಗಗೊಳಿಸುತ್ತಿದೆ. ನೀನೇ ಅದನ್ನು ಪ್ರೀತಿಯಿಂದ ರಕ್ಷಿಸುತ್ತಿದ್ದೀಯಾ. ನೀನು ತಿಳಿದಂತೆ ಆ ನರಿ ಈಗಿಲ್ಲ. ಮಾತಿನಲ್ಲಿ ಧಾರ್ಮಿಕ ಸ್ವಭಾವ ಭಯಂಕರ. ಇವನದೆಲ್ಲ ನಾಟಕ. ಆಚಾರ ಸುಳ್ಳು. ತನ್ನ ಭೋಜನ ದೊರಕಿಸಲು ಹೂಡಿದ ಆಟವಿದು. ನಮ್ಮಲ್ಲಿ ವಿಶ್ವಾಸವಿಲ್ಲದಿದ್ದರೆ ನಿನಗೆ ತೋರಿಸುವೆವು' ಎಂದು ಹೇಳಿ ಆ ಕ್ಷಣದಲ್ಲಿಯೇ ರಾಜನರಿಯ ಮನೆಯಿಂದ ಮಾಂಸವನ್ನು ತಂದು ತೋರಿಸಿದವು[೧].

ಹುಲಿಯು ಅವರ ಮಾತನ್ನು ಕೇಳಿ ನರಿಯನ್ನು '**ಕೊಲ್ಲಿ**' ಎಂದು ಆಜ್ಞೆ ಮಾಡಿತು[೨]. ಹುಲಿಯ ಮಾತನ್ನು ಕೇಳಿದ ಅದರ **ತಾಯಿಯು** ಮೃಗೇಂದ್ರನನ್ನು ಹಿತನುಡಿಗಳಿಂದ ಎಚ್ಚರಿಸಿತು[೩].

---

೧ ವೃತ್ತಾಂತಂ ಚಾತ್ರ ಕಾಂಕ್ಷದ್ಭಿಃ ಕಥಾಭಿಃ ಪ್ರವಿಲೋಭ್ಯತೇ।
ನ ಚಾಪಿ ಸ ಮಹಾಪ್ರಾಜ್ಞಸ್ತಸ್ಮಾದ್ ಧೈರ್ಯಾಚ್ಚಚಾಲ ಹ।
ಅಥಾಸ್ಯ ಸಮಯಂ ಕೃತ್ವಾ ವಿನಾಶಾಯ ಸ್ಥಿತಾಃ ಪರೇ॥
ಈಪ್ಸಿತಂ ಚ ಮೃಗೇಂದ್ರಸ್ಯ ಮಾಂಸಂ ಯತ್ ತತ್ರ ಸಂಸ್ಕೃತಮ್।
ಅಪನೀಯ ಸ್ವಯಂ ತದ್ಧಿ ತೈರ್ನ್ಯಸ್ತಂ ತಸ್ಯ ವೇಶ್ಮನಿ।
ಯದರ್ಥಂ ಚಾಪ್ಯಪಹೃತಂ ಯೇನ ಯಚ್ಚೈವ ಮಂತ್ರಿತಮ್।
ತಸ್ಯ ತದ್ವಿದಿತಂ ಸರ್ವಂ ಕಾರಣಾರ್ಥಂ ಚ ಮರ್ಷಿತಮ್।
ಭೋಜನೇ ಚೋಪಹರ್ತವ್ಯೇ ತನ್ಮಾಂಸಂ ನ ಸ್ಮ ದೃಶ್ಯತೇ।
ಮೃಗರಾಜೇನ ಚಾಜ್ಞಪ್ತಂ ಮೃಗ್ಯತಾಂ ಚೋರ ಇತ್ಯುತ।
ವಾಙ್ಮಾತ್ರೇಣೈವ ಧರ್ಮಿಷ್ಠಃ ಸ್ವಭಾವೇ ನ ತು ದಾರುಣಃ।
ಧರ್ಮಚ್ಛದ್ಮಾ ಹ್ಯಹಂ ಪಾಪೋ ವೃಥಾಚಾರ ಪರಿಗ್ರಹಃ।
ತನ್ಮಾಂಸಂ ಚೈವ ಗೋ ಮಾಯೋಸ್ತತ್ಕ್ಷಣಾತ್ ತೈಸ್ತು ಢೌಕಿತಮ್। – ೧೧೩/೪೪-೫೪
೨ ಮಾಂಸಾಪಯನಂ ಜ್ಞಾತ್ವಾ ವ್ಯಾಘ್ರಸ್ತೇಷಾಂ ತು ತದ್ವಚಃ।
ಆಜ್ಞಾಪಯಾಮಾಸ ತದಾ ಗೋಮಾಯುರ್ವಧ್ಯತಾಮಿತಿ। – ೧೧೩/೫೫
೩ ಶಾರ್ದೂಲವಚನಂ ಶ್ರುತ್ವಾ ಶಾರ್ದೂಲಜನನೀ ತತಃ।
ಮೃಗರಾಜಂ ಹಿತೈರ್ವಾಕ್ಯೈಃ ಸಂಬೋಧಯಿತುಮಾಗಮತ್।
ಪುತ್ರ ನೈತತ್ ತ್ವಯಾ ಗ್ರಾಹ್ಯಂ ಕಪಟಾರಂಭಸಂವೃತಮ್।
ಕರ್ಮಸಂಘರ್ಷಜೈರ್ದೋಷೈರ್ದುಷ್ಯತ್ಯ ಶುಚಿಭಿಃ ಶುಚಿಃ।
ಶೂನ್ಯಾತ್ ತಚ್ಚ ಗೃಹ್ಮಾನ್ಮಾಂಸಂ ಯದದ್ಯಾಪಹೃತಂ ತವ।
ನೇಚ್ಛತೇ ದೀಯಮಾನಂ ಚ ಸಾಧು ತಾವದ್ ವಿಮೃಶ್ಯತಾಮ್।

ಮಗನೇ! ನಿನ್ನ ಈ ಹಳೇ ಸೇವಕರು ಕಪಟಿಗಳು. ತಮ್ಮ ಕಾರ್ಯಕ್ಕೆ ವಿರೋಧವುಂಟಾದ ಹಿನ್ನೆಲೆಯಲ್ಲಿ ಅಶುಚಿಗಳಾದ ಅವರು ಶುಚಿಯಾದ ನರಿಯನ್ನು ದೂಷಿಸುತ್ತಿವೆ. ಅವರು ರಾಜನರಿಯ ಉನ್ನತಿಯನ್ನು ಸಹಿಸುವುದಿಲ್ಲ. ರಾಜನಾದ ನಿನಗೂ, ರಾಜನರಿಗೂ ವೈರವುಂಟು ಮಾಡಲು ಈ ದೋಷಾದೋಷಣೆ ಮಾಡಿವೆ. ಲೋಭಿಗಳಿಗೆ ಶುಚಿಗಳು ದ್ವೇಷಯೋಗ್ಯರು. ಹೇಡಿಗಳಿಗೆ ವೀರರು, ಮೂರ್ಖರಿಗೆ ಪಂಡಿತರು. ದರಿದ್ರರಿಗೆ ಶ್ರೀಮಂತರು, ಅಧಾರ್ಮಿಕರಿಗೆ ಧಾರ್ಮಿಕರು ಹಾಗೂ ಕುರೂಪಿಗಳಿಗೆ ಸುರೂಪಿಗಳು ದ್ವೇಷ್ಯರು (ದ್ವೇಷ್ಯರಂತೆ).

ಕಾಡಿನಲ್ಲಿರುವ ಮುನಿಗೂ ಮಿತ್ರರು, ಶತ್ರುಗಳು, ಉದಾಸೀನರೂ ಇರುತ್ತಾರೆ. ಅನೇಕ ಪಂಡಿತರು ಲೋಭಿಗಳಾಗಿರುತ್ತಾರೆ. ಕಪಟದಿಂದಲೇ ಅವರ ಜೀವನ. ಭಾರೀ ಬುದ್ಧಿವಂತನಾದ ನಿರ್ದೋಷಿಗೂ ದೋಷದ ಅಂಟನ್ನು ಅಂಟಿಸುತ್ತಾರೆ. (ದೋಷಾರೋಪಣೆ ಮಾಡುವರು). ರಾಜನರಿ ಮತ್ತೊಬ್ಬರು ಕೊಡುವ ಮಾಂಸವನ್ನೂ ಬಯಸನು. ಶೂನ್ಯಗೃಹವಾದ ನಿನ್ನ ಗೃಹದಿಂದ ಮಾಂಸವು ಅಪಹೃತವಾಗಿ ಅದನ್ನು ಅವನ ಮನೆಯಲ್ಲಿ ಇಟ್ಟು ಅವನ ಮೇಲೆ ದೋಷ ಹೊರಿಸಲಾಗಿದೆ. ಅಸತ್ಯವಾದಿಗಳು ಸತ್ಯವಾದಿಗಳಂತೆಯೂ, ಸತ್ಯವಾದಿಗಳು ಅಸತ್ಯವಾದಿಗಳಂತೆಯೂ ಕಾಣುತ್ತಾರೆ. ಇದರಲ್ಲಿ ಸರಿಯಾದುದನ್ನು ಪರೀಕ್ಷಿಸಬೇಕು.

ಆಕಾಶವು ಭೂತಲದಂತೆ ಕಾಣುತ್ತದೆ. ಮಿಣುಕುಹುಳ ಅಗ್ನಿಯಂತೆ ತೋರುತ್ತದೆ. ಆದರೆ ಆಕಾಶದಲ್ಲಿ ಭೂಮಿಯಾಗಲೀ, ಮಿಣುಕುಹುಳದಲ್ಲಿ ಅಗ್ನಿಯು ಇರುವುದಿಲ್ಲ. ಆದ್ದರಿಂದ ಪ್ರತ್ಯಕ್ಷವಾಗಿ ಕಂಡರೂ ಪ್ರಮಾಣಿಸಿ, ಪರೀಕ್ಷಿಸುವುದು ಯೋಗ್ಯವಾದುದು. ಆಗ ಪಶ್ಚಾತ್ತಾಪ ಪಡುವ ಪ್ರಸಂಗ ಬರುವುದಿಲ್ಲ.

ಪ್ರಭುವಾದವನಿಗೆ ಬೇರೆಯವರನ್ನು ಕೊಲ್ಲಿಸುವುದು ಕಷ್ಟವಲ್ಲ. ಆದರೆ ಪ್ರಭುತ್ವವಿದ್ದವರು ಕ್ಷಮಿಸುವುದು ಶ್ಲಾಘನೀಯವಾದುದು ಹುತ್ತು ಅಪೇಕ್ಷಣೀಯ. ನೀನು ರಾಜನರಿಯನ್ನು ಸಚಿವನನ್ನಾಗಿ ನೇಮಿಸಿದ್ದೀಯಾ. ನಿನ್ನ ಸೇವಕರಲ್ಲಿ (ಸಾಮಂತ) ಅವನೂ ಪ್ರಖ್ಯಾತನೇ. ಅವನು ದುಃಖದಿಂದ ಈ ಕಡೆ ಬರುತ್ತಿದ್ದಾನೆ. ಸಹೃದಯಿಯಾದ ಅವನನ್ನು ನಿನ್ನ ಬಳಿ ಇರಿಸಿಕೊ. ಇಲ್ಲದೆ ಇದ್ದರೆ ನೀನು ವಿನಾಶ ಹೊಂದುವೆ (ದುಷ್ಟರ ಮಾತು ಕೇಳಿ).

ಆ ರಾಜನರಿಯು ಉಳಿದ ನರಿಗಳ ಸಮೂಹದಿಂದ ಬಂದು ನನಗೆ (ಹುಲಿಯ ತಾಯಿಗೆ) ನಡೆದ ಕಪಟವನ್ನು ಹೀಗೆ ಮಾಡಲಾಗಿದೆ ಎಂದು ಹೇಳಿತು.

ತನ್ನ ಮಗನಿಗೆ ತಾಯಿ ಹುಲಿ ಹೀಗೆ ತಿಳಿ ಹೇಳಿತು –

ನಂತರ ರಾಜನರಿಯ ಸ್ವಭಾವ ತಿಳಿದ ಹುಲಿಯು (ರಾಜ) ಅದನ್ನು ಸತ್ಕರಿಸಿ ದೋಷಾರೋಪದಿಂದ ವಿಮುಕ್ತಿಗೊಳಿಸಿ ಸ್ನೇಹಪೂರ್ವಕವಾಗಿ ಆಲಿಂಗಿಸಿಕೊಂಡಿತು.

---

ತಸ್ಮಾದಧಾರಿಸಂಘಾತಾದ್ ಗೋಮಾಯೋಃ ಕಶ್ಚಿದಾಗತಃ ।
ಧರ್ಮಾತ್ಮಾ ತೇನ ಚಾಖ್ಯಾತಂ ಯಥೈತದ್ ಕಪಟಂ ಕೃತಮ್ । – ೧೧೩/೫೭,೬೨,೬೯

**ತತೋ ವಿಜ್ಞಾತ ಚಾರಿತ್ರಃ ಸತ್ಕೃತಃ ಚ ವಿಮೋಕ್ಷಿತಃ ।**
**ಪರಿಷ್ವಕ್ತಶ್ಚ ಸಸ್ನೇಹಂ ಮೃಗೇಂದ್ರೇಣ ಪುನಃ ಪುನಃ ॥** - ೧೧೩/೭೦

ನೀತಿಶಾಸ್ತ್ರಬಲ್ಲ ರಾಜನರಿಯು, ಹುಲಿ ರಾಜ ತನ್ನನ್ನು ಕೊಲ್ಲಲು ಆದೇಶಿಸಿದುದನ್ನು ತಿಳಿದು ದುಃಖತಪ್ತನಾಗಿ ಇನ್ನು ಬದುಕಿರಬಾರದೆಂದು ಬಗೆದು, ಉಪವಾಸವೇ ಇದ್ದು ಮರಣ ಹೊಂದಲು (ಪ್ರಾಯೋಪವೇಶ) ಬಯಸಿತು[೧]. ಅದಕ್ಕಾಗಿ ಹುಲಿಯ ಅನುಮತಿ ಪಡೆಯಿತು. ಹುಲಿಗೂ ನರಿಯ ನಿರ್ಣಯದಿಂದ ನೊಂದು ಅಳುತ್ತಾ ನರಿಯನ್ನು ಉಪವಾಸದಿಂದ ತಡೆದು ಸಮ್ಮಾನ ಮಾಡಿತು[೨]. ನರಿಗೂ ಇದರಿಂದ ಗಾಬರಿಯಾಗಿ ಹುಲಿ ರಾಜನನ್ನು ನಮಿಸಿತು. ಕಣ್ಣಲ್ಲಿ ನೀರು ಬಂದಿತು. ಕಂಠ ಬಿಗಿದು ಹೀಗೆ ನುಡಿಯಿತು[೩].

'ಹುಲಿ ರಾಜ! ನನ್ನನ್ನು ನೀನೇ ಹಿಂದೆ ಪೂಜಿಸಿದೆ. ಸಚಿವ ಪದವಿ ನೀಡಿದೆ. ಪೂರ್ವಭೃತ್ಯರ ಮಾತಿನಿಂದ ದೋಷಾರೋಪಕ್ಕೆ ಒಳಗಾಗಿ ನಿನ್ನಿಂದ ಅವಮಾನಿತನಾದೆ (ನನ್ನನ್ನು ಕೊಲ್ಲಲೂ ಆದೇಶಿಸಿ). ಇನ್ನು ನಾನು ನಿನ್ನೊಡನೆ ಇರುವುದು ಉಚಿತವಲ್ಲ. ನಾನು ಸಮರ್ಥ ಎಂದು ಭಾವಿಸಿ ನನ್ನನ್ನು ತೆಗೆದುಕೊಂಡು ಪರೀಕ್ಷಿಸಿ ಸಚಿವಸ್ಥಾನವನ್ನು ಕೊಟ್ಟು, ನಂತರ ನನ್ನೊಡನೆ ಮಾಡಿಕೊಂಡ ಒಪ್ಪಂದವನ್ನು ಮುರಿದು ನನ್ನನ್ನು ಅವಮಾನಗೈದೆ. ನನ್ನನ್ನು ಶೀಲವಂತನೆಂದು ಸಭೆಯಲ್ಲಿ ಘೋಷಿಸಿಯಾದ ಮೇಲೆ ಪ್ರತಿಜ್ಞಾರಕ್ಷಣೆಗೆ ದೋಷ ಕಂಡು ಬಂದರೂ ಅದನ್ನು ಹೇಳಬಾರದು. ನಾನು ಶಂಕಾಗ್ರಸ್ತ. ಉಳಿದವರು ನನ್ನ ದೋಷಗಳನ್ನು ಹುಡುಕುವವರು. ಮೊದಲು ಭಿನ್ನವಾಗಿ ಅನಂತರ ಒಂದುಗೂಡಿಸಿದ ವಸ್ತುವಿನಲ್ಲಿ ಇರುವ ಪ್ರೀತಿಯು ಸ್ನೇಹಪೂರ್ವಕವಾಗಿರುವುದಿಲ್ಲ[೪].

ಜಗತ್ತಿನಲ್ಲಿ ಸ್ವಾಮಿಹಿತ ಬಯಸುವವನು ಯಾವನೋ ಒಬ್ಬ ಮಾತ್ರ. ನಿಜವಾಗಿ ಸ್ನೇಹವಿರುವ ಜನರು ದುರ್ಲಭ. ಒಬ್ಬ ವ್ಯಕ್ತಿಯು ಸಮರ್ಥವಾಗಿರಲಿ ಇಲ್ಲದಿರಲಿ, ನೂರರಲ್ಲಿ

---

೧ ಅನುಜ್ಞಾಪ್ಯ ಮೃಗೇಂದ್ರಂ ತು ಗೋಮಾಯುರ್ನೀತಿಶಾಸ್ತ್ರವಿತ್ ।
ತೇನಾಮರ್ಷೇಣ ಸಂತಪ್ತಃ ಪ್ರಾಯಮಾಸಿತುಮೈಕ್ಷತ ॥ - ೧೧೩/೭೧

೨ ಶಾರ್ದೂಲಸ್ತತ್ರ ಗೋಮಾಯುಂ ಸ್ನೇಹಾತ್ ಪ್ರಸ್ರುತಲೋಚನಃ ।
ಅವಾರಯತ್ಸ ಧರ್ಮಿಷ್ಠಂ ಪೂಜಯಾ ಪ್ರತಿಪೂಜಯತ್ ॥ - ೧೧೩/೭೨

೩ ತಂ ಸ ಗೋಮಾಯುರಾಲೋಕ್ಯ ಸ್ನೇಹಾದಾಗತ ಸಂಭ್ರಮಮ್ ।
ಬಭಾಷೇ ಪ್ರಣತೋ ವಾಕ್ಯಂ ಬಾಷ್ಪಗದ್ಗದಯಾ ಗಿರಾ ॥ - ೧೧೩/೭೩

೪ ಪೂಜಿತೋಽಹಂ ತ್ವಯಾ ಪೂರ್ವಂ ಪಶ್ಚಾಚ್ಚೈವ ವಿಮಾನಿತಃ ।
ಪರೇಷಾಮಾಸ್ಪದಂ ನೀತೋ ವಸ್ತುಂ ನಾಮ್ಯಹಂ ತ್ವಯಿ ।
ಸಮರ್ಥ ಇತಿ ಸಂಗೃಹ್ಯ ಸ್ಥಾಪಯಿತ್ವಾ ಪರೀಕ್ಷ್ಯ ಚ ।
ಕೃತಂ ಚ ಸಮಯಂ ಭಿತ್ವಾ ತ್ವಯಾಽಹಮವಮಾನಿತಃ ।
ಏವಂ ಚಾವಮತಸ್ಯೇಹ ವಿಶ್ವಾಸಂ ಕಿಂ ಪ್ರಯಾಸ್ಯಸಿ ।
ಶಂಕಿತಸ್ತ್ವದಹಂ ಭೀತಃ ಪರೇ ಛಿದ್ರಾನುದರ್ಶಿನಃ ॥ - ೧೧೩/೭೪-೮೨

ಒಬ್ಬರು ಮಾತ್ರ ಪುರುಷರ ಸ್ವಭಾವವನ್ನು ಸರಿಯಾಗಿ ತಿಳಿಯುತ್ತಾರೆ. ಬೇರೊಬ್ಬರ ನಿಜವಾದ ಮನಃಸ್ಥಿತಿ ಅರಿಯುವುದು ಬಹು ಕಷ್ಟಕರವಾದುದು[೧].

ಹೀಗೆ ಅನೇಕರೀತಿಯಿಂದ ಧರ್ಮ, ಅರ್ಥ, ಯುಕ್ತಿಗಳಿಂದ ಮೃಗರಾಜನನ್ನು ಸಮಾಧಾನಗೊಳಿಸಿದ ರಾಜನರಿಯು (ಬೇರೊಂದು) ಕಾಡಿಗೆ ಹೊರಟು ಹೋಯಿತು. ಮೃಗೇಂದ್ರನ ಒಲಿಸುವ ಮಾತುಗಳನ್ನು ಕೇಳದೆ ಬುದ್ಧಿವಂತನಾದ ನರಿಯು ಪ್ರಾಯೋಪವೇಶ ಮಾಡಿ ದೇಹತ್ಯಾಗ ಮಾಡಿ ಸ್ವರ್ಗಕ್ಕೆ ಹೋಯಿತು[೨].

## ಸಂದೇಶಗಳು-ವಿವರಣೆಗಳು

೧. ಪ್ರಪಂಚದಲ್ಲಿ ಅಧಿಕಾರಸೂತ್ರ ಹಿಡಿದವರು ಅವರ ಅನುಯಾಯಿಗಳು, ಚೇಲಾಗಳು ಹಾಗೂ ಇವರ ಮಧ್ಯೆ ಸಿಕ್ಕಿ ಬಿದ್ದ ಸಾಧುವ್ಯಕ್ತಿಯ ಚಾರಿತ್ರ್ಯಹರಣ ಹೇಗಾಗುತ್ತದೆ ಎನ್ನುವ ಸಂದೇಶ ಈ ಉಪಾಖ್ಯಾನದಲ್ಲಿ ಮೂಡಿ ಬಂದಿದೆ.

೨. ಹುಲಿ, ನರಿ ವಾಸ್ತವವಾಗಿ ದುಷ್ಟ ಕಾಡುಮೃಗಗಳು. ಇದ್ದುದರಲ್ಲಿಯೇ ಹುಲಿಯು ಮೃಗರಾಜನೆನಿಸಿ ಗಾಂಭೀರ್ಯ (ಕಾಡು) ಮೊದಲಾದ ಗುಣಗಳಿಂದ ಇರುತ್ತವೆ.

೩. ಇಲ್ಲಿ ಬಂದಿರುವ ನರಿ ಪೂರ್ವಜನ್ಮದ ದುಷ್ಟರಾಜ. ಹೇಗೋ ಅವನಿಗೆ ಪೂರ್ವಜನ್ಮಸ್ಮೃತಿಯಿಂದಾಗಿ ತನ್ನ ಬಗ್ಗೆ ದೈವವಶಾತ್ ಅಸಹ್ಯ ಹುಟ್ಟಿ ಸಾಧು ಬದುಕಿನ ಜಾಡು ಹಿಡಿದ. ಸುತ್ತಲ ವಾತಾವರಣ ಇತರ ನರಿಗಳು ಇವನ ಮನಸ್ಸನ್ನು ಕೆಡಿಸಲು ವಿಫಲವಾದವು. ಆದ್ದರಿಂದ ಮುಂದಿನ ಜನ್ಮದಲ್ಲಿ ಎಂತಹ ಕೆಟ್ಟ ಜನ್ಮಬಂದರೂ ಸದ್ಬುದ್ಧಿಯನ್ನು ದೇವರಲ್ಲಿ ಬೇಡಬೇಕು.

೪. ಹುಲಿಯಂತಹ ರಾಜನೀ ನರಿಗೆ ಉನ್ನತ ಪದವಿ ಕೊಟ್ಟು ಸಾಕಿತು. ಎಂತಹ ಪದವಿ ಬಂದರೂ ಸ್ಥಾನ ಕೊಟ್ಟವರೊಡನೆ ಪ್ರಾಮಾಣಿಕ, ಧಾರ್ಮಿಕ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿಸಬೇಕು, ಒಪ್ಪಂದ ಮಾಡಿಕೊಳ್ಳಬೇಕು ನರಿಯಂತೆ. ಸಾಮಾನ್ಯವಾಗಿ ಎಂತಹ ಕೆಟ್ಟ ಅಧಿಕಾರಿಗಳಾದರೂ ಇದಕ್ಕೆ ಒಪ್ಪುತ್ತಾರೆ. ಜಗತಿನಲ್ಲಿ ಇದು ಪ್ರಾಯಃ ಕಂಡಿದೆ.

೪. ಇಂತಹ ಅಧಿಕಾರಿ, ಸಿಬ್ಬಂದಿಯ ಸ್ನೇಹವನ್ನು ಭಂಗಗೊಳಿಸುವ ಪ್ರಯತ್ನವನ್ನು ಕ್ಷುದ್ರ, ಇತರೆ ಸಿಬ್ಬಂದಿ ಮಾಡುತ್ತದೆ. ಇಲ್ಲಿ ರಾಜನ ಪೂರ್ವಭೃತ್ಯರು. ಅವರು ಸಂಖ್ಯೆ, ಸತ್ತ್ವದಲ್ಲಿ

---

೧ ಕಶ್ಚಿದೇವ ಹಿತೇ ಭರ್ತುಃ ದೃಶ್ಯತೇ ನ ಪರಾತ್ಮನಃ।
ಸಮರ್ಥೋ ವಾಪ್ಯಶಕ್ತೋ ವಾ ಶತೇಷ್ವೇಕೋಽಧಿಗಮ್ಯತೇ॥ - ೧೧೩/೮೪,೮೫

೨ ಪ್ರಸಾದಯಿತ್ವಾ ರಾಜಾನಂ ಗೋಮಾಯುರ್ವನಮಭ್ಯಯಾತ್।
ಅಗೃಹ್ಯಾನುನಯಂ ತಸ್ಯ ಮೃಗೇಂದ್ರಸ್ಯ ಸ ಬುದ್ಧಿಮಾನ್।
ಗೋಮಾಯು ಪ್ರಾಯಮಾಸೀನಸ್ತ್ಯಕ್ತ್ವಾ ದೇಹಂ ದಿವಂ ಯಯೌ॥ - ೧೧೩/೮೭,೮೮

ಬಹಳ ಜನರು ಇರುತ್ತಾರೆ. ಅವರ ಮಾತಿಗೆ ಬೆಲೆ ಕೊಡಬೇಕಾಗುತ್ತದೆ. ಅಧಿಕಾರಿಗಳು ಕೊಡುತ್ತಾರೆ, ಸಜ್ಜನರನ್ನು ಬಲಿಹಾಕಲು ಕಾಯುವ ದುಷ್ಟಶಕ್ತಿಗಳು ಇದನ್ನು ಉಪಯೋಗಿಸಿ ವಂಚನೆ ಮಾಡುತ್ತಾರೆ. ಸಜ್ಜನರು ಬಲಿಬೀಳುತ್ತಾರೆ, ನರಿಯಂತೆ ಆರಂಭದಲ್ಲಿ. ಆದರೂ ಸಜ್ಜನರು ಹೆದರಬಾರದು. ತನ್ನ ಸುತ್ತ ಏನು ನಡೆಯುತ್ತಿದೆ ಎಂಬ ಪರಿಜ್ಞಾನವನ್ನು ನರಿಯು ಹುಲಿಯ ತಾಯಿಗೆ ನಿವೇದಿಸಿ, ಅದರ ಸಹಾಯದಿಂದ ಮೋಸದ ಜಾಲದಿಂದ ಹೊರಬಂತು. ತಾಯಿ ಹುಲಿ ಮಗನಿಗೆ ತಿಳಿ ಹೇಳಿದ್ದರಿಂದ ಸಾಧು ನರಿ ಪಾರಾಯಿತು. ಅದರ ನಡತೆ ಬಗ್ಗೆ ಹುಲಿ ಮೆಚ್ಚಿ ದೋಷಮುಕ್ತ ಮಾಡಿತು. ಆದ್ದರಿಂದ ನರಿಯು ತನ್ನ ಪ್ರಾಮಾಣಿಕತೆಯನ್ನು ರಾಜನಿಗೆ ಆತನ ತಾಯಿ ಮೂಲಕ ತೆರೆದಿಟ್ಟಂತೆ ನಾವು ಅಧಿಕಾರದ ಗದ್ದುಗೆಯಲ್ಲಿರುವವರ ಆಪ್ತರ ಸಹಾಯ ತೆಗೆದುಕೊಳ್ಳಬೇಕು.

೫. ಆದರೂ ನರಿಯು ನಡೆದುದನ್ನು ವಿಮರ್ಶಿಸಿ ತಾನು ಹುಲಿರಾಜನಿಂದ ದೂರವಾಗಿರಲು ವೈರಾಗ್ಯ ತಾಳಿ, ಮುಂದೆ ಪ್ರಾಯೋಪವೇಶಕ್ಕೂ ಮುಂದಾಯಿತು. ಅತಿ ಲೌಕಿಕ ಜನರ ಸಹವಾಸ ಅಧ್ಯಾತ್ಮಿಕ ಸಾಧನೆಗೆ ಮುಳ್ಳು. ಅವರಿಂದ ದೂರವಾಗಬೇಕು. ಇಂದ್ರಿಯ ನಿಗ್ರಹಕ್ಕಾಗಿ ವ್ರತೋಪವಾಸ ಮಾಡುತ್ತಾ ಇದ್ದರೆ ಸದ್ಗತಿ ನಿಶ್ಚಿತ. ನರಿಯೂ ಹಿಂದಿನ ಜನ್ಮದಲ್ಲಿ ಏನನ್ನೂ ಮಾಡದಿದ್ದರೂ, ಈ ನರಿ ಜನ್ಮದಲ್ಲಿದ್ದುಕೊಂಡೇ ಸಾಧನ ಮಾಡಿದ್ದು ಅದ್ಭುತ ಆದರ್ಶ. ನರಿಯೇ ಮಾಡಿದ ಮೇಲೆ ನರಸಾಧನೆ ಮಾಡಲು ಏಕೆ ಶಂಕೆ?

**'ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಬೇಡಿ ಹುಚ್ಚಪ್ಪಗಳಿರಾ'**
**- ಪುರಂದರದಾಸರು**

೬. ಹುಲಿ ರಾಜ ನರಿಯನ್ನು ಸಮಾಧಾನ ಮಾಡಿದರೂ ಆಗಲಿಲ್ಲ. ಕಾರಣ ಆತನ ಸುತ್ತಲಿನ ದುಷ್ಟಪರಿಸರ ಜನರಿಗೆ ಇರಲು ಅನುಭವಿಸಲು ಅಸಾಧ್ಯ. ಹೀಗಾಗಿ ಉನ್ನತಸ್ಥಾನದಲ್ಲಿರು-ವವರು ಸಮಾಜಕ್ಕೆ ದನಿಯಾದವರಿಗೆ ನ್ಯಾಯ ಒದಗಿಸಲಾರರು.

೭. ಮುಂದೆ ಎಂತಹ ಕೆಟ್ಟ ಜನ್ಮ ಬಂದರೂ ಸಚ್ಚಾರಿತ್ರ್ಯ ಬಯಸಬೇಕು. ಹಾಗೇ ಇರಬೇಕು. ಅಲ್ಲೂ ಸಜ್ಜನರನ್ನು ಗ್ರಹಿಸಿ, ಅವರ ಸಹಾಯ ಮಾಡದ ದುಷ್ಟರಿಂದ ದೂರ ಹೋಗಲು ಸಾತ್ವಿಕ ರೀತಿಯಿಂದಲೇ ಪ್ರಯತ್ನಿಸಬೇಕು.

# ೮೪. ಒಂಟೆಯ ಕಥೆ

ಧರ್ಮರಾಜನ ಪ್ರಶ್ನೆ – 'ತಾತ! ರಾಜನು ಏನು ಮಾಡಿದರೆ ಸುಖಿಯಾಗುತ್ತಾನೆ?[೧]

ಭೀಷ್ಮರ ಉತ್ತರ – 'ರಾಜನು ಏನು ಮಾಡಬೇಕು? ಇಲ್ಲಿ ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ತಿಳಿಸುತ್ತೇನೆ. ನಾನು ಒಂಟೆಯ ಕಥೆಯನ್ನು ಕೇಳಿದ್ದೇನೆ[೨]. ಒಂಟೆಯಂತೆ ನಡೆದುಕೊಳ್ಳಬಾರದು. ಹಾಗಾದರೆ ಮಾತ್ರ ರಾಜ ಸುಖಿಯಾಗಿರುತ್ತಾನೆ. ಆ ಕಥೆ ಹೀಗಿದೆ.

ಕೃತಯುಗದಲ್ಲಿದ್ದ ಒಂದು ಒಂಟೆಗೆ ಜಾತಿಸ್ಮರಣೆ (ಪೂರ್ವಜನ್ಮಸ್ಮರಣೆ) ಇತ್ತು. ಅದು ಅರಣ್ಯದಲ್ಲಿ ಮಾಡಿದ ಮಹಾತಪಸ್ಸಿಗೆ ಒಲಿದ ಚತುರ್ಮುಖ ಒಂಟೆಗೆ ವರ ಕೇಳೆಂದು ಹೇಳಿದ. ಒಂಟೆಯು 'ಭಗವನ್! ನಿನ್ನ ಅನುಗ್ರಹದಿಂದ ನನ್ನ ಕುತ್ತಿಗೆ (ಕಂಠ) ನೂರು ಯೋಜನ ದೂರ ಹೋಗುವಂತಾಗಲಿ. ನಾನು ಭಕ್ಷಿಸುವುದು ಸುಲಭವಾಗುತ್ತದೆ [೩](ದೂರ ನಾನೇ ಓಡಾಡುವುದು ತಪ್ಪುತ್ತದೆ).

ಬ್ರಹ್ಮ ತಥಾಸ್ತು ಎಂದ. ಒಂಟೆ ತನ್ನ ಕಾಡಿಗೆ ಹೋಯಿತು. ಬ್ರಹ್ಮವರದಿಂದ ಒಂಟೆ ಆಲಸ್ಯ ತೋರಿಸಲು, ತನ್ನ ಸ್ಥಳದಿಂದ ಹೊರಹೋಗಿ ಆಹಾರ ತರಲು ಇಚ್ಛಿಸಲಿಲ್ಲ. ಇದ್ದಲ್ಲಿಂದಲೇ (ಒಮ್ಮೆ) ತನ್ನ ಕುತ್ತಿಗೆಯನ್ನು ನೂರು ಯೋಜನ ಉದ್ದ ಮಾಡಿ ಸಂಚರಿಸಿತು. ಅದೇ ವೇಳೆ ಭಾರೀ ಬಿರುಗಾಳಿ ಬೀಸಲು ಒಂಟೆಯು ತನ್ನ ತಲೆ ಹಾಗೂ ಕತ್ತನ್ನು ಗುಹೆಯೊಂದರಲ್ಲಿಟ್ಟಿತು. ಬಿರುಗಾಳಿಯೊಡನೆ ಜಗತ್ತನ್ನೇ ಕೊಚ್ಚಿಹಾಕುವ ಮಳೆಯೂ ಆಗ ಬಂತು[೪].

ಅದೇ ವೇಳೆ ಹಸಿವೆಯಿಂದ ಬಳಲಿದ ಹಾಗೂ ಶೀತದಿಂದ ನಡುಗುತ್ತಿದ್ದ ಒಂದು ನರಿಯು ತನ್ನ ಪತ್ನಿಯೊಡನೆ ಅದೇ ಗುಹೆಯನ್ನು ಪ್ರವೇಶಿಸಿತು. ಹಸಿವೆಯಿಂದ ಬಳಲಿದ ಮಾಂಸಾಹಾರಿಯಾದ ನರಿಯು ಅಲ್ಲಿ ಕಂಡ ಒಂಟೆಯ ಕತ್ತನ್ನು ತಿಂದು ಹಾಕಿತು. ತನ್ನ ಕತ್ತನ್ನು

---

೧ ಕಿಂ ಪಾರ್ಥಿವೇನ ಕರ್ತವ್ಯಂ ಕಿಂ ಚ ಕೃತ್ವಾ ಸುಖೀ ಭವೇತ್ ।

೨ ನ ತ್ವೇವಂ ವರ್ತಿತವ್ಯಂ ಸ್ಮ ಯಥೇದಮನುಶುಶ್ರುಮಃ ।
ಉಷ್ಟ್ರಸ್ಯ ಸುಮಹದ್‌ವೃತ್ತಂ ತನ್ನಿಬೋಧ ಯುಧಿಷ್ಠಿರ ॥

೩. ಭಗವನ್ ತ್ವತ್ಪ್ರಸಾದೇನ ದೀರ್ಘಾ ಗ್ರೀವಾ ಭವೇದಿಯಮ್ ।
ಯೋಜನಾನಾಂ ಶತಂ ಸಾಗ್ರಂ ಯಾ ಗಚ್ಛೇತ್ ಚರಿತುಂ ವಿಭೋ ॥ – ೧೧೪/೬

೪ ಸ ಚಕಾರ ತದಾಽಽಲಸ್ಯಂ ವರದಾನಾತ್ ಸ ದುರ್ಮತಿಃ ।
ಸ ಚೈತಚ್ಚರಿತುಂ ಗಂತುಂ ದುರಾತ್ಮಾ ಕಾಮೋಹಿತಃ ॥

ಯಾರೋ ತಿನ್ನುತ್ತಿದ್ದಾರೆಂದು ತಿಳಿದ ಒಂಟೆಯು ಕತ್ತನ್ನು ಹಿಂದೆ ಸೆಳೆಯಲು ಪ್ರಯತ್ನಿಸಿತು. ಅಷ್ಟು ಹೊತ್ತಿಗೆ ಕೆಳಭಾಗದವರೆಗೆ ಚಾಚಿದ ಕತ್ತಿನ ಅರ್ಧಭಾಗವನ್ನು ತಿಂದು ಬಿಟ್ಟಿತ್ತು. ಹೀಗೆ ಆ ನರಿಯು ಆ ಒಂಟೆಯನ್ನು ಮಳೆಗಾಲ ಮುಗಿಯುವ ಹೊತ್ತಿಗೆ ಪೂರ್ಣವಾಗಿ ತಿಂದು ಮಳೆ ಮುಗಿಯಲು ಗುಹೆಯಿಂದ ಹೊರ ಹೋಯಿತು[೧].

ಹೀಗೆ ಒಂಟೆಯ ದುರ್ಬುದ್ಧಿ ಅದನ್ನು ಕೊಂದಿತು. ಆಲಸ್ಯದಿಂದ ಎಂತಹ ದೋಷವುಂಟಾಗುತ್ತದೆ ಎಂದು ರಾಜನೇ ತಿಳಿ ಎಂದರು ಭೀಷ್ಮರು[೨].

ಆದ್ದರಿಂದ ರಾಜನ್! ನೀನೂ ಒಂಟೆಯಂತೆ ಇರದೆ ಯೋಗದಿಂದ (ಕರ್ಮಯೋಗ) ಜಿತೇಂದ್ರಿಯನಾಗು. 'ವಿಜಯಕ್ಕೆ ಬುದ್ಧಿಯೇ ಮೂಲವೆಂದು ಮನು ಹೇಳುತ್ತಾನೆ[೩].

ಬುದ್ಧಿಯ ಬಲದಿಂದ ಮಾಡುವ ಕರ್ಮಗಳು ಉತ್ತಮ. ಬಾಹುಬಲದಿಂದ ಮಾಡುವಂತಹವು ಮಧ್ಯಮ. ಜಘಾಬಲದಿಂದ ಮಾಡುವ ಸೇವಾ ವೃತ್ತಿರುಪಕರ್ಮಗಳು ಅಧಮ. ಭಾರ ಹೊರುವ ಕರ್ಮಗಳು ಅತೀ ಅಧಮ.

ಆದ್ದರಿಂದ ಧರ್ಮರಾಜನೇ ನೀನು ಇಂದ್ರಿಯಜಯವುಳ್ಳವನಾಗಿ, ಬುದ್ಧಿಬಲದಿಂದ ಕಾರ್ಯ ಮಾಡು. ದಕ್ಷನೂ, ಸಮರ್ಥನೂ ಆಗಿ ಗುಪ್ತಚಾರ ಮಂತ್ರಾಲೋಚನ ಮಾಡಿ ವಿದ್ಯಾವಂತನಾದ ಒಳ್ಳೆಯ ಸಹಾಯವುಳ್ಳವನಾಗಿ ರಾಜ್ಯಭಾರ ಮಾಡು ಎಂದು ಭೀಷ್ಮರು ಉಪದೇಶಿಸಿದರು.

## ಸಂದೇಶಗಳು-ವಿವರಣೆಗಳು

ಬ್ರಹ್ಮದೇವರನ್ನು ಒಲಿಸಿ ವರ ಕೇಳಿದ್ದು ಅತ್ಯಂತ ತಾಮಸ ನಡೆಯ ಫಲ. ಆಲಸ್ಯಕ್ಕೆ ಕಾರಣವಾದದ್ದು. ಅದಕ್ಕೆ ತನ್ನ ನಾಶವೇ ಅದರ ಫಲವಾಯಿತು. ವರ ಕೇಳುವಾಗ ಬುದ್ಧಿ

---

೧ ಸ ದೃಷ್ಟ್ವಾ ಮಾಂಸಜೀವೀ ತು ಸುಭೃಶಂ ಕ್ಷುಚ್ಛ್ರಮಾನ್ವಿತಃ।
ಅಭಕ್ಷಯತ್ ತತೋ ಗ್ರೀವಾಮುಷ್ಟ್ರಸ್ಯ.................. ॥
ತದಾ ಸಂಕೋಚನೇ ಯತ್ನಮಕರೋತ್ ಭೃಶದುಃಖಿತಃ।
ಯಾವದೂರ್ಧ್ವಂ ಅಧಶ್ಚೈವ ಗ್ರೀವಾಂ ಸಂಕ್ಷಿಪತೇ ಪಶುಃ॥
ತಾವತ್ತೇನ ಸದಾರೇಣ ಜಂಬುಕೇನ ಸ ಭಕ್ಷಿತಃ।
ವಿಗತೇ ವಾತವರ್ಷೇ ಚ ನಿಶ್ಚಕ್ರಾಮ ಗುಹಾಮುಖಾತ್ ॥

೨ ಏವಂ ದುರ್ಬುದ್ಧಿನಾ ಪ್ರಾಪ್ತಮುಷ್ಟ್ರೇಣ ನಿಧನಂ ತದಾ।
ಆಲಸ್ಯಕರಣಾತ್ ಪಶ್ಯ ಮಹದ್ದೋಷಮುಪಾಗತಮ್ ॥

೩ **ವರ್ತಸ್ವ ಬುದ್ಧಿಮೂಲಂ ಹಿ ವಿಜಯಂ ಮನುರಬ್ರವೀತ್ ।**
**ಬುದ್ಧಿಶ್ರೇಷ್ಠಾನಿ ಕರ್ಮಾಣಿ ಬಾಹುಮಧ್ಯಾನಿ ಭಾರತ ॥**
**ತಾನಿ ಜಂಘಾಜಘನ್ಯಾನಿ ಭಾರಪ್ರತ್ಯವರಾಣಿ ಚ।** - ೧೧೪/೧-೧೮

ಉಪಯೋಗಿಸಬೇಕು. ವರ ಸಿಕ್ಕ ಮೇಲೂ ಬುದ್ಧಿವಂತಿಕೆಯಿಂದ ವರ್ತಿಸಬೇಕು. ಇಲ್ಲದಿದ್ದರೆ ತನ್ನ ನಾಶವೇ ಫಲವಾದೀತು.

ಒಂಟೆಯು ಬ್ರಹ್ಮನನ್ನು ಕೇಳಿದ ವರ ಕುಂಭಕರ್ಣನ ವರದಂತೆ. ಒಂಟೆಯು ಆಹಾರಕ್ಕಾಗಿ ಪ್ರಯತ್ನಿಸುವುದನ್ನೇ ತಪ್ಪಿಸಿಕೊಳ್ಳಲು ತನ್ನ ಆಗಲೇ ಉದ್ದದ ಕತ್ತನ್ನು ಅತೀ ಉದ್ದವಾಗಿರಲು ಕೇಳಿತು. ಆಲಸ್ಯ ಮೂಲವಾದ ವರ ತನ್ನ ನಾಶಕ್ಕೆ ಕಾರಣವಾಯಿತು. ಆಲಸ್ಯವನ್ನು ತಾಮಸ ಕರ್ತೃವಿಗೆ ಹೇಳಲಾಗಿದೆ, ಗೀತೆಯಲ್ಲಿ[೧].

ಆಲಸಿಗಳೂ ದೀರ್ಘಸೂತ್ರಿಗಳೂ ತಾಮಸರಲ್ಲಿ ಸಾತ್ವಿಕತಾಮಸರೆನಿಸುವರು.

**ಅಲಸೋ ದೀರ್ಘಸೂತ್ರೀ ಚ ಸತ್ತ್ವಯುಕ್ ತಾಮಸೋಮತಃ ॥ (ಗೀ.ತಾ.).**

ಒಂಟೆಯು ಪರಾಪಕಾರಿಯಲ್ಲವಾದರೂ ಮುಂದಾಗುವುದನ್ನು ನಿರ್ಲಕ್ಷಿಸಿ ತನ್ನ ನಾಶಕ್ಕೆ ಎರವಾಯಿತು.

*****

೧ ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋಽನೈಷ್ಕೃತಿಕೋಽಲಸಃ ।
ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ - ೧೮/೨೮

## ೮೫. ಗಂಗಾ-ಸಾಗರ ಸಂವಾದ

ಧರ್ಮರಾಜನು ಭೀಷ್ಮರನ್ನು ಪ್ರಶ್ನಿಸಿದ -

'ತಾತ ! ದುರ್ಬಲರಾಜನು (ದುರ್ಲಭವಾದ) ರಾಜ್ಯವನ್ನು ಪಡೆದೂ ಸಾಧನಾರಹಿತನಾಗಿದ್ದು(ಯಾವುದೇ ಸೈನ್ಯ, ಕೋಶ ಮೊದಲಾದ) ಪ್ರಬಲ ಶತ್ರುವಿನ ಮುಂದೆ ಹೇಗೆ ನಿಲ್ಲಬೇಕು(ಎದುರಿಸಬೇಕು)?

ಇದಕ್ಕೆ ಭೀಷ್ಮರು ಗಂಗಾಸಾಗರಸಂವಾದರೂಪ ಇತಿಹಾಸವನ್ನು ಹೇಳಿದರು.

ನಾರಾಯಣನ ಆವಾಸಸ್ಥಾನವಾದ ಎಲ್ಲ ನದಿಗಳಿಗೂ ಪತಿಯಾದ ಸಾಗರನು(ವರುಣನು) ತನಗೆ ಬಂದ ಒಂದು ಸಂಶಯವನ್ನು ನದಿಗಳ ಮುಂದಿಟ್ಟನು.

(ವಿ.ಸೂ.: ಸುರಾರಿನಿಲಯಃ ಶಶ್ವತ್ ಸಾಗರಃ ಸರಿತಾಂ ಪತಿಃ । ಎಂದು ಮೂಲ. ಇಲ್ಲಿ ಸುರಾರಿನಿಲಯ ಎಂದರೆ ದೈತ್ಯರು ವಾಸಿಸುವ ಸ್ಥಾನ ಸಾಗರ ಎಂದೂ ಅರ್ಥವಾಗುತ್ತದೆ. ಇಲ್ಲಿ ನಾರಾಯಣ ಎಂದು ಯೌಗಿಕ ಅರ್ಥ ತೆಗೆದುಕೊಳ್ಳಲಾಗಿದೆ).

ಎಲೈ ನದಿಗಳೇ! ನೀವು ತುಂಬಿ ಹರಿಯುವಾಗ ದೊಡ್ಡ ದೊಡ್ಡ ಕ್ಷೀರವನ್ನು ಸ್ರವಿಸುವ ವೃಕ್ಷಗಳನ್ನು ಬೇರು ಸಮೇತವಾಗಿ ಕೊಚ್ಚಿಸಿಕೊಂಡು ಹೋಗುವುದನ್ನು ನೋಡಿದ್ದೇನೆ. ಆದರೆ ಬಿದಿರಿನ ಗಿಡಗಳು ಮಾತ್ರ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವುದಿಲ್ಲ. ಬೆತ್ತದ ಗಿಡಗಳು ದಪ್ಪವಿರುವುದಿಲ್ಲ. ಅಲ್ಪಶಕ್ತಿವುಳ್ಳ ಅವುಗಳು ನಿಮ್ಮನ್ನು ತಿರಸ್ಕರಿಸಿ ನಿಲ್ಲಲಾರವು. ಅವೇನಾದರೂ ನಿಮಗೆ ಉಪಕಾರ ಮಾಡಿವೆಯಾ?[೧]

ಆಗ ಗಂಗಾನದಿಯು (ನದಿಗಳ ನಾಯಕಿಯಂತಿರುವ) ನದೀಪತಿಗೆ ಯುಕ್ತಿಯುಕ್ತವಾದ ಉತ್ತರವನ್ನು ಹೇಳಿತು(ದಳು).

---

೧ ಸ ಮೂಲಶಾಖಾನ್ ಪಶ್ಯಾಮಿ ನಿಹತಾನ್ ಕ್ಷಾಥಿನೋ ದ್ರುಮಾನ್ ।
ಯುಷ್ಮಾಭಿರಿಹ ಪೂರ್ಣಾಭಿರನ್ಯಾಂಸ್ತತ್ರ ನ ವೇತಸಮ್ ।
ಅಕಾಯಶ್ಚಾಲ್ಪಸಾರಶ್ಚ ವೇತಸಃ ಕೂಲಜಶ್ಚ ವಃ ।
ಅವಜ್ಞಾಯ ನ ಶಕ್ಯೋ ವಾ ಕಿಂಚಿದ್ ವಾ ತೇನ ವಃ ಕೃತಮ್ ॥ - ೧೧೫/೩-೬

'ಸಾಗರನೇ! ವೃಕ್ಷಗಳು (ತೀರದ) ಒಂದೇ ಸ್ಥಾನದಲ್ಲಿ (ತಮ್ಮ ತಮ್ಮ) ಪ್ರವಾಹ ಬಂದಾಗ ಹಾಗೆಯೇ ನಿಂತಿರುತ್ತವೆ. 'ಪ್ರವಾಹಕ್ಕೆ ಮಣಿಯುವುದಿಲ್ಲ (ತಲೆ ತಗ್ಗಿಸುವುದಿಲ್ಲ). ಹೀಗಾಗಿ ಅವು ತಮ್ಮ ಸ್ಥಾನದಿಂದ ಚ್ಯುತವಾಗುತ್ತವೆ (ಪ್ರವಾಹಕ್ಕೆ ಬಲಿಯಾಗಿ ಕೊಚ್ಚಿಹೋಗುತ್ತವೆ). ಆದರೆ ಬೆತ್ತದ ಗಿಡಗಳು (ಬಿದುರಿನ) ಪ್ರವಾಹಕ್ಕೆ ಬಗ್ಗುತ್ತವೆ. ಎದುರು ನಿಲ್ಲುವುದಿಲ್ಲ. ಪ್ರವಾಹ ಇಳಿಯಲು ಮತ್ತೆ ಏಳುತ್ತವೆ. ತಮ್ಮ ಸ್ಥಾನದಲ್ಲಿ ಸ್ಥಿರವಾಗಿ ನಿಲ್ಲುತ್ತವೆ. ಬಗ್ಗುವ ಹಾಗೂ ಏಳುವ ಕಾಲವನ್ನು ಬಲ್ಲವನಾದ ಬಿದಿರಿನ ಗಿಡ ಪ್ರವಾಹಕ್ಕೆ ಅನುಕೂಲವಾಗಿಯೂ (ಬಂದಾಗ ತಗ್ಗಿಯೂ), ಎದುರು ನಿಲ್ಲದೆ (ಅಹಂಕಾರರಹಿತವಾಗಿ ತಗ್ಗಿ - ಬಗ್ಗಿ) ವರ್ತಿಸುತ್ತವೆ. ಆದ್ದರಿಂದ ಅದು ನಾಶವಾಗುವುದಿಲ್ಲ. ಬಿರುಗಾಳಿ ಹಾಗೂ ಪ್ರವಾಹದ ವೇಗಗಳಿಗೆ ಯಾರು (ಯಾವ ವೃಕ್ಷ ಗಿಡಗಳು) ಬಗ್ಗಿ ನಂತರ ಏಳುತ್ತವೆಯೋ ಅವು ಪರಾಭವ (ನಾಶ) ಹೊಂದುವುದಿಲ್ಲ[೧].

## ಸಂದೇಶಗಳು-ವಿವರಣೆಗಳು

ಗಂಗೆಯ ಮಾತುಗಳಲ್ಲಿ ಸಂದೇಶಗಳು ಸ್ಪಷ್ಟವಾಗಿವೆ.

*****

೧ ತಿಷ್ಠಂತ್ಯೇತೇ ಯಥಾಸ್ಥಾನಂ ನಗಾ ಹ್ಯೇಕನಿಕೇತನಾಃ।
ತತಸ್ತ್ಯಜಂತಿ ತತ್ ಸ್ಥಾನಂ ಪ್ರಾತಿಲೋಮ್ಯಾದಚೇತಸಃ॥
ವೇತಸೋ ವೇಗಮಾಯಾಂತಂ ದೃಷ್ಟ್ವಾ ನಮತಿ ನೇತರಃ।
ಸ ಚ ವೇಗೇಽಭ್ಯತಿಕ್ರಾಂತೇ ಸ್ಥಾನಮಾಸಾದ್ಯ ತಿಷ್ಠತಿ।
ಮಾರುತೋದಕವೇಗೇನ ಯೇ ನಮಂತ್ಯುನ್ನಮಂತಿ ಚ।
ಓಷಧ್ಯಃ ಪಾದಪಾ ಗುಲ್ಮಾ ನ ತೇ ಯಾಂತಿ ಪರಾಭವಮ್।
ಯೋ ಹಿ ಶತ್ರೋರ್ವಿವೃದ್ಧಸ್ಯ ಪ್ರಭೋರ್ವಧವಿನಾಶನೇ।
ಪೂರ್ವಂ ನ ಸಹತೇ ವೇಗಂ ಕ್ಷಿಪ್ರಮೇವ ಸ ನಶ್ಯತಿ।
ಸಾರಾಸಾರಂ ಬಲಂ ವೀರ್ಯಂ ಆತ್ಮನೋ ದ್ವಿಷತಶ್ಚ ಯಃ।
ಜಾನನ್ ವಿಚರತಿ ಪ್ರಾಜ್ಞೋ ನ ಸ ಯಾತಿ ಪರಾಭವಮ್॥

# ೮೬. ಅಗ್ನಿಪ್ರಭಮುನಿಯ ತಪೋಮಹಿಮೆ

ಧರ್ಮರಾಜನು ಭೀಷ್ಮರನ್ನು ಪ್ರಶ್ನಿಸಿದ –

ಎಲೈ ಭರತಕುಲದಲ್ಲಿ ಉತ್ತಮನೇ! ರಾಜನಿಗೆ ತನ್ನ ಕುಲದವರು ಯಾರೂ ಸಹಾಯಕರಿಲ್ಲದಿದ್ದರೆ ಬೇರೆ ಕುಲದವರನ್ನು (ಅ–ಕುಲೀನರನ್ನು) ಸಹಾಯಕರಾಗಿ ತೆಗೆದುಕೊಳ್ಳಬಹುದೇ?

ಭೀಷ್ಮರು ಈ ವಿಷಯದಲ್ಲಿ ಸಜ್ಜನಮುನಿಯೊಬ್ಬನು ಆಚರಿಸಿದ ಒಂದು ದೃಷ್ಟಾಂತವನ್ನು ಹೇಳಿದರು.

'ರಾಜನ್! ನೀನು ಕೇಳಿದ ಪ್ರಶ್ನೆಯಂತೆ ಇದ್ದ ಒಂದು ವಿಷಯವನ್ನು ನಾನು ಪರಶುರಾಮರ ಆಶ್ರಮದಲ್ಲಿ ಋಷಿಪುಂಗವರು ಹೇಳಿದ ಒಂದು ಕಥೆಯನ್ನು ಹೇಳುತ್ತೇನೆ, ಕೇಳು' ಎಂದರು

[೧]ಒಂದು ನಿರ್ಜನ ಮಹಾರಣ್ಯದಲ್ಲಿ ಮೂಲಫಲಗಳನ್ನು ಆಹಾರವನ್ನಾಗಿ ಮಾಡಿಕೊಂಡ, ಜಿತೇಂದ್ರಿಯನಾದ, ದೀಕ್ಷಾಪರನಾದ, ಭಗವನ್ನಿಷ್ಠೆಯುಳ್ಳ, ಸ್ವಾಧ್ಯಾಯಪರನಾದ, ಶುದ್ಧನಾದ(ಬಾಹ್ಯಾಂತ), ಉಪವಾಸಗಳನ್ನು ಮಾಡಿ ಶುದ್ಧ ಶರೀರಿಯಾದ, ಯಾವಾಗಲೂ ಸನ್ಮಾರ್ಗದಲ್ಲೇ ಇದ್ದ ಒಬ್ಬ ಋಷಿ ಇದ್ದನು. ಮೇಧಾವಿಯಾದ, ಸಜ್ಜನನಾದ ಆತನನ್ನು ನೋಡಿದ ಆ ಕಾಡಿನ ಸಸ್ಯಾಹಾರಿ, ಮಾಂಸಾಹಾರಿ ಪ್ರಾಣಿಗಳೆಲ್ಲ ಋಷಿಯ ಬಳಿಗೆ ಬಂದು

---

೧ ವನೇ ಮಹತಿ ಕಸ್ಮಿಂಶ್ಚಿತ್ ಅಮನುಷ್ಯನಿಷೇವಿತೇ।
ಋಷಿರ್ಮೂಲ ಫಲಾಹಾರೋ ನಿಯತೋ ನಿಯತೇಂದ್ರಿಯಃ।
ದೀಕ್ಷಾದಮಪರಃಶಾಂತಃ ಸ್ವಾಧ್ಯಾಯಪರಮಃ ಶುಚಿಃ।
ಉಪವಾಸವಿಶುದ್ಧಾತ್ಮಾ ಸತತಂ ಸತ್ಪಥೇ ಸ್ಥಿತಃ।
ತಸ್ಯ ಸಂದೃಶ್ಯ ಸದ್ಭಾವಮುಪವಿಷ್ಟಸ್ಯ ಧೀಮತಃ।
ಸಿಂಹವ್ಯಾಘ್ರಾಃ ಸಶರಭಾ ಮತ್ತಾಶ್ಚೈವಮಹಾಗಜಾಃ।
ತಸ್ಯರ್ಷೇಃ ಶಿಷ್ಯವಚ್ಚೈವ ನ್ಯಗ್ರೂಭಾಃ ಪ್ರಿಯಕಾರಿಣಃ।
ದತ್ವಾ ಚ ತೇ ಸುಖಪ್ರಶ್ನಂ ಸರ್ವೇ ಯಾಂತಿ ಯಥಾಗತಮ್।

ಕುಶಲಪ್ರಶ್ನೆಯನ್ನು ಮಾಡಿ, ಶಿಷ್ಯರಂತೆ ಪ್ರೀತಿಯಿಂದ ಬಾಗಿ ನಮಿಸಿ ಹಿಂದಿರುಗುತ್ತಿದ್ದವು. [1]ಆದರೆ ಒಂದು ನಾಯಿ ಮಾತ್ರ ಆ ಋಷಿಯನ್ನು ಬಿಟ್ಟಿರಲಿಲ್ಲ. ಅದೂ ಕೂಡಾ ಉಪವಾಸ ಮಾಡುತ್ತಾ ಕೃಶವಾಗಿ, ದುರ್ಬಲವಾಗಿ, ಫಲ, ಗಡ್ಡೆ-ಗೆಣಸುಗಳನ್ನೇ ಆಹಾರವನ್ನಾಗಿ ಸ್ವೀಕರಿಸುತ್ತಾ ಶಿಷ್ಯರಂತೆ ವಾಸವಾಗಿತ್ತು(ಆಶ್ರಮದಲ್ಲಿ). ಅದು ಋಷಿಯ ಪಾದದಡಿಯೇ ಮನುಷ್ಯರಂತೆ ಸ್ನೇಹ (ಪ್ರೀತಿ, ವಿಶ್ವಾಸ, ಭಕ್ತಿ)ದಿಂದ ಇರುತ್ತಿತ್ತು.

[2]ಹೀಗಿರುವಾಗ ಒಮ್ಮೆ ಆಶ್ರಮದ ಕಡೆ ಮಹಾಪರಾಕ್ರಮಿಯೂ, ರಕ್ತಾಹಾರಿಯೂ, ಯಮನಂತಿರುವ, ಹಸಿವೆಯಿಂದ ಬಳಲಿದ, ಬಾಲವನ್ನು ಬಡಿಯುತ್ತಾ ಮುಖ ತೆರೆದುಕೊಂಡು ನಾಯಿಯ ಮಾಂಸವನ್ನು ಬಯಸುತ್ತಾ ಒಂದು ಚಿರತೆ ಬಂದಿತು.

ಕ್ರೂರ ಮೃಗವು ತನ್ನ ಬಳಿ ಬರುವುದನ್ನು ಗಮನಿಸಿದ ಆ ನಾಯಿಯು ಮುನಿಗೆ [3]ನನ್ನನ್ನು ಕೊಲ್ಲಲು ಚಿರತೆಯು ಬರುತ್ತಿದೆ. ನಿನ್ನ ಅನುಗ್ರಹದಿಂದ ನನಗೆ ಚಿರತೆಯ ಭಯವಾಗದಿರಲಿ ಎಂದು ಹೇಳಿತು (ಪ್ರಾರ್ಥಿಸಿತು).

ಕೂಡಲೇ ಮುನಿಯು ನಾಯಿಗೆ ನಿನಗೆ ಚಿರತೆಯ ಭಯವಾಗದಿರಲಿ. ನೀನು ಚಿರತೆಯ ರೂಪ ಆಗುವೆ(ಹೊಂದುವೆ) ಎಂದನು. ಕೂಡಲೇ ನಾಯಿಯು ಚಿನ್ನದ ಬಣ್ಣದ ಚಿರತೆಯಾಗಿ ಹೊಳೆಯುವ ಹಲ್ಲುಗಳಿಂದ ಕೂಡಿಕೊಂಡು ನಿರ್ಭಯವಾಗಿ ವನದಲ್ಲಿ ವಾಸಿಸಲಾರಂಭಿಸಿತು. ಆಶ್ರಮದ ಕಡೆ ಹೊರಟಿದ್ದ ಆ ಚಿರತೆ, ಈ ಚಿರತೆಯನ್ನು(ಮೊದಲು ನಾಯಿ) ನೋಡಿ ವಿರೋಧ ಮಾಡುವುದನ್ನೇ ಬಿಟ್ಟಿತು(ತನ್ನ ಸಮನೆಂದು ಭಾವಿಸಿ ಹೆದರಿಸುವ ಗೊಡವೆಗೆ ಹೋಗಲಿಲ್ಲ).

ನಂತರ ಅಲ್ಲಿಗೆ(ಆಶ್ರಮದ ಕಡೆಗೆ) ಮಹಾಭಯಂಕರವೂ, ಹಸಿವೆಯಿಂದ ಕೂಡಿದ್ದು ತೆರೆದ ಬಾಯಿಯ ರಕ್ತಪ್ರಿಯವಾದ ಒಂದು ಹುಲಿಯು ಕಟಬಾಯಿಗಳನ್ನು ಸವರುತ್ತಾ ಬಂದಿತು. ಆಗ ಋಷಿಯು ತನ್ನೊಡನೆ ಸ್ನೇಹದಿಂದ ವಾಸಮಾಡುತ್ತಿದ್ದ ಚಿರತೆಯನ್ನು ಹುಲಿಯನ್ನಾಗಿ ಮಾಡಲು, ಬಂದ ವ್ಯಾಘ್ರವು ಈ ಹುಲಿಯನ್ನು ಕೊಲ್ಲದೆ ಹೊರಟುಹೋಯಿತು. ಈ ನಾಯಿ ಹುಲಿಯಾಗಿ ಪರಿವರ್ತನೆಗೊಂಡು ಮಾಂಸಾಹಾರಿಯಾಗಿ ಫಲಮೂಲ ಆಹಾರದ

---

೧ ಗ್ರಾಮ್ಯಸ್ತ್ವೇಕಃ ಪಶುಸ್ತತ್ರ ನಾಜಹಾತ್ ಸ ಮಹಾಮುನಿಃ ।
ಭಕ್ತೋಽನುರಕ್ತಃ ಸತತಮುಪವಾಸಕೃಶೋಽಬಲಃ ।
ತಸ್ಯರ್ಷೇರುಪವಿಷ್ಟಸ್ಯ ಪಾದಮೂಲೇ ಮಹಾಮುನೇಃ ।
ಮನುಷ್ಯವದ್ ಗತೋ ಭಾವಃ ಸ್ನೇಹಬದ್ಧೋಽಭವದ್ ಭೃಶಮ್ ।

೨ ತತೋಽಭ್ಯಯಾನ್ಮಹಾವೀರ್ಯೋ ದ್ವೀಪೀ............।
ಶ್ವಾರ್ಥಮತ್ಯಂತಸಂದುಷ್ಟಃ ಕ್ರೂರಃ ಕಾಲ ಇವಾಂತಕಃ ।
ಪ್ರೋವಾಚ ಶ್ವಾ ಮುನಿಂ ತತ್ರ........................ ।

೩. ಶ್ವಾಶತ್ರುರ್ಭಗವನ್ನತ್ರ ದ್ವೀಪೀ ಮಾಂ ಹಂತುಮಿಚ್ಛತಿ ।
ತ್ವತ್ಪ್ರಸಾದಾದ್ ಭಯಂ ನ ಸ್ಯಾತ್ ತಸ್ಮಾನ್ಮಮ ಮಹಾಮುನೇ ॥

ಆಸೆಯನ್ನು ಬಿಟ್ಟಿತು. ನಿತ್ಯವೂ ವನಚಾರಿ ಪ್ರಾಣಿಗಳನ್ನು ಬಯಸಿ ತಿಂದು ಆಶ್ರಮದ ಬಳಿಯೇ ಮಲಗುತ್ತಿತ್ತು. ನಂತರ ಎತ್ತರವಾದ, ವಿಸ್ತಾರವಾದ ತಲೆಯುಳ್ಳ, ಒಳ್ಳೆಯ ದಂತ, ಭಾರೀ ಶರೀರ, ಮೇಘಗಂಭೀರ ಘೀಳಿಡುವ ಗಂಭೀರ ನಾದ ಗಂಡಸ್ಥಳದಿಂದ ಮದರಸವನ್ನು ಸುರಿಸುವ ಆನೆಯು ಬಂದಿತು. ತನ್ನೆಡೆಗೆ ಬರುತ್ತಿರುವ ಆನೆಯನ್ನು ನೋಡಿ ಹುಲಿ ಋಷಿಯನ್ನು ಶರಣು ಹೊಂದಲಾಗಿ, ಋಷಿಯು ಇದನ್ನು ಆನೆಯನ್ನಾಗಿ ಮಾಡಿದನು. ಬಂದ ಆನೆಯು ಭಯದಿಂದ ಓಡಿ ಹೋಯಿತು. ನಂತರ (ನಾಯಿ) ಆನೆಯು ಕಮಲದ ನಾಳಗಳನ್ನು ಶಲ್ಯಕೀಪಕ್ಷಿಗಳು ಗೂಡುಕಟ್ಟುವ ಜೊಂಡುಗಳನ್ನು ಸಂತೋಷದಿಂದ ತಿನ್ನುತ್ತಾ ಪದ್ಮಪರಾಗಗಳಿಂದ ಅಲಂಕೃತವಾಗಿ ತಿರುಗಾಡಲಾರಂಬಿಸಿತು.

ಹೀಗೆ ಈ ಆನೆ ಋಷಿಯ ಆಶ್ರಮದ ಪರಿಸರದಲ್ಲಿ ಎಷ್ಟೋ ದಿನ ರಾತ್ರಿಗಳನ್ನು ಕಳೆಯುತ್ತಿರಲು ಒಮ್ಮೆ ಆ ಪ್ರದೇಶಕ್ಕೆ ಗಜವೈರಿಯಾದ ಭಯಂಕರ ಸಿಂಹ ಬಂತು. ಆನೆ ಹೆದರಿ ಋಷಿಗೆ ಶರಣಾಯಿತು. ಋಷಿಯ ಅನುಗ್ರಹದಿಂದ ಆನೆ ಸಿಂಹವಾಯಿತು. ಬಂದ ಸಿಂಹ ಭಯದಿಂದ ತನ್ನ ವಾಗ್ಬಲವನ್ನು ಕಳೆದುಕೊಂಡು ನಾಶ ಹೊಂದಿತು. ಈ ಸಿಂಹ ಮತ್ತೆ ಅದೇ ಆಶ್ರಮದಲ್ಲಿ ವಾಸಿಸಲಾರಂಭಿಸಿತು. ತಪೋವನದ ಇತರ ಕ್ಷುದ್ರ ಪಶುಗಳು ಈ ಸಿಂಹದಿಂದಾಗಿ ಭಯದಿಂದ ದೂರ ಹೋದವು.

ಕೆಲ ಕಾಲ ನಂತರ ಆಶ್ರಮದ ಕಡೆ ಎಂಟು ಕಾಲು, ನಾಲ್ಕು ಕಣ್ಣುಗಳಿರುವ ಎಲ್ಲ ಪ್ರಾಣಿ ಸಂಹಾರಕವಾದ, ಸಿಂಹವನ್ನೂ ಕೊಲ್ಲುವ ಶರಭ ಬಂತು. ಆಗ ಮುನಿಯು (ತನ್ನ) ಸಿಂಹವನ್ನು ಶರಭವನ್ನಾಗಿಸಿದ. ಬಂದ ಶರಭ ಭಯದಿಂದ ಓಡಿ ಹೋಯಿತು. ಈ ಶರಭ ಆಶ್ರಮದಲ್ಲಿ ಮುನಿಯ ಪಕ್ಕದಲ್ಲಿಯೇ ಇದ್ದು ಶರಭಕ್ಕೆ ಯೋಗ್ಯವಾದ ಸುಖವನ್ನು ಹೊಂದಿತು. ಈ ಶರಭವನ್ನು ನೋಡಿದ ಆಶ್ರಮದ, ಕಾಡಿನ ಪ್ರಾಣಿಗಳೆಲ್ಲ ದಿಕ್ಕಾಪಾಲಾಗಿ ಓಡಿ ಹೋದವು. ಈ ಶರಭವಾದರೋ ನಿತ್ಯವೂ ಅತಿದುಷ್ಟವಾಗಿ ಪ್ರಾಣಿವಧರತನಾಗಿ ಮೊದಲು ತಿನ್ನುತ್ತಿದ್ದ ಮೂಲ(ಗಡ್ಡೆಗೆಣಸು), ಫಲಾದಿಗಳನ್ನು ಬಿಟ್ಟು ಕೇವಲ ಮಾಂಸಾಹಾರಿಯಾಗಿತ್ತು.

[೧]ಹೀಗೆ ನಾಯಿಯಾಗಿದ್ದ ಆ ಶರಭವು ಕ್ರಮೇಣ ರಕ್ತದಾಸೆಯಿಂದ ಕೃತಘ್ನನಾಗಿ ಮುನಿಯನ್ನೇ ಕೊಲ್ಲಲು ಬಯಸಿ ಹೀಗೆ ವಿಚಾರ ಮಾಡಿತು.

ನಾನು ಋಷಿಯ ಪ್ರಭಾವ(ತಪಸ್ಸು)ದಿಂದ ಸರ್ವಭೂತಭಯಂಕರವಾದ ಶರಭ-ನಾಗಿದ್ದೇನೆ. (ಶರಭನ ಶರೀರ ಪಡೆದಿದ್ದೇನೆ) ನಿಜ. ಈ ವನದಲ್ಲಿ ನಾನಲ್ಲದೆ ಇನ್ನೂ ಅನೇಕ

---

೧ ಚಿಂತಯಾಮಾಸ ಚ ತದಾ ಶರಭಃ ಶ್ವಾನಪೂರ್ವಕಃ ।

...............

ತಾವದೇನಮಹಂ ವಿಪ್ರಂ ವಧಿಷ್ಯಾಮಿ ಚ ಶೀಘ್ರತಃ ।

ಸ್ಥಾತುಂ ಮಯಾಶಕ್ಯಮಿಹ ಮುನಿಘಾತಾನ್ನ ಸಂಶಯಃ ।

ಮೃಗಗಳೂ, ಪಕ್ಷಿಗಳೂ ಇವೆ. ಈ ಮುನಿಯು ಮಹಾಬಲವಿರುವ (ಪ್ರಾಣಿಗೆ) ಶರಭವನ್ನಾಗಿ ಮಾಡಬಹುದು. ಪಕ್ಷಿಗಳಿಗೆ ಗರುಡ ಬಲ ನೀಡಬಹುದು (ಪಕ್ಷಿಯನ್ನು ಗರುಡನಾಗಿ ಮಾಡಬಹುದು. ಆಗ ನನ್ನ ಅಸ್ತಿತ್ವಕ್ಕೆ ಅಪಾಯ ನಿಶ್ಚಿತ). ಆದ್ದರಿಂದ ಈ ಮುನಿ ಇಲ್ಲಿಯ ಪ್ರಾಣಿಗಳಿಗೆ ಅಂತಹ ಬಲ ಕೊಡುವ ಮುನ್ನವೇ ಇವನನ್ನು ಕೊಲ್ಲುವೆ. ಕೊಂದ ನಂತರ ನಾನು ಇಲ್ಲಿಯೇ ಸುಖವಾಗಿ ಇರಬಹುದು.

[೧]ಆದರೆ ಆ ಮುನಿಯು ಈ ನಾಯಿಶರಭದ ಚಿಂತನೆಯನ್ನು ತನ್ನ ತಪಸ್ಸಿನಿಂದ, ದಿವ್ಯದೃಷ್ಟಿಯಿಂದ ತಿಳಿದು ನಾಯಿಗೆ (ಶರಭನಿಗೆ) ಹೀಗೆ ನುಡಿದ.

[೨]ನಾನು ಭೃಗುಕುಲದ ಅಗ್ನಿಪ್ರಭ ಎಂಬ ಮುನಿ. ನಾನು ನನ್ನ ಮನಸ್ಸಿನಿಂದಲೇ ಈ ಜಗತ್ತನ್ನು ಧರಿಸಬಲ್ಲೆ, ಸುಡಬಲ್ಲೆ. ಈ ಜಗತ್ತೆಲ್ಲ ದೇವತೆಗಳನ್ನು ಬಿಟ್ಟು ನನ್ನ ವಶವಿದೆ. ಸ್ವಧರ್ಮ ಆಚರಿಸುವ ದೇವತೆಗಳೂ ನನಗೆ ಹೆದರುತ್ತಾರೆ (ನೀನೆಲ್ಲ ಯಾವ ಲೆಕ್ಕ). [೩]ಎಲೈ ಪ್ರೀತಿಪಾತ್ರನೇ! (ನೀನು ಅದಕ್ಕೆ ಪಾತ್ರನಲ್ಲ) ಹೀನನೂ, ಅಶುಭಿಯು ಆದ ನಿನಗೆ (ನಾಯಿಗೆ) ಸರ್ವಭೂತ ಭಯಂಕರವಾದ ಶರಭತ್ವವನ್ನು ಕೊಟ್ಟೆ, ನಾಯಿಯಾಗಿದ್ದ ನೀನು ಚಿರತೆಯೂ, ನಂತರ ಹುಲಿ, ಆನೆ, ಸಿಂಹ, ಶರಭನಾಗಿ ಕ್ರಮವಾಗಿ ಆದೆ. ನನ್ನ ಸ್ನೇಹದಿಂದ ನಿನ್ನ ಮೊದಲು ಕುಲದ ನೀಚ ಬುದ್ಧಿಯನ್ನು ನಾನು ಯೋಚಿಸಲಿಲ್ಲ (ಆದ್ದರಿಂದ ನಿನ್ನನ್ನು ಕಾಪಾಡಲು ಹೀಗೆ ಮಾಡಿದೆ). [೪]ಆದರೆ ನಿರಪರಾಧಿಯಾದ ನನ್ನನ್ನೇ ಕೊಲ್ಲಲು ನೀನು ಯೋಚಿಸಿದೆ. ಆದ್ದರಿಂದ ನೀನು ಮೊದಲಿನಂತೆ ನಾಯಿಯಾಗುವೆ (ಆಗು).

ನಂತರ ಆ ನಾಯಿಯು ಮೊದಲಿನಂತೆ ನಾಯಿಯಾಗಿ ಬಹಳ ದೈನ್ಯತೆ ಹೊಂದಿತು. ಋಷಿಯ ಹುಂಕಾರದಿಂದ ಆ ಪಾಪಿ ನಾಯಿಯು ತಪೋವನದಿಂದಲೂ ಹೊರಹಾಕಲ್ಪಟ್ಟಿತು[೫].

---

೧ ತತಸ್ತೇನ ತಪಃಶಕ್ತ್ಯಾ ವಿದಿತೋ ಜ್ಞಾನಚಕ್ಷುಷಾ ।
ವಿಜ್ಞಾಯ ಚ ಮಹಾಪ್ರಾಜ್ಞೋ ಮುನಿಃ ಶ್ವಾನಂ ತಮುಕ್ತವಾನ್ ॥

೨ ಅಹಮಗ್ನಿಪ್ರಭೋ ನಾಮ ಮುನಿರ್ಭೃಗುಕುಲಾನ್ವಯಃ ।
ಮಮ ವಶ್ಯಂ ಜಗತ್ ಸರ್ವಂ ದೇವಾನ್ ವರ್ಜ್ಯಂ ಚರಾಚರಮ್ ॥
ಸಂತಿ ದೇವಾಶ್ಚ ಮೇ ಭೀತಾಃ ಸ್ವಧರ್ಮಂ ನ ತ್ಯಜಂತಿ ಯೇ ।
ಸ್ವಧರ್ಮಾಚ್ಚಾಲಿತಾನ್ ಸರ್ವಾನ್ ವಾಙ್ಮಾತ್ರೇಣೈವ ನಿರ್ದಹೇ ॥

೩. ಶ್ವಾತ್ವಂ ದೀಪಿತ್ವಮಾಪನ್ನೋ........................
ಮಯಾ ಸ್ನೇಹಪರೀತೇನ ನ ವಿಮೃಷ್ಟಃ ಕುಲಾನ್ವಯಃ ॥

೪ ಯಸ್ಮಾದೇವಮಪಾಪಂ ಮಾಂ ಪಾಪ ಹಿಂಸಿತುಮಿಚ್ಛತಿ ।
ತಸ್ಮಾತ್ ಸ್ವಯೋನಿಮಾಪನ್ನಃ ಶ್ವೈವ ತ್ವಂ ಹಿ ಭವಿಷ್ಯತಿ ॥
ತತೋ ಮುನಿಜನದ್ವೇಷಾತ್ ದುಷ್ಟಾತ್ಮಾ ಶ್ವಾ ಕೃತೋಽಬುಧಃ ।
ಋಷಿಣಾ ಶರಭಃ ಶಪ್ತಃ ಸ್ವರೂಪಂ ಪುನರಾಪ್ತವಾನ್ ॥ – ೧೧೮/೩-೫೪

೫ ಸ ಶ್ವಾ ಪ್ರಕೃತಿಮಾಪನ್ನಃ ಪರಂ ದೈನ್ಯಮುಪಾಗತಮ್ ।

## ಸಂದೇಶಗಳು-ವಿವರಣೆಗಳು

೧. ಮೇಧಾವಿಯಾದ ರಾಜನು (ಅಥವಾ ಉನ್ನತ ಸ್ಥಾನದಲ್ಲಿರುವವರು - ಇಲ್ಲಿ ಋಷಿ ಅಗ್ನಿಪ್ರಭ) ಮನುಷ್ಯರ (ತನ್ನ ಅಧೀನದಲ್ಲಿರುವ) ಶೀಲ, ಶೌಚ, ನೇರನಡತೆ, ಸ್ವಭಾವ, ಧೈರ್ಯ, ಕುಲ, ವಿದ್ಯೆ, ಇಂದ್ರಿಯಜಯ, ದಯೆ, ಬಲ, ಪರಾಕ್ರಮ, ಶಾಂತಿ, ಕ್ಷಮಾ, ಭಕ್ತಿ ಇವುಗಳನ್ನು ತಿಳಿದು ಯಾವ ಸೇವಕರು ಎಲ್ಲಿ ಯೋಗ್ಯರೋ, ಅಲ್ಲಿ ಅಂತಹ ಸುಶಿಕ್ಷಿತ ಸೇವಕರನ್ನು ನಿಯೋಜಿಸಬೇಕು[೧].

೨. ಭೃತ್ಯರನ್ನು ಪರೀಕ್ಷಿಸದೇ ನಿಯಮಿಸಬಾರದು:

**ನಾಪರೀಕ್ಷ್ಯ ಮಹೀಪಾಲಃ ಪ್ರಕರ್ತುಂ ಭೃತ್ಯಮರ್ಹತಿ ॥** -೧೧೯/೪

೩. ಸತ್ಕುಲಪ್ರಸೂತನಾದವನು ಒಳ್ಳೆಯ ಕುಲದಿಂದ ಬಂದ ಕಾರಣದಿಂದ ಅವನು ಅಪರಾಧ ಮಾಡದೆಯೇ ರಾಜನಿಂದ ನಿಂದಿಸಲ್ಪಟ್ಟರೂ ರಾಜನ ವಿಷಯದಲ್ಲಿ ಕೆಟ್ಟ ಬುದ್ಧಿಯನ್ನು ಹೊಂದುವುದಿಲ್ಲ:

**'ಕುಲಜಃ ಪ್ರಾಕೃತೋ........................'**
**ನ ಪಾಪೇ ಕುರುತೇ ಬುದ್ಧಿಂ ನಿಂದ್ಯಮಾನೋಽಪ್ಯನಾಗಸಿ ॥** -೧೧೯/೫

೪. ರಾಜನು ಸಜ್ಜನರು ದೊರೆಯದ ಕಾರಣ ಅಕುಲೀನರನ್ನು ಸೇವಕರನ್ನಾಗಿ ನಿಯೋಜಿಸಿದರೆ ದುರ್ಲಭವಾದ ಐಶ್ವರ್ಯದಿಂದ ಹೊಂದಿಸಲ್ಪಟ್ಟರೂ ರಾಜನಿಂದ ನಿಂದಿತನಾದರೆ ರಾಜನ ಶತ್ರುವಾದಾನು.

### ಧರ್ಮದ ವಿಷಯದಲ್ಲಿ ಬೃಹಸ್ಪತಿಯ ವಚನಗಳು

೫. ಮನಸ್ಸಿನಲ್ಲಿ ಬಂಧನರಹಿತನೂ ಬಾಹ್ಯದಲ್ಲಿ ಸ್ರಕ್‌ಚಂದನ ಧಾರಣಾದಿ ಸತ್ಕರ್ಮ ಮಾಡುವವನೂ, ತಪಸ್ವಿಯೂ ಆದ ಪ್ರಾಕೃತ ಜನದಂತೆ ಇರುವವನು **ಒಳ್ಳೆಯ ನಡತೆಯನ್ನು ಹೊಂದಿದವನಾದರೆ, ಅಂತಹ ಚಂಡಾಲನನ್ನೂ ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ.**

**ಅಸಿತಂ ಸಿತಕರ್ಮಾಣಂ ತಥಾ ಜಾತಂ ತಪಸ್ವಿನಮ್ ।**
**ವೃತ್ತಸ್ಥಮಪಿ ಚಂಡಾಲಂ ತಂ ದೇವಾ ಬ್ರಾಹ್ಮಣಂ ವಿದುಃ ॥** -೧೧೯/೧೧

---

ಋಷಿಣಾ ಹುಂಕೃತಃ ಪಾಪಸ್ತಪೋವನಬಹಿಷ್ಕೃತಃ ॥ - ೧೧೯/೧

೧ ಏವಂ ರಾಜ್ಞಾ ಮತಿಮತಾ ವಿದಿತ್ವಾ ಶೀಲಶೌಚತಾಮ್ ।
ಆರ್ಜವಂ ಪ್ರಕೃತಿಂ ಸತ್ತ್ವಂ ಕುಲಂ ವೃತ್ತಂ ಶ್ರುತಂ ದಮಮ್ ॥
ಅನುಕ್ರೋಶಂ ಬಲಂ ವೀರ್ಯಂ ಭಾವಂ ಸಂಪ್ರಶಮಂ ಕ್ಷಮಾಮ್ ।
ಭೃತ್ಯಾ ಯೇ ಯತ್ರ ಯೋಗ್ಯಾಃ ಸ್ಯುಸ್ತತ್ರ ಸ್ಥಾಪ್ಯಾಃ ಸುಶಿಕ್ಷಿತಾಃ ॥ - ೧೧೯/೨,೩

೬. ಗೋಬ್ರಾಹ್ಮಣ ಹಿತಕ್ಕಾಗಿ ಬಾಲರ ಮತ್ತು ಸ್ತ್ರೀಯರ ರಕ್ಷಣೆಗಾಗಿ, ವೃದ್ಧರ, ರೋಗಿಗಳ ರಕ್ಷಣೆಗಾಗಿ ಯಾವನು (ಹುಲಿ ಮೊದಲಾದ ಕ್ರೂರ ಮೃಗಗಳನ್ನು) ಕೊಲ್ಲುತ್ತಾನೋ ಅವನು ಧರ್ಮ ಬಲ್ಲವನು.

**ಗೋಬ್ರಾಹ್ಮಣ ಹಿತಾರ್ಥಾಯ ಬಾಲಸ್ತ್ರೀ ರಕ್ಷಣಾಯ ಚ ।**
**ವೃದ್ಧಾತುರಪರಿತ್ರಾಣೇ ಯೋ ಹಿನಸ್ತಿ ಸ ಧರ್ಮವಿತ್ ॥** - ೧೧೯/೧೩,೧೪

೭. ಪಾಪಕರ್ಮವನ್ನು ಮಾಡುವ ಬ್ರಾಹ್ಮಣ ಮತ್ತು ಧಾರ್ಮಿಕನೂ, ಶುಚಿಯೂ ಆದ ಒಬ್ಬ ಮ್ಲೇಚ್ಛ - ಇವರಿಬ್ಬರಲ್ಲಿ ಮ್ಲೇಚ್ಛನು ಶ್ರೇಷ್ಠನು. ಬ್ರಾಹ್ಮಣನು ಪಾಪಿಗಳಲ್ಲಿ ಅಗ್ರಗಣ್ಯನಾದವನು.

**ಬ್ರಾಹ್ಮಣಃ ಪಾಪಕರ್ಮಾ ಚ ಮ್ಲೇಚ್ಛೋ ವಾ ಧಾರ್ಮಿಕಃ ಶುಚಿಃ ।**
**ಶ್ರೇಯಾಂಸ್ತತ್ರ ಭವೇನ್ ಮ್ಲೇಚ್ಛೋ ಬ್ರಾಹ್ಮಣಃ ಪಾಪಕೃತ್ತಮಃ ॥**

ಈ ಉಪಾಖ್ಯಾನದಲ್ಲಿನ ಸಂದೇಶಗಳನ್ನು ವ್ಯಾಸರೇ ೧೧೯ನೇ ಅಧ್ಯಾಯದಲ್ಲಿ ಹೇಳಿದ್ದಾರೆ. ನಾಯಿಯು ಚಿರತೆಯಿಂದ ತಿನ್ನದಿರಲೆಂದು ಅದಕ್ಕೆ ಚಿರತೆಯ ಶಕ್ತಿರೂಪ ಕೊಟ್ಟರೂ ಅದು ತನ್ನ ಸ್ವಭಾವ ಬಿಡದೆ ಮುಂದೆ ಮುಂದೆ ಹೋಗಿ ಶರಭನೂ ಆಗಿ ಕೊನೆಗೆ ತನ್ನನ್ನು ಕಾಪಾಡುತ್ತಿದ್ದ ತಂದೆಯ ಸ್ಥಾನದಲ್ಲಿದ್ದ ಮುನಿಯನ್ನೇ ಕೊಲ್ಲಲು ಯೋಚಿಸಿದ ಕೃತಘ್ನ ನಾಯಿಯನ್ನು ಮುನಿಯು ಕೊನೆಗೆ ನಾಯಿಯನ್ನೇ ಮಾಡಿ ಆಶ್ರಮದಿಂದ ಓಡಿಸುತ್ತಾನೆ. ಅಯೋಗ್ಯರಿಗೆ ರಕ್ಷಣೆ ಕೊಡುವುದು ತನಗೂ ಅಪಾಯಕರ ಎಂಬ ಸಂದೇಶ ಒಟ್ಟಾರೆ ಇಲ್ಲಿದೆ. ವ್ಯಾಸರು ರಾಜಧರ್ಮದೃಷ್ಟಿಯಿಂದ ಇನ್ನೂ ಹಲವು ಸಂದೇಶಗಳನ್ನು ಕೊಟ್ಟಿದ್ದರಲ್ಲಿ ಕೆಲವನ್ನು ಮೇಲೆ ಉಲ್ಲೇಖಿಸಲಾಗಿದೆ.

ಇತ್ಯಾದಿ...

## ೮೭. ಶೀಲದ ಮಹತ್ತ್ವ
## (ಧೃತರಾಷ್ಟ್ರನಿಂದ ದುರ್ಯೋಧನನಿಗೆ ಉಪದೇಶ; ಪ್ರಹ್ಲಾದ-ಬ್ರಾಹ್ಮಣರ ಸಂವಾದ)

ಧರ್ಮರಾಜನ ಪ್ರಶ್ನೆ – 'ತಾತ! ಧರ್ಮಕ್ಕಿಂತಲೂ ಶೀಲವೇ ಶ್ರೇಷ್ಠ ಎನ್ನುತ್ತಾರೆ. ಇದನ್ನು ತಿಳಿಸು. ಶೀಲವನ್ನು ಹೊಂದುವುದು ಹೇಗೆ? ಅದರ ಲಕ್ಷಣವೇನು? ಈ ಪ್ರಶ್ನೆಗಳಿಗೆ ಪಿತಾಮಹರಾದ ಭೀಷ್ಮರು ಧೃತರಾಷ್ಟ್ರನು ದುರ್ಯೋಧನನಿಗೆ ಮಾಡಿದ ಉಪದೇಶರೂಪ ಇತಿಹಾಸವನ್ನು ಹಾಗೂ ಅದರಲ್ಲಿಯೇ (ಅದೇ ಚರಿತೆಯನ್ನು ಹೇಳುವಾಗ) ನಾರದರು ಹೇಳಿದ ಇತಿಹಾಸವನ್ನು (ಪ್ರಹ್ಲಾದನು ಬ್ರಾಹ್ಮಣರೂಪದಲ್ಲಿ ಬಂದ ಇಂದ್ರನಿಗೆ ಮಾಡಿದ ಉಪದೇಶರೂಪ) ಹೇಳಿದರು. ಹೀಗ ಇಲ್ಲಿ ಧೃತರಾಷ್ಟ್ರ ಉಪದೇಶಕ, ದುರ್ಯೋಧನ ಪ್ರಶ್ನೆ ಮಾಡಿ ಉತ್ತರ ಪಡೆದವನು. ಹಾಗೂ ಪ್ರಹ್ಲಾದ ರಾಜರು ಬ್ರಾಹ್ಮಣವೇಷದಲ್ಲಿ ಬಂದ ಇಂದ್ರನಿಗೆ ಉಪದೇಶ ಮಾಡಿದ್ದು, ಅದರೊಳಗೆ ಮತ್ತೆ ಬೃಹಸ್ಪತ್ಯಾಚಾರ್ಯರು, ಶುಕ್ರಾಚಾರ್ಯರೂ ಕೂಡ ಇಂದ್ರನಿಗೆ ಶ್ರೇಯಸ್ಸಾಧನವನ್ನು ಹೇಳಿದ ಅವಾಂತರ ಕಥೆಗಳು ಇವೆ. ಒಟ್ಟಾರೆ ಧೃತರಾಷ್ಟ್ರ, ದುರ್ಯೋಧನ, ನಾರದರು, ಬೃಹಸ್ಪತ್ಯಾಚಾರ್ಯರು, ಶುಕ್ರಾಚಾರ್ಯರು, ಪ್ರಹ್ಲಾದರಾಜರು ಹಾಗೂ ಬ್ರಾಹ್ಮಣ ಹೀಗೆ ಏಳು ಪಾತ್ರಗಳು ಈ ಇತಿಹಾಸದಲ್ಲಿ ಸೇರಿವೆ.

ಭೀಷ್ಮರು ಇತಿಹಾಸ ಆರಂಭಿಸುತ್ತಾರೆ.

'ಧರ್ಮರಾಜನೇ! ನೀನು ರಾಜಸೂಯಯಾಗದಲ್ಲಿ ಪಡೆದ ಐಶ್ವರ್ಯವನ್ನು ನೋಡಿ ದುರ್ಯೋಧನ ಅಸೂಯೆಯಿಂದ ತನ್ನ ತಂದೆಯ ಮುಂದೆ ಎಲ್ಲವನ್ನೂ ಹೇಳಿದ. ತನಗಾದ ಅವಮಾನ, ತಾನು ಅಪಹಾಸ್ಯಕ್ಕೆ ಈಡಾದುದು ಇವೆಲ್ಲವನ್ನೂ ಹೇಳಿದಾಗ, ಧೃತರಾಷ್ಟ್ರನು ಕರ್ಣಸಹಿತನಾದ ತನ್ನ ಮಗನಿಗೆ '(ಪಾಂಡವರ) ಐಶ್ವರ್ಯದ ಬಗ್ಗೆ ನೀನೇಕೆ ಶೋಕಿಸುತ್ತೀಯಾ' ನೀನು ಮಹೈಶ್ವರ್ಯ ಹೊಂದಿರುವೆ. ಎಲ್ಲ ಸಹೋದರರು, ಮಿತ್ರರು, ಸಂಬಂಧಿಗಳು, ಕಿಂಕರರೂ (ನಿನಗೆ) ಇದ್ದಾರೆ. ಒಳ್ಳೆಯ ವಸ್ತ್ರ ಉಡುತ್ತೀಯಾ, ಮಾಂಸ ಭೋಜನ ಮಾಡುತ್ತೀ. ನಿನ್ನನ್ನು ಒಳ್ಳೆಯ ಜಾತಿಯ ಕುದುರೆಗಳು ಎಳೆಯುತ್ತವೆ (ಒಳ್ಳೆಯ ಕುದುರೆಗಳುಳ್ಳ ರಥದಲ್ಲಿ ಸಂಚರಿಸುತ್ತೀಯಾ). (ನಿನಗೇನು ಕಡಿಮೆಯಾಗಿದೆ) ಏಕೆ ಶೋಕಿಸುತ್ತೀ?' ಎಂದು ಪ್ರಶ್ನಿಸಿದನು.

ಆದಕ್ಕೆ ದುರ್ಯೋಧನನು ಧರ್ಮರಾಜನ ಮನೆಯಲ್ಲಿ ಹತ್ತುಸಾವಿರ ಸ್ನಾತಕರು ನಿತ್ಯವೂ ಚಿನ್ನದ ಪಾತ್ರೆಗಳಲ್ಲಿ ಭೋಜನ ಮಾಡುತ್ತಾರೆ. ಆ ದಿವ್ಯವಾದ ಚಕೋರಪಕ್ಷಿಯ ಬಣ್ಣದ ಬಿಳಿ-ಕಪ್ಪು ಮಿಶ್ರಿತ ಕುದುರೆಗಳನ್ನು, ಚಿತ್ರರತ್ನಗಳನ್ನು, ನನ್ನ ಶತ್ರುಗಳಾದ ಪಾಂಡವರ ಇಂದ್ರಸಭೆಗೆ ಸದೃಶವಾದ ಸಭೆಯನ್ನು ನೋಡಿ ನಾನು ದುಃಖಿಸುತ್ತಿದ್ದೇನೆ. ಅದನ್ನು ಸಹಿಸಲು ಆಗುತ್ತಿಲ್ಲವೆಂದನು[೧].

ಈ ಮಾತನ್ನು ಕೇಳಿ ಧೃತರಾಷ್ಟ್ರನು 'ಮಗನೇ! ನೀನು ಪಾಂಡವರಂತಹ ಐಶ್ವರ್ಯ ಬಯಸುವೆಯಾದರೆ, [೨]ಶೀಲವಂತನಾಗು. ಶೀಲದಿಂದ ಲೋಕವನ್ನು ಗೆಲ್ಲಲು ಸಾಧ್ಯ. ಶೀಲವಂತರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಹಿಂದೆ ಮಾಂಧಾತರಾಜ ಒಂದೇ ರಾತ್ರಿಯಲ್ಲಿಯೂ, ಜನಮೇಜಯನು ಮೂರು ದಿನಗಳಲ್ಲಿಯೂ, ನಾಭಾಗನು ಏಳು ರಾತ್ರಿಗಳಲ್ಲಿಯೂ ಭೂಮಿಯನ್ನು ಹೊಂದಿದರು (ಗೆದ್ದರು). ಅವರ ಶೀಲದಿಂದಾಗಿ ಭೂಮಿ ತಾನಾಗಿಯೇ ಅವರ ಬಳಿ ಬಂದಿತು[೩] (ಭೂ ಒಡೆಯರಾದರು).

ಈ ವಿಷಯದಲ್ಲಿ ನಾರದರು ಹೇಳಿದ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು ದುರ್ಯೋಧನ ಎಂದು ತಂದೆ ನುಡಿದನು.

ಹಿಂದೆ ಪ್ರಹ್ಲಾದನು ತನ್ನ [೪]ಶೀಲಬಲದಿಂದ ಇಂದ್ರನ ತ್ರಿಲೋಕಾಧಿಪತ್ಯವನ್ನು ಕಸಿದುಕೊಂಡಾಗ ಇಂದ್ರನು ಬೃಹಸ್ಪತಿ ಹಾಗೂ ಶುಕ್ರಾಚಾರ್ಯರನ್ನು ಕಂಡು ಶ್ರೇಯಃ ಸಾಧನ

---

೧ ದಶಶತಾನಿ ಸಹಸ್ರಾಣಿ ಸ್ನಾತಕಾನಾಂ ಮಹಾತ್ಮನಾಮ್ ।
ಭುಂಜತೇ ರುಗ್ಮಪಾತ್ರೇಷು ಯುಧಿಷ್ಠಿರ ನಿವೇಶನೇ ॥.........
ದೃಷ್ಟ್ವಾ ತಾಂ ಪಾಂಡವೇಯಾನಾಮೃದ್ಧಿಮಿಂದ್ರೋಪಮಾಂ ಶುಭಾಮ್ ।
ಅಮಿತ್ರಾಣಾಂ ಸುಮಹತೀಮನುಶೋಚಾಮಿ ಮಾನದ ॥

೨ ಶೀಲ ಎಂಬ ಶಬ್ದಕ್ಕೆ ಸಂಸ್ಕೃತ ಕೋಶದಲ್ಲಿ ಸತ್ತ್ವ, ನೀತಿಬಲ; ಒಳ್ಳೆಯ ನಡತೆ; ರಾಗದ್ವೇಷರಾಹಿತ್ಯ; ವೇದಾಧ್ಯಯನ ಸಂಪತ್ತು; ದೇವಪಿತೃಭಕ್ತಿ; ಸೌಮ್ಯತ್ತ್ವ, ಶಾಂತಸ್ವಭಾವ, ಅಸೂಯೆ ಇಲ್ಲದಿರುವುದು; ಕಠಿಣವಾಗಿ, ಒರಟಾಗಿ ಮಾತನಾಡದಿರುವುದು; ಮೈತ್ರಿ, ಸ್ನೇಹಪರತೆ; ಉಪಕಾರಸ್ಮರಣೆ; ಶರಣಾಗತರಕ್ಷಣೆ; ದಯಾ (ಕನಿಕರ); ತಾಳ್ಮೆ ಎಂದು ಹದಿಮೂರು ವಿಧವಾದ ಧರ್ಮಗಳಿರಬೇಕೆಂದು ವ್ಯಾಖ್ಯಾನಿಸಲಾಗಿದೆ. – ಬಾಪ್ಟೋ ಪ್ರಕಾಶನ (೧೯೯೯; ಸಂ. ೬; ಪ. ೨೫೪೭)

೩ ಯದೀಚ್ಛಸಿ ಶ್ರಿಯಂ ತಾತ ಯಾದೃಶೀಂ ತಾಂ ಯುಧಿಷ್ಠಿರೇ ।
ವಿಶಿಷ್ಟಾಂ ವಾ ನರವ್ಯಾಘ್ರ ಶೀಲವಾನ್ ಭವ ಪುತ್ರಕ ॥
ಶೀಲೇನ ಹಿ ತ್ರಯೋ ಲೋಕಾಃ ಶಕ್ಯಾ ಜೇತುಂ ನ ಸಂಶಯಃ ।
ನ ಹಿ ಕಿಂಚಿದಸಾಧ್ಯಂ ವೈ ಲೋಕೇ ಶೀಲವತಾಂ ಭವೇತ್ ।
ಏಕರಾತ್ರೇಣ ಮಾಂಧಾತಾ ತ್ರ್ಯಹೇಣ ಜನಮೇಜಯಃ ।
ಸಪ್ತರಾತ್ರೇಣ ನಾಭಾಗಃ ಪೃಥಿವೀಂ ಪ್ರತಿಪೇದಿವಾನ್ ॥ – ೧೨೫/೪-೧೭

೪ ಪ್ರಹ್ಲಾದೇನ ಹೃತಂ ರಾಜ್ಯಂ ಮಹೇಂದ್ರಸ್ಯ ಮಹಾತ್ಮನಃ ।
ಶೀಲಮಾಶ್ರಿತ್ಯ ದೈತ್ಯೇನ ತ್ರೈಲೋಕ್ಯಂ ಚ ವಶೀಕೃತಮ್ ॥ – ೧೨೫/೧೯

ಜ್ಞಾನವನ್ನು ಪಡೆದುಕೊಂಡ. ಶುಕ್ರಾಚಾರ್ಯರ ಬಳಿಗೆ ಬೃಹಸ್ಪತ್ಯಾಚಾರ್ಯರೇ ಕಳಿಸುತ್ತಾರೆ. ಶುಕ್ರರು ಇನ್ನೂ ವಿಶೇಷ ಜ್ಞಾನಕ್ಕಾಗಿ ಪ್ರಹ್ಲಾದನನ್ನು ಕಾಣಲು ಆದೇಶಿಸಲು ಇಂದ್ರನು ವಿಪ್ರವೇಷದಿಂದ ಶ್ರೇಯಸ್ಸನ್ನು ತಿಳಿಯಲು ಬಯಸುತ್ತೇನೆ ಎನ್ನುತ್ತಾನೆ. ಆಗ ಪ್ರಹ್ಲಾದನು ಮೂರು ಲೋಕದ ರಾಜ್ಯಭಾರದಲ್ಲಿ ಮುಳುಗಿದ ನನಗೆ ಒಂದುಕ್ಷಣ ಸಮಯವೂ ಇಲ್ಲ. ಆದ್ದರಿಂದ ಉಪದೇಶ ಮಾಡುವುದಿಲ್ಲ ಎನ್ನುತ್ತಾನೆ. ಅದಕ್ಕೆ ಬ್ರಾಹ್ಮಣನು ನಿಮಗೆ ಉಪದೇಶ ಮಾಡಲು ಅವಕಾಶವಾದಾಗಲೇ ಮಾಡಿ. ಆಗಲೇ ನಾನು ಕೇಳುತ್ತೇನೆ. ಎನ್ನುತ್ತಾನೆ[೧].

ಆಗ ಪ್ರಹ್ಲಾದನು ಪ್ರಸನ್ನನಾಗಿ 'ಆಗಲಿ' ಎಂದು ಒಂದು ಶುಭಕಾಲದಲ್ಲಿ ಜ್ಞಾನೋಪದೇಶ ಮಾಡಿದನು. ಬ್ರಾಹ್ಮಣನೂ ಕೂಡಾ ಗುರುವೃತ್ತಿ ಮಾಡಿ (ಪ್ರಹ್ಲಾದನ ಮನಃಸಂತೋಷವಾಗುವ ರೀತಿಯಲ್ಲಿ) ಸೇವೆ ಮಾಡಿದನು[೨].

ವಿಪ್ರರೂಪಿ ಇಂದ್ರನು ಪ್ರಹ್ಲಾದನನ್ನು ಅನೇಕ ಬಾರಿ 'ನೀನು ಲೋಕಾಧಿಪತ್ಯವನ್ನು ಹೇಗೆ ಹೊಂದಿದೆ' ಎಂದು ಕೇಳಲಾಗಿ ಪ್ರಹ್ಲಾದನು –

೧. ನಾನು ರಾಜನೆಂದು ಎಂದೂ ತಿಳಿದು ಯಾರ ಬಗ್ಗೆಯೂ ಅಸೂಯೆ ಮಾಡುವುದಿಲ್ಲ (ಅವರ ಹಿರಿಮೆಯನ್ನು ನೋಡಿ). ನನಗಿಷ್ಟವಾದುದನ್ನು ಹೇಳುವವರಿಗೆ ಅವರು ಬಯಸಿದ್ದನ್ನು ಕೊಡುತ್ತೇನೆ. ಅವರ ಮಾತನ್ನು ನಡೆಸಿಕೊಡುತ್ತೇನೆ.

೨. ನನ್ನ ಸದ್ಗುಣಗಳನ್ನು ಮೆಚ್ಚುವ ಬ್ರಾಹ್ಮಣರು, ಜೇನು ನೊಣಗಳು ವರಿಸುವಂತೆ ನನ್ನನ್ನು ಸಂಗ್ರಹಿಸುತ್ತಾರೆ (ನನ್ನನ್ನು ಇಷ್ಟಪಡುತ್ತಾರೆ, ನನ್ನೊಡನೆ ಇರುತ್ತಾರೆ). ಬ್ರಾಹ್ಮಣರ ವಾಗಮೃತವನ್ನು ಸವಿಯುವ ನಾನು ನಕ್ಷತ್ರಗಳ ಮಧ್ಯೆ ಚಂದ್ರನಂತೆ ಇದ್ದೇನೆ (ನನ್ನ ಜಾತಿಯಲ್ಲಿ ನಾನು ಶ್ರೇಷ್ಠನಾಗಿದ್ದೇನೆ, ವಿಜಾತೀಯ ಶ್ರೇಷ್ಠತ್ವವನ್ನು ಹೊಂದಿದ್ದೇನೆ. ಭಗವದ್ಗೀತೆಯ ೧೦ನೇ ಅಧ್ಯಾಯ – ವಿಭೂತಿರೂಪಾಧ್ಯಾಯ ನೋಡಿರಿ). ಬ್ರಾಹ್ಮಣೋಪದೇಶದಿಂದ ಜ್ಞಾನ ಹೊಂದುತ್ತೇನೆ.

---

೧ ಸ ತತೋ ಬ್ರಾಹ್ಮಣೋ ಭೂತ್ವಾ ಪ್ರಹ್ಲಾದಂ ಪಾಕಶಾಸನಃ।
ಸೃತ್ವಾ ಪ್ರೋವಾಚ ಮೇಧಾವೀ ಶ್ರೇಯ ಇಚ್ಛಾಮಿ ವೇದಿತುಮ್।
ಪ್ರಹ್ಲಾದಸ್ತ್ವ ಬ್ರವೀತ್ ವಿಪ್ರಂ ಕ್ಷಣೋ ನಾಸ್ತಿ ದ್ವಿಜರ್ಷಭ।
ಬ್ರಾಹ್ಮಣಸ್ತ್ವಬ್ರವೀದ್ವಾಕ್ಯಂ ಕಸ್ಮಿನ್ ಕಾಲೇ ಕ್ಷಣೋ ಭವೇತ್।
ತತೋಪದಿಷ್ಟಮಿಚ್ಛಾಮಿ ಯದ್ವತ್ ಕಾರ್ಯಾಂತರಂ ಭವೇತ್। – ೧೨೪/೨೦-೨೯

೨ ತತಃ ಪ್ರೀತೋಽಭವದ್ ರಾಜಾ ಪ್ರಹ್ಲಾದೋ ಬ್ರಹ್ಮವಾದಿನೇ।
ತಥೇತ್ಯುಕ್ತ್ವಾ ಶುಭೇ ಕಾಲೇ ಜ್ಞಾನತತ್ತ್ವಂ ದದೌ ತದಾ।
ಬ್ರಾಹ್ಮಣೋಽಪಿ ಯಥಾ ನ್ಯಾಯಂ ಗುರುವೃತ್ತಿಮನುತ್ತಮಾಮ್।
ಚಕಾರ ಸರ್ವಭಾವೇನ ಯದ್ವತ್ ಸ ಮನಸೇಚ್ಛತಿ॥ –೧೨೪/೩೦,೩೧

ನೋಡು ಬ್ರಾಹ್ಮಣ ಇದುವೇ ಶ್ರೇಯಸ್ಸಾಧನವಾದುದು ಎಂದನು ಪ್ರಹ್ಲಾದ. ಬ್ರಾಹ್ಮಣನ ಸೇವೆಯನ್ನು ಸ್ವೀಕರಿಸಿದ ಪ್ರಹ್ಲಾದನು ಮತ್ತೆ ನುಡಿದ. ನಿನ್ನ ಗುರುವೃತ್ತಿ, ಗುರುಸೇವೆಯಿಂದ ನನಗೆ ಸಂತೋಷವಾಗಿದೆ. ನಿನಗೆ ಮಂಗಳವಾಗಲಿ. ನಿನಗೆ ವರವನ್ನು ಕೊಡುವೆ, ನಿಸ್ಸಂಶಯವಾಗಿ ಕೊಡುವೆ ಎಂದನು. ಬ್ರಾಹ್ಮಣನು ವರ ಬೇಡವೆಂದರೂ ಬಿಡದೆ ಪ್ರಹ್ಲಾದನು ಮತ್ತೆ ವರ ಬೇಡೆಂದನು[೧].

ಆಗ ಬ್ರಾಹ್ಮಣನು 'ನೀನು ನನ್ನ ಹಿತವನ್ನು ಬಯಸುವೆಯಾದರೆ ನಾನು ನಿನ್ನ ಶೀಲವನ್ನು ಹೊಂದಲು ಇಚ್ಛಿಸುತ್ತೇನೆ. ಇದೇ ನಾನು ಕೇಳುವ ವರ ಎಂದನು. ಆಗ ಪ್ರಹ್ಲಾದ ದೈತ್ಯಪತಿಯು ಸಂತೋಷಗೊಂಡು, ವರ ಬೇಡಿದ ಬ್ರಾಹ್ಮಣನು ಮಹಾತೇಜಸ್ವಿ ಇರಬೇಕೆಂದು ಭಯಗೊಂಡನು. ದುಃಖಕ್ಕೆ ಈಡಾದನು[೨].

ಹೀಗೆ ವರದ ಪರಿಣಾಮವನ್ನು ಪ್ರಹ್ಲಾದರಾಜನು ಚಿಂತಿಸುತ್ತಿರಲು ಪ್ರಹ್ಲಾದನ ಆಕಾರದಂತೆ ಇರುವ ತೇಜೋಮಯವಾದ ಶರೀರ ಹೊರಟಿತು. ಪ್ರಹ್ಲಾದನು 'ನೀನು ಯಾರೆಂದು' ಕೇಳಲು 'ನಾನು ಶೀಲ. ನಿನ್ನನ್ನು ತ್ಯಾಗ ಮಾಡಿ ಹೋಗುತ್ತಿದ್ದೇನೆ.' ಎಂದನು. ನಾನು ನಿನ್ನಿಂದ ಹೋಗಿ ನೀನು ವರ ಕೊಟ್ಟ ಬ್ರಾಹ್ಮಣನನ್ನು ಸೇರುವೆ ಎಂದು ಅಂತರ್ಧಾನ ಹೊಂದಿ ಇಂದ್ರನನ್ನು ಪ್ರವೇಶಿಸಿತು. ಆ ತೇಜಸ್ಸು ಹೋದ ಮೇಲೆ ಪ್ರಹ್ಲಾದನಂತೆಯೇ ಇರುವ ಧರ್ಮ, ಸತ್ಯ, ವೃತ್ತ(ನಡತೆ), ಬಲ, ಸಂಪತ್ತು(ಶ್ರೀದೇವಿ)ಗಳು ತೇಜೋಮಯರೂಪದಿಂದ ಪ್ರಹ್ಲಾದನ ಶರೀರವನ್ನು ತ್ಯಜಿಸಿ, ಬ್ರಾಹ್ಮಣನ (ಇಂದ್ರನ ಶರೀರವನ್ನು) ಸೇರಿಕೊಂಡವು. ಅವರೆಲ್ಲ ಹೇಳಿದ್ದು, ನಾವು ಶೀಲವೆಲ್ಲಿರುತ್ತದೋ ನಾವು ಕ್ರಮವಾಗಿ ಧರ್ಮ, ಸತ್ಯ, ವೃತ್ತ, ಬಲ, ಸಂಪತ್ತು (ಲಕ್ಷ್ಮೀದೇವಿ) ಇರುತ್ತೇವೆ ಎಂದರು (ಎಲ್ಲಿ ಶೀಲವೋ ಅಲ್ಲಿ ಧರ್ಮ, ಎಲ್ಲಿ ಧರ್ಮವೋ ಅಲ್ಲಿ ಸತ್ಯ – ಹೀಗೆ ತಿಳಿಯಬೇಕು). ಆಗ ಪ್ರಹ್ಲಾದನಿಗೆ ತನ್ನಿಂದ ಇವರೆಲ್ಲ ಹೋದುದನ್ನು ನೋಡಿ ಭಯ ಉಂಟಾಯಿತು. ಲಕ್ಷ್ಮೀದೇವಿಯನ್ನು ಕೇಳಿದ 'ನೀನು ಎಲ್ಲಿಗೆ ಹೋಗುತ್ತೀ? ಆ ಬ್ರಾಹ್ಮಣ ಯಾರು?' ಎಂದು. ಶ್ರೀದೇವಿ ನಿನ್ನಿಂದ ವಿದ್ಯೆಯನ್ನು ಪಡೆದ ಬ್ರಾಹ್ಮಣನು ಇಂದ್ರ. ನಿನ್ನಲ್ಲಿದ್ದ ಮೂರುಲೋಕದ ಐಶ್ವರ್ಯ ಮತ್ತೆ ಅವನಿಂದ ಅಪಹೃತವಾಯಿತು. ನೀನು ಶೀಲದಿಂದ ಗೆದ್ದುದನ್ನು ತಿಳಿದ ಇಂದ್ರನು ನಿನ್ನ ಶೀಲವನ್ನು ಅಪಹರಿಸಿದ್ದಾನೆ. ಧರ್ಮ, ಸತ್ಯ, ವೃತ್ತ, ಬಲ ಹಾಗೂ ನಾನು )ಶ್ರೀ- ಇವೆಲ್ಲ ಶೀಲ ಮೂಲಗಳು. ಶೀಲವಿದ್ದಲ್ಲಿ ನಾವಿರುತ್ತೇವೆ. ಹೀಗೆ ಹೇಳಿ ಶ್ರೀ ಹಾಗೂ ಮೊದಲು ಬಂದವರೆಲ್ಲ ಹೊರಟು ಹೋದರು. ಎಂದು ಧೃತರಾಷ್ಟ್ರನು ತನ್ನ ಮಗನಿಗೆ ಹೇಳಿದನು:

---

೧ ಯಥಾವದ್ ಗುರುವೃತ್ತ್ಯಾತೇ ಪ್ರೀತೋऽಸ್ಮಿ ದ್ವಿಜಸತ್ತಮ।
ವರಂ ವೃಣೀಷ್ವ ಭದ್ರಂ ತೇ ಪ್ರದಾತಾऽಸ್ಮಿ ನ ಸಂಶಯಃ॥ – ೧೨೪/೩೯,೪೦

೨ ತತಃ ಪ್ರೀತಶ್ಚ ದೈತ್ಯೇಂದ್ರೋ ಭಯಂ ಚಾಸ್ಯಾ ಭವನ್ಮಹತ್।
ವರೇ ಪ್ರದಿಷ್ಟೇ ವಿಪ್ರೇಣ ನಾಲ್ಪತೇಜಾಯಮಿತ್ಯುತ॥ – ೧೨೪/೪೨

ತ್ವಂ ಹಿ ಸತ್ಯವ್ರತಾದೇವೀ ಲೋಕಸ್ಯ ಪರಮೇಶ್ವರೀ।
ಕಶ್ಚಾಸೌ ಬ್ರಾಹ್ಮಣಶ್ರೇಷ್ಠಃ ತತ್ತ್ವಮಿಚ್ಛಾಮಿ ವೇದಿತುಮ್॥ - ೧೨೪/೩೭
ಸ ಶಕ್ರೋ ಬ್ರಹ್ಮಚಾರೀ ಚ ಯಸ್ತ್ವಯಾ ಚೋಪಶಿಕ್ಷಿತಃ।
ತ್ರೈಲೋಕ್ಯೇ ತು ಯದೈಶ್ವರ್ಯಂ ತತ್ ತೇನಾಪಹೃತಂ ಪ್ರಭೋ॥
ಶೀಲೇನ ಹಿ ತ್ವಯಾ ಲೋಕಾಃ ಸರ್ವೇ ಧರ್ಮಜ್ಞ ನಿರ್ಜಿತಾಃ।
ತದ್ವಿಜ್ಞಾಯ ಮಹೇಂದ್ರೇಣ ತವ ಶೀಲಂ ಹೃತಂ ಪ್ರಭೋ।
ಧರ್ಮಃ ಸತ್ಯಂ ತಥಾ ವೃತ್ತಂ ಬಲಂ ಚೈವ ತಥಾ ಹ್ಯಹಮ್।
ಶೀಲಮೂಲಾ ಮಹಾಪ್ರಾಜ್ಞ ಸದಾ ನಾಸ್ತ್ಯತ್ರ ಸಂಶಯಃ॥ - ೧೨೪/೫೮-೬೦

ಆಗ ದುರ್ಯೋಧನನು ಶೀಲದ ತತ್ತ್ವವನ್ನು ತಿಳಿಯಬಯಸಿದ.[೧] ಅದರ ಸಂಪಾದನೆ ಹೇಗೆ?

**ಆಗ ಧೃತರಾಷ್ಟ್ರನು ಶೀಲಸಂಪಾದನೆಯ ಉಪಾಯ ಹೇಳಿದನು.**

೧. ಪ್ರಾಣಿಗಳಿಗೆ ಯಾರು ಕಾಯೇನ-ವಾಚಾ-ಮನಸಾ ದ್ರೋಹ ಮಾಡುವುದಿಲ್ಲವೋ; ೨. ಎಲ್ಲರನ್ನೂ ಅನುಗ್ರಹಿಸುವುದು ದಾನ ಮಾಡುವುದು; ೩. ಬೇರೆಯವರಿಗೆ ಹಿತವಾಗದ ಕಾರ್ಯ ಮಾಡದಿರುವುದು; ೪. ಸಭೆಯಲ್ಲಿ, ಸಮಾಜದಲ್ಲಿ ಪ್ರಶಂಸೆಯನ್ನು ಹೊಂದುವ ಕಾರ್ಯ ಮಾಡಬೇಕು.

ಕೆಲವೊಂದು ವೇಳೆ ಶೀಲವಿಲ್ಲದ ರಾಜರೂ ಸಂಪತ್ತನ್ನು ಹೊಂದಿದರೂ ಅದನ್ನು ಅವರು ಬಹುಕಾಲ ಭೋಗಿಸುವುದಿಲ್ಲ. ನಂತರ ಅವರು ಸಪರಿವಾರ (ಸಮೂಲ) ನಾಶವಾಗುತ್ತಾರೆ.

ಮಗನೇ ಇದನ್ನು ತಿಳಿದುಕೊಂಡು ಧರ್ಮರಾಜನಿಗಿಂತ ಹೆಚ್ಚು ಸಂಪತ್ತು ಬಯಸಿದಲ್ಲಿ ನನ್ನ ಮಾತುಗಳನ್ನು ತಿಳಿದುಕೊಂಡು ಶೀಲವಂತನಾಗು. ಆಗಲೇ ಶ್ರೀಮಂತನಾಗುವೆ.

ಧರ್ಮರಾಜನೇ! ಧೃತರಾಷ್ಟ್ರನು ದುರ್ಯೋಧನನಿಗೆ ಹೀಗೆ ಹೇಳಿದನು. ನೀನು ಅದನ್ನೇ ಅನುಸರಿಸು ಶೀಲವಂತನಾಗುವೆ, ಶ್ರೀಮಂತನಾಗುವೆ.

## ಸಂದೇಶಗಳು-ವಿವರಣೆಗಳು

೧. ಕಥೆಯಲ್ಲಿಯೇ ಸಂದೇಶಗಳು ಸ್ಪಷ್ಟವಾಗಿವೆ.

೨. ದುರ್ಯೋಧನ ತಂದೆಯ ಮಾತು ಕೇಳಲಿಲ್ಲ. ಕೊನೆಗೆ ಸಪರಿವಾರ ನಾಶವಾದ.

---

೧ ಶೀಲಸ್ಯ ತತ್ತ್ವಮಿಚ್ಛಾಮಿ ವೇತ್ತುಂ........................
ಪ್ರಾಪ್ಯತೇ ಚ ಯಥಾ ಶೀಲಂ ತಮುಪಾಯಂ ವದಸ್ವ ಮೇ॥ - ೧೨೪/೬೨

೩. ಧೃತರಾಷ್ಟ್ರ ಸಾತ್ವಿಕ ಜೀವಿ. ಆದ್ದರಿಂದ ಸರಿಯಾಗಿ ಉಪದೇಶಿಸಿದ. ತನ್ನ ಕರ್ತವ್ಯ ಮಾಡಿದ. ಹಾಗೆಯೇ ಹಿರಿಯರು ಇರಬೇಕು.

೪. ಪ್ರಹ್ಲಾದರಾಜರು ತ್ರೈಲೋಕ್ಯಾಧಿಪತ್ಯವನ್ನು ತಮ್ಮ ಉತ್ತಮ ಶೀಲದಿಂದ ಪಡೆದರು. ಆದ್ದರಿಂದ ಎಲ್ಲರೂ ಶೀಲವಂತಾದರೆ ಅವರವರ ಯೋಗ್ಯತೆಯಂತೆ ಐಶ್ವರ್ಯವಂತರಾಗುತ್ತಾರೆ. ಪ್ರಹ್ಲಾದರಾಜರು ಇಂದ್ರದೇವರನ್ನು (ತಾತ್ಕಾಲಿಕವಾಗಿ) ಮೀರಿಸುವಂತಾದರು.

೫. ಪ್ರಹ್ಲಾದರಾಜರ ಶೀಲಕ್ಕೆ ಇಂದ್ರನೂ ತಲೆತಗ್ಗಿಸಬೇಕಾಯಿತು. ಗುಣಗಳಿದ್ದಲ್ಲಿ ಮತ್ಸರವಿರದು. ಗುಣಗಳನ್ನು ಮೆಚ್ಚಬೇಕು, ಇಂದ್ರನೂ ಮೆಚ್ಚಿ ತಲೆ ಬಗ್ಗಿಸಿದ.

೬. ಇಂದ್ರನು ತನ್ನ ಐಶ್ವರ್ಯ ಮತ್ತೆ ಪಡೆಯಲು ಹಿಂದೆಲ್ಲ ಯುದ್ಧ ಮಾಡಿದಂತೆ ಮಾಡದೆ ಸಾಮೋಪಾಯ ಹಿಡಿದ. ಕಾರಣ ತನ್ನ ಎದುರಾಳಿ ವೈಷ್ಣವ, ವಿಷ್ಣುಭಕ್ತಾಗ್ರಣಿ. ವೈಷ್ಣವರನ್ನು ಎದುರಿಸಲು ಭೇದ, ದಂಡಗಳು ಉಪಾಯಗಳಲ್ಲ.

೭. ಸ್ವಯಂ ನಾರಾಯಣನೂ ಬಲಿಯಿಂದ ರಾಜ್ಯ ಪಡೆದುದೂ ಕೂಡಾ ವಾಮನನಾಗಿ ಬೇಡಿಯೇ. **ನಾಯಾಚ್ಞಯಾಹಂ ಪ್ರತಿ ಹನ್ಮಿ ತಂ ಬಲಿಂ (ಮ.ತಾ.ನಿ. ೩/೪೭)** ಎಂಬ ಪ್ರತಿಜ್ಞೆ ಮಾಡಿಯೇ ಬಲಿಯಿಂದ ಇಂದ್ರನ ಕಳೆದುಹೋದ ರಾಜ್ಯ ವಾಪಸು ಪಡೆದುದು. ಇದು ನಡೆದೇ ಇಲ್ಲ, ಆದರೆ ಬಲಿಯ ತಾತ ಪ್ರಹ್ಲಾದನೂ ಇಂದ್ರನಿಂದ ತ್ರೈಲೋಕ್ಯಾಧಿ ಪತ್ಯ ಗಳಿಸಿದ್ದ. ಆದ್ದರಿಂದ ಇಲ್ಲೂ ಹರಿಪ್ರೇರಣೆಯಿಂದ ಇಂದ್ರನು ಆರಿಸಿದ ಉಪಾಯ ಸಾಮೋಪಾಯ. ಇಲ್ಲೂ ವಾಮನನಂತೆ ಬ್ರಾಹ್ಮಣನಾಗಿ, ಶಿಷ್ಯನಾಗಿ, ವಿದ್ಯೆ ಪಡೆದು, ವರ ಪಡೆದು, ತ್ರೈಲೋಕ್ಯಲಕ್ಷ್ಮಿಯನ್ನು ಶೀಲದ ಜೊತೆಗೆ ಅತ್ಯಂತ ಸಾತ್ವಿಕವಾಗಿಯೇ ಅಪಹರಿಸಿದ, ಪ್ರಹ್ಲಾದನಿಗೆ ತಿಳಿಯದಂತೆ. ಕಾರಣ ಪ್ರಹ್ಲಾದ ಹರಿಭಕ್ತ. ಹರಿಭಕ್ತರ ಮನಸ್ಸನ್ನು ಗೆದ್ದು ತಮ್ಮ ಕೆಲಸ ಮಾಡಿಕೊಂಡನು.

೮. ವಿಷ್ಣು ವೈಷ್ಣವದ್ವೇಷವಾಗದ ಉಪಾಯದಿಂದ ಸಂಪತ್ತನ್ನು ಗಳಿಸಬೇಕು, ಇಂದ್ರನಂತೆ.

೯. ಇಂದ್ರ ತಾತ್ತ್ವಿಕದೇವತೆ, ಪ್ರಹ್ಲಾದರಾಜ ಕರ್ಮಜದೇವತೆ. ಇಂದ್ರನಿಗಿಂತ ಬಹಳ ಕಡಿಮೆ ತಾರತಮ್ಯದಲ್ಲಿ. ಅದರೂ ದೌರ್ಜನ್ಯಾದಿಗಳಿಗೆ ಅವಕಾಶವೀಯದಂತೆ ಸ್ವಕಾರ್ಯ ಸಾಧನೆ ಮಾಡಿದ್ದು ಇಂದ್ರನ ಕರ್ಮಕುಶಲತೆಗೆ ಸಾಕ್ಷಿ.

೧೦. ಭಗವಂತನೇ ಕೊಟ್ಟ ತ್ರೈಲೋಕ್ಯಾಧಿಪತ್ಯ ಮತ್ತೆ ಇಂದ್ರನಿಗೇ ಹೋಯಿತು. ಇದೇ ಮಾತನ್ನು ಪ್ರಹ್ಲಾದರಾಜರೇ ವಾಮನನಿಗೆ ಬಲಿಪ್ರಸಂಗದಲ್ಲಿ ಹೇಳುತ್ತಾರೆ.

೧೧. ಇಂದ್ರನ ಮಹತ್ತ್ವ ಗೊತ್ತಾಗಿ ಪ್ರಹ್ಲಾದರಾಜರು ಹೆದರಿದ್ದು ಸಾತ್ತ್ವಿಕಪ್ರವೃತ್ತಿ ಹಾಗೂ ಸ್ವಾಭಾವಿಕ ಪ್ರವೃತ್ತಿ. ಸ್ವೋತ್ತಮರಿಗೆ ಹೆದರಬೇಕಾದುದು ಸ್ವಧರ್ಮ ನಡತೆಯಾಗಿರಬೇಕು. ಅದನ್ನು ಪ್ರಹ್ಲಾದರಲ್ಲಿ ನೋಡುತ್ತೇವೆ.

೧೨. ಇಂದ್ರದೇವರೂ ಕೂಡಾ ವಿದ್ಯಾ ಲೋಭಿಗಳಾಗಿ ಹೇಗೆ ಬರಬೇಕೋ ಹಾಗೇ ಬಂದು ಗುರುವಿನ ಅನುಕೂಲ, ಅನಾನುಕೂಲಗಳಿಗೆ ಸ್ಪಂದಿಸಿ ಗುರುಗಳಿಗೆ ಅನುಕೂಲವಾದಾಗಲೇ ವಿದ್ಯಾಪ್ರಾರ್ಥನೆ ಮಾಡಿದರು. ವಿದ್ಯೆಗೆ ಆಸೆ ಎಷ್ಟು ಮುಖ್ಯವೋ, ಗುರ್ವನುಕೂಲ, ಪ್ರಸಂಗಾನುಕೂಲ್ಯತೆ ಕೂಡಾ ಅಷ್ಟೇ ಮುಖ್ಯವೆಂದು ಇಂದ್ರದೇವರ ನಡೆ ತಿಳಿಸುತ್ತದೆ. ವಿದ್ಯೆಗಿಂತ ಗುರ್ವನುಗ್ರಹ ಮುಖ್ಯ. ಇದು ಅವರ ನಡೆಯ ಸಂದೇಶವಾಗಿದೆ.

೧೩. ಭಕ್ತಿಯಿಂದ ಗುರುವನ್ನು ಒಲಿಸಿಕೊಳ್ಳಬೇಕೆಂಬ ನಡೆ ಇಂದ್ರನಲ್ಲಿದೆ. ಅದೇ ಸಂದೇಶ ಎಲ್ಲರಿಗೂ ತಾರಕ (ಲಿಂಗಭೂಯಸ್ತ್ವಾಧಿಕರಣದ ಸಾರವಿದು) ಮ.ತಾ.ನಿ. ೧ರಲ್ಲಿ ಚರ್ಚಿತವಾಗಿದೆ.

೧೪. ಇಂದ್ರನಂತೆ ಅರ್ಜುನಾದಿಗಳೂ ನಡೆದು ದ್ರೋಣಾದಿಗಳ ಅನುಗ್ರಹ ಸಂಪಾದಿಸುತ್ತಾರೆ. ವ್ಯಾಸರೂ ಪಾಂಡವರಿಗೆ ವಿದ್ಯೋಪದೇಶ ಮಾಡಿದ್ದು ಇನ್ನೂ ವಿಶೇಷ.

೧೫. ದುರ್ಯೋಧನಾದಿಗಳು ಗುರ್ವನುಗ್ರಹ ಸಂಪಾದಿಸದೆ ಸರ್ವನಾಶ ಹೊಂದಿದರು. ಕೃಷ್ಣ ಭೀಷ್ಮ ದ್ರೋಣ, ಅಶ್ವತ್ಥಾಮ, ತಂದೆ-ತಾಯಿ ಯಾರ ಮಾತೂ ಕೇಳದೆ ನಾಶವಾದರು, ದುರ್ಯೋಧನಾದಿಗಳು.

ಇತ್ಯಾದಿ...

# ೮೮. ಆಶೆ(ಸೆ)ಯ ಹುಟ್ಟು

ಮತ್ತೇ ಭೀಷ್ಮರನ್ನು ಧರ್ಮರಾಜ ಪ್ರಶ್ನಿಸಿದ.

ತಾತ! ಮನುಷ್ಯನ ಗುಣಗಳಲ್ಲಿ(ಒಳ್ಳೆಯ) ಶೀಲಕ್ಕೆ ತುಂಬ ಪ್ರಧಾನವಿದೆ ಎಂದು ಹೇಳಿದೆ. ಆಶೆಯು ಹೇಗೆ ಉತ್ಪನ್ನವಾಯಿತು. ಅದನ್ನು ಹೇಳು. ಕುರುಕ್ಷೇತ್ರಯುದ್ಧ ಆರಂಭವಾದಾಗ ದುರ್ಯೋಧನನು ಯುಕ್ತವಾದುದನ್ನು (ಸೂಕ್ತನಿರ್ಧಾರ ತೆಗೆದುಕೊಳ್ಳುವನೆಂದು) ಮಾಡುವನೆಂದು ಭಾವಿಸಿದ್ದೆ(ಯುದ್ಧವಾಗಬಾರದೆಂಬ ನಮ್ಮ ಪ್ರಯತ್ನ ಕೈಗೂಡುವುದೆಂದು ನಿರೀಕ್ಷಿಸಿದ್ದೆ). ಆದರೆ ದುರಾತ್ಮನಾದ, ದುರ್ಬುದ್ಧಿಯ, ದುರ್ಯೋಧನನಿಂದ (ಆತನ ಕೆಟ್ಟ ನಿರ್ಧಾರದಿಂದ)ನನ್ನ ಆಸೆ ಭಂಗವಾಯಿತು. ನಿಜಕ್ಕೂ ನಾನೇ ಮಂದಬುದ್ಧಿಯವನೆಂದು ಅನಿಸುತ್ತದೆ (ಅಂತಹ ನಿರೀಕ್ಷೆ ಇಟ್ಟುಕೊಂಡುದ್ದೇ ತಪ್ಪು ಎಂದು ನಂತರದ ಘಟನೆಯಿಂದ ತಿಳಿಯಿತು)[೧].

ಆಶೆ ಎಂಬುದು ವೃಕ್ಷಗಳಿಂದ ಕೂಡಿದ ಪರ್ವತದ ಅಥವಾ ಆಕಾಶದ ಎತ್ತರಕ್ಕಿಂತಲೂ ಎತ್ತರವೆಂದು ಭಾವಿಸಿದ್ದೇನೆ. ಅಥವಾ ತಿಳಿಯಲು ಅಸಾಧ್ಯವಾದ ಎತ್ತರವುಳ್ಳದ್ದೇನೋ. ಇದೊಂದು ಆಲೋಚನೆಗೆ ಸಿಲುಕದಷ್ಟು ಕಷ್ಟವೂ, ಸಿಗಲೂ ಅಸಾಧ್ಯವೂ ಆಗಿದೆ. ಇದನ್ನು ಗೆಲ್ಲುವುದೂ ತುಂಬಾ ಕಷ್ಟ ಅದಕ್ಕಿಂತ ದುರ್ಲಭವಾದುದು ಮತ್ತೊಂದು ಇಲ್ಲವೇನೋ ಅನಿಸುತ್ತದೆ (ದುರ್ಯೋಧನನ ನಡೆ ನನ್ನ ಆಶೆಗಳನ್ನು ನುಚ್ಚುನೂರು ಮಾಡಿ ಹತಾಶನಾದೆ).

ಭೀಷ್ಮರು ಈ ಬಗ್ಗೆ ಹಿಂದೆ ನಡೆದ ರಾಜರ್ಷಿಯಾದ ಸುಮಿತ್ರ ಹಾಗೂ ಋಷಭ ಋಷಿಗೂ ನಡೆದ ಇತಿಹಾಸವನ್ನು ಧರ್ಮರಾಜನಿಗೆ ಹೇಳಿದರು.

---

೧ ಕಥಮಾಶಾ ಸಮುತ್ಪನ್ನಾ..................
ಪಿತಾಮಹಾಶಾ ಮಹತೀ ಮಮಾಸೀದ್ಧಿ ಸುಯೋಧನೇ।
ಪ್ರಾಪ್ತೇ ಯುದ್ಧೇ ತು ತದ್ ಯುಕ್ತಂ ತತ್ಕರ್ತಾಽಯಮಿತಿ ಪ್ರಭೋ।
ಸರ್ವಸ್ಯಾಶೀ ಸುಮಹತೀ............................
ತಸ್ಯಾಂ ವಿಹನ್ಯ ಮಾನಾಯಾಂ ದುಃಖೋ ಮೃತ್ಯುರಸಂಶಯಮ್।
ಸೋಽಹಂ ಹತಾಶೋ ದುರ್ಬುದ್ಧಿಃ ಕೃತಸ್ತೇನ ದುರಾತ್ಮನಾ।
ಧಾರ್ತರಾಷ್ಟ್ರೇಣ ರಾಜೇಂದ್ರ ಪಶ್ಯ ಮಂದಾತ್ಮತಾಂ ಮಮ।
ಆಶಾಂ ಮಹತ್ತರಾಂ ಮನ್ಯೇ ಪರ್ವತಾದಪಿ ಸದ್ರುಮಾತ್।
ಆಕಾಶಾದಪಿ ವಾ ರಾಜನ್ನಪ್ರಮೇಯೈವ ವಾ ಪುನಃ॥ - ೧೨೬/೧-೭

ಸೂರ್ಯವಂಶದಲ್ಲಿ ಬಂದ ಹೈಹಯಕುಲದಲ್ಲಿ ಜನಿಸಿದ ಸುಮಿತ್ರ ಎಂಬ ರಾಜರ್ಷಿ ಬೇಟೆಗಾಗಿ ಕಾಡಿಗೆ ಹೋಗಿ ಒಂದು ಜಿಂಕೆಗೆ ಬಾಣದಿಂದ ಹೊಡೆದ. ಆ ಬಾಣ ಜಿಂಕೆಗೆ ನೆಟ್ಟರೂ ಮುಂದೆ ಹೋದಾಗ ರಾಜನು ಸಮೀಪದಿಂದಲೇ ಬೆನ್ನಟ್ಟಿದ. ಮೃಗಕ್ಕೂ ಅವನಿಗೂ ಬಹಳ ದೂರವಿರಲಿಲ್ಲ. ಆದರೆ ಕೈಗೆ ಸಿಗುತ್ತಿರಲಿಲ್ಲ. ಅದು ವೇಗವಾಗಿ ಕಾಡಿನ ಜಾಡಿನಲ್ಲಿ ಉಬ್ಬು ತಗ್ಗು ನೆಲವನ್ನೆಲ್ಲ ದಾಟುತ್ತ, ಸಮತಟ್ಟಾದ ದಾರಿಯಲ್ಲೂ ಒಂದು ಮುಹೂರ್ತ ಸಾಗಿತು. ರಾಜನು ತರುಣ, ಬಲವಂತ. ಕೈಯಲ್ಲಿ ಖಡ್ಗ, ಬಿಲ್ಲು ಹಿಡಿದುಕೊಂಡು ಮೃಗವನ್ನು ಬಿಡದೆ ಹಿಂಬಾಲಿಸುತ್ತಲೇ ಇದ್ದ. ದಾರಿಯಲ್ಲಿ ನದೀ, ನದ ಮೊದಲಾದವುಗಳನ್ನು ದಾಟಿ ಕಾಡಿನಲ್ಲಿ ಜಿಂಕೆ ಓಡಿತು. ರಾಜನ ಹತ್ತಿರ ಬಂದಂತೆ ಮಾಡುತ್ತಾ(ಸಿಗುವಂತೆ ನಟಿಸುವಂತೆ) ವೇಗವಾಗಿ ಓಡುತ್ತಾ ಜಿಂಕೆ ರಾಜನ ಹತ್ತಿರ ಬರುತ್ತಿತ್ತು (ಆತನ ವೇಗಕ್ಕೆ ಹೊಂದಿ, ನಿಂತು ನಿಂತು ಮುಂದೆ ಸಾಗಿತು). ತಾನು ರಾಜನಿಗೆ ಸಿಗುತ್ತಿದ್ದೇನೆ ಎಂಬ ನಂಬಿಕೆ ಹುಟ್ಟಿಸುತ್ತಾ ಸಾಗಿತ್ತು. ರಾಜ ಮತ್ತೊಮ್ಮೆ ಮರ್ಮಚ್ಛೇದಕ ಬಾಣ ಬಿಟ್ಟ ಜಿಂಕೆಗೆ. ಮೃಗರಾಜನು ಒಂದೇ ಗಾವುದ ದೂರದಲ್ಲಿ ಬಾಣದಿಂದ ತಪ್ಪಿಸಿಕೊಂಡು (ಓಡುವ ದಿಕ್ಕನ್ನು ಬದಲಿಸಿ) ನಗುತ್ತಾ ನಿಂತಿತು. ಇದೊಂದು ತರಹ ರಾಜನನ್ನು ರೇಗಿಸುವ ನಡೆಯಾಗಿತ್ತು. ನಂತರ ಜಿಂಕೆ ಮತ್ತೊಂದು ಮಹಾ ಕಾಡಿಗೆ ನುಸುಳಿತು. ರಾಜನು ಅದರ ಹಿಂದೆಯೇ ಓಡಿದ. ಜಿಂಕೆ ಮಾತ್ರ ಸಿಗಲಿಲ್ಲ[೧].

ರಾಜನು ಒಂದು ಋಷ್ಯಾಶ್ರಮ ನೋಡಿದ. ದಣಿದಿದ್ದ ಆತ ಅಲ್ಲಿಯೇ ಕುಳಿತ. ಬಿಲ್ಲನ್ನು ಧರಿಸಿದ, ಓಡಿದ ಶ್ರಮದಿಂದ ಬಳಲಿದ, ಹಸಿದ ರಾಜನನ್ನು ನೋಡಿದ ಅಲ್ಲಿ ಋಷಿಗಳು ರಾಜೋಪಚಾರದಿಂದ ಸತ್ಕರಿಸಿದರು. ಇಲ್ಲಿಗೆ ನೀನೊಬ್ಬ ರಾಜನಾದರೂ ಧನುಸ್ಸು ಬಾಣಗಳನ್ನು ಹಿಡಿದುಕೊಂಡು, ಟೊಂಕಕ್ಕೆ ಖಡ್ಗವನ್ನು ಕಟ್ಟಿಕೊಂಡು, ಪದಾತಿಯಾಗಿ ಈ ತಪೋವನಕ್ಕೆ ಒಂಟಿಯಾಗಿ ಬಂದಿರುವೆಯಲ್ಲ? ಕಾರಣವೇನು? ಎಲ್ಲಿಂದ ಬಂದಿರುವೆ, ನಿನ್ನ ಕುಲ ಯಾವುದು? ನಿನ್ನ ಹೆಸರೇನು? ಎಂದೆಲ್ಲ ಋಷಿಗಳು ರಾಜನನ್ನು ಪ್ರಶ್ನಿಸಿದರು.

ನಂತರ ರಾಜನು ಎಲ್ಲ ಋಷಿಗಳಿಗೆ ತನ್ನ ಪರಿಚಯವನ್ನು ಮಾಡಿಕೊಟ್ಟನು (ಅವರಿಗೆ ಯಥೋಚಿತವಾಗಿ ಗೌರವ ಸಲ್ಲಿಸಿ ತಾನು ಬಂದ ಉದ್ದೇಶವನ್ನು ಹೇಳಿದನು).

ನಾನು ಹೈಹಯ ಕುಲದಲ್ಲಿ ಜನಿಸಿದ ಮಿತ್ರನೆಂಬ ರಾಜನ ಮಗ ಸುಮಿತ್ರ. ನಾನು ಮಹಾಸೈನ್ಯದಿಂದ ರಕ್ಷಿತನಾಗಿ ಅಮಾತ್ಯ ಹಾಗೂ ಪರಿವಾರದೊಡನೆ ನನ್ನ ಸಹಸ್ರಾರು ಬಾಣಗಳಿಂದ ಮೃಗಗಳನ್ನು ಕೊಲ್ಲುತ್ತಾ ತಿರುಗುತ್ತಿದ್ದೇನೆ. ಮೃಗವೊಂದು ನನ್ನ ಬಾಣದಿಂದ ಹೊಡೆಯಲ್ಪಟ್ಟು ಬಾಣವನ್ನು ಅಂಟಿಸಿಕೊಂಡೇ ಮುಂದೆ ಹೋಯಿತು. ನಾನು ಅದನ್ನು

---

೧ ಸ (ಮೃಗಃ) ತಸ್ಯ (ರಾಜ್ಞಃ) ಬಾಣೈರ್ಬಹುಭಿಃ ಸಮಸ್ತಭ್ಯೋ ವನೇಚರಃ।
ಪ್ರಕ್ರೀಡನ್ನಿವ ರಾಜೇಂದ್ರ ಪುನರಭ್ಯೇತಿ ಚಾಂತಿಕಮ್।
ತಸ್ಯ ಬಾಣಪಥಂ ತ್ಯಕ್ತ್ವಾ ತಸ್ಥಿವಾನ್ ಪ್ರಹಸನ್ನಿವ॥

ಹಿಂಬಾಲಿಸುತ್ತಾ ದೈವವಾಶಾತ್ ಇಲ್ಲಿಗೆ ಕಾಂತಿರಹಿತನಾಗಿ, ಹತಾಶನಾಗಿ, ಶ್ರಮದಿಂದಾಗಿ ತಮ್ಮ ಆಶ್ರಮಕ್ಕೆ ಬಂದಿದ್ದೇನೆ. ನಾನು ನನ್ನ ರಾಜಚಿಹ್ನೆ, ಜಿಂಕೆಯನ್ನು ಹಿಡಿಯದ ಆಶೆಯಿಂದ ಮತ್ತು ಓಡಿ ಬಳಲಿ ನಿಮ್ಮ ಆಶ್ರಮಕ್ಕೆ ಬಂದಿರುವುದಕ್ಕಿಂತ ಬೇರೆ ದುಃಖ ಯಾವುದಿದೆ ಹೇಳಿ!![೧]

ರಾಜಚಿಹ್ನೆಯ ತ್ಯಾಗ, ರಾಜಧಾನಿಯ ತ್ಯಾಗಕ್ಕಿಂತ ನನ್ನ ಆಶಾಭಂಗವು ತುಂಬಾ ದುಃಖ ತಂದಿದೆ.

ತಮ್ಮ ಮಹತ್ತ್ವದಿಂದ ಹಿಮಾಲಯ ಪರ್ವತವಾಗಲೀ, (ತೀರಗಾಣದ) ಸಮುದ್ರವಾಗಲೀ, ಭೂಮ್ಯಂತರಿಕ್ಷಗಳ ಮಧ್ಯವನ್ನು ಹೇಗೆ ತುಂಬಲಾರವೋ ಹಾಗೆ, ತಪೋನಿಧಿಗಳೇ! ನನ್ನ ಆಸೆಯ ಕೊನೆಯನ್ನು ನಾನು ತಲುಪಿಲ್ಲ, ಈಡೇರಿಲ್ಲ. ತಾವೆಲ್ಲ ಸರ್ವಜ್ಞರೇ. ತಮಗೆ ತಿಳಿಯದುದು ಏನಿದೆ? ನಿಮ್ಮನ್ನು ಒಂದು ಪ್ರಶ್ನೆ ಕೇಳುತ್ತೇನೆ[೨].

ಒಂದು ಕಡೆ ಆಶಾವಂತನಾದ ಪುರುಷ (ಪುರುಷನ ಆಸೆ ಒಂದು ಕಡೆ ಇನ್ನೊಂದೆಡೆ ದಡವಿಲ್ಲದ, ಕೊನೆಯಿಲ್ಲದ) ಆಕಾಶ. ಇವುಗಳಲ್ಲಿ ಮಹತ್ತ್ವದ ದೃಷ್ಟಿಯಿಂದ ಯಾವುದು ದೊಡ್ಡದು? ದಯವಿಟ್ಟು ನನಗೆ ಈ ಬಗ್ಗೆ ಸರಿಯಾಗಿ ತಿಳಿಸಿರಿ. ಇಲ್ಲಿಗೆ ಬಂದಿರುವ ನನಗೆ ದುರ್ಲಭವಾದುದು ಯಾವುದು(ಸಿಗಲು ಅಸಾಧ್ಯವಾದುದು). ಇದು ರಹಸ್ಯವಾಗಿದ್ದರೆ ನನಗೆ ಹೇಳಬೇಡಿ. ಅದು ನಾನು ಕೇಳಲು ಅತ್ಯಂತ ರಹಸ್ಯವಾಗಿದ್ದರೆ ನಾನು ಕೇಳಬಯಸುವುದಿಲ್ಲ. ತಮ್ಮ ತಪೋಭಂಗವಾಗುವುದಿದ್ದರೆ (ಈ ಪ್ರಶ್ನೆಗೆ ಉತ್ತರ ನೀಡುವ ವಿಷಯ) ನಾನು ಪ್ರಶ್ನೆಗೆ ಉತ್ತರ ನಿರೀಕ್ಷಿಸುವುದಿಲ್ಲ, ನನ್ನಿಂದಾಗಿ ನಿಮ್ಮ ತಪೋಭಂಗವಾಗಿ ಕಾಲವ್ಯರ್ಥವಾಗದಿರಲಿ. ಈ ಆಸೆಯ ಕಾರಣ ಮತ್ತು ಜಯೋಪಾಯಗಳನ್ನು ಸಮಗ್ರವಾಗಿ ಕೇಳಬಯಸುತ್ತೇನೆ. ತಮಗೆ ಇದು ಸೂಕ್ತವೆನಿಸಿದರೆ ಉತ್ತರಿಸಿರಿ.

ಆಶ್ರಮದ ಮುನಿಗಳಿಗೆ ಹೀಗೆ ರಾಜನು ಪ್ರಶ್ನೆ ಕೇಳಲು ಅಲ್ಲಿದ್ದ ಋಷಭನೆಂಬ ವಿಪ್ರರ್ಷಿಯು ನಗುತ್ತಾ ಹೀಗೆ ಉತ್ತರಿಸಿದನು.

---

೧ ರಾಜಾ ಸರ್ವೇಭ್ಯಃ ದ್ವಿಜೇಭ್ಯೋ ಯಥಾ ನ್ಯಾಯಂ(ಸ್ವ) ಪರಿಚರ್ಯಾಂ(ಪೂಜಾಂ)।
ಶುಶ್ರೂಷಾಂ ವಾ ಕೃತ್ವಾ (ಸ್ವಗಮನೋದ್ದೇಶ್ಯಂ) ಆಚಖ್ಯೌ ಇತಿ ಯೋಜನಾ ಕರ್ತವ್ಯಾ ॥
- ೧೨೭/೨೪

೨ ಕಿಂ ನು ದುಃಖಮತೋಽನ್ಯದ್ವೈ ಯದಹಂ ಶ್ರಮಕರ್ಶಿತಃ।
ಭವತಾಮಾಶ್ರಮಂ ಪ್ರಾಪ್ತೋ ಹತಾಶೋ ನಷ್ಟಲಕ್ಷಣಃ॥
ನ ರಾಜಲಕ್ಷಣತ್ಯಾಗೋ ನ ಪುರಸ್ಯ ತಪೋಧನಾಃ।
ದುಃಖಂ ಕರೋತಿ ತತ್ ತೀವ್ರಂ ಯಥಾಶಾ ನಿಹತಾ ಮಮ॥
ಆಶಾವಾನ್ ಪುರುಷೋ ಯಃ ಸ್ಯಾದಂತರಿಕ್ಷಮಥಾಪಿ ವಾ।
ಕಿನ್ನು ಜ್ಯಾಯಸ್ತರಂ ಲೋಕೇ ಮಹತ್ತ್ವೇ ಪ್ರತಿಭಾತಿ ವಃ॥ - ೧೨೬/೧೦-೩೪

ರಾಜನ್! ನಾನು ಹಿಂದೊಮ್ಮೆ ತೀರ್ಥಯಾತ್ರೆ ಮಾಡುತ್ತಾ ಬದರೀವೃಕ್ಷ, ವೈಹಾಯಸ ಕುಂಡವಿರುವ ಕಡೆ ಬಂದು ಅಲ್ಲಿನ ಸರೋವರದಲ್ಲಿ ಸ್ನಾನ ಮಾಡಿ, ದೇವಪಿತೃತರ್ಪಣಗಳನ್ನು ಕೊಟ್ಟು ನಂತರ ಆ ನರನಾರಾಯಣಾಶ್ರಮದ ಹತ್ತಿರವೇ ಇರುವ ಮತ್ತೊಂದು ಆಶ್ರಮಕ್ಕೆ ನಾನು ವಾಸಿಸಲು ಹೋದೆ. ವೈಹಾಯಸ ಸರೋವರದ ಸನ್ನಿಧಿ ಎಂದರೆ ಅಲ್ಲಿ ಹಯಗ್ರೀವದೇವರು ಸದಾ ವೇದಗಳನ್ನು ಪಠಿಸುತ್ತಾ ಇರುತ್ತಾರೆ. ಅಂತಹ ಪುಣ್ಯಕ್ಷೇತ್ರವದು. ಅಲ್ಲಿ ನರನಾರಾಯಣ ಋಷಿಗಳು ನಿತ್ಯ ಸ್ನಾನ ಮಾಡುವ ಕ್ಷೇತ್ರವೂ ಹೌದು.

ನನ್ನ ಆಶ್ರಮಕ್ಕೆ ತಪೋನಿಧಿಯಾದ, ಕೃಷ್ಣಾಜಿನ ಮತ್ತು ನಾರುಮಡಿಯನ್ನುಟ್ಟು ಕೃಶನಾದ ಆದರೆ ಸಾಮಾನ್ಯ ಮನುಷ್ಯರಿಗಿಂತ ಎಂಟು ಪಟ್ಟು ಎತ್ತರವಿರುವ **ತನು** ಎಂಬ ಋಷಿಯು ಬರುವುದನ್ನು ನೋಡಿದೆ. ಅಂತಹ ಕೃಶ ಹಾಗೂ ಎತ್ತರದ ವ್ಯಕ್ತಿಯನ್ನು ನಾನೆಂದೂ ನೋಡೇ ಇರಲಿಲ್ಲ.

ಆತನ ಶರೀರ ಕಿರುಬೆಳಿನ ಗಾತ್ರದಷ್ಟು ಇತ್ತು. ಉಳಿದ ಕತ್ತು, ಭುಜ, ಪಾದ, ಕೇಶಗಳಲ್ಲಿ ನೋಡಲು ಅದಕ್ಕನುಗುಣವಾಗಿ ಅದ್ಭುತವಾಗಿದ್ದವು. ಎಲ್ಲಾ ಅವಯವಗಳು ಶರೀರಕ್ಕೆ ಅನುಗುಣವಾಗಿದ್ದವು. ಆತನ ಮಾತು, ಚೇಷ್ಟೆ(ವ್ಯಾಪಾರ-ಕ್ರಿಯೆಗಳು) ಸಾಮಾನ್ಯ ಜನರಂತೆ ಇದ್ದಿತು. ನಾನು ಆತನನ್ನು ನೋಡಿ ಹೆದರಿ ನಮಸ್ಕರಿಸಿ ಆತನೆದುರು ಕೈ ಮುಗಿದು ನಿಂತೆ. ನನ್ನ ಗೋತ್ರಪ್ರವರ(ತಂದೆ ತಾಯಿಯ ಹೆಸರು ಇತ್ಯಾದಿ) ತಿಳಿಸಿದೆ. ಆತನು ಸೂಚಿಸಿದ ಆಸನದಲ್ಲಿ ಮೆಲ್ಲಗೆ ಕುಳಿತೆ. ಆ ಋಷಿಯು ನಂತರ ಧರ್ಮಾರ್ಥಗಳಿಗೆ ಸಂಬಂಧಿಸಿದ ಅನೇಕ ಕಥೆಗಳನ್ನು ಹೇಳಿದನು[೧].

ಆ ಋಷಿಯು ಹೀಗೆ ಕಥೆಗಳನ್ನು ಹೇಳುತ್ತಿರುವಾಗ ರಘುವಂಶದಲ್ಲಿನ ಶ್ರೇಷ್ಠವಾದ ರಾಜನೊಬ್ಬನು ವೇಗವಾದ ಕುದುರೆಗಳಿಂದ ಕೂಡಿದ ಸೈನ್ಯ ಹಾಗೂ ಪರಿವಾರದಿಂದ ಕೂಡಿದವನಾಗಿ ಅಲ್ಲಿಗೆ ಬಂದನು. ಆ ರಾಜನ ಹೆಸರು **ವೀರದ್ಯುಮ್ನ**. ಆತನ ಮಗ

---

೧ ಪುರಾಹಂ ರಾಜಶಾರ್ದೂಲ ತೀರ್ಥಾನ್ಯನುಚರನ್ ಪ್ರಭೋ।
ಸ ಮಾಸಾದಿತವಾನ್ ದಿವ್ಯಂ ನರನಾರಾಯಣಾಶ್ರಮಮ್ ॥
ಯತ್ರ................ ಹ್ರದೋ ವೈಹಾಯಸಸ್ತಥಾ।
ಯತ್ರ ಚಾಶ್ವಶಿರಾ (ಹಯಗ್ರೀವದೇವಃ) ರಾಜನ್ ವೇದಾನ್ ಪಠತಿ ಶಾಶ್ವತಾನ್।
ತಸ್ಮಿನ್ ಸರಸಿ ಕೃತ್ವಾಹಂ ವಿಧಿವತ್ ತರ್ಪಣಂ ಪುರಾ।
ಪಿತೃಣಾಂ ದೇವತಾನಾಂ ಚ ತತೋಽಽಶ್ರಮಮಿಯಾಂ ತದಾ।
.....ಅದ್ರಾಕ್ಷ ಮೃಷಿಮಾಯಾಂತಂ ತನುಂ ನಾಮ ತಪೋನಿಧಿಮ್।
ಅನ್ಯೈರ್ನರೈಃ.... ವಪುಷಾಽಷ್ಟಗುಣಾನ್ವಿತಮ್।
ಕೃಶತಾ ಚಾಪಿ ರಾಜರ್ಷೇ ನ ದೃಷ್ಟಾ ತಾದೃಶೀ ಕ್ವಚಿತ್।
ಶರೀರಮಪಿ ರಾಜೇಂದ್ರ ತನು ಕಾನಿಷ್ಠಿಕಾ ಸಮಮ್।

ಭೂರಿದ್ಯುಮ್ನ ಅರಣ್ಯದಲ್ಲಿ ಕಳೆದುಹೋಗಿದ್ದನಂತೆ. ಹುಡುಕಿದರೂ ಸಿಕ್ಕಿದ್ದಿಲ್ಲ. ಅದರಿಂದ ಬಹಳ ದುಃಖಿತನಾಗಿ ತನ್ನ ಪುತ್ರನಾಶವಾದುದನ್ನು ಹೇಳುತ್ತಾ ನನ್ನ ಏಕಮಾತ್ರ ಮಗನನ್ನು ಮತ್ತೊಮ್ಮೆ ನೋಡದಿರಬಹುದು. ನನ್ನ ಮಹದಾಶೆ ಈಡೇರದೆ ನಾನು ಇಲ್ಲಿಯೇ ಮರಣ ಹೊಂದುವೆ ಎಂದು ಮತ್ತೆ ಮತ್ತೆ ಹೇಳಿದನು[೧].

ರಾಜನ ದುಃಖದ ಮಾತುಗಳನ್ನು ಕೇಳಿ ಆ ತನು ಋಷಿಯು ತನ್ನ ತಲೆಯನ್ನು ತಗ್ಗಿಸಿ ಒಂದು ಮುಹೂರ್ತಕಾಲ ಧ್ಯಾನಮಗ್ನನಾದನು.

ಮುನಿಯು ಧ್ಯಾನಮಗ್ನನಾದುದನ್ನು ಕಂಡ ರಾಜ ವೀರದ್ಯುಮ್ನನು ಪುತ್ರಶೋಕದಿಂದ ದೀನನಾಗಿ ಮೆಲ್ಲಗೆ ಹೀಗೆ ನುಡಿದ.

'ಲೋಕದಲ್ಲಿ ದುರ್ಲಭವಾದುದು ಯಾವುದು? ಆಶೆಯಿಂದ ಏನು ಫಲ? (ಆಶೆಗಿಂತ ದೊಡ್ಡದು ಯಾವುದು?) ಇದು ರಹಸ್ಯವಲ್ಲದಿದ್ದರೆ ನನಗೆ ಹೇಳಿರಿ' ಎಂದನು.

ಇದಕ್ಕೆ ಉತ್ತರವಾಗಿ ತನು ಮಹರ್ಷಿ ಉತ್ತರಿಸಿದ. ಹಿಂದೆ ಒಬ್ಬ ಮಂದಭಾಗ್ಯನಾದ (ಬಡತನದಲ್ಲಿದ್ದ) ಮಹರ್ಷಿಯು ನಿನ್ನ ಮಗನ ಬಳಿ ಹೋಗಿ ಸುವರ್ಣಕಮಂಡಲು, ನಾರುಮಡಿಗಳನ್ನು ಪ್ರಾರ್ಥಿಸಿದರೂ, ಅವನಿಂದ ಸಿಗದೆ ಅವಮಾನಿತನು, ನಿರಾಶನಾಗಿದ್ದನು. ಇದನ್ನು ಕೇಳಿದ ವೀರದ್ಯುಮ್ನನು ತನು ಋಷಿಗಳಿಗೆ ನಮಿಸಿ ಕುಸಿದು ಹೋದನು. ಬಳಿಕ ಋಷಿಯು ರಾಜನಿಗೆ ವನವಾಸವಿಧಾನದಲ್ಲಿ ಸತ್ಕರಿಸಿ, ಎಲ್ಲವನ್ನೂ ನಿವೇದಿಸಿದನು. ನಂತರ ಆಶ್ರಮದ ಋಷಿಗಳೆಲ್ಲ ರಾಜನನ್ನು ಸಪ್ತರ್ಷಿಗಳು ಧ್ರುವನಕ್ಷತ್ರವನ್ನು ಸುತ್ತುವರಿದಂತೆ ಸುತ್ತುವರಿದು ಕುಳಿತರು. ನಂತರ ಋಷಿಗಳು ವೀರದ್ಯುಮ್ನನನ್ನು ಆಶ್ರಮಕ್ಕೆ ಬಂದ ಉದ್ದೇಶ ಕೇಳಿದರು.

ನಂತರ ರಾಜನು ತನ್ನ ಏಕಮಾತ್ರ ಪುತ್ರ ನಷ್ಟವಾದ ಬಗ್ಗೆ ಅವನನ್ನು ಹುಡುಕುತ್ತಾ ತಿರುಗಿ ಇಲ್ಲಿಗೆ ಬಂದಿದ್ದೇನೆ ಎಂದು ಹೇಳಿದನು.

ಇದನ್ನು ಕೇಳಿದ ತನು ಋಷಿ ತಲೆತಗ್ಗಿಸಿ ಮೌನವಹಿಸಿ ರಾಜನಿಗೆ ಏನೂ ಉತ್ತರಿಸಲಿಲ್ಲ. (ಕಾರಣ) ಇದೇ ರಾಜನೇ ಇದೇ ಋಷಿಗೆ ಹಿಂದೆ ಆಶಾಭಂಗಮಾಡಿ ಅವಮಾನ ಮಾಡಿದ್ದನು. ನಂತರ ಮಹರ್ಷಿಯು ರಾಜ ಅಥವಾ ಬೇರೆ ಯಾರಿಂದಲೂ ಪ್ರತಿಗ್ರಹ ಬಯಸದೇ ನಿಶ್ಚಯಿಸಿ ತಪೋನಿರತನಾದನು[೨].

---

೧ ದುರ್ಲಭಃ ಮಹಾದ್ರಷ್ಟುಂ ನೂನಂ ಪರಮಧಾರ್ಮಿಕಃ।
ಏಕಃ ಪುತ್ರೋ ಮಹಾರಣ್ಯೇ ನಷ್ಟ ಇತ್ಯಸ್ಯ ಕೃತ್ ತದಾ॥ - ೧೨೭/೨-೧೭

೨ ಸಹಿ ತೇನ ಪುರಾ ವಿಪ್ರೋ ರಾಜ್ಞಾ ನಾತ್ಯರ್ಥಮಾನಿತಃ।
ಆಶಾಕೃತಂ ಚ ರಾಜೇಂದ್ರ ತಪೋ ದೀರ್ಘಂ ಸಮಾಸ್ಥಿತಃ।
ಪ್ರತಿಗ್ರಹಮಹಂ ರಾಜ್ಞಾಂ ನ ಕರಿಷ್ಯೇ ಕಥಂಚನ।

ಕಾರಣ ಆಶೆ ಬಾಲಪುರುಷನನ್ನು(ಅಪಕ್ವಬುದ್ಧಿಯವನನ್ನು) ವಿಲಾಪಿಸುವಂತೆ (ದುಃಖಿಸಿ ಪ್ರಲಾಪಮಾಡುವಂತೆ) ಮಾಡುತ್ತದೆ. ಆದ್ದರಿಂದ ನಾನು ಅಂತಹ ಆಶೆಯನ್ನು ಬಿಟ್ಟು ತಪೋನಿರತನಾಗಿದ್ದೆನು.

ಇದನ್ನು ಕೇಳಿದ ರಾಜನು ಋಷಿಯನ್ನು ಹೀಗೆ ಪ್ರಶ್ನಿಸಿದ. 'ಆಶೆಯನ್ನು ಕೃಶವಾಗಿ ಮಾಡುವುದು ಹೇಗೆ(ಆಶೆಯನ್ನು ದುರ್ಬಲಗೊಳಿಸುವುದು ಹೇಗೆ?)? ಆಶೆಯೇ ಹುಟ್ಟದಂತೆ ಏನು ಮಾಡಬೇಕು? ಈ ಭೂಮಿಯಲ್ಲಿ ದುರ್ಲಭವಾದುದು ಯಾವುದು?[೧]

ಈ ಪ್ರಶ್ನೆಗೆ ತನು ಋಷಿಯು ಕೊಟ್ಟ ಉತ್ತರ ಹೀಗಿದೆ.

ಆಶೆಯನ್ನು ಕೃಶವನ್ನಾಗಿ (ದುರ್ಬಲವನ್ನಾಗಿ) ಮಾಡುವುದರಿಂದ ಉಂಟಾಗುವ ಸುಖಕ್ಕೆ ಸಮನಾದ ಸುಖವು ಇಲ್ಲ. ಆಸೆಯನ್ನು ಕೃಶವನ್ನಾಗಿ ಮಾಡುವುದು ದುರ್ಲಭವಾದ್ದರಿಂದ ನಾನು ಅನೇಕ ರಾಜರನ್ನು ಪ್ರಾರ್ಥಿಸಿದೆ[೨](ಆದರೆ ಫಲ ಮಾತ್ರ ಸಿಗಲಿಲ್ಲ).

ಋಷಿಗಳ ಅಭಿಪ್ರಾಯ ಅರ್ಥಮಾಡಿಕೊಂಡ ರಾಜನು ಆಶೆಯ ಕೃಶಾಕೃಶತ್ವ(ಕೃಶ-ಅಕೃಶ) ವನ್ನು ನಿನ್ನ ವೇದವಾಕ್ಯದಂತಿರುವ ಮಾತುಗಳಿಂದ ತಿಳಿದೆ. ಭಗ್ನವಾದ ಆಸೆಯೇ ಕೃಶ ಆಶೆ. ಫಲ ಭಗ್ನವಾಗದಿದ್ದಾಗ ಅಂತಹ ಆಸೆ ಅಕೃಶ ಆಶೆ. ಇದರಿಂದ ನಾನು ಇನ್ನೊಂದು ಪ್ರಶ್ನೆ ಕೇಳುತ್ತೇನೆ ಉತ್ತರಿಸಿ ಎಂದ ರಾಜ :ನಿನಗಿಂತ ಕೃಶವಾದುದು ಯಾವುದು? ನೀವೇ ವಿಮರ್ಶೆ ಮಾಡಿ ತಿಳಿಸಿ? ಈ ಲೋಕದಲ್ಲಿ ಯಾವುದು ದುರ್ಲಭ'?[೩]

ಈ ಪ್ರಶ್ನೆಗೆ ತನು ಋಷಿಗಳು ಹೀಗೆ ಉತ್ತರಿಸಿದರು.

ಅ) ೧. ಆಶೆಯನ್ನು ಹೊಂದಿ ಅನಂತರ ಅದನ್ನು ಬಿಟ್ಟು ಧೈರ್ಯವನ್ನು ತಂದುಕೊಳ್ಳುವವನು ದುರ್ಲಭನಾದವನು ಅಥವಾ ಇಲ್ಲವೇ ಇಲ್ಲ ಎಂದು ಹೇಳಬೇಕು.

೨. ಆಶೆಯನ್ನು ಇಟ್ಟುಕೊಂಡು ಬಂದವನನ್ನು ಅವಮಾನ ಮಾಡಿದಿರುವುದು ಅದಕ್ಕಿಂತಲೂ ದುರ್ಲಭವಾದುದು[೪].

---

ಅನ್ಯೇಷಾಂ ಚೈವ ವರ್ಣಾನಾಂ ಇತಿ ಕೃತ್ವಾಧಿಯಂ ತದಾ ॥ - ೧೨೭/೨೯-೩೨

೧ ಆಶಾಯಾಃ ಕಿಂ ಕೃಶತ್ವಂ ಚ ಕಿಂ ಚೇಹ ಭುವಿ ದುರ್ಲಭಮ್ ।
(**ಲಕ್ಷ್ಮಾಲಂಕಾರ** 'ಆಶಾಯಾಃ ಕಿಂ ಕೃಶತ್ವಂ ಹಿ (ಚ) ಇತ್ಯತ್ರ ಆಶಾಯಾಃ ಏವ ಕೃಶತ್ವಂ ಕಿಂ ಕೇನೋಪಾಯೇನ ಭವತೀತಿ. ಎಂದಿದೆ. ಇದಕ್ಕೆ ಅನುಗುಣ ಅನುವಾದ ಮಾಡಲಾಗಿದೆ.)

೨ ಕೃಶತ್ವೇನ ಸಮಂ ರಾಜನ್ನಾಶಾಯಾ ವಿದ್ಯತೇ ನ ಚ ।
ತಸ್ಯ ವೈ ದುರ್ಲಭತ್ವಾತ್ ತು ಪ್ರಾರ್ಥಿತಾಃ ಪಾರ್ಥಿವಾ ಮಯಾ ॥ - ೧೨೭/೩೫

೩ ತ್ವತ್ತಃ ಕೃಶತರಂ ಕಿನ್ನು ಬ್ರವೀತು ಭಗವಾನಿದಮ್ ।
ಯದಿ ಗುಹ್ಯಂ ನ ತೇ ವಿಪ್ರ ಲೋಕೇಽಸ್ಮಿನ್ ಕಿಂ ನು ದುರ್ಲಭಮ್ ॥ - ೧೨೭/೩೮

೪ 'ದುರ್ಲಭೋಽಪ್ಯಥ ವಾ ನಾಸ್ತಿ ಯೋಽರ್ಥಿ ಧೃತಿಮವಾಪ್ನುಯಾತ್ ।

**ಆ) ೧. ರಾಜನ್ ನೀನು ನನ್ನನ್ನು ಸತ್ಕರಿಸಿ, ನಿನ್ನ ಶಕ್ತಿಗೆ ಮತ್ತು ನನ್ನ ಅರ್ಹತೆಗೆ ಅನುಗುಣವಾಗಿ ಉಪಕಾರವನ್ನು ಮಾಡದಿದ್ದರೆ ಎಲ್ಲ ವಿಷಯಗಳಲ್ಲಿರುವ ನನ್ನ ಆಶೆಯು (ಭಗ್ನವಾಗಿ) ನನಗಿಂತ ಕೃಶವಾಗುತ್ತದೆ.**

**೨. ಕೃತಘ್ನರಿಗೆ, ಕ್ರೂರಿಗಳಿಗೆ, ಸೋಮಾರಿಗಳಿಗೆ, ಅಪಕಾರಿಗಳಿಗೆ ಮಾಡಿದ ಆಸೆಯು ಫಲ ಸಿಗದಿರುವುದರಿಂದ (ಅಂತಹ ಆಸೆ) ಕೃಶವಾಗುತ್ತದೆ[೧].**

ಈ) ಏಕಪುತ್ರನನ್ನು ಹೊಂದಿದ ತಂದೆಯು ಆ ಪುತ್ರನು ನಷ್ಟವಾಗಿರಲು, ಅಥವಾ ದೇಶಾಂತರಕ್ಕೆ ಹೋಗಿ ಅವನ ವಾರ್ತೆ ತಿಳಿಯದಿದ್ದರೆ ಆಗ ಆ ಪುತ್ರನ ವಿಷಯದಲ್ಲಿ ಅವನ (ತಂದೆಯ) ಆಸೆ ನನಗಿಂತಲೂ ಕೃಶವಾಗಿರುತ್ತದೆ[೨].

ಉ) ವೃದ್ಧರಾದ ಸ್ತ್ರೀಯರು ಮಕ್ಕಳನ್ನು ಪಡೆದರೆ ಪುತ್ರನನ್ನು ಪಡೆಯಬೇಕೆಂಬ ಆಸೆ, ಮತ್ತು ಎಲೈ ರಾಜನೇ! ಧನಿಕನಿಗೆ ಇನ್ನೂ ಧನವನ್ನು ಗಳಿಸಬೇಕೆಂಬ ಆಸೆಯು ನನಗಿಂತಲೂ ಕೃಶವಾಗುತ್ತದೆ.

ತಮ್ಮ ವಿವಾಹವನ್ನು ವಯಸ್ಸಿಗೆ ಬಂದ ಕನ್ಯೆಯರಿಗೆ, ತಮ್ಮ ವಿವಾಹದ ವಿಷಯದಲ್ಲಿ ಮರಣ ಮೊದಲಾದ ಅಯೋಗ್ಯ ಮಾತುಗಳನ್ನು ಕೇಳಿದರೆ ವಿವಾಹದ ಅವರ ಆಸೆಯು ನನಗಿಂತ ಕೃಶವಾಗಿರುತ್ತದೆ[೩].

ತನು ಮಹರ್ಷಿಗಳ ಮಾತುಗಳನ್ನು ಕೇಳಿದ ರಾಜನು ಪರಿವಾರ ಸಮೇತನಾಗಿ ಅವರ ಪಾದಗಳಿಗೆ ಶಿರಸಾ ನಮಸ್ಕರಿಸಿ ಬಿದ್ದನು. ಆ ಬ್ರಾಹ್ಮಣನಿಗೆ(ಋಷಿಗೆ) ವರವನ್ನು ಕೇಳು ಎಂದು ಬೇಡಿದನು. ಋಷಿಗಳ ಮಾತುಗಳೆಲ್ಲ ಸತ್ಯವೆಂದು ನುಡಿದನು[೪].

---

ಸುದುರ್ಲಭತರಸ್ತಾತ ಯೋಽರ್ಥಿನಂ ನಾವಮನ್ಯತೇ ॥ - ೧೨೭/೩೯

೧ ಕೃತಘ್ನೇಷು ಚ ಯಾ ಸಕ್ತಾ ನೃಶಂಸೇಷ್ವಲಸೇಷು ಚ ।
ಅಪಕಾರಿಷು ಯಾ ಸಕ್ತಾ ಸಾಽಽಶಾ ಕೃಶತರೀ ಮಯಾ ॥ - ೧೨೭/೪೦

೨ ಏಕಪುತ್ರಃ ಪಿತಾ ಪುತ್ರೇ ನಷ್ಟೇ ವಾ ಪ್ರೋಕ್ಷಿತೇ ತಥಾ ।
ಪ್ರವೃತ್ತಿಂ ಯೋ ನ ಜಾನಾತಿ ಸಾಽಽಶಾ ಕೃಶತರೀ ಮಯಾ ॥ - ೧೨೭/೪೨

೩. ಪ್ರದಾನಕಾಂಕ್ಷಿಣೀನಾಂ ಚ ಕನ್ಯಾನಾಂ ವಯಸಿ ಸ್ಥಿತೇ ।
ಶ್ರುತ್ವಾ ಕಥಾಸ್ತಥಾಽಯುಕ್ತಾ ಸಾಶಾ ಕೃಶತರೀ ಮಯಾ ॥ - ೧೨೭/೪೪

೪ ಏತತ್ ಶ್ರುತ್ವಾ ತತೋ ರಾಜನ್ ಸ ರಾಜಾ ಸಾವರೋಧನಃ ।
ಸಂಸ್ಪೃಶ್ಯ ಪಾದೌ ಶಿರಸಾ ನಿಪಪಾತ ದ್ವಿಜರ್ಷಭೇ ॥
ಪ್ರಸಾದಯೇ ತ್ವಾ ಭಗವನ್ ಪುತ್ರೇಣೇಚ್ಛಾಮಿ ಸಂಗತಿಮ್ ।
ವೃಣೀಷ್ವ ಚ ವರಂ ವಿಪ್ರ ಯಮಿಚ್ಛಸಿ ಯಥಾವಿಧಿ ॥
.......
ತತಃ ಪ್ರಹಸ್ಯ ಭಗವಾನ್ ತನುರ್ಧರ್ಮಭೃತಾಂ ವರಃ ।

ನನ್ನ ಪುತ್ರನೊಡನೆ ಸಂಗಮವನ್ನು ಬಯಸುವೆ. ನನ್ನ ಮೇಲೆ ಪ್ರಸನ್ನನಾಗು ಎಂದು ರಾಜನು ನುಡಿಯಲು ಆ ಋಷಿಗಳು (ತನು) ನಕ್ಕು ತಮ್ಮ ತಪಸ್ಸು ಹಾಗೂ ವಿದ್ಯಾಬಲದಿಂದ ರಾಜನ ಪುತ್ರನನ್ನು ಕರೆ ತಂದರು. ಅಲ್ಲದೆ ತಾನು 'ಧರ್ಮ(ದೇವತೆ)ಯೆಂದು ತನ್ನನ್ನು ತೋರಿಸಿದನು (ತಾನು ಋಷಿಯಲ್ಲಿ ಸಾಕ್ಷಾತ್ ಧರ್ಮಾಭಿಮಾನಿ ದೇವತೆ ಎಂದು). ಹೀಗೆ ತನ್ನ ಸ್ವರೂಪದರ್ಶನ ಮಾಡಿಸಿ ಅವನು ವನದಲ್ಲಿಯೇ ಸಂಚಾರ ಮಾಡಿದನು.

ಎಲೈ ಸುಮಿತ್ರ ರಾಜನೇ! ನಾನು(ಋಷಭ) ಇದನ್ನು ನೋಡಿದ್ದೇನೆ. ಆದ್ದರಿಂದ ಮೃಗ ದೊರೆಯದಿರುವುದರಿಂದ ಆಶೆಯನ್ನು ಕೃಶಮಾಡು. ಅ ನಿನ್ನ ಆಸೆಯನ್ನು ಬಿಟ್ಟು ಬಿಡು. **ಆಶೆಯನ್ನು ಗೆಲ್ಲುವುದೆಂದರೆ ಅದನ್ನು ಬಿಡುವುದೆಂದೇ ಅರ್ಥ.**

ಋಷಭ ಋಷಿಯ ಮಾತಿನಂತೆ ಸುಮಿತ್ರನು ಮೃಗಾಶಾ ತೊರೆದನು(ಜಿಂಕೆಯ ಆಶೆಯನ್ನು).

ನಂತರ ಭೀಷ್ಮರು ಧರ್ಮರಾಜನಿಗೆ ಕೌಂತೇಯನೇ! ನೀನು ಕೂಡಾ ಆಶೆಯನ್ನು ತೊರೆದು ಹಿಮಾಲಯಪರ್ವತದಂತೆ ಸ್ಥಿರವಾಗಿರು ಎಂದು ಈ ಉಪಾಖ್ಯಾನವನ್ನು ಉಪಸಂಹಾರ ಮಾಡಿದರು.

## ಸಂದೇಶಗಳು - ವಿವರಣೆಗಳು

೧. ಈ ಉಪಾಖ್ಯಾನದಲ್ಲಿನ ಅವಾಂತರ ಉಪಾಖ್ಯಾನವೂ, ಆದರೆ ಮುಖ್ಯೋಪಾ-ಖ್ಯಾನವೇ ಇದೆ.

೨. ಆಶೆಯ ಇತಿಮಿತಿಗಳನ್ನು ಅದಕ್ಕೆ ನಾವು ಕೊಡಬೇಕಾದ ಮಹತ್ತ್ವವನ್ನು ಇಲ್ಲಿ ಹೇಳಲಾಗಿದೆ

೩. ಆಶೆಯನ್ನು ದುರ್ಬಲಗೊಳಿಸಿ ಗೆಲ್ಲಬೇಕು. ಆದಕ್ಕಿಂತ ಅದನ್ನು ಬಿಡುವುದೇ ಅತ್ಯಂತ ಸೂಕ್ತವೆಂಬ ಸಂದೇಶವಿದೆ. ಏಕೆಂದರೆ ಆಶೆಯು ದುಃಖಕ್ಕೆ ಕಾರಣವಾಗಿ ಮುಂದೆ ಮರಣಕ್ಕೂ ಕಾರಣವಾಗುವ ಅಪಾಯವಿದೆ ಎಂದು ಧರ್ಮರಾಜನೇ ಹೇಳುತ್ತಾನೆ (೧೨೬/೪).

೪. ಧರ್ಮರಾಜ ದುರ್ಯೋಧನನಂತಹ ದುರಾತ್ಮನಿಂದಲೂ ಪ್ರಾಮಾಣಿಕ ಪ್ರತಿಕ್ರಿಯೆಯನ್ನು (ಯುದ್ಧದ ವಿಷಯದಲ್ಲಿ) ನಿರೀಕ್ಷೆ ಮಾಡಿದ ಅತ್ಯಂತ ಮೃದುಹೃದಯಿ. ಆದರೆ ತನ್ನನ್ನು ತಾನೇ ಮಂದಾತ್ಮ, ಬುದ್ಧಿಕಡಿಮೆಯುಳ್ಳವನು ಎಂದು ನಿಂದಿಸಿಕೊಳ್ಳುತ್ತಾನೆ. ಅದು ನಿಜ. ಆದರೆ ದುಷ್ಟರಿಂದಲೂ ಒಳ್ಳೆಯ ನಡತೆ ನಿರೀಕ್ಷಿಸಬೇಕು. ಅದು ಆಗಲಿ, ಬಿಡಲಿ ಎಂಬ ಸಂದೇಶ ಧರ್ಮರಾಜನ ನಡೆಯಲ್ಲಿದೆ.

---

ಪುತ್ರಮಸ್ಯಾನಯತ್ ಕ್ಷಿಪ್ರಂ ತಪಸಾ ಚ ಶ್ರುತೇನ ಚ ।
ತಂ ಸಮಾನಾಯ್ಯ ಮಂತ್ರಂ ತು ತದೋಪಾಲಭ್ಯ ಪಾರ್ಥಿವಮ್ ।
ಆತ್ಮಾನಂ ದರ್ಶಯಾಮಾಸ ಧರ್ಮಂ ಧರ್ಮಭೃತಾಂ ವರಃ ॥ - ೧೨೮/೩೯-೫೨

೫. ಸುಮಿತ್ರರಾಜನ ಆಸೆ ಕೇವಲ ಜಿಂಕೆಯ ಬಗ್ಗೆ. ಅದು ಸಿಗದಿದ್ದುದಕ್ಕೆ ಭಾರೀ ದುಃಖಪಟ್ಟು ಕೊನೆಗೆ ಅದನ್ನು ವೀರದ್ಯುಮ್ನನ ಕಥೆ ಕೇಳಿ ಬಿಡುತ್ತಾನೆ. ಸುಮಿತ್ರ, ವೀರದ್ಯುಮ್ನ ಸಜ್ಜನರು. ಆದ್ದರಿಂದ ಅವರು ಬದಲಾದರು. ದುರ್ಯೋಧನ ಪರಮನೀಚ. ಆದ್ದರಿಂದ ಪಾಂಡವರ ರಾಜ್ಯಕ್ಕೆ ಆಸೆ ಪಟ್ಟು ವಿನಾಶ ಹೊಂದಿದ.

೬. ನರನಾರಾಯಣಾಶ್ರಮದ ಪರಿಸರದ ಸರೋವರ, ನದಿಗಳಿಗೆ ಹೋದಾಗ ಅಲ್ಲಿ ತಪ್ಪದೇ ಸ್ನಾನ, ದೇವ, ಋಷಿ, ಪಿತೃತರ್ಪಣ, ಶ್ರಾದ್ಧಾದಿಗಳನ್ನು ಮಾಡಬೇಕು ಋಷಭ ಋಷಿಯಂತೆ. ಅದೇ ಸಾಧನೆಯ ಸೋಪಾನ.

೭. ಋಷಭ ಋಷಿಗಳ ಆಶ್ರಮಕ್ಕೆ ಬಂದವರು ತನು ಋಷಿ. ಅವರು ಸಾಕ್ಷಾತ್ ಧರ್ಮದೇವತೆ ಎಂದು ಆಮೇಲೆ ತಿಳಿಯುತ್ತದೆ. ವೀರದ್ಯುಮ್ನನ ಮಗನನ್ನು ಕಮಂಡಲು, ನಾರುಮಡಿ ಮೊದಲಾದ ಪದಾರ್ಥಗಳನ್ನು ಕೇಳಿದರೂ ಪಡೆಯದೆ ಅವಮಾನಿತರಾದವರು. ಅದೂ ಕೊನೆಗೂ ಗೊತ್ತಾಗುತ್ತದೆ ವೀರದ್ಯುಮ್ನನಿಗೆ. ಕೂಡಲೇ ರಾಜ ಶರಣಾಗಿ, ನಮಸ್ಕರಿಸುತ್ತಾನೆ. ರಾಜನಾದ್ದರಿಂದ ಬ್ರಾಹ್ಮಣರಿಗೆ ವರ ಕೊಡುವೆ ಎಂದು ಹೇಳುತ್ತಾನೆ, ತನ್ನ ಕರ್ತವ್ಯ ಮರೆಯುತ್ತಾನೆ. ಮತ್ತು ನಷ್ಟವಾದ ಪುತ್ರನನ್ನು ಕರುಣಿಸಲು ಋಷಿಗಳನ್ನು ಪ್ರಾರ್ಥಿಸುವುದನ್ನು ಮರೆಯದೇ ಕೇಳುತ್ತಾನೆ.

ತಪ್ಪು ಮಾಡಿದ ರಾಜನ ಬಗ್ಗೆ ಋಷಿಗಳು ಕರುಣೆಯಿಂದ ಪುತ್ರನನ್ನು ತಂದು ಕೊಡುತ್ತಾರೆ. ಆತನ ಆಸೆ ಈಡೇರುತ್ತದೆ. ಕಾರಣ ಆತನ ಪ್ರಾಮಾಣಿಕ ನಡೆ. ಆಶೆಯ ಸಾತ್ವಿಕತನ. ಮಗನೂ ಪರಮಧಾರ್ಮಿನಾಗಿದ್ದನಂತೆ.

೮. ತಪ್ಪು ಮಾಡಿದ್ದರೂ ಧರ್ಮಧೇವತೆ ಕ್ಷಮಿಸುತ್ತಾನೆ. ಆದ್ದರಿಂದ ನಮ್ಮ ತಪ್ಪುಗಳ ಬಗ್ಗೆ ಎಚ್ಚರವಿರಬೇಕು.

ಹೀಗೆ ಆಶೆಗಳ ಇತಿಮಿತಿಗಳನ್ನು ತಿಳಿಸುವುದು ಈ ಉಪಾಖ್ಯಾನದ ಸಂದೇಶ.

ಇತ್ಯಾದಿ....

## ೮೯. ಮಾತಾ-ಪಿತೃಸೇವೆಯಿಂದ ಅವರ ಋಣವಿಮೋಚನೆ

ಧರ್ಮರಾಜನ ಪ್ರಶ್ನೆ – ತಾತ! ನಿನ್ನ ಮಾತುಗಳೆಂಬ ಅಮೃತಪಾನ ಮಾಡುತ್ತಿರುವ ನನಗೆ ತೃಪ್ತಿಯೇ ಆಗುತ್ತಿಲ್ಲ. ಮತ್ತೆ ಧರ್ಮದ ಉಪದೇಶ ಮಾಡು (ಇಲ್ಲಿ ಯಾವ ದರ್ಮವೆಂದು ನಿಖರವಾಗಿ ಹೇಳಿಲ್ಲ). ಆದರೂ ಭೀಷ್ಮರು ಈ ವಿಷಯದಲ್ಲಿ ಯಮನಿಗೂ ಹಾಗೂ ಗೌತಮ ಋಷಿಗಳಿಗೂ ನಡೆದ ಸಂವಾದವನ್ನು ಹೇಳುತ್ತೇನೆ ಕೇಳು ಎನ್ನುತ್ತಾರೆ.

**ಪಾರಿಯಾತ್ರ ಪರ್ವತದ** ಹತ್ತಿರ **ಗೌತಮರ** ಆಶ್ರಮವಿದೆ. ಅಲ್ಲಿ ಅವರು ಅರವತ್ತು ಸಾವಿರವರ್ಷ ಉಗ್ರ ತಪಸ್ಸನ್ನು ಮಾಡುತ್ತಾ ಪರಿಶುದ್ಧರಾಗಿ ಇದ್ದಾಗ, ಅವರನ್ನು ನೋಡಲು ಯಮನು ಬಂದನು. ಅದನ್ನು ತಿಳಿದ ಗೌತಮರು ಕೈಮುಗಿದು, ವಿನಯದಿಂದ ಯಮನ ಹತ್ತಿರಕ್ಕೆ ಹೋದರು. ಯಮಧರ್ಮರಾಜನು ಇಂತಹ ಮನುಷ್ಯ ಶ್ರೇಷ್ಠನನ್ನು ನೋಡಿ ನಮಸ್ಕರಿಸಿ, ಅವನನ್ನು ಧರ್ಮಾನುಸಾರ ಆಮಂತ್ರಿಸಿ, ನಿಮಗೆ ನಾನು ಏನು ಮಾಡಲಿ ಎಂದನು. ಧರ್ಮಸಂಬಂಧಿ ಪ್ರಶ್ನೆಗಳಿಗೆ ಉತ್ತರಿಸಲು ಸಮ್ಮತಿಸಿದರು[೧].

ಆಗ ಗೌತಮರು 'ಮನುಷ್ಯನು ಏನು ಮಾಡಿ(ಯಾವ ಯಾವ ಕರ್ಮಗಳನ್ನು ಮಾಡಿ) ತಾಯಿತಂದೆ ಋಣದಿಂದ ಪಾರಾಗಬಲ್ಲನು?(ತಾಯಿ ತಂದೆಗಳ ಋಣವನ್ನು ತೀರಿಸುತ್ತಾನೆ) ಮತ್ತು ಹೊಂದಲು ಅಸಾಧ್ಯವಾದ ಲೋಕಗಳಲ್ಲಿರುವ ಸುಖಗಳನ್ನು ಹೊಂದುತ್ತಾನೆ ಎಂದು ಕೇಳಿದರು[೨].

---

೧ ಪಾರಿಯಾತ್ರಗಿರಿಂ ಪ್ರಾಪ್ಯ ಗೌತಮಸ್ಯಾಶ್ರಮೋ ಮಹಾನ್ ।
ಷಷ್ಟಿಂ ವರ್ಷಸಹಸ್ರಾಣಿ ಸೋಽತಪ್ಯದ್ ಗೌತಮಸ್ತಪಃ ॥
ತಮುದ್ರತಮಸಂ ಯುಕ್ತಂ ತಪಸಾ ಭಾವಿತಂ ಮುನಿಮ್ ।
ಉಪಯಾತೋ ನರವ್ಯಾಘ್ರ ಲೋಕಪಾಲೋ ಯಮಸ್ತದಾ ।
ಸ ತಂ ವಿದಿತ್ವಾ ಬ್ರಹ್ಮರ್ಷಿರ್ಯಮಮಾಗತಮೋಜಸಾ ।
ಪ್ರಾಂಜಲಿಃ ಪ್ರಯತೋ ಭೂತ್ವಾ ಉಪಸೃಪ್ತಸ್ತಪೋಧನಃ ।
ತಂ ಧರ್ಮರಾಜೋ ದೃಷ್ಟ್ವೈವ ನಮಸ್ಕೃತ್ಯ ನರರ್ಷಭಮ್ ।
ನ್ಯಮಂತ್ರಯತ ಧರ್ಮೇಣ ಕ್ರಿಯತಾಂ ಕಿಮಿತಿ ಬ್ರುವನ್ ॥

೨ ಮಾತಾಪಿತೃಭ್ಯಾಮಾನೃಣ್ಯಂ ಕಿಂ ಕೃತ್ವಾ ಸಮವಾಪ್ನುಯಾತ್ ।
ಕಥಂ ಚ ಲೋಕಾನಶ್ನಾತಿ ಪುರುಷೋ ದುರ್ಲಭಾನ್ ಶುಭಾನ್ ॥ – ೧೨೮/೩-೮

ಇದಕ್ಕೆ ಯಮದೇವರು "[೧]ನಿತ್ಯವೂ ತಪಃಶೌಚಗಳನ್ನು ಆಚರಿಸಿ, ಸತ್ಯಧರ್ಮರತನಾಗಿ ಪ್ರತಿದಿನವೂ ಚೆನ್ನಾಗಿ ತಂದೆತಾಯಿಗಳ ಪೂಜೆ(ಸೇವೆ)ಯನ್ನು ಮಾಡಬೇಕು. ಮತ್ತು ಬಹುದಕ್ಷಿಣೆಗಳಿಂದ ಕೂಡಿದ (ಋತ್ವಿಜರಿಗೆ, ಆಹ್ವಾನಿತ ಅತಿಥಿಗಳಿಗೆ) ಅನೇಕ ಅಶ್ವಮೇಧಯಾಗಗಳನ್ನು ಮಾಡಬೇಕು. ಆದರಿಂದ ಪುರುಷನು ಅದ್ಭುತವಾಗಿ ಕಾಣುವ ಶುಭಲೋಕಗಳನ್ನು ಹೊಂದುತ್ತಾನೆ" ಎಂದು ಉತ್ತರಿಸಿದರು.

## ಸಂದೇಶಗಳು - ವಿವರಣೆಗಳು

೧. ಶ್ಲೋ. ೯, ೧೦ರಲ್ಲಿ ಸಂದೇಹಗಳಿವೆ.

೨. ಇವೆಲ್ಲ ಬಹುಶಃ ಕ್ಷತ್ರಿಯರಿಗೆ ಸಂಬಂಧಿಸಿದಂತಿವೆ.

ಶಾಸ್ತ್ರದ ಇತರ ಗ್ರಂಥಗಳಲ್ಲಿ ಹೇಳಿದ ಇತರೆ ಮಾಹಿತಿಗಳನ್ನು ಇದರೊಡನೆ ಸೇರಿಸಿ ಒಟ್ಟಾರೆ ಸಂದೇಶಗಳನ್ನು ತಿಳಿಯಬೇಕು. ಉದಾ : ಧರ್ಮವ್ಯಾಧೋಪಾಖ್ಯಾನದಲ್ಲಿಯೂ ಮಾತಾಪಿತೃಸೇವೆ ಮಾಡಿದ ಧರ್ಮವ್ಯಾಧನ ಉಪದೇಶವಿದೆ.

ಇತ್ಯಾದಿ....

*****

೧ ತಪಃಶೌಚವತಾ ನಿತ್ಯಂ ಸತ್ಯಧರ್ಮರತೇನ ಚ।
ಮಾತಾಪಿತ್ರೋರಹರಹಃ ಪೂಜನಂ ಕಾರ್ಯಮಂಜಸಾ।
ಅಶ್ವಮೇಧಶ್ಚ ಯಷ್ಟವ್ಯಂ ಬಹುಭಿಃ ಸ್ವಾಪ್ತದಕ್ಷಿಣೈಃ।
ತೇನ ಲೋಕಾನುಪಾಶ್ನಾತಿ ಪುರುಷೋ ದುರ್ಲಭಾನ್ ಶುಭಾನ್ ॥ - ೧೨೮/೯,೧೦

# ಆಪದ್ಧರ್ಮಪರ್ವ

## ೯೦. ಮತ್ಸ್ಯೋಪಾಖ್ಯಾನ

ಪ್ರಪಂಚದಲ್ಲಿ ಮೂರು ವಿಧವಾದ ಸ್ವಭಾವ ಹೊಂದಿರುವ ಪ್ರಾಣಿಗಳಿರುತ್ತವೆ. ೧. ಕೆಲವರು ಮುಂದೆ ಬರುವ ವಿಪತ್ತುಗಳನ್ನು ಮೊದಲೇ ಊಹಿಸಿ ಪರಿಹಾರವನ್ನು ಹುಡುಕಿ-ಕೊಳ್ಳುವವರು- ಅನಾಗತವಿಧಾತೃ(ತಾ), ೨. ಆಪತ್ತು ಬಂದಾಗ ತಕ್ಷಣ ಪರಿಹಾರವನ್ನು ಹುಡುಕಿಕೊಳ್ಳುವವರು(**ಪ್ರತ್ಯುತ್ಪನ್ನಮತಿ**), ೩. ತೊಂದರೆ ಬಾಗಿಲಿಗೆ ಬಂದಾಗಲೂ ಪರಿಹಾರ ವನ್ನು ಮುಂದೆ ಹಾಕುವವರು (**ದೀರ್ಘಸೂತ್ರೀ**). ಹೀಗೆ ಮೂವರು. ಇವರಲ್ಲಿ ಮೊದಲಿಬ್ಬರು ಸುಖ ಹೊಂದುತ್ತಾರೆ. ಮೂರನೆಯವನು ತೊಂದರೆಗೆ ಸಿಲುಕಿಕೊಂಡು ಹಾಳಾಗುತ್ತಾನೆ.

ಇಂತಹ ಸ್ವಭಾವವುಳ್ಳ ಮೂರು ಮೀನುಗಳು ಒಂದು ಜಲಾಶಯದಲ್ಲಿದ್ದವು. ಆ ಜಲಾಶಯ ಬಹಳ ಆಳವಾಗಿರಲಿಲ್ಲ.

ಒಮ್ಮೆ ಬೆಸ್ತರು ಆ ಜಲಾಶಯದ ನೀರೆಲ್ಲವನ್ನು ಅದರ ಬೇರೆ ಬೇರೆ ತೂಬು(ರಂಧ್ರಗಳಿಂದ) ಬಸಿದರು (ಹೊರ ಹಾಕಲಾರಂಭಿಸಿದರು). ಇದನ್ನು ಗಮನಿಸಿದ ಬಂದ ಅಪಾಯವನ್ನು ತಿಳಿದ **ದೀರ್ಘದರ್ಶಿ** ಸ್ವಭಾವದ ಮೀನು, ಉಳಿದ ಎರಡು ಮೀನುಗಳಿಗೆ ತಮಗೆ ಬರುತ್ತಿರುವ ಭಯದ ಮುನ್ಸೂಚನೆಯನ್ನು ನೀಡಿ (ಮೊದಲ ಸ್ವಭಾವದ ಮೀನು ಉಳಿದ ಎರಡು ಸ್ವಭಾವದ) 'ನಡೆಯಿರಿ, ಬೇಗನೆ ಬೇರೆ ಕಡೆ ಹೋಗೋಣ'.

ಇದನ್ನು ಕೇಳಿದ **ದೀರ್ಘಸೂತ್ರ** ಮೀನು 'ನೀನು ಹೇಳಿದ್ದು ಸರಿಯೇ. ಆದರೆ ಇಷ್ಟು ಬೇಗನೇ ಹೋಗುವ ಅವಶ್ಯಕತೆ ಇಲ್ಲ. ಇದು ನನ್ನ ನಿರ್ಧಾರ' ಎಂದಿತು (೩ನೇ ಮೀನು).

ಬಂದ ಅಪಾಯವನ್ನು ಚೆನ್ನಾಗಿ ನಿರ್ವಹಣೆ ಮಾಡುವ ೨ನೇ ಮೀನು 'ಕಾಲ ಬರಲಿ, ನಾನು ತಡ ಮಾಡೆ' ಎಂದಿತು[೧].

---

೧ ಅತ್ರೈಕಃ ಪ್ರಾಪ್ತಕಾಲಜ್ಞೋ ದೀರ್ಘದರ್ಶೀ ತಥಾಪರಃ।
**ದೀರ್ಘಸೂತ್ರಶ್ಚ** ತತ್ರೈಕ ಸ್ತ್ರಯಾಣಾಂ ಜಲಚಾರಿಣಾಮ್ ॥
ದೀರ್ಘಸೂತ್ರಸ್ತು ಯಸ್ತತ್ರ ಸೋಽಬ್ರವೀತ್ ಸಮ್ಯಗುಚ್ಯತೇ।
ನ ತು ಕಾರ್ಯಾ ತ್ವರಾ ಯಾವದಿತಿ ಮೇ ನಿಶ್ಚಿತಾ ಮತಿಃ॥
ಅಥ ಸಂಪ್ರತಿಪತ್ತಜ್ಞಃ ಪ್ರಾಬ್ರವೀತ್ ದೀರ್ಘದರ್ಶಿನಮ್।
ಪ್ರಾಪ್ತೇ ಕಾಲೇ ನ ಮೇ ಕಿಂಚಿತ್ ನ್ಯಾಯತಃ ಪರಿಹಾಸ್ಯತೇ॥ - ಆಪದ್ಧರ್ಮ(೭/೪,೯,೧೦)

ಇದಕ್ಕೆ ಯಮದೇವರು "[೧]ನಿತ್ಯವೂ ತಪಃಶೌಚಗಳನ್ನು ಆಚರಿಸಿ, ಸತ್ಯಧರ್ಮರತನಾಗಿ ಪ್ರತಿದಿನವೂ ಚೆನ್ನಾಗಿ ತಂದೆತಾಯಿಗಳ ಪೂಜೆ(ಸೇವೆ)ಯನ್ನು ಮಾಡಬೇಕು. ಮತ್ತು ಬಹುದಕ್ಷಿಣೆಗಳಿಂದ ಕೂಡಿದ (ಋತ್ವಿಜರಿಗೆ, ಆಹ್ವಾನಿತ ಅತಿಥಿಗಳಿಗೆ) ಅನೇಕ ಅಶ್ವಮೇಧಯಾಗಗಳನ್ನು ಮಾಡಬೇಕು. ಅದರಿಂದ ಪುರುಷನು ಅದ್ಭುತವಾಗಿ ಕಾಣುವ ಶುಭಲೋಕಗಳನ್ನು ಹೊಂದುತ್ತಾನೆ" ಎಂದು ಉತ್ತರಿಸಿದರು.

## ಸಂದೇಶಗಳು - ವಿವರಣೆಗಳು

೧. ಶ್ಲೋ. ೯, ೧೦ರಲ್ಲಿ ಸಂದೇಹಗಳಿವೆ.

೨. ಇವೆಲ್ಲ ಬಹುಶಃ ಕ್ಷತ್ರಿಯರಿಗೆ ಸಂಬಂಧಿಸಿದಂತಿವೆ.

ಶಾಸ್ತ್ರದ ಇತರ ಗ್ರಂಥಗಳಲ್ಲಿ ಹೇಳಿದ ಇತರೆ ಮಾಹಿತಿಗಳನ್ನು ಇದರೊಡನೆ ಸೇರಿಸಿ ಒಟ್ಟಾರೆ ಸಂದೇಶಗಳನ್ನು ತಿಳಿಯಬೇಕು. ಉದಾ : ಧರ್ಮವ್ಯಾಧೋಪಾಖ್ಯಾನದಲ್ಲಿಯೂ ಮಾತಾಪಿತೃಸೇವೆ ಮಾಡಿದ ಧರ್ಮವ್ಯಾಧನ ಉಪದೇಶವಿದೆ.

ಇತ್ಯಾದಿ....

*****

೧ ತಪಃಶೌಚವತಾ ನಿತ್ಯಂ ಸತ್ಯಧರ್ಮರತೇನ ಚ।
ಮಾತಾಪಿತ್ರೋರಹರಹಃ ಪೂಜನಂ ಕಾರ್ಯಮಂಜಸಾ।
ಅಶ್ವಮೇಧಶ್ಚ ಯಷ್ಟವ್ಯಂ ಬಹುಭಿಃ ಸ್ವಾಪ್ತದಕ್ಷಿಣೈಃ।
ತೇನ ಲೋಕಾನುಪಾಶ್ನಾತಿ ಪುರುಷೋ ದುರ್ಲಭಾನ್ ಶುಭಾನ್ ॥ - ೧೨೮/೯,೧೦

# ಆಪದ್ಧರ್ಮಪರ್ವ

## ೯೦. ಮತ್ಸ್ಯೋಪಾಖ್ಯಾನ

ಪ್ರಪಂಚದಲ್ಲಿ ಮೂರು ವಿಧವಾದ ಸ್ವಭಾವ ಹೊಂದಿರುವ ಪ್ರಾಣಿಗಳಿರುತ್ತವೆ. ೧. ಕೆಲವರು ಮುಂದೆ ಬರುವ ವಿಪತ್ತುಗಳನ್ನು ಮೊದಲೇ ಊಹಿಸಿ ಪರಿಹಾರವನ್ನು ಹುಡುಕಿ-ಕೊಳ್ಳುವವರು- ಅನಾಗತವಿಧಾತೃ(ತಾ), ೨. ಆಪತ್ತು ಬಂದಾಗ ತಕ್ಷಣ ಪರಿಹಾರವನ್ನು ಹುಡುಕಿಕೊಳ್ಳುವವರು(**ಪ್ರತ್ಯುತ್ಪನ್ನಮತಿ**), ೩. ತೊಂದರೆ ಬಾಗಿಲಿಗೆ ಬಂದಾಗಲೂ ಪರಿಹಾರ ವನ್ನು ಮುಂದೆ ಹಾಕುವವರು (**ದೀರ್ಘಸೂತ್ರೀ**). ಹೀಗೆ ಮೂವರು. ಇವರಲ್ಲಿ ಮೊದಲಿಬ್ಬರು ಸುಖ ಹೊಂದುತ್ತಾರೆ. ಮೂರನೆಯವನು ತೊಂದರೆಗೆ ಸಿಲುಕಿಕೊಂಡು ಹಾಳಾಗುತ್ತಾನೆ.

ಇಂತಹ ಸ್ವಭಾವವುಳ್ಳ ಮೂರು ಮೀನುಗಳು ಒಂದು ಜಲಾಶಯದಲ್ಲಿದ್ದವು. ಆ ಜಲಾಶಯ ಬಹಳ ಆಳವಾಗಿರಲಿಲ್ಲ.

ಒಮ್ಮೆ ಬೆಸ್ತರು ಆ ಜಲಾಶಯದ ನೀರೆಲ್ಲವನ್ನು ಅದರ ಬೇರೆ ಬೇರೆ ತೂಬು(ರಂಧ್ರಗಳಿಂದ) ಬಸಿದರು (ಹೊರ ಹಾಕಲಾರಂಭಿಸಿದರು). ಇದನ್ನು ಗಮನಿಸಿದ ಬಂದ ಅಪಾಯವನ್ನು ತಿಳಿದ **ದೀರ್ಘದರ್ಶಿ** ಸ್ವಭಾವದ ಮೀನು, ಉಳಿದ ಎರಡು ಮೀನುಗಳಿಗೆ ತಮಗೆ ಬರುತ್ತಿರುವ ಭಯದ ಮುನ್ಸೂಚನೆಯನ್ನು ನೀಡಿ (ಮೊದಲ ಸ್ವಭಾವದ ಮೀನು ಉಳಿದ ಎರಡು ಸ್ವಭಾವದ) 'ನಡೆಯಿರಿ, ಬೇಗನೆ ಬೇರೆ ಕಡೆ ಹೋಗೋಣ'.

ಇದನ್ನು ಕೇಳಿದ **ದೀರ್ಘಸೂತ್ರ** ಮೀನು 'ನೀನು ಹೇಳಿದ್ದು ಸರಿಯೇ. ಆದರೆ ಇಷ್ಟು ಬೇಗನೇ ಹೋಗುವ ಅವಶ್ಯಕತೆ ಇಲ್ಲ. ಇದು ನನ್ನ ನಿರ್ಧಾರ' ಎಂದಿತು (೩ನೇ ಮೀನು).

ಬಂದ ಅಪಾಯವನ್ನು ಚೆನ್ನಾಗಿ ನಿರ್ವಹಣೆ ಮಾಡುವ ೨ನೇ ಮೀನು 'ಕಾಲ ಬರಲಿ, ನಾನು ತಡ ಮಾಡೆ' ಎಂದಿತು[೧].

---

೧ ಅತ್ರೈಕಃ ಪ್ರಾಪ್ತಕಾಲಜ್ಞೋ ದೀರ್ಘದರ್ಶೀ ತಥಾಪರಃ।
**ದೀರ್ಘಸೂತ್ರಶ್ಚ** ತತ್ರೈಕ ಸ್ತ್ರಯಾಣಾಂ ಜಲಚಾರಿಣಾಮ್॥
ದೀರ್ಘಸೂತ್ರಸ್ತು ಯಸ್ತತ್ರ ಸೋಽಬ್ರವೀತ್ ಸಮ್ಯಗುಚ್ಯತೇ।
ನ ತು ಕಾರ್ಯಾ ತ್ವರಾ ಯಾವದಿತಿ ಮೇ ನಿಶ್ಚಿತಾ ಮತಿಃ॥
ಅಥ ಸಂಪ್ರತಿಪತ್ತಜ್ಞಃ ಪ್ರಾಬ್ರವೀತ್ ದೀರ್ಘದರ್ಶಿನಮ್।
ಪ್ರಾಪ್ತೇ ಕಾಲೇ ನ ಮೇ ಕಿಂಚಿತ್ ನ್ಯಾಯತಃ ಪರಿಹಾಸ್ಯತೇ॥ - ಆಪದ್ಧರ್ಮ(೭/೪,೯,೧೦)

ಹೀಗೆ ಇಬ್ಬರಿಗೂ ಮುನ್ಸೂಚನೆ ನೀಡಿದರೂ, ಅವರು (೨, ೩ನೇ ಸ್ವಭಾವದವರು) ತನ್ನ ಮಾತನ್ನು ಕೇಳದಿರಲು ದೀರ್ಘದರ್ಶಿಯು (೧ನೇ ಸ್ವಭಾವದ) ಜಲಾಶಯದ ನೀರಿನ ಒಂದು ತೂಬಿನ ಮೂಲಕ ಆಳವಾದ ಬೇರೆ ಕಡೆ (ಜಲಾಶಯಕ್ಕೆ) ಹೋಯಿತು. ಆಗಲೇ ಬೆಸ್ತರು ಖಾಲಿಯಾದ ಜಲಾಶಯ ನೋಡಿ ಬಲೆಗಳಿಂದ ಜಲಾಶಯದ ಮೇಲೆ ಹಾಕಿದರು (ಮೀನುಗಳು ಬಲೆಗೆ ಬಿದ್ದವು). ಮೀನುಗಳನ್ನು ಬೆಸ್ತರು ಅತ್ತಿತ್ತ ಸರಿದಾಡಿಸುತ್ತಿದ್ದಾಗ (ಬಲೆಯನ್ನು ಹಿಡಿಯಲು) ದೀರ್ಘಸೂತ್ರಿಯು ಇತರ ಮೀನುಗಳೊಂದಿಗೆ ಸಿಕ್ಕಿ ಹಾಕಿ-ಕೊಂಡಿತು. ಪ್ರತ್ಯುತ್ಪನ್ನ ಮತಿ ಸ್ವಭಾವದ (ಎರಡನೇ) ಮೀನು ಬೇರೆ ಮೀನುಗಳೊಂದಿಗೆ ಸೇರಿದಾಗ ಆ ಬಲೆಯ ದಾರವನ್ನು ತನ್ನ ಬಾಯಿಯಲ್ಲಿ ಸೇರಿಸಿಕೊಂಡಿತು. ಆದಾರವನ್ನು ಹಾಗೆಯೇ ಇಟ್ಟುಕೊಂಡಿರಲು ಬೆಸ್ತರು ಎಲ್ಲ ಮೀನುಗಳನ್ನು ಸೆರೆ ಹಿಡಿದಿದ್ದೇವೆ ಎಂದೇ ಭಾವಿಸಿದರು. ಬೆಸ್ತರು ನಂತರ ಬಲೆಯನ್ನು (ಮೀನುಗಳನ್ನು ಹಿಡಿದ) ಶುದ್ಧ ನೀರಿನಲ್ಲಿ ತೊಳೆಯುತ್ತಿರಲು ಈ ಪ್ರತ್ಯುತ್ಪನ್ನಮತಿ ಮೀನು ತನ್ನ ಬಾಯಿಯಲ್ಲಿ ಹಾಕಿಕೊಂಡಿದ್ದ ದಾರವನ್ನು ಹೊರಚೆಲ್ಲಿ ನೀರಿನಲ್ಲಿ ನುಸುಳಿ ತಪ್ಪಿಸಿಕೊಂಡು ಓಡಿಹೋಯಿತು. ಮಂದಬುದ್ಧಿಯ ಸೋಮಾರಿಯಾದ ದೀರ್ಘಸೂತ್ರಿಯು ನೀರಿನಿಂದ ತೊಳೆದಾಗಲೂ ತನ್ನ ಇಂದ್ರಿಯಶಕ್ತಿಯನ್ನು ಕಳೆದುಕೊಂಡು ಸತ್ತು ಹೋಯಿತು[೧].

ಹೀಗೆ ಆಪತ್ ಕಾಲವನ್ನು ಅಜ್ಞಾನ, ಆಲಸ್ಯಗಳಿಂದ ತಿಳಿಯದಿದ್ದರೆ ಅವನು ದೀರ್ಘಸೂತ್ರಿ ಮೀನಿನಂತೆ ನಾಶವಾಗುತ್ತಾನೆ.

## ಸಂದೇಶಗಳು-ವಿವರಣೆಗಳು

೧. ಉಪಾಖ್ಯಾನವೇ ತನ್ನ ಸಂದೇಶವನ್ನು ಮೂರು ಮೀನುಗಳ ನಡತೆಯ ಮೇಲೆ ತಿಳಿಸಿದೆ. ಪ್ರತ್ಯೇಕವಾಗಿ ಹೇಳುವ ಅವಶ್ಯಕತೆ ಕಾಣುತ್ತಿಲ್ಲ.

೨. ಮಹಾಭಾರತವೇ ಇದನ್ನು ಮತ್ತೇ ಸ್ಪಷ್ಟಪಡಿಸಿದೆ:

---

೧ ವಿಲೋಡ್ಯಮಾನೇ ತಸ್ಮಿಂಸ್ತು ಸ್ರುತತೋ ಯೇ ಜಲಾಶಯೇ।
ಅಗಚ್ಛದ್ಗ್ರಹಣಂ ತತ್ರ ದೀರ್ಘಸೂತ್ರಃ ಸಹಾಪರೈಃ॥
ಉಕ್ಷಣಂ ಕ್ರಿಯಮಾಣಂ ಚ ಮತ್ಸ್ಯಾನಾಂ ವೀಕ್ಷ್ಯ ರಶ್ಮಿಭಿಃ।
ಪ್ರವಿಶ್ಯಾಂತರಮನ್ಯೇಷಾಮಗ್ರಸತ್ ಪ್ರತಿಪತ್ತಿಮಾನ್ ॥
ತತಃ ಪ್ರಕ್ಷಾಲ್ಯಮಾನೇಷು ಮತ್ಸ್ಯೇಷು ವಿಮಲೇ ಜಲೇ।
ತ್ಯಕ್ತ್ವಾ ರಜ್ಜುಂ ವಿಮುಕ್ತೋಽಭೂತ್ ಶೀಘ್ರಂ ಸಂಪ್ರತಿಪತ್ತಿಮಾನ್ ॥
ದೀರ್ಘಸೂತ್ರಸ್ತು ಮಂದಾತ್ಮಾ ಹೀನಬುದ್ಧಿರಚೇತನಃ।
ಮರಣಂ ಪ್ರಾಪ್ತವಾನ್ಮೂಢೋ ಯಥೈವೋಪಹತೇಂದ್ರಿಯಃ॥
ಏವಂ ಪ್ರಾಪ್ತತಮಂ ಕಾಲಂ ಯೋ ಮೋಹಾನ್ನಾವಬುಧ್ಯತೇ।
ಸ ವಿನಶ್ಯತಿ ವೈ ಕ್ಷಿಪ್ರಂ ದೀರ್ಘಸೂತ್ರೋ ಯಥಾ ಝಷಃ॥ - ೭/೧೩೬-೧೮

**ಆದೌ ನ ಕುರುತೇ ಶ್ರೇಯಃ ಕುಶಲೋಽಸ್ಮೀತಿ ಯಃ ಪುಮಾನ್ ।**
**ಸ ತು ಸಂಶಯಮಾಪ್ನೋತಿ ಯಥಾ ಸಂಪ್ರತಿಪತ್ತಿಮಾನ್ ॥**

ಪ್ರತ್ಯುತ್ಪನ್ನಮತಿ ಮೀನಿನಂತೆ ಯಾರು 'ನನಗೆ ಎಲ್ಲ ಗೊತ್ತಿದೆ' ಎಂದು ಭಾವಿಸಿ ಆರಂಭದಿಂದಲೂ ತನ್ನ ಒಳಿತನ್ನು ಮಾಡಿಕೊಳ್ಳುವುದಿಲ್ಲವೋ ಅವನು ಪ್ರಾಣಾಪಾಯಕ್ಕೆ ಒಳಗಾಗುತ್ತಾನೆ.

೩. ಮುಂದಾಗುವ ಅನಾಹುತವನ್ನು ಯೋಚಿಸಿ, ಪರಿಹಾರ ಕಂಡುಕೊಳ್ಳುವವನು ಶ್ರೇಯೋಭಾಗಿಯಾಗುತ್ತಾನೆ, ದೀರ್ಘದರ್ಶಿಯಂತೆ.

೪. ದೇಶಕಾಲಗಳಿಗನುಸಾರ ಅವನ್ನು ಚೆನ್ನಾಗಿ ಪರಿಶೀಲಿಸಿ ಯೋಗಿಯು ಅಪಾಯ ಬರದಂತೆ ಉಪಾಯವನ್ನು ಚಿಂತಿಸಬೇಕು. ಅವನೇ ದೀರ್ಘದರ್ಶೀ[೧].

೫. ಧರ್ಮರಾಜ ಯಾರ ಮಾತನ್ನೂ ಕೇಳದೇ ದ್ಯೂತವಾಡಿ ರಾಜ್ಯ, ಕೋಶ ಎಲ್ಲವನ್ನೂ ಕಳೆದುಕೊಂಡ. ಭೀಮ-ದ್ರೌಪದೀ, ಅರ್ಜುನಾದಿಗಳು ವಿದುರ ಹೇಳಿದರೂ ಕೇಳಲಿಲ್ಲ. ಈ ಅರ್ಥದಲ್ಲಿ ಧರ್ಮರಾಜ ೩ನೇ ಮೀನಿನಂತೆ (ಯದ್ಯಪಿ ಹರೀಚ್ಛೆ, ಪ್ರಾರಬ್ಧಕರ್ಮಗಳು ವಿವರಣೆಯಾಗಿವೆ. ಲೋಕನ್ಯಾಯ, ಶಾಸ್ತ್ರನ್ಯಾಯಗಳನ್ನು ಧರ್ಮರಾಜ ನಡೆಸಲಿಲ್ಲ ಎಂಬುದು ಅಷ್ಟೇ ಸತ್ಯ).

ಇತ್ಯಾದಿ.....

*****

೧ ಪರೀಕ್ಷ್ಯಕಾರೀ ಯುಕ್ತಸ್ತು ಸಮ್ಯಕ್ ಸಮುಪಪಾದಯೇತ್ ।
ದೇಶಕಾಲಾವಭಿಪ್ರೇತೌ ತಾಭ್ಯಾಂ ಫಲಮುವಾಪ್ನುಯಾತ್ ॥ - ೭/೨೪

## ೯೧.ಆಲದ ಮರದಲ್ಲಿ ಬೆಕ್ಕು-ಇಲಿಗಳ ಸಂವಾದ

ಧರ್ಮರಾಜ ಪ್ರಶ್ನಿಸುತ್ತಾನೆ ಭೀಷ್ಮರನ್ನು(ಶಾಂತನವರನ್ನು).

೧. ಬಹಳ ಶತ್ರುಗಳಿಂದ ಆಕ್ರಮಣಕ್ಕೆ ಒಳಗಾದ (ಸುತ್ತುವರಿಯಲ್ಪಟ್ಟ) ರಾಜನು ಮಿತ್ರರನ್ನು ಹೇಗೆ ಸಂಪಾದಿಸಬೇಕು? ಶತ್ರುವನ್ನು ಹೇಗೆ ವಶ ಪಡಿಸಿಕೊಳ್ಳಬೇಕು?

೨. ಮಿತ್ರನೇ ಶತ್ರುವಾದಾಗ ಅಸಹಾಯಕ ರಾಜನು ಹೇಗೆ ವರ್ತಿಸಿದರೆ ಸುಖ ಸಿಕ್ಕೀತು?

ಭೀಷ್ಮರು ಉತ್ತರಿಸುತ್ತಾರೆ -

೧. ಶತ್ರುಗಳು ಮಿತ್ರರು ಕ್ರಮವಾಗಿ ಮಿತ್ರರೂ, ಶತ್ರುಗಳೂ ಆಗಲು ಆ ವ್ಯಕ್ತಿಯ ಸಾಮರ್ಥ್ಯದ ಮೇಲೆ ನಿಂತಿದೆ. ಆದ್ದರಿಂದ ಕಾರ್ಯಾಕಾರ್ಯಗಳನ್ನು ನಿಶ್ಚಯಿಸಲು ದೇಶಕಾಲಗಳನ್ನು ಚೆನ್ನಾಗಿ ತಿಳಿದು ವಿಶ್ವಾಸ ಮಾಡಿ ಕಲಹ ಮಾಡಬೇಕು.

೨. ಹಿತೈಷಿಗಳೊಡನೆ ಸಂಧಾನ ಮಾಡಿಕೊಳ್ಳಬೇಕು. ಕೆಲವೊಮ್ಮೆ ಶತ್ರುಗಳೊಡನೆಯೂ ಸಂಧಾನ ಮಾಡಿಕೊಳ್ಳಬೇಕು. ಹಾಗೆ ಮಾಡದಿದ್ದರೆ, ಅವನು ದಡ್ಡನೇ ಸರಿ. ಅವನು ಆಗ ಐಶ್ವರ್ಯ ಹೊಂದುವುದಿಲ್ಲ.

ಈ ವಿಷಯದಲ್ಲಿ ಆಲದ ಮರದಲ್ಲಿದ್ದ **ಇಲಿ-ಬೆಕ್ಕುಗಳ ಸಂವಾದರೂಪ ಇತಿಹಾಸವನ್ನು ಹೇಳುತ್ತೇನೆ.**

ಒಂದು ದೊಡ್ಡ ಆಲದಮರ. ನಾನಾ ಬಳ್ಳಿಗಳು ಅದಕ್ಕೆ ಹಬ್ಬಿದ್ದವು. ಮರದಲ್ಲಿ ಅನೇಕ ಪಕ್ಷಿಗಳು ವಾಸವಾಗಿದ್ದವು. ಭಾರೀ ಶಾಖೆಗಳಿಂದ ಅದು ದೊಡ್ಡ ಮೇಘದಂತಿತ್ತು. ಮರದ ಸುತ್ತಲೂ ಸರ್ಪ, ಮೃಗಗಳ ಸಮೂಹವೇ ಇತ್ತು. ಆ ಮರವು '**ವೈತಂತ್ಯ** ಎಂಬ ಸ್ಥಳದ ಸಮೀಪದಲ್ಲಿತ್ತು.

ಆ ಮರದ ಕೆಳಗೆ ನೂರು ಬಿಲಗಳನ್ನು ಮಾಡಿಕೊಂಡ **ಪಲಿತ** ಎಂಬ ಮಹಾಜಾಣನಾದ ಒಂದು ಇಲಿ ಇತ್ತು. ಇದೇ ಮರದ ಕೊಂಬೆಗಳನ್ನು ಆಶ್ರಯಿಸಿ ಪಕ್ಷಿಗಳನ್ನು ತಿನ್ನುತ್ತಿದ್ದ ಒಂದು ಬೆಕ್ಕು ಇತ್ತು. ಒಬ್ಬ ಚಂಡಾಲ ಆ ಸ್ಥಳದಲ್ಲಿ ವಾಸವಾಗಿದ್ದ. ನಿತ್ಯ ಸಾಯಂಕಾಲ ಅಲ್ಲಿಗೆ ಬಂದು ಬಲೆ ಹಾಕಿ ಪ್ರಾಣಿಗಳನ್ನು ಬೆಳಿಗ್ಗೆ ಬಲೆಗಳಿಂದ ತೆಗೆದುಕೊಂಡು ಹೋಗುತ್ತಿದ್ದ. ಒಮ್ಮೆ ಬೆಕ್ಕು ಬಲೆಯಲ್ಲಿ ಬಿದ್ದು ಸಿಕ್ಕಿಹಾಕಿಕೊಂಡಿತು.

ತನ್ನ ಶತ್ರು ಬಲೆಯಲ್ಲಿ ಬಿದ್ದುದನ್ನು ನೋಡಿದ **ಪಲಿತ** ಇಲಿ, ನಿರ್ಭಯವಾಗಿ ವನದಲ್ಲಿ ಓಡಾಡುವಾಗ ಮಾಂಸದ ತುಂಡೊಂದನ್ನು ನೋಡಿ, ಅದನ್ನು ಬಲೆಯಲ್ಲಿದ್ದ ಬೆಕ್ಕು ಕಾಣುವಂತೆ ತಿನ್ನುತ್ತಿರುವಾಗ, ತನ್ನ ಇನ್ನೊಬ್ಬ ಶತ್ರುವಾದ ಭೂಮಿಯ ಬಿಲದಲ್ಲಿ ವಾಸ ಮಾಡುವ, ಚಪಲ ಸ್ವಭಾವದ **ಹರಿಕ** ಎಂಬ ಹೆಸರಿನ ಮುಂಗುಸಿಯನ್ನು ನೋಡಿತು. ಅಲ್ಲದೆ ಅದೇ ಆಲದ ಮರದ ಪೊಟರೆಯಲ್ಲಿ ವಾಸ ಮಾಡುವ ತೀಕ್ಷ್ಣ ಕೊಕ್ಕಿನ ತನ್ನ ಇನ್ನೊಂದು ಶತ್ರುವಾದ ಒಂದು ಗೂಬೆಯನ್ನು ನೋಡಿತು. ಗೂಬೆಯ ಹೆಸರು **ಚಂದ್ರಕ**.

## ಇಲಿಯ ಚಿಂತೆ

ಶತ್ರುಗಳಾದ ಮುಂಗಸಿ ಮತ್ತು ಗೂಬೆಗಳ ದೃಷ್ಟಿಗೆ ಬಿದ್ದ ಇಲಿಗೆ ಮಹಾಭಯವುಂಟಾಗಿ ನನ್ನ ಮರಣ ಅತಿ ಹತ್ತಿರ ಬಂದಿರುವಾಗ ನನ್ನ ಹಿತಕ್ಕಾಗಿ ನಾನೇನು ಮಾಡಲಿ? ನನ್ನ ಬದುಕೇ ಸಂಶಯಾಸ್ಪದವಾಗಿದೆ. ನಾನೇನಾದರೂ ಭೂಮಿಯ ಮೇಲೆ ಹೋದರೆ ಮುಂಗಸಿ ನನ್ನನ್ನು ಹಿಡಿಯುತ್ತದೆ. ಬಲೆಯ ದಾರಗಳನ್ನು ಕತ್ತರಿಸಿ ಒಳಗೆ ಹೋದರ ಬೆಕ್ಕು ಹಿಡಿಯುತ್ತದೆ. ನನ್ನಂತಹ ವಿವೇಕಿಯು ಸಂಮೋಹಕ್ಕೆ ಒಳಗಾಗದೆ ಉಸಿರು ಇರುವವರೆಗೂ ಬದುಕಿ ಉಳಿಯಲು ಪ್ರಯತ್ನಿಸಬೇಕು. [೧]ಏಕೆಂದರೆ ಬುದ್ಧಿವಂತರು, ನೀತಿಜ್ಞರು ವಿಪತ್ತಿಗೆ ಸಿಕ್ಕಾಗ ಅಥವಾ ಭಾರೀ ಐಶ್ವರ್ಯ ಹೊಂದಿದಾಗ ಗೊಂದಲಗೊಳ್ಳುವುದಿಲ್ಲ. ಈಗ ನನ್ನ ಶತ್ರುವಾಗಿದ್ದರೂ ಬೆಕ್ಕೇ ಗತಿ. ಅದೂ ಸಂಕಟದಲ್ಲಿದೆ. ಅದಕ್ಕೂ ನನ್ನಿಂದ ಪ್ರಯೋಜನವಿದೆ. ಮೂರೂ ಶತ್ರುಗಳು ನನ್ನನ್ನು ಆಹಾರಕ್ಕಾಗಿ ಬಯಸುತ್ತಿದ್ದಾರೆ. ಆದರೆ ನಾನು ಬದುಕಬೇಕು. ಆದ್ದರಿಂದ ನಾನು ಈಗ ಶತ್ರುವಾದ ಬೆಕ್ಕನ್ನೇ ಆಶ್ರಯಿಸುತ್ತೇನೆ. ಅಪಾಯಕ್ಕೆ ಒಳಗಾದವನನ್ನು ರಕ್ಷಿಸುವವನು ಕ್ಷತ್ರ. ಅವನಲ್ಲಿದೆ ಕ್ಷತ್ರವಿದ್ಯೆ. ಇದನ್ನು ಬಳಸಿ ಬೆಕ್ಕಿಗೆ ಹಿತ ಬಯಸುತ್ತಾ ಉಳಿದ ಶತ್ರುಗಳನ್ನು ವಂಚಿಸುತ್ತೇನೆ. ಈ ಬೆಕ್ಕು ಮೂಢ, ದಡ್ಡ. ಇವನೊಡನೆ ನನ್ನ ಕೆಲಸ ಸಾಧ್ಯವೇ? ಎಂದು ನೋಡೋಣ.

[೨]ಬೆಕ್ಕು ತಾನು ಬಲಶಾಲಿಯಾಗಿದ್ದರೂ, ಸ್ವಯಂ ತೊಂದರೆಗೆ ಒಳಗಾಗಿರುವುದರಿಂದ ನನ್ನೊಡನೆ ಸಂಧಿ ಮಾಡಿಕೊಳ್ಳಬಹುದು. ಹಾಗೆ ಮಾಡಿಕೊಳ್ಳಬೇಕೆಂದು ಬಲ್ಲವರು ಹೇಳುತ್ತಾರೆ. ಆತ್ಮರಕ್ಷಣೆಗಾಗಿ ನಾನೊಂದು ಯುಕ್ತಿಯನ್ನು ಇವನಿಗೆ ಹೇಳುತ್ತೇನೆ. ಅದರಿಂದ ಇಬ್ಬರ ಕಾರ್ಯಸಿದ್ಧಿಯಾಗುತ್ತದೆ. ಆದ್ದರಿಂದ ಅವನು ಅದನ್ನು ಅರ್ಥಮಾಡಿಕೊಳ್ಳಬಹುದು.

---

೧ ನ ಹಿ ಬುದ್ಧ್ಯಾನ್ವಿತಾಃ ಪ್ರಾಜ್ಞಾ ನೀತಿಶಾಸ್ತ್ರವಿಶಾರದಾಃ।
ಸಂಭ್ರಮಂತ್ಯಾಪದಂ ಪ್ರಾಪ್ಯ ಮಹತೋಽರ್ಥಾನವಾಪ್ಯ ಚ॥ – ೮/೩೯

೨ ಕದಾಚಿದ್ವ್ಯಸನಂ ಪ್ರಾಪ್ಯ ಸಂಧಿಂ ಕುರ್ಯಾನ್ಮಯಾ ಸಹ।
ಬಲಿನಾ ಸನ್ನಿವಿಷ್ಟಸ್ಯ ಶತ್ರೋರಪಿ ಪರಿಗ್ರಹಃ।
ಕಾರ್ಯ ಇತ್ಯಾಹುರಾಚಾರ್ಯಾ ವಿಷಮೇ ಜೀವಿತಾರ್ಥಿನಾ॥ – ೮/೪೪

ಹೀಗೆ ಕಾರ್ಯಸಿದ್ಧಿಯ ರಹಸ್ಯ ತಿಳಿದ ಇಲಿ ಬೆಕ್ಕಿಗೆ ಮನ ಒಲಿಸುವಂತೆ ಹೇಳಿತು –

'ಸೌಮ್ಯ! (ಬೆಕ್ಕೇ) ನೀನು ವಿಷಾದಿಸಬೇಡ. ನಾನೊಂದು ಒಳ್ಳೆಯ ಉಪಾಯ ಕಂಡುಕೊಂಡಿದ್ದೇನೆ. ಅದರಿಂದ ನನಗೂ, ನಿನಗೂ ಇಬ್ಬರಿಗೂ ಶ್ರೇಯಸ್ಸಿದೆ. ನೀನು ಬದುಕುವೆ. ನಾವೆಷ್ಟಂದರೂ ಇದೇ ಮರದ ಮೇಲೆ ನೀನು, ನಾನು ಕೆಳಗಿನ ಬಿಲದ ಮೇಲೆ ಬಹಳ ಕಾಲದಿಂದ ಇದ್ದೇವೆ. ನಮ್ಮಲ್ಲಿ ಪ್ರೀತಿ ಬೆಳೆಯಲಿ, ನಮ್ಮ ಸಂಬಂಧ ಸತ್ಯವಾಗಲಿ. ನೀನು ಉಳಿಯಬೇಕೆಂದು ನನ್ನ ಬಯಕೆ. ನೀನೂ ಸಹ ನನ್ನ ಉಳಿವನ್ನು ಬಯಸುವೆಯಾದರೆ ನಾನು ಈ ಬಲೆಯ ದಾರಗಳನ್ನು ಕತ್ತರಿಸುತ್ತೇನೆ. ಇದು ಹೇಗೆಂದರೆ ಒಬ್ಬನು ದಿಮ್ಮಿಯ ಸಹಾಯದಿಂದ ಬಹಳ ಆಳವಾದ ನದಿಯನ್ನು ದಾಟುತ್ತಾನೆ. ಅವನು ಕಾಷ್ಠವನ್ನು ದಾಟಿಸುತ್ತಾನೆ. ಕಾಷ್ಠವು ಅವನನ್ನು ದಾಟಿಸುತ್ತದೆ – ಹಾಗೆ.' ಹೀಗೆ ಹೇಳಿ ಇಲಿ ಬೆಕ್ಕಿನ ಕಡೆ ನೋಡಿತು.

ಆಗ **ಲೋಮಶ** ಎಂಬ ಹೆಸರಿನ ಆ ಬೆಕ್ಕು ಇಲಿಯ ಮಾತುಗಳನ್ನು ಸಮಾಧಾನದಿಂದ ಆದರಿಸಿತು. ಚೂಪಾದ ತುದಿಗಳ ಹಲ್ಲುಗಳಿರುವ ಭಾರಿ ಹೊಳೆಯುವ ಕಣ್ಣಿರುವ ಬೆಕ್ಕು ಸ್ವಲ್ಪವೇ ಇಲಿಯನ್ನು ನೋಡುತ್ತಾ ಹೇಳಿತು.

'ನಾನು ಬದುಕಿ ಉಳಿಯಬೇಕೆಂಬ ನಿನ್ನ ಬಯಕೆಯಿಂದ ನನಗೆ ಬಹಳ ಸಂತೋಷವಾಗಿದೆ. ನಿನ್ನ ವಿಚಾರದ ಪ್ರಕಾರ ಮಾಡು ಸಂದೇಹ ಬೇಡ. ನಾವಿಬ್ಬರೂ ಆಪತ್ತಿಗೆ ಒಳಗಾಗಿದ್ದೇವೆ. ನಮ್ಮಿಬ್ಬರ ಮಧ್ಯ ಸಂಧಾನವಾಗಲಿ. ಸಂದೇಹಿಸಬೇಡ. ನಾನು ಬಿಡುಗಡೆಯಾದ ಮೇಲೆ ಕೃತಘ್ನನಾಗುವುದಿಲ್ಲ. ನಾನು ದುರಭಿಮಾನ ತ್ಯಾಗ ಮಾಡಿ ನಿನ್ನ ಭಕ್ತ, ಶಿಷ್ಯ ಹಾಗೂ ಹಿತೈಷಿಯೂ ಆಗಿದ್ದೇನೆ. ನಿನಗೆ ಶರಣಾಗಿದ್ದೇನೆ.

ಈ ಮಾತನ್ನು ಕೇಳಿ ಇಲಿ ಮತ್ತೇ ಮಾತನಾಡಿತು –

'ಮುಂಗಸಿಯಿಂದ ನನಗೆ ಮಹಾಭಯವಾಗುತ್ತಿದೆ. ನಾನು ನಿನ್ನನ್ನು ಅನುಸರಿಸಿ ಬಲೆಯೊಳಗೆ ಬರುವೆ. ನನ್ನನ್ನು ರಕ್ಷಿಸು ಕೊಲ್ಲಬೇಡ. ಗೂಬೆಯಿಂದಲೂ ರಕ್ಷಿಸು. ಆ ಕ್ಷುದ್ರನೂ ನನ್ನನ್ನು ಬಯಸುತ್ತಿದ್ದಾನೆ. ನಾನು ನಿನ್ನ ಪಾಶಗಳನ್ನು ಕತ್ತರಿಸುವೆ. ಸತ್ಯದ ಮೇಲೆ ಆಣೆ ಇಟ್ಟು ಹೇಳುತ್ತಿದ್ದೇನೆ.'

ಈ ಮಾತನ್ನು ಕೇಳಿದ ಲೋಮಶ ಬೆಕ್ಕು ಇಲಿಯನ್ನು ಸಂತೋಷದಿಂದ ಸ್ವಾಗತಿಸಿ ಸತ್ಕರಿಸಿತು.

ಇಲಿಯೇ ಬೇಗ ಬಾ. ನಿನಗೆ ಒಳ್ಳೆಯದಾಗಲಿ. ನೀನು ನನಗೆ ನನ್ನ ಪ್ರಾಣ ಸಮನಾದ ಸ್ನೇಹಿತ. ನಿನ್ನ ಅನುಗ್ರಹದಿಂದ ನಾನು ನನ್ನ ಬದುಕನ್ನು ಕಂಡುಕೊಳ್ಳುವೆ. ನಮ್ಮಿಬ್ಬರ ಮಧ್ಯೆ ಸಂಧಾನವಿರಲಿ. ನಿನಗೆ ಹಿತವಾದುದೆಲ್ಲವನ್ನೂ ಮಾಡುವೆ. ಸದ್ಯ ಈ ವ್ಯಸನದಿಂದ (ಬಲೆ) ಬಿಡುಗಡೆಯಾದರೆ ಸಾಕು. ನಂತರ ನಿನಗೆ ಸಂತೋಷವುಂಟುಮಾಡುವೆ.

ನಂತರ ಇಲಿ ಬೆಕ್ಕಿನ ಅಭಿಪ್ರಾಯವನ್ನು ಚೆನ್ನಾಗಿ ತಿಳಿದು ಬಲೆಯನ್ನು ಪ್ರವೇಶಿಸಿ, ಬೆಕ್ಕಿನ ಎದೆ ಮೇಲೆ, ತಂದೆ, ತಾಯಿಗಳ ಎದೆಯ ಮೇಲೆ ಮಲಗುವಂತೆ ಮಲಗಿತು. ಬೆಕ್ಕಿನ ಶರೀರದ ಮೇಲೆ ಅಡಗಿದ ಇಲಿಯನ್ನು ನೋಡಿ, ಮುಂಗುಸಿ ಹಾಗೂ ಗೂಬೆಗಳು ನಿರಾಶರಾಗಿ ಮನೆಗೆ ಹೋದವು. ನಂತರ ದೇಶಕಾಲಗಳ ಅರಿವಿರುವ ಪಲಿತವು ಬಲೆಯ ಪಾಶಗಳನ್ನು ನಿಧಾನವಾಗಿ ಕತ್ತರಿಸತೊಡಗಿತು. ಆಗ ಬೆಕ್ಕು ತ್ವರೆಯಿಂದ ಪಾಶಗಳನ್ನು ಕತ್ತರಿಸಲು ಅವಸರ ಪಡಿಸಲಾರಂಭಿಸಿದಾಗ ಪಲಿತವು 'ಸುಮ್ಮನಿರು! ಅವಸರ ಮಾಡಬೇಡ. ನನಗೆ ಕಾಲದ ಅರಿವಿದೆ. ಕಾಲವನ್ನು ಮೀರುವುದಿಲ್ಲ. ಅಕಾಲದಲ್ಲಿ ಆರಂಭವಾದ ಕೆಲಸ ಸಫಲವಾಗದು[1]. ಸಕಾಲದಲ್ಲಿ ಆರಂಭಿಸಲ್ಪಟ್ಟ ಕಾರ್ಯ ಭಾರೀ ಫಲ ಕೊಡುತ್ತದೆ. [2]ಅಕಾಲದಲ್ಲಿ ಮಿತ್ರ ಬಿಡುಗಡೆಯಾದರೆ ಹಾನಿಯಾಗುವ ಭಯವಿದೆ. ಆದ್ದರಿಂದ ಸರಿಯಾದ ಕಾಲಕ್ಕೆ ಕಾಯಬೇಕು. ಗೆಳೆಯನೇ! ಅವಸರವೇಕೆ? ಶಸ್ತ್ರಪಾಣಿಯಾಗಿ ನಮ್ಮ ಕಡೆ ಯಾವಾಗ ಆ ಚಂಡಾಲ ಬರುತ್ತಿರುವುದು ಕಾಣುವುದೋ, ನಿನ್ನ ಪಾಶಗಳನ್ನು ಕತ್ತರಿಸುವೆ. ಆಗ ನೀನು ಬಿಡುಗಡೆಯಾದರೆ, ನೀನು ಮರ ಏರುವೆ. ಆಗ ನಿನಗೆ ಪ್ರಾಣ ಉಳಿಸಿಕೊಳ್ಳುವ ಕೆಲಸ ಬಿಟ್ಟರೆ ಬೇರೆ ಯಾವ ಕೆಲಸ ಇರದು. ಅದೇ ವೇಳೆ ನಾನು ಬಿಲ ಸೇರುವೆ.

ಇಲಿಯ ಮಾತಿನ ಮರ್ಮ ತಿಳಿದ ಬೆಕ್ಕು ಮತ್ತೆ ನಾನು ನಿನ್ನನ್ನು ಬೇಗನೆ ಕಷ್ಟದಿಂದ ಬಿಡುಗಡೆ ಮಾಡಿದ್ದೇನೆ. ನೀನು ಕೂಡ ಶೀಘ್ರವಾಗಿ ನನಗೆ ಹಿತವನ್ನುಂಟುಮಾಡು. ನಮ್ಮಿಬ್ಬರಿಗೂ ಒಳ್ಳೆಯದನ್ನು ಮಾಡಲು ಕಾರ್ಯೋನ್ಮುಖನಾಗು. ಅಥವಾ ನಾನು ಹಿಂದೆ ಮಾಡುತ್ತಿದ್ದ ವೈರವನ್ನು ನೆನೆಯುತ್ತಾ ವಿಳಂಬ ಮಾಡುತ್ತಿರುವೆ ನೋಡು! ನಿನ್ನ ಕೆಲಸವನ್ನು ಕೆಟ್ಟದಾಗಿ ಮಾಡುತ್ತಿರುವೆ. ನನಗೆ ನಿಜವಾಗಿಯೂ ಮರಣವಾಗುತ್ತದೆ. ನಾನು ಹಿಂದೆ ಮಾಡಿದ ಅಪ್ರಿಯ ಕಾರ್ಯಗಳನ್ನು ಮನಸ್ಸಿನಲ್ಲಿಡಬೇಡ. ನನ್ನನ್ನು ಕ್ಷಮಿಸು. ದಯವಿಟ್ಟು ನನ್ನನ್ನು ಅನುಗ್ರಹಿಸು' ಎಂದನು ಲೋಮಶ.

ಹೀಗೆ ನುಡಿದ ಬೆಕ್ಕಿಗೆ ಬುದ್ಧಿವಂತನೂ, ಶಾಸ್ತ್ರಬಲ್ಲವನೂ, ವಿವೇಕಿಯೂ ಆದ ಇಲಿ (ಪಲಿತ) ಬೆಕ್ಕನ್ನು ಕುರಿತು ಹೀಗೆ ಹೇಳಿತು –

'ಬೆಕ್ಕೇ! ನಿನ್ನ ಹಿತದ ದೃಷ್ಟಿಯಿಂದ ನೀನು ಹೇಳಿದ ಮಾತು ಕೇಳಿದೆ. ನನ್ನ ಹಿತವನ್ನೂ ನೀನು ಕೇಳು. [3]ಬಲಶಾಲಿಯೊಡನೆ ಸಂಧಾನ ಮಾಡಿಕೊಂಡವನು ತನ್ನ ರಕ್ಷಣೆಯನ್ನು

---

೧ ಅಕಾಲೇ ಕೃತ್ಯಮಾರಬ್ಧಂ ಕರ್ತುರ್ನಾರ್ಥಾಯ ಕಲ್ಪತೇ।
ತದೇವ ಕಾಲ ಆರಬ್ಧಂ ಮಹತೇಽರ್ಥಾಯ ಕಲ್ಪತೇ॥ – ೮/೮೯

೨ ಅಕಾಲೇ ಮಿತ್ರ ಮುಕ್ತೌ ಮೇ ತತ ಏವ ಭಯಂ ಭವೇತ್।
ತಸ್ಮಾತ್ ಕಾಲಂ ಪ್ರತೀಕ್ಷಸ್ವ ಕಿಮಿತಿ ತ್ವರಸೇ ಸಖೇ॥ – ೮/೯೦

೩ ಕೃತ್ವಾ ಬಲವತಾ ಸಂಧಿಮಾತ್ಮಾನಂ ಯೋ ನ ರಕ್ಷತಿ।
ಅಪಥ್ಯಮಿವ ತದ್ಭುಕ್ತಂ ತಸ್ಯಾನರ್ಥಾಯ ಕಲ್ಪತೇ॥ – ೮/೧೦೩

ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಆ ಸಂಧಾನ ಅನರ್ಥಕಾರಿಯೇ ಸರಿ. ಅಪಥ್ಯ ಆಹಾರದಂತೆ. [1]ಯಾರೂ ಯಾರಿಗೆ ಮಿತ್ರರೂ ಅಲ್ಲ, ಶತ್ರುವೂ ಅಲ್ಲ. ಒಬ್ಬರ ಪ್ರಯೋಜನದಿಂದ ಇನ್ನೊಬ್ಬರ ಪ್ರಯೋಜನ ಹಾನಿಗೆ ಒಳಗಾಗುತ್ತದೆ. ಪಳಗಿದ ಆನೆಗಳಿಂದಲೇ ಆನೆಗಳು ಬಂಧಿಸಲ್ಪಡುತ್ತವೆ!! [2]ತಮ್ಮ ಕಾರ್ಯವಾದ ಮೇಲೆ ಉಪಕಾರ ಮಾಡಿದವನನ್ನು ಯಾರೂ ನೋಡುವುದೇ ಇಲ್ಲ. ದಿವಾಕೀರ್ತಿ(ಬಲೆ ಹಾಕಿದವನ ಹೆಸರು) ಭಯಕ್ಕೆ ಒಳಗಾಗುವ ನೀನು ಆ ಸಮಯದಲ್ಲಿ(ಅವನು ಬರುವಾಗ) ಪಲಾಯನ ಮಾಡುವುದರಲ್ಲಿ ಮನಸ್ಸಿಟ್ಟಿರುವೆ. ನನ್ನನ್ನು ಹಿಡಿಯಲು ಶಕ್ತನಾಗುವುದಿಲ್ಲ. ಬಲೆಯ ಬಹುತೇಕ ದಾರಗಳನ್ನು ಕತ್ತರಿಸಿದ್ದೇನೆ. ಒಂದೇ ದಾರ ಉಳಿದಿದೆ. ಅದನ್ನೂ ಬೇಗನೇ ಕತ್ತರಿಸುತ್ತೇನೆ. ಲೋಮಶ! ಸಂತೋಷವಾಗಿರು'

ಹೀಗೆ ಇಬ್ಬರೂ (ಇಲಿ-ಬೆಕ್ಕು) ಮಾತನಾಡುತ್ತಿರುವಾಗ, ಆಪತ್ತಿಗೆ ಒಳಗಾಗಿರುವಾಗಲೇ ರಾತ್ರಿ ಕಳೆಯಿತು. ಲೋಮಶನಿಗೆ ಭಯ ಹೆಚ್ಚಾಯಿತು. ಬೆಳಗಾಗುವ ಸಮಯದಲ್ಲಿ ವಿಕಾರಿಯಾದ, ಕಪ್ಪು ಬಣ್ಣದ, ಕೆದರಿದ ಕೂದಲಿನ ಉಗ್ರನಂತಿರುವ, ಅಡ್ಡಾದಿಡ್ಡಿಯಾಗಿ ಬರುತ್ತಿದ್ದ ಕೈಯಲ್ಲಿ ಶಸ್ತ್ರ ಹಿಡಿದ ಚಂಡಾಲನು ಬಂದನು. ಅವನನ್ನು ನೋಡಿದ ಬೆಕ್ಕು ಇಲಿಗೆ 'ಈಗ ಏನು ಮಾಡುವೆ' ಎಂದಿತು. ಭಯಂಕರವಾಗಿ ಕಾಣುತ್ತಿದ್ದ ಅವನನ್ನು ನೋಡಿದ ಮುಂಗಸಿ ಹಾಗೂ ಗೂಬೆಗಳು ನಿರಾಶರಾದವು. ಇವು ತಾವು ಎಷ್ಟೇ ಬಲಿಷ್ಠವಾಗಿದ್ದರೂ, ಒಗ್ಗಟ್ಟಿನಿಂದ ಕೂಡಿದ್ದರೂ, ಇಲಿಯ ಉಪಾಯದಿಂದಾಗಿ ಇಲಿ-ಬೆಕ್ಕುಗಳನ್ನು ಆಕ್ರಮಿಸಲು ಅಸಮರ್ಥವಾದವು. ಆದ್ದರಿಂದ ತಮ್ಮ ಆ ವಾಸಸ್ಥಾನಗಳಿಗೆ ತೆರಳಿದವು.

ಇಲಿಯು ಉಳಿದ ಒಂದು ದಾರವನ್ನು ಕತ್ತರಿಸಲು ಬೆಕ್ಕು ಬಿಡುಗಡೆಯಾಗಿ ಮರದ ಕಡೆ ಓಡಿತು. ಪಲಿತನೂ (ಇಲಿ) ಬೆಕ್ಕಿನ ಭಯದಿಂದ ಮುಕ್ತವಾಗಿ ಮರದ ಬುಡದ ಬಿಲವನ್ನು ಸೇರಿಕೊಂಡಿತು. ಬೆಕ್ಕು ಮರದ ಮೇಲೇರಿತು. ಚಂಡಾಲನೂ ಬಲೆಯೆಲ್ಲ ನೋಡಿದ, ಏನೂ ಸಿಗದ ತಾನು ನಿರಾಶನಾಗಿ ತನ್ನ ಮನೆಗೆ ಹೊರಟನು.

ಇತ್ತ ಬೆಕ್ಕು ತನ್ನ ದುರ್ಲಭವಾದ ಪ್ರಾಣವನ್ನು ಉಳಿಸಿಕೊಂಡು ಬಿಲದಲ್ಲಿದ್ದ ಪಲಿತನಿಗೆ 'ಪಲಿತನೇ! ಭಯಗ್ರಸ್ತನಾದ ನೀನು ಏನೂ ಮಾತನಾಡದೆ ಹಾರಿಹೋದೆ. ನಾನು ನಿನಗೆ ಕೃತಜ್ಞ. ನಿನಗೂ ಒಳ್ಳೆಯದನ್ನೇ ಮಾಡಿದ್ದೇನೆ. ನನ್ನ ಬಗ್ಗೆ ನಿನಗೆ ಸಂಶಯವಿಲ್ಲ ತಾನೇ? ಮಿತ್ರನೇ! ನನ್ನ ಮೇಲೆ ವಿಶ್ವಾಸವಿಟ್ಟು ಪ್ರಾಣದಾನ ಮಾಡಿ, ಈಗ ಸುಖವಾಗಿರುವ ಸಮಯದಲ್ಲಿ ನನ್ನ ಬಳಿ ಏಕೆ ಬರುವುದಿಲ್ಲ?' ಮೈತ್ರಿಯನ್ನು ಮಾಡಿಕೊಂಡು ಧರ್ಮವನ್ನು ಅನುಸರಿಸದವನು

---

೧ ನ ಕಶ್ಚಿತ್ ಕಸ್ಯಚಿನ್ಮಿತ್ರಂ ನ ಕಶ್ಚಿತ್ ಕಸ್ಯಚಿತ್ ರಿಪುಃ।
ಅರ್ಥೈರರ್ಥಾ ನಿಬಧ್ಯಂತೇ ಗಜೈರ್ವನಗಜಾ ಇವ॥ - ೮/೧೦೪

೨ ನ ಹಿ ಕಶ್ಚಿತ್ಕೃತೇ ಕಾರ್ಯೇ ಕರ್ತಾರಂ ಸಮವೇಕ್ಷತೇ।
ತಸ್ಮಾತ್ ಸರ್ವಾಣಿ ಕಾರ್ಯಾಣಿ ಸಾವಶೇಷಾಣಿ ಕಾರಯೇತ್॥ - ೮/೧೦೫

ದುರ್ಮತಿಯೇ ಸರಿ[೧]. ಇಂತಹವನು ಆಪತ್ಕಾಲಗಳಲ್ಲಿ ಮಿತ್ರರನ್ನು ಪಡೆಯಲಾರ. ನೀನು ಈಗ ನನ್ನೊಡನೆ ಊಟಮಾಡು. ನೀನು ನಿನ್ನ ಸಾಮರ್ಥ್ಯದ ಮೇಲೆ ನನ್ನನ್ನು ಮಿತ್ರನಾಗಿ ಪಡೆದಿರುವೆ. [೨]ಗುರುವನ್ನು ಪೂಜಿಸುವ ಶಿಷ್ಯನಂತೆ, ನನ್ನ ಮಿತ್ರರು, ಬಾಂಧವರೆಲ್ಲ ನಿನ್ನನ್ನು ಪೂಜಿಸುತ್ತಾರೆ. ಕೃತಜ್ಞನಾದ ಯಾರು ತಾನೇ ಪ್ರಾಣ ಉಳಿಸಿದವನನ್ನು ಪೂಜಿಸುವುದಿಲ್ಲ?[೩] ನೀನು ನನ್ನ ಶರೀರ, ಮನೆ, ಸಕಲ ಸಂಪತ್ತುಗಳ ಒಡೆಯನಾಗು. ನನಗೂ ಶಾಸಕನಾಗು. ನನ್ನ ಮಂತ್ರಿಯಾಗು. ತಂದೆಯು ಮಗನನ್ನು ಆದೇಶಿಸುವಂತೆ ನನ್ನನ್ನು ಶಾಸನ ಮಾಡು. ನನ್ನಿಂದ ನಿನಗೆ ಭಯವಿಲ್ಲ ನನ್ನ ಪ್ರಾಣದ ಮೇಲೆ ಆಣೆ ಇಡುವೆ ನಂಬು. ನೀನು ಬುದ್ಧಿಯಲ್ಲಿ ಶುಕ್ರಾಚಾರ್ಯರಂತೆ. ನಾನು ಬಲದಿಂದ ಅಧಿಕ. ನಿನ್ನ ನೀತಿಯ ಸಹಾಯ ಹೊಂದಿದವನು ಜಯ ಹೊಂದುವನು.

ಹೀಗೆ ಬೆಕ್ಕಿನ ಮಾತು ಕೇಳಿದ ಆತ್ಯಂತಿಕ ಸತ್ಯವನ್ನು ಅರಿತ ಇಲಿಯು ಬೆಕ್ಕಿಗೆ 'ನೀನು ಹೇಳಿದ್ದು ಕೇಳಿದ್ದೇನೆ. ನನ್ನ ಮಾತನ್ನೂ ಕೇಳು. ಮಿತ್ರರು, ಶತ್ರುಗಳೂ ಯಾರೆಂದು ತಿಳಿಯಬೇಕು. ಇದು ಸೂಕ್ಷ್ಮ ವಿಷಯ, ಜ್ಞಾನಿಸಮ್ಮತವೂ ಹೌದು[೪]. ಹುಟ್ಟಿನಿಂದ ಯಾರೂ ಮಿತ್ರರೂ ಅಲ್ಲ, ಶತ್ರುಗಳೂ ಅಲ್ಲ[೫]. ಅವರವರ ಸಾಮರ್ಥ್ಯಕ್ಕೆ ಅನುಗುಣವಾಗಿ ಮಿತ್ರರಾಗುತ್ತಾರೆ, ಶತ್ರುಗಳಾಗುತ್ತಾರೆ. ಮೈತ್ರಿ ಹಾಗೂ ಶತ್ರುಭಾವ ಯಾವುದೂ ಸ್ಥಿರವಲ್ಲ, ಶಾಶ್ವತವಲ್ಲ, ಪರಸ್ಪರ ಇದೆಲ್ಲ ಪ್ರಯೋಜನದ ಮೇಲೆ ನಿಂತಿದೆ[೬].

[೭]ಕಾಲಕ್ಕೆ ತಕ್ಕಂತೆ ಮಿತ್ರ ಶತ್ರುವಾಗಬಹುದು, ಮತ್ತೊಂದು ಕಾಲದಲ್ಲಿ ಮಿತ್ರನಾಗಬಹುದು. ಸ್ವಾರ್ಥವೇ ಹೆಚ್ಚು ಬಲಶಾಲಿ. ತನ್ನ ಹಿತವು ಹೇಗೆ ಆಗುತ್ತದೆ ಎಂದು ವಿಮರ್ಶಿಸದೆ ಯಾರು ಮಿತ್ರರಲ್ಲಿ ವಿಶ್ವಾಸವಿಡುವುದಿಲ್ಲವೋ, ಶತ್ರುಗಳಲ್ಲಿ ವಿಶ್ವಾಸಮಾಡುವರೊ, ಅವರು

---

೧ ಕೃತ್ವಾ ಹಿ ಪೂರ್ವಂ ಮಿತ್ರಾಣಿ ಯಃ ಪಶ್ಚಾನ್ನಾನುತಿಷ್ಠತಿ ।
ನ ಸ ಮಿತ್ರಾಣಿ ಲಭತೇ ಕೃಚ್ಛ್ರಾಸ್ವಾಪತ್ಸು ದುರ್ಮತಿಃ ॥ - ೮/೧೨೧

೨ ಯಾನಿ ಮೇ ಸಂತಿ ಮಿತ್ರಾಣಿ ಯೇ ಚ ಮೇ ಸಂತಿ ಬಾಂಧವಾಃ ।
ಸರ್ವೇ ತ್ವಾಂ ಪೂಜಯಿಷ್ಯಂತಿ ಶಿಷ್ಯಾ ಗುರುಮಿವ ಪ್ರಿಯಮ್ ॥ - ೮/೧೨೩

೩ ಅಹಂ ಚ ಪೂಜಯಿಷ್ಯೇ ತ್ವಾಂ ಸಮಿತ್ರಗಣಬಾಂಧವಮ್ ।
ಜೀವಿತಸ್ಯ ಪ್ರದಾತಾರಂ ಕೃತಜ್ಞಃ ಕೋ ನ ಪೂಜಯೇತ್ ॥ - ೮/೧೨೪

೪ ವೇದಿತವ್ಯಾನಿ ಮಿತ್ರಾಣಿ ಬೋದ್ಧವ್ಯಾಶ್ಚಾಪಿ ಶತ್ರವಃ ।
ಏತತ್ ಸುಸೂಕ್ಷ್ಮಂ ಲೋಕೇಽಸ್ಮಿನ್ ದೃಶ್ಯತೇ ಪ್ರಾಜ್ಞಸಮ್ಮತಮ್ ॥ - ೮/೧೩೦

೫ ನಾಸ್ತಿ ಜಾತ್ಯಾ ರಿಪುರ್ನಾಮ ಮಿತ್ರಂ ನಾಮ ನ ವಿದ್ಯತೇ ।
ಸಾಮರ್ಥ್ಯಯೋಗಾಜ್ಜಾಯಂತೇ ಮಿತ್ರಾಣಿ ರಿಪವಸ್ತಥಾ ॥ - ೮/೧೩೨

೬ ನಾಸ್ತಿ ಮೈತ್ರೀ ಸ್ಥಿರಾ ನಾಮ ನ ಚ ಧ್ರುವಮಸೌಹೃದಮ್ ।
ಅರ್ಥಯುಕ್ತ್ಯಾ ಹಿ ಜಾಯಂತೇ ಮಿತ್ರಾಣಿ ರಿಪವಸ್ತಥಾ ॥ - ೮/೧೩೪

೭ ಮಿತ್ರಂ ಚ ಶತ್ರುತಾಮೇತಿ ಕಸ್ಮಿಂಶ್ಚಿತ್ ಕಾಲಪರ್ಯಯೇ ।
ಶತ್ರುಶ್ಚ ಮಿತ್ರತಾಮೇತಿ ಸ್ವಾರ್ಥೋ ಹಿ ಬಲವತ್ತರಃ ॥ - ೮/೧೩೫

ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಆ ಸಂಧಾನ ಅನರ್ಥಕಾರಿಯೇ ಸರಿ. ಅಪಥ್ಯ ಆಹಾರದಂತೆ. [1]ಯಾರೂ ಯಾರಿಗೆ ಮಿತ್ರರೂ ಅಲ್ಲ, ಶತ್ರುವೂ ಅಲ್ಲ. ಒಬ್ಬರ ಪ್ರಯೋಜನದಿಂದ ಇನ್ನೊಬ್ಬರ ಪ್ರಯೋಜನ ಹಾನಿಗೆ ಒಳಗಾಗುತ್ತದೆ. ಪಳಗಿದ ಆನೆಗಳಿಂದಲೇ ಆನೆಗಳು ಬಂಧಿಸಲ್ಪಡುತ್ತವೆ!! [2]ತಮ್ಮ ಕಾರ್ಯವಾದ ಮೇಲೆ ಉಪಕಾರ ಮಾಡಿದವನನ್ನು ಯಾರೂ ನೋಡುವುದೇ ಇಲ್ಲ. ದಿವಾಕೀರ್ತಿ(ಬಲೆ ಹಾಕಿದವನ ಹೆಸರು) ಭಯಕ್ಕೆ ಒಳಗಾಗುವ ನೀನು ಆ ಸಮಯದಲ್ಲಿ(ಅವನು ಬರುವಾಗ) ಪಲಾಯನ ಮಾಡುವುದರಲ್ಲಿ ಮನಸ್ಸಿಟ್ಟಿರುವೆ. ನನ್ನನ್ನು ಹಿಡಿಯಲು ಶಕ್ತನಾಗುವುದಿಲ್ಲ. ಬಲೆಯ ಬಹುತೇಕ ದಾರಗಳನ್ನು ಕತ್ತರಿಸಿದ್ದೇನೆ. ಒಂದೇ ದಾರ ಉಳಿದಿದೆ. ಅದನ್ನೂ ಬೇಗನೇ ಕತ್ತರಿಸುತ್ತೇನೆ. ಲೋಮಶ! ಸಂತೋಷವಾಗಿರು'

ಹೀಗೆ ಇಬ್ಬರೂ (ಇಲಿ-ಬೆಕ್ಕು) ಮಾತನಾಡುತ್ತಿರುವಾಗ, ಆಪತ್ತಿಗೆ ಒಳಗಾಗಿರುವಾಗಲೇ ರಾತ್ರಿ ಕಳೆಯಿತು. ಲೋಮಶನಿಗೆ ಭಯ ಹೆಚ್ಚಾಯಿತು. ಬೆಳಗಾಗುವ ಸಮಯದಲ್ಲಿ ವಿಕಾರಿಯಾದ, ಕಪ್ಪು ಬಣ್ಣದ, ಕೆದರಿದ ಕೂದಲಿನ ಉಗ್ರನಂತಿರುವ, ಅಡ್ಡಾದಿಡ್ಡಿಯಾಗಿ ಬರುತ್ತಿದ್ದ ಕೈಯಲ್ಲಿ ಶಸ್ತ್ರ ಹಿಡಿದ ಚಂಡಾಲನು ಬಂದನು. ಅವನನ್ನು ನೋಡಿದ ಬೆಕ್ಕು ಇಲಿಗೆ 'ಈಗ ಏನು ಮಾಡುವೆ' ಎಂದಿತು. ಭಯಂಕರವಾಗಿ ಕಾಣುತ್ತಿದ್ದ ಅವನನ್ನು ನೋಡಿದ ಮುಂಗಸಿ ಹಾಗೂ ಗೂಬೆಗಳು ನಿರಾಶರಾದವು. ಇವು ತಾವು ಎಷ್ಟೇ ಬಲಿಷ್ಠವಾಗಿದ್ದರೂ, ಒಗ್ಗಟ್ಟಿನಿಂದ ಕೂಡಿದ್ದರೂ, ಇಲಿಯ ಉಪಾಯದಿಂದಾಗಿ ಇಲಿ-ಬೆಕ್ಕುಗಳನ್ನು ಆಕ್ರಮಿಸಲು ಅಸಮರ್ಥವಾದವು. ಆದ್ದರಿಂದ ತಮ್ಮ ಆ ವಾಸಸ್ಥಾನಗಳಿಗೆ ತೆರಳಿದವು.

ಇಲಿಯು ಉಳಿದ ಒಂದು ದಾರವನ್ನು ಕತ್ತರಿಸಲು ಬೆಕ್ಕು ಬಿಡುಗಡೆಯಾಗಿ ಮರದ ಕಡೆ ಓಡಿತು. ಪಲಿತನೂ (ಇಲಿ) ಬೆಕ್ಕಿನ ಭಯದಿಂದ ಮುಕ್ತವಾಗಿ ಮರದ ಬುಡದ ಬಿಲವನ್ನು ಸೇರಿಕೊಂಡಿತು. ಬೆಕ್ಕು ಮರದ ಮೇಲೇರಿತು. ಚಂಡಾಲನೂ ಬಲೆಯೆಲ್ಲ ನೋಡಿದ, ಏನೂ ಸಿಗದ ತಾನು ನಿರಾಶನಾಗಿ ತನ್ನ ಮನೆಗೆ ಹೊರಟನು.

ಇತ್ತ ಬೆಕ್ಕು ತನ್ನ ದುರ್ಲಭವಾದ ಪ್ರಾಣವನ್ನು ಉಳಿಸಿಕೊಂಡು ಬಿಲದಲ್ಲಿದ್ದ ಪಲಿತನಿಗೆ 'ಪಲಿತನೇ! ಭಯಗ್ರಸ್ತನಾದ ನೀನು ಏನೂ ಮಾತನಾಡದೆ ಹಾರಿಹೋದೆ. ನಾನು ನಿನಗೆ ಕೃತಜ್ಞ, ನಿನಗೂ ಒಳ್ಳೆಯದನ್ನೇ ಮಾಡಿದ್ದೇನೆ. ನನ್ನ ಬಗ್ಗೆ ನಿನಗೆ ಸಂಶಯವಿಲ್ಲ ತಾನೇ? ಮಿತ್ರನೇ! ನನ್ನ ಮೇಲೆ ವಿಶ್ವಾಸವಿಟ್ಟು ಪ್ರಾಣದಾನ ಮಾಡಿ, ಈಗ ಸುಖವಾಗಿರುವ ಸಮಯದಲ್ಲಿ ನನ್ನ ಬಳಿ ಏಕೆ ಬರುವುದಿಲ್ಲ?' ಮೈತ್ರಿಯನ್ನು ಮಾಡಿಕೊಂಡು ಧರ್ಮವನ್ನು ಅನುಸರಿಸದವನು

---

೧ ನ ಕಶ್ಚಿತ್ ಕಸ್ಯಚಿನ್ಮಿತ್ರಂ ನ ಕಶ್ಚಿತ್ ಕಸ್ಯಚಿತ್ ರಿಪುಃ।
ಅರ್ಥೈರರ್ಥಾ ನಿಬಧ್ಯಂತೇ ಗಜೈರ್ವನಗಜಾ ಇವ॥ - ೮/೧೦೪

೨ ನ ಹಿ ಕಶ್ಚಿತ್ಕೃತೇ ಕಾರ್ಯೇ ಕರ್ತಾರಂ ಸಮವೇಕ್ಷತೇ।
ತಸ್ಮಾತ್ ಸರ್ವಾಣಿ ಕಾರ್ಯಾಣಿ ಸಾವಶೇಷಾಣಿ ಕಾರಯೇತ್ ॥ - ೮/೧೦೫

ದುರ್ಮತಿಯೇ ಸರಿ[1]. ಇಂತಹವನು ಆಪತ್ಕಾಲಗಳಲ್ಲಿ ಮಿತ್ರರನ್ನು ಪಡೆಯಲಾರ. ನೀನು ಈಗ ನನ್ನೊಡನೆ ಊಟಮಾಡು. ನೀನು ನಿನ್ನ ಸಾಮರ್ಥ್ಯದ ಮೇಲೆ ನನ್ನನ್ನು ಮಿತ್ರನಾಗಿ ಪಡೆದಿರುವೆ. [2]ಗುರುವನ್ನು ಪೂಜಿಸುವ ಶಿಷ್ಯನಂತೆ, ನನ್ನ ಮಿತ್ರರು, ಬಾಂಧವರೆಲ್ಲ ನಿನ್ನನ್ನು ಪೂಜಿಸುತ್ತಾರೆ. ಕೃತಜ್ಞನಾದ ಯಾರು ತಾನೇ ಪ್ರಾಣ ಉಳಿಸಿದವನನ್ನು ಪೂಜಿಸುವುದಿಲ್ಲ? [3]ನೀನು ನನ್ನ ಶರೀರ, ಮನೆ, ಸಕಲ ಸಂಪತ್ತುಗಳ ಒಡೆಯನಾಗು. ನನಗೂ ಶಾಸಕನಾಗು. ನನ್ನ ಮಂತ್ರಿಯಾಗು. ತಂದೆಯು ಮಗನನ್ನು ಆದೇಶಿಸುವಂತೆ ನನ್ನನ್ನು ಶಾಸನ ಮಾಡು. ನನ್ನಿಂದ ನಿನಗೆ ಭಯವಿಲ್ಲ ನನ್ನ ಪ್ರಾಣದ ಮೇಲೆ ಆಣೆ ಇಡುವೆ ನಂಬು. ನೀನು ಬುದ್ಧಿಯಲ್ಲಿ ಶುಕ್ರಾಚಾರ್ಯರಂತೆ. ನಾನು ಬಲದಿಂದ ಅಧಿಕ. ನಿನ್ನ ನೀತಿಯ ಸಹಾಯ ಹೊಂದಿದವನು ಜಯ ಹೊಂದುವನು.

ಹೀಗೆ ಬೆಕ್ಕಿನ ಮಾತು ಕೇಳಿದ ಆತ್ಯಂತಿಕ ಸತ್ಯವನ್ನು ಅರಿತ ಇಲಿಯು ಬೆಕ್ಕಿಗೆ 'ನೀನು ಹೇಳಿದ್ದು ಕೇಳಿದ್ದೇನೆ. ನನ್ನ ಮಾತನ್ನೂ ಕೇಳು. ಮಿತ್ರರು, ಶತ್ರುಗಳೂ ಯಾರೆಂದು ತಿಳಿಯಬೇಕು. ಇದು ಸೂಕ್ಷ್ಮ ವಿಷಯ, ಜ್ಞಾನಿಸಮ್ಮತವೂ ಹೌದು[4]. ಹುಟ್ಟಿನಿಂದ ಯಾರೂ ಮಿತ್ರರೂ ಅಲ್ಲ, ಶತ್ರುಗಳೂ ಅಲ್ಲ[5]. ಅವರವರ ಸಾಮರ್ಥ್ಯಕ್ಕೆ ಅನುಗುಣವಾಗಿ ಮಿತ್ರರಾಗುತ್ತಾರೆ, ಶತ್ರುಗಳಾಗುತ್ತಾರೆ. ಮೈತ್ರಿ ಹಾಗೂ ಶತ್ರುಭಾವ ಯಾವುದೂ ಸ್ಥಿರವಲ್ಲ, ಶಾಶ್ವತವಲ್ಲ, ಪರಸ್ಪರ ಇದೆಲ್ಲ ಪ್ರಯೋಜನದ ಮೇಲೆ ನಿಂತಿದೆ[6].

[7]ಕಾಲಕ್ಕೆ ತಕ್ಕಂತೆ ಮಿತ್ರ ಶತ್ರುವಾಗಬಹುದು, ಮತ್ತೊಂದು ಕಾಲದಲ್ಲಿ ಮಿತ್ರನಾಗಬಹುದು. ಸ್ವಾರ್ಥವೇ ಹೆಚ್ಚು ಬಲಶಾಲಿ. ತನ್ನ ಹಿತವು ಹೇಗೆ ಆಗುತ್ತದೆ ಎಂದು ವಿಮರ್ಶಿಸದೆ ಯಾರು ಮಿತ್ರರಲ್ಲಿ ವಿಶ್ವಾಸವಿಡುವುದಿಲ್ಲವೋ, ಶತ್ರುಗಳಲ್ಲಿ ವಿಶ್ವಾಸಮಾಡುವರೋ, ಅವರು

---

೧ ಕೃತ್ವಾ ಹಿ ಪೂರ್ವಂ ಮಿತ್ರಾಣಿ ಯಃ ಪಶ್ಚಾನ್ನಾನುತಿಷ್ಠತಿ ।
ನ ಸ ಮಿತ್ರಾಣಿ ಲಭತೇ ಕೃಚ್ಛ್ರಾಸ್ವಾಪತ್ಸು ದುರ್ಮತಿಃ ॥ - ೮/೧೨೧
೨ ಯಾನಿ ಮೇ ಸಂತಿ ಮಿತ್ರಾಣಿ ಯೇ ಚ ಮೇ ಸಂತಿ ಬಾಂಧವಾಃ ।
ಸರ್ವೇ ತ್ವಾಂ ಪೂಜಯಿಷ್ಯಂತಿ ಶಿಷ್ಯಾ ಗುರುಮಿವ ಪ್ರಿಯಮ್ ॥ - ೮/೧೨೩
೩ ಅಹಂ ಚ ಪೂಜಯಿಷ್ಯೇ ತ್ವಾಂ ಸಮಿತ್ರಗಣಬಾಂಧವಮ್ ।
ಜೀವಿತಸ್ಯ ಪ್ರದಾತಾರಂ ಕೃತಜ್ಞಃ ಕೋ ನ ಪೂಜಯೇತ್ ॥ - ೮/೧೨೪
೪ ವೇದಿತವ್ಯಾನಿ ಮಿತ್ರಾಣಿ ಬೋದ್ಧವ್ಯಾಶ್ಚಾಪಿ ಶತ್ರವಃ ।
ಏತತ್ ಸುಸೂಕ್ಷ್ಮಂ ಲೋಕೇಽಸ್ಮಿನ್ ದೃಶ್ಯತೇ ಪ್ರಾಜ್ಞಸಮ್ಮತಮ್ ॥ - ೮/೧೩೦
೫ ನಾಸ್ತಿ ಜಾತ್ಯಾ ರಿಪುರ್ನಾಮ ಮಿತ್ರಂ ನಾಮ ನ ವಿದ್ಯತೇ ।
ಸಾಮರ್ಥ್ಯಯೋಗಾಜ್ಜಾಯಂತೇ ಮಿತ್ರಾಣಿ ರಿಪವಸ್ತಥಾ ॥ - ೮/೧೩೨
೬ ನಾಸ್ತಿ ಮೈತ್ರೀ ಸ್ಥಿರಾ ನಾಮ ನ ಚ ಧ್ರುವಮಸೌಹೃದಮ್ ।
ಅರ್ಥಯುಕ್ತ್ಯಾ ಹಿ ಜಾಯಂತೇ ಮಿತ್ರಾಣಿ ರಿಪವಸ್ತಥಾ ॥ - ೮/೧೩೪
೭ ಮಿತ್ರಂ ಚ ಶತ್ರುತಾಮೇತಿ ಕಸ್ಮಿಂಶ್ಚಿತ್ ಕಾಲಪರ್ಯಯೇ ।
ಶತ್ರುಶ್ಚ ಮಿತ್ರತಾಮೇತಿ ಸ್ವಾರ್ಥೋ ಹಿ ಬಲವತ್ತರಃ ॥ - ೮/೧೩೫

ನಾಶವಾಗುತ್ತಾರೆ[1]. ತನ್ನ ಹಿತವನ್ನರಿಯದೆ ಮಿತ್ರ, ಶತ್ರುವಿನ ಅಭಿಪ್ರಾಯಗಳಿಗೆ ಯಾರು ಬೆಲೆ ಕೊಡುವರೋ, ಅವರ ಬುದ್ಧಿಯೂ ಅಸ್ಥಿರವೇ ಸರಿ[2]. ವಿಶ್ವಾಸರಹಿತನನ್ನು ನಂಬಬಾರದು. ವಿಶ್ವಾವಿರುವವನನ್ನೂ ನಂಬಬಾರದು[3]. ವಿಶ್ವಾಸವಿಟ್ಟ ಕಾರಣದಿಂದ ಉಂಟಾಗುವ ಭಯವು (ತೊಂದರೆಯು) ಜೀವನದ ಬೇರುಗಳನ್ನೇ ಕತ್ತರಿಸುತ್ತವೆ. ತಂದೆ-ತಾಯಿ, ಮಕ್ಕಳು, ಸೋದರಮಾವ, ಸೋದರಿಯ ಮಕ್ಕಳು, ಸಂಬಂಧಿಗಳು, ಬಾಂಧವರು, ಇವರೆಲ್ಲರನ್ನು ಸ್ವಹಿತಕ್ಕಾಗಿ ಅನುಗುಣವಾಗಿಯೇ ಕಾಣುತ್ತೇವೆ.

ಬಿಡುಗಡೆಯಾದ ನಂತರವೂ ನಿನ್ನ ಸುಖಕ್ಕೆ ಅನುಕೂಲವಾಗುವ ಕೆಲಸವನ್ನು (ನನ್ನನ್ನು ತಿನ್ನುವ) ಕೆಲಸ ಮಾಡಲು ಬಯಸುತ್ತಿರುವೆ. ಇಂತಹ ನಿನ್ನನ್ನು ವಂಚನೆಯಲ್ಲಿ ಮನಸ್ಸಿಟ್ಟವನು ಎಂದು ನಾನು ಬಗೆಯುತ್ತೇನೆ. ಇದರಲ್ಲಿ ಸಂಶಯವಿಲ್ಲ.

ಇದೇ ವಲಯದಲ್ಲಿ ಇದ್ದ ನೀನು (ಬೇಡನು ಇಟ್ಟ ಮಾಂಸವನ್ನು ನೋಡಿ)ಮರದಿಂದ ಇಳಿದೆ. ಪ್ರಲೋಭನೆಗೆ ಒಳಗಾಗಿ, ನಿನ್ನ ಚಾಪಲ್ಯ ನಿನ್ನನ್ನು ಬಲೆಯಲ್ಲಿ ಸಿಕ್ಕಿಸಿತು. ಆಮೇಲೆ ಹೊರಗೆ ಹೋಗುವ ರೀತಿ ತಿಳಿಯಲಿಲ್ಲ. ಚಾಪಲ್ಯಸ್ವಭಾವದವನಿಗೆ ತನ್ನ ಹಿತದ ಪರಿವೆಯೂ ಇರದು. ಪರಹಿತದ ಕಾಳಜಿ ಎಲ್ಲಿಂದ ಬಂತು? 'ನೀನು ನನಗೆ ಪ್ರಿಯ' ಎಂದು ಮಧುರ ಮಾತಾಡುವೆ. ಅದೆಲ್ಲ ಸುಳ್ಳು. ಕಾರಣ ಹೇಳುವೆ ಕೇಳು. ಈ ಲೋಕವು ಸ್ವಪ್ರಯೋಜನವನ್ನೇ ಬಯಸುತ್ತದೆ. ಯಾರೂ ಯಾರಿಗೂ ಪ್ರಿಯರಲ್ಲ. [4]ಒಬ್ಬನು ದಾನದಿಂದ ಪ್ರಿಯನಾಗುತ್ತಾನೆ. ಮತ್ತೊಬ್ಬನು ಒಳ್ಳೆಯ ಮಾತುಗಳಿಂದ ಪ್ರಿಯನಾಗುತ್ತಾನೆ. ಇನ್ನೊಬ್ಬನು ತನ್ನ ಕೆಲಸಕ್ಕಾಗಿ ಮಾಡಿದ ಮಂತ್ರ ಹೋಮ ಜಪಗಳಿಂದ ಪ್ರಿಯನಾಗುತ್ತಾನೆ. ನಮ್ಮಿಬ್ಬರಲ್ಲೂ ಯಾವುದೋ ಪ್ರಯೋಜನಕ್ಕಾಗಿ ಹುಟ್ಟಿದ ಪ್ರೀತಿ, ಆ ಪ್ರಯೋಜನ ನೆರವೇರಿದ ಮೇಲೆ ಆ ಪ್ರೀತಿ ಇಲ್ಲವಾಯಿತು. ಈಗ ನಾನು ನಿನಗೆ ಪ್ರಿಯನಾಗಲು ನನ್ನನ್ನು ತಿನ್ನುವ ಉದ್ದೇಶಬಿಟ್ಟರೆ ಬೇರಾವ ಕಾರಣ ಹೇಳು. ಈ ವಿಷಯದಲ್ಲಿ ನಾನು ಬುದ್ಧಿವಂತ. ಆದ್ದರಿಂದ ಸಂಧಿ, ವಿಗ್ರಹಗಳಲ್ಲಿ ಕುಶಲವಾದ ನಾನು ನನ್ನ ಸ್ವಾರ್ಥತ್ಯಾಗ ಮಾಡುವುದಿಲ್ಲ. ನಮ್ಮ ರೂಪ ನಿಲುವುಗಳು ಮೋಡಗಳ ಆಕಾರಗಳಂತೆ ಪ್ರತಿಕ್ಷಣ ಬದಲಾಗುತ್ತಿರುತ್ತವೆ. ನೀನು ನನ್ನ ಅತ್ಯಂತ ಶತ್ರು. ಆದರೆ

---

೧ ಯೋ ವಿಶ್ವಸಿತಿ ಮಿತ್ರೇಷು ನ ಚಾಶ್ವಸಿತಿ ಶತ್ರುಷು।
ಅರ್ಥಯುಕ್ತಿಮವಿಜ್ಞಾಯ ಚಲಿತಂ ತಸ್ಯ ಜೀವಿತಮ್॥ – ೮/೧೩೬

೨ ಅರ್ಥಯುಕ್ತಿಮವಿಜ್ಞಾಯ ಯಃ ಶುಭೇ ಕುರುತೇ ಮತಿಮ್।
ಮಿತ್ರೇ ವಾ ಯದಿ ವಾ ಶತ್ರೌ ತಸ್ಯಾಪಿ ಚಲಿತಾ ಮತಿಃ॥ – ೮/೧೩೭

೩. ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇಽಪಿ ನ ವಿಶ್ವಸೇತ್।
ವಿಶ್ವಾಸಾದ್ಭಯಮುತ್ಪನ್ನಂ ಮೂಲಾನ್ಯಪಿ ನಿಕೃಂತತಿ॥ – ೮/೧೩೮

೪ ಪ್ರಿಯೋ ಭವತಿ ದಾನೇನ ಪ್ರಿಯವಾದೇನ ಚಾಪರಃ।
ಮಂತ್ರಹೋಮಜಪ್ಯೈರನ್ಯಃ ಕಾರ್ಯಾರ್ಥಂ ಪ್ರೀಯತೇ ಜನಃ॥ – ೮/೧೪೮

ನನ್ನ ಸಾಮರ್ಥ್ಯದಿಂದಾಗಿ ಮಿತ್ರನಾಗಿದ್ದೆ. ನಿನ್ನ ಕೆಲಸ ಆಯಿತು. ಈಗ ನಿನ್ನ ಸ್ವಭಾವ ಮತ್ತೆ ಶತ್ರುತ್ವದ ಕಡೆ ತಿರುಗಿದೆ. ಹೀಗೆಲ್ಲ ಶಾಸ್ತ್ರ(ನೀತಿ)ಗಳನ್ನು ತಿಳಿದ ನಾನು ಮತ್ತೆ ನೀನು ರಚಿಸಿರುವ ಬಲೆಗೆ ಹೇಗೆ ತಾನೆ ಬಿದ್ದೇನು? (ಪ್ರವೇಶಿಸಿಯೇನು) ನೀನೇ ಹೇಳು. ನಾವಿಬ್ಬರೂ ಪರಸ್ಪರರ ಸಾಮರ್ಥ್ಯದಿಂದ (ಉಪಕಾರದಿಂದ) ಬಿಡುಗಡೆಯಾಗಿದ್ದೇವೆ. ಪರಸ್ಪರ ಉಪಕಾರವಾದ ಮೇಲೆ ಮತ್ತೆ ಸಮಾಗಮವಿಲ್ಲ.

ಎಲೈ ಸೌಮ್ಯನೇ! ಈಗ ನೀನು ಕೃತಾರ್ಥ. ನಾನೂ ಕೃತಾರ್ಥ. ನನ್ನನ್ನು ತಿನ್ನುವುದನ್ನು ಬಿಟ್ಟರೆ, ನನ್ನಿಂದ ನಿನಗೆ ಬೇರೇನೂ ಪ್ರಯೋಜನವಿಲ್ಲ. ನಾನು ನಿನ್ನ ಆಹಾರ[೧]. ನಾನು ದುರ್ಬಲ. ನೀನು ಬಲಶಾಲಿ, ನಾವಿಬ್ಬರೂ ಸಮರಲ್ಲ. ವಿಷಮಬಲರು ಹೀಗಿರುವಾಗ ನಮ್ಮಿಬ್ಬರ ಮಧ್ಯ ಮತ್ತೆ ಸಂಧಿಯ ಎಲ್ಲಿಯ ಸಂದರ್ಭ? ನಿನ್ನ ಬುದ್ಧಿ ನನಗೆ ಗೊತ್ತು. ನನ್ನನ್ನು ಆಹಾರವಾಗಿ ಪಡೆಯಲು ಹೊಂಚು ಹಾಕುತ್ತಿರುವೆ. ಇದರಲ್ಲಿ ಸಂಶಯವೇ ಇಲ್ಲ. ನಿನಗೀಗ ಹಸಿವಾಗಿದೆ. ನೀನು ಕುಯುಕ್ತಿಯನ್ನು ಮಾಡಿ ನನ್ನನ್ನು ಆಹಾರವನ್ನಾಗಿಸಿಕೊಳ್ಳಲು ಬಯಸಿರುವೆ. ನಿನ್ನ ಬಂಧುಬಾಂಧವರನ್ನು ನನ್ನ ಸೇವೆಗೆ ನಿಯೋಜಿಸುವ ವಿಚಾರವೂ ಸರಿಯಲ್ಲ. ನಿನ್ನೊಡನೆ ಇರುವ ನನ್ನನ್ನು ನೋಡಿ, ನಿನ್ನ ಪತ್ನೀಪುತ್ರಾದಿಗಳು ನನ್ನನ್ನೂ ತಿನ್ನುವುದಿಲ್ಲವೇ? ಆದ್ದರಿಂದ ನಿನ್ನೊಡನೆ ಸಮಾಗಮ ಆಗದು. ನನ್ನ ಉಪಕಾರ ನೆನೆಯುವುದೇ ಆದರೆ ನನ್ನ ಶ್ರೇಯಸ್ಸಿಗೆ ಪ್ರಾರ್ಥಿಸು. 'ಕ್ಲೇಶಕ್ಕೆ ಒಳಗಾಗಿರುವ, ಹಸಿದಿರುವ, ಆಹಾರವನ್ನು ಹುಡುಕುತ್ತಿರುವ ಶತ್ರುವಿಗೆ ಆಹಾರವಾಗಿ ಯಾವ ಪ್ರಾಜ್ಞನು ತಾನೇ ಅವನ ಬಳಿ ಹೋದಾನು? ನಿನಗೆ ಒಳ್ಳೆಯದಾಗಲಿ, ಹೋಗುವೆ. ನೀನು ದೂರದಲ್ಲಿದ್ದರೂ, ನನಗೆ ಉದ್ವೇಗ ಉಂಟಾಗುತ್ತದೆ. [೨]ಬಲಿಷ್ಠರ ಹತ್ತಿರವಿರುವುದೂ ಹಿತಸಾಧಕವಲ್ಲ. ಅವರು ಪ್ರಶಾಂತಸ್ವಭಾವರಾದವರೂ ನಾನು ಸದಾ ಹೆದರುತ್ತೇನೆ. ನನ್ನ ಸಂಪತ್ತಿನಿಂದ ಏನಾದರೂ ಆಗಬೇಕಿದ್ದರೆ ಹೇಳು, ಕೊಡುವೆ. ಎಂದೂ ನನ್ನನ್ನು ನಿನಗೆ ಅರ್ಪಿಸಲಾರೆ. [೩]ಏಕೆಂದರೆ ತನ್ನ ರಕ್ಷಣೆಗಾಗಿ ಸಂತತಿ, ರಾಜ್ಯ, ಧನ ಎಲ್ಲವನ್ನೂ ತ್ಯಜಿಸಬೇಕಾಗುತ್ತದೆ. ಎಲ್ಲವನ್ನೂ ಬಿಟ್ಟು ತಾನೇ ತನ್ನನ್ನು ರಕ್ಷಿಸಿಕೊಳ್ಳಬೇಕು ತನ್ನ ರಕ್ಷಣೆಗಾಗಿ ಹೆಂಡತಿ ಮಕ್ಕಳನ್ನೂ ಬಳಸಿಕೊಳ್ಳಬೇಕು.

ಹೀಗೆ ತೆಗಳಿಕೆಗೆ ಒಳಗಾದ ಬೆಕ್ಕು ನಾಚಿ, ಇಲಿಗೆ ಉತ್ತರಿಸಿತು. ನಡವಳಿಕೆಯ ತತ್ತ್ವಗಳನ್ನು ಹೇಳಿದ ನಿನ್ನ ಪ್ರಜ್ಞೆಯನ್ನು ಒಪ್ಪುತ್ತೇನೆ. ನನ್ನನ್ನು ದಯವಿಟ್ಟು ತಪ್ಪಾಗಿ ಭಾವಿಸಬೇಡ.

---

೧ ಅಹಮನ್ನಂ ಭವಾನ್ ಭೋಕ್ತಾ ದುರ್ಬಲೋಹಂ ಭವಾನ್ ಬಲೀ।
ನಾವಯೋರ್ವಿದ್ಯತೇ ಸಂಧಿರ್ನಿಯುಕ್ತೇ ವಿಷಮೇ ಬಲೇ ॥ - ೮/೧೬೦

೨ ಬಲವತ್ಸನ್ನಿಕರ್ಷೋ ಹಿ ನ ಕದಾಚಿತ್ ಪ್ರಶಸ್ಯತೇ।
ಪ್ರಶಾಂತಾದಪಿ ಮೇ ಪ್ರಾಜ್ಞ ಭೇತವ್ಯಂ ಬಲಿನಃ ಸದಾ ॥ - ೮/೧೬೯

೩ ಆತ್ಮಾರ್ಥೇ ಸಂತತಿಸ್ತ್ಯಾಜ್ಯಾ ರಾಜ್ಯಂ ರತ್ನಂ ಧನಂ ತಥಾ।
ಅಪಿ ಸರ್ವಸ್ವಮುತ್ಸೃಜ್ಯ ರಕ್ಷೇದಾತ್ಮಾನಮಾತ್ಮನಾ ॥ - ೮/೧೭೧

ನೀನು ನನಗೆ ಮಾಡಿದ ಪ್ರಾಣದಾನದಿಂದ ನನಗೆ ನಿನ್ನ ಬಗ್ಗೆ ಸೌಹಾರ್ದ ಹುಟ್ಟಿದೆ. ನಾನೂ [೧]ಧರ್ಮಜ್ಞ, ಗುಣಜ್ಞ ಹಾಗೂ ಕೃತಜ್ಞ (ಕೃತಘ್ನನಲ್ಲ). ನಿನ್ನಂತಹ ಮಿತ್ರರ ಬಗ್ಗೆ ವಾತ್ಸಲ್ಯವೂ ಇದೆ. ಆದ್ದರಿಂದ ನನ್ನನ್ನು ನಿಂದಿಸಬೇಡ. ಹಾಗೆ ನಿಂದಿಸಿದಲ್ಲಿ ನಾನು ನನ್ನ ಬಂಧುಗಳೊಡನೆ ಪ್ರಾಣತ್ಯಾಗ ಮಾಡುವೆ.

ಹೀಗೆ ಹೇಳಿದ ಬೆಕ್ಕಿಗೆ ಇಲಿಯು ಗಂಭೀರವಾಗಿ ಉತ್ತರಿಸಿತು. ನೀನು ಸಾಧುವೇ! ನಿನ್ನ ಅಭಿಪ್ರಾಯವಾಯಿತು. ಸಂತೋಷ, ಆದರೆ ನಿನ್ನನ್ನು ನಾನು ನಂಬೆನು. ಪ್ರಶಂಸೆ ಅಥವಾ ಐಶ್ವರ್ಯದಿಂದ ನಾನು ವಶವಾಗೆನು. ಪ್ರಾಜ್ಞರು ನಿಷ್ಕಾರಣವಾಗಿ ಶತ್ರುಗಳಿಗೆ ವಶರಾಗುವುದಿಲ್ಲ. ಈ ಸಂಬಂಧವಾಗಿ **ಶುಕ್ರಾಚಾರ್ಯರ** ಎರಡು ಮಾತುಗಳಿವೆ ಕೇಳು.[೨]'

ಶತ್ರು ಮತ್ತು ತಾನು ಇಬ್ಬರಿಗೂ ಆಗಬೇಕಾದ ಕೆಲಸಕ್ಕಾಗಿ ಬಲಶಾಲಿಯಾದ ಶತ್ರುವಿನ ಜೊತೆ ಸಂಧಾನವನ್ನು ಮಾಡಿಕೊಂಡು ಉಪಾಯದಿಂದ ಪೂರ್ಣ ಎಚ್ಚರದಿಂದ ನಡೆದುಕೊಳ್ಳಬೇಕು. ಕೆಲಸವಾದ ಮೇಲೆ ನಂಬಬಾರದು. ಆದ್ದರಿಂದ ಎಲ್ಲ ಅವಸ್ಥೆಗಳಲ್ಲಿ ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳಬೇಕು. ಬದುಕಿ ಉಳಿದವನಿಗೆ ಸಂಪತ್ತು ಸಂತತಿ ಎಲ್ಲವೂ (ಬಂದೇ) ಬರುತ್ತವೆ.' **ಅತ್ಯಂತ ಅವಿಶ್ವಾಸ ಇದು ನೀತಿಶಾಸ್ತ್ರಗಳ ಸಾರ. ಆದ್ದರಿಂದ ಜನರ ಮೇಲೆ ಅವಿಶ್ವಾಸ ಅತ್ಯಂತ ಹಿತಕರ**[೩].

**ನಂಬಿದ ದುರ್ಬಲರೂ ಶತ್ರುಗಳಿಂದ ಹತರಾಗುವುದಿಲ್ಲ, ನಂಬುವ ಬಲಶಾಲಿಗಳೂ ದುರ್ಬಲರಿಂದ ಹತರಾಗುತ್ತಾರೆ.**

ಬೆಕ್ಕೇ! 'ನಾನು ನಿನ್ನಂತಹವರಿಂದ ಯಾವಾಗಲೂ ರಕ್ಷಿಸಿಕೊಳ್ಳಬೇಕು. ನೀನೂ ಕೂಡಾ ಹುಟ್ಟಿನಿಂದಲೇ ದುಷ್ಟನಾದ ಚಂಡಾಲನಿಂದ ರಕ್ಷಿಸಿಕೊಳ್ಳಬೇಕು. ಇಲಿ ಹೀಗೆ ಹೇಳುತ್ತಿರುವಾಗಲೇ ಬೆಕ್ಕು ಭಯಂಕರವಾದ ಚಂಡಾಲನ ಭಯಕ್ಕೊಳಗಾಗಿ ಸಂವಾದವನ್ನು ಬಿಟ್ಟು ಅಲ್ಲಿಂದ ಹೊರಟುಹೋಯಿತು. ಪ್ರಾಜ್ಞನಾದ ಪಲಿತನು ಕೂಡಾ ಬೇರೆ ಬಿಲಕ್ಕೆ ಹೋಯಿತು. ಹೀಗೆ ಮಹಾಬುದ್ಧಿಶಾಲಿಯಾದ ಇಲಿಯಿಂದ ಬಲಶಾಲಿಗಳಾದ ಬಹಳ ಶತ್ರುಗಳು (ಮುಂಗಸಿ,

---

೧ ಧರ್ಮಜ್ಞೋಽಸ್ಮಿ ಗುಣಜ್ಞೋಽಸ್ಮಿ ಕೃತಜ್ಞೋಽಸ್ಮಿ ವಿಶೇಷತಃ।
ಮಿತ್ರೇಷು ವತ್ಸಲಶ್ಚಾಸ್ಮಿ ತ್ವದ್ವಿಧೇಷು ವಿಶೇಷತಃ ॥
ತನ್ಮಾಮೇವಂಗತೇ ಸಾಧೋ ನ ಯಾವಯಿತುಮರ್ಹಸಿ। (ಮಾಂ ಶಂಕಿತುಮರ್ಹಸಿ)।
ತ್ವಯಾ ಹಿ ಯಾಚ್ಯಮಾನೋಽಹಂ ಪ್ರಾಣಾನ್ ಜಹ್ಯಾಂ ಸಬಾಂಧವಃ ॥ - ೮/೧೭೯,೧೮೦

೨ ಶತ್ರು ಸಾಧಾರಣೇ ಕೃತ್ಯೇ ಕೃತ್ವಾ ಸಂಧಿಂ ಬಲೀಯಸಾ।
ಸಮಾಹಿತಶ್ಚರೇತ್ ಯುಕ್ತ್ಯಾ ಕೃತಾರ್ಥಶ್ಚ ನ ವಿಶ್ವಸೇತ್ ॥ - ೮/೧೮೫
ತಸ್ಮಾತ್ಸರ್ವಾಸ್ವವಸ್ಥಾಸು ರಕ್ಷೇಜ್ಜೀವಿತಮಾತ್ಮನಃ।
ದ್ರವ್ಯಾಣಿ ಸಂತತಿಶ್ಚೈವ ಸರ್ವಂ ಭವತಿ ಜೀವತಃ ॥ - ೮/೧೮೬

೩. ನೃಷು ತಸ್ಮಾದವಿಶ್ವಾಸಃ ಪುಷ್ಕಲಂ ಹಿತಮಾತ್ಮನಃ ॥ - ೧೮/೧೮೭

ಗೂಬೆ, ಬೆಕ್ಕು ಚಂಡಾಲ) ವಂಚಿತರಾದರು.

ಪಂಡಿತನು ಸಮರ್ಥನಾದ ಶತ್ರುವಿನೊಂದಿಗೆ ಕೂಡಾ ಸಂಧಾನ ಮಾಡಿಕೊಳ್ಳಬೇಕು. ಇಲಿ ಬೆಕ್ಕುಗಳು ಪರಸ್ಪರ ಅವಲಂಬನೆಯಿಂದ ಬಿಡುಗಡೆ ಹೊಂದಿದರು.

ರಾಜನ್! ಹೀಗೆ ಕ್ಷತ್ರಧರ್ಮದ ಮಾರ್ಗವನ್ನು ತೋರಿಸಿದ್ದೇನೆ.

(ಇಲಿ, ಬೆಕ್ಕುಗಳು) ಪರಸ್ಪರ ಬಹಳವಾಗಿ ಪ್ರೀತಿಸಿದರೂ, ಇಬ್ಬರಿಗೂ ಪರಸ್ಪರ ವಂಚಿಸುವ ಬುದ್ಧಿಯೇ ಇತ್ತು. ಅಲ್ಲೂ ಪ್ರಾಜ್ಞನು ಯೋಗ್ಯ ಬುದ್ಧಿಬಲದಿಂದ ವಂಚಿಸುತ್ತಾನೆ. ಅವನೂ ಪ್ರಮಾದದಿಂದ (ಅಜಾಗರೂಕತೆಯಿಂದ) ಅಜ್ಞಾನಿಗಳಿಂದ ವಂಚಿಸಲ್ಪಡುತ್ತಾನೆ. ಆದ್ದರಿಂದ ಹೆದರಿದವನೂ ಹೆದರದವನಂತೆ, ವಿಶ್ವಾಸವಿಲ್ಲದವನು ವಿಶ್ವಾಸವಿರುವವನಂತೆ ಎಚ್ಚರಿಕೆಯಿಂದ ವ್ಯವಹರಿಸಬೇಕು. ಜಾಗರೂಕನು ದಾರಿ ತಪ್ಪುವುದಿಲ್ಲ, ಅಜಾಗರೂಕನಾಗಿ ದಾರಿ ತಪ್ಪಿದರೆ ನಾಶವಾಗುತ್ತಾನೆ. ಧರ್ಮರಾಜನೇ! ಕಾಲಕ್ಕನುಸಾರವಾಗಿ ಶತ್ರುವಿನೊಡನೆ ಸಂಧಿಯನ್ನು ಮಿತ್ರನೊಡನೆ ಕಲಹವನ್ನೂ ಮಾಡಬೇಕಾಗುತ್ತದೆ. ಇದು ಚಿರಂತನ ಸತ್ಯ. ಹೆದರಿದವನಂತೆ ವ್ಯವಸ್ಥೆಗಳನ್ನು ಮಾಡಬೇಕು. ಭಯದಿಂದ ಜಾಗರೂಕತೆ ಇರುವ ಉದ್ಯೋಗಶೀಲವಾದ ಬುದ್ಧಿ ಹುಟ್ಟುತ್ತದೆ. ಹೆದರಿದವನಿಗೆ(ಜಾಗರೂಕನಾಗಿರುವುದರಿಂದ) ಅತಿ ಆತ್ಮವಿಶ್ವಾಸದಿಂದ ಬಹಳ ಭಯಕ್ಕೆ (ಆಪತ್ತಿಗೆ) ಗುರಿಯಾಗುತ್ತಾನೆ. ಎಚ್ಚರವಿಲ್ಲದವರಿಗೆ ಸಲಹೆ ವ್ಯರ್ಥ. ಎಚ್ಚರವಿರುವವನು ಮಾರ್ಗದರ್ಶಕರ ಬಳಿ ತಾನೇ ಹೋಗುತ್ತಾನೆ. ಆದ್ದರಿಂದ ಕಾರ್ಯಗಳ ತೂಕಕ್ಕೆ ಅನುಗುಣವಾಗಿ ಹೆದರಿದವನು, ಹೆದರದವನಂತೆ, ನಂಬಿಕೆ ಇಲ್ಲದವನು ನಂಬಿಕೆ ಇರುವವನಂತೆ ವರ್ತಿಸಬೇಕು. ಇದಕ್ಕೆ ವಿರುದ್ಧವಾಗಿ ಏನನ್ನೂ ಮಾಡಬಾರದು.

ಆದ್ದರಿಂದ ಧರ್ಮರಾಜನೇ ನಿನ್ನ ಮಿತ್ರರೊಡನೆ ಸರಿಯಾಗಿ ವರ್ತಿಸು. ತನಗೂ, ಶತ್ರುವಿಗೂ ಆಗಬೇಕಾದ ಕೆಲಸವಿದ್ದಾಗ ಬಲಶಾಲಿಯಾದ ಶತ್ರುವಿನೊಡನೆ ಸಂಧಾನ ಮಾಡಿಕೊಂಡು ಯುಕ್ತಿಯಿಂದ ಸಹಕಾರ ಕೊಡಬೇಕು. ಕೆಲಸವಾದ ಮೇಲೆ ವಿಶ್ವಾಸವಿಡಬಾರದು. ಧರ್ಮಾರ್ಥಕಾಮಗಳಿಗೆ ವಿರುದ್ಧವಲ್ಲದ ನೀತಿಯನ್ನು ಆಶ್ರಯಿಸು. ಬ್ರಹ್ಮಜ್ಞಾನಿಗಳೊಂದಿಗೆ ಹೋಗು. ಏಕೆಂದರೆ, ಅವರೇ ಇಹಪರಗಳಲ್ಲಿ ಶ್ರೇಯಸ್ಸಿಗೆ ಕಾರಣರು. ಅವರು ತಿಳಿದವರು, ಕೃತಜ್ಞರು, ಅವರೇ ಪೂಜಿತರು.[೧]"

**

೧ ಬ್ರಾಹ್ಮಣೈಶ್ಚಾಪಿ ತೇ ಸಾರ್ಧಂ ಯಾತ್ರಾ ಭವತು ಪಾಂಡವ।
ಬ್ರಾಹ್ಮಣಾ ಹಿ ಪರಂ ಶ್ರೇಯೋ ದಿವಿ ಚೇಹ ಚ ಭಾರತ॥ - ೮/೨೦೮
ಏತೇ ದರ್ಮಸ್ಯ ವೇತ್ತಾರಃ ಕೃತಜ್ಞಾಃ ಸತತಂ ಪ್ರಭೋ।
ಪೂಜಿತಾಃ ಶುಭಕರ್ಮಾಣಃ ಪೂಜಯೇತ್ ತಾನ್ ನರಾಧಿಪ॥

## ಸಂದೇಶಗಳು-ವಿವರಣೆಗಳು

೧. ಕಥೆ ತುಂಬಾ ಸಂದೇಶಗಳಿವೆ. ಅವೆಲ್ಲವೂ ಕಥೆ ಹೇಳುವಾಗಲೇ ಅಲ್ಲಲ್ಲಿ ಬಂದಿವೆ. ಪ್ರತ್ಯೇಕವಾಗಿ ಬರೆಯುವ ಅವಶ್ಯಕತೆ ಕಾಣುತ್ತಿಲ್ಲ.

೨. ಇಲಿ ಬೆಕ್ಕುಗಳ ಸಂವಾದ ನೋಡಲು ತರ್ಕಬದ್ಧವಾಗಿಯೇ, ಅದರೊಡನೆ ರಹಸ್ಯ ಉದ್ದೇಶಗಳೂ ಇವೆ. ಇಡೀ ಉಪಾಖ್ಯಾನ ತರ್ಕಶಾಸ್ತ್ರದ ದೃಷ್ಟಾಂತಗಳಂತೆ ಇವೆ. ಇವುಗಳ ಅಧ್ಯಯನವೇ ಒಂದು ಬೌದ್ಧಿಕ ಸರ್ಕಸ್, ಆನಂದ. ತರ್ಕದ ಬಗ್ಗೆನೇ ಒಂದು ಪ್ರಬಂಧ ಬರೆಯುವಂತಿದೆ.

೩. ತನ್ನ ಸ್ವಾರ್ಥಕ್ಕಾಗಿ ವಾಲಿಯನ್ನು ರಾಮನಿಂದ ಕೊಲ್ಲಿಸಿದ ಸುಗ್ರೀವನೂ ಸ್ವಲ್ಪಕಾಲ ರಾಮನ ಉಪಕಾರ ಮರೆತ. ಆಗಿನ ಸಂದರ್ಭದಲ್ಲಿ ಆಚಾರ್ಯರು ಹೀಗೆ ಉದ್ಗರಿಸಿದ್ದಾರೆ.

**'ಪ್ರಾಯಃ ಸ್ವಕಾರ್ಯೇ ಪ್ರತಿಪಾದಿತೇ ಹಿ**
**ಮದೋದ್ಧತಾ ನ ಪ್ರತಿಕರ್ತುಮೀಶತೇ ॥ - ಮ.ತಾ.ನಿ.(೬/೨೯)**

ತಮ್ಮ ಕೆಲಸ ಸಾಧಿಸಿದ ಮೇಲೆ ಮದೋದ್ಧತರು ತಮ್ಮ ಕರ್ತವ್ಯವನ್ನು ಮರೆಯುತ್ತಾರೆ. ಆಗ ರಾಮನು 'ನಿನಗೂ ವಾಲಿಯ ಗತಿಯೇ ಆಗುತ್ತದೆ' ಎಂದಾಗಲೇ ಸುಗ್ರೀವ ಸೀತಾನ್ವೇಷಣೆಗೆ ಪ್ರವೃತ್ತನಾಗುತ್ತಾನೆ. ಸಾಮಾನ್ಯರ ಸ್ವಭಾವ ಇಲ್ಲಿ ನಿರೂಪಿತವಾಗಿದೆ. ಇಲಿ ಅದನ್ನೇ ಹೇಳಿ, ತನ್ನ ಪ್ರಾಣ ಉಳಿಸಿಕೊಂಡಿತು. ಕಾರಣ ಅದು ದುರ್ಬಲವಾಗಿತ್ತು. ರಾಮ ಪ್ರಬಲನಾದ್ದರಿಂದ, ಉಪಕಾರ ಮಾಡಿ, ಎಚ್ಚರಿಕೆ ನೀಡಿ, ಕರ್ತವ್ಯವಿಮುಖನನ್ನು ಸುಮುಖನನ್ನಾಗಿ ಮಾಡಿದನು. ಬೆಕ್ಕಿನ ಮಾತುಗಳಲ್ಲಿ ವಂಚನೆಯನ್ನು ಗುರುತಿಸಿತು ಇಲಿ. ಅದು ಜಗತ್ತಿನ ನಿಯಮ. ಸುಗ್ರೀವ ವಂಚಕನಲ್ಲದಿದ್ದರೂ, ಎಚ್ಚರಿಕೆ ನೀಡಿದ ಮೇಲೆ ಕರ್ತವ್ಯ ಮಾಡುತ್ತಾನೆ. ಈ ಎರಡೂ ಘಟನೆಗಳಲ್ಲಿ ಪೂರ್ಣಸಾಮ್ಯವಿಲ್ಲದಿದ್ದರೂ, ಸ್ವಲ್ಪಮಟ್ಟಿಗೆ ಇದ್ದೇ ಇದೆ. ಇದನ್ನೇ – '**ನ ಹಿ ದೃಷ್ಟಾಂತೇ ಸರ್ವಸಾಮ್ಯಂ**' ಎನ್ನುತ್ತಾರೆ ಶಾಸ್ತ್ರಜ್ಞರು.

೪. ತನ್ನ ಸ್ವಾರ್ಥಕ್ಕಾಗಿ ಭೀಷ್ಮ, ದ್ರೋಣ, ಕರ್ಣಾದಿ ಮತ್ತು ಅಸಂಖ್ಯ ಸೈನ್ಯನಾಶಕ್ಕೆ ಕಾರಣನಾಗುತ್ತಾನೆ ದುರ್ಯೋಧನ.

## ೯೨. ಬ್ರಹ್ಮದತ್ತ ಮತ್ತು ಪೂಜನೀ (ಗುಬ್ಬಿ) ಸಂವಾದ

ಧರ್ಮರಾಜನು ಭೀಷ್ಮರನ್ನು ಪ್ರಶ್ನಿಸುತ್ತಾನೆ.

ಶತ್ರುಗಳನ್ನು ವಿಶ್ವಾಸ ಇಡಕೂಡದೆಂಬ ರಹಸ್ಯ ತಿಳಿಸಿದೆ. ಒಂದು ವೇಳೆ ಯಾರನ್ನೂ ನಂಬದೇ ಇದ್ದಲ್ಲಿ ರಾಜಕಾರ್ಯ ನಿರ್ವಹಣೆ ಹೇಗೆ? ಶತ್ರುಗಳನ್ನು ಗೆಲ್ಲುವುದಾದರೂ ಹೇಗೆ? ಇತರರ ಮೇಲೆ ವಿಶ್ವಾಸ ಮಾಡುವುದರಿಂದ ಭಯ ಆತಂಕಗಳು ಉಂಟಾಗುತ್ತವೆ ಎಂದಿರಿ. ಇತ್ಯಾದಿಯಾಗಿ ಕೇಳಿದಾಗ, ಭೀಷ್ಮರು -

ಕಾಂಪಿಲ್ಯನಗರದ ಬ್ರಹ್ಮದತ್ತನ ಮನೆಯಲ್ಲಿ ನಡೆದ ಪೂಜನಿ ಹಾಗೂ ಬ್ರಹ್ಮದತ್ತರ ನಡುವೆ ನಡೆದ ಸಂವಾದರೂಪದ ಇತಿಹಾಸವನ್ನು ಹೇಳಿದರು.

ಕಾಂಪಿಲ್ಯನಗರದ ಬ್ರಹ್ಮದತ್ತ ರಾಜನ ಅಂತಃಪುರದಲ್ಲಿ ಒಂದು ಪೂಜನಿ ಎಂಬ ಹಕ್ಕಿ ಬಹಳ ಕಾಲದಿಂದ ವಾಸವಾಗಿತ್ತು. ಆ ಹಕ್ಕಿ ಚಕೋರಪಕ್ಷಿಯಂತೆ(ಗುಬ್ಬಚ್ಚಿ) ಎಲ್ಲ ಪ್ರಾಣಿಗಳ ಧ್ವನಿಗಳ ಅರ್ಥ ತಿಳಿದಿತ್ತು. ಯದ್ಯಪಿ ಅದೊಂದು ಸಾಮಾನ್ಯ ಪಕ್ಷಿಯಾಗಿತ್ತಾದರೂ, ಎಲ್ಲವನ್ನೂ ತಿಳಿದಿತ್ತು. ಸರ್ವಧರ್ಮಗಳನ್ನೂ ತಿಳಿದಿತ್ತು. ಈ ಪೂಜನೀ ಆ ಅಂತಃಪುರದಲ್ಲಿ ಮಹಾತೇಜಸ್ವಿಯಾದ ಒಂದು ಹಕ್ಕಿಗೆ ಜನ್ಮ ನಿಡಿತು. ಆಗಲೇ ರಾಜನಿಗೂ ಆತನ ರಾಣಿಯಲ್ಲಿ ಪುತ್ರೋತ್ಸವವಾಯಿತು. ಪೂಜನಿ ತನ್ನ ಮಗನ ಹಾಗೂ ರಾಜಕುಮಾರನ ಪೋಷಣೆಗಾಗಿ ಎರಡು ಹಣ್ಣುಗಳನ್ನು ಸಮುದ್ರದ ತೀರದಿಂದ (ಅಲ್ಲಿದ್ದ ವೃಕ್ಷದಿಂದ) ತಂದು ಇಬ್ಬರಿಗೂ ಕೊಡುತ್ತಿತ್ತು. ರಾಜಪುತ್ರನು ದಾದಿಯಿಂದ ಸಾಕಲ್ಪಡುತ್ತಿದ್ದರೂ ಪಕ್ಷಿಯೊಡನೆಯೂ ಇರುತ್ತಿದ್ದನು. ಆ ಹಣ್ಣು ಅಮೃತದಂತೆ ಇತ್ತು ಮತ್ತು ಶಾರೀರಿಕ ಬಲ ಹಾಗೂ ತೇಜೋವೃದ್ಧಿಗಳಿಗೆ ಕಾರಣವಾಗಿತ್ತು. ಪಕ್ಷಿ ಹಾಗೂ ರಾಜ ಕುಮಾರರು ಹಣ್ಣು ತಿಂದು ತಮ್ಮ ಬಲ ಹಾಗೂ ಜಾತಿ ಸಹಜ ತೇಜಸ್ಸನ್ನು ಹೆಚ್ಚಿಸಿಕೊಂಡವು.

ಹೀಗೆ ಇರುತ್ತಿರಲು ಒಮ್ಮೆ ರಾಜಕುಮಾರನು ಪಕ್ಷಿಯ ಮರಿಯನ್ನು ನಿರ್ಜನ ಪ್ರದೇಶಕ್ಕೆ ಕರೆದುಕೊಂಡುಹೋಗಿ ಕೊಂದು ಮತ್ತೆ ತನ್ನ ದಾದಿಯ ತೋಳತೆಕ್ಕೆಯಲ್ಲಿ ಸೇರಿದನು. ಹಕ್ಕಿ ಎಂದಿನಂತೆ ಅಂದೂ ಫಲವನ್ನು ತಂದು ಅರಮನೆಗೆ ಬಂದಾಗ ತನ್ನ ಮಗು ಹಕ್ಕಿ ರಾಜಕುಮಾರನಿಂದ ಹತನಾಗಿ ಬಿದ್ದುದನ್ನು ನೋಡಿ ದುಃಖದಿಂದ ಅಳುತ್ತಾ ದೀನಳಾಗಿ ಹೀಗೆ ಮಾತನಾಡಿತು.

'ಕ್ಷತ್ರಿಯರಲ್ಲಿ ಸಹಬಾಳ್ವೆ ಎಂಬುದಿಲ್ಲ. ಬೇರೆಯವರ ಬಗ್ಗೆ ಪ್ರೀತಿ, ಸೌಹಾರ್ದ ಇರುವುದಿಲ್ಲ. ಸ್ವಾರ್ಥಕ್ಕೋಸ್ಕರ ಜೊತೆ ಇರುತ್ತಾರೆ. ಕೆಲಸವಾದ ಮೇಲೆ ನಂಬಿದವರನ್ನೂ

ತ್ಯಜಿಸುತ್ತಾರೆ. ಅವರು ಎಲ್ಲರನ್ನೂ ನೋಯಿಸುವವರು, ಹಾನಿಮಾಡುವವರು. ಅವರೊಡನೆ ವಿಶ್ವಾಸ ಯುಕ್ತವಲ್ಲ. ಅರ್ಥವಿಲ್ಲದೆ, ಅಪಕಾರ ಮಾಡಿದ ಮೇಲೆ ಸಮಾಧಾನ ಮಾಡುತ್ತಾರೆ[೧]. ಆದ್ದರಿಂದ ಇವರ ಕ್ರೌರ್ಯ, ಕೃತಘ್ನತೆ, ವಿಶ್ವಾಸಘಾತುಕತನಕ್ಕೆ ಸಮವಾದ ಸೇಡನ್ನು ನಾನೂ ತೀರಿಸಿಕೊಳ್ಳುತ್ತೇನೆ. ಅಲ್ಲದೆ ಹೀಗೂ ವಿಚಾರ ಮಾಡಿದ.

[೨]ಈ ರಾಜಕುಮಾರನು ಮಾಡಿದ ಪಾಪಗಳು ಮೂರು. ತನ್ನೊಡನೆ ಹುಟ್ಟಿ ಬೆಳೆದವನ ವಧೆ, ಜೊತೆಯಲ್ಲಿಯೇ ಆಹಾರ ಸೇವಿಸುತ್ತಿದ್ದವನ ಕೊಲೆ, ಶರಣಾಗತನ (ಪಕ್ಷಿಯ) ವಧೆ – ಹೀಗೆ ಹೇಳಿದ ತಾಯಿ ಪಕ್ಷಿಯು ರಾಜಕುಮಾರನ ಕಣ್ಣುಗಳನ್ನು ತನ್ನ ಕಾಲುಗಳಿಂದ ಕುಕ್ಕಿ, ರಾಜನ ಬಳಿಗೆ ಬಂದು ಹೇಳಿತು.

[೩]ಉದ್ದೇಶಪೂರ್ವಕವಾಗಿ (ಬುದ್ಧಿಪೂರ್ವಕವಾಗಿ) ಮಾಡಿದ ಪಾಪದ ಫಲ ಕೂಡಲೇ ಫಲ ನೀಡುತ್ತದೆ. [೪]ಪಾಪ ಮಾಡಿದವನಿಗೆ ಅದರ ಫಲ ಆಗದಿದ್ದರೆ, ಅವನ ಮಕ್ಕಳಿಗೆ, ಮೊಮ್ಮಕ್ಕಳಿಗೆ, ಮರಿಮೊಮ್ಮಕ್ಕಳಿಗಾದರೂ ಅದರ ಫಲ ಆಗೇ ಆಗುತ್ತದೆ.

ಬ್ರಹ್ಮದತ್ತರಾಜನು ತನ್ನ ಮಗನ ಕಣ್ಣುಗಳು ಪೂಜನಿಯಿಂದ ನಾಶವಾದುದನ್ನು ನೋಡಿ, ಇದು ಪ್ರತೀಕಾರವೆಂದು ಭಾವಿಸಿ, ಹೀಗೆ ನುಡಿದನು. 'ನಾವು ನಿನಗೆ ಅಪಕಾರ ಮಾಡಿದೆವು. ನೀನು ಪ್ರತೀಕಾರ ಮಾಡಿರುವೆ (ಸೇಡು ತೀರಿಸಿಕೊಂಡೆ). ಎರಡೂ ಸಮವಾದವು. ಆದ್ದರಿಂದ ಎಲೈ ಪೂಜನಿಯೇ! ಇಲ್ಲೇ ಇರು, ಹೋಗಬೇಡ.'

ಅದಕ್ಕೆ ಪಕ್ಷಿಯು ಉತ್ತರಿಸಿತು –

'ವೈರಕ್ಕೆ ಒಳಗಾದವರು ವೈರವನ್ನು ತೋರಿಸಿದವರನ್ನು ನಂಬಬಾರದು. ವಿಶ್ವಾಸಘಾತಕರನ್ನು ಪೂರ್ಣವಾಗಿ ನಂಬಬಾರದು. ವಿಶ್ವಾಸವಿಲ್ಲದವನ ಮೇಲೆ ವಿಶ್ವಾಸವಿಡಬಾರದು[೫]. ವಿಶ್ವಾಸವಿರುವವನನ್ನೂ (ಪೂರ್ಣವಾಗಿ) ನಂಬಬಾರದು. ಬೇರೆಯವರು ತನ್ನನ್ನು ನಂಬುವಂತೆ ಮಾಡಬೇಕು. ತಾನು ಬೇರೆಯವರನ್ನು ನಂಬಬಾರದು.

---

೧ ಕ್ಷತ್ರಿಯೇಷು ನ ವಿಶ್ವಾಸಃ ಕಾರ್ಯಃ ಸರ್ವೋಪಘಾತಿಷು ।
ಅಪಕೃತ್ಯಾಪಿ ಸತತಂ ಸಾಂತ್ವಯಂತಿ ನಿರರ್ಥಕಮ್ ॥ – ೯/೧೫

೨ ಸಹಸಂಜಾತವೃದ್ಧಸ್ಯ ತಥೈವ ಸಹಭೋಜಿನಃ ।
ಶರಣಾಗತಸ್ಯ ಚ ವಧಸ್ತ್ರಿವಿಧಂ ಹ್ಯಸ್ಯ ಕಿಲ್ಬಿಷಮ್ ॥ – ೯/೧೮

೩ ಇಚ್ಛಯೇಹ ಕೃತಂ ಪಾಪಂ ಇಚ್ಛಯೈವೋಪಸರ್ಪತಿ ।
ಕೃತಪ್ರತಿಕೃತಂ ತೇಷಾಂ ನ ನಶ್ಯತಿ ಶುಭಾಶುಭಮ್ ॥ – ೯/೧೯

೪ ಪಾಪಕರ್ಮಕೃತಂ ಕಿಂಚಿನ್ನ ತಸ್ಮಿನ್ ಯದಿ ವಿದ್ಯತೇ ।
ನಿಪಾತ್ಯತೇಽಸ್ಯ ಪುತ್ರೇಷು ನ ಚೇತ್ ಪೌತ್ರೇಷು ನಪ್ತೃಷು ॥ – ೯/೨೦

೫ ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇಽಪಿ ನ ವಿಶ್ವಸೇತ್ ।
ಕಾಮಂ ವಿಶ್ವಾಸಯೇದನ್ಯಾನ್ ಪರೇಷಾಂ ತು ನ ವಿಶ್ವಸೇತ್ ॥ – ೯/೨೮

ಬಂಧುಗಳಲ್ಲಿ ತಂದೆ, ತಾಯಿಯರು ವರಿಷ್ಠರು. ಆದ್ದರಿಂದ ಉಪಚಾರಕ್ಕೆ ಅರ್ಹರು. ಹೆಂಡತಿ ಶರೀರವನ್ನು ಮುಪ್ಪಾಗಿಸುವವಳು (ಪುರುಷರ ವೀರ್ಯಾಪಹಾರ ಮಾಡಿ). ಮಗ ವಂಶೋದ್ಧಾರಕ್ಕೆ ಕಾರಣ (ಬೀಜ)ಮಾತ್ರ. ಸಹೋದರರು ಶತ್ರುಗಳೇ (ಆಸ್ತಿಗಾಗಿ ಪರಸ್ಪರ ಹೊಡೆದಾಡುವವರು). ಮಿತ್ರನು ಸತ್ಕಾರ, ಉಪಕಾರ ಮಾತ್ರ ಬಯಸುವವನು. ಸುಖವನ್ನಾಗಲೀ, ದುಃಖವನ್ನಾಗಲೀ ಅನುಭವಿಸುವವನು ತಾನು ಮಾತ್ರ (ಇಲ್ಲಿ ರಾಜನ ಮಿತ್ರನಂತೆ). ನಾನು ಇಲ್ಲಿ ಯಾವ ಕಾರಣದಿಂದ ವಾಸಿಸುತ್ತಿದ್ದೇನೋ, ಅದೀಗ ಇಲ್ಲ. ನಾನು ಮಾಡಿದ ಕರ್ಮ ನನಗೆ ಭಯವುಂಟುಮಾಡುತ್ತಿದೆ(ನಿನಗಾಗಲೀ, ನಿನ್ನ ಮಗನಾಗಲೀ ನನ್ನನ್ನು ಕೊಲ್ಲಬಹುದೆಂಬ). ಮೊದಲು ಸತ್ಕಾರ, ಆಮೇಲೆ ಅಪಕಾರಗಳು ಆಗುವ ಸ್ಥಳವನ್ನು ಮಾನಾಪಮಾನಗಳಿಗೆ ಒಳಗಾದ ವ್ಯಕ್ತಿಯು ತ್ಯಜಿಸಬೇಕು. ನಿನ್ನ ಮನೆಯಲ್ಲಿ ಏನೂ ತೊಂದರೆಯಿಲ್ಲದೆ ದೀರ್ಘಕಾಲ ವಾಸವಾಗಿದ್ದೆ. ಈಗ ವೈರ ಹುಟ್ಟಿದ ನಾನು ಹೋಗುತ್ತೇನೆ. ಸುಖವಾಗಿರು.

ಬ್ರಹ್ಮದತ್ತನು 'ಅಪಕಾರಕ್ಕೆ ಪ್ರತೀಕಾರ ಮಾಡುವವನು ಅಪರಾಧಿಯಲ್ಲ. ಅಪಕಾರ ಮಾಡಿದವನು (ಪ್ರತೀಕಾರದಿಂದ) ಋಣಮುಕ್ತನಾಗುತ್ತಾನೆ. ಪೂಜನಿ. ಆದ್ದರಿಂದ ಇಲ್ಲೇ ಇರು?' ಎಂದನು.

ಆಗ ಪೂಜನಿ 'ಅಪಕಾರಕ್ಕೊಳಗಾದವನ ಹಾಗೂ ಅಪಕಾರ ಮಾಡಿದವನ ಮಧ್ಯೆ ಮತ್ತೆ ಸಂಧಾನವಾಗುವುದಿಲ್ಲ. ಇದು ಇಬ್ಬರಿಗೂ ತಿಳಿದಿದ್ದೇ (ಸಾಕ್ಷಿಗೆ). ಆದರೆ ಬ್ರಹ್ಮದತ್ತನು 'ಈ ವಿಷಯದಲ್ಲಿ ಉದಾಹರಣೆ ಇತಿಹಾಸದಲ್ಲಿದೆ. ಸಂಧಾನದಿಂದ ಅಪಕಾರ ಮಾಡಿದವನು ಮತ್ತೊಮ್ಮೆ ಪಾಪ ಮಾಡುವುದಿಲ್ಲ. ಅದಕ್ಕೆ ಅವಕಾಶ ಮಾಡಿಕೊಡು' ಎಂದನು.

ಪೂಜನಿಯು 'ನೀನು ಒಳ್ಳೆಯ ಮಾತನ್ನು ಆಡಿದರೂ ಅಪರಾಧದ ಪರಿಹಾರವಾಗದು (ನನ್ನ ಮಗು – ಹಕ್ಕಿ ಬದುಕಬಾರದು). ನಾನು ನಿರಪರಾಧಿ ಎಂದು ಹೇಳಿದೆ. ಎಂದ ಮಾತ್ರಕ್ಕೆ ನಾನು ನಿನ್ನನ್ನು ನಂಬಬಾರದು. ಹೀಗೆ ನಾನು ನಿನ್ನನ್ನು ವಿಶ್ವಾಸ ಮಾಡಿದರೆ, ಮುಗ್ಧನಾದ ನಾನು ಬಂಧನಕ್ಕೆ ಒಳಗಾಗುವೆ. ಅದಕ್ಕಿಂತ ಕಾಣಿಸಿಕೊಳ್ಳದಿರುವುದೇ ಲೇಸು (ಬಂಧನಕ್ಕೆ ಒಳಗಾಗುವುದಕ್ಕಿಂತ). ಕಾಡಾನೆಗಳನ್ನು ಹೆಣ್ಣಾನೆಗಳನ್ನು ಬಳಸಿ ನಿಗ್ರಹಿಸುವಂತೆ ಹರಿತವಾದ ಅಸ್ತ್ರಗಳಿಂದ ನಿಗ್ರಹಿಸಲು ಆಗದವರನ್ನು ಸಾಮೋಪಾಯಗಳಿಂದ ನಿಗ್ರಹಿಸುತ್ತಾರೆ.

ರಾಜನು 'ಸಹವಾಸದಿಂದ ಪ್ರಾಣ ತೆಗೆದವರ ಮೇಲೂ ಸ್ನೇಹ, ಪ್ರೀತಿ ಹುಟ್ಟುತ್ತದೆ. ನಾಯಿ ಹಾಗೂ ಶ್ವಪಚರ ಮಧ್ಯೆ ಇರುವ ಪರಸ್ಪರ ವಿಶ್ವಾಸವೇ ಇದಕ್ಕೆ ನಿದರ್ಶನ.

ಪೂಜನಿ "[೧]ರಾಜನ್! ವೈರವು ಐದು ಕಾರಣಗಳಿಂದ ಹುಟ್ಟುತ್ತದೆ. ೧. ಸ್ವಾಭಾವಿಕವಾಗಿ ಹಸು, ಹುಲಿಗಳ ಮಧ್ಯೆ ಅಥವಾ ಸ್ತ್ರೀಯರ ಸಲುವಾಗಿ (ತನಗೇ ಬೇಕೆಂಬ ಕಾಮುಕನಿಂದ); ೨.

೧ ಮಾತಾ ಪಿತಾ ಬಾಂಧವಾನಾಂ ವರಿಷ್ಠೌ ಭಾರ್ಯಾ ಜರಾ ಬೀಜಮಾತ್ರಂ ತು ಪುತ್ರಃ।
ಭ್ರಾತಾ ಶತ್ರುಃ ಕ್ಲಿನ್ನಪಾಣಿರ್ವಯಸ್ಯ ಆತ್ಮಾ ಹ್ಯೇಕಃ ಸುಖದುಃಖಸ್ಯ ವೇತ್ತಾ ॥ – ೯/೨೮

ಮನೆ, ಭೂಮಿ; ೩. ಮಾತು (ದ್ರುಪದ-ದ್ರೋಣರ ಮಧ್ಯೆ); ೪. ಸಾಪತ್ನ (?) ವೈರ (ಇಲಿ ಬೆಕ್ಕು ಸವತಿಯರ ಮಧ್ಯೆ); ೫. ಅಪರಾಧ, ಇದು ಪಂಡಿತರಿಗೆ ತಿಳಿದಿರುವುದು. ವೈರವನ್ನು ತೋರಿಸಿದ ಮೇಲೆ ಅವನು ಮಿತ್ರನೇ ಆಗಿದ್ದರೂ ಅವನಲ್ಲಿ ವಿಶ್ವಾಸವಿಡಬಾರದು. ಕಾಷ್ಠ (ಕಟ್ಟಿಗೆ)ದಲ್ಲಿರುವ ಅಗ್ನಿಯು ನಿಗೂಢವಾಗಿರುವಂತೆ, ವೈರ ಮಾಡಿದವರಲ್ಲಿ ವೈರತನ ಒಳಗೇ ಇರುತ್ತದೆ. ಸಾಗರದಲ್ಲಿನ ಅಗ್ನಿಯನ್ನು(ಬಡವಾಗ್ನಿ) ಹೇಗೆ ಯಾವುದೇ ತಂತ್ರಗಳಿಂದ ಆರಿಸಲಾಗುವುದಿಲ್ಲವೋ, ವೈರಾಗ್ನಿಯನ್ನು ಧನ, ಕಠಿಣಕ್ರಮ, ಸಾಮೋಪಾಯಗಳಿಂದ ಶಮನ ಮಾಡಲಾಗದು.

ಬ್ರಹ್ಮದತ್ತ - 'ಕಾಲವೇ ಪ್ರವೃತ್ತಿಗಳಿಗೆ ಕಾರಣ. ಕಾಲಪ್ರಚೋದನೆಯಿಲ್ಲದೆ ಯಾರೂ ಯಾವ ಅಪರಾಧ ಮಾಡಲು ಸಾಧ್ಯ? ಹುಟ್ಟು ಸಾವು ಮೊದಲಾದ ಎಲ್ಲ ಕಾರ್ಯಗಳಿಗೂ ಕಾಲವೇ ಪ್ರಚೋದಕ. ನೀನು ಮಾಡಿದ್ದನ್ನು ನಾನು ಕ್ಷಮಿಸಿದ್ದೇನೆ. ನೀನು ನನ್ನನ್ನು ಕ್ಷಮಿಸು. ಇಲ್ಲಿಯೇ ವಾಸಮಾಡು.

ಪೂಜನಿ 'ಕಾಲವೇ ಎಲ್ಲಕ್ಕೂ ಕಾರಣವಾಗಿದ್ದರೆ ಬಂಧು ಹತನಾದಾಗ ಬಾಂಧವರು ಅಳುವುದೇಕೆ? ಹಿಂದೆ ದೇವಾಸುರರು ಬಡಿದಾಡಿದ್ದೇಕೆ? ರೋಗಿಗೆ ವೈದ್ಯರು ಔಷಧಿಗಳನ್ನೇಕೆ ಕೊಡುತ್ತಾರೆ. ಜನರು ಏಕೆ ಧರ್ಮನಿಷ್ಠರಾಗಿದ್ದಾರೆ? ನನ್ನ ಪುತ್ರನನ್ನು ಕೊಂದ ಶೋಕದಿಂದ ನಾನು ನಿನ್ನ ಮಗನ ಕಣ್ಣಿಗೆ ಹಾನಿ ಮಾಡಿದೆ. ಕಾರಣ ನೀನು ನನ್ನನ್ನು ಸಂಹರಿಸಬೇಕು. ಏಕೆಂದರೆ -

ಮನುಷ್ಯರು ತಿನ್ನಲು ಅಥವಾ ವಿಹಾರಕ್ಕಾಗಿ ಪಕ್ಷಿಗಳನ್ನು ಇಚ್ಛಿಸುತ್ತಾರೆ. ಅದಕ್ಕೋಸ್ಕರ ಬಂಧಿಸುತ್ತಾರೆ. ಬೇಕಾದಾಗ ಕೊಂದು ತಿನ್ನುತ್ತಾರೆ. ಎಲ್ಲರಿಗೂ ಪ್ರಾಣಪ್ರಿಯ. ಎಲ್ಲರಿಗೂ ಮಕ್ಕಳು ಪ್ರಿಯರು. ಸಕಲರೂ ದುಃಖಕ್ಕೆ ಒಳಗಾದಾಗ ಉದ್ವೇಗಕ್ಕೆ ಒಳಗಾಗುತ್ತಾರೆ. ಎಲ್ಲರಿಗೂ ಸುಖವೇ ಬೇಕಾದುದು. ನಾನು ನಿನಗೆ ಏನು ಮಾಡಿರುವೆನೋ (ನಿನ್ನ ಮಗನ ಕಣ್ಣು ಹಾಳು ಮಾಡಿದೆನೋ), ನೀನು ನನಗೆ ಏನು ಮಾಡಿದೆಯೋ (ನಿನ್ನ ಮಗ ನನ್ನ ಮರಿಯನ್ನು ಕೊಂದುದು) ಅದನ್ನು ನೂರಾರು ವರ್ಷಗಳಾದರೂ ಅಳಿಸಲು ಸಾಧ್ಯವಿಲ್ಲ. ಹೀಗಾಗಿ ನಮ್ಮಿಬ್ಬರ ಮನಸ್ಸು ಎಂದೂ ಕೂಡದು. ನಿನ್ನ ಮಗನು ಮಾಡಿದುದನ್ನು ನೆನೆಸಿ, ನೆನೆಸಿ ವೈರ ಮತ್ತಷ್ಟೂ ವೃದ್ಧಿಯಾಗುತ್ತದೆ. ಒಡೆದು ಹೋದ ಮಣ್ಣಿನ ಪಾತ್ರೆಯಂತೆ ಯಾರೂ ಕೂಡಾ ಮನಸ್ಸಿನಲ್ಲಿ ವೈರವಿದ್ದರೂ ತನ್ನ ವಿರೋಧಿಗೆ ಪ್ರೀತಿಯನ್ನು ಮಾಡಲು ಹೋದವನಿಗೆ ಪ್ರೀತಿ ಹುಟ್ಟದು. ಈ ವಿಷಯದಲ್ಲಿ ಶುಕ್ರಾಚಾರ್ಯರು ಪ್ರಹ್ಲಾದನಿಗೆ ಹೇಳಿದ ಎರಡು ಮಾತುಗಳಿವೆ, ಕೇಳು.

ಯಾರು ವೈರಿಯ ಸತ್ಯವಾದ ಮಾತಿನಲ್ಲಿ ಅಥವಾ ಸುಳ್ಳಾದ ನುಡಿಯಲ್ಲಿ ನಂಬುತ್ತಾರೋ ಅವರು ಕೊಲ್ಲಲ್ಪಡುತ್ತಾರೆ. ಅಥವಾ ಬಂಧನಕ್ಕೆ ಒಳಗಾಗುತ್ತಾರೆ ಹೇಗೆ? 'ಮುಂದೆ ಜೇನು ಇದೆ' ಎಂಬ ವಂಚಕನ ಮಾತು ನಂಬಿ ಹುಲ್ಲಿನಿಂದ ಮುಚ್ಚಲ್ಪಟ್ಟ ಬಾವಿಯಲ್ಲಿ ಬೀಳುವಂತೆ:

**ಸರ್ವಸ್ಯ ದಯಿತಾಃ ಪ್ರಾಣಾಃ ಸರ್ವಸ್ಯ ದಯಿತಾಃ ಸುತಾಃ ।**
**ದುಃಖಾದುದ್ವಿಜತೇ ಸರ್ವಃ ಸರ್ವಸ್ಯ ಸುಖಮೀಪ್ಸಿತಮ್ ॥** - ೯/೬೦

[೧]ಕುಲಗಳಲ್ಲಿ (ಕುಟುಂಬಗಳಲ್ಲಿ) ಹುಟ್ಟಿದ ವೈರವು ಹತ್ತು ತಲೆಮಾರಾದರೂ ಶಮನವಾಗದು.

[೨]ರಾಜನು ವೈರವನ್ನು ಅಡಗಿಸಿ ಕಾಲ ಬರುವವರೆಗೆ ಓಲೈಸುತ್ತಾರೆ. ನಂತರ ತುಂಬಿದ ಮಡಕೆಯನ್ನು ನೆಲಕ್ಕೆ ಅಪ್ಪಳಿಸಿ ಪುಡಿಪುಡಿ ಮಾಡುತ್ತಾರೆ.

[೩]ಆದ್ದರಿಂದ ಪಾಪವನ್ನು ಮಾಡಿದ ಮೇಲೆ ಪಾಪಕೃತ್ಯಕ್ಕೆ ಗುರಿಯಾದವನ ಮೇಲೆ ವಿಶ್ವಾಸವಿಡಬಾರದು. ಪರರಿಗೆ ಅಪಕಾರ ಮಾಡಿ, ಅವರ ಮೇಲೆ ನಂಬಿಕೆ ಇಟ್ಟರೆ, ಅದೇ ನಾಚಿಕೆಯಿಂದ ದುಃಖ ಅನುಭವಿಸಬೇಕಾಗುತ್ತದೆ.

ಬ್ರಹ್ಮದತ್ತ – 'ಅವಿಶ್ವಾಸದಿಂದ ಏನನ್ನೂ ಗಳಿಸಲು ಸಾಧ್ಯವಿಲ್ಲ, ಮಿತ್ರನಾದ ನನ್ನಲ್ಲಿದ್ದು ಎರಡರಲ್ಲಿ ಒಂದನ್ನು (ಧನವನ್ನು ಅಥವಾ ಕ್ರಿಯಾಶೀಲತೆ) ನೀನು ಹೊಂದು. ಹೀಗೆ ನನ್ನ ಮನೆಯಲ್ಲೇ ಇದ್ದು ಕೃತಕೃತ್ಯಳಾಗು.

ಪೂಜನಿ '೧. ಪಾದಗಳಿಗೆ ಗಾಯಗಳಾಗಿದ್ದರೂ ಯಾರು ನಡೆಯುತ್ತಾರೋ ಅವನ ಪಾದಗಳು ಮತ್ತೂ ಗಾಯಗಳಿಗೆ ತುತ್ತಾಗುತ್ತವೆ.

೨. ರೋಗಗ್ರಸ್ತ ಕಣ್ಣುಗಳನ್ನು ಯಾರು ಎದುರು ಗಾಳಿಗೆ ಮುಂದೊಡುತ್ತಾರೋ ಅವನ ಕಣ್ಣುಗಳು ಮತ್ತೂ ರೋಗಕ್ಕೆ ತುತ್ತಾಗುತ್ತವೆ.

೩. ತನ್ನ ಸಾಮರ್ಥ್ಯವರಿಯದೆ ದುಷ್ಟಮಾರ್ಗವನ್ನು ಹಿಡಿದು ಸಾಗುವವನ ಜೀವಿತವು ಬೇಗನೇ ಕೊನೆಗಾಣುತ್ತದೆ.

೪. ಮಳೆಯನ್ನುತಿಳಿಯದೆಹೊಲದಲ್ಲಿಬೀಜವನ್ನುಬಿತ್ತುವರೈತನುಪುರುಷಪ್ರಯತ್ನವಿಲ್ಲದೆ ಬೆಳೆ ಹೊಂದುವುದಿಲ್ಲ.

೫. ಯಾರು ಕಹಿ ಕಷಾಯ ಸೇವಿಸುವವರೋ, ಅಸ್ವಾದವಿಲ್ಲದಿದ್ದರೂ ಹಿತವಾದ ಮಿತವಾದ ಆಹಾರವನ್ನು ಸೇವಿಸುವರೋ, ಅವರು ರೋಗಬಾಧೆಗಳಿಗೆ ಒಳಗಾಗದೆ ಆರೋಗ್ಯದಿಂದ ಇರುತ್ತಾರೆ.

೬. ಪಥ್ಯ ಮಾಡದೆ ರೋಗಿ ಮನುಷ್ಯನು ಅಪಥ್ಯಾಹಾರ ಸೇವಿಸಿದರೆ, ಅವನ ಜೀವಿತ ಅಲ್ಲಿಗೇ ಮುಗಿಯುತ್ತದೆ.

---

೧ ನ ಹಿ ವೈರಾಣಿ ಶಾಮ್ಯಂತಿ ಕುಲೇಷ್ವಾದಶಮಾದ್ಯುಗಾತ್ ।
ಆಖ್ಯಾತಾರಶ್ಚ ವಿದ್ಯಂತೇ ಕುಲೇ ಚೇದ್ವಿದ್ಯತೇ ಪುಮಾನ್ ॥ – ೯/೭೧

೨ ಉಪಗುಹ್ಯ ಹಿ ವೈರಾಣಿ ಸಾಂತ್ವಯಂತಿ ನರಾಧಿಪಃ ।
ಅಥೈನಂ ಪ್ರತಿಪಿಂಷಂತಿ ಪೂರ್ಣಂ ಘಟಮಿವಾಶ್ಮನಿ ॥ – ೯/೭೨

೩ ಸದಾ ನ ವಿಶ್ವಸೇದ್ ರಾಜನ್ ಪಾಪಂ ಕೃತ್ವೇಹ ಕಸ್ಯಚಿತ್ ।
ಅಪಕೃತ್ಯ ಪರೇಷಾಂ ಹಿ ವಿಶ್ವಾಸಾದ್ದುಃಖಮಶ್ನುತೇ ॥ – ೯/೭೩

೭. ದೈವ ಹಾಗೂ ಪುರುಷ ಪ್ರಯತ್ನಗಳು ಎಲ್ಲಿ ಸಮನ್ವಿತವಾಗಿರುತ್ತವೆಯೋ, ಅಲ್ಲೇ ಉದಾತ್ತ ಕಾರ್ಯಗಳು ಸಿದ್ಧಿಸುತ್ತವೆ.

೮. ಪ್ರಯೋಜನವಾಗುವುದು ಸಂಶಯವಾಗಿದ್ದರೂ ಪರಾಕ್ರಮ ಬಿಡಬಾರದು. ಎಲ್ಲವನ್ನೂ ತ್ಯಾಗ ಮಾಡಿಯಾದರೂ ಆತ್ಮಹಿತ ಸಾಧಿಸಬೇಕು.

೯. [೧]ವಿದ್ಯಾ, ಶೌರ್ಯ, ದಕ್ಷತೆ, ಬಲ, ಧೈರ್ಯ ಇವೇ ಸಹಜ ಮಿತ್ರರು. ಇವರನ್ನು ವಿವೇಕಿಗಳು ನಂಬುತ್ತಾರೆ.

೧೦. ಪ್ರಾಜ್ಞನು ಎಲ್ಲ ವಿಷಮ ಸನ್ನಿವೇಶಗಳನ್ನು ಅನುಭವಿಸುತ್ತಾನೆ. ಎಲ್ಲೆಡೆ ಗೆಲ್ಲುತ್ತಾನೆ. ಯಾರಿಗೂ ಹೆದರಿಸುವುದಿಲ್ಲ, ಯಾರನ್ನೂ ಹೆದರಿಸುವುದಿಲ್ಲ.

೧೧. ಬುದ್ಧಿವಂತನ ಸ್ವಲ್ಪ ಅರ್ಥವೂ (ಸಂಪತ್ತು) ನಿರಂತರ ವೃದ್ಧಿಯಾಗುತ್ತದೆ. ಅವನು ಸಾಮರ್ಥ್ಯದಿಂದ ಕೆಲಸ ಮಾಡುತ್ತಾನೆ. ಸಂಯಮದಿಂದ ಸ್ಥಿರವಾಗಿ ನಿಲ್ಲುತ್ತಾನೆ.

೧೨ . ಮನುಷ್ಯರು ತಮ್ಮ ಬುದ್ಧಿ(ವಿವೇಕದ) ವಿರುದ್ಧವಾಗಿ ನಡೆದಾಗ ಮನೆ, ಹೊಲ, ಮಿತ್ರರು, ಸ್ವದೇಶ ಎಂದು ವಿನಾಶಕ್ಕೊಳಗಾಗುತ್ತಾರೆ (ಮನುಷ್ಯ, ಮಿತ್ರರು, ಸ್ವದೇಶಗಳ ಬಗ್ಗೆ ಅನವಶ್ಯವಾಗಿ ಚಿಂತಿಸಿ).

೧೩. [೨]ವ್ಯಾಧಿ, ದುರ್ಭಿಕ್ಷಗಳಿಂದ ಪೀಡಿತವಾದ ದೇಶವನ್ನು ಬಿಟ್ಟು ಬೇರೆ ಕಡೆಗೆ ಆತ್ಮರಕ್ಷಣೆಗಾಗಿ ಹೋಗಬೇಕು. ಅಥವಾ ಅಲ್ಲಿದ್ದರೂ ಸರ್ವಮಾನ್ಯನಾಗಿರಬೇಕು. ಆದ್ದರಿಂದ ನಾನು ಬೇರೆ ಕಡೆ ಹೋಗುತ್ತೇನೆ. ಇಲ್ಲಿರಲು ನನಗೆ ಉತ್ಸಾಹವಿಲ್ಲ. ಏಕೆಂದರೆ ನಿನ್ನ ಮಗನು ಪರಿಹಾರವಿಲ್ಲದ ಕೆಲಸ ಮಾಡಿದ್ದಾನೆ.

೧೪. [೩]ದುಷ್ಟ ಹೆಂಡತಿಯನ್ನು, ಕೆಟ್ಟ ಮಗನನ್ನು, ದುಷ್ಟ ರಾಜನನ್ನು, ಕೆಟ್ಟ ಸ್ನೇಹಿತನನ್ನು, ಕೆಟ್ಟ ಸಂಬಂಧವನ್ನು ಕೆಟ್ಟ ದೇಶವನ್ನು ದೂರದಿಂದಲೇ ಪರಿತ್ಯಜಿಸಬೇಕು.

೧೫. [೪]ಕೆಟ್ಟ ಮಿತ್ರನಲ್ಲಿ ವಿಶ್ವಾಸವಿರದು, ಕೆಟ್ಟ ಹೆಂಡತಿಯಲ್ಲಿ ರತಿ ಎಲ್ಲಿಂದ? ಕೆಟ್ಟ ರಾಜ್ಯದಲ್ಲಿ(ಆಡಳಿತ ವ್ಯವಸ್ಥೆ), ಸುಖವಿರದು. ಕೆಟ್ಟ ಸ್ಥಳದಲ್ಲಿ ಜೀವನೋಪಾಯವೂ ಸಿಗದು.

---

೧ ವಿದ್ಯಾ ಶೌರ್ಯಂ ಚ ದಾಕ್ಷ್ಯಂ ಚ ಬಲಂ ಧೈರ್ಯಂ ಚ ಪಂಚಮಮ್ ।
ಮಿತ್ರಾಣಿ ಸಹಜಾನ್ಯಾಹುರ್ವರ್ತಯಂತೀಹ ಯೈರ್ಬುಧಾಃ ॥ - ೯/೮೪

೨ ಉತ್ಪತೇತ್ ಸರುಜಾದ್ ದೇಶಾದ್ ವ್ಯಾಧಿದುರ್ಭಿಕ್ಷಪೀಡಿತಾತ್ ।
ಅನ್ಯತ್ರ ವಸ್ತುಂ ಗಚ್ಛೇದ್ವಾ ವಸೇದ್ವಾ ನಿತ್ಯಮಾನಿತಃ ॥ - ೯/೯೦

೩. ಕುಭಾರ್ಯಂ ಚ ಕುಪುತ್ರಂ ಚ ಕುರಾಜಾನಂ ಕುಸೌಹೃದಮ್ ।
ಕುಸಂಬಂಧಂ ಕುದೇಶಂ ಚ ದೂರತಃ ಪರಿವರ್ಜಯೇತ್ ॥ - ೯/೯೨

೪ ಕುಮಿತ್ರೇ ನಾಸ್ತಿ ವಿಶ್ವಾಸಃ ಕುಭಾರ್ಯಾಯಾಂ ಕುತೋ ರತಿಃ ।
ಕುರಾಜ್ಯೇ ನಿರ್ವೃತಿರ್ನಾಸ್ತಿ ಕುದೇಶೇ ನ ಪ್ರಜೀವ್ಯತೇ ॥ - ೯/೯೩

ಕೆಟ್ಟ ಮಿತ್ರನೊಡನೆ ಹೊಂದಾಣಿಕೆ ಇರದು. ದಾರಿದ್ರ್ಯ ಬಂದಾಗ ಕೆಟ್ಟ ಬಂಧುಗಳ ನಡುವೆ ಅವಮಾನವಾಗುತ್ತದೆ.

೧೬. [೧]ಪ್ರಿಯವಾದ ಮಾತುಗಳನ್ನಾಡುವವಳೇ ಹೆಂಡತಿ. ಸಂತೋಷವುಂಟು ಮಾಡುವವನ ಪುತ್ರ, ವಿಶ್ವಾಸಯೋಗ್ಯನೇ ಮಿತ್ರ, ಎಲ್ಲಿ ಬದುಕಬಹುದೋ ಅದೇ ಸುದೇಶ.

೧೭. ಸದಾ ಎಚ್ಚರದಿಂದಿರುವ (ಧರ್ಮವಿಷಯದಲ್ಲಿ) ಪ್ರಜೆಗಳನ್ನು ಚೆನ್ನಾಗಿ ಪಾಲನೆ ಮಾಡುವವನೇ ಧರ್ಮ, ಅರ್ಥ, ಕಾಮಗಳಿಗೆ ಕಾರಣ (ತ್ರಿವರ್ಗಮೂಲ).

೧೮. ರಾಜನು ಪ್ರಜೆಗಳಿಂದ ಅವರ ಆದಾಯದ ೧/೬ ನೇ ಭಾಗವನ್ನು ತೆರಿಗೆ(ಕರ) ವಾಗಿ ಸ್ವೀಕರಿಸಿ ಅದನ್ನು ಪ್ರಜಾಹಿತಕ್ಕಾಗಿ ಬಳಸಬೇಕು. ತೆರಿಗೆಯ ೧/೬ ಭಾಗವನ್ನು ರಾಜನು ತನಗಾಗಿ ಬಳಸಬಹುದು. ಪ್ರಜಾರಕ್ಷಕನಲ್ಲದವನು ಕಳ್ಳರಾಜ.

೧೯. ಪ್ರಜೆಗಳಿಗೆ ಅಭಯವನ್ನು ಕೊಟ್ಟು ಧರ್ಮದಿಂದ ಪಾಲಿಸುವ ರಾಜನು ಎಲ್ಲ ಸುಖಗಳಿಗೆ ಪಾತ್ರನಾಗುತ್ತಾನೆ.

೨೦. [೨]ಸ್ವಾಯಂಭುವಮನು 'ತಂದೆ, ತಾಯಿ, ಗುರು, ರಕ್ಷಕ(ರಾಜ), ಅಗ್ನಿ, ಕುಬೇರ, ಯಮ ಈ ಏಳು (ಮಹಾನುಭಾವರ) ಗುಣಗಳು ರಾಜನಿಗೆ ಇರಬೇಕು.' ಎಂದು ಹೇಳಿದ್ದಾನೆ.

೨೧. ಯಾವ ರಾಜನ ಪ್ರಜೆಗಳು ಯಾವಾಗಲೂ ಆತಂಕಕ್ಕೆ ಒಳಗಾಗುತ್ತಾರೋ, ತೆರಿಗೆಯ ಭಾರದಿಂದ ನರಳುತ್ತಾರೋ, ಅನರ್ಥಕ್ಕೆ ಸಿಕ್ಕು ನಷ್ಟಕ್ಕೆ ಒಳಗಾಗಿರುತ್ತಾರೋ, ಆ ರಾಜನು ಜಯಶೀಲನಾಗದೆ ಪರಾಜಯ ಹೊಂದುತ್ತಾನೆ.

೨೨. [೩]ಯಾವ ರಾಜ್ಯದಲ್ಲಿ ಪ್ರಜೆಗಳು ಸರೋವರದಲ್ಲಿ ಕಮಲವು ಅರಳುವಂತೆ ವೃದ್ಧಿಯನ್ನು ಹೊಂದುತ್ತಾರೋ ಆ ರಾಜನು ಎಲ್ಲ ಯಜ್ಞಗಳ ಭಾಗಿಯಾಗುತ್ತಾನೆ. ಲೋಕದಲ್ಲಿ ಗೌರವಾರ್ಹನಾಗುತ್ತಾನೆ.

೨೩. [೪]ಬಲಶಾಲಿಗಳೊಡನೆ ವಿರೋಧ ಒಳ್ಳೆಯದಲ್ಲ. ಇದನ್ನು ಜ್ಞಾನಿಗಳು ಒಪ್ಪರು. ಅವರ ವಿರೋಧ ಸುಖಕ್ಕೆ ಕಾರಣವಾಗದು.

---

೧ ಸಾ ಭಾರ್ಯಾ ಯಾ ಪ್ರಿಯಂ ಬ್ರೂತೇ ಸ ಪುತ್ರೋ ಯತ್ರ ನಿರ್ವೃತಿಃ।
ತನ್ಮಿತ್ರಂ ಯತ್ರ ವಿಶ್ವಾಸಃ ದೇಶೋ ಯತ್ರ ಜೀವ್ಯತೇ॥ - ೯/೯೫

೨ ಪಿತಾ ಮಾತಾ ಗುರುರ್ಗೋಪ್ತಾ ವಹ್ನಿರ್ವೈಶ್ರವಣೋ ಯಮಃ।
ಸಪ್ತ ರಾಜ್ಞೋ ಗುಣಾನೇತಾನ್ ಮನುರಾಹ ಪ್ರಜಾಪತಿಃ॥ - ೯/೧೦೨

೩ ಪ್ರಜಾ ಯಸ್ಯ ವಿವರ್ಧಂತೇ ಸರಸೀವ ಮಹೋತ್ಪಲಮ್।
ಸ ಸರ್ವಯಜ್ಞಫಲಭಾಗ್ ರಾಜಾ ಲೋಕೇ ಮಹೀಯತೇ॥ - ೯/೧೦೯

೪ ಬಲಿನಾ ವಿಗ್ರಹೋ ರಾಜನ್ನ ಕಥಂಚಿತ್ ಪ್ರಶಸ್ಯತೇ।
ಬಲಿನಾ ವಿಗೃಹೀತಸ್ಯ ಕುತೋ ರಾಜ್ಯಂ ಕುತಃ ಸುಖಮ್॥ - ೯/೧೧೦

ಹೀಗೆ ಪೂಜನಿಯು ರಾಜನಿಗೆ ಹೇಳಿ, ಅವನ ಅನುಮತಿಯನ್ನು ಕೇಳಿ ತನಗೆ ಇಷ್ಟವಾದ ದಿಕ್ಕಿಗೆ ಹೋಯಿತು.

ಇದುವೇ ಬ್ರಹ್ಮದತ್ತ ಪೂಜನಿಯರ ಸಂವಾದ ಎಂದು ಭೀಷ್ಮರು ಧರ್ಮರಾಜನಿಗೆ ಹೇಳಿದರು.

## ಸಂದೇಶಗಳು-ವಿವರಣೆಗಳು

೧. ಸಾಮಾನ್ಯ ಪಕ್ಷಿ (ಗುಬ್ಬಿ)ಯೊಂದು ಪ್ರಾಜ್ಞರಂತೆ ಮಾತನಾಡಿತು ಎಂಬುದಕ್ಕೆ ಈ ಉಪಾಖ್ಯಾನವೇ ಉದಾಹರಣೆ. ಇದೊಂದು ಸಾಮಾನ್ಯ ಪಕ್ಷಿಯಾಗಿರದೆ ಬ್ರಹ್ಮಜ್ಞಾನಿಯಾಗಿರಬೇಕು. ಇಲ್ಲದಿದ್ದರೆ ಇಂತಹ ನೈತಿಕ, ತಾತ್ತ್ವಿಕ ಮೌಲ್ಯಗಳ ಸುರಿಮಳೆ ಅಸಾಧ್ಯ.

೨. ಪಲಿತ ಪಕ್ಷಿಯ ಮಾತುಗಳೆಲ್ಲ ನೈತಿಕ ಸಂದೇಶಗಳೇ. ಅವನ್ನು ಮತ್ತೆ ಬರೆಯುವುದು ಚರ್ವಿತಚರ್ವಣ.

೩. ರಾಜಾ ಬ್ರಹ್ಮದತ್ತನು ತನ್ನ ಮಗನು ಮಾಡಿದ ತಪ್ಪನ್ನು ಒಪ್ಪಿ ಪಕ್ಷಿ ತನ್ನ ಜೊತೆಗೇ ಅರಮನೆಯಲ್ಲಿರಲಿ ಎಂದು ಬೋಧಿಸಿದರೂ, ಸಾಮಾನ್ಯವಾಗಿ ರಾಜನ ಮನೋಧರ್ಮ-ಗಳನ್ನು ಪಲಿತ ಪಕ್ಷಿ ಬಯಲು ಮಾಡಿ ರಾಜನ ವಿಶ್ವಾಸಾರ್ಹತೆಯನ್ನು ಪ್ರಶ್ನಿಸುತ್ತದೆ.

೪. ಈ ಉಪಾಖ್ಯಾನದ ನಿಮಿತ್ತ ವಿಶ್ವದಲ್ಲಿ ಎಲ್ಲ ಮನುಷ್ಯರ ಪಾತ್ರ ಚಿತ್ರಣ ಇಲ್ಲಿ ಗೊತ್ತಾಗುತ್ತದೆ. ಅವು ಕೌಟುಂಬಿಕ ಪಾತ್ರಗಳಿರಬಹುದು, ಅಧ್ಯಾತ್ಮಿಕ ಪಾತ್ರಗಳಿರಬಹುದು (ಗುರು ಇತ್ಯಾದಿ), ಸಾಮಾಜಿಕ ವ್ಯಕ್ತಿಗಳಿರಬಹುದು(ಸ್ನೇಹಿತ ಇತ್ಯಾದಿ). ಆದ್ದರಿಂದ ಎಲ್ಲರೂ ಹೇಗೆ ಜೀವನದಲ್ಲಿ ವರ್ತಿಸಬೇಕೆಂಬುದು ಇಲ್ಲಿ ಗೊತ್ತಾಗುತ್ತದೆ. ಎಲ್ಲ ಸ್ತರದ ಜನರಿಗೂ ಇಲ್ಲಿ ಸಂದೇಶಗಳಿವೆ.

೫. ಪಾಂಡವರು ಆದರ್ಶ ಬಂಧುಗಳಾಗಿ, ಸ್ನೇಹಿತರಾಗಿ, ಸೋದರರಾಗಿ, ದ್ರೌಪದಿ, ಆದರ್ಶ ಪತ್ನಿಯಾಗಿ ಇದ್ದರೆಂಬುದು ಭಾರತದ ಮುಖ್ಯಪಾತ್ರಗಳಲ್ಲಿ ಕಾಣಬಹುದು. ಇದಕ್ಕೆ ವಿರುದ್ಧವಾಗಿದ್ದವರು ದುರ್ಯೋಧನಾದಿಗಳು.

ಇತ್ಯಾದಿ....

## ೯೩. ವಿಶ್ವಾಮಿತ್ರ-ಚಂಡಾಲರ ಸಂವಾದ

ಧರ್ಮರಾಜ ಪ್ರಶ್ನಿಸುತ್ತಾನೆ, ಭೀಷ್ಮರನ್ನು -

ಎಲ್ಲ ಜನರೂ ಧರ್ಮೋಲ್ಲಂಘನೆ ಮಾಡುತ್ತಿರಲು; ಮುಖ್ಯಧರ್ಮ ನಷ್ಟವಾಗುತ್ತಿರಲು; ಧರ್ಮವನ್ನು ಅಧರ್ಮವೆಂದೂ, ಅಧರ್ಮವನ್ನು ಧರ್ಮವೆಂದೂ ಪರಿಗಣಿತವಾದಾಗ; ಲೋಕಮರ್ಯಾದೆಗಳು (ಕಟ್ಟುಪಾಡುಗಳು) ನಾಶವಾಗುತ್ತಿರಲು; ಧರ್ಮನಿರ್ಣಯವು ಕ್ಷೋಭೆಗೊಂಡಾಗ; ಜನರು ರಾಜರಿಂದ, ಕಳ್ಳರಿಂದ ಪೀಡಿತರಾಗುತ್ತಿರಲು; ಬ್ರಹ್ಮಚರ್ಯಾದಿ ಆಶ್ರಮಗಳು ಕಾಮ, ಲೋಭ, ಮೋಹಗಳಿಂದ ವಿವೇಕ ರಹಿತವಾಗಿರಲು (ವಿಪರೀತವಾಗಿ ಆಚರಿತವಾಗುತ್ತಿರಲು); ಎಲ್ಲ ಕಡೆ ಭಯದ ವಾತಾವರಣ ತುಂಬಿರಲು; ಎಲ್ಲರೂ ವಿಶ್ವಾಸಾರ್ಹತೆಯನ್ನು ಕಳೆದುಕೊಳ್ಳುತ್ತಿರಲು, ವಂಚನೆಗೆ ಒಳಗಾಗುತ್ತಿರಲು; ಬ್ರಹ್ಮಜಿಜ್ಞಾಸಾ ಭಾವನೆಯು ಉಪದ್ರವಕ್ಕೆ ಒಳಗಾಗಿರಲು (ಜಿಜ್ಞಾಸೆಯು ಬಿಟ್ಟಿರಲು); ದೇಶಗಳು ಅಗ್ನಿ ಬಾಧೆಯಿಂದ ಉರಿದು ಹೋಗುತ್ತಿರಲು; ಮಳೆ (ಬೆಳೆಗಳು) ಸುರಿಯುವುದೇ ನಿಂತಿರಲು; ಜನರು ಪರಸ್ಪರ ಒಗ್ಗಟ್ಟಿನಿಂದ ವಂಚಿತರಾಗುತ್ತಿರಲು; ವಿಶ್ವದಲ್ಲೆಲ್ಲಾ ದರೋಡೆಕಾರರೇ ತುಂಬಿರಲು - ಇಂತಹ ಅತ್ಯಂತ ಕೆಟ್ಟ ಕಾಲ ಬಂದಾಗ ಬ್ರಾಹ್ಮಣನು (ಬ್ರಹ್ಮನಿಷ್ಠನಾದ) ಹೇಗೆ ಬದುಕಬೇಕು?

ಸ್ವಯಂ ದಯಾಪರವಶನಾಗಿದ್ದು, ಮಕ್ಕಳು, ಮೊಮ್ಮಕ್ಕಳನ್ನು ಇಂತಹ ಆಪತ್ಕಾಲದಲ್ಲಿ ತ್ಯಜಿಸದೆ ಹೇಗೆ ಬದುಕಬೇಕು? ದಯವಿಟ್ಟು ತಿಳಿಸು.

ಪರಂತಪನಾದ ಭೀಷ್ಮನೇ! ಹೀಗೆ ಲೋಕದಲ್ಲಿ ಧರ್ಮನಿತಿಗಳು ಹೋಗಿ ಮಲಿನವಾಗಿರುವಾಗ, ರಾಜನು ಧರ್ಮ, ಅರ್ಥಗಳಿಂದ ಭ್ರಷ್ಟನಾಗದೇ ಹೇಗೆ ವರ್ತಿಸಬೇಕು? ಇದರ ದಾರಿ ಯಾವುದು?[೧]

---

೧ ಹೀನೇ ಪರಮಕೇ ಧರ್ಮೇ, ಸರ್ವಲೋಕಾತಿಲಂಘಿನಿ।
ಅಧರ್ಮೇ ಧರ್ಮತಾಂ ನೀತೇ, ಧರ್ಮೇ ಚಾಧರ್ಮತಾಂ ಗತೇ॥......
ಅವಿಶ್ವಸ್ತೇಷು ಸರ್ವೇಷು, ನಿತ್ಯಭೀತೇಷು ಪಾರ್ಥಿವ।
ನಿಕೃತ್ಯಾ ಹನ್ಯಮಾನೇಷು, ವಂಚಯತ್ಸು ಪರಸ್ಪರಮ್॥
ಸಂಪ್ರದೀಪ್ತೇಷು ದೇಶೇಷು, ಬ್ರಾಹ್ಮಣ್ಯೇ ಚಾಭಿಪೀಡಿತೇ।
ಅವರ್ಷತಿ ಚ ಪರ್ಜನ್ಯೇ................................॥
ಸರ್ವಸ್ಮಿನ್ ದಸ್ಯುಸಾದ್ಭೂತೇ ಪೃಥಿವ್ಯಾಮುಪಜೀವನೇ।
ಕೇನ ಸ್ವಿದ್ಬ್ರಾಹ್ಮಣೋ ಜೀವೇತ್, ಜಘನ್ಯೇ ಕಾಲ ಆಗತೇ॥..................
ಕಥಮಾಪತ್ಸು ವರ್ತೇತ, ತನ್ಮೇ ಬ್ರೂಹಿ ಪಿತಾಮಹ॥

ಭೀಷ್ಮರು ಧರ್ಮರಾಜನ ಮೇಲಿನ ಸಂಕೀರ್ಣ ಪ್ರಶ್ನೆಗಳಿಗೆ ಉತ್ತರಿಸುತ್ತಾರೆ.

'ಲೋಕದಲ್ಲಿ ಯೋಗ, ಕ್ಷೇಮ, ಒಳ್ಳೆಯ ಮಳೆಗಳಿಗೆ ಹಾಗೂ ಪ್ರಜೆಗಳಿಗೆ ಉಂಟಾಗುವ ವ್ಯಾಧಿ, ಮರಣ, ಭಯಇವುಗಳಿಗೆಲ್ಲರಾಜನೇಕಾರಣ. ಕೃತ, ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ (ನಡೆಯುವ ಸತ್ಫಲ, ದುಷ್ಫಲಗಳಿಗೂ ರಾಜನ ನಡತೆಯೇ ಕಾರಣ. ಇದರಲ್ಲಿ ಎರಡು ಮಾತಿಲ್ಲ. ಪ್ರಜೆಗಳಿಗೆ ದೋಷ (ತೊಂದರೆ)ವಾಗುವ ಕಾಲವು (ಕಲಿಯುಗ-ವಿಶೇಷವಾಗಿ) ಬಂದಾಗ (ಬ್ರಾಹ್ಮಣನು, ಕ್ಷತ್ರಿಯನು) ವಿಜ್ಞಾನದ ಬಲವನ್ನು (ವಿ-ವಿಷ್ಣು ಪರಮಾತ್ಮನ ಜ್ಞಾನ ಮತ್ತು ತನ್ನ ಶಾಸ್ತ್ರಜ್ಞಾನ ಬಲವನ್ನು ಬ್ರಾಹ್ಮಣನೂ, ಬಾಹುಬಲವನ್ನು ಆಶ್ರಯಿಸಿ ಕ್ಷತ್ರಿಯನೂ, ಕ್ಷತ್ರಿಯನು ಎರಡನ್ನೂ) ಆಶ್ರಯಿಸಿ ವರ್ತಿಸಬೇಕು, ಜೀವಿಸಬೇಕು. ಈ ವಿಷಯದಲ್ಲಿ ವಿಶ್ವಾಮಿತ್ರ ಹಾಗೂ ಚಂಡಾಲನ ನಡುವೆ, ಚಂಡಾಲನ ಮನೆಯಲ್ಲಿ ನಡೆದ ಸಂವಾದರೂಪದ ಇತಿಹಾಸವನ್ನು ಹೇಳುತ್ತೇನೆ.

ರಾಜನ್! ಹಿಂದೆ ಒಮ್ಮೆ ತ್ರೇತಾ, ದ್ವಾಪರಯುಗಗಳ ಸಂಧಿಕಾಲ ಬಂದಾಗ ಭಗವಂತನ ಶಾಸನದ ಪ್ರಕಾರ ಹನೆರೆಡು ವರ್ಷಗಳ ಕಾಲ ಮಳೆ ಸುರಿಯಲಿಲ್ಲ. ಅದು ಪ್ರಜೆಗಳ ಸಮೃದ್ಧಿಯುಗದ ಅಂತ್ಯಕಾಲ (ತ್ರೇತೆಯ ಕೊನೆಯ ಕಾಲ). ಇಂದ್ರ ಮಳೆ ಸುರಿಸಲಿಲ್ಲ. ಗುರುವಿನ ವಕ್ರದೃಷ್ಟಿ ಬೇರೆ ಇತ್ತು. ಚಂದ್ರನ ಹಿನ್ನಡೆಯ ಲಕ್ಷಣ ಬೇರೆ (ಸಸ್ಯಾಭಿವೃದ್ಧಿ ಹೇಗೆ ತಾನೇ ಇರಲು ಶಕ್ಯ?). ಅಷ್ಟೇ ಅಲ್ಲ ರಾತ್ರಿ ಹೊತ್ತು ಇಬ್ಬನಿ ಇರದಾಯಿತು. ಹೀಗಿರುವಾಗ ಮೋಡಗಳ ಸಾಲೆಲ್ಲಿ? ನದಿ, ಸರೋವರ, ಬಾವಿಗಳು ಬತ್ತಿದವು. ಅರವಟ್ಟಿಗೆಗಳಿಲ್ಲವಾದವು. ಯಜ್ಞ, ವೇದಾಧ್ಯಯನ, ಮಂಗಳಧ್ವನಿ, ವಷಟ್ಕಾರಗಳು, ಕೃಷಿ, ಗೋರಕ್ಷಣೆಗಳು, ನಾಶವಾದವು, ವಾಣಿಜ್ಯ ವ್ಯವಹಾರಗಳು ಕಾಣದಾದವು. ಇನ್ನು ಮಹೋತ್ಸವಗಳೆಲ್ಲಿ? ಎಲ್ಲೆಡೆ ಸಾವು, ನೋವುಗಳು, ಕಂಡಲ್ಲೆಲ್ಲ ಅಸ್ಥಿ ಮೂಳೆಗಳು. ಜನರು ಅಹಾರವಿಲ್ಲದೆ ಸತ್ತ ಚಿಹ್ನೆಗಳಿಗೆ ಸಾಕ್ಷಿಯಾದವು. ಕೆಲವಡೆ ಕಳ್ಳರು ದರೋಡೆಕೋರರ ಮತ್ತೆ ಕೆಲವೆಡೆ ರಾಜರೇ ಪ್ರಜೆಗಳ ಶೋಷಣೆ ಮಾಡುತ್ತಿರಲು, ಇವರ ಉಪದ್ರವದಿಂದ ಗ್ರಾಮ, ನಗರಗಳು ಖಾಲಿಖಾಲಿಯಾದವು. ಮನೆಗಳೂ ಸುಟ್ಟು ಹೋಗಿದ್ದವು. ಅನೇಕಕಡೆ ದೇವಮಂದಿರಗಳು ನಾಶವಾದವು. ವೃದ್ಧರು, ಬಾಲಕರು, ಗೋವು ಮೊದಲಾದ ಪ್ರಾಣಿಗಳೂ ಎಲ್ಲೂ ಕಾಣುತ್ತಿರಲಿಲ್ಲ. ಇದ್ದವರು ಒಬ್ಬರನ್ನೊಬ್ಬರು ಕಚ್ಚಾಡುತ್ತಾ ತಿನ್ನುತ್ತಿದ್ದರು.

ಭೂಮಿಯಲ್ಲಿ ಬ್ರಾಹ್ಮಣರು ಹತರಾಗಿದ್ದರು. ರಕ್ಷಕರೂ ಇಲ್ಲ, ಆಹಾರ ಕಣ್ಮರೆಯಾಗಿತ್ತು. ಜನರೆಲ್ಲ ಶವರಾಗಿದ್ದರು. ಋಷಿಗಳು ನಿತ್ಯನಿಯಮಗಳನ್ನು ಅಗ್ನಿಯಲ್ಲಿ ದೇವತಾರಾಧನೆಗಳನ್ನು ತ್ಯಜಿಸಿ ಎಲ್ಲೆಲ್ಲೋ ತಿರುಗಾಡಿದರು.

---

ಕಥಂ ಚ ರಾಜಾ ವರ್ತೇತ ಲೋಕೇ ಕಲುಷತಾಂ ಗತೇ ।
ಕಥಮರ್ಥಾಚ್ಚ ಧರ್ಮಾಚ್ಚ ನ ಹೀಯೇತ ಪರಂತಪ ॥ - ೧೧/೧-೮

ಇಂತಹ ಸಂದರ್ಭದಲ್ಲಿ ವಸತಿರಹಿತ, ಪೂಜ್ಯರಾದ, ವಿಶ್ವಾಮಿತ್ರಮಹರ್ಷಿಯು ಹಸಿವೆಯಿಂದ ಎಲ್ಲೆಲ್ಲೂ ಸುತ್ತಾಡಿ, ಒಂದು ದಿನ ಪರಿತಪಿಸುತ್ತಾ ಶ್ವಪಚರ (ನಾಯಿ ಮಾಂಸ ತಿನ್ನುವವರ), ಪ್ರಾಣಹಿಂಸೆಯನ್ನುಸಹಜವಾಗಿ ಮಾಡುವ ನಿವೇಶನಕ್ಕೆ(ಪ್ರದೇಶಕ್ಕೆ) ಹೋದರು. ಆ ಪ್ರದೇಶದಲ್ಲಿ ಪಡೆದ ಮಡಕೆಯ ಚೂರುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ನಾಯಿಗಳ ಚರ್ಮಗಳನ್ನೇ ಪರದೆಯನ್ನಾಗಿ ಹಾಕಿದ್ದರು. ಹಂದಿ, ಕತ್ತೆಗಳ ಮುರಿದ ಮೂಳೆಗಳು, ತಲೆ ಬುರುಡೆಗಳು ಅಲ್ಲಲ್ಲಿ ಬಿದ್ದಿದ್ದವು. ಹೆಣದ ಮೇಲಿನ ಬಟ್ಟೆಯನ್ನು ಅಲ್ಲಿ ಹಾಕಿದ್ದರು. ಹೀಗೆ ಆ ನಿವೇಶನ ತುಂಬಾ ಕೊಳೆಯಾಗಿತ್ತು. ಆನೆಯ ಚರ್ಮಗಳಿಂದ ನಿವೇಶನ ಅಲಂಕೃತವಾಗಿದ್ದರೆ ಹಾವಿನ ಪೊರೆಗಳಿಂದ ಕುಟೀರವು ಅಲಂಕೃತವಾಗಿತ್ತು. ಅಲ್ಲಿಯ ದೇವಮಂದಿರಗಳಲ್ಲಿ ಹದ್ದುಗಳ ರೆಕ್ಕೆಗಳನ್ನೇ ಧ್ವಜವಾಗಿ ಅಲಂಕರಿಸಿದ್ದರು. ನಾಯಿಗಳ ಗುಂಪೇ ಆ ನಿವೇಶನದ ಪರಿವಾರ.

ಗಾಧಿರಾಜನ ಮಗನೂ, ಮಹರ್ಷಿಯೂ ಆದ ವಿಶ್ವಾಮಿತ್ರನು ಹಸಿದು, ಬಸವಳಿದು ಆ ಬೇಡರ ಹಳ್ಳಿಗೆ ಬಂದು ಆಹಾರಕ್ಕಾಗಿ ಇಷ್ಟೇ ಬೇಡಿದರೂ, ಮಾಂಸ, ಅನ್ನ, ಫಲ, ಗಡ್ಡೆ ಯಾವುದೂ ಸಿಗದೆ ಆ ಚಂಡಾಲನ ನಿವೇಶನದಲ್ಲಿ ಕುಸಿದು ಬಿದ್ದನು. ತಾನು ವ್ಯರ್ಥವಾಗಿ ಸಾಯಬಾರದೆಂದು ಯೋಚಿಸಿ ಚಂಡಾಲನ ಮನೆ ಮುಂದೆ ಆಗ ತಾನೇ ಶಸ್ತ್ರದಿಂದ ಹತವಾದ ನೇತುಹಾಕಿದ್ದ ನಾಯಿಯ ಮಾಂಸವನ್ನು ನೋಡಿದನು. ಕದಿಯದೆ ಆ ಮಾಂಸವೂ ಸಿಗದೆಂದು ನಿರ್ಧರಿಸಿ, ಕಳ್ಳತನ ಮಾಡಿ ಪ್ರಾಣ ಉಳಿಸಿಕೊಳ್ಳಲು ನಿರ್ಧರಿಸಿದರು[೧].

೧. ಆಪತ್ಕಾಲದಲ್ಲಿ ತನಗಿಂತ ಹೀನರ ವಸ್ತುಗಳನ್ನು ಅಪಹರಿಸಬಹುದು. ಅದು ಸಿಗದಿದ್ದರೆ, ತನಗೆ ಸಮಾನರ ವಸ್ತುಗಳನ್ನು ಅಥವಾ ಅದೂ ಸಿಗದಿದ್ದಾಗ ತನಗಿಂತ ಉತ್ತಮರ ವಸ್ತುಗಳನ್ನು ಅಪಹರಿಸಬಹುದೆಂದು ಪ್ರಾಜ್ಞರು ಈ ಕ್ರಮವನ್ನು ಅಂಗೀಕರಿಸಿದ್ದಾರೆ[೨].

---

೧ ತತ್ರವಿಶ್ಯ ಕ್ಷುಧಾವಿಷ್ಟೋ ಗಾಧೇಃ ಪುತ್ರೋ ಮಹಾನೃಷಿಃ।......
ನ ಚ ಕ್ವಚಿದವಿಂದತ್ಸ ಭಿಕ್ಷಮಾಣೋಽಪಿ ಕೌಶಿಕಃ।
ಮಾಂಸಮನ್ನಂ ಮೂಲಫಲಮನ್ಯದ್ ವಾ ತತ್ರ ಕಿಂಚನ॥.....
ಪಪಾತ ಭೂಮೌ ದೌರ್ಬಲ್ಯಾತ್ತಸ್ಮಿಂಶ್ಚಂಡಾಲಪಕ್ಕಣೇ॥.........
ಸ ದದರ್ಶ ಶ್ವಮಾಂಸಸ್ಯ ಕುತಂತ್ರಿಕತತಿಂ ಮುನಿಃ।
ಚಂಡಾಲಸ್ಯ ಗೃಹೇ ರಾಜನ್ ಸದ್ಯಃ ಶಸ್ತ್ರಹತಸ್ಯ ಚ॥.....
ನ ಹೀದಾನೀಮುಪಾಯೋಽನ್ಯೋ ವಿದ್ಯತೇ ಪ್ರಾಣಧಾರಣೇ॥ - ೧೧/೩೧-೩೬

೨ ಆಪತ್ಸು ವಿಹಿತಂ ಸ್ತೇಯಂ ವಿಶಿಷ್ಟಸ್ಯ ನಿಹೀನತಃ।
ಪರಸ್ಪರಂ ಭವೇತ್ ಪೂರ್ವಮಾಸ್ಥೇಯಮಿತಿ ನಿಶ್ಚಯಃ॥
ಹೀನಾದಾದೇಯಮಾದೌ ಸ್ಯಾತ್ ಸಮಾನಾತ್ತದನಂತರಮ್।
ಅಸಂಭವಾದಾದದೀತ ವಿಶಿಷ್ಟಾದಪಿ ಧಾರ್ಮಿಕಾತ್॥ - ೧೧/೩೭,೩೮

೨. ಪ್ರಾಣ ಹೋಗುವ ಸಂದರ್ಭದಲ್ಲಿ ನಾನಿರುವುದರಿಂದ ನನಗದು ದೋಷವಾಗದು. ಹೀಗೆ ಯೋಚಿಸಿ, ಶ್ವಪಚನು ಮಲಗಿದ ಸ್ಥಳದಲ್ಲಿಯೇ ವಿಶ್ವಾಮಿತ್ರ ಮಲಗಿದನು. ಚಂಡಾಲರೆಲ್ಲರೂ ಮಲಗಿ ನಿದ್ರೆಯಲ್ಲಿದ್ದಾಗ ವಿಶ್ವಾಮಿತ್ರನು ಎದ್ದು ಆ ಮಾಂಸ ಕದಿಯಲು ಚಂಡಾಲನ ಗುಡಿಸಲನ್ನು ಪ್ರವೇಶಿಸಿದ[೧]. ಇದನ್ನು ಗಮನಿಸಿದ ಆ ಚಂಡಾಲ ಮಲಗಿದ್ದಲ್ಲೇ ಹೇಳಿದನು. ನನಗೆ ಎಚ್ಚರವಿದೆ. ಈಗ ನೀನು ಸತ್ತೇ ಹೋಗುವೆ (ಕದ್ದರೆ ನಾನು ನಿನ್ನನ್ನು ಕೊಂದೇ ಬಿಡುವೆ)[೨].

ಚಂಡಾಲನ ಮಾತಿಗೆ ಉದ್ವೇಗ, ಭಯದಿಂದ ಕೂಡಿದ ವಿಶ್ವಾಮಿತ್ರನು '**ನಾನು ವಿಶ್ವಾಮಿತ್ರ**' ಎಂದು ಹೇಳಿದನು[೩].

ಚಂಡಾಲನು ಆ ಮಾತನ್ನು ಕೇಳಿದ್ದೇ ತಡ, ಎದ್ದು ವಿಶ್ವಾಮಿತ್ರರ ಪಾದಗಳಿಗೆ ನಮಸ್ಕರಿಸಿ, 'ಬ್ರಹ್ಮಜ್ಞಾನಿಗಳೇ! ನಿಮಗೆ ನಾನೇನು ಮಾಡಲಿ' ಎಂದು ಕಣ್ಣೀರು ಸುರಿಸುತ್ತಾ ನುಡಿದನು[೪]. ವಿಶ್ವಾಮಿತ್ರನು 'ನನಗೆ ಹಸಿವು ತಡೆಯದಾಗಿದೆ. ಪ್ರಾಣ ಹೋಗುತ್ತಿದೆ. ನಾಯಿಯ ಸೊಂಟದ ಮಾಂಸವನ್ನು ತೆಗೆದುಕೊಳ್ಳುತ್ತೇನೆ. ನನ್ನ ಧರ್ಮ ಗೊತ್ತು. ಆದರೂ ನಾಯಿಯ ಮಾಂಸಕ್ಕೆ ಕೈ ಹಾಕಿದ್ದೇನೆ ಎಂದ. ಎಲ್ಲೂ ನನಗೆ ಯಾವ ಭಿಕ್ಷೆಯೂ ಸಿಗದೆ, ಇಲ್ಲಿಗೆ ಬಂದಿದ್ದೇನೆ. ಹಸಿವು ಧರ್ಮ ಕೆಡಿಸುತ್ತದೆ. ನನ್ನನ್ನು ಅಗ್ನಿಯಂತೆ ತಿಳಿ. ಅಗ್ನಿಯು ಕೆಲ ಸಂದರ್ಭಗಳಲ್ಲಿ ಎಲ್ಲವನ್ನೂ ತಿನ್ನುತ್ತದೋ, ಹಾಗೆಯೇ ನಾನೂ ಬ್ರಹ್ಮನಿಷ್ಠನಾದರೂ ಎಲ್ಲವನ್ನೂ ತಿನ್ನುವೆ[೫].

೧ ಸೋಽಹಮಂತೇತ್ಯವಸ್ಥಾಯಾಂ ಹರಮಾಣಃ ಪರಿಗ್ರಹಾತ್ ।
ನ ಸ್ತೇಯದೋಷಂ ಪಶ್ಯಾಮಿ ಹರಿಷ್ಯಾಮ್ಯೇತದಾಮಿಷಮ್ ॥
ಏತಾಂ ಬುದ್ಧಿ ಸಮಾಸ್ಥಾಯ ವಿಶ್ವಾಮಿತ್ರೋ ಮಹಾಮುನಿಃ ।
ತಸ್ಮಿನ್ ದೇಶೇ ಪ್ರಸುಷ್ವಾಪ ಪತಿತೋ ಯತ್ರ ಭಾರತ ॥
ಸ ವಿಗಾಢಾಂ ನಿಶಾಂ ದೃಷ್ಟ್ವಾ ಸುಪ್ತೇ ಚಂಡಾಲಪಕ್ಕಣೇ ।
ಶನೈರುತ್ಥಾಯ ಭಗವಾನ್ ಪ್ರವಿವೇಶ ಕುಟೀಮಥಮ್ ॥ - ೧೧/೩೯-೪೧

೨ ಸ ಸುಪ್ತ ಏವ ಚಂಡಾಲಃ ಶ್ಲೇಷ್ಮಾಪಿಹಿತಲೋಚನಃ ।
ಪರಿಭಿನ್ನಸ್ವರೋ ರೂಕ್ಷ ಉವಾಚಾಪ್ರಿಯದರ್ಶನಃ ॥
ಕಃ ಕುತಂತೀಂ ಘಟ್ಟಯತಿ ಸುಪ್ತೇ ಚಂಡಾಲಪಕ್ಕಣೇ ।
ಜಾಗರ್ಮಿ ನಾವಸುಪ್ತೋಽಸ್ಮಿ ಹತೋಽಸೀತಿ ಚ ದಾರುಣಃ ॥ - ೧೧/೪೨,೪೩

೩ ವಿಶ್ವಾಮಿತ್ರೋಽಹಮಿತ್ಯೇವ ಸಹಸಾ ತಮುವಾಚ ಹ ।
ಸಹಸಾಭ್ಯಾಗತಭಯಃ ಸೋದ್ವೇಗಸ್ತೇನ ಕರ್ಮಣಾ ॥ - ೧೧/೪೪

೪ ಚಂಡಾಲಸ್ತದ್ವಚಃ ಶ್ರುತ್ವಾ ಮಹರ್ಷೇರ್ಭಾವಿತಾತ್ಮನಃ ।
ಶಯನಾದುಪಸಂಭ್ರಾಂತ ಇಯೇಷ ಪತಿತುಂ ತತಃ ॥
ಸ ವಿಸೃಜ್ಯಾಶ್ರು ನೇತ್ರಾಭ್ಯಾಂ ಬಹುಮಾನಾತ್ಕೃತಾಂಜಲಿಃ ।
ಉವಾಚ ಕೌಶಿಕಂ ರಾತ್ರೌ ಬ್ರಹ್ಮನ್ ಕಿಂ ತೇ ಚಿಕೀರ್ಷಿತಮ್ ॥ - ೧೧/೪೫,೪೬

೫ ವಿಶ್ವಾಮಿತ್ರಸ್ತು ಮಾತಂಗಮುವಾಚ ಪರಿಸಾಂತ್ವಯನ್ ।

ವಿಶ್ವಾಮಿತ್ರರ ಮಾತಿಗೆ ಚಂಡಾಲನು ಹೇಳಿದ –

'ಪ್ರಾಣಿಗಳಲ್ಲಿ ಅಧಮ ನಾಯಿ. ಅದರ ಸೊಂಟದ ಮಾಂಸ ಇನ್ನೂ ಕೀಳು. ಅದೂ ಚಂಡಾಲನಿಂದ ಸ್ವೀಕರಿಸುವುದು. ಪ್ರಾಣಧಾರಣೆಗೆ ಬೇರೇ ಉಪಾಯ ಚಿಂತಿಸಿ. ಮಾಂಸದ ಮೇಲಿನ ಆಸೆಯಿಂದ ನಿಮ್ಮ ತಪಸ್ಸನ್ನು ಹಾಳು ಮಾಡಿಕೊಳ್ಳದಿರಿ. ಇದು ನಿಷಿದ್ಧ; ಈ ಧರ್ಮಸಾಂಕರ್ಯಕರವಾದ ಕೆಲಸ ಮಾಡಬೇಡಿ; ನೀವು ಧರ್ಮ ಬಲ್ಲವರಲ್ಲಿಯೇ ಶ್ರೇಷ್ಠರು[೧].

ಚಂಡಾಲನಿಗೆ **ವಿಶ್ವಾಮಿತ್ರರು** 'ಹಸಿವೆಯಿಂದ ಸಾಯದೆ ಪ್ರಾಣ ಉಳಿಸಿಕೊಳ್ಳಲು ಬೇಕಾಗಿದೆ. ಬದುಕಿ ಧರ್ಮಸಾಧಿಸಬಹುದು. ಮರಣಕ್ಕಿಂತ ಬದುಕು ಶ್ರೇಯಸ್ಕರ. ಪವಿತ್ರವಾದ ವಸ್ತುಗಳ ಮತ್ತು ಎಲ್ಲ ವಸ್ತುಗಳ ಭಕ್ಷಣ ಬ್ರಾಹ್ಮಣರ ಧರ್ಮ. ನನಗೆ ವೇದವೇ ಅಗ್ನಿ. ಅದೇ ನನ್ನ ಬಲ. ಹಸಿವೆಯ ಶಮನಕ್ಕಾಗಿ ತಿನ್ನುತ್ತೇನೆ (ನಿಷಿದ್ಧ ಪದಾರ್ಥವನ್ನಾದರೂ). ಬದುಕಿ ಧರ್ಮವನ್ನು ಆಚರಿಸುತ್ತೇನೆ. ತಪಸ್ಸು ಹಾಗೂ ವಿದ್ಯೆಯಿಂದ ಪಾಪ ಪರಿಹರಿಸಿಕೊಳ್ಳುವೆ. ಬೆಳಕು ಗಾಢವಾದ ಕತ್ತಲನ್ನೂ ಪರಿಹರಿಸುತ್ತದೆಯಲ್ಲವೇ?[೨]

---

ಕ್ಷುಧಿತೋಽಹಂ ಗತಪ್ರಾಣೋ ಹರಿಷ್ಯಾಮಿ ಶ್ವಜಾಘನೀಮ್ ॥
ಅವಸೀದಂತಿ ಮೇ ಪ್ರಾಣಾಃ ಸ್ಮೃತಿರ್ಮೇ ನಶ್ಯತಿ ಕ್ಷುಧಾ ।
ಸ್ವಧರ್ಮಂ ಬುಧ್ಯಮಾನೋಽಪಿ ಹರಿಷ್ಯಾಮಿ ಶ್ವಜಾಘನೀಮ್ ॥
ಅಟನ್ ಭೈಕ್ಷಂ ನ ವಿಂದಾಮಿ ಯದಾ ಯುಷ್ಮಾಕಮಾಲಯೇ ।
ತದಾ ಬುದ್ಧಿಃ ಕೃತಾ ಪಾಪೇ ಹರಿಷ್ಯಾಮಿ ಶ್ವಜಾಘನೀಮ್ ॥
ತೃಷಿತಃ ಕಲುಷಂ ಪಾತಾ ನಾಸ್ತಿ ಹ್ರೀರಶನಾರ್ಥಿನಃ ।
ಕ್ಷುದ್ಧರ್ಮಂ ದೂಷಯತ್ಯತ್ರ ಹರಿಷ್ಯಾಮಿ ಶ್ವಜಾಘನೀಮ್ ॥
ಅಗ್ನಿರ್ಮುಖಂ ಪುರೋಧಾಶ್ಚ ದೇವಾನಾಂ ಶುಚಿಪಾದ್ ವಿಭುಃ ।
ಯಥಾ ಸ ಸರ್ವಭುಗ್ಬ್ರಹ್ಮಾ ತಥಾ ಮಾಂ ವಿದ್ಧಿ ಧರ್ಮತಃ ॥ – ೧೧/೪೮

೧ ಸಾಧ್ವನ್ಯಮನುಪಶ್ಯ ತ್ವಮುಪಾಯಂ ಪ್ರಾಣಧಾರಣೇ ।
ನ ಮಾಂಸಲೋಭಾತ್ ತಪಸೋ ನಾಶಸ್ತೇ ಸ್ಯಾನ್ಮಹಾಮುನೇ ॥
ಜಾನತೋಽವಿಹಿತೋ ಮಾರ್ಗೋ ನ ಕಾರ್ಯೋ ಧರ್ಮಸಂಕರಃ ।
ಮಾ ಸ್ಮ ಧರ್ಮಂ ಪರಿತ್ಯಾಕ್ಷೀಸ್ತ್ವಂ ಹಿ ಧರ್ಮವಿದುತ್ತಮಃ ॥ – ೧೧/೫೫,೫೬

೨ ಐಂದ್ರೋ ಧರ್ಮಃ ಕ್ಷತ್ರಿಯಾಣಾಂ ಬ್ರಾಹ್ಮಣಾನಾಮಥಾಗ್ನಿಕಃ ।
ಬ್ರಹ್ಮವಹ್ನಿರ್ಮಮ ಬಲಂ ಭೋಕ್ಷ್ಯಾಮಿ ಶಮಯನ್ ಕ್ಷುಧಮ್ ॥
ಯಥಾ ಯಥಾ ವೈ ಜೀವೇದ್ಧಿ ತತ್ ಕರ್ತವ್ಯಮಪೀಡಯಾ ।
ಜೀವಿತಂ ಮರಣಾಚ್ಛ್ರೇಯೋ ಜೀವನ್ ಧರ್ಮಮವಾಪ್ನುಯಾತ್ ॥
ಸೋಽಹಂ ಜೀವಿತಮಾಕಾಂಕ್ಷನ್ನಭಕ್ಷಸ್ಯಾಪಿ ಭಕ್ಷಣಮ್ ।
ವ್ಯವಸ್ಯೇ ಬುದ್ಧಿಪೂರ್ವಂ ವೈ ತದ್ಭವಾನನುಮನ್ಯತಾಮ್ ॥
ಜೀವನ್ ಧರ್ಮಂ ಚರಿಷ್ಯಾಮಿ ಪ್ರಣೋತ್ಸ್ಯಾಮ್ಯಶುಭಾನಿ ಚ ।

**ಶ್ವಪಚ** - ನಾಯಿ ಮಾಂಸ ತಿಂದು ಪ್ರಾಣ ಉಳಿಸಿಕೊಳ್ಳಲಾರೆ. ದೀರ್ಘಾಯುಷ್ಯವೂ ಸಿಗದು. ಬೇರೆ ಭಿಕ್ಷೆ ಬೇಡು: ಬ್ರಾಹ್ಮಣರು ತಿನ್ನಬಾರದು[೧].

**ವಿಶ್ವಾಮಿತ್ರ** - [೨]ದುರ್ಭಿಕ್ಷೆಯ ಈ ಕಾಲದಲ್ಲಿ ತಿನ್ನಲು ಯೋಗ್ಯ ಮಾಂಸ ಸಿಗದು. ಅನ್ನವೂ ಸಿಗದು. ನನ್ನಲ್ಲಿ ಹಣವೂ ಇಲ್ಲ, ನಾನು ಎಲ್ಲೂ ಹೋಗಲಾರೆ. ಈ ನಾಯಿಮಾಂಸದಲ್ಲಿಯೇ ಆರೂ ರಸಗಳ ಸಮ ಇದೆ ಎಂದು ಭಾವಿಸಿದ್ದೇನೆ.

**ಶ್ವಪಚ** - [೩]ಶಾಸ್ತ್ರರೀತ್ಯಾ ನಾಯಿಮಾಂಸ ನಿಷಿದ್ಧವಲ್ಲವೇ?

**ವಿಶ್ವಾಮಿತ್ರ** - [೪]ಅಗಸ್ತ್ಯರು ನರಮಾಂಸ, ಅಸುರರಾದ ವಾತಾಪಿಯ ಮಾಂಸ ತಿಂದರಲ್ಲ, ಆಪತ್ಕಾಲದಲ್ಲಿ ನಾಯಿಮಾಂಸವೂ ಸರಿ. ಶಿಷ್ಟರ ಆಚರಣೆಗೆ ಇದೆ. ಈ ನಾಯಿಯ ತೊಡೆಯ ಮಾಂಸ, ಯಾಗದ ಹವಿಸ್ಸಿಗಿಂತಲೂ ಶ್ರೇಷ್ಠವೆಂದು ಭಾವಿಸಿದ್ದೇನೆ.

**ಶ್ವಪಚ** - [೫]ಅಸತ್ಪುರುಷರ ಆಚರಣೆ ಸನಾತನ ಧರ್ಮವಾಗದು... (ಕೆಲವರ) ಆಚರಣೆಗಳಿಗೆ ಅಸಮ್ಮತಾರ್ಥ ಹೇಳುವುದು ತಪ್ಪು (ಅಗಸ್ತ್ಯರ ಆಚರಣೆ ಬಗ್ಗೆ).

**ವಿಶ್ವಾಮಿತ್ರ** - ನನ್ನ ಅಭಿಪ್ರಾಯದಲ್ಲಿ ಜಿಂಕೆ, ನಾಯಿಯ ಜಘನ್ಯಮಾಂಸ ಎರಡೂ ತಿನ್ನಲು ಯೋಗ್ಯ. ಈ ದೇಹ ಉಳಿಸಲು ನಾಯಿಮಾಂಸ ಅಪಹರಿಸುವೆ. ನನ್ನನ್ನು ಹೀಗೆ ಮಾಡಬೇಡವೆನ್ನುವವರು ಕ್ರೂರಿಗಳೇ ಸರಿ.

**ಶ್ವಪಚ** - ಹಸಿವೆಯಿಂದ ಪೀಡಿತರಾದವರು ಪ್ರಾಣತ್ಯಾಗ ಮಾಡುತ್ತಾರೆ. ನಿಷಿದ್ಧವನ್ನು ತಿನ್ನುವುದಿಲ್ಲ. ಹಸಿವೆಯಲ್ಲಿಯೇ ಇದ್ದು ನಿನ್ನ ಅಭಿಲಾಷೆ ಪೂರೈಸಿಕೋ.

---

ತಪೋಭಿರ್ವಿದ್ಯಯಾ ಚೈವ ಜ್ಯೋತೀಂಷೀವ ಮಹತ್ತಮಃ ॥ - ೧೧/೬೦-೬೩

೧ ನೈತತ್ಖಾದನ್ ಪ್ರಾಪ್ಸ್ಯಸೇ ಪ್ರಾಣಮದ್ಯ ನಾಯುರ್ದೀರ್ಘಂ ನಾಮೃತಸ್ಯೇವ ತೃಪ್ತಿಮ್ ।
ಭಿಕ್ಷಾಮನ್ಯಾಂ ಭಿಕ್ಷ ಮಾ ತೇ ಮನೋಽಸ್ತು ಶ್ವಭಕ್ಷಣೇ ಶ್ವಾ ಹ್ಯಭಕ್ಷ್ಯೋ ದ್ವಿಜಾನಾಮ್ ॥
- ೧೧/೬೪

೨ ನ ದುರ್ಭಿಕ್ಷೇ ಸುಲಭಂ ಮಾಂಸಮದ್ಯಂ ಶ್ವಪಾಕ ನಾನ್ನಂ ನ ಚ ಮೇಽಸ್ತಿ ವಿತ್ತಮ್ ।
ಕ್ಷುಧಾರ್ತಶ್ಚಾಹಮಗತಿರ್ನಿರಾಶಃ ಶ್ವಮಾಂಸೇ ಚಾಸ್ಮಿನ್ ಷಡ್ರಸಾನ್ ಸಾಧು ಮನ್ಯೇ ॥ - ೧೧/೬೫

೩. ಯದಿ ಶಾಸ್ತ್ರಂ ಪ್ರಮಾಣಂ ತೇ ಮಾ ಭಕ್ಷ್ಯೇ ಮಾನಸಂ ಕೃಥಾಃ ॥ - ೧೧/೬೬

೪ ಅಗಸ್ತ್ಯೇನಾಸುರೋ ಜಗ್ಧೋ ವಾತಾಪಿಃ ಕ್ಷುಧಿತೇನ ವೈ । - ೧೧/೬೭

೫ ಅಸತಾ ಯತ್ಸಮಾಚೀರ್ಣಂ ನ ಸ ಧರ್ಮಃ ಸನಾತನಃ ।
ನಾವೃತ್ತಮನುಕಾರ್ಯಂ ವೈ ಮಾ ಛಲೇನಾನೃತಂ ಕೃಥಾಃ ॥
ಕಾಮಂ ನರಾ ಜೀವಿತಂ ಸಂತ್ಯಜಂತಿ ನ ಚಾಭಕ್ಷ್ಯೇ ಪ್ರತಿಕುರ್ವಂತಿ ತತ್ರ ।
ಸರ್ವಾನ್ ಕಾಮಾನ್ ಪ್ರಾಪ್ನುವಂತೀಹ ವಿದ್ವನ್ ಪ್ರಿಯಸ್ವ ಕಾಮಂ ಸಹಿತಃ ಕ್ಷುಧಾ ವೈ ॥
- ೧೧/೭೦,೭೪

**ವಿಶ್ವಾಮಿತ್ರ** – ಈಗ ಸತ್ತರೆ, ನಂತರ ಒಳ್ಳೆಯ ಜನ್ಮ ಸಿಗುವ ಬಗ್ಗೆ ಸಂಶಯವಿದೆ. ನಾನು ಹೇಗಾದರೂ ಬದುಕಿ ಪೂರ್ಣಕರ್ಮಗಳನ್ನು ಮಾಡಲು ಈಗ ದೇಹ ರಕ್ಷಣೆಗೆ ನಿಷಿದ್ಧವನ್ನು ತಿನ್ನುತ್ತೇನೆ.

**ಶ್ವಪಚ** – ಈ ದುಷ್ಕೃತ್ಯವು ನಿನ್ನಿಂದ ಆಗಬಾರದು. ಆದ್ದರಿಂದ ಬ್ರಾಹ್ಮಣನಾದ ನಿನ್ನನ್ನು ನಿಂದಿಸುತ್ತಿದ್ದೇನೆ, ತಡೆಯುತ್ತಿದ್ದೇನೆ, ಬೋಧಿಸುತ್ತಿದ್ದೇನೆ.

**ವಿಶ್ವಾಮಿತ್ರ** – ನಿನಗೆ ಧರ್ಮಬೋಧನೆಗೆ ಅಧಿಕಾರವಿಲ್ಲ, ಆತ್ಮಪ್ರಶಂಸೆ ಮಾಡಿಕೊಳ್ಳಬೇಡ[೧].

**ಶ್ವಪಚ** – [೨]ನಿನ್ನ ಹಿತ ಚಿಂತಕನಾಗಿ ಅನುಶಾಸನ ಮಾಡುತ್ತಿದ್ದೇನೆ. ಅದಕ್ಕನುಗುಣವಾಗಿ ಶ್ರೇಯಸ್ಕರವಾದುದನ್ನು ಮಾಡು. ನಿನ್ನ ಮೇಲೆ ನನಗೆ ಕೃಪೆ ಇದೆ. ಲೋಭದಿಂದ ನಾಯಿಯನ್ನು ತಿನ್ನಬಾರದು.

**ವಿಶ್ವಾಮಿತ್ರ** – [೩]ನನ್ನ ಹಿತಚಿಂತಕನಾಗಿದ್ದರೆ, ನನ್ನನ್ನು ಆಪತ್ತಿನಿಂದ ಉದ್ಧರಿಸು. ಈ ಮಾಂಸ ನನಗೆ ಕೊಡು.

**ಶ್ವಪಚ** – [೪]ನನಗೆ ಇದನ್ನು ಕೊಡಲು ಇಚ್ಛೆಯಿಲ್ಲ, ಇದು ನನ್ನ ಆಹಾರ. ನೀನು ಕದ್ದರೆ ನಾನು ಸುಮ್ಮನೆ ಇರುವುದಿಲ್ಲ. ಇಲ್ಲಿ ನಾನು ಕೊಡುವ, ನೀನು ಪ್ರತಿಗ್ರಹ ಮಾಡುವ, ಇಬ್ಬರಿಗೂ ಪಾಪ ಬರುತ್ತದೆ.

**ವಿಶ್ವಾಮಿತ್ರ** – ಇಂದು ನಾನು ಈ ಪಾಪಕರ್ಮ ಮಾಡಿ ಬದುಕಿ, ಮುಂದೆ ಮಹಾ ಪವಿತ್ರ ಆಚರಣೆ (ಪ್ರಾಯಶ್ಚಿತ್ತ, ತಪಸ್ಸು ಇತ್ಯಾದಿ) ಮಾಡಿಕೊಳ್ಳುವೆ. ಇದರಿಂದ ಬಹಳ ಪವಿತ್ರನಾಗಿ ಧರ್ಮದ ಫಲವೇ ನನಗೆ ಸಿಗುತ್ತದೆ. ಪ್ರಾಣರಕ್ಷಣೆಯನ್ನು ಮಾಡಿಕೊಂಡು ಧರ್ಮಸಾಧನೆ; ಆಹಾರವಿಲ್ಲದೆ ಪ್ರಾಣತ್ಯಾಗ, ಇವೆರಡರಲ್ಲಿ ಯಾವುದು ಒಳ್ಳೆಯದು ನೀನೇ ಹೇಳು[೫].

**ಶ್ವಪಚ** – ಈ ವಿಷಯ ನೀನೇ ಚೆನ್ನಾಗಿ ತಿಳಿದಿರುವೆ. ಸಾಕ್ಷಿಯೇ ಇದಕ್ಕೆ ಪ್ರಮಾಣ. ನಾಯಿಮಾಂಸ ತಿನ್ನಲು ಯೋಗ್ಯವೆಂದು ಯಾರು ಭಾವಿಸುತ್ತಾರೋ, ಅವರಿಗೆ ಯಾವುದೂ ತ್ಯಾಜ್ಯವಲ್ಲವೆಂದು ನನ್ನ ಅಭಿಮತ:

---

೧ ನ ತೇಽಧಿಕಾರೋ ಧರ್ಮೇಽಸ್ತಿ ಮಾ ಭೂರಾತ್ಮಪ್ರಶಂಸಕಃ। – ೧೧/೭೮

೨ ಸುಹೃದ್ಭೂತ್ವಾನುಶಾಸ್ಮಿ ತ್ವಾ ಕೃಪಾ ಹಿ ತ್ವಯಿ ಮೇ ದ್ವಿಜ।
ತದೇವಂ ಶ್ರೇಯ ಆಧತ್ಸ್ವ ಮಾ ಲೋಭಾಚ್ಛ್ವಾನಮಾದಿಥಾಃ॥ – ೧೧/೭೯

೩ ಸುಹೃನ್ಮೇ ತ್ವಂ ಸುಖೇಪ್ಸುಶ್ಚೇದಾಪದೋ ಮಾಂ ಸಮುದ್ಧರ।
ಜಾನೇಽಹಂ ಧರ್ಮತೋಽತ್ಮಾನಮುತ್ಸೃಜೇಮಾಂ ಶ್ವಜಾಘನೀಮ್॥ – ೧೧/೮೦

೪ ನೈವೋತ್ಸಹೇ ಭವತೇ ದಾತುಮೇತಾಂ ನೋಪೇಕ್ಷಿತುಂ ಹ್ರಿಯಮಾಣಂ ಸ್ವಮನ್ನಮ್।
ಉಭೌ ಸ್ಯಾವಃ ಸ್ವಮಲೇನಾವಲಿಪ್ತೌ ದಾತಾಹಂ ಚ ತ್ವಂ ಚ ವಿಪ್ರ ಪ್ರತೀಚ್ಛನ್॥ – ೧೧/೮೧

೫ ಅದ್ಯಾಹಮೇತದ್ ವೃಜಿನಂ ಕರ್ಮ ಕೃತ್ವಾ ಜೀವಂಶ್ಚರಿಷ್ಯಾಮಿ ಮಹಾಪವಿತ್ರಮ್।
ಪ್ರಪೂತಾತ್ಮಾ ಧರ್ಮಮೇವಾಭಿಪತ್ಸ್ಯೇ ಯದೇತಯೋರ್ಗುರು ತದ್ವೈ ಬ್ರವೀಹಿ॥ – ೧೧/೮೨

**ಆತ್ಮೈವ ಸಾಕ್ಷೀ ಕಿಲ ಲೋಕಕೃತ್ಯೇ ತ್ವಮೇವ ಜಾನಾಸಿ ಯದತ್ರ ದುಷ್ಟಮ್ ।**
**ಯೋ ಹ್ಯಾದ್ರಿಯೇದ್ ಭಕ್ಷ್ಯಮಿತಿ ಶ್ವಮಾಂಸಂ ಮನ್ಯೇ ನ ತಸ್ಯಾಸ್ತಿ ವಿವರ್ಜನೀಯಮ್ ॥**
**- ೧೧/೮೩**

**ವಿಶ್ವಾಮಿತ್ರ** - [೧]ನಿಮಿತ್ತಗಳಿಂದ (ಪ್ರಾಣ ಉಳಿಸಿಕೊಳ್ಳುವುದು ಇತ್ಯಾದಿ) ನಿಷಿದ್ಧ ಕೆಲಸಗಳನ್ನು ಮಾಡುವವನಿಗೆ ಅದರಿಂದ ದೋಷವಿಲ್ಲ. ಮಿತ್ರನೇ! ಆಗಲೇಬೇಕಾದ ಕೆಲಸವು ಆದ ಮೇಲೆ ನಿಷಿದ್ಧ ಕೆಲಸವನ್ನು ಮುಂದುವರಿಸಬಾರದು (ಹಾಗೆ ಮಾಡಲು ವಿನಾಯ್ತಿ ಇಲ್ಲ). ಅದರಲ್ಲೂ ನಿಷಿದ್ಧ ಪದಾರ್ಥದ ಭಕ್ಷಣ ಸರ್ವಥಾ ಸರಿಯಲ್ಲ.

**ಶ್ವಪಚ** - [೨]ಪ್ರಾಣರಕ್ಷಣೆಗೋಸ್ಕರ ಇದನ್ನು ತಿನ್ನುವುದು ಸರಿಯಾದಲ್ಲಿ ವೇದವಾಗಲೀ, ಧರ್ಮವಾಗಲೀ, ಅಡ್ಡಿಯಾಗದು. ಆದ್ದರಿಂದ ತಿಂದರೆ ಅಥವಾ ತಿನ್ನದಿದ್ದರೆ ನಾನು ದೋಷವನ್ನು ಕಾಣವುದಿಲ್ಲ.

**ವಿಶ್ವಾಮಿತ್ರ** - [೩]ನಾಯಿಮಾಂಸಭಕ್ಷಣ ಪಾತಕವೆಂಬ ಪ್ರಮಾಣವಿಲ್ಲ. ಸುರಾಪಾನದಿಂದ ಪತಿತನಾಗುತ್ತಾನೆ ಎಂದು ಪ್ರಮಾಣವಿದೆ. ಆಪತ್ಕಾಲದಲ್ಲಿ ನಾಯಿಮಾಂಸಭಕ್ಷಣ ಅಲ್ಪಾಪಕ್ಕೆ ಕಾರಣವಾದರೂ, ಬ್ರಾಹ್ಮಣ್ಯ ಹಾಗೂ ಪುಣ್ಯಹಾನಿ ಉಂಟುಮಾಡುವುದಿಲ್ಲ.

**ಶ್ವಪಚ** - [೪]ಯಾರು ನಾಯಿಮಾಂಸವನ್ನು ಆಗ್ರಹದಿಂದ ಪಡೆಯುತ್ತಾರೋ, ಅವನಿಗೆ ಶಿಕ್ಷೆ ಆಗುತ್ತದೆ. ಅದನ್ನು ಸಹಿಸಲೇಬೇಕು. ಕಾರಣ ಅದು ಅಶುದ್ಧಸ್ಥಳ, ಹೀನಕರ್ಮಗಳಿಂದ ಹೀನ ಮನುಷ್ಯನಿಂದ ಪಡೆದಾಗಿರುತ್ತದೆ. ಅದು ಸದಾಚಾರನಿಷ್ಠ ಪಂಡಿತನನ್ನು ಬಾಧಿಸುತ್ತದೆ.

[೫]ಹೀಗೆ ನುಡಿದ ಶ್ವಪಚನು ಮತ್ತೇನೂ ಮಾತನಾಡಲಿಲ್ಲ. ಆದರೆ ನಾಯಿಮಾಂಸ ತಿನ್ನಲು ನಿಶ್ಚಯಿಸಿದ ವಿಶ್ವಾಮಿತ್ರನು ಆ ನಾಯಿಯ ಐದು ಅಂಗಗಳಿಂದ ಕೂಡಿದ ತೊಡೆಯ ಮಾಂಸವನ್ನು ತೆಗೆದುಕೊಂಡು ವನಕ್ಕೆ ಹೋದನು[೬].

---

೧ ಉಪಾಧಾನ್ಯೈಃ ಸಾಧತೇ ನಾಪಿ ದೋಷಃ ಕಾರ್ಯೇ ಸಿದ್ಧೇ ಮಿತ್ರ ನಾತ್ರಾಪವಾದಃ ।
ಅಸ್ಮಿನ್ಹಿಂಸಾ ನಾನೃತೇ ವಾಕ್ಯಲೇಶೋ ಭಕ್ಷ್ಯಕ್ರಿಯಾ ತತ್ರ ನ ತದ್ ಗರೀಯಃ ॥ - ೧೧/೮೪

೨ ಯದ್ಯೇಷ ಹೇತುಸ್ತವ ತತ್ಸ್ವಾದನೇ ಸ್ಯಾತ್ ನ ತೇ ವೇದಃ ಕಾರಣಂ ನಾಪಿ ಧರ್ಮಃ ।
ತಸ್ಮಾದ್ ಭಕ್ಷ್ಯೇ ಭಕ್ಷಣೇ ವಾ ದ್ವಿಜೇಂದ್ರ ದೋಷಂ ನ ಪಶ್ಯಾಮಿ ಯದರ್ಥಮಾಹ ॥ - ೧೧/೮೫

೩ ನ ಪಾತಕಂ ಭಕ್ಷಣಮಸ್ಯ ದೃಷ್ಟಂ ಸುರಾಂ ಪೀತ್ವಾ ಪತತೀತಿ ಶಬ್ದಃ ।
ಅನ್ಯೋನ್ಯಕಾರ್ಯಾಣಿ ಯಥಾ ತಥೈವ ನ ಲೇಪಮಾತ್ರೇಣ ಕೃತಂ ಹಿನಸ್ತಿ ॥ - ೧೧/೮೬

೪ ಅಸ್ಥಾನತೋ ಹೀನತಃ ಕುತ್ಸಿತಾದ್ವಾ ತಂ ವಿದ್ವಾಂಸಂ ಬಾಧತೇ ಸಾಧುವೃತ್ತಮ್ ।
ಸ್ಥಾನಂ ಪುನರ್ಯೋ ಲಭತೇಽತಿಭಂಗಾತ್ ತೇನಾಪಿ ದಂಡಃ ಪ್ರಹಿತಃ ಸ ಏವ ॥ - ೧೧/೮೭

೫ ಏವಮುಕ್ತ್ವಾ ನಿವವೃತೇ ಮಾತಂಗಃ ಕೌಶಿಕಂ ತದಾ ।
ವಿಶ್ವಾಮಿತ್ರೋ ಜಹಾರೈವ ಕೃತಬುದ್ಧಿಃ ಶ್ವಜಾಘನೀಮ್ ॥ - ೧೧/೮೮

೬ ತತೋ ಜಗ್ರಾಹ ಪಂಚಾಂಗೀಂ ಜೀವಿತಾರ್ಥೀ ಮಹಾಮುನಿಃ ।

[1]ಆಗಲೇ ಇಂದ್ರನು ಧಾರಾಕಾರವಾಗಿ ಮಳೆ ಸುರಿಸಿದನು. ಎಲ್ಲ ಜೀವರಿಗೆ ಜೀವವುಂಟಾಯಿತು. ಸಸ್ಯಗಳೂ ಹುಟ್ಟಿದವು. ವಿಶ್ವಾಮಿತ್ರನು ಕೂಡಾ ತಪಸ್ಸಿನಿಂದ ಎಲ್ಲ ದೋಷಗಳನ್ನು ದಹಿಸಿಕೊಂಡನು. ನಂತರ ದೀರ್ಘಕಾಲ ತಪವಗೈದು ಅದ್ಭುತಸಿದ್ಧಿಯನ್ನೂ ಪಡೆದನು[2].

ಹೀಗೆ ವ್ಯಸನದಲ್ಲಿ ಸಿಲುಕಿ, ಬದುಕಲು ಬಯಸುವ ಪ್ರಾಜ್ಞನು ದೈನ್ಯತ್ಯಾಗಮಾಡಿ, ಧೀರನಾಗಿ, ಎಲ್ಲ ಉಪಾಯಗಳಿಂದ ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕು. ಇಂತಹ ಮನೋಭಾವದಿಂದಲೇ ಬದುಕುತ್ತಾನೆ. ಪುಣ್ಯಸಂಪಾದಿಸುತ್ತಾನೆ. ಮಾಂಗಲ್ಯ ಹೊಂದುತ್ತಾನೆ.

ಆದ್ದರಿಂದ ಧರ್ಮರಾಜನೇ ಧರ್ಮಾಧರ್ಮನಿಶ್ಚಯ ಮಾಡಲು ಜ್ಞಾನಿಯಾದವನು ಇಂದ್ರಿಯಗಳನ್ನು ನಿಯಂತ್ರಿಸಿ ಯೋಗ್ಯ ನಿರ್ಣಯಗಳನ್ನು ಮಾಡಿ ಲೋಕದಲ್ಲಿ ವರ್ತಿಸಬೇಕು.

## ಸಂದೇಶಗಳು-ವಿವರಣೆಗಳು

೧. ವಿಶ್ವಾಮಿತ್ರನು ಆಪತ್ಕಾಲದಲ್ಲಿ ಚಂಡಾಲನ ಮನೆಯಲ್ಲಿನ ನಾಯಿಮಾಂಸರೂಪ ಅನ್ನವನ್ನುಸ್ವೀಕರಿಸುವುದನ್ನುಚಂಡಾಲನಮುಂದೆಸಮರ್ಥಿಸುತ್ತಾನೆ. ಇದುಬ್ರಹ್ಮಸೂತ್ರಗಳಲ್ಲಿ ನಿರ್ಧರಿಸಲ್ಪಟ್ಟ ಪ್ರಮೇಯವೂ ಆಗಿದೆ. ಆ ಬ್ರಹ್ಮಸೂತ್ರ ಹೀಗಿದೆ:

**ಓಂ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ಓಂ (೩/೪/೪/೨೮)**

ಇದರ **ಭಾಷ್ಯ** ಹೀಗಿದೆ :

'ಯದಿ ಹ ವಾ ಏವಂ ವಿನ್ನಿಖಿಲಂ ಭಕ್ಷಯೀತ ಏವಮೇವ ಸ ಭವತಿ' ಇತಿ ಸರ್ವಾ-ನ್ನಾನುಮತಿಃ ಪ್ರಾಣಾತ್ಯಯವಿಷಯಾ । 'ನ ವಾ ಅಜಾವಿಷ್ಯಮಿಮಾನಖಾದನ್ನಿತಿ ಹೋವಾಚ ಕಾಮೋ ಮ ಉದಪಾನಮ್' (ಛಾಂ.ಉ.-೧/೧೦/೪) ಇತಿ ದರ್ಶನಾತ್ ॥

ಇಲ್ಲಿ ಉದಾಹೃತವಾದುದು ಚಾಕ್ರಾಯಣ ಋಷಿಯು ಹೀನವರ್ಣದ ವ್ಯಕ್ತಿಯಿಂದ ತಿಂದ, ಬೇಯಿಸಿದ, ಉಬ್ಬಿದ ಹುರುಳಿಯ ವಿಷಯದ ಬಗ್ಗೆ ಇದೆ. ವಿಶ್ವಾಮಿತ್ರರೂ ಸಹ ಪ್ರಾಣಾಪ್ರಾಯವಿದ್ದಾಗ ನಿಷಿದ್ಧವಾದುದನ್ನು ತಿನ್ನಲು ಬಯಸಿದರೆಂಬುದು ಇದೇ ಸೂತ್ರಕ್ಕೆ ಉದಾಹರಣೆಯಾಗಿ ಕೊಡಬಹುದು.

---

ಸದಾರಸ್ತಾಮುಪಾಕೃತ್ಯ ವನೇ ಯಾತೋ ಮಹಾಮುನಿಃ ॥ - ೧೧/೮೯

೧ ಏತಸ್ಮಿನ್ನೇವ ಕಾಲೇ ತು ಪ್ರವವರ್ಷಾಥ ವಾಸವಃ ।
ಸಂಜೀವಯನ್ ಪ್ರಜಾಃ ಸರ್ವಾ ಜನಯಾಮಾಸ ಚೌಷಧೀಃ ॥ - ೧೧/೯೦

೨ ವಿಶ್ವಾಮಿತ್ರೋಽಪಿ ಭಗವಾನ್ ತಪಸಾ ದಗ್ಧಕಿಲ್ಬಿಷಃ ।
ಕಾಲೇನ ಮಹತಾ ಸಿದ್ಧಮವಾಪ ಪರಮಾದ್ಭುತಾಮ್ ॥ - ೧೧/೯೧

೨. ಚಂಡಾಲನು ತನ್ನ ಮನೆಗೆ ಬಂದವನು ವಿಶ್ವಾಮಿತ್ರ ಎಂದು ಕೇಳಿದ ಕೂಡಲೇ ಭಕ್ತಿಯಿಂದ ಅವರನ್ನು ಸತ್ಕರಿಸಿದ. ಅದು ತುಂಬಾ ಮನಕಲಕುವ ಸನ್ನಿವೇಶ. ತಾನೇ ಪ್ರಾಣಸಂಕಟದಲ್ಲಿದ್ದರೂ ಆತಿಥ್ಯಕ್ಕೆ ಮುಂದಾಗುವುದು ತುಂಬಾ ಅನುಕರಣೀಯ.

೩. ಚಂಡಾಲನಾದರೂ ಧರ್ಮ, ಅಧರ್ಮ ಪ್ರಜ್ಞೆ ಇದ್ದುದು ಅವನ ಮಾತುಗಳಿಂದ ತಿಳಿಯುತ್ತದೆ. ಆ ಕಾಲದಲ್ಲಿ ಚಂಡಾಲರೂ ಧರ್ಮಾಧರ್ಮಪ್ರಜ್ಞೆಯುಳ್ಳವರಾಗಿ ದ್ದರು. ಧರ್ಮಜ್ಞಾನ ಸಂಪಾದನೆ ಜ್ಯಾತ್ಯತೀತ. ವಿಶ್ವಾಮಿತ್ರರಿಗೂ ಬೋಧಿಸುವ ಶ್ವಪಚನ ವಿಪ್ರಧರ್ಮಪ್ರಜ್ಞೆ ತುಂಬಾ ಮನನೀಯ. ಬ್ರಾಹ್ಮಣರು ಬದುಕಬೇಕೆಂದು ತಿಳಿದು ಅದನ್ನು ಒತ್ತಾಯಿಸುವ ಆತನ ನಿಷ್ಠೆ ಎಲ್ಲರಿಗೂ ಇರಬೇಕು.

೪. ಆತನ ಮಾನವೀಯ ಗುಣಗಳು ವರ್ಣಾಶ್ರಮಧರ್ಮದ ಗೌರವಪ್ರಜ್ಞೆ, ಆತನ ಚಾರಿತ್ರ್ಯಕ್ಕೆ ಕನ್ನಡಿಯಾಗಿವೆ.

೫. ವಿಶ್ವಾಮಿತ್ರರದು ಪ್ರಾರಬ್ಧಕರ್ಮಭೋಗ. ಆದ್ದರಿಂದ ನಿಷಿದ್ಧಾನ್ನ ಭೋಜನ ಮಾಡುವಂತಾಯಿತು. ಇಲ್ಲದಿದ್ದರೆ, ಈ ಅಲ್ಪ ಬರಗಾಲ (೧೨ ವರ್ಷ) ಅಂತಹ ಮಹಾ ತಪಸ್ವಿಗಳಿಗೆ, ತಪಸ್ಸನ್ನು ಮಾಡುತ್ತಾ ಕಳೆಯಬಹುದಿತ್ತು ಎಂಬ ವಿವರಣೆಯೂ ಇಲ್ಲಿ ಸೂಕ್ತವೇನೋ? ಈ ಬಗ್ಗೆ ಪ್ರಾಜ್ಞರು ವಿಚಾರ ಮಾಡಬಹುದು.

ಇತ್ಯಾದಿ.....

## ೯೪. ಶರಣಾಗತರಕ್ಷಣೆ

ಭೀಷ್ಮರನ್ನು ಧರ್ಮರಾಜ ಪ್ರಶ್ನಿಸಿದ.

'ತಾತ! ಶರಣು ಬಂದವರನ್ನು ರಕ್ಷಿಸುವವರಿಗೆ ಯಾವ ಫಲ ದೊರಕುವುದು.' ಭೀಷ್ಮರು ಇದಕ್ಕೆ ವಿಸ್ತೃತವಾದ ಕಪೋತೋಪಾಖ್ಯಾನವನ್ನು ವಿವರಿಸಿದರು.

'ಕಪೋತ(ಪಾರಿವಾಳ)ಕ್ಕೆ ಶರಣಾಗುವ ಪ್ರಸಂಗ ಬಂದಾಗ ಆ ಕಪೋತವು ತನ್ನ ಮಾಂಸವನ್ನೇ ತನ್ನ ಶತ್ರುವಾದ ಬೇಟೆಗಾರನಿಗೆ ಆಹಾರವಾಗಿ ನೀಡಿ ರಕ್ಷಿಸಿದ ಧರ್ಮಾರ್ಥಕಾಮಗಳನ್ನು ಬೋಧಿಸುವ ಇತಿಹಾಸವನ್ನು ಪರಶುರಾಮದೇವರು ಮುಚುಕುಂದರಾಜನಿಗೆ ಹೇಳಿದರು.

ನೋಡಲು ಅವನು ಹಕ್ಕಿಗಳನ್ನು ಬೇಟೆಯಾಡುವವನು. ದುರಾಚಾರ ಸಂಪನ್ನ ದುಷ್ಟಕರ್ಮಗಳಿಂದಾಗಿ ಮಹಾಪಾಪಿ, ಯಮನಂತೆ ಇದ್ದ, ಕಾಗೆಯಂತೆ ಕಪ್ಪುವರ್ಣ. ಅವನಿಗೆ ಒಬ್ಬ ಸ್ನೇಹಿತನಾಗಲೀ, ಸಂಬಂಧಿಯಾಗಲೀ, ಬಂಧುಬಾಂಧವರಾಗಲೀ ಇದ್ದಿಲ್ಲ. ಅವನ ಭಯಂಕರ ಕರ್ಮಗಳಿಂದಾಗಿ ಅವನನ್ನು ಎಲ್ಲರೂ ಬಿಟ್ಟಿದ್ದರು. ಅವನು ಕಾಡಿನಲ್ಲಿ ಬಲೆ ಹಾಕಿ ಹಕ್ಕಿಗಳನ್ನು ಹಿಡಿದು ಕೊಂದು ಮಾರಾಟ ಮಾಡುತ್ತಿದ್ದನು. ಹೀಗೆಯೇ ಅವನ ಬಹುಕಾಲ ಜೀವನ ಸವೆದರೂ, ತಾನು ಅಧರ್ಮ ಮಾಡುತ್ತಿರುವುದು ಅವನಿಗೆ ತಿಳಿಯಲೇ ಇಲ್ಲ. ಪತ್ನೀ ಸಹಿತವಾಗಿಯೇ ಇದ್ದ. ಅವನಿಗೆ ಬೇರಾವ ವೃತ್ತಿ ಹಿಡಿಸಲಿಲ್ಲ.

ಒಮ್ಮೆ ಅವನು ವನದಲ್ಲಿದ್ದಾಗ ಭಾರೀ ಬಿರುಗಾಳಿ, ಮೋಡ, ಮಿಂಚು ಮೊದಲಾದವುಗಳಿಂದ ಭಾರೀ ಮಳೆ ಬಂದು ಇಡೀ ಕಾಡು ಜಲಾವೃತವಾಗಿ ಬೇಡನಿಗೆ ದಾರಿ ಕಾಣದಾಯಿತು. ಹಕ್ಕಿಗಳು ಗಾಳಿಯ ವೇಗಕ್ಕೆ ಅಲ್ಲಲ್ಲಿ ಅಡಗಿದವು. ಜಿಂಕೆ, ಸಿಂಹ, ಹಂದಿಗಳು ಸಿಕ್ಕ ಸ್ಥಳದಲ್ಲಿ ಆಶ್ರಯ ಪಡೆದವು. ವನ್ಯಪ್ರಾಣಿಗಳು ಭಾರಿ ಮಳೆ, ಗಾಳಿಯಿಂದ ಪೀಡಿತವಾಗಿ ಹಸಿವೆಯಿಂದ ಆರ್ತವಾಗಿ ಅಲೆದಾಡಿದವು.

ಬೇಡನೂ ಎಲ್ಲೆಲ್ಲೋ ಓಡಾಡಿ ಕೊನೆಗೆ ಒಂದು ಮೋಡದಂತೆ ಕಪ್ಪಾದ ಮರವನ್ನು ನೋಡಿ, ಒಂದೆಡೆ ಕನ್ನೈದಿಲೆಗಳಿಂದ ಶೋಭಿಸುವ ಸರೋವರದಂತೆ ಕಾಣುವ ನಿರ್ಮಲ ಆಕಾಶ ಕಾಣಿಸಿತು. ಸುತ್ತ ಎಲ್ಲೂ ಮೋಡಗಳಿರಲಿಲ್ಲ. ತಾನು ನಿಂತ ಪ್ರದೇಶ ಗ್ರಾಮದಿಂದ ದೂರವಿದೆ ಎಂದು ಭಾವಿಸಿ, ಅಲ್ಲಿಯೇ ರಾತ್ರಿ ಇರಲು ನಿರ್ಧರಿಸಿದ. ತನ್ನ ಹತ್ತಿರವಿದ್ದ ಮರದ ಬಳಿಗೆ ಬಂದು ವಿನೀತನಾಗಿ ಹೇಳಿದನು '**ಈ ಮರದಲ್ಲಿರುವ ದೇವತೆಗಳನ್ನು ನಾನು ಶರಣು**

**ಬಂದಿದ್ದೇನೆ. ರಕ್ಷಿಸಿರಿ**' ಎಂದು. ನಂತರ ನೆಲದ ಮೇಲೆ ಎಲೆಗಳನ್ನು ಹಾಸಿ ಕಲ್ಲಿನ ಮೇಲೆ ತಲೆಯಿರಿಸಿ, ಆ ಪಕ್ಷಿ ಹಂತಕನು ಮಲಗಿದನು.

ಭೀಷ್ಮರು ಮುಂದುವರಿಸುತ್ತಾ –

'ರಾಜನ್! ಆ ಮರದ ಒಂದು ಕೊಂಬೆ ಮೇಲೆ ವಿಚಿತ್ರ ರೆಕ್ಕೆಗಳಿಂದ ಕೂಡಿದ ಒಂದು ಪಕ್ಷಿಯು ತನ್ನ ಪರಿವಾರದೊಂದಿಗೆ ದೀರ್ಘಕಾಲದಿಂದ ವಾಸವಾಗಿತ್ತು. ಆ ಪಕ್ಷಿಯ ಪತ್ನಿಯು ಸಹಜವಾಗಿ ಎಲ್ಲೋ ತಿರುಗಾಡಲು ಹೋದುದು ರಾತ್ರಿಯಾದರೂ ಬರಲಿಲ್ಲ. ಪಕ್ಷಿಗೆ ಚಿಂತೆಯಾಯಿತು. ಅಂದು ಭಾರೀ ಮಳೆ, ಗಾಳಿ ಬೇರೆ ಇತ್ತು. ತನ್ನ ಪತ್ನಿ ಸುಖವಾಗಿದ್ದಾಳೋ ಎಂಬ ದುಃಖ ಪತಿಗೆ ಕಾಡಿತು. ಸುಂದರಿಯಾದ, ಕೆಂಪುಕುಡಿಗಣ್ಣಿನ, ಮಧುರ ದನಿಯ ತನ್ನ ಪತ್ನಿ ಬರದಿದ್ದಲ್ಲಿ, ತನ್ನ ಬದುಕು ಶೂನ್ಯ, ತಾನು ಬದುಕಿ ಮಾಡುವುದಾದರೂ ಏನಿದೆ? ಎಂದು (ಪತಿ) ಪಕ್ಷಿ ಭಾವಿಸಿತು. ಆ ಪತ್ನಿ ಪತಿವ್ರತೆಯೂ ಆಗಿದ್ದಳು. ಅದನ್ನು ಪಕ್ಷಿ ನೆನೆಸಿತು. ನನಗಾಕೆ ಪ್ರಾಣಗಳಿಗಿಂತಲೂ ಪ್ರಿಯಳು. ಆಕೆ ತಪಸ್ವಿನಿ, ಸಾಧ್ವಿ. ನಾನು ಬಳಲಿದ್ದೇನೆ, ಹಸಿದಿದ್ದೇನೆ ಎಂದು ತಿಳಿದಿದ್ದಾಳೆ. ಇಂತಹ ಅನುರಕ್ತಳಾದ, ಹಿತೈಷಿಯಾದ ಪತ್ನಿಯುಳ್ಳ ಪುರುಷ ಧನ್ಯ. ಲೋಕದಲ್ಲಿ ಪತಿಗೆ ನಿಜವಾದ ಸಹಜೀವಿ ಎಂದರೆ ಪತ್ನಿಯೇ. ಪುರುಷನಿಗೆ ಅವಳೇ ಶ್ರೇಷ್ಠ ನಾಥೆ ಎಂದು ಓದಿದ್ದೇನೆ. ರೋಗಗ್ರಸ್ತನಾದ ನರನಿಗೆ ಪತ್ನಿ ಸಮನಾದ ಔಷಧಿಯೇ ಇಲ್ಲ. ಹೆಂಡತಿಗೆ ಸಮನಾದ ಬಂಧು, ದಾರಿ, ಧರ್ಮಸಾಧನವೂ ಯಾರೂ ಅಲ್ಲ[೧].

ಹೀಗೆ ವಿಲಾಪ ಮಾಡುವ ಪಕ್ಷಿಯ ಮಾತು ಹಕ್ಕಿ ಹಂತಕನಾದ ಬೇಟೆಗಾರನಿಂದ ಹಿಡಿಯಲ್ಪಟ್ಟ ಪತ್ನಿ ಹಕ್ಕಿಗೆ ಕೇಳಿಸಿತು. ಆಕೆಯು ಹೀಗೆ ಭಾವಿಸಿದಳು.

ಯಾವ ಸ್ತ್ರೀಯ ಬಗ್ಗೆ ಪತಿಯು ತೃಪ್ತನಲ್ಲವೋ, ಅವಳು ಸ್ತ್ರೀ ಎಂಬ ಹೆಸರಿಗೆ ಅರ್ಹಳಲ್ಲ. ಕಾರಣ ಸ್ತ್ರೀಗೆ ಪತಿಯೇ ರಕ್ಷಕ. ಪತಿಯು ಅಗ್ನಿಸಾಕ್ಷಿಕನಾದವನು[೨] (ಕೈ ಹಿಡಿದವನು). ಹೀಗೆ ವಿಚಾರಮಾಡಿದ ಪತ್ನಿ ಪಕ್ಷಿಯು ದುಃಖದಿಂದ ಆರ್ತಳಾಗಿ –

---

೧ ಪತಿಧರ್ಮರತಾ ಸಾಧ್ವೀ ಪ್ರಾಣೇಭ್ಯೋಽಪಿ ಗರೀಯಸೀ।
ಅನುರಕ್ತಾ ಹಿತಾ ಚೈವ ಸ್ನಿಗ್ಧಾ ಚೈವ ಪತಿವ್ರತಾ॥
ಯಸ್ಯ ವೈ ತಾದೃಶೀ ಭಾರ್ಯಾ ಧನ್ಯಃ ಸ ಮನುಜೋ ಭುವಿ।
ಭಾರ್ಯಾ ಹಿ ಪರಮೋ ನಾಥಃ ಪುರುಷಸ್ಯೇಹ ಪಠ್ಯತೇ॥
ಅಸಹಾಯಸ್ಯ ಲೋಕೇಽಸ್ಮಿನ್ ಲೋಕಯಾತ್ರಾ ಸಹಾಯಿನೀ।
ನಾಸ್ತಿ ಭಾರ್ಯಾಸಮಂ ಕಿಂಚಿನ್ನರಸ್ಯಾರ್ತಸ್ಯ ಭೇಷಜಮ್॥
ನಾಸ್ತಿ ಭಾರ್ಯಾ ಸಮೋ ಬಂಧುರ್ನಾಸ್ತಿ ಭಾರ್ಯಾಸಮಾ ಗತಿಃ।
ನಾಸ್ತಿ ಭಾರ್ಯಾಸಮೋ ಲೋಕೇ ಸಹಾಯೋ ಧರ್ಮಸಾಧನಃ॥

೨ ನ ಸಾ ಸ್ತ್ರೀತ್ಯಭಿಭಾಷಾ ಸ್ಯಾದ್ಯಸ್ಯಾ ಭರ್ತಾ ನ ತುಷ್ಯತಿ।
ಅಗ್ನಿಸಾಕ್ಷಿಕಮಪ್ಯೇತತ್ ಭರ್ತಾ ಹಿ ಶರಣಂ ಸ್ತ್ರಿಯಃ॥

'ಹೇ ಕಾಂತ! ನಾನು ನಿನಗೆ ಶ್ರೇಯಸ್ಕರವಾದುದನ್ನು ಹೇಳುವೆ. ಅದರಂತೆ ಮಾಡು. ಶರಣಾಗತರನ್ನು ವಿಶೇಷವಾಗಿ ಶ್ರದ್ಧೆಯಿಂದ ರಕ್ಷಿಸುವವನಾಗು. ಈ ಬೇಟೆಗಾರ ನಿನ್ನ ವಸತಿಪ್ರದೇಶದಲ್ಲಿ ಆಶ್ರಯಿಸಿ ಮಲಗಿದ್ದಾನೆ. ಛಳಿಯಿಂದ ಕಂಗೆಟ್ಟಿದ್ದಾನೆ. ಹಸಿದಿದ್ದಾನೆ. ಅವನನ್ನು ಸತ್ಕರಿಸು, ಆದರಿಸು. **ಗೋಹತ್ಯೆ, ಬ್ರಾಹ್ಮಣಹತ್ಯೆ, ಶರಣಾಗತನ ಹತ್ಯೆ ಇವು ಸಮಾನ ಪಾಪಗಳು**. ಯಾವ ಗೃಹಸ್ಥನು ತನ್ನ ಧರ್ಮವನ್ನು ಯಥಾಶಕ್ತಿ ಅನುಸರಿಸುವನೋ, ಅವನು ಮರಣಾನಂತರ ಅಕ್ಷಯಲೋಕ ಮುಕ್ತಿಯನ್ನು ಹೊಂದುತ್ತಾನೆ. ನಿನಗೀಗಾಲೇ ಪುತ್ರರಿದ್ದಾರೆ. ಆದ್ದರಿಂದ ದೇಹಾಭಿಮಾನ ಬಿಡು. ಈ ಬೇಡನ ಮನಸ್ಸಿಗೆ ಪ್ರೀತಿಯಾಗುವಂತೆ ಇವನನ್ನು ಸತ್ಕರಿಸು. ಹೀಗೆ ನುಡಿದ ಪತ್ನಿ ದುಃಖದಿಂದ ಪತಿಯನ್ನು ನೋಡಿತು[೧].

ಹೆಂಡತಿಯ ಧರ್ಮದಿಂದ ಕೂಡಿದ ಮಾತುಗಳನ್ನು ಕೇಳಿದ ಪಕ್ಷಿಯು ಸಂತೋಷ-ಗೊಂಡಿತು. ಕಣ್ಣೀರಿನಿಂದ ದೃಷ್ಟಿ ಮಬ್ಬಾಯಿತು. ತನ್ನ ಆಸರೆಯಲ್ಲಿದ್ದ ಬೇಡನನ್ನು ನೋಡಿ, ಸ್ವಾಗತ ಹೇಳಿ 'ನಿನಗಾಗಿ ಏನು ಮಾಡಲಿ? ನೀನು ನಮ್ಮ ಮನೆಗೆ ಬಂದಿದ್ದೀಯಾ. ಶರಣಾಗತರ ಆತಿಥ್ಯವನ್ನು ಶ್ರದ್ಧೆಯಿಂದ ಮಾಡಬೇಕು. ಪಂಚಯಜ್ಞ ಪ್ರವೃತ್ತನಾದ ಗೃಹಸ್ಥಾಶ್ರಮಿಯು ವಿಶೇಷವಾಗಿ ಅತಿಥಿ ಸತ್ಕಾರ ಮಾಡಬೇಕು. ಹೀಗೆ ಮಾಡದಿದ್ದರೆ, ಅವನಿಗೆ ಇಹಪರಗಳಿಲ್ಲ. ಆದ್ದರಿಂದ ನಿಸ್ಸಂಕೋಚವಾಗಿ ಹೇಳು. ನಾನು ಹಾಗೆಯೇ ಮಾಡುತ್ತೇನೆ' ಎಂದಿತು.

ಪಕ್ಷಿಯ ಮಾತನ್ನು ಕೇಳಿದ ಬೇಡನು ಚಳಿ ನನಗೆ ಬಾಧಿಸುತ್ತಿದೆ. ಅದನ್ನು ಹೋಗಲಾಡಿಸಲು ಏನನ್ನಾದರೂ ಮಾಡು; ನಂತರ ಪಕ್ಷಿಯು ಒಣಗಿದ ಎಲೆಗಳನ್ನು ನೆಲದ ಮೇಲೆ ಹರಡಿ ಬೆಂಕಿಯನ್ನು ತರಲು ಕಮ್ಮಾರನ ಕಾರ್ಯಾಗಾರಕ್ಕೆ ಹೋಗಿ, ಅಗ್ನಿಯನ್ನು ಹಿಡಿದುಕೊಂಡು ಬಂದು ಎಲೆಗಳ ಮೇಲೆ ಹಾಕಿತು. ನಂತರ ಬೇಡನಿಗೆ 'ಸಂಕೋಚವಿಲ್ಲದೆ ನಿನ್ನ ಶರೀರವನ್ನು ಕಾಯಿಸಿಕೊ. ಇಲ್ಲಿ ನಿನಗಾವ ಭಯವೂ ಇಲ್ಲ'. ಹೀಗೆ ಹೇಳಲ್ಪಟ್ಟ ಬೇಡನು ತನ್ನ ಶರೀರವನ್ನು ಕಾಯಿಸಿಕೊಂಡನು (ಬಿಸಿ ಮಾಡಿ). ಆದ್ದರಿಂದ ಅವನ ಪ್ರಾಣಶಕ್ತಿ ವೃದ್ಧಿಸಿತು. ನಂತರ ಪಕ್ಷಿಗೆ ಹೇಳಿದ 'ನನಗೆ ಬಹಳ ಹಸಿವಾಗಿದೆ. ಏನಾದರೂ ಆಹಾರವನ್ನು ಕೊಡು' ಎಂದ. ಪಕ್ಷಿಯು ಅವನಿಗೆ ನಿನ್ನ ಹಸಿವು ಇಂಗಿಸಲು ನನ್ನಲ್ಲಿ ಯಾವ ಅಹಾರವೂ ಇಲ್ಲ. ನಾವು ಆಯಾ ದಿನದ ಆಹಾರ ಸಂಗ್ರಹಿಸಿ ಬದುಕುವವರು. ಕಾಡಿನಲ್ಲಿರುವ ಮುನಿಗಳಂತೆ ನಮ್ಮ ಜೀವನ' ಎಂದು ಹೇಳಿದ ಪಕ್ಷಿಯ ಮುಖ ಕಂದಿತು, ಚಿಂತಿಸಿತು.

---

೧ ಯೋ ಹಿ ಕಶ್ಚಿತ್ ದ್ವಿಜಂ ಹನ್ಯಾತ್ ಗಾಂ ವಾ ಲೋಕಸ್ಯ ಮಾತರಮ್ ।
ಶರಣಾಗತಂ ಚ ಯೋ ಹನ್ಯಾತ್ ತುಲ್ಯಂ ತೇಷಾಂ ಚ ಪಾತಕಮ್ ॥
ಯಸ್ತು ಧರ್ಮಂ ಯಥಾಶಕ್ತಿ ಗೃಹಸ್ಥೋ ಹ್ಯನುವರ್ತತೇ ।
ನ ಪ್ರೇತ್ಯ ಲಭತೇ ಲೋಕಾನಕ್ಷಯಾನಿತಿ ಶುಶ್ರುಮ ॥
ತತ್ಸ್ವದೇಹೇ ದಯಾಂ ತ್ಯಕ್ತ್ವಾ ಧರ್ಮಾರ್ಥೌ ಪರಿಗೃಹ್ಯ ವೈ ।
ಪೂಜಾಮಸ್ಮೈ ಪ್ರಯುಂಕ್ಷ್ವ ತ್ವಂ ಪ್ರೀಯೇತಾಸ್ಯ ಮನೋ ಯಥಾ ॥ - ೧೪/೬-೨೦

ತನ್ನ ಸ್ಥಿತಿಯ ಬಗ್ಗೆ ಪರಿತಪಿಸಿತು. 'ಅತಿಥಿ ಪೂಜೆಯ ಮಾಡಲು ಅಸಮರ್ಥನಾದೆನಲ್ಲ' ಎಂದು ತನ್ನನ್ನು ತಾನು ನಿಂದಿಸಿಕೊಂಡಿತು. ಸ್ವಲ್ಪ ಹೊತ್ತು ವಿಚಾರ ಮಾಡಿ, ಬೇಡನಿಗೆ ಸ್ವಲ್ಪ ತಾಳು ಎಂದು ಹೇಳಿ ಒಣಗಿದ ಎಲೆಗಳನ್ನು ಅಲ್ಲಿದ್ದ ಅಗ್ನಿಯಿಂದ ಪ್ರಜ್ವಲಿಸಿ, ಅತಿಥಿ ಸತ್ಕಾರವು ಮಹಾಧರ್ಮವೆಂದು ದೇವ ಋಷಿ, ಪಿತೃಗಳ ಮಾತನ್ನು ಕೇಳಿದ್ದೇನೆ. ಇಂದು ನೀನು ಅನುಗ್ರಹಿಸು. ನನಗೆ ಅತಿಥಿ ಸತ್ಕಾರ ಮಾಡಲೇಬೇಕೆಂದು ನಿಶ್ಚಿತ ಬುದ್ಧಿಯು ನನಗೆ ಬಂದಿದೆ.

'ಧರ್ಮರಾಜ! ಹೀಗೆಂದ ಪಕ್ಷಿಯು ಅಗ್ನಿಗೆ ಮೂರು ಪ್ರದಕ್ಷಿಣೆಗಳನ್ನು ಹಾಕಿ, ಅಗ್ನಿ ಪ್ರವೇಶ ಮಾಡಿತು. ಅದನ್ನು ನೋಡಿದ ಬೇಡನು 'ನಾನೆಂಥಾ ಕೆಲಸ ಮಾಡಿದೆನಲ್ಲ' ಎಂದು ದುಃಖಿಸಿದ. 'ಅಯ್ಯೋ! ನಾನೆಂಥಾ ಕ್ರೂರಿ, ನನ್ನ ಕೆಟ್ಟ ಆಸೆಯಿಂದ ನನಗೆ ಮಹಾಪಾಪ ಬಂದಿದೆ. ಅಗ್ನಿಯಲ್ಲಿ ಬಿದ್ದ ಪಕ್ಷಿಯನ್ನು ನೋಡಿ ಬಹಳ ಪರಿತಪಿಸಿದ.[೧]

ಅಗ್ನಿಯಲ್ಲಿ ಬಿದ್ದಿರುವ ಕಪೋತವನ್ನು ನೋಡಿ ಮರುಗಿದ 'ಬುದ್ಧಿಹೀನನಾದ, ಅವಿವೇಕಿಯಾದ ನಾನಿದೆಂತಹ ಕೆಲಸ ಮಾಡಿದೆ? ನಾನು ಬದುಕಿರುವವರೆಗೂ ೞ ಪಾಪಪ್ರಜ್ಞೆ ನನ್ನನ್ನು ಕಾಡದೆ ಬಿಡದು. ತುಂಬಾ ಕೆಟ್ಟ ಬುದ್ಧಿಯ ನನಗೆ ಧಿಕ್ಕಾರ. ಶುಭಕರ್ಮಗಳನ್ನು ತ್ಯಜಿಸಿ, ಹಕ್ಕಿಗಳ ಬೇಟೆಯಾಡುವ, ವಂಚನೆಯಲ್ಲಿ ಅಚಲಬುದ್ಧಿಯಿರುವ, ನನಗೆ ಧಿಕ್ಕಾರ. ಆಹಾರವನ್ನು

---

೧ ಪೂಜಯಾಮಾಸ ಯತ್ನೇನ ಸ ಪಕ್ಷೀ ಪಕ್ಷಿ ಜೀವಿನಮ್ ।
ಉವಾಚ ಚ ಸ್ವಾಗತಂ ತೇ ಬ್ರೂಹಿ ಕಿಂ ಕರವಾಣ್ಯಹಮ್ ॥
ಪ್ರಣಯೇನ ಬ್ರವೀಮಿ ತ್ವಾಂ ತ್ವಂ ಹಿ ನ ಶರಣಾಗತಃ ।
ಶರಣಾಗತಸ್ಯ ಕರ್ತವ್ಯಮಾತಿಥ್ಯಮಿಹ ಯತ್ನತಃ ॥
ಪಂಚಯಜ್ಞಪ್ರವೃತ್ತೇನ ಗೃಹಸ್ಥೇನ ವಿಶೇಷತಃ ।
ಬಾಧತೇ ಖಲು ಮಾಂ ಶೀತಂ ಹಿಮತ್ರಾಣಂ ವಿಧೀಯತಾಮ್ ॥
**ಸ ಗತ್ವಾಂಽಗಾರ ಕರ್ಮಾಂತಂ ಗೃಹೀತ್ವಾಗ್ನಿಮಥಾಗಮತ್ ।**
**ತತಃ ಶುಷ್ಕೇಷು ಪರ್ಣೇಷು ಪಾವಕಂ ಸೋಽಭ್ಯದೀದಿಪತ್ ॥**
ಪ್ರತಾಪಯ ಸುವಿಸ್ರಬ್ಧಂ ಸ್ವಗಾತ್ರಾಣ್ಯಕುತೋ ಭಯ ।
ಅಗ್ನಿಪ್ರತ್ಯಾಗತಪ್ರಾಣಃ ತತಃ ಪ್ರಾಹ ವಿಹಂಗಮಮ್ ॥
ದತ್ತಮಾಹಾರಮಿಚ್ಛಾಮಿ ತ್ವಯಾಕ್ಷುದ್ ಬಾಧತೇ ಹಿ ಮಾಮ್ ।
ನಿಶ್ಚಿತಾ ಖಲು ಮೇ ಬುದ್ಧಿರತಿಥಿಪ್ರತಿಪೂಜನೇ ।
ತತಃ ಸತ್ಯಪ್ರತಿಜ್ಞೋ ವೈ ಸ ಪಕ್ಷೀ ಪ್ರಹಸನ್ನಿವ ॥
**ತಮಗ್ನಿ ತ್ರಿಃ ಪರಿಕ್ರಮ್ಯ ಪ್ರವಿವೇಶ ಮಹೀಪತೇ ।**
ಅಗ್ನಿಮಧ್ಯಂ ಪ್ರವಿಷ್ಟಂ ತಂ ಲುಬ್ಧೋ ದೃಷ್ಟ್ವಾಥ ಪಕ್ಷಿಣಮ್ ॥
........
ಚಿಂತಯಾಮಾಸ ಮನಸಾ ಕಿಮಿದಂ ನು ಕೃತಂ ಮಯಾ ।
ಅಹೋ ಮಮ ನೃಶಂಸಸ್ಯ ಗರ್ಹಿತಸ್ಯ ಸ್ವಕರ್ಮಣಾ ॥
ಅಧರ್ಮಃ ಸುಮಹಾನ್ ಘೋರೋ ಭವಿಷ್ಯತಿ ನ ಸಂಶಯಃ ॥ – ೧೪/೨೨-೪೪

ಕೇಳಿ ನಾನು ಪಕ್ಷಿಗೆ ಬಹಳ ಅನ್ಯಾಯ ಮಾಡಿದೆ. ಪಾಪ! ಅದು ತನ್ನ ಮಾಂಸವನ್ನೇ ನನಗೆ ಕೊಡಲು ತನ್ನನ್ನು ಸುಟ್ಟುಕೊಟ್ಟಿತು. ಆದ್ದರಿಂದ ನಾನಿನ್ನು ಮೇಲೆ ನನ್ನ ಪತ್ನೀ, ಪುತ್ರರನ್ನು ತ್ಯಜಿಸಿ ಪ್ರಾಣತ್ಯಾಗ ಮಾಡುವೆ. ಅತ್ಯಂತ ಧರ್ಮಿಷ್ಠನಾದ ಆ ಪಕ್ಷಿಯು ನನಗೆ ಧರ್ಮ ಉಪದೇಶ ಮಾಡಿದೆ. ಇಂದಿನಿಂದ ನಾನು ಎಲ್ಲ ಭೋಗಗಳನ್ನು ತ್ಯಜಿಸಿ, ದೇಹವನ್ನು ದಂಡಿಸುತ್ತೇನೆ. ಹಸಿವು, ಬಾಯಾರಿಕೆ, ಬಿಸಿಲುಗಳನ್ನು ಸಹಿಸಿ, ನರನಾಡಿಗಳು ಕಾಣುವಂತೆ (ನನ್ನ ದೇಹದಲ್ಲಿ) ಉಪವಾಸಪರನಾಗಿ ಪರಲೋಕ ಸುಖಕ್ಕಾಗಿ ತಪಸ್ಸನ್ನು ಮಾಡುತ್ತೇನೆ. ಅಹೋ! ಆ ಹಕ್ಕಿ ತನ್ನ ದೇಹವನ್ನೇ ದಾನ ಮಾಡಿ ಅತಿಥಿಪೂಜೆಯ ಮಹತ್ತ್ವ ತೋರಿಸಿತಲ್ಲ! ಆದ್ದರಿಂದ ನಾನು ಧರ್ಮರತನಾಗುತ್ತೇನೆ. ಧರ್ಮವೇ ಪರಮಗತಿ. ಧರ್ಮಿಷ್ಠರು ಆಚರಿಸುವ ಧರ್ಮವನ್ನು ನಾನು ಪಕ್ಷಿಯಲ್ಲಿ ನೋಡಿದೆ[೧].

ಹೀಗೆ ನುಡಿದ ಬೇಡನು ಕಠಿಣವ್ರತಗಳನ್ನು ಮಾಡುತ್ತಾ ಮಹಾಪ್ರಸ್ಥಾನ (ದೇಹತ್ಯಾಗ)ದ ದಾರಿಯನ್ನು ಹಿಡಿದನು. ತನ್ನ ಹಿಂದಿನ ಬೇಡರ ಬದುಕಿನ ದೊಣ್ಣೆ, ಸಲಾಕೆ, ಬಲೆ, ಪಂಜರಗಳನ್ನೆಲ್ಲ ಎಸೆದು, ತಾನು ಹಿಡಿದಿದ್ದ ಪಕ್ಷಿಯನ್ನು ಬಿಡುಗಡೆ ಮಾಡಿದನು.

ಬೇಟೆಗಾರ ಹೊರಟ. ಇತ್ತ ಹೆಣ್ಣು ಪಾರಿವಾಳ ಪಕ್ಷಿ (ಪತ್ನಿ) ಪತಿಯನ್ನು ಕಳೆದುಕೊಂಡು ಸ್ಮರಿಸುತ್ತಾ, ಅಳುತ್ತಾ ಶೋಕದಿಂದ ಹೀಗೆ ವಿಲಾಪ ಮಾಡಿದಳು.

ಕಾಂತನೇ! ನಿನಗೆ ನಾನು ಎಂದೂ ಅಪ್ರಿಯವನ್ನು ಮಾಡಿಲ್ಲ. ಎಲ್ಲ ಸ್ತ್ರೀಯರು ಸತ್ಪುತ್ರರಿದ್ದರೂ, ವಿಧವೆಯಾದರೆ ಬಂಧುಗಳ ಮಧ್ಯೆ ಶೋಚನೀಯರಾಗುತ್ತಾರೆ. ನೀನು ನನ್ನನ್ನು ನಿತ್ಯವೂ ಒಳ್ಳೆಯ ಮಾತುಗಳಿಂದ ಸಂತೋಷಗೊಳಿಸಿದೆ. ಹಿತವನ್ನೇ ಮಾಡಿರುವೆ. ಬೆಟ್ಟ, ಗುಹೆ, ನದೀ, ನದ, ಮರದ ತುದಿ ಎಲ್ಲೆಡೆ ನಾನು ನಿನ್ನೊಡನೆ ವಿಹರಿಸಿದೆ. ಆಕಾಶದಲ್ಲೂ ವಿಹರಿಸಿದೆ. ಇನ್ನು ಮುಂದೆ ಅದ್ಯಾವುದೂ ನನಗಿಲ್ಲ. ತಂದೆತಾಯಿಮಕ್ಕಳು ಸ್ವಲ್ಪವೇ

---

೧ ಸ ವಿನಿಂದನ್ನಥಾತ್ಮಾನಂ ಪುನಃ ಪುನರುವಾಚ ಹ।
ಧಿಙ್‌ಮಾಮಸ್ತು ಸುದುರ್ಬುದ್ಧಿಂ ಸದಾ ನಿಕೃತಿನಿಶ್ಚಯಮ್।
ದತ್ತಃ ಸ್ವಮಾಂಸಂ ದಹತಾ ಕಪೋತೇನ ಮಹಾತ್ಮನಾ।
ಸೋಽಹಂ ತ್ಯಕ್ಷ್ಯೇ ಪ್ರಿಯಾನ್ ಪ್ರಾಣಾನ್ ಪುತ್ರದಾರಂ ವಿಸೃಜ್ಯ ಚ।
ಕ್ಷುತ್ಪಿಪಾಸಾ ತಪಸಹಃ ಕೃಶೋ ಧಮನಿ ಸಂತತಃ।
ಉಪವಾಸೈರ್ಬಹುವಿಧೈಶ್ಚರಿಷ್ಯೇ ಪಾರಲೌಕಿಕಮ್।
ಅಹೋ ದೇಹಪ್ರದಾನೇನ ದರ್ಶಿತಾತಿಥಿಪೂಜನಾ।
ಏವಮುಕ್ತ್ವಾ ವಿನಿಶ್ಚಿತ್ಯ..........................
ಮಹಾಪ್ರಸ್ಥಾನಮಾಶ್ರಿತ್ಯ ಪ್ರಯಯೌ ಸಂಶಿತವ್ರತಃ।
ತತೋ ಯಷ್ಟಿ ಶಲಾಕಾಶ್ಚ ಕ್ಷಾರಕಂ ಪಂಜರಂ ತಥಾ।
ತಾಂ ಚ ಬದ್ಧಾಂ ಕಪೋತೀಂ ಸ ಸಂಪ್ರಮುಚ್ಯೋತ್ಸಸರ್ಜ ಹ॥ - ೧೫/೩-೧೦

ಕೊಡುತ್ತಾರೆ. ಪತಿಮಾತ್ರ ಅಳತೆಗೆ ಸಿಗದಷ್ಟು (ಪ್ರೀತಿ) ಕೊಡುತ್ತಾನೆ. ಅಂತಹ ಪತಿಯನ್ನು ಯಾವ ಸ್ತ್ರೀಯು ತಾನೇ ಪೂಜಿಸಳು? ಪತಿಗೆ ಸಮನಾದ ರಕ್ಷಕರಿಲ್ಲ. ಸುಖವಿಲ್ಲ. ಎಲ್ಲ ಸಂಪತ್ತಿಗಿಂತ ಸ್ತ್ರೀಗೆ ಪತಿಯೇ ನಿಜವಾದ ಐಶ್ವರ್ಯ. ಅವನೇ ಸ್ತ್ರೀಗೆ ರಕ್ಷಕ. ಯಾವ ಸ್ತ್ರೀ ತಾನೆ ಪತಿಯಿಲ್ಲದೆ ಜೀವಿಸಿಯಾಳು?

ಹೀಗೆ ಪಕ್ಷಿಯು ವಿಲಾಪ ಮಾಡಿ ಜ್ವಲಿಸುತ್ತಿದ್ದ ಅಗ್ನಿ ಪ್ರವೇಶಿಸಿತು[೧]. ಆಗ ಆಕೆ ಸುಂದರ ವಸ್ತ್ರಗಳನ್ನು ಧರಿಸಿದ, ಮಹಾತ್ಮರಿಂದ ಪೂಜಿತನಾದ ವಿಮಾನದಲ್ಲಿರುವ ತನ್ನ ಪತಿಯನ್ನು ನೋಡಿತು. ಪುಣ್ಯಾತ್ಮರು ಇದ್ದ ನಾನಾ ವಿಮಾನಗಳು ಅವನಿದ್ದ ವಿಮಾನದ ಸುತ್ತ ಇದ್ದವು. ಬೇಡನ ಹಸಿವನ್ನು ಇಂಗಿಸಲು ದೇಹತ್ಯಾಗ ಮಾಡಿದ (ಪತಿ) ಪಕ್ಷಿಯನ್ನು ಅವನ ಸತ್ಕರ್ಮಕ್ಕಾಗಿ ಸತ್ಕರಿಸಿದರು[೨]. ಅಲ್ಲಿ ಪತ್ನಿಪಕ್ಷಿಯು ಪತಿಯೊಡನೆ ಸೇರಿತು. ಪಕ್ಷಿ ದಂಪತಿಗಳು ಅಲ್ಲೂ ಸುಖವಾಗಿದ್ದರು.

ವಿಮಾನದಲ್ಲಿ ಹೋಗುತ್ತಿದ್ದ ಪಕ್ಷಿ ದಂಪತಿಗಳನ್ನು ಬೇಡನು ನೋಡಿದನು. ತನಗೆ ಸದ್ಗತಿ ಹೇಗಾದೀತೆಂದು ಚಿಂತಿಸಿದನು. ಅದಕ್ಕಾಗಿ ಸ್ವರ್ಗ ಬಯಕೆಯಿಂದ ಕೇವಲ ವಾಯುಭಕ್ಷನಾಗಿ, ಮಮಕಾರ ಬಿಟ್ಟು ಮಹಾಪ್ರಸ್ಥಾನವನ್ನು ಬಯಸಿ, ಹೊರಡುತ್ತಿದ್ದಾಗ ದಾರಿಯಲ್ಲಿ ರಮಣೀಯವಾದ, ಕಮಲಗಳಿಂದ ಪೂರ್ಣವಾದ, ನಾನಾಹಕ್ಕಿಸಂಕುಲಗಳಿಂದ ಕೂಡಿದ ಶೀತಲ ಜಲಸರೋವರವನ್ನು ನೋಡಿದನು. ಬಹಳ ಬಾಯಾರಿಕೆಯಾಗಿತ್ತು. ಆದರೂ ಸರೋವರವನ್ನು ನೋಡಿಯೇ ತೃಪ್ತನಾದನೇ ಹೊರತು, ನೀರನ್ನು ಕುಡಿಯಲಿಲ್ಲ. ಉಪವಾಸ ಕೃಶನಾಗಿದ್ದ ಬೇಡನು ಸಂತೋಷದಿಂದಲೇ ಹಿಂಸ್ರಪ್ರಾಣಿಗಳಿದ್ದ ವನಕ್ಕೆ ಬಂದನು. ಅಲ್ಲಿ ಮುಳ್ಳುಗಳಲ್ಲಿ ಸಿಲುಕಿಕೊಂಡನು. ಶರೀರದಲ್ಲಿ ಅದರಿಂದ ನಾನಾ ಛಿದ್ರಗಳಾದವು. ರಕ್ತ ಹರಿದು ದೇಹವೆಲ್ಲ ಒದ್ದೆಯಾಯಿತು. ನಾನಾ ಪ್ರಾಣಿಗಳಿದ್ದ ವನದಲ್ಲಿ ಅಲೆದನು. ಅಲ್ಲಿ ಮರಗಳ ಪರಸ್ಪರ ಸಂಘರ್ಷದಿಂದ ಭಾರೀ ಬೆಂಕಿ ಹುಟ್ಟಿತು. ಆ ಕಾಡ್ಗಿಚ್ಚು ಪ್ರಾಣಿಪಕ್ಷಿಗಳಿಂದ

---

೧ ನಾಹಂ ತೇ ವಿಪ್ರಿಯಂ ಕಾಂತ ಕದಾಚಿದಪಿ ಸಂಸ್ಮರೇ।
ಸರ್ವಾ ವೈ ವಿಧವಾ ನಾರೀ ಬಹುಪುತ್ರಾಪಿ ಖೇಚರ।
ಶೋಚ್ಯಾ ಭವತಿ ಬಂಧೂನಾಂ ಪತಿಹೀನಾ ಮನಸ್ವಿನೀ।
ಲಾಲಿತಾಹಂ ತ್ವಯಾನಿತ್ಯಂ ..... ರಮಿತಾಹಂ ತ್ವಯಾ ಪ್ರಿಯ।
ಅಮಿತಸ್ಯ ತು ದಾತಾರಂ ಭರ್ತಾರಂ ಕಾ ನ ಪೂಜಯೇತ್।
ನಾಸ್ತಿ ಭರ್ತೃಸಮೋ ನಾಥೋ ನ ಚ ಭರ್ತೃಸಮಂ ಸುಖಮ್।
ಪತಿ ಹೀನಾಪಿ ಕಾ ನಾರೀ ಸತೀ ಜೀವಿತುಮುತ್ಸಹೇತ್।
ಏವಂ ವಿಲಪ್ಯ ಬಹುಧಾ.....................।
**ಪತಿವ್ರತಾ ಸಂಪ್ರದೀಪ್ತಂ ಪ್ರವಿವೇಶ ಹುತಾಶನಮ್।** - ೧೬/೧-೧೧

೨ ತತಃ ಸ್ವರ್ಗಗತಃ ಪಕ್ಷೀ ಭಾರ್ಯಯಾ ಸಹ ಸಂಗತಃ।
ಕರ್ಮಣಾ ಸಂಗತಸ್ತೇನ ರೇಮೇ ತತ್ರ ಸ ಭಾರ್ಯಯಾ॥ - ೧೬/೧೨

ಕೂಡಿದ ಆ ವನವನ್ನು ಸುಟ್ಟುಹಾಕಿತು. ಬೇಡನು ತಾನು ಸಂತುಷ್ಟಮನಸ್ಸಿನಿಂದ ದೇಹತ್ಯಾಗ ಮಾಡಲು ಅಗ್ನಿಯೆಡೆ ನುಗ್ಗಿದ. ಅಗ್ನಿಯಿಂದ ಬೇಡ ಸುಟ್ಟುಹೋದ. ಅವನ ಪಾಪಗಳೂ ಹೋಗಿ ಮಹಾಸಿದ್ಧಿಯನ್ನು ಹೊಂದಿದ. ನಂತರ ಸ್ವರ್ಗದಲ್ಲಿ ಯಕ್ಷಗಂಧರ್ವಸಿದ್ಧರ ನಡುವೆ ಇಂದ್ರನಂತೆ ಶೋಭಿಸುವ ತನ್ನನ್ನು ಕಂಡುಕೊಂಡನು. ಹೀಗೆ ಕಪೋತ, ಕಪೋತಿ, ಬೇಡರು ಸ್ವರ್ಗ ಸೇರಿದರು[೧].

ಹೀಗೆ ಪತಿಯನ್ನು ಅನುಸರಿಸುವ ನಾರಿಯು ಸ್ವರ್ಗ ಸೇರುತ್ತಾಳೆ. ಕಪೋತಿಯಂತೆ. ಇದುವೇ ಕಪೋತ, ಕಪೋತಿ, ಬೇಡನ ಪುಣ್ಯಕರ್ಮಗಳಿಂದ ಬಂದ ಧರ್ಮದ ಗತಿಯಾಗಿದೆ. ಹಿಂದೆ ನಡೆದುದು ಇದು[೨].

ಇದನ್ನು ಕೇಳಿದವನು, ಹೇಳಿದವನು ಮಾನಸಿಕವಾಗಿ ಪ್ರಮಾದ ಮಾಡಿದರೂ, ಅಶುಭಗತಿಯನ್ನು ಹೊಂದುವುದಿಲ್ಲ. ಗೋಹತ್ಯೆಯನ್ನು ಮಾಡಿದರೂ ಪಾಪದಿಂದ ಬಿಡುಗಡೆಯಾಗುತ್ತಾನೆ. ಆದ್ದರಿಂದ ಶರಣಾಗತರನ್ನು ಕೊಂದವರಿಗೆ ಯಾವ ಪ್ರಾಯಶ್ಚಿತ್ತವೇ (ಪರಿಹಾರ) ಇಲ್ಲ[೩].

---

೧ ವಿಮಾನಸ್ಥೌ ತು ತೌ ರಾಜನ್ ಲುಬ್ಧಕೋ ವೈ ದದರ್ಶಹ।
ಕೀದೃಶೇ ನೇಹ ತಪಸಾ ಗಚ್ಛೇಯಂ ಪರಮಾಂ ಗತಿಮ್।
ಇತಿ ಬುಧ್ಯಾ ವಿನಿಶ್ಚಿತ್ಯ..........................
ನಿಶ್ಚೇಷ್ಟೋ ಮಾರುತಾಹಾರೋ ನಿರ್ಮಮಃ ಸ್ವರ್ಗಕಾಂಕ್ಷಯಾ।
ತತೋಽಪಶ್ಯತ್.......... ಸರಃ ಶೀತಜಲಂ ಶುಭಮ್।
ಪಿಪಾಸಾರ್ತೋಽಪಿ ತದ್ದೃಷ್ಟ್ವಾ ತೃಪ್ತಃ ಸ್ಯಾನ್ನಾತ್ರ ಸಂಶಯಃ।
ಉಪವಾಸಕೃಶೋ.......... ಲುಬ್ಧಕಃ........ ಪ್ರವಿವೇಶ ಹ।
ಪ್ರವಿಶನ್ನೇವ ಚ ವನಂ ನಿಗೃಹೀತಃ ಸ ಕಂಟಕೈಃ।
ತತೋ ದ್ರುಮಾಣಾಂ ಮಹತಾಂ ಪವನೇನ ವನೇ ತದಾ।
ಉದತಿಷ್ಠತ ಸಂಘರ್ಷಾತ್ ಸುಮಹಾನ್ ಹವ್ಯವಾಹನಃ।
ತದ್ವನಂ ................. ದದಾಹ ಪಾವಕಃ ಕ್ರುದ್ಧೋ...... ।
ದದಾಹ ತದ್ವನಂ ಘೋರಂ................ ।
ತತಃ ಸ ದೇಹ ಮೋಕ್ಷಾರ್ಥಂ.... ಅಭ್ಯಧಾವತ ಸಂವೃದ್ಧಂ ಪಾವಕಂ ಲುಬ್ಧಕಸ್ತದಾ।
ತತಸ್ತೇನಾಗ್ನಿನಾ ದಗ್ಧೋ ಲುಬ್ಧಕೋ ನಷ್ಟಕಿಲ್ಬಿಷಃ।
ಜಗಾಮ ಪರಮಾಂ ಸಿದ್ಧಿಂ...................
ತತಃ ಸ್ವರ್ಗಸ್ಥಮಾತ್ಮಾನಂ ಸೋಽಪಶ್ಯತ್ ವಿಗತಜ್ವರಃ।
ಯಕ್ಷಗಂಧರ್ವ ಸಿದ್ಧಾನಾಂ ಮಧ್ಯೇ ಭ್ರಾಜಂತಮಿಂದ್ರವತ್। - ೧೭/೧-೧೫

೨ ಏವಂ ಖಲು ಕಪೋತಶ್ಚ ಕಪೋತೀ ಚ ಪತಿವ್ರತಾ।
ಲುಬ್ಧಕೇನ ಸಹ ಸ್ವರ್ಗಂ ಗತಾಃ ಪುಣ್ಯೇನ ಕರ್ಮಣಾ। - ೧/೧೬

೩ ಯಶ್ಚೇದಂ ಶೃಣುಯಾನ್ನಿತ್ಯಂ ಯಶ್ಚೇದಂ ಪರಿಕೀರ್ತಯೇತ್॥

## ಸಂದೇಶಗಳು - ವಿವರಣೆಗಳು

೧. ಇದೊಂದು ಧರ್ಮ, ಅರ್ಥ, ಕಾಮಗಳನ್ನು ಒಳಗೊಂಡ ಕಥೆ. ಪಾರಿವಾಳ ಪಕ್ಷಿ ದಂಪತಿಗಳ ಧರ್ಮ ಪ್ರವೃತ್ತಿಯು ಸ್ವರ್ಗ ಫಲ ನೀಡಿದ ಕಥೆ. ಯಾವ ಯೋನಿಯಲ್ಲಿದ್ದರೇನು ಧರ್ಮಪ್ರವೃತ್ತಿ ಸದ್ಗತಿದಾಯಕ. ಆದ್ದರಿಂದ ನಮಗೆ ಮುಂದೆ ಯಾವುದೇ ಜನ್ಮ ಬರಲಿ, ಧರ್ಮಶ್ರದ್ಧೆಯನ್ನು ಬೇಡಬೇಕು.

೨. ಈ ಐದು ಅಧ್ಯಾಯಗಳಲ್ಲಿ)೧೩-೧೭) ಕಾಡಿನ ವರ್ಣನೆ, ಬೇಡನ ವರ್ಣನೆಗಳೂ ಬಂದಿವೆ.

೩. ಮಹಾಗಾಳಿ ಮಳೆಯಿಂದ ತತ್ತರಿಸಿದ ಬೇಡನಿಗೆ ಸಹಾಯ ಮಾಡಬೇಕೆಂಬ ಕರುಣೆಯು ಬೇಡನ ಬಲೆಯಲ್ಲಿ ಸಿಕ್ಕಿಹಾಕಿಕೊಂಡ ಕಪೋತಿಗೆ ಬಂದು ಮರದ ಮೇಲಿನ ಪತಿಗೆ ನಿವೇದಿಸಿದಳು. ತಾನೇ ಬಲೆಯಲ್ಲಿದ್ದರೂ, ತನ್ನ ಮರದ ಕೆಳಗೆ ಮಲಗಿದ ಬೇಡನಿಗೆ ಸಹಾಯ ಮಾಡಬೇಕೆಂಬ ಮನಸ್ಸು ಅನುಕರಣೀಯ. ನಾನೆ ವಿಪತ್ತಿನಲ್ಲಿದ್ದೇನೆಂಬ ಭಾವನೆಗಿಂತ, ತನ್ನ ಮನೆಗೆ ಬಂದವರ ಯೋಗಕ್ಷೇಮ ಧರ್ಮಸಾಧನವೆಂಬ ಪಕ್ಷಿಯ ವರ್ತನೆ ಎಲ್ಲರಿಗೂ ಅನುಕರಣೀಯವಾದುದು.

೪. ಪಕ್ಷಿಗಳ ದಾಂಪತ್ಯ ಜೀವನ ಇಬ್ಬರ ಪರಸ್ಪರ ಪ್ರೀತಿ, ವಿಶ್ವಾಸ ಅವಿಸ್ಮರಣೀಯ. ಪತಿವ್ರತೆಯಾದ ಪಕ್ಷಿ, ಅದೆಷ್ಟು ತನ್ನ ಸಂಗಾತಿಯಾದ ಪಕ್ಷಿಯನ್ನು ಸ್ಮರಣ ಮಾಡುತ್ತಾಳೆ, ನಿಜವಾಗಿಯೂ, ಮನುಷ್ಯರು ತಿಳಿಯಬೇಕು. ಪತಿಯಿಂದ ಸಿಕ್ಕ ಸುಖವನ್ನು ಪತ್ನಿ ಎಂದೂ ಮರೆಯಬಾರದು. ಪತಿಯೂ ಅಷ್ಟೇ ಪ್ರೀತಿಯಿಂದ ಪತ್ನಿಯೊಡನೆ ವ್ಯವಹರಿಸಬೇಕು.

೫. ಪತಿಗೆ ಅತಿಥಿಸತ್ಕಾರ ಮಾಡಲು ಪತ್ನಿಯ ಬೋಧೆ ಎಂತಹ ಆದರ್ಶ.

೬. ಪತಿಯು ಕ್ರೂರಿ ಬೇಡ ಅತಿಥಿಗೆ ತನ್ನ ಪ್ರಾಣತೆತ್ತು ಬಿಡುತ್ತಾನೆ. ಅತಿಥಿ ಕ್ರೂರಿ ಇರಲಿ, ಸಜ್ಜನನಿರಲಿ, ಅತಿಥಿಯೇ. ಅಲ್ಲಿ ನೋಡಬೇಕಾದುದು ಗೃಹಸ್ಥಧರ್ಮಾಚರಣೆ. ಪಂಚಯಜ್ಞಗಳಲ್ಲಿ ಮುಖ್ಯವಾದ ಚಲಪ್ರತಿಮೆಯಲ್ಲಿ ದೈವಪೂಜೆ. ಅದನ್ನು ಪಕ್ಷಿಯಂತಹ ತಿರ್ಯಗ್ಯೋನಿಯೂ ನಡೆಸಿಕೊಟ್ಟಿರುವುದು ಮನುಷ್ಯಯೋನಿಯ ಬ್ರಾಹ್ಮಣಾದಿಗಳಿಗೆ ಕಣ್ಣು ತೆರೆಸುವಂತಹುದು.

೭. ತಮ್ಮನ್ನು ತಿನ್ನುವ ಬೇಡನನ್ನು ಪಕ್ಷಿ ಕುಕ್ಕಿ ಕುಕ್ಕಿ ಕೊಲ್ಲದೆ ಶರಣಾಗತ ರಕ್ಷಣೆಯ ಧರ್ಮ ತೋರಿಸಿ, ಅವನನ್ನು ಬದುಕಿಸಿದ ಪಕ್ಷಿಗಳ ವರ್ತನೆ ಎಲ್ಲರಿಗೂ ಆದರ್ಶ.

---

ನಾ ಶುಭಂ ವಿದ್ಯತೇ ತಸ್ಯ ಮನಸಾಪಿ ಪ್ರಮಾದ್ಯತಃ।
............ ಗೋಘ್ನೇಷ್ವಪಿ ಭವೇದಸ್ಮಿನ್ನಿಷ್ಕೃತಿಃ ಪಾಪಕರ್ಮಣಃ।
ನಿಷ್ಕೃತಿರ್ನ ಭವೇತ್ತಸ್ಮಿನ್ ಯೋ ಹನ್ಯಾತ್ ಶರಣಾಗತಮ್ ॥ - ೧/೧೭,೧೮

೮. ಪಕ್ಷಿಗಳ ಆತಿಥ್ಯ, ಪಕ್ಷಿಯ ಆತ್ಮಾಹುತಿ, ಬೇಡನ ಒಳಗಣ್ಣು ತೆರೆಯಿಸಿತು. ಯಾವುದೇ ವ್ಯಕ್ತಿಯು ಹಿಂದಿನ ಇತಿಹಾಸ ಆ ಪ್ರಸಂಗದಲ್ಲಿನ ಧಾರ್ಮಿಕ ಕರ್ತವ್ಯ, ಅತಿಥಿ ಪೂಜೆ ಮೊದಲಾದವನ್ನು ಆಚರಿಸಿದರೆ ಕ್ರೂರಿಯೂ ಸೌಮ್ಯನಾಗುತ್ತಾನೆ. '**ನಿಕೃತ್ಯಾ ನಿಕೃತಿಂ ಹನ್ಯಾತ್**' ನಿಯಮಕ್ಕೆ ಇದೊಂದು ಅಪವಾದ ನಿಯಮವೇ ಸರಿ.

೯. ತನ್ನ ಪತಿಯು ಅತಿಥಿಪೂಜೆ ನೆಪದಲ್ಲಿ ಪ್ರಾಣತ್ಯಾಗ ಮಾಡಿದ್ದನ್ನು ನೋಡಿ, ತಾನೇ ಹೇಳಿದಂತೆ ಮಾಡಿದುದನ್ನು ನೋಡಿ, ಪತ್ನಿಯೂ ಅದೇ ಅಗ್ನಿಯಲ್ಲಿ ದೇಹತ್ಯಾಗ ಮಾಡಿ ಪತಿಲೋಕ, ಸ್ವರ್ಗ ಸೇರಿಕೊಂಡಳು. ಇದು ಸನ್ಮಾರ್ಗದರ್ಶನ ಮಾಡಿದ್ದಕ್ಕೆ ಸಿಕ್ಕ ಫಲ. ಗಂಡನಿಗೆ ಸನ್ಮಾರ್ಗದರ್ಶಕಳಾಗುವ ಭಾಗ್ಯ ಸ್ತ್ರೀಗೆ ಇರುತ್ತದೆ. ಅಲ್ಲಿ ಸ್ವಾರ್ಥತ್ಯಾಗ ಮಾಡಿದರೆ ಅದು ಇಡೀ ಕುಟುಂಬಕ್ಕೆ ಹಿತ.

೧೦. ಪಕ್ಷಿಯತ್ಯಾಗ(ದೇಹ) ಬೇಡನನ್ನು ತನ್ನ ಪಾಪಗಳ ಪ್ರಾಯಶ್ಚಿತ್ತಕ್ಕೆ ನಾಂದಿ ಹಾಡಿತು. ಅವನು ಮಾಡಿದ ಪಾಪಕ್ಕೆ ನೊಂದು ವೈರಾಗ್ಯದಿಂದ ಎಲ್ಲ ತ್ಯಾಗ ಮಾಡಿದ. ಕಪೋತಿಯನ್ನು ಬಿಡುಗಡೆ ಮಾಡಿ, ಕಠೋರ ವ್ರತ, ಉಪವಾಸ ಮಾಡಿದ. ಮಾಡಿದ ತಪ್ಪುಗಳಿಗೆ ವ್ರತೋಪವಾಸ ಮಾಡುವ ಭಾವ ಬೆಳೆಸಿಕೊಳ್ಳಬೇಕು. ಅದುವೇ ಸ್ವರ್ಗಾದಿ ಫಲದಾಯಕ.

೧೧. ಹೀಗೆ ಅತಿ ಕೆಳಗಿನ ಯೋನಿಗಳಲ್ಲಿ ಹುಟ್ಟಿದ ಪಕ್ಷಿಗಳು, ಮನುಷ್ಯರಲ್ಲಿಯೂ ಅತ್ಯಂತ ಕೇಳು ನಡತೆಯ ಬೇಡ ಹೇಗೆ ಸನ್ನಡತೆಯಿಂದ ಸದ್ಗತಿಯನ್ನು ಹೊಂದಿದರೆಂಬ ಅಮೂಲ್ಯ ಸಂದೇಶಗಳಿವೆ ಈ ಉಪಾಖ್ಯಾನದಲ್ಲಿ. ಪಕ್ಷಿಗಳಿಂದ ಧರ್ಮ ತಿಳಿದರೆ, ಬೇಡನು ಅದರಿಂದ ತಾನು ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊಂಡ. ನಮ್ಮ ಪಾಪಗಳ ಪ್ರಾಯಶ್ಚಿತ್ತ ಪ್ರಕೃತಿಯ ಯಾವುದೇ ಪ್ರಾಣಿಗಳಿಂದಲೂ ತಿಳಿಯಬಹುದು. ತಿಳಿಯುವ ಹಂಬಲ, ಪ್ರಯತ್ನ ಇರಬೇಕು. ಅದನ್ನು ಭಗವಂತ ದಯಪಾಲಿಸಬೇಕು.

ಇತ್ಯಾದಿ.....

# ೯೫. ಮೃತಬಾಲಕನು ಬದುಕಿದ ಕಥೆ

ಧರ್ಮರಾಜನು ಭೀಷ್ಮರನ್ನು ಕುರಿತು 'ಮರಣಹೊಂದಿದ ಮನುಷ್ಯನು ಮತ್ತೆ ಬದುಕಿಸಲ್ಪಟ್ಟವೃತ್ತಾಂತವನ್ನು ಕೇಳಿದ್ದೀರಾ? ನೋಡಿದ್ದೀರಾ?' ಎಂದು ಕೇಳಿದ. ಅದಕ್ಕೆ ಭೀಷ್ಮರು ಒಂದು ಇತಿಹಾಸವನ್ನು '**ವೈದಶ**' ಎಂದ ದೇಶದಲ್ಲಿ (ನೈಮಿಷಾರಣ್ಯ) ನಡೆದ ಹದ್ದು-ನರಿಗಳ ಸಂವಾದವನ್ನು ಹೇಳುವೆನು ಕೇಳು ಎಂದರು.

ಒಬ್ಬಬ್ರಾಹ್ಮಣನುತುಂಬಾವ್ರತೋಪವಾಸಾದಿಗಳನ್ನುಮಾಡಿಒಬ್ಬಮಗನನ್ನುಪಡೆದಿದ್ದನು. ಆದರೆ ಬಾಲ್ಯದಲ್ಲಿಯೇ ಆ ಬಾಲಕನು ಮೃತನಾದನು(ಬಾಲಗ್ರಹಪೀಡಿತನಾಗಿ- ಎಂದರೆ ತಾಯಿತಂದೆಗಳ ಅನಾಚಾರದಿಂದ ಗ್ರಹಗಳು ಶಿಶುವನ್ನು ಪೀಡಿಸುವವು - ಸಂಸ್ಕೃತ ಕನ್ನಡ ಶಬ್ದಕೋಶ ಭಾಗ-೩, ಪುಟ. ೨೦೦೫, ಬಾಪ್ಕೋ ಪ್ರಕಾಶನ, ೧೯೯೯). ಮೃತಬಾಲಕನನ್ನು ಸ್ಮಶಾನಕ್ಕೆ ಒಯ್ಯಲಾಯಿತು. ಕೆಲ ಬಾಂಧವರು ಆ ಬಾಲಕನನ್ನು ಎತ್ತಿಕೊಂಡು ಅಖಂಡ ದುಃಖದಿಂದ ಅಳುತ್ತಿದ್ದರು. ಶವಸಂಸ್ಕಾರ ಮಾಡಿ ಹಿಂದಿರುಗಲು ಇಚ್ಛಿಸದೆ ಅಳುತ್ತಿದ್ದ ಆ ಮೃತ ಬಾಲಕನ ಬಾಂಧವರನ್ನು ಕುರಿತು ಹದ್ದೊಂದು ಬಂದು ನುಡಿಯಿತು.

'ಈ ಪ್ರಪಂಚದಲ್ಲಿ ಸಾವಿರಾರು ಪುರುಷರು ಹುಟ್ಟುತ್ತಾರೆ, ಸಾಯುತ್ತಾರೆ. ಸಾವು ಯಾರಿಗೂ ತಪ್ಪಿದ್ದಲ್ಲ. ಸತ್ತವರಿಗೆಲ್ಲ ಬಂಧುಗಳಿರುವುದಿಲ್ಲವೇ? ಯಾರಿಗೂ ವಿನಾಯಿತಿ ಇಲ್ಲ. ಜಗತ್ತಿನಲ್ಲಿ ಸುಖದುಃಖಗಳು ಬರುತ್ತವೆ, ಹೋಗುತ್ತವೆ. ಈ ಬಾಲಕನ ಮೇಲೆ ಕೃಪೆ ತೋರುತ್ತಿರುವವರೂ, ಹಿಂದೆ ಬಂದವರೂ, ತಮ್ಮ ಆಯುಷ್ಯ ತೀರಿದ ಮೇಲೆ ಇಲ್ಲಿಗೆ ಬರಲೇಬೇಕು. ಯಾರಿಗೂ ತಪ್ಪಿದ್ದಲ್ಲ. ಸತ್ತವರು ಪ್ರಿಯರಾಗಲಿ, ಅಪ್ರಿಯರಾಗಲಿ, ಯಾರು ಮತ್ತೆ ಬದುಕಿಲ್ಲ. ಎಲ್ಲ ಪ್ರಾಣಿಗಳ ಗತಿಯು ಹೀಗೆಯೇ (ಒಂದಲ್ಲ ಒಂದು ದಿನ ಸಾಯುವುದೇ). ಇಲ್ಲಿ ಹುಟ್ಟಿದವರೆಲ್ಲ ಸಾಯಲೇಬೇಕು. ಏಕೆಂದರೆ ಇದು ಮರ್ತ್ಯಲೋಕ. ಸೂರ್ಯಾಸ್ತವಾಗುತ್ತಿದೆ. ಎಲ್ಲ ದಿಕ್ಕುಗಳಲ್ಲಿ ಎಲ್ಲ ಚಟುವಟಿಕೆಗಳು ನಿಲ್ಲುತ್ತಿವೆ. ಆದ್ದರಿಂದ ಪುತ್ರಸ್ನೇಹ ಬಿಟ್ಟು ಮನೆಗಳಿಗೆ ಹೊರಡಿ.

ಈ ಮಾತುಗಳನ್ನು ಕೇಳಿ ಬಾಂಧವರು ಬಾಲಕನು ಇನ್ನು ಬದುಕನೆಂದು ನಿರಾಶೆಯಿಂದ ತಮ್ಮ ಮನೆಗಳ ದಾರಿ ಹಿಡಿದರು[೧]. ಅದೇ ಸಮಯಕ್ಕೆ ಬಹುಬಣ್ಣವಿರುವ ನರಿಯೊಂದು ಕಾಡಿನ

---

೧ ಬಾಲಂ ಮೃತಂ ಗೃಹೀತ್ವಾಥ ಸ್ಮಶಾನಾಭಿಮುಖಾಃ ಸ್ಥಿತಾಃ।
ಅಂಕೇನಾಂಕಂ ಚ ಸಂಕ್ರಮ್ಯ ರುರುದುರ್ಭೂತಲೇ ತದಾ॥

ಬಲದಿಂದ ಹೊರಬಂದು ಮನೆಗೆ ಹೋಗುತ್ತಿದ್ದ ಮೃತ ಬಾಲಕನ ಬಂಧುಗಳನ್ನು ನೋಡಿ 'ಮಾನವರು ನಿಜವಾಗಿಯೂ ಕ್ರೂರಿಗಳು, ದಯಾಹೀನರು' ಎಂದಿತು. ಮುಂದುವರಿದ ನರಿಯು 'ಸೂರ್ಯ ಇನ್ನೂ ಮುಳುಗಿಲ್ಲ, ಹೆದರಬೇಡಿ, ಮುಹೂರ್ತಗಳು ಅನೇಕ. ನಿಮ್ಮ ಬಾಲಕ ಬದುಕಬಹುದು. ಬಾಲಕನು ಹಿಂದೆ ಆಡಿದ ಮಧುರ ನುಡಿಗಳಿಂದ ಸಂತೋಷಪಡುವ ನೀವು ಅವನ ಮೇಲೆ ಸ್ನೇಹವಿಲ್ಲವೇ? ಪಶುಪಕ್ಷಿಗಳು, ನಾಲ್ಕು ಕಾಲಿನ ಪ್ರಾಣಿಗಳು ತಮ್ಮ ಮಕ್ಕಳನ್ನು ಪೋಷಿಸುತ್ತವೆ. ಅದರಿಂದ ಯಾವ ಫಲವೂ ಇಹಪರಗಳಲ್ಲಿ ಯಾವ ಲಾಭವೂ ಇರದಿದ್ದರೂ, ಅವು ತಮ್ಮ ಮಕ್ಕಳನ್ನು ಪೋಷಿಸುತ್ತವೆ. ಅದೆಷ್ಟು ಸ್ನೇಹ ತೋರಿಸುತ್ತವೆ. ಯಜ್ಞ ನಿರತ ಮುನಿಗಳಿಗೆ ಪರಲೋಕದಲ್ಲಿ ಫಲವಿರುವಂತೆ ಕೇವಲ ಸ್ನೇಹದಿಂದ ಯಾವ ಫಲವೂ ಇಲ್ಲ. ಆದರೂ ಅವೆಷ್ಟು ಸ್ನೇಹ ತೋರಿಸುತ್ತವೆಯಲ್ಲ? ಪಕ್ಷಿಗಳ ಮರಿಗಳು ದೊಡ್ಡವರಾದ ಮೇಲೆ ತಮ್ಮ ತಂದೆತಾಯಿ ಪಕ್ಷಿಗಳನ್ನೆಲ್ಲ ಪೋಷಿಸವು. ಆದರೂ ಅವು ತಮ್ಮ ಮಕ್ಕಳನ್ನು ಪೋಷಿಸುತ್ತವೆ. ಆದರೆ ಮನುಷ್ಯರಾದ ನಿಮಗೇಕೆ ಕುಲೋದ್ಧಾರಕನಾದ ಮುಂದೆ ನಿಮ್ಮನ್ನು ನೋಡಿಕೊಳ್ಳಲು ಹುಟ್ಟಿದ ಈ ಬಾಲಕನನ್ನು ಬಿಟ್ಟು ಹೋಗುವುದು ದುಃಖಕರ ಎನಿಸುತ್ತಿಲ್ಲ. ಸಾಯುವ ಸ್ಥಿತಿಯಲ್ಲಿರುವವನಿಗೆ ಆಸರೆಯಾಗಿ ಬಂಧುಗಳು ನಿಲ್ಲುತ್ತಾರೆ. ಈ ಮಗು ಮದು ಮಗನಂತೆ ಹೂವಿನ ಮಾಲೆ ಮೊದಲಾದವುಗಳಿಂದ ಅಲಂಕೃತವಾಗಿರುವ ಕಮಲದಂತೆ ವಿಶಾಲಕಣ್ಣು ಇರುವ ಈ ಮಗುವನ್ನು ಹೇಗೆ ಬಿಟ್ಟು ಹೋಗುತ್ತೀರಿ'[೧] ಎಂದಿತು.

---

ತಂ ಬಾಲಂ ಭೂತಲೇ ಕ್ಷಿಪ್ಯ ಪ್ರತಿಗಂತುಂ ನ ಶಕ್ನುಯುಃ।
ಸಂಪಶ್ಯತ ಜಗತ್ಸರ್ವಂ ಸುಖದುಃಖೈರಧಿಷ್ಠಿತಮ್।
ಗೃಹೀತ್ವಾ ಯೋಽನುಗೃಹ್ಣಂತಿ ಅನುಯಾಂತಿ ಚ ಯೇ ಗುಣಾತ್।
ತೇಽಪ್ಯಾಯುಷಃ ಪ್ರಮಾಣೇನ ತೇನ ಗಚ್ಛಂತಿ ಜಂತವಃ।
ನ ಪುನರ್ಜೀವಿತಃ ಕಶ್ಚಿತ್ ಕಾಲಧರ್ಮಮುಪಾಗತಃ।
ಸರ್ವೇಣ ಖಲುಮರ್ತವ್ಯಂ ಮರ್ತ್ಯಲೋಕೇ ಪ್ರಸೂಯತಾ।
ಕೃತಾಂತವಿಹಿತೇ ಮಾರ್ಗೇ ಕೋ ಮೃತಂ ಜೀವಯಿಷ್ಯತಿ॥ - ೨೧/೫/೧೬

೧ ವಿವರ್ಣಾಸ್ತು ಬಲಾನ್ನಿಷ್ಪತ್ಯ ಜಂಬುಕಃ ...........।
ಗಚ್ಛಮಾನಾನ್ ಸ್ಮ ತಾನಾಹ ನಿರ್ಘೃಣಾಃ ಖಲು ಮಾನವಾಃ।
ಆದಿತ್ಯೋಽಯಂ ಸ್ಥಿತೋ ಮೂಢಾಃ ಸ್ನೇಹಂ ಕುರುತ ಮಾ ಭಯಮ್।
ಬಹುರೂಪೋ ಮುಹೂರ್ತಶ್ಚ ಜೀವೇತಾಪಿ ಕದಾಚನ।
ನ ವೋಽಸ್ತ್ಯಸ್ಮಿನ್ ಸುತೇ ಸ್ನೇಹೋ ಬಾಲೇ ಮಧುರಭಾಷಿಣಿ॥
ನ ಪಶ್ಯಥ ಸುತಸ್ನೇಹೋ ಯಾದೃಶಃ ಪಶುಪಕ್ಷಿಣಾಮ್।
ಚತುಷ್ಪಾತ್ ಪಕ್ಷಿಕೀಟಾನಾಂ ಪ್ರಾಣಿನಾಂ ಸ್ನೇಹಸಂಗಿನಾಮ್।
ಪರಲೋಕಗತಿಸ್ಥಾನಾಂ ಮುನಿಯಜ್ಞಕ್ರಿಯಾ ಇವ।
ನ ಚ ಪುಷ್ಣಂತಿ ಸಂವೃದ್ಧಾಸ್ತೇ ಮಾತಾಪಿತ ರೌ ಕ್ವಚಿತ್।
ಮಾನುಷಾಣಾಂ ಕುತಃ ಸ್ನೇಹೋ ಯೇಷಾಂ ಶೋಕೋ ಭವಿಷ್ಯತಿ।

ನರಿಯ ಮಾತುಗಳನ್ನು ಆಲಿಸಿದ ಹದ್ದು ಮತ್ತೆ ನರಿಯನ್ನು 'ಇದೊಂದು ಕ್ರೂರಿ, ಮಂದ- ಬುದ್ಧಿ. ಇದರ ಕ್ಷುದ್ರಮಾತುಗಳನ್ನು ಕೇಳಿ ಸತ್ತ್ವಹೀನರಾದ ಮನುಷ್ಯರಾದ ನೀವು ಏಕೆ ವಾಪಸು ಬರುತ್ತಿದ್ದೀರಿ? ಈ ಬಾಲಕ ಪಂಚಭೂತಪರಿತ್ಯಕ್ತನೂ, ಶೂನ್ಯನೂ (ಪ್ರಾಣವಿರದಿರು- ವುದರಿಂದ), ನಿಶ್ಚೇಷ್ಟನೂ ಆಗಿದ್ದಾನೆ. ಅವನ ಬಗ್ಗೆ ಏಕೆ ಶೋಕ? ನಿಮ್ಮ ಬಗ್ಗೆ ಶೋಕವೇಕಿಲ್ಲ? ಆದ್ದರಿಂದ ತಪಸ್ಸನ್ನು ಮಾಡಿ ಪಾಪಗಳಿಂದ ಮುಕ್ತಿ ಪಡೆಯಿರಿ. ತಪಸ್ಸಿನಿಂದ ಎಲ್ಲವೂ ಸಿಗುತ್ತದೆ. ಸುಮ್ಮನೇ ಏಕೆ ವಿಲಾಪ ಮಾಡುವಿರಿ? ತಪಸ್ಸು ಹಾಗೂ ಪಾಪಗಳಿಂದ ಹಸುಗಳು ವಿದ್ಯೆ, ಸುವರ್ಣ, ಮಣಿಗಳು, ರತ್ನಗಳು, ಸಂತತಿ, ಸುಖದುಃಖಕ್ಕೆ ಕಾರಣವಾದ ಶರೀರಗಳು ಉಂಟಾಗುತ್ತವೆ. ಜೀವರು ಹಿಂದೆ ಮಾಡಿದ ಸುಖದುಃಖಗಳನ್ನು ಇಟ್ಟುಕೊಂಡೇ ಹುಟ್ಟುತ್ತಾರೆ. ಎಲ್ಲರೂ ತಮ್ಮ ತಮ್ಮ ಪುಣ್ಯಪಾಗಳಿಗೆ ಸಿಕ್ಕು ಬೇರೆ ಬೇರೆ ದಾರಿಯಲ್ಲಿ ಹೋಗುತ್ತಾರೆ. ಆದ್ದರಿಂದ ಧರ್ಮಾಚರಣೆ ಮಾಡಿರಿ. ಅಧರ್ಮದಿಂದ ದೂರವಿರಿ. ದೇವಬ್ರಾಹ್ಮಣಾರಾಧನೆಗಳನ್ನು ಮಾಡಿರಿ. ಶೋಕ, ದೈನ್ಯ ಬಿಡಿ. ಸುತಸ್ನೇಹ ಬಿಟ್ಟು ಬಾಲಕನನ್ನು (ಶವವನ್ನು) ಬಯಲಿನಲ್ಲಿಟ್ಟು ಹೊರಡಿರಿ. ಪ್ರತಿಜೀವಿಯೂ ಮಾಡುವ ಶುಭಾಶುಭಕರ್ಮಗಳಿಂದ ಅದಕ್ಕೆ ತಕ್ಕಂತೆ ಶುಭಾಶುಭ ಫಲ ಹೊಂದುತ್ತಾನೆ. ಇದರಲ್ಲಿ ಬಾಂಧವರ ಪಾತ್ರವೇನಿದೆ? ಏನೂ ಇಲ್ಲ. ಪ್ರಾಜ್ಞನಾಗಲೀ, ಮೂರ್ಖನಾಗಲೀ, ಧನವಂತನಾಗಲೀ, ದರಿದ್ರನಾಗಲೀ ಎಲ್ಲರೂ ತಮ್ಮ ಶುಭಾಶುಭ ಕರ್ಮಗಳಿಂದ ಕೂಡಿಕೊಂಡೇ ಕಾಲವಶರಾಗುತ್ತಾರೆ. ಯಮನೇ ಎಲ್ಲರ ಪ್ರಭು. ಅವನು ಎಲ್ಲರನ್ನೂ ಸಮಾನವಾಗಿ ನೋಡುತ್ತಾನೆ. ಮೃತ್ಯುವು ತರುಣರನ್ನು, ಬಾಲಕರನ್ನು, ವೃದ್ಧರನ್ನು ಗರ್ಭದಲ್ಲಿರುವವರನ್ನು ಎಲ್ಲರನ್ನೂ ಪ್ರವೇಶಿಸುತ್ತದೆ. ಈ ಜಗತ್ತು ಹೀಗೆಯೇ[1].

---

ಇಮಂ ಕುಲಕರಾ ಪುತ್ರಂ ಕಥಂ ತ್ಯಕ್ತ್ವಾ ಗಮಿಷ್ಯಥ॥ - ೨೧/೧೭-೨೫

೧ ಆಹೋ ಧಿಕ್ ಸುನೃಶಂಸೇನ ಜಂಬುಕೇನಾಲ್ಪಮೇಧಸಾ।
ಕ್ಷುದ್ರೇಣೋಕ್ತಾ ಹೀನಸತ್ತ್ವಮಾನುಷಾಃ ಕಿಂ ನಿವರ್ತಥ॥
ಪಂಚಭೂತಪರಿತ್ಯಕ್ತಂ ಶೂನ್ಯಂ ಕಾಷ್ಠತ್ವಮಾಗತಮ್।
ಕಸ್ಮಾತ್ ಶೋಚಥ ನಿಶ್ಚೇಷ್ಟಮಾತ್ಮಾನಂ ಕಿಂ ನ ಶೋಚಥ।
ತಪಃ ಕುರುತ ವೈ ತೀವ್ರಂ ಮುಚ್ಯಧ್ವಂ ಯೇನ ಕಿಲ್ಬಿಷಾತ್।
ತಪಸಾ ಲಭ್ಯತೇ ಸರ್ವಂ ವಿಲಾಪಃ ಕಿಂ ಕರಿಷ್ಯತಿ।
ಧರ್ಮಂ ಚರತ ಯತ್ನೇನ ತಥಾಧರ್ಮಾನ್ನಿವರ್ತತ।
ವರ್ತಧ್ವಂ ಚ ಯಥಾಕಾಲಂ ದೈವತೇಷು ದ್ವಿಜೇಷು ಚ।
ಶೋಕಂ ತ್ಯಜತ ದೈನ್ಯಂ ಚ ಸುತಸ್ನೇಹಾನ್ನಿವರ್ತತ।
ತ್ಯಜ್ಯತಾಮಯಮಾಕಾಶೇಂ ತತಃ ಶೀಘ್ರಂ ನಿವರ್ತತ।
ಯೌವನಸ್ಥಾಂಶ್ಚ ಬಾಲಾಂಶ್ಚ ವೃದ್ಧಾನ್ ಗರ್ಭಗತಾನಪಿ।
ಸರ್ವಾನಾವಿಶತೇ ಮೃತ್ಯುರೇವಂ ಭೂತಮಿದಂ ಜಗತ್। - ೨೧/೩೧-೪೪)

ಅಯ್ಯೋ ! ಮಂದಮತಿ ಈ ಹದ್ದು ತುಂಬಾ ದುಃಖಿಸುತ್ತಿರುವ ನಿಮ್ಮ ಸ್ನೇಹವನ್ನು ಮತ್ತೂ ಮಂದವಾಗಿಸಿಬಿಟ್ಟಿತು. ಅನ್ಯಾಯವಿದು. ಕರುಗಳನ್ನು ಕಳೆದುಕೊಂಡ ಹಸುಗಳ ಶೋಕದಂತೆ ಪುತ್ರವಿಯೋಗದಿಂದ ಸ್ಮಶಾನಕ್ಕೆ ಬಂದು ಅಳುತ್ತಿರುವ ನಿಮಗೆ ಎಂತಹ ತೀವ್ರವಾದ ದುಃಖವಾಗುತ್ತಿದೆಯಲ್ಲ! ಮನುಷ್ಯರ ದುಃಖ ಈಗ ನನಗೆ ಅರ್ಥವಾಗುತ್ತಿದೆ. ನಿಮ್ಮ ಕರುಣಾಜನಕ ಪರಿಸ್ಥಿತಿ ನೋಡಿ ನನಗೂ ಕಣ್ಣೀರು ಬರುತ್ತಿದೆ. ಜ್ಞಾನಿಗಳು ಹೇಳುವಂತೆ ಪ್ರಯತ್ನ ಸತತ ಮಾಡಬೇಕು. ಫಲವು ದೈವದಿಂದ ಸಿದ್ಧಿಸುತ್ತದೆ. ಎಂದೂ ಆಲಸ್ಯ ತರವಲ್ಲ, ಯಾವಾಗಲೂ ಕ್ರಿಯಾಶೀಲನಾಗಿರಬೇಕು. ಪ್ರಯತ್ನದಿಂದ ಫಲ. ಏಕೆ ನಿರ್ದಯರಾಗಿ ಹೋಗುವಿರಿ (ಪ್ರಯತ್ನಿಸಿದರೆ ಮಗು ಬದುಕುತ್ತದೆ). ಅಥವಾ ಸೂರ್ಯಾಸ್ತವಾದ ಮೇಲೆ, ಸಂಧ್ಯಾಕಾಲ ಸನ್ನಿಹಿತವಾದಾಗ ನಿಮ್ಮ ಮಗನನ್ನು ನಿಮ್ಮೊಡನೆ ಒಯ್ಯಿರಿ ಅಥವಾ ನೀವೂ ಇಲ್ಲಿಯೇ ಇದ್ದು ಬಿಡಿ[೧].

ನರಿಯ ಮಾತಿಗೆ ಮತ್ತೆ ಹದ್ದು ಪ್ರತಿಕ್ರಿಯೆ ನೀಡಿತು.

'ನಾನು ಹುಟ್ಟಿ ಬಂದು ಸಾವಿರ ವರ್ಷ ದಾಟಿದೆ. ಸತ್ತು ಬದುಕಿದ ಪುರುಷ, ಸ್ತ್ರೀ, ನಪುಂಸಕ ಯಾರನ್ನೂ ನೋಡಿಲ್ಲ. (ಕೆಲವರು) ಗರ್ಭದಲ್ಲೇ ಸತ್ತು ಹುಟ್ಟುತ್ತಾರೆ(still born babies), (ಕೆಲವರು) ಹುಟ್ಟಿದ ಕೂಡಲೇ ಸಾಯುತ್ತಾರೆ, (ಮತ್ತೆ ಕೆಲವರು) ಪರಾಕ್ರಮದಿಂದ ಮೆರೆದು ಸಾಯುತ್ತಾರೆ. (ಹಲವರು) ತರುಣರಾಗಿ ಸಾಯುವುದೂ ಉಂಟು. ಇದು ಪ್ರಕೃತಿ ನಿಯಮ. ಎಲ್ಲ ಸ್ಥಾವರ, ಜಂಗಮ ಜೀವಿಗಳಿಗೆ ಆಯುಷ್ಯಮುಖ್ಯ. ಪ್ರಿಯಜನರ, ಪತ್ನಿಯ, ಪುತ್ರಶೋಕಗಳಿಗೆ ಒಳಗಾದವರೆಲ್ಲ ದುಃಖದಿಂದ ಮನೆಗೆ ಹೋಗುತ್ತಾರೆ. ಇದೊಂದು ನಿತ್ಯ ನಡೆಯುತ್ತಲಿರುವ ವ್ಯಾಪಾರ.

ಆದ್ದರಿಂದ ತೇಜೋವಿಹೀನವಾದ, ನಿಶ್ಚೇಷ್ಟಿತವಾದ, ಕಾಷ್ಠದಂತಿರುವ ಈ ಬಾಲಕನನ್ನು ಬಿಟ್ಟು ಹೋಗಿರಿ. ನಿಮ್ಮ ಸ್ನೇಹ ನಿರರ್ಥಕ, ಪರಿಶ್ರಮವೂ ವ್ಯರ್ಥ. (ಈ ಬಾಲಕ) ಕಣ್ಣುಗಳಿಂದ ನೋಡುತ್ತಿಲ್ಲ, ಕಿವಿಗಳಿಂದ ಕೇಳುತ್ತಿಲ್ಲ, ಆದ್ದರಿಂದ ಇವನನ್ನು ತ್ಯಜಿಸಿ, ನಡೆಯಿರಿ. ಮೋಕ್ಷ

---

೧ ಅಹೋ ಮಂದೀಕೃತಃ ಸ್ನೇಹೋ ಗೃಧ್ರೇಣೇಹಾಲ್ಪಮೇಧಸಾ।
ಪುತ್ರಸ್ನೇಹಾಭಿಭೂತಾನಾಂ ಯುಷ್ಮಾಕಂ ಶೋಚತಾಂ ಭೃಶಮ್।
ಅದ್ಯ ಶೋಕಂ ವಿಜಾನಾಮಿ ಮಾನುಷಾಣಾಂ ಮಹೀತಲೇ।
ಸ್ನೇಹಂ ಹಿ ಕರುಣಂ ದೃಷ್ಟ್ವಾ ಮಮಾಪ್ಯಶ್ರೂಣ್ಯಥಾಗತಾನ್।
ಯತ್ನೋ ಹಿ ಸತತಂ ಕಾರ್ಯಃ ಕೃತೋ ದೈವೇನ ಸಿಧ್ಯತಿ।
ದೈವಂ ಪುರುಷಕಾರಶ್ಚ ಕೃತಾಂತೇನೋಪಪದ್ಯತೇ।
ಪ್ರಯತ್ನಾತ್ ಪ್ರಾಪ್ಯತೇ ಹ್ಯರ್ಥಃ ಕಸ್ಮಾತ್ ಗಚ್ಛಥ ನಿರ್ದಯಾಃ।
ಅಥವಾಸ್ತಂ ಗತೇ ಸೂರ್ಯೇ ಸಂಧ್ಯಾಕಾಲ ಉಪಸ್ಥಿತೇ।
ತತೋ ನೇಷ್ಯಥ ವಾ ಪುತ್ರಮಿಹಸ್ಥಾ ವಾ ಭವಿಷ್ಯಥ। - ೨೧/೪೫-೫೨

ಹಾಗೂ ಧರ್ಮ ಸಾಧನೆಗೆ ಬೇಕಾದ ಯುಕ್ತಿಯುಕ್ತವಾದ ಸೌಮ್ಯವಾದ ಮಾತುಗಳನ್ನು ಹೇಳಿದ್ದೇನೆ. ಆದ್ದರಿಂದ ಬೇಗನೇ ಮನೆಗಳಿಗೆ ಹೋಗಿರಿ[೧].

ಹದ್ದಿನ ಮೇಲಿನ ಮಾತುಗಳಿಗೆ ನರಿ ಮತ್ತೆ ಬಾಯಿ ಹಾಕಿತು.

ಅಲ್ಲಾ! ಬಂಗಾರದ ಬಣ್ಣ ಮತ್ತು ಕಾಂತಿಗಳಿಂದ ಕೂಡಿದ ಆಭರಣಗಳಿಂದ ಅಲಂಕೃತನಾದ, ಅಲ್ಲದೆ ಮುಂದೆ ಪಿತೃಗಳಿಗೆ ಪಿಂಡಪ್ರದಾನ ಮಾಡುವ ಮಗನನ್ನು ಹದ್ದಿನ ಮಾತು ಕೇಳಿ ಬಿಟ್ಟರೆ ನಿಮಗೆ ದುಃಖ ನಿಶ್ಚಿತ. ಆದ್ದರಿಂದ ಮಗುವನ್ನು ಬಿಟ್ಟು ಹೋಗಬೇಡಿ (ಈ ಹಿಂದೆ ನಾನು ಹೇಳಿದಂತೆ). ಸತ್ಯಪರಾಕ್ರಮನಾದ ರಾಮನಿಂದ ಧರ್ಮವನ್ನು ಅವಲಂಬಿಸಿ ಶೂದ್ರ ಜಂಬೂಕನು ಕೊಲ್ಲಲ್ಪಟ್ಟನಂತರ ಬ್ರಾಹ್ಮಣ ಕುಮಾರನು ಬದುಕಿದನೆಂದು ಕೇಳಿದ್ದೇನೆ (ರಾಮಾಯಣದಲ್ಲಿ). ಮತ್ತು ರಾಜರ್ಷಿಯಾದ ಶ್ವೇತನ ಬಾಲಕನು ಸತ್ತಿದ್ದನು. ಧರ್ಮನಿಷ್ಠನಾದ ಒಬ್ಬ ಸಿದ್ಧಪುರುಷನು ಅಂದೇ ಮೃತ ಪುತ್ರನನ್ನು ಬದುಕಿಸಿದನು ಎಂದೂ ಕೇಳುತ್ತೇವೆ. ಹಾಗೆಯೇ ಯಾರೋ ಒಬ್ಬ ಸಿದ್ಧಪುರುಷನೋ, ಮುನಿಯೋ, ದೇವತೆಯೋ, ಬಂದು ನಿಮ್ಮ ಮೇಲೆ ದಯೆ ತೋರಿ ನಿಮ್ಮ ಮಗುವನ್ನು ಬದುಕಿಸಬಹುದಲ್ಲವೇ? ಆದ್ದರಿಂದ ಏಕೆ ಹೋಗುವಿರಿ?[೨]

ಹೀಗೆ ನರಿ ಹೇಳಲು, ಪುತ್ರವಾತ್ಸಲ್ಯರಾದ ಆ ಜನರು ಶವದ ಕಡೆ ಹೋಗಿ ತೊಡೆಯ ಮೇಲೆ ಮೃತನ ತಲೆ ಇಟ್ಟುಕೊಂಡು ತುಂಬಾ ಅತ್ತರು.

---

೧ ಅದ್ಯ ವರ್ಷ ಸಹಸ್ರಂ ಮೇ ಸಾಗ್ರಂ ಜಾತಸ್ಯ ಮಾನುಷಾಃ ।
ನ ಚ ಪಶ್ಯಾಮಿ ಜೀವಂತಂ ಮೃತಂ ಸ್ತ್ರೀಪುಂನಪುಂಸಕಮ್ ।
ಮೃತಾ ಗರ್ಭೇಷು ಜಾಯಂತೇ ಮ್ರಿಯಂತೇ ಜಾತಮಾತ್ರಕಾಃ ।
ವಿಕ್ರಮಂತೋ ಮ್ರಿಯಂತೇ ಚ ಯೌವನಸ್ಥಾಸ್ತಥಾಪರೇ ।
ಅನಿಷ್ಟಾನಾಂ ಸಹಸ್ರಾಣಿ ತಥೇಷ್ಟಾನಾಂ ಶತಾನಿ ಚ ।
ಉತ್ಸೃಜ್ಯೇಹ ಪ್ರಯಾತಾ ವೈ ಬಾಂಧವಾ ಭೃಶದುಃಖಿತಾಃ ।
ನ ಚಕ್ಷುರ್ಭ್ಯಾಂ ನ ಕರ್ಣಾಭ್ಯಾಂ ಸಂಶೃಣೋತಿ ಸಮೀಕ್ಷತೇ ।
ತಸ್ಮಾದೇನಂ ಸಮುತ್ಸೃಜ್ಯ ಸ್ವಗೃಹಾನ್ ಗಚ್ಛತಾಶು ವೈ ।
ಮೋಕ್ಷಧರ್ಮಾಶ್ರಿತೈರ್ವಾಕ್ಯೈಃ ಹೇತುಮದ್ಭಿರನಿಷ್ಠುರೈಃ ।
ಮಯೋಕ್ತಾ ಗಚ್ಛತ ಕ್ಷಿಪ್ರಂ ಸ್ವಂ ಸ್ವಮೇವ ನಿವೇಶನಮ್ ॥ - ೨೧/೫೩-೬೨

೨ ಗೃಧ್ರವಾಕ್ಯಾತ್ ಕಥಂ ಪುತ್ರಂ ತ್ಯಜಧ್ವಂ ಪಿತೃಪಿಂಡದಮ್ ।
ಶ್ರೂಯತೇ ಶಂಬುಕೇ ಶೂದ್ರೇ ಹತೇ ಬ್ರಾಹ್ಮಣದಾರಕಃ ।
ಜೀವಿತೋ ಧರ್ಮಮಾಸಾದ್ಯ ರಾಮಾತ್ ಸತ್ಯಪರಾಕ್ರಮಾತ್ ।
ತಥಾ ಶ್ವೇತಸ್ಯ ರಾಜರ್ಷೇರ್ಬಾಲೋ ದಿಷ್ಟಾಂತಮಾಗತಃ ।
ಶ್ವೋಽಭೂತೇ ಧರ್ಮನಿತ್ಯೇನ ಮೃತಃ ಸಂಜೀವಿತಃ ಪುನಃ ।
ತಥಾ ಕಶ್ಚಿತ್ ಭವೇತ್ ಸಿದ್ಧೋ ಮುನಿರ್ವಾ ದೇವತಾಽಪಿ ವಾ ।
ಕೃಪಣಾನಾಮನುಕ್ರೋಶಂ ಕುರ್ಯಾದ್ವೋ ರುದತಾಮಿಹ ॥ - ೨೧/೬೩-೬೭

ಮತ್ತೆ ಹದ್ದು ಬಿಡದೆ ಆ ಜನರನ್ನು ನಿಮ್ಮ ಮಗು ಯಮರಾಜನ ಆದೇಶದಂತೆ ಚಿರನಿದ್ರೆಗೆ ಜಾರಿದ್ದಾನೆ. ತಪಸ್ವಿಗಳು ಕೂಡಾ ಆಯುಷ್ಯ ಮುಗಿಯಲು ಮರಣಕ್ಕೆ ಒಳಗಾಗಿ ಸ್ಮಶಾನಕ್ಕೆ ಬರುತ್ತಾರೆ. ಇದೇ ಎಲ್ಲ ಸ್ನೇಹಗಳ ಕೊನೆಯ ತಾಣ. ಈ ನರಿ ಎಷ್ಟೇ ವಿಶ್ವಾಸ ಹುಟ್ಟಿಸಿದರೂ, ಈ ದಿನ ಈ ಬಾಲಕ ಮತ್ತೆ ಬದುಕುವುದಿಲ್ಲ. ದೇಹವನ್ನು ಬಿಟ್ಟ ಚೇತನಕ್ಕೆ ಮತ್ತೆ ಅದೇ ದೇಹದಲ್ಲಿ ಪ್ರವೇಶವಿಲ್ಲ. ನೂರಾರು ನರಿಗಳು ನೂರಾರು ವರ್ಷ ಪ್ರಯತ್ನಿಸಿದರೂ ಇವನಿಗೆ ದೇಹವನ್ನು ಕೊಟ್ಟು ಬದುಕಿಸಲು ಸಾಧ್ಯವಿಲ್ಲ. **ರುದ್ರದೇವರು, ಷಣ್ಮುಖ, ಬ್ರಹ್ಮದೇವರು, ವಿಷ್ಣು ಇವರಲ್ಲಿ ಯಾರಾದರೂ ವರ ಕೊಟ್ಟರೆ, ನಿಮ್ಮ ಬಾಲಕ ಬದುಕಬಹುದು** (ವರ ಕೊಡಲಿಲ್ಲ, ಮಗ ಬದುಕುವುದಿಲ್ಲವೆಂದು ಹದ್ದಿನ ಭಾವ).

ನಾನು ಈ ನರಿ, ನೀವು (ಶಿಶು ಬಂಧುಗಳು) ಎಲ್ಲರೂ ಅವರವರ ಧರ್ಮಾಧರ್ಮಗಳನ್ನು ಹಿಡಿದುಕೊಂಡು ಜೀವನಮಾರ್ಗದಲ್ಲಿದ್ದೇವೆ (ತಿಳಿಯಿರಿ). ಅಪ್ರಿಯ ನಡವಳಿಕೆ, ನಿಷ್ಠುರ ಮಾತು, ಪರದ್ರೋಹ, ಪರಸ್ತ್ರೀ, ಅಧರ್ಮ, ಸುಳ್ಳು, ಇವುಗಳನ್ನು ಸರ್ವಥಾ ಜ್ಞಾನಿಯಾದವನು ದೂರವಿರಿಸಬೇಕು. ಸತ್ಯ, ಧರ್ಮ, ಶುಭ, ನ್ಯಾಯ, ಪ್ರಾಣಿಗಳ ಮೇಲೆ ತುಂಬಾ ದಯೆ, ಸರಳತೆ (ಅಕುಟಿಲತೆ), ಶಾಠ್ಯವಿಲ್ಲದಿರುವುದು, ಇವನ್ನು ಪ್ರಯತ್ನಪೂರ್ವಕವಾಗಿ ಅನುಸರಿಸಿರಿ. ತಾಯಿ, ತಂದೆ, ಬಾಂಧವರು, ಸ್ನೇಹಿತರು ಇವರು ಬದುಕಿದ್ದಾಗ ಯಾರು ಆದರಿಸುವುದಿಲ್ಲವೋ (ಅವರ ಮಾತಿಗೆ ಬೆಲೆ ಕೊಡುವುದಿಲ್ಲವೋ) ಅವರಿಗೆ ಪಾಪ ಬಿಡದು.

ಯಾರು ಕಣ್ಣುಗಳಿಂದ ನೋಡುವುದಿಲ್ಲವೋ, ಯಾರಲ್ಲಿ ಯಾವ ಚಲನೆಯೂ ಇಲ್ಲವೋ, ಅವನ ಮರಣವಾಗಿರುವುದು ನಿಶ್ಚಯ. ಅವಸಾನ ನಿಶ್ಚಯವಾಗಿರುವಾಗ ಅಳುವುದರಿಂದ ಏನು ಮಾಡುವಿರಿ?[೧]

ಹೀಗೆ ಹದ್ದು ಹೇಳಿದಾಗ ಆ ಜನರೆಲ್ಲ ಆ ಮಗನನ್ನು ಅಲ್ಲೇ ಭೂಮಿಯ ಮೇಲೆ ಬಿಟ್ಟು ಶೋಕತಪ್ತರಾಗಿ ಸುತಸ್ನೇಹದಿಂದ ಬೇಯುತ್ತಾ ಮನೆಯ ಕಡೆ ಹೊರಟರು.

ಆಗ ನರಿ ಮತ್ತೇ ಹೀಗೆ ನುಡಿಯಿತು.

---

೧ ನ ವೈ ಮೂರ್ತಿಪ್ರದಾನೇನ ನ ಜಂಬುಕಶತೈರಪಿ ।
ಶಕ್ಯೋ ಜೀವಯಿತುಂ ಹ್ಯೇಷ ಬಾಲೋ ವರ್ಷಶತೈರಪಿ ।
**ಅಪಿ ರುದ್ರಃ ಕುಮಾರೋ ವಾ ಬ್ರಹ್ಮ ವಾ ವಿಷ್ಣುರೇವ ವಾ ।**
**ವರಮಸ್ಮೈ ಪ್ರಯಚ್ಛೇಯುಸ್ತತೋ ಜೀವೇದಯಂ ಶಿಶುಃ ।**
ಅಪ್ರಿಯಂ ಪರುಷಂ ಚಾಪಿ ಪರದ್ರೋಹಂ ಪರಸ್ತ್ರಿಯಮ್ ।
ಅಧರ್ಮಮನೃತಂ ಚೈವ ದೂರಾತ್ ಪ್ರಾಜ್ಞೋ ನಿವರ್ತಯೇತ್ ।
ಸತ್ಯಂ ಧರ್ಮಂ ಶುಭಂ ನ್ಯಾಯಂ ಪ್ರಾಣಿನಾಂ ಮಹತೀಂ ದಯಾಮ್ ।
ಅಜಿಹ್ಮತ್ವಮಶಾಠ್ಯಂ ಚ ಯತ್ನತಃ ಪರಿಮಾರ್ಗತ ।
ಜೀವತೋ ಯೇ ನ ಪಶ್ಯಂತಿ ತೇಷಾಂ ಧರ್ಮವಿಪರ್ಯಯಃ ॥ - ೨೧/೬೯-೮೧

'ಈ ಮನುಷ್ಯಲೋಕ ತುಂಬಾ ಭಯಂಕರ. ಇಲ್ಲಿ ಎಲ್ಲ ಪ್ರಾಣಿಗಳ ವಿನಾಶನವಾಗುತ್ತದೆ. ಇಷ್ಟರಾದ ಬಂಧುಗಳ ವಿಯೋಗ ಇರುತ್ತದೆ. ಇಲ್ಲಿ ಆಯುಷ್ಯವೂ ಕಡಿಮೆ. ಈ ಮರ್ತ್ಯಲೋಕದಲ್ಲಿ ಬಹಳ ಸುಳ್ಳು, ಅಪ್ರಿಯ ವಚನಗಳು, ದುಃಖಶೋಕಗಳು ಹೆಚ್ಚಾಗುವ ಪರಿಸ್ಥಿತಿ ನೋಡಿ, ಇದು ಬೇಡವೆನ್ನಿಸುತ್ತದೆ. ಅಯ್ಯೋ! ಈ ಹದ್ದಿನ ಮಾತು ಕೇಳಿ ವಾಪಸು ಹೋಗುತ್ತಿರುವಿರಲ್ಲ! ಅನ್ಯಾಯ! ನಿಮಗೆ ಧಿಕ್ಕಾರ! ಈ ಹದ್ದಿನ ಮಾತು ಕೇಳಿ ಸುತಸ್ನೇಹವನ್ನು ಬಿಟ್ಟು ಹೇಗೆ ಹೊರಟುಹೋಗುತ್ತೀರಿ? ಸುಖದ ಅನಂತರ ದುಃಖ, ದುಃಖಾನಂತರ ಸುಖ. ಇವೆರಡೂ ಇರುವ ಈ ಲೋಕದಲ್ಲಿ ಯಾವುದೂ ಶಾಶ್ವತವಲ್ಲ. ಈ ಮಗು ಬದುಕಿ, ರೂಪ, ಯೌವನ ಸಂಪನ್ನನಾಗಿ, ಕಾಂತಿಯಿಂದ ಬೆಳಗುವವನಂತೆ ನನ್ನ ಮನಸ್ಸಿಗೆ ತೋರುತ್ತಿದೆ. ಇದರಲ್ಲಿ ಸಂಶಯವೇ ಇಲ್ಲ. ಇವನ ನಾಶ ನ್ಯಾಯವಾದುದಲ್ಲ. ಪುತ್ರಶೋಕಾಗ್ನಿಯಿಂದ ಸುಟ್ಟು ಹೋದ ನಿಮಗೆ ಸುಖ ಸಿಗುವುದು. ಈ ಮರಣ ಸರಿಯಲ್ಲ. ಇವನನ್ನು ಬಿಟ್ಟು ಎಲ್ಲಿ ಹೋಗುತ್ತೀರಿ?'[೧]

ಈ ರೀತಿಯಾಗಿ ಧರ್ಮವಿರೋಧಿಯಾದ ಪ್ರಿಯವಾದ ಸುಳ್ಳನ್ನು ಚಿಂತಿಸುವ ನಿತ್ಯವೂ ಸ್ಮಶಾನವಾಸಿಯಾದ ಅಲ್ಲಿಯೇ ಸುಖವನ್ನು ಹುಡುಕಿಕೊಳ್ಳುವ ನರಿಯ ಅಮೃತದಂತಹ ಮಾತುಗಳಿಂದ ಮಧ್ಯಸ್ಥಿತಿಗೆ ಹೋದ ಆ ಬಾಂಧವರು ತಮ್ಮ ಕೆಲಸ ಆಗುವುದೆಂಬ ನಿರೀಕ್ಷೆಯಿಂದ ಅಲ್ಲೇ ನಿಂತರು.

ಮತ್ತೇ ಹದ್ದು ಮಾತನಾಡಿತು.

ಈ ಪ್ರದೇಶವು ಪ್ರೇತಗಳಿಂದ ತುಂಬಿದೆ. ಯಕ್ಷ ರಾಕ್ಷಸರು ಇಲ್ಲಿದ್ದಾರೆ. ಭೀಕರ ಕಾಡು, ಗೂಬೆಗಳ ಘೋರವಾದ ನಾದ, ಇನ್ನು ನೀಲಮೇಘದ ಪ್ರಭೆಯೇ (ಬರೀ ಕತ್ತಲು) ಇಲ್ಲಿಯ ವಾತಾವರಣ. ಆದ್ದರಿಂದ ಶವವನ್ನು ಇಲ್ಲಿಯೆ ಬಿಟ್ಟು ಪ್ರೇತಕಾರ್ಯಗಳನ್ನು ಮಾಡಲು ಹೋಗಿರಿ. ಇಲ್ಲಿರುವ ಎಲ್ಲ ಪ್ರಾಣಿಗಳೂ ಪರಾಕ್ರಮಿಗಳು, ಮಾಂಸಾಹಾರಿಗಳು. ಅವು ನಿಮ್ಮನ್ನು ಆಕ್ರಮಿಸುತ್ತವೆ. ನೀವು ಜ್ಞಾನಹೀನರಾಗಿ (ಅವಿವೇಕಿಗಳಾಗಿ) ನಿಷ್ಫಲವಾದ, ಸುಳ್ಳಾದ, ನರಿಯ ಮಾತುಗಳನ್ನು ನಂಬಿದರೆ ನೀವೆಲ್ಲ ನಾಶವಾಗುವಿರಿ

---

೧ ದಾರುಣೋ ಮರ್ತ್ಯಲೋಕೋಽಯಂ ಸರ್ವಪ್ರಾಣಿವಿನಾಶನಃ।
ಇಷ್ಟಬಂಧು ವಿಯೋಗಶ್ಚ ತಥೈವಾಲ್ಪಂ ಚ ಜೀವಿತಮ್ ।...
ನ ಮೇ ಮಾನುಷಲೋಕೋಽಯಂ ಮುಹೂರ್ತಮಪಿ ರೋಚತೇ।
ಅಹೋ ಧಿಗ್ಗೃಧ್ರವಾಕ್ಯೇನ ಸನ್ನಿವರ್ತಥ ಮಾನುಷಾಃ।
ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್।
ಸುಖದುಃಖಾನ್ವಿತೇ ಲೋಕೇ ನೇಹಾಸ್ತ್ಯೇಕಮನಂತಕಮ್।
ರೂಪಯೌವನಸಂಪನ್ನಂ ದ್ಯೋತಮಾನಮಿವ ಶ್ರಿಯಾ।
ಜೀವಂತಮೇನಂ ಪಶ್ಯಾಮಿ ಮನಸಾ ನಾತ್ರ ಸಂಶಯಃ। – ೨೦/೮೩-೯೦

ಅಯಂ ಪ್ರೇತಸಮಾಕೀರ್ಣೋ ಯಕ್ಷರಾಕ್ಷಸಸೇವಿತಃ।
ದಾರುಣಃ ಕಾನನೋದ್ದೇಶಃ ಕೌಶಿಕೈರಭಿನಾದಿತಃ।
ಭೀಮಃ ಸುಘೋರಶ್ಚ ತಥಾ ನೀಲಮೇಘಸಮಪ್ರಭಃ।
ಅಸ್ಮಿನ್ ಶವಂ ಪರಿತ್ಯಜ್ಯ ಪ್ರೇತಕಾರ್ಯಾಣ್ಯುಪಾಸತ।
ಸರ್ವೇ ವಿಕ್ರಾಂತವೀರ್ಯಾಶ್ಚ ಅಸ್ಮಿನ್ ದೇಶೇ ಸುದಾರುಣಾಃ।
ಯುಷ್ಮಾನ್ ಪ್ರಧರ್ಷಯಿಷ್ಯಂತಿ ವಿಕೃತಾ ಮಾಂಸಭೋಜನಾಃ।
ಯದಿ ಜಂಬುಕವಾಕ್ಯಾನಿ ನಿಷ್ಫಲಾನ್ಯನೃತಾನಿ ಚ।
ಶ್ರೋಷ್ಯಥ ಭ್ರಷ್ಟವಿಜ್ಞಾನಾಸ್ತತಃ ಸರ್ವೇ ವಿನಂಕ್ಷ್ಯಥ। 	- ೨೧/೯೪-೧೦೧

ಹದ್ದಿನ ಮಾತುಗಳಿಗೆ ಉತ್ತರವೆಂಬಂತೆ ನರಿಯು ಉತ್ತರಿಸಿತು. ಹೆದರಬೇಡಿ. ಸೂರ್ಯಾಸ್ತವಾಗುವವರೆಗೆ ಇಲ್ಲೇ ಇದ್ದು ನಿಸ್ಸಂಕೋಚವಾಗಿ ರೋದಿಸಿರಿ. ಹದ್ದಿನ ಮಾತುಗಳನ್ನು ಒಪ್ಪಿದರೆ ನಿಮ್ಮ ಮಗ ಇಲ್ಲವಾಗುತ್ತದೆ[೧].

ಭೀಷ್ಮರು ಧರ್ಮರಾಜನಿಗೆ ಹೇಳುತ್ತಾರೆ –

'ನೋಡು ರಾಜ! ಹದ್ದು ಮತ್ತು ನರಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ಮಾತನಾಡಿದವು. ಇವೆರಡೂ ಹಸಿದಿವೆ. ಪರಸ್ಪರ ವಿರುದ್ಧವಾಗಿ ಮಾತನಾಡುತ್ತಿವೆ. ಇಬ್ಬರೂ ತಮ್ಮ ಕಾರ್ಯಸಾಧನೆಯಲ್ಲಿ ಸಮರ್ಥರು. ಹಸಿವು ಬಾಯಾರಿಕೆಗಳಿಂದ ಬಳಲಿದ ಇವು ಶಾಸ್ತ್ರವನ್ನು ಆಧರಿಸಿ ಮಾತನಾಡುತ್ತಿವೆ. ಅವುಗಳ ಜ್ಞಾನ, ಪಾಂಡಿತ್ಯದ ಅಮೃತದಂತಹ ಮಾತುಗಳನ್ನು ಕೇಳಿದ ಆ ಬಂಧುಗಳು ಆ ಜಾಗದಿಂದ ಹೋಗುತ್ತಾರೆ, ಮತ್ತೆ ಬರುತ್ತಾರೆ. ಆದರೆ ಇವು ಹದ್ದು ನರಿಗಳು ಅವರಿಗೆ ಭ್ರಾಂತಿ ಉಂಟು ಮಾಡಿದವು.

ಸ್ತ್ರಿಯಂ ಹತ್ವಾ ಮಾತರಂ ಚ ಕೋ ಹಿ ಜಾತು ಸುಖೀ ಭವೇತ್ । ಹೀಗೆ ಇರುವಾಗ ಸ್ಮಶಾನವಾಸಿ ರುದ್ರದೇವ ಆ ಬಂಧುಗಳ ಬಳಿಗೆ ಬಂದು ನಿಮಗೆ ವರ ಕೊಡುವೆ ಕೇಳಿ ಎಂದನು. ಆ ಜನರು ನಮಗೆ ಒಬ್ಬನೇ ಮಗ. ಅವನು ಬದುಕಬೇಕೆಂಬುದೇ ನಮ್ಮ ಪ್ರಾರ್ಥನೆ ಎಂದರು. ಆಗ ರುದ್ರದೇವರು ನೀರು ತುಂಬಿದ ತಮ್ಮ ಹಸ್ತದಿಂದ ಆ(ಶವ) ಕುಮಾರನ ಮೇಲೆ(ಪ್ರೋಕ್ಷಿಸಿ) ಅವನಿಗೆ ನೂರುವರ್ಷ ಆಯುಷ್ಯವನ್ನು ಅನುಗ್ರಹಿಸಿದರು. ಅಲ್ಲದೆ, ಆ ಹದ್ದು ನರಿಗಳಿಗೂ ಹಸಿವು ಇಂಗಲಿ ಎಂದು ವರ ಕೊಟ್ಟರು. ನಂತರ ಬಾಲಕನಿಗಾದ ಶ್ರೇಯಸ್ಸಿನಿಂದ ಹರ್ಷಿತರಾದ ಆ ಬಾಂಧವರೆಲ್ಲ ರುದ್ರದೇವರನ್ನು ಭಕ್ತಿಯಿಂದ ನಮಿಸಿ, ಕೃತಕೃತ್ಯರಾಗಿ ಅಲ್ಲಿಂದ ಹೊರಟರು.

೧ ಸ್ಥೀಯತಾಂ ನೇಹ ಭೇತವ್ಯಂ ಯಾವತ್ತಪತಿ ಭಾಸ್ಕರಃ।
ಸ್ವೈರಂ ರುದತ ವಿಸ್ರಬ್ಧಾಃ .....................
ಯದಿ ಗೃಧ್ರಸ್ಯ ವಾಕ್ಯಾನಿ ತೀವ್ರಾಣಿ ರಭಸಾನಿ ಚ।
ಗೃಹ್ಣೀತ ಮೋಹಿತಾತ್ಮಾನಃ ಸುತೋ ವೋ ನ ಭವಿಷ್ಯತಿ॥ 	- ೨೧/೧೦೨-೧೦೪

ಹೀಗೆ ಬಹುಕಾಲ ಶ್ರದ್ಧಾಪೂರ್ವಕವಾದ ದೃಢನಿಶ್ಚಯದ ಪ್ರಯತ್ನಗಳಿಂದ ದೇವೋತ್ತಮನ ಅನುಗ್ರಹದಿಂದ ಫಲವು ಬೇಗನೇ ಸಿಗುತ್ತದೆ. ರಾಜನ್! ಬಾಂಧವರಿಗೆ ಆಶ್ಚರ್ಯವಾಯಿತು. ರುದ್ರದೇವರ ಅನುಗ್ರಹದಿಂದ. ನಂತರ ಬೇಗನೇ ನಗರಕ್ಕೆ ತೆರಳಿದರು. ಇದು ಎಲ್ಲ ಚತುರ್ವರ್ಣ ಸಮುದಾಯದ ಎಲ್ಲರಿಗೂ ಒಳ್ಳೆಯ ದೃಷ್ಟಾಂತವಾಗಿದೆ.

ಧರ್ಮಾರ್ಥಮೋಕ್ಷಗಳೆಂಬ ಪುರುಷಾರ್ಥಗಳ ಬಗ್ಗೆ ಇರುವ ಉಪದೇಶಾಮೃತವನ್ನು ಪದೇ ಪದೇ ಕೇಳುವ ಮನುಷ್ಯನು ಇಲ್ಲಿ ಸಂತೋಷವಾಗಿರುತ್ತಾನೆ. ಮರಣಾನಂತರವೂ ಸಂತೋಷವನ್ನು ಹೊಂದುತ್ತಾನೆ.

## ಸಂದೇಶಗಳು-ವಿವರಣೆಗಳು

ಕಥಾ ಮತ್ತು ಸಂದೇಶಗಳು ಒಟ್ಟೊಟ್ಟಿಗೆ ಹೆಣೆಯಲ್ಪಟ್ಟಿವೆ ಈ ಉಪಾಖ್ಯಾನದಲ್ಲಿ. ಅದನ್ನು ಉಪಾಖ್ಯಾನದ ಕೊನೆಯಲ್ಲಿ ವಿಶೇಷವಾಗಿ ೧೦೫-೧೨೦ ಶ್ಲೋಕಗಳಲ್ಲಿ ಕಾಣಬಹುದು. ಪ್ರಪಂಚದಲ್ಲಿ ತಮ್ಮ ಸ್ವಾರ್ಥವನ್ನು ಹೇಗೆ ಅಮಾಯಕರ ಮೂಲಕ ಸಾಧಿಸಲು ಬುದ್ಧಿಜೀವಿಗಳು

---

೧ ಸ್ವಕಾರ್ಯದಕ್ಷೌ ರಾಜನ್ ಗೃಧ್ರೋ ಜಂಬುಕ ಏವ ಚ।
ಕ್ಷುತ್ಪಿಪಾಸಾಪರಿಶ್ರಾಂತೌ ಶಾಸ್ತ್ರಮಾಲಂಬ್ಯ ಜಲ್ಪತಃ।
ತಯೋರ್ವಿಜ್ಞಾನವಿದುಷೋರ್ದ್ವಯೋರ್ಜಂಬುಕಪಕ್ಷಿಣೋಃ।
ವಾಕ್ಯೈರಮೃತಕಲ್ಪೈರ್ಹಿ ಪ್ರಾತಿಷ್ಠಂತ ವ್ರಜಂತಿ ಚ।
ಶೋಕದೈನ್ಯಸಮಾವಿಷ್ಟಾ ರುದಂತಸ್ತಸ್ಥಿರೇ ತದಾ।
ಸ್ವಕಾರ್ಯಕುಶಲಾಭ್ಯಾಂ ತೇ ಸಂಭ್ರಾಮ್ಯಂತೇ ಹ ನೈಪುಣಾತ್।
ತಥಾ ತಯೋರ್ವಿವದತೋರ್ವಿಜ್ಞಾನ ವಿದುಷೋರ್ದ್ವಯೋಃ।
ಬಾಂಧವಾನಾಂ ಸ್ಥಿತಾನಾಂ ಚ ಉಪಾತಿಷ್ಠತ ಶಂಕರಃ।
ತತಸ್ತಾನಾಹ ಮನುಜಾನ್ ವರದೋಽಸ್ಮೀತಿ ಶೂಲಭೃತ್।
ಏಕಪುತ್ರವಿಹೀನಾನಾಂ ಸರ್ವೇಷಾಂ ಜೀವಿತಾರ್ಥಿನಾಮ್।
ಪುತ್ರಸ್ಯ ನೋ ಜೀವದಾನಾಜ್ಜೀವಿತಂ ದಾತುಮರ್ಹಸಿ।
ಏವಮುಕ್ತಃ ಸ ಭಗವಾನ್ ವಾರಿಪೂರ್ಣೇನ ಪಾಣಿನಾ।
ಜೀವಂ ತಸ್ಮೈ ಕುಮಾರಾಯ ಪ್ರಾದಾದ್ವರ್ಷಶತಾಯ ವೈ।
ತಥಾ ಗೋಮಾಯುಗೃಧ್ರಾಭ್ಯಾಮದದತ್ಕ್ಷುದ್ವಿನಾಶನಮ್।
ವರಂ ಪಿನಾಕೀ ಭಗವಾನ್ ಸರ್ವಭೂತಹಿತೇ ರತಃ।
ತತಃ ಪ್ರಣಮ್ಯ ತಂ ದೇವಂ ಶ್ರೇಯೋಹರ್ಷಸಮನ್ವಿತಾಃ।
ಕೃತಕೃತ್ಯಾಃ ಸುಖಂ ಹೃಷ್ಟಾಃ ಪ್ರಾತಿಷ್ಠಂತ ತದಾ ವಿಭೋ।
ಪಶ್ಯ ಚಾಲ್ಪೇನ ಕಾಲೇನ ನಿಶ್ಚಯಾನ್ವೇಷಣೇನ ಚ।
ಪ್ರಸಾದಂ ಶಂಕರಾತ್ ಪ್ರಾಪ್ಯ ದುಃಖಿತಾಃ ಸುಖಮಾಪ್ನುವನ್।
ಧರ್ಮಾರ್ಥಮೋಕ್ಷಸಂಯುಕ್ತಮಿತಿಹಾಸಮಿಮಂ ಶುಭಮ್। - ೨೧/೧೦೫-೧೨೦

ಪ್ರಯತ್ನಿಸುತ್ತಾರೆ ಎಂಬುದಕ್ಕೆ ಇದೊಂದು ಉತ್ತಮ ನಿದರ್ಶನ. ಅಧ್ಯಯನ ಮಾಡಿದ ಶಾಸ್ತ್ರವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ತಿರುಚುತ್ತಾರೆ. ಆದರೆ ದೈವ ಸಂಕಲ್ಪವೂ ಕೆಲವು ಬಾರಿ ಆಶ್ಚರ್ಯಕರವಾಗಿಯೇ ಇರುತ್ತದೆ.

೨. ನರಿಯ ಮಾತು ಹೇಗೋ ಸತ್ಯವಾಗಿ ರುದ್ರದೇವರು ಹಸಿದ ಹದ್ದು, ನರಿಗಳಿಗೂ ಹಸಿವಿನ ಬವಣೆಯನ್ನು ತೀರಿಸುತ್ತಾರೆ. ಅಮಾಯಕ ಜನರ ಮೃತಬಾಲಕನಿಗೂ ದೀರ್ಘ ಆಯುಷ್ಯ ಕೊಡುತ್ತಾರೆ. ಇದರ ಅಂತರಾರ್ಥಗಳು ತಿಳಿಯುವುದು ತುಂಬಾ ಕಷ್ಟ. ಹದ್ದು ನರಿಗಳು ಪೂರ್ವಜನ್ಮದಲ್ಲಿ ಶಾಸ್ತ್ರವೇತ್ತರಾಗಿ, ಈಗ ಯಾವುದೋ ಶಾಪದಿಂದಲೋ ಏನೋ ನರಿ, ಹದ್ದುಗಳಾಗಿ ಹುಟ್ಟಿರಬಹುದು. ಅವರಿಗೂ ದೈವವರ ಸಿಕ್ಕಿತು. ಮೃತ ಕುಮಾರನು ಬದುಕಿದ. ಭೀಷ್ಮರೇ ಹೇಳುವಂತೆ ಸತತ ಪ್ರಯತ್ನ ದೈವಾನುಗ್ರಹಗಳಿದ್ದರೆ ಮೋಕ್ಷ ದೊರಕುತ್ತದೆ. ಭೀಷ್ಮರು ಹೇಳಿದುದಕ್ಕಿಂತ ಹೆಚ್ಚೇನು ಯಾರು ಹೇಳಲು ಸಾಧ್ಯ?

೩. ನರಿ, ಹದ್ದುಗಳ ಉದ್ದೇಶ್ಯ ಏನೇ ಇದ್ದರೂ, ಆ ಮಗು ಮಾತ್ರ ರುದ್ರದೇವರ ಅನುಗ್ರಹದಿಂದ ಬದುಕಿತು. ದೇವತೆಗಳ ಅನುಗ್ರಹವಿದ್ದಲ್ಲಿ ಸತ್ತವರು ಬದುಕುವರು.

*****

## ೯೬. ಶ(ಶಾ)ಲ್ಮಲಿ ವೃಕ್ಷದ ಗರ್ವಭಂಗ

ಧರ್ಮರಾಜನ ಪ್ರಶ್ನೆ - ಭೀಷ್ಮರನ್ನು ಕುರಿತು.

ಉಪಕಾರ, ಅಪಕಾರ ಮಾಡಲು ಸಮರ್ಥನಾದ, ಬಲಿಷ್ಠನಾದ ವ್ಯಕ್ತಿಯನ್ನು ಮೋಹದಿಂದ ಆತ್ಮಪ್ರಶಂಸೆ ಮಾಡಿಕೊಂಡು ಕೆಣಕುವ ದುರ್ಬಲನು ಹೇಗೆ ಆ ಪ್ರಸಂಗವನ್ನು ಎದುರಿಸಬೇಕು?

ಈ ವಿಷಯದಲ್ಲಿ ಶಾಲ್ಮಲಿ ಹಾಗೂ ವಾಯುದೇವನೊಡನೆ ನಡೆದ ಸಂವಾದವನ್ನು ಭೀಷ್ಮರು ಉದಾಹರಿಸಿದರು.

ಹಿಮಾಲಯಪರ್ವತದ ಪರಿಸರದಲ್ಲಿ ಒಂದು ಭಾರೀ ಶಾಲ್ಮಲಿ ವೃಕ್ಷವಿತ್ತು. ಆ ಮರದ ನೆರಳಿನಲ್ಲಿ ಶ್ರಮದಿಂದ ಆಯಾಸಗೊಂಡ ಆನೆಗಳು, ಇತರ ಪಕ್ಷಿಗಳು, ಪ್ರಾಣಿಗಳೂ ದಾರಿಹೋಕರು, ತಪಸ್ವಿಗಳು, ಗುಂಪುಗುಂಪಾಗಿ ಪ್ರಯಾಣಿಸುವ ವರ್ತಕರೂ, ಹೀಗೆ ಅನೇಕರು ಆಶ್ರಯ ಪಡೆಯುತ್ತಿದ್ದರು.

ಒಮ್ಮೆ ನಾರದರು ಅಲ್ಲಿಗೆ ಬಂದು ಶಾಖೋಪಶಾಖೆಗಳಿಂದ ಕೂಡಿದ ಆ ವೃಕ್ಷವನ್ನು ಅದರ ರಮಣೀಯತೆಯನ್ನು, ಅದರ ಆಶ್ರಯದಲ್ಲಿರುವ ಪ್ರಾಣಿಗಳೇ ಮೊದಲಾದವುಗಳಿಗೆ ಆದ ಪ್ರಯೋಜನವನ್ನು ಮುಕ್ತಕಂಠದಿಂದ ಪ್ರಶಂಸೆ ಮಾಡಿದರು. ಹೇಗೆ? ಎಲೈ ಬೂರುಗಮರವೇ! ನೀನೆಷ್ಟು ರಮಣೀಯ, ಮನೋಹರ, ನಿನ್ನ ಆಶ್ರಯದಲ್ಲಿ ಅನೇಕ ಪ್ರಾಣಿಗಳ ಸಂಕುಲವೇ ವಾಸವಾಗಿದೆ. ನಿನ್ನ ಮೇಲೆ ವಾಯುವಿಗೆ ಅದೆಷ್ಟು ಪ್ರೀತಿ, ಸ್ನೇಹ. ಸಣ್ಣ ದೊಡ್ಡ ಮರಗಳನ್ನು ಪರ್ವತಶಿಖರಗಳನ್ನು ಚಲಿಸುವಂತೆ ಮಾಡುವ ವಾಯುವು ಪಾತಾಲ, ಸರೋವರ, ನದಿ, ಸಮುದ್ರಗಳನ್ನೂ ಒಣಗಿಸುವ ವಾಯು ನಿನ್ನನ್ನು ರಕ್ಷಿಸುತ್ತಾನೆ. ಅಂತೆಯೇ ನೀನು ಸುಂದರ ಎಲೆ, ಪುಷ್ಪ ಶಾಖೆಗಳಿಂದ ಕಂಗೊಳಿಸುತ್ತಿರುವೆ. ಆದ್ದರಿಂದ ನಿನ್ನ ಆಶ್ರಯದಲ್ಲಿ ಆನೆ ಹಾಗೂ ವಿವಿಧ ಪ್ರಾಣಿಗಳು, ವರ್ತಕರು ಸುಖ ಹೊಂದುತ್ತಾರೆ. ತಪಸ್ಸಿದ್ಧರಾದ ಬ್ರಾಹ್ಮಣರೂ ನಿನ್ನ ಆಶ್ರಯದಲ್ಲಿದ್ದಾರೆ. ನಿನ್ನ ಸ್ಥಾನ ಸ್ವರ್ಗಸಮವೆಂದು ಭಾವಿಸುತ್ತೇನೆ.

ಭಯಂಕರವಾದ ಗಾಳಿಯೂ ನಿನ್ನ ಬಂಧುವಾದ್ದರಿಂದ ಅಥವಾ ಸ್ನೇಹಿತನಾದ್ದರಿಂದ ನಿನ್ನನ್ನು ರಕ್ಷಿಸುತ್ತಾನೆ. ನೀನು ವಾಯುವನ್ನು ದಾಸಭಾವದಿಂದ ವಿನಯ ತೋರಿರುವೆ. ವಾಯು ಬಲದಿಂದ ಭಗ್ನವಾಗದ ಮರ, ಪರ್ವತವನ್ನೇ ನಾನು ನೋಡಿಲ್ಲ.

**ಹಿಮವಂತಂ ಸಮಾಸಾದ್ಯ ಮಹಾನಾಸೀತ್ ವನಸ್ಪತಿಃ।**
**ವರ್ಷಪೂಗಾಭಿಸಂವೃದ್ಧಃ ಶಾಖಾಸ್ಕಂಧಪಲಾಶವಾನ್।**

ತತ್ರ ಸ್ಮ ಮತ್ತಾ ಮಾತಂಗಾ ಘರ್ಮಾರ್ತಾಃ ಶ್ರಮಕರ್ಶಿತಾಃ ।
ವಿಶ್ರಮಂತಿ ಮಹಾಬಾಹೋ ತಥಾನ್ಯಾ ಮೃಗಜಾತಯಃ ।
ಶುಕಸಾರಿಕಸಂಘುಷ್ಟಃ ಫಲವಾನ್ ಪುಷ್ಪವಾನಪಿ ।
ಸಾರ್ಥಿಕಾ ವಣಿಜಶ್ಚಾಪಿ ತಾಪಸಾಶ್ಚ ವನೌಕಸಃ ॥
ನಾರದ ಉವಾಚ -
ಅಹೋ ನು ರಮಣೀಯಸ್ತ್ವಮಹೋ ಚಾಸಿ ಮನೋರಮಃ ।........
ವಿವಾನ್ ಹಿ ಪವನಃ ಸ್ಥಾನಾದ್ ವೃಕ್ಷಾನುಚ್ಚಾವಚಾನಪಿ ।
ಪರ್ವತಾನಾಂ ಚ ಶಿಖರಾಣ್ಯಾಚಾಲಯತಿ ವೇಗವಾನ್ ।
ಶೋಷಯತ್ಯೇವ ಪಾತಾಲಂ ಸಾಗರಾಂಶ್ಚ ತಥೈವ ಚ ।
ಬ್ರಾಹ್ಮಣೈಶ್ಚ ತಪಸ್ಸಿದ್ಧೈಃ ತಾಪಸೈಃ ಶಮಣೈರಪಿ ।
ತ್ರಿವಿಷ್ಟಪಸಮಂ ಮನ್ಯೇ ತವಾಯತನಮೇವ ಹ ।
ಬಂಧುತ್ವಾದಥವಾ ಸಖ್ಯಾಚ್ಛಲ್ಮಲೇ ನಾತ್ರ ಸಂಶಯಃ ।
ಪಾಲಯತ್ಯೇವ ಸತತಂ ಭೀಮಃ ಸರ್ವತ್ರಗೋಽನಿಲಃ ।
ನ್ಯಗ್ಭಾವಂ ಪರಮಂ ವಾಯೋಃ ಶಲ್ಮಲೇ ತ್ವಮುಪಾಗತಃ ।
ತವಾಹಮಸ್ಮೀತಿ ಸದಾ ಯೇ ನ ರಕ್ಷತಿ ಮಾರುತಃ ॥ - ೨೩/೫-೨೫

ಈ ಮಾತನ್ನು ಒಪ್ಪದ ಶಾಲ್ಮಲಿ ವೃಕ್ಷ ಹೇಳಿತು. 'ಬ್ರಹ್ಮಜ್ಞಾನಿಯೇ(ನಾರದರೇ)! ವಾಯು ನನ್ನ ಗೆಳೆಯನಲ್ಲ, ಬಂಧುವಲ್ಲ. ಆಗಿದ್ದಿದ್ದರೆ ರಕ್ಷಿಸುತ್ತಿದ್ದನೇನೋ! ನನ್ನ ತೇಜೋಬಲವೇ ವಾಯುವನ್ನು ಬೆದರಿಸುತ್ತದೆ. ಮಾರುತನು ನನ್ನ ಶಕ್ತಿಯ ಹದಿನೆಂಟನೆ ಒಂದು ಅಂಶನಲ್ಲ. ಆದರೆ ಮರ, ಪರ್ವತಾದಿಗಳನ್ನು ನಾಶ ಮಾಡುತ್ತಾ ಬಂದಿದ್ದ ವಾಯುವು ನನ್ನ ಬಲದಿಂದ ಸ್ತಂಭಿತನಾಗಿದ್ದಾನೆ. ಬೇರೆ ಎಲ್ಲವನ್ನೂ ಭಂಗ ಮಾಡುವ ಪ್ರಭಂಜನನು ನನ್ನಿಂದ ಬಹುಬಾರಿ ಭಗ್ನನಾಗಿದ್ದಾನೆ. ಆದ್ದರಿಂದ ಕ್ರುದ್ಧನಾದ ವಾಯುವಿನ ಭಯ ನನಗಿಲ್ಲ.'[೧]

ಶಾಲ್ಮಲಿಯ ಮಾತನ್ನು ಕೇಳಿದ ನಾರದರು ಬೇಸರದಿಂದ ಉತ್ತರಿಸಿದರು.

ಎಲೈ ಶಲ್ಮಲಿ! ನಿನ್ನ ಅಭಿಪ್ರಾಯ-ಜ್ಞಾನ ವಸ್ತುಸ್ಥಿತಿಗೆ ವಿರುದ್ಧವಾಗಿದೆ. ವಾಯುಬಲಕ್ಕೆ ಸಮನಾದ ಮತ್ತೊಂದು ಬಲ ಎಲ್ಲಿಯೂ ಇಲ್ಲ. ಇಂದ್ರಾದಿದಿಕ್ಪಾಲಕರು ವಾಯುವಿಗೆ

೧ ನ ಮೇ ವಾಯುಃ ಸಖಾ ಬ್ರಹ್ಮನ್ನ ಬಂಧುರ್ನ ಚ ಮೇ ಸುಹೃತ್ ।
ಮಮ ತೇಜೋಬಲಂ ವಾಯೋರ್ಭೀಮಮಪಿ ಹಿ ನಾರದ ।
ಕಲಾಮಷ್ಟಾದಶೀಂ ಪ್ರಾಣೈರ್ನ ಮೇ ಪ್ರಾಪ್ನೋತಿ ಮಾರುತಃ ।
ಆಗಚ್ಛನ್ ಪರಮೋ ವಾಯುರ್ಮಯಾ ವಿಷ್ಟಂಭಿತೋ ಬಲಾತ್ ।
ರುಜನ್ ದ್ರುಮಾನ್ ಪರ್ವತಾಂಶ್ಚ ಯಚ್ಚಾನ್ಯದಪಿ ಕಿಂಚನ ।
ನ ಮಯಾ ಬಹುಶೋ ಭಗ್ನಃ ಪ್ರಭಂಜನ್ ವೈ ಪ್ರಭಂಜನಃ ।
ತಸ್ಮಾನ್ನ ಬಿಭ್ಯೇ ದೇವರ್ಷೇ ಕ್ರುದ್ಧಾದಪಿ ಸಮೀರಣಾತ್ । - ೨೨/೨೬-೨೯

ಸಮರಲ್ಲ ಎಂದ ಮೇಲೆ ನೀನು ಸಮ ಅಲ್ಲ ಎಂದು ಹೇಳಬೇಕೇ? ಈ ಭೂಮಿಯಲ್ಲಿ ಯಾವ ಪ್ರಾಣಿಗೆ ಪ್ರಾಣವಿದೆಯೋ, ಚೇಷ್ಟೆ ಮಾಡುತ್ತದೋ ಅಲ್ಲೆಲ್ಲ ವಾಯುವೇ ಪ್ರಾಣದಾತಾ. ಚಲನೆ, ಚೇಷ್ಟೆ ಉಂಟುಮಾಡುವವನು. ಇಂತಹ ಸರ್ವಪ್ರಾಣಿಗಳಲ್ಲಿ ಶ್ರೇಷ್ಠನಾದ ಪೂಜ್ಯನಾದ ವಾಯುವನ್ನು ನೀನು ಪೂಜಿಸುವುದಿಲ್ಲ. ಇದಕ್ಕೆ ನಿನ್ನ ಹೀನಬುದ್ಧಿಗಿಂತ ಬೇರೆ ಯಾವ ಕಾರಣವಿದೆ? ನೀನು ಹೇಳುವುದೆಲ್ಲ ಅಸಾರ, ಸುಳ್ಳು. ನೀನು ಕ್ರೋಧಾದಿಗಳಿಂದ ಕೂಡಿರುವೆ. ಹೀಗಾಗಿ ನಿನ್ನ ಮೇಲೆ ನನಗೆ ಕೋಪ ಬಂದಿದೆ. ನಿನ್ನ ಬಗ್ಗೆ ನಾನೇ ವಾಯುವಿಗೆ ಹೇಳುತ್ತೇನೆ. ಚಂದನ, ಸ್ಪಂದನ(ನೆಮ್ಮಿ), ಶಾಲ, ದೇವದಾರು, ವೇತಸ(ಬೆತ್ತ) ಮೊದಲಾದ ಯಾವ ಮರಗಳೂ ವಾಯುವನ್ನು ನಿಂದಿಸುವುದಿಲ್ಲ. ದುರಾತ್ಮರು (ನಿನ್ನಂತಹ) ಮಾತ್ರ ವಾಯುವನ್ನು ನಿಂದಿಸುತ್ತಾರೆ. ಅವುಗಳು ವಾಯುವಿನ ಬಲವನ್ನೂ, ತಮ್ಮ ಬಲವನ್ನೂ ತಿಳಿದಿವೆ. ಆದ್ದರಿಂದ ಆ ಶ್ರೇಷ್ಠ ಮರಗಳು ವಾಯುದೇವರನ್ನು ನಮಿಸುತ್ತವೆ. ನೀನು ಮಾತ್ರ ಮಿಥ್ಯಾಜ್ಞಾನದಿಂದ ವಾಯುವಿನ ಅನಂತ ಬಲವನ್ನು ತಿಳಿದಿಲ್ಲ[೧] (ಇದು ಆಶ್ಚರ್ಯ ಹಾಗೂ ಅನ್ಯಾಯವೇ ಸರಿ).

ಹೀಗೆ ಶಲ್ಮಲಿಮರಕ್ಕೆ ಹೇಳಿದ ನಾರದರು ವಾಯುದೇವನಿಗೆ ಆ ಮರದ ಪರಿಚಯವನ್ನು ಹೇಳಿ, ಅದು ವಾಯುದೇವನನ್ನು ನಿಂದಿಸಿದ್ದನ್ನು ಯಥಾವತ್ತಾಗಿ ಹೇಳಿದರು[೨].

ನಾರದರು ವಾಯುವನ್ನು 'ನೀನು ಪ್ರಾಣಧಾರಿಗಳಲ್ಲಿ (ಜೀವರಲ್ಲಿ) ಶ್ರೇಷ್ಠ ಎಂದು ಬಲ್ಲೆ. ನೀನು ವರಿಷ್ಠ ಗರಿಷ್ಠ ಎಂದು ತಿಳಿದಿದ್ದೇನೆ[೩]. ಈ ಮಾತನ್ನು ಕೇಳಿದ ವಾಯು ಶಾಲ್ಮಲಿ ವೃಕ್ಷದ ಬಳಿ ಹೋಗಿ ಸಿಟ್ಟಿನಿಂದ ನುಡಿದನು.

ಶಲ್ಮಲಿ ನೀನು ನಾರದರ ಮುಂದೆ ನನ್ನನ್ನು ನಿಂದಿಸಿದೆ. ಆಗಲಿ ನನ್ನ ಪ್ರಭಾವವನ್ನು ಬಲವನ್ನು ತೋರುವೆ. ನಿನ್ನ ಬಗ್ಗೆ ನನಗೆ ತಿಳಿದಿಲ್ಲವೆಂದು ಭಾವಿಸಬೇಡ. ಚತುರ್ಮುಖಬ್ರಹ್ಮನು

---

೧ ಇಂದ್ರೋ ಯಮೋ ವೈಶ್ರವಣೋ ವರುಣಶ್ಚ ಜಲೇಶ್ವರಃ।
ನ ತೇಽಪಿ ತುಲ್ಯಾ ಮರುತಃ ಕಿಂ ಪುನಸ್ತ್ವಂ ವನಸ್ಪತೇ।
ಯದ್ಧಿಕಿಂಚಿದಿಹ ಪ್ರಾಣಿ ಶಲ್ಮಲೇ ಚೇಷ್ಟತೇ ಭುವಿ।
ಸರ್ವತ್ರ ಭಗವಾನ್ ವಾಯುಶ್ಚೇಷ್ಟಾಪ್ರಾಣಕರಃ ಪ್ರಭುಃ।
ನ ತ್ವಮೇವಂ ವಿಧಂ ವಾಯುಂ ಸರ್ವಸತ್ತ್ವಭೃತಾಂ ವರಮ್।
ನ ಪೂಜಯಸಿ ಪೂಜ್ಯಂ ತಂ ಕಿಮನ್ಯದ್ ಬುದ್ಧಿಲಾಘವಾತ್।
ಕ್ರೋಧಾದಿಭಿರವಚ್ಛನ್ನೋ ಮಿಥ್ಯಾಂ ವದಸಿ ಶಲ್ಮಲೇ।
ಬ್ರವೀಮ್ಯೇಷ ಸ್ವಯಂ ವಾಯೋಸ್ತವ ದುರ್ಭಾಷಿತಂ ಬಹು।
ತೇ ಹಿ ಜಾನಂತಿ ವಾಯೋಶ್ಚ ಬಲಮಾತ್ಮನ ಏವ ಚ।
ತ್ವಂ ತು ಮೋಹಾತ್ ನ ಜಾನೀಷೇ ವಾಯೋರ್ಬಲಮನಂತಕಮ್। - ೨೨/೩೦-೩೯

೨ ನಾರದಃ ಪವನೇ ಸರ್ವಂ ಶಲ್ಮಲೇರ್ವಾಕ್ಯಮಬ್ರವೀತ್।

೩ ಜಾನಾಮಿ ತ್ವಾಮಹಂ ವಾಯೋ ಸರ್ವಪ್ರಾಣಭೃತಾಂ ವರಮ್।
ವರಿಷ್ಠಂ ಚ ಗರಿಷ್ಠಂ ಚ ಕ್ರೋಧೇ ವೈವಸ್ವತಂ ಯಥಾ।

ಪ್ರಜಾಸೃಷ್ಟಿ ಮಾಡಿದಾಗ ನಿನ್ನಲ್ಲಿ ವಿಶ್ರಾಂತಿ ಪಡೆದಿದ್ದನು. ಆತನ ಅನುಗ್ರಹದಿಂದಾಗಿ ನಾನು ನಿನ್ನನ್ನು ರಕ್ಷಿಸುತ್ತಿದ್ದೇನೆ. ನಿನ್ನ ಸ್ವಂತ ಬಲದಿಂದ ನಿನ್ನ ರಕ್ಷಣೆಯಾಗಿದೆ ಎಂದು ಭ್ರಮಿಸಬೇಡ. ನನ್ನನ್ನು ಒಬ್ಬ ಸಾಮಾನ್ಯ ವ್ಯಕ್ತಿಯು ಅವಹೇಳನ ಮಾಡುವಂತೆ ಮಾಡುತ್ತಿರುವಿ. ನನ್ನ ಬಲ ತೋರಿಸುವೆ ಆಗ ನಿನಗೆ ನಾನು ಯಾರೆಂದು ತಿಳಿಯುತ್ತದೆ[1].

ಇದನ್ನು ಕೇಳಿದ ಶಾಲ್ಮಲಿ ಉತ್ತರಿಸಿತು 'ಎಲೈ ಪವನನೇ! ನೀನು ಸಿಟ್ಟಾಗಿ ನಿನ್ನ ಬಲವನ್ನು ಈ ವನದಲ್ಲಿ ತೋರಿಸು. ಸಿಟ್ಟಾಗಿ ಏನು ತಾನೇ ಮಾಡುವೆ. ನಾನು ನಿನಗೆ ಹೆದರುವುದಿಲ್ಲ. ಬುದ್ಧಿಬಲವುಳ್ಳವರೇ ನಿಜವಾಗಿ ಬಲವಂತರು. ಶಾರೀರಿಕ ಬಲವುಳ್ಳವರಲ್ಲ ಎಂದು ಜ್ಞಾನಿಗಳೇ ಹೇಳುತ್ತಾರೆ. ಆಗ ವಾಯುದೇವರು ನಾಳೆ ನಿನಗೆ ನನ್ನ ಬಲ ತೋರಿಸುವೆ ಎಂದು ಹೇಳಿ ಹೋದರು. ರಾತ್ರಿಯಾಯಿತು. ಶಾಲ್ಮಲಿ ವಾಯುದೇವನು ಮಾಡಿದ ವಿವಿಧ ಕಾರ್ಯಗಳನ್ನು ಮನಸಾ ಚಿಂತಿಸಿ, ತಾನು ವಾಯುವಿಗೆ ಸಮನಲ್ಲ ಎಂದು ತಿಳಿಯಿತು. ನಾರದರ ಮುಂದೆ ನಾನು ಮಾತನಾಡಿದ್ದು ಕೂಡಾ ಸುಳ್ಳು. ನಾನ ಅಸಮರ್ಥ. ಅವನೇ ಬಲಶಾಲಿ. ನಾನು ಬೇರೆ ವೃಕ್ಷಗಳಿಗಿಂತಲೂ ದುರ್ಬಲ. ಯಾವ ಮರವೂ ಬುದ್ಧಿಯಿಂದ ನನಗೆ ಸಮವಿಲ್ಲ. ಆದ್ದರಿಂದ ಬುದ್ಧಿಯನ್ನು ಅವಲಂಬಿಸಿ ವಾಯುಭಯದಿಂದ ಬಿಡಿಸಿಕೊಳ್ಳುತ್ತೇನೆ. ವನದ ಮರಗಳು ಬುದ್ಧಿ ಉಪಯೋಗಿಸಿದ್ದರೆ, ಸಿಟ್ಟಾದ ವಾಯುವಿನಿಂದ ಹಾನಿಗೆ ಒಳಗಾಗುತ್ತಿರಲಿಲ್ಲ. ಕ್ಷೇಮದಿಂದ ಇರುತ್ತಿದ್ದರು. ಇದರಲ್ಲಿ ಸಂಶಯವಿಲ್ಲ. ಈ ಬುದ್ಧಿಹೀನ ಮರಗಳು ಕ್ರುದ್ಧ ವಾಯುವು ತಮ್ಮನ್ನು ಪುಡಿಗಟ್ಟುವಂತೆ ಮಾಡುವ ಉಪಾಯ ತಿಳಿದಿಲ್ಲ ನನ್ನಂತೆ. ಹೀಗೆ ಶಾಲ್ಮಲಿ ನಿಶ್ಚಯಿಸಿ, ತನ್ನ ಶಾಖೆ, ಕೊಂಬೆ, ಕಾಂಡಗಳನ್ನು ತಾನೇ ನಾಶ ಮಾಡಿತು. ಬೆಳಗಾದ ಮೇಲೆ ವಾಯುದೇವನ ಆಗಮನವನ್ನು ಕಾಯುತ್ತಿತ್ತು[2].

---

೧ ವಾಯುಃ –
ನಾಹಂ ತ್ವಾ ನಾಭಿಜಾನಾಮಿ ವಿದಿತಶ್ಚಾಸಿ ಮೇ ದ್ರುಮ ।
ಪಿತಾಮಹಃ ಪ್ರಜಾಸರ್ಗೇ ತ್ವಯಿ ವಿಶ್ರಾಂತವಾನ್ ಪ್ರಭುಃ ॥
ತಸ್ಯ ವಿಶ್ರಮಣಾದೇವ ಪ್ರಸಾದೋ ಗಚ್ಛತಸ್ತವ ।
ರಕ್ಷ್ಯಸೇ ತೇನ ದುರ್ಬುದ್ಧೇ ನಾತ್ಮವೀರ್ಯಾದ್ ದ್ರುಮಾಧಮ ।
ಯನ್ಮಾ ತ್ವಮವ ಜಾನೀಷೇ ಯಥಾನ್ಯಂ ಪ್ರಾಕೃತಂ ವ್ರಥಾ ।
ದರ್ಶಯಮ್ಯೇಷ ಆತ್ಮಾನಂ ಯಥಾ ಮಾಮವಭೋತ್ಸ್ಯಸೇ ।

೨ ಶಾಲ್ಮಲಿ –
ಮಯಿ ವೈ ತ್ಯಜ್ಯತಾಂ ಕ್ರೋಧಃ ಕಿಂ ಮೇ ಕ್ರುದ್ಧಃ ಕರಿಷ್ಯಸಿ ।
ನ ತೇ ಬಿಭೇಮಿ ಪವನ ಯದ್ಯಪಿ ತ್ವಂ ಸ್ವಯಂಪ್ರಭುಃ ।
ಯೇ ತು ಬುಧ್ಯಾ ಹಿ ಬಲಿನಸ್ತೇ ಭವಂತಿ ಬಲೀಯಸಃ ।
ಪ್ರಾಣಮಾತ್ರಬಲಾ ಯೇ ವೈ ನೈವ ತೇ ಬಲಿನೋ ಮತಾಃ ।
ಇತ್ಯೇವಮುಕ್ತಃ ಪವನಃ ಶ್ವ ಇತ್ಯೇವಾಬ್ರವೀದ್ ವಚಃ ।

ನಂತರ ಕ್ರುದ್ಧ ವಾಯುವು ಬಿರುಗಾಳಿ ಬೀಸುತ್ತಾ ದೊಡ್ಡ ದೊಡ್ಡ ಮರಗಳನ್ನು ಬೀಳಿಸುತ್ತಾ ಶಾಲ್ಮಲಿಯ ಬಳಿ ಬಂತು. ಶಾಲ್ಮಲಿಯ ಶಾಖೋಪಶಾಖೆ ಎಲೆಗಳಿಂದ ರಹಿತವಾದುದನ್ನು ನೋಡಿ ಹುಸಿನಗೆ ಬೀರುತ್ತಾ ನೀನೇ ನಿನ್ನ ಶಾಖೆಗಳನ್ನು ನಾಶ ಮಾಡಿರುವೆ. ನಾನೂ ಇದನ್ನೇ ಅಂದುಕೊಂಡಿದ್ದೆ. ನಿನ್ನ ದುರಾಲೋಚನೆಯಿಂದಾಗಿ ನೀನು ಶಾಖೆ, ಪುಷ್ಪಾದಿ ಹೀನನಾಗಿ ಎಲೆಗಳೂ ಇಲ್ಲದೆ ನನ್ನ ಬಲಕ್ಕೆ ವಶನಾಗಿರುವೆ'.

ಇದನ್ನು ಕೇಳಿದ ಶಾಲ್ಮಲಿ ನಾಚಿಕೆಯಿಂದ ನಾರದರ ಮಾತುಗಳನ್ನೂ ನೆನೆದು ಪರಿತಪಿಸಿತು.

ಧರ್ಮರಾಜನೇ! ಹೀಗೆ ಬಲಶಾಲಿಗಳೊಡನೆ ವೈರ ಸಾಧಿಸಿದರೆ ಶಾಲ್ಮಲಿಯಂತೆ ತಪಿಸಬೇಕಾಗುತ್ತದೆ. ಆದ್ದರಿಂದ ಬಲಿಷ್ಠರೊಡನೆ ವೈರವನ್ನು ಮಾಡಬಾರದು. ಮಹಾತ್ಮರು ಅಪಕಾರಿಗಳಿಗೆ ವೈರದ ವಿವರ ಕೊಡುವುದಿಲ್ಲ. ನಿಧಾನವಾಗಿ ತಮ್ಮ ಬಲ ತೋರಿಸುತ್ತಾರೆ. ದುರ್ಬುದ್ಧಿಯವನು ಸದ್ಬುದ್ಧಿಗಳ ಜೊತೆ ವೈರ ಸಾಧಿಸಬಾರದು. ಸುಬುದ್ಧಿಯ ಬುದ್ಧಿಯು ಎಲ್ಲೆಡೆ ವ್ಯಾಪಿಸಿರುತ್ತದೆ. ಹತ್ತಿಯ ರಾಶಿಯಲ್ಲಿ ಬೆಂಕಿಯಂತೆ. ಆದ್ದರಿಂದ ಬಾಲಕನನ್ನು ಜಡನನ್ನು ಕಿವುಡನನ್ನು ಹೆಚ್ಚು ಬಲಶಾಲಿಯನ್ನು ಸಹಿಸಬೇಕು'. ಈ ಸಹನೆ ನಿನ್ನಲ್ಲಿದೆ (ಧರ್ಮರಾಜ).

---

ಅಥ ನಿಶ್ಚಿತ್ಯ ಮನಸಾ ಶಲ್ಮಲಿರ್ವಾತಕಾರಿತಮ್ ।
ಪಶ್ಯಮಾನಸ್ತದಾತ್ಮಾನಮಸಮಂ ಮಾತರಿಶ್ವನಃ ।
ನಾರದೇ ಯನ್ಮಯಾ ಪ್ರೋಕ್ತಂ ಪವನಂ ಪ್ರತಿ ತನ್ಮೃಷಾ ।
ಅಮಸರ್ಥೋ ಹ್ಯಹಂ ವಾಯೋರ್ಬಲೇನ ಬಲವಾನ್ ಹಿ ಸಃ ।
ಅಹಂ ಹಿ ದುರ್ಬಲೋಽನ್ಯೇಭ್ಯೋ ವೃಕ್ಷೇಭ್ಯೋ ನಾತ್ರ ಸಂಶಯಃ ।
ತತೋ ನಿಶ್ಚಿತ್ಯ ಮನಸಾ ಶಲ್ಮಲಿಃ ಕ್ಷುಭಿತಸ್ತದಾ ।
ಶಾಖಾಃ ಸ್ಕಂಧಾನ್ ಪ್ರಶಾಖಾಶ್ಚ ಸ್ವಯಮೇವ ವ್ಯನಾಶಯತ್ ।
೧ ಅಹಮಪ್ಯೇವಮೇತತ್ತ್ವಾಂ ಕುರ್ವಾಣಃ ಶಲ್ಮಲೇ ರುಷಾ ।
ಆತ್ಮನಾ ಯತ್ಕೃತಂ ಕೃತ್ಸ್ನಂ ಶಾಖಾನಾಮಪಕರ್ಷಣಮ್ ।
**ಆತ್ಮದುರ್ಮಂತ್ರಿತೇನೇಹ ಮದ್ವೀರ್ಯವಶಗೋಽಭವಃ ।**
**ಏತತ್ ಶ್ರುತ್ವಾ ವಚೋ ವಾಯೋಃ ಶಲ್ಮಲಿರ್ವ್ರೀಡಿತಸ್ತದಾ ।**
**ಅತಪ್ಯತ ವಚಃ ಸ್ಮೃತ್ವಾ ನಾರದೋ ಯತ್ತದಾಬ್ರವೀತ್ ।**
**ತಸ್ಮಾದ್ವೈರಂ ನ ಕುರ್ವೀತ ದುರ್ಬಲೋ ಬಲವತ್ತರೈಃ ।**
**ನ ಹಿ ವೈರಂ ಮಹಾತ್ಮಾನೋ ವಿವೃಣ್ವಂತ್ಯಪಕಾರಿಷು ।**
**ಶನೈಃ ಶನೈರ್ಮಹಾರಾಜ ದರ್ಶಯಂತಿ ಸ್ಮ ತೇ ಬಲಮ್ ।**
೨ ವೈರಂ ನ ಕುರ್ವೀತ ನರೋ ದುರ್ಬುದ್ಧಿರ್ಬುದ್ಧಿಜೀವಿನಾ ।
ಬುದ್ಧಿರ್ಬುದ್ಧಿಮತೋ ಯಾತಿ ತೂಲೇಷ್ವಿವ ಹುತಾಶನಃ ।
ತಸ್ಮಾತ್ ಕ್ಷಮೇತ ಬಾಲಾಯ ಜಡಾಯ ಬಧಿರಾಯ ಚ ।
ಬಲಾಧಿಕಾಯ ರಾಜೇಂದ್ರ ತದ್ ದೃಷ್ಟಂ ತ್ವಯಿ ಶತ್ರುಹನ್ ।

ಹನ್ನೊಂದು ಅಕ್ಷೋಹಿಣಿ ಸೈನ್ಯವೂ ಒಟ್ಟಾಗಿಯೂ ಅರ್ಜುನನ ಸಮವಲ್ಲ. ಅರ್ಜುನನಿಂದ ಆ ಸೈನ್ಯ ಭಗ್ನವಾಯಿತು.

## ಸಂದೇಶಗಳು-ವಿವರಣೆಗಳು

೧. ಶಲ್ಮಲಿ ವೃಕ್ಷವು ಬಲವಂತನಾದ ವಾಯುವನ್ನೇ ಎದುರು ಹಾಕಿಕೊಂಡಿತು. ತಾನೇ ಮಹಾಬಲಿಷ್ಠ ಎಂದು ಭ್ರಮಿಸಿ, ತನ್ನಲ್ಲಿರುವ ಬಲದ ಮೂಲ ಬ್ರಹ್ಮದೇವರು ತನ್ನ ಮೇಲೆ ಯತ್ಕಿಂಚಿತ್ ವಿಶ್ರಾಂತಿ ವಹಿಸಿದುದಕ್ಕೆ ಎಂದೇ ತಿಳಿದಿರಲಿಲ್ಲ. ಹೀಗಾಗಿ ತನ್ನ ಸಮನಾರು ಎಂದು ವಾಯುದೇವರ ಜೊತೆಗೆ ಪೈಪೋಟಿಗೆ ಇಳಿದ ಒಬ್ಬ ಜೀವನ ದೃಷ್ಟಾಂತ. ಆ ಶಾಲ್ಮಲಿ ಯಾರು ಎಂದು ಇಲ್ಲಿ ಗೊತ್ತಾಗುವುದಿಲ್ಲ.

೨. ತನ್ನ ಯೋಗ್ಯತೆ ನಾರದರಿಂದ ಗೊತ್ತಾದ ಮೇಲೂ ಬುದ್ಧಿಯಿಂದ ವಾಯುವಿನೊಡನೆ ಪೈಪೋಟಿ ನಡೆಸಿ ಅಲ್ಲಿಯೂ ವಿಫಲವಾಗುತ್ತದೆ. 'ಬುದ್ಧಿರ್ಬಲಂ ಯಶೋಧೈರ್ಯಂ ... ' ಎಂಬ ಆರ್ಷವಾಕ್ಯ ವಾಯುದೇವರು ಹರಿಯ ತರುವಾಯ ಎಲ್ಲ ಗುಣಗಳಿಂದ ಶ್ರೇಷ್ಠವೆಂದೇ ಹೇಳುತ್ತದೆ ಉಪನಿಷತ್ತು ಕೂಡಾ. 'ಪ್ರಾಣೋ ವೈ ಜ್ಯೇಷ್ಠಶ್ಚ ಶ್ರೇಷ್ಠಶ್ಚ'.

೩. ಕೊನೆಗೆ ಅರ್ಜುನನೆ ಕೌರವರ ಎಲ್ಲ ಬಲನಾಶಕವೆಂದು 'ಪುರುಷವ್ಯತ್ಯಾಸದ ಹಿನ್ನೆಲೆಯಲ್ಲಿ' ಹೇಳಲಾಗಿದೆ ಎಂದು ತಿಳಿಯಬೇಕು.

೪. ದೊಡ್ಡವರೊಡನೆ ಪೈಪೋಟಿ ಎಂದೂ ಶ್ರೇಯಸ್ಕರವಲ್ಲವೆಂದು ಶಲ್ಮಲೀ ಗರ್ವಭಂಗದಿಂದ ತಿಳಿಯಬೇಕು.

೫. ದುರ್ಯೋಧನಾದಿಗಳು ವಸ್ತುತಃ ದುರ್ಬಲರಿದ್ದರೂ, ಪ್ರಬಲರಾದ ಪಾಂಡವರೊಡನೆ ವಿರೋಧ ಕಟ್ಟಿಕೊಂಡು ನಾಶವಾದುದು ಇಲ್ಲಿ ಸ್ಮರಣೀಯ. ಇದನ್ನು ಭೀಷ್ಮರು, ದ್ರೋಣರು, ಕೃಪರು, ಅಶ್ವತ್ಥಾಮರು, ತಂದೆ ಧೃತರಾಷ್ಟ್ರ, ತಾಯಿ ಗಾಂಧಾರಿ, ಚಿಕ್ಕಪ್ಪ ವಿದುರ ಹೇಳಿದರೂ ದುರ್ಯೋಧನ ಅವರ ಮಾತಿಗೆ ಬೆಲೆ ಕೊಡದೆ ಸರ್ವನಾಶ ಹೊಂದಿರುವುದು ಇತಿಹಾಸ. ಸ್ವಯಂ ಭಗವಂತನಾದ ಶ್ರೀಕೃಷ್ಣ ಹೇಳಿದರೂ ಕೇಳದೇ ನಾಶಹೊಂದಿದರು.

೬. ಲೋಕದಲ್ಲಿಯೂ ಎಂದೂ ಪ್ರಬಲರೊಡನೆ ವಿರೋಧ, ಪೈಪೋಟಿ ಎಂದೂ ಮಾಡಕೂಡದು.

ಇತ್ಯಾದಿ....

# ೯೭. ಕೃತಘ್ನೋಪಾಖ್ಯಾನ

ಧರ್ಮರಾಜನು ತಾತ ಭೀಷ್ಮರನ್ನು ಕುರಿತು ಪ್ರಶ್ನೆಗಳನ್ನು ಕೇಳುತ್ತಾನೆ.

೧. ಸೌಮ್ಯ ಸ್ವಭಾವದ ಮನುಷ್ಯರು ಹೇಗಿರುತ್ತಾರೆ; ೨. ಯಾರೊಡನೆ ಪ್ರೀತಿ ಇದ್ದರೆ ಉತ್ತಮ (ಫಲ ಸಿಗುತ್ತದೆ)? ; ಭವಿಷ್ಯತ್ ಹಾಗೂ ವರ್ತಮಾನಕಾಲದಲ್ಲೂ ಹಿತವಾಗುವಂತೆ ನಡೆದುಕೊಳ್ಳಲು ಸಮರ್ಥರು ಯಾರು ? (ಉಪಕಾರ ಮಾಡಲು ಸಮರ್ಥರು) ಇವನ್ನು ತಿಳಿಸು.

ಬೇಕಾದಷ್ಟು ಹಣದಿಂದ ಯಾವ ಕೆಲಸವು ಆಗುವುದಿಲ್ಲವೋ, ಬಂಧುಬಾಂಧವರು ಯಾವ ಸಂದರ್ಭದಲ್ಲಿ ಸಹಾಯಕ್ಕೆ ಬರುವುದಿಲ್ಲವೋ ಅಂತಹ ಕೆಲಸಗಳನ್ನು ಸೌಹಾರ್ದ ವಿರುವವರು ಮಾಡುತ್ತಾರೆ. ಉಪಕಾರ ಮಾಡುತ್ತಾರೆ. ಇದು ನನ್ನ ಅಭಿಪ್ರಾಯ. ನಮ್ಮ ಮಾತುಗಳನ್ನು ಸಮಾಧಾನದಿಂದ ಕೇಳುವವನು ದುರ್ಲಭ. ಹಿತೈಷಿಯಾದ ಸಹೃದಯನೂ ದುರ್ಲಭ. ಇವೆಲ್ಲವನ್ನೂ ತಿಳಿಸು.

ಇವನ್ನು ಭೀಷ್ಮರು ವಿಸ್ತಾರವಾಗಿ ಉತ್ತರಿಸುತ್ತಾರೆ.

ಧರ್ಮಸಮ್ಮತವಲ್ಲದ ಕೆಲಸವನ್ನು ಮಾಡಲು ಅಳುಕುವವರು, ಅಳುಕು ಇಲ್ಲದವರು ಇವರ ಬಗ್ಗೆ ಹೇಳುವೆ ತಿಳಿ.

ಸಂಧಿ ಮಾಡಿಕೊಳ್ಳಲು ಅರ್ಹರನ್ನೂ, ಅನರ್ಹರನ್ನೂ ಕುರಿತು ಹೇಳುವೆನು ಕೇಳು[೧]. **ಹನ್ನೊಂದು ಶ್ಲೋಕಗಳಿಂದ ಸಂಧಿಗೆ ಅನರ್ಹರಾದವರ ಗುಣಗಳನ್ನು ಹೇಳಲಾಗಿದೆ. ಅವರು ಎಂತಹವರು ಎಂದರೆ –**

ಲೋಭವುಳ್ಳವನು, ಕ್ರೂರಿ, ಧರ್ಮಬಿಟ್ಟವನು, ವಂಚಕ, ಶಠ, ಕ್ಷುದ್ರ, ಪಾಪಕಾರ್ಯಾಸಕ್ತ, ಎಲ್ಲರನ್ನೂ ಸಂದೇಹದಿಂದ ನೋಡುವವನು, ಆಲಸ್ಯವುಳ್ಳವನು, ದೀರ್ಘಸೂತ್ರೀ (ವಿಲಂಬದಿಂದ ಕೆಲಸ ಮಾಡುವವನು), ಅಪ್ರಾಮಾಣಿಕ, ಗುರುಪತ್ನಿಯನ್ನು ಬಲಾತ್ಕರಿಸುವವನು, ಕಷ್ಟಕಾಲದಲ್ಲಿ ತ್ಯಾಗ ಮಾಡುವವನು (ಕೈ ಕೊಡುವವನು), ದುಷ್ಟ ಮನಸ್ಸಿನವನು, ನಾಚಿಕೆ ಇಲ್ಲದವನು, ಎಲ್ಲೆಡೆ ಕೆಡುಕನ್ನು ನೋಡುವವನು, ನಾಸ್ತಿಕ, ವೇದನಿಂದಿಸುವವನು, ಇಂದ್ರಿಯಗಳನ್ನು ಬಹಿರ್ಮುಖವಾಗಿರಿಸುವವನು, ಭೋಗನಿರತ, ಸತ್ಯವಂತನಲ್ಲ, ಜನರ ದ್ವೇಷಕ್ಕೆ ಗುರಿಯಾದವನು, ಮಾತಿಗೆ ತಕ್ಕಂತೆ ನಡೆದುಕೊಳ್ಳದವನು, ಚಾಡಿಕೋರ, ಸಂಸ್ಕಾರ ರಹಿತನು, ಮಾತ್ಸರ್ಯವುಳ್ಳವನು, ಕೆಟ್ಟಕೆಲಸದಲ್ಲಿ ನಿಶ್ಚಯವುಳ್ಳವನು,

---

೧ ಮೂಲದಲ್ಲಿ ಸಂದೇಹಾಃ, ಅಸಂದೇಯಾಃ ಎಂದೂ ಮತ್ತು ಅನಸಂಧೇಯಾಃ ಅಸಂಧೇಯಾಃ ಎಂದು ಎರಡು ಪಾಠಗಳು ಇವೆ. ಔತ್ತರೇಯ ಪಾಠ ಸಂಧೇಯಾ, ಅಸಂಧೇಯಾ ಎಂದಿದೆ. ಆದ್ದರಿಂದ ಅನುವಾದದಲ್ಲೂ ವ್ಯತ್ಯಾಸಮಾಡಬೇಕಾಗುತ್ತದೆ

ದುಷ್ಟಚಾರಿತ್ರ್ಯವುಳ್ಳವನು, ಮನಸಿನ ಮೇಲೆ ಹತೋಟಿ ಇಲ್ಲದವನು, ಮಿತ್ರರಿಂದ ಸಂಪತ್ತು ಮಾಡಿಕೊಳ್ಳುವವನು, ಯಾವಾಗಲೂ ಅರ್ಥಾಸಕ್ತಿ, ದಾನ ಮಾಡುವವನ ಬಗ್ಗೆ ಸಂತೋಷ ಇಲ್ಲದವನು, ಸದಾ ಮಿತ್ರರನ್ನು ಅಮಿತ್ರರಂತೆ ಹಿಂಸಿಸುವವನು, ಅನುಚಿತ ಕೋಪವುಳ್ಳವನು, ಕಾರಣವಿಲ್ಲದೆ ದೂರವಾಗುವವನು, ತನ್ನ ಕೆಲಸವಾದ ನಂತರ ಸುಹೃಜ್ಜನರನ್ನು ತ್ಯಜಿಸುವವನು, ಸಣ್ಣ ಅಪಕಾರ ಮಾಡಿದ- ಅಜ್ಞಾನದಿಂದ ಅಪಕಾರ ಮಾಡಿದ ಮಿತ್ರರನ್ನು ದ್ವೇಷಿಸುವವನು, ತನಗೆ ಅನುಕೂಲವಾಗುವಂತೆ ಮಿತ್ರರನ್ನು ಉಪಯೋಗಿಸುವವನು, ಮಿತ್ರರ ಮುಖವಾಡ ಧರಿಸಿದ ಶತ್ರು, ಕುಟಿಲದೃಷ್ಟಿ ಒಳ್ಳೆಯ ಕೆಲಸ ವಿಚಾರಗಳಲ್ಲಿ ಪ್ರೀತಿರಹಿತನು, ಅಂತಹವರನ್ನು ತ್ಯಜಿಸುವವನು, ಮದ್ಯಪಾನಾಸಕ್ತ, ದ್ವೇಷವೇ ಸ್ವಭಾವವಾಗಿರುವ, ದಯಾರಹಿತ, ಕ್ರೂರಸ್ವಭಾವ, ಪರರಿಗೆ ತಾಪವುಂಟುಮಾಡುವ, ಮಿತ್ರದ್ರೋಹಿ, ಪ್ರಾಣಿಹಿಂಸ, ಕೃತಘ್ನ ಅಧರ್ಮ, ದೋಷಗಳನ್ನೇ ಹುಡುಕುವವನು, **ಇಂತಹವರೊಡನೆ ಸ್ನೇಹ ಬೆಳೆಸಬಾರದು, ಸಂಧಿ ಮಾಡಿಕೊಳ್ಳಬಾರದು** ಎಂದರು ಭೀಷ್ಮರು.

**ಸಂಧಿ ಸ್ನೇಹಯೋಗ್ಯರ ಅರ್ಹತೆಯನ್ನು ಹೇಳುವೆ ಕೇಳು.** ಸತ್ಕುಲಪ್ರಸೂತರು, ವಾಕ್ಪಟುಗಳು, ಸಾಮಾನ್ಯ ಹಾಗೂ ವಿಶೇಷ ಜ್ಞಾನಗಳನ್ನು ಬಲ್ಲವರಲ್ಲಿ ಶ್ರೇಷ್ಠರು, ಮಿತ್ರರನ್ನು ತಿಳಿದವರು, ಕೃತಜ್ಞರು, ಎಲ್ಲವನ್ನೂ ಬಲ್ಲವರು(ಸರ್ವಜ್ಞರು), ಶೋಕರಹಿತರು, ಮಧುರ (ಸಂತೋಷಪಡಿಸುವ) ಸ್ವಭಾವದರು, ಸತ್ಯಸಂಧರು, ಜಿತೇಂದ್ರಿಯರು, ಪ್ರಯತ್ನಶೀಲರು, ಯಾವಾಗಲೂ ಭೃತ್ಯರನ್ನು ಪುತ್ರರಂತೆ ನೋಡುವವರು, ಕುಲಕ್ಕೆ ಉತ್ಕರ್ಷವನ್ನು ತಂದುಕೊಡುವವರು, ರೂಪವಂತರು, ಸದ್ಗುಣಸಂಪನ್ನರು, ಸಜ್ಜನರು, ಅನುಚಿತವಾಗಿ ಕೋಪ ಮಾಡಿಕೊಳ್ಳದವರು, ಸೂಕ್ತ ಕಾರಣವಿಲ್ಲದೆ ವಿರಕ್ತರಾಗದವರು, ಗಾಢವಾದ ಆಸೆಯಿಲ್ಲದವರು(ವಿಷಯಗಳ ಬಗ್ಗೆ), ಮನಸಾ ಕೋಪಗೊಳ್ಳದವರು, ಆಗಬೇಕಾದ ಕಾರ್ಯಗಳ ಬಗ್ಗೆ ಜ್ಞಾನವಿರುವವರು, ತನಗೆ ತೊಂದರೆ ಮಾಡಿಕೊಂಡಾದರೂ ಮಿತ್ರರ ಕೆಲಸಗಳನ್ನು ಮಾಡುವವರು, ಸ್ನೇಹಿತರ ಮೇಲಿನ ಪ್ರೀತಿ ಬಿಡದವರು, ಕೆಂಪು ಉಣ್ಣೆ ಬಟ್ಟೆಯಂತೆ ಧನದ ಮೇಲೆ ತರುಣಿಯರ ಮೇಲೆ ಲೋಭ ಮೋಹಾದಿಗಳನ್ನು ಹೊಂದದಿರುವವರು, ಮಿತ್ರರ ವಿಶ್ವಾಸಕ್ಕೆ ಪಾತ್ರರು, ಬಂಧುಗಳ ಮೇಲೆ ಪ್ರೀತಿಯುಳ್ಳವರು (ಅಭಿಮಾನ), ಮಣ್ಣು ಬಂಗಾರಗಳನ್ನು ಸಮವಾಗಿ ನೋಡುವವರು, ಮಿತ್ರರನ್ನು ವಂಚಿಸದವರು, ಅಭಿಮಾನರಹಿತರಾಗಿ ಕರ್ಮಾಚರಣೆ ಮಾಡುವವರು, ದಾನದಿಂದ ಶೋಭೆ ಗಳಿಸುವವರು, ಪರಿಜನರನ್ನು ಸಲಹುವವರು, ಸ್ವಾಮಿ, ಯಜಮಾನನ ಕೆಲಸವನ್ನು ಸಾಧಿಸುವ ನಿಷ್ಠೆಯುಳ್ಳವರು, **ಇಂತಹ ಪುರುಷಶ್ರೇಷ್ಠರೊಡನೆ ಸಂಧಿಯನ್ನು ಯಾವ ರಾಜನು ಮಾಡಿಕೊಳ್ಳುತ್ತಾನೋ, ಅವನ ರಾಷ್ಟ್ರ ವೃದ್ಧಿ ಹೊಂದುತ್ತದೆ. ಚಂದ್ರನ ಪ್ರಭೆಯಂತೆ.** ಅಲ್ಲದೆ ಸರಿಯಾದ ಅನುಶಾಸನ ಮಾಡುವ ಶಾಸ್ತ್ರಗಳಲ್ಲಿ ಆಸಕ್ತರಾದವರು, ಕ್ರೋಧವನ್ನು ಗೆದ್ದವರು, ಬಲಶಾಲಿಗಳು, ಯುದ್ಧವನ್ನು ಪ್ರೀತಿಸುವವರು (ತಮ್ಮ ಕರ್ತವ್ಯವಾದ್ದರಿಂದ), ಕ್ಷಮಾಶೀಲರು, ಶೀಲಗುಣವುಳ್ಳವರು, **ಸಂಧಿ ಮಾಡಿಕೊಳ್ಳಲು ಯೋಗ್ಯರಾಗಿರುತ್ತಾರೆ.**

ನಾನು ಹೇಳಿದ ದುಷ್ಟಮನುಷ್ಯರ ದೋಷಗಳಲ್ಲಿ ಕೃತಘ್ನತೆ ಮತ್ತು ಮಿತ್ರದ್ರೋಹಗಳು **ಅತ್ಯಂತ ನೀಚದೋಷಗಳು. ಕೃತಘ್ನ ಹಾಗೂ ಮಿತ್ರದ್ರೋಹಿಯನ್ನು ಎಲ್ಲರೂ ತ್ಯಜಿಸಬೇಕು, ಸಂದೇಹವೇ ಇಲ್ಲ.**

ಆಗ ಧರ್ಮರಾಜನು ತಾತ! ಧನದಿಂದ ಆಗುವ ಬಂಧನವನ್ನು ತಿಳಿಸು. ಮಿತ್ರದ್ರೋಹಿ ಹಾಗೂ ಕೃತಘ್ನರ ಬಗ್ಗೆ ಕೂಡಾ ತಿಳಿಸಿರಿ ಎಂದನು.

ಅದಕ್ಕಾಗಿ ಭೀಷ್ಮರು ಉತ್ತರ ದಿಕ್ಕಿನಲ್ಲಿರುವ ಮ್ಲೇಚ್ಛರ ಪ್ರದೇಶದಲ್ಲಿ ಹಿಂದೆ ನಡೆದ ಇತಿಹಾಸವನ್ನು ಹೇಳುವೆ ಎಂದರು.

ಮ್ಲೇಚ್ಛದೇಶದಲ್ಲಿಯೇ ಮಧ್ಯದೇಶದ ತುಂಬಾ ದರಿದ್ರ ಬ್ರಾಹ್ಮಣನೊಬ್ಬನಿದ್ದನು. ಅವನ ಹೆಸರು ಕೃಷ್ಣಾಂಗ (ಗೌತಮಗೋತ್ರ). ಅವನು ಬಹಳ ಜನರಿಂದ ಕೂಡಿದ ಗ್ರಾಮವೊಂದನ್ನು ನೋಡಿ, ಅಲ್ಲಿಗೆ ಭಿಕ್ಷಾರ್ಥಿಯಾಗಿ ಹೋದನು. ಅ ಗ್ರಾಮದಲ್ಲಿ ಒಬ್ಬ ಕಳ್ಳ(ದಸ್ಯು)ನಿದ್ದನು. ಅವನು ಧನವಂತನೂ, ಎಲ್ಲ ವರ್ಣ(ಆಶ್ರಮ)ವ್ಯವಸ್ಥೆ ಬಲ್ಲವನೂ, ಬ್ರಹ್ಮ-ವೇದನಿಷ್ಠರಲ್ಲಿ ಆದರವುಳ್ಳವನು, ಸತ್ಯಸಂಧನೂ, ಅಲ್ಲದೆ ದಾನಶೀಲನಾಗಿದ್ದನು. ಅವನ ಮನೆಗೆ ಹೋದ ಈ ಬ್ರಾಹ್ಮಣ(ಕೃಷ್ಣಾಂಗ) ಭಿಕ್ಷೆ ಬೇಡಿದನು. ವಾಸಕ್ಕೊಂದು ಮನೆ ಹಾಗೂ ಒಂದು ವರ್ಷಕ್ಕೆ ಆಗುವಷ್ಟು ಭಿಕ್ಷೆಯನ್ನೂ ಯಾಚಿಸಿದ. ಆ ಕಳ್ಳನು ಈ ಬ್ರಾಹ್ಮಣನಿಗೆ ಎಲ್ಲವನ್ನೂ ಕೊಟ್ಟದ್ದಲ್ಲದೆ, ಧರಿಸಲು ಯೋಗ್ಯವಾದ ಹೊಸವಸ್ತ್ರವನ್ನೂ ಮತ್ತು ಸೇವೆಗಾಗಿ (ತರುಣಸ್ತ್ರೀಯನ್ನೂ ಕೊಟ್ಟನು). ಪತಿರಹಿತರಾದ ಸ್ತ್ರೀಯರೂ ಸರಿಯಾದ ರೀತಿಯಲ್ಲಿ ಬಂದರು. ಇದೆಲ್ಲವನ್ನೂ ಆ ಕಳ್ಳನಿಂದ ಪಡೆದ ಬ್ರಾಹ್ಮಣನು (ಗೌತಮ) ಸಂತುಷ್ಟನಾಗಿ ಆ ಮನೆಯಲ್ಲಿ ಆಕೆಯೊಡನೆ (ಶಬರಸ್ತ್ರೀ-ಬೇಡರಸ್ತ್ರೀ) ವಿಹರಿಸಿದನು. ಆ ಕಳ್ಳನ ಕುಟುಂಬದ ಕೆಲಸಗಳಲ್ಲಿ ಸಹಾಯ ಮಾಡಿದನು. ಸಮೃದ್ಧವಾದ ಆ ಶಬರವಸತಿಯಲ್ಲಿ (ಬೇಡರ ಮನೆಯಲ್ಲಿ) ಅನೇಕ ವರ್ಷಗಳ ಕಾಲ ವಾಸ ಮಾಡಿದನು. ಆ ಗೌತಮನು ಬಾಣವನ್ನು ಗುರಿಯಿಟ್ಟು ಸರಿಯಾಗಿ ಹೊಡೆಯುವುದನ್ನು ಕಲಿತನು.

ಗೌತಮನು ಪ್ರತಿದಿನ ಬಾಣಕ್ಕೆ ಸಿಗುತ್ತಿದ್ದ ಚಕ್ರವಾಕ ಪಕ್ಷಿಗಳನ್ನು ಕಳ್ಳರು ಕೊಲ್ಲುವಂತೆ ಕೊಲ್ಲುತ್ತಿದ್ದನು[೧]. ಹೀಗಾಗಿ ಆ ಬ್ರಾಹ್ಮಣನು ಕಳ್ಳರ ಸಹವಾಸದಿಂದಾಗಿ ಹಿಂಸಾಭಿರುಚಿಯುಳ್ಳವನೂ, ದಯಾರಹಿತನೂ, ಸದಾ ಪ್ರಾಣಿವಧೆಯಲ್ಲಿ ರತನೂ ಆಗಿ ಅವರಂತೆಯೇ ಆಗಿಬಿಟ್ಟನು. ಹೀಗೆ ಅವನು ಅವರೊಡನೆ ಹಲವಾರು ತಿಂಗಳು ಕಳೆದನು.

ಒಮ್ಮೆ ಅದೇ ಊರಿಗೆ ಜಟಾಧಾರಿಯಾಗಿಯೂ, ನಾರುವಸ್ತ್ರ ಮತ್ತು ಜಿಂಕೆಯ ಚರ್ಮವನ್ನು ಉಟ್ಟುಕೊಂಡವನಾಗಿ, ವೇದಾಧ್ಯಯನ ಸಂಪನ್ನನಾದ ಸದಾಚಾರಿಯಾದ

೧ ಹಿಂಸಾಪರೋ ಘೃಣಾಹೀನಃ ಸದಾ ಪ್ರಾಣಿವಧೇ ರತಃ।
ಗೌತಮಃ ಸನ್ನಿಕರ್ಷೇಣ ದಸ್ಯುಭಿಃ ಸಮತಾಮಿಯಾತ್ ॥ - ೩೪/೩೬

ಮತ್ತೊಬ್ಬ ಬ್ರಾಹ್ಮಣನು ಬಂದನು. ಅವನು ವಿನಯಸಂಪನ್ನನು, ಮಿತಾಹಾರಿಯೂ, ಬ್ರಹ್ಮನಿಷ್ಠ(ವೇದ), ವೇದಪಾರಂಗತನು, ಕೃಷ್ಣಾಂಗನ ಊರಿನವನೂ, ಅವನ ಪ್ರಿಯಮಿತ್ರನೂ ಆಗಿದ್ದನು. ಈ ಗ್ರಾಮವೋ ಕಳ್ಳರ ಗ್ರಾಮ. ಅಲ್ಲಿ ಕೃಷ್ಣಾಂಗ ಮಾತ್ರ ಆ ಊರಿನ ಒಬ್ಬನೇ ಬ್ರಾಹ್ಮಣ. ಈ ಹೊಸ ಬ್ರಾಹ್ಮಣ ಇತರ ಬ್ರಾಹ್ಮಣ ಮನೆಯನ್ನು ಹುಡುಕುತ್ತಿದ್ದನು. ಶೂದ್ರಾನ್ನವನ್ನು ಸ್ವೀಕರಿಸದವನೂ ಆಗಿದ್ದನು. ಆ ಕಳ್ಳರ ಗ್ರಾಮವನ್ನೆಲ್ಲ ಸಂಚರಿಸಿದ. ನಂತರ ಹೊಸದಾಗಿ ಬಂದ ಬ್ರಾಹ್ಮಣನು ಗೌತಮನ ಮನೆಯನ್ನು ಪ್ರವೇಶಿಸಿದನು. ಆ ಹೊತ್ತಿಗೆ ಗೌತನು ಬಂದು ಇಬ್ಬರ ಸಮಾಗಮವಾಯಿತು:

**ವಿನೀತೋ ನಿಯತಾಹಾರೋ ಬ್ರಹ್ಮಣ್ಯೋ ವೇದಪಾರಗಃ।**
**ಸ ಬ್ರಹ್ಮಚಾರೀ ತದ್ದೇಶ್ಯಃ ಸಖಾ ತಸ್ಯೈವ ಸುಪ್ರಿಯಮ್(ಸುಪ್ರಿಯಃ) ॥**

**- ೩೪/೩೯**

ಹೆಗಲ ಮೇಲೆ ಚಕ್ರವಾಕ ಪಕ್ಷಿಗಳ ಭಾರ, ಕೈಯಲ್ಲಿ ಬಿಲ್ಲು, ರಕ್ತದಿಂದ ತೊಯ್ದ ಶರೀರ, ನಾನಾ ಪಾಪಕಾರ್ಯ ಮಾಡಿದ ಗೌತಮನು ಮನೆಗೆ ಬಂದುದನ್ನು ನೋಡಿದ (ಈ ಹೊಸ) ಬ್ರಾಹ್ಮಣ 'ಇವನು ನರಭಕ್ಷಕನಂತೆ ಇದ್ದಾನೆ. ಭ್ರಷ್ಟಬ್ರಾಹ್ಮಣನೆಂದು ಗುರುತಿಸಿ, ಅವನೊಡನೆ ಮಾತನಾಡಲು (ಮೊದಲು) ಹಿಂಜರಿದು, ನಂತರ ಹೀಗೆ ಹೇಳಿದನು.

ಎಲೈ ಬ್ರಾಹ್ಮಣ (ಗೌತಮ) [೧]ಏನಿದು ನಿನ್ನ ಅಜ್ಞಾನ. ತಪ್ಪು ನಡೆ. ನೀನು ಸತ್ಕುಲಪ್ರಸೂತ, ಮಧ್ಯದೇಶದಲ್ಲಿ ಪ್ರಸಿದ್ಧ ಬ್ರಾಹ್ಮಣ. ಈ ಕಳ್ಳರ ನಡೆ ಹೇಗೆ ಬಂತು? ನಿನ್ನ ವಂಶದ ಪೂರ್ವಜರು ವೇದವೇದಾಂಗ ಪಾರಂಗತರು, ವಿಖ್ಯಾತರು, ಅವರನ್ನು ನೆನೆಸಿಕೋ. ಹೀಗಿರುವಾಗ ನೀನು ಹೇಗೆ ಕುಲಕ್ಕೆ ಕಳಂಕ ಹಚ್ಚಿರುವೆ? ನಿನ್ನನ್ನು ನೀನೇ ತಿಳಿದುಕೋ. ಸತ್ಯ, ಶೀಲ, ವಿದ್ಯೆ, ಇಂದ್ರಿಯನಿಗ್ರಹ, ದಯೆ - ಈ ಗುಣಗಳನ್ನು ಮನಸ್ಸಿಗೆ ತಂದುಕೊಂಡು ಈ ವಾಸವನ್ನು ಬಿಡು.

ತನ್ನ ಸ್ನೇಹಿತನ ಹಿತನುಡಿಗಳನ್ನು ಕೇಳಿ ಆರ್ತನಾದ ಕೃಷ್ಣಾಂಗ(ಗೌತಮ)ನು ಉತ್ತರಿಸಿದ. 'ನನ್ನಲ್ಲಿ ಹಣವಿಲ್ಲ ವೇದಾಧ್ಯಯನವನ್ನೂ ಮಾಡಿಲ್ಲ, ನಾನು ಜೀವನೋಪಾಯ ಹುಡುಕುತ್ತಾ ಇಲ್ಲಿಗೆ ಬಂದಿದ್ದೇನೆ. ನೀನು ಗಮನಿಸಿರುವುದನ್ನು ನಾನೂ ಬಲ್ಲೆ. ಈ ರಾತ್ರಿ ಇಲ್ಲೇ ಇರು. ನಾಳೆ ನಾವಿಬ್ಬರೂ ಇಲ್ಲಿಂದ ಹೋಗೋಣ'.

ರಾತ್ರಿ ಕಳೆಯಿತು. ಆ ಬ್ರಾಹ್ಮಣನು ಹೊರಟನು. ಗೌತಮನು ಆ ಬೇಡರ ವಸತಿಯಿಂದ ಸಮುದ್ರದ ಕಡೆ ಹೋಗಿ, ಅಲ್ಲಿಯ ತೀರದಲ್ಲಿದ್ದ ವರ್ತಕರೊಡನೆ ಸಮುದ್ರಕ್ಕೆ ನಡೆದನು. ಆ ವರ್ತಕರ ಗುಂಪು ಗುಹೆಯೊಂದರಲ್ಲಿ ತಂಗಿದ್ದಾಗ ಆನೆಯೊಂದು ಬಂದು ಅನೇಕ ವರ್ತಕರನ್ನು

---

೧ ಕಿಮಿದಂ ಕುರುಷೇ ಮೌಢ್ಯಾದ್ ವಿಪ್ರ ಸದ್ಭಿಃ ಕುಲೋದ್ಗತಃ।
ಮಧ್ಯದೇಶಪರಿಜ್ಞಾತೋ ದಸ್ಯುಭಾವಂ ಗತಃ ಕಥಮ್ ॥ - ೩೪/೪೪

ಕೊಂದಿತು. ಈ ಬ್ರಾಹ್ಮಣ(ಗೌತಮ) ಹೇಗೋ ಆನೆ ಭಯದಿಂದ ತಪ್ಪಿಸಿಕೊಂಡು, ಪ್ರಾಣ ರಕ್ಷಿಸಿಕೊಳ್ಳಲು ಉತ್ತರದಿಕ್ಕಿಗೆ ಓಡಿ ಹೋದನು. ಹಣವಿಲ್ಲದೆ ಸರ್ವತೋಭ್ರಷ್ಟನಾಗಿ ಕಿಂಪುರುಷನಂತೆ ಅಲೆದು ಅಲೆದು ಸಮುದ್ರಾಭಿಮುಖವಾಗಿ ಹೋಗುತ್ತಾ ಒಂದು ಸುಂದರವಾದ ನಂದನವನದಂತೆ ಇದ್ದ ದೊಡ್ಡ ಕಾಡನ್ನು ತಲುಪಿದನು.

ಅಲ್ಲಿ ರಮ್ಯವಾದ ಭಾರುಂಡ, ಭೂಲಿಂಗ, ಸಾಮುದ್ರವೆಂಬ ಶ್ರೇಷ್ಠ ಹಕ್ಕಿಗಳೂ ಇದ್ದವು. ಅವುಗಳ ರಮಣೀಯವಾದ ಧ್ವನಿಯನ್ನು ಕೇಳುತ್ತಾ ಸಾಗಿದನು. ಅದೇ ಪರಿಸರದಲ್ಲಿ ಒಂದು ಕಡೆ ಸುಂದರವಾದ ಸ್ವರ್ಗಕಾಂತಿಯಂತಿರುವ ಕಾಂತಿಯುಳ್ಳ ರಮಣೀಯವಾದ ಒಂದು ದೊಡ್ಡ ಆಲದಮರವನ್ನು (ನ್ಯಗ್ರೋಧ) ನೋಡಿದನು. ಅದರ ಮೂಲಭಾಗವು ಒಳ್ಳೆಯ ಗಂಧದ ನೀರಿನಿಂದ ಎರೆಯಲ್ಪಟ್ಟಿತ್ತು. ಆ ಮರದ ಪರಿಸರ ಚತುರ್ಮುಖಬ್ರಹ್ಮನ ಸದನದಂತೆ ಇತ್ತು. ಆ ಮರದ ಕೆಳಗೆ ಗೌತಮನು ಬಂದು ಕುಳಿತನು. ಪುಷ್ಪಗಳನ್ನು ಸ್ಪರ್ಶಿಸಿ ಬೀಸುತ್ತಿದ್ದ ಗಾಳಿ ಶುಚಿಯೂ ಸುಖಕರವೂ ಆಗಿ ಗೌತಮನಿಗೆ ಆಹ್ಲಾದವುಂಟು ಮಾಡಿತು. ಬಳಲಿದ್ದ ಗೌತಮನಿಗೆ ಆ ಗಾಳಿಯ ಸುಖಸ್ಪರ್ಶದಿಂದ ನಿದ್ರೆ ಬಂತು. ಸೂರ್ಯಾಸ್ತವೂ ಆಯಿತು. ಸಂಧ್ಯಾಕಾಲದ ಹೊತ್ತಿಗೆ ಬ್ರಹ್ಮಲೋಕದಿಂದ **ನಾಡೀಜಂಘ** ಎಂಬ ಶ್ರೇಷ್ಠ ಹಕ್ಕಿಯು ತನ್ನ ಮನೆಗೆ ಬಂತು. ಅದು ಬ್ರಹ್ಮದೇವನ ಮಿತ್ರನೂ, ಬಕಪಕ್ಷಿಗಳ ರಾಜನೂ, ಮಹಾಪ್ರಾಜ್ಞನೂ, ಕಶ್ಯಪರ ಮಗನೂ ಆಗಿತ್ತು. ಅವನು ಈ ಭೂಮಿಯಲ್ಲಿಯೇ ಅಸದೃಶಚೇತನನಾಗಿದ್ದನು. ದೇವಕನ್ಯೆಯಲ್ಲಿ ಕಶ್ಯಪರಿಂದ ಜನಿಸಿದ ಮಗನಾಗಿದ್ದನು. ಇಂದ್ರನಂತಹ ತೇಜಸ್ವಿಯೂ ಆಗಿದ್ದು ಅವನು **ರಾಜಧರ್ಮ** ಎಂದು ಪ್ರಖ್ಯಾತಿ ಹೊಂದಿದ್ದನು. ದೇವಸಂತತಿಯಾಗಿದ್ದರಿಂದ ತೇಜಸ್ಸಿನಿಂದ ಜ್ವಲಿಸುತ್ತಿತ್ತು. ಅದನ್ನು ನೋಡಿ ಗೌತಮನು ಆಶ್ಚರ್ಯಚಕಿತನಾದ. ಹಸಿವು, ಬಾಯಾರಿಕೆಯಿಂದ ಕೂಡಿದ ಗೌತಮನು ಆ ಪಕ್ಷಿಯನ್ನು ಕೊಲ್ಲಲು ಇಚ್ಛಿಸಿ ನೋಡಿದನು.

ರಾಜಧರ್ಮನು ಗೌತಮನನ್ನು ಸ್ವಾಗತಿಸಿ, 'ನೀನು ಅತಿಥಿ, ನನ್ನ ಮನೆಗೆ ಸಂಧ್ಯಾಕಾಲ ಬಂದಿರುವೆ, ಸತ್ಕರಿಸುವೆ. ಬೆಳಗಾದ ಮೇಲೆ ಹೋಗು' ಎಂದನು.

ರಾಜಧರ್ಮನ ಮಧುರ ಮಾತುಗಳನ್ನು ಕೇಳಿ ಗೌತಮ ಮತ್ತೆ ವಿಸ್ಮಿತನಾದ. ರಾಜ-ಧರ್ಮನು 'ನಾನು ಕಶ್ಯಪರ ಮಗ. ನನ್ನ ತಾಯಿ ದಾಕ್ಷಾಯಿಣಿ. ಗುಣಸಂಪನ್ನನಾದ ನೀನು ನನ್ನ ಅತಿಥಿ. ನಿನಗೆ ಸ್ವಾಗತ. ಎಂದು ಹೇಳಿ ಶಾಲಪುಷ್ಪಗಳ ಆಸನವನ್ನು ಕೊಟ್ಟನು. ಗಂಗಾನದಿಯಲ್ಲಿ ಸಿಗುವ ಶ್ರೇಷ್ಠವಾದ ಮೀನುಗಳನ್ನು ಆಹಾರವಾಗಿ ನೀಡಿದನು. ಅಲ್ಲದೆ ಪ್ರಜ್ವಲಿಸುವ ಅಗ್ನಿಯನ್ನೂ ದಷ್ಟವಾದ ಮೀನುಗಳನ್ನು ಕೊಟ್ಟನು. ಊಟವಾದ ನಂತರ ಶ್ರಮ ಪರಿಹಾರಕ್ಕಾಗಿ ತನ್ನ ರೆಕ್ಕೆಗಳಿಂದ ಬೀಸಿದನು. ನಂತರ ರಾಜಧರ್ಮನು ನಿನ್ನ ಗೋತ್ರ ಯಾವುದೆಂದು ಕೇಳಲು ಗೌತಮನು 'ನಾನು ಗೌತಮ' ಎಂದಷ್ಟೇ ಹೇಳಿದ. ತನ್ನ ಬ್ರಾಹ್ಮಣಕರ್ಮ, ವೇದಾಧ್ಯಯನಾದಿಗಳ ಬಗ್ಗೆ ಏನೂ ಹೇಳಲಿಲ್ಲ. ನಂತರ ಪಕ್ಷಿ ಗೌತಮನಿಗೆ ಎಲೆ ಪುಷ್ಪಗಳಿಂದ

(ಸುಗಂಧಯುಕ್ತ) ದಿವ್ಯವಾದ ಹಾಸಿಗೆಯನ್ನು ಮಲಗಲು ವ್ಯವಸ್ಥೆ ಮಾಡಿದನು. ಗೌತಮನು ಅಲ್ಲಿ ಸುಖವಾಗಿ ಮಲಗಿದನು.

ಅನಂತರ ಹಾಸಿಗೆಯ ಮೇಲೆ ಎದ್ದು ಕುಳಿತ ಗೌತಮನನ್ನು ಇಲ್ಲಿಗೆ ಬರಲು ಕಾರಣವೇನೆಂದು ಕೇಳಿದನು ಬಕರಾಜ ರಾಜಧರ್ಮ. ಅದಕ್ಕೆ ಗೌತಮನು 'ನಾನು ದರಿದ್ರ. ಧನಾರ್ಥಿಯಾಗಿ ನಾನು ಸಮುದ್ರದ ಕಡೆ ಹೋಗಲು ಬಯಸಿದ್ದೇನೆ' ಎಂದನು. ಬ್ರಾಹ್ಮಣನ ಮಾತಿಗೆ ಪಕ್ಷಿಯು 'ಕಳವಳ ಬೇಡ. ನಿನ್ನ ಕೆಲಸ ಆಗುತ್ತದೆ. ನೀನು ಧನವಂತನಾಗಿ ಇಲ್ಲಿಂದ ಹೋಗುವೆ. **ಬೃಹಸ್ಪತ್ಯಾಚಾರ್ಯರ** [೧]**ಮತದಂತೆ ಧನಪ್ರಾಪ್ತಿಯು ಪರಂಪರೆಯಿಂದ, ದೈವಬಲದಿಂದ, ಪ್ರಯತ್ನದಿಂದ ಹಾಗೂ ಮಿತ್ರನಿಂದ ಬರುವುದೆಂದು ನಾಲ್ಕು ಪ್ರಕಾರವಿದೆ. ನಾನು ನಿನ್ನ ಮಿತ್ರ**. ನಿನ್ನ ಮೇಲೆ ನನಗೆ ಸೌಹಾರ್ದವಿದೆ. ನೀನು ಧನವಂತನಾಗಿರುವಂತೆ ನಾನು ಪ್ರಯತ್ನಿಸುತ್ತೇನೆ' ಎಂದಿತು.

ಬೆಳಿಗ್ಗೆ ಬ್ರಾಹ್ಮಣನು ಏಳಲು ಪಕ್ಷಿಯು ಈ ದಾರಿಯಿಂದ ಹೋಗು, ನಿನ್ನ ಕೆಲಸ ಆಗುತ್ತದೆ. ಇಲ್ಲಿಂದ ಮೂರು ಯೋಜನ ದೂರದಲ್ಲಿ **ವಿರೂಪಾಕ್ಷ**ನೆಂಬ ಪ್ರಸಿದ್ಧವಾದ ರಾಕ್ಷಸಾಧಿಪತಿ ಇದ್ದಾನೆ. ಅವನ ಬಳಿಗೆ ಹೋಗಿ 'ನಾನು ಕಳಿಸಿದೆ; ಎಂದು ಹೇಳು. ನಿನಗೆ ಇಷ್ಟವಾದ ಎಲ್ಲವನ್ನೂ ಕೊಡುತ್ತಾನೆ. ಅದರಲ್ಲಿ ಯಾವ ಸಂಶಯವೂ ಇಲ್ಲ ಎಂದು ಹೇಳಿತು.

ಅಂತೆಯೇ ಗೌತಮನು ರಾಕ್ಷಸನು ವಾಸವಾಗಿರುವ **ಮೇರುವ್ರಜ** ಎಂಬ ನಗರವನ್ನು ತಲುಪಿದನು. ದಾರಿಯಲ್ಲಿ ಸುಂದರ, ದಟ್ಟವಾದ ವನ ಸಿರಿಗಳನ್ನು ದಾಟಿ, ಹಣ್ಣುಗಳನ್ನು ಲವಂಗದ ವನವನ್ನು ಆಸ್ವಾದಿಸುತ್ತಾ ಹೊರಟನು. ನಗರದ ಸುತ್ತಲೂ ಇದ್ದ ಬೆಟ್ಟಗಳೇ ಬೇಲಿಯಾಗಿದ್ದವು. ರಾಕ್ಷಸನಿಗೆ ತನ್ನ ಸಖನಾದ ಪಕ್ಷಿಯು ಕಳಿಸಿದ ಅತಿಥಿಯು ಬ್ರಾಹ್ಮಣ ಗೌತಮನೆಂದು ತಿಳಿದು ನಗರದ್ವಾರದಿಂದಲೇ ಶೀಘ್ರವಾಗಿ ಕರೆಸಿದನು. ಬ್ರಾಹ್ಮಣನ ಶ್ರಮವೆಲ್ಲ ಕರಗಿತು. ವಿಸ್ಮಿತನಾದ ರಾಜನ ಮನೆಗೆ ಧಾವಿಸಿದನು.

ರಾಕ್ಷಸನು ಗೌತಮನನ್ನು ಸತ್ಕರಿಸಿದ. ಉನ್ನತ ಆಸನದಲ್ಲಿ ಕುಳ್ಳಿರಿಸಿ, ಗೋತ್ರ, ಸ್ವಾಧ್ಯಾಯ, ವೇದಾಧ್ಯಯನ, ಅನುಷ್ಠಾನಗಳ ಬಗ್ಗೆ ಕೇಳಲು ಗೌತಮನು ಗೋತ್ರವನ್ನು ಮಾತ್ರ ಹೇಳಿ ಬೇರೇ ಏನನ್ನೂ ಹೇಳಲಿಲ್ಲ. ರಾಜನು ಬ್ರಹ್ಮವರ್ಚಸ್ಸು ಇಲ್ಲದ, ಸ್ವಾಧ್ಯಾಯರಹಿತ, ಗೌತಮನನ್ನು ಕುರಿತು 'ನಿನ್ನ ವಾಸ ಎಲ್ಲಿ? ನಿನ್ನ ಹೆಂಡತಿಯ ಗೋತ್ರ, ನಿನ್ನ ಮನೆ ಎಲ್ಲಿ? ಸತ್ಯ ಹೇಳು, ಹೆದರಬೇಡ. ಸುಖವಾಗಿ ವಿಶ್ರಾಂತಿ ತೆಗೆದುಕೋ ಎಂದು ನುಡಿದನು.

ರಾಕ್ಷಸನಿಗೆ ಗೌತಮನು 'ನನ್ನ ಜನ್ಮಸ್ಥಳ ಮಧ್ಯದೇಶ. ನನ್ನ ವಾಸ ಬೇಡರಗ್ರಾಮದ ಬೇಡರ ಮನೆಯಲ್ಲಿ. ನನ್ನ ಪತ್ನಿ ಎರಡು ಸಲ ಮದುವೆಯಾದ ಶೂದ್ರಸ್ತ್ರೀ. ನಾನು ಸತ್ಯವನ್ನೇ ಹೇಳುತ್ತಿದ್ದೇನೆ.'

---

೧ ಚತುರ್ವಿಧಾ ಹ್ಯರ್ಥಗತಿರ್ಬೃಹಸ್ಪತಿಮತಂ ಯಥಾ ।
ಪಾರಂಪರ್ಯಂ ತಥಾ ದೈವಂ ಕರ್ಮ ಮಿತ್ರಮಿತಿ ಪ್ರಭೋ ॥ - ೩೬/೧೨

ಗೌತಮನ ಮಾತುಗಳನ್ನು ಕೇಳಿದ ರಾಜನು ಹುಟ್ಟಿನಿಂದ ಬ್ರಾಹ್ಮಣ, ಆ ಮಹಾತ್ಮನ ಮಿತ್ರ (ಬಕಪಕ್ಷಿ). ಕಶ್ಯಪರ ಸುತನು ಕಳಿಸಿದ್ದಾನೆ. ಅವನಿಗೆ ಪ್ರಿಯವಾದುದನ್ನು ಮಾಡುತ್ತೇನೆ. ನನ್ನನ್ನು ಆಶ್ರಯಿಸಿದ್ದಾನೆ. ಅವನು ನನ್ನ ಸೋದರ ಬಂಧು. ನನ್ನ ಮನ ಸೆಳೆವ ಗೆಳೆಯ. ಇಂದು ಕಾರ್ತಿಕ ಹುಣ್ಣಿಮೆ. ನನ್ನ ಮನೆಯಲ್ಲಿ ಒಂದು ಸಾವಿರ ಬ್ರಾಹ್ಮಣೋತ್ತಮರು ಭೋಜನ ಮಾಡುತ್ತಾರೆ. ಈ ಬ್ರಾಹ್ಮಣನೂ ಮಾಡಲಿ. ಇವನಿಗೂ ಧನವನ್ನು ಕೊಡುವೆನು. ನಂತರ ಸ್ನಾನಾನುಷ್ಠಾನಗಳನ್ನು ಮುಗಿಸಿದ ಸಾಲಂಕೃತರಾದ ರೇಷ್ಮೆ ಹೊಸವಸ್ತ್ರಗಳನ್ನು ಧರಿಸಿದ ಒಂದು ಸಾವಿರ ಬ್ರಾಹ್ಮಣರು ಬರಲು, ಅವರನ್ನು ವಿಧ್ಯುಕ್ತವಾಗಿ ಸ್ವಾಗತಿಸಿದನು. ರಾಜಾಜ್ಞೆಯಿಂದ ಸೇವಕರು ಅವರಿಗೆ ನೀವಿಗಳನ್ನು (ರಾಜವಧುಗಳು ಉಡುವ ಸೂಕ್ಷ್ಮ ವಸ್ತ್ರಗಳನ್ನು) ಕೊಟ್ಟರು. ದರ್ಭಾಸನದಲ್ಲಿ ಅವರು ಆಸೀನರಾದರು. ರಾಜನು ಅವರಿಗೆ ಮಧುತುಪ್ಪಗಳಿಂದ ನೆನೆದ ಶ್ರೇಷ್ಠವಾದ ಅನ್ನದಿಂದ ಮತ್ತು ಸೂಪದಿಂದ ಪೂರ್ಣವಾದ ವಜ್ರಖಚಿತವಾದ ಪವಿತ್ರವಾದ, ಸುವರ್ಣಪಾತ್ರೆಗಳನ್ನು ಕೊಟ್ಟನು. ರಾಜನು ಪ್ರತಿದಿನ ಮತ್ತು ಆಷಾಢ-ಮಾಘ-ಮಾಸಗಳ ಹುಣ್ಣಿಮೆಗಳಲ್ಲಿ ಅನೇಕ ಬ್ರಾಹ್ಮಣರನ್ನು ತಮ್ಮಿಷ್ಟವಾದ ಭೋಜನವನ್ನು ಮತ್ತು ಸತ್ಕಾರವನ್ನು ಮಾಡುತ್ತಿದ್ದನು. ದಕ್ಷಿಣೆ ಎಂದು ಬ್ರಾಹ್ಮಣರಿಗೆ ಬಂಗಾರ, ಬೆಳ್ಳಿ, ಮಣಿಗಳು, ಮುತ್ತುಗಳು, ವಜ್ರವೈಢೂರ್ಯ, ಹಣದರಾಶಿ, ರತ್ನರಾಶಿಗಳನ್ನು ಇಟ್ಟು ರಾಜನು ಹೇಳಿದನು.

'ನೀವು ಉಂಡ ಪಾತ್ರೆಗಳನ್ನು ತೆಗೆದುಕೊಳ್ಳಿ ಮತ್ತು ಮೇಲಿನ ಎಲ್ಲ ಅಮೂಲ್ಯ ವಸ್ತುಗಳನ್ನು ಉತ್ಸಾಹದಿಂದ ಯಥೇಚ್ಛ ತೆಗೆದುಕೊಳ್ಳಿರಿ. ರಾಕ್ಷಸನ ಮಾತಿನಂತೆ ಬ್ರಾಹ್ಮಣರು ಆ ಅಮೂಲ್ಯ ವಸ್ತುಗಳನ್ನು ಯಥೇಚ್ಛ ಸ್ವಿಕರಿಸಿ ಪ್ರೀತರಾದರು. ನಂತರ ರಾಜನು ನಾನಾ ದಿಕ್ಕುಗಳಿಂದ ಬಂದ ಬ್ರಾಹ್ಮಣರನ್ನು ಕುರಿತು 'ಇದೊಂದು ದಿನ ನಿಮಗೆ ಇಲ್ಲಿ ರಾಕ್ಷಸರಿಂದ ಭಯವಿಲ್ಲ. ಇಲ್ಲಿ ಸಂತೋಷವಾಗಿರಿ, ಬೇಗ ಹೊರ್ಡಿ' ನಂತರ ಎಲ್ಲ ಬ್ರಾಹ್ಮಣರು ತಮ್ಮ ಊರುಗಳಿಗೆ ಧಾವಿಸಿದರು. ಗೌತಮನು ಕೂಡಾ ಬಂಗಾರದ ಭಾರವನ್ನು ಎತ್ತಿಕೊಂಡು ಬೇಗನೇ ಹೊರಟನು.

ತುಂಬಾ ಕಷ್ಟದಿಂದ ಗೌತಮನು ಮತ್ತೆ ಆಲದ ಮರದ ಹತ್ತಿ ಬಂದು, ಆಗಲೇ ಆಯಾಸವಾಗಿತ್ತು. ಬಾಡಿದ ಮುಖದಿಂದ ಹಸಿವೆಯಿಂದ ಮರದ ಕೆಳಗೆ ಕುಳಿತನು.

ಆಗ ಅಲ್ಲಿಗೆ ಬಂದ ಪಕ್ಷಿ ರಾಜಧರ್ಮನು ಗೌತಮನನ್ನು ಸ್ವಾಗತಿಸಿ, ತನ್ನ ರೆಕ್ಕೆಗಳಿಂದ ಬ್ರಾಹ್ಮಣನ ಶ್ರಮಪರಿಹಾರ ಮಾಡಿ, ಪೂಜಿಸಿ, ಭೋಜನವನ್ನು ಮಾಡಿಸಿದನು. ಅಲ್ಲೇ ವಿಶ್ರಾಂತಿ ಹೋದನು.

ಅಂದು ರಾತ್ರಿ, ಗೌತಮನು ಹೀಗೆ ವಿಚಾರ ಮಾಡಿದ. 'ನಾನು ಲೋಭ ಮತ್ತು ಮೋಹದಿಂದ ಒಳ್ಳೆಯ ಬಂಗಾರ ತೆಗೆದುಕೊಂಡಿದ್ದೇನೆ. ಆದರೆ ನನ್ನ ಪಯಣ ದೂರವಿದೆ. ದಾರಿಯಲ್ಲಿ ಪ್ರಾಣಧಾರಣೆಗೆ ಆಹಾರವೇನೂ ಇಲ್ಲ. ಕೃತಘ್ನನಾದ ಬ್ರಾಹ್ಮಣನು ನನ್ನ ದಾರಿಯ

ಭೋಜನಕ್ಕಾಗಿ ನನ್ನ ಪಕ್ಕದಲ್ಲೇ ಇರುವ ಈ ಹಕ್ಕಿಯನ್ನು (ರಾಜಧರ್ಮ) ಕೊಂದು ಅದರ ಮಾಂಸದ ರಾಶಿಯನ್ನು ತೆಗೆದುಕೊಂಡು ಹೋಗುತ್ತೇನೆ(ಹೋಗುವುದು ಉಚಿತ).

ನಂತರ ಬಕಪಕ್ಷಿಯು ತನ್ನ ಬಳಿಗೆ ಬಂದ ಗೌತಮನ ರಕ್ಷಣೆಗಾಗಿ (ಶೀತ ನಿವಾರಣೆಗೆ) ಅಗ್ನಿಯನ್ನು ಸಿದ್ಧಪಡಿಸಿದನು(ಬೆಂಕಿಯಿಂದ ಕಾಯಿಸಿಕೊಳ್ಳಲು). ತಾನು ಕೂಡಾ ತುಂಬಾ ವಿಶ್ವಾಸದಿಂದ ಅವನ ಪಕ್ಕದಲ್ಲೇ ಮಲಗಿದನು. ಆದರೆ ಕೃತಘ್ನನಾದ ಗೌತಮನು ಬಕಪಕ್ಷಿಯನ್ನು ಕೊಲ್ಲಲು ಎಚ್ಚತ್ತೇ ಇದ್ದು, ಅದು ನಿದ್ದೆ ಹೋದ ಮೇಲೆ, ಅಲ್ಲೇ ಇದ್ದ ಬೆಂಕಿ ಕೊಳ್ಳಿಯಿಂದ ಪಕ್ಷಿಯನ್ನು ಕೊಂದು, ಅದರ ರೆಕ್ಕೆ, ರೋಮಗಳನ್ನು ಕಿತ್ತೆಸೆದು ದೇಹವನ್ನು , ಬಂಗಾರಾದಿಗಳನ್ನು ತೆಗೆದುಕೊಂಡು ವೇಗವಾಗಿ ಹೊರಟು ಹೋದನು.

ಇನ್ನೊಂದು ದಿನ ವಿರೂಪಾಕ್ಷನು (ರಾಕ್ಷಸರಾಜ) ತನ್ನ ಮಗನಿಗೆ ಹೇಳಿದ 'ಪುತ್ರನೇ! ಪಕ್ಷಿಶ್ರೇಷ್ಠನಾದ ರಾಜಧರ್ಮನು ನಿತ್ಯವೂ ಪ್ರಾತಃಸಂಧ್ಯಾಕಾಲದಲ್ಲಿ ಬ್ರಹ್ಮದೇವನಿಗೆ ವಂದಿಸಲು ಹೋಗಿ ಬರುವಾಗ ನನ್ನನ್ನು ಕಾಣದೇ ಮನೆಗೆ ಹೋಗುವುದೇ ಇಲ್ಲ. ಎರಡು ರಾತ್ರಿ, ಎರಡು ಸಂಧ್ಯಾಕಾಲಗಳು ಕಳೆದರೂ, ಈ ನನ್ನ ಹಕ್ಕಿ ಮನೆಗೆ ಬಂದಿಲ್ಲ. ಆದ್ದರಿಂದ ಮನಸ್ಸಿಗೆ ಶಾಂತಿ ಇಲ್ಲವಾಗಿದೆ. ವೇದಾಧ್ಯಯನ ರಹಿತನಾದ, ಬ್ರಹ್ಮವರ್ಚಸ್ಸೇ ಇಲ್ಲದ, ಆ ಬ್ರಾಹ್ಮಣಾಧಮನು ಪಕ್ಷಿಯ ಮನೆಗೆ ಹೋಗಿದ್ದಾನೆ. ಅವನು ಹಕ್ಕಿಯನ್ನು ಕೊಂದಿರಬಹುದು ಎಂಬ ಸಂದೇಹ ನನಗಿದೆ. ಆ ಬ್ರಾಹ್ಮಣ ದುರಾಚಾರಿ, ದುರ್ಬುದ್ಧಿ ಸೋಮಾರಿ, ಕ್ರೂರಿ, ಕ್ರೂರ ಆಕಾರವುಳ್ಳವನು, ವರ್ಣದಿಂದ ಕಪ್ಪು, ಕಳ್ಳರಂತೆ ಅಧಮನಾಗಿದ್ದಾನೆಂದು ಅವನ ಚೇಷ್ಟೆಗಳಿಂದ ನಾನು ತಿಳಿದೆ. ಗೌತಮ ಅಲ್ಲಿಗೆ ಹೋಗಿರುವುದೇ ನನ್ನ ಉದ್ವಿಗ್ನತೆಗೆ ಕಾರಣವಾಗಿದೆ. ಮಗನೇ ತಕ್ಷಣ ಅಲ್ಲಿಗೆ ಹೋಗಿ (ರಾಜಧರ್ಮನ ಮನೆಗೆ - ಆಲದಮರ) ಅವನು (ಪಕ್ಷಿಯು) ಬದುಕಿದ್ದಾನೋ, ಇಲ್ಲವೋ ಎಂಬುದನ್ನು ತಿಳಿದುಕೋ (ಬಾ).

ಹೀಗೆ ಹೇಳಲ್ಪಟ್ಟ ಪುತ್ರನು ರಾಜಧರ್ಮನು ಇದ್ದ ವಟವೃಕ್ಷದ ಬಳಿಗೆ ಹೋಗಿ ನೋಡಲು ಅಲ್ಲಿ ಅವನ ರೆಕ್ಕೆ, ಮೂಳೆಗಳನ್ನು ನೋಡಿದನು. ರಾಜಪುತ್ರನು ಅದನ್ನು ನೋಡಿ ಬಹಳ ಅತ್ತನು. ನಂತರ ರೋಷಾವೇಶದಿಂದ ಗೌತಮನನ್ನು ಹಿಡಿಯಲು ಹೊಟು ಗೌತಮನನ್ನು ರಾಕ್ಷಸರು ಹಿಡಿದರು. ರಾಜಧರ್ಮನ ಶರೀರದ ಅಸ್ಥಿಗಳನ್ನು ವಶಕ್ಕೆ ತೆಗೆದುಕೊಂಡು, ಅಲ್ಲಿಂದ ಮೇರುಪರ್ವತದಲ್ಲಿದ್ದ ವಿರೂಪಾಕ್ಷನ ನಗರಕ್ಕೆ ಹೋದರು. ರಾಜನ ಮುಂದೆ ನಿಲ್ಲಿಸಿದರು. ರಾಜ, ಮಂತ್ರಿ, ರಾಜನ ಪರಿವಾರದವರು ದುಃಖದಿಂದ ಉಮ್ಮಳಿಸಿದರು. ಆರ್ತನಾದ ಉಂಟಾಯಿತು.

ರಾಜನು ಈ ಪಾಪಿ ಗೌತಮನನ್ನು ಕೊಂದು ಬಿಡಿ ಎಂದನು. ರಾಕ್ಷಸರು ಇವನ ಮಾಂಸವನ್ನು ನಾವೆಲ್ಲ ತಿನ್ನುವೆವು. ಇವನು ಪಾಪ. ಪಾಪವನ್ನೇ ಆಶ್ರಯಿಸಿದ್ದಾನೆ. ಇವನು ಕೃತಘ್ನ, ವಧಾರ್ಹ. ಇದರಲ್ಲಿ ಯಾವುದೇ ಸಂಶಯವಿಲ್ಲ. ವಿರೂಪಾಕ್ಷ ರಾಜನು ಪಾಪಕರ್ಮ ಮಾಡಿದ ಇವನನ್ನು

ತಿನ್ನಲು ನಾನು ಬಯಸುವುದಿಲ್ಲ[೧]. ಇವನು ಮಿತ್ರದ್ರೋಹಿ, ಪುರಷಾಧಮ. ಇವನನ್ನು ಆಳುಗಳಿಗೆ ಕೊಟ್ಟು ಬಿಡಿ ಎಂದನು.

ರಾಕ್ಷಸರನ್ನು ಆಳುಗಳನ್ನು ಕರೆತಂದರು. ಆದರೆ ಅವರು ಯಾರೂ ಈ ಕೃತಘ್ನನನ್ನು ತಿನ್ನಲು ಇಚ್ಛಿಸಲಿಲ್ಲ. ಅವರೆಲ್ಲ ರಾಜನನ್ನು ಶಿರಸಾ ನಮಸ್ಕರಿಸಿ ಈ ಪಾಪಿಯನ್ನು ನಮಗೆ ಕೊಡಬೇಡಿ ಎಂದರು. ನಂತರ ರಾಜನು ಇವನನ್ನು ಕೊಂದು ಬಿಡಿ, ತಿನ್ನಿ ಅಥವಾ ಬಿಡಿ. ನನಗೆ ಕಾಣದಂತೆ ದೂರ ಒಯ್ಯಿರಿ ಎಂದನು. ಆಗ ಶೂಲಪುಟ್ಟಸಧಾರಿಗಳಾದ ಆ ರಾಕ್ಷಸರು ಗೌತಮನನ್ನು ತುಂಡು ತುಂಡಾಗಿ ಮಾಡಿ ಮಾಂಸಭಕ್ಷಕರಿಗೆ ಕೊಟ್ಟರು. [೨]ಅವರೂ ಕೂಡಾ ಸತ್ತ ಕೃತಘ್ನನಾದವನ ಮಾಂಸವನ್ನು ತಿನ್ನಲಿಲ್ಲ.

**[೩]ಬ್ರಹ್ಮಸ್ವಹರಣ ಮಾಡಿದವರಿಗೆ (ಬ್ರಾಹ್ಮಣರ ಆಸ್ತಿಯನ್ನು), ಕಳ್ಳರಿಗೆ, ಬ್ರಹ್ಮಹತ್ಯಾ ಮಾಡಿದವನಿಗೆ, ಗುರುಪತ್ನಿಗಮನಮಾಡಿದವನಿಗೆ, ಪ್ರಾಯಶ್ಚಿತ್ತವಿಧಿ ಹೇಳಲ್ಪಟ್ಟಿದೆ. ಕೃತಘ್ನನಿಗೆ ಮಾತ್ರ ಪ್ರಾಯಶ್ಚಿತ್ತವಿಲ್ಲ.**

**[೪]ಮಿತ್ರದ್ರೋಹಿಯನ್ನು, ಕೃತಘ್ನನನ್ನು, ನರಾಧಮನನ್ನು ಮಾಂಸಭಕ್ಷಕ ಪ್ರಾಣಿಗಳೂ, ಕ್ರಿಮಿಗಳೂ ಕೂಡಾ ಎಂದೂ ತಿನ್ನುವುದಿಲ್ಲ. ಎಂದು ಭೀಷ್ಮರು ರಾಜನಿಗೆ ಉಪದೇಶಿಸಿದರು.**

ಇಂದ್ರದೇವರ ಮಾತಿನಂತೆ ರಾಜ ವಿರೂಪಾಕ್ಷನು ರಾಜಧಮಪಕ್ಷಿಗೆ ಏಕಾಗ್ರಚಿತ್ತನಾಗಿ ಬಹಳ ಸುಗಂಧದ್ರವ್ಯಗಳಿಂದ ದಹನ ಸಂಸ್ಕಾರ ಮಾಡಿದನು. ಪಕ್ಷಿಯ ಶರೀರದ ಮೇಲೆ ಇಂದ್ರಾದೇಶದಂತೆ ಅಮೃತವೃಷ್ಟಿಯಾಯಿತು. ಬಕನು ಬದುಕಿ ಬಂದನು. ರಾಕ್ಷಸರಾಜನಿಂದ ಪಕ್ಷಿಶ್ರೇಷ್ಠನು ಸಂಸ್ಕಾರಕ್ಕೆ ಒಳಗಾದಾಗ ಚಿತೆಯ ಸಮೀಪ ಸುರಭಿದೇವಿ ಬಂದು ಹಾಲು ಸುರಿಸಿದಳು. ಆ ಸುರಭಿಯ ಬಾಯಿಯಿಂದ ಹೊರಬಿದ್ದ ಹಾಲಿನ ನೊರೆಯು ಗಾಳಿಯ ವೇಗದಿಂದ ರಾಜಧರ್ಮನ ಮೇಲೆ ಬಿತ್ತು. ನಂತರ ಇಂದ್ರನು ವಿರೂಪಾಕ್ಷನ ಪುರಕ್ಕೆ ಬಂದನು. ರಾಜನು ಇಂದ್ರನನ್ನು ತನ್ನ ಸಹೋದರ ಬಕರಾಜನನ್ನು ಬದುಕಿಸಿಕೊಡಲು ಪ್ರಾರ್ಥಿಸಿದನು. ದೇವೇಂದ್ರನ ಆದೇಶದಂತೆ ಸುರಭಿಯ ನೊರೆಸ್ಪರ್ಶದಿಂದ ರಾಜಧರ್ಮನು ಇಂದ್ರಾನುಗ್ರಹದಿಂದ ಬದುಕಿದನು.

---

೧ ಕೃತಘ್ನಂ ಪಾಪಕರ್ಮಾಣಂ ನ ಭಕ್ಷಯಿತುಮುತ್ಸಹೇ।
ದಾಸೇಭ್ಯೋ ದೀಯತಾಮೇಷ ಮಿತ್ರಧ್ರುಕ್ ಪುರುಷಾಧಮಃ॥ – ೩೮/೧೯

೨ ದಾಸಾಃ ಸರ್ವೇ ಸಮಾಹೂತಾ ಯಾತುಧಾನಾಸ್ತಥಾ ಪರೇ।
ನೇಚ್ಛಂತಿ ಸ್ಮ ಕೃತಘ್ನಂ ತಂ ಖಾದಿತುಂ ಪುರುಷೋತ್ತಮ॥ – ೩೮/೨೦

೩. ಬ್ರಹ್ಮಸ್ವಹರಣೇ ಚೋರೇ ಬ್ರಹ್ಮಘ್ನೇ ಗುರುತಲ್ಪಗೇ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ॥ – ೩೮/೨೩

೪ ಕ್ರವ್ಯಾದಾಸ್ತ್ವಪಿ ರಾಜೇಂದ್ರ ನೇಚ್ಛಂತಿ ಪಿಶಿತಾಶನಾಃ।
ಮೃತಾನಪಿ ಹಿ ಕ್ರವ್ಯಾದಾಃ ಕೃತಘ್ನಾನ್ನೋಪಭುಂಜತೇ॥ – ೩೮/೨೪

ಇಂದ್ರನು ತುಂಬಾ ಸಂತೋಷಗೊಂಡು, ರಾಜಧರ್ಮನ ಪೂರ್ವವೃತ್ತಾಂತವನ್ನು ಹೇಳಿದನು.

ಒಮ್ಮೆ ಬ್ರಹ್ಮದೇವರು ಸಿಟ್ಟಿನಿಂದ ರಾಜಧರ್ಮನಿಗೆ ಹೇಳಿದನು 'ನೀನು ನನ್ನ ದರ್ಶನಕ್ಕಾಗಿ ನಿತ್ಯವೂ ಈ ಸಭೆಗೆ ಬರುತ್ತಿಲ್ಲ. ಆದ್ದರಿಂದ ನೀನು ಬಕಪಕ್ಷಿಯಾಗುವೆ. ಆಗಲೂ ನೀನು ಧರ್ಮನಿಷ್ಠನಾಗಿರುವೆ. ಹಿಂದಿನದೆಲ್ಲ ನಿನಗೆ ನೆನಪಿರುತ್ತದೆ. ನಿನ್ನ ಮನೆಗೆ ಒಮ್ಮೆ ಒಬ್ಬ ಪಾಪಿಯಾದ ಬೇಡರ ಮಧ್ಯೆ ವಾಸಿಸುವ, ಪಾಪಕೃತ್ಯ ಮಾಡುವ ಕೃತಘ್ನನಾದ ವಿಪ್ರನು ಬರುತ್ತಾನೆ. ಅವನು ನಿನ್ನನ್ನು ಕೊಲ್ಲುತ್ತಾನೆ. ಆಗ ನಿನಗೆ ಶಾಪವಿಮೋಚನವಾಗುತ್ತದೆ.

ಬದುಕಿದ ರಾಜಧರ್ಮನು ಶತ್ರುನಾಶಕನಾದ ದೇವೇಂದ್ರನನ್ನು ಕೇಳಿದನು. 'ನನ್ನ ಪ್ರಿಯಮಿತ್ರ ಗೌತಮ ಎಲ್ಲಿ? ಅವನನ್ನು ಬಿಡುಗಡೆ ಮಾಡಿ'.

ಅವನ ಮಾತನ್ನು ಕೇಳಿದ ಇಂದ್ರನು ಗೌತಮನನ್ನು ಬದುಕಿಸಿ ರಾಜಧರ್ಮನಿಗೆ ಕೊಟ್ಟನು. ರಾಜಧರ್ಮನು ಗೌತಮನಿಗೆ ಅವನ ಪದಾರ್ಥಗಳನ್ನು (ವಿರೂಪಾಕ್ಷ ಹಿಂದೆ ಕೊಟ್ಟ ಬಂಗಾರ ಮುಂತಾದ) ಕೊಟ್ಟು ತನ್ನ ಮನೆಗೆ ಹೊರಟನು. (ಗೌತಮನು ತನ್ನ ಬೇಡರ ವಸತಿಗೆ ಹೋಗಿ ತನ್ನ ಶೂದ್ರಪತ್ನಿಯೊಡನೆ ಜೀವನ ಮಾಡಿದನು).

ಕ್ರೂರಿಯೂ, ಮಿತ್ರದ್ರೋಹಿಯೂ, ಪುರುಷಾಧಮನೂ ಆಗ ಗೌತಮನು ವಿರೂಪಾಕ್ಷನಿಂದ ಬಿಡುಗಡೆ ಹೊಂದಿ, ಮುಂದೆ ನರಕಕ್ಕೆ ಹೋದನು. ನಾರದರು ಸಜ್ಜನರ ಸಭೆಯಲ್ಲಿ ಹೇಳಿದುದನ್ನು ನಾನು ಕೇಳಿದ್ದೆ. ಅದನ್ನು ನಿನಗೆ ಹೇಳಿದ್ದೇನೆ.

ಧರ್ಮರಾಜ! [೧]ಬ್ರಹ್ಮಹತ್ಯೆ ಮಾಡಿದನಿಗೆ, ಮದ್ಯಪಾನ ಮಾಡಿದವನಿಗೆ, ಕಳ್ಳನಿಗೆ, ವ್ರತ ಬಿಟ್ಟವನಿಗೆ, ಪ್ರಾಯಶ್ಚಿತ್ತವಿಧಿ ಇದೆ. ಆದರೆ ಕೃತಘ್ನನಿಗೆ ಪ್ರಾಯಶ್ಚಿತ್ತವೇ ಇಲ್ಲ. ಕೃತಘ್ನನಿಗೆ ಕೀರ್ತಿ ಏಕೆ? ಎಲ್ಲಿಯ ಮಾನ, ಎಲ್ಲಿಯ ಸುಖ! ಕೃತಘ್ನನು ವಿಶ್ವಾಸಾರ್ಹನಲ್ಲ. ಆದ್ದರಿಂದ ಮಿತ್ರದ್ರೋಹ ಸರ್ವಥಾ ಮಾಡಬಾರದು. ಮಿತ್ರದ್ರೋಹಿಯು ಘೋರನರಕಕ್ಕೆ ಹೋಗುತ್ತಾನೆ. ಆದ್ದರಿಂದ ಯಾವಾಗಲೂ ಕೃತಜ್ಞನಾಗಿರಬೇಕು. ಮೈತ್ರಿಯಿಂದ ಇರಬೇಕು. ಮಿತ್ರನಿಂದ

---

೧ ಬ್ರಹ್ಮಘ್ನೇ ಚ ಸುರಾಪೇ ಚ ಚೋರೇ ಭ್ರಷ್ಟವ್ರತೇ ತಥಾ।
ನಿಷ್ಕೃತಿರ್ವಿಹಿತಾ ರಾಜನ್ ಕೃತಘ್ನೇ ನಾಸ್ತಿ ನಿಷ್ಕೃತಿಃ॥
ಕುತಃ ಕೃತಘ್ನಸ್ಯ ಯಶಃ ಕುತಃ ಸ್ಥಾನಂ ಕುತಃ ಸುಖಮ್।
ಅಶ್ರದ್ಧೇಯಃ ಕೃತಘ್ನೋ ಹಿ ಕೃತಘ್ನೇ ನಾಸ್ತಿ ನಿಷ್ಕೃತಿಃ॥
ಮಿತ್ರದ್ರೋಹೋ ನ ಕರ್ತವ್ಯಃ ಪುರುಷೇಣ ವಿಶೇಷತಃ।
ಮಿತ್ರಾತ್ ಪ್ರಭವತೇ ಸರ್ವಂ ಮಿತ್ರಂ ಧನ್ಯಮಿತಿ ಸ್ಮೃತಮ್॥
ಅರ್ಥಾದ್ವಾ ಮಿತ್ರಲಾಭಾದ್ವಾ ಮಿತ್ರಲಾಭೋ ವಿಶಿಷ್ಯತೇ।
ಪರಿತ್ಯಾಜ್ಯೋ ಬುಧೈಃ ಪಾಪಃ ಕೃತಘ್ನೋ ನಿರಪತ್ರಪಃ॥
ಮಿತ್ರದ್ರೋಹೀ ಕುಲಾಂಗಾರಃ ಪಾಪಕರ್ಮಾ ನರಾಧಮಃ॥ – ೩೯/೧೩,೧೪,೧೮,೨೦

ಎಲ್ಲವೂ ಆಗುತ್ತದೆ. ಮಿತ್ರನು ಸಂಪತ್ಕರ, ಧನಲಾಭಕ್ಕಿಂತ ಮಿತ್ರಲಾಭವೇ ಮಿಗಿಲಾದುದು.

**ತಿಳಿದವರು ಪಾಪಿಗಳನ್ನು, ಕೃತಘ್ನರನ್ನು, ನಾಚಿಕೆ ಬಿಟ್ಟವರನ್ನು, ಮಿತ್ರದ್ರೋಹಿಗಳನ್ನು ಕುಲಕಳಂಕರನ್ನು, ಪಾಪಕಾರ್ಯ ಮಾಡುವವರನ್ನು ತ್ಯಜಿಸಬೇಕು. ಇವರೆಲ್ಲ ನರಾಧಮರು.**

ಇದೆಲ್ಲವನ್ನು ಭೀಷ್ಮರಿಂದ ಕೇಳಿದ ಧರ್ಮರಾಜನು ಸಂತೋಷಪಟ್ಟನು.

## ಸಂದೇಶಗಳು-ವಿವರಣೆಗಳು

೧. ಕಥೆಯ ಹಂದರದಲ್ಲಿಯೇ ಸಂದೇಶಗಳು ಸ್ಪಷ್ಟವಾಗಿಯೇ ಬಂದಿವೆ. ಅದನ್ನು ಮತ್ತೆ ಹೇಳುವುದು ಅನಾವಶ್ಯಕ.

೨. ಬದುಕಿದರೆ ಬಕಪಕ್ಷಿಯಂತೆ, ರಾಕ್ಷಸರಾಜ ವಿರೂಪಾಕ್ಷನಂತೆ ಬದುಕಬೇಕು.

೩. ಗೌತಮನಂತೆ ಬದುಕಬಾರದು. ಜೀವನ ನಿರ್ವಹಣೆಗೆ ಬೇಡರ ವಸತಿಗೆ ಬಂದು, ಅವರಂತೆ ಬದುಕಿ ತನ್ನ ಕುಲಧರ್ಮ, ಜಾತಿ, ಧರ್ಮಗಳನ್ನೆಲ್ಲ ನಾಶ ಪಡಿಸಿಕೊಂಡು, ಕಿರಾತಕನಾಗಿ ಬದುಕಿ, ತನಗೆ ಆತಿಥ್ಯ ಮಾಡಿದ ರಾಜಧರ್ಮ ಪಕ್ಷಿಯನ್ನೇ ಕೊಂದ ಮಹಾಪಾಪಿ, ಮಿತ್ರದ್ರೋಹಿಯೂ ಆಗಿ, ಕೃತಘ್ನನಂತೆ ಬದುಕಬಾರದು.

೪. ಕೃತಘ್ನನ ಮಾಂಸವನ್ನು ರಾಕ್ಷಸರೂ, ಅವರ ಆಳುಗಳೂ ಬಯಸುವುದಿಲ್ಲವೆಂದ ಮೇಲೆ ಅವನಿಗೆ ಪ್ರಾಯಶ್ಚಿತ್ತವೆಲ್ಲಿ?

೫. ಮಹಾಭಾರತದ ದುರ್ಯೋಧನಾದಿ ಕೌರವರು ಇದಕ್ಕೆ ದೃಷ್ಟಾಂತರಾಗಿದ್ದಾರೆ. ಅವರ ಸಹವಾಸ ಮಾಡಿದ ಕರ್ಣಾದಿ ಸಜ್ಜನರೂ ಯುದ್ಧದಲ್ಲಿ ಹತರಾಗುತ್ತಾರೆ.

೬. ರಾಮಾಯಣದಲ್ಲಿ ಆರಂಭದಲ್ಲಿ ಸುಗ್ರೀವ ಹಾಗೆ ವರ್ತಿಸಿದರೂ, ನಂತರ ತಪ್ಪನ್ನು ತಿದ್ದಿಕೊಂಡ. ಆದರೆ ಮುಂದಿನ ಜನ್ಮದಲ್ಲಿ ವಿಫಲನಾದ.

೭. ಕಲಿಯುಗದಲ್ಲಿ ಇಂತಹವರೇ ಬಹಳ. ಆದ್ದರಿಂದ ಸಜ್ಜನರು ಎಚ್ಚರದಿಂದ ಇರಬೇಕು.

೮. ಉಪಾಖ್ಯಾನದ ಆರಂಭದಲ್ಲಿ ಸಜ್ಜನರ, ದುರ್ಜನರ ಗುಣಗಳ ದೊಡ್ಡ ಪಟ್ಟಿಯೇ ಇದೆ. ಅವು ನಮ್ಮನ್ನು ನಾವು ಪರೀಕ್ಷಿಸಿಕೊಳ್ಳಲು ತುಂಬಾ ಉಪಕಾರಿ. ಅವು ಆಧುನಿಕ ಪರಿಭಾಷೆಯಲ್ಲಿ ಸಮಗ್ರ ಜೀವನದ ಯಶಸ್ಸಿನ check list ಆಗಿವೆ.

ಇತ್ಯಾದಿ...

# ಮೋಕ್ಷಧರ್ಮಪರ್ವ

## ೯೮. ಪುತ್ರಶೋಕ ಪರಿಹಾರ

ಧರ್ಮರಾಜನು ಭೀಷ್ಮರನ್ನು ಕುರಿತು ಪ್ರಶ್ನೆ ಮಾಡುತ್ತಾನೆ –

'ರಣರಂಗದಲ್ಲಿ ಮರಣಹೊಂದಿದ ಹತ್ತುಸಾವಿರ ಆನೆಬಲವುಳ್ಳ ರಾಜರು ಹತರಾಗಿ ಬಿದ್ದಿದ್ದಾರೆ. ಇಂತಹವರನ್ನು ಕೊಲ್ಲುವವರು ಇದ್ದಾರೆಂದು ನಾನು ಭಾವಿಸಿರಲಿಲ್ಲ. ಹಾಗಿದ್ದರೂ ಪ್ರಾಣ ತೆತ್ತು ಬಿದ್ದ ಇವರನ್ನು ಮೃತರೆಂದು ಹೇಳುತ್ತಾರೆ. ಹೀಗೆ '**ಮೃತ**' ಎಂಬ ಸಂಜ್ಞೆ ಹೇಗೆ ಬಂತು? ಯಾರಿಗೆ ಬಂತು? ಈ ಮೃತ್ಯುವು ಯಾರಿಗೆ? ಯಾರಿಂದ, ಯಾವ ಕಾರಣದಿಂದ? ದೇವತೆಗಳ ಮಧ್ಯ ಸಂಹಾರಕಶಕ್ತಿ ಯಾರಿಗೆ ಇದೆ? ಪಿತಾಮಹನೇ ಈ ವಿಷಯ ತಿಳಿಸು?[೧]'

ಭೀಷ್ಮರು ಉತ್ತರಿಸಿದರು–

'ಹಿಂದೆ ಕೃತಯುಗದಲ್ಲಿ **ಅವಿಕಂಪನ** ಎಂಬ ರಾಜನಿದ್ದನು. ಅವನೊಮ್ಮೆ ಯುದ್ಧದಲ್ಲಿ ತನ್ನ ರಥ ನಾಶವಾಗಲು ಶತ್ರುವಶನಾಗಿಬಿಟ್ಟ. ಅವನಿಗೆ ನಾರಾಯಣಸಮನಾದ ಬಲವುಳ್ಳ '**ಹರಿ**' ಎಂಬ ಮಗನಿದ್ದ. ಅವನು ಶತ್ರುಗಳೊಡನೆ ಹೋರಾಡಿ ತನ್ನ ತಂದೆಯನ್ನು ಅವರಿಂದ ಬಿಡುಗಡೆ ಮಾಡಿಸಿದನಾದರೂ ತಾನು ಯುದ್ಧದಲ್ಲಿ ಹತನಾದ. ಆಗ **ಅವಿಕಂಪನ(ಅಕಂಪನ)** ರಾಜನು ಪುತ್ರ ಮರಣಶೋಕದಿಂದ ಇದ್ದಾಗ ನಾರದರ ದರ್ಶನವಾಯಿತು. ಅವರ ಮುಂದೆ ತನ್ನ ದುಃಖ ಹೇಳಿಕೊಂಡಾಗ ಅವರು ಪುತ್ರಶೋಕನಾಶಕವಾದ ಈ ಉಪಾಖ್ಯಾನ ಹೇಳಿ ರಾಜನನ್ನು ಸಮಾಧಾನ ಮಾಡಿದರು.

ರಾಜನ್! ಬ್ರಹ್ಮದೇವರಿಂದ ಸೃಷ್ಟರಾದ ಪ್ರಜೆಗಳ ಸಂಖ್ಯೆ ಮಿತಿಮೀರಿ ಬೆಳೆಯಿತು. ಆದರೆ ಯಾರೂ ಸಾಯಲಿಲ್ಲ. ವಿಶ್ವವೆಲ್ಲ ಉಸಿರಾಡಲೂ ಅಸಾಧ್ಯವಾದಷ್ಟು ಪ್ರಾಣಿಗಳಿಂದ ತುಂಬಿ ಹೋಯಿತು. ಬ್ರಹ್ಮನಿಗೆ ತುಂಬಾ ಚಿಂತೆ ಮಾಡಿದರೂ ಸಂಹಾರಕ್ಕೆ ಯುಕ್ತಿಯುಕ್ತ ಕಾರಣ ಹೊಳೆಯಲಿಲ್ಲ. ಹೀಗಾಗಿ ಬ್ರಹ್ಮನು ಕೋಪಗೊಳ್ಳಲು ಬ್ರಹ್ಮನ ಇಂದ್ರಿಯಗಳಿಂದ ಉತ್ಪನ್ನವಾದ ಅಗ್ನಿ ಸ್ವರ್ಗ, ಭೂಮಿ ಅಷ್ಟೇಕೆ ಎಲ್ಲ ಚರಾಚರ ಜಗತ್ತನ್ನು ಭಸ್ಮಮಾಡಿತು. ಇದನ್ನು ಗಮನಿಸಿದ ಸ್ಥಾಣು ಶಿವನು ಲೋಕದ ಕಾರುಣ್ಯದಿಂದ ಬ್ರಹ್ಮನ ಶರಣುಹೋಗಿ ಪ್ರಾರ್ಥಿಸಿದನು[೨].

---

೧ ಇಮೇ ಮೃತಾ ನೃಪತಯಃ ಪ್ರಾಯಶೋ ಭೀಮವಿಕ್ರಮಾಃ।
ತತ್ರ ಮೇ ಸಂಶಯೋ ಜಾತಃ ಕುತಃ ಸಂಜ್ಞಾ ಮೃತಾ ಇತಿ॥
ಕಸ್ಯ ಮೃತ್ಯುಃ ಕುತೋ ಮೃತ್ಯುಃ ಕೇನ ಮೃತ್ಯುರಿಹ ಪ್ರಜಾಃ।
ಹರತ್ಯಮರಸಂಕಾಶ ತನ್ಮೇ ಬ್ರೂಹಿ ಪಿತಾಮಹ॥ – ೯೧/೫,೬

೨ ಪ್ರಜಾಃ ಸೃಷ್ಟ್ವಾ ................................... ಪಿತಾಮಹಃ।
ನ ಹ್ಯಂತರಮಭೂತ್ ಕಿಂಚಿತ್ ಕ್ವಚಿತ್ ಜಂತುಭಿರಚ್ಯುತ।
ನಿರುಚ್ಛ್ವಾಸಮಿವೋನ್ನದ್ಧಂ ತ್ರೈಲೋಕ್ಯಮಭವನ್ನೃಪ॥

ಅದಕ್ಕೆ ಬ್ರಹ್ಮನು ಶಿವನನ್ನು ಕುರಿತು 'ನೀನು ವರ ಪಡೆಯಲು ಅರ್ಹನಾಗಿದ್ದೀ. ನಿನ್ನ ಮನಸ್ಸಿನಲ್ಲಿರುವುದನ್ನು ಕೇಳೆಂದನು[೧].

ಆಗ ರುದ್ರದೇವರು 'ಸೃಷ್ಟಿಸಿದ ಪ್ರಜೆಗಳ ರಕ್ಷಣೆಗಾಗಿ ನನ್ನ ಪ್ರಾರ್ಥನೆ ಇದೆ. ನಿನ್ನ ಕೋಪಾಗ್ನಿಯಿಂದಾಗಿ ಪ್ರಜೆಗಳೆಲ್ಲ ಸುಟ್ಟು ಹೋಗುತ್ತಿದ್ದಾರೆ. ಅವರ ಬಗ್ಗೆ ಸಿಟ್ಟಾಗಬೇಡ[೨]' ಎಂದರು.

ಅದಕ್ಕೆ ಬ್ರಹ್ಮದೇವರು 'ರುದ್ರ! ನನಗೆ ಪ್ರಜೆಗಳ ಬಗ್ಗೆ ಕೋಪವೇನೂ ಇಲ್ಲ. ಆದರೆ ಭೂಭಾರ ಬಹಳ ಆಗಿದೆ. ಭೂದೇವಿಯ ಪ್ರಾರ್ಥನೆಯನ್ನು ಮನ್ನಿಸಿ ಸಂಹಾರಕಾರ್ಯದಲ್ಲಿ ಮಗ್ನನಾಗಿದ್ದೇನೆ. ಪ್ರಜಾಸರ್ಗದ ಸಂಹಾರಕಾರ್ಯದ ಬಗ್ಗೆ ಚಿಂತಿಸುತ್ತಿರುವಾಗಲೇ ಕ್ರೋಧವುಂಟಾಗಿದೆ. ಆಗ ರುದ್ರದೇವರು 'ಸಂಹಾರಕಾರ್ಯ ನಿಲ್ಲಿಸು, ಕೋಪ ಶಮನಮಾಡು; ನಿನ್ನ ಕೋಪದಿಂದ ಚತುರ್ವಿಧ ಸ್ಥಾವರ ಜಂಗಮ ಪ್ರಾಣಿಗಳು ಸುಟ್ಟುಹೋಗಿವೆ. ಜಲಾಶಯಗಳು ಇಂಗಿ ಹೋಗಿವೆ. ಕಾರಣ ಪ್ರಜಾಹಿತಕ್ಕಾಗಿ ಬೇರೊಂದು ಉಪಾಯ ಚಿಂತಿಸು. ನಿನ್ನಿಂದ ಸೃಷ್ಟವಾದ ಚರಾಚರ ಪ್ರಾಣಿಗಳು ನಾಶವಾಗುತ್ತಿವೆ. ಸತ್ತಪ್ರಾಣಿಗಳು ಮತ್ತೆ ಹುಟ್ಟಿ ಬರಲಿ. ಇದೇ ನಾನು ಕೇಳುವ ವರ[೩]' ಎಂದರು.

---

ಚಿಂತಯನ್ನಾದ್ಯಗಚ್ಛಚ್ಚ ಸಂಹಾರೇ ಹೇತುಕಾರಣಮ್ ।
ತಸ್ಮಾದ್ರೋಷಾನ್ಮಹಾರಾಜ ಖೇಭ್ಯೋಗ್ನಿರುದತಿಷ್ಠತ ।
ತೇನ ಸರ್ವಾ ದಿಶೋ ರಾಜನ್ ದದಾಹ ಸ ಪಿತಾಮಹಃ ।
ತತೋ ದಿವಂ ಭುವಂ ಖಂ ಚ ಜಗಚ್ಚ ಸಚರಾಚರಮ್ ।
ದದಾಹ ಪಾವಕೋ ರಾಜನ್ ಭಗವತ್ಕೋಪಸಂಭವಃ ।
ತತ್ರಾದಹ್ಯಂತ ಭೂತಾನಿ ಜಂಗಮಾನಿ ಧ್ರುವಾಣಿ ಚ ।
ತಪೋ ಹರಿಜಟಃ ಸ್ಥಾಣುಃ ವೇದಾಧ್ವರಪತಿಃ ಶಿವಃ ।
ಜಗಾಮ ಶರಣಂ ದೇವೋ ಬ್ರಹ್ಮಾಣಂ ಪರಿವೀರಹಾ ॥ - ೯೧/೧೩-೨೦

೧ ಬ್ರಹ್ಮೋವಾಚ
ಕರವಾಣ್ಯದ್ಯ ಕಂ ಕಾಮಂ ವರಾಹೋರ್ಽಸಿ ಮತೋ ಮಮ ।
ಕರ್ತಾ ಹ್ಯಸ್ಮಿ ಪ್ರಿಯಂ ಶಂಭೋ ತವ ಯದ್ಧೃದಿ ವರ್ತತೇ ॥ -೯೧/೨೧

೨ ತವ ತೇಜೋಽಗ್ನಿನಾ ದೇವ ಪ್ರಜಾ ದಹ್ಯಂತಿ ಸರ್ವಶಃ ।
ತಾಂ ದೃಷ್ಟ್ವಾ ಮಮ ಕಾರುಣ್ಯಂ ಮಾ ಕ್ರುಧ್ಯಾಸಾಂ(ಕುಪ್ಯಾಸಾಂ) ಜಗತ್ಪ್ರಭೋ ॥ - ೯೨/೨

೩. ಸಂಹಾರಾಂತಂ ಪ್ರಸೀದಸ್ವ ಮಾ ಕ್ರುಧಸ್ತ್ರಿದೇಶೇಶ್ವರ ।
ಮಾ ಪ್ರಜಾಃ ಸ್ಥಾವರಂ ವೈ ಚ ಜಂಗಮಂ ಚ ವಿನೀನಶಃ ।
ತದೇ ತತ್ ಭಸ್ಮಸಾದ್ಭೂತಂ ಜಗತ್ ಸರ್ವಮವಪ್ಲುತಮ್ ।
ಪ್ರಸೀದ ಭಗವನ್ ಸಾಧೋ ವರ ಏಷ ವೃತೋ ಮಯಾ ।
ಉಪಾಯಮನ್ಯಂ ಸಂಪಶ್ಯ ಪ್ರಜಾನಾಂ ಹಿತಕಾಮ್ಯಯಾ ।
ತ್ವದ್ಭವಂ ಹಿ ಜಗನ್ನಾಥ ಜಗತ್ ಸ್ಥಾವರ ಜಂಗಮಮ್ ।

ರುದ್ರದೇವರ ಪ್ರಾರ್ಥನೆಯ ಮೇರೆಗೆ ಕೋಪವನ್ನು ತನ್ನಲ್ಲಿಯೇ ಅಡಗಿಸಿಕೊಂಡನು ಮತ್ತು ಪ್ರಜೆಗಳಿಗೆ ಬೇರೊಂದು ಉಪಾಯದಿಂದ ಜನನ, ಮರಣಗಳ ವ್ಯವಸ್ಥೆ ಮಾಡಿದನು ಬ್ರಹ್ಮದೇವ[೧].

ಅದೇ ವೇಳೆ ಬ್ರಹ್ಮದೇವರ ಸಮಸ್ತ ಇಂದ್ರಿಯಗಳಿಂದ ಒಬ್ಬ ಸ್ತ್ರೀ ಉತ್ಪನ್ನಳಾದಳು. ಆಕೆ ಕೆಂಪು ವಸ್ತ್ರ ಧರಿಸಿದ್ದಳು. ದಿವ್ಯಾಭರಣಭೂಷಿತಳಾಗಿದ್ದಳು. ಆಕೆ ಬ್ರಹ್ಮನ ಅವಯವಗಳಿಂದ ಹೊರಬಂದು ದಕ್ಷಿಣ ದಿಕ್ಕಿಗೆ ಹೊರಟಳು. ಆಕೆಯನ್ನು ಕರೆದ ಬ್ರಹ್ಮನು 'ನಾನೇ ನಿನ್ನನ್ನು ಪ್ರಜಾಸಂಹಾರಕ್ಕಾಗಿ ಹುಟ್ಟಿಸಿದ್ದೇನೆ. ನೀನು ಮೃತ್ಯುದೇವತೆ. ಆದ್ದರಿಂದ ನೀನು ಪ್ರಜೆಗಳಲ್ಲಿ ಯಾವುದೇ ಭೇದ ಮಾಡದೆ ಸಂಹರಿಸು. ಇದು ನನ್ನ ಆದೇಶ. ನಿನಗೆ ಶ್ರೇಯಸ್ಸಾಗಲಿ'[೨] ಎಂದರು.

ಈ ಮಾತುಗಳನ್ನು ಕೇಳಿದ ಮೃತ್ಯುದೇವತೆಯು ಕಣ್ಣೀರು ಸುರಿಸಿದಳು. ಆದರೆ ಬ್ರಹ್ಮದೇವರು ಆಕೆಯ ಕಣ್ಣೀರನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಪ್ರಜೆಗಳ ಹಿತಕ್ಕಾಗಿ ಈ ಆದೇಶ ಮಾಡಿದ್ದೇನೆಂದು ಆಕೆಯನ್ನು ಸಮಾಧಾನ ಪಡಿಸಿದರು[೩].

ಬ್ರಹ್ಮದೇವರ ಮಾತನ್ನು ಕೇಳಿದ ಮೃತ್ಯುದೇವತೆಯು ತನಗಾದ ದುಃಖವನ್ನು ಸಹಿಸುತ್ತಾ ಬಾಗಿದ ಬಳ್ಳಿಯಂತೆ ವಿನಯದಿಂದ ಹೀಗೆ ನುಡಿದಳು 'ನನ್ನ ಮೃದು ಮನಸ್ಸು ಭಯಂಕರವಾದ, ಕ್ರೂರವಾದ ಕರ್ಮಗಳನ್ನು ಮಾಡಲು ಒಪ್ಪುತ್ತಿಲ್ಲ. ಅದರಲ್ಲೂ ನಾನು ಸ್ತ್ರೀ ಸಹಜವಾಗಿ ಅಂತಹ ಕ್ರೂರ ಜೀವಾಪಹರಣದಂತಹ ಕಾರ್ಯ ಮಾಡಲಾರೆ. ಅದು ಅಧರ್ಮವೆಂದು ನನ್ನ ಅನಿಸಿಕೆ. ನಿರಪರಾಧಿಗಳಾದ ಬಾಲ, ವೃದ್ಧ ತರುಣರೇ ಮೊದಲಾದವರನ್ನು ಕೊಲ್ಲಲಾರೆ. ನಿನ್ನನ್ನೂ ಪ್ರಾಂಜಲಳಾಗಿ ಬೇಡುತ್ತೇನೆ, ನನ್ನ ಬಗ್ಗೆ ಪ್ರಸನ್ನನಾಗು. ನನ್ನ ಕಾರ್ಯದಿಂದ ಬದುಕಿದವರು ನನ್ನನ್ನು ಶಪಿಸದಿರುತ್ತಾರೆಯೇ? ಮೃತರ ಬಂಧುಗಳ ಕಣ್ಣೀರು ನನ್ನನ್ನು ಸುಡದೇ ಬಿಟ್ಟೀತೇ?

---

ಪ್ರಸಾದ್ಯ ತ್ವಾಂ ಮಹಾದೇವ ಯಾಚಾಮ್ಯಾವೃತ್ತಿಜಾಃ ಪ್ರಜಾಃ॥ -೯೨/೬-೧೨

೧ ತತೋಽಗ್ನಿಮುಪಸಂಗೃಹ್ಯ ಭಗವಾನ್ ಲೋಕಪೂಜಿತಃ।
ಪ್ರವೃತ್ತಿಂ ಚ ನಿವೃತ್ತಿಂ ಚ ಕಲ್ಪಯಾಮಾಸ ವೈ ಪ್ರಭುಃ।

೨ ಪ್ರಾದುರ್ಬಭೂವ ವಿಶ್ವೇಭ್ಯೋ ಖೇಭ್ಯೋ ನಾರೀ ಮಹಾತ್ಮನಃ।
ಸಾ ವಿನಿಷ್ಪತ್ಯ ವೈ ಖೇಭ್ಯೋ ದಕ್ಷಿಣಾಂ ಆಶ್ರಿತಾ ದಿಶಮ್।
ತಾ ಮಾಹೂಯ ತದಾ ದೇವೋ..................... ।
ಮೃತ್ಯೋ ಇತಿ ............ ಜಹಿ ಚೇಮಾಃ ಪ್ರಜಾ ಇತಿ॥
ತಸ್ಮಾತ್ ಸಂಹರ ಸರ್ವಾಸ್ತ್ವಂ ಪ್ರಜಾ ಸಜಡ ಪಂಡಿತಾಃ।
ಅವಿಶೇಷೇಣ ಚೈವ ತ್ವಂ.................................
ಮಮ ತ್ವಂ ಹಿ ನಿಯೋಗೇನ ಶ್ರೇಯಃ ಪರಮವಾಪ್ಸ್ಯಸಿ॥ -೯೨/೧೫-೨೦

೩ ಪಾಣಿಭ್ಯಾಂ ಚೈವ ಜಗ್ರಾಹ ತಾನ್ಯಶ್ರೂಣಿ ಜನೇಶ್ವರಃ।
ಮಾನವಾನಾಂ ಹಿತಾರ್ಥಾಯ ಯಯಾ ಚೇ ಪುನರೇವ ಚ॥ -೯೨/೨೨

ಆದ್ದರಿಂದ ನನಗೆ ನಿನ್ನ ಅನುಗ್ರಹದಿಂದ ತಪಸ್ಸು ಮಾಡಲು ಇಚ್ಛಿಸುತ್ತೇನೆ. ದಯವಿಟ್ಟು ಅನುಮತಿ ನೀಡು[1].'

ಬ್ರಹ್ಮನು 'ನಾನು ಪ್ರಜಾಸಂಹಾರೋದ್ದೇಶದಿಂದಲೇ ನಿನ್ನನ್ನು ಸೃಷ್ಟಿಸಿದ್ದೇನೆ. ಆದ್ದರಿಂದ ನಾನು ಹೇಳಿದಂತೆ ಕೇಳು' ಎಂದನು. ಬ್ರಹ್ಮನ ಮಾತು ಕೇಳಿದ ಮೃತ್ಯುದೇವತೆ ಏನೂ ಉತ್ತರಿಸದೆ ತಲೆ ಬಾಗಿ ನಿಂತಳು. ಬ್ರಹ್ಮನು ತನ್ನ ಆದೇಶ ಬದಲಿಸಲಿಲ್ಲ. ಆಕೆಯೂ ಸುಮ್ಮನೇ ಇದ್ದಳು. ಬ್ರಹ್ಮ ಮುಗುಳ್ನಗೆ ಬೀರುತ್ತಾ ಲೋಕಗಳನ್ನು ನೋಡಿದ. ಆಗ ಆ ಮೃತ್ಯುಕನ್ಯೆ ಹೊರಟುಹೋಗಿ ಬೇಗ ಗೋತೀರ್ಥದ ಕಡೆ ತಪಸ್ಸನ್ನು ಮಾಡಲು ಹೋದಳು.

೧. ಆ ಕನ್ಯೆ ಒಂದೇ ಪಾದದ ಮೇಲೆ ನಿಂತು ೧೫ ಪದ್ಮ ಸಂವತ್ಸರಗಳವರೆಗೆ ಅನನ್ಯವಾದ ತಪಸ್ಸನ್ನು ಆರಂಭಿಸಿದಳು (ಪದ್ಮ ಎಂದರೆ ೧೦೦೦೦೦೦೦೦೦೦೦೦೦೦೦೦೦೦೦೦೦೦). ಅತ್ಯಂತ ಕಠಿಣವಾದ ಇಂತಹ ತಪಸ್ಸನ್ನು ಮಾಡುತ್ತಿದ್ದ ಆ ದೇವತೆಯ ಬಳಿ ಬ್ರಹ್ಮ ಬಂದು ತಪಸ್ಸನ್ನು ನಿಲ್ಲಿಸಲು ಹೇಳಿದರೂ ಆಕೆ ನಿಲ್ಲಿಸದೇ ಮತ್ತೆ –

೨. ಒಂದೇ ಪಾದದಲ್ಲಿ ನಿಂತು ಏಳು ಪದ್ಮ ಸಂಖ್ಯೆ ಸಂವತ್ಸರಕಾಲ ತಪಸ್ಸನ್ನು ಮಾಡಿದಳು; ೩. ೧೬ ಪದ್ಮ ವರ್ಷಗಳವರೆಗೆ ಮತ್ತೆ ತಪಸ್ಸು ಮಾಡಿದ್ದಲ್ಲದೆ ೧೦೦೦೦ ಪದ್ಮ ವರ್ಷಗಳ ವರೆಗೆ ಮೃಗಗಳೊಡನೆ ಸಂಚರಿಸುತ್ತಾ ಇದ್ದಳು; ೪. ನಂತರ ೮೦೦೦ ವರ್ಷಗಳ ವರೆಗೆ ನೀರಿನಲ್ಲಿದ್ದು ಮೌನವ್ರತ ಮಾಡುತ್ತಾ ತಪಸ್ಸನ್ನು ಮಾಡಿದಳು; ೫. ಆಮೇಲೆ ಆಕೆಯು ಕೌಶಿಕೀ ನದೀ ತೀರಕ್ಕೆ ಹೋಗಿ ಅಲ್ಲಿ ಗಾಳಿ ನೀರುಗಳನ್ನೇ ಆಹಾರವಾಗಿ ಮಾಡಿಕೊಂಡು ಇದ್ದಳು; ೬. ಆಮೇಲೆ ಮಹಾಭಾಗಿನಿಯಾದ ಮೃತ್ಯುದೇವತೆ ಗಂಗಾತೀರ, ಮೇರುಪರ್ವತಕ್ಕೆ ಹೋಗಿ ಪ್ರಜಾಹಿತಕ್ಕಾಗಿ ಮರದ ಕೊರಡಿನಂತೆ ನಿಶ್ಚೇಷ್ಟಿತಳಾಗಿ (ಅಲುಗಾಡದೆ) ತಪಸ್ಸನ್ನು ಮಾಡಿದಳು; ೭. ನಂತರ ಮೇರುಪರ್ವತದಿಂದ ಹಿಮವತ್ ಪರ್ವತದ ಶಿಖರಕ್ಕೆ ಬಂದು ಅಲ್ಲಿ ಕಾಲಿನ ಹೆಬ್ಬೆರಳಿನಲ್ಲಿ ನಿಂತು ನಿಖರ್ವವರ್ಷಗಳವರೆಗೆ (೧೦೦೦೦ ಕೋಟಿ) ತಪಸ್ಸನ್ನು ಮಾಡಿ ನಿರಂತರ ಪ್ರಯತ್ನದಿಂದ ಬ್ರಹ್ಮನನ್ನು ಸಂತೋಷಪಡಿಸಿದಳು. ಬ್ರಹ್ಮದರ್ಶನ ನೀಡಿದ, ಹೇಳಿದ 'ಮಗಳೇ! ಏನಿದು ನಿನ್ನ ಕಾರ್ಯ, ನಾನು ಹೇಳಿದಂತೆ ನಡೆ' ಎಂದ.

ಆದರೆ ಆಕೆ 'ನಾನು ಪ್ರಜೆಗಳ ಪ್ರಾಣಾಪಹಾರ ಮಾಡಲಾರೆ. ಪುನಃ ನಿನ್ನನ್ನು ತಪಸ್ಸನ್ನು ಮಾಡಿಯೇ ಪ್ರಸನ್ನಗೊಳಿಸುತ್ತೇನೆ[2]' ಎಂದಳು.

---

೧ ಪ್ರಿಯಾನ್ ಪುತ್ರಾನ್ ವಯಸ್ಯಾಂಶ್ಚ ಭ್ರಾತೄಂಶ್ಚ ಮಾತೄಃ ಪಿತ್ಯನಪಿ।
ಅಪಧ್ಯಾಸ್ಯಂತಿ ಯದ್ದೇವ ಮೃತಾಂಸ್ತೇಷಾಂ ಬಿಭೇಮ್ಯಹಮ್।
ಕೃಪಣಾಶ್ರುಪರಿಕ್ಲೇದೋ ದಹೇನ್ಮಾಂ ಶಾಶ್ವತೀಃ ಸಮಾಃ॥
ತೇಭ್ಯೋऽಹಂ ಬಲವದ್ಭೀತಾ ಶರಣಂ ತ್ವಾಮುಪಾಗತಾ।
ಇಚ್ಛೇಯಂ ತ್ವತ್ಪ್ರಸಾದಾಚ್ಚ ತಪಸ್ತಪ್ತುಂ ಸುರೇಶ್ವರ॥ – ೯೩/೧-೮

೨ ನ ಹರೇಯಂ ಪ್ರಜಾ ದೇವ ಪುನಸ್ತ್ವಾऽಹಂ ಪ್ರಸಾದಯೇ। – ೯೩/೨೫

ಪ್ರಾಣಾಪಹಾರಕ್ರಿಯೆ ಅಧರ್ಮವೆಂದು ಬಗೆದ ಆಕೆಯನ್ನು ಕುರಿತು ಬ್ರಹ್ಮದೇವನು 'ಎಲೈ ಮೃತ್ಯುದೇವತೆಯೇ! ನೀನು ಮಾಡುವ ಪ್ರಜಾಸಂಹಾರಕಾರ್ಯ ನಿನಗೆ ಅಧರ್ಮಕ್ಕೆ ಕಾರಣವಾಗದು. ನನ್ನ ಮಾತು ಸುಳ್ಳಲ್ಲ. ಸನಾತನ ಧರ್ಮ ನಿನ್ನನ್ನು ಪ್ರವೇಶಿಸುತ್ತದೆ. ನಾವೆಲ್ಲ ದೇವತೆಗಳು ನಿನ್ನ ಹಿತವನ್ನು ನೋಡುತ್ತೇವೆ(ರಕ್ಷಿಸುತ್ತೇವೆ). ನಿನ್ನ ಭಯ ನಿವಾರಣೆಗಾಗಿ ನಿನಗೆ ಮತ್ತೊಂದು ವರವನ್ನು ಕೊಡುತ್ತೇನೆ.

೧. ವ್ಯಾಧಿ ಪೀಡಿತರಾದ ಪ್ರಜೆಗಳ ಪ್ರಾಣಹರಣದ ಬಳಿಕ ನಿನ್ನ ಮೇಲೆ ಯಾವ ದೋಷಾರೋಪ ಮಾಡದೆ, ವ್ಯಾಧಿಯೇ ಮರಣಕ್ಕೆ ಕಾರಣ ಎನ್ನುವರು.

೨. ನೀನು ಪುರುಷ, ಸ್ತ್ರೀ, ನಪುಂಸಕರಲ್ಲಿ ಅವರಂತೆಯೇ ಇರುವೆ.'

ಬ್ರಹ್ಮನು ಇಷ್ಟು ಹೇಳಿದರೂ, ಆಕೆ ನಮಸ್ಕರಿಸಿ, 'ನಾನು ಸಂಹಾರ ಕಾರ್ಯ ಮಾಡೆನು' ಎಂದಳು.

ಬ್ರಹ್ಮ ತನ್ನ ಮಾತಿಗೆ ಬದ್ಧನಾಗಿ 'ನಿನ್ನ ಕಾರ್ಯ ಅಧರ್ಮವಾಗದು. ಹೆದರಬೇಡ. ನಾನು ನಿನ್ನ ಕಣ್ಣೀರನ್ನು ಧರಿಸಿದೆನಷ್ಟೇ. ಅವೇ ವ್ಯಾಧಿಗಳು ಕಾಲ ಬಂದಾಗ ಭಯಂಕರ ವ್ಯಾಧಿಗಳಾಗಿ ಪರಿಣಾಮ ಹೊಂದಿ ಮನುಷ್ಯರನ್ನು ಮೃತ್ಯುವಶ ಮಾಡುತ್ತವೆ. ಪ್ರಾಣಿಗಳ ಅಂತ್ಯಕಾಲ ಬಂದಾಗ ಅವರನ್ನು ಕಾಮಕ್ರೋಧಗಳೊಡನೆ ಸೇರಿಸು. ಇದರಿಂದ ನಿನಗೆ ಧರ್ಮವೇ ಸಂದಾಯವಾಗಿ, ನೀನು ಪಾಪಕ್ಕೆ ಭಾಗಿಯಾಗುವುದಿಲ್ಲ. ಪಾಪಲೇಪವಾಗದು (ಸಂಹಾರಕಾರ್ಯದಲ್ಲಿ ನೀನು ನಿರ್ಲಿಪ್ತಮನೋಭಾವನೆಯಿಂದ) ಆದ್ದರಿಂದ ಸಂಹಾರಕಾರ್ಯ ಮಾಡು[೧].'

ಇಷ್ಟು ಹೇಳಿದ ಮೇಲೆ ಬ್ರಹ್ಮಶಾಪಕ್ಕೆ ಹೆದರಿ ಮೃತ್ಯುದೇವತೆ ಹಾಗೆಯೇ ಆಗಲಿ ಎಂದು ಒಪ್ಪಿದಳು. ಹೀಗೆ ಬ್ರಹ್ಮಾಜ್ಞೆಯಂತೆ ಮೃತ್ಯುದೇವತೆಯು ಪ್ರಜೆಗಳ ಅಂತ್ಯಕಾಲ ಬಂದಾಗ ಅವರಿಗೆ ಕಾಮಕ್ರೋಧವನ್ನು ಸೇರಿಸಿ, ಮೋಹಪರವಶರನ್ನಾಗಿ ಮಾಡಿ ಸಂಹರಿಸುವಳು.

ಹೀಗೆ ನಾರದರು ಅಕಂಪನರಾಜನಿಗೆ ಬ್ರಹ್ಮನ ಆದೇಶವನ್ನು ಹೇಳಿ 'ನೀನು ಮಗನ ಮರಣಕ್ಕೆ ದುಃಖಿಸಬೇಡ. ಆಯುಷ್ಯಮುಗಿದ ಮೇಲೆ ಮೃತ್ಯು ಬರುತ್ತದೆ. ಅದುವೇ ವಿಧಿನಿರ್ಣಯ, ಯೋಚಿಸಿ ದುಃಖಿಸಬೇಡ ಎಂದರು.

ಎಲ್ಲ ದೇವತೆಗಳು ಜೀವರು ನಿಧನರಾದಾಗ ದೇಹದಿಂದ ಹೊರಟು ಹೋಗಿ ಮತ್ತೆ ಜನ್ಮಾಂತರ ಬಂದಾಗ ಜೀವನನ್ನು ಪ್ರವೇಶಿಸುತ್ತಾರೆ. ವಾಯುದೇವರ ಪಾತ್ರ, ಕಾರ್ಯ ಇಲ್ಲಿ ವೈಶಿಷ್ಟ್ಯಪೂರ್ಣವಾಗಿದೆ.

---

೧ ಯಾನಶ್ರುಬಿಂದೂನ್ ಪತಿತಾನಪಶ್ಯಂ ಯೇ ಪಾಣಿಭ್ಯಾಂ ಧಾರಿತಾಸ್ತೇ ಪುರಸ್ತಾತ್ ।
ತೇ ವ್ಯಾಧಯೋ ಮಾನವಾನ್ ಘೋರರೂಪಾಃ ಪ್ರಾಪ್ತೇ ಕಾಲೇ ಪೀಡಯಿಷ್ಯಂತಿ ಮೃತ್ಯೋ ॥
- ೯೩/೩೪

ಸರ್ವೇಷಾಂ ತ್ವಂ ಪ್ರಾಣಮಂತಕಾಲೇ ಕಾಮಕ್ರೋಧೌ ಸಹಿತೌ ಯೋಜಯೇಥಾಃ ।
ಏವಂ ಧರ್ಮಸ್ತ್ವಾಮುಪೈಷ್ಯತ್ಯಮೇಯೋ ನ ಚಾಧರ್ಮಂ ಲಪ್ಸ್ಯಸೇ ತುಲ್ಯವೃತ್ತಿಃ ॥ - ೯೩/೩೫

ವಾಯುದೇವರು ಭಯಂಕರರು(ಯಮಭಟರಿಗಿಂತಲೂ ಹೆಚ್ಚಿನ). ನಾದ ಧ್ವನಿಯುಳ್ಳವರು. ಮಹಾಬಲಿಷ್ಠರೂ ಹೌದು. ಎಲ್ಲ ಪ್ರಾಣಿಗಳ ಶ್ವಾಸಕ್ಕೆ ಅಭಿಮಾನಿಗಳೂ, ಚೇಷ್ಟಾಪ್ರದರು, ಚಟುವಟಿಕೆಗಳಿಗೆ ಮುಖ್ಯಪ್ರೇರಕರು. ಜೀವರ ದೇಹದ ಪತನವಾಗಲು ವಾಯುದೇವರು ಇಲ್ಲದಿರುವುದೇ ಕಾರಣ (ವಾಯುದೇವರು ಜೀವನಿಂದ ಹೊರಗೆ ಹೋದ ಕೂಡಲೇ ದೇಹ ನಿಶ್ಚೇಷ್ಟಿತವಾಗುತ್ತದೆ). ಮುಮುಕ್ಷುಗಳಿಗೆ ಕೊನೆಯ ದೇಹ(ಚರಮ) ಬಿದ್ದಾಗ, ಅವರು ಮತ್ತೆ ಸಂಸಾರಕ್ಕೆ ಬರದಂತೆ ವಾಯುದೇವರೆ ಅನುಗ್ರಹಿಸುತ್ತಾರೆ. ಆದ್ದರಿಂದ ವಾಯುದೇವರೇ ಎಲ್ಲ ದೇವತೆಗಳಲ್ಲಿ ಉತ್ತಮರು[೧].

ರಾಜನ್! ಮನುಷ್ಯರು ಮಾತ್ರವಲ್ಲ, ದೇವತೆಗಳಿಗೂ ಮೃತ್ಯು ಎಂಬ ಸಂಜ್ಞೆ(ಹೆಸರಿದೆ). ಕಾರಣ ಅವರೂ ಒಂದಲ್ಲ ಒಂದು ಕಾಲ ದೇಹ ಬಿಡುವವರೇ. ಹಾಗೆಯೇ ಮರ್ತ್ಯರೂ ಕೂಡಾ, ಸ್ವರ್ಗಕ್ಕೆ ಹೋಗುವುದರಿಂದ 'ದೇವ' ಎಂಬ ಸಂಜ್ಞೆವುಳ್ಳವರಾಗಿದ್ದಾರೆ. ಆದ್ದರಿಂದ ನಿನ್ನ ಪುತ್ರ ಯುದ್ಧದಲ್ಲಿ ಮೃತನಾಗಿ ಸ್ವರ್ಗಕ್ಕೆ ಹೋಗಿದ್ದಾನೆ, ಆನಂದವಾಗಿದ್ದಾನೆ. ಆದ್ದರಿಂದ ದುಃಖಿಸಬೇಡ.

ಹೀಗೆ ಬ್ರಹ್ಮದೇವರಿಂದ ಸೃಷ್ಟಿಯಾದ ಮೃತ್ಯುವು ಕಾಲ ಬಂದಾಗ ಪ್ರಜಾಸಂಹಾರ ಮಾಡುತ್ತಾಳೆ. ಆಕೆಯ ಕಣ್ಣೀರಿನ ಬಿಂದುಗಳೇ ವ್ಯಾಧಿಗಳು. ವ್ಯಾಧಿಗಳೂ ಕಾಲ ಬಂದಾಗ ಮನುಷ್ಯರಿಗೆ ಬಂದು, ಅವರನ್ನು ಕೊಲ್ಲುತ್ತವೆ.

## ಸಂದೇಶಗಳು-ವಿವರಣೆಗಳು

೧. ಇದೊಂದು ಸಂಕೀರ್ಣ ವಿಷಯದ ಸಂವಾದ. ಮೃತ್ಯುವಿನ ಸ್ವರೂಪ, ಅದು ಹೇಗೆ ಪ್ರಾಣಿಗಳಿಗೆ ಬರುತ್ತದೆ ಎಂಬುದೇ ಮೊದಲಾದ ವಿಷಯಗಳು ಬಂದಿವೆ.

೨. ಸ್ವಯಂ ಮೃತ್ಯುದೇವತೆಯಾಗಿ ಆದೇಶ ಹೊಂದಿದ ದೇವತೆಯೇ ಆ ಕಾರ್ಯ ಮಾಡಲು ಹಿಂಜರಿದಳು. ಆದ್ದರಿಂದ ಕರ್ತವ್ಯವಾದರೂ, ಅದು ಪರಹಿಂಸಾಕರವಾದುದನ್ನು ಮಾಡಲು ಯೋಚನೆ ಮಾಡಬೇಕೆಂಬ ಸಂದೇಶ ಇಲ್ಲಿದೆ. ಸುಖಕಾರಕ, ಪರೋಪಕಾರಕ ಕಾರ್ಯ ಉಭಯತರಿಗೂ ಸಂತೋಷದಾಯಕ. ಶಿಕ್ಷೆ ಜಾರಿಗೊಳಿಸುವ ಕಾರ್ಯ ಅತ್ಯಂತ ಕ್ಲೇಶದಾಯಕ.

---

೧ ವಾಯುರ್ಭೀಮೋ ಭೀಮನಾದೋ ಮಹೌಜಾಃ
ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ।
ಅನಾವೃತ್ತಿ(ನಾನಾವೃತ್ತಿ)ರ್ದೇಹಿನಾಂ ದೇಹಪಾತೇ
ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ॥ - ೯೩/೩೯
ವಿ.ಸೂ.: ಈ ಶ್ಲೋಕವು ವಾಯುದೇವರ ಜೀವೋತ್ತಮತ್ವವನ್ನು ಅತ್ಯಂತ ಸ್ಪಷ್ಟವಾಗಿ ತಿಳಿಸುತ್ತದೆ.

೩. ಅಲ್ಲೂ ವಿಧ್ಯುಕ್ತ ಕರ್ತವ್ಯಪ್ರಜ್ಞೆ ತಿಳಿದು ಮಾಡಬೇಕೆಂಬುದೇ ಬ್ರಹ್ಮನ ಆದೇಶ. ಆಗಲೇ ಕರ್ತವ್ಯ ಪರಿಪಾಲಕರಿಗೆ ಅಧರ್ಮ, ಪಾಪಪ್ರಸಕ್ತಿ ಬರದು. ಪಾಪಲೇಪವಾಗದು. ಆದ್ದರಿಂದಲೇ ಲೋಕದಲ್ಲೂ ಮರಣದಂಡನೆಯನ್ನು ವಿಧಿಸಿದ ನ್ಯಾಯಾಧೀಶರಾಗಲೀ, ಅದನ್ನು ಕಾರ್ಯಾಚರಣೆ ಮಾಡುವ ಸಿಬ್ಬಂದಿಗೂ ಯಾವುದೇ ದೋಷವಿಲ್ಲವೆಂಬುದು ಕಂಡಿದೆ. ಅಲ್ಲೂ ಯಾವುದೇ ವೈಯಕ್ತಿಕ ಅಭಿನಿವೇಶ, ರಾಗದ್ವೇಷಗಳಿರಕೂಡದು ಎಂದೇ ಶಾಸಕಾಂಗ ನಿರೀಕ್ಷಿಸುತ್ತದೆ.

ಶ್ರೀಕೃಷ್ಣನೂ[೧] ಗೀತೆಯಲ್ಲಿ ಇದನ್ನೇ ಹೇಳುತ್ತಾನೆ ಅರ್ಜುನನಿಗೆ. ನಿಷ್ಕಾಮಕರ್ಮದ ಮೂಲ ತತ್ತ್ವವೇ ಇದು. ಇದೇ ಮೋಕ್ಷಕ್ಕೆ ಸಾಧಕವು. ಮೃತ್ಯುದೇವತೆಯು ತಾನೇ ಸಂಹಾರಕ್ಕೆ ಕಾರಣ ಎಂದು ಭಾವಿಸಿ, ಮೊದಲು ಒಪ್ಪದೇ ಇದ್ದರೂ ಕೊನೆಗೆ ಒಪ್ಪಿದಳು.

೪. ಆದ್ದರಿಂದಲೇ ಗೀತೆಯಲ್ಲಿ –

**ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥** - ೨/೨೭

– ಇತ್ಯಾದಿಯಾಗಿ ಬಂದಿದೆ.

೫. ಜೀವರ ದೇಹತ್ಯಾಗ, ಪುನರ್ಜನ್ಮ ಪ್ರಕ್ರಿಯೆಯಲ್ಲಿ ಮುಖ್ಯಪ್ರಾಣನ ಪಾತ್ರ ಇಲ್ಲಿ ಸ್ಪಷ್ಟವಾಗಿ ಬಂದಿದೆ. ವಾಯುದೇವರು ಜನನದಿಂದ ಮರಣದವರೆಗೂ ಮುಖ್ಯ, ಅವರೇ ಜೀವೋತ್ತಮರೆಂಬ ತತ್ತ್ವಸಂದೇಶ ಇಲ್ಲಿ ಸ್ಪಷ್ಟವಾಗಿ ಬಂದಿದೆ.

೬. ಬ್ರಹ್ಮದೇವರು ಮೃತ್ಯುದೇವತೆಯನ್ನು ತನ್ನ ಕಾರ್ಯದಲ್ಲಿ ನಿಯೋಜಿಸಲು ತುಂಬಾ ತಾಳ್ಮೆಯಿಂದ ವರ್ತಿಸಿದ ರೀತಿ ಎಲ್ಲ ಜೀವರಿಗೂ ಮಾದರಿ. ಬೇರೆಯವರಿಗೆ ಕರ್ತವ್ಯ ಬೋಧಿಸುವಾಗ ಅದೆಷ್ಟು ತಾಳ್ಮೆಯಿಂದಿರಬೇಕೆಂದು ಬ್ರಹ್ಮದೇವರ ವರ್ತನೆ ತಿಳಿಸುತ್ತದೆ.

೭. ಮೃತ್ಯುದೇವತೆ ಅದಕ್ಕಾಗಿ ಲಕ್ಷಗಟ್ಟಲೆ ವರ್ಷ ತಪಸ್ಸು ಮಾಡಿ ಬ್ರಹ್ಮದೇವರನ್ನು ಸಂತೋಷಪಡಿಸಿದ್ದು ಜೀವರು ಹೇಗೆ ವರ್ತಿಸಬೇಕೆನ್ನಲು ಆದರ್ಶವಾಗಿದೆ. ಇತ್ಯಾದಿ..

*****

೧ ಯಸ್ಯ ನಾಹಂಕೃತೋ ಭಾವಃ ಬುದ್ಧಿರ್ಯಸ್ಯ ನ ಲಿಪ್ಯತೇ।
ಹತ್ವಾಽಪಿ ಸ ಇಮಾನ್ ಲೋಕಾನ್ ನ ಹಂತಿ ನ ನಿಬಧ್ಯತೇ ॥ - ೧೮/೧೭

## ೯೯. ಜಾಜಲಿ -ತುಲಾಧಾರರ ಸಂವಾದ

### ಜಾಜಲಿಯ ಘೋರತಪಸ್ಸು-ಅಹಂಕಾರ

ಧರ್ಮರಾಜನು ಹಿಂದಿನ ಅಧ್ಯಾಯದಲ್ಲಿ ಧರ್ಮದ ಲಕ್ಷಣ, ಪ್ರಾಮಾಣ್ಯ, ದೇಶಕಾಲಭೇದಗಳಿಂದ ಧರ್ಮಾಚರಣೆಯ ವೈವಿಧ್ಯ ಮೊದಲಾದವುಗಳ ಬಗ್ಗೆ ಪ್ರಶ್ನಿಸಿದ್ದನು. ಅದಕ್ಕೆ ಉತ್ತರರೂಪವಾಗಿ ನಾಲ್ಕು ಅಧ್ಯಾಯಗಳಿಂದ (೯೬-೯೯) ಜಾಜಲಿ ಎಂಬ ಬ್ರಾಹ್ಮಣನಿಗೆ ತುಲಾಧಾರನೆಂಬ ವೈಶ್ಯನು ಮಾಡಿದ ಉಪದೇಶರೂಪ ಇತಿಹಾಸವನ್ನು ಭೀಷ್ಮರು ಹೇಳುತ್ತಾರೆ. ತುಲಾಧಾರನ ವಾಕ್ಯಗಳು ಧರ್ಮದ ವಿಷಯದಲ್ಲಿ ತುಂಬಾ ಆದರ್ಶವಾಗಿವೆ, ಆಚಾರಕ್ಕೆ ಯೋಗ್ಯವಾಗಿವೆ.

ಹಿಂದೆ **'ಜಾಜಲಿ'** ಎಂಬ ಬ್ರಾಹ್ಮಣ ವಾನಪ್ರಸ್ಥ ಆಶ್ರಮವನ್ನು ಪರಿಪಾಲಿಸುತ್ತಾ ಸಮುದ್ರತೀರದಲ್ಲಿ ಭಯಂಕರ ತಪಸ್ಸನ್ನು ಆಚರಿಸುತ್ತಿದ್ದನು. ನಾರುಮಡಿಯುಟ್ಟು ನಿಯತಾಹಾರನಾಗಿ, ಜಟಾಧಾರಿಯಾಗಿ, ಮೈಮೇಲೆ ಉಂಟಾಗುತ್ತಿದ್ದ ಕೊಳೆಯನ್ನು ತೊಳೆಯದೇ, ತೇಜಸ್ವಿಯಾದ, ಅವನು ಸಮುದ್ರದಲ್ಲಿಯೇ ಇದ್ದು , ಸಮಸ್ತ ಲೊಕವನ್ನು ನೋಡುತ್ತಾ ಸಂಚಾರ ಮಾಡಿದ. ಸಾಗರದ ವರೆಗೆ ವ್ಯಾಪಿಸಿದ ಕಾಡು, ವನಗಳಿಂದ ಭೂಮಿಯನ್ನೆಲ್ಲ ನೋಡಿದ ಮುನಿ 'ಈ ಸ್ಥಾವರ-ಜಂಗಮ ಪ್ರಪಂಚದಲ್ಲಿ ನನ್ನ ಸಮಾನರಾರೂ ಇಲ್ಲ. ನಾನು ವಾಯುಬಂಧನಮಾಡಿಕೊಂಡು ನೀರಿನ ಮೇಲೆ, ನೀರಿನಲ್ಲಿ ಮುಳುಗದೇ ನಡೆಯಬಲ್ಲೆ ಎಂದು ಬೀಗಿದ. ಹೀಗೆ ನೀರಿನ ಮಧ್ಯದಲ್ಲಿ ವಾಸ ಮಾಡುತ್ತಾ ರಾಕ್ಷಸರಿಗೆ ಕಾಣದಂತೆ ಹೇಳಿದ ಕೂಡಲೇ ರಾಕ್ಷಸರು, ಪಿಶಾಚಿಗಳು 'ಹೀಗೆ ಹೇಳುವುದು ಸರಿಯಲ್ಲ, ಕಾಶೀನಗರದಲ್ಲಿ ವೈಶ್ಯವೃತ್ತಿಯಲ್ಲಿರುವ ತುಲಾಧಾರನೆಂಬ ಮಹಾಕೀರ್ತಿವಂತನು ನಿನ್ನಂತೆ ಅಹಂಕಾರದಿಂದ ಮಾತನಾಡುವುದಿಲ್ಲ' ಎಂದರು[೧]. ಇದನ್ನು ಕೇಳಿದ ಜಾಜಲಿ ಹಾಗಾದರೆ

---

೧ ನ ಮಯಾ ಸದೃಶೋಽಸ್ತೀಹ ಲೋಕೇ ಸ್ಥಾವರಜಂಗಮೇ।
ಅಪ್ಸು ವೈಹಾಯಸಂ ಗಚ್ಛೇನ್ಮಯಾ ಯೋಽನ್ಯಃ ಸಹೇತಿ ವೈ॥
ಸದೃಶ್ಯಮಾನೋ(ಅದೃಶ್ಯಮಾನೋ) ರಕ್ಷೋಭಿರ್ಜಲಮಧ್ಯೇಽವದತ್ತತಃ।
ಅಬ್ರುವಂಶ್ಚ ಪಿಶಾಚಾಸ್ತಂ ನೈವಂ ತ್ವಂ ವಕ್ತುಮರ್ಹಸಿ॥
ತುಲಾಧಾರೋ ವಣಿಗ್ಧರ್ಮಾ ವಾರಾಣಸ್ಯಾಂ ಮಹಾಯಶಾಃ।
ಸೋಽಪ್ಯೇವಂ ನಾರ್ಹತೇ ವಕ್ತುಂ ಯಥಾ ತ್ವಂ ದ್ವಿಜಸತ್ತಮ॥
ಇತ್ಯುಕ್ತೋ ಜಾಜಲಿರ್ಭೂತೈಃ ಪ್ರತ್ಯುವಾಚ ಮಹಾತಪಾಃ।

ನಾನು ಆ ತುಲಾಧಾರನನ್ನು ನೋಡುವೆ ಎಂದಾಗ, ಆ ರಾಕ್ಷಸರು ಅವನನ್ನು ಸಾಗರದಿಂದ ಮೇಲೆತ್ತಿ, ಒಂದು ಕಡೆ ನಿಲ್ಲಿಸಿ, 'ಇಲ್ಲಿಂದ ನೀನು ಕಾಶಿಗೆ ಹೋಗಬಹುದು' ಎಂದರು. ಅದರಂತೆ ಸಾಗಿದ ಜಾಜಲಿ ಕಾಶಿಗೆ ಹೊಗಿ ತುಲಾಧಾರನನ್ನು ಕಂಡು ಹೀಗೆ ನುಡಿದನು.

ಜಾಜಲಿಯ ನುಡಿಗಳು ಅಹಂಕಾರದಿಂದ ಕೂಡಿದ್ದರೂ, ಧರ್ಮರಾಜನು ಭೀಷ್ಮರನ್ನು ಕುರಿತು, ಅವನ ಹಿಂದಿನ ಸಾಧನೆ, ಸಿದ್ಧಿಯ ಬಗ್ಗೆ ಪ್ರಶ್ನಿಸಲು[1] ಭೀಷ್ಮರು ಜಾಜಲಿಯ ಮಹಾತಪಸ್ಸಿನ ಹಿನ್ನೆಲೆ, ಅವನ ಇತರ ಸದ್ಗುಣಗಳನ್ನು ವರ್ಣಿಸಿದರು.

ಜಾಜಲಿ ನಿತ್ಯ ಸ್ನಾನ, ಸಂಧ್ಯಾವಂದನೆ, ಸ್ವಾಧ್ಯಾಯ(ವೇದಾಧ್ಯಯನ), ಅಗ್ನಿಹೋತ್ರ, ವಾನಪ್ರಸ್ಥಧರ್ಮ ಪರಿಪಾಲನೆ ಮಾಡುತ್ತಾ ಬ್ರಹ್ಮತೇಜಸ್ಸಿನಿಂದ ಕೂಡಿದ್ದ. ಸತ್ಯನಿಷ್ಠೆಯಿಂದ ಇದ್ದು ಗ್ರೀಷ್ಮ ವರ್ಷ, ಶರತ್, ಹೇಮಂತ - ಹೀಗೆ ಎಲ್ಲ ಋತುಗಳಲ್ಲಿಯೂ ಅವನು ಭೂಮಿ, ಜಲಗಳನ್ನೇ ಆಶ್ರಯಿಸಿದ್ದಲ್ಲದೇ, ಬೇರೆ ಯಾವ ಆಸರೆಯಲ್ಲಿ (ಆಶ್ರಮ ಮೊದಲಾದ) ವಾಸಿಸುತ್ತಿರಲಿಲ್ಲ. ಮಳೆ, ಚಳಿ, ಬಿಸಿಲುಗಳಿಗೆ ತನ್ನ ಶರೀರವನ್ನು ಒಡ್ಡಿ, ಭೂಮಿಯ ಮೇಲೆಯೇ ಮಗಲುತ್ತಿದ್ದನೇ ಹೊರತು ಸುಖವನ್ನೆಂದೂ ಬಯಸಲಿಲ್ಲ. ಇಷ್ಟು ಸಾಧಿಸಿದರೂ, ಆತನಿಗೆ ತನ್ನ ಧರ್ಮಾಚರಣೆ, ತಪಸ್ಸಿನ ಬಗ್ಗೆ ಅಹಂಕಾರ ಸುಳಿಯಲಿಲ್ಲ. ಶರೀರ ಮಲಿನವಾಯಿತು, ತಲೆಗೂದಲು ಜಟೆಯಾದವು, ಆತನ ಆಹಾರ ಗಾಳಿಯಾಗಿತ್ತು, ತಪಸ್ಸು ಮಾಡುತ್ತಾ ಸ್ಥಾಣುವಿನಂತೆ (ಸ್ಥಂಭ-ಕಟ್ಟಿಗೆ) ನಿಂತಸ್ಥಳವನ್ನು ಬಿಟ್ಟು ಚಲಿಸುತ್ತಿದ್ದಿಲ್ಲ. ಹೀಗೆ ಕಳೆದ ಸಮಯ ಎಷ್ಟೋ ಆ ಭಗವಂತನಿಗೇ ಗೊತ್ತು[2].

ಹೀಗೆ ಮೋಟು ಮರದಂತೆ ನಿಂತಿದ್ದ ಆತನ ಜಟೆಗಟ್ಟಿದ ತಲೆಯ ಮೇಲೆ ಗುಬ್ಬಚ್ಚಿ ದಂಪತಿಗಳು (ಕುಲಿಂಗ ಶಕುನಗಳು) ಹುಲ್ಲು, ಕಡ್ಡಿ ಮೊದಲಾದವುಗಳಿಂದ ಮನೆ ಮಾಡಿಕೊಂಡು ವಾಸಿಸಲಾರಂಭಿಸಿದವು. ತಪಸ್ವೀ ಜಾಜಲಿ ಈ ಬಗ್ಗೆ ಉಪೇಕ್ಷೆ ಮಾಡಿದ. ಅದರಿಂದ ಗುಬ್ಬಚ್ಚಿಗಳಿಗೆ ಸುಖವಾಗಿ ವಾಸವಾಗಿರಲು ಅನುಕೂಲವೇ ಆಯಿತು. ಹೀಗೆ ಮಳೆಗಾಲ ಮುಗಿದು ಶರತ್ಕಾಲದಲ್ಲಿ ಪಕ್ಷಿ ದಂಪತಿಗಳಿಗೆ ಸಂತಾನವಾಯಿತು. ಮೊಟ್ಟೆಗಳೂ ಇಟ್ಟವು ಗುಬ್ಬಚ್ಚಿಗಳು. ಆ ಪಕ್ಷಿಗಳು ಹಗಲೆಲ್ಲ ಅಲ್ಲಲ್ಲಿ ಹಾರಾಡಿ ಸಾಯಂಕಾರ ಜಟೆ ಗೂಡಿನಲ್ಲಿ ವಾಸ ಮಾಡುತ್ತಿದ್ದವು. ಇದೆಲ್ಲವನ್ನೂ ಗಮನಿಸಿದ ಜಾಜಲಿ ಭೂತದಯಾಪರನಾಗಿ

---

ಪಶ್ಯೇಯಂ ತಮಹಂ ಮಹಾಪ್ರಾಜ್ಞಂ ತುಲಾಧಾರಂ ಯಶಸ್ವಿನಮ್ । ೯೬/೬-೯

೧ ಕಿಂ ಕೃತಂ ಸುಕೃತಂ ಕರ್ಮ ತಾತ ಜಾಜಲಿನಾ ಪುರಾ ।
ಯೇನ ಸಿದ್ಧಿಂ ಪರಾಂ ಪ್ರಾಪ್ತಸ್ತನ್ನೋ ವ್ಯಾಖ್ಯಾತುಮರ್ಹತಿ ॥ - ೯೬/೧೨

೨ ಸತ್ಯೇ ತಪಸಿ ತಿಷ್ಠನ್ ಸ ನ ಚ ಧರ್ಮಮವೈಕ್ಷತ ।
ವರ್ಷಾಸ್ವಾಕಾಶಶಾಯೀ ಸ ಹೇಮಂತೇ ಜಲಸಂಶ್ರಯಃ ॥
ವಾತಾತಪಸಹೋ ಗ್ರೀಷ್ಮೇ ನ ಚ ಧರ್ಮಮವಿಂದತ ।
ದುಃಖಶಯ್ಯಾಶ್ಚ ವಿವಿಧಾ ಭೂಮೌ ಚ ಪರಿವರ್ತನಮ್ ॥

ಮೊದಲಿನಂತೆ ಸ್ಥಿರವಾಗಿಯೇ ಇದ್ದು ತಪಸ್ಸು ಮಾಡುತ್ತಿದ್ದ. ಮೊಟ್ಟೆಗಳು ಒಡೆದವು, ಮರಿಗಳು ಬಂದವು. ಆದರೂ ಜಾಜಲಿ ಅಲುಗಾಡದೆ ಪಕ್ಷಿಗಳನ್ನು ರಕ್ಷಿಸಲು ಸ್ಥಿರವಾಗಿಯೇ ಇದ್ದನು. ಮರಿಗಳ ರೆಕ್ಕೆ ಬಲಿಯಲು ಅವೂ ಹಾರಾಡುತ್ತ ತನ್ನ ಬಳಿ ಇರುವುದನ್ನು ಕಂಡು ಜಾಜಲಿ ತುಂಬಾ ಆನಂದತುಂದಿಲನಾದನು. ಇದನ್ನು ಗಮನಿಸಿದ ಗುಬ್ಬಚ್ಚಿಗಳು ಕೂಡಾ ಭಯರಹಿತವಾಗಿ ಮಕ್ಕಳೊಡನೆ ಅವನ ತಲೆಯ ಮೇಲೆ ವಾಸಮಾಡುತ್ತಿದ್ದವು. ಮರಿಹಕ್ಕಿಗಳೂ ಸ್ವತಂತ್ರವಾಗಿ ಆಹಾರಕ್ಕಾಗಿ ಹೊರಹೋಗಿ ಸಾಯಂಕಾಲ ವಾಪಸು ಬಂದು ಆ ಜಟಾಗೂಡಿನಲ್ಲಿಯೇ ಇರುತ್ತಿದ್ದವು. ಒಮ್ಮೆ ೫ ದಿನ ಹೋದ ಮರಿ ಹಕ್ಕಿಗಳು ೬ನೇ ದಿನ ಬಂದರೂ ಜಾಜಲಿ ಅಲುಗಾಡಲಿಲ್ಲ. ನಂತರ ಇವು ಬಹಳ ದಿನಗಳ ಕಾಲ ಹೊರಗೇ ಹೋದವು. ಮತ್ತೊಮ್ಮೆ ಒಂದು ತಿಂಗಳು ಕಾಲ ವಾಪಸು ಬರಲಿಲ್ಲ. ಜಾಜಲಿ ಆ ಸ್ಥಳ ಬಿಟ್ಟು ಬೇರೆ ಕಡೆ ನಡೆದ[೧].

ಹೀಗೆ ತಾನು ಪಕ್ಷಿಗಳ ಸಲುವಾಗಿ ಎಷ್ಟು ಸ್ಥೈರ್ಯನಾಗಿದ್ದೆನಲ್ಲ ಎಂದು ವಿಚಾರ ಮಾಡಿದ ಜಾಜಲಿ ತಾನು ಕೃತಾರ್ಥನೆಂದೂ, ತನ್ನ ತಪಸ್ಸು ಸಿದ್ಧಿಸಿದೆ ಎಂದೂ ಭ್ರಮಿಸಿ, ಅಹಂಕಾರಕ್ಕೆ ಒಳಗಾದ. ತನ್ನ ಧರ್ಮ ಬುದ್ಧಿಗೆ ತಾನೇ ಸಂತೋಷಿಸಿದ. ನಂತರ ನದೀಸ್ನಾನ, ತರ್ಪಣ, ಅಗ್ನಿಕಾರ್ಯ, ಸೂರ್ಯೋಪಸ್ಥಾನಗಳನ್ನು ಮಾಡಿಕೊಂಡ. ತನ್ನ ಬಾಹುಗಳನ್ನು ತಾನೇ ತಟ್ಟಿ ಕೊಂಡು ಪಕ್ಷಿಗಳಿಗೆ ತಾನು ನೀಡಿದ ಆಶ್ರಯದಿಂದ ತಾನೇ ಮಹಾಧಾರ್ಮಿಕನೆಂದು ಜೋರಾಗಿ ಕೂಗಿದನು[೨]. ಆಗ ಆಕಾಶದಲ್ಲಿ ವಾಣಿಯೊಂದು ಕೇಳಿ ಬಂದಿತು[೩]. 'ನೀನು ಧರ್ಮದಿಂದ ತುಲಾಧಾರನಿಗೆ ಸಮಾನನಲ್ಲ'. ಅದನ್ನು ಜಾಜಲಿ ಕೇಳಿದ 'ಅವನು ವಾರಾಣಸಿಯಲ್ಲಿದ್ದಾನೆ. ಅವನು ನಿನ್ನಂತೆ ಅಹಂಕಾರದ ಮಾತುಗಳನ್ನು ಆಡುವುದಿಲ್ಲ.'

ಈ ಮಾತುಗಳನ್ನು ಕೇಳಿದ ಜಾಜಲಿ ಕ್ರೋಧವಶನಾಗಿ ತುಲಾಧಾರನನ್ನು ನೋಡಲು ವಾರಣಸೀ ಕಡೆಗೆ ಹೋದನು. ಮತ್ತು ಅಂಗಡಿಯಲ್ಲಿ ತುಲಾಧಾರನು ಮಾರಾಟ ಮಾಡುತ್ತಿದ್ದ

---

೧ ಸ ತೌ ದಯಾವಾನ್ ವಿಪ್ರರ್ಷಿರುಪಪ್ರೈಕ್ಷತ ದಂಪತೀ।
ಕುರ್ವಾಣಂ ನೀಡಕಂ ತತ್ರ ಜಟಾಸು ತೃಣತಂತುಭಿಃ॥
ಸ ರಕ್ಷಮಾಣಸ್ತ್ವಂಡಾನಿ ಕುಲಿಂಗಾನಾಂ ಯತವ್ರತಃ।
ತತಸ್ತು ಕಾಲಸಮಯೇ ಬಭೂವುಸ್ತೇಽಥ ಪಕ್ಷಿಣಃ।
ಬಭೂವ ಪರಮಪ್ರೀತಃ ತದಾ ಮತಿಮತಾಂ ವರಃ।
ಕದಾಚಿನ್ಮಾಸಮಾತ್ರೇಣ ಸಮುತ್ಪತ್ಯ ವಿಹಂಗಮಾಃ॥

೨ ನೈವಾಗಚ್ಛಂಸ್ತತೋ ರಾಜನ್ ಪ್ರಾತಿಷ್ಠತ ಸ ಜಾಜಲಿಃ।
ಸಿದ್ಧೋಽಸ್ಮೀತಿ ಮತಿಂ ಚಕ್ರೇ ತತಸ್ತಂ ಮಾನ ಆವಿಶತ್।
ಸಂಭಾವ್ಯ ಚಟಕಾನ್ಮೂರ್ಧ್ನಿ ಜಾಜಲಿರ್ಜಪತಾಂ ವರಃ।
ಆಸ್ಫೋಟಯತ್ತದಾಕಾಶೇ ಧರ್ಮಃ ಪ್ರಾಪ್ತೋ ಮಯೇತಿ ವೈ।

೩. ಅಥಾಂತರಿಕ್ಷೇ ವಾಗಾಸ್ತೀತ್ತಾಂ ಸ ಶುಶ್ರಾವ ಜಾಜಲಿಃ।
ಧರ್ಮೇಣ ನ ಸಮಸ್ತ್ವಂ ವೈ ತುಲಾಧಾರಸ್ಯ ಜಾಜಲೇ॥.....

ದೃಶ್ಯವನ್ನು ಕಂಡನು[೧]. ಅವನು ಹಣವನ್ನು ಬಡ್ಡಿಗೆ ಕೊಟ್ಟು ಜೀವನ ಮಾಡುವ ವೈಶ್ಯನಾಗಿದ್ದನು. ಬ್ರಾಹ್ಮಣ ಬಂದುದನ್ನು ಗಮನಿಸಿದ ತುಲಾಧಾರ ಸಂತೋಷದಿಂದ ಎದ್ದು ನಿಂತು ಸ್ವಾಗತಿಸಿ, ಸತ್ಕರಿಸಿದನು. ಅಲ್ಲದೆ ಜಾಜಲಿಯು ಬರುತ್ತಿರುವ ವಿಷಯ ತನಗೆ ಮೊದಲೇ ತಿಳಿದಿತ್ತೆಂದು ಹೇಳುತ್ತಾ ಜಾಜಲಿಯ ಪೂರ್ವವೃತ್ತಾಂತ, ತಪಃಸಿದ್ಧಿಯ ಬಗ್ಗೆ ನೋಡಿದವನಂತೆ ಹೇಳಿ ಬಿಟ್ಟನು. 'ನಿನಗೆ ನಾನು ಏನನ್ನು ಮಾಡಲಿ ತಿಳಿಸು' ಎಂದನು[೨].

ತುಲಾಧಾರನ ತೂಕದ ಮಾತುಗಳನ್ನು ಕೇಳಿದ ಜಪಶೀಲರಲ್ಲಿ ಶ್ರೇಷ್ಠನಾದ ಜಾಜಲಿಯು 'ಎಲೈ ವೈಶ್ಯಕುಲೋತ್ಪನ್ನನೇ! ನೀನು ನೋಡಿದರೆ ಎಲ್ಲ ರಸಪದಾರ್ಥಗಳನ್ನು, ಗಂಧದ್ರವ್ಯಗಳನ್ನು, ವನಸ್ಪತಿ, ಔಷಧಿ ಹಾಗೂ ಕಂದಮೂಲಫಲಗಳನ್ನು ಮಾರುತ್ತಿದ್ದರೂ, ನಿನಗೆ ಧರ್ಮದಲ್ಲಿನ ದೃಢಬುದ್ಧಿ, ಈ ಜ್ಞಾನ ಎಲ್ಲಿಂದ ಬಂತು? ಎನ್ನುವುದನ್ನು ವಿವರವಾಗಿ ಹೇಳು' ಎಂದನು.

ಕೀರ್ತಿವಂತನಾದ ಜಾಜಲಿಯ ಪ್ರಶ್ನೆಗೆ ಉತ್ತರರೂಪವಾಗಿ ಜ್ಞಾನದಿಂದ ತೃಪ್ತನಾದ ಧರ್ಮವಿಷಯಗಳನ್ನು ತಿಳಿದಂತಹ ತುಲಾಧಾರನು ಧರ್ಮಸೂಕ್ಷ್ಮಗಳನ್ನು ಶ್ರಮದಾಯಕ ತಪಸ್ಸನ್ನು ಆಚರಿಸುವ ಜಾಜಲಿಗೆ ಹೇಳಲಾರಂಭಿಸಿದನು.

೧. ಸರ್ವಪ್ರಾಣಿಗಳಿಗೆ ಹಿತಕರವಾದ ಮೈತ್ರಿ (ಮಿತ್ರಭಾವ) ಯಿಂದ ಕೂಡಿದ ಸನಾತನವಾದ ಯಾವ ಧರ್ಮವನ್ನು ಜನರು (ಧಾರ್ಮಿಕ) ಬಲ್ಲವರಾಗಿದ್ದಾರೋ ಅಂತಹ ಧರ್ಮ ಹಾಗೂ ಅದರ ಸೂಕ್ಷ್ಮ ವಿಷಯಗಳನ್ನು ನಾನು ಬಲ್ಲೆ.

೨. ಯಾವ ಪ್ರಾಣಿಗೂ ದ್ರೋಹ ಮಾಡದ ಅಥವಾ ಅತ್ಯಂತ ಕಡಿಮೆ ದ್ರೋಹ ಮಾಡುವ ಜೀವನವೃತ್ತಿಯೇ ಶ್ರೇಷ್ಠವಾದ ಧರ್ಮ[೩] (ಕಾರಣ ಯಾರಿಗೂ ತೊಂದರೆ ಕೊಡದೆ ಪರಾವಲಂಬಿಯಾಗದ ಜೀವನ ಅಶಕ್ಯವಾದ್ದರಿಂದ).

೩. ಯಾರೋ ಕತ್ತರಿಸಿಟ್ಟ ತೃಣ, ಒಣಕಟ್ಟಿಗೆ, ಹುಲ್ಲುಗಳಿಂದ ನಾನು ಈ ಗುಡಿಸಲು ಕಟ್ಟಿ ಕೊಂಡು ವಾಸಿಸುತ್ತೇನೆ. ನಾನು ಮದ್ಯ ಮಾರಾಟ ಮಾಡದೆ, ಅರಗು, ನಾನಾವಿಧ ಗಂಧದ, ರಸದ ಪದಾರ್ಥಗಳನ್ನು ಖರೀದಿಸಿ, ಮೋಸ ಮಾಡದೆ ಮಾರಾಟ ಮಾಡುತ್ತೇನೆ.

---

೧ ಸೋಽಮರ್ಷವಶಮಾಪನ್ನಸ್ತುಲಾಧಾರದಿದೃಕ್ಷಯಾ ।।
ವಿಕ್ರೀಣಂತಂ ಚ ಪಣ್ಯಾನಿ ತುಲಾಧಾರಂ ದದರ್ಶ ಸಃ ।।

೨ ಜಾತಪಕ್ಷೌ ಯದಾ ತೇ ಚ ಗತಾಶ್ಚಾರೀಮಿತಸ್ತತಃ ।
ಮನ್ಯಮಾನಸ್ತತೋ ಧರ್ಮಂ ಚಟಕಪ್ರಭವಂ ದ್ವಿಜ ।
ಖೇ ವಾಚಂ ತ್ವಮಥಾಶ್ರೌವೀರ್ಮಾಂ ಪ್ರತಿ ದ್ವಿಜಸತ್ತಮ ।
ಅಮರ್ಷವಶಮಾಪನ್ನಸ್ತತಃ ಪ್ರಾಪ್ತೋ ಭವಾನಿಹ ।
ಕರವಾಣಿ ಪ್ರಿಯಂ ಕಿಂ ತೇ ತದ್ಬ್ರೂಹಿ ದ್ವಿಜಸತ್ತಮ ।। - ೯೬/೧೫-೫೧

೩ **ಅದ್ರೋಹೇಣೈವ ಭೂತಾನಾಂ ಅಲ್ಪದ್ರೋಹೇಣ ವಾ ಪುನಃ ।**
**ಯಾ ವೃತ್ತಿಃ ಸ ಪರೋ ಧರ್ಮಃ ತೇನ ಜೀವಾಮಿ ಜಾಜಲೇ ।।** - ೯೭/೬

..................... ಮದ್ಯ ವರ್ಜನಹಾ ಬಹೂನ್ ।
ಕ್ರೀತ್ವಾವೈ ಪ್ರತಿವಿಕ್ರೀಣೇ ಪರಹಸ್ತಾದಮಾಯಯಾ ॥

೪. ಯಾವ ವ್ಯಕ್ತಿಯ ಮಾತು, ಕೃತಿ, ಮನಸ್ಸು ಎಲ್ಲ ಪ್ರಾಣಿಗಳಿಗೆ ಹಿತಕರವೋ ಅವನೇ ಧರ್ಮವನ್ನು ಬಲ್ಲವನು[೧].

೫. ನಾನು ಬೇರೆಯವರ ಕರ್ಮಗಳನ್ನು ಅತಿಯಾಗಿ ಹೊಗಳದೆ, ತೆಗಳದೆ ಲೋಕದಲ್ಲಿನ ವೈಚಿತ್ರ್ಯಗಳನ್ನು ನೋಡುತ್ತಾ ಆಕಾಶದಂತೆ ನಿರ್ಲಿಪ್ತನಾಗಿರುತ್ತೇನೆ.

೬. ನಾನು ಯಾರನ್ನೇ ಆಗಲಿ ಅತಿಯಾಗಿ ತೃಪ್ತಿಪಡಿಸದೆ, ವಿರೋಧ ಮಾಡದೆ, ದ್ವೇಷ ಮಾಡದೆ ಎಲ್ಲರಲ್ಲಿ ಭಗವಂತ(ಸಮ) ಇದ್ದಾನೆಂದು ನೋಡುತ್ತೇನೆ. ಇದೇ ನನ್ನ ವ್ರತ[೨].

೭. ವೃದ್ಧರಿಗೆ, ರೋಗಿಗಳಿಗೆ, ದುರ್ಬಲರಿಗೆ ವಿಷಯಭೋಗಗಳಲ್ಲಿ ಆಸಕ್ತಿಯೇ ಹೇಗಡ ಇರುವುದಿಲ್ಲವೋ ಹಾಗೆ ನನಗೂ ಅರ್ಥಕಾಮಗಳಲ್ಲಿ ಭೋಗಾಸಕ್ತಿ ಹೊರಟು ಹೋಗಿದೆ.

೮. ಯಾವ ವ್ಯಕ್ತಿಯು ಕರ್ಮ, ಮಾತು, ಮನಸ್ಸುಗಳಿಂದ ಬೇರೆಯವರ ಕೆಡುಕನ್ನು ಬಯಸುವುದಿಲ್ಲವೋ ಅವನು ಗುಣಪೂರ್ಣನಾದ ಬ್ರಹ್ಮನನ್ನು ಹೊಂದುತ್ತಾನೆ[೩].

೯. ಯಾರು ಬೇರೆಯವರನ್ನು ಹೆದರಿಸುವುದಿಲ್ಲವೋ, ಬೇರೆಯವರಿಂದ ತಾನೂ ಹೆದರುವುದಿಲ್ಲವೋ, ಯಾವುದನ್ನೂ ಇಚ್ಛಿಸದೆ, ದ್ವೇಷಿಸದೇ ಇರುತ್ತಾರೋ ಅವರು ಸಿದ್ಧಿಯನ್ನು ಹೊಂದುತ್ತಾರೆ.

೧೦. ಈ ಪ್ರಪಂಚದಲ್ಲಿ ಯಜ್ಞ, ತಪಸ್ಸು, ದಾನ, ಬುದ್ಧಿ ಅವಲಂಬಿತವಾಕ್ಯಗಳಿಂದ ಎಂದರೆ, ಉಪದೇಶಗಳಿಂದ ಯಾವ ಯಾವ ಫಲಗಳನ್ನು ಮನುಷ್ಯನು ಹೊಂದಬಲ್ಲನೋ ಆ ಎಲ್ಲ ಫಲಗಳನ್ನು ಅಭಯದಾನದಿಂದ ಹೊಂದಬಹುದು[೪].

೧೧. ಧರ್ಮವಿಚಾರ ಬಹುಸೂಕ್ಷ್ಮವಾದ್ದರಿಂದ ತಿಳಿಯುವುದು ಸಾಧ್ಯವಿಲ್ಲ. ಅದರ ಸ್ವರೂಪವನ್ನು ಮುಚ್ಚಿಡುವ ಅನೇಕ ದಾರಿಗಳೇ ಇವೆ. ಆದರೆ ಸಜ್ಜನರ ಸಹವಾಸ ಮಾಡಿ ಅವರ ನಡೆ, ನುಡಿಗಳನ್ನು ಅನುಸರಿಸುವ ಮನುಷ್ಯನು ಧರ್ಮದ ರಹಸ್ಯವನ್ನು ತಿಳಿಯಬಹುದು.

---

೧ ಸರ್ವೇಷಾಂ ಯಃ ಸುಹೃನ್ನಿತ್ಯಂ ಸರ್ವೇಷಾಂ ಚ ಹಿತೇ ರತಃ ।
ಕರ್ಮಣಾ ಮನಸಾ ವಾಚಾ ಸ ಧರ್ಮಂ ವೇದ ಜಾಜಲೇ ॥

೨ ಸಮೋಽಸ್ಮಿ ಸರ್ವಭೂತೇಷು ಪಶ್ಯ ಮೇ ಜಾಜಲೇ ವ್ರತಮ್ ॥ -೯೭/೭-೧೧

೩. ಯದಾ ನ ಕುರುತೇ ಭಾವಂ ಸರ್ವಭೂತೇಷು ಪಾಪಕಮ್ ।
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥ - ೯೭/೧೭

೪ ತಪೋಭಿರ್ಯಜ್ಞದಾನೈಶ್ಚ ವಾಕ್ಯೈಃ ಪ್ರಜ್ಞಾಶ್ರಿತೈಸ್ತಥಾ ।
ಪ್ರಾಪ್ನೋತ್ಯಭಯದಾನಸ್ಯ ಯದ್ಯತ್ಫಲಮಿಹಾಶ್ನುತೇ ॥ - ೯೭/೨೮

೧೨. ಕೆಲವರು ಪ್ರಾಣಿಗಳನ್ನು ಕೊಂದು ತಿನ್ನುತ್ತಾರೆ. ಕೆಲ ಮನುಷ್ಯರು ಮನುಷ್ಯರನ್ನೇ ಗುಲಾಮಗಿರಿಗೆ ಇಟ್ಟುಕೊಂಡು ಅವರ ಬದುಕನ್ನೇ ಹಾಳು ಮಾಡುತ್ತಾರೆ. ಅಂತಹ ಅಯೋಗ್ಯರನ್ನು ಏಕೆ ನಿಂದಿಸುವುದಿಲ್ಲ?[೧]

೧೩. ಕೆಲವರು ಕೃಷಿಯನ್ನು ಒಳ್ಳೆಯದೆಂದು ಭಾವಿಸುತ್ತಾರೆ. ಆದರೆ ಆ ಕೃಷಿವೃತ್ತಿಯೂ ಅತಿಕ್ರೌರ್ಯವೇ. ಕಬ್ಬಿಣದ ಗುಳವನ್ನು ನೇಗಿಲಿನ ಅಗ್ರಕ್ಕೆ ಹಾಕಿ ಭೂಮಿಯನ್ನು ಉಳುಮೆ ಮಾಡಿದಾಗ ಅನೇಕ ಚಿಕ್ಕ ಚಿಕ್ಕ ಪ್ರಾಣಿಗಳು ಸಾಯುತ್ತವೆ. ಆ ನೇಗಿಲನ್ನು ಎಳೆಯುವ ಎತ್ತನ್ನೂ ಹೊಡೆದು ಹಿಂಸಿಸುತ್ತಾರೆ. ಇವೆಲ್ಲವನ್ನೂ ವಿಚಾರ ಮಾಡು ಜಾಜಲಿ!

೧೪. ಧರ್ಮಕ್ಕೆ ನಿಜವಾದ ಕಾರಣವೇನೆಂಬುದನ್ನು ಅದರ ಸ್ವರೂಪವೇನೆಂದು ಸರಿಯಾಗಿ ವಿಚಾರ ಮಾಡಬೇಕು. ಲೋಕಾಚರಣೆಗಳನ್ನು ವಿಚಾರ ಮಾಡದೇ ಅನುಷ್ಠಾನ ಮಾಡಬಾರದು. ನನ್ನನ್ನು ಹಿಂಸಿಸಿದವರು, ಹೊಗಳುವವರು, ನನ್ನ ದೃಷ್ಟಿಯಲ್ಲಿ ಇಬ್ಬರೂ ಸಮಾನರೇ ಆಗಿರುತ್ತಾರೆ.

ಇವೇ ಮೊದಲಾದ ತುಲಾಧಾರನ ಮಾತುಗಳನ್ನು ಕೇಳಿದ ಜಾಜಲಿಯು ಸಂದೇಹಗಳನ್ನು ಅವನ ಮುಂದೆ ಇಡುತ್ತಾನೆ.

'ಎಲೈ ವಣಿಕ್‌ಶ್ರೇಷ್ಠನೇ! ತಕ್ಕಡಿಯನ್ನು ಹಿಡಿದಿರುವ ನೀನು ಪ್ರಾಣಿಗಳಿಗೆ ಸ್ವರ್ಗದ್ವಾರವನ್ನು ಮತ್ತು ಜೀವನವೃತ್ತಿಯನ್ನು ವಿರೋಧಿಸುವಂತಹ ಧರ್ಮವನ್ನೇ ಅನುಸರಿಸುತ್ತಿದ್ದೀಯಾ. ಕೃಷಿಯಿಂದಲೇ ಅನ್ನದ ಉತ್ಪತ್ತಿ, ನೀನು ಅದರಿಂದಲೇ ಉಪಜೀವಿಸುವೆ. ಯಾಗಾದಿಕರ್ಮಗಳಿಗೂ ಗೋವು, ಧಾನ್ಯಗಳು ಮುಖ್ಯ. ನಾಸ್ತಿಕ್ಯಮತವನ್ನು ಆಡುತ್ತಿರುವೆ. ಕೃಷಿಯನ್ನೇ ಬಿಟ್ಟರೆ ಜಗತ್ತು ಬದುಕುವುದು ಹೇಗೆ?

ಜಾಜಲಿಯ ಸಂಶಯಗಳಿಗೆ ತುಲಾಧಾರನು –

೧೫. ಎಲೈ ಜಾಜಲಿಯೇ! ನಾನು ನಾಸ್ತಿಕನಲ್ಲ, ಯಜ್ಞವನ್ನು ನಿಂದಿಸುವುದಿಲ್ಲ, ಆದರೆ ಯಜ್ಞವನ್ನು ಬಲ್ಲವನು ದುರ್ಲಭನೇ ಸರಿ[೨]. ಯಜ್ಞಕ್ಕೆ ನನ್ನ ನಮಸ್ಕಾರ; ಯಜ್ಞ ಬಲ್ಲವರಿಗೂ ನಮಸ್ಕಾರ. ಆದರೆ ಬ್ರಾಹ್ಮಣರು ತಮ್ಮ ಯಜ್ಞವನ್ನು ಬಿಟ್ಟು ಕ್ಷತ್ರಿಯರ ಯಜ್ಞವನ್ನು ಮಾಡಿಸುತ್ತಿದ್ದಾರೆ. ದೇವತೆಗಳು ತೃಪ್ತಿಹೊಂದುವುದನ್ನು ಹವ್ಯ ಎಂದೂ ಪುಣ್ಯ ಎಂದೂ ಕರೆಯುತ್ತಾರೆ. ಆದರೆ ಇವರ ವ್ಯಾಪಾರಗಳಲ್ಲಿ ಇದು ಕಾಣಿಸುತ್ತಿಲ್ಲ.

---

೧ ಹತ್ವಾ ಸತ್ವಾನಿ ಖಾದಂತಿ ತಾನ್ಕಥಂ ನ ವಿಗರ್ಹಸೇ ।
ಮಾನುಷಾ ಮಾನುಷಾನೇವ ದಾಸಭೋಗೇನ ಭುಂಜತೇ ॥ – ೯೭/೩೮

೨ ವಕ್ಷ್ಯಾಮಿ ಜಾಜಲೇ ವೃತ್ತಿಂ ನಾಸ್ಮಿ ಬ್ರಾಹ್ಮಣ ನಾಸ್ತಿಕಃ ।
ನ ಚ ಯಜ್ಞಂ ವಿನಿಂದಾಮಿ ಯಜ್ಞವಿತ್ತು ಸುದುರ್ಲಭಃ ॥ – ೯೮/೪

೧೬. ನಮಸ್ಕಾರ, ಹವಿಸ್ಸಮರ್ಪಣೆ, ಅಧ್ಯಯನ, ಅಧ್ಯಾಪನ, ಅನ್ನ ಇವುಗಳಿಂದಲೇ ದೇವಪೂಜೆ ಸಾಧ್ಯ ಎಂದೇ ಶಾಸ್ತ್ರದ ವಿಧಿ[1].

೧೭. ಪೂರ್ವಕಾಲದ ಜ್ಞಾನಿಗಳು ಧರ್ಮನಿಶ್ಚಯದಿಂದಲೇ ಯಜ್ಞಗಳನ್ನು ಅನುಷ್ಠಾನ ಮಾಡುತ್ತಿದ್ದರು. ಆದರಿಂದಲೇ ಎಲ್ಲ ವಿಧವಾದ ತಮ್ಮ ಸಂಕಲ್ಪಗಳನ್ನು ಪಡೆಯುತ್ತಿದ್ದರು. ಕೃಷಿ ಮಾಡಿದಾಗ ಭೂಮಿ ಸಮೃದ್ಧಿ ನೀಡುತ್ತಿತ್ತು. ಸತ್ಸಂಕಲ್ಪಗಳಿಂದಲೇ ಫಲಪುಷ್ಪಗಳನ್ನು ಕೊಡುವ ಬಳ್ಳಿಗಳು ಬೆಳೆಯುತ್ತಿದ್ದವು. ಯಜ್ಞದಲ್ಲಿ ಯಾವ ಫಲವನ್ನೂ ಅವರು ನಿರೀಕ್ಷಿಸುತ್ತಿರಲಿಲ್ಲ[2].

೧೮. ವೇದೋಕ್ತಕರ್ಮಗಳನ್ನು ಮಾಡಲೇಬೇಕೆಂಬ ಭಾವನೆಯಿಂದ ತಿಳಿದು ಆ ವೇದೋಕ್ತವಿಧಿಯನ್ನು ನಡೆಸದಿದ್ದರೆ, ಅದಕ್ಕೆ ಅಂಜುತ್ತಾ ಯಜ್ಞಕ್ಕೆ ವಿಷಯವು ಪರಮಾತ್ಮನೇ ಎಂದು ತಿಳಿದು, ಈ ಕರ್ತವ್ಯಗಳಿಗೆ ನಾನು ಕರ್ತನಲ್ಲ ಭಗವಂತನೇ ಕರ್ತಾ ಎಂದು ಯಾವನು ಹೇಳುತ್ತಾನೋ ಅವನೇ ನಿಜವಾದ ಬ್ರಾಹ್ಮಣ[3].

೧೯. ಸಮಸ್ತ ದೇವತೆಗಳು, ವೇದಗಳು ಬ್ರಹ್ಮಜ್ಞಾನಿಯನ್ನೇ ಆಶ್ರಯ ಹೊಂದಿವೆ. ಆದ್ದರಿಂದ ಬ್ರಾಹ್ಮಣನು ತೃಪ್ತಿ ಹೊಂದಿದರೆ ದೇವತೆಗಳೂ ಸಂತೋಷಗೊಳ್ಳುತ್ತಾರೆ, ತೃಪ್ತಿಪಡುತ್ತಾರೆ[4].

೨೦. ಎಲ್ಲ ರಸಗಳಿಂದ ತೃಪ್ತನಾದವನು ಯಾವ ರಸವನ್ನೂ ಬಯಸನು. ಹಾಗೆ ಜ್ಞಾನತೃಪ್ತನಾದವನು ಬೇರೆ ಯಾವುದರಿಂದಲೂ ತೃಪ್ತನಾಗನು. ಜ್ಞಾನತೃಪ್ತಿಯೇ ಅತಿಶ್ರೇಷ್ಠವಾದ ಸುಖದ ತೃಪ್ತಿ ಎನಿಸಿದೆ.

೨೧. ಧರ್ಮದಲ್ಲಿಯೇ ರತಿ ಸುಖ ಹೊಂದುವವರಿದ್ದಾರೆ. ಆದರೆ ಎಲ್ಲ ಧರ್ಮಕ್ಕಿಂತಲೂ ವ್ಯಾಪಕವಾದ ಮತ್ತೊಂದು ತತ್ತ್ವವೇ ಪರಮಾತ್ಮತತ್ತ್ವ. ಇದು ಪ್ರಾಜ್ಞರ ಮತ. ಪರಮಾತ್ಮನ ಲೋಕಕ್ಕೆ ಹೋದವರು ದುಃಖವನ್ನು ಹೊಂದುವುದಿಲ್ಲ. ಅವರಿಗೆ ಪದಚ್ಯುತಿ, ವ್ಯಥೆಗಳಿರುವುದಿಲ್ಲ. ಅಂತಹ ಸಾತ್ವಿಕರು ಬ್ರಹ್ಮಸ್ಥಾನವಾದ ವೈಕುಂಠವನ್ನೇ ಸೇರುತ್ತಾರೆ[5].

---

೧ ನಮಸ್ಕಾರೇಣ ಹವಿಷಾ ಸ್ವಾಧ್ಯಾಯೈರೌಷಧೈಸ್ತಥಾ ।
ಪೂಜಾಸ್ಯಾದ್ದೇವತಾನಾಂ ಹಿ ಯಥಾ ಶಾಸ್ತ್ರನಿದರ್ಶನಮ್ ॥ - ೯೮/೮

೨ ತಸ್ಮಾತ್ ಸ್ವನುಷ್ಠಿತಾತ್ ಪೂರ್ವೇ ಸರ್ವಾನ್ ಕಾಮಾಂಶ್ಚ ಲೇಭಿರೇ ।
ಅಕೃಷ್ಟಪಚ್ಯಾ ಪೃಥಿವೀ ಆಶೀರ್ಭಿರ್ವೀರುಧೋಽಭವನ್ ।
ನ ತೇ ಯಜ್ಞೇಷು ಆತ್ಮಸು ವಾ ಫಲಂ ಪಶ್ಯಂತಿ ಕಿಂಚನ ॥ - ೯೮/೧೨

೩ ಕರ್ತವ್ಯಮಿತಿ ಕರ್ತವ್ಯಂ ವೇತ್ತಿ ಯೋ ಬ್ರಾಹ್ಮಣೋ ಭಯಮ್ ।
ಬ್ರಹ್ಮೈವ ವರ್ತತೇ ಲೋಕೇ ನೈತಿ ಕರ್ತವ್ಯತಾಂ ಪುನಃ ॥ - ೯೮/೧೫

೪ ಅಖಿಲಂ ದೈವತಂ ಸರ್ವಂ ಬ್ರಹ್ಮಬ್ರಾಹ್ಮಣಸಂಶ್ರಿತಮ್ ।
ತೃಪ್ಯಂತಿ ತೃಪ್ಯತೋ ದೇವಾಸ್ತೃಪ್ತಾಸ್ತೃಪಸ್ಯ ಜಾಜಲೇ ॥ - ೯೮/೧೯

೫ ಯತ್ರ ಗತ್ವಾ ನ ಶೋಚಂತಿ ನ ಚ್ಯವಂತಿ ವ್ಯಥಂತಿ ಚ ।
ತೇ ತು ತದ್ಬ್ರಹ್ಮಣಃ ಸ್ಥಾನಂ ಪ್ರಾಪ್ನುವಂತೀಹ ಸಾತ್ವಿಕಾಃ ॥ - ೯೮/೨೫

೨೨. ಯಾವ ಮನಸ್ಸಿನಲ್ಲಿ ಆಶೆಗಳಿಲ್ಲವೋ, ಫಲೇಚ್ಛೆಯಿಂದ ಕರ್ಮ ಮಾಡುವುದಿಲ್ಲವೋ, ನಮಸ್ಕಾರ, ಹೊಗಳಿಕೆಗಳಿಂದ ಯಾವನು ದೂರನಾಗಿದ್ದಾನೋ ಅಂತಹವನನ್ನೇ ದೇವತೆಗಳು ಬ್ರಾಹ್ಮಣ ಎನ್ನುವರು[೧].

೨೩. ಯಜ್ಞಕ್ಕೆ ಪಶುಗಳಿಗಿಂತಲೂ ಶ್ರೇಷ್ಠವಾದುದು ಅಕ್ಕಿಹಿಟ್ಟಿನಿಂದ ಮಾಡಿದ ಪುರೋಡಾಶವೆಂಬ ಹವಿಸ್ಸು ಎಂದು ಹೇಳಲ್ಪಟ್ಟಿದೆ[೨].

೨೪. ಎಲ್ಲ ನದಿಗಳು ಸರಸ್ವತೀನದಿಗಳ ರೂಪಗಳೇ. ಎಲ್ಲ ಪರ್ವತಗಳು ಪುಣ್ಯಪ್ರದೇಶಗಳೇ ಆಗಿವೆ. ಅದರಂತೆ ಪರಮಾತ್ಮನೇ ಪವಿತ್ರತೀರ್ಥ ಎನಿಸಿದ್ದಾನೆ. ಆದ್ದರಿಂದ ತೀರ್ಥಯಾತ್ರೆಗೆ ದೇಶಾಟನೆ ಮಾಡುವುದು ಅನಾವಶ್ಯಕ[೩].

## ಜಾಜಲಿಗೆ ಪಕ್ಷಿಯ ಉಪದೇಶ

ಹೀಗೆ ಜಾಜಲಿಗೆ ಸಲಹೆ ನೀಡುತ್ತಾನೆ ತುಲಾಧಾರ. ನಾನು ಧರ್ಮದ ಬಗ್ಗೆ ನಿನಗೆ ತಿಳಿಸುದುದರಲ್ಲಿ ಸಜ್ಜನರು, ದುರ್ಜನರು ಆಶ್ರಯಿಸಿದ ಧರ್ಮ ಯಾವುದು ಎಂಬುದನ್ನು ನೀನೇ ಯೋಚಿಸಿ ನಿರ್ಧರಿಸು. ಅದಕ್ಕೆ ತಕ್ಕಂತೆ ನಿನಗೆ ಉಪಾಯ ಹೇಳುತ್ತೇನೆ. ನಂತರ ನೀನು ಸೂಕ್ತ ಮಾರ್ಗ ಕಂಡುಕೊಳ್ಳಬಹುದು.

ನೋಡು ಜಾಜಲಿ! ಮೇಲೆ ಆಕಾಶದಲ್ಲಿ ಗುಬ್ಬಚ್ಚಿಗಳು ಹಾರಾಡುತ್ತಿವೆ. ಅವುಗಳಲ್ಲಿ ನಿನ್ನ ತಲೆಯಲ್ಲಿ ಹುಟ್ಟಿ ಬೆಳೆದ ಪಕ್ಷಿಗಳೂ ಇವೆ. ಬೇರೆ ಜಾತಿಯ ಗಿಡುಗಾದಿಗಳೂ ಇವೆ. ಅವುಗಳನ್ನು ನೀನು ಕರೆ. ಅವು ಹೇಗೆ ತಮ್ಮ ಕಾಲುಗಳನ್ನು ದೇಹದಲ್ಲಿ ಅಡಗಿಸಿಕೊಂಡು ಹಾರಾಡುತ್ತಿವೆ ಎನ್ನುವುದನ್ನು ನೋಡು. ನಿನ್ನನ್ನು ಅವು ತಂದೆ ಎಂದೇ ಭಾವಿಸಿವೆ. ಅದರಲ್ಲಿ ಯಾವ ಸಂಶಯವೂ ಇಲ್ಲ. ನಿನ್ನ ಆ ಮಕ್ಕಳನ್ನು ಆಹ್ವಾನಿಸು ಎಂದು ತುಲಾಧಾರ ನುಡಿಯಲು, ಜಾಜಲಿಯು ಅವನ್ನು ಕರೆಯಲು, ಆ ಹಕ್ಕಿಗಳು ಧರ್ಮಶಾಸ್ತ್ರದ ದಿವ್ಯಮಾತುಗಳನ್ನು ಉಚ್ಚರಿಸುತ್ತಿದ್ದವು. ಅವು ಜಾಜಲಿಗೆ ಉಪದೇಶದ ಮಾತುಗಳಂತೆ ಇದ್ದವು. ಈ ಮಾತುಗಳೆಲ್ಲ ಶ್ರದ್ಧೆಯಿಂದ ಮಾಡಿದ, ಮಾಡದ ಕರ್ಮಗಳ ಬಗ್ಗೆ, ಯಜ್ಞಗಳ ಬಗ್ಗೆ, ಅದರ ಫಲದ ಬಗ್ಗೆ ಅದನ್ನು ಮಾಡಿದವನು ಹೊಂದುವ ಫಲಾಫಲಗಳ ವಿವೇಚನೆಗಳನ್ನು ನೋಡಬಹುದು.

---

೧ ನಿರಾಶಿಷಮನಾರಂಭಂ ನಿರ್ನಮಸ್ಕಾರಮಸ್ತುತಿಮ್ ।
ಅಕ್ಷೀಣಂ ಕ್ಷೀಣಕರ್ಮಾಣಂ ತಂ ದೇವಾ ಬ್ರಾಹ್ಮಣಂ ವಿದುಃ ॥ - ೯೮/೩೮

೨ ................................ ।
ಪುರೋಡಾಶಂ ಹಿ ಸರ್ವೇಷಾಂ ಪಶೂನಾಂ ಮೇಧ್ಯ ಉಚ್ಯತೇ ॥ - ೯೮/೩೮

೩ ಸರ್ವಾನದ್ಯಃ ಸರಸ್ವತ್ಯಃ ಸರ್ವೇ ಪುಣ್ಯಾಶಿಲೋಚ್ಚಯಾಃ ।
ಜಾಜಲೇ ತೀರ್ಥಮಾತ್ಮೈವ ಮಾ ಸ್ಮ ದೇಶಾತಿಥಿರ್ಭವ ॥ - ೯೮/೩೯

ಪಕ್ಷಿಗಳ ಮಾತುಗಳಲ್ಲಿ ಕೆಲವು ಹೀಗಿವೆ. ಅವು ಜಾಜಲಿಯನ್ನು ನಿಮಿತ್ತೀಕರಿಸಿ ಮಾಡಿ ಉಪದೇಶಗಳಾಗಿ ಇಡೀ ಸಾಧಕವರ್ಗಕ್ಕೂ ಮಾರ್ಗದರ್ಶಕವಾಗಿವೆ.

೧. ತಾನು ಅಹಿಂಸಾದಿ ಕರ್ಮಗಳನ್ನು ಮಾಡಿದ್ದರು, ಅಹಂಕಾರದಿಂದ ಮಾಡಿದ್ದರೆ ಅದು ಇಹಪರಲೋಕಗಳಲ್ಲಿನ ಶ್ರದ್ಧೆಯನ್ನೇ ನಾಶಪಡಿಸುತ್ತದೆ. ತನಗಿಂತ ಉತ್ತಮರಾದವರಲ್ಲಿ ಶ್ರದ್ಧೆಯನ್ನು ಭಕ್ತಿಯನ್ನು ತೋರಿಸಲು ಅಹಂಕಾರಾದಿಗಳಿಂದ ಮಾಡಿದ ಕರ್ಮವು ಬಿಡುವುದಿಲ್ಲ (೯೯/೬)

೨. ಶ್ರದ್ಧೆ ಇಲ್ಲದ ಕರ್ಮವನ್ನು ವಾಕ್, ಮನಸ್ಸುಗಳು ರಕ್ಷಿಸುವುದಿಲ್ಲ[1] (ಶ್ರದ್ಧೆ ಇಲ್ಲದೆ ಮಾಡಿದ ಕರ್ಮವು ಕರ್ತೃವನ್ನು ರಕ್ಷಿಸುವುದಿಲ್ಲ).

೩. ಯಜ್ಞಕರ್ಮಕ್ಕೆ ಪ್ರತಿಬಂಧಕಗಳು ಇವೆರಡು – ೧. ವ್ಯಕ್ತಿಯಲ್ಲಿ ಶುಚಿತ್ವವಿದೆ (ಬಾಹ್ಯ, ಅಂತಃ). ಆದರೆ ಮಾಡುವ ಕೆಲಸದಲ್ಲಿ ಶ್ರದ್ಧೆ ಇಲ್ಲ. ಇಂತಹ ವ್ಯಕ್ತಿಯ ದ್ರವ್ಯಗಳು ೨. ಶ್ರದ್ಧೆ ಇದ್ದರೂ ಶುಚಿತ್ವವಿಲ್ಲದವನ ದ್ರವ್ಯಗಳು. ಇವೆರಡೂ ಕೂಡಾ ದೇವತೆಗಳು ಸಮವೆಂದು ದೇವತೆಗಳು ಭಾವಿಸುತ್ತಾರೆ[2].

೪. ಶುದ್ಧನಾದ ಶ್ರೋತ್ರಿಯನ ಲೋಭದಿಂದ ಕೂಡಿದ ಅನ್ನವು, ಬಡ್ಡಿಯಿಂದ ಜೀವಿಸುವ ಉದಾರಿಯ ಅನ್ನವು ಎರಡೂ ಸಮಾನವೆಂದು ದೇವತೆಗಳು ಹೇಳಿದ್ದಾರೆ. ಈ ಎರಡೂ ಅನ್ನಗಳಲ್ಲಿ ವ್ಯತ್ಯಾಸವಿರುವುದಿಲ್ಲ[3].

೫. ಶ್ರದ್ಧೆಯಿಲ್ಲದ ಪುರುಷನು ಸಮರ್ಪಿಸುವ ಹವಿಸ್ಸನ್ನು ದೇವತೆಗಲು ಸ್ವೀಕರಿಸುವುದಿಲ್ಲ, ಅಂತಹವನ ಅನ್ನವನ್ನು ತಿನ್ನಬಾರದೆಂದು ಧರ್ಮಜ್ಞಾನಿಗಳ ಮತವಾಗಿದೆ. ಅಶ್ರದ್ಧೆಯು ಮಹಾಪಾಪಸಾಧಕವಾದರೆ, ಶ್ರದ್ಧೆ ಸರ್ವಪಾಪನಿವಾರಕ[4].

೬. ತಪಸ್ಸು ನಡತೆ, ಮನೋನಿಗ್ರಹಗಳೆಲ್ಲ ಇದ್ದರೂ ಶ್ರದ್ಧೆ ಇಲ್ಲದಿರೆ ಇವೆಲ್ಲ ವ್ಯರ್ಥವೇ ಸರಿ. ಶ್ರದ್ಧೆ ಅವನ ಸ್ವಭಾವವನ್ನೂ ತಿಳಿಸುತ್ತದೆ. ಏಕೆಂದರೆ ಚೇತನನು ಮೂಲತಃ ಶ್ರದ್ಧಾಸ್ವರೂಪನೇ.

---

೧ .... ಶ್ರದ್ಧಾ ವೃದ್ಧಂ ವಾಙ್ಮನಸೀ ನ ಯಜ್ಞಸ್ತ್ರಾತುಮರ್ಹತಿ। – ೯೯/೭

೨ ಶುಚೇರಶ್ರದ್ದಧಾನಸ್ಯ ಶ್ರದ್ದಧಾನಸ್ಯ ಚಾಶುಚೇಃ।
ದೇವಾಶ್ಚಿ(ವಿ)ತ್ತಮನ್ಯಂತ ಸದೃಶಂ ಯಜ್ಞಕರ್ಮಣಿ॥ – ೯೯/೮

೩ ಶ್ರೋತ್ರೀಯಸ್ಯ ಕದರ್ಯಸ್ಯ ವದಾನ್ಯಸ್ಯ ಚ ವಾರ್ಧುಷೇಃ।
ಮೀಮಾಂಸಿತ್ವೋಭಯಂ ದೇವಾ ಸಮಮನ್ನಮಕಲ್ಪಯನ್॥ – ೯೯/೯

೪ ಅಶ್ರದ್ಧಧಾನ ಏವೈಕೋ ದೇವಾನಾಂ ನಾರ್ಹತೇ ಹವಿಃ।
ತಸ್ಯೈವಾನ್ನಂ ನ ಭೋಕ್ತವ್ಯಮಿತಿ ದರ್ಮವಿದೋ ವಿದುಃ॥
ಅಶ್ರದ್ಧಾ ಪರಮಂ ಪಾಪಂ ಶ್ರದ್ಧಾಪಾಪಪ್ರಮೋಚನೀ॥ – ೯೯/೧೧,೧೨

**ಕಿಂ ತಸ್ಯ ತಪಸಾ ಕಾರ್ಯಂ ಕಿಂ ವೃತ್ತೇನ ಕಿಮಾತ್ಮನಾ।**
**ಶ್ರದ್ಧಾಮಯೋऽಯಂ ಪುರುಷಃ ಯೋಯಚ್ಛ್ರದ್ಧಃ ಸ ಏವ ಸಃ॥ - ೯೯/೧೪**

ಈ ಶ್ಲೋಕದ ೨ನೇ ಪಾದ ಗೀತೆಯ ೧೭ನೇ ಅಧ್ಯಾಯದಲ್ಲಿಯೂ ಇದೆ. (೧೭/೩)

ಪಕ್ಷಿ ಹೇಳುತ್ತದೆ ಜಾಜಲಿಗೆ -

ನೀನು ಶ್ರದ್ಧಾವಂತನಾಗು. ನೀನು ಬಲ್ಲವರಲ್ಲಿಯೂ ಬಲ್ಲಿದನೇ ಆಗಿದ್ದೀಯಾ (ಮಹಾಪ್ರಾಜ್ಞ). ... ಅದರಿಂದಲೇ ಭಗವಂತನನ್ನು ಹೊಂದುತ್ತೀ. ಶ್ರದ್ಧೆ ಧರ್ಮಗಳು ಒಂದಕ್ಕೊಂದು ಪೂರಕ. ಯಾವನು ಶ್ರದ್ಧಾಪೂರ್ವಕವಾಗಿ ಸ್ವಧರ್ಮದಲ್ಲಿ ನಿರತರಾಗಿರುತ್ತಾನೋ ಅವನು ಎಲ್ಲರಿಗಿಂತ ಶ್ರೇಷ್ಠನೆನಿಸುತ್ತಾನೆ[೧](ತುಲಾಧಾರನಂತೆ).

ಹೀಗೆ ತುಲಾಧಾರನಿಂದ ಹೇಳಲ್ಪಟ್ಟ ಮಾತುಗಳನ್ನು ಕೇಳಿದ ಜಾಜಲೆಯು ಅವನ್ನು ಅರ್ಥಮಾಡಿಕೊಂಡು, ಆತನು ಹೇಳಿದ ಸನಾತನ ಧರ್ಮವನ್ನು ಸ್ವೀಕರಿಸಿದನು. ಅನುಷ್ಠಾನಕ್ಕೆ ತಂದನು. ಮನಸ್ಸಿಗೆ ನೆಮ್ಮದಿಯನ್ನು (ಶಾಂತಿ)ಯನ್ನು ಪಡೆದನು (ಆಕಾಶವಾಣಿಯನ್ನು ಕೇಳಿದಾಗ ಉದ್ವಿಗ್ನನಾಗಿದ್ದ ಜಾಜಲಿ ಈಗ ನಿಜವಾಗಿಯೂ ಧರ್ಮತತ್ತ್ವಜ್ಞಾನಿಯಾಗಿ ಪರಿವರ್ತನೆಗೊಂಡ).

ನಂತರ ತುಲಾಧಾರನು ಸ್ವಲ್ಪ ಸಮಯದ ಬಳಿಕ ಸ್ವರ್ಗಕ್ಕೆ ಹೋದನು. ಅಲ್ಲಿಗೆ ಜಾಜಲಿಯೂ ಹೋದ. ಇಬ್ಬರೂ ಮಹಾಪ್ರಾಜ್ಞರಾಗಿ ತಮ್ಮ ತಮ್ಮ ಕರ್ಮ ಫಲಾರ್ಜಿತ ಸುಖದಿಂದ ತಮಗೆ ಯೋಗ್ಯವಾದ ಸ್ಥಾನವನ್ನು ಪಡೆದರು.

ಶ್ರದ್ಧೆಯು ಸೂರ್ಯನ ಮಗಳಾದ ಸಾತ್ವಿಕೀ ಎನಿಸಿದ್ದಾಳೆ. ಆಕೆಯನ್ನು ಸಾವಿತ್ರೀ, ಪ್ರಸವಿತ್ರೀ, ಜೀವವಿಶ್ವಾಸಿನೀ ಎಂದೂ ಕರೆಯುತ್ತಾರೆ[೨].

ಭೀಷ್ಮರು ಈ ಉಪಾಖ್ಯಾನವನ್ನು ಉಪಸಂಹಾರ ಮಾಡುತ್ತಾ ಧರ್ಮರಾಜನಿಗೆ 'ಶಬ್ದೋಚ್ಚಾರಣೆಯಲ್ಲಿ, ವಿದ್ಯೆಯಲ್ಲಿ, ಮನಸ್ಸಿನಲ್ಲಿ ಆದ ತಪ್ಪುಗಳನ್ನು ಶ್ರದ್ಧೆ ಸರಿ ಮಾಡುತ್ತದೆ(ಪಡಿಸುತ್ತದೆ). ಶ್ರದ್ಧೆ ಎಂದರೆ ಭಗವದ್ಭಕ್ತಿಯೇ. ತುಲಾಧಾರನು ಜಾಜಲಿಗೆ ಮಾಡಿದ ಉಪದೇಶದ ದೃಷ್ಟಾಂತದಿಂದ ಇದೆಲ್ಲವನ್ನು ಹೇಳಿದ್ದೇನೆ.' ಎಂದು ಹೇಳಿದರು.

೧ ಶ್ರದ್ಧಾಂ ಕುರು ಮಹಾಪ್ರಾಜ್ಞ ತತಃ ಪ್ರಾಪ್ಸ್ಯಸಿ ಯತ್ಪರಮ್।
ಶ್ರದ್ಧಾವಾನ್ ಶ್ರದ್ದಧಾನಶ್ಚ ಧರ್ಮಾಂಶ್ಚೈವೇಹ ವಾಣಿಜ।
ಸ್ವವರ್ತ್ಮನಿ ಸ್ಥಿತಶ್ಚೈವ ಗರೀಯಾನೇಷ ಜಾಜಲೇ॥ - ೯೯/೧೬,೧೭

೨ ಶ್ರದ್ಧಾ ವೈ ಸಾತ್ತ್ವಿಕೀ ದೇವೀ ಸೂರ್ಯಸ್ಯ ದುಹಿತಾ ನೃಪ।
ಸಾವಿತ್ರೀ ಪ್ರಸವಿತ್ರೀ ಚ ಜೀವವಿಶ್ವಾಸಿನೀ ತಥಾ॥ - ೯೯/೨೨

## ಸಂದೇಶಗಳು-ವಿವರಣೆಗಳು

೧. ನಾಲ್ಕು ಅಧ್ಯಾಯಗಳಲ್ಲಿ ಜಾಜಲಿ, ತುಲಾಧಾರ, ಪಕ್ಷಿ (ಜಾಜಲಿಯಿಂದ ರಕ್ಷಿತ) ಗಳ ವೃತ್ತಾಂತಗಳು ಸಾಧಕರಿಗೆ ತಮ್ಮ ತಪಸ್ಸನ್ನು ಹೇಗೆ ಸಾರ್ಥಕಪಡಿಸಿಕೊಳ್ಳಬೇಕು ಎಂದು ಹೇಳುತ್ತವೆ. ಜಾಜಲಿಯೇ ಇಲ್ಲಿಯ ಸಾಧಕ. ತುಲಾಧಾರ ಹಾಗೂ ಪಕ್ಷಿಗಳು ಕ್ರಮವಾಗಿ ವೈಶ್ಯ ಹಾಗೂ ತೋರಿಕೆಗೆ ಅತ್ಯಂತ ಹೀನಯೋನಿಯಲ್ಲಿ ಜನಿಸಿದ ಪಕ್ಷಿಕುಲದವರು.

೨. ಆದರೆ ಜಾಜಲಿ ಮಹಾತಪಸ್ವಿ. ಜಪ ಮಾಡುವವರಲ್ಲಿ ಶ್ರೇಷ್ಠ(ವಿಪ್ರ), ಮಹಾ ಪ್ರಾಣಿದಯಾಪರ. ತನ್ನ ತಲೆಯನ್ನು ಪಕ್ಷಿಗಳಿಗೆ ಗೂಡನ್ನಾಗಿ ಮಾಡಲು ಅವಕಾಶ ಮಾಡಿಕೊಟ್ಟ ದಯಾಪರ ಬ್ರಾಹ್ಮಣ. ಆದರೆ ತಾನು ಮಾಡಿದ ತ್ಯಾಗವನ್ನು ಅಸದೃಶ, ಅತ್ಯುತ್ಕೃಷ್ಟವೆಂದು ತಾನೇ ಭಾವಿಸಿ, ಭ್ರಮಿಸಿ, ಪುಣ್ಯವನ್ನು ಕಳೆದುಕೊಂಡನೋ ಎಂಬಂತೆ ಆತನ ನಡೆ. ಆಕಾಶವಾಣಿಯಿಂದಾಗಿ ಆತನನ್ನು ತುಲಾಧಾರನ ಕಡೆ ಕಳಿಸುತ್ತದೆ. ಆತನ ಅನುಸಂಧಾನವು ಮತ್ತೆ ಸಾತ್ವಿಕ ಶ್ರದ್ಧೆಯಾಗಿ ಪರಿವರ್ತಿತವಾಗುತ್ತದೆ. ಆದ್ದರಿಂದ ನಮ್ಮ ಸಾಧನೆಯ ಬಗ್ಗೆ ಕೊಚ್ಚಿಕೊಳ್ಳುವುದು, ಜಂಭ ಪಡುವುದು, ಪುಣ್ಯನಾಶಕ್ಕೆ ಕಾರಣವಾಗುತ್ತದೆ. ಆದ್ದರಿಂದ ನಮ್ಮ ಸಾಧನೆಯನ್ನು ಜಗತ್ತಿನಲ್ಲಿ ಯಾರೋ ಎಲ್ಲೋ ಮೀರಿಸುವವರು ಇದ್ದೇ ಇರುತ್ತಾರೆ. ಅದರ ಬಗ್ಗೆ ಎಚ್ಚರವಿರಬೇಕು.

೩. ಗೀತೆಯ ೧೭ನೇ ಅಧ್ಯಾಯದ ಶ್ರದ್ಧಾತ್ರಯವಿಭಾಗದಲ್ಲಿ ಇಲ್ಲಿರುವ ಸಾತ್ವಿಕ ಶ್ರದ್ಧೆಗೆ ತುಲಾಧಾರ, ಪಕ್ಷಿಗಳೇ ಉದಾಹರಣೆ. ಅವರ ಉಪದೇಶ ತಾರಕ. ಜಾಜಲಿ ವಿಪ್ರರ್ಷಿಯಾದರೂ ಒಂದು ಹಂತದಲ್ಲಿ ಎಡವಿ ಮತ್ತೆ ಸಾತ್ವಿಕಶ್ರದ್ಧೆಗೆ ಒಳಗಾಗಿ ಉದ್ಧೃತನಾಗುತ್ತಾನೆ.

೪. ಈ ಉಪಾಖ್ಯಾನವು ಕೌಶಿಕ ಬ್ರಾಹ್ಮಣನಿಗೆ ಉಪದೇಶ ಮಾಡಿದ ಧರ್ಮವ್ಯಾಧೋಪಖ್ಯಾನದಂತಿದೆ. ಅಲ್ಲಿ ಬ್ರಾಹ್ಮಣನಿಗೆ ಮಾಂಸಮಾರುವ ಧರ್ಮವ್ಯಾಧನಿಂದ ಉಪದೇಶ. ಇಲ್ಲಿ ವೈಶ್ಯನಿಂದ ಬ್ರಾಹ್ಮಣನಿಗೆ ಉಪದೇಶ. ಎರಡೂ ಕಡೆ ಬ್ರಾಹ್ಮಣರಿಗೆ ಹೀನವರ್ಣದವರಿಂದ ಉಪದೇಶ. ಯಾರಿಂದಾದರೂ ಉಪದೇಶ ಪಡೆಯಲು ಸಾಧಕನು ಸಿದ್ಧನಾಗಿರಬೇಕು. ಇದೇ ಸಾತ್ವಿಕಶ್ರದ್ಧೆ.

ಇತ್ಯಾದಿ..

# ೧೦೦. ವಿಚಖ್ನುರಾಜನಿಂದ ಅಹಿಂಸಾ ಪ್ರಶಂಸೆ

ಭೀಷ್ಮರು ಭೂತದಯೆಯ ಬಗ್ಗೆ ವಿಚಖ್ನು ರಾಜನು ಹೇಳಿದ ಇತಿಹಾಸರೂಪದ ಗೀತೆಯು ಹೀಗಿದೆ ಎಂದು ಉದಾಹರಿಸುತ್ತಾರೆ.

ಗವಾಲಂಭನ (ಗೋಬಲಿ) ಸಮಯದಲ್ಲಿ ಹೋರಿಯೊಂದರ ಶೃಂಗಗಳು ಕತ್ತರಿಸಲ್ಪಟ್ಟವು. ಅದನ್ನು ನೋಡಿ ಆ ಯಜ್ಞಶಾಲೆಯಲ್ಲಿದ್ದ ಎಲ್ಲ ಹಸುಗಳು ಗಟ್ಟಿಯಾಗಿ ದುಃಖಿಸುತ್ತಿರುವುದನ್ನು (ಕೂಗುವುದನ್ನು) ಕೇಳಿದ ವಿಚಖ್ನು ರಾಜನು ಗೋವುಗಳಿಗೆ ಮಂಗಳವಾಗಲಿ ಎಂದು ತಾನೂ ಕೂಗಿ ಹೇಳಿದ. ಈ ರಾಜನ ಮಾತು ಹಿಂಸಾಪ್ರವೃತ್ತಿಯನ್ನು ಹೊಂದಿರುವವರಿಗೆಲ್ಲ ಮಾರ್ಗದರ್ಶಕ ಸೂತ್ರವಾಗಿ ಪ್ರಸಿದ್ಧಿ ಹೊಂದಿತು[೧].

ವಿಚಖ್ನು ರಾಜನ ಮಾತುಗಳು ತುಂಬಾ ಆದರ್ಶಪೂರ್ಣವಾಗಿದ್ದು ಅಂಹಿಸಾಪರ ಘೋಷವಾಕ್ಯಗಳಾಗಿವೆ.

೧. ಧರ್ಮದ ಮಿತಿ ಮೀರಿ ಹೋಗುವವರು ಮೂರ್ಖರು, ನಾಸ್ತಿಕರು, ಸಂಶಯವುಳ್ಳವರು, ಮೊದಲಾದವರು.

೨. ಎಲ್ಲ ಕರ್ಮಗಳಲ್ಲಿ ಅಹಿಂಸೆಯನ್ನೇ ಮನು ಪ್ರತಿಪಾದಿಸಿದ್ದರೂ ಮನುಷ್ಯರು ಕಾಮರಾಗ ದುರಾಸೆಗಳಿಗೆ ಬಲಿಯಾಗಿ ಯಜ್ಞದ ಬಹಿರ್ವೇದಿಯಲ್ಲಿ ಪಶುಗಳನ್ನು ವಿಶೇಷವಾಗಿ ಹಿಂಸಿಸುತ್ತಾರೆ[೨].

೩. ಮನುಷ್ಯರು ಯಜ್ಞದ ರೂಪವೆಂದು ಹೇಳುತ್ತಾ ವೃಕ್ಷಗಳನ್ನು ಕತ್ತರಿಸುತ್ತಾರೆ. ಮತ್ತು ವ್ಯರ್ಥವಾಗಿ ಪಶುವಧೆ ಮಾಡಿ ಮಾಂಸವನ್ನು ತಿನ್ನುತ್ತಾರೋ ಅಂತಹ ಧರ್ಮವು ಪ್ರಶಸ್ತವಲ್ಲ.

೪. ಮಾಂಸ, ಮಧು, ಮದ್ಯ, ಮೀನು, ಎಳ್ಳನ್ನ (ಸೂಪ, ತಿಲ, ಹೆಸರುಬೇಳೆ ಮೊದಲಾದವುಗಳಿಂದ ಕೂಡಿದ ಅನ್ನಕ್ಕೆ ಕೃಸರೋದನ ಎಂದು ಹೆಸರು) ಪದಾರ್ಥಗಳಿಂದ ಧೂರ್ತರು ಯಜ್ಞದ ಸಂಭಾರಗಳೆಂದು ಸಿದ್ಧತೆಗಳನ್ನು ಮಾಡಿಕೊಂಡು, ನಂತರ ಅದನ್ನು ಸೇವಿಸುತ್ತಾರೆ. ಆದರೆ ವೇದಗಳಲ್ಲಿ ಇವುಗಳನ್ನು ವಿಧಿಸಿಲ್ಲ. ಇದು ಅವರ ಸ್ವಕಪೋಕಲ್ಪಿತ

---

೧ ಸ್ವಸ್ತಿ ಗೋಭ್ಯೋऽಸ್ತು ಲೋಕೇಷು ತತೋ ನಿರ್ವಚನಂ ಕೃತಮ್ ।
ಹಿಂಸಾಯಾಂ ಹಿ ಪ್ರವೃತ್ತಾಯಾಂ ಆಶೀರೇಷಾನುಕಲ್ಪಿತಾ ॥ - ೧೦೦/೩

೨ ಸರ್ವಕರ್ಮಸ್ವಹಿಂಸಾ ಹಿ ಧರ್ಮಾತ್ಮಾ ಮನುರಬ್ರವೀತ್ ।
ಕಾಮರಾಗಾತ್ ವಿಹಿಂಸಂತಿ ಬಹಿರ್ವೇದ್ಯಾಂ ಪಶೂನ್ನರಾಃ ॥ - ೧೦೧/೫

ಕಲ್ಪನೆ ಮಾತ್ರ. ಕಾಮ, ಮೋಹ, ಚಾಪಲ್ಯಾದಿಗಳಿಂದಾಗಿ ಇಂತಹ ನಿಷಿದ್ಧ ಪದಾರ್ಥಗಳನ್ನು ಸೇವಿಸುತ್ತಾರೆ[1].

೫. ಆದರೆ ಬ್ರಹ್ಮವಾದಿಗಳು ಎಲ್ಲ ಯಜ್ಞಗಳಲ್ಲಿ ವಿಷ್ಣುವನ್ನೇ ಪರದೈವವೆಂದು ತಿಳಿಯುತ್ತಾರೆ ಮತ್ತು ಪಾಯಸ, ಸುಗಂಧ, ಪರಿಮಳೋಪೇತ ಪುಷ್ಪಗಳಿಂದ ಆ ಭಗವಂತನನ್ನು ಪೂಜಿಸಬೇಕೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ[2].

ನಂತರ ಯುಧಿಷ್ಠಿರನು ಭೀಷ್ಮರನ್ನು ಕುರಿತು –

ಶರೀರದ ಮೇಲೆ ಆಪತ್ತುಗಳು ದಾಳಿ ಮಾಡುತ್ತವೆ. ಈ ಆಪತ್ತುಗಳಿಗೆ ಒಳಗಾದ ಶರೀರ ಕ್ಷೀಣವಾಗಿ ಅನಾರೋಗ್ಯಕ್ಕೆ ತುತ್ತಾಗಿ ನಿತ್ಯಜೀವನ (ಶರೀರ ಯಾತ್ರೆ)ನಡೆಯುವುದು ಹೇಗೆ ಎಂಬ ಪ್ರಶ್ನೆಗೆ ಭೀಷ್ಮರು ಹೇಳುತ್ತಾರೆ.

೬. ಶರೀರಕ್ಕೆ ತೊಂದರೆಯಾಗದಂತೆ ಅಧರ್ಮವನ್ನು ಮಾಡಿ ಮೃತ್ಯುವಿಗೂ ಗುರಿಯಾಗದಂತೆ ಯೋಗ್ಯ ಕರ್ಮಗಳನ್ನು ಆಚರಿಸಬೇಕು. ಅಂತಹ ಧರ್ಮವನ್ನು ಆಚರಿಸುವವನೇ ಸಮರ್ಥನೆನಿಸುತ್ತಾನೆ. ಅದುವೇ ಕರ್ಮಯೋಗ[3] (ಯೋಗಃ ಕರ್ಮಸು ಕೌಶಲಂ).

## ಸಂದೇಶಗಳು-ವಿವರಣೆಗಳು

೧. ಈ ಇತಿಹಾಸ ಒಂದು ಧರ್ಮಶಾಸ್ತ್ರ ಹಾಗೂ ತತ್ತ್ವಶಾಸ್ತ್ರಗಳ ಮಧ್ಯೆ ಸಮನ್ವಯವನ್ನು ಉಪದೇಶಿಸುವ ಭಾಗ.

೨. ಅಹಿಂಸಾ ತತ್ತ್ವವನ್ನು ಯಜ್ಞಪಶುಬಲಿ ವಿಚಾರದಲ್ಲೂ ಅಧಿಕೃತವಾಗಿ ತೋರಿಸುವುದೆಂದು ಅನಿಸುತ್ತದೆ. ಈ ಬಗ್ಗೆ ಎಲ್ಲ ಪ್ರಮಾಣ(ಪರವಿರೋಧಿ)ಗಳ ವಿಮರ್ಶೆ ಅಗತ್ಯ.

೩. **'ಶರೀರಮಾದ್ಯಂ ಖಲು ಧರ್ಮಸಾಧನಂ'** ಎಂದಂತೆ ಧರ್ಮಾನುಷ್ಠಾನದ ಮಾಧ್ಯಮವಾದ ಶರೀರವನ್ನು ಆರೋಗ್ಯಪೂರ್ಣವಾಗಿ ಇಟ್ಟುಕೊಳ್ಳುತ್ತಾ ದೀರ್ಘಕಾಲ

---

೧ ಮಾಂಸಂ ಮಧು ಸುರಾ ಮತ್ಸ್ಯಾ ಆಸವಂ ಕೃಸರೋದನಮ್ ।
ಧೂರ್ತೈಃ ಪ್ರವರ್ತಿತಂ ಹ್ಯೇತನ್ನೈತದ್ವೇದೇಷು ಕಲ್ಪಿತಮ್ ।
ಕಾಮಾನ್ಮೋಹಾಚ್ಚ ಲೋಭಾಚ್ಚ ಲೌಕ್ಯಮೇತತ್ ಪ್ರವರ್ತಿತಮ್ ॥ – ೧೧೧/೯

೨ ವಿಷ್ಣುಮೇವಾಭಿಜಾನಂತಿ ಸರ್ವಯಜ್ಞೇಷು ಬ್ರಾಹ್ಮಣಾಃ ।
ಪಾಯಸೈಃ ಸುಮನೋಭಶ್ಚ ತಸ್ಯಾಪಿ ಯಜನಂ ಸ್ಮೃತಮ್ ॥ – ೧೧೧/೧೦

೩ ಯಥಾ ಶರೀರಂ ನ ಗ್ಲಾಯೇನ್ನೇಯಾನ್ಮೃತ್ಯುವಶಂ ಯಥಾ ।
ತಥಾ ಕರ್ಮಸು ವರ್ತೇತ ಸಮರ್ಥೋ ಧರ್ಮಮಾಚರೇತ್ ॥ – ೧೧೧/೧೩

ಧಾರ್ಮಿಕ ಜೀವನದ ಪಾಠವನ್ನು ತಿಳಿಸಿಕೊಡುತ್ತದೆ. ಕರ್ಮಾಚರಣೆಗಿಂತ ಜ್ಞಾನಾನುಷ್ಠಾನ, ಜ್ಞಾನ ಸಂಪಾದನೆಗೆ ಹೆಚ್ಚು ಒತ್ತು ಕೊಡುವ ಸಂದೇಶ ಇಲ್ಲಿದೆ.

ವೇದದಲ್ಲಿ ಅಹಿಂಸೆಯನ್ನೇ ಹೇಳಲಾಗಿದೆ. ಅದು ಮನುಮತ, ವೇದಮತ. ಪಶುಬಲಿ, ಪಶುಹಿಂಸೆಗಳೆಲ್ಲ ಕಾಮ, ರಾಗ, ಜಿಹ್ವಾಚಾಪಲ್ಯವುಳ್ಳ ಮಿಥ್ಯಾ ಯಜ್ಞಾಭಿಮಾನಿಗಳೆಂದೂ ಇಲ್ಲಿ ಕರೆಯಲಾಗಿದೆ.

ಇವೆಲ್ಲವೂ ವಿಶೇಷ ಅಧ್ಯಯನದ ವಸ್ತುಗಳು ಇತ್ಯಾದಿ.

೫. ಒಟ್ಟಾರೆ ಇದೊಂದು ಸಂಕೀರ್ಣ ಅಧ್ಯಯನ ವಸ್ತು.

*****

## ೧೦೧. ಅಹಿಂಸಾಪೂರ್ವಕರಾಜ್ಯಶಾಸನ

ಧರ್ಮರಾಜನ ಪ್ರಶ್ನೆ - ಪ್ರಜೆಗಳನ್ನು ಹಿಂಸಿಸದೆ ಹೇಗೆ ರಾಜ್ಯಪಾಲನೆ ಮಾಡಬೇಕು?

ಭೀಷ್ಮರ ಉತ್ತರ - ಈ ವಿಷಯದಲ್ಲಿ ರಾಜನಾದ ಸತ್ಯವಾನ್‌ನೊಂದಿಗೆ ದ್ಯುಮತ್ಸೇನನ ಸಂವಾದರೂಪ ಇತಿಹಾಸವನ್ನು ಕೇಳು ಎಂದನು.

ತಂದೆ ದ್ಯುಮತ್ಸೇನನ ಆದೇಶದಂತೆ ಕೊಲೆಗಾರರನ್ನು ವಧಿಸಲು ಕರೆದುಕೊಂಡು ಹೋಗುವಾಗ ಸತ್ಯವಾನ್(ಮಗನು) ಅದುವರೆಗೆ ಯಾರೂ ರಾಜನೊಡನೆ ಹೇಳದಿದ್ದ ಮಾತನ್ನು ಹೇಳಿದನು.

ಸತ್ಯವಾನ್ 'ರಾಜ್ಯವ್ಯವಹಾರದಲ್ಲಿ ಕೆಲ ವೇಳೆ ಧರ್ಮ, ಅಧರ್ಮವಾಗುತ್ತದೆ. ಅಧರ್ಮ ಧರ್ಮವಾಗುತ್ತದೆ. ಆದರೆ, ಇಂತಹ ವಧಕಾರ್ಯ ಧರ್ಮವೆಂದು ಎಂದೂ ಹೇಳಲಾಗುವುದಿಲ್ಲ, ಅದಕ್ಕೆ ತಂದೆ ದ್ಯುಮತ್ಸೇನನು -

'ವಧಾರ್ಹರನ್ನು ವಧೆ ಮಾಡದಿರುವುದೇ ಧರ್ಮವಾದರೆ, ಧರ್ಮ ಯಾವುದು? ಆದರಿಂದ ಧರ್ಮಾಧರ್ಮ ಸಾಂಕರ್ಯವಾಗುತ್ತದೆ. ಕಲಿಯುಗದಲ್ಲಿಯಂತೂ ಇದು ನನ್ನದು, ಅವನದಲ್ಲ ಎಂದುಹೇಳುತ್ತಾ ಹಾಡುಹಗಲೇ ಪರದ್ರವ್ಯ ಅಪಹರಣ ನಡೆಯುತ್ತದೆ. ಅಂತಹವರನ್ನು ವಧಿಸದಿದ್ದರೆ ಲೋಕವ್ಯವಹಾರ ನಾಶವಾದೀತು. ಆಗ ಲೊಕದಲ್ಲಿ ದರೋಡೆ ಮೊದಲಾದವುಗಳನ್ನು ತಪ್ಪಿಸುವ ಉಪಾಯ ಗೊತ್ತಿದ್ದರೆ ಹೇಳು.

ಸತ್ಯವಾನ್ - '೧. ಕ್ಷತ್ರಿಯ, ವೈಶ್ಯ, ಶೂದ್ರ - ಮೂರು ವರ್ಣಗಳನ್ನು ಬ್ರಾಹ್ಮಣರ ಅಧೀನರನ್ನಾಗಿಸಬೇಕು. ಆಗ ಬ್ರಾಹ್ಮಣರ ಧರ್ಮೋಪದೇಶಕ್ಕೆ ಬದ್ಧರಾಗುವ ಎಲ್ಲರೂ (ಕಳ್ಳರು ಸಹ) ಧರ್ಮಾಚರಣೆ ಮಾಡುವರು (ಧರ್ಮಲೋಪ ಅಷ್ಟಾಗಿ ಆಗುವುದಿಲ್ಲ).

೨. ಬ್ರಾಹ್ಮಣನ ಉಪದೇಶವನ್ನು ಕೇಳದವರನ್ನು ರಾಜನು ಶಿಕ್ಷೆಗೆ ಗುರಿಪಡಿಸಬಹುದು.

೩. ಶಿಕ್ಷೆ ವಿಧಿಸುವಾಗಲೂ ಪ್ರಾಣಹಾನಿಯಾಗಬಾರದು. ಅಪರಾಧಗಳ ಪೂರ್ವಾಪರಗಳ ಪರಿಶೀಲನೆ ಮಾಡಬೇಕು.

೪. ರಾಜನು ಕಳ್ಳರನ್ನು ವಧಿಸುವುದರಿಂದ ಅವನ ಪತ್ನೀ, ಪುತ್ರಾದಿ ಪರಿವಾರದ ಜೀವಿಕೆಗೆ ತೊಂದರೆಯಾದರೆ ಅವರನ್ನೂ ಕೊಂದಂತಾಗುತ್ತದೆ. ಆ ಕಾರಣ ಶಿಕ್ಷೆ ವಿಧಿಸುವ ಮುನ್ನ ವಿಮರ್ಶೆ ಮಾಡಬೇಕು.

೫. ಕಳ್ಳನಾದರೂ ಸತ್ಸಹವಾಸವಾದರೆ ಸಾಧುವಾಗಬಹುದು. ದುಷ್ಟರನ್ನು ತಿದ್ದಲು ಪ್ರಯತ್ನಿಸಬೇಕು. ಅವಸರದಿಂದ ಮರಣದಂಡನೆ ನೀಡಬಾರದು. ಅವಸರದ ತೀರ್ಮಾನ ಸನಾತನಧರ್ಮವಲ್ಲ.

೬. ಅಪರಾಧ ಮಾಡಿದವನು ಮತ್ತೊಮ್ಮೆ ಅದೇ ಅಪರಾಧ ಮಾಡಿದಲ್ಲಿ ಅವನ ಸಂಪತ್ತನ್ನು ಮುಟ್ಟುಗೋಲು ಹಾಕುವುದಾಗಿ ಭಯ ಹುಟ್ಟಿಸಬೇಕು. ಮತ್ತು ಅದೇ ಅಪರಾಧ ಮಾಡಿದರೆ ಬಂಧಿಸಬೇಕು. ಮಗದೊಮ್ಮೆ ಮಾಡಿದರೆ ಅಂಗಗಳನ್ನು (ಕೈ ಮೊದಲಾದ) ವಿಕೃತಗೊಳಿಸಬೇಕು. ಆದ್ದರಿಂದ ಎಂದಿಗೂ ಮರಣದಂಡನೆ ವಿಧಿಸಿ ಬಂಧುಮಿತ್ರರಿಗೆ ಕ್ಲೇಶ ಉಂಟುಮಾಡಬಾರದು[೧].

೭. ದಂಡವನ್ನು ಹಿಡಿದು, ಮೃಗಚರ್ಮವನ್ನು ಹೊದ್ದು ಮುಂಡ ಮಾಡಿಕೊಂಡ ಬ್ರಾಹ್ಮಣ ಸನ್ಯಾಸಿಯು ಅಪರಾಧ ಮಾಡಿದಲ್ಲಿ ಶಿಕ್ಷಾರ್ಹನಾಗುತ್ತಾನೆ[೨]. ಮೊದಲನೇ ಅಪರಾಧಕ್ಕಿಂತ ದೊಡ್ಡ ದೊಡ್ಡ ಅಪರಾಧಗಳನ್ನು ಮಾಡುವ ಅಪರಾಧಿಯು ಶಿಕ್ಷಾರ್ಹನೇ.

ದ್ಯುಮತ್ಸೇನ –

'೧. ಪ್ರಜೆಗಳನ್ನು ಧರ್ಮದ ಚೌಕಟ್ಟಿನಲ್ಲಿಡಲು ಪ್ರಯತ್ನಿಸುವುದೇ ಧರ್ಮ. ಎಲ್ಲಿಯವರೆಗೆ ಧರ್ಮದ ಉಲ್ಲಂಘನೆಯಾಗುವುದಿಲ್ಲವೋ, ಅಲ್ಲಿಯವರೆಗೆ ಧರ್ಮ ಉಳಿಯುತ್ತದೆ.

೨. ಧರ್ಮೋಲ್ಲಂಘನೆ ಮಾಡುವ ಅಪರಾಧಿಗಳನ್ನು ವಧಿಸದಿದ್ದರೆ ಎಲ್ಲ ಆಡಳಿತ ವಿಫಲವಾಗುತ್ತದೆ. ಸಜ್ಜನರಿಗೆ ಹಾನಿ ಬೇರೆ. ಹಿಂದಿನ ಕಾಲದಲ್ಲಿ ಪ್ರಜೆಗಳನ್ನು ಆಳುವುದು ಸುಲಭವಾಗಿತ್ತು. ಏಕೆಂದರೆ ಆಗಿನ ಜನ ಮೃದು ಸ್ವಭಾವದವರು, ಸತ್ಯನಿಷ್ಠರು, ಅಲ್ಪದ್ರೋಹಿಗಳು, ಅಲ್ಪಕೋಪಿಗಳು. ನಿನ್ನ ನಡತೆಗೆ ಧಿಕ್ಕಾರ ಎನ್ನುವುದೂ ಅವರಿಗೆ ದೊಡ್ಡ ಶಿಕ್ಷೆಯಾಗಿ ಭಾವಿಸುತ್ತಿದ್ದರು. ಕಾಲಕಳೆದಂತೆ ಧಿಕ್ಕಾರಕ್ಕೆ ಹೆದರದಾದರು ಜನ. ವಾಗ್ದಂಡದ ಪರಿಣಾಮವು ಕಾಣದಿರಲು ಅಪರಾಧಿಯು ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ '**ಆದಾನದಂಡ**'ವು ಆರಂಭವಾಯಿತು. ಕಾಲ ಕಳೆದಂತೆ ಅದಕ್ಕೂ ಬಗ್ಗದಿದ್ದಾಗ ಮರಣದಂಡನೆಯೇ ಚಾಲ್ತಿಗೆ ಬಂತು. ಕೆಲವು ಕಳ್ಳರವನ್ನು ಮರಣದಂಡನೆಯಿಲ್ಲದೆ ನಿಯಂತ್ರಿಸಲು ಸಾಧ್ಯವೇ ಇಲ್ಲ[೩].

---

೧ ನ ಮೂಲಘಾತಃ ಕರ್ತವ್ಯೋ ನೈಷ ಧರ್ಮಃ ಸನಾತನಃ।
ಅಪಿ ಖಲ್ವವಧೇನೈವ ಪ್ರಾಯಶ್ಚಿತ್ತಂ ವಿಧೀಯತೇ॥ – ೧೦೨/೧೨
ಉದ್ವೇಜನೇನ ಬಂಧೇನ ವಿರೂಪಕರಣೇನ ಚ।
ವಧದಂಡೇನ ತೇ ಕ್ಲೇಶ್ಯಾ ನ ಪುರೋಹಿತ ಸಂಪದಾ॥ – ೧೦೨/೧೩

೨ ಬಿಭ್ರದ್ದಂಡಾಜಿನಂ ಮುಂಡೋ ಬ್ರಾಹ್ಮಣೋऽರ್ಹತಿ ವಾಸಸಮ್ (ಶಾಸನಂ)

೩ ಆಸೀದಾದಾನದಂಡೋऽಪಿ ವಧದಂಡೋऽದ್ಯ ವರ್ತತೇ।
ವಧೇನಾಪಿ ನ ಶಕ್ಯಂತೇ ನಿಯಂತುಮಪರೇ ಜನಾಃ॥ – ೧೦೨/೨೦

ಸತ್ಯವಾನ್ - 'ಅಪ್ಪಾ! ಒಂದುವೇಳೆ ಕಳ್ಳರನ್ನು ಸಂಹರಿಸದೆ ಸಜ್ಜನರನ್ನು ರಕ್ಷಿಸಲು ಅಸಮರ್ಥನಾದರೆ, ಮುಂದಿನ ಜಗತ್ತಿನ ರಕ್ಷಣೆಗಾಗಿ ದಸ್ಯುಗಳನ್ನು ಸಂಹರಿಸಿ ಬಿಡು.

ದ್ಯುಮತ್ಸೇನ - '೧. ರಾಜರು ಪ್ರಜೆಗಳ ಜೀವನ ಸುಖವಾಗಿರಲು ತಾವು ತಪಸ್ಸನ್ನು ಮಾಡುತ್ತಾರೆ. ಪ್ರಜೆಗಳಿಗೆ ಕಳ್ಳರಿಂದ ದುಃಖವಾದಾಗ ನಾಚಿಕೆ ಪಡುತ್ತಾರೆ (ತಮ್ಮ ಅವಧಿ ಯಲ್ಲಿ ಪ್ರಜೆಗಳಿಗೆ ತೊಂದರೆಯಾದುದಕ್ಕೆ).

೨. ಪ್ರಾಮಾಣಿಕ ರಾಜರು ಕಳ್ಳರನ್ನು ತಕ್ಷಣ ಕೊಲ್ಲದೆ ಆದಷ್ಟು ಸತ್ಕರ್ಮ, ಸದ್ವ್ಯವಹಾರಗಳಿಂದ ಮುಂದೆ ಹೋಗುವಂತೆ ಶಾಸನ ಮಾಡುತ್ತಾರೆ(ಕಳ್ಳರಿಗೆ ತಮ್ಮ ತಪ್ಪಿನ ಅರಿವಾಗುವಂತೆ ನಿಧಾನವಾಗಿ ಅವರನ್ನು ಮಾನಸಿಕವಾಗಿ ಪರಿವರ್ತಿಸಲು ಪ್ರಯತ್ನಿಸುತ್ತಾರೆ).

೩. ರಾಜನ ಸದಾಚಾರಗಳೇ ಪ್ರಜೆಗಳಿಗೆ ಮಾರ್ಗದರ್ಶಕ. ಮನುಷ್ಯರು ಸ್ವಾಭಾವಿಕವಾಗಿ ಉತ್ತಮ ಪುರುಷರ ಆಚಾರಣೆಗಳನ್ನೇ ಅನುಸರಿಸುತ್ತಾರೆ[೧].

೪. ಯಾವ ರಾಜನು ತಾನೇ ಸ್ವಯಂ ಇಂದ್ರಿಯನಿಗ್ರಹ ಮಾಡಿಕೊಳ್ಳದೇ ಬೇರೆಯವರಿಗೆ ಸದಾಚಾರಿಗಳಾಗಿರಲು, ಇಂದ್ರಿಯ ನಿಗ್ರಹ ಮಾಡಿಕೊಳ್ಳಲು ಉಪದೇಶಿಸುತ್ತಾನೋ, ಅವನನ್ನು ನೋಡಿ ಜನರು ನಗುತ್ತಾರೆ[೨].

೫. ಪಾಪಕಾರ್ಯವನ್ನು ತಡೆಯುವ ಆಶೆಯುಳ್ಳ ರಾಜನು ತಾನು ಮೊದಲು ತನ್ನನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕು. ನಂತರ ಅಪರಾಧ ಮಾಡುವ ತನ್ನ ಬಂಧು, ಜ್ಞಾತಿಗಳನ್ನೂ ನಿಷ್ಪಕ್ಷಪಾತಿಯಾಗಿ ಶಿಕ್ಷಿಸಬೇಕು[೩]. ಹೀಗೆ ಮಾಡಿದಾಗ ಮಾತ್ರ ದೇಶದಲ್ಲಿ ಇತರ ಅಪರಾಧಿ-ಗಳನ್ನು ಶಿಕ್ಷಿಸಲು ನೈತಿಕ ಧೈರ್ಯವಿರುತ್ತದೆ.

೬. ಯಾವ ದೇಶದಲ್ಲಿ (ಅಪರಾಧ) ಪಾಪ ಮಾಡಿದವನು ರಾಜನ ದಂಡನೆಯಿಂದ ಮಹಾದುಃಖವನ್ನು ಅನುಭವಿಸುವುದಿಲ್ಲವೋ, ಆದೇಶದಲ್ಲಿ ಪಾಪಕರ್ಮಗಳು (ಅಪರಾಧಗಳು) ಹೆಚ್ಚುತ್ತವೆ. ಧರ್ಮ ಕ್ಷೀಣಿಸುತ್ತದೆ. ಹೀಗೆ ಒಬ್ಬ ದಯಾಪೂರ್ಣ ವಿದ್ವಾಂಸ

---

೧ ಶ್ರೇಯಸಃ ಶ್ರೇಯಸೀಮೇವ ವೃತ್ತಿಂ ಲೋಕೋಽನುವರ್ತತೇ।
ಸದೈವ ಹಿ ಗುರೋರ್ವೃತ್ತಮನುವರ್ತಂತಿ ಮಾನವಾಃ॥ - ೧೦೨/೨೬
(ಭಗವದ್ಗೀತೆಯ
'ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ।
ಸಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ॥ ಎಂಬ ಮಾತಿನಂತೆಯೇ ಇದೂ ಇದೆ.)

೨ ಆತ್ಮಾನಮಸಮಾಧಾಯ ಸಮಾಧಿತ್ಸತಿ ಯಃ ಪರಾನ್।
ವಿಷಯೇಷ್ವಿಂದ್ರಿಯವಶಂ ಮಾನವಾಃ ಪ್ರಹಸಂತಿ ತಮ್॥ - ೧೦೨/೨೭

೩ ಆತ್ಮೈವಾದೌ ನಿಯಂತವ್ಯೋ ದುಷ್ಕೃತಂ ಸನ್ನಿಯಚ್ಛತಾ।
ದಂಡಯೇಚ್ಚ ಮಹಾದಂಡೈರಪಿ ಬಂಧೂನನಂತರಾನ್॥ - ೧೦೨/೨೯

ಬ್ರಾಹ್ಮಣನು ನನಗೆ ಹೇಳಿದ್ದಾನೆ. ಅಲ್ಲದೆ ನಮ್ಮ ಹಿಂದಿನ ತಾತ, ಮುತ್ತಾತರು ಕರುಣೆಯಿಂದ ನನ್ನನ್ನು ಸಮಾಧಾನಪಡಿಸುತ್ತಾ ಆದೇಶ ಮಾಡಿದ್ದಾರೆ.

ಕೃತಯುಗದಲ್ಲಿ ಯಾವುದೇ ದಂಡನೆಯನ್ನು ಮಾಡದೆ ಅಹಿಂಸೆಯಿಂದಲೇ ರಾಜನ ಶಾಸನವಿತ್ತು. ಕಾರಣ ಆಗ ಧರ್ಮ ನಾಲ್ಕೂ ಪಾದಗಳಿಂದ ಕೂಡಿರುತ್ತದೆ. ತ್ರೇತೆ, ದ್ವಾಪರಗಳಲ್ಲಿ ಕ್ರಮವಾಗಿ ಒಂದು, ಎರಡು ಪಾದ ಧರ್ಮಗಳು ನಾಶ ಹೊಂದುತ್ತವೆ. ಕಲಿಯುಗದಲ್ಲಿ ೩ ಪಾದ ನಾಶವಾಗಿ ಒಂದೇ ಪಾದ ಧರ್ಮ ಉಳಿಯುತ್ತದೆ. ಕಲಿಯುಗ ಮುಂದುವರಿದಂತೆ ರಾಜರ ದುಷ್ಕರ್ಮಗಳಿಂದಾಗಿ ಧರ್ಮದ ಹದಿನಾರನೆಯ ಒಂದು ಭಾಗ ಮಾತ್ರ ಉಳಿಯುತ್ತದೆ[೧].

'ಎಲೈ ಮಗನೇ! ಧಿಕ್ಕಾರವೆಂಬ ದಂಡನೆ (ಕೇವಲ ಅಹಿಂಸಾರೂಪವಾದ)ಯಿಂದ ಧರ್ಮಕ್ಕೆ ಸಂಕರ ಉಂಟಾಗುತ್ತದೆ ಎಂದು ತೋರಿದಲ್ಲಿ ಅಪರಾಧಿಯ ಆಯುಷ್ಯ ಶಕ್ತಿಗಳನ್ನು ಪರಿಶೀಲಿಸಿ ಶಿಕ್ಷೆಯನ್ನು ಕೊಡಬೇಕು[೨].

ಧರ್ಮಕ್ಕೆ ಪ್ರಧಾನ ಫಲ ಸತ್ಯ ಎಂಬ ಮೋಕ್ಷಸಾಧನೆಯಾಗಿದೆ. ಪ್ರಾಣಿಗಳ ಅನುಗ್ರಹಕ್ಕಾಗಿ ಈ ರೀತಿ ಸ್ವಾಯಂಭುವಮನುವೇ ಹೇಳಿದ್ದಾನೆ.

## ಸಂದೇಶಗಳು-ವಿವರಣೆಗಳು

ಸುಖೀ ರಾಜ್ಯಕ್ಕೆ ೧. ರಾಜಾನುಶಾಸನ ಹೇಗಿರಬೇಕು ; ೨. ಪ್ರಜೆಗಳ ಸಲುವಾಗಿ ರಾಜನ ಕರ್ತವ್ಯ; ೩. ಪ್ರಜೆಗಳ ಕರ್ತವ್ಯ; ೪. ಶಾಸನ ಉಲ್ಲಂಘಿಸುವವರು ಪ್ರಜೆಗಳಾಗಿರಲೀ, ಕಳ್ಳರಿರಲಿ, ಅವರ ಶಿಕ್ಷಾಪ್ರಮಾಣವನ್ನು ದೇಶಕಾಲಾನುಗುಣವಾಗಿರಬೇಕು. ರಾಜಬಂಧುಗಳೂ ಅಪರಾಧಿಗಳಾದರೆ, ಶಿಕ್ಷಾರ್ಹರೇ. ಇವೇ **ಮೊದಲಾದ ಸಂದೇಶಗಳು** ಇಲ್ಲಿ ಬಂದಿವೆ.

*****

---

೧ ಇತಿ ಚೈವಾನುಶಿಷ್ಟೋಽಸ್ಮಿ ಪೂರ್ವೈಸ್ತಾತ ಪಿತಾಮಹೈಃ ।
ಆಶ್ವಾಸಯದ್ಭಿಃ ಸುಭೃಶಮನುಕ್ರೋಶಾತ್ತಥೈವ ಚ ॥
ಏತತ್ಪ್ರಥಮಕಲ್ಪೇನ ರಾಜಾ ಕೃತಯುಗೇಽಭವತ್ ।
ಪಾದೋನೇನಾಪಿ ಧರ್ಮೇಣ ಗಚ್ಛೇತ್ ತ್ರೇತಾಯುಗೇ ತಥಾ ॥
ದ್ವಾಪರೇ ತು ದ್ವಿಪಾದೇನ ಪಾದೇನ ತ್ವಪರೇ ಯುಗೇ ।
ತಥಾ ಕಲಿಯುಗೇ ಪ್ರಾಪ್ತೇ ರಾಜ್ಞಾಂ ದುಶ್ಚರಿತೇನ ಹ ॥
ಭವೇತ್ ಕಾಲವಿಶೇಷೇಣ ಕಲಾಧರ್ಮಸ್ಯ ಷೋಡಶೀ ॥

೨ ಅಥ ಪ್ರಥಮಕಲ್ಪೇನ ಸತ್ಯವನ್ ಸಂಕರೋ ಭವೇತ್ ।
ಆಯುಃಶಕ್ತಿಂ ಚ ಕಾಲಂ ಚ ನಿರ್ದಿಶ್ಯ ತಪ ಆದಿಶೇತ್ ॥
ಸತ್ಯಾ ಯ ಹಿ ಯಥಾ ನೇಹ ಜಹ್ಯಾದ್ಧರ್ಮಫಲಂ ಮಹತ್ ।
ಭೂತಾನಾಮನುಕಂಪಾರ್ಥಂ ಮನುಃ ಸ್ವಾಯಂಭುವೋಽಬ್ರವೀತ್ ॥ - ೧೦೨/೩೪,೩೫

# ಪರಿಶಿಷ್ಟ-೧

## ಆಕರಗ್ರಂಥಗಳು
## (ಎರಡೂ ಸಂಪುಟಗಳು ಸೇರಿ)

೧. ಮಹಾಭಾರತದ ನಾಲ್ಕು ಪ್ರಕಾಶನಗಳು

೧. ವಿದ್ವಾನ್ ಟಿ.ಆರ್.ಕೃಷ್ಣಾಚಾರ್ಯ, ಕುಂಭಕೋಣಂ - ೧೯೦೬,೧೦,೯೧

೨. ಗೀತಾಪ್ರೆಸ್, ಗೋರಖಪುರ ೧೯೫೮ ಮತ್ತು ಹರಿವಂಶ ಪುರಾಣಸಹಿತ (೧೯೬೮).

೩. ಭಂಡಾರಕರ್ ಪ್ರಾಚ್ಯಸಂಶೋಧನಾ ಸಂಸ್ಥೆ, ಪೂನಾ (೧೯೭೧-೧೯೭೬).

೪. ತತ್ತ್ವಸಂಶೋಧನಾ ಸಂಸತ್, ಪಲಿಮಾರುಮಠ, ಉಡುಪಿ - ಕನ್ನಡ ಅನುವಾದಸಮೇತ ಮೂಲ ಮತ್ತು ಲಕ್ಷಾಲಂಕಾರಸಮೇತ ಸಂಸ್ಕೃತಮೂಲ - ೨೦೧೫-೨೦೧೯.

೫. ಭಗವದ್ಗೀತಾ.

೨. ಶ್ರೀಮದ್ಭಾಗವತ ಮೂಲ(ಲಿಂಗಂಪಲ್ಲಿ ರಾಯರಮಠ, ಹೈದರಾಬಾದ್ (ಪೇಜಾವರಮಠದ ಶ್ರೀಗಳವರ...).

೩. ಸರ್ವಮೂಲಗ್ರಂಥಗಳು, ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ, ಛಾಂದೋಗ್ಯಭಾಷ್ಯ, ಅನುವ್ಯಾಖ್ಯಾನ, ವಿಷ್ಣುತತ್ತ್ವವಿನಿರ್ಣಯ, ಈಶಾವಾಸ್ಯಭಾಷ್ಯ, ಭಾಗವತತಾತ್ಪರ್ಯ (ಅಖಿಲ ಭಾರತ ಮಾಧ್ವಮಹಾಮಂಡಲದ ಕನ್ನಡ ಅನುವಾದ ಸಮೇತ), ಋಗ್ಭಾಷ್ಯ ಇತ್ಯಾದಿ..

೪. ಋಗ್ವೇದ (ವಿಷ್ಣುಸೂಕ್ತ).

೫. ಮಹಾಭಾರತತಾತ್ಪರ್ಯನಿರ್ಣಯ - ವ್ಯಾಖ್ಯಾನಗಳು (ಸಂಸ್ಕೃತ) - ವಿಶ್ವಮಧ್ವಮಹಾ-ಪರಿಷತ್, ಬೆಂಗಳೂರು - ೨೦೦೫-೨೦೧೬.

೬. ಮಹಾಭಾರತತಾತ್ಪರ್ಯನಿರ್ಣಯ ಕನ್ನಡ ಅನುವಾದ.

೧. ಅ.ಭಾ.ಮಾ.ಮ.ಮಂಡಲ ಬೆಂ-೨೮ (ಪೂರ್ಣಪ್ರಜ್ಞವಿದ್ಯಾಪೀಠದ ವಿದ್ವಾಂಸರಿಂದ).

೨. ಶ್ರೀವ್ಯಾಸಮಧ್ವಪ್ರತಿಷ್ಠಾನ, ಬೆಂಗಳೂರು.

೭. ಶ್ರೀಯಾದವಾರ್ಯರಚಿತ ಕರಾವಲಂಬನಸ್ತೋತ್ರ.

೮. ಮಂಗಳಾಷ್ಟಕ (ಶ್ರೀರಾಜರಾಜೇಶ್ವರತೀರ್ಥರು, ಪಲಿಮಾರುಮಠ, ಉಡುಪಿ).

೯. ಸ್ಮೃತಿಮುಕ್ತಾವಲಿ (ಕೃಷ್ಣಾಚಾರ್ಯರ)(ಮಂತ್ರಾಲಯಮಠದ ಪ್ರಕಾಶನ).

೧೦. ಶ್ರೀಕನಕದಾಸರ ನಳಚರಿತ್ರೆ.

೧೧. ಶ್ರೀಮನ್ಮಹಾಭಾರತ, ಭಾರತದರ್ಶನ ಪ್ರಕಾಶನ, ತ್ಯಾಗರಾಜನಗರ, ಬೆಂ.-೦೪(೩೨ ಸಂಪುಟಗಳು).

೧೨. ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕ.

ಇತ್ಯಾದಿ...



ನಾರಾಯಣಂ ಸುರುಗುರಂ ಜಗದೇಕ ನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧವಂಧ್ಯಮ್ ॥

- ಮಹಾಭಾರತ(1/1/1)

ತಪಸಾ ಬ್ರಹ್ಮಚರ್ಯೇಣ ವ್ಯಸ್ಯ ವೇದಂ ಸನಾತನಮ್ ।
ಇತಿಹಾಸಮಿದಂ ಚಕ್ರೇ ಪುಣ್ಯಂ ಸತ್ಯವತೀಸುತಃ ॥

- ಆ.ಪ.(1/66)

